# ಶ್ರೀಮದ್ರಾಮಾಯಣದ ಅಂತರಾರ್ಥ

ಅಥವಾ

## ಮೋಕ್ಷಮಾರ್ಗ ಪ್ರದೀಪಿಕೆ.

ಜಕೊರೆ ಸುಬ್ರಾಯಶರ್ಮ ವಿರಚಿತ.

ಬೆಂಗಳೂರು ಸಿಟಿ
ರಾಧಾ ಪವರ್ ಮುದ್ರಣಾಲಯದಲ್ಲಿ
ಮುದ್ರಿತವಾದುದು.

೧೯೩೧

 [ಬೆಲೆ ರೂ. ೬-೦-೦.

ಈ ಗ್ರಂಥವು

ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣಪಾರಾವಾರಪಾರೀಣ ಯಮನಿಯಮಾಸನಪ್ರಾಣಾಯಾಮಪ್ರತ್ಯಾಹಾರಧ್ಯಾನಧಾರಣಾಸಮಾಧ್ಯಷ್ಟಾಂಗಯೋಗಾನುಷ್ಠಾನನಿಷ್ಠ ತಪಶ್ಚಕ್ರವರ್ತ್ಯ ನಾದ್ಯವಿಚ್ಛಿನ್ನಗುರುಪರಂಪರಾಪ್ರಾಪ್ತ ಷಡ್ದರ್ಶನಸ್ಥಾಪನಾಚಾರ್ಯ ವ್ಯಾಖ್ಯಾನಸಿಂಹಾಸನಾಧೀಶ್ವರ ಸಕಲನಿಗಮಾಗಮಸಾರಹೃದಯಸಾಂಖ್ಯತ್ರಯಪ್ರತಿಪಾದಕ ವೈದಿಕಮಾರ್ಗಪ್ರವರ್ತಕ ಸರ್ವತಂತ್ರಸ್ವತಂತ್ರಾದಿರಾಜಧಾನೀ ವಿದ್ಯಾನಗರಮಹಾರಾಜಧಾನೀ ಕರ್ನಾಟಕಸಿಂಹಾಸನಪ್ರತಿಷ್ಠಾಪನಾಚಾರ್ಯ ಶ್ರೀಮದ್ರಾಜಾಧಿರಾಜಗುರುಭೂಮಂಡಲಾಚಾರ್ಯ ಋಷ್ಯಶೃಂಗಪುರವರಾಧೀಶ್ವರ ತುಂಗಭದ್ರಾತೀರವಾಸಿ ಶ್ರೀಮದ್ವಿದ್ಯಾಶಂಕರ ಪಾದಪದ್ಮಾರಾಧಕ ಶ್ರೀಜಗದ್ಗುರು ಶ್ರೀಮತ್ಸಚ್ಚಿದಾನಂದಶಿವಾಭಿನವನೃಸಿಂಹಭಾರತೀಸ್ವಾಮಿ ಗುರುಕರಕಮಲಸಂಜಾತ ಶ್ರೀಜಗದ್ಗುರು ಶೃಂಗೇರಿ

ಶ್ರೀಚಂದ್ರಶೇಖರಭಾರತೀಮಹಾಸ್ವಾಮಿಗಳವರ

ಚರಣಕಮಲ ಸನ್ನಿಧಾನಂಗಳಲ್ಲಿ ಶ್ರೀಗುರುಗಳವರ ಆಜ್ಞೆಯನ್ನು ಪಡೆದು ಗ್ರಂಥಕರ್ತನಿಂದ ಭಕ್ತಿಪೂರ್ವಕವಾಗಿ ಸಮರ್ಪಿಸಲ್ಪಟ್ಟಿದೆ.



ಶ್ರೀಃ

ಯಡತೊರೆ ಸ್ಥಳದ ರಾಮಣ್ಣನವರ ಮಕ್ಕಳು ಮ॥ರಾ॥ ವೈ. ಸುಬ್ಬರಾಯರೆಂಬುವರು ತೆಗೆದುಕೊಂಡು ಬಂದು ಅರ್ಪಿಸಿದ "ಶ್ರೀಮದ್ರಾಮಾಯಣದ ಅಂತರಾರ್ಥ" ಎಂಬ ಗ್ರಂಥವನ್ನು ನಾವು ಪರಿಶೀಲಿಸಿದ್ದರಲ್ಲಿ ಯೋಗಶಾಸ್ತ್ರ ವೇದಾಂತಶಾಸ್ತ್ರಗಳ ಪ್ರಕ್ರಿಯೆಗಳು ಕೆಲವೆಡೆಗಳಲ್ಲಿ ಸಾಕ್ಷಾತ್ತಾಗಿಯೂ, ಕೆಲವೆಡೆಗಳಲ್ಲಿ ಪರಂಪರೆಯಾಗಿಯೂ ತೋರುತ್ತಲಿವೆ. ಈ ಗ್ರಂಥಕರ್ತರು ಸಂಸ್ಕೃತ ಭಾಷಾಭಿಜ್ಞರಲ್ಲದಿದ್ದಾಗ್ಯೂ ಶ್ರೀಮದ್ರಾಮಾಯಣದ ತತ್ವವನ್ನು ಬಹುಸರಳವಾಗಿ ಕರ್ಣಾಟಕ ಭಾಷೆಯಲ್ಲಿ ಸರ್ವರಿಗೂ ಸುಲಭವಾಗಿ ತಿಳಿಯುವಂತೆ ರಚಿಸಿರುವುದನ್ನು ನೋಡಿ ನಮಗೆ ಬಹಳ ಸಂತೋಷವಾಯಿತು. ಈ ಗ್ರಂಥವು ಆಚಂದ್ರತಾರವಾಗಿ ಆಸ್ತಿಕಜನ ಹೃದಯಾಹ್ಲಾದಕರವಾಗಿರಲೆಂದು ಶ್ರೀರಾಮಚಂದ್ರನನ್ನು ಪ್ರಾರ್ಥಿಸುತ್ತೇವೆ.

ಪ್ರಜೋತ್ಪತ್ತಿನಾಮ ಸಂವತ್ಸರದ
ಆಶ್ವಯುಜ ಶುಕ್ಲ ಚತುರ್ದಶಿ
ಭಾನುವಾಸರ,
**ಮೈಸೂರು.**

**ವಿರೂಪಾಕ್ಷಶಾಸ್ತ್ರಿ**
ಮಹಾಮಹೋಪಾಧ್ಯಾಯ, ವಿದ್ಯಾನಿಧಿ,
ಮೈಸೂರು ಶ್ರೀಮನ್ಮಹಾರಾಜ ಸಂಸ್ಕೃತ
ಪಾಠಶಾಲಾ ಅದ್ವೈತವೇದಾಂತ
ಮುಖ್ಯೋಪಾಧ್ಯಾಯರು.
ಅರಮನೆ ಧರ್ಮಾಧಿಕಾರಿಗಳು.



ಶ್ರೀರಾಮಚಂದ್ರಸ್ವಾಮಿಯ ಪಟ್ಟಾಭಿಷೇಕದ ಸೋಪಾನವು ಮಾನವರೆಲ್ಲರಲ್ಲಿಯೂ ಇರುವುದು.
ಇದನ್ನು ಸರ್ವರೂ ಹೊಂದಿ ಧನ್ಯರಾಗಬೇಕು.

ಓಂ.

ಶ್ರೀಗಣೇಶ ಶಾರದಾ ಗುರುಭ್ಯೋನಮಃ.

ಶ್ರೀರಾಮಚಂದ್ರಪರಬ್ರಹ್ಮಣೇನಮಃ.

# ಶ್ರೀಮದ್ರಾಮಾಯಣದ ಅಂತರಾರ್ಥ

ಅ ಥ ವಾ

## ಮೋಕ್ಷಮಾರ್ಗಪ್ರದೀಪಿಕೆ.

ಶ್ಲೋ|| ಬ್ರಹ್ಮೇಂದ್ರ ರುದ್ರ ಹರಿ ಚಂದ್ರ ಸಹಸ್ರರಶ್ಮಿ ।
ಸ್ಕಂದ ದ್ವಿಪಾನನ ಹುತಾಶನ ವಂದಿತಾಯೈ ॥
ವಾಗೀಶ್ವರಿ ತ್ರಿಭುವನೇಶ್ವರಿ ವಿಶ್ವಮಾತಃ ।
ಅಂತರ್ಬಹಿಶ್ಚ ಕೃತಸಂಸ್ಥಿತಯೇ ನಮಸ್ತೇ ॥

ತಾ|| ಸಮಸ್ತ ವಿದ್ಯೆಗಳಿಗೂ ಅಧೀಶ್ವರಿಯಾಗಿಯೂ, ಮೂರುಲೋಕಗಳಿಗೂ ಅಧೀಶ್ವರಿಯಾಗಿಯೂ ಇರತಕ್ಕ ಜಗನ್ಮಾತೆಯೇ! ಬ್ರಹ್ಮ, ಇಂದ್ರ, ರುದ್ರ, ವಿಷ್ಣು, ಚಂದ್ರ, ಸೂರ್ಯ, ಮುಖ್ಯೋತ್ತಮರುಗಳಿಂದ ನಮಸ್ಕರಿಸಲ್ಪಟ್ಟಂಥವಳಾಗಿಯೂ, ಒಳಗೂ ಹೊರಗೂ ಇರುವಂಥವಳಾಗಿಯೂ ಇರುವ ನಿನಗೆ ನಮಸ್ಕಾರವು.

ಶ್ಲೋ|| ವಿಶುದ್ಧಂ ಪರಂ ಸಚ್ಚಿದಾನಂದರೂಪಂ ।
ಗುಣಾಧಾರ ಮಾಧಾರಹೀನಂ ವರೇಣ್ಯಂ ॥
ಮಹಾಂತಂ ವಿಭಾಂತಂ ಗುಹಾಂತಂ ಗುಣಾಂತಂ ।
ಸುಖಾಂತಂ ಸ್ವಯಂಧಾಮ ರಾಮಂ ಪ್ರಪದ್ಯೇ ॥

ತಾ|| ಪರಿಶುದ್ಧನು, ನಿರ್ಗುಣನು, ಸಚ್ಚಿದಾನಂದಸ್ವರೂಪನು, ಗುಣಗಳಿಗೆ ಆಧಾರನು, ನಿರಾಧಾರನು, ಶ್ರೇಷ್ಠನು, ಮಹಾತ್ಮನು, ಸ್ವಯಂಜ್ಯೋತಿಸ್ವರೂಪನು,

ಪಂಚಕೋಶವೆಂಬ ಗುಹೆಯಲ್ಲಿ ವಾಸಿಸುವವನು, ಗುಣಗಳಿಗೂ ಸಿಲುಕದೆ ಇರುವವನು, ವಿಶೇಷ ಕಾಂತಿಯುಳ್ಳವನು ಮತ್ತು ಸ್ವಯಂಪ್ರಕಾಶನೂ ಆದ ಶ್ರೀರಾಮಚಂದ್ರನನ್ನು ರಕ್ಷಕನನ್ನಾಗಿ ಹೊಂದಿದ್ದೇನೆ.

# ಉಪೋದ್ಘಾತ.

**೧. ಶ್ರೀಮದ್ರಾಮಾಯಣವು ಜ್ಞಾನಮಾರ್ಗವನ್ನೊಳಗೊಂಡಿರುವ ವಿಚಾರ. ೨. ಶ್ರೀರಾಮಾವತಾರದ ಪ್ರಶಂಸೆ. ೩. ಗ್ರಂಥರಚನಾಕ್ರಮ. ೪. ಗ್ರಂಥ ರಚನೆಗೆ ಕಾರಣ. ೫. ಗ್ರಂಥಪರಿಷ್ಕರಣ. ೬. ಗ್ರಂಥಕರ್ತನ ಎರಡು ನುಡಿ.**

ದಶಾವತಾರಗಳಲ್ಲಿ ಸುಪ್ರಸಿದ್ಧವಾದ ಶ್ರೀರಾಮಾವತಾರವು ಸರ್ವರಿಂದಲೂ ಸ್ತೋತ್ರಾರ್ಹವಾದ, ಸರ್ವೋತ್ಕೃಷ್ಟವಾದ ಅವತಾರವಾಗಿರುವುದು. ನಾರದಮಹರ್ಷಿಗಳಿಂದ ಉಪದೇಶಿಸಲ್ಪಟ್ಟ ಇಂತಹ ಶ್ರೀರಾಮಚರಿತ್ರೆಯು ವಾಲ್ಮೀಕಿ ಮಹರ್ಷಿಗಳಿಂದ ಕಾವ್ಯರೂಪವಾಗಿ ರಚಿಸಲ್ಪಟ್ಟು ಶ್ರೀಮದ್ರಾಮಾಯಣವೆಂದು ಈಗಲೂ ಸುಪ್ರಸಿದ್ಧವಾಗಿದೆ.

ಶ್ರೀಮದ್ರಾಮಾಯಣವು ಜ್ಞಾನಮಾರ್ಗವನ್ನು ಒಳಗೊಂಡಿರುವ ವಿಚಾರ.

ವಾಲ್ಮೀಕಿಮಹರ್ಷಿಗಳಿಗೆ ಶ್ರೀರಾಮತತ್ವವನ್ನು ಉಪದೇಶಮಾಡಿದ ನಾರದರು ಎಂಥವರೆಂದರೆ "ನಾರಂ ಜ್ಞಾನಂ ದಾತಿ ದದಾತೀತಿ ನಾರದಃ" ಅಥವಾ "ನರಾಣಾಂ ಇದಂ ನಾರಂ-ಅಜ್ಞಾನಂ, ತದ್ಯ್ಯತಿ ಖಂಡಯತಿ ಜ್ಞಾನೋಪದೇಶೇನ ಇತಿ ನಾರದಃ" ಎಂಬ ವ್ಯುತ್ಪತ್ತಿಗಳಿಂದ ಬ್ರಹ್ಮಜ್ಞಾನವನ್ನುಂಟುಮಾಡತಕ್ಕವರು ಅಥವಾ ಬ್ರಹ್ಮಜ್ಞಾನಿಗಳೆಂದು ಅರ್ಥವಾಗುವುದು. ದುಷ್ಟರು ದುರ್ಮಾರ್ಗವನ್ನೂ, ಸಜ್ಜನರು ಸನ್ಮಾರ್ಗವನ್ನೂ ಉಪದೇಶಮಾಡುವಂತೆ ಜ್ಞಾನಿಗಳು ಜ್ಞಾನಮಾರ್ಗವನ್ನೇ ಉಪದೇಶಮಾಡುತ್ತಾರೆಂಬುದು ನಿಸ್ಸಂಶಯವಾದ ವಿಚಾರವಾಗಿರುವುದು. ಆದುದರಿಂದ, ನಾರದಮಹರ್ಷಿಗಳು ವಾಲ್ಮೀಕರಿಗೆ ಶ್ರೀಮದ್ರಾಮಾಯಣವನ್ನು ಉಪದೇಶಮಾಡಿದರೆಂದರೆ, ಆತ್ಮತತ್ವವನ್ನೇ ಉಪದೇಶಮಾಡಿದರೆಂದು ಅರ್ಥವಾಗುವುದು. ಅಲ್ಲದೆ ಶ್ರೀಮದ್ರಾಮಾಯಣದ "ತಪಸ್ಸ್ವಾಧ್ಯಾಯನಿರತಂ" ಎಂಬ ಪ್ರಥಮ ಶ್ಲೋಕದ ತಾತ್ಪರ್ಯವು ಕೂಡ ವಾಲ್ಮೀಕಿಮುನಿಪುಂಗವರು ನಾರದಮಹರ್ಷಿಗಳನ್ನು ಕುರಿತು ಬ್ರಹ್ಮೋಪದೇಶಕ್ಕಾಗಿ ಪ್ರಶ್ನೆಮಾಡಿದರೆಂದು ವ್ಯಾಖ್ಯಾನದಲ್ಲಿ ಸೂಚಿಸಿರುವುದು.

ಹೀಗೆ ನಾರದರಿಂದ ವಾಲ್ಮೀಕರಿಗೆ ಉಪದೇಶಿಸಲ್ಪಟ್ಟ ಶ್ರೀರಾಮಾವತಾರದ ಮಹಿಮೆಯು ಆತ್ಮತತ್ವವೆಂದರೆ, ಮೋಕ್ಷಮಾರ್ಗದ ತತ್ವವನ್ನೂ ಒಳಗೊಂಡಿರುವುದು.

ಶ್ರೀರಾಮಚಂದ್ರನು ಸಾಕ್ಷಾತ್ಪರಮಾತ್ಮನೆಂದು ಉಪನಿಷತ್ಶ್ರುತಿಪ್ರತಿಪಾದ್ಯವಾಗಿರುವುದು. ಶ್ರೀಮದ್ರಾಮಾಯಣದಲ್ಲಿಯೂ ಪರಬ್ರಹ್ಮನೇ ಶ್ರೀರಾಮನೆಂಬ ವಾಕ್ಯಗಳಿರುವುವು. ಆದುದರಿಂದ, ಪರಮಾತ್ಮಸ್ವರೂಪಿಯಾದ ಶ್ರೀರಾಮಚಂದ್ರನು ಮಾನವನಾಗಿ ಅವತರಿಸಿ ಮಾನವನಂತೆ ನಟಿಸಿದರೂ ಅವನ ಸಕಲ ನಡೆನಳಿಕೆಗಳೂ ಆತ್ಮತತ್ವದ ಅಂತರಾರ್ಥವನ್ನೇ ಒಳಗೊಂಡಿರುವುದರಿಂದ, ಶ್ರೀರಾಮಾವತಾರವು ಪರಮಾತ್ಮನ ಲೀಲಾವತಾರವೆಂದು ಕರೆಯಲ್ಪಡುತ್ತದೆ. ಹೇಗೆಂದರೆ, ದುಷ್ಟರಾದ ರಾವಣಾದಿಗಳನ್ನು ನಿಗ್ರಹಿಸುವ ಮುಖ್ಯ ಉದ್ದೇಶಕ್ಕೋಸ್ಕರವೇ ಶ್ರೀರಾಮಾವತಾರವಾಗಿರುವುದು.

ಶ್ರೀಮನ್ನಾರಾಯಣನಿಗೆ ವಿರೋಧಿಗಳಾಗಿ ಜಯ ವಿಜಯರು ಮೂರು ಜನ್ಮಗಳನ್ನು ಪಡೆದರಷ್ಟೆ! ಇವರ ಎರಡನೆಯ ಜನ್ಮವೇ ರಾವಣ ಕುಂಭಕರ್ಣರು. ಅಂದರೆ, ಪರಮಾತ್ಮನಿಗೆ ವಿರೋಧಿಗಳಾದುವರಿಂದ ಪರಮಾತ್ಮನಿಗೆ ವ್ಯತಿರಿಕ್ತವಾದ ನಡೆವಳಿಕೆಯುಳ್ಳವರೆಂಬ ತತ್ವವಾಗಿರುವುದು. ಇದರಂತೆ ಮಾನವರಲ್ಲಿಯೂ ಪರಮಾತ್ಮಸೋಪಾನಕ್ಕೆ ವಿರೋಧಿಯಾಗಿರುವುದು ಅಜ್ಞಾನ. ಇದೇ ನಮ್ಮಲ್ಲಿರುವ ರಾಕ್ಷಸರ ಸ್ವರೂಪ. ಪ್ರತಿಯೊಬ್ಬ ಮಾನವನಲ್ಲಿಯೂ ಇರುವ, ಪರಮಾತ್ಮನಿಗೆ ವಿರೋಧಿಗಳಾದ, ರಾಕ್ಷಸರನ್ನು ಮಾನವರು ನಿಗ್ರಹಮಾಡಿಕೊಳ್ಳಲೆಂಬ ಲೋಕೋಪಕಾರದ ತತ್ವವನ್ನು ಗೂಢವಾಗಿಟ್ಟು ಪರಮಾತ್ಮನು ಶ್ರೀರಾಮಾವತಾರಮಾಡಿ ವಿರೋಧಿಗಳಾದ ರಾವಣಾದಿಗಳನ್ನು ನಿಗ್ರಹಮಾಡಿರುವನು.

ಸ್ಥೂಲವಾಗಿ ನೋಡಿದರೆ ಶ್ರೀರಾಮಾವತಾರದ ಚರಿತ್ರೆಯು ಮೋಕ್ಷಮಾರ್ಗವನ್ನು ಸೂಚಿಸುವುದಿಲ್ಲವೆಂದು ತೋರಬಹುದು. ಇದಕ್ಕೆ ಸಮಾಧಾನವೇನೆಂದರೆ, ಮೋಕ್ಷಪಡೆಯುವ ಕ್ರಮವನ್ನು ಮಾತ್ರ ತಿಳಿಸಿದರೆ ವೇದಾಂತಶಾಸ್ತ್ರವೆನಿಸಿಕೊಳ್ಳುವುದು. ಆದುದರಿಂದ ಸರ್ವೇಶ್ವರನಾದ ಪರಮಾತ್ಮನು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳಲ್ಲಿ ಯಾರ್ಯಾರಿಗೆ ಯಾವ ಯಾವುದು ಅಪೇಕ್ಷೆಯೋ ಅವುಗಳ ಅಮೃತವನ್ನು ಆಸ್ವಾದನೆಮಾಡಲೆಂದು ಈ ನಾಲ್ಕನ್ನೂ ತನ್ನ ಚರಿತ್ರೆಯಲ್ಲಿ ಅಡಗಿಸಿ ಲೋಕೋದ್ಧಾರದ ಕಾರ್ಯವನ್ನೇ ಮಾಡಿರುವನು.

ನಾಸ್ತಿಕರು ಅವತಾರವೇ ಸುಳ್ಳೆಂದೂ ವಾಲ್ಮೀಕರು ಕಾವ್ಯರೂಪವಾಗಿ ಕಥೆಯನ್ನು ಬರೆದಿರುವರೆಂದೂ ತಿಳಿಯುವರು. ಆಸ್ತಿಕರು ಪರಮಾತ್ಮನ ಅವತಾರವೆಂದೇ ನಂಬಿ ಶ್ರೀರಾಮಚಂದ್ರನನ್ನು ಆರಾಧಿಸಿ ಅವನ ನಾಮಸ್ಮರಣೆಮಾಡಿ ಅವನ ಚರಿತ್ರೆಯನ್ನು ಪಾರಾಯಣಮಾಡುವರು. ತತ್ವಾಪೇಕ್ಷಿಗಳು ಶ್ರೀರಾಮನೇ ಪರಮಾತ್ಮನೆಂದೂ ಅವನನ್ನೇ ಹೊಂದಬೇಕೆಂದೂ ಅವನ ಸಾಕ್ಷಾತ್ಕಾರಕ್ಕೆ ಪ್ರಯತ್ನಮಾಡುವರು. ಕರುಣಾಳುವಾದ ಶ್ರೀರಾಮಚಂದ್ರನು ಮಾನವರ ಉದ್ಧಾರಕ್ಕಾಗಿಯೇ ಧರ್ಮಾರ್ಥಕಾಮಗಳ ಜೊತೆಗೆ ಮೋಕ್ಷದ ತತ್ವವನ್ನೂ ತನ್ನ ಚರಿತ್ರೆ

ಶ್ರೀ ರಾಮಾವತಾರದ ಪ್ರಶಂಸೆ.

ಯಲ್ಲಿ ಅಡಗಿಸಿರುವನೆಂದು ತಿಳಿದರೆ ತತ್ವಾಪೇಕ್ಷಿಗಳಿಗೂ ಆಸ್ತಿಕರಿಗೂ ಅಮೃತದೊರೆತಂತಾಗುವುದರಲ್ಲಿ ಸಂದೇಹವೇ ಇಲ್ಲವಷ್ಟೆ! ಆದುದರಿಂದ, ಶ್ರೀರಾಮಚಂದ್ರನು ಮಾನವರ ಉದ್ಧಾರಕ್ಕಾಗಿ ತನ್ನ ಚರಿತ್ರೆಯಲ್ಲಿ ಆತ್ಮತತ್ವವನ್ನು ಇಟ್ಟಿರುವನು. ಇವರ ವಿವರಣೆಯೇ ಈ ಗ್ರಂಥವಾಗಿರುವುದು.

ಶ್ರೀರಾಮಚಂದ್ರನು ಮಾನವದೇಹವನ್ನು ಹೊಂದಿ ಸೀತಾವಿಯೋಗದಿಂದ ಅತ್ಯಂತ ದುಃಖಪಟ್ಟನು. ಇಂದ್ರಜಿತ್ತಿನಿಂದ ಮೂರ್ಛಿತನಾಗಿದ್ದನು. ಆದುದರಿಂದ, ಅಜ್ಞಾನದಿಂದ ನಾವು ಜೀವರೆನಿಸಿಕೊಳ್ಳುವಂತೆ ಶ್ರೀರಾಮಚಂದ್ರನೂ ಮಾನವದೇಹಧಾರಿಯಾಗಿದ್ದುದರಿಂದ ಜೀವರಂತೆಯೇ ಇದ್ದನೆಂದು ತಿಳಿಯಬಾರದು. ಮಾನವನು ಕೂಡ ಪರಮಹಂಸ ಅಥವಾ ಜೀವನ್ಮುಕ್ತಾವಸ್ಥೆಯಲ್ಲಿ ಬಾಹ್ಯವ್ಯಾಪಾರವಮಾಡಿದರೂ ಜೀವಸ್ವರೂಪದ ಬಂಧನದಲ್ಲಿರುವುದಿಲ್ಲ. ಈರೀತಿ ಇರುವುದು ಅನುಭವ ಮತ್ತು ಶಾಸ್ತ್ರವೇದ್ಯವಾಗಿರುವುದು. ಮಾನವನೇ ಜೀವನ್ಮುಕ್ತಾವಸ್ಥೆಯಲ್ಲಿ ಹೀಗಿರುವಾಗ ಪರಮಾತ್ಮನು ಲೀಲಾರ್ಥವಾಗಿ ಮಾನವದೇಹವನ್ನು ಧರಿಸಿದ ಮಾತ್ರದಿಂದಲೇ ಜೀವರಂತೆ ಬದ್ಧನಾಗಿರುವನೆಂದು ತಿಳಿಯುವುದು ಮೌಢ್ಯವೇಸರಿ. ಪರಮಾತ್ಮನು ಮಾನವದೇಹವನ್ನು ಪಡೆದರೂ ನಿರ್ಲಿಪ್ತನಾಗಿ ನಿತ್ಯಮುಕ್ತಸ್ವಭಾವದಲ್ಲಿಯೇ ಇರುವನು. ಇದೇ ತಾತ್ಪರ್ಯಕ್ಕೆ ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆಯಲ್ಲಿ:--

ನಚಮಾಂತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ |
ಉದಾಸೀನವದಾಸೀನ ಮಸಕ್ತಂ ತೇಷು ಕರ್ಮಸು ||
ಅವಜಾನಂತಿ ಮಾಂ ಮೂಢಾಃ ಮಾನುಷೀಂ ತನುಮಾಶ್ರಿತಂ |
ಪರಂಭಾವ ಮಜಾನಂತೋ ಮಮಭೂತ ಮಹೇಶ್ವರಂ |

ಎಂಬದಾಗಿ ಹೇಳಿರುವನು. ಆದುದರಿಂದ ಪರಮಾತ್ಮನು ಮಾನವದೇಹವನ್ನು ಧರಿಸಿ ಮಾನವನಂತೆ ನಟಿಸಿದರೂ [illegible] ನಿತ್ಯಮುಕ್ತಸ್ವರೂಪನಾಗಿಯೇ ಇರುವನು. ಈ ಅರ್ಥದಲ್ಲಿ ಶ್ರೀಮಚ್ಛಂಕರ[illegible] ಗೀತಾಭಾಷ್ಯದ ಪ್ರಾರಂಭದಲ್ಲಿ:--

"ಸ್ವಮಾಯಯಾ ದೇಹವಾನಿವ ಜಾತ ಇವಚ
ಲೋಕಾನುಗ್ರಹಂ ಕುರ್ವನ್ ಲಕ್ಷ್ಯತೇ"

ಎಂದು ಹೇಳಿರುತ್ತಾರೆ.

ಶ್ರೀರಾಮಚಂದ್ರನು ಇಂದ್ರಜಿತ್ತಿನಿಂದ ಮೂರ್ಛಿತನಾಗುವಿಕೆಯೇ ಮುಂತಾದ ತತ್ವಗಳೆಲ್ಲಾ ಲೋಕೋದ್ಧಾರಕ್ಕೋಸ್ಕರವೇ ಹೊರತು ತನಗೋಸ್ಕರವಲ್ಲ. ಅತ್ಯಂತ

ಬಲಿಷ್ಠರಾದ ರಾಕ್ಷಸರ ತತ್ವದಲ್ಲಿರುವ ಅವಿದ್ಯಾಶಕ್ತಿಗಳು ಮಾನವನಿಗೆ ಯಾವ ವಿಧವಾದ ಕಷ್ಟಗಳನ್ನು ಕೊಡುತ್ತವೆಂಬ ತತ್ವವನ್ನು ತೋರಿಸಿ ಆ ಶಕ್ತಿಗಳನ್ನು ಮಾನವನು ನಿಗ್ರಹಿಸಿ ಪೂಜಿತನಾಗುವ ಪಥವನ್ನು ಶ್ರೀರಾಮಚಂದ್ರನು ತನ್ನ ಚರಿತ್ರೆಯಿಂದ ನಿದರ್ಶಿಸಿರುವನು.

ಶ್ರೀರಾಮಚಂದ್ರನು ಮಾನವದೇಹಧಾರಿಯಾಗಿದ್ದರೂ ಈಶ್ವರನೇ ಆಗಿದ್ದನೆಂಬುದಕ್ಕೆ ರಾಮಾಯಣದಲ್ಲಿಯೇ ಅನೇಕ ಆಧಾರಗಳಿವೆ. ಜಟಾಯುವಿಗೆ "ನನ್ನ ಆಜ್ಞೆಯಿಂದ ಸ್ವರ್ಗಪ್ರಾಪ್ತಿಯಾಗಲಿ" ಎಂದು ಹೇಳುವ ವಿಧಿವಾಕ್ಯ ಜೀವನಿಂದ ಹೇಳಲ್ಪಡಲು ಸಾಧ್ಯವೆ? ಸಮುದ್ರರಾಜನು ಪ್ರತ್ಯಕ್ಷನಾದ ಸಂದರ್ಭದಲ್ಲಿ ತನ್ನ ಬಾಣಪ್ರಯೋಗದಿಂದ ಮರುಕಾಂತಾರವಾದ ದ್ರುಮಕುಲ್ಯವು ಫಲಭರಿತವಾಗಲೆಂದು ವರವನ್ನು ಕೊಟ್ಟದ್ದು ಜೀವನಿಂದ ಸಾಧ್ಯವೆ? ಹನುಮಂತನು ತನ್ನ ಸ್ಮರಣೆಯಲ್ಲಿಯೇ ನಿರತನಾಗಿರುವಂತೆ ಅನುಗ್ರಹ ಮಾಡಿದುದು ಜೀವನಿಂದ ಸಾಧ್ಯವೇ? ಸಾಧ್ಯವಿಲ್ಲ. ಆದುದರಿಂದ, ಶ್ರೀರಾಮಚಂದ್ರನು ಮಾನವದೇಹವನ್ನು ಧರಿಸಿದರೂ ಈಶ್ವರನೇ ಆದನೆಂಬುದನ್ನೂ, ಅವತಾರವು ಸತ್ಯವೆನೆಂಬುದನ್ನೂ ಇವುಗಳು ವ್ಯಕ್ತಪಡಿಸುತ್ತವೆ.

ತಾಮಸಿದೇವಿಯಾದ ರಾವಣನನ್ನು ನಿಗ್ರಹಿಸುವುದು ಶ್ರೀಮನ್ನಾರಾಯಣನಿಗೆ ಅಸಾಧ್ಯವಾಗಿರಲಿಲ್ಲ. ಆದರೆ, ಅಜ್ಞಾನದ ಬಾಧೆಯಿಂದ ನಿಸ್ತೇಜರಾಗಿರುವ ಮಾನವರಿಗೆ ನಾನಾ ವಿಧ ಸೌಕರ್ಯಗಳು ದೊರೆಯಲೆಂದು ಅದರಂತೆ ಲೀಲಾವತಾರನಾಗಿರುವನು. ಜೀವರ ವ್ಯಾಪಾರಕ್ಕೆ ಮುಖ್ಯ ಸಾಧನೋಪಕರಣವಾಗಿರುವುದು - ಅಂತಃಕರಣವು. ಈ ಅಂತಃಕರಣವು ಕಾರ್ಯಭೇದಗಳಿಂದ ಬುದ್ಧಿ, ಮನಸ್ಸು, ಅಹಂಕಾರ, ಚಿತ್ತಗಳೆಂಬ ನಾಲ್ಕು ಭಾಗಗಳಾಗಿವೆ. ಈ ನಾಲ್ಕು ಭಾಗಗಳ ಪ್ರಕಾರಕನಾಗಿ ಪರಮಾತ್ಮನಿರುವುದೇ ಶ್ರೀಮನ್ನಾರಾಯಣನು ಶ್ರೀರಾಮ, ಲಕ್ಷ್ಮಣ, ಭರತ, ಶತ್ರುಘ್ನರಾಗಿ ಅವತರಿಸಿದುದಾಗಿದೆ.

ಜೀವಾತ್ಮನ ವ್ಯಾಪಾರಕಾಲದಲ್ಲಿ ಈ ಅಂತಃಕರಣಚತುಷ್ಟಯವು ಅಜ್ಞಾನ, ಕ್ರಿಯೆ, ಅಭಿಮಾನ, ಸ್ವಾರ್ಥತೆಗಳ ರೂಪದಲ್ಲಿರುವುದು. ಮೋಕ್ಷಮಾರ್ಗದಲ್ಲಿ ಜ್ಞಾನ, ವಿರಕ್ತಿ, ನಿರಭಿಮಾನ, ಅಸ್ವಾರ್ಥತೆಗಳಾಗಿ ಪರಿಣಮಿಸುವುವು. ಮಾನವರು ಈರೀತಿ ಮೋಕ್ಷಮಾರ್ಗದ ಪರಿಣಾಮವನ್ನು ಹೊಂದಿ ಉದ್ಧಾರವಾಗಲೆಂದು ಕರುಣಾಳುವಾದ ಪರಮಾತ್ಮನು ತನ್ನ ಅಂಶವನ್ನು ನಾಲ್ಕು ಭಾಗಮಾಡಿಕೊಂಡು ಶ್ರೀರಾಮ, ಲಕ್ಷ್ಮಣ, ಭರತ, ಶತ್ರುಘ್ನರೆಂಬ ನಾಮರೂಪಗಳಿಂದ ಅವತರಿಸಿರುವನು.

ದೇವತೆಗಳನ್ನು ವಾನರರಾಗಿ ಅವತರಿಸುವಂತೆ ಮಾಡಿ ಅವರ ಸಹಾಯದಿಂದ ರಾವಣಾದಿಗಳನ್ನು ನಿಗ್ರಹಿಸಿರುವನಷ್ಟೆ! ಅಂದರೆ ಜ್ಞಾನ, ವಿರಕ್ತಿ, ನಿರಭಿಮಾನ, ಅಸ್ವಾರ್ಥತೆಗಳೇ ರಾಕ್ಷಸರ ತತ್ವದಲ್ಲಿರುವ ಅಜ್ಞಾನವನ್ನು ನಿಗ್ರಹಿಸಲು ಸಾಧ್ಯವಾಗಿಲ್ಲವೆಂದೂ ಜೀವರು

ಗಳು ತಮ್ಮಲ್ಲಿರುವ ವಾನರರ ತತ್ವವಾದ ಪಂಚಪ್ರಾಣಗಳ ಸಹಾಯದಿಂದ ಅಂದರೆ ಯೋಗದ ಸಹಾಯದಿಂದ ಅವಿದ್ಯೆಯನ್ನು ನಿಗ್ರಹಿಸಿಕೊಳ್ಳಲೆಂಬ ಕರುಣೆಯಿಂದಲೂ ಪರಮಾತ್ಮನು ದೇವತೆಗಳನ್ನು ಕೂಡ ವಾನರರ ಅವತಾರವೆತ್ತುವಂತೆ ಮಾಡಿರುವನು.

ದಯಾನಿಧಿಯಾದ ಪರಮಾತ್ಮನು ಮಾನವರ ಉದ್ಧಾರಕ್ಕಾಗಿಯೇ ಧರ್ಮಾರ್ಥಕಾಮಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳೂ ತನ್ನ ಚರಿತ್ರೆಯಲ್ಲಿ ಅಡಗಿರುವಂತೆ ಲೀಲಾವತಾರಮಾಡಿರುವನು. ಆದಕಾರಣ, ಪರಮಾತ್ಮನು ಶ್ರೀರಾಮನೆಂಬ ಮಾನವನಾಗಿ ಜೀವರುಗಳಂತೆ ಬದ್ಧನಾಗಿ ಅನಂತರ ಮೋಕ್ಷವನ್ನು ಪಡೆದನೆಂಬ ಕುತರ್ಕದ ಮಾರ್ಗಕ್ಕೆ ಹೋಗದೆ ಅವನ ಚರಿತ್ರೆಯ ಲೀಲಾವಿಭೂತಿಗಳನ್ನು ಸ್ಮರಿಸಿಕೊಳ್ಳುತ್ತಾ ಅವನ ಚರಿತ್ರೆಯ ಅಂತರಾರ್ಥದಲ್ಲಿ ಸೂಚಿತವಾಗುವ ಜ್ಞಾನಮಾರ್ಗವನ್ನು ತಿಳಿದು ಆಚರಿಸಿ ಮಾನವರು ಕೃತಕೃತ್ಯರಾಗಬೇಕೆಂಬುದನ್ನು ಈ ಗ್ರಂಥವು ವ್ಯಕ್ತಪಡಿಸುವುದು.

ಈ ತತ್ವಾರ್ಥನಿರೂಪಣ ಗ್ರಂಥದಲ್ಲಿ ಶ್ರೀರಾಮಾದಿಗಳಿಗೆ ಅನ್ವಯಮಾಡಿ ಒರೆದಿರುವ ತತ್ವಗಳನ್ನೆಲ್ಲಾ ನಮಗೆ ಅನ್ವಯಮಾಡಿಕೊಳ್ಳಬೇಕು. ಲೀಲಾಮಾನುಷವಿಗ್ರಹನಾದ ಶ್ರೀರಾಮಚಂದ್ರನಿಗೆ ಖಂಡಿತವಾಗಿಯೂ ಅನ್ವಯಿಸತಕ್ಕದ್ದಲ್ಲ.

ಪರಮಾತ್ಮನು ತನ್ನ ಚರಿತ್ರೆಯಲ್ಲಿ ಮೋಕ್ಷಕ್ರಮದ ತತ್ವವನ್ನು ಅತ್ಯಂತ ಸುಲಭವಾಗಿ ತೋರಿಸಿರುವನು. ಬಾಲಕಾಂಡದಲ್ಲಿ ಈಶ್ವರನ ಮಹಿಮೆ ಮತ್ತು ಸೃಷ್ಟಿಕ್ರಮದ ತತ್ವಗಳನ್ನು ಸೂಕ್ಷ್ಮವಾಗಿ ಅಡಗಿಸಿರುವನು. ಅಯೋಧ್ಯಾಕಾಂಡ ಮೊದಲು ಅರಣ್ಯಕಾಂಡದಲ್ಲಿ ಸೀತಾಪಹರಣದವರೆಗಿನ ಚರಿತ್ರೆಯಲ್ಲಿ ಜೀವತ್ವಪ್ರಾಪ್ತಿಯಾಗುವ ತತ್ವಗಳಿವೆ. ಅಂದರೆ, ಬೀಜದಲ್ಲಿ ಅಡಗಿರುವ ವೃಕ್ಷವು ಗಿಡವಾಗಿ ಬೆಳೆದು ಕವಲೊಡೆದು ಹೇಗೆ ವೃಕ್ಷವೆನಿಸಿಕೊಳ್ಳುವುದೋ ಹಾಗೆ ಜನನವಾದ ಶಿಶುಗಳಲ್ಲಿ ಪಂಚಕೋಶಗಳ ಕಾರ್ಯಗಳು ಸ್ಫುರಣೆಯಾಗುತ್ತಾ ಬಂದು ಶಿಶುಗಳು ವಿಷಯವ್ಯಾಪಾರವೆಂದರೆ ಅವಿದ್ಯಾ (ಅಜ್ಞಾನ) ಬಂಧನಕ್ಕೆ ಒಳಗಾಗುವ ತತ್ವಗಳನ್ನು ತಿಳಿಸುವುವು. ಸೀತಾಪಹರಣದಿಂದ ಶ್ರೀರಾಮನ ಪಟ್ಟಾಭಿಷೇಕದವರೆಗಿನ ಚರಿತ್ರೆಯಲ್ಲಿ—ಅರಣ್ಯ, ಕಿಷ್ಕಿಂಧಾ, ಸುಂದರ ಮತ್ತು ಯುದ್ಧ ಕಾಂಡಗಳಲ್ಲಿ—ಮೋಕ್ಷ ಅಥವಾ ಆತ್ಮಸಾಕ್ಷಾತ್ಕಾರವನ್ನು ಪಡೆಯುವ ಮಾರ್ಗದ ತತ್ವಗಳು ಅಡಗಿರುವುವು. ಉತ್ತರಕಾಂಡದಲ್ಲಿ ಜೀವನ್ಮುಕ್ತ ಅಥವಾ ಪರಮಹಂಸತ್ವದ ವಿಚಾರಗಳೂ ವಿದೇಹಕೈವಲ್ಯದ ತತ್ವಗಳೂ ಅಡಕವಾಗಿರುವುವು.

ಅಯಣ ಅಂದರೆ ಮಾರ್ಗ. ರಾಮಾಯಣವೆಂದರೆ ಪರಮಾತ್ಮನ ಮಾರ್ಗ. ಅಂದರೆ ಪರಮಾತ್ಮನು ಮಾಯೆಯಿಂದೊಡಗೂಡಿ ಪ್ರಪಂಚವ್ಯಾಪಾರಕ್ಕೆ ಬಂದು ನಿಂತು ಪುನಃ ಮೋಕ್ಷಮಾರ್ಗದಲ್ಲಿ ಸಕಲವ್ಯಾಪಾರವನ್ನೂ ಉಪಸಂಹರಿಸಿಕೊಂಡು ತಾನೊಬ್ಬನೇ ನಿಲ್ಲುವನೆಂಬುದೇ ರಾಮಾಯಣವೆಂಬ ಪದದ ತತ್ವಾರ್ಥವಾಗಿರುವುದು.

ಶ್ರೀಮದ್ವಾಲ್ಮೀಕಿರಾಮಾಯಣವನ್ನು ಎಡೆಬಿಡದೆ ಅನುಸರಿಸಿಕೊಂಡು ಈ ತತ್ತ್ವಾರ್ಥ ಗ್ರಂಥವು ಬರೆಯಲ್ಪಟ್ಟಿರುವುದು. ರಾಮಾಯಣದ ಸಪ್ತಕಾಂಡಗಳನ್ನು ನೂರು ಪ್ರಕರಣಗಳಾಗಿ ವಿಂಗಡಿಸಿದೆ. ಈ ಪ್ರಕರಣಗಳಲ್ಲಿ ರಾಮಾಯಣದ ಸಾರವನ್ನು ಬರೆದು ಅದಕ್ಕೆ ಅನುಸರಿಸಿರುವ ವೇದಾಂತತತ್ತ್ವಗಳನ್ನು ವಿವರಿಸಿರುವುದರಿಂದ ಮೋಕ್ಷಮಾರ್ಗದ ವಿಚಾರಗಳು ಸುಲಭವಾಗಿ ಮುಂದಿಟ್ಟಾಗುವುವು. ಅಲ್ಲದೆ ಮೋಕ್ಷಾಪೇಕ್ಷಿಗಳು ಎಷ್ಟು ಸೋಪಾನಗಳನ್ನು ಹತ್ತಬೇಕಾಗಿರುವುದೆಂಬುದೂ ಮತ್ತು ಪ್ರಥಮ ಸೋಪಾನದಿಂದ ಅಂತ್ಯಸೋಪಾನದವರೆವಿಗೂ ಮಾಡಬೇಕಾದ ಕರ್ತವ್ಯವೇನೆಂಬುದೂ ವಿಶದವಾಗಿ ಗೊತ್ತಾಗುತ್ತದೆ.

ಗ್ರಂಥರಚನೆಯ ಕ್ರಮ.

ಶ್ರೀಮದ್ರಾಮಾಯಣದಲ್ಲಿ ಬರುವ ಕಥಾನಾಯಕರ ಮತ್ತು ಮುಖ್ಯಸ್ಥಳಗಳ ಹೆಸರುಗಳು ವೇದಾಂತದ ಅರ್ಥಕ್ಕೆ ಅನ್ವಯವಾಗುವುವೆಂಬುದನ್ನು ತೋರಿಸುವುದಕ್ಕೆ ಆಯಾಯ ಹೆಸರಿನ ಮತ್ತು ಸ್ಥಳದ ಪದಗಳಿಗೆ ಶಬ್ದಾರ್ಥಕಲ್ಪದ್ರುಮ, ಅಮರದ ವ್ಯಾಖ್ಯಾನ, ರಾಮಾಯಣದ ವ್ಯಾಖ್ಯಾನ, ಶಿವಸಹಸ್ರನಾಮ, ವಿಷ್ಣುಸಹಸ್ರನಾಮಗಳ ಭಾಷ್ಯಗಳಿಂದ ವ್ಯುತ್ಪತ್ತಿಗಳನ್ನು ತೆಗೆದು ಬರೆದಿದೆ. ಪ್ರತಿಪ್ರಕರಣದಲ್ಲಿಯೂ ಅನ್ವಯ ಮಾಡಿರುವ ತತ್ತ್ವವನ್ನು ದೃಢೀಕರಿಸಲು ಶ್ರೀಶಂಕರಭಗವತ್ಪಾದಾಚಾರ್ಯರವರ ವಾಕ್ಯಗಳನ್ನು ಮಾಲಿಕೆಯಂತೆ ಅನ್ವಯಮಾಡಿರುವುದಲ್ಲದೆ ಶ್ರೀಕೃಷ್ಣಪರಮಾತ್ಮನ ವಾಕ್ಯಗಳನ್ನೂ, ಶ್ರೀವಿದ್ಯಾರಣ್ಯಸ್ವಾಮಿಗಳವರ ವಾಕ್ಯಗಳನ್ನೂ, ಪತಂಜಲಿಮಹರ್ಷಿಗಳ ವಾಕ್ಯಗಳನ್ನೂ ಆಯಾಯ ಸ್ಥಳದಲ್ಲಿ ಉದಾಹರಣೆಯಾಗಿ ಕೊಟ್ಟಿದೆ. ಅಲ್ಲದೆ ಆಯಾಯ ಪ್ರಕರಣಗಳಿಗೆ ಶ್ರುತಿಪ್ರಮಾಣಗಳನ್ನೂ ಅನ್ವಯಿಸಿ ತತ್ತ್ವಗಳನ್ನು ದೃಢೀಕರಿಸಿದೆ.

ಕೆಲವು ಪ್ರಕರಣಗಳ ತತ್ತ್ವಗಳನ್ನು ಸಮನ್ವಯಮಾಡುವ ಸೌಕರ್ಯಕ್ಕೋಸ್ಕರ ಮಾನವಪೀಠದ ಚಿತ್ರಪಟ, ತಾವರೆಗಿಡದ ಚಿತ್ರಪಟ, ಕುಂಡಲಿನೀ ಉತ್ಥಾಪನೆಯನ್ನು ತೋರಿಸುವ ಚಿತ್ರಪಟ, ಮಾನವರ ದೇಹಕ್ಕೆ ಹೋಲಿಸಿರುವ ಜೀವಸ್ಥಾನದ ಚಿತ್ರಪಟ, ಮನುಷ್ಯನಲ್ಲಿ ಶ್ರೀರಾಮಚಂದ್ರನ ಪಟ್ಟಾಭಿಷೇಕವನ್ನು ತೋರಿಸಿರುವ ಚಿತ್ರಪಟಗಳನ್ನು ಈ ಗ್ರಂಥದಲ್ಲಿ ಕೊಟ್ಟು ತತ್ತ್ವಾರ್ಥಗಳನ್ನು ವಿವರಿಸಿದೆ.

ನನಗೆ ಸಂಸ್ಕೃತದ ಗಂಧವೇ ತಿಳಿಯದು. ಕನ್ನಡದಲ್ಲಿ ಪಾಂಡಿತ್ಯವಿಲ್ಲ. ನನ್ನಲ್ಲಿ ವಿದ್ಯಾಪ್ರೌಢಿಮೆಯಾಗಲಿ, ಗ್ರಂಥರಚನಾ ಚಾತುರ್ಯವಾಗಲಿ ಇಲ್ಲ. ಈ ಗ್ರಂಥರಚನಾ ಕಾರ್ಯವೆಲ್ಲವೂ ಜಗನ್ಮಾತೆಯಾದ ಶ್ರೀರಾಜರಾಜೇಶ್ವರಿಯ ಪ್ರೇರಣೆಯ ಫಲಮಾತ್ರವಾಗಿರುವುದು. ಆದರೆ ಈ ಗ್ರಂಥರಚನೆಗೆ ಕಾರಣರೂಪವಾಗಿ ಕೆಲವು ವಿಚಿತ್ರ ವ್ಯಾಪಾರಗಳು ನಡೆದುವು. ಅವುಗಳನ್ನು ಇಲ್ಲಿ ಸಂಕ್ಷೇಪವಾಗಿ ತಿಳಿಸುವೆನು.

ಗ್ರಂಥರಚನೆಗೆ ಕಾರಣ.

ನನಗೆ ೧೯೧೭ನೆಯ ಇಸವಿಯಲ್ಲಿ ನನ್ನ ಷಡ್ಡಕಂದಿರು ಶ್ರೀ|| ರಾಮಸ್ವಾಮಯ್ಯನವರ ಮನೆಗೆ ದಯಮಾಡಿಸಿದ್ದ ಒಬ್ಬ ಶಕ್ತಿಯ ಉಪಾಸಕರ ಪರಿಚಯವಾಯಿತು. ಪರಿಚಯವಾದ ಮೇಲೆ ನಾನು ಆಗಾಗ ಅವರಲ್ಲಿಗೆ ಹೋಗಿಬರುತ್ತಿದ್ದೆನು. ೧೯೧೮ನೆಯ ಇಸವಿಯಲ್ಲಿ ಅಂದರೆ ಕಾಳಯುಕ್ತಿ ಸಂವತ್ಸರದ ಆಷಾಢಮಾಸದಲ್ಲಿ ಈ ಶಕ್ತ್ಯುಪಾಸಕರು ಚಾತುರ್ಮಾಸ್ಯಕ್ಕೋಸ್ಕರ ಚಿಕ್ಕನಾಯಕನಹಳ್ಳಿಗೆ ನಾಲ್ಕು ಮೈಲಿ ದೂರದಲ್ಲಿ ಗುಡ್ಡಗಳ ಮಧ್ಯೆ ಇರುವ ಭಳಿರಾಮೇಶ್ವರ ದೇವಸ್ಥಾನಕ್ಕೆ ಹೋಗಿ ನೆಲಸಿದರು. ಶ್ರಾವಣಮಾಸದಲ್ಲಿ ನನ್ನ ಷಡ್ಡಕಂದಿರಾದ ಶ್ರೀ ರಾಮಸ್ವಾಮಯ್ಯನವರು ಈ ಶಕ್ತ್ಯುಪಾಸಕರನ್ನು ನೋಡಬೇಕೆಂದು ಅಪೇಕ್ಷಿಸಿ ನನ್ನನ್ನೂ ಕರೆಯಲು ನಾವಿಬ್ಬರೂ ಭಳಿರಾಮೇಶ್ವರಕ್ಕೆ ಹೋಗಿಬಂದೆವು.

ಅದೇ ಸಂವತ್ಸರದ ಭಾದ್ರಪದ ಬಹುಳದಲ್ಲಿ ನನ್ನ ಸ್ವಗ್ರಾಮ ಎಡತೊರೆಗೆ ಹೋಗಿದ್ದೆನು. ಆಗ ನಾನು ಅರಸೀಕೆರೆಯ ಮಾರ್ಗವಾಗಿ ಚಿಕ್ಕನಾಯಕನಹಳ್ಳಿಗೆ ಹೋಗಿ ಅನಂತರ ಬೆಂಗಳೂರಿಗೆ ಬರೋಣವೆಂದು ಮನಸ್ಸುಮಾಡಿ, ಆಶ್ವಯುಜ ಶುದ್ಧ ಪಾಡ್ಯಮಿಯ ದಿವಸ ಎಡತೊರೆಯನ್ನು ಬಿಟ್ಟು, ಚಿಕ್ಕನಾಯಕನಹಳ್ಳಿಯ ಮೂಲಕ ಶಕ್ತ್ಯುಪಾಸಕರಿದ್ದ ಭಳಿರಾಮೇಶ್ವರವನ್ನು ಬಿದಿಗೆಯ ದಿನ ಸೇರಿದೆನು. ನವರಾತ್ರಿಯ ಕಾಲವಾದುದರಿಂದ ಶಕ್ತ್ಯುಪಾಸಕರು ಪೂಜಾದಿಗಳನ್ನು ನಡೆಯಿಸುತ್ತಿದ್ದರು. ಹತ್ತಿರ ಊರು ಯಾವುದೂ ಇಲ್ಲದ್ದರಿಂದ ಅಲ್ಲಿಗೆ ಬಂದಿದ್ದವರೆಲ್ಲರೂ ದೇವಸ್ಥಾನದಲ್ಲಿಯೇ ಮಲಗುತ್ತಿದ್ದುದರಿಂದ ನಾನೂ ಅಲ್ಲಿಯೇ ಮಲಗುತ್ತಿದ್ದೆನು.

ಪಂಚಮಿಯ ರಾತ್ರಿ ಸುಮಾರು ಒಂದು ಘಂಟೆಯ ಸಮಯದಲ್ಲಿ ನನಗೆ ಏನೋ ಒಂದು ವಿಧವಾದ ಕನಸುಂಟಾದಂತಾಗಿ ನನ್ನ ಮಗ್ಗುಲಲ್ಲಿ ತೇಜೋರೂಪಿನ ಬಾಲೆಯೊಬ್ಬಳು ಕುಳಿತುಕೊಂಡು "ಮಗೂ! ನೀನು ನನ್ನವನು. ನೀನು ಜನ್ಮಾಂತರದಲ್ಲಿ ಇಲ್ಲಿ ಪಾಳೆಯಗಾರನಾಗಿದ್ದೆ." ಎಂದು ಹೇಳಿದಳು. ಇದು ನಿಜವೇ ಎಂದು ನಾನು ಪ್ರಶ್ನೆಮಾಡಿದ ಹಾಗೂ ನಿಜವೆಂದು ಆ ಬಾಲೆಯು ಹೇಳಿದ ಹಾಗೂ ಆಗಿ ಥಟ್ಟನೆ ಎಚ್ಚರವಾಯಿತು. ಈ ವಿಷಯವನ್ನು ಕೂಡಲೆ ಶಕ್ತ್ಯುಪಾಸಕರಿಗೆ ತಿಳುಹಿಸಿದೆನು. ಅದಕ್ಕೆ ಅವರು "ಮಹಾಲಕ್ಷ್ಮಿ ಎಂದು ಹೆಸರುಳ್ಳ ನಿಮ್ಮ ಮೂರನೆಯ ಹುಡುಗಿಯನ್ನು ಎರಡು ದಿನ ಸ್ವಪ್ನದಲ್ಲಿ ಕಂಡೆನು. ಅಮ್ಮನವರನ್ನು ಪೂಜೆಮಾಡುತ್ತಿರುವಾಗಲೂ ೫-೬ ಸಲ ಆ ಹುಡುಗಿಯ ಬಿಂಬವೇ ಅಮ್ಮನವರಲ್ಲಿ ಕಾಣುತ್ತಿತ್ತು. ಈ ವಿಚಾರವನ್ನು ನಿಮ್ಮ ಷಡ್ಡಕಂದಿರು ಶ್ರೀ|| ರಾಮಸ್ವಾಮಯ್ಯನವರಿಗೂ ಬರೆದಿರುತ್ತೇನೆ. ನಿಮಗೂ ಈರೀತಿಯಾದ ಸ್ವಪ್ನವಾಗಿದೆ. ಜನ್ಮಾಂತರದ ಋಣಾನುಬಂಧವು ಹೇಗಿರುವುದೋ ತಿಳಿಯದು. ಹೀಗೆ ನಡೆದಿರುವುದಕ್ಕೆ ಕಾರಣವೇನೋ ಗೊತ್ತಾಗಲಿಲ್ಲ." ಎಂದರು. ನಾನು ಷಷ್ಠಿಯ ದಿವಸ ಅಲ್ಲಿಂದ ಹೊರಟು ಸಪ್ತಮಿಯ ದಿವಸ ಬೆಂಗಳೂರನ್ನು ಸೇರಿದೆನು.

ನಾನು ಬೆಂಗಳೂರಿಗೆ ಬಂದ ಹಿಂದಿನ ದಿನದಿಂದ ನನ್ನ ಇಬ್ಬರು ಮಕ್ಕಳು ಜ್ವರ ಬಂದು ಮಲಗಿದ್ದರು. ಸಪ್ತಮಿಯ ದಿವಸ ರಾತ್ರಿ ಪುನಃ ದೇವಿಯು ಭಯಂಕರ ರೂಪವನ್ನು ತಾಳಿ ಕಾಣಿಸಿಕೊಂಡು, " ಕಾರಣಾಂತರಗಳಿಂದ ನಾನು ಘೋರಾಕಾರವನ್ನು ತಾಳಬೇಕಾಗಿದೆ " ಎಂದು ಹೇಳಿ ಅದೃಶ್ಯಳಾದಳು. ಆ ಸ್ವರೂಪವನ್ನು ಕಂಡು ನನ್ನ ಮನಸ್ಸಿಗೆ ಬಹಳ ಭೀತಿಯಾಗಿ ಏನೂ ತೋರದಂತಾಗಿ ಎಚ್ಚರವಾಯಿತು.

ದುರ್ಗಾಷ್ಟಮಿಯ ದಿನ ಒಂದು ವಿಚಿತ್ರವಾದ ನಡೆವಳಿಕೆಯುಂಟಾಯಿತು. ಆ ದಿನ ನನ್ನ ಹದಿನಾಲ್ಕುವರ್ಷ ವಯಸ್ಸಿನ ಹುಡುಗಿಯೂ ಒಂದು ಗಂಡು ಮಗುವೂ ಕಾಲವಾದರು. ಹುಡುಗಿಯು ಮರಣವನ್ನೈದುವುದಕ್ಕೆ ಮುಂಚೆ ಆ ದಿವಸ ಸಾಯಂಕಾಲದಲ್ಲಿ " ನನ್ನನ್ನು ದೇವಸ್ಥಾನದಲ್ಲಿ ಏಕೆ ಮಲಗಿಸಿರುವಿರಿ ? ಮನೆಗೆ ಕರೆದುಕೊಂಡು ಹೋಗಿ " ಎಂದು ತನ್ನಷ್ಟಕ್ಕೆ ತಾನೇ ಮಾತಾಡಿಕೊಳ್ಳುತ್ತಿದ್ದಳು. ಹಾಗೆ ಮಾತಾಡಬಾರದೆಂದು ನನ್ನ ಹೆಂಡತಿಯು ಹುಡುಗಿಯನ್ನು ಸಮಾಧಾನಮಾಡುತ್ತಿದ್ದಳು.

ದುರ್ಗಾಷ್ಟಮಿಯ ರಾತ್ರಿ ಹತ್ತುಘಂಟೆಯ ಸಮಯದಲ್ಲಿ ಗಂಡುಶಿಶುವು ಪ್ರಥಮದಲ್ಲಿ ಮರಣವನ್ನು ಹೊಂದಿತು. ಹೆಣ್ಣುಮಗುವಿಗೂ ಸಂಕಟವು ಹೆಚ್ಚಾಗುತ್ತಿದ್ದುದರಿಂದ, ಮರಣವನ್ನೈದಿದ ಗಂಡುಮಗುವನ್ನು ಬೇರೆ ಕೊಠಡಿಯಲ್ಲಿಟ್ಟು, ನನ್ನ ತಾಯಿಯನ್ನು ಅದರ ಹತ್ತಿರವಿರುವಂತೆ ಹೇಳಿ, ನಾನೂ ನನ್ನ ಹೆಂಡತಿಯೂ ಹುಡುಗಿಯ ಬಳಿ ಕುಳಿತುಕೊಂಡಿದ್ದೆವು. ಹೆಣ್ಣುಮಗುವು " ನನ್ನನ್ನು ದೇವಸ್ಥಾನದಲ್ಲಿ ಏಕೆ ಮಲಗಿಸಿರುವಿರಿ ? ಮನೆಗೆ ಕರೆದುಕೊಂಡು ಹೋಗಿ " ಎಂಬ ಮಾತನ್ನು ಬಿಡಲೇ ಇಲ್ಲ. ಹೀಗೆ ರಾತ್ರಿ ಹನ್ನೊಂದೂವರೆ ಘಂಟೆಯವರೆಗೂ ಇದ್ದು ಅನಂತರ ಮಾತನ್ನು ನಿಲ್ಲಿಸಿದಳು.

ದುರ್ಗಾಷ್ಟಮಿಯ ರಾತ್ರಿ ಸುಮಾರು ಹನ್ನೆರಡು ಘಂಟೆಯ ಸಮಯದಲ್ಲಿ ಮಲಗಿದ್ದ ಹೆಣ್ಣುಮಗುವಿನ ಪಕ್ಕದಲ್ಲಿ ನಾನೂ ನನ್ನ ಹೆಂಡತಿಯೂ ಕುಳಿತಿದ್ದಾಗ ನನ್ನ ಹೆಂಡತಿಯು ತನಗೇನೋ ಸಂಕಟವಾಗುವುದೆಂದು ಹೇಳಿ ನನ್ನ ತೊಡೆಯ ಮೇಲೆ ತನ್ನ ತಲೆಯನ್ನಿಟ್ಟು ಮೂರ್ಛಿತಳಾದಳು. ನನಗೂ ಏನೋ ಒಂದು ವಿಧವಾದ ಸಂಕಟವಾದಂತಾಗಿ ನನ್ನ ಬುದ್ಧಿಯೇ ಒಂದು ವಿಧವಾಯಿತು. ಈ ಕಾಲದಲ್ಲಿ ನನ್ನ ಮಗಳು ನನ್ನ ಮನಸ್ಸಿಗೆ ಹೇಗೆ ಕಾಣಿಸುತ್ತಿದ್ದಳೆಂದರೆ, ಅರಿಶಿನಬಣ್ಣದ ಸೀರೆಯನ್ನುಟ್ಟಿರುವಂತೆಯೂ, ಹಣೆಯಲ್ಲಿ ಉದ್ದವಾದ ಕುಂಕುಮದ ನಾಮವನ್ನಿಟ್ಟಿರುವಂತೆಯೂ, ದುರ್ಗೀದೇವರ ಮುಂದೆ ಅವಳು ಮಲಗಿರುವಂತೆಯೂ, ದುರ್ಗೀದೇವಿಯ ಪೂಜೆಮಾಡುತ್ತಿರುವ ಒಬ್ಬ ಪೂಜಾರಿಯು ಬಂದು ಅವಳ ಶಿರಸ್ಸನ್ನು ಕತ್ತರಿಸಿ ದುರ್ಗಿಗೆ ಬಲಿಕೊಟ್ಟಂತೆಯೂ ಕಾಣಿಸುತ್ತಿತ್ತು. ಹೀಗೆ

ನಡೆಯುವ ಕಾಲದಲ್ಲಿ ನನ್ನ ಪ್ರಜ್ಞೆಯೇ ಒಂದು ವಿಧವಾಗಿತ್ತು. ಸ್ವಲ್ಪ ಕಾಲದ ಮೇಲೆ ನನಗೆ ತಿಳಿವುಂಟಾಯಿತು. ಇಷ್ಟರಲ್ಲಿ ನನ್ನ ಹೆಂಡತಿಯೂ ಚೇತರಿಸಿಕೊಂಡಳು.

ಇಬ್ಬರಿಗೂ ಹೀಗಾಗಲು ಕಾರಣವೇನೆಂದು ಯೋಚಿಸಿಕೊಂಡು ವ್ಯಥೆಪಡುತ್ತಿರಲು ಹೆಣ್ಣುಮಗುವೂ ಪ್ರಾಣಬಿಟ್ಟಿತು. ನನ್ನ ಹೆಂಡತಿಯು ಶವದ ಮುಂದೆ ಅಳುತ್ತ ಕುಳಿತಿದ್ದಳು. ನಾನು ಅತ್ಯಂತ ಸಂಕಟದಿಂದ ಹತ್ತಿರವಿದ್ದ ಹಾಸಿಗೆಯ ಮೇಲೆ ತಲೆಯನಿಟ್ಟು ಸುರಟಿಕೊಂಡು ದುಃಖಪಡುತ್ತಿದ್ದಾಗ, ನಿದ್ರೆಯು ಬಂದಂತಾಗಿ ಏನೋ ಒಂದು ವಿಧವಾದ ಮತ್ತು ಬಂದಿತು. ಆಗ ಹಿಂದೆ ಇದ್ದ ಜಗದ್ಗುರುಗಳಾದ ಶ್ರೀಶೃಂಗೇರಿ ಶ್ರೀಸಚ್ಚಿದಾನಂದ ಶಿವಾಭಿನವ ನೃಸಿಂಹಭಾರತೀಸ್ವಾಮಿಗಳವರು ಕಾಣಿಸಿಕೊಂಡು ನನ್ನನ್ನು ಕುರಿತು "ದುಃಖಪಡಬೇಡ. ಈ ಪಾಪಶೇಷವು ಜನ್ಮಾಂತರದ್ದು. ಜನ್ಮಾಂತರದಲ್ಲಿ ಚಿಕ್ಕನಾಯಕನಹಳ್ಳಿಯ ಹತ್ತಿರವಿರುವ ಛೀರಾಮೇಶ್ವರ ಮತ್ತು ಸಪ್ತಮಾತೃಕೆ ಎಂಬ ಪಾಳೆಯಪಟ್ಟಿನಲ್ಲಿ ಪಾಳೆಯಗಾರನಾಗಿ ಸಾತ್ವಿಕಸ್ವಭಾವದಲ್ಲಿದ್ದ ನಿನಗೆ ಶಾಕ್ತೇಯ ಗುರುವಿನ ಸಹವಾಸ ಒದಗಿತು. ಆ ಶಾಕ್ತೇಯ ಗುರುವಿನ ಮಾತಿಗೆ ಮರುಳಾಗಿ ದುರ್ಗಾದೇವಾಲಯವನ್ನು ಕಟ್ಟಿಸಿ, ಆ ದೇವಿಯನ್ನು ಒಲಿಸಿಕೊಳ್ಳಬೇಕೆಂದು ನರಬಲಿಗಳನ್ನು ಕೊಡಲು ನೀನು ಪ್ರಾರಂಭಿಸಿದೆ. ಜನ್ಮಾಂತರದಲ್ಲಿ ದುರ್ಗಾಷ್ಟಮಿಯ ದಿವಸ ಬಲಿಗಳನ್ನು ಕೊಟ್ಟಿದ್ದ ಹೆಣ್ಣು ಮತ್ತು ಗಂಡು ಶಿಶುಗಳೇ ಈಗ ಮೃತಪಟ್ಟವರಾಗಿರುವರು. ಈಗ ನಿನಗೆ ಸಹವಾಸವಾಗಿರುವ ಶಕ್ತ್ಯುಪಾಸಕರೇ ಜನ್ಮಾಂತರದಲ್ಲಿ ನಿನಗೆ ಶಾಕ್ತೇಯ ಗುರುಗಳಾಗಿದ್ದರು. ನಿನ್ನ ಸಂಗಡ ಯಾರು ಮಾತಾಡುತ್ತಿರುವರೋ ಅವರೇ ವಿದ್ಯಾರಣ್ಯರೆಂದು ತಿಳಿ. ನಿನಗೆ ಜನ್ಮಾಂತರದಲ್ಲಿ ಸದುಪದೇಶ ಮಾಡಲು ನಿನ್ನ ಬಳಿಯಲ್ಲಿದ್ದ ನನ್ನ ಶಿಷ್ಯನೇ ಈಗ ನಂಜನಗೂಡಿನಲ್ಲಿರುವ ಶ್ರೀಸಾಂಬಸದಾಶಿವಸ್ವಾಮಿಯೆಂದು ತಿಳಿ. ಈ ವಿಧವಾದ ಬಲಿಗಳನ್ನು ಕೊಡುವುದು ಶುದ್ಧತಪ್ಪೆಂದು ನಾನು ನಿನಗೆ ಹೇಳಿದ ಬುದ್ಧಿವಾದದಂತೆ ನೀನು ನಡೆದುಕೊಂಡದ್ದರಿಂದ, ನನಗೆ ಸಂತೋಷವಾಗಿ ನರಬಲಿಗಳಿಂದ ಪೂಜೆನಡೆಯುತ್ತಿದ್ದ ದುರ್ಗಾದೇವಸ್ಥಾನವನ್ನು ತೆಗೆಯಿಸಿ ಆ ಸ್ಥಳದಲ್ಲಿಯೇ ಈಗಿರುವ ದೇವಸ್ಥಾನವನ್ನು ಕಟ್ಟಿಸಿ, ಬಾಲರಾಜರಾಜೇಶ್ವರೀ ಸಮೇತನಾದ ಶ್ರೀರಾಮೇಶ್ವರನೆಂಬ ನಾಮದಿಂದ ಪಂಚಾಯತನ ಪ್ರತಿಷ್ಠೆಮಾಡಿ ಅದರ ಸೇವೆಯಲ್ಲಿ ನೀನು ಇರಬೇಕೆಂದು ಗೊತ್ತುಮಾಡಿದೆನು.

"ಬಲಿಗಳನ್ನು ಕೊಟ್ಟ ಪಾಪಕ್ಕಾಗಿ ನಿನಗೆ ವ್ಯಥೆಯುಂಕುರಿಸಿತು. ಆಗ ನಾನು 'ಬಿಟ್ಟ ಬಾಣವು ಹೇಗೆ ತನ್ನ ಕಾರ್ಯವನ್ನು ಮಾಡದೆ ಬಿಡದೋ ಹಾಗೆಯೇ ಈ ಪಾಪಶೇಷಗಳನ್ನು ಅನುಭವಿಸಿಯೇ ತೀರಬೇಕು. ಅನುಭವದ ಅಂತ್ಯದಲ್ಲಿ ಈ ಪಾಪಶೇಷಗಳ ವಿಚಾರವು ನಿನ್ನ ಸ್ಮರಣೆಗೆ ಬರಲಿ.' ಎಂದು ಅನುಗ್ರಹಮಾಡಿದ್ದೆನು. ನೀನು ಸತ್ತವರಿಗೋಸ್ಕರ ದುಃಖಪಡಬೇಡ. ಜನ್ಮಾಂತರದ ಪಾಪಶೇಷವೆಂದು ತಿಳಿ. ಸತ್ತವರಿಗೆ

ದೇವಿಯು ಉತ್ತಮ ಜನ್ಮವನ್ನೇ ಕೊಡುವಳು. ದುಃಖವನ್ನು ಸಹಿಸಿಕೊ.'' ಎಂಬದಾಗಿ ಹೇಳಿದಂತಾಯಿತು.

ಸ್ವಪ್ನವೂ, ಸುಷುಪ್ತಿಯೂ, ಜಾಗ್ರತ್ತೂ, ಅಲ್ಲದ ಆ ಸ್ವರೂಪವು ಹೋಗಿ ನನ್ನ ಕಣ್ಣುಗಳು ತೆರೆಯಲ್ಪಟ್ಟು ಹೊರಗಿನ ಜ್ಞಾನ ಬಂದಿತು. ಹೊರಗಡೆ ಜ್ಞಾನ ಬಂದ ನಂತರ ದುಃಖವಿನ್ನೂ ಅಧಿಕವಾಗಿ ನನಗೆ ಒಂದೂ ತೋರಲಿಲ್ಲ. ಒಂದು ಕಡೆ ದುಃಖ, ಮತ್ತೊಂದು ಕಡೆ ಆಶ್ಚರ್ಯ, ಎರಡೂ ನನ್ನನ್ನು ಬಾಧಿಸುತ್ತಿದ್ದುವು. ನಡೆದ ಸಂಗತಿಯನ್ನು ನನ್ನ ಹೆಂಡತಿಗೂ, ಶ್ರೀಸಾಂಬಸದಾಶಿವಾನಂದರವರಿಗೂ, ನನ್ನ ಷಡ್ಡಕಂದಿರಾದ ಶ್ರೀ|| ರಾಮಸ್ವಾಮಯ್ಯನವರಿಗೂ ತಿಳಿಸಿದೆನು.

ಘಳಿರಾಮೇಶ್ವರದಲ್ಲಿ ಶಕ್ತ್ಯುಪಾಸಕರು ನವರಾತ್ರಿ ಸಪ್ತಮೀದಿನ ಅಮ್ಮನವರಿಗೆ ಕ್ರೂರವಾದ ಅಲಂಕಾರಮಾಡಿ ಒಂದು ಕ್ರೂರದೇವತೋಪಾಸನೆಯ ಮಂತ್ರವನ್ನು ಅಂದಿನಿಂದ ಪುನಶ್ಚರಣೆಮಾಡಲು ಪ್ರಾರಂಭಿಸಿದರೆಂದು ತಿಳಿಯಿತು. ಬೆಂಗಳೂರಲ್ಲಿ ನನಗೆ ನಡೆದ ಸಂದರ್ಭಗಳನ್ನೆಲ್ಲಾ ಸೂಚಿಸಿ, ಅಮ್ಮನವರಿಗೆ ಕ್ರೂರವಾದ ಅಲಂಕಾರ ತೆಗೆಯಬೇಕೆಂದೂ, ಆ ಸ್ಥಳದಲ್ಲಿ ಕಠಿಣವಾದ ದೇವತಾಮಂತ್ರೋಪಾಸನೆಗಳನ್ನು ಮಾಡಬಾರದೆಂದೂ ಪ್ರಾರ್ಥಿಸಿ ಶಕ್ತ್ಯುಪಾಸಕರಿಗೆ ವಿಜಯದಶಮೀ ದಿನವೇ ಕಾಗದವನ್ನು ಬರೆದೆನು.

ಇದಾದ ಒಂದು ತಿಂಗಳಿಗೆ ಶಕ್ತ್ಯುಪಾಸಕರು ದುರ್ಗಾ, ಉಗ್ರನರಸಿಂಹ, ಮುಂತಾದ ಎಂಟು ಮಂತ್ರಗಳನ್ನು ಜಪಿಸುವರೆಂದೂ, ಇದು ಕೂಡದೆಂದೂ ನಂಜನಗೂಡಿನಲ್ಲಿದ್ದ ಶ್ರೀಸಾಂಬಸದಾಶಿವಾನಂದರವರಿಗೆ ಸ್ವಪ್ನವಾಯಿತು. ಇದಕ್ಕೆ ಸರಿಯಾಗಿ ಶಕ್ತ್ಯುಪಾಸಕರು ತಾವು ಉಗ್ರನರಸಿಂಹ, ದುರ್ಗಾ, ಕಾಳೀ ಮುಂತಾದ ಎಂಟು ಮಂತ್ರಗಳನ್ನು ೨೪ ದಿವಸ ನಿಯಮದಿಂದ ಜಪಮಾಡುವುದಾಗಿ ಘಳಿರಾಮೇಶ್ವರದಿಂದ ನನಗೆ ಕಾಗದವನ್ನು ಬರೆದರು. ಅವರು ಜಪಕ್ಕೆ ಪ್ರಾರಂಭಿಸಿದ ದಿವಸದಿಂದ ಮೂರು ದಿವಸಗಳವರೆಗೆ ನಮ್ಮ ಮನೆಯಲ್ಲಿ ದೇವರನ್ನು ಕ್ಷೀರದಲ್ಲಿಟ್ಟು ಹೆಂಗಸರು ಮಕ್ಕಳು ಮೊದಲುಗೊಂಡು ಎಲ್ಲರೂ ಸೇರಿ ಅವಿಚ್ಛಿನ್ನವಾಗಿ ಶ್ರೀರಾಮ, ಶ್ರೀಶಂಕರನಾಮಗಳನ್ನೇ ಪಠಿಸುತ್ತಿದ್ದೆವು. ಅನಂತರ ಘಳಿರಾಮೇಶ್ವರಕ್ಕೆ ಹೋಗುವುದೇ ಮೇಲೆಂದು ಯೋಚಿಸಿ ಹೋದೆನು. ಶ್ರೀಸಾಂಬಸದಾಶಿವಾನಂದರೂ ಅಲ್ಲಿಗೆ ದಯಮಾಡಿಸಿದರು. ಶಕ್ತ್ಯುಪಾಸಕರು ಜಪಕ್ಕೆ ಪ್ರಾರಂಭಮಾಡಿ ೨೦ ದಿನಗಳಾಗಿತ್ತು. ಉಳಿದ ನಾಲ್ಕುದಿನ ನಾನೂ ನಿಯಮದಿಂದಿದ್ದು ಶ್ರೀಶಂಕರನಾಮವನ್ನು ಪಠಿಸುತ್ತ ಅಮ್ಮನವರನ್ನು ಒಂದೊಂದು ತುಳಸೀದಳದಿಂದ ಪೂಜೆಮಾಡುತ್ತಿದ್ದೆನು. ಶಕ್ತ್ಯುಪಾಸಕರ ೨೪ ದಿನಗಳ ನಿಯಮ ಪೂರ್ಣವಾದ ಮೇಲೆಯೂ ನಾಲ್ಕೈದು ದಿನಗಳಿದ್ದು ಪ್ರತಿದಿನವೂ ಈಶ್ವರನಿಗೂ ದೇವಿಗೂ ಶ್ರೀರಾಮ, ಶ್ರೀಶಂಕರನಾಮಗಳನ್ನು ಪಠನಮಾಡುತ್ತ, ಕ್ಷೀರಾಭಿಷೇಕ ಮಾಡಿ ಅರ್ಚನೆ ಮಾಡಿದೆನು. ವಿಧಿಯು ನನ್ನ ಕೈಯ್ಯಲ್ಲಿ ಈರೀತಿ

ಕಾರ್ಯ ಮಾಡಿಸಿಬಿಟ್ಟಿತು. ನಾನೂ ಶ್ರೀಸಾಂಬಸದಾಶಿವಾನಂದರೂ ಅಲ್ಲಿದ್ದಾಗ ಇನ್ನೂ ಕೆಲವು ವಿಚಿತ್ರಗಳು ನಡೆದುವು.

ಈ ವಿಚಾರಗಳು ನಡೆದಮೇಲೆ ಮೂರು ತಿಂಗಳು ಕಳೆದುವು. ನನಗೆ ಪುನಃ ಛಳಿರಾಮೇಶ್ವರಕ್ಕೆ ಹೋಗಿ ಬರಬೇಕೆಂಬ ಮನಸ್ಸಾಯಿತು. ಅಂಕುರಿಸಿದ ಈ ಸಂಕಲ್ಪವು ನನ್ನ ಹೆಂಡತಿ ಮಕ್ಕಳನ್ನೂ ಕರೆದುಕೊಂಡು ಹೋಗುವಂತೆ ಪ್ರೇರಿಸಿತು. ಸಂಕಲ್ಪ ರೂಪದಲ್ಲಿದ್ದುದು ಕಾರ್ಯತಃ ಪರಿಣಮಿಸಿ ಎಲ್ಲರನ್ನೂ ಕರೆದುಕೊಂಡು ಹೋಗಿ ಹಾಳು ಬಿದ್ದಿದ್ದ ಪಾಳೆಯಪಟ್ಟಿನಲ್ಲಿ ನಿರ್ಜನವಾಗಿರುವ ದೇವಸ್ಥಾನದಲ್ಲಿಯೇ ಏಳು ದಿನಗಳು ಇದ್ದೆನು. ಏಳು ದಿನಗಳೂ ನಾನೂ ಹುಡುಗರೂ ಸೇರಿಕೊಂಡು ಪ್ರಾತಸ್ಸಾಯಂಕಾಲ ಗಳೆರಡರಲ್ಲಿಯೂ ಶ್ರೀಶಂಕರನಾಮವನ್ನು ಪಠಿಸಿಕೊಂಡು ಅರ್ಚನೆ ಮಾಡುತ್ತಿದ್ದೆವು. ಏಳನೆಯ ದಿವಸ ಒಂದು ಮೈಲಿ ದೂರದಲ್ಲಿರುವ ಉತ್ತರಹಳ್ಳಿಯಿಂದ ಬ್ರಾಹ್ಮಣಸುವಾಸಿನಿ ಯರನ್ನು ಕರೆಯಿಸಿ ಸಂತರ್ಪಣೆನಡೆಸಿ ಸುಮಂಗಲಿಯರಿಗೆ ಅರಿಶಿನ ಕುಂಕುಮಾದಿ ಮಂಗಳದ್ರವ್ಯಗಳನ್ನು ಅರ್ಪಿಸಿದೆವು.

ಛಳಿರಾಮೇಶ್ವರದಿಂದ ಬಂದ ಮೇಲೆ ಎರಡು ತಿಂಗಳು ಕಳೆದವು. ನನ್ನ ಇನ್ನೊಂದು ಆರು ವರ್ಷದ ಹುಡುಗಿಗೂ ಇದ್ದಕ್ಕಿದ್ದಹಾಗೆ ಹೊಟ್ಟೆನೋವು ಬಂದು ಜಾಯಿಲೆ ಹೆಚ್ಚಾಗಿ ಮೂರನೆಯ ದಿವಸ ಸಾಯಂಕಾಲ ಪ್ರಾಣಬಿಟ್ಟಳು. ಆರು ತಿಂಗಳ ಹಿಂದೆ ಎರಡು ಮಕ್ಕಳು ಗತಿಸಿದಾಗ ಜನ್ಮಾಂತರ ಪಾಪಶೇಷವೆಂದು ಗುರುಗಳವರು ದರ್ಶನ ಕೊಟ್ಟು ಹೇಳಿದುದೆಲ್ಲಾ ಮನಸ್ಸಿನ ವಿಕಲ್ಪವೇ ಆಗಿ ಭೂತ ಪ್ರೇತ ಪಿಶಾಚಿಗಳ ಕೃತ್ಯವಾಗಿರ ಬಹುದೆಂಬ ಯೋಚನೆ ಒಂದು ಕಡೆ, ಮತ್ತೊಂದು ಕಡೆ ಈ ಹುಡುಗಿಯೂ ಮೃತಪಟ್ಟ ದುಃಖ; ಛಳಿರಾಮೇಶ್ವರಕ್ಕೆ ಋಣಾನುಬಂಧವು ಎಳೆದುಕೊಂಡು ಹೋದ ಮತ್ತು ಅಲ್ಲಿ ನಡೆದ ವಿಚಿತ್ರಗಳ ಯೋಚನೆಗಳೊಂದು ಕಡೆ ಬಾಧಿಸುತ್ತಿದ್ದುವು.

ಹೀಗೆ ದುಃಖಪಟ್ಟುಕೊಂಡು ಆ ರಾತ್ರಿ ಕಳೆಯುತ್ತಿದ್ದೆನು. ರಾತ್ರಿ ಮೂರು ಘಂಟೆಯ ಸಮಯದಲ್ಲಿ ಹಿಂದಿನಂತೆ ಗುರುಗಳವರು ಸ್ವಪ್ನದಲ್ಲಿ ಕಾಣಿಸಿಕೊಂಡು "ನೀನು ಇನ್ನೂ ಶಾಸ್ತ್ರಗಳ ಕಡೆ ಕಣ್ಣು ತೆರೆದಿಲ್ಲ. ಕಾರಣವಿಲ್ಲದೆ ಯಾವ ಕಾರ್ಯವೂ ನಡೆಯುವುದಿಲ್ಲ. ಜನ್ಮಾಂತರಗಳಲ್ಲಿ ಬಲಿಗಳನ್ನು ಕೊಟ್ಟು ಆರಾಧಿಸಿಕೊಂಡ ದುರ್ಗಿಯ ಅನುಗ್ರಹವೇ ಈ ಸ್ವರೂಪದಲ್ಲಿ ನಿನ್ನಲ್ಲಿ ಹುಟ್ಟಿ ನಡೆಸಬೇಕಾದ ಕಾರ್ಯಗಳನ್ನು ನಡೆಯಿ ಸಿತು. ಹಿಂದೆ ದುರ್ಗೀದೇವಾಲಯವನ್ನು ತೆಗೆಯಿಸಿ ಬೇರೆ ದೇವಾಲಯವನ್ನು ಕಟ್ಟಿಸಿ ಪಂಚಾಯತನಪ್ರತಿಷ್ಠೆ ಮಾಡಿಸಿದುದರ ಋಣಾನುಬಂಧದ ತತ್ವವೇ ನೀವುಗಳೆಲ್ಲಾ ಹೋಗಿ ಏಳು ದಿನವಿದ್ದು ಆರಾಧನೆಮಾಡಿದುದಾಗಿದೆ. ಶ್ರೀಶಂಕರನೇ ಶ್ರೀರಾಮನು. ಶ್ರೀರಾಮನೇ ಶ್ರೀಶಂಕರನು. ಶ್ರೀರಾಮೇಶ್ವರನನ್ನು ಪ್ರತಿಷ್ಠೆಮಾಡುವಾಗ ಆ ಲಿಂಗದಲ್ಲಿ

ನೆಲೆಗೊಂಡು ನಿನಗೆ ಅನುಗ್ರಹಮಾಡುವಂತೆ ಶ್ರೀಶಂಕರಗುರುವನ್ನು ಪ್ರಾರ್ಥನೆ ಮಾಡಿದೆನು. ಪ್ರತಿಷ್ಠೆಮಾಡಿದಮೇಲೆ ಒಂದು ಮಂಡಲ ನಿಯಮದಿಂದ ನಾನೇ ಆರಾಧಿಸಿದೆನು. ಶ್ರೀಶಂಕಸ್ವಾಮಿಯಲ್ಲಿಯೂ ತಾಯಿಯಲ್ಲಿಯೂ ಚೆನ್ನಾಗಿ ಭಕ್ತಿಯನ್ನಿಟ್ಟುಕೊಂಡಿರು. ಇನ್ನು ಮುಂದೆ ನಿನಗೆ ಶ್ರೇಯಸ್ಸಾಗುವುದು. ನಿನಗೆ ಸಹವಾಸವಾಗಿರುವ ಶಕ್ತ್ಯುಪಾಸಕರು ಜನ್ಮಾಂತರದಲ್ಲಿ ನನ್ನ ಮೇಲೆ ವಿರೋಧದಿಂದಿದ್ದರೂ ನಾನು ಅವರಿಗೆ ಕ್ರೂರದೇವತೋಪಾಸನೆಗಳನ್ನು ಮಾಡಬಾರದೆಂದೂ, ಇದು ಪರಿಣಾಮದಲ್ಲಿ ಶ್ರೇಯಸ್ಕರವಾಗುವುದಿಲ್ಲವೆಂದೂ, ಆತ್ಮಜ್ಞಾನವನ್ನು ಹೊಂದುವುದಕ್ಕೆ ಪ್ರಯತ್ನಿಸಬೇಕೆಂದೂ ಬಹಳ ವಿಧವಾಗಿ ಬುದ್ಧಿವಾದವನ್ನು ಹೇಳಿದ್ದೆನು." ಎಂದು ಹೇಳಿ ಅದೃಶ್ಯರಾದರು. ಈಗ ಮೃತಪಟ್ಟ ಹುಡುಗಿಯ ಬಿಂಬವೇ, ಶಕ್ತ್ಯುಪಾಸಕರಿಗೆ ಅಮ್ಮನವರಲ್ಲ ಕಾಣುತ್ತಿದ್ದುದು.

ಶಾಸ್ತ್ರವಿಚಾರವನ್ನು ತಿಳಿದುಕೊಂಡು ಮನಸ್ಸನ್ನು ಸ್ತಿಮಿತಕ್ಕೆ ತಂದುಕೊಂಡು ಇರಲಿಲ್ಲವಾದುದರಿಂದ ಮಕ್ಕಳು ಸತ್ತ ದುಃಖವು ನನ್ನನ್ನು ಬಾಧಿಸುತ್ತಲೇ ಇತ್ತು. ಮನಸ್ಸಿಗೆ ಜುಗುಪ್ಸೆಯಾಗಿ ಸಂಸಾರದೊಡನೆ ನಂಜನಗೂಡಿಗೆ ಹೋದೆನು. ಅಲ್ಲಿಗೆ ಹೋದಮೇಲೆ ಶ್ರೀಸಾಂಬಸದಾಶಿವಾನಂದತೀರ್ಥಸ್ವಾಮಿಗಳವರು "ವೃಥಾ ಕಾಲಹರಣ ಮಾಡಬೇಡಿ. ಸಂಸ್ಕೃತ ಪಾಠಶಾಲೆಯಲ್ಲಿ ವೇದಾಂತ ಕಾಲಕ್ಷೇಪ ನಡೆಯುವುದು. ಬನ್ನಿ." ಎಂದು ನನ್ನನ್ನು ಕರೆದುಕೊಂಡು ಹೋಗಿ ವೇದಾಂತದ ಕಡೆಗೆ ನನ್ನ ಮನಸ್ಸನ್ನು ತಿರುಗಿಸಿದರು. ಪಾಠಶಾಲೆಯಲ್ಲಿ ಶ್ರೀವಿದ್ಯಾರಣ್ಯಸ್ವಾಮಿಗಳವರ ವೇದಾಂತ (ಪಂಚದಶಿ ಮತ್ತು ಜೀವನ್ಮುಕ್ತಿ) ಗ್ರಂಥಗಳ ಪಾಠಗಳು ನಡೆಯುತ್ತಿದ್ದುವು. ಹಿಂದೆ ನಡೆದ ವಿಚಿತ್ರವ್ಯಾಪಾರಗಳಿಂದಲೂ, ಗುರುಗಳಾದ ಶ್ರೀವಿದ್ಯಾರಣ್ಯರವರ ಗ್ರಂಥಗಳ ಪಾಠವೇ ನಡೆಯುತ್ತಿದ್ದುದರಿಂದಲೂ, ನನಗೆ ವೇದಾಂತದಲ್ಲಿ ಅತ್ಯಂತ ವಿಶ್ವಾಸವುಂಟಾಯಿತು. ನಂಜನಗೂಡಿನಲ್ಲಿ ಆರು ತಿಂಗಳ ಕಾಲವಿದ್ದೆನು. ನನಗೆ ಸಂಸ್ಕೃತ ಭಾಷೆಯು ತಿಳಿಯದೆ ಇದ್ದರೂ ಪಾಠಶಾಲಾಧ್ಯಕ್ಷರಾದ ವೇ|| ಬ್ರಂ|| ಶ್ರೀ|| ನಾರಾಯಣ ಶಾಸ್ತ್ರಿಗಳವರು ತೊಂದರೆತೆಗೆದುಕೊಂಡು ಆತ್ಮವಿಚಾರವನ್ನು ಬೋಧಿಸಿದರು. ಶ್ರೀಸಾಂಬ ಸದಾಶಿವಾನಂದಗುರುಗಳವರು ಕೂಡ ನನಗೆ ಅನೇಕ ವಿಚಾರಗಳನ್ನು ಬೋಧಿಸಿದರು.

ನನ್ನ ಮೂವರು ಮಕ್ಕಳು ಮೃತಪಟ್ಟ ಕಾಲದಲ್ಲಿ ನಡೆದ ವಿಚಿತ್ರಗಳ ಯಥಾರ್ಥವನ್ನು ತಿಳಿದುಕೊಳ್ಳಬೇಕೆಂಬ ಕುತೂಹಲದಿಂದ ನನಗೆ ಬೇಕಾದವರನ್ನೆಲ್ಲಾ ಕೇಳುತ್ತಿದ್ದೆನು. ನಾನು ಮುಕ್ತರಾದ ಶ್ರೀನೃಸಿಂಹಭಾರತೀಸ್ವಾಮಿಗಳವರನ್ನು ನನ್ನ ಹದಿನಾರನೆಯ ವಯಸ್ಸಿನಲ್ಲಿ ನೋಡಿದ್ದೆನು. ಇವರು ಬರುವುದೆಂದರೇನು? ಎಲ್ಲಾ ಪ್ರಾಣಿಗಳೂ ಮೃತರಾಗುವರು. ನನ್ನ ಮಕ್ಕಳು ಮೃತಪಟ್ಟ ಕಾಲದಲ್ಲಿಯೇ ಹೀಗಾಗಬೇಕೆ? ಅಲ್ಲದೆ ಈ ವಿಚಿತ್ರವಾದ ಸಂಬಂಧವು ನನಗೊಬ್ಬನಿಗಲ್ಲದೆ ಇನ್ನೂ ಕೆಲವರಿಗೆ ಸಂಬಂಧ

ಪಟ್ಟು ಕಾರ್ಯತಃ ಒಂದಕ್ಕೊಂದು ತಾಳಿಕೆಯಾಗಿರುವುದು! ಇದರ ನಿಜಾಂಶವನ್ನು ತಿಳಿಯಲು ಅನೇಕರಲ್ಲಿ ವಿಚಾರಮಾಡಿದೆನು. ಕೆಲವರು ಜನ್ಮಾಂತರದ ಋಣಾನುಬಂಧವೆಂದರು. ಕೆಲವರು ಗ್ರಹಚೇಷ್ಟೆಯಿಂದ ಮಕ್ಕಳು ಮೃತರಾಗಿ ಬುದ್ಧಿಭ್ರಮಣೆಯಾಗಿತ್ತೆಂದು ಹೇಳಿದರು.

ಆದರೂ ನಡೆದ ಈ ವಿಚಿತ್ರದ ತತ್ವವೇನೆಂಬುದೇ ನನ್ನ ಮನಸ್ಸಿಗೆ ದೃಢಪಡದೆ ಇದ್ದುದರಿಂದ ಶೃಂಗೇರಿಗೆ ಹೋಗಿ ಈ ವಿಚಾರವನ್ನು ಜಗದ್ಗುರುಗಳಾದ ಶ್ರೀಚಂದ್ರಶೇಖರಭಾರತೀಸ್ವಾಮಿಗಳವರಲ್ಲಿ ಅರಿಕೆಮಾಡಿ ಯಥಾರ್ಥವನ್ನು ತಿಳಿದುಕೊಳ್ಳಬೇಕೆಂದೂ, ಗುರುಪೀಠವಾದ ಶೃಂಗೇರಿಗೆ ಹೋಗಿ ಬರಬೇಕೆಂದೂ ಮನಸ್ಸಾಯಿತು. ೧೯೩೦ ನೆಯ ಇಸವಿಯೆಂದರೆ, ರೌದ್ರಿ ಸಂವತ್ಸರದ ಮಾಘ ಬಹುಳದಲ್ಲಿ ಶಿವರಾತ್ರಿಯ ದಿನಕ್ಕೆ ಸಂಸಾರ ಸಮೇತನಾಗಿ ಶೃಂಗೇರಿಗೆ ಹೋಗಿ, ಹಿಂದೆ ನಡೆದುದೆಲ್ಲವನ್ನೂ ಶ್ರೀಚಂದ್ರಶೇಖರಭಾರತೀ ಸ್ವಾಮಿಗಳವರ ಚರಣಾರವಿಂದದಲ್ಲಿ ಅರಿಕೆಮಾಡಿದೆನು. ಶ್ರೀಯವರು "ಜನ್ಮಾಂತರದ ಋಣಾನುಬಂಧವಿಲ್ಲದೆ ಎಂದಿಗೂ ಹೀಗೆ ನಡೆಯುವುದಿಲ್ಲ ಇದನ್ನು ಖಂಡಿತವಾಗಿ ನಂಬಿ ದೃಢವಾದ ಭಕ್ತಿಯನ್ನಿಡಿ. ನಿಮಗೆ ಶ್ರೇಯಸ್ಸಾಗುವುದು." ಎಂದು ಅಪ್ಪಣೆಮಾಡಿದರು. ನಾನು ಶೃಂಗೇರಿಗೆ ಹೋಗಿದ್ದಾಗ ಶ್ರೀಸಾಂಬಸದಾಶಿವಾನಂದಗುರುಗಳವರೂ ಅಲ್ಲಿಯೇ ಇದ್ದರು.

ಶೃಂಗೇರಿಯಿಂದ ನಾನು ಹಿಂದಿರುಗಿ ಬಂದ ಒಂದು ವರ್ಷದ ಮೇಲೆ ಶ್ರೀಸಾಂಬಸದಾಶಿವಾನಂದ ಗುರುಗಳವರು ಶೃಂಗೇರಿಯಿಂದ ಬೆಂಗಳೂರಿಗೆ ಬಂದರು. ಆಗ ನನಗೆ ಯೋಗಾನುಷ್ಠಾನ ಮಾಡಬೇಕೆಂಬ ಕುತೂಹಲವುಂಟಾಗಿ ಶ್ರೀಗುರುಗಳವರನ್ನು ಕೇಳಿಕೊಳ್ಳಲು ಅವರು ಅನುಗ್ರಹಮಾಡಿ ಕೆಲವು ಆಸನಾಭ್ಯಾಸಗಳನ್ನೂ, ರೇಚಕ, ಪೂರಕ ಕುಂಭಕ ಪ್ರಾಣಾಯಾಮವನ್ನೂ ಉಪದೇಶಮಾಡಿದರು. ಎರಡುವರ್ಷಕಾಲ ಕಳೆಯಿತು. ಕುಂಭಕಪ್ರಾಣಾಯಾಮವನ್ನು ಮಾಡುತ್ತಿದ್ದ ನನ್ನನ್ನು ನೋಡಿ ಶ್ರೀಗುರುಗಳವರೇ ಸುಂದರಕಾಂಡದ ತತ್ವವಾದ ಶಕ್ತಿಚಲನಪ್ರಾಣಾಯಾಮದ ಅನುಷ್ಠಾನಕ್ರಮವನ್ನು ಉಪದೇಶಮಾಡಿ ಅನುಗ್ರಹಮಾಡಿದರು.

ಮಲ್ಲೇಶ್ವರದಲ್ಲಿ ನಾನೂ ಕಾಂಪೌಂಡರ್ ಮ|| ಸುಬ್ಬರಾಯರೆಂಬುವರೂ ೧೯೨೨ನೆಯ ಇಸವಿಯಿಂದ ಶ್ರೀರಾಮಭಜನೆಯ ಸಭೆಯೊಂದನ್ನು ಏರ್ಪಡಿಸಿ ಶ್ರೀರಾಮೋತ್ಸವಾದಿಗಳನ್ನು ವಿಜೃಂಭಣೆಯಿಂದ ನಡೆಯಿಸುತ್ತಿದ್ದೆವು. ಶ್ರೀರಾಮೋತ್ಸವದಲ್ಲಿ ಎರಡು ಮೂರು ಸಾವಿರಕ್ಕಿಂತಲೂ ಅಧಿಕವಾಗಿ ಜನರು ಸೇರುತ್ತಿದ್ದರು. ಶ್ರೀರಾಮೋತ್ಸವದ ಸೇವೆಗೆ ಬರಬೇಕೆಂದು ಮೈಸೂರು ಅರಮನೆ ವಿದ್ವಾಂಸರು ಗಾನವಿಶಾರದ ಮ|| ಬಿಡಾರದ ಕೃಷ್ಣಪ್ಪನವರನ್ನೂ, ವೈಣಿಕ ಶಿಖಾಮಣಿ ಮ|| ವೀಣೆ ಶೇಷಣ್ಣನವರನ್ನೂ ನಾನು ಕೇಳಿ

ಕೊಳ್ಳಲು ಅವರುಗಳಿಲ್ಲರೂ ಯಾವ ಅರ್ಥಲಾಭವೂ ಇಲ್ಲದೆ ಬಂದು ದೇವರ ಸೇವೆಮಾಡಿ ಹೋಗುತ್ತಿದ್ದರು.

ಏತನ್ಮಧ್ಯದಲ್ಲಿ ಸಂಧ್ಯಾವಂದನೆಯ ಒಳತತ್ವವನ್ನು ತಿಳಿಯಬೇಕೆಂಬ ಮನಸ್ಸಾಯಿತು. ನಂಜನಗೂಡಿಗೆ ಹೋಗಿ ವೇ|| ಬ್ರಂ|| ಶ್ರೀ|| ನಾರಾಯಣಶಾಸ್ತ್ರಿಗಳಲ್ಲಿ ಸಂಧ್ಯಾವಂದನೆಯ ಮಂತ್ರಗಳಿಗೆಲ್ಲಾ ಭಾಷ್ಯದಂತೆ ಪದಶಃ ಅರ್ಥವನ್ನು ಬರೆದುಕೊಂಡು ಬಂದು ಸಂಧ್ಯಾವಂದನೆಯ ತತ್ವವನ್ನು ತಕ್ಕಮಟ್ಟಿಗೆ ಬರೆದೆನು. ಹೀಗೆ ಬರೆದ ಸಂಧ್ಯಾವಂದನೆಯ ಒಳತತ್ವವನ್ನು ಜಗದ್ಗುರುಗಳಾದ ಶ್ರೀಚಂದ್ರಶೇಖರಭಾರತೀಸ್ವಾಮಿಗಳವರಲ್ಲಿ ಶುದ್ಧಪಾದದ್ವನ್ನಾಗಿ ಮಾಡಿಕೊಳ್ಳಬೇಕೆಂಬ ಮತ್ತು ಗುರುದರ್ಶನವನ್ನು ಮಾಡಬೇಕೆಂಬ ಕುತೂಹಲವಂಕುರಿಸಿತು. ಶ್ರೀಜಗದ್ಗುರುಗಳವರು ರಾಮೇಶ್ವರಯಾತ್ರೆಗೆ ಹೊರಟು ಈರೋಡಿನ ಬಳಿ ಗೋಬಿಚೆಟ್ಟಿಪಾಳ್ಯದಲ್ಲಿ ಚಾತುರ್ಮಾಸ್ಯದಲ್ಲಿ ಇರುವರೆಂದು ತಿಳಿದು, ೧೯೨೪ನೆಯ ಇಸವಿಯೆಂದರೆ ರಕ್ತಾಕ್ಷಿ ಸಂವತ್ಸರದ ಆಷಾಢ ಮಾಸದಲ್ಲಿ ಸಂಸಾರಸಹಿತ ಗೋಬಿಚೆಟ್ಟಿಪಾಳ್ಯಕ್ಕೆ ಹೋದೆನು. ಶ್ರೀಜಗದ್ಗುರುಗಳವರು ಅನುಗ್ರಹಮಾಡಿ ಸಂಧ್ಯಾವಂದನೆಯ ತತ್ವವನ್ನು ಕೇಳಿ ಅತ್ಯಂತ ಸಂತೋಷಪಟ್ಟರು.

ಗೋಬಿಚೆಟ್ಟಿಪಾಳ್ಯದಿಂದ ಬಂದನಂತರದಲ್ಲಿಯೂ ಶ್ರೀರಾಮಭಜನೆ, ಸೇವೆಗಳನ್ನು ಮಾಡಿ ಹರಿಕಥೆ ಮುಂತಾದುವುಗಳನ್ನೂ ನಡೆಯಿಸಿಕೊಂಡಿದ್ದೆನು. ಹೀಗೆ ಶ್ರೀರಾಮಚಂದ್ರನ ಸೇವೆಮಾಡುತ್ತಿರುವಲ್ಲಿ ಮನಸ್ಸಿಗೆ ಒಂದು ವಿಚಾರವಂಕುರಿಸಿತು. ಶ್ರೀರಾಮಚಂದ್ರನೇ ಪರಮಾತ್ಮನೆಂದು ಪ್ರತಿಪಾದನೆ ಇರುವುದು. ನಮ್ಮಲ್ಲಿರುವ ಪರಮಾತ್ಮನನ್ನು ನಾವು ಸಾಕ್ಷಾತ್ಕಾರಮಾಡಿಕೊಳ್ಳಬೇಕೆಂದು ವೇದಾಂತವು ತಿಳಿಸುತ್ತಿದೆ. ಅಲ್ಲದೆ ಹನುಮಂತನೆಂದರೆ ವಾಯು. ನಮ್ಮಲ್ಲಿಯೂ ಶ್ವಾಸೋಛ್ವಾಸದ ವಾಯುವು ಪ್ರತ್ಯಕ್ಷವಾಗಿದೆ. ಇದರಲ್ಲಿ ಏನೋ ಒಳತತ್ವವಿರಬೇಕೆಂದು ನನ್ನ ಮನಸ್ಸಿನಲ್ಲಿ ಅಂಕುರಿಸಿತು. ಇದನ್ನು ತಿಳಿದುಕೊಳ್ಳಬೇಕೆಂಬ ಆಶೆಯು ಬಲವಾಗುತ್ತ ಬಂದಿತು. ಹೀಗಿರಲು ೧೯೨೭ನೆಯ ಇಸವಿಯಲ್ಲಿ ಇನ್ನೊಂದು ವಿಚಿತ್ರವು ನಡೆಯಿತು.

೧೯೨೭ನೆಯ ಇಸವಿಯೆಂದರೆ ಪ್ರಭವ ಸಂವತ್ಸರ ಚೈತ್ರ ಶುದ್ಧ ತದಿಗೆ ದಿನ ರಾತ್ರಿ ಒಂದು ಗಂಟೆಯ ಸಮಯದಲ್ಲಿ ನನಗೆ ಏನೋ ಒಂದು ವಿಧವಾಗಿ ನಿದ್ರೆಯಿಂದ ಎಚ್ಚರವಾದಂತಾಯಿತು. ಇದನ್ನು ಎಚ್ಚರವೆಂದಾಗಲಿ, ಕನಸೆಂದಾಗಲಿ, ನಿದ್ರೆಯೆಂದಾಗಲಿ ಹೇಳಲಾರೆನು. ಹೀಗಾದ ಕೂಡಲೇ ತೇಜಸ್ಸೇ ದೇಹವಾಗಿರುವ ಹೆಣ್ಣುಮಗುವು ನನ್ನ ಎದುರಿಗೆ ನಿಂತುಕೊಂಡು "ರಾಮಾಯಣದ ತತ್ವಾರ್ಥವು ತಿಳಿಯಿತೆ?" ಎಂದು ನಗುತ್ತಾ ನನ್ನನ್ನು ಪ್ರಶ್ನೆಮಾಡಿದಳು. ತೇಜೋರೂಪಿನ ಮಗುವನ್ನು ನೋಡಿದ ಕೂಡಲೆ ನನಗೆ ಏನೋ ಭಕ್ತಿಯುಕ್ತವಾದ ಸಂತೋಷವುಂಟಾಗಿ "ತಾಯೇ, ಯಾರಮ್ಮಾ

ನೀನು?" ಎಂದು ಕೇಳಿದೆನು. ಅದಕ್ಕೆ ಆ ಬಾಲೆಯು "ನಿನಗೆ ಅನುಗ್ರಹಮಾಡಿದ ಗುರುವಿನ ಕಟಾಕ್ಷವೇ ನಾನೆಂದು ತಿಳಿ. ನೀನು ಜನ್ಮಾಂತರದಲ್ಲಿ ಛಳಿರಾಮೇಶ್ವರದಲ್ಲಿ ಪಾಳೆಯಗಾರನಾಗಿದ್ದಾಗ ನಿನಗೆ ಅನುಗ್ರಹಮಾಡಲು ಶಿವ ವಿಷ್ಣುಗಳ ಏಕತತ್ವವಾದ ಶ್ರೀರಾಮೇಶ್ವರನೆಂಬ ನಾಮದಿಂದ ವಿದ್ಯಾರಣ್ಯಸ್ವಾಮಿಯು ಈಶ್ವರಲಿಂಗ ಪ್ರತಿಷ್ಠೆಮಾಡಿದನು. ಬಾಲರಾಜರಾಜೇಶ್ವರೀ ಮಂತ್ರದಿಂದ ಶುದ್ಧಯೋಗಾಸನಾಸೀನಳಾಗಿ ನನ್ನ ವಿಗ್ರಹವನ್ನು ಮಾಡಿಸಿ ಪ್ರತಿಷ್ಠೆಮಾಡಿ, ನಿನ್ನಲ್ಲಿ ಅನುಗ್ರಹಮಾಡಬೇಕೆಂದು ಪ್ರಾರ್ಥಿಸಿದನು. ಅವನ ಪ್ರಾರ್ಥನೆಯನ್ನು ಸಫಲಗೊಳಿಸಲು, ನಿನಗೆ ಪರಿಪಾಕಕಾಲ ಬಂದುದರಿಂದ ಈ ಜನ್ಮದಲ್ಲಿ ದರ್ಶನಕೊಟ್ಟೆನು. ಶುದ್ಧಯೋಗಾಸನದಲ್ಲಿ ನನ್ನನ್ನು ಪ್ರತಿಷ್ಠೆ ಮಾಡುವ ಶಕ್ತಿಯುಳ್ಳವರು ಅತ್ಯಂತ ವಿರಳ. ನಿನ್ನಲ್ಲಿ ಶ್ರೀರಾಮಚರಿತ್ರೆಯ ತತ್ವವನ್ನು ತಿಳಿದುಕೊಳ್ಳಬೇಕೆಂಬ ಕುತೂಹಲವಂಕುರಿಸಲು ನಾನೇ ಕಾರಣ. ಈ ಜನ್ಮದಲ್ಲಿ ನಿನಗೆ ವಿದ್ಯಾಪ್ರೌಢಿಮೆಗೆ ಅವಕಾಶವಿಲ್ಲದಿದ್ದರೂ ಚಿಂತೆಯಿಲ್ಲ. ಅನುಷ್ಠಾನದ ಬಲವಿರುವುದರಿಂದ ಶ್ರೀರಾಮೇಶ್ವರನ ತತ್ವವೇನೆಂಬುದನ್ನು ಬರೆಯಲುಪಕ್ರಮಿಸಿದರೆ ಸಕಲವೂ ನಿನ್ನ ಮನಸ್ಸಿಗೆ ಹೊಳೆಯುವುದು." ಎಂದು ಹೇಳಿದಳು.

ತಾಯಿಯು ಹೀಗೆ ಹೇಳುತ್ತಿರುವಾಗ ನನಗೆ ಇನ್ನೂ ಭವಬಂಧಗಳೆಷ್ಟು ವರ್ಷವೋ ಎಂಬ ವ್ಯಸನವಾಯಿತು. ತಾಯಿಯು ಇದನ್ನು ನೋಡಿ "ನೀನು ವ್ಯಸನಪಡಬೇಡ. ಹೀಚೇ ಹಣ್ಣಲ್ಲ. ಕಾಲ ಪರಿಪಕ್ವಾವಸ್ಥೆಯಿಂದಲೇ ಹೀಚು ಹಣ್ಣಾಗಬೇಕು. ನಾನು ಮಾಡಿದ ನಿಯಮವನ್ನು ನಾನೇ ಬದಲಾಯಿಸಲಾಗುವುದಿಲ್ಲ. ಕಾಲಚಕ್ರವನ್ನು ಅನುಸರಿಸಿಕೊಂಡೇ ಸರ್ವವೂ ನಡೆಯಬೇಕಾಗಿದೆ. ಆರುನೂರ ಐವತ್ತು ವರ್ಷಗಳು ನಡೆದುವು. ವಿದ್ಯಾರಣ್ಯರ ಅವತಾರವೇ ಶ್ರೀನೃಸಿಂಹಭಾರತೀಸ್ವಾಮಿಯೆಂದು ತಿಳಿ. ವಿದ್ಯಾರಣ್ಯಸ್ವಾಮಿಯು ಪರಮಗುರುವಾದ ಶಂಕರಸ್ವಾಮಿಯಲ್ಲಿಟ್ಟಿದ್ದ ಪ್ರೀತಿಯನ್ನು ಅಷ್ಟಿಷ್ಟೆಂದು ಹೇಳಲಾಗುವುದಿಲ್ಲ. ವಿದ್ಯಾರಣ್ಯಸ್ವಾಮಿಯು ಶಂಕರವಿಜಯವನ್ನು ಬರೆದನಂತರ ಶಂಕರಸ್ವಾಮಿಯು ಜನನವಾದ ಪ್ರದೇಶವನ್ನು ಕಂಡುಹಿಡಿದು ಆ ಸ್ಥಳದಲ್ಲಿ ಶಂಕರಮೂರ್ತಿಯನ್ನು ಪ್ರತಿಷ್ಠೆಮಾಡಬೇಕೆಂಬ ಇಚ್ಛೆಯೂ, ಶೃಂಗಗಿರಿಯಲ್ಲಿ ಶಾರದಾಂಬಾ ವಿಗ್ರಹವನ್ನು ಪ್ರತಿಷ್ಠಿಸಿದುದಕ್ಕೆ ದೇವಸ್ಥಾನವನ್ನು ಕಟ್ಟಿಸಬೇಕೆಂಬ ಇಚ್ಛೆಯೂ ಆತನಿಗೆ ಅತ್ಯಂತ ಪ್ರಬಲವಾಗಿತ್ತು. ನೃಸಿಂಹಭಾರತೀಸ್ವಾಮಿಯಾಗಿ ಅವತರಿಸಿ ಈ ಇಚ್ಛಾಪೂರ್ತಿ ಮಾಡಿಕೊಂಡನು. ಕಾಲಚಕ್ರದಲ್ಲಿ ಎಷ್ಟು ದಿನಗಳು ಕಳೆದುವು ನೋಡು! ಕಾಲಚಕ್ರದಲ್ಲಿ ಸಹಕಾರಿ ಕಾರಣಗಳು ಒದಗದೆ ಕಾರ್ಯಗಳು ನಡೆಯಲಾರವು. ನಿನ್ನ ಪಾಳೆಯಪಟ್ಟು ಕರ್ಣಾಟಕ ಅಥವಾ ವಿಜಯನಗರರಾಜ್ಯಕ್ಕೆ ಸೇರಿತ್ತು. ಕರ್ಣಾಟಕ ರಾಜ್ಯದಲ್ಲಿ ಧೊರೆಗಳಾಗಿದ್ದ ಹುಕ್ಕ ಬುಕ್ಕರೇ ಮಹಿಸೂರಿನ ಈಗಿನ ಧೊರೆಗಳಾಗಿರುವ ಅಣ್ಣತಮ್ಮಂದಿರೆಂದು ತಿಳಿ.

"ಕಾಲಚಕ್ರವನ್ನನುಸರಿಸಿ ಕಾರ್ಯಗಳು ಫಲಿಸಬೇಕಲ್ಲದೆ ಕಾಲಚಕ್ರವನ್ನು ಮೀರಿ ಹೋಗಲು ಯಾರಿಗೂ ಸಾಧ್ಯವಿಲ್ಲ. ವಿದ್ಯಾರಣ್ಯಸ್ವಾಮಿಯು ಅನುಗ್ರಹಮಾಡಿದ ಈಚೆಗೆ ನಿನಗೆ ಇಪ್ಪತ್ತಾರು ಜನ್ಮಗಳು ಕಳೆದುಹೋದುವು. ನೀನು ನರಬಲಿಗಳನ್ನು ಕೊಟ್ಟ ಪಾಪ ಕಾರ್ಯಕ್ಕಾಗಿ ಅನೇಕಾವರ್ತಿ ಕೋಳಿ, ಕುರಿ, ಮುಂತಾದ ಕೀಳು ಜನ್ಮಗಳಲ್ಲಿದ್ದೆ. ಕೆಲವು ಉತ್ತಮ ಜನ್ಮಗಳು ಬಂದು ನೀನು ಸಾರ್ಥಕತೆಯನ್ನು ಹೊಂದುವ ವಿಚಾರದಲ್ಲಿ ಪ್ರಯತ್ನ ಪಟ್ಟಿರುತ್ತೀಯೆ. ಇನ್ನು ನೀನು ಯೋಚನೆ ಮಾಡಬೇಡ." ಎಂದು ಹೇಳುತ್ತಿರುವಲ್ಲಿ ನನಗೆ ಅನುಗ್ರಹಮಾಡಿದ ಸಾಕ್ಷಾತ್ ಗುರುದರ್ಶನವನ್ನು ಪುನಃ ಮಾಡಬೇಕೆಂಬ ಅಭಿಲಾಷೆಯುಂಟಾಯಿತು. ಇಷ್ಟರಲ್ಲಿಯೇ ಯಾವ ಗುರುಗಳು ನನಗೆ ದರ್ಶನಕೊಟ್ಟಿದ್ದರೋ ಅವರೇ ತಾಯಿಯ ಪಾದಾರವಿಂದದಲ್ಲಿ ಕುಳಿತಿರುವುದನ್ನು ನೋಡಿದೆನು.

ಗರುಗಳವರು "ತಾಯಿಯು ನನ್ನ ಪ್ರಾರ್ಥನೆಯನ್ನು ನಡೆಸಿಕೊಟ್ಟಳು. ತಾಯಿಯೇ ಎಲ್ಲವನ್ನೂ ವಹಿಸಿರುವಾಗ ನಾನು ಹೇಳಬೇಕಾದುದೇನು ? ಶ್ರೀರಾಮ ಶಂಕರರಿಗೆ ಅಭೇದವಿರುವುದರಿಂದಲೇ ನಾನು ಶ್ರೀರಾಮೇಶ್ವರನೆಂಬ ಹೆಸರಿನಿಂದ ಲಿಂಗ ಪ್ರತಿಷ್ಠೆ ಮಾಡಿದೆನು. ತಾಯಿಯಲ್ಲಿಯೂ ಶ್ರೀರಾಮೇಶ್ವರನಲ್ಲಿಯೂ ಅತಿಶಯವಾದ ಭಕ್ತಿಯನ್ನುಬೆಳೆಸು. ತಾಯಿಯ ಅಪ್ಪಣೆಯಂತೆ ಶ್ರೀರಾಮಚರಿತ್ರೆಯ ತತ್ವಾರ್ಥವನ್ನು ಬರೆ. ಮುಂದಕ್ಕೆ ಶ್ರೇಯಸ್ಸಾಗವುದು" ಎಂದು ಅಪ್ಪಣೆಯಿತ್ತರು.

ಇಷ್ಟರಲ್ಲಿ ಎಚ್ಚರವಾಯಿತು. ನಡೆದ ವಿಚಾರಗಳನ್ನು ಸ್ಮರಿಸಿಕೊಂಡು ಮನಸ್ಸಿಗೆ ಒಂದು ವಿಧವಾದ ಸಂತೋಷವುಂಟಾಯಿತು. ದುಃಖವೂ ಆಶ್ಚರ್ಯವೂ ಆದುವು. ಎದ್ದು ಕೈಕಾಲುಗಳನ್ನು ತೊಳೆದುಕೊಂಡು ಶ್ರೀರಾಜರಾಜೇಶ್ವರಿಯ ಪಠಕ್ಕೂ, ಶ್ರೀಶಂಕರಭಗವತ್ಪಾದಾಚಾರ್ಯರ ಪಠಕ್ಕೂ ನಮಸ್ಕಾರಮಾಡಿ ಆ ಪಠದ ಮೇಲೆ ಶಿರಸ್ಸನ್ನಿಟ್ಟು ದುಃಖದಿಂದ ರೋದಿಸಿದೆನು. ಆಶ್ಚರ್ಯವೂ ದುಃಖವೂ ಸಂತೋಷವೂ ಏಕಕಾಲದಲ್ಲಿ ಬಾಧಿಸುತ್ತಿದ್ದುದರಿಂದ ಆ ರಾತ್ರಿ ನಿದ್ರೆಯೇ ಬರಲಿಲ್ಲ.

ಇದಾದ ಒಂದು ತಿಂಗಳಿಗೆ ಕಾಲಟಿಗೆ ಹೋಗಬೇಕೆಂದು ಮನಸ್ಸಾಯಿತು. ಶ್ರೀಜಗದ್ಗುರುಗಳವರು ಕಾಲಟಿಗೆ ಬಂದಿರುವ ವರ್ತಮಾನವೂ ತಿಳಿಯಿತು. ನಾನೂ ನನ್ನ ಗುರುಗಳಾದ ಶ್ರೀಸಾಂಬಸದಾಶಿವಾನಂದಸ್ವಾಮಿಗಳೂ ಅಲ್ಲಿಗೆ ಹೋದೆವು. ನಡೆವ ಸಮಾಚಾರವನ್ನು ಜಗದ್ಗುರು ಶ್ರೀಚಂದ್ರಶೇಖರಭಾರತೀಸ್ವಾಮಿಗಳವರ ಚರಣಾರವಿಂದದಲ್ಲಿ ಅರಿಕೆಮಾಡಿಕೊಳ್ಳಬೇಕೆಂದು ನನಗ ಮನಸ್ಸಿತ್ತು. ಆದರೆ ಶ್ರೀಸಾಂಬಸದಾಶಿವಾನಂದ ಸ್ವಾಮಿಗಳು ಶ್ರೀರಾಮಚರಿತ್ರೆಯ ತತ್ವಾರ್ಥವನ್ನು ಬರೆಯುವ ಕಾರ್ಯವು ನಡೆಯಲಿ. ಅನಂತರ ಹೇಳುವುದು ಸೂಕ್ತವೆಂದು ಹೇಳಿದರು. ಅದರಂತೆ ಶ್ರೀಜಗದ್ಗುರುಗಳವರಿಗೆ ಆಗ

ತಿಳಿಸಲಿಲ್ಲ. ಕಾಲಟಿಯಿಂದ ಬಂದನಂತರ ಶ್ರೀರಾಮಚರಿತ್ರೆಯ ತತ್ವಾರ್ಥವನ್ನು ಬರೆಯಲು ಪ್ರಾರಂಭಿಸಿ, ಗುರುಕಟಾಕ್ಷದಿಂದಲೂ, ಬಾಲರಾಜರಾಜೇಶ್ವರೀಸಮೇತನಾದ ಶ್ರೀರಾಮೇಶ್ವರನ ಅನುಗ್ರಹದಿಂದಲೂ ಬರೆದು ಪೂರ್ತಿಮಾಡಿದೆನು.

ಹೀಗೆ ಪೂರ್ತಿಯಾದ ಈ ರಾಮಾಯಣದ ಅಂತರಾರ್ಥವನ್ನು ನನ್ನ ಗುರುವರ್ಯರಾದ ಶ್ರೀಸಾಂಬಸದಾಶಿವಾನಂದತೀರ್ಥಸ್ವಾಮಿಗಳವರಿಗೂ, ವೇ|| ಬ್ರಂ|| ಶ್ರೀ|| ನಾರಾಯಣ ಶಾಸ್ತ್ರಿಗಳವರಿಗೂ, ನನ್ನ ಷಡ್ಡಕಂದಿರಾದ ತೀ|| ರಾಮಸ್ವಾಮಯ್ಯನವರಿಗೂ ತೋರಿಸಿದೆನು. ಇದನ್ನು ಜಗದ್ಗುರುಗಳಾದ ಶ್ರೀಚಂದ್ರಶೇಖರಭಾರತೀ ಸ್ವಾಮಿಗಳವರಿಗೂ ತೋರಿಸಬೇಕೆಂಬ ಅಪೇಕ್ಷೆಯು ಹುಟ್ಟಿ ಪ್ರಮೋದೂತ ಸಂವತ್ಸರದ ಜ್ಯೇಷ್ಠ ಶುದ್ಧದಲ್ಲಿ ಶೃಂಗಗಿರಿಗೆ ಹೋಗಿ ಶ್ರೀ ಶ್ರೀಯವರಲ್ಲಿ ಈ ವಿಚಾರವನ್ನು ಅರಿಕೆ ಮಾಡಿಕೊಂಡೆನು.

ಗ್ರಂಥ ಪರಿಷ್ಕರಣ.

ಬೇಸಿಗೆಯ ಕಾಲವಾದುದರಿಂದ ವಿರಾಮಹೊಂದಿದ ಅನೇಕ ಶಿಷ್ಯವರ್ಗದವರು ಬಹು ದೂರದೇಶಗಳಿಂದ ಶ್ರೀಯವರ ದರ್ಶನಾಕಾಂಕ್ಷಿಗಳಾಗಿ ಬಂದಿದ್ದುದರಿಂದ ಶ್ರೀಯವರಿಗೆ ಇದನ್ನು ಅವಲೋಕಿಸಲು ವ್ಯವಧಾನವಿಲ್ಲದ ಪ್ರಯುಕ್ತ, ಗುರುಸಂಸ್ಥಾನದ ಪಾಠಶಾಲಾಧ್ಯಕ್ಷರಾದ ವೇ|| ಬ್ರಂ|| ಶ್ರೀ|| ಸುಂದರಶಾಸ್ತ್ರಿಗಳವರಿಗೆ ಪ್ರಥಮದಲ್ಲಿ ಈ ಗ್ರಂಥವನ್ನು ಅವಲೋಕಿಸುವಂತೆ ಅಪ್ಪಣೆಮಾಡಿದರು. ಇದರಂತೆ ವೇ|| ಬ್ರಂ|| ಶ್ರೀ|| ಸುಂದರಶಾಸ್ತ್ರಿಗಳೂ, ನಿವೃತ್ತಪಾಠಶಾಲಾಧ್ಯಕ್ಷರಾದ ವೇ|| ಬ್ರಂ|| ಶ್ರೀ|| ನರಸಿಂಹಮೂರ್ತಿಶಾಸ್ತ್ರಿಗಳವರೂ ಇದನ್ನು ಮೊದಲಿನಿಂದ ಕೊನೆಯವರೆಗೂ ನನ್ನಿಂದ ಓದಿಸಿ ಕೇಳಿದುದಲ್ಲದೆ, ಆಯಾಯ ದಿವಸ ಕೇಳಿದ ವಿಚಾರಗಳನ್ನು ಶ್ರೀ ಶ್ರೀಯವರಲ್ಲಿ ಅರಿಕೆಮಾಡುತ್ತಲಿದ್ದರು. ಇವರುಗಳು ಅವಲೋಕಿಸಿ ಮುಗಿಸಿದನಂತರ ಶ್ರೀಜಗದ್ಗುರುಗಳವರು ಕೂಡ ಶ್ರೀರಾಮತತ್ವವನ್ನು ಬರೆಯಲುಂಟಾದ ಕಾರಣ ಮುಂತಾದ ವಿಚಾರಗಳನ್ನೊಳಗೊಂಡ ಉಪೋದ್ಘಾತವನ್ನೂ ವಿಷಯಾನುಕ್ರಮಣಿಕೆಯನ್ನೂ ಅಲ್ಲಲ್ಲಿ ಕೆಲವು ಪ್ರಕರಣಗಳನ್ನೂ ನನ್ನಿಂದ ಓದಿಸಿ ಲಾಲಿಸಿ ಸಂತೋಷಪಟ್ಟು ಈ ಗ್ರಂಥವು ಆಸ್ತಿಕರೆಲ್ಲರಿಗೂ ಉಪಯುಕ್ತವಾಗಿರುವಂತೆ ಶ್ರೀಶಾರದಾ ಚಂದ್ರಮೌಳೀಶ್ವರರ ಪ್ರಸಾದವನ್ನು ಅನುಗ್ರಹಿಸಿ ಇದನ್ನು ಮುದ್ರಿಸಿ ಪ್ರಚಾರಮಾಡಲು ಅಪ್ಪಣೆಯನ್ನಿತ್ತರು.

ಶೃಂಗಗಿರಿಯಿಂದ ಬಂದನಂತರ ಈ ಗ್ರಂಥವನ್ನು ಮಹಿಸೂರು ಆಸ್ಥಾನ ಮಹಾ ವಿದ್ವಾನ್, ವಿದ್ಯಾವಾಚಸ್ಪತಿ, ಮಹಾಮಹೋಪಾಧ್ಯಾಯ, ವಿದ್ಯಾನಿಧಿ ವೇ|| ಬ್ರಂ|| ಶ್ರೀ|| ವಿರೂಪಾಕ್ಷಶಾಸ್ತ್ರಿಗಳವರಿಗೂ ತೋರಿಸಬೇಕೆಂದು ಮಹಿಸೂರಿಗೆ ಹೋಗಿ ಕೆಲವುದಿನಗಳಿದ್ದು ಓದಿ ಹೇಳಿದೆನು. ವೇ|| ಬ್ರಂ|| ಶ್ರೀ|| ವಿರೂಪಾಕ್ಷಶಾಸ್ತ್ರಿಗಳವರು ಲಾಲಿಸಿ ಸಂತೋಷಪಟ್ಟು ಈ ಗ್ರಂಥವು ಅತ್ಯಂತ ಪ್ರಶಸ್ತವಾಗಿರುವುದರಿಂದ ಆಸ್ತಿಕರೆಲ್ಲರಿಗೂ ಉಪಯುಕ್ತವಾಗಿರು

ವಂತೆ ಮುದ್ರಿಸಿ ಪ್ರಕಟಿಸಬಹುದೆಂದು ಅಪ್ಪಣೆಯುನ್ನಿತ್ತು ಆಶೀರ್ವದಿಸಿದರು. ಶ್ರೀಮ ಮಹಾರಾಜಾ ಶ್ರೀಕೃಷ್ಣರಾಜೇಂದ್ರವಡೆಯರವರ ಸಂಸ್ಕೃತದ ಉಪಾಧ್ಯಾಯರಾದ ವೇ|| ಬ್ರಂ|| ಶ್ರೀ|| ಕಾನಕಾನಹಳ್ಳಿ ನಾರಾಯಣಶಾಸ್ತ್ರಿಗಳವರೂ, ವೇ|| ಬ್ರಂ|| ಶ್ರೀ|| ವಿರೂ ಪಾಕ್ಷಶಾಸ್ತ್ರಿಗಳವರೊಡನೆ ಕೇಳಿ ಸಂತೋಷಪಟ್ಟರು.

ಈ ಗ್ರಂಥವನ್ನು ಸೆಂಟ್ರಲ್ ಕಾಲೇಜ್ ಪ್ರೊಫೆಸರ್, ಮ|| ರಾ|| ಬಿ. ಎಮ್. ಶ್ರೀಕಂಠಯ್ಯನವರೂ, ಸೆನ್ಸಸ್ ಸೂಪರಿಂಟೆಂಡೆಂಟ್ ಮ|| ರಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರವರೂ ಅವಲೋಕಿಸಿ ಸಂತೋಷಪಟ್ಟಿರುವರು. ಮ|| ರಾ|| ದೇವುಡು ನರಸಿಂಹಶಾಸ್ತ್ರಿಗಳವರೂ, ಮ|| ರಾ|| ಕಾನಕಾನಹಳ್ಳಿ ಎಸ್. ನರಸಿಂಹಶಾಸ್ತ್ರಿಗಳವರೂ ಈ ಗ್ರಂಥವನ್ನು ಪರಿಶೀಲಿಸಿರುವರು.

ಶ್ರೀಮದ್ರಾಮಾಯಣವು ಜ್ಞಾನಮಾರ್ಗವನ್ನೊಳಗೊಂಡಿರುವುದೆಂಬ ತತ್ವಕ್ಕೆ ಶ್ರೀಮ ದ್ವಾಲ್ಮೀಕಿಮುನಿಗಳ ಅಭಿಪ್ರಾಯವಿಲ್ಲವೆಂದು ತಿಳಿದುಕೊಳ್ಳಬಾರದು. ಶ್ರೀಮದ್ವಾಲ್ಮೀಕಿ ಗ್ರಂಥಕರ್ತನ ಎರಡು ನುಡಿ ಮುನಿಗಳೇ ಬಾಲಕಾಂಡದ ೪ನೇ ಸರ್ಗದಲ್ಲಿ "ವೇದೋಪ ಬೃಂಹಣಾರ್ಥಾಯ ತಾವಗ್ರಾಹಯತಃ ಪ್ರಭುಃ" ಅಂದರೆ ಶ್ರುತಿತಾತ್ಪರ್ಯವನ್ನು ಪ್ರಚಾರ ರೂಪ ಪ್ರಯೋಜನಕ್ಕೋಸ್ಕರ ಅಥವಾ ಸ್ಪಷ್ಟಮಾಡುವುದಕ್ಕೋಸ್ಕರ ರಾಮಾಯಣವನ್ನು ಲವಕುಶರಿಗೆ ಉಪದೇಶಮಾಡಿರುವರು. ಅಲ್ಲದೆ ಉತ್ತರಕಾಂಡದ ಕೊನೆಯ ಸರ್ಗದಲ್ಲಿ, "ಗಾಯತ್ರ್ಯಾಶ್ಚಸ್ವರೂಪಂ ತದ್ರಾಮಾಯಣ ಮನುತ್ತಮಮ್" ಅಂದರೆ ಶ್ರೇಷ್ಠವಾದ ರಾಮಾಯಣವು ಗಾಯತ್ರೀಸ್ವರೂಪವೆಂದು ಹೇಳಿರುವರು. ಶ್ರುತಿತಾತ್ಪರ್ಯವೆಂದೂ ಗಾಯತ್ರೀಸ್ವರೂಪವೆಂದೂ ಯಾವಾಗ ವಾಲ್ಮೀಕರ ಅಭಿಪ್ರಾಯವಿರುವುದೋ ಆಗ ಶ್ರೀಮದ್ರಾಮಾಯಣವು ಜ್ಞಾನಮಾರ್ಗವನ್ನೊಳಗೊಂಡಿರುವುದೆಂಬುದು ನಿಸ್ಸಂಶಯವಾದ ವಿಚಾರ. ಶ್ರುತಿಗಳಲ್ಲಿಯೂ ಪುರಾಣಗಳಲ್ಲಿಯೂ ಅಮೋಘವಾದ ಅಂತರಾರ್ಥಗಳಿವೆ.

ಈ ಗ್ರಂಥದ ಪ್ರಥಮದಿಂದಲೂ ವಿಚಾರಗಳನ್ನು ಚೆನ್ನಾಗಿ ಗ್ರಹಿಸಿಕೊಂಡು ಅಂತ್ಯ ಭಾಗದಲ್ಲಿರುವ ರಾಮಾಯಣದ ಅಂತರಾರ್ಥಕ್ಕೂ ಗಾಯತ್ರಿಗೂ ಸಮನ್ವಯಮಾಡಿರುವು ದನ್ನು ಗ್ರಹಿಸಿಕೊಂಡರೆ ವಾಲ್ಮೀಕಿಮಹರ್ಷಿಗಳ ಅಭಿಪ್ರಾಯವು ಎಂತಹುದೆಂಬುದು ವಾಚಕ ರಿಗೇ ಗೊತ್ತಾಗುವುದು.

ಜಾತಿ, ಮತಗಳ ಸಿದ್ಧಾಂತಗಳ ಶ್ರೇಷ್ಠ ಕನಿಷ್ಠತೆಯನ್ನು ಪ್ರತಿಪಾದಿಸುವ ಭಾವದ ಉದ್ದೇಶವೆಂದಿಗೂ ನನಗಿಲ್ಲ. ಶ್ರೀರಾಮಚಂದ್ರನಿಗೆ ರಾವಣಾದಿಗಳನ್ನು ನಿಗ್ರಹಿಸುವ ಮುಖ್ಯ ಧ್ಯೇಯ ಒಂದೇ ಹೇಗೆ ಇತ್ತೋ ಹಾಗೆಯೇ ನನಗೆ ಮನಸ್ಸಾಕ್ಷಿಯಾಗಿಯೂ ಶ್ರೀರಾಮಾ ವತಾರದ ರಹಸ್ಯಾಮೃತದಲ್ಲಿ ಪ್ರತಿಪಾದಿಸುವ ಜ್ಞಾನಮಾರ್ಗದ ಧ್ಯೇಯ ಒಂದೇ ಆಗಿದೆ.

೯. ಶ್ರೀಮದ್ರಾಮಾಯಣನ್ನುಮಾನವದೇಹಕ್ಕೆ ಅನ್ವಯಮಾಡಿರುವುದೆಂದರೆ, ದೇಹದ ರಕ್ತ, ಮಾಂಸ, ಮೂಳೆಗಳಿಗೆ ಅನ್ವಯವೆಂದು ತಿಳಿದುಕೊಳ್ಳಬಾರದು. ಶವಕ್ಕೆ ಅಲಂಕಾರಮಾಡಿ ಲಗ್ನಮಾಡಿಸುವುದಿಲ್ಲವಾದುದರಿಂದ ಚೈತನ್ಯವೇ ಪ್ರಧಾನವಾದುದು. ಆದುದರಿಂದ ದೇಹದಲ್ಲಿ ಶಕ್ತಿರೂಪದ ಬಲೆಯು ಹೇಗಿದೆ. ಈ ಬಲೆಯಲ್ಲಿ ಯಾವ ಯಾವ ವಿಧವಾದ ಕಾರ್ಯಗಳು ಎಲ್ಲೆಲ್ಲಿ ಚೈತನ್ಯಪ್ರಕಾಶದಿಂದ ನಡೆಯುತ್ತವೆ. ಅಜ್ಞಾನಶಕ್ತಿಗಳು ಈ ಬಲೆಯಲ್ಲಿ ಸೇರಿಕೊಂಡು ಜನನ ಮರಣಗಳನ್ನುಂಟುಮಾಡುತ್ತಾ ಹೇಗೆ ನಮ್ಮನ್ನು ಬಂಧಿಸಿವೆ? ಈ ಮಾಯಾ ಬಲೆಯನ್ನು ಭೇದಿಸಲು ಮಾಡುವ ಕ್ರಮಗಳೇನು? ಎಂಬವುಗಳನ್ನು ತಿಳಿದುಕೊಂಡು ಜ್ಞಾನಮಾರ್ಗದಲ್ಲಿ ತಾವಿರುವ ಸೋಪಾನಕ್ಕಿಂತಲೂ ಮೇಲಿನ ಸೋಪಾನಗಳನ್ನು ಹತ್ತಿ ಉತ್ತೀರ್ಣರಾಗಬೇಕೆಂಬ ನೈಜವಾದ ವಿಶ್ವಾಸದಿಂದ ಈ ಗ್ರಂಥದಲ್ಲಿ ಯಾರು ಮಗ್ನರಾಗಿ ಅನುವರ್ತಿಸುವರೋ ಅವರಿಗೆ ಆತ್ಮಲಾಭವುಂಟಾಗವುದರಲ್ಲಿ ಸಂಶಯವಿಲ್ಲ.

ಈಗಿನಕಾಲದಲ್ಲಿ ಪಾಶ್ಚಾತ್ಯವಿದ್ಯದ ಹೊಡೆತದಿಂದ ವಾಡಿಕೆಯಾಗಿ ಮಾತಾಡುತಿದ್ದ ನಮ್ಮ ಶಾಸ್ತ್ರದ ಮಾತುಗಳೂ ಅದೃಶ್ಯವಾಗಿವೆ. ಆದುದರಿಂದ ಶಾಸ್ತ್ರಪರಿಚಯವಿಲ್ಲದವರು ವಿಷಯಾನುಕ್ರಮಣಿಕೆಯಲ್ಲಿ ರಾಮಾಯಣದ ಕಥಾನಾಯಕರಿಗೆ ದೇಹದಲ್ಲಿ ಯಾವಯಾವ ಪಾತ್ರಗಳನ್ನು ಕೊಟ್ಟಿರುತ್ತೋ ಅವುಗಳನ್ನೂ, ಸಪ್ತಕಾಂಡಗಳಿಗನುಸಾರವಾಗಿ ಬರುವ ತತ್ತ್ವಾರ್ಥಗಳ ಸಾರವನ್ನೂ ಚೆನ್ನಾಗಿ ಮನಸ್ಸಿನಲ್ಲಿಟ್ಟುಕೊಂಡು ಅನಂತರ ಗ್ರಂಥವನ್ನು ಓದಲು ಪ್ರಾರಂಭಿಸಬೇಕು. ಹೀಗೆ ಗ್ರಂಥವನ್ನು ಓದುವಾಗ ರಾಮಾಯಣಕಥಾನಾಯಕರಿಗೆ ಕೊಟ್ಟಿರುವ ಪಾತ್ರಗಳ ತತ್ವದ ವಿವರವು ಬರುವುದು. ವಾಚಕರು ಪ್ರತಿಯೊಂದು ಕಾಂಡದ ಒಟ್ಟು ತಾತ್ಪರ್ಯವನ್ನು ಗ್ರಹಿಸಿಕೊಂಡು ಅನಂತರ ಮುಂದಿನ ಕಾಂಡಗಳನ್ನು ನೋಡಬೇಕು. ಬಾಲಕಾಂಡದ ತತ್ವಗಳನ್ನೆಲ್ಲಾ ಗರ್ಭದಲ್ಲಿ ಶಿಶುವಿನ ಸೃಷ್ಟಿಗೆ ಅನ್ವಯಿಸಿ ಬಾಲಕಾಂಡದ ಕೊನೆಯ ಪ್ರಕರಣದಲ್ಲಿ ಬರೆದಿರುವುದು. ಅಯೋಧ್ಯಾಕಾಂಡದಿಂದ ಸೀತಾಪಹರಣವಾಗುವವರೆಗೆ ಶಿಶುವಿನ ಉದಾಹರಣೆಯ ಮೂಲಕ ಕಥಾತತ್ವಗಳನ್ನು ಬರೆದಿರುವುದರಿಂದಲೂ, ಅನೇಕ ಸಂದರ್ಭಗಳಲ್ಲಿನ ತತ್ವಗಳನ್ನು ಗ್ರಾಹ್ಯಮಾಡಿಕೊಳ್ಳಲು ಶಾಸ್ತ್ರೋಕ್ತವಾದ ಚಿತ್ರಗಳ ಮೂಲಕ ವಿವರಮಾಡಿರುವುದರಿಂದಲೂ ವಿಚಾರಗಳನ್ನು ಸುಲಭವಾಗಿ ತಿಳಿದುಕೊಳ್ಳಲವಕಾಶವಿದೆ. ಜ್ಞಾನಮಾರ್ಗದ ವಿಚಾರವು ಉದಾಹರಣೆಯ ಮೂಲಕವಿಲ್ಲದೆ ಮನಸ್ಸಿಗೆ ಮಂದಟ್ಟಾಗುವುದು ಕಷ್ಟ. ಈ ಗ್ರಂಥದಲ್ಲಿ ಶ್ರೀರಾಮಚರಿತ್ರೆಯೂ ಪಕ್ಕದಲ್ಲಿರುವುದರಿಂದ ಒಂದೊಂದಕ್ಕೂ ಅನ್ವಯಿಸಿರುವುದನ್ನು ಪಠಿಸಿ ತಿಳಿದುಕೊಳ್ಳುವುದು ಸ್ವಾರಸ್ಯವಾಗಿಯೂ ಉಲ್ಲಾಸವಾಗಿಯೂ ಇರುವುದು.

ಸೀತಾಪಹರಣದಿಂದ ಮುಂದಕ್ಕೆ ಜ್ಞಾನ ಯೋಗಗಳೆರಡರ ವಿಚಾರವೂ ಬರುವುದು. ಕೆಲವು ಸಂದರ್ಭಗಳಲ್ಲಿ ಜ್ಞಾನ ಯೋಗಗಳೆರಡೂ ಸೇರಿಕೊಂಡು ಜೊತೆಯಲ್ಲಿ ಹೋಗುವುವು.

ಶ್ರೀರಾಮಚಂದ್ರನ ಲೀಲಾವತಾರದ ತತ್ವದಲ್ಲಿ ಅನುಭವಸಿದ್ಧಾಂತವೆನಿಸುವ ಯೋಗವಿಚಾರವೂ ಅನ್ವಯವಾಗಿ ಬಂದಿರುವುದರಿಂದ ಯೋಗವನ್ನು ಅನುಷ್ಠಿಸಲು ಶಕ್ತಿಯಿಲ್ಲದವರು ಯೋಗವನ್ನು ಧಿಕ್ಕಾರವಮಾಡುವ ಪಾಪಕ್ಕೆ ಗುರಿಯಾಗದೆ ಯೋಗವಿಚಾರವು ಹೇಗೆ ಬರುವುದೆಂಬುದನ್ನು ತಿಳಿದುಕೊಂಡು ಅದನ್ನು ಅನುಷ್ಠಿಸಬೇಕೆಂಬ ಆಸೆಯನ್ನು ಆತ್ಮಜ್ಞಾನದೊಡನೆ ಅಭಿವೃದ್ಧಿಮಾಡಿಕೊಳ್ಳುತ್ತಾ ಬಂದರೆ ಕಾಲಾಂತರದಲ್ಲಿ ಕಾರ್ಯವಾಗಿ ಪರಿಣಮಿಸಿ ಉತ್ತೀರ್ಣತೆಯನ್ನು ಪಡೆಯಬಹುದು.

ನನಗೆ ನಡೆದ ವಿಚಿತ್ರ ವಿಚಾರಗಳನ್ನು ನಾನೇ ನಂಬಿರಲಿಲ್ಲವೆಂದು ಹಿಂದೆ ತಿಳಿಸಿರುತ್ತೇನೆ. ಈ ವಿಚಾರವನ್ನು ಶ್ರಿಂಗೇರಿ ಶ್ರೀಜಗದ್ಗುರುಗಳಲ್ಲಿಯೂ, ಇನ್ನೂ ಕೆಲವು ಮಹನೀಯರಲ್ಲಿಯೂ ಚರ್ಚಿಸಿ ಇದರ ನಿಜಾಂಶವನ್ನು ತಿಳಿದುಕೊಂಡೆನು. ಮನುಷ್ಯನಲ್ಲಿ ದೈವಿಕಜ್ಞಾನಚಕ್ಷುಸ್ಸೊಂದು ಇದೆ. ಪುಣ್ಯಪರಿಪಾಕಕಾಲದಲ್ಲಿ ಇದು ತೆರೆದು ದೈವಿಕವಾದ ವಿಚಾರವು ಭಾಸವಾಗುವುದೆಂಬುದು ನಿಶ್ಚಯ. ಅರ್ಜುನನು ವಿಶ್ವರೂಪದರ್ಶನವನ್ನು ನೋಡಿದುದೂ ಇಂತಹ ದೈವಿಕವಾದ ಜ್ಞಾನಚಕ್ಷುಸ್ಸಿನಿಂದಲೇ. ಜ್ಞಾನಿಗಳು ಸಾವಿರಾರು ಮೈಲಿಗಳ ದೂರದಲ್ಲಿರುವುದನ್ನು ತಾವಿದ್ದೆಡೆಯಿಂದಲೇ ನೋಡುವುದೂ ಈ ಜ್ಞಾನಚಕ್ಷುಸ್ಸಿನಿಂದಲೇ. ಇದು ಸ್ವಪ್ನಕ್ಕೂ ವಿಲಕ್ಷಣವಾಗಿ ಹೀಗಿರುವುದೆಂದು ವರ್ಣಿಸಲಾಗುವುದಿಲ್ಲ. ಆದುದರಿಂದ ಇಂತಹುದನ್ನು ನಂಬಲೇ ಬೇಕಾಗುವುದು.

ಶ್ರೀರಾಮಚಂದ್ರಸ್ವಾಮಿಯ ಲೀಲಾವತಾರದ ರಹಸ್ಯಾಮೃತವನ್ನು ಮಹಾಜನಗಳಿಗೆ ಹಂಚಿಕೊಡುವ ಕಾರ್ಯದಲ್ಲಿ ಈಗ ಸಹಾಯಮಾಡಿದ, ಮುಂದೆಯೂ ಸಹಾಯಮಾಡುವ ಮಹಾನುಭಾವರುಗಳಿಗೆ ನಾನು ಕೃತಜ್ಞನಾಗಿರುವೆನಲ್ಲದೆ ಅವರುಗಳಿಗೆ ಅನುಗ್ರಹಿಸಿ ಸರ್ವಮಂಗಳಗಳನ್ನುಂಟುಮಾಡಲೆಂದು ಭಕ್ತಿಪೂರ್ವಕವಾಗಿ ಶ್ರೀರಾಮಚಂದ್ರಸ್ವಾಮಿಯನ್ನೂ ಜಗನ್ಮಾತೆಯನ್ನೂ ಪ್ರಾರ್ಥಿಸುತ್ತೇನೆ.

ಮಲ್ಲೇಶ್ವರ, ಬೆಂಗಳೂರು.
ಪ್ರಜೋತ್ಪತ್ತಿ ಸಂ|| ಆಶ್ವೀಜ ಶುದ್ಧ
ಪಂಚಮಿ ಶುಕ್ರವಾರ.
ತಾ|| ೧೭-೧೦-೧೯೩೧.

ಕಾಶ್ಯಪಸಗೋತ್ರೋದ್ಭವ ಯಡತೊರೆ ಶ್ರೀಸೀತಾ
ರಾಮಶರ್ಮ ಪೌತ್ರ, ಶ್ರೀರಾಮಶರ್ಮ ಪುತ್ರ,
**ಯಡತೊರೆ ಸುಬ್ರಾಯಶರ್ಮ.**

ಶ್ರೀಮದ್ರಾಮಾಯಣದ ಅಂತರಾರ್ಥದಲ್ಲಿ ಬರುವ ಮುಖ್ಯಕಥಾನಾಯಕರಿಗೂ ಸ್ಥಳಗಳಿಗೂ ವೇದಾಂತಪರವಾಗಿ ನಮ್ಮ ದೇಹದಲ್ಲಿ ಅನ್ವಯಮಾಡಿರುವ ವಿವರ.

---

| **ರಾಮಾಯಣ** | | **ಮಾನವದೇಹದಲ್ಲಿ ಅನ್ವಯಮಾಡಿರುವ ತತ್ವ.** |
|---|---|---|
| ಶ್ರೀರಾಮ | .... | ಬುದ್ಧಿಯಲ್ಲಿರುವ ಪ್ರತಿಬಿಂಬಚೈತನ್ಯ. |
| ಲಕ್ಷ್ಮಣ | .... | ಮನಸ್ಸಿನಲ್ಲಿರುವ ಪ್ರತಿಬಿಂಬಚೈತನ್ಯ |
| ಭರತ | ... | ಅಹಂಕಾರದಲ್ಲಿರುವ ಪ್ರತಿಬಿಂಬಚೈತನ್ಯ |
| ಶತ್ರುಘ್ನ | .... | ಚಿತ್ತದಲ್ಲಿರುವ ಪ್ರತಿಬಿಂಬಚೈತನ್ಯ |
| ದಶರಥ | .... | ಸೃಷ್ಟಿಸಂಕಲ್ಪದ ತತ್ವ |
| ಕೌಸಲ್ಯಾ | .... | ಜ್ಞಾನಶಕ್ತಿ |
| ಸುಮಿತ್ರಾ | .... | ಕ್ರಿಯಾಶಕ್ತಿ |
| ಕೈಕೇಯಿ | .... | ಇಚ್ಛಾಶಕ್ತಿ |
| ವಸಿಷ್ಠರು | ... | ಪರಮಾತ್ಮಮಹಿಮೆಯ ಪ್ರತಿಪಾದನಾ ತತ್ವ |
| ವಿಶ್ವಾಮಿತ್ರರು | .... | ಈಶ್ವರಮಹಿಮೆಯ ಪ್ರತಿಪಾದನಾ ತತ್ವ |
| ಸೀತಾದೇವಿ | .... | ಶುದ್ಧಸತ್ವಗುಣ ಅಥವಾ ಶುದ್ಧಸತ್ವಪ್ರಧಾನಮಾಯೆ |
| ಗುಹನ ಪ್ರದೇಶ | ... | ಆನಂದಮಯಕೋಶ |
| ಚಿತ್ರಕೂಟ | .... | ವಿಜ್ಞಾನಮಯಕೋಶ |
| ಅತ್ರಿಮಹರ್ಷಿಗಳಾಶ್ರಮ | | ಮನೋಮಯಕೋಶ |
| ಅಗಸ್ತ್ಯಾಶ್ರಮ | .... | ಪ್ರಾಣಮಯಕೋಶ |
| ಪಂಚವಟೀ | .... | ಅನ್ನಮಯಕೋಶ |
| ಜಟಾಯು | ... | ವೇದಾಂತವಿಚಾರಬೋಧಕ ಗುರುವಿನ ತತ್ವ |
| ಸಂಪಾತಿ | .... | ಯೋಗರಹಸ್ಯಬೋಧಕ ಗುರುವಿನ ತತ್ವ |
| ಗರುಡ | .... | ಸಮಾಧಿಸಿದ್ಧಿಗೆ ಸಹಾಯದ ತತ್ವ |
| ಅಗಸ್ತ್ಯರು | .... | ತಾರಕೋಪದೇಶಕ ಗುರುವಿನ ತತ್ವ |
| ಸುಗ್ರೀವ | .... | ಪ್ರಾಣವಾಯು |
| ವಾಲಿ | .... | ಅಪಾನವಾಯು |
| ಜಾಂಬುವಂತ | ... | ಉದಾನವಾಯು |
| ನಳ | ... | ವ್ಯಾನವಾಯು |
| ನೀಲ | ... | ಸಮಾನವಾಯು |
| ಹನುಮಂತ | .... | ಶ್ವಾಸೋಚ್ಛ್ವಾಸದ ವಾಯು |
| ಅಂಗದ | ... | ಯೋಗಾಭ್ಯಾಸಕಾಲದಲ್ಲಿ ಊರ್ಧ್ವಮುಖದಲ್ಲಿರುವ [ಅಪಾನವಾಯು |
| ಸುರಸೆ | .... | ಕುಂಡಲಿನೀಶಕ್ತಿ |
| ಲಂಕೆ | ... | ಮೂಲಾಧಾರಚಕ್ರ ಪ್ರದೇಶ |
| ಮಂಡೋದರಿ | ... | ರಜೋಗುಣ |
| ರಾವಣ | ... | ರಜೋಗುಣಚೈತನ್ಯ ಅಥವಾ ವಿಕ್ಷೇಪಶಕ್ತಿ |
| ವಜ್ರಾರೆ | ... | ತಮೋಗುಣ |

| | | |
|---|---|---|
| ಕುಂಭಕರ್ಣ | .... | ತಮೋಗುಣಚೈತನ್ಯ |
| ಸರಮೆ | .... | ಮಲಿನಸತ್ವಗುಣ |
| ವಿಭೀಷಣ | .... | ಮಲಿನಸತ್ವಗುಣಚೈತನ್ಯ ಅಥವಾ ಧರ್ಮಮಾರ್ಗ |
| ಇಂದ್ರಜಿತು | .... | ಭೋಗಶಕ್ತಿ |
| ಅಕ್ಷಕುಮಾರ | .... | ಆಗಾಮಿವಾಸನಾಶಕ್ತಿ |
| ಅತಿಕಾಯ | .... | ಸಂಸಾರದ್ವಂದ್ವಸ್ವರೂಪವಾದ ಅವಿದ್ಯಾಕಾರ್ಯಗಳ ದೃಢತರ ಸಮ್ಮೇಳನಾಶಕ್ತಿ] |
| ನಿಕುಂಭ ಕುಂಭರು... | | ಮೋಹ ಮತ್ತು ಶೋಕ |
| ಮಾರೀಚ | .... | ಭ್ರಾಂತಿಸ್ವರೂಪ |



## ಶ್ರೀಮದ್ರಾಮಾಯಣದ ಸಪ್ತಕಾಂಡಗಳಿಗನುಸಾರವಾಗಿ ಬರುವ ತತ್ವಗಳ ಸಾರಾಂಶ.

| ಕಾಂಡಗಳು | ತತ್ವಗಳು |
|---|---|
| ೧. **ಬಾಲಕಾಂಡ** | ಸೃಷ್ಟಿಯವಿಚಾರ, ಈಶ್ವರನ ಮಹಿಮೆಯ ವಿಚಾರಗಳ ತತ್ವಗಳು ಮತ್ತು ಗರ್ಭದಲ್ಲಿ ಶಿಶುವಿನ ದೇಹಸೃಷ್ಟಿಕಾರ್ಯದ ಸಂಪೂರ್ಣಕ್ಕೆ ಸಮನ್ವಯ. |
| ೨. **ಅಯೋಧ್ಯಾಕಾಂಡ** | ಜೀವತ್ವದ ವ್ಯಾಪಾರದ ಸಲಕರಣೆಗೋಸ್ಕರ ಗರ್ಭದಲ್ಲಿ ಶಿಶುವಿಗೆ ಏಳನೇ ತಿಂಗಳಿಂದ ಜನನವಾಗುವುದಕ್ಕೆ ಮುಂಚೆ ಉಂಟಾಗುವ ಆನಂದಮಯ, ವಿಜ್ಞಾನಮಯ, ಮನೋಮಯ ಕೋಶಗಳ ಕಾರ್ಯಗಳ ಸ್ಫುರಣೆಯ ವಿಚಾರಗಳ ತತ್ವಗಳು. |
| ೩. **ಅರಣ್ಯಕಾಂಡ** | ಜನನವಾದ ಮೇಲೆ ಪ್ರಾಣಮಯ, ಅನ್ನಮಯ ಕೋಶಗಳ ಮತ್ತು ಇಂದ್ರಿಯಗಳ ಕಾರ್ಯಸ್ಫುರಣೆಯಾಗಿ ಅಜ್ಞಾನದ ಬಂಧನ ಬಂದು ವಿಷಯವ್ಯಾಪಾರಗಳಲ್ಲಿ ಶಿಶುಗಳು ಮಗ್ನವಾಗುವ ವಿಚಾರಗಳ ತತ್ವಗಳೇ ಅರಣ್ಯಕಾಂಡದಲ್ಲಿ ಸೀತಾಪಹರಣದವರೆಗಿನ ಕಥೆಯ ಅಂತರಾರ್ಥಗಳಾಗಿವೆ.<br>ಸೀತಾಪಹರಣದಾರಭ್ಯ ಅರಣ್ಯಕಾಂಡ ಪೂರೈಸುವವರೆಗಿನ ಕಥೆಯ ಅಂತರಾರ್ಥಗಳು ಮೋಕ್ಷಾಧಿಕಾರಿಯ ಲಕ್ಷಣ, ವೇದಾಂತಶ್ರವಣ, ಮನನ, ಆತ್ಮಚಿಂತನೆ ಮತ್ತು ನಿಯಮಗಳ ವಿಚಾರಗಳ ತತ್ವಪ್ರತಿಪಾದಕವಾಗಿವೆ. |

**೪. ಕಿಷ್ಕಿಂಧಾಕಾಂಡ** ಯೋಗಾನುಷ್ಠಾನದ ಅವಶ್ಯಕತೆ. ಆಸನಾಭ್ಯಾಸದ ವಿಚಾರ. ರೇಚಕ ಪೂರಕ ಕುಂಭಕ ಪ್ರಾಣಾಯಾಮಗಳ ಅಂತರಾರ್ಥ ಪ್ರತಿಪಾದಕವಾಗಿದೆ.

**೫. ಸುಂದರಕಾಂಡ** ಬ್ರಹ್ಮರಂಧ್ರದ ಬಾಗಿಲನ್ನು ತೆಗೆಸುವ ಶಕ್ತಿಚಲನಪ್ರಾಣಾಯಾಮದ ಅನುಷ್ಠಾನದ ಅಂತರಾರ್ಥಪ್ರತಿಪಾದಕವಾಗಿದೆ.

**೬. ಯುದ್ಧಕಾಂಡ** ಅವಿದ್ಯಾಶಕ್ತಿಗಳ ಸ್ವರೂಪಗಳು ಅವಿದ್ಯಾಶಕ್ತಿಗಳು ಮಾನವನಿಗೆ ಬಾಹ್ಯದಲ್ಲಿ ಮಾಡುವ ತೊಂದರೆ ಮತ್ತು ಅಂತರ್ಮುಖದಾರಿಯಾದ ಸಮಾಧಿಸ್ಥಿತಿಯನ್ನು ಹೊಂದಲು ಪ್ರತಿಬಂಧಕವಾಗಿರುವ ಸ್ವರೂಪಗಳು. ಈ ಪ್ರತಿಬಂಧಕಗಳನ್ನು ಪರಿಹರಿಸಿಕೊಳ್ಳಲು ಮಾಡಬೇಕಾದ "ಓಂ"ಕಾರೋಪಾಸನೆ ಮುಂತಾದ ಅನುಷ್ಠಾನಗಳ ವಿವರವೇ ಯುದ್ಧಕಾಂಡದಲ್ಲಿನ ಯುದ್ಧಸ್ವರೂಪಗಳ ಅಂತರಾರ್ಥವಾಗಿದೆ. ರಾಕ್ಷಸಪ್ರಧಾನನಾದ ರಾವಣನ ವಧೆಯ ತತ್ವವೇ ಅವಿದ್ಯಾ ಉಪಾಧಿಯೆಂದರೆ ಅಜ್ಞಾನ ನಿವೃತ್ತಿಯಾಗುವ ತತ್ವಪ್ರತಿಪಾದಕವಾಗಿದೆ. ಸೀತಾದೇವಿಯ ಅಗ್ನಿಪ್ರವೇಶದ ತತ್ವವೇ ಶುದ್ಧಸತ್ವ ಮಾಯೆಯೆಂದರೆ ನಾನೆಂಬ ಶುದ್ಧ ಜ್ಞಾನವು ಪರಬ್ರಹ್ಮನಲ್ಲಿ ಲೀನವಾಗುವ ಮತ್ತು ಜೀವಬ್ರಹ್ಮಸಾಕ್ಷಾತ್ಕಾರದ ವಿವರಣೆಯಾಗಿದೆ.

**೭. ಉತ್ತರಕಾಂಡ** ಪರಮಹಂಸನ ಸ್ವಭಾವವೆಂದರೆ ಜೀವನ್ಮುಕ್ತನ ಸ್ಥಿತಿ, ಅವಧೂತತತ್ವದ ವಿಚಾರ ಮತ್ತು ದೇಹಪತನಕಾಲದಲ್ಲಿ ಉಂಟಾಗುವ ವಿದೇಹಕೈವಲ್ಯದ ಅಂತರಾರ್ಥವಾಗಿರುವುದು.

೮. ಗಾಯತ್ರೀಮೂಲಮಂತ್ರಕ್ಕೂ ಈ ತತ್ವಾರ್ಥಗ್ರಂಥಕ್ಕೂ ಸಮನ್ವಯ.



## ಚಿತ್ರಗಳು.

# ವಿಷಯಾನುಕ್ರಮಣಿಃ

| ಪ್ರಕರಣ. | ಶ್ರೀಮದ್ರಾಮಾಯಣ. | ಅಂತರಾರ್ಥ. | ಪುಟ. |
|---|---|---|---|
| ೯. | ಹನುಮಂತನು ಲಂಕಾದಹನಮಾಡಿದುದು. | ಶಕ್ತಿಚಲನಪ್ರಾಣಾಯಾಮದಿಂದ ಮೂಲಾಧಾರದಲ್ಲಿರುವ ಅಗ್ನಿಯು ಪ್ರಜ್ವಲನೆಯಾಗುವ ವಿಚಾರ. | ೨೮೯ |
| ೧೦. | ವಾನರರು ವನದಲ್ಲಿ ಮಧುಪಾನ ಮಾಡಿದುದು. | ಶಕ್ತಿಚಲನಪ್ರಾಣಾಯಾಮದ ಪರಿಪಕ್ವಾವಸ್ಥೆಯಲ್ಲಿ ದೇಹದಲ್ಲಿನ ವಾಯುಶಕ್ತಿಗಳು ಅಮೃತದಿಂದ ಶೋಯಿಸಲ್ಪಡುವ ವಿಚಾರ. | ೨೯೬ |
| ೧೧. | ಶ್ರೀರಾಮನು ಸೀತಾದೇವಿಯು ಕಳುಹಿಸಿದ ಚೂಡಾಮಣಿಯನ್ನು ಸ್ವೀಕರಿಸಿದುದು. | ಅಧಿಕಾರಿಯು ಪ್ರಾಣಾಯಾಮದ ಪರಿಪಕ್ವಾವಸ್ಥೆಯ ಸೋಪಾನಕ್ಕೆ ಬರುವುದು ಮತ್ತು ಶುದ್ಧಸತ್ವಗುಣದ ಇರುವಿಕೆಯ ಸೂಚನೆ. | ೩೦೨ |

| | ಯುದ್ಧಕಾಂಡ. | ಸಮಾಧಿಸೋಪಾನ. ಅವಿದ್ಯೆಯ ಸ್ವರೂಪಗಳು ಮತ್ತು ಅವುಗಳ ನಿಗ್ರಹದ ತತ್ವ. | |
|---|---|---|---|
| ೧. | ಹನುಮಂತನು ಮಾಡಿದ ಮಹತ್ಕಾರ್ಯಕ್ಕಾಗಿ ಶ್ರೀರಾಮನು ಪರಮ ಪ್ರೀತಿಯಿಂದ ಹನುಮಂತನನ್ನು ಆಲಿಂಗಿಸಿಕೊಂಡುದು. | ಯೋಗದ ಶ್ರೇಷ್ಠತೆ ಮತ್ತು ಮಹಿಮೆಯ ವಿಚಾರ. | ೩೦೫ |
| ೨. | ಶ್ರೀರಾಮನು ಸುಗ್ರೀವಸಮೇತನಾಗಿ ಸೈನ್ಯದೊಡನೆ ಸಮುದ್ರತೀರವನ್ನು ಸೇರಿದುದು. | ಪ್ರತ್ಯಾಹಾರದ ಸ್ವರೂಪ. | ೩೨೨ |
| ೩. | ಸಮುದ್ರತೀರವನ್ನು ಸೇರಿದನಂತರ ಶ್ರೀರಾಮನು ಸೀತಾವಿಯೋಗ ದುಃಖದಿಂದ ಅತ್ಯಂತ ಪರಿತಾಪಪಟ್ಟುದು. | ಧ್ಯಾನದ ಪ್ರಾರಂಭದಲ್ಲಿ ತೀವ್ರತಮವಾದ ಬ್ರಹ್ಮಭಾವನೆಯು ಇರಬೇಕೆಂಬ ವಿಚಾರ. | ೩೨೬ |
| ೪. | ರಾವಣನ ಮಂತ್ರಾಲೋಚನೆಯ ಸಭೆ. ವಿಭೀಷಣನ ಶರಣಾಗತಿ. | ಅವಿದ್ಯಾರಾಜನ ಸಭೆ. ಧರ್ಮಮಾರ್ಗದ ಸ್ವರೂಪ ಮತ್ತು ಮೋಕ್ಷಕ್ಕೆ ಧರ್ಮಮಾರ್ಗದ ಸಹಾಯ. | ೩೩೧ |
| ೫. | ದರ್ಭಶಯನ ಮತ್ತು ಸೇತುಬಂಧನ. | ಧ್ಯಾನ ಮತ್ತು "ಓಂ" ಎಂಬ ಶಬ್ದೋಚ್ಚಾರಣೆಯ ಅನುಸಂಧಾನದ ವಿಚಾರ. | ೩೪೩ |
| ೬. | ಶ್ರೀರಾಮನು ಸರ್ವಸೈನ್ಯದೊಡನೆ ಸೇತುವೆಯ ಮೇಲೆ ಹೊರಟು ಲಂಕಾದ್ವೀಪವನ್ನು ಸೇರಿದುದು. | ಬಿಂದುಧಾರಣೆ ಮತ್ತು ಬಿಂದುಸಹಿತವಾದ "ಓಂ"ಕಾರೋಪಾಸನೆಯ ವಿಚಾರ | ೩೬೦ |
| ೭. | ಶುಕ ಸಾರಣರೆಂಬ ಗೂಢಚಾರರ ವೃತ್ತಾಂತ ಮತ್ತು ವಾನರರು ಲಂಕಾಪಟ್ಟಣವನ್ನು ಮುತ್ತಿದುದು. | ಬಿಂದುಧಾರಣೆಯನ್ನು ತಪ್ಪಿಸಲು ಮೋಸ ಮತ್ತು ಕಳ್ಳತನದ ಶಕ್ತಿಗಳ ಪ್ರಯತ್ನ ಮತ್ತು ಅವುಗಳ ಸ್ವರೂಪ. | ೩೭೫ |

## ಉತ್ತರಕಾಂಡ.

## ಜೀವನ್ಮುಕ್ತಿ ಅಥವಾ ಪರಮಹಂಸತ್ವ ಮತ್ತು ವಿದೇಹಕೈವಲ್ಯದ ತತ್ವಗಳು.





# ಶುದ್ಧಾ ಶುದ್ಧ ಪತ್ರಿಕೆ.

---

| ಪುಟ ಸಂಖ್ಯೆ | ಪಂಙ್ತಿ | ಅಶುದ್ಧ | ಶುದ್ಧ |
|---|---|---|---|
| ೧೬೮ | ೪ | ನಾಮದಿಂವ | ನಾಮದಿಂದ |
| ೧೭೮ | ೧೦ | ಗರುಗಳವರು | ಗುರುಗಳವರು |
| ೧೩ | ೨೧ | ನಿಮಿತ್ತ | ನಿಮಿತ್ತಂ |
| ೧೭ | ೧೧ | ಯಾಶಕ್ತಿಸ್ಯಾಗಂಗಾ | ಯಾಶಕ್ತಿಸ್ಸಾಗಂಗಾ |
| ,, | ೨೩ | ವಿಷ್ಣುಪಾದೋದ್ಭವೇ | ವಿಷ್ಣುಪಾದೋದ್ಭವೇ |
| ೨೪ | ೧೩ | ಯಮೇಪಾರ್ಥ | ಯಮೇವಾರ್ಥ |
| ೩೫ | ೧೨ | ಪ್ರಾಣಿಗ್ರಹಣ | ಪಾಣಿಗ್ರಹಣ |
| ೪೭ | ೨ | ಬುದ್ಧಿವೃತ್ತಿಯೆನಿಸಿಕೊಂಡು | ಬುದ್ಧಿವೃತ್ತಿತಾದಾತ್ಮ್ಯವಾಗಿ |
| ೫೧ | ೨೫ | ವಾಸಸ್ಥಾನ | ವಾಸಸ್ಥಾನ |
| ೫೪ | ೧೭ | ಸ್ವರೂಪವಾದ್ದ | ಸ್ವರೂಪವಾದ |
| ೫೭ | ೪ | ತನ | ತನ್ನ |
| ೯೬ | ೧೩ | ಜಾಲಾಲಿಮುನಿ | ಜಾಬಾಲಿಮುನಿ |
| ೯೭ | ೨೪ | ಬಲತ್ವ | ಖಲತ್ವ |
| ೧೦೯ | ೧೩ | ನಿಳಿಸಿತಷ್ಟೆ | ತಿಳಿಸಿತಷ್ಟೆ |
| ೧೪೭ | ೨೪ | ತನ | ತನ್ನ |
| ೧೫೪ | ೧೩ | ನಮುಲ್ಲಿ | ನಮ್ಮಲ್ಲಿ |
| ೧೬೭ | ೧೪ | ಸ್ತು: | ಸ್ಯು: |
| ೧೭೫ | ೧೫ | ಗುರುಡನಾಗರೋ | ಗರುಡನಾದರೋ |
| ೧೭೯ | ೨೦ | ತನ | ತನ್ನ |
| ೧೮೭ | ೨ | “ಅನಮುಶಿತಂ” | ಅನ್ನಮಶಿತಂ |
| ೧೯೦ | ೧ | ಸಾತಿಕಾ | ಸಾತ್ವಿಕಾ |
| ೨೦೧ | ೩ | ಬಳಬೇಕು | ಬಳಲಬೇಕು |
| ೨೫೯ | ೨೪ | ಉಸಿರನು | ಉಸಿರನ್ನು |
| ೨೭೫ | ೮ | ಮನೋನಾಶಂ | ಮನೋನಾಶ, |

| ಪುಟ ಸಂಖ್ಯೆ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ೩೧೦ | ೨೮ | ಪ್ರತಿಬುದ್ಧ | ಪ್ರತಿಬದ್ಧ |
| ೩೧೭ | ೧೯ | ಪ್ರಾಣಗಳಲ್ಲಿ | ಪ್ರಾಣಿಗಳಲ್ಲಿ |
| ೩೨೫ | ೧ | ಚಕ್ಷುರಾದೀನಾ | ಚಕ್ಷುರಾದೀನಾಂ |
| ೩೨೭ | ೮ | ಇಚ್ಛೆಯು ಮೋಕ್ಷವನ್ನು ಪಡೆ | ಮೋಕ್ಷವನ್ನು ಪಡೆಯಬೇಕೆಂಬ [ಇಚ್ಛೆಯು |
| ೩೩೫ | ೮ | ಚೈತನ್ಯವೇ ಶಕ್ತಿ | ಚೈತನ್ಯವೇ ಶಕ್ತ |
| ೩೬೧ | ೧೬ | ಭೂಮದ್ಯಪ್ರದೇಶ | ಭ್ರೂಮಧ್ಯಪ್ರದೇಶ |
| ೩೬೪ | ೨೩ | ಮೆಖವಾಗಿ | ಮೇಲ್ಮುಖವಾಗಿ |
| ೩೮೭ | ೨೮ | ಕೋರಿಕೆಯುಂಟಾಗುವು | ತೋರಿಕೆಯುಂಟಾಗುವು |
| ೩೯೫ | ೨೪ | ತನ | ತನ್ನ |
| ೩೯೭ | ೧೩ | ಅನುಷ್ಠಾನಗಳು | ಅನುಷ್ಠಾನವು |
| ೪೦೩ | ೨೭ | ಬ್ರಹ್ಮವಿದ್ಯೆ | ಬ್ರಹ್ಮವಿದೆ |
| ೪೦೩ | ೨೮ | ಆತ್ಮನನು | ಆತ್ಮನನ್ನು |
| ೪೪೮ | ೧೫ | ಸುಪ್ತಾಂತಂ | ಸುಪ್ತ್ಯಂತಂ |
| ೪೮೬ | ೪ | ಸವಿಕಲ | ಸವಿಕಲ್ಪ |
| ೪೯೮ | ೧೨ | ತನ್ನೆದುಗೆ | ತನ್ನೆದುರಿಗೆ |
| ೫೦೧ | ೧೫ | ಜ್ಞಾನವು | ವಿವೇಚನಾಶಕ್ತಿಯು |
| ೫೦೧ | ೧೭ | ಆರೋಣ | ಆರೋಹಣ |
| ೫೧೭ | ೨೧ | ಅಷ್ಟವಸ್ತು | ಅಷ್ಟವಸು |
| ೫೨೫ | ೨೮ | ಅನಾಹತಾಭ್ಯೋ | ಅನಾಹತಾಖ್ಯೋ |
| ೫೪೦ | ೨೯ | ಪಾಸನೆಗಳೆರಡರ | ವಾಸನೆಗಳೆರಡರ |
| ೫೪೧ | ೪ | ಬುದ್ಧಿಃತ್ವಯಮೇವ | ಬುದ್ಧಿಸ್ತ್ವಯಮೇವ |
| ೫೪೬ | ೧೭ | ಮಣಿಪುರವನ್ನು | ಮಣಿಪೂರವನ್ನು |
| ೫೪೭ | ೨೫ | ಬುದ್ಧಿವೃತ್ತಿಯ | ಬುದ್ಧಿವೃತ್ತಿಯು |
| ೫೭೭ | ೨೩ | ಪೊರಕುವವನಲ್ಲ | ದೊರಕುವವನಲ್ಲ |
| ೫೮೮ | ೧೧ | ನಾನೆಂಬ ವೃತ್ತಿ, ಜ್ಞಾನ | ನಾನೆಂಬ ವೃತ್ತಿಜ್ಞಾನ |
| ೫೯೫ | ೨೨ | ಪಾಜ್ಞತ್ವ | ಪ್ರಾಜ್ಞತ್ವದ |
| ೫೯೯ | ೭ | ಆತ್ಮಕ್ಷಾತ್ಕಾರವೇ | ಆತ್ಮಸಾಕ್ಷಾತ್ಕಾರವೇ |
| ೬೦೨ | ೨೬ | ಪ್ರಾಣಕವಾಣಿ | ಪ್ರಾಣಕರ್ಮಾಣಿ |

| ಪುಟ ಸಂಖ್ಯೆ | ಪಙ್ತಿ | ಅಶುದ್ಧ | ಶುದ್ಧ |
|---|---|---|---|
| ೬೧೫ | ೧ | ಅಭೇದವನ್ನು | ಅಭೇದವನ್ನು |
| ೬೨೫ | ೧೭ | ಅಮೃತವೆಂದರೆ | ಅಮೃತವೆಂದರೆ ಮೋಕ್ಷವು |
| ೬೪೨ | ೧೭ | ಜ್ಞಾನಾಗ್ನಿಯು | ಜ್ಞಾನಾಗ್ನಿಯ |
| ೬೫೧ | ೨೪ | ಆಕಾರತತ್ವವಾದ | ಆಕಾಶತತ್ವವಾದ |
| ೬೬೦ | ೨೦ | ರಾಜಯೋಗ | .... ... .... |
| ,, | ೨೧ | ವೆನಿಸಿಕೊಳು | ವೆನಿಸಿಕೊಳ್ಳು |
| ೬೬೧ | ೧ | ನದೇಶಕಾಲಾ | ನದೇಶಕಾಲಾ |
| ೬೬೧ | ೧೧ | ಪ್ರಕೃತಿಗಳೆಂಬ | ಪ್ರಕೃತಿಲಯಗಳೆಂಬ |
| ೬೭೩ | ೨೧ | ಜೀವಂತ | ಜೀವಂತ |
| ೬೭೭ | ೭-೮ | ಸೀತಾದೇವಿಯು........ಈಶ್ವರ ಸೋಪಾನವಲ್ಲ | ... ... ... .... |
| ೬೮೧ | ೨೪ | ತನ | ತನ್ನ |
| ೬೮೯ | ೧ | ಜಲದ್ಯೋತಿ | ಜಲಜ್ಯೋತಿ |
| ೬೮೯ | ೨ | ಅಂತರ್ಲಕ್ಷ್ಯಂಮಿತ್ಯಪರೆ | ಅಂತರ್ಲಕ್ಷ್ಯಮಿತ್ಯಪರೆ |
| ೭೦೨ | ೨೫ | ಸ್ವರೂಪಧ್ಯಾನಸಿರುತಂ | ಸ್ವರೂಪಧ್ಯಾನನಿರತಂ |
| ೭೦೩ | ೧೭ | ಸಿಂಹಾಸನಾರೋಹಣನಾ | ಸಿಂಹಾಸನಾರೋಹಿಯಾ |
| ೭೦೪ | ೨೫ | ಭೋಗದಿಂದಲೇ ಕೆಡಬೇಕು | ಭೋಗದಿಂದಲೇ ನಷ್ಟವಾಗಬೇಕು |
| ೭೦೫ | ೩ | ಜ್ಞಾನೋದಯುತ್ಪ | ಜ್ಞಾನೋದಯಾತ್ಪುರಾ |
| ೭೦೫ | ೧೦ | ಪ್ರಾತ್ಸಂಚಿತಾಗಾಮಿ | ಪ್ರಾಕ್ಸಂಚಿತಾಗಾಮಿ |
| ೭೦೫ | ೨೩ | ಭೋಕ್ತೃವ್ಯತ್ವದಿಂದ | ಭೋಕ್ತೃತ್ವದಿಂದ |
| ೭೦೫ | ೨೫ | ಅಧೀನವಾಗಿರುವುದಿಲ್ಲ | ಅಧೀನನಾಗಿರುವುದಿಲ್ಲ |
| ೭೦೬ | ೧೨ | ಕರೋಮಿತಿ | ಕರೋಮೀತಿ |
| ೭೦೬ | ೧೩ | ಸ್ವಪಙ್ಶ್ವಸನ್ | ಸ್ವಸಂಘ್ರ್ಸಸನ್ |
| ೭೦೬ | ೨೦ | ಗಳಿಂದ | ಗಳಲ್ಲ |
| ೭೦೭ | ೧೭ | ದನೇಪತೇಸಃ | ದನೇಕ್ಷತೇಸಃ |
| ೭೦೭ | ೨೧ | ಕ್ತನೆಂದುಅಂಗೀಕರಿಸಲ್ಪಡುವನು | ಕ್ತನೆನಿಸಿಕೊಳ್ಳುವನು |
| ೭೦೭ | ೨೩ | ಸಾಕ್ಷಿಭೂತ | ಸಾಕ್ಷಿಭೂತ |
| ೭೦೮ | ೧ | ಸುಖೋನ್ತಸ್ಸುಖೋನ್ತರಾ | ಸುಖೋನ್ತರಾ |
| ೭೦೮ | ೫ | ನಿರ್ವಾಬ್ರಹ್ಮವನ್ನು | ಬ್ರಹ್ಮನಿರ್ವಾಣವನ್ನು |
| ೭೦೮ | ೭ | ವಿಜಾನನ್ ಭವತೇ | ವಿಜಾನನ್ವಿದ್ವಾನ್ ಭವತೇ |

| ಪುಟ ಸಂಖ್ಯೆ | ಪಙ್ತಿ | ಅಶುದ್ಧ | ಶುದ್ಧ |
| --- | --- | --- | --- |
| ೭೦೮ | ೧೫ | ನ್ನುಪವಿತಸ್ಸಯೋನೋ | ನ್ನುಪವಿಶನ್ನಯಾನೊ |
| ೭೦೮ | ೧೫ | ರಾನ್ಯಥಾಪಿವಾ | ರನ್ಯಥಾಪಿವಾ |
| ೭೮೦ | ೨೪ | ಹೊಂದಿರುವದೇಹಬಂದಿರುವದಾಗಿದೆ | ದೇಹವನ್ನು ಹೊಂದಿರುವು [ದಾಗಿದೆ |
| ೭೦೯ | ೩ | ಮಂಡೋದರಿಯುರು | ಮಂಡೋದರ್ಯಾದಿಗಳು |
| ೭೦೯ | ೫ | ಸ್ವಾತ್ವಾರಾಮನಾಗಿ | ಸ್ವಾತ್ಮಾರಾಮನಾಗಿ |
| ೭೦೯ | ೧೧ | ಬೋಧಸಂಮ್ರಾಟಃ | ಬೋಧಸಂಮ್ರಾಜಃ |
| ೭೦೯ | ೨೧ | ಬಾಗ | ಭಾಗ |
| ೭೦೮ | ೨೪ | ವಿದೇಹಮುಕ್ತಾ | ವಿದೇಹಮುಕ್ತೌ |
| ೭೨೧ | ೧೮ | ಚೈತನ್ಯವೆನ್ನುವದೇ ಇಲ್ಲದೆ | ಚೈತನ್ಯವೆನ್ನುವುದೇ ಇಲ್ಲದೆ |
| ೭೨೩ | ೧೯ | ಶುಕಲವರ | ಕುಶಲವರ |
| ೭೨೪ | ೧೮ | ಸಕಾರೇಣವಸೀತ್ಸ್ವನಃ | ಸಕಾರೇಣವಸೇತ್ಪುನಃ |
| ೭೨೭ | ೧೦ | ತಿಕಾಲಾಬಾಧಿಕ | ತ್ರಿಕಾಲಾಬಾಧಿತ |
| ೭೩೪ | ೩ | ಸಮಸ್ತದೃಷ್ಟಂ | ಸಮಸ್ತದೃಶ್ಯಂ |
| ೭೪೦ | ೯ | ಎಂಬದರ | ಎಂಬುದರ |
| ೭೪೪ | ೨೭ | ಬಲದಿಂದ | ಜಲದಿಂದ |
| ೭೪೫ | ೧೩ | ಮೂಲೆ | ಮಾಲೆ |
| ೭೫೧ | ೧೩ | ಯೋಗಿಭಿದ್ಧ್ಯಾನಗಮ್ಯಂ | ಯೋಗಿಭಿರ್ಧ್ಯಾನಗಮ್ಯಂ |

ಶ್ರೀಃ



ಶ್ಲೋ॥ ನಮಸ್ತಸ್ಮೈಸದೇಕಸ್ಮೈಕಸ್ಮೈ ಚಿನ್ಮಹಸೇನಮಃ।
ಯದೇತದ್ವಿಶ್ವರೂಪೇಣ ರಾಜತೇ ಗುರು ರಾಜತೇ॥

# ಬಾಲಕಾಂಡ.



## ಈಶ್ವರನ ಮಹಿಮೆ ಮತ್ತು ಸೃಷ್ಟಿಯ ವಿಚಾರ.

## ೧ನೆಯ ಪ್ರಕರಣ.

**ಶ್ರೀಮನ್ನಾರಾಯಣನು ಶ್ರೀರಾಮ ಲಕ್ಷ್ಮಣ ಭರತ ಶತೃಘ್ನರಾಗಿ ಅವತರಿಸಿದುದು.**



**ಪರಮಾತ್ಮನು ಅಂತಃಕರಣ ಚತುಷ್ಟಯದಲ್ಲಿ ಪ್ರತಿಬಿಂಬಿತನಾಗುವ ವಿಚಾರ.**

**ರಾಮಾಯಣ**॥ ರಾವಣನೇ ಮೊದಲಾದ ದುಷ್ಟರಾಕ್ಷಸರ ಉಪಟಳದಿಂದ ದೇವತೆಗಳು ಬಾಧೆಪಡುತ್ತಿದ್ದರು. ಅಧರ್ಮದಿಂದ ಭೂಭಾರವು ಹೆಚ್ಚಾಗಿ ಧರ್ಮವು ಗ್ಲಾನಿಯನ್ನು ಹೊಂದುತ್ತಲಿತ್ತು. ಆಗ ಚತುರ್ಮುಖಬ್ರಹ್ಮನು ದೇವತೆಗಳೊಡನೆ ಶ್ರೀಮಹಾವಿಷ್ಣುವನ್ನು ಪ್ರಾರ್ಥನೆಮಾಡಲು ಶ್ರೀಮಹಾವಿಷ್ಣುವು ಭೂಲೋಕದಲ್ಲಿ ಮನುಷ್ಯನಾಗಿ ಅವತಾರಮಾಡಿ ರಾಕ್ಷಸರನ್ನು ನಿಗ್ರಹಿಸುವುದಾಗಿ ಹೇಳಿದನು.

**ತತ್ವಾರ್ಥ**॥ ಪರಮಾತ್ಮನು ಶ್ರೀರಾಮಾವತಾರಮಾಡಿ ದುಷ್ಟರಾದ ರಾಕ್ಷಸಾದಿಗಳನ್ನು ನಿಗ್ರಹಿಸಿ ಭೂಭಾರವನ್ನು ತಗ್ಗಿಸಿ ಲೋಕೋದ್ಧಾರ ಮಾಡಿರುವುದು ಸರಿಯಷ್ಟೆ! ಇದು ನಮ್ಮಲ್ಲಿ ಹೇಗೆ ಅನ್ವಯಿಸುವುದೆಂದರೆ:—ರಾವಣನೇ ಮೊದಲಾದ ರಾಕ್ಷಸರು

ನಮ್ಮಲ್ಲಿ ಅವಿದ್ಯೆಯು ತತ್ತ್ವದವರಾಗಿರುತ್ತಾರೆ. ನಿವೃತ್ತಿಮಾರ್ಗವಾದ ಮೋಕ್ಷ ಮಾರ್ಗಕ್ಕೆ ಪ್ರತಿಬಂಧಕವಾಗಿ ಪ್ರಪಂಚಾನುವರ್ತನದಲ್ಲಿಯೇ ಸತ್ಯತ್ವವನ್ನುಂಟುಮಾಡಿ ಜೀವರುಗಳ ವ್ಯಾಪಾರವನ್ನು ನಡೆಯಿಸಿಕೊಂಡು ಹೋಗುವುದಕ್ಕೆ ಅವಿದ್ಯೆಯೆಂದು ಹೆಸರು. ಈ ಅವಿದ್ಯಾಸ್ವರೂಪರಾದ ರಾಕ್ಷಸರನ್ನು ನಿಗ್ರಹಿಸಿದರೆ ಮೋಕ್ಷ ದೊರೆಯು ವುದು. ಆದುದರಿಂದ ಅವಿದ್ಯೆಯನ್ನು ಭೂಲೋಕದಲ್ಲಿ ಮನುಷ್ಯಜನ್ಮವೆತ್ತಿಯೇ ನಿಗ್ರಹಿಸ ಬೇಕಾಗುತ್ತದೆ. ಕಾರಣವೇನೆಂದರೆ ಮನುಷ್ಯನಿಗೆ ಇರುವಂತೆ ಬುದ್ಧಿಶಕ್ತಿಯು ಉಳಿದ ಯಾವ ಪ್ರಾಣಿಗಳಿಗೂ ಇರುವುದಿಲ್ಲ. ಆದುದರಿಂದ ಮನುಷ್ಯಜನ್ಮದಿಂದಲೇ ಅವಿದ್ಯಾ ಸ್ವರೂಪರಾದ ರಾಕ್ಷಸರನ್ನು ನಿಗ್ರಹಿಸಬೇಕಾಗಿರುವ ತತ್ತ್ವವೇ ಪರಮಾತ್ಮನು ಮನುಷ್ಯ ಸಂಬಂಧವಾದ ದೇಹವನ್ನು ಹೊಂದಿ ರಾವಣಾದಿಗಳನ್ನು ನಿಗ್ರಹಮಾಡಿರುವುದಾಗಿರುವುದು. ಈ ಅವಿದ್ಯಾತತ್ತ್ವದವರಾದ ರಾಕ್ಷಸರು ಮನುಷ್ಯದೇಹದಿಂದ ಪ್ರತ್ಯೇಕವಾಗಿದ್ದುಕೊಂಡು ಮನುಷ್ಯನಿಗೆ ಬಂಧನವನ್ನುಂಟುಮಾಡದೆ ಮನುಷ್ಯದೇಹದಲ್ಲಿಯೇ ವ್ಯಾಪಿಸಿ ಜೀವನನ್ನು ಬಂಧನದಲ್ಲಿ ಸಿಕ್ಕಿಸಿರುತ್ತಾರೆ.

ಬ್ರಹ್ಮಾಂಡದಲ್ಲಿರತಕ್ಕ ಸಕಲ ತತ್ತ್ವಗಳೂ ಪಿಂಡಾಂಡಸ್ವರೂಪವಾದ ಮನುಷ್ಯದೇಹ ದಲ್ಲಿರುವುದರಿಂದ ದೇವತೆಗಳು ಕೂಡ ನಮ್ಮ ದೇಹದಲ್ಲಿ ಇಂದ್ರಿಯ ಗೋಳಕಗಳಲ್ಲಿರು ತ್ತಾರೆ. ಈ ಇಂದ್ರಿಯಗೋಳಕಗಳನ್ನು ರಜೋಗುಣ ತಮೋಗುಣಗಳು ಆಕ್ರಮಿಸಿ ಕೊಂಡು ಇಂದ್ರಿಯಗಳ ಅಧಿಷ್ಠಾನದಲ್ಲಿರುವ ಸತ್ತ್ವಗುಣಪ್ರಧಾನರಾದ ದೇವತೆಗಳನ್ನು ತಮ್ಮ ಸುಖವನ್ನು ಅನುಭವಿಸದಂತೆ ಮಾಡುತ್ತಿರುವುದೇ ದೇವತೆಗಳು ರಾಕ್ಷಸರಿಂದ ಬಾಧೆಪಡುತ್ತಿರುವುದಾಗಿದೆ. ನಮ್ಮಲ್ಲಿರುವ ದೇವತೆಗಳ ತತ್ತ್ವಗಳಾದ ಇಂದ್ರಿಯಗಳಿಗಿರುವ ರಾಕ್ಷಸರ ತತ್ತ್ವವಾದ ಅವಿದ್ಯೆಯ ಬಾಧೆಯನ್ನು ತಪ್ಪಿಸಬೇಕಾದರೆ ಶ್ರೀರಾಮಚಂದ್ರನು ರಾವಣಾದಿ ರಾಕ್ಷಸರನ್ನು ನಿಗ್ರಹಿಸಿದ ರೀತಿಯಲ್ಲಿ ನಾವು ನಮ್ಮಲ್ಲಿರುವ ಅವಿದ್ಯಾತ್ಮಕವಾದ ಗುಣಗಳೆಂಬ ರಾಕ್ಷಸರನ್ನು ಧ್ವಂಸಮಾಡಬೇಕು.

ಚತುರ್ಮುಖಬ್ರಹ್ಮನ ಪುತ್ರರಾದ ನಾರದರು ವಾಲ್ಮೀಕಿಮುನಿಗಳಿಗೆ ಶ್ರೀ ರಾಮಾ ವತಾರದ ತತ್ತ್ವವನ್ನು ಉಪದೇಶಮಾಡಿರುವುದರಿಂದಲೂ, ಚತುರ್ಮುಖಬ್ರಹ್ಮನೇ ವಾಲ್ಮೀಕಿ ಋಷಿಗಳಿಗೆ ಶ್ರೀರಾಮಚರಿತ್ರೆಯನ್ನು ಪ್ರಚುರಪಡಿಸಲು ಅನುಮತಿ ಕೊಟ್ಟಿರುವುದ ರಿಂದಲೂ, ಋಗ್ವೇದದಲ್ಲಿಯೂ ಕೂಡ ಶ್ರೀರಾಮಾವತಾರದ ತತ್ತ್ವವು ಇರುವುದರಿಂದಲೂ ಈ ತತ್ತ್ವವು ಅನಾದಿಯಾದುದೆಂದು ಸೂಚಿತವಾಗುತ್ತದೆ.

ಶ್ರೀರಾಮನೇ ನಾರಾಯಣನೆಂದರೆ ಪರಬ್ರಹ್ಮನು. ವೇದವೇ ಇವನ ವಾಕ್ಯಾಗಿರುತ್ತದೆ. ನಿವೃತ್ತಿಮಾರ್ಗದ ಸ್ವರೂಪವನ್ನು ಉಪನಿಷತ್ತುಗಳಲ್ಲಿ ಹೇಳಿದ್ದರೂ ತನ್ನ ಚರಿತ್ರೆಯಲ್ಲಿಯೂ ಚತುರ್ವಿಧಪುರುಷಾರ್ಥಗಳ ತತ್ತ್ವಗಳನ್ನು ಅಡಗಿಸಿ ಜೀವರುಗಳು ಇದನ್ನು ತಿಳಿದುಕೊಂಡು

ಕೃತಕೃತ್ಯರಾಗುವಂತೆ ಲೀಲಾವತಾರಮಾಡಿರುವನು. ಚತುರ್ವಿಧ ಪುರುಷಾರ್ಥಗಳಲ್ಲಿ ಕೊನೆಯದಾದ ಮೋಕ್ಷದ ತತ್ವವನ್ನು ಶ್ರೀಮದ್ರಾಮಾಯಣವು ಒಳಕೊಂಡಿರುವುದೆಂಬುದನ್ನು ಈ ಗ್ರಂಥವು ನಿರೂಪಣೆಮಾಡುವುದು.

ಆದುದರಿಂದ ಮನುಷ್ಯರು ಶ್ರೀರಾಮಚಂದ್ರನು ಅವತಾರಮಾಡಿ ನಡೆಸಿರುವ ಕಥೆಯ ತತ್ವವನ್ನು ಅನುವರ್ತಿಸಿದಲ್ಲಿ ತಮ್ಮಲ್ಲಿರುವ ಅವಿದ್ಯಾಸ್ವರೂಪರಾದ ರಾಕ್ಷಸರನ್ನು ನಿಗ್ರಹಿಸಿಕೊಳ್ಳುವುದರಲ್ಲಿ ಸಂದೇಹವಿಲ್ಲ. ಶ್ರೀರಾಮಾವತಾರದ ತತ್ವವು ಪ್ರತಿಯೊಬ್ಬ ಮನುಷ್ಯನಲ್ಲಿದ್ದರೂ ಕೂಡ ಅದನ್ನು ಉದ್ಬೋಧನೆಮಾಡಿ ಸ್ವಾನುಭವಕ್ಕೆ ತರದೆ ಇರುವುದರಿಂದ ಅವಿದ್ಯಾಸ್ವರೂಪವಾದ ಪ್ರಪಂಚವ್ಯಾಪಾರದ ಬಂಧನದಲ್ಲಿರುವರು.

ಪ್ರಪಂಚವ್ಯಾಪಾರದಲ್ಲಿ ನಿರ್ವೇದವುಂಟಾಗಿ ಜುಗುಪ್ಸೆ ಬಂದು ಜನನ ಮರಣ ಪ್ರವಾಹರೂಪವಾದ ಸಂಸಾರದಿಂದ ಉತ್ತೀರ್ಣನಾಗಲು ಯಾವ ಮನುಷ್ಯನಲ್ಲಿ ನೈಜವಾದ ಇಚ್ಛೆಯು ಅಂಕುರಿಸುವುದೋ ಅಂತಹ ಮನುಷ್ಯನಲ್ಲಿ ಶ್ರೀರಾಮಾವತಾರದ ತತ್ವವು ಅಂಕುರಿಸಲು ಉಪಕ್ರಮವಾಗುವುದು. ಮೋಕ್ಷವನ್ನು ಪಡೆಯಲು ಇಚ್ಛೆಪಟ್ಟ ಮನುಷ್ಯನು ತನ್ನಲ್ಲಿರುವ ಅವಿದ್ಯೆಯನ್ನು ನಿಗ್ರಹಿಸಿದಲ್ಲಿ ಶ್ರೀರಾಮಾವತಾರಕಾರ್ಯ ಪೂರ್ಣವಾಗುವುದು.

ಆದುದರಿಂದ ಸೃಷ್ಟಿ ಸ್ಥಿತಿ ಲಯಗಳೆಂಬ ಮೂರರಲ್ಲಿ ಸೃಷ್ಟಿಸ್ಥಿತಿಗಳೆರಡರ ಬಾಧೆ ಎಂದರೆ ಅವಿದ್ಯೆಯ ಬಾಧೆಯನ್ನು ನಿವೃತ್ತಿಮಾಡಿಕೊಳ್ಳಲು ಲಯ (ಮೋಕ್ಷ) ದ ನಿಯಮವನ್ನು ಅಧಿಕಾರಿಯು ಅನುಸರಿಸಬೇಕೆಂಬುದರ ಪ್ರತಿಪಾದನೆಯೇ ಚತುರ್ಮುಖಬ್ರಹ್ಮನು ರಾವಣಾದಿ ರಾಕ್ಷಸರನ್ನು ನಿಗ್ರಹಿಸಬೇಕೆಂದು ಶ್ರೀಮಹಾವಿಷ್ಣುವಿನಲ್ಲಿ ಪ್ರಾರ್ಥನೆಮಾಡಿದ ಅರ್ಥವಾಗಿರುವುದು.

**ರಾ||** ಶ್ರೀಮನ್ನಾರಾಯಣಸ್ವರೂಪಿಯಾದ ಪರಮಾತ್ಮನು ತನ್ನ ಚತುರ್ವಿಧಾಂಶಗಳಿಂದ ಮನುಷ್ಯಾವತಾರಮಾಡಲು ಇಚ್ಛಿಸಿದನು. ಇದಕ್ಕೆ ಸರಿಯಾಗಿ ದಶರಥನು ಮಕ್ಕಳನ್ನು ಪಡೆಯಲು ಪುತ್ರಕಾಮೇಷ್ಟಿ ಯಾಗ ಮಾಡಿದನಂತರ ಪರಮಾತ್ಮನು ತನ್ನ ಅಂಶವನ್ನು ನಾಲ್ಕುಭಾಗವಾಗಿ ವಿಂಗಡಿಸಿಕೊಂಡು ಶ್ರೀರಾಮ ಲಕ್ಷ್ಮಣ ಭರತ ಶತ್ರುಘ್ನರಾಗಿ ಅವತರಿಸಿದನು. ಕೌಸಲ್ಯಾಗರ್ಭದಲ್ಲಿ ಅವತರಿಸಿದ ಪರಮಾತ್ಮನ ಅಂಶಕ್ಕೆ ಶ್ರೀರಾಮನೆಂದೂ, ಸುಮಿತ್ರಾಗರ್ಭದಲ್ಲಿ ಅವತರಿಸಿದ ಅಂಶಗಳಿಗೆ ಲಕ್ಷ್ಮಣ ಶತ್ರುಘ್ನರೆಂದೂ, ಕೈಕೇಯೀಗರ್ಭದಲ್ಲಿ ಅವತರಿಸಿದ ಅಂಶಕ್ಕೆ ಭರತನೆಂದೂ ನಾಮಧೇಯಗಳಾದುವು.

**ತತ್ವ||** ಮೇಲಿನ ಕಥೆಯ ಭಾಗದಲ್ಲಿನ ದಶರಥನ ತತ್ವವೇನೆಂದರೆ—ದಶರಥನು ಕಶ್ಯಪಋಷಿಯ ಅವತಾರ. ಕಶ್ಯಪಋಷಿಯು ಸೃಷ್ಟಿಕ್ರಮದಲ್ಲಿ ಮುಖ್ಯಪಾತ್ರನಾದುದರಿಂದ ದಶರಥನ ತತ್ವವು ಸೃಷ್ಟಿಕ್ರಮದ ತತ್ವವಾಗಿರುವುದು. ದಶರಥನೆಂದರೆ “ದಶಸು ದಿಕ್ಷು

ಅಪ್ರತಿಹತೋ ರಥೋ ಯಸ್ಯ ಸಃ ದಶರಥಃ" ಎಂಬ ವ್ಯುತ್ಪತ್ತಿಯಂತೆ ಹತ್ತು ಇಂದ್ರಿಯ ಗೋಳಕಗಳ ಸೃಷ್ಟಿಯು ಸಂಪೂರ್ಣಸ್ಥಿತಿಗೆ ಬಂದು, ಜೀವನು ತಡೆಯಿಲ್ಲದೆ ಪ್ರಸರಣೆಯಾಗಲು ಸೌಕರ್ಯವಾಗುವ ದೇಹದ ತತ್ವವಾಗಿರುವುದು. ಅಂದರೆ ದಶರಥಗಳೇ ದಶೇಂದ್ರಿಯ ಗೋಳಕಗಳು. ದಶೇಂದ್ರಿಯಗೋಳಕಗಳ ಸೃಷ್ಟಿಯ ತತ್ವದವನೇ ದಶರಥನು.

ಶ್ರೀಮಹಾವಿಷ್ಣುವು ಮನುಷ್ಯಾವತಾರಮಾಡಲು ಇಚ್ಛೆಪಟ್ಟುದೂ ದಶರಥನು ಮಕ್ಕಳನ್ನು ಪಡೆಯಲು ಇಚ್ಛಿಸಿ ಪುತ್ರಕಾಮೇಷ್ಟಿಯಾಗ ಮಾಡಿದುದೂ ಏಕಕಾಲದಲ್ಲಿ ಒದಗಿದುದರಿಂದ, ದಶೇಂದ್ರಿಯ ಗೋಳಕಗಳುಳ್ಳ ಮನುಷ್ಯದೇಹವನ್ನು ಸೃಷ್ಟಿಸಿಕೊಂಡು ಅದರಲ್ಲಿ ಅಭಿವ್ಯಕ್ತನಾಗಬೇಕೆಂಬ ಪರಮಾತ್ಮನ ಸೃಷ್ಟಿಸಂಕಲ್ಪದ ತತ್ವವೇ ದಶರಥನ ತತ್ವವು. "ಜನ್ತೂನಾಂ ನರಜನ್ಮ ದುರ್ಲಭಂ" ಎಂಬ ಶ್ರೀಶಂಕರ ಭಗವತ್ಪಾದರವರ ವಾಕ್ಯದಂತೆ ಮನುಷ್ಯನ ಸೃಷ್ಟಿಯು ಅತಿ ಪ್ರಶಸ್ತವಾಗಿರುವುದು. ಅಂದರೆ ಮನುಷ್ಯನನ್ನು ಸೃಷ್ಟಿಸುವುದಕ್ಕೆ ಸಂಕಲ್ಪವೆಂದರೆ ಸಕಲಸೃಷ್ಟಿಗೂ ಸಂಕಲ್ಪವೆಂಬ ತತ್ವವಾಗಿರುವುದು.

ಪರಮಾತ್ಮನು ಮನುಷ್ಯಾವತಾರಮಾಡುವುದೆಂದರೆ ಮನುಷ್ಯದೇಹದಲ್ಲಿ ಅಭಿವ್ಯಕ್ತನಾಗುವುದಾಗಿರುತ್ತದೆ. ಪರಮಾತ್ಮನು ಮನುಷ್ಯದೇಹದಲ್ಲಿ ಅಭಿವ್ಯಕ್ತನಾಗಬೇಕಾದರೆ ತನ್ನಲ್ಲಿ ಆವಿರ್ಭವಿಸಿದ ಮೂಲಪ್ರಕೃತಿಯಲ್ಲಿ ಪ್ರಕಾಶಮಾನನಾಗಬೇಕು. ಈ ಮೂಲ ಪ್ರಕೃತಿಯೆ ತ್ರಿಗುಣಾತ್ಮಕ ಅಥವಾ ಇಚ್ಛಾ, ಜ್ಞಾನ, ಕ್ರಿಯಾ ಶಕ್ತಿಗಳಾದ ಮೂರುಶಕ್ತಿಗಳ ಸ್ವರೂಪವಾಗಿರುತ್ತದೆ. ಇದರಲ್ಲಿ ಜ್ಞಾನಶಕ್ತಿಯನ್ನು ಕೌಸಲ್ಯಾದೇವಿಗೂ, ಕ್ರಿಯಾ ಶಕ್ತಿಯನ್ನು ಸುಮಿತ್ರಾದೇವಿಗೂ, ಇಚ್ಛಾಶಕ್ತಿಯನ್ನು ಕೈಕೇಯಿದೇವಿಗೂ, ಅನ್ವಯ ಮಾಡಿರುತ್ತದೆ. ಈ ಪ್ರಕೃತಿಯ ಶುದ್ಧಸತ್ವಾಂಶದಿಂದ ಅಂತಃಕರಣವು ಸೃಷ್ಟಿಯಾಯಿತು. ಈ ಶುದ್ಧಸತ್ವಾಂಶವಾದ ಅಂತಃಕರಣದಲ್ಲಿ ಪರಬ್ರಹ್ಮವು ಪ್ರತಿಫಲಿಸುವುದೇ ಪರಮಾತ್ಮನು ಕೌಸಲ್ಯಾ, ಸುಮಿತ್ರಾ, ಕೈಕೇಯಿ ಗರ್ಭಗಳಲ್ಲಿ ಅವತರಿಸುವ ತತ್ವವಾಗಿರುತ್ತದೆ.

ಹೇಗೆಂದರೆ—ಹೊರಗೆ ಕಾಣುವುದು ನಮ್ಮ ಸ್ಥೂಲದೇಹವೆನಿಸಿಕೊಳ್ಳುವುದು. ಈ ಸ್ಥೂಲದೇಹದೊಳಗೆ ಕಾರ್ಯಸಾಧನೋಪಕರಣವಾಗಿ ಅಂತಃಕರಣವಿರುವುದು. ಇದು ಶಿರಸ್ಸಿನಲ್ಲಿ ಶಕ್ತಿರೂಪದಲ್ಲಿರುತ್ತದೆ. ಅಂತಃಕರಣವು ಒಂದೇ ಆದರೂ ಕಾರ್ಯಭೇದದಿಂದ, ಬುದ್ಧಿ, ಮನಸ್ಸು, ಅಹಂಕಾರ, ಚಿತ್ತಗಳೆಂದು ನಾಲ್ಕುವಿಧಗಳಾಗಿರುತ್ತದೆ. ಈ ನಾಲ್ಕು ವಿಧಗಳ ಪ್ರಕಾಶಕರೇ ಕ್ರಮವಾಗಿ ಶ್ರೀರಾಮ, ಲಕ್ಷ್ಮಣ, ಭರತ, ಶತ್ರುಘ್ನರು. ಈ ಅಂತಃಕರಣದಲ್ಲಿ ಬುದ್ಧಿಯಸ್ಥಾನವೇ ಶ್ರೇಷ್ಠವಾಗಿರುವುದರಿಂದ ಶ್ರೀರಾಮನು ಜ್ಯೇಷ್ಠನಾಗಿ ಬುದ್ಧಿಚೈತನ್ಯನಾಗಿ ನಿಂತುಕೊಂಡನು. ಜ್ಞಾನಶಕ್ತಿಸ್ವರೂಪಿಣಿಯಾದ ಕೌಸಲ್ಯಾದೇವಿಯಲ್ಲಿ ಶ್ರೀರಾಮನು ಜನಿಸಿದುದೇ ಬುದ್ಧಿಯಲ್ಲಿ ಶ್ರೀಮನ್ನಾರಾಯಣನಾದ ಪರಮಾತ್ಮನು ಪ್ರತಿಫಲಿಸುವುದರ ತತ್ವವು. ಇಂತಹ ಪರಮಾತ್ಮನ ಪ್ರತಿಬಿಂಬವು (ಚಿದಾಭಾಸವು) ಮನಸ್ಸು,

ಅಹಂಕಾರ, ಚಿತ್ತಗಳಲ್ಲಿ ಬಿದ್ದ ಪ್ರತಿಫಲನಕ್ಕಿಂತ ಅತ್ಯಂತ ಪ್ರಕಾಶಮಾನವಾಗಿರುವುದರಿಂದ ಬುದ್ಧಿಯಲ್ಲಿ ಪ್ರತಿಫಲಿತಚೈತನ್ಯನಾದ ಶ್ರೀರಾಮನು "ವಿಷ್ಣೋರರ್ಧಂ ಮಹಾಭಾಗಂ" ಎಂದು ವಾಲ್ಮೀಕರು ಹೇಳಿರುವಂತೆ ಜ್ಯೇಷ್ಠನೂ, ಶ್ರೇಷ್ಠನೂ ಆಗಿರುವನು.

ಯಜ್ಞೇಶ್ವರನಿಂದ ಕೊಡಲ್ಪಟ್ಟ ಪಾಯಸದ ಅರ್ಧಭಾಗವನ್ನು ಕೌಸಲ್ಯಾದೇವಿಯು ಸ್ವೀಕರಿಸಿದ್ದು ಕೂಡ ಪರಮಾತ್ಮನ ಪ್ರಧಾನಾಂಶವು ಬುದ್ಧಿಯಲ್ಲಿರುವುದೆಂಬ ತತ್ವನಾಗಿ ರುವುದು. ಆದುದರಿಂದ ಅಂತಃಕರಣದಲ್ಲಿ ಬುದ್ಧಿಯ ಸ್ಥಾನವೇ ಶ್ರೇಷ್ಠ. ಇದಕ್ಕೆ ಅನೇಕ ಶ್ರುತಿಪ್ರಮಾಣಗಳಿವೆ. ಅಲ್ಲದೆ ಗಾಯತ್ರೀಮೂಲಮಂತ್ರದಲ್ಲಿಯೂ "ಧಿಯೋಯೋನಃ ಪ್ರಚೋದಯಾತ್" ಎಂಬುದಾಗಿ ಇರುವುದರಿಂದ ಜ್ಞಾನಾತ್ಮಕವಾದ ಬುದ್ಧಿಯ ಸ್ಥಾನವು ಇತರ ಸ್ಥಾನಗಳಿಗಿಂತ ಶ್ರೇಷ್ಠವಾದ ಸ್ಥಾನವಾಯಿತು. ಇದೇ ತಾತ್ಪರ್ಯಕ್ಕೆ ಶ್ರೀವಿದ್ಯಾ ರಣ್ಯರವರು ಅಂತರ್ಯಾಮಿಬ್ರಾಹ್ಮಣ ಪ್ರತಿಪಾದಕವಾದ ವಾಕ್ಯವನ್ನೇ ಪಂಚದಶಿ ಚಿತ್ರ. ದೀಪಿಕೆ ೧೬೪ನೇ ಶ್ಲೋಕದಲ್ಲಿ

ಬುದ್ಧೌ ತಿಷ್ಠನ್ನಾಂತರೋಽಸ್ಯಾ ಧಿಯಾನೇಕ್ಷ್ಯಶ್ಚ ಧೀವಪುಃ |
ಧಿಯಮಂತರ್ಯಮಯತೀ ತ್ಯೇವಂವೇದೇನ ಘೋಷಿತಮ್ ||

ತಾ|| ಈಶ್ವರನು ಬುದ್ಧಿಯಲ್ಲಿರುವವನಾಗಿ ಈ ಬುದ್ಧಿಗಿಂತಲೂ ಒಳಗಿರುವವನಾಗಿ ಬುದ್ಧಿಯೇ ದೇಹವುಳ್ಳವನಾಗಿ, ಬುದ್ಧಿಯಿಂದ ನೋಡಲ್ಪಡದವನಾಗಿ ಬುದ್ಧಿಯನ್ನು ಒಳಗೆ ಪ್ರೇರಿಸುತಲಿರುವನೆಂದು ವೇದವು ಮೊರೆಯಿಡುತ್ತಿದೆ ಎಂಬುದಾಗಿ ಹೇಳಿರುವರು.

ಲಕ್ಷ್ಮಣನು ಕ್ರಿಯಾಶಕ್ತಿಸ್ವರೂಪಳಾದ ಸುಮಿತ್ರಾದೇವಿಯಲ್ಲಿ ಅವತರಿಸಿದುದರ ತತ್ವವೇ ಶ್ರೀಮನ್ನಾರಾಯಣನಾದ ಪರಮಾತ್ಮನು ಮನಸ್ಸಿನಲ್ಲಿ ಪ್ರತಿಬಿಂಬಿಸಿದುದರ ತತ್ವ ವಾಗಿರುವುದು. ಮನಸ್ಸು ಕ್ರಿಯಾತ್ಮಕವಾದುದರಿಂದ "ಸಾಕ್ಷಾದ್ವಿಷ್ಣೋಶ್ಚತುರ್ಭಾಗಃ ಸರ್ವೈಸ್ಸಮುದಿತೋಗುಣೈಃ" ಎಂಬುದಾಗಿ ವಾಲ್ಮೀಕರು ಹೇಳಿರುವಂತೆ ಮತ್ತು ಪಾಯ ಸದ ವಿಭಾಗದಂತೆ ಲಕ್ಷ್ಮಣನು ಶ್ರೇಷ್ಠತ್ವದಲ್ಲಿ ಶ್ರೀರಾಮನಿಗೆ ಎರಡನೆಯವನಾದನು. ಲಕ್ಷ್ಮಣ ಎಂಬ ಪದವು "ಮನ ಜ್ಞಾನೇ ಮನು ಅವಬೋಧನೇ" ಎಂಬ ಧಾತ್ವರ್ಥ ವನ್ನು ಅನುಸರಿಸಿರುವುದರಿಂದಲೂ, ಲಕ್ಷ್ಮಣ ಎಂಬ ಮಾತಿಗೆ ಕ್ರಿಯಾತ್ಮಕವನ್ನು ಸೂಚಿಸುವ ಒಳ್ಳೆಯ ಚಿಹ್ನೆ ಅಥವಾ ಗುರುತುಳ್ಳವನೆಂದು ಅರ್ಥವಾಗುವುದರಿಂದಲೂ ಲಕ್ಷ್ಮಣನನ್ನು ಮನಸ್ಸಿನ ತತ್ವಕ್ಕೆ ಅನ್ವಯಮಾಡಿರುತ್ತದೆ. ಈ ಶಬ್ದಾರ್ಥಕ್ಕೆ ಅನುಸರಿಸುವಂತೆ ಮನ ಸ್ಸ್ವರೂಪಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿಯಲ್ಲಿ "ಮನಸ್ತುಸಂಕಲ್ಪ ವಿಕಲ್ಪನಾದಿಭಿಃ" ಎಂಬುದಾಗಿ ಹೇಳಿರುವರು. ಸಂಕಲ್ಪವೆಂದರೆ "ಕಲ್ಪಯತಿ ವಾಂಛಿತ ಮಿತಿಕಲಃ" ಚನಾಗಿ ಬಯಸುವಿಕೆ ಅಥವಾ ಕೋರಿಕೆ. ಕೋರಿಕೆಗಳ ಸ್ವರೂಪವ ಕಾರ್ಯಾ

ನುಭವಕ್ಕಾಗಿರುವುದು. ಮನಸ್ಸು ಕೋರಿಕೆಯುಳ್ಳದ್ದಾಗಿ ಕಾರ್ಯಾನುಭವಕ್ಕೆ ಸುಲಭವಾಗಿ ಇಂದ್ರಿಯಾಧೀನವಾಗುವುದರಿಂದ ವಿಕಲ್ಪಸ್ವರೂಪವೆನಿಸುವುದು. ಅಂದರೆ ಕ್ರಿಯಾತ್ಮಕ ವನ್ನು ಸೂಚಿಸುತ್ತಾದುದರಿಂದ ಲಕ್ಷ್ಮಣನನ್ನು ಮನಸ್ಸಿನ ಚೈತನ್ಯಕ್ಕೆ ಅನ್ವಯಿಸಿರುವುದು.

ಭರತನು ಇಚ್ಛಾಶಕ್ತಿಸ್ವರೂಪಳಾದ ಕೈಕೇಯೀದೇವಿಯಲ್ಲಿ ಅವತರಿಸಿದನು. ಅಂದರೆ ಅಂತಃಕರಣದಲ್ಲಿನ ಅಹಂಕಾರದಲ್ಲಿ ಶ್ರೀಮನ್ನಾರಾಯಣನಾದ ಪರಮಾತ್ಮನ ಪ್ರತಿಬಿಂಬವೇ ಭರತನ ತತ್ತ್ವವು. ಭರತ ಎಂಬ ಪದಕ್ಕೆ " ಬಿಭರ್ತಿ ಸ್ವಾಂಗಂ ಇತಿ ಭರತಃ " ಸ್ವಾಂಗಂ ತನ್ನ ದೇಹವನ್ನು ಬಿಭರ್ತಿ ಹೊತ್ತುಕೊಂಡು ಇರತಕ್ಕವನು. ನಮ್ಮ ದೇಹವನ್ನು ಹೊತ್ತು ಕೊಂಡು ಇರುವುದೆಂದರೆ ದೇಹವನ್ನು ಕಾಪಾಡುವುದಕ್ಕೆ ಕಾರಣವಾದುದು " ನಾನು " ಎಂಬ ಅಭಿಮಾನ ಅಥವಾ ಅಹಂಕಾರಸ್ವರೂಪವು. ಭರತನೆಂಬ ಪದಕ್ಕೆ ಭಾರವನ್ನು ವಹಿಸಿಕೊಂಡು ಪೋಷಿಸುವವನೆಂದರೆ ಪ್ರತಿಯೊಂದು ಕಾರ್ಯವನ್ನೂ ತಾನು ಮಾಡಿದೆನೆಂಬ ಭಾರವನ್ನು ಹೊತ್ತುಕೊಳ್ಳುವುದರ ಕಾರ್ಯವೇ ಅಹಂಕಾರವಾಗಿರುವುದು. ಇದೇ ಅರ್ಥದ ಸೂಚನೆಯನ್ನು ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿಯಲ್ಲಿ " ಅತ್ರಾಭಿ ಮಾನಾದಹಮಿತ್ಯಹಂಕೃತಿಃ " ಅಂದರೆ ದೇಹದಲ್ಲಿ ಅಭಿಮಾನಮಾಡೋಣದರಿಂದ ಅಹಂ ಕಾರವೆಂಬುದು ಹುಟ್ಟಿದೆಯೆಂಬದಾಗಿ ಹೇಳಿರುತ್ತಾರೆ. ಈರೀತಿಯಾಗಿ ಭಾರವನ್ನು ವಹಿಸಿ ಕೊಳ್ಳುವುದು ಅಭಿಮಾನವೆಂದರೆ ಅಹಂಕಾರವಾದುದರಿಂದ ಭರತನನ್ನು ಅಹಂಕಾರದ ಚೈತನ್ಯಕ್ಕೆ ಅನ್ವಯಿಸಿರುತ್ತೆ.

ಅಂತಃಕರಣದಲ್ಲಿನ ಬುದ್ಧಿ ಮನಸ್ಸು ಅಹಂಕಾರಸ್ಥಾನಗಳಿಗೆ ಅನ್ವಯಮಾಡಿದ ನಂತರ ಉಳಿದಿರುವ ಚಿತ್ತದ ಸ್ಥಾನಕ್ಕೆ ಶತ್ರುಘ್ನನನ್ನು ಅನ್ವಯಮಾಡಿದೆ. ಅಂದರೆ ಚಿತ್ತದಲ್ಲಿ ಬಿದ್ದ ಶ್ರೀಮನ್ನಾರಾಯಣನಾದ ಪರಮಾತ್ಮನ ಪ್ರತಿಫಲಿತಚೈತನ್ಯವೇ ಶತೃಘ್ನನು. ಚಿತ್ತದ ಕಾರ್ಯವೇನೆಂದರೆ " ಸ್ವಾರ್ಥಾನುಸಂಧಾನಗುಣೇನಚಿತ್ತಂ " ಎಂಬುದಾಗಿ ಶ್ರೀಶಂಕರ ಭಗವತ್ಪಾದರವರು ವಿವೇಕಚೂಡಾಮಣಿಯಲ್ಲಿ ಹೇಳಿರುತ್ತಾರೆ. ಅಂದರೆ ತನ್ನ ಪ್ರಯೋ ಜನವನ್ನು ಪಡೆಯುವ ಪ್ರಯತ್ನದ ಸ್ವಭಾವವುಳ್ಳದ್ದೇ ಚಿತ್ತವು. ಸ್ವಪ್ರಯೋಜನವೆಂದರೆ ತನಗಾಗಬೇಕಾದ ಉಪಯೋಗ. ಇದೇ ಚಿತ್ತದ ಕಾರ್ಯವಾಗಿರುತ್ತದೆ. ಶತ್ರುಘ್ನನೆಂದರೆ ಶತ್ರುಗಳನ್ನು ಸಂಹರಿಸತಕ್ಕವನೆಂದು ಅರ್ಥವಾಗುತ್ತದೆ. ಸ್ವಾರ್ಥವಿರೋಧಿಯಾದ ಶತ್ರು ವನ್ನು ಗೆಲ್ಲುವವನಾದುದರಿಂದ ಶತ್ರುಘ್ನನನ್ನು ಚಿತ್ತದ ಚೈತನ್ಯಕ್ಕೆ ಅನ್ವಯಿಸಿದೆ. ತನ್ನ ಸ್ವಾರ್ಥಕ್ಕಾಗಿ ಜಗಜ್ಜನ್ಯ ಪದಾರ್ಥಗಳೆಲ್ಲವೂ ಪ್ರಿಯವಹುದೆಂಬುದಕ್ಕೆ " ಆತ್ಮನಸ್ತು ಕಾಮಾಯಸರ್ವಂಪ್ರಿಯಂಭವತಿ " ಮುಂತಾದ ಅನೇಕ ಶ್ರುತಿಪ್ರಮಾಣಗಳಿವೆ. ಪ್ರತಿ ಯೊಬ್ಬರಲ್ಲಿರುವ ಸ್ವಾರ್ಥತೆಯು ಅವರವರಲ್ಲಿನ ಆತ್ಮಪ್ರಿಯತೆಯನ್ನು ಸೂಚಿಸುವುದು. ಆದುದರಿಂದ ಶತ್ರುಘ್ನನನ್ನು ಚಿತ್ತದ ಚೈತನ್ಯಕ್ಕೆ ಅನ್ವಯಮಾಡಿರುವುದು.

ಮುಖ್ಯವಾಗಿ ಅಂತಃಕರಣವಲ್ಲಿ ಪರಮಾತ್ಮನ ಪ್ರಕಾಶವು ಪ್ರತಿಫಲಿಸುವುದೇ ನಮ್ಮಲ್ಲಿ ಶ್ರೀರಾಮಾದಿಗಳ ಜನನದ ತತ್ತ್ವವಾಗಿರುತ್ತದೆ. ಈ ಪ್ರತಿಫಲನದ ಚೈತನ್ಯವೇ ಚಿದಾಭಾಸ ಚೈತನ್ಯವೆಂದು ಕರೆಯಲ್ಪಡುವುದು. ಹೇಗೆಂದರೆ ಎಲ್ಲೆಲ್ಲಿಯೂ ವ್ಯಾಪಿಸಿರುವ ಬೆಳಕೇ ಶ್ರೀಮನ್ನಾರಾಯಣನಾದ ಪರಮಾತ್ಮನ ತತ್ತ್ವವೆಂದು ಭಾವಿಸೋಣ. ಈ ಬೆಳಕಿನಲ್ಲಿ ರಸ ಕನ್ನಡಿಯೊಂದನ್ನು ಹಿಡಿದಲ್ಲಿ ಪ್ರತಿಫಲನದ ಬೆಳಕು ಬೀಳುತ್ತದೆ. ಪ್ರತಿಫಲನದ ಬೆಳಕು ಬಿಂಬದ ಬೆಳಕಿಗಿಂತ ವಿಲಕ್ಷಣವಾಗಿದ್ದರೂ ಬಿಂಬದ ಬೆಳಕೇ ಪ್ರತಿಬಿಂಬವಾಗುವುದು. ಈ ಪ್ರತಿಬಿಂಬವಾಗುವ ತತ್ತ್ವವೇ ನಮ್ಮಲ್ಲಿ ಶ್ರೀರಾಮಾದಿಗಳ ಜನನದ ತತ್ತ್ವವಾಗಿರುವುದು. ಹೇಗೆಂದರೆ ಸರ್ವತ್ರ ಪ್ರಕಾಶವಾಗಿರುವ ಸೂರ್ಯನ ಬೆಳಕಿನಲ್ಲಿ ರಸಕನ್ನಡಿಯನ್ನು ಹಿಡಿದರೆ ಪ್ರತಿಫಲನದ ಬೆಳಕುಂಟಾಗುವುದಷ್ಟೆ! ಇದರಂತೆ ಅಂತಃಕರಣವೆ ರಸಕನ್ನಡಿ. ಸರ್ವ ವ್ಯಾಪಿಯಾದ ಸ್ವಯಂಪ್ರಕಾಶನಾದ ಶ್ರೀಮನ್ಮಹಾವಿಷ್ಣುವಾದ ಪರಮಾತ್ಮನೇ ಸರ್ವತ್ರ ವಿರುವ ಬೆಳಕಿನ ತತ್ತ್ವ. ರಸಕನ್ನಡಿಯ ಪ್ರತಿಫಲನದ ಬೆಳಕೆ ಚಿದಾಭಾಸವಾಗಿರುವುದು.

ಶ್ರೀರಾಮ, ಲಕ್ಷ್ಮಣ, ಭರತ, ಶತ್ರುಘ್ನರೆಂದರೆ—ಅಂತಃಕರಣಚತುಷ್ಟಯಪ್ರಕಾಶಕ ಲಕ್ಷಣವನ್ನು ಯಜ್ಞೇಶ್ವರನಿಂದ ಕೊಡಲ್ಪಟ್ಟ ಪಾಯಸದ ವಿಭಾಗದೊಡನೆ ವಿವರಿಸಿತಷ್ಟೆ! ಯಜ್ಞೇಶ್ವರನಿಂದ ಬಂದ ಪಾಯಸದಲ್ಲಿ ಅರ್ಧಭಾಗವು ಕೌಸಲ್ಯಾದೇವಿಗೂ ಉಳಿದದ್ದರಲ್ಲಿ ಅರ್ಧಭಾಗವೆಂದರೆ, ಕಾಲುಭಾಗವು ಸುಮಿತ್ರಾದೇವಿಗೂ ಕೊಡಲ್ಪಟ್ಟಿತು. ಉಳಿದ ಕಾಲು ಭಾಗದ ಅರ್ಧಭಾಗವೆಂದರೆ ಎಂಟನೆಯ ಒಂದುಭಾಗವು ಕೈಕೇಯೀದೇವಿಗೆ ಕೊಡಲ್ಪ ಟ್ಟಿತು. ಮೂರುಜನಕ್ಕೂ ಕೊಟ್ಟು ಶೇಷವಾಗಿದ್ದಂತ ಎಂಟನೇ ಒಂದುಭಾಗವು ಸುಮಿತ್ರಾ ದೇವಿಗೆ ಪುನಃ ಕೊಡಲ್ಪಟ್ಟುದರ ಮುಖ್ಯತತ್ತ್ವವೇನೆಂದರೆ ಪರಮಾತ್ಮಪ್ರತಿಫಲನಚೈತನ್ಯದ ಪ್ರಧಾನಾಂಶವು ಬುದ್ಧಿಯಲ್ಲಿ ಅತ್ಯಧಿಕವಾಗಿಯೂ ಮನಸ್ಸಿನಲ್ಲಿ ಬುದ್ಧಿಗಿಂತ ಕಡಿಮೆ ಯಾಗಿಯೂ ಅಹಂಕಾರ ಚಿತ್ತಗಳಲ್ಲಿ ಮನಸ್ಸಿಗಿಂತಲೂ ಕಡಿಮೆಯಾಗಿಯೂ ಇರುವುದೆಂಬ ತಾತ್ಪರ್ಯ.

ಆದುದರಿಂದ ಅಹಂಕಾರ ಚಿತ್ತ ಮನಸ್ಸುಗಳ ಸ್ಥಾನಕ್ಕಿಂತಲೂ ಬುದ್ಧಿಯ ಸ್ಥಾನವು ಶ್ರೇಷ್ಠವಾದುದು. ಅಂದರೆ ಬಿಳುಪು ಕೆಂಪು ಮುಂತಾದ ನಾಲ್ಕು ಬಣ್ಣಗಳುಳ್ಳ ಒಂದೇ ರಸ ಕನ್ನಡಿಯಲ್ಲುಂಟಾಗುವ ಪ್ರತಿಫಲಿತದ ತಾರತಮ್ಯದಂತೆ ಪ್ರತಿಬಿಂಬದ ಬೆಳಕುಂಟಾಗು ತ್ತದೆ. ಅಲ್ಲದೆ ಬುದ್ಧಿಯು ಸತ್ತ್ವಾಂಶದಲ್ಲಿಯೂ ಶುದ್ಧಸತ್ತ್ವಾಂಶ. ಮನಸ್ಸು ಚಿತ್ತಗಳು ಸತ್ತ್ವಾಂಶದಲ್ಲಿರತಕ್ಕ ರಜೋಂಶ. ಅಹಂಕಾರವು ಸತ್ತ್ವಾಂಶದಲ್ಲಿರುವ ತಮೋಂಶವಾಗಿ ರುವದರಿಂದ, ಸತ್ತ್ವಾಂಶದಲ್ಲಿಯೂ ಶುದ್ಧಸತ್ತ್ವಾಂಶನಾದ ಬುದ್ಧಿಯ ಸ್ಥಾನವು ಶ್ರೇಷ್ಠವಾದು ದರಿಂದ ಮಹಾವಿಷ್ಣುವಾದ ಪರಮಾತ್ಮನ ಪ್ರಭಾವದ ಅಧಿಕಾಂಶವು ಬುದ್ಧಿಯಲ್ಲಿರುವುದು. ಹೀಗೆ ಮನಸ್ಸು ಅಹಂಕಾರ ಚಿತ್ತಗಳಿಗೆ ಬುದ್ಧಿಯು ಯಜಮಾನನಾಗಿರುವುದರಿಂದ ಶ್ರೀರಾಮಚಂದ್ರನೇ ಜ್ಯೇಷ್ಠನಾಗಿರುವನು.

ಈ ಪ್ರಕರಣದ ಮುಖ್ಯತಾತ್ಪರ್ಯವೇನೆಂದರೆ ಮಹಾವಿಷ್ಣುವು ಕೌಸಲ್ಯಾದಿಗಳ ಗರ್ಭದಲ್ಲಿ ಅವತರಿಸಿದ ಶ್ರೀರಾಮ ಲಕ್ಷ್ಮಣರೆಂಬ ನಾಮಧೇಯ ಪಡೆದಂತೆ, ನಮ್ಮ ಅಂತಃಕರಣದಲ್ಲಿ ಮಹಾವಿಷ್ಣುವಾದ ಪರಮಾತ್ಮನು ಪ್ರತಿಫಲಿಸಿ ಚಿದಾಭಾಸಚೈತನ್ಯನೆನಿಸಿಕೊಂಡಿರುವನೆಂಬುದು.

ಅಂದರೆ ನಮ್ಮ ಶಿರಸ್ಸಿನಲ್ಲಿ ಸೂಕ್ಷ್ಮಶರೀರವೆನಿಸುವ ಅಂತಕರಣವೆಂಬುದೊಂದು ಇರುವುದೆಂದೂ ಈ ಅಂತಃಕರಣದಲ್ಲಿ ಪರಮಾತ್ಮನು ಪ್ರತಿಫಲಿಸಿರುವನೆಂದೂ ಈ ಪ್ರಕರಣವು ಸೂಚಿಸುವುದು. ಹೀಗೆ ಉಂಟಾದ ಪ್ರತಿಫಲನದ ಚೈತನ್ಯಕ್ಕೆ ವಿಶೇಷಣವೆಂದರೆ ಉಪಾಧಿಬಂದಲ್ಲದೆ ಪರಮಾತ್ಮನಿಗೂ ಪ್ರತಿಫಲನ (ಚಿದಾಭಾಸ) ಚೈತನ್ಯಕ್ಕೂ ಭೇದಕಲ್ಪನೆ ಮಾಡಲು ಅವಕಾಶವಿಲ್ಲ. ಕಾರಣವೇನೆಂದರೆ ಶ್ರೀಮದ್ರಾಮಾಯಣದಲ್ಲಿ ಶ್ರೀಮನ್ನಾರಾಯಣನೇ ಶ್ರೀರಾಮನೆನಿಸಿರುವಂತೆ ತತ್ವದಲ್ಲಿ ಪರಮಾತ್ಮನೇ ಪ್ರತಿಬಿಂಬಚೈತನ್ಯನೆನಿಸಿಕೊಳ್ಳುವನು. ಶ್ರೀರಾಮಚಂದ್ರನಿಗೆ ಸೀತೆ ಎಂಬ ವಿಶೇಷಣವೆಂದರೆ ಮಾಯೋಪಾಧಿಯು ಬಂದು ಸೀತಾರಾಮನೆನಿಸಿಕೊಳ್ಳುವನು. ಶ್ರೀರಾಮಚಂದ್ರನಿಗೆ ವನವಾಸದಿಂದ ರಾವಣನ ತೊಂದರೆಬರುವುದಷ್ಟೆ. ಇದರಂತೆ ಪ್ರತಿಬಿಂಬಚೈತನ್ಯಕ್ಕೆ ಅವಿದ್ಯಾ ಉಪಾಧಿಯೂ ಬರುವುದು.

ಆದುದರಿಂದ ಜನಗಳ ಉದ್ಧಾರಕ್ಕಾಗಿ ಶ್ರೀರಾಮಚಂದ್ರನು ತನ್ನ ಲೀಲಾವತಾರದಲ್ಲಿ ಮಾಯೋಪಾಧಿಯು ಬರುವ ಈಶ್ವರನ ಮಹಿಮೆಯು ಮತ್ತು ನಮ್ಮಲ್ಲಿರುವ ಈಶ್ವರ ಸೋಪಾನದ ತತ್ವವನ್ನು ಪ್ರಥಮದಲ್ಲಿ ತೋರಿಸಿ ಅನಂತರ ಅವಿದ್ಯೋಪಾಧಿಯ ಕ್ರಮವನ್ನು ತೋರಿಸಿ ತದನಂತರ ಈ ಉಪಾಧಿಗಳನ್ನು ಪರಿಹರಿಸಿಕೊಳ್ಳುವ ಕ್ರಮವನ್ನು ತೋರಿಸಿರುವನು. ಶ್ರೀರಾಮಚರಿತ್ರೆಯ ತತ್ವದಲ್ಲಿ ಈಶ್ವರನ ಮಹಿಮೆಯನ್ನು ಶ್ರೀರಾಮಚಂದ್ರನು ವಿಶ್ವಾಮಿತ್ರರೊಡನೆ ನಡೆಸಿದಕಾರ್ಯಗಳ ತತ್ವಗಳು ಸೂಚಿಸುವುವು. ಇಂತಹ ಈಶ್ವರನ ಮಹಿಮೆಯ ವಿಚಾರವನ್ನು ತಿಳಿದುಕೊಳ್ಳಲು ಮುಂದಿನ ರಾಮಾಯಣದ ಕಥೆಯನ್ನು ಬೆಳೆಸೋಣ.

## ೨ನೆಯ ಪ್ರಕರಣ.

**ವಸಿಷ್ಠ ವಿಶ್ವಾಮಿತ್ರರ ವಿಚಾರ.**  **ಪರಮಾತ್ಮನ ಮತ್ತು ಈಶ್ವರನ ಮಹಿಮೆಯ ಪ್ರತಿಪಾದನೆಯ ವಿಚಾರ.**

**ರಾ||** ವಿಶ್ವಾಮಿತ್ರರು ಯಜ್ಞಸಂರಕ್ಷಣಾರ್ಥವಾಗಿ ಶ್ರೀರಾಮನನ್ನು ಕಳುಹಿಸಬೇಕೆಂದು ದಶರಥನನ್ನು ಕೇಳಲು ದಶರಥನು ವಸಿಷ್ಠರ ಅನುಮತಿಯಂತೆ ಕಳುಹಿಸಿಕೊಟ್ಟನು.

**ತತ್ತ್ವ॥** ಈ ಕಥಾಭಾಗದಲ್ಲಿರುವ ವಸಿಷ್ಠ ವಿಶ್ವಾಮಿತ್ರರ ತತ್ವವೇನೆಂಬುದನ್ನು ತಿಳಿದು ಕೊಳ್ಳೋಣ. ವಸಿಷ್ಠರ ತತ್ವವೇನೆಂದರೆ—ಸರ್ವತ್ರವ್ಯಾಪಿಸಿರುವ ಬೆಳಕು ರಸಕನ್ನಡಿ ಯಲ್ಲೂ ಇದ್ದುಕೊಂಡು ರಸಕನ್ನಡಿಯಿಂದ ಪ್ರತಿಫಲಿತವಾಗುವುದಷ್ಟೆ. ಇದರಂತೆ ಸರ್ವತ್ರ ವ್ಯಾಪಿಸಿರುವ ಸ್ವಯಂಪ್ರಕಾಶನಾದ ಪರಮಾತ್ಮನು ನಮ್ಮ ಅಂತಃಕರಣದಲ್ಲೂ ಇದ್ದುಕೊಂಡು ಪ್ರತಿಫಲಿತನಾಗಿ ಚಿದಾಭಾಸ ಅಥವಾ ಪ್ರತಿಬಿಂಬಚೈತನ್ಯನೆನಿಸಿ ಕೊಳ್ಳುತ್ತಾನೆ. ನಮ್ಮ ಬುದ್ಧಿಯಲ್ಲಿರುವ ಸರ್ವತ್ರ ವ್ಯಾಪಿಸಿರುವ ಮಹಾವಿಷ್ಣುವೆನಿಸುವ ಪರಮಾತ್ಮನ ಮಹಿಮೆಯ ತತ್ವಪ್ರತಿಪಾದಕರೇ ವಸಿಷ್ಠಮಹರ್ಷಿಗಳಾಗಿರುವರು.

ಹೇಗೆಂದರೆ—ವಸಿಷ್ಠ ಎಂಬ ಪದಕ್ಕೆ "ಸರ್ವತ್ರ ಸರ್ವದಾಪ್ರಾಣಿನಾಂ ವಸತೀತಿ ವಸುಃ ಏವಂತಿಷ್ಠತೀತಿ ವಸಿಷ್ಠಃ" ಎಂಬ ವ್ಯುತ್ಪತ್ತಿಯಿರುವುದು. ಈರೀತಿಯಾಗಿ ನಿಂತಿರುವುದು ತ್ರಿಕಾಲಾಬಾಧ್ಯನಾದ ಸತ್ಸ್ವರೂಪನಾದ ಪರಮಾತ್ಮ. ವಸಿಷ್ಠ ಎಂಬ ಪದಕ್ಕೆ ಮತ್ತೊಂದು ವ್ಯುತ್ಪತ್ತಿಯೂ ಇರುವುದು. "ವಸನಿವಾಸೆ ಷ್ಠಾಗತಿನಿವರ್ತೌ" ಸ್ಥಿರವಾಗಿರುವುದು ಅಂದರೆ ಅಚಲನಾಗಿರುವ ಸತ್ಸ್ವರೂಪನಾದ ಪರಮಾತ್ಮ. ಆದುದರಿಂದ ನಮ್ಮ ಬುದ್ಧಿಯಲ್ಲಿ ರುವ ಸರ್ವವ್ಯಾಪಿಯಾದ ಸ್ವಯಂಪ್ರಕಾಶನಾದ ಪರಮಾತ್ಮನ ಮಹಿಮೆಯ ಪ್ರತಿಪಾದ ನೆಯ ತತ್ವದವರೇ ವಸಿಷ್ಠರಾಗಿರುವರು. ನಮ್ಮ ಬುದ್ಧಿಯಲ್ಲಿರುವ ಪರಮಾತ್ಮನಿಗೆ ಶ್ರುತಿ ಪ್ರತಿಪಾದ್ಯನಾದ ಕೂಟಸ್ಥನೆಂಬ ಹೆಸರಿರುವುದು. ಇದೇ ತಾತ್ಪರ್ಯಕ್ಕೆ ಶ್ರೀವಿದ್ಯಾರಣ್ಯ ರವರು ಪಂಚದಶಿ ಚಿತ್ರದೀಪಿಕೆ ೨೨ನೇ ಶ್ಲೋಕದಲ್ಲಿ

**ಅಧಿಷ್ಠಾನತಯಾದೇಹ ದ್ವಯಾವಚ್ಛಿನ್ನಚೇತನಃ ।**
**ಕೂಟವನ್ನಿರ್ವಿಕಾರೇಣ ಸ್ಥಿತಃಕೂಟಸ್ಥ ಉಚ್ಯತೇ ॥**

ತಾ॥ ಸ್ಥೂಲ ಸೂಕ್ಷ್ಮ ದೇಹಗಳೊಡನೆ ಕೂಡಿದ ಪರಮಾತ್ಮಚೈತನ್ಯನು ಇವೆರ ಡಕ್ಕೂ ಆಧಾರನಾಗಿದ್ದರೂ, ಯಾವ ವಿಕಾರವೂ ಇಲ್ಲದೆ ಇರುವುದರಿಂದ ಕೂಟಸ್ಥನೆಂದು ಹೇಳಿರುವರು.

ಶ್ರೀಮನ್ಮಹಾವಿಷ್ಣುವೇ ಶ್ರೀರಾಮಚಂದ್ರನೆಂಬ ಹೆಸರಿನಿಂದ ಅವತರಿಸಿರುವನಷ್ಟೆ! ವಿಷ್ಣುವೆಂದರೆ ಸರ್ವವ್ಯಾಪಕನಾಗಿರುವುದು. ವಸಿಷ್ಠನೆಂಬ ಪದದ ಅರ್ಥವೂ ಇದೇ ತತ್ವ ದ್ದಾಗಿರುವುದು. ಆದುದರಿಂದ ಶ್ರೀರಾಮಚಂದ್ರನಲ್ಲಿರುವ ಪರಬ್ರಹ್ಮಸ್ವರೂಪವಾದ ಮಹಾವಿಷ್ಣುತ್ವದ ಮಹಿಮೆಯ ಪ್ರತಿಪಾದಕರೇ ವಸಿಷ್ಠಮಹರ್ಷಿಗಳು. ರಸಕನ್ನಡಿಯ ಲ್ಲುಂಟಾಗುವ ಪ್ರತಿಫಲನದ ಬೆಳಕು ಕನ್ನಡಿಯಲ್ಲಿರುವ ಸರ್ವತ್ರ ವ್ಯಾಪಿಸಿರುವ ಬೆಳಕಿನಿಂ ದಲೇ ಉಂಟಾಗುವುದಷ್ಟೆ! ಇದರಂತೆ ಸರ್ವವ್ಯಾಪಿಯಾಗಿ ಸ್ವಯಂಪ್ರಕಾಶನಾದ ಪರಮಾ ತ್ಮನು ನಮ್ಮ ಬುದ್ಧಿ, ಮನಸ್ಸು, ಅಹಂಕಾರ, ಚಿತ್ತಗಳೆಂಬ ಹೆಸರು ಪಡೆದಿರುವ ಅಂತಃಕರಣ

ದಲ್ಲೂ ಇರುವುದರಿಂದ ಅಲ್ಲಿ ಪ್ರತಿಫಲಿತನಾಗುವನು. ಈ ವಿಚಾರದಲ್ಲಿ ಶ್ರೀಶಂಕರ ಭಗವತ್ಪಾದಾಚಾರ್ಯರವರು ವಿವೇಕಚೂಡಾಮಣಿ ೧೩೦ನೇ ಶ್ಲೋಕದಲ್ಲಿ,

ಯೇನವಿಶ್ವಮಿದಂ ವ್ಯಾಪ್ತಂ ಯನ್ನವ್ಯಾಪ್ನೋತಿ ಕಿಂಚನ |
ಆಭಾರೂಪಮಿದಂಸರ್ವಂ ಯಂಭಾನ್ತಮನುಭಾತ್ಯಯಂ ||

ತಾ|| ಯಾವನಿಂದ ಈ ಪ್ರಪಂಚವೆಲ್ಲವೂ ವ್ಯಾಪ್ತವಾಗಿದೆಯೋ ಯಾವನನ್ನು ಇತರ ವಸ್ತುವಾವುದೂ ಸ್ವಲ್ಪವೂ ವ್ಯಾಪಿಸುವುದಿಲ್ಲವೋ ತೇಜೋರೂಪಿಗಳಾದ ಸೂರ್ಯಚಂದ್ರಾಗ್ನಿ ಗಳು ಯಾವನ ಸ್ವಯಂಪ್ರಕಾಶಸ್ವರೂಪದ ಆಸರೆಯಿಂದ ಪ್ರಕಾಶಿಸುವರೋ ಅವನೇ ಪರ ಬ್ರಹ್ಮನೆಂದು ಹೇಳಿರುವರು.

ಇಂತಹ ಸರ್ವವ್ಯಾಪಿಯಾದ ಪರಮಾತ್ಮನು ನಮ್ಮ ಬುದ್ಧಿಯಲ್ಲಿಯೂ, ಪ್ರಕಾಶ ಪಡಿಸುತ್ತಲಿರುವನೆಂಬ ತತ್ವಕ್ಕೂ ಶ್ರೀಶಂಕರಭಗವತ್ಪಾದಾಚಾರ್ಯರವರು ವಿವೇಕಚೂಡಾ ೧೩೪ನೇ ಶ್ಲೋಕದಲ್ಲಿ,

ಅತ್ರೈವಸತ್ವಾತ್ಮನಿಧೀಗುಹಾಯಾ ಮವ್ಯಾಕೃತಾಕಾಶಉರುಪ್ರಕಾಶಃ |
ಆಕಾಶಉಚ್ಚೈರವಿವತ್ಪ್ರಕಾಶತೆ ಸ್ವತೇಜಸಾವಿಶ್ವಮಿದಂಪ್ರಕಾಶಯನ್ ||

ತಾ|| ಶುದ್ಧಸತ್ವಗುಣಸ್ವರೂಪವಾಗಿರುವ ಬುದ್ಧಿಗುಹೆಯೊಳಗೆ ಅಪಂಚೀಕೃತವಾದ ದಹರಾಕಾಶವು ಪ್ರಕಾಶಮಾನವಾಗಿರುವುದು. ಪ್ರಪಂಚವನ್ನೆಲ್ಲ ಸೂರ್ಯನು ಪ್ರಕಾಶಪಡಿ ಸುವಂತೆ ಸ್ವಯಂಪ್ರಕಾಶನಾದ ಪರಮಾತ್ಮನು ದಹರಾಕಾಶದಲ್ಲಿ ಬೆಳಗುತಲಿರುವನು. ಎಂದು ಹೇಳಿರುವರು.

ಈ ಮೇಲಿನ ತಾತ್ಪರ್ಯಗಳಿಂದ ನಮ್ಮ ಬುದ್ಧಿಯಲ್ಲಿರುವ ಪ್ರತಿಫಲನಕ್ಕೆ ಕಾರಣವಾದ ಪರಮಾತ್ಮನ ಮಹಿಮೆಯ ಪ್ರತಿಪಾದಕರೇ ವಸಿಷ್ಠರು. ಆದುದರಿಂದಲೇ ಇವರು ಲೀಲಾರ್ಥ ವಾಗಿ ಅವತಾರಮಾಡಿರುವ ಶ್ರೀರಾಮಚಂದ್ರಮೂರ್ತಿಗೆ ಕುಲಗುರುಗಳು.

ವಿಶ್ವಾಮಿತ್ರರ ತತ್ವವೇನೆಂದರೆ :—" ವಿಶ್ವಸ್ಯ ಮಿತ್ರಃ ವಿಶ್ವಾಮಿತ್ರಃ" ಎಂದರೆ ಪ್ರಪಂಚಕ್ಕೆ ಸವಿತೃಸ್ವರೂಪನು. ಸರ್ವಾಂತರ್ಯಾಮಿತ್ವ, ಸರ್ವಪ್ರೇರಕತ್ವ ಮತ್ತು ಜಗತ್ಸ್ರಷ್ಟೃತ್ವವಾದ ಈಶ್ವರಮಹಿಮೆಯನ್ನು ಪ್ರತಿಪಾದನೆಮಾಡತಕ್ಕದ್ದಕ್ಕೆ ಸವಿತೃವೆಂಬುದಾಗಿ ಸಾಯಣಾಚಾರ್ಯರು ಸಂಧ್ಯಾಭಾಷ್ಯದಲ್ಲಿ ಹೇಳಿರುತ್ತಾರೆ. ಅಲ್ಲದೆ ವಿಶ್ವಾಮಿತ್ರನೆಂದರೆ ಪ್ರಪಂಚಕ್ಕೆ ಸಹೃದಯನೆಂಬ ಅರ್ಥವೂ ಆಗುವುದರಿಂದ ಪರಮಾತ್ಮನು ಮಾಯಾಸಂ ಬಂಧದೊಡನೆ ಪ್ರಪಂಚದ ಸೃಷ್ಟಿ ಸ್ಥಿತಿಗಳ ಹಿತಚಿಂತನೆಯ ಕಾರ್ಯದವನೆಂಬ ತತ್ವವೂ ಆಗುವುದು. ಅಲ್ಲದೆ ಪರಮಾತ್ಮನು ಸ್ವಯಂಪ್ರಕಾಶಕನು. ಸೂರ್ಯನು ಪರಪ್ರಕಾಶಕ

ನೆಂದರೆ ಪ್ರತಿಫಲನದ ಬೆಳಕಿನ ಸ್ವರೂಪದವನು. ಪ್ರತಿಫಲನದ ಚೈತನ್ಯದಿಂದಲೆ ಸಕಲ ಸೃಷ್ಟಿಸ್ಥಿತಿಗಳಾಗಿರುವುವು. ಆದುದರಿಂದ ವಿಶ್ವಾಮಿತ್ರರು ಶ್ರೀರಾಮಚಂದ್ರನನ್ನು ಕರೆದು ಕೊಂಡುಹೋಗಿ ನಡೆಸಿದ ಕಾರ್ಯಗಳ ತತ್ವಗಳು ಸೃಷ್ಟಿಸ್ಥಿತಿಕಾರ್ಯಗಳ ತತ್ವಗಳಾಗಿವೆ.

ಮೇಲೆ ವಸಿಷ್ಠರನ್ನು ಅನ್ವಯಮಾಡಿರುವ ತತ್ವದಲ್ಲಿ ಪರಬ್ರಹ್ಮಮಹಿಮೆಯು ಪ್ರತಿ ಪಾದಕರೆಂದು ತಿಳಿಸಿತಷ್ಟೆ! ವಿಶ್ವಾಮಿತ್ರರು ಶ್ರೀರಾಮಚಂದ್ರನನ್ನು ಕರೆದುಕೊಂಡು ಹೋಗಲು ಬಂದುದರ ತತ್ವವೇನೆಂದರೆ—ಸೃಷ್ಟಿಗೆ ಪೂರ್ವದಲ್ಲಿ ಪರಬ್ರಹ್ಮ ಒಂದೇ ಇತ್ತು. ಪರಮಾತ್ಮನು ತನ್ನ ಶಕ್ತಿಯ ಆವಿರ್ಭಾವದಿಂದ ಈಶ್ವರನಾಗಿ ಜಗತ್ತನ್ನು ಸೃಷ್ಟಿಮಾಡಿದನು. ಈಶ್ವರನಾಗಿ ಜಗತ್ತುಗಳನ್ನು ಸೃಷ್ಟಿಸುವಿಕೆಯು ಮಹತ್ತುಗಳ ತತ್ವಗಳೇ ವಿಶ್ವಾಮಿತ್ರರೊಡನೆ ಶ್ರೀರಾಮಚಂದ್ರನು ನಡೆಸಿದ ಕಾರ್ಯಗಳ ತತ್ವವಾಗಿರುವುದು. ಸೃಷ್ಟಿಗೆ ಪೂರ್ವದಲ್ಲಿ ಪರ ಬ್ರಹ್ಮವೊಂದೇ ಇತ್ತೆಂಬ ತತ್ವಕ್ಕೂ, ಸೃಷ್ಟಿಯ ತತ್ವಕ್ಕೂ "ಆತ್ಮಾವಾ ಇದಮೇಕ ಏವಾಗ್ರ ಆಸೀನ್ನಾನ್ಯತ್ಕಿಂಚನಮಿಷ ತ್ಸಈಕ್ಷತಲೋಕಾನ್ನುಸೃಜಾಇತಿ" ಎಂಬ ಐತರೇಯ ಶ್ರುತಿ ವಾಕ್ಯಕ್ಕೆ ಅನುಸಾರವಾಗಿ ಶ್ರೀವಿದ್ಯಾರಣ್ಯರವರು ಪಂಚದಶಿ ದ್ವೈತವಿವೇಕ ಪ್ರಕರಣ ೩ನೆಯ ಶ್ಲೋಕದಲ್ಲಿ,

ಆತ್ಮಾವಾಇದಮಗ್ರೇಭೂ ತ್ಸ ಈಕ್ಷತಸೃಜಾಇತಿ|
ಸಂಕಲ್ಪೇನಾಸೃಜಲ್ಲೋಕಾ ಸಏತಾನಿತಿಬಹ್ವೃಚಾಃ ||

ತಾ|| ಸೃಷ್ಟಿಗೆ ಪೂರ್ವದಲ್ಲಿ ಜಗತ್ತೆಲ್ಲವೂ ಪರಮಾತ್ಮಮಾತ್ರವಾಗಿಯೇ ಇತ್ತೆಂತಲೂ ಪರಮಾತ್ಮನು ಸಂಕಲ್ಪದಿಂದ ಸರ್ವಲೋಕಗಳನ್ನೂ ಸೃಷ್ಟಿಸಿದನೆಂದೂ ಋಕ್ಶಾಖಾಧ್ಯಾ ಯಿಗಳು ಹೇಳುವರು, ಎಂದು ಹೇಳಿರುತ್ತಾರೆ.

ಇದೇ ತಾತ್ಪರ್ಯಕ್ಕೆ "ಸದೇವಸೋಮ್ಯೇದಮಗ್ರಆಸೀ ದೇಕಮೇವಾದ್ವಿತೀಯಂ" ಎಂಬ ಮತ್ತು "ತದೈಕ್ಷತಬಹುಸ್ಯಾಂ ಪ್ರಜಾಯೇಯೇತಿತತ್ತೇಜೋಽಸೃಜತ" ಎಂಬ ಛಾಂದೋಗ್ಯ ಶ್ರುತಿವಾಕ್ಯವನ್ನು ಅನುಸರಿಸಿ ಶ್ರೀವಿದ್ಯಾರಣ್ಯಸ್ವಾಮಿಗಳು ಪಂಚದಶಿ ದ್ವೈತವಿವೇಕ ಪ್ರಕರಣ ೬ನೇ ಶ್ಲೋಕದಲ್ಲಿ,

ಇದಮಗ್ರೇಸದೇವಾಸೀ ದ್ಬಹುತ್ವಾಯತದೈಕ್ಷತ |
ತೇಜೋಬನ್ನಾಂಡಜಾದೀನಿ ಸಸರ್ಜೇತಿಚಸಾಮಗಾಃ ||

ತಾ|| ಸೃಷ್ಟಿಗೆ ಪೂರ್ವದಲ್ಲಿ ಈ ಜಗತ್ತೆಲ್ಲವೂ ಬ್ರಹ್ಮಮಯವಾಗಿಯೇ ಇತ್ತೆಂತಲೂ, ಸೃಷ್ಟಿಗೆ ಸಂಕಲ್ಪಿಸಿ ಪಂಚಭೂತಗಳನ್ನೂ ಪ್ರಾಣಿಗಳನ್ನೂ ಸೃಷ್ಟಿಸಿದನೆಂತಲೂ ಸಾಮವೇದಾ ಧ್ಯಾಯಿಗಳು ಹೇಳುವರು, ಎಂದು ಹೇಳಿರುತ್ತಾರೆ.

ಈ ಮೇಲಿನ ವಾಕ್ಯಗಳ ತಾತ್ಪರ್ಯದಂತೆ ವಿಶ್ವಾಮಿತ್ರರೊಡನೆ ಹೋಗಿ ಶ್ರೀರಾಮಚಂದ್ರನು ನಡೆಸಿದ ಕಾರ್ಯಗಳ ತತ್ವಗಳು ಸೃಷ್ಟಿ ಮುಂತಾದ ಈಶ್ವರನ ಮಹಿಮೆಗಳನ್ನು ಪ್ರತಿಪಾದಿಸುತ್ತವೆ.

ವಿಶ್ವಾಮಿತ್ರರು ಶ್ರೀರಾಮನನ್ನು ಕರೆದುಕೊಂಡುಹೋಗಲು ವಸಿಷ್ಠರ ಪ್ರೇರಣೆಯೆ ಮುಖ್ಯವಾದದ್ದಷ್ಟೆ. ಇದರ ತತ್ವವೇನೆಂದರೆ—ಪರಮಾತ್ಮಸ್ವರೂಪವಾದ ಸದ್ವಸ್ತುವಿನ ಆಶ್ರಯವಿಲ್ಲದೆ ಯಾವ ಕಾರ್ಯವೂ ಉಂಟಾಗುವುದಿಲ್ಲ. ಅಂದರೆ ಸೃಷ್ಟಿಮಾಡಲು ಪರಮಾತ್ಮನಲ್ಲಿ ಆವಿರ್ಭವಿಸಿದ ಪ್ರಕೃತಿಗೆ ಪರಮಾತ್ಮನ ಆಶ್ರಯವು ಅವಶ್ಯಕವೆಂಬ ತತ್ವದ ಸೂಚನೆಯೇ ವಸಿಷ್ಠರ ವಚನದಂತೆ ವಿಶ್ವಾಮಿತ್ರರು ಶ್ರೀರಾಮನನ್ನು ಕರೆದುಕೊಂಡು ಹೋದ ತತ್ವವಾಗಿರುವುದು. ಮುಖ್ಯ ತಾತ್ಪರ್ಯವೇನೆಂದರೆ, ನಮ್ಮ ಬುದ್ಧಿಯಲ್ಲಿರುವ ಕೂಟಸ್ಥಾತ್ಮ (ಪರಮಾತ್ಮ) ನ ಮಹಿಮೆಯ ವಿಚಾರವು ವಸಿಷ್ಠರ ತತ್ವದಿಂದ ವಿವರಿಸಲ್ಪಟ್ಟಿತು. ಪ್ರತಿಫಲನಚೈತನ್ಯನಾದ ಈಶ್ವರನ ಮಹಿಮೆಗಳೇ ಮುಂದೆ ಶ್ರೀರಾಮಚಂದ್ರನು ವಿಶ್ವಾಮಿತ್ರರೊಡನೆ ಹೋಗಿ ನಡೆಸಿದ ಕಾರ್ಯಗಳ ತತ್ವಗಳಾಗಿವೆ.

ಸೃಷ್ಟಿ ಸಂಕಲ್ಪದಿಂದ ಸೃಷ್ಟಿಕಾರ್ಯಕ್ಕೆ ಪ್ರವರ್ತನೆಯುಂಟಾಗುವುದೇ ದಶರಥನು ಶ್ರೀರಾಮಲಕ್ಷ್ಮಣರನ್ನು ವಿಶ್ವಾಮಿತ್ರರೊಡನೆ ಕಳುಹಿಸಿಕೊಟ್ಟ ತತ್ವವಾಗಿರುವುದು.

ಶ್ರೀರಾಮನೊಡನೆ ಲಕ್ಷ್ಮಣನು ಹೊರಟ ತತ್ವವೇನೆಂದರೆ –ಜೀವತ್ವವೆಂದರೆ ವಿಷಯ ವ್ಯಾಪಾರಗಳಲ್ಲಿ ಬುದ್ಧಿಮನಸ್ಸಿನ ವೃತ್ತಿಗಳು ಒಂದನ್ನೊಂದು ಹೊಂದಿಕೊಂಡಿರುವುವು. ಅಂದರೆ ಅವಿನಾಭಾವವಿರುವುದು. ಇದರಂತೆ ಈಶ್ವರತ್ವದಲ್ಲಿ ಸೃಷ್ಟಿಯು ಜ್ಞಾನಾನುವರ್ತಿಯಾಗಿ ಸೃಷ್ಟಿಯಕಾರ್ಯ ನಡೆಯುವ ತತ್ವದ ಸೂಚನೆಯೇ ಶ್ರೀರಾಮನೊಡನೆ ಲಕ್ಷ್ಮಣನು ಹೊರಟುದು.

## ೩ನೆಯ ಪ್ರಕರಣ.

**ಶ್ರೀರಾಮನು ಬಲಾತಿಬಲಗಳನ್ನು ಸ್ವೀಕರಿಸಿದುದು.**



**ಅಂತರ್ಯಾಮಿಯ ವಿಚಾರ.**

**ರಾ||** ವಿಶ್ವಾಮಿತ್ರರು ಶ್ರೀರಾಮಲಕ್ಷ್ಮಣರನ್ನು ಕರೆದುಕೊಂಡುಬರುತ್ತಾ ದಾರಿಯಲ್ಲಿ ಬಲಾ ಅತಿಬಲಾ ಎಂಬ ಮಂತ್ರಗಳನ್ನು ಅವರಿಗೆ ಉಪದೇಶಮಾಡಿದರು.

**ತತ್ವ||** ಮೇಲಿನ ರಾಮಾಯಣ ಕಥಾಭಾಗದಲ್ಲಿ ಬಲಾ ಅತಿಬಲಾ ಎಂಬ ಎರಡು ಪದಗಳಿವೆ. ಬಲಾ ಅತಿಬಲಾ ಎಂಬ ಪದಗಳ ಅರ್ಥವೇ ಶಕ್ತಿಸ್ವರೂಪವೆಂದು ಸೂಚಿತವಾಗುತ್ತದೆ. ಬಲಾ ಅತಿಬಲಾ ಎಂಬ ಎರಡು ಪದಗಳಿರುವುದರಿಂದ ಶಕ್ತಿಯ ವಿಭಾಗಗ

ಳಿಂದು ಸೂಚಿತವಾಗುತ್ತದೆ. ಬಲಾ ಎಂಬುದು ರಜಸ್ತಮೋಗುಣಗಳ ಶಕ್ತಿಯಾಗಿಯೂ ಅತಿಬಲಾ ಎಂಬುದು ಸತ್ವಗುಣದ ಶಕ್ತಿಯಾಗಿಯೂ ಇರುತ್ತೆ. ಬಲಾತಿಬಲಗಳೆರಡೂ ಕೂಡಿರುವುದರಿಂದ ಅವ್ಯಕ್ತ ಅಥವಾ ಮೂಲಪ್ರಕೃತಿಯೆನಿಸುತ್ತದೆ.

ಇಂತಹ ಬಲಾತಿಬಲಗಳನ್ನು ಶ್ರೀರಾಮಚಂದ್ರನು ಸ್ವೀಕರಿಸುವುದೆಂದರೆ—ಹಿಂದಿನ ಪ್ರಕರಣದಲ್ಲಿ ಸೃಷ್ಟಿಗೆ ಪೂರ್ವದಲ್ಲಿ ಸರ್ವವೂ ಪರಬ್ರಹ್ಮಮಾತ್ರವಾಗಿಯೇ ಇತ್ತೆಂದು ವಸಿಷ್ಠರ ತತ್ವದಲ್ಲಿ ವಿವರಿಸಿತು. ಅನಂತರ ವಿಶ್ವಾಮಿತ್ರರು ಶ್ರೀರಾಮನನ್ನು ಕರೆದುಕೊಂಡು ಬರುವ ತತ್ವವೆ ಸೃಷ್ಟಿಗೆ ಪ್ರಾರಂಭವೆಂತಲೂ ತಿಳಿಸಲ್ಪಟ್ಟಿತು. ಸೃಷ್ಟಿಗೆ ಪ್ರಾರಂಭವಾದ ಕೂಡಲೆ ಪರಮಾತ್ಮನ ಶಕ್ತಿಯಾದ ಚಿಚ್ಛಕ್ತಿಯು, ಪರಮಾತ್ಮನಿಂದ ಪ್ರತ್ಯೇಕಿಸಲ್ಪಟ್ಟು, ಸತ್ವರಜಸ್ತಮೋಗುಣಾತ್ಮಕವಾದ ಅವ್ಯಕ್ತ ಅಥವಾ ಮೂಲಪ್ರಕೃತಿಯ ಪರಿಣಾಮವನ್ನು ಹೊಂದುತ್ತಿರುವ ತತ್ವವನ್ನು ಅನುಸರಿಸಿ ಬ್ರಹ್ಮಮಾನಸ ಸರೋವರದಿಂದ ಹರಿದುಬರುತ್ತಿರುವ ಸರಯೂನದಿಯ ದಡದಲ್ಲಿ, ಬಲಾತಿಬಲಗಳನ್ನು ಶ್ರೀರಾಮಚಂದ್ರನು ಸ್ವೀಕರಿಸಿದುದಾಗಿರುವುದು.

ಈ ತ್ರಿಗುಣಾತ್ಮಿಕವಾದ ಮೂಲಪ್ರಕೃತಿಯನ್ನು ಪ್ರತಿಬಿಂಬಚೈತನ್ಯವು ಉಪಾಧಿತ್ವದಿಂದ ಸ್ವೀಕರಿಸುವ ತತ್ವವೇ ಶ್ರೀರಾಮಚಂದ್ರನು ಬಲಾತಿಬಲಗಳನ್ನು ಸ್ವೀಕರಿಸಿದ ತತ್ವವಾಗಿರುವುದು. ಈ ಮೂಲಪ್ರಕೃತಿಯೇ ಮುಂದೆ ಶುದ್ಧಸತ್ವಪ್ರಧಾನ ಮಲಿನಸತ್ವಪ್ರಧಾನಮಾಯೆಗಳೆಂದು ಎರಡು ವಿಧವಾಗುವುದು. ಶ್ರೀರಾಮಚಂದ್ರನು ಬಲಾತಿಬಲಗಳೆರಡನ್ನೂ ಹೇಗೆ ಸ್ವೀಕರಿಸಿದನೋ ಹಾಗೆ ಪರಬ್ರಹ್ಮನೇ ಮೂರುಗುಣಗಳಲ್ಲಿ ಪ್ರತಿಫಲಿಸಿ ಮೂರುಗುಣಗಳಿಗೂ ಪ್ರಕಾಶಕೊಡತಕ್ಕವನಾಗಿರುವನು. ಇದೇ ತಾತ್ಪರ್ಯಕ್ಕೆ ಶ್ರೀವಿದ್ಯಾರಣ್ಯರವರು ಪಂಚದಶಿ ಪ್ರತ್ಯಕ್ತತ್ವ ವಿವೇಕದ ಳಳನೇ ಶ್ಲೋಕದಲ್ಲಿ,

**ಜಗತೋಯದುಪಾದಾನಂ ಮಾಯಾಮಾದಾಯತಾಮಸೀಮ್ |**
**ನಿಮಿತ್ತಂ ಶುದ್ಧಸತ್ವಾಂ ತಾ ಮುಚ್ಯತೆ ಬ್ರಹ್ಮತದ್ಗಿರಾ ||**

**ತಾ||** ಪರಬ್ರಹ್ಮಚೈತನ್ಯವು ತಮೋಗುಣ ರಜೋಗುಣ ಮಲಿನಸತ್ವಗುಣಗಳು ಒಟ್ಟುಗೂಡಿ ಹೆಸರುಪಡೆದಿರುವ, ಮಲಿನಸತ್ವಪ್ರಧಾನಮಾಯೆಯನ್ನು ಉಪಾಧಿತ್ವದಿಂದ ಸ್ವೀಕರಿಸಿ, ಪ್ರಪಂಚಕ್ಕೆಂದರೆ, ಪ್ರಪಂಚದ ಕಾರ್ಯವಾದ ಅಜ್ಞಾನದ ಕಾರ್ಯಕ್ಕೆ ಕಾರಣವಾಯಿತು. ಶುದ್ಧಸತ್ವಗುಣ ಅಥವಾ ಶುದ್ಧಸತ್ವಪ್ರಧಾನ ಮಾಯೆಯನ್ನು ಉಪಾಧಿಯಾಗಿ ಸ್ವೀಕರಿಸಿ ಅಜ್ಞಾನಕ್ಕೆ ನಿಯಂತೃವಾಗಿಯೂ, ಸರ್ವಜ್ಞನಾಗಿಯೂ, ಮುಖ್ಯಕರ್ತೃವಾಗಿಯೂ ಇರುವ ಈಶ್ವರತ್ವಕ್ಕೆ ಕಾರಣವಾಯಿತು. ಈ ಎರಡಕ್ಕೂ ಕಾರಣರೂಪವಾದ ಪರಬ್ರಹ್ಮವು ತತ್ ಶಬ್ದವಾಚ್ಯವಾಗಿರುವುದು ಎಂದು ಹೇಳಿರುವರು.

ಬಲಾತಿಬಲಗಳು ಸತ್ವರಜಸ್ತಮೋಗುಣಗಳ ಸಾಮ್ಯಾವಸ್ಥೆಯಾದ ಮೂಲಪ್ರಕೃತಿಯೆಂದೂ ಶ್ರೀರಾಮಚಂದ್ರನೇ ಪ್ರತಿಬಿಂಬಚೈತನ್ಯನೆಂದೂ ಮೇಲೆ ತಿಳಿಸಿತಷ್ಟೆ! ಇದೇ ತಾತ್ಪರ್ಯಕ್ಕೆ ಶ್ರೀವಿದ್ಯಾರಣ್ಯರವರು ಪಂಚದಶಿ ಪ್ರತ್ಯಕ್ತತ್ವವಿವೇಕ ಪ್ರಕರಣ ೧೫ನೇ ಶ್ಲೋಕದಲ್ಲಿ,

ಚಿದಾನಂದಮಯಬ್ರಹ್ಮ ಪ್ರತಿಬಿಂಬಸಮನ್ವಿತಾ |
ತಮೋರಜಸ್ಸತ್ವಗುಣಾ ಪ್ರಕೃತಿರ್ದ್ವಿವಿಧಾಚಸಾ ||

ತಾ|| ಸತ್ಯಜ್ಞಾನಾನಂದಸ್ವರೂಪವಾದ ಪರಬ್ರಹ್ಮದ ಪ್ರತಿಬಿಂಬದೊಡನೆ ಕೂಡಿರುವ ತಮೋರಜಸ್ಸತ್ವಗುಣಗಳ ಸಾಮ್ಯಾವಸ್ಥೆಯೇ ಪ್ರಕೃತಿಯೆಂದು ಹೇಳಲ್ಪಡುವುದು. ಈ ಪ್ರಕೃತಿಯಾದರೋ ಶುದ್ಧಸತ್ವಪ್ರಧಾನ, ಮಲಿನಸತ್ವಪ್ರಧಾನ ಮಾಯೆಗಳೆಂದು ಎರಡು ಬಗೆಯಾಗುವುದೆಂದು ಹೇಳಿರುವರು.

ಆದುದರಿಂದ ಪ್ರಕೃತದಲ್ಲಿ ಶ್ರೀರಾಮನು ಬಲಾತಿಬಲಗಳನ್ನು ಸ್ವೀಕರಿಸಿದನೆಂದರೆ ಪರಮಾತ್ಮನ ಪ್ರತಿಬಿಂಬಚೈತನ್ಯವು ಅವ್ಯಕ್ತ ಅಥವಾ ಮೂಲಪ್ರಕೃತಿಯನ್ನು ಸ್ವಾಧೀನಕ್ಕೆ ತೆಗೆದುಕೊಂಡಿತೆಂಬ ತತ್ವವಾಗಿರುವುದು. ಮುಂದಿನ ಪ್ರಕರಣದ ಕಥೆಯ ತತ್ವದಿಂದ ಈ ಪ್ರಕೃತಿಯು ಶುದ್ಧಸತ್ವಪ್ರಧಾನ ಮಲಿನಸತ್ವಪ್ರಧಾನಮಾಯೆಗಳೆಂಬೆರಡು ವಿಧಗಳಾಗಿ ಸಕಲಸೃಷ್ಟಿಸ್ಥಿತಿಗಳನ್ನೂ ನಡೆಸುತ್ತದೆ. ಪ್ರಪಂಚದ ಸೃಷ್ಟಿಯಿಲ್ಲದ ಮೂಲಪ್ರಕೃತಿಯೊಡಗೂಡಿದ ಪರಮಾತ್ಮಚೈತನ್ಯದ ಸೋಪಾನವೂ, ಉತ್ತಮಸೋಪಾನವೆನ್ನುವ ತತ್ವಕ್ಕೆ ಸಾವಿತ್ರ್ಯುಪನಿಷತ್ತಿನಲ್ಲಿ,

ಅಮೃತಕರತಲಾರ್ದ್ರೌ ಸರ್ವಸಂಜೀವನಾಢ್ಯಾ
ವಘಹರಣಸುದಕ್ಷೌ ವೇದಸಾರೇ ಮಯೂಖೇ |
ಪ್ರಣವಮಯವಿಕಾರೌ ಭಾಸ್ಕರಾಕಾರದೇಹೌ
ಸತತಮನುಭವೇಹಂ ತೌಬಲಾತಿಬಲೇಶೌ ||

ತಾ|| ಯಾವಾಗಲೂ ಒಣಗದೇ ಒದ್ದೆಯಾಗಿರುವ ಅಮೃತಹಸ್ತವುಳ್ಳವರಾದ, ಸರ್ವಸಂಜೀವನಗಳಿಗೂ ಒಡೆಯರಾದ, ಅವಿದ್ಯಾಹರಣಮಾಡಲು ಸಮರ್ಥರಾದ, ವೇದಸಾರಸ್ವರೂಪರಾದ, ಜ್ಞಾನಕಿರಣಸ್ವರೂಪರಾದ ಪ್ರಣವಸ್ವರೂಪರಾದ ತೇಜಸ್ಸೇ ದೇಹವಾಗುಳ್ಳವರಾದ ಬಲಾತಿಬಲಗಳಿಗೆ ಒಡೆಯನಾದ ಪರಮಾತ್ಮನನ್ನು ಯಾವಾಗಲೂ ನಾನು ಅನುಭವಿಸುತ್ತೇನೆಂದು ಹೇಳಿರುತ್ತದೆ.

ಈ ಮೇಲಿನ ಶ್ರುತಿಪ್ರಮಾಣದಲ್ಲಿನ ಮುಖ್ಯತತ್ವವೇನೆಂದರೆ:—ವ್ಯಕ್ತವೆಂದರೆ ಬ್ರಹ್ಮಾಂಡ ಅಥವಾ ದೇಹ. ಇಂಥ ಸ್ಥೂಲಬ್ರಹ್ಮಾಂಡವಿಲ್ಲದೆ ಇರುವ ಜ್ಯೋತಿಸ್ವರೂಪ ದಲ್ಲಿರುವ ಮತ್ತು ಅಮೃತಸ್ವರೂಪವಾಗಿರುವ, ಮೂಲಪ್ರಕೃತಿಯೊಡಗೂಡಿದ ಪರಮಾತ್ಮ ನನ್ನು ನಾವು ಹೊಂದಬೇಕೆಂಬ ತಾತ್ಪರ್ಯವಾಗಿರುತ್ತದೆ. ಈ ಬಲಾತಿಬಲೇಶರೇ ಸ್ಥೂಲಬ್ರಹ್ಮಾಂಡದ ಸೃಷ್ಟಿ ಸ್ಥಿತಿ ಮತ್ತು ಲಯಕ್ಕೆ ಕಾರಣರು. ಈ ಮೇಲಿನ ಶ್ರುತಿ ಪ್ರಮಾಣವನ್ನು ಅನುಸರಿಸಿ ಶ್ರೀರಾಮನು ಬಲಾತಿಬಲಗಳನ್ನು ಸ್ವೀಕರಿಸಿದನೆಂದರೆ, ಪ್ರತಿಬಿಂಬಚೈತನ್ಯನು ಮೂಲಪ್ರಕೃತಿಯ ಉಪಾಧಿಯನ್ನು ಸ್ವೀಕರಿಸಿದನೆಂಬ ತತ್ವ ವಾಗಿರುವುದು.

**ರಾ||** ಈ ಬಲಾತಿಬಲಾ ಎಂಬ ವಿದ್ಯೆಗಳ ಸ್ವೀಕಾರದಿಂದ ಬಳಲಿಕೆಯಾಗಲಿ ತಾಪ ವಾಗಲಿ ಯಾವ ವಿಧದಲ್ಲಿದ್ದರೂ ರಾಕ್ಷಸರ ಭಾಧೆಯಾಗಲಿ ರೂಪವ್ಯತ್ಯಾಸವುಂಟಾಗುವು ದಾಗಲಿ ಆಗುವುದಿಲ್ಲ. ಈ ಎರಡು ವಿದ್ಯೆಗಳು ಬಹುರೂಪಗಳಾಗುವುವು. ಸರ್ವ ಜ್ಞಾನಕ್ಕೂ ತಾಯಿಗಳಾಗಿರುವುವು. ಎಲೈ ! ಶ್ರೀರಾಮನೇ ಈ ವಿದ್ಯೆಗಳನ್ನು ಸ್ವೀಕರಿಸಲು ನೀನೇ ಅರ್ಹನಾಗಿದ್ದೀಯೆ ಎಂಬುದಾಗಿ ವಿಶ್ವಾಮಿತ್ರರು ಶ್ರೀರಾಮನಿಗೆ ಹೇಳಿದರು.

ಈ ಬಲಾತಿಬಲಗಳೆಂಬ ಎರಡುವಿದ್ಯೆಗಳು ಬಹುರೂಪಗಳಾಗುವ ಮತ್ತು ಸರ್ವ ಜ್ಞಾನಕ್ಕೂ ತಾಯಿಯಾಗಿರುವುವೆಂದು ಹೇಳಿರುವುದರ ತತ್ವವೇನೆಂದರೆ—ಅವ್ಯಕ್ತವೆಂಬ ಹೆಸ ರುಳ್ಳ ತ್ರಿಗುಣಾತ್ಮಿಕವಾದ ಮೂಲಪ್ರಕೃತಿಯು ಪಂಚಭೂತಗಳು ಮೊದಲುಗೊಂಡು ಸಕಲ ಚರಾಚರಗಳ ಸ್ವರೂಪವಾಗುವುದೇ ಬಲಾತಿಬಲಗಳು ಬಹುರೂಪಗಳಾಗುವುದಾಗಿರುವುದು.

ಬಲಾತಿಬಲಗಳಲ್ಲಿ ಅತಿಬಲದ ತತ್ವದಲ್ಲಿರುವ ಶುದ್ಧಸತ್ವಗುಣವು ವಿದ್ಯೆಯೆಂದರೆ ನಿರ್ಮಲಜ್ಞಾನಸ್ವರೂಪವಾಗಿರುವುದು. ಬಲದ ತತ್ವದಲ್ಲಿರುವ ಮಲಿನಪ್ರಧಾನಮಾಯೆಯು ಅವಿದ್ಯೆಯೆಂದರೆ ಅಜ್ಞಾನಸ್ವರೂಪವಾದುದು. ಅಂದರೆ ಪರಮಾತ್ಮಸ್ವರೂಪವಲ್ಲದ ಇತರ ಜ್ಞಾನಗಳಿಗೆ ತ್ರಿಗುಣಾತ್ಮಿಕವಾದ ಮೂಲಪ್ರಕೃತಿಯು ಕಾರಣವಾಗಿರುವುದರಿಂದ ಮೂಲಾ ವಿದ್ಯೆಯೆನಿಸಿಕೊಳ್ಳುವುದು. ಕಾರಣವೇನೆಂದರೆ "ಸದೇವಸೋಮ್ಯೇದಮಗ್ರಆಸೀ ದೇಕ ಮೇವಾದ್ವಿತೀಯಂ" ಮತ್ತು "ಆತ್ಮಾವಾ ಇದಮೇಕಏವಾಗ್ರ ಆಸೀತ್" ಎಂಬ ಶ್ರುತಿ ಪ್ರಮಾಣಗಳಂತೆ ಪರಬ್ರಹ್ಮ ಒಂದೇ ಉಳಿಕೆಯಾಗುವ ಸ್ಥಿತಿಯವರೆಗೆ ಮೂಲಪ್ರಕೃತಿಯು ಇರುವುದರಿಂದ ಮೂಲಾವಿದ್ಯೆಯೆನಿಸಿಕೊಳ್ಳುವುದು.

ಬಲಾತಿಬಲಗಳ ತತ್ವದಲ್ಲಿರುವ ತ್ರಿಗುಣಾತ್ಮಿಕವಾದ ಅವ್ಯಕ್ತವೆಂಬ ಹೆಸರುಳ್ಳ ಮೂಲ ಪ್ರಕೃತಿಯು ಬಹುರೂಪಗಳಾಗುವ ತತ್ವಕ್ಕೂ ಮೂಲಾವಿದ್ಯೆಯೆನಿಸಿಕೊಳ್ಳುವ ತತ್ವಕ್ಕೂ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೧೧೦ನೇ ಶ್ಲೋಕದಲ್ಲಿ.

**ಅವ್ಯಕ್ತನಾಮ್ನೀ ಪರಮೇಶ ಶಕ್ತಿ |**
**ರನಾದ್ಯ ವಿದ್ಯಾ ತ್ರಿಗುಣಾತ್ಮಿಕಾ ಪರಾ ||**
**ಕಾರ್ಯಾನುಮೇಯಾ ಸುಧಿಯೈವಮಾಯಾ |**
**ಯಯಾ ಜಗತ್ಸರ್ವಮಿದಂ ಪ್ರಸೂಯತೇ ||**

ತಾ|| ಹುಟ್ಟು ನೆಲೆಯಿಲ್ಲದ ಅಜ್ಞಾನವಾಗಿರುವ ತ್ರಿಗುಣಾತ್ಮಿಕವಾದ ಹೀಗೆಯೇ ಇರುವುದೆಂದು ಹೇಳಲಾಗದ, ಇದರ ಕೆಲಸದಿಂದಲೆ ಇದನ್ನು ಮಹಾಪಂಡಿತರು ಊಹಿಸ ಬೇಕಾಗಿರುವ ಪರಮೇಶ್ವರನ ಶಕ್ತಿಯು ಅವ್ಯಕ್ತವೆಂಬ ಹೆಸರುಳ್ಳದ್ದು. ಇದಕ್ಕೆ ಮಾಯೆ ಯೆಂದು ಹೆಸರು. ಈ ಮಾಯೆಯಿಂದ ಸಮಸ್ತವಾದ ಜಗತ್ತೂ ಸೃಷ್ಟಿಸಲ್ಪಡುತ್ತದೆ. ಎಂದು ಹೇಳಿರುತ್ತಾರೆ.

ಬಲಾತಿಬಲಗಳನ್ನು ಸ್ವೀಕರಿಸುವುದರಿಂದ ಶ್ರೀರಾಮಚಂದ್ರನಿಗೆ ಬಳಲಿಕೆಯಾಗಲಿ ತಾಪವಾಗಲಿ ರೂಪವ್ಯತ್ಯಾಸ ಉಂಟಾಗುವುದಾಗಲಿ ರಾಕ್ಷಸರ ಬಾಧೆಯಾಗಲಿ ಇರುವುದಿಲ್ಲ ವೆಂಬ ತತ್ವವೇನೆಂದರೆ—ಪರಮಾತ್ಮನು ಬಿಂಬಪ್ರತಿಬಿಂಬಸ್ವರೂಪನಾಗಿ ತ್ರಿಗುಣಾತ್ಮಿಕ ವಾದ ಮಾಯೆಯನ್ನು ಪ್ರಕಾಶಪಡಿಸಿಕೊಂಡು ಉಪಾಧಿಯಾಗಿ ಸ್ವೀಕರಿಸಿದರೂ ಚೈತನ್ಯಕ್ಕೆ ಯಾವವಿಧವಾದ ತೊಂದರೆಯಾಗಲಿ ರೂಪಭೇದವಾಗಲಿ ಉಂಟಾಗುವುದಿಲ್ಲವೆಂಬ ತತ್ವ ವಾಗಿರುವುದು. ಇದೇ ತಾತ್ಪರ್ಯಕ್ಕೆ ಶ್ರೀ ಶಂಕರಭಗವತ್ಪಾದರವರು ವಿವೇಕಚೂಡಾಮಣಿ ೧೩೬ನೇ ಶ್ಲೋಕದಲ್ಲಿ,

**ನಜಾಯತೆ ನೋಮ್ರಿಯತೆ ನವರ್ಧತೆ |**
**ನಕ್ಷೀಯತೆ ನೋ ವಿಕರೋತಿ ನಿತ್ಯಃ ||**

ತಾ|| ಈ ಆತ್ಮನು ಹುಟ್ಟುವುದಿಲ್ಲ, ಸಾಯುವುದಿಲ್ಲ, ಹಾನಿವೃದ್ಧಿಗಳಿಲ್ಲ, ಬಡವಾ ಗುವುದಿಲ್ಲ ವಿಕಾರವನ್ನುಹೊಂದುವುದಿಲ್ಲ, ಶಾಶ್ವತನಾಗಿರುವನು ಎಂಬದಾಗಿ ಹೇಳಿರುವರು.

ಬಲಾತಿಬಲಗಳ ತತ್ವಗಳನ್ನು ಇದುವರೆಗೂ ವಿವರಿಸಲಾಯಿತು. ತ್ರಿಗುಣಾತ್ಮಿಕವಾದ ಮೂಲಪ್ರಕೃತಿಯು ಶುದ್ಧಸತ್ವಪ್ರಧಾನ ಮಲಿನಸತ್ವಪ್ರಧಾನ ಮಾಯೆಯಾಗಿ ವಿಭಾಗಿಸಿ ಕೊಂಡು ನಡೆಸುವ ಸೃಷ್ಟಿಕ್ರಮಗಳನ್ನು ತಿಳಿದುಕೊಳ್ಳಲು ಮುಂದಿನ ಪ್ರಕರಣವನ್ನು ಪ್ರಾರಂಭಿಸೋಣ.

---

# ೪ನೆಯ ಪ್ರಕರಣ.

**ವಿಶ್ವಾಮಿತ್ರರು ಶ್ರೀರಾಮ ಲಕ್ಷ್ಮಣರನ್ನು ಗಂಗಾಸರಯೂ ಸಂಗಮ ಸ್ಥಳಕ್ಕೆ ಕರೆತಂದುದು.**

**ನಾದಬಿಂದು ಕಳೆಗಳಲ್ಲಿ ಕಳಾ ವಿಚಾರ ಮತ್ತು ಸೃಷ್ಟಿಪ್ರಾರಂಭ.**

**ರಾ||** ಅನಂತರ ವಿಶ್ವಾಮಿತ್ರರು ಶ್ರೀರಾಮಲಕ್ಷ್ಮಣರನ್ನು ಗಂಗಾಸರಯೂ ಸಂಗಮ ಸ್ಥಾನವಾದ ಅಂಗದೇಶವೆಂಬ ಹೆಸರುಳ್ಳ ಸ್ಥಳಕ್ಕೆ ಕರೆದುಕೊಂಡುಹೋಗಿ ಆ ದೇಶದ ವಿಚಾರಗಳನ್ನು ಶ್ರೀರಾಮಚಂದ್ರನಿಗೆ ಹೇಳಿದುದಲ್ಲದೆ, ಗಂಗಾಸರಯೂಸಂಗಮಸ್ಥಳದಲ್ಲಿ ಕೇಳಿಬರುವ ಶಬ್ದಕ್ಕೆ ನಮಸ್ಕಾರಮಾಡಿರೆಂದು ಶ್ರೀರಾಮಲಕ್ಷ್ಮಣರಿಗೆ ಹೇಳಿದರು.

**ತತ್ವ||** ಇವುಗಳಲ್ಲಿರುವ ತತ್ವಗಳನ್ನು ಒಂದೊಂದಾಗಿ ವಿಚಾರಮಾಡೋಣ. ಸಂಗಮಸ್ಥಾನವು ಗಂಗಾಸರಯೂ ಸಂಗಮಸ್ಥಳವಾಗಿರುತ್ತದೆ. ಗಂಗಾ ಎಂದರೆ ಸೂರ್ಯ ಕಳಾ. ನಮಗೆ ಕಾಣುವ ಸೂರ್ಯನಿಗೂ ತೇಜಸ್ಸುಂಟುಮಾಡುವ ಸಾಕ್ಷಾತ್ ಪರಮಾತ್ಮನ ಪ್ರಕಾಶಕ್ಕೆ ಗಂಗಾ ಎಂದು ಹೆಸರು. ಹೇಗೆಂದರೆ, ಗಂಗಾ ಎಂಬ ಪದದ ಅರ್ಥವು "ಗಮಯತಿ ಪ್ರಾಪಯತಿ ಜ್ಞಾಪಯತಿ ವಾ ಭಗವತ್ಪದಂ ಯಾಶಕ್ತಿಸ್ಸಾಗಂಗಾ" ಎಂದರೆ ಪರಮಾತ್ಮನಕಡೆಗೆ ಹೋಗಲು ಮನಸ್ಸುಂಟುಮಾಡುವುದು, ಪರಮಾತ್ಮನೊಡನೆ ಸೇರಿಸುವುದು, ಪರಮಾತ್ಮನನ್ನು ಜ್ಞಾಪಿಸಿಕೊಡುವುದು ಯಾವುದೋ ಅದೇ ಗಂಗಾ ಎನಿಸಿಕೊಳ್ಳುತ್ತದೆ. ಇದೇ ಸಾಕ್ಷಾತ್ ಪರಮಾತ್ಮನ ಪ್ರತಿಬಿಂಬದ ಪ್ರಭೆ ಅಥವಾ ಸೂರ್ಯಕಳೆಯಾಗಿರುತ್ತದೆ. ಹೇಗೆಂದರೆ, ಸಮಾಧಿಯನ್ನು ಅಭ್ಯಾಸಮಾಡುವ ಕಾಲದಲ್ಲಿ ಕಾಣುವ ಪ್ರಭೆಯೇ ಪರಮಾತ್ಮನಕಡೆಗೆ ಹೋಗಲು ಮನಸ್ಸುಂಟುಮಾಡುವುದು ಮತ್ತು ಪರಮಾತ್ಮನೊಡನೆ ಸೇರಿಸುವುದಾದುದರಿಂದ ಇಂಥ ಪ್ರಭೆ ಅಥವಾ ಸೂರ್ಯಕಳೆಗೆ ಗಂಗಾಯೆಂದು ಹೆಸರು.

ಅಖಂಡವಾದ ಪರಮಾತ್ಮನ ಏಕದೇಶದಲ್ಲಿ ಮೂಲಪ್ರಕೃತಿಯಿಂದ ಸೃಷ್ಟಿಗೆ ಆರಂಭವಾಗಿ ಬ್ರಹ್ಮಾಂಡವಾಗಲು, ಅವಕಾಶವುಂಟಾಯಿತು. ಈ ಅವಕಾಶವೇ ಆಕಾಶವೆನಿಸಿಕೊಳ್ಳುವುದು. ಈ ಆಕಾಶವೇ ವಿರಾಟ್ಪುರುಷನಾದ ಈಶ್ವರನ ಜಟೆಯೆನಿಸಿಕೊಳ್ಳುವುದು. ಈ ಜಟೆಯಮೇಲೆ ಬಿದ್ದ ಪರಮಾತ್ಮನ ಪ್ರಕಾಶವು ಕಳಾರೂಪವೆನಿಸಿಕೊಂಡಿತು. ಈಶ್ವರನು ಈ ಪ್ರಕಾಶವನ್ನು ತನ್ನ ಸ್ವಾಧೀನದಲ್ಲಿಟ್ಟುಕೊಂಡು ಸ್ವರ್ಗ ಮರ್ತ್ಯ ಪಾತಾಳ ಲೋಕಗಳಿಗೆ ಬಿಟ್ಟನು. "ವಿಷ್ಣುಪಾದೋದ್ಭವೇ ದೇವೀ ಗಂಗೇ ತ್ರಿಪಥಗಾಮಿನೀ" ಎಂಬದಾಗಿ ಹೇಳಿರುವುದರ ತತ್ವವೇನೆಂದರೆ—"ವಿಷ್ಣುವೆಂದರೆ ಸರ್ವವ್ಯಾಪಕವಾದ ಪರಮಾತ್ಮ.

ಅಂದರೆ "ಪಾದೋಽಸ್ಯವಿಶ್ವಾಭೂತಾನಿ ತ್ರಿಪಾದಸ್ಯಾಮೃತಂದಿವಿ" ಎಂಬ ಶ್ರುತಿಪ್ರಮಾಣದಂತೆ ಅಖಂಡವಾದ ಪರಮಾತ್ಮನ ಕೊಂಚಭಾಗದಲ್ಲಿ ಮೂಲಪ್ರಕೃತಿಯಿಂದ ಬ್ರಹ್ಮಾಂಡವಾಗಲು ಅವಕಾಶವಾಗುತ್ತದೆ. ಈ ಅವಕಾಶವೇ ಆಕಾಶವೆನಿಸಿಕೊಳ್ಳುವುದು.

ಆದುದರಿಂದ ವಿಷ್ಣುಪಾದವೆಂದರೆ ಒಂದುಭಾಗವೆಂದು ಪರಿಗಣನೆಮಾಡಬೇಕಲ್ಲದೆ, ಪಾದವೆಂದರೆ ಕಾಲೆಂಬದಾಗಿ ತಿಳಿದುಕೊಳ್ಳಬಾರದು. ನಿರ್ಗುಣನಾಗಿಯೂ ಸರ್ವವ್ಯಾಪಿಯಾಗಿಯೂ ನಿರಾಕಾರನಾಗಿಯೂ ಇರುವ ಪರಮಾತ್ಮನಿಗೆ ಕಾಲು ತಲೆಗಳಿರುವುದಿಲ್ಲ. ಅಶ್ವಿನೀನಕ್ಷತ್ರದ ನಾಲ್ಕನೆಯ ಪಾದವೆಂದರೆ, ನಕ್ಷತ್ರದ ಒಂದುಭಾಗವೆಂದು ಪರಿಗಣನೆ ಮಾಡಿರುವುದಲ್ಲದೆ ಅಶ್ವಿನೀನಕ್ಷತ್ರದ ಕಾಲೆಂಬದಾಗಿ ತಿಳಿದುಕೊಳ್ಳುವುದಿಲ್ಲ. ಪರಮಾತ್ಮನೇ ಸಗುಣನಾಗಿ ಈಶ್ವರನೆನಿಸಿಕೊಳ್ಳುವನು. ಆದುದರಿಂದ ಆಕಾಶವು ವಿರಾಟ್ಸ್ವರೂಪನಾದ ಈಶ್ವರನ ಜಟೆಯಾಗಿರುವುದು. ಹೀಗಿರುವುದೆನ್ನುವುದಕ್ಕೆ "ವ್ಯೋಮಕೇಶಾಯ ನಮಃ" ಎಂಬ ಆಧಾರವಾಕ್ಯಗಳಿರುವುವು. ಆದುದರಿಂದ ವಿಷ್ಣುವಿನ ಪಾದದಲ್ಲಿ ಗಂಗೆಯು ಉತ್ಪತ್ತಿಯಾಯಿತೆಂದರೆ ಅಖಂಡವಾದ ಪರಮಾತ್ಮನ ಒಂದುಭಾಗದಲ್ಲಿ ಮೂಲಪ್ರಕೃತಿಯಲ್ಲಿನ ಶುದ್ಧಸತ್ವಗುಣದಲ್ಲಿಬಿದ್ದ ಪ್ರತಿಬಿಂಬದ ಪ್ರಭೆಗೆ ಗಂಗೆಯೆಂದು ಹೆಸರು. ಈ ಪ್ರಭೆಯು ತ್ರಿಲೋಕಗಳಿಗೆ ವ್ಯಾಪಿಸುವುದರಿಂದ ಗಂಗೆಗೆ ತ್ರಿಪಥಗಾಮಿನಿಯೆಂಬ ಹೆಸರು ಬಂದಿರುವುದು.

ಪಿಂಡಾಂಡಸ್ವರೂಪವಾದ ಮನುಷ್ಯದೇಹದಲ್ಲಿಯೂ, ಶಿರಸ್ಸಿನಲ್ಲಿ ಭ್ರೂಮಧ್ಯ ಅಥವಾ ಆಜ್ಞಾಚಕ್ರದವರೆಗೆ ಇರುವ ಪರಮಾತ್ಮನ ಪ್ರತಿಬಿಂಬದಪ್ರಭೆಗೆ ದೇವಲೋಕದ ಗಂಗೆಯೆಂದೂ, ಕಂಠದಿಂದ ಕೆಳಕ್ಕೆ ಮೂಲಾಧಾರಚಕ್ರದವರೆಗೆಂದರೆ ಸೊಂಟದವರೆಗೆ ಇರುವ ಪರಮಾತ್ಮನ ಪ್ರತಿಬಿಂಬದಪ್ರಭೆಗೆ ಭೂಲೋಕದ ಗಂಗೆಯೆಂದೂ, ಮೂಲಾಧಾರಚಕ್ರದಿಂದ ಕೆಳಗೆ ಪಾದದವರೆಗೆ ಇರುವ ಪರಮಾತ್ಮನ ಪ್ರತಿಬಿಂಬದಪ್ರಭೆಗೆ ಪಾತಾಳಗಂಗೆ ಎಂದೂ ತತ್ವಾರ್ಥವಾಗಿರುತ್ತದೆ. ಮೇಲೆ ಭೂಲೋಕದ ಗಂಗೆಯೆಂದು ಹೇಳಿರುವುದೇ ನಮ್ಮಲ್ಲಿ ಸೂರ್ಯನಾಡಿಯಾಗಿರುತ್ತದೆ. ಈ ಸೂರ್ಯನಾಡಿಗೆ ಗಂಗೆಯೆಂದು ಶ್ರುತಿಯು ಆಧಾರವಿರುವುದು. ಅಂದರೆ ಭ್ರೂಮಧ್ಯದಮೇಲೆ ಇರುವ ಈಶ್ವರಸ್ಥಾನದಲ್ಲಿ ಸೂರ್ಯಕಳೆ ಎನಿಸಿಕೊಳ್ಳುವುದು. ಭ್ರೂಮಧ್ಯದಕೆಳಗೆ ಜೀವಸ್ಥಾನವಾದುದರಿಂದ ಸೂರ್ಯನಾಡಿ ಎನಿಸಿಕೊಂಡಿತು. ಆದುದರಿಂದ ಸವಿತೃ ಅಥವಾ ಈಶ್ವರತತ್ವವಾದ ಈ ವಿಶ್ವಾಮಿತ್ರರ ಪ್ರಕರಣದಲ್ಲಿ ಗಂಗಾನದಿಯ ತತ್ವವು ಸೂರ್ಯಕಳೆಯಾಗಿರುತ್ತದೆ. ಪರಮಾತ್ಮನ ಪ್ರತಿಬಿಂಬದಪ್ರಭೆಗೆ ಗಂಗಾ ಎನ್ನುವ ತತ್ವಾರ್ಥಕ್ಕೆ ಶ್ರೀಶಂಕರಭಗವತ್ಪಾದರವರು ಶಿವಭುಜಂಗಸ್ತೋತ್ರದಲ್ಲಿ,

**ಯದಾ ದುರ್ನಿವಾರ ವ್ಯಥೋಽಹಂ ಶಯಾನೋ |**
**ಲುಠನ್ನಿಶ್ವಸನ್ನಿಸ್ಸೃತಾನ್ಯಸ್ತ ಪಾಣಿಃ ||**

**ತದಾ ಜಹ್ನುಕನ್ಯಾ ಜಲಾಲಂಕೃತಂ ತೇ |**
**ಜಟಾಮಂಡಲಂ ಮನ್ಮನೋಮಂದಿರಂ ಸ್ಯಾತ್ ||**

ತಾ|| ಎಲೈ ಗಂಗಾಧರನೆ, ನಾನು ಯಾವಸಮಯದಲ್ಲಿ ನಿವಾರಿಸಲಶಕ್ಯವಾದ ದುಃಖದಿಂದ ಮುಳುಗಿಕೊಂಡು ಹೊರಳುತ್ತಾ, ನಿಟ್ಟುಸಿರುಬಿಡುತ್ತಾ, ಕೈಕಾಲುಗಳನ್ನು ದೊಡ್ಡದಾಗಿ ವಿಸ್ತಾರಮಾಡಿಕೊಂಡು ದುಃಖಪಡುತ್ತಲಿರುವೆನೋ ಅಂತಹ ಸಮಯದಲ್ಲಿ ಗಂಗಾಜಲದಿಂದ ಅಲಂಕೃತವಾದ ನಿನ್ನ ಜಟಾಮಂಡಲವು ನನ್ನ ಮನಸ್ಸಿಗೆ ಸ್ಥಾನವಾಗಿರಲಿ ಎಂಬದಾಗಿ ಪ್ರಾರ್ಥನೆಮಾಡಿರುತ್ತಾರೆ.

ಈ ಪ್ರಾರ್ಥನೆಯು ಸಗುಣಬ್ರಹ್ಮ ಅಥವಾ ವಿರಾಟ್ ಸ್ವರೂಪನಾದ ಈಶ್ವರನ ಪ್ರಾರ್ಥನೆಯಾಗಿರುತ್ತದೆ. ಈ ಪ್ರಾರ್ಥನೆಯು ಶ್ಲೋಕದಲ್ಲಿ ಜಟಾಮಂಡಲವೇ ನನ್ನ ಮನಸ್ಸಿಗೆ ಉತ್ಕ್ರಮಣಕಾಲದಲ್ಲಿ ಸ್ಥಾನವಾಗಿರಲೆಂದು ಪ್ರಾರ್ಥನೆಮಾಡಿರುವುದರ ತತ್ವವೇನೆಂದರೆ - ಆಕಾಶವೇ ಈಶ್ವರನ ಜಟೆಯು. ಇಂತಹ ಆಕಾಶಾಂತರ್ಗತವಾಗಿರುವ ಸ್ವಯಂಜ್ಯೋತಿಪ್ರಕಾಶವು ನನಗೆ ಪ್ರಾಣೋತ್ಕ್ರಮಣಕಾಲದಲ್ಲಿ ಭಾಸವಾಗುವಂತೆ ಮಾಡು ಎಂಬ ತತ್ವಾರ್ಥವಾಗಿರುತ್ತದೆ. ಅಂದರೆ ವಿದೇಹಮುಕ್ತಿಸ್ವರೂಪವನ್ನು ಕೊಡೆಂಬದಾಗಿ ಈಶ್ವರನನ್ನು ಪ್ರಾರ್ಥನೆಮಾಡಿದ್ದಾಗಿರುತ್ತದೆ. ಆದುದರಿಂದ ಈ ಮೇಲಿನ ಅಂತರಾರ್ಥಗಳನ್ನು ಅನುಸರಿಸಿ ಗಂಗಾನದಿಯೆಂಬುದು ಸೂರ್ಯಕಳೆಯಾಗಿರುವುದು.

ಇಂತಹ ಸೂರ್ಯಕಳೆಗೆ ಬಂದುಸೇರುವ ಸರಯೂನದಿಯು ತತ್ವವೇ ಚಂದ್ರಕಳೆಯಾಗಿರುತ್ತದೆ. ಹೇಗೆಂದರೆ ಸರಯೂ ಎಂಬ ಪದದ ಅರ್ಥವು "ಸರತೀತಿ ಸರಯೂಃ" ಅಂದರೆ ಸ್ರವಿಸಿಕೊಂಡು ಅಥವಾ ಪ್ರವಹಿಸಿಕೊಂಡು ಬರುವುದಾದುದರಿಂದ ಸರಯೂ ಎನಿಸಿಕೊಳ್ಳುತ್ತದೆ. ಸರಯೂನದಿಯು ಬ್ರಹ್ಮಮಾನಸಸರೋವರದಲ್ಲಿ ಹುಟ್ಟಿ ಪ್ರವಹಿಸಿಕೊಂಡು ಬರುವುದೆಂದರೆ ಚಿಚ್ಛಕ್ತಿಯು ಪರಬ್ರಹ್ಮನಿಂದ ಉದಯಿಸಿ ಅಲ್ಲಿಂದ ಅಮೃತಸ್ರಾವರೂಢಸೆ ಹರಿದುಬರುತ್ತಿದೆಯೆಂಬ ತಾತ್ಪರ್ಯವಾಗಿರುವುದರಿಂದ, ಸರಯೂ ಎಂದರೆ ಚಂದ್ರಕಳೆಯೆಂಬ ತತ್ವಾರ್ಥ. ಇದೇ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ಸೌಂದರ್ಯಲಹರಿಯಲ್ಲಿ ಹೇಳಿರುವ "ಸುಧಾಧಾರಾಸಾರೈಃ" ಎಂಬ ಶ್ಲೋಕವನ್ನು ಸುಂದರಕಾಂಡದಲ್ಲಿ ಕುಂಡಲಿನೀ ಉತ್ಥಾಪನೆಯ ಪ್ರಕರಣದಲ್ಲಿ ಬರೆದಿರುವುದು. ಅದನ್ನು ಇಲ್ಲಿಗೆ ಅನ್ವಯ ಮಾಡಿಕೊಳ್ಳಬೇಕು. ಆದುದರಿಂದ ಸರಯೂನದಿಯೆಂದರೆ ಚಂದ್ರಕಳೆಯಾಗಿರುತ್ತದೆ.

**ರಾ||** ಗಂಗಾನದಿಯ ಮಧ್ಯದಲ್ಲಿ ಶ್ರೀರಾಮಚಂದ್ರನು ನಿಂತುಕೊಂಡು ಗಂಗಾಸರಯೂ ಸಂಗಮಸ್ಥಳವನ್ನು ನೋಡಿದನು.

**ತತ್ವ||** ಹಿಂದಿನ ಪ್ರಕರಣವಾದ ಬಲಾತಿಬಲದ ತತ್ವದಲ್ಲಿ ತ್ರಿಗುಣಾತ್ಮಿಕವಾದ ಮೂಲಪ್ರಕೃತಿಯಲ್ಲಿ ಪರಮಾತ್ಮನು ಪ್ರತಿಬಿಂಬಿತನಾದನೆಂದು ತಿಳಿಸಿತಷ್ಟೆ. ಈ

ಮೂರು ಗುಣಗಳಲ್ಲಿ ಶುದ್ಧಸತ್ವಗುಣದಲ್ಲಿ ಬಿದ್ದ ಪ್ರತಿಬಿಂಬದಪ್ರಭೆಯು ಗಂಗಾ ಎನಿಸಿಕೊಳ್ಳುತ್ತದೆ. ಇಂತಹ ಪ್ರಭೆಯ ಮಧ್ಯದಲ್ಲಿ ಸೃಷ್ಟಿ, ಸ್ಥಿತಿ, ಲಯಕರ್ತನಾಗಿಯೂ, ಸರ್ವೇಶ್ವರನಾಗಿಯೂ, ಸರ್ವಜ್ಞನಾಗಿಯೂ ಇರುವ ಪ್ರತಿಬಿಂಬಚೈತನ್ಯನಾದ ಈಶ್ವರನಿರುವ ತತ್ವದ ಸೂಚನೆಯೇ ಶ್ರೀರಾಮಚಂದ್ರನು ಗಂಗಾನದಿಯ ಮಧ್ಯದಲ್ಲಿ ನಿಂತ ತತ್ವವಾಗಿರುವುದು.

ಸರಯೂನದಿಯ ತತ್ವವೇ ಚಂದ್ರಕಳೆಯೆಂದು ಮೇಲೆ ತಿಳಿಸಿತಷ್ಟೆ. ಚಿಚ್ಛಕ್ತಿಯು ಪರಬ್ರಹ್ಮನಿಂದ ಉದಯಿಸಿ ತ್ರಿಗುಣಾತ್ಮಿಕವಾದ ಮೂಲಪ್ರಕೃತಿಯೆನಿಸಿಕೊಂಡರೂ ಪರಬ್ರಹ್ಮನಿಂದ ಉದಯಿಸುವಾಗ ತನ್ನ ಚಿಚ್ಛಕ್ತಿಯ ಮಹತ್ತಿನ ಅಧಿಕಾಂಶವನ್ನು ಶುದ್ಧಸತ್ವಗುಣದಲ್ಲಿಟ್ಟುಕೊಂಡು ಅಮೃತಸ್ರಾವದೊಡನೆ ಬರುತ್ತಿರುವಳು. ಹೀಗೆ ಪ್ರವಹಿಸಿಕೊಂಡು ಬರುತ್ತಿರುವ ಅಮೃತಸ್ರಾವದೊಳಗೆ ಇರುವ ಶಕ್ತಿಯೇ ಪರಾಶಕ್ತಿಯಾಗಿರುತ್ತಾಳೆ. ಚಿಚ್ಛಕ್ತಿಯು ಪರಮಾತ್ಮನಿಂದ ಉದಯಿಸಿದ ಅನಂತರ ಮೂರುಗುಣಗಳಾಗಿ ಶುದ್ಧಸತ್ವಗುಣದಲ್ಲಿ ಚಿಚ್ಛಕ್ತಿಯ ಪ್ರಭಾವದ ಅಧಿಕಾಂಶವು ಇರುವುದೆಂಬ ತತ್ವವಾಗಿರುವುದು.

ಮೇಲಿನ ಅಂಶಗಳ ಮುಖ್ಯತಾತ್ಪರ್ಯವೇನೆಂದರೆ—ಶುದ್ಧಸತ್ವಗುಣದಲ್ಲಿ ಪರಾಶಕ್ತಿಯು ಇರುವಳೆಂತಲೂ ಇಂತಹ ಶುದ್ಧಸತ್ವಗುಣದಲ್ಲಿ ಬಿದ್ದ ಪರಮಾತ್ಮನ ಪ್ರತಿಫಲನದಚೈತನ್ಯನೇ ಈಶ್ವರನಾಗಿರುವನೆಂತಲೂ ಮುಖ್ಯತತ್ವವಾಗಿರುತ್ತದೆ. ಈ ಕಳಾಸ್ವರೂಪವು ಸಗುಣವಾಗಿರುವುದರಿಂದ ಸಗುಣರೂಪದಲ್ಲಿನ ಚತುರ್ಮುಖಬ್ರಹ್ಮ, ವಿಷ್ಣು, ರುದ್ರರ ಚೈತನ್ಯಗಳೇ ಈ ಈಶ್ವರಚೈತನ್ಯನಾಗಿಯೂ ಶಕ್ತಿಸ್ವರೂಪದಲ್ಲಿರುವ ಸರಸ್ವತಿ, ಲಕ್ಷ್ಮಿ, ಪಾರ್ವತಿಯರೇ ಈ ಪರಾಶಕ್ತಿಸ್ವರೂಪವಾಗಿಯೂ ಇರುವರು. ಸೃಷ್ಟಿ ಸ್ಥಿತಿ ಲಯಗಳ ಕಾರ್ಯಭೇದಗಳಿಂದ ಪ್ರತ್ಯೇಕ ಹೆಸರುಗಳುಬಂದಿರುವುವೇ ಹೊರತು ಈಶ್ವರಚೈತನ್ಯ ಒಂದೇ ಮತ್ತು ಪರಾಶಕ್ತಿಯು ಒಬ್ಬಳೇ.

ಗಂಗಾನದಿಯ ಮಧ್ಯದಲ್ಲಿ ನಿಂತುಕೊಂಡು ಶ್ರೀರಾಮಚಂದ್ರನು ಗಂಗಾಸರಯೂ ಸಂಗಮಸ್ಥಳವನ್ನು ನೋಡಿದ ಮತ್ತು ಸಂಗಮಪ್ರದೇಶದಲ್ಲಿ ಮನ್ಮಥನು ದಹಿಸಲ್ಪಟ್ಟ ವಿಚಾರಗಳನ್ನು ವಿಶ್ವಾಮಿತ್ರರಿಂದ ಕೇಳಿದ ತತ್ವಗಳೇನೆಂದರೆ—ಚಂದ್ರಕಳಾರೂಪದಲ್ಲಿರುವ ಪರಾಶಕ್ತಿ ಮತ್ತು ಸೂರ್ಯಕಳಾಸ್ವರೂಪದಲ್ಲಿರುವ ಈಶ್ವರಚೈತನ್ಯಗಳೆರಡೂ ಕೂಡಿ ಸಕಲ ಸೃಷ್ಟಿಗಳನ್ನು ಮಾಡಲು ಸಂಕಲ್ಪಿಸಿಕೊಂಡ ತತ್ವವೇ ಗಂಗಾಸರಯೂಸಂಗಮದ ತತ್ವವಾಗಿರುವುದು. ಈ ಪ್ರದೇಶದಲ್ಲಿ ಮನ್ಮಥನು ಈಶ್ವರನಿಂದ ದಗ್ಧವಾದನೆಂದರೆ—ಸಾಧಾರಣ ಪ್ರಾಣಿಗಳು ಕಾಮವಿಕಾರಕ್ಕೆ ಒಳಗಾಗುವಂತೆ ಈಶ್ವರನು ಒಳಗಾಗದೆ ಇಚ್ಛಾಮಾತ್ರನಾದ ಲೀಲಾಪ್ರಭುವೆಂಬ ತತ್ವವನ್ನು ಸೂಚಿಸುವಿಕೆಯೇ ಕಾಮದಹನದ ತತ್ವವಾಗಿರುವುದು. ಅಂದರೆ ಈಶ್ವರನು ಪರಾಶಕ್ತಿಯೊಡಗೂಡಿ ಇಚ್ಛಾಮಾತ್ರಸಂಕಲ್ಪದಿಂದ ಸೃಷ್ಟಿಮಾಡುವ

ನಲ್ಲದೆ ಈಶ್ವರನಲ್ಲಿ ಕಾಮವಿಕಾರಗಳಿರುವುದಿಲ್ಲವೆಂಬ ತತ್ವವಾಗಿರುವುದು. ಅಲ್ಲದೆ ಮನ್ಮಥನನ್ನು ಅನಂಗನನ್ನಾಗಿ ಮಾಡಿದುದು ಸರ್ವಪ್ರಾಣಿಗಳ ಉಪಯೋಗಕ್ಕೋಸ್ಕರ.

ಈಶ್ವರನು ಇಚ್ಛಾಮಾತ್ರಪ್ರಭುವಾಗಿ ಸಕಲಸೃಷ್ಟಿಗಳನ್ನೂ ಮಾಡುವನೆಂಬ ತಾತ್ಪರ್ಯಕ್ಕೆ ವಾಸಿಷ್ಠರಾಮಾಯಣ ಉತ್ಪತ್ತಿಪ್ರಕರಣ ಐವತ್ತೈದನೆಯ ಅಧ್ಯಾಯದಲ್ಲಿ,

**ಸರ್ವಾತ್ಮಕತ್ವಾತ್ ಸಯತೋ ಯಥೋದೇತಿ ಚಿದೀಶ್ವರಃ |**
**ಪರಮಾಕಾಶ ಶುದ್ಧಾತ್ಮಾ ತತ್ರತತ್ರ ಭವೇತ್ತಥಾ ||**

ತಾ|| ಕೇವಲ ಚಿದ್ರೂಪನಾಗಿಯೂ ಆಕಾಶದಂತೆ ನಿರ್ಮಲನಾಗಿಯೂ ಇರುವ ಈಶ್ವರನು ಸ್ವಯಂಸರ್ವಾತ್ಮಕನಾಗಿರುವುದರಿಂದ ಯಾವಸಂದರ್ಭದಲ್ಲಿ ಹೇಗೆಉದಯಿಸುವನೋ ಅಲ್ಲಲ್ಲಿ ಹಾಗೆ ಹಾಗೆಯೇ ಆಗುವನು ಎಂದು ಹೇಳಿರುವುದು.

ಅಲ್ಲದೆ ಮೇಲಿನ ತತ್ವಗಳಿಗೆ ಅನ್ವಯವಾಗುವಂತೆ ಶ್ವೇತಾಶ್ವತರೋಪನಿಷದ್ವಾಕ್ಯಕ್ಕೆ ಅನುಸಾರವಾಗಿ ಶ್ರೀವಿದ್ಯಾರಣ್ಯರವರು ಪಂಚದಶಿ ಚಿತ್ರದೀಪಿಕೆ ೧೫೭ನೆಯ ಶ್ಲೋಕದಲ್ಲಿ,

**ಮಾಯಾಧೀನಶ್ಚಿದಾಭಾಸಶ್ಶ್ರುತೋಮಾಯೀ ಮಹೇಶ್ವರಃ|**
**ಅಂತರ್ಯಾಮೀಚ ಸರ್ವಜ್ಞೋ ಜಗದ್ಯೋನಿಸ್ಸಏವಹಿ ||**

ತಾ|| ಶುದ್ಧಸತ್ವಪ್ರಧಾನಮಾಯೆಯಲ್ಲಿ ಪ್ರತಿಬಿಂಬಿಸಿದ ಚಿದಾಭಾಸಚೈತನ್ಯನು ಮಾಯೆಗೆ ಆಧಾರನೆಂತಲೂ ಈಶ್ವರನೆಂತಲೂ ಶ್ರುತಿಯು ತಿಳಿಸುವುದು. ಈ ಚಿದಾಭಾಸಚೈತನ್ಯನೇ ಅಂತರ್ಯಾಮಿಯೆಂತಲೂ ಸರ್ವಜ್ಞನೆಂತಲೂ ಪ್ರಪಂಚಕ್ಕೆ ಕಾರಣನೆಂತಲೂ ಶ್ರುತಿಯು ತಿಳಿಸುವುದು. ಎಂದು ಹೇಳಿರುತ್ತಾರೆ.

ಈ ಪ್ರಕರಣದ ತತ್ವದಂತೆ ಸೂರ್ಯಚಂದ್ರಕಳೆಗಳ ತತ್ವವಾದ ಈಶ್ವರನೂ ಪರಾಶಕ್ತಿಯೂ ಸೇರಿ ಸಕಲಸೃಷ್ಟಿಗಳಾಗುವುವೆಂಬ ತತ್ವಕ್ಕೆ ಪ್ರಶ್ನೋಪನಿಷತ್ ಪ್ರಥಮ ಪ್ರಶ್ನೆಯಲ್ಲಿ,

**ರಯಿಂಚಪ್ರಾಣಂಚೇತ್ಯೇತೌಮೇಬಹುಧಾಃಪ್ರಜಾಃ ಕರಿಷ್ಯತ ಇತಿ |**
**ಆದಿತ್ಯೋಹವೈಪ್ರಾಣೋರಯಿರೇವಚಂದ್ರಮಾಃ ||**

ತಾ|| ಚಂದ್ರಸೂರ್ಯರಿಂದ ಸಕಲ ಸೃಷ್ಟಿಯೂ ಆಗಿರುವುದು. ಆದಿತ್ಯನೆಂದರೆ ಪ್ರತಿಬಿಂಬಚೈತನ್ಯನಾದ ಈಶ್ವರನೇ ಪ್ರಾಣ. ಪರಾಶಕ್ತಿಯೇ ಚಂದ್ರನು. ಎಂದು ಹೇಳಿರುವುದು.

ಇದೇ ತಾತ್ಪರ್ಯಕ್ಕೆ ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆ ೧೪ನೇ ಅಧ್ಯಾಯ ೭ನೇ ಶ್ಲೋಕದಲ್ಲಿ,

**ಮಮಯೋನಿರ್ಮಹದ್ಬ್ರಹ್ಮ ತಸ್ಮಿನ್ಗರ್ಭಂದಧಾಮ್ಯಹಂ ।**
**ಸಂಭವಸ್ಸರ್ವಭೂತಾನಾಂ ತತೋಭವತಿಭಾರತ ॥**

ತಾ॥ ಮಹತ್ತಾದ ಪರಾಶಕ್ತಿಯೇ ನಾನು ಬೀಜವನ್ನು ಬಿತ್ತುವ ಸ್ಥಳ. ಅಲ್ಲಿ ನಾನು ಗರ್ಭವನ್ನು ನಿಲ್ಲಿಸುವೆನು. ಅಲ್ಲಿಂದ ಸಮಸ್ತ ಚರಾಚರಗಳೂ ಉತ್ಪತ್ತಿಯಾಗುವುವು. ಎಂದು ಹೇಳಿರುತ್ತಾನೆ.

ಗಂಗಾಸರಯೂ ಸಂಗಮಸ್ಥಳದಲ್ಲಿ ಕೇಳಿಬರುವ ಶಬ್ದದ ತತ್ವವೇನೆಂದರೆ—ಚಿಚ್ಛಕ್ತಿಯು ಆತ್ಮನಿಂದ ಉದಯಿಸಿ ಮೂರುಗುಣಗಳಾದಕೂಡಲೆ ಸೃಷ್ಟಿಕಾರ್ಯಕ್ಕೆ ಪ್ರಾರಂಭವಾಗುವುದು. ಹೀಗೆ ಸೃಷ್ಟಿಕಾರ್ಯಕ್ಕೆ ಪ್ರಾರಂಭವಾದಾಗ ಪರಾಶಕ್ತಿಯೊಡಗೂಡಿದ ಈಶ್ವರನು ಮೂರುಗುಣಗಳ ಸಂಘಟನದಿಂದ ಓಂಕಾರ ಶಬ್ದವನ್ನುಂಟುಮಾಡುವುದೇ ಗಂಗಾಸರಯೂ ಸಂಗಮಸ್ಥಳದಲ್ಲಿ ಶ್ರೀರಾಮಚಂದ್ರನು ಕೇಳಿದ ಶಬ್ದದ ತತ್ವವಾಗಿರುವುದು. ಈ ಓಂಕಾರಶಬ್ದದಿಂದ ಸೂಕ್ಷ್ಮಸೃಷ್ಟಿಗಳು ಪ್ರಥಮದಲ್ಲಿ ಉಂಟಾಗುವುವು. ಓಂಕಾರಶಬ್ದವು ಪೂಜಾರ್ಹವಾದುದೆಂಬ ತತ್ವವನ್ನು ಅನುಸರಿಸಿ ಶ್ರೀರಾಮಚಂದ್ರಮೂರ್ತಿಯು ವಿಶ್ವಾಮಿತ್ರರ ವಾಕ್ಯದಂತೆ ಸಂಗಮದಲ್ಲಿ ಕೇಳಿಬರುವ ಶಬ್ದಕ್ಕೆ ನಮಸ್ಕಾರಮಾಡಿರುವನು.

ಗಂಗಾಸರಯೂ ಸಂಗಮದ ಮುಖ್ಯಸಾರಾಂಶವೇನೆಂದರೆ—ಬಲಾತಿಬಲಾ ತತ್ವದಲ್ಲಿ ಸೃಷ್ಟಿಗೆ ಪೂರ್ವದಲ್ಲಿ ಮೂಲಪ್ರಕೃತಿಯೊಡನೆ ಇರುವ ಪರಮಾತ್ಮನ ಪ್ರತಿಬಿಂಬಚೈತನ್ಯದ ವಿಚಾರ ತಿಳಿಸಿತಷ್ಟೆ. ಈ ಗಂಗಾಸರಯೂ ಸಂಗಮದ ತತ್ವದಲ್ಲಿ ರಜಸ್ತಮೋಗುಣಗಳೊಡನೆ ಬೆರೆಯದೆ ಇರುವ ಶುದ್ಧಸತ್ವಗುಣದಲ್ಲಿರುವ ಈಶ್ವರಚೈತನ್ಯವು ಪರಾಶಕ್ತಿಯೊಡಗೂಡಿ ಸೃಷ್ಟಿಸಬೇಕೆಂಬ ಸಂಕಲ್ಪದಿಂದ ಮೂರುಗುಣಗಳ ಸಂಘಟನದಿಂದ ಓಂಕಾರಶಬ್ದವನ್ನುಂಟುಮಾಡಿ ಸೂಕ್ಷ್ಮಸೃಷ್ಟಿಗಳಿಗೆ ಆರಂಭವಾಗುವ ತತ್ವವಾಗಿರುವುದು. ಇನ್ನು ಮುಂದಿನ ರಾಮಾಯಣಕಥೆಯನ್ನು ಅನುಸರಿಸೋಣ.

## ೫ನೆಯ ಪ್ರಕರಣ.

<table>
<tr>
<td>ಶ್ರೀರಾಮನು ತಾಟಕಾವನವನ್ನು<br>ಪ್ರವೇಶಿಸಿ ತಾಟಕಿಯನ್ನು<br>ಸಂಹರಿಸಿದುದು.</td>
<td></td>
<td>ಸ್ಥೂಲಬ್ರಹ್ಮಾಂಡ ಸೃಷ್ಟಿಯ<br>ವಿಚಾರ.</td>
</tr>
</table>

**ರಾ॥** ವಿಶ್ವಾಮಿತ್ರರು ಗಂಗಾಸರಯೂ ಸಂಗಮಸ್ಥಳದಿಂದ ಶ್ರೀರಾಮಲಕ್ಷ್ಮಣರನ್ನು ತಾಟಕಾವನಕ್ಕೆ ಕರೆದುಕೊಂಡುಹೋಗಿ ಶ್ರೀರಾಮನಿಂದ ತಾಟಕಿಯನ್ನು ಸಂಹಾರ ಮಾಡಿಸಿದರು.

**ತತ್ವ||** ಬಲಾತಿಬಲದಲ್ಲಿ ಮೂಲಪ್ರಕೃತಿಯೊಡಗೂಡಿದ ಪರಬ್ರಹ್ಮದ ಪ್ರತಿಬಿಂಬ ಚೈತನ್ಯದ ವಿಚಾರವು ತಿಳಿಸಲ್ಪಟ್ಟಿತು. ಅನಂತರ ಗಂಗಾಸರಯೂ ಸಂಗಮದ ಸಂದರ್ಭದಲ್ಲಿ ಮೂಲಪ್ರಕೃತಿಯೇ ಸತ್ವರಜಸ್ತಮೋಗುಣಗಳಾಗಿ ವಿಭಾಗಿಸುವ, ಅಂದರೆ ಸಾಮ್ಯಾವಸ್ಥೆಯನ್ನು ಬಿಡುವ, ಈಶ್ವರಚೈತನ್ಯ ಮತ್ತು ಸೂಕ್ಷ್ಮಸೃಷ್ಟಿಯ ವಿಚಾರವು ತಿಳಿಸಲ್ಪಟ್ಟಿತು. ಬ್ರಹ್ಮಾಂಡವನ್ನು ಸೃಷ್ಟಿಮಾಡಲು ಈಶ್ವರನು ಸಂಕಲ್ಪಿಸಿಕೊಂಡನಂತರ ಪ್ರಥಮದಲ್ಲಿ ತಮಃಪ್ರಧಾನಮಾಯೆಯನ್ನು ವೀಕ್ಷಿಸಿದನು. ತಮಃಪ್ರಧಾನಮಾಯೆಯು ಈಶ್ವರಾಜ್ಞೆಯಂತೆ ಬ್ರಹ್ಮಾಂಡವನ್ನು ಸೃಷ್ಟಿಮಾಡಿದರೂ ಈಶ್ವರನು ಇದರಲ್ಲಿ ಪ್ರವೇಶಮಾಡದೆ ಇದ್ದುದರಿಂದ ಚೇತನಬರದೆ ಜಡವಾಗಿಯೇ ಇತ್ತು. ಬ್ರಹ್ಮಾಂಡದಲ್ಲಿದ್ದ ಜಡಸ್ವರೂಪವೇ ತಾಟಕಿಯಾಗಿರುತ್ತಾಳೆ.

ತಾಟಕಾ ಎಂದರೆ —" ತಾಟಂಕರೋತೀತಿ ತಾಟಕಾ" ವಿಭ್ರಾಂತಿಯನ್ನುಂಟುಮಾಡತಕ್ಕವಳು. ಎಂದರೆ ತಮೋಗುಣಾಧಿಕ್ಯದಿಂದ ಸೃಷ್ಟಿಕ್ರಮವು ಸಂಪೂರ್ಣವಾಗದೆ ಬ್ರಹ್ಮಾಂಡವು ಜಡವಾಗಿದ್ದುದೇ ತಾಟಕಿಯ ತತ್ವವಾಗಿರುವುದು. ಇವಳು ಮಾರೀಚನಿಗೆ ತಾಯಿಯು. ಮಾರೀಚನೆಂದರೆ—ಮಂಗುವವನು ಅಥವಾ ಆವರಿಸುವವನು ಎಂಬ ತತ್ವವಾಗಿರುವುದು. ರಜಸ್ತಮೋಗುಣಗಳಲ್ಲಿ ತಮೋಗುಣವು ಆವರಣ ಅಥವಾ ಮುಚ್ಚಿಕೊಳ್ಳುವ ಸ್ವಭಾವವುಳ್ಳದ್ದಾದುದರಿಂದ ಮಾರೀಚನು ತಾಟಕಿಗೆ ಮಗನಾಗಿರುತ್ತಾನೆ.

ಈಶ್ವರನು ತಮಃಪ್ರಧಾನಪ್ರಕೃತಿಯಿಂದ ಸೃಷ್ಟಿಮಾಡಿಸಿದ ಬ್ರಹ್ಮಾಂಡದಲ್ಲಿ ತಾನು ಪ್ರವೇಶಮಾಡಿ ಬ್ರಹ್ಮಾಂಡದಲ್ಲಿದ್ದ ತಟಸ್ಥಸ್ವಭಾವವನ್ನು ನಿವಾರಣೆಮಾಡಿ ಚೇತನವುಳ್ಳದ್ದಾಗಿಮಾಡಿ ಸೃಷ್ಟಿಕಾರ್ಯವನ್ನು ಸಂಪೂರ್ಣಕ್ಕೆ ತರುವುದೇ ಶ್ರೀರಾಮನು ತಾಟಕಾವನವನ್ನು ಪ್ರವೇಶಿಸಿ ಅವಳನ್ನು ನಿಗ್ರಹಿಸಿದ ತತ್ವವಾಗಿರುವುದು. ಈ ಮೇಲಿನ ತತ್ವಾರ್ಥಗಳಿಗೆ ಅನುಸಾರವಾಗಿ ಶ್ರೀವಿದ್ಯಾರಣ್ಯರವರು ಪಂಚದಶಿ ಪ್ರತ್ಯಕ್ತತ್ತ್ವ ವಿವೇಕಪ್ರಕರಣ ೧೮ನೇ ಶ್ಲೋಕದಲ್ಲಿ,

**ತಮಃಪ್ರಧಾನಪ್ರಕೃತೇ ಸ್ತದ್ಭೋಗಾಯೇಶ್ವರಾಜ್ಞಯಾ |**
**ವಿಯತ್ಪವನತೇಜೋಂಬು ಭುವೋಭೂತಾನಿಜಜ್ಞಿರೇ ||**

ತಾ|| ಜೀವರ ಭೋಗಕ್ಕಾಗಿ ತಮೋಗುಣವೇ ಪ್ರಧಾನವಾಗುಳ್ಳ ಪ್ರಕೃತಿಯು ಈಶ್ವರನ ಆಜ್ಞೆಯಿಂದ ಪಂಚಭೂತಗಳನ್ನೂ ಸೃಷ್ಟಿಸಿತು.

ಅಲ್ಲದೆ ಇದೇ ಪಂಚದಶಿ ಚಿತ್ರದೀಪಿಕೆ ೨೧೩ನೇ ಶ್ಲೋಕದಲ್ಲಿ ಶ್ರುತಿವಾಕ್ಯಕ್ಕೆ ಅನುಸಾರವಾಗಿ,

**" ಈಕ್ಷಣಾದಿಪ್ರವೇಶಾಂತಾ ಸೃಷ್ಟಿರೀಶೇನ ಕಲ್ಪಿತಾ "**

ಎಂಬದಾಗಿ ಹೇಳಿರುತ್ತಾರೆ. ಅಂದರೆ ಸೃಷ್ಟಿಮಾಡಲು ಈಶ್ವರನು ತಮಃಪ್ರಧಾನ ಪ್ರಕೃತಿಗೆ ಆಜ್ಞೆಮಾಡಿದುದೇ ಈಕ್ಷಣೆಯಾಗಿರುತ್ತದೆ. ಸೃಷ್ಟಿಯಾದ ಬ್ರಹ್ಮಾಂಡಕ್ಕೆ ಚೇತನವನ್ನುಂಟುಮಾಡಲು ಪ್ರೇರಕ ಅಥವಾ ಅಂತರ್ಯಾಮಿಯಾಗಿರುವುದೇ ಈಶ್ವರನು ಪ್ರವೇಶಮಾಡಿದ ತತ್ವವಾಗಿರುವುದು. ಈ ತತ್ವಕ್ಕೆ ಅನುಸಾರವಾಗಿ ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆ ೧೮ನೇ ಅಧ್ಯಾಯ ೬೧ನೇ ಶ್ಲೋಕದಲ್ಲಿ,

ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ |
ಭ್ರಾಮಯನ್ಸರ್ವಭೂತಾನಿ ಯನ್ತ್ರಾರೂಢಾನಿ ಮಾಯಯಾ ||

ತಾ|| ಎಲೈ ಅರ್ಜುನನೆ, ಈಶ್ವರನು ಸರ್ವಭೂತಗಳ ಅಂದರೆ ಪಂಚಭೂತಗಳ ಅಂತರಾಳದಲ್ಲಿ ಅಂತರ್ಯಾಮಿಯಾಗಿ, ಸೂತ್ರಧಾರಿಯು ಯಂತ್ರಚಲನೆಯನ್ನು ಮಾಡಿಸಿದಂತೆ ತನ್ನ ಮಾಯಾಸೂತ್ರದಿಂದ ತಿರುಗಿಸುತ್ತಲಿರುವನು. ಎಂದು ಹೇಳಿರುವನು.

ಇದೇ ತಾತ್ಪರ್ಯಕ್ಕೆ ಶ್ರೀವಿದ್ಯಾರಣ್ಯಸ್ವಾಮಿಗಳು ಪಂಚದಶಿ ಚಿತ್ರದೀಪಿಕೆ ೧೭೫ನೇ ಶ್ಲೋಕದಲ್ಲಿ,

ಅಂತರ್ಯಾಮಯತೀತ್ಯೇವಂ ಶ್ರುತ್ಯೈವ ಯಮೋಽಪಾರ್ಥಶ್ರುತೌಶ್ರುತಃ |
ಪೃಥಿವ್ಯಾದಿಷುಸರ್ವತ್ರ ನ್ಯಾಯೋಽಯಂಯೋಜ್ಯತಾಂಧಿಯಾ ||

ತಾ|| ಈಶ್ವರನು ಅಂತರ್ಯಾಮಿಯಾಗಿ ಪ್ರೇರಿಸುತಲಿದ್ದಾನೆಂದು ಶ್ರುತಿಯಲ್ಲಿ ಹೇಳಿರುವ ಅರ್ಥವೇ ಭಗವದ್ಗೀತೆಯಲ್ಲಿಯೂ ಉಕ್ತವಾಗಿರುವುದು. ಈ ಅಂತರ್ಯಾಮಿಯಾಗಿ ಪ್ರೇರಿಸುವಿಕೆಯು ಪೃಥಿವ್ಯಾದಿ ಪಂಚಭೂತಗಳ ಕಾರ್ಯಗಳಿಗೂ ಅನ್ವಯಮಾಡಿಕೊಳ್ಳಬೇಕು. ಎಂದು ಹೇಳಿರುತ್ತಾರೆ.

ಈ ಮೇಲಿನ ತತ್ವಗಳೇ ಶ್ರೀರಾಮಚಂದ್ರಮೂರ್ತಿಯು ತಾಟಕಾವನವನ್ನು ನೋಡಿದುದು ಮತ್ತು ತಾಟಕಿಯನ್ನು ನಿಗ್ರಹಿಸಿದ ತತ್ವವಾಗಿರುವುದು.

## ೬ನೆಯ ಪ್ರಕರಣ.

| ಶ್ರೀರಾಮನು ಸುಬಾಹು ಮಾರೀಚರ ಬಾಧೆಯನ್ನು ತಪ್ಪಿಸಿ ವಿಶ್ವಾಮಿತ್ರರ ಯಜ್ಞಪೂರ್ತಿಮಾಡಿಸಿದುದು. | ವಿರಾಟ್ ಸ್ವರೂಪದ ಸೃಷ್ಟಿಯು ಪೂರ್ಣವಾಗುವಿಕೆ. |
|---|---|

ರಾ|| ವಿಶ್ವಾಮಿತ್ರರು ಶ್ರೀರಾಮನಿಂದ ತಾಟಕಿಯನ್ನು ವಧೆಮಾಡಿಸಿದನಂತರ ಸುಬಾಹು ಮಾರೀಚರ ಬಾಧೆಯನ್ನು ತಪ್ಪಿಸಿ ಯಜ್ಞವನ್ನು ಪೂರ್ತಿಮಾಡಿಸಿದುದಲ್ಲದೆ ಶ್ರೀರಾಮನಿಗೆ ಸಕಲಾಸ್ತ್ರಗಳ ಮಂತ್ರಗಳನ್ನೂ ಉಪದೇಶಮಾಡಿದರು,

**ತತ್ವ||** ಸೃಷ್ಟಿಸಿದ ಬ್ರಹ್ಮಾಂಡವು ಜಡವಾಗಿದ್ದುದರಿಂದ ಈಶ್ವರನು ಅದರಲ್ಲಿ ಪ್ರವೇಶ ಮಾಡಿ ಚೈತನ್ಯವನ್ನುಂಟುಮಾಡಿದನೆಂದು ಹಿಂದಿನ ಪ್ರಕರಣದಲ್ಲಿ ತಿಳಿ... ತ್ವವು ನಿವಾರಣೆಯಾಗಿ ಚೈತನ್ಯ ಬರಲು ರಜಸ್ತಮೋಗುಣಗಳು ಶುದ್ಧಸತ್ವಗುಣವನ್ನು ಅತಿಕ್ರಮಿಸಿಕೊಂಡು ಬರುವುದೇ ಸುಬಾಹು ಮಾರೀಚರು ವಿಶ್ವಾಮಿತ್ರರ ಯಜ್ಞಕ್ಕೆ ತೊಂದರೆಮಾಡಿದ ತತ್ವವಾಗಿರುವುದು. ಸುಬಾಹುವೆಂದರೆ ಸಮಿಾಚೀನವಾದ ಬಾಹು ಬಲವುಳ್ಳವನೆಂದು ಅರ್ಥವಾಗುತ್ತದೆ. ಬಾಹುಬಲವು ಕ್ರಿಯಾತ್ಮಕವನ್ನು ಸೂಚಿಸುವುದ ರಿಂದ ಸುಬಾಹುವು ಕ್ರಿಯಾತ್ಮಕವಾದ ರಜೋಗುಣವಾಗಿರುತ್ತಾನೆ.

ಮಾರೀಚನೆಂದರೆ ನುಂಗುವವನು ಅಥವಾ ಆವರಿಸುವವನು. ರಜಸ್ತಮೋಗುಣ ಗಳಲ್ಲಿ ಆವರಣ ಅಥವಾ ಮುಚ್ಚಿಕೊಳ್ಳುವುದೇ ತಮೋಗುಣವಾಗಿರುತ್ತದೆ. ಆದುದ ರಿಂದ ಶುದ್ಧಸತ್ವಗುಣವನ್ನು ಅತಿಕ್ರಮಿಸಿ ರಜೋಗುಣ ತಮೋಗುಣಗಳು ಬರುವ ತತ್ವವೇ ಸುಬಾಹು ಮಾರೀಚರು ಶ್ರೀರಾಮನೊಡನೆ ಯುದ್ಧಕ್ಕೆ ಬರುವ ತಾತ್ಪರ್ಯ ವಾಗಿರುತ್ತದೆ. ಶುದ್ಧಸತ್ವಗುಣದಲ್ಲೆಂದರೆ ಈಶ್ವರತ್ವದಲ್ಲಿ ರಜಸ್ತಮೋಗುಣಗಳ ವ್ಯಾಪಾರವಿರಕೂಡದೆಂಬ ತಾತ್ಪರ್ಯವನ್ನು ಅನುಸರಿಸಿ ಶ್ರೀರಾಮಚಂದ್ರನು ಸುಬಾಹು ಮಾರೀಚರ ಬಾಧೆತಪ್ಪಿಸಿ ವಿಶ್ವಾಮಿತ್ರರ ಯಜ್ಞಪೂರ್ತಿಮಾಡಿಸಿದುದಾಗಿರುವುದು. ಮುಖ್ಯತಾತ್ಪರ್ಯವೇನೆಂದರೆ ಸಮಸ್ತಪ್ರಾಣಿಗಳಲ್ಲಿರುವ ಶುದ್ಧಸತ್ವಗುಣದ ಸೋಪಾನದಲ್ಲಿ ಎಂದರೆ ಈಶ್ವರತ್ವದಲ್ಲಿ, ರಜೋಗುಣದ ಕಾರ್ಯವಾದ ವಿಕ್ಷೇಪ ಮತ್ತು ತಮೋಗುಣದ ಕಾರ್ಯವಾದ ಆವರಣಗಳು ಇರುವುದಿಲ್ಲವೆಂಬ ತತ್ವಾರ್ಥದ ಸೂಚನೆಯೇ ಶ್ರೀರಾಮನು ಸುಬಾಹು ಮಾರೀಚರ ಬಾಧೆ ತಪ್ಪಿಸಿದ್ದಾಗಿರುವುದು.

ವಿಶ್ವಾಮಿತ್ರರು ತಾಟಕಾ ಸುಬಾಹು ಮಾರೀಚರ ಬಾಧೆಯನ್ನು ತಪ್ಪಿಸಿಕೊಂಡು ತಮ್ಮ ಯಜ್ಞಪೂರ್ತಿಮಾಡಿಕೊಂಡರೆಂದರೆ— ಸಕಲ ಚರಾಚರರೂಪವಾದ ಬ್ರಹ್ಮಾಂಡ ವನ್ನೂ ಸೃಷ್ಟಿಸಿ ವಿರಾಟ್ ಸ್ವರೂಪಸೃಷ್ಟಿಯನ್ನು ಪೂರ್ಣಮಾಡಿಕೊಂಡುದೇ ವಿಶ್ವಾಮಿತ್ರರ ಯಜ್ಞಪೂರಯಿಸಿದುದರ ತತ್ವವಾಗಿರುತ್ತದೆ. ಅಲ್ಲದೆ ಸತ್ವಗುಣದಲ್ಲಿ ಮಲಿನಸತ್ವ ಶುದ್ಧ ಸತ್ವಗಳೆಂಬ ವಿಭಾಗಗಳು ಮಾಡಿದ ಮತ್ತು ಬಹ್ಮಾಂಡಕ್ಕೆ ಚೇತನತ್ವವನ್ನುಂಟುಮಾಡಿದ ಸೃಷ್ಟಿಕ್ರಮವು ಪೂರ್ತಿಯಾಗುವ ತತ್ವವೇ ವಿಶ್ವಾಮಿತ್ರರ ಯಜ್ಞಪೂರ್ತಿಯಾದ ತತ್ವ ವಾಗಿರುತ್ತದೆ.

ವಿಶ್ವಾಮಿತ್ರರು ಶ್ರೀರಾಮಲಕ್ಷ್ಮಣರಿಗೆ ಸಕಲಾಸ್ತ್ರಗಳನ್ನೂ ಉಪದೇಶಮಾಡಿರು ವುದರ ತತ್ವವೇನೆಂದರೆ—ಸಕಲಸೃಷ್ಟಿಯು ಸಂಪೂರ್ಣಸ್ಥಿತಿಗೆ ಬಂದಿತೆಂದು ಮೇಲೆ ತಿಳಿಸಿ ತಷ್ಟೆ. ಹೀಗೆ ಸೃಷ್ಟಿ ಸ್ಥಿತಿ ಲಯಗಳ ಕ್ರಮಕ್ಕೆ ಈಶ್ವರನೇ ಕರ್ತನೆಂದೂ ಧಾತೃವೆಂದೂ

ನಿಯಾಮಕನೆಂದೂ ಸೂಚಿಸುವ ತತ್ವಾರ್ಥವುಳ್ಳ ಶ್ರೀರಾಮಚಂದ್ರನಲ್ಲಿರುವ ಈಶ್ವರಮಹಿಮೆಯನ್ನು ಪ್ರತಿಪಾದನೆಮಾಡುವ ಸೂಚನೆಯು ತತ್ವವೇ ಅಸ್ತ್ರಪ್ರತ್ಯಸ್ತ್ರಸ್ವೀಕಾರವು. ಈ ನಿಯಾಮಕಸ್ವರೂಪನಾದ ಈಶ್ವರನೇ ಪ್ರಾಣಶಬ್ದಾರ್ಥವಾದ ಪರಬ್ರಹ್ಮನೆಂದೂ, ಇವನೇ ಸರ್ವಕ್ಕೂ ನಿಯಾಮಕನೆಂದೂ ಸೂಚಿಸುವ ಕಠೋಪನಿಷತ್ ದ್ವಿತೀಯಾಧ್ಯಾಯ ಷಷ್ಠವಲ್ಲಿ ಎರಡನೇ ಮಂತ್ರವನ್ನು ಇಲ್ಲಿ ವಿವರಿಸಿರುತ್ತದೆ.

**ಯದಿದಂಕಿಂಚಜಗತ್ಸರ್ವಂ ಪ್ರಾಣಏಜತಿನಿಸ್ಸೃತಂ |**
**ಮಹದ್ಭಯಂವಜ್ರಮುದ್ಯತಂ ಯಏತದ್ವಿದುರಮೃತಾಸ್ತೇಭವನ್ತಿ ||**

ತಾ|| ಕಂಡು ಕೇಳಿಬರುವ ಸಮಸ್ತ ಪ್ರಪಂಚವೂ, ಪ್ರಾಣಶಬ್ದಾರ್ಥವಾದ ಪರಬ್ರಹ್ಮ ನಿರಲು ಕಂಪಿಸುತ್ತದೆ. ಅಂದರೆ ಪ್ರತಿಯೊಂದೂ ತನ್ನ ಕೆಲಸವನ್ನು ಮಾಡದಿದ್ದರೆ ತನಗಾವ ಪ್ರತ್ಯವಾಯ ಬರುವುದೋ ಅಥವಾ ಶಿಕ್ಷೆಯುಂಟಾಗುವುದೋ ಎಂಬ ಭಯದಿಂದ ನಡುಗುತ್ತದೆ. ಅದೇ ಜಗದುತ್ಪತ್ತ್ಯಾದಿಗಳಿಗೆ ಮೂಲಕಾರಣ. ಮೇಲಕ್ಕೆತ್ತಿಹಿಡಿದ ವಜ್ರಾಯುಧದಿಂದ ಹೇಗೋ ಹಾಗೆ ಸೂರ್ಯಚಂದ್ರಾಗ್ನ್ಯಾದಿ ಸಮಸ್ತಪ್ರಪಂಚವೂ ಅದಕ್ಕೆ ಅಂಜಿ ಅಡಿಯಾಳಾಗಿರುವುದು. ಇಂತಹ ಪ್ರಾಣಬ್ರಹ್ಮನಾದ ಈಶ್ವರನನ್ನು ಅರಿತವರು ಅಮೃತಸ್ವರೂಪರಾಗುತ್ತಾರೆ.

ಈ ಕಠೋಪನಿಷತ್ ಪ್ರಮಾಣವಲ್ಲದೆ "ಭೀಷಾಸ್ಮಾದ್ವಾತಃಪವತೇ ಭೀಷೋದೇತಿ ಸೂರ್ಯಃ" ಮುಂತಾದ ಶ್ರುತಿಪ್ರಮಾಣಗಳಿರುವುವು. ಆದುದರಿಂದ ಈಶ್ವರನು ಬ್ರಹ್ಮಾಂಡದ ಸೃಷ್ಟಿಸ್ಥಿತಿಲಯಗಳಿಗೆ ನಿಯಂತೃವಾಗಿರುವನೆಂಬ ತತ್ವದ ಸೂಚನೆಯೇ ಅಸ್ತ್ರಪ್ರತ್ಯಸ್ತ್ರ ಸ್ವೀಕಾರವಾಗಿರುವುದು.

ಇನ್ನು ಅಹಲ್ಯೆಯ ಶಾಪವಿಮೋಚನೆಯ ತತ್ವದ ಮುಂದಿನ ಪ್ರಕರಣವನ್ನು ಪ್ರಾರಂಭಿಸೋಣ.

## ೭ನೆಯ ಪ್ರಕರಣ.

| **ಶ್ರೀರಾಮನು ಅಹಲ್ಯೆಯ ಶಾಪವನ್ನು ವಿಮೋಚನೆಮಾಡಿದುದು.** | **ಬ್ರಹ್ಮಾಂಡದಲ್ಲಿನ ಮನೋಹರತ್ವವು ಈಶ್ವರನ ಕಿಂಚಿನ್ಮಾತ್ರವಾದ ಪ್ರಭೆಯಿಂದಾಗುವ ವಿಚಾರ.** |
|---|---|

**ರಾ||** ವಿಶ್ವಾಮಿತ್ರರು ಯಜ್ಞಪೂರ್ತಿಯಾದನಂತರ ಶ್ರೀರಾಮಲಕ್ಷ್ಮಣರನ್ನು ಕರೆದುಕೊಂಡು ಸೀತಾಸ್ವಯಂವರಕ್ಕಾಗಿ ಮಿಥಿಲಾನಗರಕ್ಕೆ ಹೋಗುವ ದಾರಿಯಲ್ಲಿ ಶಿಲೆಯಾಗಿದ್ದ ಅಹಲ್ಯೆಯು ಶ್ರೀರಾಮಚಂದ್ರನ ಪಾದಸ್ಪರ್ಶದಿಂದ ದಿವ್ಯರೂಪವನ್ನು ಪಡೆದಳು.

**ತತ್ವ॥** ಸೃಷ್ಟಿಸಿದ ಬ್ರಹ್ಮಾಂಡವು ತಮಃಪ್ರಧಾನವಾಯಿಯಿಂದ ಜಡವಾಗಿ ತ್ತೆಂತಲೂ, ಈಶ್ವರನ ಪ್ರಭೆಯಿಂದ ಚೇತನತ್ವವನ್ನು ಪಡೆದುದೆಂತಲೂ ವಿಶ್ವಾಮಿತ್ರರ ಯಜ್ಞಪ್ರಕರಣದಲ್ಲಿ ತಿಳಿಸಿತಷ್ಟೆ. ಆದುದರಿಂದ ಬ್ರಹ್ಮಾಂಡಕ್ಕೆ ಮನೋಹರವಾದ ಕಾಂತಿಯು ಈಶ್ವರಸಂಪರ್ಕದಿಂದ ಉಂಟಾದುದೇ ಅಹಲ್ಯೆಗೆ ಶಾಪವಿಮೋಚನೆಯಾದ ತತ್ವವಾಗಿರುತ್ತದೆ. ಅಹಲ್ಯೆಯು ಶಿಲೆಯಾಗಿದ್ದುದೇ ಬ್ರಹ್ಮಾಂಡಕ್ಕೆ ಮನೋಹರತ್ವವಿರ ಲಿಲ್ಲವೆಂಬ ತತ್ವವಾಗಿರುವುದು. ಶ್ರೀರಾಮನ ಪಾದಸ್ಪರ್ಶಮಾತ್ರದಿಂದ ಅಹಲ್ಯೆಯ ಶಾಪ ವಿಮೋಚನೆಯಾದಂತೆ ಈಶ್ವರನ ಅಪಾರವಾದ ಪ್ರಭೆಯ ಮಹಿಮೆಯಲ್ಲಿ ಕಿಂಚಿನ್ಮಾತ್ರದಿಂದ ಜಡ ಮತ್ತು ಮಲಿನವಾಗಿದ್ದ ಬ್ರಹ್ಮಾಂಡಕ್ಕೆ ಮನೋಹರತ್ವವು ಕೂಡ ಉಂಟಾಯಿತೆಂಬ ತಾತ್ಪರ್ಯವಾಗಿರುವುದು.

ಹೇಗೆಂದರೆ—ಅಹಲ್ಯಾ ಎಂಬ ಪದದ ವ್ಯುತ್ಪತ್ತಿಯನ್ನು ಶ್ರೀಮದ್ರಾಮಾಯಣದ ಉತ್ತರಕಾಂಡ ೩೦ನೇ ಸರ್ಗದಲ್ಲಿ "ಹಲ್ಯಂಯಸ್ಯಾಃ ನವಿದ್ಯತೆತತಃ ಅಹಲ್ಯೇತಿ ವಿಶ್ರುತಾ" ಎಂಬದಾಗಿ ವಾಲ್ಮೀಕರು ಹೇಳಿರುತ್ತಾರೆ. ಅಂದರೆ ಹಲ್ಯಂ-ವೈರೂಪ್ಯಜನ್ಯದೋಷವು ಯಸ್ಯಾಃ-ಯಾವ ಹೆಂಗಸಿಗೆಂದರೆ ಪ್ರಕೃತಿಗೆ ನವಿದ್ಯತೆ ಇರುವುದಿಲ್ಲವೋ, ತತಃ ಆ ಕಾರಣ ದಿಂದ ಅಹಲ್ಯೆಯೆಂದು ಪ್ರಸಿದ್ಧಳಾದಳು. ಮುಖ್ಯತಾತ್ಪರ್ಯವೇನೆಂದರೆ—ವೈರೂಪ್ಯದಿಂದ ಉಂಟಾದ ದೋಷಕ್ಕೆ ಹಲ್ಯವೆಂದು ಹೆಸರು. ವಿರೂಪ ಕುರೂಪ ವಿಕಾರಗಳೇ ಇಲ್ಲದೆ ಸುಂದರವಾಗಿಯೂ, ರಮಣೀಯವಾಗಿಯೂ, ಇರುವುದಕ್ಕೆ ಅಹಲ್ಯವೆಂಬ ತಾತ್ಪರ್ಯವಾಗಿ ರುತ್ತದೆ. ವಿಕಾರಗಳಿಲ್ಲದ ರಮ್ಯತೆಯೂ ಮನೋಹರತ್ವವೂ ಈಶ್ವರನ ಪ್ರಭಾವ ದಿಂದುಂಟಾಗುತ್ತದೆ.

ಆದುದರಿಂದ ಜಡವಾಗಿದ್ದ ಪ್ರಕೃತಿಗೆ ಈಶ್ವರನ ಪ್ರಭೆಯು ಪಾದವೆಂದರೆ ಕಿಂಚಿನ್ಮಾ ತ್ರದಿಂದ ಸೌಂದರ್ಯವು ಬಂದಿತೆಂಬ ತತ್ವವೇ ಅಹಲ್ಯೆಯ ಶಾಪವಿಮೋಚನೆಯ ತತ್ವವಾಗಿರು ವುದು. ಪ್ರಪಂಚದಲ್ಲಿ ಕಾಣಬರುವ ಚರಾಚರ ವಸ್ತುಗಳಲ್ಲಿನ ಮನೋಹರವಾದ ಲಕ್ಷ ಣವು ಈಶ್ವರನ ಕಿಂಚಿನ್ಮಾತ್ರವಾದ ಪ್ರಭೆಯಿಂದ ಉಂಟಾಗಿರುತ್ತದೆ. ರಜೋಗುಣ ತಮೋಗುಣ ಮತ್ತು ಮಲಿನಸತ್ವಗುಣಗಳ ಮಿಶ್ರವಾದ ಈ ಪ್ರಪಂಚದಲ್ಲಿ ಕಾಣುವ ರಮಣೀಯತ್ವವೇ ಈರೀತಿ ಇರುವಾಗ, ಈಶ್ವರತ್ವದಲ್ಲಿರುವ ಶುದ್ಧಸತ್ವಗುಣದಲ್ಲಿನ ಪರಾ ಶಕ್ತಿಯ ಪ್ರಭೆಯು ಹೇಗಿರಬಹುದೆಂಬುದನ್ನು ಸರ್ವರೂ ಯೋಚಿಸಿಕೊಳ್ಳಲಿ. ಶುದ್ಧಸತ್ವ ಗುಣ ಅಥವಾ ಶುದ್ಧಸತ್ವಪ್ರಧಾನಮಾಯೆಯು ಈಶ್ವರಸಾನ್ನಿಧ್ಯದಲ್ಲಿಯೇ ಇರುವುದರಿಂದ ಲೋಕಮೋಹಸ್ವರೂಪವಾದ ಸೌಂದರ್ಯವು ಬಂದು ಮಹಾತ್ರಿಪುರಸುಂದರಿ ಎನಿಸಿ ಕೊಂಡಳು

ಸರ್ವವಸ್ತುಗಳಲ್ಲಿಯೂ ಸರ್ವಪ್ರಾಣಿಗಳಲ್ಲಿಯೂ ರಮಣೀಯತ್ವವನ್ನುಂಟುಮಾಡುವ ಈಶ್ವರನ ಪ್ರಭೆಯು ಶ್ರೇಷ್ಠವಾಗಿರುವುದೆಂದು ಸೂಚಿಸುವ ತಾತ್ಪರ್ಯವನ್ನು ಅನುಸರಿಸಿಯೇ ಶ್ರೀರಾಮಲಕ್ಷ್ಮಣರು ಅಹಲ್ಯೆಗೆ ನಮಸ್ಕಾರಮಾಡಿರುತ್ತಾರೆ. ಶ್ರೀರಾಮನು ಅಯೋಧ್ಯೆಯನ್ನು ಬಿಟ್ಟು ವಿಶ್ವಾಮಿತ್ರರೊಡನೆ ಹೊರಟುಬಂದಾರಭ್ಯ ಇದುವರೆಗಿನ ಕಥೆಯ ತತ್ವಗಳು ಈಶ್ವರನ ಮಹಿಮೆಯ ತತ್ವಗಳನ್ನು ತಕ್ಕಮಟ್ಟಿಗೆ ತಿಳಿಸಿದುವು. ಅಲ್ಲದೆ ಶುದ್ಧಸತ್ವಗುಣಕ್ಕೆ ಇದ್ದ ರಜೋಗುಣ, ತಮೋಗುಣಗಳ ಪ್ರತಿಬಂಧಕವು ತಪ್ಪಿ ನಿರ್ಬಾಧಕವಾಗುವ ತತ್ವಗಳನ್ನೂ ತಿಳಿಸಿತು. ಇಂತಹ ಶುದ್ಧಸತ್ವಗುಣವೆಂದರೆ ಶುದ್ಧಸತ್ವಪ್ರಧಾನಮಾಯೆಯು ತನ್ನ ವಶವರ್ತಿನಿಯಾಗುವ ತತ್ವದ ಮುಂದಿನ ಸೀತಾಕಲ್ಯಾಣ ಪ್ರಕರಣವನ್ನು ಪ್ರಾರಂಭಮಾಡೋಣ.

———:0:———



## ೮ನೆಯ ಪ್ರಕರಣ

**ಶ್ರೀರಾಮನು ಸುನಾಭವೆಂಬ ಶಿವಧನುಸ್ಸನ್ನು ಭಂಗಮಾಡಿ ಸೀತಾದೇವಿಯ ಪಾಣಿಗ್ರಹಣ ಮಾಡಿದುದು.**

**ಶುದ್ಧಸತ್ವಪ್ರಧಾನಮಾಯೆಯನ್ನು ಈಶ್ವರನು ಸ್ವೀಕರಿಸುವ ವಿಚಾರ. ಉಪಸಂಹಾರವೆಂದರೆ ಲಯಕ್ಕೂ ಈಶ್ವರನೇ ಕರ್ತನೆಂಬ ವಿಚಾರ.**

**ರಾ||** ವಿಶ್ವಾಮಿತ್ರರು ಶ್ರೀರಾಮಲಕ್ಷ್ಮಣರನ್ನು ಕರೆದುಕೊಂಡು ಮಿಥಿಲಾನಗರಕ್ಕೆ ಹೋಗಿ ಸುನಾಭವೆಂಬ ಶಿವಧನುಸ್ಸನ್ನು ಶ್ರೀರಾಮನಿಂದ ಭಂಗಪಡಿಸಿ ಸೀತಾದೇವಿಯನ್ನು ಶ್ರೀರಾಮನಿಗೆ ಪಾಣಿಗ್ರಹಣ ಮಾಡಿಸಿದರು. ಸೀತಾದೇವಿಯು ಜನಕರಾಯನ ಮಗಳು. ಜನಕರಾಯನು ಯಜ್ಞಸಂಕಲ್ಪದಿಂದ ಭೂಮಿಯನ್ನು ಉಳುತ್ತಿರುವಾಗ ಸೀತಾದೇವಿಯು ನೇಗಿಲಿನ ಕೊನೆಯಿಂದ ಕಾಣಿಸಿಕೊಂಡಳು.

**ತತ್ವ||** ಜನಕರಾಯನ ಯಜ್ಞಸಂಕಲ್ಪ ಮತ್ತು ಸೀತಾದೇವಿಯು ದೊರಕುವ ತತ್ವವೇನೆಂದರೆ—ಜನಕನೆಂದರೆ ಸೃಷ್ಟಿಕರ್ತನಾದ ಪರಮಾತ್ಮತತ್ವ. ಜನಕರಾಯನ ಮಗಳು ಜಾನಕಿ ಅಥವಾ ಸೀತಾದೇವಿಯೆಂದರೆ ಪರಮಾತ್ಮನಿಂದ ಆವಿರ್ಭಾವವಾದ ಮೂಲಪ್ರಕೃತಿಯ ತತ್ವ. ಜನಕರಾಯನ ಯಜ್ಞಸಂಕಲ್ಪವೆನ್ನುವುದೇ ಸೃಷ್ಟಿಗಾರಂಭ ವೆಂಬ ತತ್ವವಾಗಿರುವುದು. ಜನಕರಾಯನು ಭೂಮಿಯನ್ನು ಉಳುವ ತತ್ವವೇ ಪರ ಮಾತ್ಮಶಕ್ತಿಯ ಪ್ರಾದುರ್ಭಾವದ ಸ್ಥಿತಿಯೆಂಬ ತತ್ವವಾಗಿರುವುದು. ಉಳುತ್ತಿರುವಾಗ ಸೀತಾದೇವಿಯು ದೊರಕುವುದೇ ಪರಮಾತ್ಮಶಕ್ತಿಯು ಪ್ರಾದುರ್ಭವಿಸಿ ತ್ರಿಗುಣಾತ್ಮಿಕ ವಾದ ಮೂಲಪ್ರಕೃತಿಯಾಗಿ ನಿಲ್ಲುವುದೆಂಬ ತತ್ವವಾಗಿರುವುದು.

ಅಂದರೆ ಸೃಷ್ಟಿಗೆ ಪೂರ್ವದಲ್ಲಿ ಪರಬ್ರಹ್ಮಮಾತ್ರವೇ ಇತ್ತೆಂಬ "ಆತ್ಮಾವಾ ಇದಮೇಕ ಏವಾಗ್ರಆಸೀತ್, ಸದೇವಸೋಮ್ಯೇದಮಗ್ರಆಸೀತ್" ಎಂಬ ಶ್ರುತಿಪ್ರಮಾಣಗಳಂತೆ ಸೀತಾದೇವಿಯು ಭೂಮಿಯಿಂದ ಹೊರಕ್ಕೆ ಬರುವವರೆಗೆ ಚಿಚ್ಛಕ್ತಿಯಾಗಿರುವುದರಿಂದ ಸಾಕ್ಷಾತ್ ಪರಬ್ರಹ್ಮಸ್ವರೂಪಿಣಿಯಾಗಿದ್ದಳು. ಉಳುವುದರಿಂದ ಭೂಮಿಯು ತನ್ನ ಕಠಿಣತ್ವವನ್ನು ಬಿಟ್ಟು ಮೇಲಕ್ಕೆ ಕೆದರುವಂತೆ ಸೃಷ್ಟಿಗಾರಂಭವಾದಾಗ ಪರಬ್ರಹ್ಮಶಕ್ತಿಯು ಹೊರಕ್ಕೆ ಉದಯಿಸಿ ತ್ರಿಗುಣಾತ್ಮಿಕವಾದ ಮೂಲಪ್ರಕೃತಿಯಾಗಿ ಪರಮಾತ್ಮನೊಡನೆ ನಿಲ್ಲುವುದೇ ಸೀತಾದೇವಿಯು ಭೂಮಿಯಿಂದ ದೊರೆತ ತತ್ವವಾಗಿರುವುದು.

ಸೀತಾ ಎಂಬ ಪದದ ಅರ್ಥವು "ಸಿತಾಯಾಂ ಉದ್ಭವಾ ಸೀತಾ" ನೇಗಿಲ ಸಾಲಿನಲ್ಲಿ ಉದಯವಾದವಳೆಂದು ಆಗುವುದು. ಅಂದರೆ ಚಿಚ್ಛಕ್ತಿಯು ಮೂಲಪ್ರಕೃತಿ ಯಾಗಲು ಉದಯಿಸುವ ಸ್ವರೂಪವನ್ನು ಪ್ರತಿಪಾದನೆಮಾಡುವ ತತ್ವವೇ ಸೀತಾ ಎಂಬ ಪದದ ಅರ್ಥವಾಗಿರುವುದು. ಹೀಗೆ ತ್ರಿಗುಣಾತ್ಮಿಕವಾದ ಮೂಲಪ್ರಕೃತಿಯು ಕಾರ್ಯಭೇದ ಗಳಿಗೆ ಅನುಸಾರವಾಗಿ ಸತ್ವರಜಸ್ತಮೋಗುಣಗಳ ವಿಭಾಗವಾಗುವುದು. ಈ ಸತ್ವರಜ ಸ್ತಮೋಗುಣಗಳ ಭಾಗಗಳಲ್ಲಿ ಸತ್ವಗುಣವು ಶ್ರೇಷ್ಠವಾದುದು. ಈ ಸತ್ವಗುಣದಲ್ಲಿಯೂ ರಜಸ್ತಮೋಗುಣಗಳೊಡನೆ ಬೆರೆಯದೆ ಇರುವ ಶುದ್ಧಸತ್ವಗುಣವು ಅತ್ಯಂತ ಶ್ರೇಷ್ಠವಾ ದುದು. ಚಿಚ್ಛಕ್ತಿಯ ಮಹತ್ತಿನ ಅಧಿಕಾಂಶವು ಶುದ್ಧಸತ್ವಗುಣದಲ್ಲಿರುವುದರಿಂದ ಸೀತಾ ದೇವಿಯು ಈ ಶುದ್ಧಸತ್ವಗುಣದ ತತ್ವದಲ್ಲಿ ನಿಂತು ಈಶ್ವರನಾದ ಶ್ರೀರಾಮಚಂದ್ರನಿಗೆ ಪತ್ನಿಯೆನಿಸಿಕೊಳ್ಳುವುದೇ ಸೀತಾದೇವಿಯ ಲಗ್ನದ ತತ್ವವಾಗಿರುವುದು. ಶುದ್ಧಸತ್ವ ಗುಣವೇ ಶುದ್ಧಸತ್ವಪ್ರಧಾನಮಾಯೆಯೆನ್ನುವುದಕ್ಕೆ ಸರಸ್ವತೀರಹಸ್ಯೋಪನಿಷತ್ತಿನಲ್ಲಿ, "ಸತ್ವಪ್ರಧಾನ ಪ್ರಕೃತಿ ರ್ಮಾಯೇತಿ ಪ್ರತಿಪಾದ್ಯತೇ" ಎಂಬದಾಗಿ ಹೇಳಿರುವುದು. ಸೀತಾ ದೇವಿಯು ಪರಬ್ರಹ್ಮಸ್ವರೂಪಿಣಿ ಎನ್ನುವ ತತ್ವವನ್ನೂ ಸೃಷ್ಟಿಸ್ಥಿತಿಕ್ರಮಕ್ಕೋಸ್ಕರ ಮೂಲ ಪ್ರಕೃತಿಯಾಗಿ ಪ್ರಾದುರ್ಭವಿಸುವ ತತ್ವವನ್ನೂ, ಸೃಷ್ಟಿಸ್ಥಿತಿಗಳನ್ನು ಉಪಸಂಹರಿಸಿ

ಸ್ವಸ್ವರೂಪವಾದ ಪರಬ್ರಹ್ಮಸ್ವರೂಪವಾಗುವ ತತ್ವವನ್ನೂ "ಸೀತಾ" ಎಂಬ ಪದದ ಅರ್ಥವು ಸೂಚಿಸುವುದೆಂದು ಸೀತೋಪನಿಷತ್ತಿನಲ್ಲಿ,

ಸಕಾರಸ್ಸತ್ಯಮಮೃತಂ ಪ್ರಾಪ್ತಸ್ಸೋಮಶ್ಚ ಕೀರ್ತ್ಯತೇ |
ವಿಷ್ಣೋಃ ಪ್ರಪಂಚಬೀಜಂಚ ಮಾಯಾ ಈಕಾರ ಉಚ್ಯತೇ |
ತಕಾರ ಸ್ತಾರಲಕ್ಷ್ಮ್ಯಾಚ ವೈರಾಜಃ ಪ್ರಸ್ತರಸ್ಮೃತಃ ||

ತಾ|| ಸೀತಾ ಪದದಲ್ಲಿನ ಸಕಾರವು ಅಮೃತವನ್ನು ಕೊಡುವ ಸೋಮನನ್ನು ಪ್ರತಿಪಾದನೆಮಾಡುವುದೆಂದರೆ ಪರಬ್ರಹ್ಮನನ್ನು ಪ್ರತಿಪಾದಿಸುವುದು. ಸೀತಾ ಪದದಲ್ಲಿನ ಈ ಕಾರವು ಜಗದ್ವ್ಯಾಪಿಯಾದ ಪರಮಾತ್ಮನ ಸೃಷ್ಟಿಕ್ರಮಕ್ಕೆ ಬೀಜರೂಪಳಾಗಿರುವ ಮಾಯೆಯನ್ನು ಪ್ರತಿಪಾದಿಸುವುದು. ಅಂದರೆ ಸೃಷ್ಟಿಸ್ಥಿತಿಗಳನ್ನು ಪ್ರತಿಪಾದನೆಮಾಡುವುದು. ಸೀತಾ ಪದದಲ್ಲಿನ 'ತ' ಕಾರವು ಮೋಕ್ಷಸಾಮ್ರಾಜ್ಯವೇ ಗುರಿಯಾಗಿರುವ ಮಾರ್ಗವನ್ನು ವಿವರವಾಗಿ ಸ್ಫೂರ್ತಿಗೊಳಿಸುವುದು.

ಎಂಬದಾಗಿ ಹೇಳಿರುವುದರಿಂದ ಸೀತಾದೇವಿಯು ಭೂಮಿಯಿಂದ ಹೊರಕ್ಕೆ ಬರುವವರೆಗೆ ಚಿಚ್ಛಕ್ತಿಯೆನಿಸಿ ಪರಬ್ರಹ್ಮಸ್ವರೂಪಿಣಿಯಾಗಿದ್ದಳು. ಅನಂತರ ಮೂಲಪ್ರಕೃತಿ ಯೆನಿಸಿಕೊಂಡು ತರುವಾಯ ಶುದ್ಧಸತ್ವಪ್ರಧಾನಮಾಯೆಯೆನಿಸಿಕೊಳ್ಳುವಳು. ಅಂದರೆ ಶ್ರೀರಾಮಚಂದ್ರನು ಬಲಾತಿಬಲಗಳನ್ನು ಸ್ವೀಕರಿಸಿದ ತತ್ವದಾರಭ್ಯ ಮಿಥಿಲಾನಗರಕ್ಕೆ ಬರುವ ಪರ್ಯಂತರವಿರುವ ಕಥೆಯ ತತ್ವಗಳಲ್ಲಿಯೂ ಸೀತಾತತ್ವವಾದ ಶುದ್ಧಸತ್ವಪ್ರಧಾನ ಮಾಯೆಯು ಶ್ರೀರಾಮಚಂದ್ರನ ತತ್ವವಾದ ಈಶ್ವರಚೈತನ್ಯನೊಡನೆ ಇದ್ದಳೆಂದೇ ಭಾವಿಸಿಕೊಳ್ಳಬೇಕು.

ಹಾಗಾದರೆ ಸೀತಾದೇವಿಯ ಪಾಣಿಗ್ರಹಣದ ತತ್ವವೇನೆಂದರೆ--ಸೀತಾದೇವಿಯ ಪಾಣಿಗ್ರಹಣದವರೆಗಿನ ಕಥೆಯ ತತ್ವಗಳು ಸೃಷ್ಟಿಕ್ರಮದ ತತ್ವವನ್ನು ಪ್ರತಿಪಾದನೆಮಾಡುತ್ತವೆ. ಸೃಷ್ಟಿಕಾರ್ಯ ಸಂಪೂರ್ಣವಾದಮೇಲೆ ಸ್ಥಿತಿ ಅಥವಾ ಇರುವಿಕೆಯ ಪ್ರಾರಂಭದ ತತ್ವಪ್ರತಿಪಾದನೆಯೇ ಸೀತಾದೇವಿಯ ಕಲ್ಯಾಣದ ತತ್ವವಾಗಿರುವುದು. ಸೃಷ್ಟಿಕ್ರಮದ ಕಾರ್ಯಗಳಿಗೂ ಸ್ಥಿತಿ ಅಥವಾ ವ್ಯಾಪಾರದ ಕಾರ್ಯಕ್ರಮಗಳಿಗೂ ಭೇದವಿದ್ದೇ ಇರುವುದು. ಅಂದರೆ ಸೃಷ್ಟಿಸ್ಥಿತಿಕ್ರಮಗಳು ಪ್ರತ್ಯೇಕಪ್ರತ್ಯೇಕವಿಧಗಳಾಗಿರುವುದರಿಂದ ಸೃಷ್ಟಿಕ್ರಮದಲ್ಲಿ ನಾದ ಬಿಂದು ಕಳೆಗಳಲ್ಲಿ ಶುದ್ಧಸತ್ವಗುಣಕ್ಕೆ ಕಳಾ ಅಥವಾ ಪರಾಶಕ್ತಿ ಎಂಬ ಹೆಸರು ಇರುವುದು. ಇದೇ ತಾತ್ಪರ್ಯಕ್ಕೆ ಶ್ರುತಿಯಲ್ಲಿ "ಅರ್ಧಮಾತ್ರಾ ಪರಾಜ್ಞೇಯಾ" ಅಂದರೆ ಕಳಾಸ್ವರೂಪವೇ ಪರಾಶಕ್ತಿಯೆಂದು ಹೇಳಿರುವುದು.

ಆದುದರಿಂದ ಜನನವಾದಮೇಲೆ ಪ್ರಪಂಚವ್ಯಾಪಾರಮಾಡಲು ಪ್ರಾಣಿಗಳು ಬದುಕಿರುವಂತೆ ಸೃಷ್ಟಿಯಾದ ಬ್ರಹ್ಮಾಂಡವು ನಿಯತಕಾಲ ನಡೆದುಕೊಂಡುಬರುವ ನಿಯಮದ ತತ್ವಾರ್ಥವೇ ಶ್ರೀರಾಮಚಂದ್ರನು ಸೀತಾದೇವಿಯನ್ನು ಪಾಣಿಗ್ರಹಣಮಾಡಿಕೊಂಡ ತತ್ವವಾಗಿರುವುದು. ಅಂದರೆ ಈಶ್ವರಚೈತನ್ಯನು ಶುದ್ಧಸತ್ವಪ್ರಧಾನಮಾಯೆಯನ್ನು ತನ್ನ ವಶವರ್ತಿನಿಯನ್ನಾಗಿ ಮಾಡಿಕೊಂಡು ಜಗದ್ವ್ಯಾಪಾರದ ಪ್ರಕಾಶಕನ್ನೂ ಕಾರಣನಾಗುವನೆಂಬ ತತ್ವವಾಗಿರುವುದು. ಇದೇ ತಾತ್ಪರ್ಯಕ್ಕೆ ಶ್ರೀವಿದ್ಯಾರಣ್ಯರವರು ಪಂಚದಶಿ ಪ್ರತ್ಯಕ್ತತ್ವವಿವೇಕಪ್ರಕರಣ ೧೬ನೆಯ ಶ್ಲೋಕದಲ್ಲಿ.

**ಸತ್ವಶುದ್ಧ್ಯವಿಶುದ್ಧಿಭ್ಯಾಂ ಮಾಯಾವಿದ್ಯೇಚತೇಮತೆ |**
**ಮಾಯಾಬಿಂಬೋವಶೀಕೃತ್ಯ ತಾಂಸ್ಯಾತ್ಸರ್ವಜ್ಞಈಶ್ವರಃ ||**

ತಾ|| ಪ್ರಕಾಶಸ್ವರೂಪವುಳ್ಳದ್ದು ಸತ್ವಗುಣವು. ಇದು ಮತ್ತೊಂದು ಗುಣದೊಡನೆ ಬೆರೆಯದೆ ಇದ್ದರೆ ಶುದ್ಧಸತ್ವವೆಂದು ಹೇಳಲ್ಪಡುವುದು. ಈ ಗುಣವು ಮತ್ತೊಂದು ಗುಣದೊಡನೆ ಕಲೆತು ಮಲಿನವಾಗುವುದಕ್ಕೆ ಮಲಿನಸತ್ವಪ್ರಧಾನಮಾಯೆಯೆಂದು ಹೆಸರು. ಶುದ್ಧಸತ್ವಗುಣ ಅಥವಾ ಶುದ್ಧಸತ್ವಪ್ರಧಾನಮಾಯೆಯಲ್ಲಿ ಬ್ರಹ್ಮಚೈತನ್ಯನು ಪ್ರತಿಬಿಂಬಿಸಿ ಆ ಮಾಯೆಯನ್ನು ತನ್ನ ಸ್ವಾಧೀನಮಾಡಿಕೊಂಡು ಆವರಣ ವಿಕ್ಷೇಪ ರಹಿತನಾಗಿ ಸರ್ವಜ್ಞತ್ವಾದಿ ಗುಣಗಳುಳ್ಳ ಈಶ್ವರನಾಗುವನು, ಎಂಬುದಾಗಿ ಹೇಳಿರುವರು.

ಆದುದರಿಂದ ಸೃಷ್ಟಿಯಾದ ಬ್ರಹ್ಮಾಂಡವು ನಡೆದುಕೊಂಡುಬರಲು ಈಶ್ವರಚೈತನ್ಯನು ಮಾಯೆಯನ್ನು ಪರಿಗ್ರಹಿಸುವುದೇ ಶ್ರೀರಾಮನು ಸೀತಾದೇವಿಯನ್ನು ಪಾಣಿಗ್ರಹಣಮಾಡಿಕೊಳ್ಳುವ ತತ್ವವಾಗಿರುವುದು.

ಸೀತಾದೇವಿಯ ಪಾಣಿಗ್ರಹಣಕ್ಕೆ ಸುನಾಭವೆಂಬ ಶಿವಧನುಸ್ಸನ್ನು ಪಂಥದ ಪಣವಾಗಿ ಇಟ್ಟಿದ್ದುದರ ತತ್ವವೇನೆಂದರೆ—ಪ್ರಪಂಚವ್ಯಾಪಾರ ನಡೆದುಕೊಂಡುಬರಲು ಸ್ತ್ರೀಪುರುಷರು ವಿವಾಹಮಾಡಿಕೊಳ್ಳುವರಷ್ಟೆ. ಅಂದರೆ ಪುರುಷನು ವಿವಾಹದಿಂದ ಪ್ರಪಂಚವ್ಯಾಪಾರದಲ್ಲಿ ಬಂಧಿಸಲ್ಪಡುವನು. ಇದರಂತೆ ಸೀತಾದೇವಿಯು ತತ್ವದಲ್ಲಿರುವ ಶುದ್ಧಸತ್ವಪ್ರಧಾನ ಮಾಯೆಯು ಬ್ರಹ್ಮಾಂಡದ ಸ್ಥಿತಿ ಅಥವಾ ಇರುವಿಕೆಯ ರೂಪವಾದ ಬಂಧನವನು ಈಶ್ವರನಿಗುಂಟುಮಾಡುವುದು. ಸೀತಾದೇವಿಯ ಪದದ ಅರ್ಥವೂ ಬಂಧನವನ್ನುಂಟುಮಾಡುವ ತತ್ವಕ್ಕೆ ಅನ್ವಯವಾಗುವುದು. ಹೇಗೆಂದರೆ —"ಸಿನೋತೀತಿ ಸೀತಾ" ಅಂದರೆ ಬಂಧನವನ್ನುಂಟುಮಾಡುವುದು, ಎಂದರ್ಥ. ಸತ್ವಗುಣದ ಬಂಧನದ ಸ್ವರೂಪಕ್ಕೆ ಶ್ರೀಕೃಷ್ಣಪರಮಾತ್ಮನು ಭಗವದ್ಗೀತಾ ೧೪ನೆಯ ಅಧ್ಯಾಯದಲ್ಲಿ.

**ತತ್ರಸತ್ವಂನಿರ್ಮಲತ್ವಾ ತ್ಪ ಕಾಶಕಮನಾಮಯಮ್ |**
**ಸುಖಸಂಗೇನ ಬಧ್ನಾತಿ ಜ್ಞಾನಸಂಗೇನಚಾನಘ ||**

ತಾ|| ಎಲೈ ಅರ್ಜುನನೇ! ಸತ್ವರಜಸ್ತಮೋಗುಣಗಳಲ್ಲಿ ಸತ್ವಗುಣವು ಸ್ಫಟಿಕದಂತೆ ನಿರ್ಮಲವೂ ಆನಂದಮಯವೂ ಆಗಿರುವುದು. ಆನಂದಮಯದಿಂದಲೂ ಸ್ವಾತ್ಮಾನುಭವವು ದೊರೆಯುವಂತೆ ಇರುವಂತಹ ಜ್ಞಾನದಿಂದಲೂ ಬಂಧಿಸಿರುವುದು. ಎಂಬದಾಗಿ ಹೇಳಿರುತ್ತಾನೆ.

ಆದುದರಿಂದ ಸತ್ವಗುಣದಲ್ಲಿಯೂ, ಶುದ್ಧಸತ್ವಗುಣವೆಂದರೆ ಶುದ್ಧಸತ್ವಪ್ರಧಾನ ಮಾಯೆಯು ಆನಂದಮಯವಾಗಿ ಶುದ್ಧಸ್ಫಟಿಕದಂತೆ ನಿರ್ಮಲವಾಗಿ ಆತ್ಮಾನುಭವವು ದೊರೆಯುವಂತೆ ಇರುವಂತಹ ಸಾಕ್ಷಿಮಾತ್ರವಾದ ನಾನು ಎಂಬ ಅಖಂಡಜ್ಞಾನಸ್ವರೂಪದ ಉಪಾಧಿಯಾಗಿ ವಿರಾಟ್‌ಚೈತನ್ಯನಾದ ಈಶ್ವರನನ್ನು ಬ್ರಹ್ಮಾಂಡದ ಸ್ಥಿತಿ ಅಥವಾ ಇರುವಿಕೆಯ ಸಾಕ್ಷಿಮಾತ್ರಪ್ರಕಾಶಕನಾಗಿರುವಂತೆ ಮಾಡಿರುವುದು.

ಬ್ರಹ್ಮಾಂಡದ ಸ್ಥಿತಿ ಅಥವಾ ಇರುವಿಕೆಯನ್ನು ಈಶ್ವರನು ಪ್ರಕಾಶಪಡಿಸುತ್ತ ಮಾಯಾಸಂಬಂಧದಲ್ಲಿಯೇ ಇದ್ದಲ್ಲಿ ಪ್ರಪಂಚವೇ ಸ್ಥಿರವಾಗಿ ಸ್ವಸ್ವರೂಪವಾದ ಪರಬ್ರಹ್ಮತ್ವವನ್ನು ಹೊಂದದೆ ಇರಬೇಕಾಗಬಹುದು. ಮಾಯಾಸಂಬಂಧವನ್ನು ಬಿಡಿಸಿಕೊಂಡು ಹೋಗುವುದೆಂದರೆ ಬ್ರಹ್ಮಾಂಡವನ್ನು ಉಪಸಂಹಾರ ಅಥವಾ ಲಯಮಾಡಿಕೊಳ್ಳತಕ್ಕ ಅರ್ಹತೆಯು ಈಶ್ವರನಲ್ಲಿರುವುದೋ ಇಲ್ಲವೋ ಎಂಬುದನ್ನು ವ್ಯಕ್ತಪಡಿಸುವ ತತ್ವಾರ್ಥದ ಸೂಚನೆಗೋಸ್ಕರ ಸುನಾಭವೆಂಬ ಶಿವಧನುಸ್ಸನ್ನು ಸೀತಾದೇವಿಯ ಪಾಣಿಗ್ರಹಣಕ್ಕೆ ಪಂಥದ ಪಣವಾಗಿಟ್ಟದ್ದಾಗಿರುತ್ತದೆ.

ಬ್ರಹ್ಮಾಂಡವನ್ನು ಉಪಸಂಹಾರಮಾಡಿಕೊಳ್ಳುವುದು ಲೀಲಾಮಾತ್ರವಾಗಿರುವುದೆಂಬ ಮತ್ತು ಶುದ್ಧಸತ್ವಪ್ರಧಾನಮಾಯೆಯು ತನ್ನ ಅನುವರ್ತಿನಿಯಾಗಿರುವಳೇ ಹೊರತು ಮಾಯೆಯ ಅನುವರ್ತಿಯಾಗಿ ತಾನು (ಈಶ್ವರನು) ಇರುವುದಿಲ್ಲವೆಂಬ ತತ್ವವನ್ನು ಸೂಚಿಸುವ ತಾತ್ಪರ್ಯವೇ ಶ್ರೀರಾಮಚಂದ್ರನು ಲೀಲಾಮಾತ್ರದಿಂದ ಧನುಸ್ಸನ್ನು ಭಂಗಪಡಿಸಿದ್ದಾಗಿದೆ.

ಹಾಗಾದರೆ ಬ್ರಹ್ಮಾಂಡವನ್ನು ಉಪಸಂಹಾರಮಾಡಿಕೊಳ್ಳುವ ತತ್ವಪ್ರತಿಪಾದಕವಾದ ಈ ಧನುಸ್ಸಿಗೆ ಸುನಾಭವೆಂಬ ಹೆಸರು ಬರಲು ಕಾರಣವೇನು? ಈ ಧನುಸ್ಸು ಶಿವಸಂಬಂಧವೆಂಬುದರ ತತ್ವವೇನು? ಎಂಬ ಪ್ರಶ್ನೆಗಳಿಗೆ ಉತ್ತರವನ್ನು ತಿಳಿದುಕೊಳ್ಳೋಣ. ಸುನಾಭವೆಂದರೆ "ಸುಷ್ಟುನಾಭಿಃ ಚಕ್ರಮಧ್ಯೆಯತ್ ತತ್ ಸುನಾಭಃ" ಅಂದರೆ ಚಕ್ರಗಳ ಮಧ್ಯಪ್ರದೇಶವು ಶ್ರೇಷ್ಠವಾದುದೆಂಬ ತಾತ್ಪರ್ಯ. ಕಬ್ಬಿಣದ ಅಚ್ಚು ಹಾಕಲು ಗುಂಭದೊಳಗೆ ಮಾಡಿರುವ ರಂಧ್ರಪ್ರದೇಶವೇ ಚಕ್ರದ ಮಧ್ಯಪ್ರದೇಶವಾಗಿರುವುದು. ಈ ಚಕ್ರಗಳ ಮಧ್ಯಪ್ರದೇಶದ ತತ್ವವು ನಮ್ಮ ದೇಹದಲ್ಲಿರತಕ್ಕ ಮೂಲಾಧಾರ ಮೊದಲಾದ ಏಳುಚಕ್ರಗಳ ಮಧ್ಯದಲ್ಲಿರುವ ಬ್ರಹ್ಮರಂಧ್ರದ ನಾಡಿ ಅಥವಾ ಸುಷುಮ್ನಾನಾಡಿಯಾಗಿರುವುದು

ಪಿಂಡಾಂಡವಾದ ಮನುಷ್ಯನ ದೇಹದಲ್ಲಿರತಕ್ಕ ಏಳು ಚಕ್ರಗಳ ತತ್ವಗಳು ಬ್ರಹ್ಮಾಂಡ ದಲ್ಲಿ ಏಳುಲೋಕಗಳಾಗಿವೆ. ಈ ಏಳುಲೋಕಗಳೇ ಭೂಲೋಕ, ಭುವರ್ಲೋಕ, ಮುಂತಾದುವು. ಮನುಷ್ಯನು ಆತ್ಮಸಾಕ್ಷಾತ್ಕಾರವನ್ನು ಪಡೆಯಬೇಕಾದರೆ ಈ ಚಕ್ರಗಳನ್ನು ಭೇದಿಸಿಕೊಂಡು ಸ್ವಸ್ವರೂಪವಾದ ಪರಬ್ರಹ್ಮಸ್ವರೂಪನಾಗುವಂ ಈಶ್ವರನು ಭೂರಾದಿ ಲೋಕಗಳನ್ನು ಪ್ರಳಯಮಾಡಿಕೊಂಡು ಸ್ವಸ್ವರೂಪವಾದ ಪರಬ್ರಹ್ಮನಾಗುತ್ತಾನೆ. ಹೀಗೆ ಈಶ್ವರನು ಬ್ರಹ್ಮಾಂಡದ ಸ್ಥಿತಿಯನ್ನು ಪ್ರಕಾಶಪಡಿಸಿಕೊಂಡು ಇರುವಿಕೆಗೆ ಒಳಗಾಗದೆ ತನ್ನ ಲೀಲಾಮಾತ್ರದಿಂದ ಲೋಕಗಳನ್ನೆಲ್ಲಾ ಲಯಮಾಡಿಕೊ[illegible] ಅರ್ಹತೆಯುಳ್ಳವನೆಂಬ ತತ್ವಪ್ರತಿಪಾದನೆಯೇ ಶ್ರೀರಾಮಚಂದ್ರಮೂರ್ತಿಯು ಶಿವನಿಂದ ಉಪಯೋಗಿಸಲ್ಪಟ್ಟ ಧನುಸ್ಸನ್ನು ತಾನು ಹೆದೆಯೇರಿಸಿ ಮುರಿದುದಾಗಿರುವುದು.

ಈ ಸುನಾಭವೆಂಬ ಧನುಸ್ಸು ದಕ್ಷಬ್ರಹ್ಮನ ಯಜ್ಞವನ್ನು ಧ್ವಂಸಮಾಡಲು ಪರಮೇಶ್ವರನಿಂದ ಉಪಯೋಗಿಸಲ್ಪಟ್ಟ ಧನುಸ್ಸಾಗಿರುವುದು. ದಕ್ಷನೆಂದರೆ "ಜಗದ್ರೂಪೇಣ ವರ್ಧಮಾನತ್ವಾತ್ ಸರ್ವಕರ್ಮಾಣಿ ಕ್ಷಿಪ್ರಂಕರೋತೀತಿ ವಾದಕ್ಷಃ." ಅಲ್ಲದೆ ದಕ್ಷ ಎನ್ನುವುದಕ್ಕೆ ಪ್ರವೃದ್ಧಃ ಎಂಬ ವ್ಯುತ್ಪತ್ತಿಯೂ ಇರುವುದು. ಅಂದರೆ ಪ್ರಪಂಚಾಕಾರವಾದ ಕಾರ್ಯಗಳಲ್ಲಿ ವೃದ್ಧಿಹೊಂದುವಂತೆ ಮಾಡುವ ತತ್ವವೇ ದಕ್ಷಬ್ರಹ್ಮನ ಯಜ್ಞದ ತತ್ವವಾಗಿರುವುದು. ಪ್ರಪಂಚಾಕಾರವಾಗುವುದನ್ನು ಸಂಹರಿಸುವುದೆಂದರೆ—ಸ್ಥಿತಿಯನ್ನು ಉಪಸಂಹರಿಸುವ ಅಥವಾ ಲಯಮಾಡಿಕೊಳ್ಳುವುದೆಂಬ ತತ್ವವಾಗಿರುವುದು. ಆದುದ[illegible] ರನು ತನಗೆ ಇಷ್ಟಬಂದಾಗ ಲೀಲಾಮಾತ್ರದಿಂದ ಬ್ರಹ್ಮಾಂಡವನ್ನು ಉಪಸಂಹಾರಮಾಡಿಕೊಂಡು ತಾನು ಪರಬ್ರಹ್ಮಸ್ವರೂಪನೇ ಆಗಬಲ್ಲನೆಂಬ ತತ್ವಪ್ರತಿಪಾದನೆಯೇ ಸುನಾಭವೆಂಬ ಧನುಸ್ಸಿನ ತತ್ವವಾಗಿರುವುದು.

ಇಂತಹ ಮಹತ್ವುಳ್ಳ ಶ್ರೀರಾಮಚಂದ್ರಮೂರ್ತಿಯನ್ನು ಸೀತಾದೇವಿಯು ವಿವಾಹ ಮಾಡಿಕೊಳ್ಳುವುದರಿಂದ ಸೀತಾದೇವಿಗೆ ಉಂಟಾಗುವ ಲಾಭವೇನೆಂದರೆ—ಈಶ್ವರನು ಬ್ರಹ್ಮಾಂಡವನ್ನು ಲಯಮಾಡುವುದರಿಂದ ಸೀತಾದೇವಿಯೂ ಸಾಕ್ಷಾತ್ ಪರಬ್ರಹ್ಮಸ್ವರೂಪಿಣಿಯಾಗುವಳು. ಆದುದರಿಂದ ಸೀತಾದೇವಿಯ ಪಾಣಿಗ್ರಹಣ ಮಾಡಿಕೊಳ್ಳಲು ಶ್ರೀರಾಮಚಂದ್ರನೇ ಅರ್ಹನಲ್ಲದೆ ಇತರರಿಗೆ ಅರ್ಹತೆ ಬರುವುದಿಲ್ಲ. ಈ ಮೇಲಿನ ತತ್ವಾರ್ಥಗಳೇ ಸೀತಾದೇವಿಯ ಪಾಣಿಗ್ರಹಣದ ತತ್ವವಾಗಿರುವುದು. ಚಿಚ್ಛಕ್ತಿಯು ಮೂಲಪ್ರಕೃತಿಯಾಗಿ ಆವಿರ್ಭವಿಸಿ ಅನಂತರ ಸತ್ವರಜಸ್ತಮೋಗುಣಗಳ ವಿಭಾಗವಾಗುವುದಷ್ಟೆ. ಈ ಗುಣಗಳಲ್ಲಿ, ರಜಸ್ತಮೋಗುಣಗಳಲ್ಲಿ ಬೆರೆಯದೆ ಇರುವ ಶುದ್ಧಸತ್ವಗುಣವೇ ಶ್ರೇಷ್ಠವಾದ ಶುದ್ಧಸತ್ವಪ್ರಧಾನಮಾಯೆಯಾಗಿ ಜೀವರೂಪದಿಂದ ಬ್ರಹ್ಮಾಂಡದ ಇರುವಿಕೆಯನ್ನು ಧರಿಸಿರುವ

ತತ್ವಕ್ಕೂ ಈಶ್ವರನ ವಶವರ್ತಿನಿಯಾಗಿರುವ ತತ್ವಕ್ಕೂ ಶ್ರೀಕೃಷ್ಣಪರಮಾತ್ಮನು ಭಗವದ್ಗೀತಾ ೭ನೆಯ ಅಧ್ಯಾಯ ೪, ೫ನೇ ಶ್ಲೋಕಗಳಲ್ಲಿ,

**ಭೂಮಿ ರಾಪೋ ನಲೋ ವಾಯುಃ ಖಂ ಮನೋ ಬುದ್ಧಿ ರೇವಚ |**
**ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ||**
**ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಂ |**
**ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ||**

ತಾ|| ಎಲೈ ಅರ್ಜುನನೆ! ಪ್ರಕೃತಿಯು ಭೂಮಿ, ನೀರು, ಅಗ್ನಿ, ವಾಯು, ಆಕಾಶ, ಮನಸ್ಸು, ಬುದ್ಧಿ, ಅಹಂಕಾರಸ್ವರೂಪವಾದ ಎಂಟು ಬಗೆಯಾಗಿರುವುದು. ಈ ಪ್ರಕೃತಿಯು ಕೀಳಾದುದು. ಈ ಪ್ರಕೃತಿಗಿಂತಲೂ ಬೇರೆಯಾಗಿ ಈ ಜಗತ್ತನ್ನೆಲ್ಲಾ ನಿರ್ವಾಹ ಮಾಡುತ್ತಿರುವ ಜೀವಭೂತವೆಂದರೆ ಪ್ರಾಣಿಗಳ ಇರುವಿಕೆಗೆ ಕಾರಣವಾದ ಶುದ್ಧಸತ್ವವೆನಿಸುವ ನನ್ನ ವಿಶುದ್ಧಪ್ರಕೃತಿ ಅಥವಾ ಶುದ್ಧಸತ್ವಪ್ರಧಾನಮಾಯೆಯು ಶ್ರೇಷ್ಠವಾದುದೆಂದು ತಿಳಿ. ಅಂದರೆ ಒಂದು ಅಪರ ಮತ್ತೊಂದು ಪರವೆಂಬ ತಾತ್ಪರ್ಯವೆಂಬದಾಗಿ ಹೇಳಿರುವನು.

ಆದುದರಿಂದ ಇಂತಹ ಶುದ್ಧಸತ್ವಪ್ರಧಾನಮಾಯೆಯನ್ನು ಈಶ್ವರಚೈತನ್ಯನು ಸ್ವೀಕರಿಸಿ ಬ್ರಹ್ಮಾಂಡದ ಇರುವಿಕೆ ಅಥವಾ ಸ್ಥಿತಿಯನ್ನು ಪ್ರಕಾಶಪಡಿಸಿಕೊಂಡು ಇರುವುದರ ಪ್ರಾರಂಭದ ತತ್ವವೇ ಸೀತಾದೇವಿಯ ಪಾಣಿಗ್ರಹಣದ ತತ್ವವಾಗಿರುವುದು. ಲಕ್ಷ್ಮಣನಿಗೆ ಊರ್ಮಿಳಾದೇವಿಯೂ, ಭರತನಿಗೆ ಮಾಂಡವೀದೇವಿಯೂ, ಶತೃಘ್ನನಿಗೆ ಶೃತಕೀರ್ತಿಯೂ, ಪತ್ನಿಯರಾದುದು ಮನಸ್ಸು, ಅಹಂಕಾರ, ಚಿತ್ತಗಳಿಗೆ ಕಾರ್ಯರೂಪದಲ್ಲಿರುವ ಉಪಾಧಿಗಳ ಸ್ವರೂಪದ ತತ್ವವಾಗಿರುವುದು. ಮೋಕ್ಷಮಾರ್ಗದ ತತ್ವವೇ ಪ್ರಧಾನವಾಗಿರುವ ರಾಮಾಯಣದಲ್ಲಿ ಇವರ ವಿಚಾರಗಳು ಇನ್ನೆಲ್ಲಿಯೂ ಬಂದಿಲ್ಲವಾದ್ದರಿಂದ ಈ ತತ್ವವನ್ನು ವಿವರಿಸಲಿಲ್ಲ. ಇನ್ನು ಮುಂದಿನ ಶ್ರೀರಾಮಚರಿತ್ರೆಯನ್ನು ಅನುಸರಿಸೋಣ.

## ೯ನೆಯ ಪ್ರಕರಣ.

**ಶ್ರೀರಾಮನು ಪರಶುರಾಮನ ಗರ್ವವನ್ನು ಭಂಗಮಾಡಿದುದು.**

**ಬ್ರಹ್ಮಾಂಡದ ಪಾಲನೆಗೂ ಈಶ್ವರನೇ ಕರ್ತನೆಂಬ ವಿಚಾರ.**

**ರಾ||** ಸೀತಾಸ್ವಯಂವರವಾದನಂತರ ವಿಶ್ವಾಮಿತ್ರರು ತಮ್ಮ ಸ್ಥಾನಕ್ಕೆ ಹೊರಟು ಹೋದರು. ಅನಂತರ ಶ್ರೀರಾಮನು ಲಕ್ಷ್ಮಣ ದಶರಥ ಮುಂತಾದವರೊಡನೆ ಅಯೋ

ಥ್ಯೆಗೆ ಹೊರಟುಬರುತ್ತಿರುವಾಗ ದಾರಿಯಲ್ಲಿ ಪರಶುರಾಮುನನ್ನು ಕಂಡು ಆತನು ಕೊಟ್ಟ ವಿಷ್ಣುಧನುಸ್ಸನ್ನು ಭಂಗಪಡಿಸಿದನು.

**ತತ್ವ||** ವಿಶ್ವಾಮಿತ್ರರು ತಮ್ಮ ಸ್ಥಾನಕ್ಕೆ ತೆರಳಿದರೆಂದರೆ--ಸಪಿತೃಶಕ್ತಿಯಿಂದ ನಡೆಯ ಬೇಕಾದ ಸೃಷ್ಟಿಕರ್ತವ್ಯಗಳೆಲ್ಲವೂ ಪೂರ್ಣವಾಗಿ ಸ್ಥಿತಿ ಅಥವಾ ಇರುವಿಕೆಗೆ ಬಂದಿತೆಂಬ ತತ್ವದ ಸೂಚನೆಯಾಗಿರುವುದು.

**ರಾ||** ಪರಶುರಾಮನು ಶ್ರೀರಾಮುನನ್ನು ಕುರಿತು ಜನಕರಾಯನ ಬಳಿ ಇದ್ದ ಶಿವಧನುಸ್ಸನ್ನು ಮುರಿದುದು ಹೆಚ್ಚಿನದಲ್ಲ, ನನ್ನಲ್ಲಿರುವ ವಿಷ್ಣುಧನುಸ್ಸನ್ನು ನೀನು ಸಂಧಾನ ಮಾಡಿದ್ದೀ ಆದರೆ, ಆಗ ನಿನ್ನನ್ನು ಮಹಾತ್ಮನೆಂದೆಣಿಸುತ್ತೇನೆಂದು ಹೇಳಿದನು.

**ತತ್ವ||** ಪರಶುರಾಮುನಲ್ಲಿದ್ದ ವಿಷ್ಣುಧನುಸ್ಸಿನ ತತ್ವವೇನೆಂದರೆ –ಜನಕರಾಯನಲ್ಲಿದ್ದ ಶಿವಧನುಸ್ಸು ಉಪಸಂಹಾರ ಅಥವಾ ಲಯವಮಾಡತಕ್ಕ ತತ್ವದ್ದೆಂದೂ, ವಿಶ್ವಾಮಿತ್ರರ ವಿಚಾರಗಳು ಸೃಷ್ಟಿಯ ತತ್ವವೆಂದೂ ಹಿಂದೆ ತಿಳಿಸಿತು. ಅಲ್ಲದೆ ಶುದ್ಧಸತ್ವಪ್ರಧಾನವಾಯಾ ಸ್ವರೂಪಳಾದ ಸೀತಾದೇವಿಯನ್ನು ಶ್ರೀರಾಮನು ಪಾಣಿಗ್ರಹಣಮಾಡಿಕೊಂಡನೆಂದರೆ— ಬ್ರಹ್ಮಾಂಡದ ಸ್ಥಿತಿ ಅಥವಾ ನಡೆಯುವಿಕೆಯ ಕಾರ್ಯವು ಪ್ರಾರಂಭವಾಯಿತೆಂಬ ತಾತ್ಪರ್ಯದ ಸೂಚನೆಯಾಗಿರುವುದಷ್ಟೆ. ಸೃಷ್ಟಿ ಮತ್ತು ಲಯಕ್ಕೆ ಈಶ್ವರನು ಕರ್ತನಾದಂತೆ ಪಾಲನೆಗೂ ಈತನೇ ಕರ್ತನೆಂಬ ತತ್ವವು ಪರಶುರಾಮನ ಗರ್ವಭಂಗದಿಂದ ಸೂಚಿತ ವಾಗುವುದು.

ಪರಶುರಾಮನು ಯಾರೆಂದರೆ—"ಪರ್ಶ್ ಶತ್ರೂನ್ ಶೃಣಾತಿ-ಹಿನಸ್ತಿ ಅನೇನ ಇತಿ ಪರಶು" ಇಂಥ ಪರಶುವಿನಲ್ಲಿ "ಆರಮಣಂ ಕ್ರೀಡನಂ" ಅಂದರೆ ಶತ್ರುಗಳನ್ನು ಧ್ವಂಸ ಮಾಡುವ ಧನುಸ್ಸಿನಲ್ಲಿ ಕ್ರೀಡಿಸುವವನೆಂದು ಅರ್ಥವಾಗುತ್ತದೆ. ಪರಶುರಾಮನು ದಶಾ ವತಾರಗಳಲ್ಲಿ ಆರನೆಯ ಅವತಾರ, ಶ್ರೀರಾಮನು ಏಳನೆಯ ಅವತಾರ. "ಸಪ್ತಮೆ ಮಾಸೆ ಜೀವಸಂಯುಕ್ತೋ ಭವತಿ" ಎಂಬ ಗರ್ಭೋಪನಿಷತ್ ವಾಕ್ಯದಂತೆ ಮಾತೃಗರ್ಭದಲ್ಲಿ ಬೆಳೆಯುತ್ತಿರುವ ಶಿಶುವಿಗೆ ಏಳನೆಯ ತಿಂಗಳಲ್ಲಿ ಜೀವವು ದೇಹದೊಡನೆ ಕೂಡಿಕೊಳ್ಳುವು ದರಿಂದ ದಶಾವತಾರಗಳಲ್ಲಿ ಏಳನೆಯ ಅವತಾರವು ಪೂರ್ಣಾಂಶವಾದುದು. ಇದರಂತೆ ಸೃಷ್ಟಿಸಿದ ಬ್ರಹ್ಮಾಂಡದಲ್ಲಿ ವಿರಾಟ್‌ಚೈತನ್ಯನಾಗಿ ಅಭಿವ್ಯಕ್ತನಾಗುವುದೇ ಏಳನೆಯ ಅವ ತಾರದ ತತ್ವವಾಗಿರುವುದು. ಆರನೆಯ ಅವತಾರವಾದ ಪರಶುರಾಮಾವತಾರದ ತತ್ವವು, ಗರ್ಭದಲ್ಲಿ ಬೆಳೆಯುತ್ತಿದ್ದ ದೇಹವು ಕ್ಷತ್ರಿಯಸ್ವರೂಪದ ತತ್ವದಲ್ಲಿರುವ ರಜೋಗುಣದಿಂದ ಕುಗ್ಗದಂತೆ ಸತ್ವಗುಣದಿಂದ ಅಭಿವೃದ್ಧಿಮಾಡಿ ಪಾಲನೆಮಾಡಿದ ತತ್ವವಾಗಿರುವುದು. ಯಾವಾಗ ಪೂರ್ಣಾಂಶನಾದ ಜೀವಚೈತನ್ಯನು ದೇಹಕ್ಕೆ ಸಂಯುಕ್ತನಾದನೋ ಆಗ ದೇಹದ ಪಾಲನೆ ಮತ್ತು ಅಭಿವೃದ್ಧಿಗಳ ಕರ್ತವ್ಯಗಳು ಜೀವನದಾಗಿರುವುದೆಂದು ತಿಳಿಸುವ ತತ್ವವೇ

ಪರಶುರಾಮುನನ್ನು ಶ್ರೀರಾಮನು ಭಂಗಮಾಡಿದುದಾಗಿರುತ್ತದೆ. ಅಂದರೆ ಆರನೆಯ ತಿಂಗಳಲ್ಲಿ ಗರ್ಭದಲ್ಲಿರುವ ಶಿಶುವಿನ ದೇಹವನ್ನು ಬೆಳವಣಿಗೆಗೆ ತರುತ್ತಿದ್ದ ಈಶ್ವರಾಂಶದ ಕರ್ತವ್ಯವು ಪೂರಯಿಸಿತೆಂಬ ತಾತ್ಪರ್ಯವೇ ಪರಶುರಾಮನಲ್ಲಿದ್ದ ವಿಷ್ಣುವಿನ ಅಂಶವನ್ನು ಶ್ರೀರಾಮನು ಸೆಳೆದುಕೊಂಡ ತತ್ವವಾಗಿರುತ್ತದೆ. ಪರಶುರಾಮುನನ್ನು ಗೆದ್ದುದರ ಮುಖ್ಯ ತತ್ವವೇನೆಂದರೆ ಸೃಷ್ಟಿಕ್ರಮದ ನಡೆವಳಿಕೆಯೆಲ್ಲ ಪೂರ್ಣವಾಗಿ ಸ್ಥಿತಿ ಅಥವಾ ಪಾಲನೆಯು ಪ್ರಾರಂಭವಾಯಿತೆಂಬ ತಾತ್ಪರ್ಯವಾಗಿರುವುದು.

## ೧೦ನೆಯ ಪ್ರಕರಣ.

**ಶ್ರೀರಾಮಚಂದ್ರನು ಸೀತೆಯೊಡನೆ ಅಯೋಧ್ಯೆಯಲ್ಲಿದ್ದುದು.**



**ವಿರಾಟ್ಚೈತನ್ಯದ ವಿಚಾರ. ಬಾಲ ಕಾಂಡದ ತತ್ವಗಳನ್ನೆಲ್ಲ ಉಪ ಸಂಹಾರಮಾಡಿ ಮಾನವದೇಹಕ್ಕೆ ಅನ್ವಯಮಾಡಿರುವ ವಿಚಾರ.**

**ರಾ||** ಶ್ರೀರಾಮನು ಪರಶುರಾಮನ ಗರ್ವಭಂಗಮಾಡಿ ಅಯೋಧ್ಯೆಯನ್ನು ಸೇರಿ, ಸೀತಾಸಮೇತನಾಗಿ ಸುಖದಿಂದಿದ್ದನು.

**ತತ್ವ||** ಬಾಲಕಾಂಡದಲ್ಲಿ ಬರುವ ಸೃಷ್ಟಿಯ ಮುಖ್ಯತತ್ವಗಳೇನೆಂದರೆ—ಸೃಷ್ಟಿಗೆ ಪೂರ್ವದಲ್ಲಿ ಸರ್ವವೂ ಪರಬ್ರಹ್ಮಮಾತ್ರವಾಗಿಯೇ ಇತ್ತು. ಪರಬ್ರಹ್ಮನ ಶಕ್ತಿಯು ಆವಿರ್ಭವಿಸಿ ತ್ರಿಗುಣಾತ್ಮಿಕವಾದ ಮೂಲಪ್ರಕೃತಿಯೆನಿಸಿಕೊಂಡು ಪರಮಾತ್ಮನ ಪ್ರಕಾಶದೊಡನೆ ಸಕಲ ಸೃಷ್ಟಿಯನ್ನುಂಟುಮಾಡಿತು. ಈ ತ್ರಿಗುಣಾತ್ಮಿಕವಾದ ಮೂಲಪ್ರಕೃತಿಯಲ್ಲಿನ ಶುದ್ಧ ಸತ್ವಗುಣದಲ್ಲಿ ಪ್ರಕಾಶಮಾನನಾಗಿ ಶುದ್ಧಸತ್ವಗುಣವನ್ನು ತನ್ನ ವಶವರ್ತಿನಿಯನ್ನಾಗಿ ಮಾಡಿಕೊಂಡು, ರಜೋಗುಣ, ತಮೋಗುಣ, ಮಲಿನಸತ್ವಗುಣಗಳಿಗೂ ನಿಯಂತೃವಾಗಿ ಸಕಲ ಸೂಕ್ಷ್ಮ ಮತ್ತು ಸ್ಥೂಲ ಸೃಷ್ಟಿಗಳನ್ನು ಮಾಡುವವನು ಈಶ್ವರನು.

ಅಂದರೆ ಸೃಷ್ಟಿಯ ಉಪಾಧಿಗಳ ತಾರತಮ್ಯದಿಂದ ಪರಮಾತ್ಮನು ಈಶ್ವರ, ಹಿರಣ್ಯಗರ್ಭ, ವಿರಾಟರೆಂಬ ಹೆಸರುಗಳನ್ನು ಪಡೆಯುವನು. ಇದೇ ತಾತ್ಪರ್ಯಕ್ಕೆ ಶ್ರೀವಿದ್ಯಾರಣ್ಯರವರು ಪಂಚದಶಿ ಚಿತ್ರದೀಪಿಕೆ ೪ನೆಯ ಶ್ಲೋಕದಲ್ಲಿ,

> ಸ್ವತಶ್ಶುದ್ಧಂತರ್ಯಾಮೀತು ಮಾಯಾವೀ ಸೂಕ್ಷ್ಮಸೃಷ್ಟಿತಃ |
> ಸೂತ್ರಾತ್ಮಾ ಸ್ಥೂಲಸೃಷ್ಟ್ಯೈವ ವಿರಾಡಿ ತ್ಯುಚ್ಯತೇಪರಃ ||

ತಾ|| ಪರಮಾತ್ಮನು ಶುದ್ಧಚಿತ್ತೆಂದು ಹೇಳಲ್ಪಡುವನು. ಮಾಯೆಯೊಡಗೂಡಿದ ಪರಮಾತ್ಮನು ಅಂತರ್ಯಾಮಿ ಅಥವಾ ಈಶ್ವರನೆಂದು ಹೇಳಲ್ಪಡುವನು. ಈಶ್ವರಚೈತನ್ಯನೇ

ಸೂಕ್ಷ್ಮದೇಹಗಳ ಸೃಷ್ಟಿಯು ದೆಸೆಯಿಂದ ಹಿರಣ್ಯಗರ್ಭನೆನಿಸಿಕೊಳ್ಳುವನು. ಸ್ಥೂಲದೇಹ. ಗಳ ಸೃಷ್ಟಿಯು ದೆಸೆಯಿಂದ ವಿರಾಟನೆನಿಸಿಕೊಳ್ಳುವನೆಂದು ಹೇಳಿರುವರು.

ಈ ಮೇಲಿನ ಶ್ಲೋಕದಲ್ಲಿ ಹೇಳಿರುವಂತೆ ಮನುಷ್ಯಾದಿ ಸಕಲಪ್ರಾಣಿಗಳ ಸೂಕ್ಷ್ಮ ಮತ್ತು ಸ್ಥೂಲ ದೇಹಗಳ ಸೃಷ್ಟಿಗಳು ಸಂಪೂರ್ಣಕ್ಕೆ ಬರುವ ತತ್ವದ ಸೂಚನೆಯೇ ಬಾಲ ಕಾಂಡದ ಮುಖ್ಯಸಾರಾಂಶವಾಗಿರುವುದು. ಸೂಕ್ಷ್ಮ ಮತ್ತು ಸ್ಥೂಲ ದೇಹಗಳ ಸೃಷ್ಟಿಯು ಸಕಲಪ್ರಾಣಿಗಳಿಗೂ ಪ್ರತ್ಯೇಕ ಪ್ರತ್ಯೇಕವಾದುದಾಗಿರುವುದು. ಅಂದರೆ ಸಕಲಪ್ರಾಣಿಗಳ ಸೂಕ್ಷ್ಮದೇಹಗಳೂ ಪ್ರಥಮದಲ್ಲಿ ಸೃಷ್ಟಿಯಾಗಿ ಅನಂತರ ಅವುಗಳ ಸ್ಥೂಲದೇಹಗಳು ಸೃಷ್ಟಿಯಾಗುವುವು. ಸೂಕ್ಷ್ಮದೇಹದ ಸ್ವರೂಪವೇನೆಂದರೆ—ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೯೮ ಮತ್ತು ೯೯ನೆಯ ಶ್ಲೋಕಗಳಲ್ಲಿ,

ವಾಗಾದಿಪಂಚ ಶ್ರವಣಾದಿಪಂಚ
ಪ್ರಾಣಾದಿಪಂಚಾಭ್ರಮುಖಾನಿ ಪಂಚ ।
ಬುದ್ಧ್ಯಾದ್ಯವಿದ್ಯಾಪಿಚ ಕಾಮಕರ್ಮಣೀ
ಪುರ್ಯಷ್ಟಕಂ ಸೂಕ್ಷ್ಮಶರೀರಮಾಹುಃ ॥

ತಾ॥ ವಾಕ್ಕು, ಪಾಣಿ, ಪಾದ, ಪಾಯು, ಉಪಸ್ಥ ಎಂಬ ಕರ್ಮೇಂದ್ರಿಯಗಳು, ತ್ವಕ್ಕು, ಚಕ್ಷು, ಶ್ರೋತ್ರ, ಜಿಹ್ವಾ, ಘ್ರಾಣಗಳೆಂಬ ಜ್ಞಾನೇಂದ್ರಿಯಗಳು, ಪಂಚಪ್ರಾಣ ಗಳು, ಪಂಚಭೂತಗಳು, ಅಂತಃಕರಣ, ಅವಿದ್ಯಾ, ಕಾಮ, ಕರ್ಮ, ಈ ಎಂಟೂ ಸೇರಿ ಪುರ್ಯಷ್ಟಕವೆಂತಲೂ, ಸೂಕ್ಷ್ಮಶರೀರವೆಂತಲೂ ಹೇಳುತ್ತಾರೆ.

ಇದಂ ಶರೀರಂ ಶೃಣು ಸೂಕ್ಷ್ಮಸಂಜ್ಞಿತಂ ।
ಲಿಂಗಂತ್ವ ಪಂಚೀಕೃತ ಭೂತಸಂಭವಂ ।
ಸವಾಸನಂ ಕರ್ಮಫಲಾನು ಭಾವಕಂ ।
ಸ್ವಾಜ್ಞಾನತೋಽನಾದಿ ರುಪಾಧಿರಾತ್ಮನಃ ॥

ತಾ॥ ಈ ಸೂಕ್ಷ್ಮಶರೀರ ಅಥವಾ ಲಿಂಗಶರೀರವು ಅಪಂಚೀಕೃತ ಭೂತಗಳಿಂದ ಹುಟ್ಟಿ, ಪೂರ್ವವಾಸನೆಯಿಂದ ಕೂಡಿದ್ದಾಗಿ, ಕರ್ಮಫಲಾನುಭವಕ್ಕೆ ಸಾಧಕವಾಗಿರುವುದು. ಆತ್ಮನು ತನ್ನನ್ನು ತಾನು ಮರೆತದ್ದರಿಂದ, ಆತನಿಗೆ ಅನಾದಿಯಾದ ಈ ಉಪಾಧಿ ಯುಂಟಾಗಿರುವುದು ಎಂಬದಾಗಿ ಹೇಳಿರುವರು.

ಈ ಮೇಲಿನ ಶ್ಲೋಕದಲ್ಲಿ ಹೇಳಿರುವ ಅವಿದ್ಯೆ, ಕಾಮ, ಕರ್ಮಗಳು, ರಜಸ್ತಮೋ ಗುಣ ಮತ್ತು ಮಲಿನಸತ್ವಗುಣಗಳ ಸ್ವರೂಪದಲ್ಲಿರುವುವು. ಮೇಲೆ ತಿಳಿಸಿರುವ ಸೂಕ್ಷ್ಮ

ಶರೀರದಲ್ಲಿ ಬುದ್ಧಿ ಮನಸ್ಸು ಚಿತ್ತ ಅಹಂಕಾರಗಳೆನಿಸುವ ಅಂತಃಕರಣವೂ ಇರುವುದಷ್ಟೆ. ಮನುಷ್ಯಾದಿ ಸಕಲಪ್ರಾಣಿಗಳ ಅಂತಃಕರಣದಲ್ಲಿ ಮಹಾವಿಷ್ಣುವೆಂದರೆ ಸರ್ವವ್ಯಾಪಿಯಾದ ಪರಮಾತ್ಮನು ಕೂಟಸ್ಥನೆಂಬ ಹೆಸರಿನಿಂದ ಇರುವನು. ಅಲ್ಲದೆ ಈ ಪರಮಾತ್ಮನ ಪ್ರತಿ ಫಲನದ ಚೈತನ್ಯನೆಂದರೆ ಚಿದಾಭಾಸಚೈತನ್ಯನೂ ಇರುವನು. ಈ ವಿಚಾರಗಳು ಶ್ರೀರಾಮಾದಿಗಳ ಜನನ, ವಸಿಷ್ಠರ ಅನ್ವಯದ ತತ್ವಗಳಲ್ಲಿ ವಿವರಿಸಿರುವುದಷ್ಟೆ. ಅಂದರೆ ಪ್ರತಿಯೊಂದು ಪ್ರಾಣಿಗಳ ಅಂತಃಕರಣದಲ್ಲಿಯೂ ಪರಬ್ರಹ್ಮಸ್ವರೂಪನಾದ ಶ್ರೀಮನ್ನಾರಾಯಣನೇ ಪ್ರತಿಬಿಂಬಚೈತನ್ಯನಾಗಿರುವನೆಂಬ ತತ್ವವು. ಹೀಗೆ ಪ್ರತ್ಯೇಕಪ್ರತ್ಯೇಕವಾದ ಸಕಲ ಪ್ರಾಣಿಗಳಲ್ಲಿಯೂ ಪರಮಾತ್ಮನು ಪ್ರತಿಬಿಂಬಿತನಾಗಿರುವನೆಂಬ ತತ್ವಕ್ಕೆ ಶ್ರೀವಿದ್ಯಾರಣ್ಯರವರು ಪಂಚದಶಿ ಚಿತ್ರದೀಪಿಕೆ ೩ನೆಯ ಶ್ಲೋಕದಲ್ಲಿ,

ಪೃಥಕ್ಪೃಥಕ್ ಚಿದಾಭಾಸಾ ಶ್ಚೈತನ್ಯಾಧ್ಯಸ್ತದೇಹಿನಾಂ ।
ಕಲ್ಪ್ಯಂತೇ ಜೀವನಾಮಾನೊ ಬಹುಧಾ ಸಂಸರಂತ್ಯಮೀ ॥

ತಾ॥ ಪರಮಾತ್ಮನಲ್ಲಿ ಆರೋಪಿಸಲ್ಪಟ್ಟ ದೇವ, ಮನುಷ್ಯ, ಪಶು, ಪಕ್ಷ್ಯಾದಿ ಪ್ರಾಣಿಗಳಿಗೆ ಜೀವರೆಂಬ ಹೆಸರುಳ್ಳ ಚಿದಾಭಾಸರೆಂದರೆ ಪರಮಾತ್ಮನ ಪ್ರತಿಫಲನದ ಚೈತನ್ಯರು ಬೇರೆಬೇರೆಯಾಗಿ ಕಲ್ಪಿಸಲ್ಪಡುತ್ತಿರುವರು. ಈ ಜೀವರು ಅನೇಕ ವಿಧವಾದ ಸಂಸಾರವನ್ನು ಹೊಂದುತಲಿರುವರು ಎಂಬದಾಗಿ ಹೇಳಿರುವರು.

ಆದುದರಿಂದ ಸಕಲಪ್ರಾಣಿಗಳ ಸೂಕ್ಷ್ಮದೇಹದಲ್ಲಿರತಕ್ಕ ಪ್ರತಿಬಿಂಬಚೈತನ್ಯವು ತನ್ನಲ್ಲಿರುವ ಇತರ ಸಲಕರಣೆಗಳಿಂದ, ಸ್ಥೂಲದೇಹಗಳನ್ನು ಸೃಷ್ಟಿಮಾಡಿಕೊಳ್ಳುವ ತತ್ವವು ವಿಶ್ವಾಮಿತ್ರರೊಡನೆ ಶ್ರೀರಾಮಚಂದ್ರನು ನಡೆಸಿದ ಕಾರ್ಯಗಳಲ್ಲಿ ಅಡಕವಾಗಿರುವುದು. ಬ್ರಹ್ಮಾಂಡದಲ್ಲಿರುವ ಸಕಲಪ್ರಾಣಿಗಳ ಸೂಕ್ಷ್ಮದೇಹಗಳ ಸಮಷ್ಟಿಗೆ ಅಭಿಮಾನಿಯಾಗಿ ಈಶ್ವರನು ಹಿರಣ್ಯಗರ್ಭನೆನಿಸಿಕೊಳ್ಳುವನು. ಬ್ರಹ್ಮಾಂಡದ ಸಕಲ ಸೂಕ್ಷ್ಮ ಮತ್ತು ಸ್ಥೂಲಸೃಷ್ಟಿಗಳು ಪೂರ್ಣವಾದಾಗ ಈಶ್ವರನೇ ವಿರಾಟ್ ಎನಿಸಿಕೊಳ್ಳುವನು. ಅಂದರೆ ನಮಗೆ ಕಂಡು ಕೇಳಿ ಬರುವ ಜಗತ್ತೆಲ್ಲ ಒಟ್ಟುಸೇರಿ, ಈಶ್ವರನಿಗೆ ಸ್ಥೂಲದೇಹವೆನಿಸಿಕೊಳ್ಳುವುದರಿಂದ ವಿರಾಟ್‌ಪುರುಷನೆನಿಸಿಕೊಳ್ಳುವನು. ಈ ವಿರಾಟ್‌ಪುರುಷನ ತತ್ವಕ್ಕೆ ಭಗವದ್ಗೀತೆ ವಿಶ್ವರೂಪಾಧ್ಯಾಯದಲ್ಲಿ,

ತತ್ರೈಕಸ್ಥಂ ಜಗತ್ಕೃತ್ಸ್ನಂ ಪ್ರವಿಭಕ್ತ ಮನೇಕಧಾ ।
ಅಪಶ್ಯತ್ ದೇವದೇವಸ್ಯ ಶರೀರೇ ಪಾಂಡವಸ್ತದಾ ॥

ತಾ॥ ಆ ವಿರಾಟ್‌ಪುರುಷನ ದೇಹದಲ್ಲಿ ಎಲ್ಲಿಯೋ ಒಂದು ಮೂಲೆಯಲ್ಲಿದ್ದಂತೆ ದೇವತೆಗಳು, ಮನುಷ್ಯರು, ಪಶುಗಳು, ಮರಗಿಡಗಳು, ಭೂಮಿ, ಆಕಾಶ, ಸ್ವರ್ಗ, ಪಾತಾಳ

ಈ ರೀತಿಯಾಗಿ ಲೆಕ್ಕವಿಲ್ಲದಷ್ಟು ಬಗೆಗಳಾಗಿರುವ ಜಗತ್ತೆಲ್ಲ ಅಡಗಿರುವುದನ್ನು ಅರ್ಜುನನು ಕಂಡನು ಎಂದು-ಹೇಳಿದೆ.

ಆದುದರಿಂದ ವ್ಯಕ್ತವಾಗಿ ಕಾಣುವ ಸ್ಥೂಲಬ್ರಹ್ಮಾಂಡವೇ ದೇಹವಾಗಿ ಉಳ್ಳವನು, ವಿರಾಟ್ಪುರುಷನು. ಇದೇ ತಾತ್ಪರ್ಯಕ್ಕೆ ಶ್ರೀವಿದ್ಯಾರಣ್ಯರವರು ಕೂಡ ಪಂಚದಶಿ ಚಿತ್ರ ದೀಪಿಕೆ ೨೦೪ನೆಯ ಶ್ಲೋಕದಲ್ಲಿ,

ಆತಪಾಭಾತಲೋಕೋವಾ ಕಟೋವಾವರ್ಣಪೂರಿತಃ |
ಸಸ್ಯಂವಾಫಲಿತಂಯದ್ವ ತ್ತ್ಥಾಸ್ಪಷ್ಟವಪುರ್ವಿರಾಟ್ ||

ತಾ|| ಬಿಸಿಲಿನಿಂದ ಬೆಳಗುತ್ತಿರುವ ಲೋಕವಾದರೂ, ಬಣ್ಣಬಣ್ಣದ ಚಿತ್ರವಸ್ತ್ರವಾದರೂ, ಪೂರ್ಣಫಲಿತವಾಗಿರುವ ಸಸ್ಯವಾದರೂ, ಯಾವಪ್ರಕಾರವಾಗಿ ಸ್ಪಷ್ಟವಾಗಿ ತೋರುವುದೋ ಅದೇಪ್ರಕಾರವಾಗಿ ವಿರಾಟ್ಪುರುಷನು ವಿಶದವಾಗಿ ತೋರತಕ್ಕ ಶರೀರವುಳ್ಳವನಾಗುವನು ಎಂಬದಾಗಿ ಹೇಳಿರುತ್ತಾರೆ.

ಸಮಷ್ಟಿಯಲ್ಲಿ ಈಶ್ವರಚೈತನ್ಯನೇ ಹಿರಣ್ಯಗರ್ಭ ವಿರಾಟರೆನಿಸಿಕೊಳ್ಳುವಂತೆ ಪ್ರತ್ಯೇಕ ಪ್ರತ್ಯೇಕವಾಗಿರುವ ಸಕಲಪ್ರಾಣಿಗಳ ಅಂತಃಕರಣದಲ್ಲಿರುವ ಪ್ರತಿಬಿಂಬಚೈತನ್ಯನು ಸೂಕ್ಷ್ಮದೇಹದ ಸೃಷ್ಟಿಯಿಂದ ತೈಜಸನೆನಿಸಿಕೊಳ್ಳುವನು. ಇವರಂತೆ ಜೀವರ ವ್ಯಾಪಾರದಲ್ಲೂ ಉಪಾಧಿಭೇದದಿಂದ ಪ್ರಾಜ್ಞ ತೈಜಸ ವಿಶ್ವರೆಂಬ ನಾಮಗಳನ್ನು ಪಡೆದಿರುವನು. ಪ್ರಕೃತ, ಸೃಷ್ಟಿಗೆ ಕೊನೆಯಾಗಿರುವ, ಅವಿದ್ಯಾಸ್ವರೂಪರಾದ ರಾಕ್ಷಸರನ್ನು ನಿಗ್ರಹಿಸಬಹುದಾದ, ಮನುಷ್ಯದೇಹದ ಸೃಷ್ಟಿಯು ಕ್ರಮದಲ್ಲಿ ಯಾವ ಕಾಲದಲ್ಲಿ ವಿಶ್ವಸ್ವರೂಪವಾದ ದೇಹವು ಮನುಷ್ಯನಿಗೆ ಉಂಟಾಗುವುದೆಂಬ ತತ್ವವನ್ನು ತೆಗೆದುಕೊಳ್ಳೋಣ.

ಮೇಲಿನ ಶ್ರೀಶಂಕರಭಗವತ್ಪಾದರವರ ಎರಡು ಶ್ಲೋಕಗಳಲ್ಲಿ ಹೇಳಿರುವ ಪ್ರತಿಯೊಂದು ಪ್ರಾಣಿಗಳಲ್ಲಿನ ಸೂಕ್ಷ್ಮಶರೀರವು ಅನಾದಿಸಿದ್ಧವಾದುದು. ಇದರ ಸೃಷ್ಟಿಯು ಹುಟ್ಟು ನೆಲೆಯನ್ನು ಅರಿಯುವುದು ದುಸ್ತರ. ಇದರ ಹುಟ್ಟು ನೆಲೆಯನ್ನು ತಿಳಿಯಲು ಹೋದರೆ ಪಾರಗಾಣುವುದಿಲ್ಲವೆಂದೂ ಅನಾದಿಯೆಂದೂ ಶಾಸ್ತ್ರವು ತಿಳಿಸುತ್ತಾ ಇದರ ಪರಿಹಾರಕ್ಕೆ ಪ್ರಯತ್ನಮಾಡಬೇಕೆಂದು ವಿಧಿಸಿರುವುದು.

ಶ್ರೀರಾಮಚಂದ್ರನು ಕೂಡ ಬಾಲಕಾಂಡದ ತತ್ವದಲ್ಲಿ ಈಶ್ವರನ ಮಹಿಮೆಯಲ್ಲಿ ಸೃಷ್ಟಿಯ ವಿಚಾರವನ್ನು ಸೂಕ್ಷ್ಮವಾಗಿಟ್ಟು ಮನುಷ್ಯನು ತಿಳಿದು ಉದ್ಧಾರವಾಗಬೇಕಾಗಿರುವ ದಾರಿಯ ತತ್ವವನ್ನು ಮುಂದಿನ ಕಾಂಡಗಳಲ್ಲಿ ವಿವರವಾಗಿ ತೋರಿಸಿರುವನು.

ಅನಾದಿಸಿದ್ಧವಾದ ನಮ್ಮ ಸೂಕ್ಷ್ಮಶರೀರವು ವಿಧವಿಧವಾದ ಅಸಂಖ್ಯಾತವಾದ ಸ್ಥೂಲ ಶರೀರಗಳನ್ನು ಹೊಂದಿರುವುದು. ಈ ಸೂಕ್ಷ್ಮಶರೀರವು ಭಂಗವಾಗದೆ ಜನ್ಮಗಳು ಬರು

ವುದು ನಿಲ್ಲುವುದಿಲ್ಲ. ಸೂಕ್ಷ್ಮಶರೀರಭಂಗವಾಗಬೇಕಾದರೆ ಈ ಶರೀರದಲ್ಲಿರುವ ಅವಿದ್ಯೆ ಯೆಂದರೆ ಅಜ್ಞಾನವು ನಾಶವಾಗಬೇಕು. ಅಜ್ಞಾನಸ್ವರೂಪವೇ ರಾಕ್ಷಸರು. ಇಂತಹ ರಾಕ್ಷಸರನ್ನು ನಿಗ್ರಹಮಾಡುವ ಮುಖ್ಯಉದ್ದೇಶದಿಂದಲೇ ಶ್ರೀರಾಮಾವತಾರವಾಗಿರುವುದು. ಆದುದರಿಂದ ಶ್ರೀರಾಮಚಂದ್ರಮೂರ್ತಿಯು ತನ್ನ ಅವತಾರದ ತತ್ವದಲ್ಲಿ ಸೃಷ್ಟಿಯ ವಿಚಾರ ವನ್ನು ಲಂಬಿಸಿರುವುದಿಲ್ಲ. ನಮ್ಮ ಸೂಕ್ಷ್ಮಶರೀರದಲ್ಲಿನ ಪಂಚಪ್ರಾಣ ಮತ್ತು ಇಂದ್ರಿಯ ಗಳೇ ದೇವತೆಗಳು. ಇದೇ, ದೇವತೆಗಳು ವಾನರ ಭಲ್ಲೂಕಗಳ ಅವತಾರ ಮಾಡಿರುವುದರ ತತ್ವವಾಗಿರುವುದು. ಈ ಸೂಕ್ಷ್ಮಶರೀರವು ಅನೇಕಾನೇಕ ಸ್ಥೂಲದೇಹಗಳನ್ನು ಪಡೆದರೂ ಅವಿದ್ಯಾನಾಶವಾಗಬೇಕಾದರೆ ಮನುಷ್ಯದೇಹವನ್ನು ಪಡೆಯಬೇಕು. ಆದುದರಿಂದ ಯಾವ ಕಾಲದಲ್ಲಿ ಮನುಷ್ಯನ ಸ್ಥೂಲ ಶರೀರದ ಸೃಷ್ಟಿಯು ಪೂರ್ಣವಾಗುವುದೆಂಬ ವಿಚಾರವನ್ನು ತೆಗೆದುಕೊಳ್ಳೋಣ.

ಮಾತೃ ಗರ್ಭದಲ್ಲಿ ಶುಕ್ಲಶೋಣಿತ ದ್ವಂದ್ವದಲ್ಲಿರುವ ಸೂಕ್ಷ್ಮಶರೀರಿಯಾದ ಜೀವನಿಗೆ ದೇಹದ ಅಂಗಗಳ ಮತ್ತು ಇಂದ್ರಿಯಗೋಳಕಗಳ ಸೃಷ್ಟಿಯು ಸಂಪೂರ್ಣಸ್ಥಿತಿಗೆ ಬಂದು ಜೀವನು ದೇಹದಲ್ಲಿ ತಡೆಯಿಲ್ಲದೆ ಪ್ರಸರಿಸಲು ಗರ್ಭದಲ್ಲಿ ಆರು ತಿಂಗಳು ತುಂಬಿ ಏಳನೆಯ ತಿಂಗಳಿಗೆ ಬರಬೇಕು. ಏಳನೆಯ ತಿಂಗಳಿಗೆ ಮುಂಚೆ ಸ್ಥೂಲದೇಹದ ಸೃಷ್ಟಿಯು ಸಂಪೂರ್ಣಕ್ಕೆ ಬಂದಿರುವುದಿಲ್ಲವಾದುದರಿಂದ ಏಳನೆಯ ತಿಂಗಳಿಗೆ ಮುಂಚೆ ಜನಿಸಿದ ಶಿಶುಗಳು ಬದುಕುವುದಿಲ್ಲ. ಈ ಸೃಷ್ಟಿಕ್ರಮವು ಸಂಪೂರ್ಣ ಸ್ಥಿತಿಗೆ ಬಂದು "ಸಪ್ತಮೆ ಮಾಸೆ ಜೀವಸಂಯುಕ್ತೋಭವತಿ" ಎಂಬ ಗರ್ಭೋಪನಿಷತ್ಪ್ರಮಾಣದಂತೆ ಏಳನೆಯ ತಿಂಗಳಲ್ಲಿ ವಿಶ್ವಸ್ವರೂಪವಾದ ದೇಹವೆನಿಸಿ ಜೀವನು ಇದರಲ್ಲಿ ಸಂಯುಕ್ತನಾಗುವುದರಿಂದ ವಿರಾಟ್ ಅಥವಾ ವಿಶ್ವನೆನಿಸಿಕೊಳ್ಳುವನು. ಅಂದರೆ ಮಾತೃಗರ್ಭದಲ್ಲಿ ಸೂಕ್ಷ್ಮದೇಹ ದಲ್ಲಿರುವ ಶಿಶುವಿನ ಬುದ್ಧಿ ಮನಸ್ಸುಗಳಲ್ಲಿರುವ ಪ್ರತಿಬಿಂಬ ಚೈತನ್ಯ ಅಥವಾ ಚಿದಾಭಾಸ ಚೈತನ್ಯನು ಸ್ಥೂಲದೇಹವನ್ನು ಸೃಷ್ಟಿಮಾಡಿಕೊಂಡು ಶುದ್ಧಸತ್ವಗುಣದ ಉಪಾಧಿ ಯೊಡನೆ ಸ್ವಸ್ಥಾನವಾದ ಅಂತಃಕರಣದಲ್ಲಿ ನಿಲ್ಲುವ ತತ್ವವೇ ಶ್ರೀರಾಮಚಂದ್ರನು ವಿಶ್ವಾ ಮಿತ್ರರೊಡನೆ ಕಾರ್ಯನಡೆಸಿ ಸೀತಾಪಾಣಿಗ್ರಹಣಮಾಡಿ ಪುನಃ ಅಯೋಧ್ಯೆಗೆ ಬಂದು ದರ ತತ್ವವಾಗಿರುವುದು.

ಸೃಷ್ಟಿಯ ಕಾರ್ಯಗಳು ಈಶ್ವರಾಧೀನವಾದುದರಿಂದ ಮಾತೃಗರ್ಭದಲ್ಲಿ ಸೂಕ್ಷ್ಮ ಶರೀರಿಯಾದ ಜೀವ ಚೈತನ್ಯಕ್ಕೆ ಸೃಷ್ಟಿಯ ಅಧಿಕಾರ ಹೇಗೆ ಉಂಟಾಗುವುದೆಂಬ ಅನು ಮಾನ ಬರಬಹುದು. ಇದಕ್ಕೆ ಸಮಾಧಾನವೇನೆಂದರೆ ಈಶ್ವರ ಜೀವ ಚೈತನ್ಯಗಳು ಒಂದೇ. ಚೈತನ್ಯದಲ್ಲಿ ಭೇದವಿರುವುದಿಲ್ಲ. ಇದೇ ತಾತ್ಪರ್ಯಕ್ಕೆ "ಶುದ್ಧಮಿಾಶ್ವರ ಚೈತನ್ಯಂ ಜೀವಚೈತನ್ಯಮೇವಚ" ಎಂಬ ಶ್ರುತಿ ಪ್ರಮಾಣವಿರುವುದರಿಂದ ಚೈತನ್ಯವಲ್ಲಿ

ಭೇದವಿರುವುದಿಲ್ಲ. ಇದೇ ತಾತ್ಪರ್ಯಕ್ಕೆ ಶ್ರೀವಿದ್ಯಾರಣ್ಯರವರು ಪಂಚದಶಿ ಚಿತ್ರ ದೀಪಿಕೆ ೧೫೩ನೇ ಶ್ಲೋಕದಲ್ಲಿ

**ಕೂಟಸ್ಥಾಸಂಗಮಾತ್ಮಾನಂ ಜಗತ್ತ್ವೇನಕರೋತಿಸಾ |**

**ಚಿದಾಭಾಸಸ್ವರೂಪೇಣ ಜೀವೇಶಾವಪಿನಿರ್ಮಮೇ ||**

ತಾ|| ಪ್ರಕೃತಿಯು ನಿರ್ವಿಕಾರ ರೂಪದಿಂದ ಸಂಗರಹಿತನಾದ ಪರಮಾತ್ಮನನ್ನು ಜಗದ್ರೂಪವನ್ನಾಗಿ ಮಾಡಿ ಪ್ರತಿಫಲನದಿಂದ ಜೀವೇಶ್ವರರಿಬ್ಬರನ್ನೂ ನಿರ್ಮಿಸಿತು. ಎಂಬದಾಗಿ ಹೇಳಿರುವರು. ಅಂದರೆ ಪ್ರತಿಫಲನಚೈತನ್ಯ ಒಂದೇ. ಈಶ್ವರನೇ ಸಮಷ್ಟಿ ಚೈತನ್ಯನೆನಿಸಿಯೂ ಜೀವರುಗಳು ವ್ಯಷ್ಟಿಚೈತನ್ಯರೆನಿಸಿಯೂ ಇರುವರು. ಈ ತಾತ್ಪರ್ಯಕ್ಕೆ ಶ್ರೀವಿದ್ಯಾರಣ್ಯರವರು ಪಂಚದಶಿ ಚಿತ್ರದೀಪಿಕೆ ೧೫೫ನೇ ಶ್ಲೋಕದಲ್ಲಿ

**ಮಾಯಾಭಾಸೇನ ಜೀವೇಶೌ ಕರೋತೀತಿ ಶ್ರುತೌಶ್ರುತಮ್ |**

**ಮೇಘಾಕಾಶ ಜಲಾಕಾಶಾ ವಿವತೌ ಸುವ್ಯವಸ್ಥಿತೌ ||**

ತಾ|| ಮಾಯಾಶಕ್ತಿಯು ಚಿದಾಭಾಸ ರೂಪದಿಂದ ಜೀವೇಶ್ವರರನ್ನು ಮಾಡು ವುದೆಂದು ಶ್ರುತಿಯಲ್ಲಿ ಹೇಳಿದೆ. ಈಶ್ವರ ಜೀವರಿಬ್ಬರಲ್ಲಿ ಈಶ್ವರ ಚೈತನ್ಯವು ಮೇಘಾಕಾಶ ದಂತೆಯೂ ಜೀವಚೈತನ್ಯವು ಮೇಘದೊಳಗಿನ ತುಂತುರುಗಳಲ್ಲಿನ ಆಕಾಶದಂತೆಯೂ ಇರುವುದು ಎಂದು ಹೇಳಿರುವರು.

ಅಂದರೆ ಮೇಘಾಕಾಶದಂತೆ ಈಶ್ವರನು ಸಮಷ್ಟಿಚೈತನ್ಯನೆನಿಸುವನು. ಮೇಘ ದಲ್ಲಿನ ಮಂಜಿನ ತುಂತುರಿನ ಆಕಾಶದಂತೆ ಜೀವನು ವ್ಯಷ್ಟಿಚೈತನ್ಯನೆನಿಸುವನು. ಆದುದರಿಂದ ಖಂಡಿತವಾಗಿಯೂ ಚೈತನ್ಯದಲ್ಲಿ ಭೇದವಿಲ್ಲ. ಈ ಈಶ್ವರತತ್ವದ್ಯೋತಕ ವಾದ ಬಾಲಕಾಂಡದಲ್ಲಿಯೂ ಮತ್ತು ಜೀವತ್ವದ ಸೋಪಾನವಾದ ಇತರ ಕಾಂಡಗಳಲ್ಲಿಯೂ ಶ್ರೀರಾಮನೊಬ್ಬನೇ ಕಥಾನಾಯಕನಾಗಿರುವಂತೆ ಪ್ರತಿಬಿಂಬಚೈತನ್ಯ ಒಂದೇ. ಪ್ರತಿಯೊಂದು ಪ್ರಾಣಿಯಲ್ಲಿರುವ ಸೂಕ್ಷ್ಮಶರೀರಿಯಾದ ಪ್ರತಿಬಿಂಬಚೈತನ್ಯವು ಬಿಂಬ ಭೂತವಾದ ಪರಮಾತ್ಮನ ಆಶ್ರಯದಿಂದಲೂ ಸಮಷ್ಟಿಜೀವ ಸ್ವರೂಪನಾದ ಈಶ್ವರನ ನಿಯತಿಯಿಂದಲೂ ತನ್ನ ಸ್ಥೂಲದೇಹವನ್ನು ಸೃಷ್ಟಿಮಾಡಿಕೊಳ್ಳುವುದು. ಪ್ರತಿಯೊಂದು ಪ್ರಾಣಿಯೂ ಹಿಂದಿನ ದೇಹವನ್ನು ಬಿಟ್ಟು ಮುಂದಿನ ದೇಹವನ್ನು ಪಡೆಯತಕ್ಕ ತತ್ವವು ಈಶ್ವರನ ಸೃಷ್ಟಿಕಾರ್ಯದ ಸ್ಫುರಣೆಯೆಂಬದಾಗಿ ತಿಳಿಯಬೇಕು. ಪ್ರಥಮ ಸೃಷ್ಟಿಯ ಸ್ಥಿತಿಯನ್ನು ಪರಿಗಣನೆ ಮಾಡಿಕೊಂಡರೂ ಈಶ್ವರ ಚೈತನ್ಯವೇ ಸಕಲ ಪ್ರಾಣಿಗಳನ್ನೂ ಸೃಷ್ಟಿಸಿ ಆ ಪ್ರಾಣಿಗಳಲ್ಲಿ ಪ್ರವೇಶ ಮಾಡಿರುವುದೆಂಬುದಕ್ಕೆ "ತತ್ಸೃಷ್ಟ್ವಾತದೇವಾನುಪ್ರಾವಿ ಶತ್" ಎಂಬ ಶ್ರುತ್ಯಾಧಾರವಿರುವುದಲ್ಲದೆ ಪೈಂಗಲೋಪನಿಷತ್ ದ್ವಿತೀಯಾಧ್ಯಾಯದಲ್ಲಿ,

" ಈಶಾಜ್ಞಯಾ ವಿರಾಟ್‌ವ್ಯಷ್ಟಿದೇಹಂ ಪ್ರವಿಶ್ಯ
ಬುದ್ಧಿಮಧಿಷ್ಠಾಯ ವಿಶ್ವತ್ವಂ ಅಗಮತ್ "

ತಾ|| "ಅಂತರ್ಯಾಮಿಯ ಸಂಕಲ್ಪದಂತೆ ವಿರಾಟ್ ಚೈತನ್ಯನು ವ್ಯಷ್ಟಿ ದೇಹವನ್ನು ಪ್ರವೇಶಿಸಿ ಬುದ್ಧಿಯಲ್ಲಿದ್ದುಕೊಂಡು ವಿಶ್ವನೆನಿಸಿಕೊಳ್ಳುವನು ಎಂಬದಾಗಿ ಹೇಳಿರುವುದು.

ಆದುದರಿಂದ ಶ್ರೀರಾಮಚಂದ್ರನು ವಿಶ್ವಾಮಿತ್ರರೊಡನೆ ಕಾರ್ಯಗಳನ್ನು ನಡೆಸಿಕೊಂಡು ಅಯೋಧ್ಯೆಗೆ ಬಂದಿರುವ ತತ್ವವು ಗರ್ಭಸ್ಥ ಶಿಶುವಿನ ಪ್ರತಿಬಿಂಬಚೈತನ್ಯವು ಸೃಷ್ಟಿಕಾರ್ಯವಾದ ಈಶ್ವರ ಸೋಪಾನವನ್ನು ಹೊಂದಿ ಏಳನೆಯ ತಿಂಗಳ ಹೊತ್ತಿಗೆ ಸ್ಥೂಲ ದೇಹದ ಸೃಷ್ಟಿಕ್ರಮವನ್ನು ಸಂಪೂರ್ಣಮಾಡಿಕೊಂಡು ವಿರಾಟ್ ಸ್ವರೂಪನೆನಿಸಿ ಅಂತಃಕರಣದಲ್ಲಿ ನಿಲುಗಡೆಗೆ ಬರುವ ತತ್ವವಾಗಿರುವುದು. ವ್ಯಷ್ಟಿಪ್ರಾಣಿಗಳಾದ ನಮ್ಮಲ್ಲಿರುವ ಪ್ರತಿಬಿಂಬ ಚೈತನ್ಯವು ಜೀವನೆಂದು ವಾಡಿಕೆಯಾಗಿ ಕರೆಯಲ್ಪಡುವುದು. ಜೀವಚೈತನ್ಯಕ್ಕೆ ಮಾತೃಗರ್ಭದಲ್ಲಿ ಸ್ಥೂಲದೇಹದ ಸೃಷ್ಟಿಯನ್ನು ಮಾಡಿಕೊಳ್ಳುವ ಅಧಿಕಾರವಿರುವುದಿಲ್ಲವೆಂದು ತಿಳಿದುಕೊಳ್ಳಬಾರದು. ಈಶ್ವರ ಜೀವರ ಚೈತನ್ಯ ಒಂದೇ ಎಂದು ಶ್ರುತ್ಯಾಧಾರಗಳಿಂದ ಮೇಲೆ ತಿಳಿಸಿತಷ್ಟೆ. ಈ ಚೈತನ್ಯಕ್ಕೆ ಪರಬ್ರಹ್ಮ ಸೋಪಾನ, ಈಶ್ವರ ಸೋಪಾನ, ಜೀವಸೋಪಾನಗಳೆಂಬ ಮೂರು ಸೋಪಾನಗಳು ನಮ್ಮಲ್ಲಿಯೇ ಇರುವುವು. " ಅವಿದ್ಯೋಪಾಧಿಕೋ ಜೀವಃ ಮಾಯೋಪಾಧಿಕ ಈಶ್ವರಃ " ಎಂಬ ಶ್ರುತಿವಚನದಂತೆ ಪ್ರತಿಬಿಂಬಚೈತನ್ಯನು ಅವಿದ್ಯೆಯ ಉಪಾಧಿಯನ್ನು ಪಡೆದರೆ ಜೀವನೆಂದು ಕರೆಯಲ್ಪಡುವನು. ಅವಿದ್ಯೆಯ ಉಪಾಧಿಯೆಂದರೆ ನಮಗಿರುವ ಜಾಗ್ರತ್ಸ್ವಪ್ನ ಸುಷುಪ್ತ್ಯವಸ್ಥೆಗಳು ಅಂದರೆ ಪ್ರಾಣಿಗಳ ವ್ಯಾಪಾರ. ಈ ವ್ಯಾಪಾರಕಾಲದಲ್ಲಿ ತನ್ನ ದೇಹವನ್ನು ತಾನು ಸೃಷ್ಟಿಮಾಡಿಕೊಳ್ಳಲಾರನು.

ಅಂದರೆ ಎಂತಹ ಅದ್ಭುತ ಶಕ್ತಿಯುಳ್ಳ ಪಂಡಿತನಾದರೂ ಗರ್ಭದಲ್ಲಿ ಉಂಟಾಗುವ ಸೃಷ್ಟಿಯ ಕಾರ್ಯವನ್ನು ಬಾಹ್ಯವ್ಯಾಪಾರದಲ್ಲಿ ಮಾಡಲಾರನು. ಅಲ್ಲದೆ ಆಧುನಿಕ ಶಾಸ್ತ್ರಜ್ಞರು ಯಾವ ವಿಧವಾದ ಯಂತ್ರಗಳಿಂದಾಗಲಿ ಪದಾರ್ಥಗಳ ಸಂಯೋಜನದ ಕಾರ್ಯದಿಂದಾಗಲಿ ಸೃಷ್ಟಿಕಾರ್ಯವನ್ನೆಂದಿಗೂ ಮಾಡಲಾರರು. ಆದುದರಿಂದ ಹೊರಗಿನ ವ್ಯಾಪಾರವೆಂದರೆ ಅವಿದ್ಯೆಯ ಉಪಾಧಿ ಬಂದುದರಿಂದ ಪ್ರತಿಬಿಂಬಚೈತನ್ಯನು ಜೀವನೆಂದು ಕರೆಯಲ್ಪಡುವನು. ಅಲ್ಲದೆ ಮಾತೃಗರ್ಭದಲ್ಲಿ ಸ್ಥೂಲ ದೇಹವನ್ನು ಸೃಷ್ಟಿಮಾಡಲು ಹೊರಗಿನಿಂದ ಪ್ರತ್ಯೇಕನಾದ ಈಶ್ವರನು ಬರುವನು ಎಂದು ಹೇಳುವುದಕ್ಕೂ ಆಗುವುದಿಲ್ಲ. ಅಲ್ಲದೆ ಜಡವಾದ ಶುಕ್ಲಶೋಣಿತವೇ ದೇಹ ಸೃಷ್ಟಿಮಾಡಿಕೊಳ್ಳುವುದೆಂದು ಎಂದಿಗೂ ಹೇಳಲಾಗುವುದಿಲ್ಲ. ಆದುದರಿಂದ ಪ್ರತಿಬಿಂಬ ಚೈತನ್ಯವೇ ತನ್ನಲ್ಲಿರುವ ಮಾಯೆಯ ಸಂಬಂಧದಿಂದ ಈಶ್ವರನ ಕಾರ್ಯವಾದ ಸೃಷ್ಟಿಕಾರ್ಯವನ್ನು

ತನ್ನ ಜನ್ಮಾಂತರದ ಕರ್ಮಾನುಭವಕ್ಕೆ ಸರಿಯಾಗಿ ಶುಕ್ಲಶೋಣಿತದ ಸಹಾಯದಿಂದ ಮಾಡಿಕೊಳ್ಳುವುದು ಎಂಬದಾಗಿ ಒಪ್ಪಲೇ ಬೇಕಾಗುವುದು.

ಸಮಷ್ಟಿಸ್ವರೂಪನಾದ ಈಶ್ವರನು ಪ್ರತಿಯೊಂದು ಪ್ರಾಣಿಗೂ ಪ್ರೇರಕನಾಗಿಯೂ ನಿಯಂತೃವಾಗಿಯೂ ಇರುವುದರಿಂದ ಅಂತರ್ಯಾಮಿಯೆನಿಸಿ ಸರ್ವಕ್ಕೂ ಪ್ರೇರಕನಾಗಿರುವನು. ಆದುದರಿಂದ ಪ್ರತಿಯೊಬ್ಬ ಮನುಷ್ಯನಲ್ಲಿಯೂ ಈಶ್ವರಸೋಪಾನವಿರುವುದು. ಪ್ರತಿಯೊಬ್ಬ ಮನುಷ್ಯನಲ್ಲಿಯೂ ಪ್ರತಿಬಿಂಬಚೈತನ್ಯವು ಈಶ್ವರಸೋಪಾನದಲ್ಲಿನ ಸೃಷ್ಟಿಕಾರ್ಯವನ್ನು ಮಾಡಿಕೊಳ್ಳುವುದು. ಕಾರ್ಯಾನಂತರ ಈಶ್ವರಸೋಪಾನದ ಸ್ಥಿತಿಯೆಂದರೆ ನಿತ್ಯಮುಕ್ತಿ (ಜೀವನ್ಮುಕ್ತಿ) ಸೋಪಾನದಲ್ಲಿ ಪ್ರತಿಬಿಂಬಚೈತನ್ಯವು ಇರಲಾರದೆ ಜೀವಸೋಪಾನಕ್ಕೆ ಹೊರಡುವುದು. ಪ್ರತಿಯೊಬ್ಬ ಮನುಷ್ಯನಲ್ಲಿಯೂ ಈಶ್ವರ ಸೋಪಾನವಿದ್ದ ಕಾಲದಲ್ಲಿ, ಕೊಂಚವಾದರೂ ಅಲೆಯಿಲ್ಲದ ನೀರಿನಂತೆ ಬುದ್ಧಿಗೆ ವೃತ್ತಿಯಿಲ್ಲದೆ ತಟಸ್ಥ ಸ್ವಭಾವದಲ್ಲಿರುವುದು. ಈ ಸ್ಥಿತಿಯೇ ಶ್ರೀರಾಮಚಂದ್ರನು ಸೀತಾಪಾಣಿಗ್ರಹಣಮಾಡಿ ಬಂದು ಅಯೋಧ್ಯೆಯಲ್ಲಿ ಇರುವುದಾಗಿದೆ. ಶ್ರೀರಾಮನು ಅಯೋಧ್ಯೆಯಲ್ಲಿದ್ದನೇ ಹೊರತು ಪಟ್ಟಾಭಿಷಿಕ್ತನಾಗಲಿಲ್ಲ. ಅಂದರೆ ಪಟ್ಟಾಭಿಷಿಕ್ತನಾಗುವುದೇ ಪ್ರತಿಬಿಂಬಚೈತನ್ಯವು ಪಂಚಕೋಶಸ್ವರೂಪವಾದ ದೇಹದಲ್ಲಿ ಪ್ರಸರಣೆಯಾಗುವ ವ್ಯಾಪಾರದ ಬಂಧನವನ್ನು ಜಯಿಸಿ ನಿತ್ಯಮುಕ್ತಸ್ವಭಾವವಾದ ಈಶ್ವರ ಸ್ಥಿತಿಯಲ್ಲಿ ಸ್ಥಿರಪಡುವುದಾಗಿರುವುದು. ಅಂದರೆ ಶ್ರೀರಾಮಚಂದ್ರನು ಸೀತಾಪಾಣಿಗ್ರಹಣ ಮಾಡಿ ಅಯೋಧ್ಯೆಗೆ ಬಂದನಂತರ ಪಟ್ಟಾಭಿಷೇಕಕ್ಕೆ ವಿಘ್ನಬರಲು ವನವಾಸಕ್ಕಾಗಿ ಹೊರಟಂತೆ ಪ್ರತಿಬಿಂಬಚೈತನ್ಯವು ಈಶ್ವರಸೋಪಾನದಲ್ಲಿ ಮಾತೃಗರ್ಭದಲ್ಲಿ ಏಳನೇ ತಿಂಗಳವರೆಗೆ ದೇಹಸೃಷ್ಟಿ ಮಾಡಿಕೊಂಡು ಅನಂತರ ಅಂತಃಕರಣದಲ್ಲಿ ಸ್ಥಿರೀಕರಿಸಲ್ಪಟ್ಟ ನೆಲೆಯಲ್ಲಿ ನಿಲ್ಲದೆ ಪಂಚಕೋಶ ಸ್ವರೂಪವಾದ ದೇಹದಲ್ಲಿ ಪ್ರಸರಣೆಗೆ ಹೊರಡುವುದು. ಹಾಗೆ ಪ್ರತಿಬಿಂಬಚೈತನ್ಯವು ಗರ್ಭದಲ್ಲಿ ದೇಹಸೃಷ್ಟಿಕಾರ್ಯ ಮಾಡಿಕೊಂಡನಂತರ ಪಂಚಕೋಶಸ್ವರೂಪವಾದ ದೇಹದಲ್ಲಿ ಪ್ರಸರಣೆಗೆ ಹೋಗದೆ ಇರುವ ಮಧ್ಯದ ಸ್ಥಿತಿಯೇ ಶ್ರೀರಾಮಚಂದ್ರನು ಅಯೋಧ್ಯೆಯಲ್ಲಿ ಸೀತೆಯೊಡನೆ ಇದ್ದುದಾಗಿರುವುದು.

ಆದುದರಿಂದ ಶ್ರೀರಾಮಚಂದ್ರನು ಅಯೋಧ್ಯೆಯಲ್ಲಿ ಸೀತಾದೇವಿಯೊಡನೆ ಇದ್ದನೆಂದರೆ "ಅವಿದ್ಯೋಪಾಧಿಕೋ ಜೀವಃ ಮಾಯೋಪಾಧಿಕ ಈಶ್ವರಃ" ಎಂಬ ಶ್ರುತಿವಚನಾನುಸಾರವಾಗಿ ಬುದ್ಧಿಯಲ್ಲಿನ ಪ್ರತಿಬಿಂಬ ಚೈತನ್ಯವು ಮಾಯೋಪಾಧಿಯೊಡನೆ ಸ್ವಸ್ಥಾನದಲ್ಲಿ ಇರುವುದಾಗಿದೆ. ಈ ಪ್ರತಿಬಿಂಬ ಚೈತನ್ಯವು ಅವಿದ್ಯೆಯ ಉಪಾಧಿಯನ್ನು ಪಡೆದು ಜೀವನೆನಿಸಿಕೊಳ್ಳುವ ಶ್ರೀರಾಮನು ವನವಾಸಕ್ಕೆ ತೆರಳುವ ಮುಂದಿನ ವಿಷಯವು ಅಯೋಧ್ಯಾಕಾಂಡದಲ್ಲಿದೆ.

ಶ್ರೀ

# ಅಯೋಧ್ಯಾಕಾಂಡ



## ಜೀವತ್ವವನ್ನು ಪಡೆಯುವ ವಿಚಾರದ ತತ್ವಗಳು.

## ೧ನೆಯ ಪ್ರಕರಣ.

**ಮಂಥರೆಯಿಂದ ಪ್ರೇರಿತಳಾದ ಕೈಕೇಯಿಯಿಂದ ಶ್ರೀರಾಮನ ಪಟ್ಟಾಭಿಷೇಕಕ್ಕೆ ವಿಘ್ನ. ಹದಿನಾಲ್ಕು ವರ್ಷ ವನವಾಸ ಪ್ರಾಪ್ತವಾದುದು.**



**ಜೀವತ್ವವನ್ನು ಪಡೆಯುವಕಾರಣ ಮತ್ತು ದೇಹವಾಸದ ಕಾಲ ನಿರ್ಣಯ ವಿಚಾರ.**

**ರಾ||** ಶ್ರೀರಾಮನು ಸೀತಾಸಮೇತನಾಗಿ ಅಯೋಧ್ಯೆಯಲ್ಲಿ ಸುಖವಾಗಿದ್ದನು. ದಶರಥನು ಶ್ರೀರಾಮನಿಗೆ ಯೌವರಾಜ್ಯಾಭಿಷೇಕವನ್ನು ಮಾಡಲು ನಿಶ್ಚಯಿಸಿರುವಲ್ಲಿ ಮಂಥರೆಯಿಂದ ಪ್ರೇರಿತಳಾದ ಕೈಕೇಯಿಯು ಶ್ರೀರಾಮನನ್ನು ಹದಿನಾಲ್ಕುವರ್ಷ ವನವಾಸಕ್ಕೆ ಕಳುಹಿಸಬೇಕೆಂದೂ ಭರತನಿಗೆ ಪಟ್ಟಕಟ್ಟಬೇಕೆಂದೂ ಹಟಹಿಡಿದಳು.

**ತತ್ವ||** ದಶರಥನು ಶ್ರೀರಾಮನಿಗೆ ಯೌವರಾಜ್ಯಾಭಿಷೇಕಮಾಡಬೇಕೆಂದು ಪ್ರಯತ್ನ ಪಟ್ಟುದರ ತತ್ವವೇನೆಂದರೆ—ದಶೇಂದ್ರಿಯ ಗೋಳಕಗಳುಳ್ಳ ಮನುಷ್ಯದೇಹವನ್ನು ಸೃಷ್ಟಿ ಮಾಡುವ ಪರಮಾತ್ಮನ ಸೃಷ್ಟಿಸಂಕಲ್ಪದ ತತ್ವದವನೇ ದಶರಥನೆಂದು ಬಾಲಕಾಂಡದಲ್ಲಿ ವಿವರಿಸಿರುವುದಷ್ಟೆ. ಇಂತಹ ಸೃಷ್ಟಿಸಂಕಲ್ಪವು ತನ್ನ ಕಾರ್ಯವಾದ ದೇಹಸೃಷ್ಟಿಯಾದ ನಂತರ ಪ್ರತಿಬಿಂಬಚೈತನ್ಯವನ್ನು ಬುದ್ಧಿಯಲ್ಲಿಯೇ ನೆಲೆಯಾಗಿ ನಿಲ್ಲಿಸಲು ಮಾಡುವ ಪ್ರಯತ್ನ, ಎಂದರೆ ಮಾತೃಗರ್ಭದಲ್ಲಿರುವ ಶಿಶುವಿನ ದೇಹಸೃಷ್ಟಿಯು ಏಳನೆಯ ತಿಂಗಳಹೊತ್ತಿಗೆ ಪೂರ್ಣವಾದನಂತರ ಬುದ್ಧಿಯಲ್ಲಿರುವ ಪ್ರತಿಬಿಂಬಚೈತನ್ಯವು ಸ್ವಸ್ಥಾನದಲ್ಲಿ ಸೃಷ್ಟಿಸಂಕಲ್ಪದ ನಿಯತಿಯಲ್ಲಿ ನೆಲಸಿರಲೆಂಬ ತತ್ವವೇ ದಶರಥನು ಶ್ರೀರಾಮಚಂದ್ರನಿಗೆ ಯೌವರಾಜ್ಯಾಭಿಷೇಕಮಾಡಬೇಕೆಂಬ ಪ್ರಯತ್ನದ ತತ್ವ. ಆದರೆ ಈ ಸೃಷ್ಟಿಸಂಕಲ್ಪದ ನಿಯತಿಗೆ ವಿರೋಧವಾಗಿ ಪಂಚಕೋಶಸ್ವರೂಪವಾದ ದೇಹದ ವ್ಯಾಪಾರದಲ್ಲಿ ಪ್ರತಿಬಿಂಬ ಚೈತನ್ಯವು ಪ್ರಸರಣೆಯಾಗುವ ಕಾರ್ಯವು ಆರಂಭವಾಗುವುದೇ ದಶರಥನ ಇಷ್ಟಾರ್ಥವು ನೆರವೇರದೆ ಇದ್ದುದಾಗಿರುವುದು.

ಕೈಕೇಯಿಯು ಕುಬ್ಜೆಯಾದ ಮಂಥರೆಯಿಂದ ಪ್ರೇರಿತಳಾಗಿ ಭರತನಿಗೆ ಪಟ್ಟಕಟ್ಟಿ, ಶ್ರೀರಾಮನನ್ನು ವನವಾಸಕ್ಕೆ ಕಳುಹಿಸಬೇಕೆಂದು ಹಟಹಿಡಿದವಳಷ್ಟೆ. ಕೈಕೇಯಿಯು ಮಂಥರೆಯಿಂದ ಪ್ರೇರಿತಳಾದ ತತ್ವವೇನೆಂದರೆ—ಮಂಥರೆಯೆಂದರೆ "ಮಂಥ ವಿಲೋಢನೆ" ಕಲಕತಕ್ಕ ಸ್ವಭಾವದ ಶಕ್ತಿಯೆಂಬ ತತ್ವವಾಗಿರುವುದು. ಕಲಕತಕ್ಕ ಶಕ್ತಿಯು ವಿಕ್ಷೇಪದ ಸ್ವಭಾವವಾದುದರಿಂದ ಮಂಥರೆಯು ಕುಬ್ಜೆಯೆಂದರೆ ವಿಕಾರರೂಪಳು. ಅಂದರೆ ಕಲಕತಕ್ಕ ಸ್ವಭಾವದ ಶಕ್ತಿಯು ಉತ್ತಮವಾದುದಲ್ಲವೆಂದರೆ ಅವಿದ್ಯಾಕಾರ್ಯದ ಪ್ರಾರಂಭವೆಂಬ ತತ್ವವನ್ನು ಸೂಚಿಸುವುದು. ಮಂಥರೆಯು ಕೈಕೇಯಿಗೆ ಬೋಧನೆಮಾಡಿದಳೆಂದರೆ – ಕೈಕೇಯಿಯ ತತ್ವವಾದ ಇಚ್ಛಾಶಕ್ತಿಯನ್ನು ಉದ್ಬೋಧನಮಾಡಿ ಪ್ರಬಲವಾಗುವಂತೆ ಮಾಡಿದ ತತ್ವವಾಗಿರುವುದು.

ಕೈಕೇಯಿಯು ಭರತನಿಗೆ ಪಟ್ಟಕಟ್ಟಬೇಕೆಂಬ ಇಷ್ಟಾರ್ಥವನ್ನು ನೆರವೇರಿಸಿಕೊಳ್ಳಲು ಶ್ರೀರಾಮಚಂದ್ರಮೂರ್ತಿಯನ್ನು ವನವಾಸಕ್ಕೆ ಕಳುಹಿಸಿದಳು. ಭರತನಿಗೆ ರಾಜ್ಯದ ಪಟ್ಟಬರುವ ತತ್ವವೇನೆಂದರೆ—ಭರತನು ಅಹಂಕಾರ ಅಥವಾ ಅಭಿಮಾನದ ತತ್ವದವನಷ್ಟೆ. ಅಂಹಕಾರ ಅಥವಾ ಅಭಿಮಾನಕ್ಕೆ, ದೇಹವ್ಯಾಪಾರಕಾಲದಲ್ಲಿ ಪಟ್ಟಬರುವುದೇ ಹೊರತು ಇತರ ಕಾಲಗಳಲ್ಲಿ ಬರುವುದಿಲ್ಲ. ಅಂದರೆ ಶಿಶುವಿನ ದೇಹಸೃಷ್ಟಿಕಾಲ ಮತ್ತು ನಿತ್ಯಮುಕ್ತ ಸ್ವಭಾವವೆಂದರೆ ಪ್ರತಿಬಿಂಬಚೈತನ್ಯವು ವೃತ್ತಿರಾಹಿತ್ಯದಿಂದ ಅಂತಃಕರಣದಲ್ಲಿ ಸ್ಥಿರವಾಗಿ ನೆಲೆಸುವ (ಶ್ರೀರಾಮಚಂದ್ರನ ಪಟ್ಟಾಭಿಷೇಕ) ಕಾಲವಾದ ಈಶ್ವರಸೋಪಾನದಲ್ಲಿ ಕರ್ತೃತ್ವ ಭೋಕ್ತೃತ್ವ ಸ್ವರೂಪವಾದ ಅಭಿಮಾನಕ್ಕೆ ಪಟ್ಟಬರುವುದಿಲ್ಲ. ಆದುದರಿಂದ ದೇಹವ್ಯಾಪಾರ ಪ್ರಾರಂಭವಾಗಬೇಕಾದ ತತ್ವವೇ ಕೈಕೇಯಿಯ ಇಷ್ಟಾರ್ಥದ ತತ್ವವಾಗಿರುವುದು.

ಶ್ರೀರಾಮಚಂದ್ರಮೂರ್ತಿಗೆ ಸಿಂಹಾಸನಾರೋಹಣಮಾಡುವುದೊಂದುಳಿದು ಇತರ ದೀಕ್ಷಾಕಾರ್ಯಗಳೆಲ್ಲ ನೆರವೇರಿದ್ದುವು. ಅಂದರೆ ಗರ್ಭದಲ್ಲಿ ಬುದ್ಧಿಯಲ್ಲಿರುವ ಪ್ರತಿಬಿಂಬ ಚೈತನ್ಯವು ದೇಹದ ಸೃಷ್ಟಿಕಾರ್ಯಮಾಡಿಕೊಂಡು ಸ್ವಸ್ಥಾನದಲ್ಲಿರುವಾಗ ಈಶ್ವರಸೋಪಾನದಲ್ಲಿಯೇ ಇದ್ದರೂ ಪ್ರತಿಷ್ಠಿತವಾಗಿ ನಿಲ್ಲುವುದಿಲ್ಲವೆಂಬ ತತ್ವವನ್ನು ಪ್ರತಿಪಾದನೆಮಾಡುವುದೇ ಇದರ ಅರ್ಥವು. ಸಿಂಹಾಸನಾರೋಹಣವಾಗಿದ್ದರೆ ಈಶ್ವರಸೋಪಾನದಲ್ಲಿ ಸ್ಥಿರತ್ವವುಂಟಾಗುತ್ತಿತ್ತು. ಆದುದರಿಂದ ಪ್ರತಿಬಿಂಬಚೈತನ್ಯಕ್ಕೆ ಈಶ್ವರತ್ವದಲ್ಲಿ ಸ್ಥಿರತ್ವ ಬರದೆ ದೇಹಯಾತ್ರೆಯ ರೂಪವಾದ ವ್ಯಾಪಾರಕ್ಕೆಂದರೆ ಜೀವತ್ವದ ಸೋಪಾನಕ್ಕೆ ಹೊರಡಬೇಕಾಯಿತು.

ಶ್ರೀರಾಮಚಂದ್ರನನ್ನು ವನವಾಸಕ್ಕೆ ಕಳುಹಿಸಲು ಮಂಥರೆಯೇ ಮೂಲಕಾರಣಳಷ್ಟೆ. ಮಂಥರೆಯ ತತ್ವವಾದ ಕಲಕತಕ್ಕ ಸ್ವಭಾವವು ವಿಕ್ಷೇಪದ ಸ್ವಭಾವವಾದುದರಿಂದ

ಅವಿದ್ಯೆಯು ತತ್ವಕ್ಕೆ ಸೇರಿರುವುದು. ಅವಿದ್ಯೆಯು ಕಾರ್ಯಕ್ಕೆ ಪ್ರಾರಂಭವಾಗಿ ಪ್ರತಿಬಿಂಬ ಚೈತನ್ಯವು ಬುದ್ಧಿವೃತ್ತಿಯೆನಿಸಿಕೊಂಡು ಕೋಶಗಳಲ್ಲಿ ಪ್ರಸರಿಸುವುದು. ಅಂದರೆ ಈಶ್ವರ ಸೋಪಾನದಲ್ಲಿದ್ದ ಕಾಲದಲ್ಲಿ ಕೊಂಚವಾದರೂ ಅಲೆಯಿಲ್ಲದ ನೀರಿನಂತೆ ಬುದ್ಧಿಗೆ ವೃತ್ತಿಯಿಲ್ಲದೆ ತಟಸ್ಥಸ್ವಭಾವದಲ್ಲಿರುತ್ತದೆ. ನೀರಿನಲ್ಲಿ ಗಾಳಿಯಿಂದ ಅಲೆಯು ಮೇಲೆ ಅಲೆಗಳುಂಟಾಗುವಂತೆ ಬುದ್ಧಿಗೆ ವೃತ್ತಿಸ್ವರೂಪವಾದ ಅಲೆಗಳುಂಟಾಗುವಿಕೆಯೇ ಮಂಥರೆಯಿಂದುಂಟಾದ ವನವಾಸದ ತೊಂದರೆಯ ತತ್ವವಾಗಿರುವುದು. ಬುದ್ಧಿಗುಂಟಾದ ಅಲೆಯ ಸ್ವರೂಪವಾದ ವೃತ್ತಿಗಳು, ಪಂಚಕೋಶದೊಳಗೆ ಪ್ರಸರಿಸುವ ತತ್ವವೇ ಶ್ರೀರಾಮಚಂದ್ರನು ವನವಾಸಕ್ಕೆ ಹೊರಡುವ ತತ್ವವಾಗಿರುವುದು. ಹೀಗೆ ಬುದ್ಧಿವೃತ್ತಿಯು ಕೋಶಾನುವರ್ತಿಯಾಗುವುದರಿಂದ ಅಭಿಮಾನಕ್ಕೆ ದೇಹವ್ಯಾಪಾರದ ಯಾಜಮಾನ್ಯ ಬರುವುದೇ ಭರತನಿಗೆ ಪಟ್ಟಬರುವ ತತ್ವವಾಗಿರುವುದು. ಅಂದರೆ ಈಶ್ವರಸೋಪಾನದಲ್ಲಿ ಕರ್ತೃತ್ವಾದ್ಯಭಿಮಾನಗಳಿರುವುದಿಲ್ಲವೆನ್ನುವ ತತ್ವಕ್ಕೂ ಪಂಚಕೋಶವ್ಯಾಪಾರಸ್ವರೂಪವಾದ ಜೀವತ್ವದಲ್ಲಿ ಕರ್ತೃತ್ವ ಭೋಕ್ತೃತ್ವವಾದ ಅಭಿಮಾನಕ್ಕೆ ಪಟ್ಟಬರುವ ತತ್ವಕ್ಕೂ ಕಠೋಪನಿಷತ್ ತೃತೀಯ ಮುಂಡಕ ಪ್ರಥಮ ಮಂತ್ರದಲ್ಲಿ.

**" ದ್ವಾಸುಪರ್ಣಾ ಸಯುಜಾಸಖಾಯ ಸ್ಸಮಾನಂ ವೃಕ್ಷಂ ಪರಿಷಸ್ವಜಾತೆ |**
**ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ " ||**

ತಾ|| ಎರಡು ಪಕ್ಷಿಗಳು ಒಂದೇ ವೃಕ್ಷದಲ್ಲಿ ಜೊತೆಯಾಗಿವೆ. ಅವುಗಳಲ್ಲಿ ಒಂದು ರುಚಿರುಚಿಯಾದ ಹಣ್ಣುಗಳನ್ನು ತಿನ್ನುವುದು. ಇನ್ನೊಂದು ತಿನ್ನದೆ ನೋಡುತ್ತಾ ಕುಳಿತಿರುವುದು ಎಂಬುದಾಗಿ ಹೇಳಿರುತ್ತದೆ.

ಶ್ರೀರಾಮಚಂದ್ರನು ಅಯೋಧ್ಯೆಯಲ್ಲಿ ಸುಖವಾಗಿದ್ದಂತೆ, ಈಶ್ವರಸೋಪಾನದಲ್ಲಿ ಪ್ರತಿಬಿಂಬಚೈತನ್ಯವು ಸಾಕ್ಷಿಯೆನಿಸಿಕೊಂಡಿದ್ದು ವನವಾಸಕಾಲದಲ್ಲಿ ರಾಕ್ಷಸರ ಬಾಧೆಗೊಳಗಾದ ಶ್ರೀರಾಮಚಂದ್ರನಂತೆ, ಪಂಚಕೋಶಸ್ವರೂಪವಾದ ದೇಹವ್ಯಾಪಾರದಲ್ಲಿ ಅವಿದ್ಯಾಬಾಧೆಯೆಂಬ ಉಪಾಧಿಗೊಳಪಟ್ಟು ಜೀವನೆನಿಸಿಕೊಳ್ಳುವುದು.

ಇದೇ ತಾತ್ಪರ್ಯಕ್ಕೆ ಶ್ರೀವಿದ್ಯಾರಣ್ಯರು ಪಂಚದಶಿ ದ್ವೈತವಿವೇಕದಲ್ಲಿ,

**ಮಾಯಾವೃತ್ತ್ಯಾತ್ಮಕೋ ಹೀಶಸಂಕಲ್ಪಃ ಸಾಧನಂ ಜನೌ |**
**ಮನೋವೃತ್ತ್ಯಾತ್ಮಕೋ ಜೀವಸಂಕಲ್ಪೋ ಭೋಗಸಾಧನಮ್ ||**

ತಾ|| ಮಾಯೆಯ ವ್ಯಾಪಾರವೇ ಸ್ವರೂಪವಾಗುಳ್ಳ ಈಶ್ವರಸಂಕಲ್ಪವು ಸೃಷ್ಟಿಸುವುದರಲ್ಲಿ ಸಾಧನವಾಗುವುದು. ಮನೋವ್ಯಾಪಾರವೇ ಸ್ವರೂಪವಾಗುಳ್ಳ ಜೀವಸಂಕಲ್ಪವು **ಭೋಗದಲ್ಲಿ ಸಾಧನವಾಗುವುದು.**

ಎಂಬದಾಗಿ ಹೇಳಿರುವರು. ಅಲ್ಲದೆ ಇದೇ ತಾತ್ಪರ್ಯಕ್ಕೆ ಶ್ರುತಿವಾಕ್ಯವನ್ನು ಅನುಸರಿಸಿ ಚಿತ್ರದೀಪಿಕೆ ೨೧೩ನೆಯ ಶ್ಲೋಕದಲ್ಲಿ,

**ಈಕ್ಷಣಾದಿ ಪ್ರವೇಶಾಂತಾ ಸೃಷ್ಟಿರೀಶೇನ ಕಲ್ಪಿತಾ |**
**ಜಾಗ್ರದಾದಿ ವಿಮೋಕ್ಷಾಂತ ಸ್ಸಂಸಾರೋ ಜೀವಕಲ್ಪಿತಃ ||**

ತಾ|| ಸೃಷ್ಟಿಸಂಕಲ್ಪವೇ ಅದಿಯಾಗಿ ಪ್ರವೇಶವೇ ಅಂತ್ಯವಾಗುಳ್ಳ ಸೃಷ್ಟಿಯು ಈಶ್ವರನಿಂದ ಕಲ್ಪಿಸಲ್ಪಟ್ಟಿತು ಜಾಗ್ರದವಸ್ಥೆಯೇ ಮೊದಲಾಗಿ ಮುಕ್ತಿಯೇ ತುದಿಯಾಗುಳ್ಳ ಸಂಸಾರವು ಅವಿದ್ಯೋಪಾಧಿಕನಾದ ಜೀವನಿಂದ ಕಲ್ಪಿಸಲ್ಪಟ್ಟಿತು. ಎಂಬದಾಗಿ ಹೇಳಿರುವರು.

ಆದುದರಿಂದ ಪ್ರತಿಬಿಂಬಚೈತನ್ಯವು ಈಶ್ವರಸೋಪಾನದಲ್ಲಿದ್ದು, ದೇಹದ ಸೃಷ್ಟಿಯನ್ನು ಮಾಡಿಕೊಂಡು, ಆ ಈಶ್ವರಸೋಪಾನದ ಸ್ಥಿತಿ ಅಥವಾ ಇರುವಿಕೆಯು ಸ್ವರೂಪವಾದ ನಿತ್ಯಮುಕ್ತಸ್ವಭಾವದಲ್ಲಿ ಇರಲಾರದೆ ವಿಕ್ಷೇಪದ ಕಾರ್ಯಪ್ರಾರಂಭವಾಗಿ, ಪಂಚಕೋಶಸ್ವರೂಪವಾದ ದೇಹದಲ್ಲ ವ್ಯಾಪಾರರೂಪವಾದ ಉಪಾಧಿಯನ್ನು ಪಡೆಯುವುದು. ಈ ತತ್ವವೇ ಶ್ರೀರಾಮಚಂದ್ರನು ಪಟ್ಟಾಭಿಷಿಕ್ತನಾಗದೆ ವನವಾಸಕ್ಕೆ ಹೊರಟುದಾಗಿದೆ.

ಕೈಕೇಯಿಯ ಇಷ್ಟಾಪೂರ್ತಿಗೋಸ್ಕರ ಶ್ರೀರಾಮಚಂದ್ರನು ವನವಾಸಕ್ಕೆ ಹೊರಟನೆಂದು ಮೇಲೆ ತಿಳಿಸಿತಷ್ಟೆ. ಶ್ರೀರಾಮಚಂದ್ರನ ವನವಾಸಕ್ಕೆ ಕೈಕೇಯಿಯೇ ಮುಖ್ಯಕಾರಣವೆಂದು ಹೇಳಬಾರದು. ಯಾಕೆಂದರೆ ವ್ಯಷ್ಟಿದೇಹಗಳನ್ನು ಸೃಷ್ಟಿಮಾಡಿ ಅಲ್ಲಿದ್ದುಕೊಂಡು ಜೀವನೆನಿಸಿಕೊಳ್ಳಲು ಈಶ್ವರನ ಸಂಕಲ್ಪವೇ ಮುಖ್ಯಕಾರಣವಲ್ಲದೆ ಜಡಸ್ವರೂಪವಾದ ಶಕ್ತಿಯು ಮುಖ್ಯಕಾರಣವಲ್ಲ. ಈಶ್ವರಸಂಕಲ್ಪಕ್ಕೆ ಶಕ್ತಿಯು ಸಹಾಯಮಾತ್ರವಾದುದರಿಂದ ಕಾರಣವು ಈಶ್ವರಸಂಕಲ್ಪವೆಂದೇ ಹೇಳಬೇಕು. ಈ ತಾತ್ಪರ್ಯಕ್ಕೆ ಶ್ರೀರಾಮಚಂದ್ರನು ಅರಣ್ಯಕಾಂಡದ ೧೬ನೆಯ ಅಧ್ಯಾಯದಲ್ಲ ಲಕ್ಷ್ಮಣನೊಡನೆ "ನಾನು ವನವಾಸಮಾಡುವ ಕಾರ್ಯಕ್ಕೆ ಕೈಕೇಯಿಯು ಮುಖ್ಯಕಾರಣಳಲ್ಲ. ವನವಾಸಮಾಡಬೇಕೆಂಬುದನ್ನು ನಾನೇ ನಿಶ್ಚಯಿಸಿಕೊಂಡಿದ್ದೇನು" ಎಂಬದಾಗಿ ಹೇಳಿರುತ್ತಾನೆ. ಆದುದರಿಂದ ಈಶ್ವರಸಂಕಲ್ಪವೇ ಮುಖ್ಯವಾದುದು. ಇದೇ ತಾತ್ಪರ್ಯಕ್ಕೆ "ತದೈಕ್ಷತ ಬಹುಸ್ಯಾಂಪ್ರಜಾಯೇಯೇತಿ" ಎಂಬ ಮತ್ತು "ಅನೇನ ಜೀವೇನಾತ್ಮನಾನುಪ್ರವಿಶ್ಯ" ಎಂಬ ಶ್ರುತ್ಯಾಧಾರವಿರುವುದು.

ಅಲ್ಲದೆ ಪರಮಾತ್ಮನ ಸೃಷ್ಟಿಸಂಕಲ್ಪವೇ ದಶರಥನ ತತ್ವವೆಂದು ಹಿಂದೆ ತಿಳಿಸಿತಷ್ಟೆ! ದೇಹವ್ಯಾಪಾರದ "ಸಂಕಲ್ಪವುದಯಿಸಲು ದೇಹಸೃಷ್ಟಿಸಂಕಲ್ಪವು ತಿರೋಧಾನವಾಗುತ್ತ ಬರುವ ತತ್ವವೇ ದಶರಥನು ಮೂರ್ಛಾಕ್ರಾಂತನಾಗಿದ್ದುದಾಗಿರುವುದು. ಆದರೆ ಪ್ರತಿಬಿಂಬಚೈತನ್ಯವುಂಟಾಗುವುದಕ್ಕೂ ದೇಹವ್ಯಾಪಾರದ ಸಂಕಲ್ಪಕ್ಕೂ ಸೃಷ್ಟಿಸಂಕಲ್ಪವೇ ಮೂಲಕಾರಣವಾದುದರಿಂದ ದಶರಥನು ಶ್ರೀರಾಮಚಂದ್ರನಿಗೆ ತಂದೆಯಾಗಿರುವನು.

ಶ್ರೀರಾಮನು ಹದಿನಾಲ್ಕುವರ್ಷ ವನವಾಸಕ್ಕೆ ಹೋಗಬೇಕೆಂದು ಕೈಕೇಯಿಯು ಇಷ್ಟಪಟ್ಟದ್ದರ ತತ್ವವೇನೆಂದರೆ—ಪ್ರತಿಬಿಂಬಚೈತನ್ಯವು ಈಶ್ವರಸೋಪಾನವನ್ನು ಬಿಟ್ಟು ದೇಹವ್ಯಾಪಾರಕ್ಕೆ ಅವತರಿಸುವುದೆಂದು ಮೇಲೆ ತಿಳಿಸಿತಷ್ಟೆ. ಈ ದೇಹವು ಎಂಥಾದ್ದೆಂದರೆ-ಭೂಃ ಭುವಃ ಮುಂತಾದ ಸಪ್ತಲೋಕಗಳು ಮನುಷ್ಯನ ದೇಹದಲ್ಲಿ ಮೂಲಾಧಾರ ಮೊದಲಾದ ಸಪ್ತಚಕ್ರಗಳಾಗಿರುತ್ತವೆ. ಇಂತಹ ಸ್ವರೂಪವುಳ್ಳ ದೇಹದಲ್ಲಿ ಪ್ರತಿಬಿಂಬಚೈತನ್ಯವು ಅವರೋಹಣಮಾಡಿ ಅನಂತರ ಆರೋಹಣಕ್ರಮದಿಂದ ಮೂಲಾಧಾರ ಮೊದಲಾದ ಚಕ್ರಗಳನ್ನು ಭೇದಿಸುವುದೆಂದರೆ ಜೀವತ್ವದ ಉಪಾಧಿಯನ್ನು ಉಪಸಂಹಾರಮಾಡಿಕೊಂಡು ಈಶ್ವರನ ಸೋಪಾನವಾದ ನಿತ್ಯಮುಕ್ತಸ್ಥಿತಿಯನ್ನು ಪಡೆಯುವವರೆಗೆ ದೇಹವಾಸದ ಬಂಧನದಲ್ಲಿರಬೇಕೆಂಬ ತತ್ವವೇ ಹದಿನಾಲ್ಕುವರ್ಷ ವನವಾಸದ ತತ್ವವಾಗಿರುವುದು. ಅಂದರೆ ಸಪ್ತಲೋಕ ಅಥವಾ ಸಪ್ತವ್ಯಾಹೃತಿಗಳ ಅವರೋಹಣ, ಆರೋಹಣಗಳ ಕಾಲವೆಂಬ ತತ್ವ.

ಹದಿನಾಲ್ಕು ವರ್ಷ ವನವಾಸಮಾಡುವ ತತ್ವವು ಇನ್ನೊಂದು ವಿಧವಾಗಿಯೂ ಅನ್ವಯವಾಗುವುದು. ಮನುಷ್ಯಶರೀರವು ಹದಿನಾಲ್ಕು ಲೋಕಗಳ ತತ್ವದಲ್ಲಿರುವುದು. ಇದೇ ತತ್ವಕ್ಕೆ ಪೈಂಗಲೋಪನಿಷತ್ತಿನ ಪ್ರಥಮಾಧ್ಯಾಯದಲ್ಲಿ,

> **ಪಂಚೀಕೃತ ಭೂತೈ ರನಂತಕೋಟಿ ಬ್ರಹ್ಮಾಂಡಾನಿ**
> **ತತ್ತದಂಡೋಚಿತ ಚತುರ್ದಶ ಭುವನಾನಿ,**
> **ತತ್ತದ್ಭುವನೋಚಿತ ಗೋಳಕ ಸ್ಥೂಲಶರೀರಾಣಿ ||**

ಎಂಬದಾಗಿ ಹೇಳಿರುವಂತೆ ಬ್ರಹ್ಮಾಂಡದಲ್ಲಿರುವ ಹದಿನಾಲ್ಕು ಲೋಕಗಳ ತತ್ವಗಳನ್ನು ಪಿಂಡಾಂಡಸ್ವರೂಪವಾದ ನಮ್ಮ ದೇಹವೊಳಗೊಂಡಿರುವುದು. ಇಂತಹ ದೇಹದಲ್ಲಿ ಪ್ರತಿಬಿಂಬಚೈತನ್ಯವು ಪ್ರವೇಶಿಸಿದರೆ ಹದಿನಾಲ್ಕುಲೋಕಗಳ ತತ್ವದಲ್ಲಿರುವ ದೇಹವ್ಯಾಪಾರದ ಬಂಧನದಲ್ಲಿಯೇ ಇರಬೇಕಾಗುವುದು. ಶ್ರೀರಾಮಚಂದ್ರನು ರಾವಣಾದಿ ರಾಕ್ಷಸರನ್ನು ನಿಗ್ರಹಿಸಿ ಅಯೋಧ್ಯೆಗೆ ಬಂದು ಪಟ್ಟಾಭಿಷಿಕ್ತನಾದಂತೆ, ಯಾರು ತಮ್ಮಲ್ಲಿರುವ ಅವಿದ್ಯೆಯನ್ನು ನಿಗ್ರಹಿಸಿ ನಿತ್ಯಮುಕ್ತರಾಗುವರೋ ಎಂದರೆ, ಜೀವನ್ಮುಕ್ತಸ್ಥಿತಿಯನ್ನು ಪಡೆಯುವರೋ ಅಂತಹವರು ದೇಹವಾಸವೆಂಬ ಸಂಸಾರದಿಂದ ಮುಕ್ತರಾಗುವರೆಂಬ ತತ್ವಪ್ರತಿಪಾದನೆಯೇ ಹದಿನಾಲ್ಕುವರ್ಷ ವನವಾಸದ ಕಾಲನಿರ್ಣಯವಾಗಿರುವುದು.

ಅವಿದ್ಯೆಯು ನಿಗ್ರಹವಾಗುವವರೆಗೆ ಜನನಮರಣಪ್ರವಾಹರೂಪವಾದ ಸಂಸಾರವು ಇದ್ದೇ ಇರುವುದರಿಂದ ಒಂದು ಸ್ಥೂಲದೇಹವು ನಶಿಸಿದಾಕ್ಷಣವೇ ದೇಹವಾಸದ ಬಂಧನ ಹೋಯಿತೆಂದು ತಿಳಿದುಕೊಳ್ಳಬಾರದು. ಸೂಕ್ಷ್ಮದೇಹವು ಇದ್ದೇ ಇರುವುದು.

ಶ್ರೀರಾಮಚಂದ್ರಮೂರ್ತಿಯು ಹದಿನಾಲ್ಕುವರ್ಷಕಾಲ ಭರತಖಂಡದಲ್ಲಿ ವನವಾಸ ಮಾಡಲು ಹೊರಟನಷ್ಟೆ. ಅಖಂಡವೆನ್ನುವುದೇ ಸಮಷ್ಟಿ. ಖಂಡವೆನ್ನುವುದೇ ವ್ಯಷ್ಟಿ. ಭರತ ಎಂಬ ಪದಕ್ಕೆ ಭಾರವನ್ನು ವಹಿಸಿಕೊಂಡು ಪೋಷಿಸುವುದೆಂದರೆ ನಾನೆಂಬ ಅಭಿಮಾನಕ್ಕೆ ಘೋರಿತನವುಂಟಾಗುವ ವ್ಯಷ್ಟಿದೇಹದಲ್ಲಿ ಬುದ್ಧಿಯಲ್ಲಿನ ಪ್ರತಿಬಿಂಬ ಚೈತನ್ಯವು ವ್ಯಾಪಾರಮಾಡಲು ಹೊರಡುವುದೇ ಶ್ರೀರಾಮಚಂದ್ರಮೂರ್ತಿಯು ಭರತಖಂಡದಲ್ಲಿ ವನವಾಸಮಾಡಲು ಹೊರಟ ತತ್ವವಾಗಿರುವುದು.

## ೨ನೆಯ ಪ್ರಕರಣ.

**ಸೀತಾ ಲಕ್ಷ್ಮಣರು ಶ್ರೀರಾಮನೊಡನೆ ವನವಾಸಕ್ಕೆ ಹೊರಟುದು.**

**ಬುದ್ಧಿಗೆ ವೃತ್ತಿಪ್ರಾರಂಭವಾದರೆ ಮನಸ್ಸಿಗೂ ವೃತ್ತಿಪ್ರಾರಂಭವಾಗುವ ಮತ್ತು ಶುದ್ಧಸತ್ವಗುಣವು ಬುದ್ಧಿಚೈತನ್ಯದೊಡನೆ ದೇಹವ್ಯಾಪಾರಕ್ಕೆ ಹೊರಡುವ ವಿಚಾರ.**

**ರಾ||** ಶ್ರೀರಾಮನು ವನವಾಸಕ್ಕೆ ಹೊರಡಲುದ್ಯುಕ್ತನಾಗಲು ಲಕ್ಷ್ಮಣ ಸೀತಾದೇವಿಯರು ಕೂಡ ಶ್ರೀರಾಮನೊಡನೆ ವನವಾಸಕ್ಕೆ ಹೊರಟರು.

**ತತ್ವ ||** ಲಕ್ಷ್ಮಣನು ಶ್ರೀರಾಮಚಂದ್ರನೊಡನೆ ಹೊರಡುವ ತತ್ವವೇನೆಂದರೆ - ಶ್ರೀರಾಮನು ಬುದ್ಧಿತತ್ವಸ್ವರೂಪನೆಂದೂ, ಲಕ್ಷ್ಮಣನು ಮನಸ್ತತ್ವಸ್ವರೂಪನೆಂದೂ ಶ್ರೀರಾಮಾದಿಗಳ ಜನನದ ಪ್ರಕರಣದಲ್ಲಿ ತಿಳಿಸಿದೆ. ಅಂತಃಕರಣದಲ್ಲಿ ಬುದ್ಧಿತತ್ವವೇ ಶ್ರೇಷ್ಠವಾಗಿಯೂ ಪ್ರಾಮುಖ್ಯತೆಯುಳ್ಳದ್ದಾಗಿಯೂ, ಜ್ಞಾನಕರ್ಮಗಳಲ್ಲಿ ಜ್ಞಾನದ ಸ್ವರೂಪವಾಗಿಯೂ ಇರುವುದು. ಮನಸ್ತತ್ವವು ಬುದ್ಧಿಗೆ ಎರಡನೆಯದಾಗಿ ಸಂಕಲ್ಪವಿಕಲ್ಪಗಳೆಂದರೆ ಬಯಕೆ ಮತ್ತು ಇಂದ್ರಿಯಗಳ ಕಾರ್ಯಪ್ರವರ್ತನೆಗೆ ಪ್ರೇರಕವಾಗಿರುವುದರಿಂದ ಕ್ರಿಯಾತ್ಮಕವಾದುದು.

ಪ್ರಪಂಚವ್ಯಾಪಾರಕ್ಕಾಗಲಿ ಮೋಕ್ಷಮಾರ್ಗಕ್ಕಾಗಲಿ ಜ್ಞಾನ ಮತ್ತು ಕ್ರಿಯೆಗಳೆರಡೂ ಅವಶ್ಯಕವಾಗಿ ಸೇರಿ ಪ್ರವರ್ತಿಸಬೇಕಾಗುವುದರಿಂದ ಶ್ರೀ ರಾಮಲಕ್ಷ್ಮಣರಿಬ್ಬರೂ ನಿರಂತರವೂ ಜೊತೆಯಲ್ಲಿರುತ್ತಾರೆ. ಆದುದರಿಂದ ಬುದ್ಧಿಗೆ ವೃತ್ತಿಪ್ರಾರಂಭವಾಗಿ ದೇಹದಲ್ಲಿ ಪ್ರಸರಣೆಯಾಗಲು ಯಾವಾಗ ಪ್ರಾರಂಭಿಸುವುದೋ ಆಗ ಮನಸ್ಸಿಗೂ ವೃತ್ತಿಪ್ರಾರಂಭವಾಗುವುದೆಂಬ ತತ್ವವೇ ಲಕ್ಷ್ಮಣನೂ ಜೊತೆಯಲ್ಲಿ ಹೊರಟುದಾಗಿರುವುದು.

**ರಾ||** ವನವಾಸಕ್ಕೆ ಹೊರಡುವ ಲಕ್ಷ್ಮಣನೊಡನೆ ಸುಮಿತ್ರಾದೇವಿಯು "ಎಲೈ ಮಗನೇ! ವನವಾಸದಲ್ಲಿ ಶ್ರೀರಾಮನನ್ನೇ ತಂದೆಯೆಂದೂ, ಸೀತೆಯನ್ನೇ ತಾಯಿಯೆಂದೂ,

ಅಡವಿಯನ್ನೇ ಅಯೋಧ್ಯೆಯೆಂದೂ ತಿಳಿ. ಶ್ರೀರಾಮುನನ್ನು ವಿಚಾರಿ ನಡೆಯಬೇಡ" ಎಂಬದಾಗಿ ಹೇಳಿ ಆಶೀರ್ವಾದಮಾಡಿದಳು.

**ತತ್ವ||** ವನವಾಸನೆಂದರೆ -ದೇಹವ್ಯಾಪಾರದಲ್ಲಿ ಬುದ್ಧಿಯ ವಿವೇಚನಾಶಕ್ತಿಯನ್ನು ವಿಚಾರಿ ಮನೋವೃತ್ತಿಯು ವಿಷಯಾದಿಗಳ ಬಯಕೆ ಮತ್ತು ಇಂದ್ರಿಯಕಾರ್ಯದಲ್ಲಿ ಪ್ರವರ್ತಿಸುವುದು ಅಧಿಕ. ಆದುದರಿಂದ ಜ್ಞಾನಮಾರ್ಗದ ತತ್ವವನ್ನು ಅನುಸರಿಸಿ ಹೋಗಬೇಕೆಂದು ಇರುವ ಬುದ್ಧಿತತ್ವವನ್ನು ವಿಚಾರಬಾರದೆಂದರೆ-ಬುದ್ಧಿಯ ಜ್ಞಾನಕ್ಕೆ ಸಹಕಾರಿಯಾಗಿ ವಿರಕ್ತಿಯು ಇರಬೇಕೆಂಬ ತತ್ವದ ಸೂಚನೆಯೇ ಶ್ರೀರಾಮುಚಂದ್ರನನ್ನು ವಿಚಾರಿ ನಡೆಯಬೇಡವೆಂದು ಹೇಳಿದುದರ ತತ್ವವಾಗಿರುವುದು.

ಪ್ರಪಂಚವ್ಯಾಪಾರದಲ್ಲಿ ವಿಷಯಾದಿಗಳ ಬಯಕೆ ಮತ್ತು ಕಾರ್ಯದಲ್ಲಿ ಪ್ರವರ್ತಿಸುವ ಮನೋವೃತ್ತಿಗೆ ವಿವೇಚನೆಯೇ ತಂದೆಯೋಪಾದಿಯಲ್ಲಿರುವುದು. ಇವರಂತೆ ಆತ್ಮಜ್ಞಾನದಕಡೆಗೆ ಇರುವ ಬುದ್ಧಿಗೆ ಪುತ್ರನೋಪಾದಿಯಲ್ಲಿ ಮನಸ್ತತ್ವವಾದ ವಿರಕ್ತಿಯು ಇರಬೇಕು. ಸುಪುತ್ರನು ತಂದೆಯನ್ನು ಹೇಗೆ ಸೇವಿಸುವನೋ ಹಾಗೆ ತಂದೆಯೋಪಾದಿಯಲ್ಲಿರುವ ಆತ್ಮಜ್ಞಾನಕ್ಕೆ ವಿರಕ್ತಿಯು ಸುಪುತ್ರನಂತೆ ಸೇವೆಮಾಡಿಕೊಂಡಿರಬೇಕೆಂಬ ತತ್ವವೇ ಶ್ರೀರಾಮುನನ್ನೇ ತಂದೆಯೆಂಬದಾಗಿ ತಿಳಿಯೆಂದು ಹೇಳಿದುದರ ತತ್ವ.

"ಸೀತೆಯನ್ನು ತಾಯಿಯೆಂದು ತಿಳಿ" ಎಂಬದಾಗಿ ಹೇಳಿರುವುದರ ತತ್ವವೇನೆಂದರೆ -ಮನಸ್ಸು ವಿಷಯವ್ಯಾಪಾರದಲ್ಲಿರುವುದೇ ಅವಿದ್ಯೆಯ ಸೋಪಾನವೆಂದರೆ ರಜೋಗುಣ ತಮೋಗುಣಗಳ ಸೋಪಾನ. ಆದುದರಿಂದ ಬಾಹ್ಯವ್ಯಾಪಾರದಲ್ಲಿಯೇ ಸ್ವಾಭಾವಿಕವಾಗಿ ಪ್ರೇರಕವಾಗಿರುವ ಮನಸ್ಸು ಬಾಹ್ಯವ್ಯಾಪಾರಗಳಲ್ಲಿ ವಿರಕ್ತಸ್ಥಿತಿಗೆ ಬಂದು ಶುದ್ಧಸತ್ವಗುಣದ ಸೋಪಾನದ ಸೇವೆಯಲ್ಲಿ ನಿರತವಾಗಿರಬೇಕೆಂಬುದೇ ಸೀತೆಯನ್ನು ತಾಯಿಯೆಂದು ತಿಳಿ ಎಂದು ಹೇಳಿರುವುದಾಗಿದೆ.

"ಅಡವಿಯನ್ನು ಅಯೋಧ್ಯೆಯೆಂದು ತಿಳಿ" ಎಂಬದಾಗಿ ಹೇಳಿರುವುದರ ತತ್ವವೇನೆಂದರೆ ಶ್ರೀರಾಮುಚಂದ್ರಮೂರ್ತಿಯು ಎಲ್ಲಿ ವಾಸವಾಗಿರುವನೋ ಅದೇ ವಾಸಸ್ಥಳವಾಗಿ ಭಾವಿಸಬೇಕೆಂಬ ತಾತ್ಪರ್ಯವಾಗಿರುವುದು. ಅಂದರೆ ಬುದ್ಧಿತತ್ವವು ಮೋಕ್ಷಮಾರ್ಗದಲ್ಲಿ ಯಾವ ಯಾವ ಸೋಪಾನದ ಕಾರ್ಯಗಳಲ್ಲಿ ನಿರತವಾಗುವುದೋ ಮನಸ್ತತ್ವವೂ ಆಯಾಯಾ ಸೋಪಾನದ ಕಾರ್ಯಗಳೇ ತನಗೆ ವಾಸಸ್ಥಾನಗಳೆಂದು ತಿಳಿದುಕೊಳ್ಳಬೇಕೆಂಬ ತತ್ವವಾಗಿರುವುದು.

**ರಾ||** ಕೌಸಲ್ಯಾದೇವಿಯು ವನವಾಸಕ್ಕೆ ಹೊರಡುವ ಶ್ರೀರಾಮುಚಂದ್ರನಿಗೆ ಲೋಕದಲ್ಲಿರುವ ಸರ್ವಮಂಗಳಗಳೂ ಉಂಟಾಗಿ ವನವಾಸಪೂರ್ತಿಮಾಡಿಕೊಂಡು ಬರುವಂತೆ ಆಶೀರ್ವದಿಸಿದಳು.

**ತತ್ವ||** ಹದಿನಾಲ್ಕುವರ್ಷ ವನವಾಸ ಪೂರ್ಣಮಾಡಿ ಹಿಂತಿರುಗಿ ಬರುವೆನೆಂಬ ದೃಢ ಪ್ರತಿಜ್ಞೆಯನ್ನು ಶ್ರೀರಾಮನು ಧರಿಸಿದಂತೆ ಯಾರು ದೃಢಪ್ರತಿಜ್ಞೆಯಿಂದ ತಮ್ಮಲ್ಲಿರುವ ಅವಿದ್ಯೆಯನ್ನು ನಿಗ್ರಹಿಸಿ, ದೇಹವಾಸದ ಬಂಧನವನ್ನು ಪರಿಹರಿಸಿಕೊಳ್ಳುವ ಕಾರ್ಯದಲ್ಲಿ ನಿರತರಾಗುವರೋ ಅವರಿಗೆ ಸರ್ವಮಂಗಳಗಳುಂಟಾಗುವುದು ಮಾತೆಯ ಆಶೀರ್ವಾದ ದೋಷಾದಿಯಲ್ಲಿ ನೆರವೇರುವುದೆಂಬ ತತ್ವ. ಅಲ್ಲದೆ ಪ್ರತಿಬಿಂಬಚೈತನ್ಯನೆಂದರೆ ಜೀವ ಚೈತನ್ಯವು ಸರ್ವಮಂಗಳಸ್ವರೂಪವೆಂಬ ತತ್ವವೂ ಆಗಿರುವುದು.

ಸೀತಾದೇವಿಯು ಶ್ರೀರಾಮನೊಡನೆ ವನವಾಸಕ್ಕೆ ಹೊರಟ ತತ್ವವೇನೆಂದರೆ—ಸೀತಾ ದೇವಿಯು ಶುದ್ಧಸ್ಫಟಿಕದಂತೆ ನಿರ್ಮಲವಾಗಿಯೂ, ಆನಂದಮಯವಾಗಿಯೂ, ಆತ್ಮಾನು ಭವವು ದೊರೆಯುವಂತೆ ಇರುವಂತಹ ಸಾಕ್ಷಿಮಾತ್ರವಾದ ನಾನು ಎಂಬ ಅಖಂಡಜ್ಞಾನ (ಸರ್ವಜ್ಞತ್ವ)ದ ಸ್ವರೂಪವಾಗಿಯೂ ಇರುವ ಶುದ್ಧಸತ್ವಗುಣ ಅಥವಾ ಶುದ್ಧಸತ್ವಪ್ರಧಾನ ಮಾಯಾತತ್ವದವಳಷ್ಟೆ ! ಇಂತಹ ಶುದ್ಧಸತ್ವಗುಣವು ಬುದ್ಧಿಯಲ್ಲಿರುವ ಪ್ರತಿಬಿಂಬ ಚೈತನ್ಯಕ್ಕೆ ಉಪಾಧಿಯಾಗಿರುವುದು. ಶ್ರೀರಾಮಚಂದ್ರನು ಸೀತಾದೇವಿಯೊಡಗೂಡಿ ಅಯೋಧ್ಯೆಯಲ್ಲಿದ್ದನೆಂದರೆ—ಪ್ರತಿಬಿಂಬಚೈತನ್ಯವು ಇಂತಹ ಅಖಂಡಾಕಾರವೃತ್ತಿಜ್ಞಾನದ ಉಪಾಧಿಯೊಡನೆ ಇರುವುದರಿಂದ ಈಶ್ವರಸ್ಥಾನವೆನಿಸಿಕೊಳ್ಳುವುದು.

ಯಾವಾಗ ಬುದ್ಧಿಗೆ ವೃತ್ತಿಪ್ರಾರಂಭವಾಗಿ ಪ್ರತಿಬಿಂಬಚೈತನ್ಯವು ವೃತ್ತಿಪ್ರಕಾಶಕವೆನಿಸಿ ದೇಹದೊಳಗೆ ಪ್ರವೇಶಿಸುವುದೋ, ಆಗ ಶುದ್ಧಸತ್ವಗುಣವೂ ದೇಹವ್ಯಾಪಾರಕ್ಕೆ ಪ್ರಕಾಶ ಕವಾಗಿ ಪ್ರತಿಬಿಂಬಚೈತನ್ಯದೊಡನೆ ಹೊರಡುವಿಕೆಯೇ ಸೀತಾದೇವಿಯು ಶ್ರೀರಾಮಚಂದ್ರ ನೊಡನೆ ಹೊರಟ ತತ್ವವಾಗಿರುವುದು.

**ರಾ||** ಶ್ರೀರಾಮಚಂದ್ರನು ಸೀತಾ ಲಕ್ಷ್ಮಣರೊಡನೆ ಅಯೋಧ್ಯೆಯನ್ನು ಬಿಟ್ಟು ವನವಾಸಕ್ಕೆ ಹೊರಟನು.

**ತತ್ವ||** ಮಾತೃಗರ್ಭದಲ್ಲಿ ಬುದ್ಧಿಮನಸ್ಸಿನಲ್ಲಿರುವ ಪ್ರತಿಬಿಂಬಚೈತನ್ಯವು ಏಳನೇ ತಿಂಗಳಿಗೆ ಸ್ಥೂಲದೇಹದ ಸೃಷ್ಟಿಯನ್ನು ಪೂರ್ಣಮಾಡಿಕೊಂಡು ತನ್ನ ಸ್ವಸ್ಥಾನದಲ್ಲಿ ನೆಲೆ ಯಾಗಿ ನಿಲ್ಲಲು ಸಾಧ್ಯವಿಲ್ಲದೆ ವೃತ್ತಿತಾದಾತ್ಮ್ಯದಿಂದ ದೇಹವ್ಯಾಪಾರಕ್ಕೆ ಹೊರಡುವ ತತ್ವವೇ ಶ್ರೀರಾಮಚಂದ್ರನು ಸೀತಾಲಕ್ಷ್ಮಣರೊಡನೆ ವನವಾಸಕ್ಕೆ ತೆರಳಿದ ತತ್ವವಾಗಿರು ವುದು. ಅಂದರೆ ಬುದ್ಧಿಮನಸ್ಸಿಗೆ ವೃತ್ತಿಪ್ರಾರಂಭವಾಗಿ ಪಂಚಕೋಶಗಳಲ್ಲಿ ಪ್ರಸರಣೆ ಯಾಗಲು ಪ್ರಾರಂಭವೆಂಬ ತತ್ವವಾಗಿರುವುದು.

ಶಿಶುವು ಮಾತೃಗರ್ಭದಲ್ಲಿದ್ದಾಗ ಏಳನೆಯ ತಿಂಗಳಲ್ಲಿ ಬುದ್ಧಿಮನಸ್ಸುಗಳಿಗೆ ವೃತ್ತಿ ಪ್ರಾರಂಭವಾಗಿ ಗರ್ಭದಿಂದ ಹೊರಕ್ಕೆ ಜನನವಾಗುವುದರೊಳಗೆ, ಆನಂದಮಯ, ವಿಜ್ಞಾನ

ಮಯ, ಮನೋಮಯಕೋಶಗಳಲ್ಲಿ ಪ್ರಸರಣೆಯಾಗಿ ಆ ಕೋಶಗಳ ಕಾರ್ಯಗಳು ಸ್ಫುರಣೆಯಾಗುವುವು. ಅಂದರೆ ಶ್ರೀರಾಮಚಂದ್ರನು ಅಯೋಧ್ಯೆಯಿಂದ ಹೊರಟು ದಂಡಕಾರಣ್ಯ ಪ್ರವೇಶಮಾಡುವವರೆಗಿನ ಕಥೆಯ ತತ್ವಗಳು ಶಿಶುವು ಗರ್ಭದಲ್ಲಿರುವಾಗಲೇ ನಡೆಯುವುವು. ಶ್ರೀರಾಮಚಂದ್ರನು ದಂಡಕಾರಣ್ಯ ಪ್ರವೇಶಮಾಡುವ ತತ್ವವೇ ಶಿಶುವು ಮಾತೃಗರ್ಭದಿಂದ ಜನನವಾಗುವ ತತ್ವವಾಗಿರುತ್ತದೆ. ಜನನವಾದನಂತರವೇ ಜ್ಞಾನೇಂದ್ರಿಯಗಳೂ, ಪ್ರಾಣಮಯ ಮತ್ತು ಅನ್ನಮಯ ಕೋಶಗಳ ಕಾರ್ಯಗಳೂ ಸ್ಫುರಣೆಯಾಗಿ ಅನಂತರ ವಿಷಯ ವ್ಯಾಪಾರ ಪ್ರಾರಂಭವಾಗುವುದು. ಈ ವಿಚಾರಗಳು ಅರಣ್ಯಕಾಂಡದ ತತ್ವದಲ್ಲಿ ಬರುವುವು.

ಪ್ರತಿಬಿಂಬಚೈತನ್ಯವು ಪಂಚಕೋಶಗಳಲ್ಲಿ ಪ್ರಸರಣೆಯಾಗದಿದ್ದರೆ ಯಾವ ಕೋಶದ ಕಾರ್ಯಗಳೂ ನಡೆಯದೆ ಜಡವಾಗಿಯೇ ಇರುತ್ತವೆ. ಯಾವಾಗ ಪ್ರಸರಣೆಯಿಲ್ಲವೋ ಆಗ ಸ್ಥಿತಿಯೆಂದರೆ ವ್ಯಾಪಾರದ ಕಾರ್ಯ ನಡೆಯುವುದಿಲ್ಲವಾದುದರಿಂದ ದೇಹಸೃಷ್ಟಿಮಾಡಿಕೊಂಡು ತಟಸ್ಥವಾಗಿರಬೇಕೆಂಬ ತತ್ವದ ಸೂಚನೆಯೇ ದಶರಥನು ಶ್ರೀರಾಮಚಂದ್ರನಿಗೆ ಯೌವರಾಜ್ಯಾಭಿಷೇಕ ಮಾಡಬೇಕೆಂದು ಇದ್ದುದಾಗಿರುವುದು. ಆದರೆ ವ್ಯಾಪಾರಮಾಡಬೇಕಾಗಿರುವ ಸಂಕಲ್ಪವು ಸೃಷ್ಟಿಸಂಕಲ್ಪವನ್ನು ಅತಿಕ್ರಮಿಸಿತು. ಆದುದರಿಂದ ಪ್ರತಿಬಿಂಬಚೈತನ್ಯವು ಕೋಶಗಳ ಕಾರ್ಯವನ್ನು ಪ್ರಕಾಶಪಡಿಸುವುದರಿಂದ, ಅವಿದ್ಯೆಯ ಉಪಾಧಿಬಂದಂತಾಗಿ ಜೀವನೆಂದು ಕರೆಯಲ್ಪಡುವನು. ಶ್ರೀಮನ್ನಾರಾಯಣನು ಶ್ರೀ ರಾಮನೆನಿಸಿಕೊಂಡು ವನವಾಸಕ್ಕೆ ಹೊರಟಂತೆ ನಮ್ಮಲ್ಲಿರುವ ಪರಮಾತ್ಮನು ಪ್ರತಿಬಿಂಬಚೈತನ್ಯನೆನಿಸಿಕೊಂಡು ಕೋಶಗಳ ವ್ಯಾಪಾರವಾದ ಸಂಸಾರದಲ್ಲಿ ಬೆರೆಯುವನು. ಈ ತಾತ್ಪರ್ಯಕ್ಕೆ ಶ್ರೀವಿದ್ಯಾರಣ್ಯರವರು ಪಂಚದಶಿ ಚಿತ್ರದೀಪಿಕೆ ೨೩ನೆಯ ಶ್ಲೋಕದಲ್ಲಿ,

ಕೂಟಸ್ಥೇ ಕಲ್ಪಿತಾ ಬುದ್ಧಿಸ್ತತ್ರ ಚಿತ್ಪ್ರತಿಬಿಂಬಕಃ |
ಪ್ರಾಣಾನಾಂ ಧಾರಣಾಜ್ಜೀವಃ ಸಂಸಾರೇಣ ಸಯುಜ್ಯತೇ ||

ತಾ|| ಸರ್ವವ್ಯಾಪಿಯಾದ ಪರಮಾತ್ಮನಲ್ಲಿ ಬುದ್ಧಿಯು ಕಲ್ಪಿಸಲ್ಪಟ್ಟಿತು. ಆ ಬುದ್ಧಿಯಲ್ಲಿ ಪರಮಾತ್ಮನ ಪ್ರತಿಫಲನದಚೈತನ್ಯವೆಂದರೆ ಚಿದಾಭಾಸಚೈತನ್ಯವು ಪ್ರಾಣಗಳನ್ನು ಧರಿಸುವುದರಿಂದ ಜೀವನೆಂದು ಕರೆಯಲ್ಪಡುವುದು. ಈ ಪ್ರತಿಬಿಂಬಚೈತನ್ಯವೇ ಸಂಸಾರದೊಡನೆ ಬೆರೆತಿರುವುದೆಂದರೆ ಕೋಶಗಳ ವ್ಯಾಪಾರದಲ್ಲಿ ಬೆರೆಯುವುದು ಎಂಬದಾಗಿ ಹೇಳಿರುವರು.

ಜೀವ ಎಂಬ ಪದಕ್ಕೆ "ಜೀವಯತಿ ದೇವಾನ್ ಇತಿ ಜೀವಃ ಜೀವ ಪ್ರಾಣಧಾರಣೆ" ಅಂದರೆ ದೇವತೆಗಳನ್ನು ಬದುಕಿಸಿರುವವನು ಎಂದರ್ಥ. ದೇವತೆಗಳೇ ನಮ್ಮಲ್ಲಿನ ಇಂದ್ರಿಯ ಮತ್ತು ಪಂಚಪ್ರಾಣಗಳು. ಆದುದರಿಂದ ದೇವತೆಗಳನ್ನು ಬದುಕಿಸಿರುವವ

ನೆಂದರೆ—ದೇಹೇಂದ್ರಿಯಗಳ ವ್ಯಾಪಾರಗಳನ್ನು ನಡೆಯಿಸುವ ಚೈತನ್ಯವಾದುದರಿಂದ ಪ್ರತಿಬಿಂಬಚೈತನ್ಯವೇ ಜೀವನೆಂದು ಕರೆಯಲ್ಪಡುವುದು.

ಆದುದರಿಂದ ಪ್ರಕೃತದಲ್ಲಿ ಪ್ರಾರಂಭವಾದ ಬುದ್ಧಿಮನಸ್ಸಿನ ವೃತ್ತಿಗಳಿಗೆ ಮುಂದೆ ಉಂಟಾಗುವ ದೇಹವ್ಯಾಪಾರಸ್ವರೂಪವಾದ ಸಂಸಾರದ ಸ್ಥಿತಿಯನ್ನು ತಿಳಿದುಕೊಳ್ಳಲು ಶ್ರೀರಾಮಚಂದ್ರನು ಅಯೋಧ್ಯೆಯಿಂದ ಹೊರಟ ಮುಂದಿನ ಚರಿತ್ರೆಯನ್ನು ಪ್ರಾರಂಭಿಸೋಣ.

## ಆನಂದಮಯ ಕೋಶ

## ೩ನೆಯ ಪ್ರಕರಣ.

| | |
|---|---|
| **ಶ್ರೀರಾಮನು ಸೀತಾಲಕ್ಷ್ಮಣರೊಡನೆ ಅಯೋಧ್ಯೆಯಿಂದ ಹೊರಟು ತಮಸಾನದೀ ತೀರವನ್ನು ಸೇರಿದುದು.** | **ಈಶ್ವರತತ್ತ್ವಕ್ಕೂ ಜೀವತತ್ತ್ವಕ್ಕೂ (ಸಮಷ್ಟಿ-ವ್ಯಷ್ಟಿ) ಮಧ್ಯೆ ಇರುವ ಅಖಂಡಾವರಣ ಅಥವಾ ಮೂಲಾಜ್ಞಾನದ ವಿಚಾರ.** |

**ರಾ||** ಶ್ರೀರಾಮನು ಸೀತಾಲಕ್ಷ್ಮಣರೊಡನೆ ವನವಾಸಕ್ಕೆ ಹೊರಡಲು ಅಯೋಧ್ಯೆಯನ್ನು ಬಿಟ್ಟು ತಮಸಾನದೀದಡವನ್ನು ಸೇರಿ ತೀರುಹಾಸಿಗೆಯಲ್ಲಿ ಸೀತೆಯೊಡನೆ ರಾತ್ರಿ ಅಲ್ಲಿ ಮಲಗಿದನು. ತನ್ನ ಜೊತೆಯಲ್ಲಿ ಬಂದ ಪುರಜನರಿಗೆ ಕಾಣದಂತೆ ಮುಂದಕ್ಕೆ ಪ್ರಯಾಣಮಾಡಿದನು.

**ತತ್ವ||** ಅಯೋಧ್ಯೆಯು ಕೋಸಲದೇಶಕ್ಕೆ ಮುಖ್ಯಪಟ್ಟಣ. ಕೋಸಲದೇಶವೆಂದರೆ ಜ್ಞಾನಸ್ವರೂಪದ ದೇಶವೆಂದು ಅರ್ಥವಾಗುತ್ತದೆ. ಅಂದರೆ ಪ್ರಭೆಯಸ್ವರೂಪವಾದ್ದ ಪ್ರದೇಶವೆಂಬ ತಾತ್ಪರ್ಯ. ಅಯೋಧ್ಯಾಪಟ್ಟಣವೆಂದರೆ "ಯೋದ್ಧುಂ ಅಶಕ್ಯಾ" ಸುಲಭವಾಗಿ ಸಾಧ್ಯವಾಗದ ಸ್ಥಳವಾದುದರಿಂದ ಇದಕ್ಕೆ ಅಯೋಧ್ಯೆಯೆಂದು ಹೆಸರು.

ಈರೀತಿ ಜ್ಞಾನಸ್ವರೂಪವಾಗಿಯೂ, ಹೊಂದಲು ಸುಲಭವಾಗಿ ಸಾಧ್ಯವಲ್ಲದಾಗಿಯೂ, ಅಂತಃಕರಣವಿರುವ ಪ್ರದೇಶವಾಗಿಯೂ, ಈಶ್ವರಸೋಪಾನವಾಗಿಯೂ ಇರುವ ಸ್ಥಳವು ದಹರಾಕಾಶ ಅಥವಾ ಹೃದಯಾಕಾಶವೆನಿಸಿಕೊಂಡು ನಮ್ಮ ಭ್ರೂಮಧ್ಯದ ಮೇಲೆ ಶಿರಸ್ಸಿನ ಪ್ರದೇಶದಲ್ಲಿರುವುದು. ಇಂತಹ ಸ್ಥಳದಿಂದ ಪ್ರತಿಬಿಂಬಚೈತನ್ಯವು ಬುದ್ಧಿವೃತ್ತಿಯನ್ನು ಪ್ರಕಾಶಪಡಿಸಿಕೊಂಡು ಕೋಶಗಳಲ್ಲಿ ಪ್ರಸರಿಸಲು ಪ್ರಾರಂಭವಾಗುವ ತತ್ವವೇ ಶ್ರೀರಾಮಚಂದ್ರನು ಅಯೋಧ್ಯೆಯಿಂದ ವನವಾಸಕ್ಕೆ ಹೊರಟುದಾಗಿರುವುದು.

ಈರೀತಿಯಾಗಿ ಹೊರಟ ಬುದ್ಧಿಮನಸ್ಸಿನ ವೃತ್ತಿಗಳಿಗೆ ನಮ್ಮ ದೇಹದಲ್ಲಿ ಮೊದಲು ದೊರಕುವುದೇ ತಮಸಾನದಿಯ ತತ್ವ. ತಮಸಾನದಿಯ ತತ್ವವೇ ತಮಸ್ಸಿನ ಮೂಲಾ ಜ್ಞಾನಾವರಣದ ತತ್ವವಾಗಿರುವುದು. ಅಯೋಧ್ಯೆಯಿಂದ ಹೊರಟ ಶ್ರೀರಾಮನು ಪ್ರಥ ಮದಲ್ಲಿ ತಮಸಾತೀರಕ್ಕೆ ಬಂದನೆಂದರೆ ಬುದ್ಧಿಮನಸ್ಸುಗಳಿಗೆ ಪ್ರಾರಂಭವಾದ ವೃತ್ತಿಯು ಪ್ರಥಮದಲ್ಲಿ ತಮಸ್ಸಿನ ಆವರಣವನ್ನು ಸಂಧಿಸುವುದೆಂಬ ತಾತ್ಪರ್ಯ.

ಶ್ರೀರಾಮಚಂದ್ರನು ತಮಸಾನದೀತೀರದಲ್ಲಿ ಸೀತಾದೇವಿಯೊಡನೆ ಶಳಿರುಹಾಸಿಗೆ ಯಲ್ಲಿ ಮಲಗಿದ ತತ್ವವೇನೆಂದರೆ--ತಮಸಾನದಿಯ ತತ್ವವೇ ತಮಸ್ಸಿನ ಆವರಣವೆಂದು ತಿಳಿಸಿತಷ್ಟೆ! ಈ ಆವರಣವೇ ನಿದ್ರಾಸ್ವರೂಪವಾದುದು. ಈ ತಮಸ್ಸಿನ ಆವರಣದಲ್ಲಿ ಮಲಗುವುದೆಂದರೆ ಅಖಂಡವಾದ ನಾನು ಎಂಬ ವೃತ್ತಿಜ್ಞಾನವು ತಮಸ್ಸಿನಿಂದ ಆಚ್ಛಾದಿಸ ಲ್ಪಟ್ಟು ಪ್ರತಿಬಿಂಬಚೈತನ್ಯವು ಇದನ್ನು ಪ್ರಕಾಶಪಡಿಸಿಕೊಂಡಿರುವುದೇ ಶ್ರೀರಾಮಚಂದ್ರನು ಸೀತಾದೇವಿಯೊಡನೆ ತಮಸಾನದೀತೀರದಲ್ಲಿ ಮಲಗಿದ್ದ ತತ್ವವಾಗಿರುವುದು. ಹೀಗೆ ತಮೋ ಗುಣದ ಆವರಣದಲ್ಲಿ ಲೀನವಾದ ಬುದ್ಧಿವೃತ್ತಿಯನ್ನು ಪ್ರತಿಬಿಂಬಚೈತನ್ಯನು ಪ್ರಕಾಶ ಪಡಿಸುವುದರಿಂದ ತಮೋಗುಣದ ಉಪಾಧಿಯನ್ನು ಹೊಂದಿದಂತಾಗಿ ಪ್ರಾಜ್ಞನೆಂದು ಕರೆ ಯಲ್ಪಡುವನು. ಹೀಗೆ ಮೂಲಾಜ್ಞಾನಾವರಣವಾದ ನಿದ್ರಾವಸ್ಥೆಯು ಜೀವತ್ವಕ್ಕೆ ಪ್ರಥಮೋಪಾಧಿಯಾಗಿರುವುದರಿಂದ, ಕಾರಣದೇಹವೆನಿಸಿಕೊಳ್ಳುವುದು. ಇದೇ ಸಂಸಾ ರಕ್ಕೆ ಮೂಲಕಾರಣ. ಈ ತಾತ್ಪರ್ಯಕ್ಕೆ ಸರಸ್ವತೀರಹಸ್ಯೋಪನಿಷತ್ತಿನಲ್ಲಿ,

ಆವೃತೋಸ್ತ್ಯಪರಾಶಕ್ತಿಃ ಸಾ ಸಂಸಾರಸ್ಯ ಕಾರಣಂ ।

ಎಂಬದಾಗಿ ಹೇಳಿರುತ್ತದೆ. ಅಲ್ಲದೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾ ಮಣಿ ೧೪೧ನೆಯ ಶ್ಲೋಕದಲ್ಲಿ,

ಅಖಂಡ ನಿತ್ಯಾದ್ವಯ ಬೋಧಶಕ್ತ್ಯಾ
ಸ್ಫುರನ್ತಮಾತ್ಮಾನ ಮನನ್ತ ವೈಭವಂ ।
ಸಮಾವೃಣೋತ್ಯಾವೃತಿಶಕ್ತಿ ರೇಷಾ
ತಮೋಮಯೀ ರಾಹುರಿವಾರ್ಕಬಿಂಬಂ ॥

ತಾ॥ ಅಜ್ಞಾನಾಂಧಕಾರಸ್ವರೂಪವಾಗಿರುವ ಮೂಲಪ್ರಕೃತಿಯ ತಮೋಆವರಣ ಶಕ್ತಿಯೆಂಬುದು ಪರಿಪೂರ್ಣನಾದ, ನಾಶರಹಿತನಾದ, ಅದ್ವಿತೀಯನಾದ ಆತ್ಮನನ್ನು, ಅಂಧ ಕಾರಸ್ವರೂಪವಾದ ರಾಹುಗ್ರಹವು ಸೂರ್ಯಮಂಡಲವನ್ನು ಆವರಿಸುವ ಹಾಗೆ, ಆವರಿಸುತ್ತದೆ.

ಕಾರಣದೇಹಸ್ವರೂಪವಾಗಿರುವ ಈ ಆವರಣವು ಆತ್ಮನಿಗೆ ಮರೆಯಾಗಲು ಪುರುಷನು, ಅನಾತ್ಮನಾಗಿ ಜಡವಾಗಿರುವ ದೇಹವೇ ನಾನೆಂದುಕೊಂಡು ಮುಂದೆ ವ್ಯವಹಾರ ಮಾಡಲು ಹೊರಡುವನು ಎಂಬದಾಗಿ ಹೇಳಿರುವರು.

ಶ್ರೀರಾಮಚಂದ್ರನು ತನ ಜೊತೆಯಲ್ಲಿ ಬಂದಿದ್ದ ಪುರಜನಗಳಿಗೆ ಕಾಣದಂತೆ ಮುಂದಕ್ಕೆ ಪ್ರಯಾಣಮಾಡಿದ ತತ್ವವೇನೆಂದರೆ—ಶ್ರೀರಾಮಚಂದ್ರನು ಸೀತೆಯೊಡನೆ ಅಯೋಧ್ಯೆಯಲ್ಲಿದ್ದನೆಂದರೆ ಸಮಷ್ಟಿಜ್ಞಾನ ಅಥವಾ ಅಖಂಡಜ್ಞಾನವಾದ ಈಶ್ವರತ್ವ ದಲ್ಲಿದ್ದನೆಂಬ ತತ್ವ. ಅಂದರೆ ನಮ್ಮಲ್ಲಿರುವ ಈಶ್ವರಸೋಪಾನವು ದೇಹಜ್ಞಾನವಿರದೆ ಸರ್ವ ಜೀವರೂ ತಾನೆಂಬ ಅಖಂಡಾಕಾರವೃತ್ತಿಜ್ಞಾನ ಮತ್ತು ನಿಜಾನಂದಸ್ವರೂಪವಾಗಿರುವುದು. ಬುದ್ಧಿಗೆ ವೃತ್ತಿಪ್ರಸರಣೆಪ್ರಾರಂಭವಾಗಿ ಅಜ್ಞಾನಾವರಣದ ಉಪಾಧಿ ಬಂದುದರಿಂದ ಸರ್ವ ಜ್ಞತ್ವ ಅಥವಾ ಸರ್ವಜೀವೈಕ್ಯತ್ವಜ್ಞಾನವನ್ನು ಮರೆಮಾಡುವುದೇ ಶ್ರೀರಾಮನು ಪುರಜನ ರಿಗೆ ಕಾಣಿಸಿಕೊಳ್ಳದಂತಾದುದು. ಹೀಗೆ ವ್ಯಷ್ಟಿಜೀವರುಗಳಾದ ನಮಗೆ ಸರ್ವಜೀವರ ಐಕ್ಯತ್ವಜ್ಞಾನವು ಇಲ್ಲದಿರುವುದಕ್ಕೆ ತಮಸ್ಸಿನ ಆವರಣವೇ ಮೂಲಕಾರಣ.

ನಾವುಗಳು ನೋಡುತ್ತಿರುವಹಾಗೆ ಲಕ್ಷೋಪಲಕ್ಷ ಜೀವರಾಶಿಗಳಿವೆ. ಈ ಜೀವರಾಶಿ ಗಳಿಗೆ ತಾವು ತಾವು ಬೇರೆ ಬೇರೆಯೆಂಬ ಜ್ಞಾನವಿರುವುದೇಹೊರತು ಏಕತ್ವಜ್ಞಾನವಿರುವು ದಿಲ್ಲ. ನನ್ನ ಬುದ್ಧಿ ನನ್ನ ದೇಹವೆಂಬದಾಗಿ ಅಂದುಕೊಳ್ಳುವೆವು. ಆದುದರಿಂದ ದೇಹ ಕ್ಕಿಂತ ಪ್ರತ್ಯೇಕವಾದ "ನಾನು" ಎಂಬುದು ಇರುವುದು. ಈ ನಾನು ಎಂಬುದು ವೃತ್ತಿ ಜ್ಞಾನಸ್ವರೂಪವಾದುದು. ಈ ನಾನು ಎಂಬುದನ್ನು ಸರ್ವತ್ರವ್ಯಾಪಿಸುವಂತೆ ಮಾಡಿರುವ ಸ್ಥಿತಿಯೇ ಶ್ರೀರಾಮಚಂದ್ರನು ಅಯೋಧ್ಯೆಯಲ್ಲಿದ್ದ ತತ್ವವಾಗಿರುವುದು. ಸರ್ವತ್ರ ವ್ಯಾಪಕವಾಗದಂತೆ ಮರೆಮಾಡಿರುವುದೇ ಈ ಮೂಲಾಜ್ಞಾನಾವರಣವು. ಈ ಆವರಣ ದಿಂದ ಪ್ರತಿಯೊಂದು ಪ್ರಾಣಿಗೂ ತಾನು ತಾನು ಬೇರೆ ಬೇರೆಯೆಂಬ ಜ್ಞಾನವಿರುವುದು. ಅಮೋಘವಾದ ಬುದ್ಧಿಶಕ್ತಿಯುಳ್ಳ ಮನುಷ್ಯನಿಗೇ ಸರ್ವವೂ ನಾನೆಂಬ ಜ್ಞಾನವಿಲ್ಲದಿರುವಾಗ ಇನ್ನುಳಿದ ಪ್ರಾಣಿಗಳ ವಿಚಾರವನ್ನು ಹೇಳಬೇಕಾದುದೇನು? ಈ ಜ್ಞಾನವಿಲ್ಲದಿರುವುದ ರಿಂದಲೇ ವ್ಯಷ್ಟಿ ಸಮಷ್ಟಿಯೆಂಬ ಭೇದವುಂಟಾಗಿದೆಯೆಂದು ಶ್ರೀವಿದ್ಯಾರಣ್ಯರವರು ಪ್ರತ್ಯಕ್ತತ್ವವಿವೇಕಪ್ರಕರಣ ೨೫ನೆಯ ಶ್ಲೋಕದಲ್ಲಿ,

> ಸಮಷ್ಟಿರೀಶ ಸ್ಸರ್ವೇಷಾಂ ಸ್ವಾತ್ಮ ತಾದಾತ್ಮ್ಯವೇದನಾತ್ |
> ತದಭಾವಾ ತ್ತತೋನ್ಯೈತು ಕಥ್ಯಂ ತೇವ್ಯಷ್ಟಿಸಂಜ್ಞಯಾ ||

ತಾ|| ಸ್ವಸ್ವರೂಪಭೂತವಾದ ಸರ್ವಜೀವರ ಏಕತ್ವಜ್ಞಾನವು ಈಶ್ವರನಿಗಿರುವುದ ರಿಂದ ಸಮಷ್ಟಿರೂಪನೆನಿಸುವನು. ಅಂತಹ ಸರ್ವಜೀವೈಕ್ಯತ್ವಜ್ಞಾನವು ಜೀವರಿಗಿಲ್ಲ ವಾದುದರಿಂದ ಜೀವರು ವ್ಯಷ್ಟಿರೂಪರೆನಿಸಿಕೊಳ್ಳುವರು. ಎಂದು ಹೇಳಿರುವರು.

ಆದುದರಿಂದ ಈ ಮೂಲಾಜ್ಞಾನಾವರಣದಿಂದಲೇ ಈಶ್ವರತ್ವದಲ್ಲಿರುವ ಸರ್ವಜ್ಞತ್ವಾದಿ ಗುಣಗಳು ಜೀವನ ವ್ಯಾಪಾರದಲ್ಲಿ ಕಿಂಚಿಜ್ಞತ್ವಾದಿ ಗುಣಗಳಾಗಿ ಪರಿಣಮಿಸುತ್ತವೆ. ಮೂಲಾಜ್ಞಾನಾವರಣದಿಂದ ಅಖಂಡಜ್ಞಾನವು ಮರೆಯಾಯಿತಷ್ಟೆ! ಮೇಲಿನ ಶ್ಲೋಕದಲ್ಲಿ ಶ್ರೀಶಂಕರಭಗವತ್ಪಾದರವರು ಹೇಳಿರುವಂತೆ ಮುಂದಕ್ಕೆ ದೇಹವೇ ನಾನೆಂಬ ಜ್ಞಾನವುಂಟಾಗುವುದು. ಈ ದೇಹವೇ ನಾನೆಂಬ ಜ್ಞಾನವು, ಚಿತ್ರಕೂಟಪರ್ವತದ ತತ್ವದಲ್ಲಿ ಬರುವುದು. ಈ ತಮಸ್ಸಿನ ಆವರಣವೇ ನಿದ್ರಾಸ್ವರೂಪವಾಗಿಯೂ, ಮೋಹಸ್ವರೂಪವಾಗಿಯೂ, ಅಂಧಕಾರಸ್ವರೂಪವಾಗಿಯೂ, ಇರುವುದರಿಂದ ಜನನವಾದ ಶಿಶುಗಳು ಪ್ರಥಮದಲ್ಲಿ ತಮಸ್ಸಿನ ಗಾಢಾಂಧಕಾರದಲ್ಲಿ ಮಗ್ನವಾಗಿರುತ್ತವೆ. ಅಖಂಡಜ್ಞಾನಸೋಪಾನವನ್ನು ಈ ತಮೋಆವರಣವು ಮರೆಮಾಡಿದ್ದರಿಂದ ಕ್ರಮೇಣ ದೇಹವೇ ತಾನೆಂಬ ಬುದ್ಧಿಯುದಯಿಸಿ ಅನಂತರ ದೇಹವ್ಯಾಪಾರಕ್ಕೆ ತೊಡಗುತ್ತವೆ. ಈ ಕಾರಣಶರೀರವು ನಮ್ಮಲ್ಲಿರುವ ಆನಂದಮಯಕೋಶಕ್ಕೆ ಸೇರಿಕೊಂಡಿರುವುದರಿಂದ ಇದರ ವಿಚಾರವನ್ನು ಮುಂದಿನ ಪ್ರಕರಣದಲ್ಲಿ ವಿವರಿಸಿದೆ. ಅಲ್ಲದೆ ನಮ್ಮ ದೇಹದಲ್ಲಿ ಈ ಮೂಲಾಜ್ಞಾನಾವರಣವಿರುವ ರೀತಿಯನ್ನು ಮುಂದಿನ ಕಥಾಸಂದರ್ಭಗಳಲ್ಲಿ ಮನುಷ್ಯದೇಹದ ಚಿತ್ರ ಮತ್ತು ದೇವಸ್ಥಾನದ ಚಿತ್ರಗಳೊಡನೆ ವಿವರವಾಗಿ ಬರೆದಿರುತ್ತದೆ. ಈ ಪ್ರಕರಣದಲ್ಲಿ ಬರೆದಿರುವ ತತ್ವವನ್ನು ಜ್ಞಾಪಕಕ್ಕೆ ತಂದುಕೊಂಡು ಸಮನ್ವಯ ಮಾಡಿಕೊಂಡಲ್ಲಿ ಮೂಲಾಜ್ಞಾನದ ವಿಚಾರವು ಮನದಟ್ಟಾಗುವುದು.

## ೪ನೆಯ ಪ್ರಕರಣ.

| ಶ್ರೀರಾಮನು ಸೀತಾಲಕ್ಷ್ಮಣರೊಡನೆ ತಮಸಾನದಿಯನ್ನು ದಾಟಿ ಗುಹನ ಪ್ರದೇಶವನ್ನು ಸೇರಿದುದು. | ಬುದ್ಧಿಮನಸ್ಸುಗಳ ವೃತ್ತಿಗಳು ಮೂಲಾಜ್ಞಾನಾವರಣದೊಳಗೆ ಪ್ರವೇಶಿಸಿದನಂತರ ಆನಂದಮಯ ಕೋಶಕ್ಕೆ ಇಳಿಯುವ ವಿಚಾರ. |
|---|---|

**ರಾ||** ಶ್ರೀರಾಮನು ಸೀತಾಲಕ್ಷ್ಮಣರೊಡನೆ ತಮಸಾನದಿಯಿಂದ ಮುಂದೆ ಸಮಸ್ತ ಬೇಡರಿಗೂ ಒಡೆಯನಾದ ಮತ್ತು ಶ್ರೀರಾಮನ ಪ್ರಾಣಸಖನಾದ ಗುಹನ ರಾಜಧಾನಿಯಾದ ಶೃಂಗಿಬೇರಪುರಕ್ಕೆ ಹೋಗಬೇಕೆಂದೆಣಿಸಿ ಗಂಗಾತೀರದಲ್ಲಿಯೇ ನಿಂತುಕೊಂಡನು. ಗುಹನೇ ಗಂಗಾತೀರಕ್ಕೆಬಂದು ಶ್ರೀರಾಮನಿಗೆ ಸತ್ಕಾರಮಾಡಿದನು. ಅನಂತರ ಶ್ರೀರಾಮನು ಗುಹನ ಸಹಾಯದಿಂದ ಗಂಗಾನದಿಯನ್ನು ದಾಟಿ ಮುಂದಿನ ವನಕ್ಕೆ ಹೊರಟನು.

**ತತ್ವ||** ಸೀತಾರಾಮಾದಿಗಳು ತಮಸಾನದಿಯನ್ನು ದಾಟಿದರೆಂದರೆ ಮೂಲಾಜ್ಞಾನಸ್ವರೂಪವಾದ ಕಾರಣದೇಹದ ಉಪಾಧಿಯನ್ನು ಬುದ್ಧಿಮನಸ್ಸಿನ ವೃತ್ತಿಗಳು ಪಡೆದುವೆಂದು

ಹಿಂದಿನ ಪ್ರಕರಣದಲ್ಲಿ ತಿಳಿಸಿತಷ್ಟೆ! ಶ್ರೀರಾಮಾದಿಗಳು ತಮಸಾನದಿಯಿಂದ ಗುಹನ ಪ್ರದೇಶವನ್ನು ಸೇರಿದರೆಂದರೆ-ಬುದ್ಧಿಮನಸ್ಸುಗಳಿಗೆ ವೃತ್ತಿಪ್ರಾರಂಭವಾಗಿ ಮೂಲಾಜ್ಞಾನಾವರಣದ ಉಪಾಧಿಯನ್ನು ಪಡೆದ ನಂತರ, ಆನಂದಮಯಕೋಶಕ್ಕೆ ಪ್ರಸರಿಸಿಕೊಂಡು ಬಂದುವೆಂಬ ತತ್ವವಾಗಿರುವುದು.

ಗುಹನ ತತ್ವವೇನೆಂದರೆ—ಸಾಧಾರಣವಾಗಿ ಆವರಣಗಳಿಂದ ಆಚ್ಛಾದಿತವಾಗಿ ಒಳಗಡೆ ಇರುವ ಸ್ಥಳಕ್ಕೆ ಗುಹೆಯೆಂದು ಹೆಸರು. ಅಂದರೆ, ಪ್ರವೇಶಿಸಲು ಕಷ್ಟವಾದ ಆವರಣಗಳುಳ್ಳ ಪ್ರದೇಶವೆಂಬ ತಾತ್ಪರ್ಯ. ಪ್ರಬಲವಾದ ಆವರಣಗಳಿರುವುದರಿಂದ ಗುಹೆಯೆನಿಸಿಕೊಳ್ಳುತ್ತದೆ. ಆವರಣವೆಂದರೂ ಕೋಶವೆಂದರೂ ಒಂದೇ. ಕೋಶವೆಂದರೆ ಮುಸುಕಿನ ಚೀಲ ಅಥವಾ ಪೊರೆ ಎಂದರ್ಥ. ಇಂತಹ ಆವರಣ ಅಥವಾ ಕೋಶಗಳಿಲ್ಲದರ ಅಂತರಾಳದಲ್ಲಿ ಯಾವ ಉಪಾಧಿಯೂ ಇಲ್ಲದ ಆತ್ಮಸ್ಥಾನವಿದೆ. ಇದನ್ನೇ ನಾರಾಯಣೋಪನಿಷತ್ತಿನಲ್ಲಿ,

"ಅಣೋರಣೀಯಾ ನ್ಮಹತೋಮಹೀಯಾ ನಾತ್ಮಾ
ಗುಹಾಯಾಂ ನಿಹಿತೋಽಸ್ಯಜನ್ತೋಃ"

ಎಂಬದಾಗಿ ಹೇಳಿರುವುದು. ಅಲ್ಲದೆ ಗುಹೆಯು ಆವರಣ ಅಥವಾ ಕೋಶಗಳನ್ನೆ ಗುಹಾ ಶಬ್ದದಿಂದ ಶ್ರುತಿಯು ಹೇಳುವುದೆಂದು ಶ್ರೀವಿದ್ಯಾರಣ್ಯರವರು ಪಂಚದಶಿ ಪಂಚಕೋಶವಿವೇಕ ಪ್ರಕರಣ ೨ನೇ ಶ್ಲೋಕದಲ್ಲಿ,

ದೇಹಾದಭ್ಯಂತರಃ ಪ್ರಾಣಃ ಪ್ರಾಣಾದಭ್ಯಂತರಂ ಮನಃ ।
ತತಃಕರ್ತಾ ತತೋಭೋಕ್ತಾ ಗುಹಾಸೇಯಂ ಪರಂಪರಾ ॥

ತಾ|| ನಮ್ಮ ಕಣ್ಣಿಗೆ ಕಾಣುವ ಸ್ಥೂಲದೇಹವು ಅನ್ನಮಯಕೋಶವೆನಿಸುವುದು. ಈ ಅನ್ನಮಯಕೋಶಕ್ಕಿಂತಲೂ ಒಳಗೆ ಪ್ರಾಣಮಯಕೋಶವಿರುವುದು. ಆ ಪ್ರಾಣಮಯ ಕೋಶಕ್ಕಿಂತಲೂ ಒಳಗೆ ಮನೋಮಯಕೋಶವಿರುವುದು. ಈ ಮನೋಮಯ ಕೋಶಕ್ಕಿಂತಲೂ ಒಳಗೆ ವಿಜ್ಞಾನಮಯಕೋಶವಿರುವುದು. ಈ ವಿಜ್ಞಾನಮಯಕೋಶಕ್ಕಿಂತಲೂ ಒಳಗೆ ಆನಂದಮಯಕೋಶವಿರುವುದು. ಹೀಗೆ ಒಂದರೊಳಗೆ ಮತ್ತೊಂದು ಪರಂಪರಾಕಾರವಾಗಿ ಸೇರಿಕೊಂಡಿರತಕ್ಕ ಪಂಚಕೋಶಸ್ವರೂಪವೇ ಗುಹಾ ಶಬ್ದದಿಂದ ಹೇಳಲ್ಪಡುವುದು ಎಂಬದಾಗಿ ಹೇಳಿರುತ್ತಾರೆ.

ಈ ಕೋಶಗಳು ನಮ್ಮಲ್ಲಿ ಬಾಳೇಕಂದಿನೋಪಾದಿಯಲ್ಲಿರುತ್ತವೆ. ಬಾಳೇಕಂದಿನ ಪಟ್ಟೆಗಳೇ ಕೋಶಗಳೆಂಬ ಆವರಣಗಳು. ಇದರಂತೆ ನಮ್ಮಲ್ಲಿ ಹೊರಗೆ ಕಾಣುವ ಸ್ಥೂಲ

ದೇಹವೇ ಅನ್ನಮಯಕೋಶ. ಈ ಸ್ಥೂಲದೇಹದೊಳಗೆ ಉಳಿದ ಕೋಶಗಳು ಶಕ್ತಿರೂಪ ದಲ್ಲಿ ಪರಂಪರಾಕಾರವಾಗಿ ಒಂದಕ್ಕೊಂದು ಅಂಟಿಕೊಂಡಿರುತ್ತವೆ. ಅನ್ನಮಯಕೋಶ ಹೊರತು ಉಳಿದ ಕೋಶಗಳು ಶಕ್ತಿರೂಪದಲ್ಲಿರುವುದರಿಂದ, ದೇಹವನ್ನು ಕೊಯ್ದರೂ ಉಳಿದ ಕೋಶಗಳನ್ನು ನೋಡಲು ಸಾಧ್ಯವಿಲ್ಲ. ಈಗಿನ ಪಾಶ್ಚಾತ್ಯ ವೈದ್ಯರು ದೇಹವನ್ನು ಕೊಯ್ದು ನೋಡಿದ್ದರೂ ಸ್ಥೂಲದೇಹದೊಳಗೆ ಶಕ್ತಿರೂಪದಲ್ಲಿರುವ ಇತರ ಕೋಶಗಳ ವಿಭಾಗಗಳು ಇವರಿಗೆ ಕಾಣಿಸಲಿಲ್ಲ. ಮೇಲಿನ ಅಂಶಗಳ ಮುಖ್ಯತಾತ್ಪರ್ಯವೇನೆಂದರೆ, ಶ್ರೀರಾಮಾದಿಗಳು ಗುಹನಪುರಕ್ಕೆ ಬಂದುದೇ ಪಂಚಕೋಶಗಳಲ್ಲಿ ಪ್ರಥಮಕೋಶವಾದ ಆನಂದಮಯಕೋಶಕ್ಕೆ ಬುದ್ಧಿಮನಸ್ಸಿನ ವೃತ್ತಿಗಳು ಪ್ರಸರಿಸಿಕೊಂಡು ಬಂದುವೆಂಬ ತತ್ವಾರ್ಥವನ್ನು ಸೂಚಿಸುವುದು.

ಈ ಕೋಶಗಳು ಪರಮಾತ್ಮನನ್ನು ಆವರಿಸಿಕೊಂಡಿರುವುವೆಂಬುದಕ್ಕೆ "ಆತ್ಮಾ ಗುಹಾಯಾಂ ನಿಹಿತೋಽಸ್ಯ ಜಂತೋಃ" ಎಂಬ ಶ್ರುತಿವಾಕ್ಯವನ್ನು ಮೇಲೆಯೇ ತಿಳಿಸಿದೆ. ಇಲ್ಲಿದೆ ಗುಹಾ ಎಂಬ ಪದಕ್ಕೆ "ಗೂಹತಿ ವಂಚಯತಿ ಪರಸ್ಮೈಮಿತಿ ಗುಹಃ" ಎಂಬ ವ್ಯುತ್ಪತ್ತಿಯು ರಾಮಾಯಣದ ವ್ಯಾಖ್ಯಾನದಲ್ಲಿರುವುದು. ಗುಹನೆಂದರೆ ಅನ್ಯರನ್ನು ಬಚ್ಚಿಟ್ಟು ಮೋಸಗೊಳಿಸುವವನು. ಅಂದರೆ ಪರಮಾತ್ಮನನ್ನು ಮುಚ್ಚಿಟ್ಟು ಪ್ರತಿಬಿಂಬಚೈತನ್ಯವನ್ನು ಕೋಶಾನುವರ್ತಿಯಾಗಿರುವಂತೆ ಮೋಸಗೊಳಿಸುವವನೆಂಬ ತತ್ವಾರ್ಥವಾಗಿರುತ್ತದೆ.

ಇದೇ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ಕೂಡ ವಿವೇಕಚೂಡಾಮಣಿ ೧೫೧ ನೆಯ ಶ್ಲೋಕದಲ್ಲಿ,

> ಕೋಶೈ ರನ್ನಮಯಾದ್ಯೈಃ ಪಂಚಭಿರಾತ್ಮಾ ನ ಸಂವೃತೋಭಾತಿ |
> ನಿಜಶಕ್ತಿ ಸಮುತ್ಪನ್ನೈ ಶೈವಲಪಟಲೈ ರಿವಾಂಬುವಾಪೀಸ್ಥಂ ||

ತಾ|| ಕೊಳದ ನೀರಿನ ಬಲದಿಂದಲೇ ಹುಟ್ಟಿದ ಪಾಚಿಯು ಮುಚ್ಚಿಕೊಂಡರೆ ಅದರ ಒಳಗಡೆ ಅಡಗಿರುವ ನೀರು ಹೇಗೆ ಹೊರಕ್ಕೆ ಕಾಣುವುದಿಲ್ಲವೋ ಹಾಗೆಯೇ ಆತ್ಮನ ಶಕ್ತಿಯಾದ ಪ್ರಕೃತಿಯಿಂದಲೇ ಉಂಟಾದ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನ ಮಯ, ಆನಂದಮಯಗಳೆಂಬ ಕೋಶಗಳಿಂದ ಆವರಿಸಲ್ಪಟ್ಟಿರುವುದರಿಂದಲೇ ಆತ್ಮನ ಪ್ರಕಾಶವು ಕಾಣಬರುವುದಿಲ್ಲ. ಎಂದು ಹೇಳಿರುತ್ತಾರೆ.

ಈ ಮೇಲಿನ ಶ್ಲೋಕದ ತಾತ್ಪರ್ಯವನ್ನನುಸರಿಸಿ ಗುಹನು ಮುಚ್ಚಿಟ್ಟು ಮೋಸ ಗೊಳಿಸುವವನೆಂದರೆ—ನಮ್ಮಲ್ಲಿರುವ ಈಶ್ವರ ಪರಮಾತ್ಮರ ಸೋಪಾನಗಳನ್ನು ಮುಚ್ಚಿಟ್ಟು ಮೋಸಪಡಿಸುವವನೆಂದರ್ಥ. ಈರೀತಿ ಮುಚ್ಚಿಟ್ಟು ಮೋಸಮಾಡುವುದರಲ್ಲಿ ಆನಂದಮಯ ಕೋಶವೇ ಪ್ರಥಮವಾದುದು. ಈ ಆನಂದಮಯಕೋಶವು ಪರಮಾತ್ಮಸ್ವರೂಪವಾದ

ನಿಜಾನಂದವನ್ನು ತಪ್ಪಿಸಿ ವಾಸನಾನಂದ ಮತ್ತು ವಿಷಯಾನಂದಗಳನ್ನುಂಟುಮಾಡುವ ಮೋಸವಮಾಡುವುದರಿಂದ ಗುಹನು ಆನಂದಮಯಕೋಶ ಸ್ವರೂಪನಾಗಿರುತ್ತಾನೆ.

ಇದುವರೆಗೂ ಗುಹನ ತತ್ವವು ವಿವರಿಸಲ್ಪಟ್ಟಿತು. ಇವನ ರಾಜಧಾನಿಯಾದ ಶೃಂಗಿ ಬೇರಪುರದ ಪ್ರಜೆಗಳ ಕರ್ತವ್ಯವೇನೆಂದರೆ — ಶೃಂಗಿಬೇರವೆಂಬುವುದಕ್ಕೆ "ಶೃಂಗಿಣಾಂ ಬೇರಾಣಿ ಕೃತ್ರಿಮಶೃಂಗಾಣಿ ಯಸ್ಮಿನ್ ತತ್ ಶೃಂಗಿಬೇರಂ" ಎಂಬದಾಗಿ ರಾಮಾಯಣದ ವ್ಯಾಖ್ಯಾನದಲ್ಲಿ ವ್ಯುತ್ಪತ್ತಿಯಿರುವುದು. ಅಂದರೆ ಆ ಪೂರಿನಲ್ಲಿರತಕ್ಕವರು ಮೃಗಗಳನ್ನು ಹಿಡಿಯುವುದಕ್ಕಾಗಿ ಆಯಾಯ ಮೃಗಗಳಂತೆ ಕೃತ್ರಿಮವಾದ ಆಕಾರಗಳನ್ನು ತಾಳಿ ಮೃಗ ಗಳನ್ನು ಮರುಳುಗೊಳಿಸಿ ಬೇಟೆಯಾಡುವರೆಂದು ಅರ್ಥ. ಈರೀತಿಯಾಗಿ ಆಯಾಯ ಮೃಗ ಗಳಂತೆ ವೇಷಗಳನ್ನು ತಾಳಿ ಬೇಟೆಯಾಡುವ ತಾತ್ಪರ್ಯವೇನೆಂದರೆ— ಆನಂದಮಯಕೋಶ ಸ್ವರೂಪವಾದ ವಾಸನಾನಂದವು ಅಂತಃಕರಣವನ್ನು ಮರುಳುಮಾಡಿ ಅಂದರೆ, ಉತ್ಸಾಹವ ನ್ನುಂಟುಮಾಡಿ ಜೀವರುಗಳು ಯಾವ ಯಾವ ಪ್ರವರ್ತನೆಯಲ್ಲಿ ಹೋಗುವರೋ ಆಯಾಯ ಪ್ರವರ್ತನೆಯಂತೆ ಆನಂದವೆಂದರೆ ಉತ್ಸಾಹವನ್ನು ಕೊಡುತ್ತದೆ. ಕಾರ್ಯಪ್ರವರ್ತನೆಯು ಉತ್ಸಾಹವು ಹೇಗೆ ಹೇಗೆ ಹೋಗುವುದೋ ಹಾಗೆ ಹಾಗೆ ಆನಂದವು ಕೂಡ ಆ ಕಾರ್ಯದ ಉತ್ಸಾ ಹದ ಸ್ವರೂಪವಾಗಿ ಪ್ರಾಣಿಗಳನ್ನು ಮರುಳುಮಾಡುವುದು. ಆನಂದ ಅಥವಾ ಉತ್ಸಾಹ ವಿಲ್ಲದಿದ್ದರೆ ಪ್ರಪಂಚಾಭಿವೃದ್ಧಿಯೇ ಇರುವುದಿಲ್ಲವೆಂಬುದನ್ನು ಸರ್ವರೂ ಯೋಚಿಸಿ ತಿಳಿದು ಕೊಳ್ಳಬಹುದು.

ಈ ಆನಂದಮಯಕೋಶದ ಕೃತ್ರಿಮದಿಂದಲೆ ಸರ್ವಪ್ರಾಣಿಗಳೂ ಹುಟ್ಟುತ್ತಿರು ವುವು, ಜೀವಿಸುತ್ತಿರುವುವು ಮತ್ತು ಆನಂದವನ್ನು ಕುರಿತು ಗಮನಮಾಡುತ್ತಿರುವುವೆಂದು ತೈತ್ತಿರೀಯೋಪನಿಷತ್ತಿನಲ್ಲಿ,

ಆನಂದಾದ್ಧ್ಯೇವಖಲ್ವಿಮಾನಿಭೂತಾನಿಜಾಯಂತೇ |
ಆನಂದೇನಜಾತಾನಿಜೀವಂತಿ ಆನಂದಂಪ್ರಯಂತ್ಯಭಿಸಂವಿಶಂತೀತಿ ||

ಎಂಬದಾಗಿ ಹೇಳಿರುವುದು. ಆದುದರಿಂದ ಈ ಆನಂದಮಯಕೋಶವು ಪ್ರಾಣಿಗಳು ಯಾವ ಯಾವ ದಾರಿಯಲ್ಲಿ ಹೋಗುತ್ತಾರೋ ಆಯಾಯ ದಾರಿಯಲ್ಲಿಯೇ ಪ್ರಾಣಿಗಳಿಗೆ ಉತ್ಸಾಹವನ್ನು ಕೊಟ್ಟು ಜೀವರುಗಳನ್ನು ಬಲೆಯಲ್ಲಿ ಬಂಧಿಸಿರುತ್ತದೆ. ಇದೇ ಶೃಂಗಿಬೇರ ಪುರದ ಜನಗಳ ತತ್ವ. ತೈತ್ತಿರೀಯೋಪನಿಷತ್ತಿನಲ್ಲಿ ಈ ಆನಂದದ ವಿಭಾಗಗಳೂ ಹೇಳ ಲ್ಪಟ್ಟಿರುತ್ತವೆ. ಈ ಆನಂದಮಯಕೋಶವನ್ನನುಸರಿಸಿಯೇ ಜನಗಳು ಲೀಲಾಪ್ರಪಂಚ ವೆಂದು ಸಾಧಾರಣವಾಗಿ ಮಾತನಾಡಿಕೊಳ್ಳುತ್ತಾರೆ.

ಹಿಂದಿನ ಪ್ರಕರಣದಲ್ಲಿ ತಿಳಿಸಿರುವ ತಮಸ್ಸಿನ ಆವರಣವು ಈ ಆನಂದಮಯಕೋಶಕ್ಕೆ ಸೇರಿರುವುದು. ಈ ಆವರಣದಿಂದ ಅಖಂಡಜ್ಞಾನವು ಮರೆಯಾಗುವಂತೆ, ಈಶ್ವರಸೋಪಾನದಲ್ಲಿರುವ ನಿಜಾನಂದವು ಮರೆಯಾಗಿ, ವಾಸನಾನಂದವೆನಿಸಿಕೊಳ್ಳುವುದು. ವಾಸನಾನಂದವೇ ಸುಷುಪ್ತ್ಯವಸ್ಥೆಯಾಗಿರುವುದು. ಹೇಗೆಂದರೆ, ಗಡಿಗೆಯೊಳಗೆ ನೀರಿರುತ್ತದೆ. ನೀರಿನ ಶೈತ್ಯವು ಗಡಿಗೆಯ ಹೊರಭಾಗದಲ್ಲೂ ಇರುತ್ತೆ. ಸುಷುಪ್ತಿಕಾಲದಲ್ಲಿ ಬುದ್ಧಿವೃತ್ತಿಯು ಗಡಿಗೆಯ ಹೊರಭಾಗವನ್ನು ತಬ್ಬಿಕೊಳ್ಳುವುದು. ಅಂದರೆ ತಮಸ್ಸಿನ ಆವರಣದಲ್ಲಿ ಲೀನವಾಗುವುದು. ಗಡಿಗೆಯ ತತ್ವದಲ್ಲಿರುವ ತಮಸ್ಸಿನ ಆವರಣವಿರುವುದರಿಂದ ಮುಚ್ಚಳದೊಡನೆ ಇರುವ ಗಡಿಗೆಯೊಳಕ್ಕೆ ಪ್ರವೇಶಮಾಡಲು ಸಾಧ್ಯವಿರುವುದಿಲ್ಲವಷ್ಟೆ! ನಿಜವಾದ ಬ್ರಹ್ಮಾನಂದವು ಗಡಿಗೆಯೊಳಗಿನ ನೀರಿನ ತತ್ವದಲ್ಲಿರುವುದು. ಸುಷುಪ್ತಿಯ ಸ್ವರೂಪವಾದ ವಾಸನಾನಂದವು ಗಡಿಗೆಯ ಹೊರಪ್ರಾಕಾರದ ಶೈತ್ಯದ ತತ್ವವಾಗಿರುವುದು.

ಈ ಮೇಲಿನ ತತ್ವವನ್ನು ಮತ್ತೊಂದು ವಿಧವಾಗಿ ವಿವರಿಸೋಣ. ದೀಪಕ್ಕೆ ಗಾಜಿನ ಕೊಳವೆ (ಚಿಮಣಿ) ಯೊಂದು ಇರುವುದೆಂದು ಭಾವಿಸೋಣ. ಈ ಕೊಳವೆಯೇ ತಮಸ್ಸಿನ ಆವರಣದ ತತ್ವವಾಗಿರುವುದು. ದೀಪವೇ ನಿಜಾನಂದವೆಂದರೆ ಬ್ರಹ್ಮಾನಂದದ ತತ್ವದಲ್ಲಿರುವುದು. ಕೊಳವೆಯ ಹೊರಪ್ರಾಕಾರದಲ್ಲಿ ಕೊಳವೆಗೆ ಸಾರಿದಹಾಗೆ ಇರುವ ದೀಪದ ಪ್ರಭೆಯೇ ಆನಂದಮಯಕೋಶದ ತತ್ವದಲ್ಲಿರುವುದು. ಕೊಳವೆಯ ಹೊರಪ್ರಾಕಾರದಲ್ಲಿರುವ ಪ್ರಭೆಯು ಅಧಿಕವಾಗಿದ್ದು ದೂರಕ್ಕೆ ಪ್ರಭೆಯು ಗೋಚರವಾಗುವುದಿಲ್ಲವಷ್ಟೆ! ಇದರಂತೆ ಆನಂದಮಯಕೋಶದ ಆನಂದವು ವಿಜ್ಞಾನಮಯಕೋಶದಲ್ಲಿರುವುದಿಲ್ಲ. ಅಲ್ಲದೆ ಗಾಜಿನ ಕೊಳವೆಯ ಹೊರಪ್ರಾಕಾರದಲ್ಲಿರುವ ಪ್ರಭೆಯು ಗಾಜಿನ ಕೊಳವೆಯ ಒಳಗಡೆ ಇರುವ ಪ್ರಭೆಗೆ ಸಮಾನವಾಗಿರುವುದರಿಂದ ಆನಂದಮಯಕೋಶದ ತತ್ವದಲ್ಲಿರುವ ಗುಹನು ಶ್ರೀರಾಮನಿಗೆ ಪ್ರಾಣಸಖನು. ಅಲ್ಲದೆ ಗುಹನ ಸ್ಥಳವು ಅಯೋಧ್ಯೆಯ ಉದ್ಯಾನವನವೆಂದು ರಾಮಾಯಣದಲ್ಲಿ ಹೇಳಿರುವುದು. ಈ ತತ್ವಗಳಿಂದ ಆನಂದಮಯಕೋಶವೂ ಈಶ್ವರಸ್ಥಾನವೆಂದು ಶ್ರುತಿಯು ತಿಳಿಸುವುದು.

ಈ ಆನಂದಮಯಕೋಶವು ಈಶ್ವರಸ್ಥಾನದಲ್ಲಿರುವುದರಿಂದ ಇತರಕೋಶಗಳಿಗಿಂತಲೂ ಶ್ರೇಷ್ಠವಾದುದು ಮತ್ತು ಈಶ್ವರನಿಗೆ ವಾಹನರೂಪವಾದುದು. ಹೇಗೆಂದರೆ ಈಶ್ವರನಿಗೆ ವಾಹನ ನಂದಿ. ನಂದಿಯೆಂದರೆ ಆನಂದವೆಂದು ಅರ್ಥವಾಗುವುದರಿಂದ ಈಶ್ವರಸೋಪಾನಕ್ಕೆ ಆನಂದಮಯಕೋಶವು ವಾಹನಸ್ವರೂಪವಾದುದು. ಅಲ್ಲದೆ ಗುಹನ ರಾಜಧಾನಿಯು ಗಂಗಾನದಿಯ ತೀರದಲ್ಲಿರುವುದು. ಗಂಗೆಯೆಂದರೆ ಸೂತ್ರಕಳಾ ಅಥವಾ ಈಶ್ವರನ ಪ್ರತಿಭೆಯೆಂದು ಬಾಲಕಾಂಡದಲ್ಲಿ ತಿಳಿಸಿದೆ. ಈ ಸ್ಥಳದ ಗಂಗೆಯು ದೇವಲೋಕದ

ಗಂಗೆಯೆನಿಸಿಕೊಂಡಿರುವುದರಿಂದ ಆನಂದಮಯಕೋಶವು ತೇಜೋರೂಪದಲ್ಲಿಯೇ ಇರುವು ದೆಂಬ ತತ್ವವಾಗಿರುವುದು.

ನಮಗೆ ಸಂತೋಷವುಂಟಾದ ಕಾಲ ಮತ್ತು ವಿಷಯಸುಖ ತೋರಿದ ಕಾಲಗಳಲ್ಲಿ ಬಾಹ್ಯವ್ಯಾಪಾರದಲ್ಲಿರುವ ನಮ್ಮ ಬುದ್ಧಿವೃತ್ತಿಯು ವಿಜ್ಞಾನಮಯಕೋಶಕ್ಕೂ ಒಳಗಿರುವ ಆನಂದಮಯಕೋಶದಲ್ಲೆಂದರೆ ಗಾಜಿನ ಕೊಳವಿಯ ಹೊರಗಿರುವ ಪ್ರಭೆಗೆ ಬಂದು ನಿಲ್ಲು ವುದು. ನಿದ್ರಾಕಾಲದಲ್ಲಿ ಆನಂದಮಯಕೋಶದಲ್ಲಿರುವ ತಮಸ್ಸಿನ ಆವರಣದಲ್ಲಿ ಲೀನ ವಾಗುವುದೆಂದರೆ —ದೀಪದ ಪ್ರಭೆಯು ಬರುತ್ತಿರುವ ಕೊಳವಿಯ ಹೊರಭಾಗವನ್ನು ಬುದ್ಧಿ ವೃತ್ತಿಯು ತಪ್ಪಿಕೊಳ್ಳುವುದು. ಈ ತತ್ವಾರ್ಥಗಳಿಗೆ ಅನುಸಾರವಾಗಿ ಶ್ರೀವಿದ್ಯಾರಣ್ಯರವರು ಪಂಚದಶಿ ಪಂಚಕೋಶವಿವೇಕಪ್ರಕರಣ ೯ನೆಯ ಶ್ಲೋಕದಲ್ಲಿ,

> ಕಾಚಿದಂತರ್ಮುಖಾವೃತ್ತಿ ರಾನಂದಪ್ರತಿಬಿಂಬಭಾಕ್ |
> ಪುಣ್ಯಭೋಗೇ ಭೋಗಶಾಂತೌ ನಿದ್ರಾರೂಪೇಣ ಲೀಯತೇ ||

ತಾ|| ಪುಣ್ಯಫಲಾನುಭವದ ಒಂದೊಂದು ಸಮಯದಲ್ಲಿ ಬುದ್ಧಿವೃತ್ತಿಯು ಅಂತರ್ಮುಖವುಳ್ಳದ್ದಾಗಿ ಆತ್ಮಸ್ವರೂಪವಾದ ಆನಂದದ ಪ್ರತಿಬಿಂಬವನ್ನು ಹೊಂದುವು ದೆಂದರೆ, ಆನಂದಮಯಕೋಶದ ಆನಂದವನ್ನು ಪಡೆಯುವುದು. ಜಾಗ್ರತ್ಕಾಲದ ಫಲ ಭೋಗವು ನಾಶಹೊಂದುವ ಕಾಲದಲ್ಲಿ ಆ ಬುದ್ಧಿವೃತ್ತಿಯೇ ನಿದ್ರೆಯ ರೂಪವಾಗಿ ಲೀನ ವಾಗುವುದು. ಎಂಬದಾಗಿ ಹೇಳಿರುವರು.

ಈ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ಕೂಡ ವಿವೇಕಚೂಡಾಮಣಿ ೨೧೧ ನೆಯ ಶ್ಲೋಕದಲ್ಲಿ,

> ಆನಂದಮಯಕೋಶಸ್ಯ ಸುಷುಪ್ತೌ ಸ್ಫೂರ್ತಿರುತ್ಕಟಾ |
> ಸ್ವಪ್ನಜಾಗರಯೋರೀಷ ದಿಷ್ಟಸಂದರ್ಶನಾದಿನಾ ||

ತಾ|| ಆನಂದಮಯಕೋಶದ ಸ್ಫೂರ್ತಿಯು ವಿಶೇಷವಾಗಿ ಸುಷುಪ್ತಿಯಲ್ಲಿಯೇ ಉಂಟಾಗುವುದು. ಸ್ವಪ್ನಜಾಗರಗಳಲ್ಲಿ ಕೂಡ ತನಗೆ ಇಷ್ಟವಾದ ಪದಾರ್ಥಗಳನ್ನು ನೋಡುವ, ಅವುಗಳನ್ನು ಪಡೆಯುವ ಅನಂತರ ಅವುಗಳನ್ನು ಅನುಭವಿಸುವ, ಪ್ರಿಯ, ಮೋದ, ಪ್ರಮೋದಗಳೆಂಬ ಆನಂದದ ಸ್ಫೂರ್ತಿಯುಂಟಾಗುವುದು ಎಂಬದಾಗಿ ಹೇಳಿರುವರು.

**ರಾ||** ಗುಹನು ಲಕ್ಷ್ಮಣನನ್ನು ಕುರಿತು ಎಲೈ ತಂದೆಯೇ! ಈ ಹಾಸಿಗೆಯು ಸುಖಕರವಾಗುವಂತೆ ನಿನಗೋಸ್ಕರ ಕಲ್ಪಿಸಲ್ಪಟ್ಟಿರುವುದು. ಇದರಲ್ಲಿ ಸುಖವಾಗಿ ಮಲಗುವವನಾಗು, ಎಂದು ಹೇಳಿದನು.

ಈ ಮಾತನ್ನು ಕೇಳಿ ಲಕ್ಷ್ಮಣನು ಅಂತಹ ಶ್ರೀರಾಮಚಂದ್ರನು ಸೀತಾದೇವಿಯೊಡನೆ ತೃಣಶಯ್ಯೆಯಲ್ಲಿ ಮಲಗುವಾಗ, ನಾನು ಸುಖಕರವಾದ ಹಾಸಿಗೆಯಲ್ಲಿ ಮಲಗುವುದಿಲ್ಲ. ಅರಣ್ಯದಿಂದ ಹಿಂದಿರುಗಿ ಶ್ರೀರಾಮಚಂದ್ರನೊಡನೆ ಅಯೋಧ್ಯೆಗೆ ಹೋಗಬೇಕೆಂಬುದೇ ನನ್ನ ದೃಢಸಂಕಲ್ಪವೆಂದು ಗುಹನಿಗೆ ಪ್ರತ್ಯುತ್ತರಹೇಳಿದನು.

**ತತ್ವ||** ಲಕ್ಷ್ಮಣನು ಮನಸ್ತತ್ವದವನಷ್ಟೆ! ಮನಸ್ಸೇ ಭೋಕ್ತೃ. ವಿಷಯಸುಖವನ್ನೆಂದರೆ ಆನಂದವನ್ನಪೇಕ್ಷಿಸಿ ವಿಷಯಗಳಲ್ಲಿ ಮಗ್ನನಾಗುವುದೇ ಮನೋವೃತ್ತಿಯು. ವಿಷಯಾದಿಗಳ ಆನಂದಾನುಭವದ ಕಾಲದಲ್ಲಿ ಮನೋವೃತ್ತಿಯು ಆನಂದಮಯಕೋಶದಲ್ಲಿ ನಿಂತು ಆನಂದವನ್ನನುಭವಿಸುವುದಾದುದರಿಂದ ಮನಸ್ಸೇ ಭೋಕ್ತೃ. ಈ ತತ್ವಾರ್ಥವನ್ನನುಸರಿಸಿಯೇ ಗುಹನು ಸುಖಶಯ್ಯೆಯಲ್ಲಿ ಪವಡಿಸೆಂದು ಲಕ್ಷ್ಮಣನಿಗೆ ಹೇಳಿದನಲ್ಲದೆ ಶ್ರೀರಾಮನಿಗೆ ಹೇಳಲಿಲ್ಲ. ಆನಂದಾನುಭವದ ಕಾಲದಲ್ಲಿ ಮನೋವೃತ್ತಿಯು ಆನಂದಮಯಕೋಶವನ್ನಾಶ್ರಯಿಸುವುದರಿಂದ ಆನಂದಮಯಕೋಶವನ್ನೇ ಭೋಕ್ತೃಸ್ಥಾನವೆಂದು ಶ್ರುತಿಯು ತಿಳಿಸುತ್ತದೆ. ವಿಷಯಾನಂದಗಳು ನಶ್ವರವೆಂದು ವಿರಕ್ತನಾಗಿ, ನಿಜಾನಂದವಾದ ಈಶ್ವರಸೋಪಾನವೇ ಪಾರಮಾರ್ಥಿಕವೆಂದು ತಿಳಿದು ಇದನ್ನು ಹೊಂದಬೇಕೆಂಬ ದೃಢಪ್ರತಿಜ್ಞೆಯು ಮೋಕ್ಷಾಧಿಕಾರಿಗೆ ಇರಬೇಕೆಂಬ ತತ್ವದ ಸೂಚನೆಯೇ ಲಕ್ಷ್ಮಣನು ಶ್ರೀರಾಮನೊಡನೆ ಅಯೋಧ್ಯೆಗೆ ಹೋಗಬೇಕೆಂಬುದೇ ತನ್ನ ಪ್ರತಿಜ್ಞೆಯೆಂದು ಗುಹನೊಡನೆ ಹೇಳಿ ಸುಖವಾದ ಹಾಸಿಗೆಯಲ್ಲಿ ಮಲಗದೆ ಇದ್ದುದಾಗಿರುವುದು.

**ರಾ||** ಲಕ್ಷ್ಮಣನು ವನವಾಸವನ್ನು ಪೂರಯಿಸಿಕೊಂಡು ಅಯೋಧ್ಯೆಗೆ ಶ್ರೀರಾಮನೊಡನೆ ಎಂದಿಗೆ ಹೋಗುವೆನೋ ಎಂಬದಾಗಿ ಶೋಕಪೀಡಿತನಾಗಿರಲು ಗುಹನೂ ತನ್ನ ಗುರುವಾದ ಶ್ರೀರಾಮಚಂದ್ರನಲ್ಲಿನ ವಿಶ್ವಾಸದಿಂದ ಕಣ್ಣೀರುಬಿಟ್ಟನು.

**ತತ್ವ||** ಮನಸ್ತತ್ವವು ವಿರಕ್ತಿಯಿಂದ ನಿಜಾನಂದವನ್ನು ಹೊಂದಬೇಕೆಂಬ ನಿಶ್ಚಯವಾದ ಹಂಬಲಿನಿಂದ ಕೂಡಿದ್ದರೆ ಆನಂದಮಯಕೋಶದ ಆನಂದವೂ ಅದೇ ದಾರಿಯಲ್ಲಿರುವುದೆಂಬ ತತ್ವಪ್ರತಿಪಾದನೆಯೇ ಲಕ್ಷ್ಮಣ ಗುಹರು ಶೋಕಪಟ್ಟುದಾಗಿರುವುದು. ಅಂದರೆ ಯಾರು ಯಾರು ಯಾವ ಯಾವ ದಾರಿಯಲ್ಲಿ ಪ್ರವೇಶಿಸುವರೋ ಅವರಂತೆ ಅನುಸರಿಸುವುದೇ ಆನಂದಮಯಕೋಶದ ಕರ್ತವ್ಯವಾಗಿರುವುದರಿಂದ ಮೋಕ್ಷಾಭಿಲಾಷಿಗಳಿಗೆ ಕೂಡ ತಕ್ಕಂತೆ ಮೋಕ್ಷಮಾರ್ಗದಲ್ಲಿನ ಆನಂದವನ್ನು ಆನಂದಮಯಕೋಶವು ಕೊಡುವುದು. ಬ್ರಹ್ಮಾನಂದದ ಅಂತರ್ಗತವಾದ ವೇದಾಂತವಿದ್ಯಾನಂದ, ಯೋಗಾನಂದ, ಅದ್ವೈತಾನಂದ ಮುಂತಾದುವುಗಳು ಮೋಕ್ಷಮಾರ್ಗದಲ್ಲಿರತಕ್ಕವರು ಹೊಂದಬಹುದಾದವುಗಳಾಗಿರುವುವು. ಅಲ್ಲದೆ ದೇವರನ್ನು ಆನಂದದಿಂದ ನಗುತನಗುತ ಆರಾಧಿಸಬೇಕು. ಹೀಗೆ ಆರಾಧಿಸುತ್ತಾ ಬರುವುದು ಪರಮಾತ್ಮನಲ್ಲಿರುವ ಪರಮಪ್ರೀತಿಯನ್ನು ಸೂಚಿಸಿ ಭಕ್ತಿಯೆನಿಸಿಕೊಳ್ಳುವುದು.

ಶ್ರೀರಾಮಚಂದ್ರನ ಲೀಲಾವಿಭೂತಿಯಲ್ಲಿ ಆನಂದಮಯಕೋಶದ ಸ್ವರೂಪ ಮತ್ತು ಇದು ಮೋಕ್ಷಮಾರ್ಗಕ್ಕೆ ಇರಬೇಕಾದ ಸ್ಥಿತಿಯನ್ನು ತಕ್ಕಮಟ್ಟಿಗೆ ವಿವರಿಸಿತು.

## ೫ನೆಯ ಪ್ರಕರಣ.

**ಶ್ರೀರಾಮಾದಿಗಳು ಭರದ್ವಾಜಾಶ್ರಮವನ್ನು ಪ್ರವೇಶಮಾಡಿದುದು ಮತ್ತು ವನವಾಸಪ್ರಾರಂಭ.**

**ಆನಂದಮಯಕೋಶಕ್ಕೂ ಇತರ ಕೋಶಗಳಿಗೂ ಮಧ್ಯೆ ಇರುವ ಬಿಂದುವಿನ ವಿಚಾರ ಮತ್ತು ದೇಹವಾಸಪ್ರಾರಂಭ.**

**ರಾ||** ಶ್ರೀರಾಮಾದಿಗಳು ಗುಹನ ಸ್ಥಳವನ್ನು ಬಿಟ್ಟು ಹೊರಟ ಕೂಡಲೆ ಶ್ರೀರಾಮನು ಲಕ್ಷ್ಮಣನೊಡನೆ ಎಲೈ ಲಕ್ಷ್ಮಣಾ, ನಾವು ಇಂದಿನವರೆಗೂ ಅಯೋಧ್ಯಾರಾಜ್ಯದ ಕಾನನದಲ್ಲಿ ರಾತ್ರಿಗಳನ್ನು ಕಳೆದೆವು. ಇಂದು ಮೊದಲುಗೊಂಡು ಅರಣ್ಯದಲ್ಲಿ ರಾತ್ರಿಗಳನ್ನು ಕಳೆಯಬೇಕೆಂದನು.

**ತತ್ವ||** ಮೂಲತಮಸ್ಸಿನ ಆವರಣ ಬಂದು ಈಶ್ವರತ್ವದಿಂದ ಜೀವತ್ವದ ಕಲ್ಪನೆಗೆ ಪ್ರಾರಂಭವಾದರೂ ಆನಂದಮಯಕೋಶದಲ್ಲಿ ಅಂತಃಕರಣ ಮತ್ತು ಇಂದ್ರಿಯಗಳ ವ್ಯಾಪಾರಕ್ಕೆ ಆಸ್ಪದವಿಲ್ಲ. ತೇಜೋರೂಪಿನಲ್ಲಿರುವುದರಿಂದ ಅಯೋಧ್ಯಾಕಾನನಪ್ರದೇಶದ ತತ್ವವಾದ ಆನಂದಮಯಕೋಶವೂ ಈಶ್ವರಸ್ಥಾನಕ್ಕೆ ಸೇರಿರುವುದೆಂಬ ತತ್ವಾರ್ಥವಾಗಿರುತ್ತದೆ.

ಈಶ್ವರಸೋಪಾನಕ್ಕೆ ಮೊದಲ ಮುಸುಕಿನಂತಿರುವ ಆನಂದಮಯಕೋಶದ ವಿಚಾರವು ಹಿಂದಿನ ಪ್ರಕರಣದಲ್ಲಿ ತಿಳಿಸಲ್ಪಟ್ಟಿತಷ್ಟೆ! ಆನಂದಮಯಕೋಶದ ಮುಂದಿನದಾದ ವಿಜ್ಞಾನ, ಮನೋಮಯಕೋಶಗಳ ಸ್ಥಿತಿಯು ಅರಣ್ಯವಾಸದ ತತ್ವವಾಗಿರುವುದು. ಈ ತತ್ವವೇ ಶ್ರೀರಾಮಚಂದ್ರನು ಇನ್ನು ಮುಂದೆ ಅರಣ್ಯವಾಸವೆಂದು ಹೇಳಿದುದರ ತಾತ್ಪರ್ಯ. ಶ್ರೀರಾಮಚಂದ್ರನು ದಂಡಕಾರಣ್ಯಪ್ರವೇಶ ಮಾಡಿದ ತತ್ವವು ಮುಂದೆ ಅತ್ರಿಋಷಿಗಳಾಶ್ರಮದ ತತ್ವವಾದ ಮನೋಮಯಕೋಶದಿಂದ ಪ್ರಾರಂಭವಾಗುವುದು.

**ರಾ||** ಅನಂತರ ಶ್ರೀರಾಮಾದಿಗಳು ಗಂಗಾ ಯಮುನಾ ಸಂಗಮಸ್ಥಳದಲ್ಲಿರುವ ಭರದ್ವಾಜಾಶ್ರಮವನ್ನು ಪ್ರವೇಶಮಾಡಿ ಅವರಿಂದ ಸತ್ಕರಿಸಲ್ಪಟ್ಟರು.

**ತತ್ವ||** ಭರದ್ವಾಜ ಎಂಬ ಶಬ್ದಕ್ಕೆ "ದ್ವಾಭ್ಯಾಂ ಜಾಯತೆ ಇತಿ ದ್ವಾಜಃ ತತ್ ಬಿಭರ್ತೀತಿ ಭರಃ" ಎಂದರೆ ಎರಡರಿಂದ ಉತ್ಪನ್ನವಾಗಿ ಎರಡನ್ನೂ ಧರಿಸತಕ್ಕವನು ಅಥವಾ ಕಾಪಾಡತಕ್ಕವನೆಂದು ವಿಷ್ಣುಪುರಾಣದಲ್ಲಿ ವ್ಯುತ್ಪತ್ತಿಯಿದೆ. ಅಂದರೆ

ಎರಡನ್ನೂ ಸೇರಿಸಿ ಹಿಡಿದುಕೊಂಡು ಮಧ್ಯದಲ್ಲಿರುವವನಿಗೆ ಭರದ್ವಾಜನೆಂದು ಹೆಸರು. ಹೇಗೆಂದರೆ ಮನೆಯ ಬಾಗಿಲು ಹೊರಗಿನದನ್ನೂ ಒಳಗಿನದನ್ನೂ ಸೇರಿಸುವ ಸಂಗಮ ಸ್ಥಳ ಹೇಗೋ ಹಾಗೆ ಭರದ್ವಾಜನೆಂದರೆ— ಈಶ್ವರತ್ವಕ್ಕೂ ಜೀವತ್ವಕ್ಕೂ ಮಧ್ಯಸ್ಥಳದ ಸ್ವರೂಪದ ತತ್ವದವನಾಗಿರುತ್ತಾನೆ. ಭರದ್ವಾಜ ಎಂಬ ಶಬ್ದಕ್ಕೆ ಇನ್ನೊಂದು ವ್ಯುತ್ಪತ್ತಿಯೂ ಇರುವುದು. “ ವಾಜಃ ಬಿಂದುಃ ತತ್ ಬಿಭರ್ತೀತಿ ಭರಃ ಭರದ್ವಾಜಃ ” ಅಂದರೆ ಬಿಂದುಧಾರಣೆಯ ಸ್ವರೂಪ ಅಥವಾ ಬೈಂದವಸ್ಥಳದ ತತ್ವದವನೆಂದರ್ಥವಾಗುತ್ತದೆ. ಬೈಂದವಸ್ಥಳವೆಂದರೆ ಎರಡನ್ನೂ ಸೇರಿಸುವಸ್ಥಳ. ಅಂದರೆ, ಒಂದುಕಡೆ ಈಶ್ವರತ್ವ ಮತ್ತೊಂದು ಕಡೆ ಸ್ಥೂಲದೇಹದ ಚೈತನ್ಯ ಇವುಗಳನ್ನು ಸೇರಿಸಿಕೊಂಡಿರುವ ಸ್ಥಳವೇ ಭರದ್ವಾಜಾಶ್ರಮದ ತತ್ವವಾದ ಬಿಂದುಸ್ಥಾನವು.

ಭರದ್ವಾಜಾಶ್ರಮವು ಗಂಗಾ ಯಮುನಾ ಸರಸ್ವತೀನದಿಗಳ ಸಂಗಮಸ್ಥಳದಲ್ಲಿರುತ್ತದೆ. ಪ್ರತಿಬಿಂಬಚೈತನ್ಯವು ಅವರೋಹಣಮಾಡಿ ಜೀವತ್ವವನ್ನು ಪಡೆಯುವ ಕಥೆಯ ಸಂದರ್ಭವೂ ಆಗಿರುತ್ತದಷ್ಟೆ! ಈ ಸ್ಥಳದಲ್ಲಿ ಗಂಗಾ ಯಮುನಾ ನದಿಗಳು ನಮ್ಮ ದೇಹದಲ್ಲಿರತಕ್ಕ ಇಡಾ ಪಿಂಗಳಾ ನಾಡಿಗಳಾಗಿರುತ್ತವೆ. ಸರಸ್ವತಿಯು ಸುಷುಮ್ನಾನಾಡಿಯಾಗಿರುತ್ತದೆ. ಗಂಗಾ ಯಮುನಾ ಸರಸ್ವತೀನದಿಗಳು ನಮ್ಮಲ್ಲಿರುವ ಇಡಾ ಪಿಂಗಳಾ ಸುಷುಮ್ನಾ ನಾಡಿಗಳಾಗಿವೆಯೆಂದು ಶ್ರುತಿವಾಕ್ಯವಿರುವುದು. ಶ್ರೀರಾಮಾದಿಗಳು ಭರದ್ವಾಜಾಶ್ರಮವನ್ನು ಪ್ರವೇಶಮಾಡಿದರೆಂದರೆ, ಬುದ್ಧಿಮನಸ್ಸಿನ ವೃತ್ತಿಗಳು ಆನಂದಮಯಕೋಶದಿಂದಿಳಿದು ವಿಜ್ಞಾನಮಯಕೋಶವೆಂದರೆ ಆಜ್ಞಾ ಚಕ್ರದಲ್ಲಿರುವ ಬಿಂದುಸ್ಥಾನವನ್ನು ಸೇರಿದುವೆಂಬ ತಾತ್ಪರ್ಯವಾಗಿರುತ್ತದೆ. ಈ ಬೈಂದವ ಸ್ಥಾನವು ನಮ್ಮಲ್ಲಿ ಹೇಗಿದೆಯೆಂಬುದಕ್ಕೆ ತಾವರೆಗಿಡವನ್ನೊಳಗೊಂಡಿರುವ ಮಾನವರ ಚಿತ್ರಪಟವನ್ನು ಇಲ್ಲಿ ಕೊಟ್ಟು ಈ ಉದಾಹರಣೆಯ ಮೂಲಕ ತಕ್ಕಮಟ್ಟಿಗೆ ವಿವರ ಮಾಡಿರುತ್ತದೆ.

ಈ ಮಾನವನ ಚಿತ್ರಪಟದಲ್ಲಿ ಮಧ್ಯದಲ್ಲಿ (ಬೆನ್ನಿನ ಹುರಿಯಲ್ಲಿ)ಎರಡು ಗೀರುಗಳನ್ನು ಬರೆದಿರುತ್ತಷ್ಟೆ! ಈ ಎರಡು ಗೀರಿನ ಮಧ್ಯಪ್ರದೇಶವೇ ಸುಷುಮ್ನಾನಾಡಿಯ ತತ್ವವಾಗಿರುತ್ತದೆ. ಸುಷುಮ್ನಾನಾಡಿಯ ಎಡಭಾಗದಲ್ಲಿರುವ ರೇಖೆಯು ಚಂದ್ರನಾಡಿ ಅಥವಾ ಇಡಾ ಯೆನಿಸಿಕೊಳ್ಳುತ್ತದೆ. ಈ ಸುಷುಮ್ನಾನಾಡಿಯ ಬಲಭಾಗದಲ್ಲಿರುವ ರೇಖೆಯು ಪಿಂಗಳಾ ಅಥವಾ ಸೂರ್ಯನಾಡಿ ಎನಿಸಿಕೊಳ್ಳುತ್ತದೆ. ಸುಷುಮ್ನಾನಾಡಿಯು ತಾವರೆಗಿಡದನಾಳಕ್ಕೆ ಹೋಲಿಕೆಯಾಗಿದೆ. ಈ ನಾಡಿಗಳು ಶಕ್ತಿರೂಪದಲ್ಲಿ ನಮ್ಮ ಬೆನ್ನಿನ ಹುರಿಯಲ್ಲಿರುವುವು. ಈ ನಾಡಿಗಳಲ್ಲಿ ತಾವರೆದಂಟಿಗೆ ಹೋಲಿಕೆಯಾಗಿರುವ ಸುಷುಮ್ನಾನಾಡಿಯು ನಮ್ಮ

ಸೊಂಟದ ಕೆಳಗಿರುವ ಮೂಲಾಧಾರಚಕ್ರದಿಂದ ಪ್ರಾರಂಭವಾಗಿ ಬೆನ್ನಿನ ಹುರಿಯಲ್ಲಿಯೇ ಶಿರಸ್ಸಿಗೆ ಬರುತ್ತದೆ. ತಾವರೆಗಿಡದ ಚಿತ್ರಪಟವನ್ನು ಪ್ರತ್ಯೇಕವಾಗಿ ಸುಂದರಕಾಂಡದಲ್ಲಿ ಕೊಟ್ಟಿರುವುದನ್ನೂ ನೋಡಬಹುದು.

ಈ ತಾವರೆದಂಟಿನ ಮೇಲ್ಭಾಗದಲ್ಲಿರುವ ತಾವರೆಪುಷ್ಪದ ಕುಸುಮಗಳು ಅಂತಃಕರಣಕ್ಕೆ ಹೋಲಿಕೆಯಾಗಿರುತ್ತವೆ. ಈ ಅಂತಃಕರಣಸ್ವರೂಪವಾದ ಕುಸುಮಗಳು ಎಲ್ಲಿರುವುವೋ ಅಲ್ಲಿ ಪರಮಾತ್ಮನು ಪ್ರತಿಫಲಿತನಾಗುತ್ತಾನೆ. ಪ್ರತಿಫಲಿತನಾಗುವುದೆಂದರೆ ಬೆಳಕಿನಲ್ಲಿ ರಸಕನ್ನಡಿಯೊಂದನ್ನು ಹಿಡಿದರೆ ಪ್ರತಿಫಲನದ ಬೆಳಕುಂಟಾಗುವಂತೆ ತಾವರೆ ಕುಸುಮರೂಪವಾದ ಅಂತಃಕರಣವು ಎಲ್ಲಿರುತ್ತದೋ ಅಲ್ಲಿ ಪರಮಾತ್ಮನ ಪ್ರಕಾಶವು ಪ್ರತಿಫಲನವಾಗುತ್ತದೆ. ತಾವರೆಹೂವಿನ ಮಧ್ಯದಲ್ಲಿರುವ ದಿಂಡಿನ ಅಥವಾ ಕರ್ಣಿಕದ ಪ್ರದೇಶವು ನಮ್ಮಲ್ಲಿರುವ ಸಹಸ್ರಾರಕಮಲವಾದ, ಯಾವ ಉಪಾಧಿಗಳೂ ಇಲ್ಲದ, ಪರಮಾತ್ಮನ ಸ್ಥಾನವಾಗಿರುತ್ತದೆ. ಹೂವಿನ ಮಧ್ಯಪ್ರದೇಶವೆಂದರೆ ಕರ್ಣಿಕದ ಸುತ್ತಲು ದುಂಡಾಗಿ ಬರೆದಿರುವ ಗೆರೆಯು ವ್ಯಷ್ಟಿದೇಹಗಳಲ್ಲಿರುವ ತಮಸ್ಸಿನ ಆವರಣವಾಗಿರುತ್ತದೆ. ಕಮಲಪುಷ್ಪವು ರಾತ್ರಿಯಕಾಲದಲ್ಲಿ ಮೊಗ್ಗಿನಂತಾಗಿ ಒಳಕ್ಕೆ ಮಡಿಸಿಕೊಳ್ಳುವಂತೆ ಸುಷುಪ್ತಿಕಾಲದಲ್ಲಿ ಕಮಲಪುಷ್ಪದ ಕುಸುಮರೂಪದಲ್ಲಿರುವ ಅಂತಃಕರಣದ ವೃತ್ತಿಯು ತಮಸ್ಸಿನ ಆವರಣದಲ್ಲಿ ಲೀನವಾಗುವುದು. ನೀರಿನಲ್ಲಿ ಅಲೆಗಳುತ್ಪತ್ತಿಯಾಗುವಂತೆ ಜಾಗ್ರತ್ಕಾಲದಲ್ಲಿ ಕಮಲಪುಷ್ಪದ ಕುಸುಮರೂಪವಾದ ಅಂತಃಕರಣಕ್ಕೆ ವಿಷಯವಾಸನೆಗಳಿಂದ ಅಲೆಗಳ ಪರಂಪರೆಗಳುಂಟಾಗುತ್ತ, ಬಹಿರ್ವ್ಯಾಪಾರವು ಇದ್ದೇ ಇರುವುದು. ಸ್ವಪ್ನಾವಸ್ಥೆಯು ಜಾಗ್ರತ್ಸುಷುಪ್ತಿಗಳೆರಡರ ಮಧ್ಯದ ಅವಸ್ಥೆಯಾಗಿರುತ್ತದೆ.

ಆದುದರಿಂದ ಅಂತಃಕರಣಕ್ಕೆ ಜಾಗ್ರತ್ಸ್ವಪ್ನಸುಷುಪ್ತ್ಯವಸ್ಥೆಗಳಾದ ಮೂರೂ ಬಂಧಕಗಳಾಗಿವೆ. ಈ ಬಂಧಕಗಳ ಪರಿಹಾರಕ್ಕಾಗಿ ಬುದ್ಧಿವೃತ್ತಿಯು ಮೂಲಾಧಾರಚಕ್ರದ ಮೂಲಕ ಸುಷುಮ್ನಾನಾಡಿಯೊಳಗೆ ಪ್ರವೇಶಿಸಿ ಸಹಸ್ರಾರಕಮಲದಲ್ಲಿ ಲೀನವಾದರೆ. ಪರಮಾತ್ಮಸಾಕ್ಷಾತ್ಕಾರಸ್ವರೂಪವಾದ ಸಮಾಧಿಯು ಬಂದು ಅಂತಃಕರಣಕ್ಕೆ ತಟಸ್ಥಸ್ವಭಾವವು ಬರುವುದು. ಅಂದರೆ ತಾವರೆಹೂವಿನ ಕುಸುಮದ ಚಲನಶಕ್ತಿಯು ತಾವರೆಗಿಡದ ಬುಡದಿಂದ ನಾಳದೊಳಕ್ಕೆ ಪ್ರವೇಶಿಸಿ ನಾಳದೊಳಗಿನಿಂದಲೇ ಕರ್ಣಿಕಾಪ್ರದೇಶವನ್ನು ಸೇರುವುದೇ ಮುಕ್ತಿಯೆನಿಸಿಕೊಳ್ಳುತ್ತದೆ.

ಈ ವಿಚಾರದ ತತ್ವಗಳನ್ನು ಸುಂದರ ಮತ್ತು ಯುದ್ಧಕಾಂಡಗಳಲ್ಲಿ ಅನೇಕ ಶ್ರುತಿ ಪ್ರಮಾಣಗಳೊಡನೆ ವಿವರವಾಗಿ ತಿಳಿಸಿರುತ್ತದೆ. ಅಂತಃಕರಣವನ್ನು ತಾವರೆಕುಸುಮಕ್ಕೆ ಹೋಲಿಸಿ ಮೇಲೆ ಬರೆದಿದೆ. ಚಿತ್ರಪಟದಲ್ಲಿ ಅಂತಃಕರಣವನ್ನು ಪ್ರತ್ಯೇಕವಾಗಿ ಗುರುತು

ಈ ಗೀರು ತಮಸಾನದಿ
(ಅಜ್ಞಾನಾವರಣ.)

೧. ಅಂತಃಕರಣ.
(ಅಯೋಧ್ಯಾಪ್ರದೇಶ.)

೮. ಸಹಸ್ರಾರ ಕಮಲ.

೭ ಚಿತ್ರಕೂಟ (ಆಜ್ಞಾಚಕ್ರ)

೫. ಅತ್ರಿಮಹರ್ಷಿಗಳ ಆಶ್ರಮ
(ವಿಶುದ್ಧಚಕ್ರ.)

೫

೪

೪. ಅಗಸ್ತ್ಯಾಶ್ರಮ
(ಅನಾಹತಚಕ್ರ.)

ಪಂಚವಟಿ.

ಚಕ್ರಗಳ ಈ ಕಡೆ ಗೀರು
ಚಂದ್ರನಾಡಿ
ಆ ಕಡೆ ಗೀರು
ಸೂರ್ಯನಾಡಿ
ಮಧ್ಯದಾರಿ
ಬ್ರಹ್ಮರಂಧ್ರನಾಡಿ.

೩

೩. ಮಣಿಪೂರ ಚಕ್ರ.

೬

೬. ಸ್ವಾಧಿಷ್ಠಾನ ಚಕ್ರ

೨

ಮೂಲಾಧಾರ ಚಕ್ರ.
(ಲಂಕ)

ಮನುಷ್ಯನಲ್ಲಿಯೇ ತಾವರೆಗಿಡವನ್ನು ಹೋಲಿಸಿ ಬರೆದಿರುವ ಚಿತ್ರ.

ಮಾಡಿ ತೋರಿಸಿರುವುದು. ದೇವಸ್ಥಾನದ ಚಿತ್ರುಪಟವನ್ನನುಸರಿಸಿದೆ. ಆದರೆ ತತ್ವತಃ ಎರಡೂ ಒಂದೇ.

ಪ್ರಕೃತದಲ್ಲಿ ಶ್ರೀರಾಮಾದಿಗಳು ಭರದ್ವಾಜಾಶ್ರಮವನ್ನು ಸೇರಿದರೆಂದರೆ—ತಾವರೆ ಕುಸುಮಸ್ವರೂಪವಾದ ಅಂತಃಕರಣದಲ್ಲಿ ಅಲೆಗಳು ಹುಟ್ಟಿ ಪಂಚಕೋಶಸ್ವರೂಪವಾದ ದೇಹದೊಳಗೆ ಪ್ರವೇಶಮಾಡಲು ಪ್ರಾರಂಭವಾಗಿ ಪ್ರಥಮದಲ್ಲಿ ಕುಸುಮದ ಬುಡದಲ್ಲಿರುವ ತಾವರೆಗಿಡದ ನಾಳಕ್ಕೆ ಇಳಿಯುತ್ತದೆ. ಅಂದರೆ ನಾಳದೊಂದಿಗೆ ಕುಸುಮದ ಬುಡವು ಸೇರುವ ಅಂದರೆ ಸಂಧಿಸುವ ಸ್ಥಳಕ್ಕೆ ಬುದ್ಧಿಮನಸ್ಸಿನ ವೃತ್ತಿಗಳು ಪ್ರಸರಣೆಯಾಗಿ ಬರುವುದೇ ಶ್ರೀರಾಮಾದಿಗಳು ಭರದ್ವಾಜಾಶ್ರಮವನ್ನು ಸೇರಿದ್ದಾಗಿದೆ. ಈ ಕುಸುಮದ ಬುಡದಲ್ಲಿರುವ ತಾವರೆನಾಳದ ಸ್ಥಾನೇ ಭರದ್ವಾಜಾಶ್ರಮವಾಗಿರುತ್ತದೆ. ಈ ಭರದ್ವಾಜಾಶ್ರಮವು ಗಂಗಾ ಯಮುನಾ ಸರಸ್ವತೀ ಸಂಗಮಸ್ಥಳದಲ್ಲದೆಯಷ್ಟೆ! ಅಂದರೆ ಕುಸುಮದ ಬುಡವಿರುವ ನಾಳದ ಸ್ಥಳವು ಸೂರ್ಯನಾಡಿ, ಚಂದ್ರನಾಡಿ, ಸುಷುಮ್ನಾನಾಡಿಗಳು ಸಂಗಮವಾಗುವ ಸ್ಥಳವಾಗಿರುತ್ತದೆ. ನದಿಗಳ ಸಂಗಮಸ್ಥಳಗಳಲ್ಲಿ ಎರಡು ನದಿಗಳು ಸೇರಿದರೂ ಮೂರು ನದಿಗಳು ಸೇರುವ ಸ್ಥಳವೆಂದೂ ಮೂರನೆಯ ನದಿಯು ಗುಪ್ತಗಾಮಿನಿಯೆಂದೂ ಸಂಕಲ್ಪಗಳಲ್ಲಿಯೂ ಸ್ಥಳಪುರಾಣಗಳಲ್ಲಿಯೂ ಹೇಳಿದೆ. ಇಲ್ಲಿ ಸರಸ್ವತೀ ನದಿಯು ಸುಷುಮ್ನಾನಾಡಿಯೊಳಗೆಂದರೆ ತಾವರೆದಂಟಿನೊಳಗಿರುವುದರಿಂದ ಗುಪ್ತಗಾಮಿನಿಯೆನಿಸಿಕೊಂಡಿರುವುದು.

ಈ ಗುಪ್ತಗಾಮಿನಿಯಾದ ಸರಸ್ವತೀ ನದಿಯಿರುವ ಸ್ಥಳಕ್ಕೆ ಪ್ರವೇಶಮಾಡಬೇಕಾದರೆ ಮೂಲಾಧಾರಚಕ್ರದ ಮೂಲಕವಾಗಿ ಪ್ರವೇಶಮಾಡಬೇಕು. ಅಂದರೆ ತಾವರೆಗೆಡ್ಡೆಯ ಕೆಳಗಿನಿಂದ ನಾಳದೊಳಕ್ಕೆ ಪ್ರವೇಶಿಸಬೇಕು. ಈ ವಿಚಾರಕ್ಕೆ ಗೆಡ್ಡೆಸಹಿತವಾದ ತಾವರೇಗಿಡದ ಚಿತ್ರಪಟವನ್ನು ಸುಂದರಕಾಂಡದಲ್ಲಿ ಕೊಟ್ಟು ವಿವರಿಸಿರುತ್ತದೆ.

ಗಂಗಾ ಯಮುನಾ ಸಂಗಮಸ್ಥಳವೆಂದರೆ-ಸೂರ್ಯ ಚಂದ್ರನಾಡಿಗಳು ಸಂಗಮವಾಗುವ ಸ್ಥಳವೆಂದು ಮೇಲೆ ತಿಳಿಸಿತು. ಈ ಸೂರ್ಯ ಚಂದ್ರನಾಡಿಗಳಿಗೆ ಮಧ್ಯದಲ್ಲಿರುವ ಸುಷುಮ್ನಾನಾಡಿಯ ಒಳಗೆ ಅಗ್ನಿಯು ಇದೆ. ಈರೀತಿ ಸುಷುಮ್ನೆಯೊಳಗೆ ಅಗ್ನಿಯಿರುವುದೆಂದೂ, ಈ ಸುಷುಮ್ನೆಯ ಶಿಖೆಯಲ್ಲಿರುವ ಸಹಸ್ರಾರಕಮಲವು ನಮ್ಮ ದೇಹದಲ್ಲಿ ಯಾವ ಉಪಾಧಿಗಳೂ ಇಲ್ಲದ ಪರಮಾತ್ಮಸ್ಥಾನವೆಂತಲೂ ಶ್ರುತ್ಯಾಧಾರವಿರುವುದು. ಈ ತಾತ್ಪರ್ಯಕ್ಕೆ "ತಸ್ಯಾಶ್ಶಿಖಾಯಾಮಧ್ಯೇ ಪರಮಾತ್ಮಾವ್ಯವಸ್ಥಿತಃ" ಎಂಬ ಶ್ರುತಿವಚನವಿರುತ್ತದೆ. ಸುಷುಮ್ನೆಯೊಳಗೆ ಅಗ್ನಿಯು ಅಂತರ್ಗತವಾಗಿರುವುದು. ಆದುದರಿಂದ

ಭರದ್ವಾಜಾಶ್ರಮವು ತಾವರೆನಾಳದ ಹೊರಪ್ರಾಕಾರದಲ್ಲಿದೆ. ಬುದ್ಧಿಮನಸ್ಸಿನ ವೃತ್ತಿಗಳು ದೇಹದಲ್ಲಿ ವ್ಯಾಪಿಸಲು ಸುಷುಮ್ನಾನಾಡಿಯ ಹೊರಭಾಗದಲ್ಲಿರುವ ಆಜ್ಞಾಚಕ್ರದಲ್ಲಿ ಪ್ರಾರಂಭವಾಗಿ ಮುಂದೆ ವಿಶುದ್ಧ ಮುಂತಾದ ಚಕ್ರಗಳಲ್ಲಿ ಪ್ರವೇಶಿಸುವುದೇ ಹೊರತು ಸುಷುಮ್ನೆಯೊಳಗೆ ದೇಹವ್ಯಾಪಾರಕಾಲದಲ್ಲಿ ಪ್ರವೇಶಿಸುವುದಿಲ್ಲ. ಸಮಾಧಿಕಾಲದಲ್ಲಿ ಹೊರತು ಉಳಿದ ಕಾಲಗಳಲ್ಲಿ ಬುದ್ಧಿಮನಸ್ಸಿನವೃತ್ತಿಗಳು ಸುಷುಮ್ನೆಯೊಳಗೆ ಪ್ರವೇಶಿಸುವುದಿಲ್ಲ. ಸಮಾಧಿಯ ಪರಿಪಕ್ವಾವಸ್ಥೆಯಲ್ಲಿ ಬುದ್ಧಿಮನಸ್ಸಿನವೃತ್ತಿಗಳು ಸುಷುಮ್ನಾನಾಡಿಯೊಳಗೆ ಪ್ರವೇಶಿಸಿ, ಸೂರ್ಯ ಚಂದ್ರರ ಪ್ರಕಾಶವನ್ನು ಊರ್ಧ್ವಮುಖವಾಗಿ ಮಾಡಿಕೊಂಡು, ಸುಷುಮ್ನಾಂತರ್ಗತವಾದ ಅಗ್ನಿಯೊಡನೆ ಸೇರುವ ಸ್ಥಳವೇ, ಭರದ್ವಾಜಾಶ್ರಮಸ್ವರೂಪವಾದ ಪ್ರಯಾಗದ ತತ್ವವಾಗಿರುತ್ತದೆ.

ಭರದ್ವಾಜಾಶ್ರಮದ ತತ್ವವನ್ನು ಮತ್ತೊಂದು ವಿಧವಾಗಿಯೂ ಈ ಕೆಳಗೆ ತಿಳಿಸಿರುತ್ತದೆ. ಭರದ್ವಾಜಾಶ್ರಮದ ತತ್ವವು ಈಶ್ವರತ್ವಕ್ಕೂ ಜೀವತ್ವಕ್ಕೂ ಮಧ್ಯಸ್ಥಳವಾದ ಬಿಂದು ಅಥವಾ ಬೈಂದವಸ್ಥಾನವೆಂದು ಮೇಲೆ ತಿಳಿಸಿರುತ್ತಷ್ಟೆ! ಭರದ್ವಾಜಾಶ್ರಮದ ತತ್ವವು ಬಿಂದು ಅಥವಾ ಬೈಂದವಸ್ಥಾನವು ಹೇಗಾಗುವುದೆಂದರೆ—ತಾವರೆ ಹೂವಿನ ಕುಸುಮಗಳ ಬುಡವಿರತಕ್ಕ ನಾಳದ ಸ್ಥಾನವು ಹೂವಿನ ಮಧ್ಯದಲ್ಲಿರುವ ಪರಮಾತ್ಮಸ್ವರೂಪವಾದ ಕರ್ಣಿಕೆಗೂ ಕೆಳಗಡೆ ಇರುವ ನಾಳಕ್ಕೂ ಮಧ್ಯೆ ಇರುವುದು. ಇದರಂತೆ ನಾದ ಬಿಂದು ಕಳೆಗಳಲ್ಲಿ ಬಿಂದುಸ್ಥಾನವು ಒಂದುಕಡೆ ಓಂಕಾರಶಬ್ದವನ್ನೂ ಮತ್ತೊಂದುಕಡೆ ಕಳೆಯನ್ನೂ ಧರಿಸಿಕೊಂಡು, ಮಧ್ಯದಲ್ಲಿರುತ್ತದೆ. ಅಂದರೆ ಓಂಕಾರಶಬ್ದವೇ ಸ್ಥೂಲದೇಹದ ಚೈತನ್ಯಗಳ ಸಮುದಾಯ; ಕಳೆಯೇ ಸರ್ವವ್ಯಾಪಕವಾಗಿ ಸಾಕ್ಷಿರೂಪವಾಗಿ ಪ್ರಕಾಶಪಡಿಸುತ್ತಿರುವ ಈಶ್ವರಸೋಪಾನ. ಈ ಬಿಂದುಸ್ಥಾನವು ಒಂದುಕಡೆ ಈಶ್ವರಸೋಪಾನವನ್ನೂ, ಮತ್ತೊಂದುಕಡೆ ಸ್ಥೂಲದೇಹದ ಚೈತನ್ಯಗಳ ಸಮುದಾಯವನ್ನೂ, ಧರಿಸಿಕೊಂಡಿರುವುದರಿಂದ ಈ ಬಿಂದುಸ್ವರೂಪಕ್ಕೆ ಭರದ್ವಾಜಾಶ್ರಮವೆಂಬ ತತ್ವ. ಈ ತಾವರೇಪುಷ್ಪದಲ್ಲಿ ಅನ್ವಯಮಾಡಿರುವುದಕ್ಕೆ ಸರಿಯಾಗಿ ಭ್ರೂಮಧ್ಯದಲ್ಲಿ ಬಿಂದುಸ್ಥಾನವಿರುವುದೆಂದೂ ಈ ಬಿಂದುವಿನಮೇಲೆ ಪರಮಾತ್ಮನಿರುವನೆಂತಲೂ ಶ್ರೀಶಂಕರಭಗವತ್ಪಾದರವರ ಸೌಂದರ್ಯಲಹರಿವ್ಯಾಖ್ಯಾನದಲ್ಲಿ ಹೇಳಿದೆ.

ನಮ್ಮಲ್ಲಿ ಭ್ರೂಮಧ್ಯದಲ್ಲೊಂದು, ಮೂಲಾಧಾರಚಕ್ರದಲ್ಲೊಂದು, ಬಿಂದುಪೀಠಗಳಿರುವುವು. ಮೂಲಾಧಾರದಲ್ಲಿರುವುದರ ವಿಚಾರವು ಯುದ್ಧಕಾಂಡದಲ್ಲಿ ಬರುತ್ತದೆ. ಭ್ರೂಮಧ್ಯದಲ್ಲಿರುವ ಬಿಂದುಪೀಠವೇ ಅಮೃತಪೀಠವಾಗಿರುವುದು. ಮುಖ್ಯವಾಗಿ ಶ್ರೀರಾಮಾದಿಗಳು ಭರದ್ವಾಜಾಶ್ರಮವನ್ನು ಸೇರಿದರೆಂದರೆ— ತಾವರೆಗಿಡದ ನಾಳ

ಮತ್ತು ಹೂವಿನ ಕುಸುಮಗಳು ಸೇರುವ ಸ್ಥಳವಾದ ನಾಳದ ಹೊರಗಿನ ಪ್ರದೇಶಕ್ಕೆ ಬುದ್ಧಿಮನಸ್ಸಿನ ವೃತ್ತಿಗಳು ಪ್ರಸರಿಸಿಕೊಂಡು ಬಂದುವೆಂಬ ತಾತ್ಪರ್ಯವಾಗಿರುತ್ತದೆ.

**ರಾ||** ಶ್ರೀರಾಮಾದಿಗಳು ಭರದ್ವಾಜಾಶ್ರಮವನ್ನು ಬಿಟ್ಟು ಚಿತ್ರಕೂಟಕ್ಕೆ ಹೊರಡ ಲುದ್ಯುಕ್ತರಾಗಲು, ಭರದ್ವಾಜರು ಶ್ರೀರಾಮನನ್ನು ಕುರಿತು ಎಲೈ ಶ್ರೀರಾಮನೆ, ನೀವು ಯಮುನಾನದಿಯನ್ನು ದಾಟಿಹೋಗುವ ದಾರಿಯಲ್ಲಿ ಬಹುಶಾಖೋಪಶಾಖೆಗಳಿಂದ ಕೂಡಿದ ಒಂದು ಆಲದವೃಕ್ಷವಿರುತ್ತದೆ. ಇದಕ್ಕೆ ಶ್ಯಾಮವೆಂದು ಹೆಸರು. ಸೀತಾ ದೇವಿಯು ಇದಕ್ಕೆ ನಮಸ್ಕರಿಸಿ ವನವಾಸದಿಂದ ಪುನಃ ಕರೆಸಿಕೊಳ್ಳುವಹಾಗೆ ಪ್ರಾರ್ಥನೆ ಮಾಡಲೆಂದು ಹೇಳಿದರು.

**ತತ್ವ||** ಬುದ್ಧಿಮನಸ್ಸಿನ ವೃತ್ತಿಗಳು ಇನ್ನು ಮುಂದೆ ವಿಜ್ಞಾನಮಯ ಮುಂತಾದ ಕೋಶಗಳ ಸ್ವರೂಪದಲ್ಲಿರುವ ದೇಹದೊಳಗೆ ಪ್ರವೇಶವಾಡಬೇಕಾಗಿದೆ. ಈ ದೇಹವು ಬಹುಶಾಖೋಪಶಾಖೆಗಳುಳ್ಳ ವಟವೃಕ್ಷದಂತೆ ಅನೇಕಾನೇಕ ನಾಡಿಗಳು ಮತ್ತು ಅಂಗ ಗಳುಳ್ಳದ್ದಾಗಿಯೂ ಅನೇಕ ವ್ಯಾಪಾರಗಳುಳ್ಳದ್ದಾಗಿಯೂ ಇವೆ.

ವಟವೃಕ್ಷವೆಂದರೆ "ಸ್ವಸ್ಥಾನಂ ವೇಷ್ಟಯತೀತಿ ವಟಃ ವಟ ವೇಷ್ಟನೆ" ಬಿಳಲುಗಳಿಂದ ತನ್ನ ಸ್ಥಾನವನ್ನು ಮುಚ್ಚಿಕೊಳ್ಳುವುದು. ಇದರಂತೆ ಆತ್ಮನಲ್ಲಿ ಉತ್ಪನ್ನವಾದ ಪಂಚಕೋಶ ಸ್ವರೂಪವಾದ ದೇಹವು ಆತ್ಮನನ್ನೇ ಮುಚ್ಚಿಕೊಂಡಿರುವುದು. ಇಂತಹ ಶರೀರವು ಜೀವನಿಗೆ ಸಮಸ್ತವ್ಯಾಪಾರಗಳನ್ನೂ ಮಾಡಲು ಆಶ್ರಯವಾದುದು. ಈರೀತಿ ಇರುವು ದೆಂದು ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೯೨ನೆಯ ಶ್ಲೋಕದಲ್ಲಿ,

**ಸರ್ವೋಽಪಿ ಬಾಹ್ಯಸಂಸಾರಃ ಪುರುಷಸ್ಯ ಯದಾಶ್ರಯಃ |**
**ವಿದ್ಧಿ ದೇಹಮಿದಂ ಸ್ಥೂಲಂ ಗೃಹವದ್ಗೃಹಮೇಧಿನಃ ||**

ತಾ|| ಲೋಕದಲ್ಲಿ ಹೊರಗೆ ಕಾಣಬರುವ ಬಗೆಬಗೆಯಾದ ಸಂಸಾರವೆಲ್ಲವೂ ಈ ಶರೀರವನ್ನು ಆಶ್ರಯಿಸಿಕೊಂಡಿರುವುದರಿಂದ ಬಂದಿರುತ್ತದೆ. ಆದುದರಿಂದಲೇ ಗೃಹಸ್ಥಾ ಶ್ರಮದಲ್ಲಿರುವಾತನಿಗೆ ಸಂಸಾರದೊಡಗೂಡಿದ ಮನೆಯು ಹೇಗೆ ಆಸರೆಯೋ ಹಾಗೆ ಜೀವನಿಗೆ ಈ ಶರೀರವು ಆಸರೆಯಾಗಿರುವುದೆಂದು ತಿಳಿ, ಎಂದು ಹೇಳಿರುವರು.

ಇಂತಹ ಸ್ವರೂಪವಾದ ದೇಹದ ತತ್ವವೇ ಶ್ಯಾಮ ಎಂಬ ವಟವೃಕ್ಷ. ಈ ದೇಹಸ್ವರೂಪ ಮತ್ತು ವ್ಯಾಪಾರವು ಶ್ಯಾಮವೆಂದರೆ ಕಪ್ಪು ಅಥವಾ ಪ್ರತಿಭೆಯಿಲ್ಲದ್ದು. ಅಂದರೆ ಪ್ರಕಾಶಮಾನವಾದ ಶುದ್ಧಸತ್ವಗುಣವಿಲ್ಲದೆ ಅವಿದ್ಯೆಯ ವ್ಯಾಪಾರವುಳ್ಳದ್ದು. ಇಂತಹ ಅವಿದ್ಯೆಯ ವ್ಯಾಪಾರವುಳ್ಳ ದೇಹದೊಳಗೆ ಶುದ್ಧಸತ್ವಪ್ರಧಾನವಾಯೆಯಾದ

ಸೀತಾದೇವಿಯು ಪ್ರವೇಶಿಸಿದರೆ, ಮಲಿನವಾಯೆಯೆಂದರೆ ಅವಿದ್ಯೆಯು ಅಧೀನವಾಗ ಬೇಕಾಗುವುದು. ಆದುದರಿಂದ ಇಂತಹ ಸ್ಥೂಲದೇಹದ ಅಭಿಮಾನದೇವತೆ ಅಥವಾ ಸಗುಣಬ್ರಹ್ಮಚೈತನ್ಯಸ್ವರೂಪಳಾದ ಸರಸ್ವತೀದೇವಿಗೆ ನಮಸ್ಕಾರವಾಡಬೇಕೆಂಬ ತತ್ವದ ಸೂಚನೆಯೇ ಭರದ್ವಾಜರು ಹೇಳಿರುವ ಶ್ಯಾಮನೆಂಬ ವಟವೃಕ್ಷಕ್ಕೆ ನಮಸ್ಕಾರವಾಡು ವುದರ ತತ್ವವಾಗಿರುತ್ತದೆ. ದೇಹವು ಸುಷುಮ್ನಾಂತರ್ಗತವಾದ ಓಂಕಾರದಿಂದ ಸೃಷ್ಟಿ ಯಾಗಿರುತ್ತದೆ. ಇಂತಹ ಸಗುಣಬ್ರಹ್ಮ ಅಥವಾ ಓಂಕಾರಸ್ವರೂಪಳಾದ ದೇವಿಯನ್ನು ಶ್ಯಾಮಲಾ ಎಂಬದಾಗಿ ಕಾಳಿದಾಸನು ಶ್ಯಾಮಲಾದಂಡಕದಲ್ಲಿ ಸ್ತೋತ್ರವಾಡಿರುತ್ತಾನೆ. ಆದುದರಿಂದ ಶ್ಯಾಮನೆಂಬ ವಟವೃಕ್ಷವೆಂದರೆ ಸಗುಣಬ್ರಹ್ಮವೆಂಬ ತಾತ್ಪರ್ಯ. ಅಲ್ಲದೆ ನಾದ ಬಿಂದು ಕಳೆಗಳಲ್ಲಿ ಭರದ್ವಾಜಾಶ್ರಮವು ಬಿಂದುಸ್ವರೂಪವೆಂದು ಮೇಲೆ ತಿಳಿಸಿತಷ್ಟೆ! ಈ ಬಿಂದು ಮತ್ತು ಓಂಕಾರನಾದದಿಂದ ಉತ್ಪತ್ತಿಯಾಗಿರುವ ಕೋಶಸ್ವರೂಪವಾದ ದೇಹದೊಳಗೆ ಬುದ್ಧಿಮನಸ್ಸಿನ ವೃತ್ತಿಗಳು ವ್ಯಾಪಿಸುವುದೇ ಶ್ಯಾಮನೆಂಬ ವಟವೃಕ್ಷದ ತತ್ವವಾಗಿರುವುದು. ಇಂತಹ ದೇಹಕ್ಕೆ ಇಳಿಯುವ ಮಾರ್ಗವಾವುದೆಂದರೆ ಯಮುನಾ ನದಿಯ ತತ್ವದಲ್ಲಿರುವ ಚಂದ್ರನಾಡಿಯಾಗಿರುತ್ತದೆ.

ಭರದ್ವಾಜಮಹರ್ಷಿಗಳು ಹೇಳಿದಂತೆ ಶ್ರೀರಾಮಾದಿಗಳು ಯಮುನಾನದಿಯನ್ನು ದಾಟಿದರೆಂದರೆ—ಬುದ್ಧಿಮನಸ್ಸಿನ ವೃತ್ತಿಗಳು ಚಂದ್ರನಾಡಿಯಲ್ಲಿಳಿದು ವಿಜ್ಞಾನಮಯ ಕೋಶದ ತತ್ವವಾದ ಚಿತ್ರಕೂಟಕ್ಕೆ ಪ್ರಯಾಣವಾಡಿದರು.

ಭರದ್ವಾಜಾಶ್ರಮದ ತತ್ವವು ಅತ್ಯಂತ ಗಹನವಾದ ವಿಚಾರ. ಶ್ರೀರಾಮಾದಿಗಳು ಅಯೋಧ್ಯೆಯಿಂದ ಹೊರಟು ಭರದ್ವಾಜಾಶ್ರಮವನ್ನು ಸೇರುವವರೆಗೆ ಇರುವ ಕಥೆಯ ತತ್ವಗಳು ನಮ್ಮಲ್ಲಿ ಭ್ರೂಮಧ್ಯದಿಂದ ಮೇಲಕ್ಕೆ ಶಿರಸ್ಸಿನಲ್ಲಿ ಅಪಂಚೀಕೃತಾಕಾಶವೆನಿಸಿ ಕೊಂಡು ತೇಜೋರೂಪಿನಲ್ಲಿರುವುದರಿಂದ ತತ್ವಗಳ ಸ್ಥಳನಿರ್ದೇಶವಾಡಿ ವಿವರಿಸುವುದು ಕಷ್ಟವಾಗಿರುವುದು. ಮುಂದಿನ ಚಿತ್ರಕೂಟದ ತತ್ವಗಳಿಂದ ನಮ್ಮ ದೇಹದಲ್ಲಿ ಸ್ಥಳನಿರ್ದೇಶ ವಾಡಿ ತಕ್ಕಮಟ್ಟಿಗೆ ತಿಳಿದುಕೊಳ್ಳಲು ಅನುಕೂಲವಿರುವುದು.

ಈ ಪ್ರಕರಣದಲ್ಲಿ ಮನುಷ್ಯದೇಹದಲ್ಲಿ ತಾವರೆಕಮಲವಿರುವ ಚಿತ್ರಪಟಕ್ಕೆ ಅನು ಸಾರವಾಗಿ ಸುಂದರಕಾಂಡದಲ್ಲಿ ಅಕ್ಷಕುಮಾರನ ನಿಗ್ರಹದ ಪ್ರಕರಣದಲ್ಲಿ ದೇವಸ್ಥಾನದ ಚಿತ್ರಪಟವನ್ನು ಕೊಟ್ಟು ವಿವರಿಸಿರುವುದು. ಅಲ್ಲದೆ ಸೀತಾದೇವಿಯು ಅಗ್ನಿಪ್ರವೇಶ ವಾಡಿದ ಸಂದರ್ಭದಲ್ಲಿಯೂ ಮನುಷ್ಯದೇಹದ ಚಿತ್ರಪಟವನ್ನು ಕೊಟ್ಟು ವಿವರಣೆ ವಾಡಿರುವುದರಲ್ಲಿ ಈ ಭರದ್ವಾಜಾಶ್ರಮ ಪ್ರಕರಣದ ತತ್ವವು ತಕ್ಕಮಟ್ಟಿಗೆ ವಿಶದ ವಾಗುವುದು.

## ವಿಜ್ಞಾನಮಯ ಕೋಶ

## ೭ನೆಯ ಪ್ರಕರಣ

**ಶ್ರೀರಾಮನು ಚಿತ್ರಕೂಟವನ್ನು ಪ್ರವೇಶಮಾಡಿ, ಪರ್ವತದಲ್ಲಿಯೂ ಮಂದಾಕಿನೀ ನದಿಯಲ್ಲಿಯೂ ಸೀತೆಯೊಡನೆ ವಿಹರಿಸಿದುದು.**

**ಬುದ್ಧಿಮನಸ್ಸಿನ ವೃತ್ತಿಗಳು ವಿಜ್ಞಾನಮಯಕೋಶಕ್ಕಿಳಿಯುವ ವಿಚಾರ. ವಿಜ್ಞಾನಮಯಕೋಶದ ಸ್ವರೂಪ. ಬುದ್ಧಿಯಲ್ಲಿ "ದೇಹೋಹಂ" ಎಂಬ ಪ್ರತ್ಯಯ ಉದಯವಾಗುವ ವಿಚಾರ.**

**ರಾ॥** ಶ್ರೀರಾಮಾದಿಗಳು ಭರದ್ವಾಜಾಶ್ರಮವನ್ನು ಬಿಟ್ಟು ಚಿತ್ರಕೂಟಪರ್ವತವನ್ನು ಸೇರಿ ವಾಲ್ಮೀಕರ ಅನುಮತಿಯಂತೆ ಅಲ್ಲಿ ವಾಸವಾಗಿದ್ದರು.

**ತತ್ವ॥** ಪ್ರತಿಬಿಂಬಚೈತನ್ಯವು ಜೀವತ್ವವನ್ನು ಪಡೆಯಲು ಆನಂದಮಯಕೋಶದಿಂದ ಬಿಂದುಸ್ವರೂಪಕ್ಕಿಳಿದು ಈಗ ವಿಜ್ಞಾನಮಯಕೋಶವೆಂದರೆ ಆಜ್ಞಾಚಕ್ರಕ್ಕೆ ಇಳಿಯುವುದೇ ಚಿತ್ರಕೂಟಪರ್ವತಕ್ಕೆ ಪ್ರವೇಶಮಾಡಿರುವ ತತ್ವವಾಗಿರುತ್ತದೆ. ಹೇಗೆಂದರೆ ಚಿತ್ರಕೂಟವೆಂದರೆ "ಚಿತ್ರಯತ ಇತಿ ಚಿತ್ರಂ (ಚಿತ್ರಚ್ –ಆಶ್ಚರ್ಯೇ) ಆಶ್ಚರ್ಯವಾಗುದೆಂದರ್ಥ. ಕೂಟವತ್ ಶಿಖರವತ್ ಸ್ಥಿತಂ ಕೂಟಂ" ಅಂದರೆ ಚಿತ್ರ, ಅಥವಾ ಆಶ್ಚರ್ಯಕರವಾಗಿರುವ ಶಿಖರವಾಗಿರುತ್ತದೆ. ಬೆಟ್ಟಗಳಲ್ಲಿ ಎಲ್ಲಾ ಪ್ರದೇಶಗಳಿಗಿಂತಲೂ ಎತ್ತರವಾಗಿರುವ ಸ್ಥಳಕ್ಕೆ ಶಿಖರವೆಂದು ಹೆಸರು. ಇದರಂತೆ ದೇಹ ಮತ್ತು ದೇಹವ್ಯಾಪಾರಗಳಲ್ಲಿ ವಿಜ್ಞಾನಮಯಕೋಶವು ಶಿಖರದೋಪಾದಿಯಲ್ಲಿ ಮೇಲ್ಭಾಗದಲ್ಲಿರುತ್ತದೆ. ಅಲ್ಲದೆ ನಮ್ಮ ದೇಹವನ್ನೇ ಚಿತ್ರಕೂಟಪರ್ವತಕ್ಕೆ ಹೋಲಿಸಿ ಆ ಚಿತ್ರಕೂಟಪರ್ವತದ ಶಿಖರವನ್ನು ವಿಜ್ಞಾನಮಯಕೋಶಕ್ಕೆ ಹೋಲಿಸಬಹುದು. ಹೇಗೆಂದರೆ—ದೇಹವು ಅನೇಕ ಚಿತ್ರವಿಚಿತ್ರತರವಾದ ಶಕ್ತಿಗಳಿಂದಲೂ, ವ್ಯಾಪಾರಗಳಿಂದಲೂ ಕೂಡಿಕೊಂಡಿರುವುದರಿಂದ, ದೇಹಕ್ಕೆ ಚಿತ್ರಕೂಟಪರ್ವತವೆಂದು ಅನ್ವಯಮಾಡಬಹುದು ಪರ್ವತವು ಭೂತತ್ವವಾಗಿರುವಂತೆ ನಮ್ಮ ದೇಹವೂ ಭೂತತ್ವಪ್ರಧಾನವಾದುದು ಆದುದರಿಂದ ನಮ್ಮ ದೇಹಕ್ಕೆ ಚಿತ್ರಕೂಟಪರ್ವತವೆಂದು ಹೇಳಬಹುದು. ಇಂತಹ ದೇಹವ್ಯಾಪಾರಕ್ಕೆ ಶಿಖರಪ್ರಾಯವಾದ ಸ್ಥಳವೇ ವಿಜ್ಞಾನಮಯಕೋಶವು. ಮುಖ್ಯತಾತ್ಪರ್ಯವೇನೆಂದರೆ, ಜೀವನ ವ್ಯಾಪಾರಕ್ಕೆ ವಿಜ್ಞಾನಮಯಕೋಶದ ಕಾರ್ಯವು ಶಿಖರದೋಪಾದಿಯಲ್ಲಿರುವುದೆಂದರೆ ಅತ್ಯಂತ ಪ್ರಾಶಸ್ತ್ಯವನ್ನು ಹೊಂದಿರುತ್ತದೆ. ಶ್ರೀರಾಮಾದಿಗಳು ಚಿತ್ರಕೂಟವನ್ನು ಸೇರಿದರೆಂದರೆ—ಬುದ್ಧಿಮನಸ್ಸಿನ ವೃತ್ತಿಗಳು ಜೀವತ್ವದ ವ್ಯಾಪಾರಕ್ಕೆ ಪ್ರಾರಂಭಮಾಡಲು ವಿಜ್ಞಾನಮಯಕೋಶಕ್ಕಿಳಿದುವೆಂಬ ತಾತ್ಪರ್ಯವಾಗಿ

ರುತ್ತದೆ. ಇಂತಹ ಶಿಖರದೋಪಾದಿಯಲ್ಲಿರುವ ವಿಜ್ಞಾನಮಯಕೋಶದ ಕಾರ್ಯಗಳು ಮುಂದೆ ವಿವರಿಸಲ್ಪಡುವುವು.

ಶ್ರೀರಾಮಾದಿಗಳು ಚಿತ್ರಕೂಟಪರ್ವತಕ್ಕೆ ಬಂದು ವಾಲ್ಮೀಕರನ್ನು ಕಂಡು ಅವರ ಅನುಮತಿಯಂತೆ ಅಲ್ಲಿ ವಾಸವಾಗಿದ್ದರಷ್ಟೆ! ಚಿತ್ರಕೂಟಪರ್ವತದಲ್ಲಿರುವ ವಾಲ್ಮೀಕರ ತತ್ವವೇನೆಂದರೆ—ವಲ್ಮೀಕ ಶಬ್ದಕ್ಕೆ "ವಲಂತಿ ಚಲಂತಿ ಪ್ರಾಣಿನೋತ್ರ ವಲ್ಮೀಕಂ (ವಲ ಸಂವರಣೆ ಸಂಚರಣೇಚ) ಪ್ರಾಣಿಗಳು ಇದರಲ್ಲಿ ಸಂಚರಿಸುವುವು" ಪ್ರಾಣಿಗಳು ಯಾವುದರಲ್ಲಿ ಸಂಚಾರವಮಾಡುವರೋ ಅದರಲ್ಲೆಂದರೆ, ದೇಹದಲ್ಲಿ ಜೀವನು ವ್ಯಾಪಾರವಮಾಡುತ್ತಾನೆ. ಇಂತಹ ದೇಹದಲ್ಲಿ ಹುಟ್ಟುವ ಸಕಲವ್ಯಾಪಾರಗಳೂ ವಿಜ್ಞಾನ ಸ್ವರೂಪವಾಗಿರುತ್ತವೆ. ಆದುದರಿಂದ ವಲ್ಮೀಕವೇ ದೇಹವಾಗಿಯೂ, ಈ ವಲ್ಮೀಕ (ಹುತ್ತ) ಸ್ವರೂಪವಾದ ದೇಹದಲ್ಲಿ ಸಂಚರಿಸುವ ಕಾರ್ಯವೇ ವಿಜ್ಞಾನಸ್ವರೂಪ ವಾದುದರಿಂದ ವಾಲ್ಮೀಕರೆಂದರೆ, ವಿಜ್ಞಾನದ ತತ್ವದವರಾಗಿರುತ್ತಾರೆ. ಇಂತಹ ವಿಜ್ಞಾನ ಸ್ವರೂಪದ ವಾಲ್ಮೀಕರು ಜ್ಞಾನಸ್ವರೂಪರಾದ ನಾರದರಿಂದ ತಾವೂ ಜ್ಞಾನವಂತರಾದರು. ಅಂದರೆ ಜ್ಞಾನಸ್ವರೂಪನಾದ ಪರಮಾತ್ಮನಲ್ಲಿ ವಿಜ್ಞಾನಸ್ವರೂಪವಾದ ದೇಹವ್ಯಾಪಾರಗಳು ಲಯವನ್ನು ಹೊಂದುವುವೆಂಬ ತಾತ್ಪರ್ಯವಾಗಿರುತ್ತದೆ.

ಶ್ರೀರಾಮಚಂದ್ರನು ತನ್ನ ಚರಿತ್ರೆಯಲ್ಲಿ ವಿಜ್ಞಾನದ ಸ್ವರೂಪದ ತತ್ವವನ್ನು ತೋರಿಸಿ ಅನಂತರ ಜ್ಞಾನಮಾರ್ಗದ ತತ್ವವನ್ನು ತೋರಿಸಿರುವನು. ಹೇಗೆಂದರೆ ಜೀವನಲ್ಲಿ "ದೇಹೋಹಂ (ಶರೀರ ನಾನು)" ಎಂಬ ಜ್ಞಾನೋದಯವಾಗಿ ಈ ಜ್ಞಾನದಿಂದ ದೇಹವ್ಯಾಪಾರವನ್ನು ಮಾಡಲು ಪ್ರಾರಂಭಮಾಡಿ ಬಂಧನವನ್ನು ಹೊಂದುತ್ತಾನೆ. ಬಂಧನದ ಬಿಡುಗಡೆಗೆ "ದೇಹೋಹಂ" ಎಂಬ ಜ್ಞಾನವನ್ನು ತ್ಯಜಿಸಿ "ಅಹಂ ಬ್ರಹ್ಮಾಸ್ಮಿ" ಎಂಬ ಜ್ಞಾನವನ್ನು ಹೊಂದಿ ಪುನಃ ಈಶ್ವರತ್ವವನ್ನು ಪಡೆಯುತ್ತಾನೆ. ಇವುಗಳ ವಿಚಾರಗಳು ಮುಂದಿನ ಪ್ರಕರಣಗಳಲ್ಲಿ ಬರುವುವು. ಮೇಲಿನ ತತ್ವಾರ್ಥವನ್ನನುಸರಿಸಿ ಚಿತ್ರಕೂಟದಲ್ಲಿ ವಾಲ್ಮೀಕಿಮಹರ್ಷಿಗಳಾಶ್ರಮವೆಂದರೆ ವಿಜ್ಞಾನಮಯಕೋಶಸ್ವರೂಪವೆಂಬ ತಾತ್ಪರ್ಯವಾಗಿರುತ್ತದೆ.

ರಾ|| ಶ್ರೀರಾಮಾದಿಗಳು ಚಿತ್ರಕೂಟಪರ್ವತದಲ್ಲಿದ್ದಾಗ ಒಂದು ಸಮಯದಲ್ಲಿ ಶ್ರೀರಾಮನು ಸೀತಾದೇವಿಗೆ ಸಂತೋಷವನ್ನುಂಟುಮಾಡಬೇಕೆಂದು ಪರ್ವತದಲ್ಲಿ ದೃಷ್ಟಿಯನ್ನಿರಿಸಿ ಸೀತಾದೇವಿಯನ್ನು ಕುರಿತು "ಎಲೌ! ಶೋಭನಾಂಗಿಯೇ! ಚಿತ್ರಕೂಟ ಪರ್ವತವನ್ನು ನೋಡಿದ ನನ್ನ ಮನಸ್ಸಿಗೆ ರಾಜ್ಯವನ್ನು ಪರಿತ್ಯಾಗ ಮಾಡಿದ ದುಃಖವೂ, ಅಯೋಧ್ಯಾಪಟ್ಟಣದಲ್ಲಿ ಅನೇಕಮಂದಿ ಸ್ನೇಹಿತರನ್ನೂ, ಬಂಧುಗಳನ್ನೂ ಬಿಟ್ಟು ಬಂದ ದುಃಖವೂ ಮರೆತುವು. ಈ ಚಿತ್ರಕೂಟಪರ್ವತದ ಸೌಂದರ್ಯವು ಸ್ವರ್ಗಲೋಕವನ್ನು

ಅತಿಕ್ರಮಿಸಿರುವುದು" ಎಂದು ಅನೇಕ ವಿಧವಾಗಿ ಚಿತ್ರಕೂಟವನ್ನೂ ಮಂದಾಕಿನೀ ನದಿಯನ್ನೂ ವರ್ಣಿಸುತ್ತಾ "ಎಲೌ ದೇವಿಯೇ! ನಿನ್ನನ್ನು ಕೂಡಿಕೊಂಡು ಲಕ್ಷ್ಮಣ ಸಮೇತನಾಗಿ ಈ ಸ್ಥಳದಲ್ಲಿಯೇ ಸುಖವಾಗಿರುವೆನು" ಎಂದು ಹೇಳಿದನು.

**ತತ್ವ||** ಈ ಮೇಲಿನ ಅಂಶದ ತತ್ವಾರ್ಥಗಳು ವಿಜ್ಞಾನಮಯಕೋಶದಲ್ಲಿ ನಡೆಯುವ ಕಾರ್ಯಗಳಾಗಿರುತ್ತವೆ. ಶ್ರೀರಾಮನು ಚಿತ್ರಕೂಟಪರ್ವತದ ಸೌಂದರ್ಯಕ್ಕೆ ಮೆಚ್ಚಿದುದೇ ಬುದ್ಧಿವೃತ್ತಿಯಲ್ಲಿ "ದೇಹೋಽಹಂ" ಎಂಬ ಜ್ಞಾನೋದಯದ ತತ್ವವಾಗಿರುವುದು. ರಾಜ್ಯಪರಿತ್ಯಾಗದ ಮತ್ತು ಅಯೋಧ್ಯೆಯಲ್ಲಿನ ಇಷ್ಟಮಿತ್ರರ ಅಗಲಿಕೆಯ ದುಃಖವು ಮರೆತುಹೋಯಿತೆಂದು ಶ್ರೀರಾಮನು ಹೇಳಿರುವುದೇ ಅಖಂಡವಾದ ಈಶ್ವರ ಸ್ವರೂಪಾನವನ್ನು ಮರೆತುಹೋಗಿ ಖಂಡವಾದ ದೇಹಜ್ಞಾನೋದಯವಾದ ತತ್ವವಾಗಿರುತ್ತದೆ. ಸೀತಾಲಕ್ಷ್ಮಣರ ಸಮೇತನಾಗಿ ಚಿತ್ರಕೂಟಪರ್ವತದಲ್ಲಿಯೇ ಸುಖವಾಗಿರುವೆನೆಂದು ಹೇಳಿರುವುದರ ತಾತ್ಪರ್ಯವೇನೆಂದರೆ— ಈ ದೇಹವೇ ತನ್ನ ಸ್ವರೂಪವಾಗಿ ತನಗೆ ವಾಸಸ್ಥಳವಾದುದೆಂಬ ಜ್ಞಾನೋದಯವಾಗುವುದೆಂದರೆ 'ದೇಹೋಽಹಂ' ಎಂಬ ತಿಳವಳಿಕೆಮಾತ್ರ ಉದಯದ ಪ್ರಾರಂಭವೆಂಬ ತಾತ್ಪರ್ಯ.

ಉದಯವಾದ ಈ ದೇಹಾತ್ಮಜ್ಞಾನವೇನಾಯಿತೆಂದರೆ, ಮಂದಾಕಿನೀ ನದಿಯ ಪ್ರವಾಹದಂತೆ ಪರಿಣಮಿಸಿತು. ಮಂದಾಕಿನಿಯೆಂದರೆ "ಮಂದಂ ಅಕತಿ ಕುಟಿಲಂ ಗಚ್ಛತೀತಿ ಮಂದಾಕಿನೀ (ಅಕ ಅಗ, ಕುಟಿಲಾಯಾಂ ಗತೌ)" ಕುಟಿಲಗಮನವೆಂದರೆ ವಕ್ರವಾಗಿ ಹೋಗುವುದೆಂದರ್ಥ. ಅಂದರೆ ವಿಜ್ಞಾನಮಯಕೋಶದಲ್ಲಿ ಉದಯವಾದ "ದೇಹೋಽಹಂ" ಎಂಬ ಪ್ರತ್ಯಯವು ಮಂದಾಕಿನೀನದಿಯ ಪ್ರವಾಹದೋಪಾದಿಯಲ್ಲಿ ವಕ್ರವಕ್ರವಾಗಿ ಪ್ರವಹಿಸಿಕೊಂಡು ದೇಹದಲ್ಲೆಲ್ಲಾ ತುಂಬಿಕೊಳ್ಳುವುದೇ ಶ್ರೀರಾಮನು ಮಂದಾಕಿನೀ ನದಿಯಲ್ಲಿ ವಿಹರಿಸಿಕೊಂಡಿದ್ದುದಾಗಿರುವುದು.

ಮೇಲಿನ ತತ್ವಕ್ಕೆ ಅನುಸಾರವಾಗುವಂತೆ ಶ್ರೀವಿದ್ಯಾರಣ್ಯರವರು ಪಂಚದಶಿ ಪಂಚಕೋಶವಿವೇಕಪ್ರಕರಣ ೭ನೆಯ ಶ್ಲೋಕದಲ್ಲಿ

**ಲೀನಾಸುಪ್ತೌವಪುರ್ಬೋಧೇ ವ್ಯಾಪ್ನುಯಾ ದಾನಖಾಗ್ರಗಾ |**
**ಚಿಚ್ಛಾಯೋಪೇತ ಧೀರ್ನಾತ್ಮಾ ವಿಜ್ಞಾನಮಯ ಶಬ್ದಭಾಕ್ ||**

ತಾ|| ಚಿದಾಭಾಸಚೈತನ್ಯದೊಡಗೂಡಿದ ಬುದ್ಧಿವೃತ್ತಿಯು ಸುಷುಪ್ತಿಯ ಕಾಲದಲ್ಲಿ ತಮೋಆವರಣದಲ್ಲಿ ಅಡಗಿದ್ದು ಜಾಗ್ರತ್ಕಾಲದಲ್ಲಿ ಶಿಖೆ ಮೊದಲು ಕಾಲಿನ ಉಗುರಿನ ಕೊನೆಯವರೆಗೂ ವ್ಯಾಪಿಸಿಕೊಂಡು ವಿಜ್ಞಾನಮಯವೆಂಬದಾಗಿ ಕರೆಯಲ್ಪಡುವುದು. ಇಂತಹ ವಿಜ್ಞಾನವು ಆತ್ಮನಲ್ಲ ಎಂದು ಹೇಳಿರುವರು.

ಈ ಮೇಲಿನ ಶ್ರೀವಿದ್ಯಾರಣ್ಯರವರ ಶ್ಲೋಕದಲ್ಲಿ ಶ್ರೀರಾಮನು ತಮಸಾನದಿಯ ತೀರದಲ್ಲಿ ಮಲಗಿದ್ದ ತತ್ವವೂ, ಚಿತ್ರಕೂಟದಲ್ಲಿ ಮಂದಾಕಿನೀ ನದಿಯಲ್ಲಿ ವಿಹರಿಸಿಕೊಂಡಿದ್ದ ತತ್ವವೂ, ಬಂದಿರುವುದು. ಮೇಲಿನ ವಿಚಾರಗಳು ಚಿತ್ರಕೂಟಶಿಖರದ ತತ್ವದಲ್ಲಿರುವ ವಿಜ್ಞಾನಮಯಕೋಶದಲ್ಲಿ ನಡೆಯುವುವೆಂದು ವಿವರಮಾಡಿತಷ್ಟೆ! ಜ್ಞಾನವೆಂದರೆ ಪರಮಾತ್ಮ. ವಿಜ್ಞಾನವೆಂದರೆ "ವಿ-ಗತ" ಹೋದ ಜ್ಞಾನವೆಂದು ಅರ್ಥವಾಗುತ್ತದೆ. ಹೋದ ಜ್ಞಾನವೆಂದರೆ ತನ್ನ ನಿಜವಾದ ರೂಪು ಮರೆಯಾಗಿ ದೇಹವೇ ನಾನೆಂಬ ತಿಳಿವಳಿಕೆಯುಂಟಾಗುವಿಕೆಯು ವಿಜ್ಞಾನವೆನಿಸಿಕೊಳ್ಳುವುದು. ಪ್ರಥಮದಲ್ಲಿ ದೇಹದ ತಿಳಿವಳಿಕೆಯುಂಟಾಗಿ ಅನಂತರ ಹೊರಗಿನ ಪದಾರ್ಥಗಳ ತಿಳಿವಳಿಕೆಯುಂಟಾಗುವುದು. ಆದುದರಿಂದ ದೇಹ ಮತ್ತು ಹೊರಗಿನ ತಿಳಿವಳಿಕೆಗಳು ವಿಜ್ಞಾನವೆನಿಸುತ್ತವೆ.

ವಿಜ್ಞಾನವೆಂದರೆ—ವಿಶೇಷಣದಿಂದೊಡಗೂಡಿದ ಅಥವಾ ವಿಶಿಷ್ಟಜ್ಞಾನವೆಂಬದಾಗಿಯೂ ಅರ್ಥವಾಗುವುದು. ತಾನಲ್ಲದ ಎರಡನೆಯ ಪದಾರ್ಥದ ತಿಳಿವಳಿಕೆಗೆ ವಿಜ್ಞಾನವೆಂದು ಹೆಸರು. ಎರಡನೆಯ ಪದಾರ್ಥವೆಂಬ ವಿಶೇಷಣವಿರುವುದರಿಂದ ವಿಜ್ಞಾನವೆನಿಸಿಕೊಳ್ಳುತ್ತದೆ. ಪ್ರಪಂಚಜ್ಞಾನವಾಗುವ ಕ್ರಮದಲ್ಲಿ ದೇಹವೇ ನಾನೆಂಬ ಜ್ಞಾನಬಂದು, ಅನಂತರ ಹೊರಗಿನ ಜ್ಞಾನ ಬರುತ್ತದೆ. ಮೋಕ್ಷಕ್ರಮದಲ್ಲಿ ಪ್ರಪಂಚ ಜ್ಞಾನಗಳನ್ನು ಪ್ರಥಮದಲ್ಲಿ ತ್ಯಜಿಸಿ, ಅನಂತರ ದೇಹಜ್ಞಾನವನ್ನೂ ತ್ಯಜಿಸಿ, ತದನಂತರ ನಾನೆಂಬ ಜ್ಞಾನವೂ ಕೂಡ ಪರಮಾತ್ಮನೆಂದೇ ಅಭ್ಯಾಸಮಾಡಿ ಆತ್ಮಸಾಕ್ಷಾತ್ಕಾರವನ್ನು ಪಡೆಯಬೇಕು. ಆದುದರಿಂದ ವಿಜ್ಞಾನವು ಸಾಕ್ಷಾತ್ಕಾರದಿಂದ ನಶಿಸುತ್ತದೆ.

ಶ್ರೀರಾಮನು ಸೀತಾಲಕ್ಷ್ಮಣರೊಡನೆ ಚಿತ್ರಕೂಟದಲ್ಲಿಯೇ ಸುಖವಾಗಿರುತ್ತೇನೆಂದು ಹೇಳಿರುವುದರಲ್ಲಿ ಶ್ರೀರಾಮನಿಗೆ ಚಿತ್ರಕೂಟದಲ್ಲಿ ವಿಶ್ವಾಸವುದಯಿಸಿದುದೇ ಕರ್ತೃತ್ವ ಭೋಕ್ತೃತ್ವದ ಸ್ವರೂಪವನ್ನು ಸೂಚಿಸುವ ತತ್ವವಾಗಿರುವುದು. ಅಂದರೆ ವಿಜ್ಞಾನಮಯಕೋಶದಲ್ಲಿ ಉದಯಿಸುವ "ಶರೀರ ನಾನು" ಎಂಬ ಜ್ಞಾನವು ಕರ್ತೃತ್ವ ಭೋಕ್ತೃತ್ವ ಲಕ್ಷಣವುಳ್ಳದ್ದೆಂದು ಸೂಚಿಸುತ್ತದೆ. ಪರಮಾತ್ಮಸ್ವರೂಪನಾದ ಶ್ರೀರಾಮನು ಯಾವ ವಿಕಾರಕ್ಕೂ ಒಳಗಾಗದಿದ್ದರೂ ಪ್ರಕೃತಿಯ ಸಂಸರ್ಗದಿಂದ ವಿಜ್ಞಾನಬಂದು ಜೀವನೆನಿಸಿಕೊಂಡು ಕರ್ತೃ ಭೋಕ್ತೃವೆಂಬ ಆರೋಪಣೆಗೆ ಗುರಿಯಾಗಿರುತ್ತಾನೆ. ಈ ಅರ್ಥಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೧೩೨ ನೆಯ ಶ್ಲೋಕದಲ್ಲಿ—

**ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದಿಸ್ಫುರತ್ಯಯಂ ಜ್ಯೋತಿಃ |**
**ಕೂಟಸ್ಥಸ್ಸನ್ನಾತ್ಮಾ ಕರ್ತಾ ಭೋಕ್ತಾ ಭವತ್ಯುಪಾಧಿಸ್ಥಃ ||**

ತಾ|| ಚಿತ್ಸ್ವರೂಪನಾದ ಪರಮಾತ್ಮನೇ ತೇಜೋರೂಪನಾಗಿ ಅಂತಃಕರಣದಲ್ಲಿ ನಿರ್ವಿಕಾರಿಯಾಗಿ ಪ್ರಕಾಶಿಸುತ್ತಲಿದ್ದರೂ, ಪ್ರಕೃತಿಯ ವಿಕಾರವಾದ ಉಪಾಧಿಯ ಸಂಸ

ರ್ಗದ ಬಲದಿಂದ ಜೀವ (ಪ್ರತಿಫಲನದ ಚೈತನ್ಯ) ನಾಗಿಯೂ ಕರ್ತೃವಾಗಿಯೂ, ಭೋಕ್ತೃವಾಗಿಯೂ ತೋರುತ್ತಾನೆ. ಎಂದು ಹೇಳಿರುವರು.

ಈ ಮೇಲಿನ ತತ್ವಾರ್ಥವನ್ನನುಸರಿಸಿ ಪ್ರತಿಬಿಂಬಚೈತನ್ಯನಾದ ಶ್ರೀರಾಮನಿಗೆ ಅಯೋಧ್ಯೆಯ ಅಗಲಿಕೆಯ ವ್ಯಸನ ಹೋಯಿತೆಂದರೆ — ಈಶ್ವರನೋಪಾಸದ ಮರೆಯುವಿಕೆಯುಂಟಾಗಿ ಚಿತ್ರಕೂಟಪರ್ವತ ಮತ್ತು ಮಂದಾಕಿನೀ ನದಿಯ ವಿಹಾರದಲ್ಲಿ ಪ್ರೀತಿಯುಂಟು ರವೆಂದರೆ ಕರ್ತೃ ಭೋಕ್ತೃ ಸ್ವರೂಪವಾದ ಶರೀರ ನಾನು ಎಂಬ ಜ್ಞಾನದ ವಿಹಾರದಲ್ಲಿ ಇಚ್ಛೆಯುಂಟಾಗಿ ಜೀವನೆನಿಸಿಕೊಂಡನು.

ಮೇಲೆ ವಿವರವಾಡಿರುವ ತತ್ವಗಳಂತೆ ಚಿತ್ರಕೂಟದ ತತ್ವವಾದ ವಿಜ್ಞಾನಮಯ ಕೋಶದಲ್ಲಿಯೇ ಶರೀರ ನಾನು ಎಂಬ ಜ್ಞಾನೋದಯವಾಗುವ ತಾತ್ಪರ್ಯಕ್ಕೆ ಶ್ರೀವಿದ್ಯಾರಣ್ಯರವರು ಪಂಚದಶಿ ಚಿತ್ರದೀಪಿಕೆ ೨೨ ನೆಯ ಶ್ಲೋಕದಲ್ಲಿ,

> ಅಹಂವೃತ್ತಿರಿದಂವೃತ್ತಿ ರಿತ್ಯಂತಃಕರಣಂ ದ್ವಿಧಾ |
> ವಿಜ್ಞಾನಂಸ್ಯಾದಹಂವೃತ್ತಿ ರಿದಂವೃತ್ತಿರ್ಮನೋಭವೇತ್ ||

ತಾ|| ನಾನೆಂಬ ವೃತ್ತಿರೂಪವಾಗಿಯೂ, ಇದು ಎಂಬ ವೃತ್ತಿರೂಪವಾಗಿಯೂ, ಅಂತಃಕರಣವು ಎರಡು ವಿಧವಾಗಿರುವುದು. ಅದರಲ್ಲಿ ನಾನೆಂಬ ಅಂತರ್ವೃತ್ತಿರೂಪವು ವಿಜ್ಞಾನಮಯಕೋಶವಾಗುವುದು. ಇದು ಎಂಬ ಬಾಹ್ಯವೃತ್ತಿರೂಪವು ಮನೋಮಯಕೋಶವಾಗುವುದು ಎಂದು ಹೇಳಿರುತ್ತಾರೆ.

ವಿಜ್ಞಾನಮಯಕೋಶದಲ್ಲಿ ಉದಯಿಸುವ ಶರೀರ ನಾನೆಂಬ ವ್ಯಷ್ಟಿದೇಹದ ಜ್ಞಾನವೇ ಸಂಸಾರಕ್ಕೆ ಮೂಲ. ಇದೇ ಭ್ರಾಂತಿಸ್ವರೂಪವಾದ ದ್ವೈತವೆನಿಸಿಕೊಳ್ಳುವುದು ಇದೇ ತಾತ್ಪರ್ಯಕ್ಕೆ ತೇಜೋಬಿಂದೂಪನಿಷತ್ತಿನಲ್ಲಿ,

> ದೇಹೋಹಮಿತಿಯತ್ಜ್ಞಾನಂ ತದೇವಾಜ್ಞಾನಮುಚ್ಯತೆ |
> ದೇಹೋಹಮಿತಿಯತ್ಜ್ಞಾನಂ ತದೇವ ದ್ವೈತಮುಚ್ಯತೆ |
> ದೇಹೋಹ ಮಿತಿ ಸಂಕಲ್ಪೋ ಹೃದಯಗ್ರಂಥಿರೀರಿತಃ ||

ತಾ|| ದೇಹವು ನಾನೆಂಬ ಜ್ಞಾನವುಂಟಾಗುವುದೇ ಅಜ್ಞಾನ, ಇದೇ ದ್ವೈತ, ಇದೇ ಹೃದಯಗ್ರಂಥಿಯೆನಿಸುವುದು. ಎಂದು ಹೇಳಿರುವುದು.

ಶ್ರೀರಾಮನು ಅಯೋಧ್ಯೆಯಲ್ಲಿನ ಇಷ್ಟಮಿತ್ರರ ಅಗಲಿಕೆಯ ದುಃಖವು ಮರೆಯಿತು, ಚಿತ್ರಕೂಟದಲ್ಲಿಯೇ ಸುಖದಿಂದ ಇರಬೇಕೆಂಬ ಮನಸ್ಸಾಗಿರುವುದೆಂದು ಹೇಳಿದನೆಂದರೆ—

ಅಖಂಡವಾದ ಜ್ಞಾನಮರೆತು ಖಂಡವಾದ ದೇಹದ ಜ್ಞಾನ ಬರುವ ತತ್ವವೆಂದು ಮೇಲೆ ತಿಳಿಸಿರುತ್ತದಷ್ಟೆ! ಈ ತತ್ವಾರ್ಥಕ್ಕನುಸಾರವಾಗಿ ತೇಜೋಬಿಂದೂಪನಿಷತ್ತಿನಲ್ಲಿ,

**ದೇಹೋಹಮಿತಿಯದ್ಜ್ಞಾನಂ ತದಸದ್ಭಾವಮೇವಚ |**

ತಾ|| ದೇಹವು ನಾನೆಂಬ ಜ್ಞಾನವು ಅಸತ್ಸ್ವರೂಪವಾದುದು. ಸತ್ಸ್ವರೂಪವಲ್ಲ. ಅಂದರೆ ಸತ್ಸ್ವರೂಪವೇ ಪರಮಾತ್ಮ. ಅಸತ್ಸ್ವರೂಪವೇ ವಿಜ್ಞಾನ. ಎಂಬದಾಗಿ ಹೇಳಿರುವುದು ಮಂದಾಕಿನೀ ವರ್ಣನೆಗೆ ಚನ್ನಾಗಿ ಹೋಲಿಕೆಯಾಗುವುದು.

ವಿಜ್ಞಾನಮಯಕೋಶಕ್ಕೆ ಬುದ್ಧಿವೃತ್ತಿಯು ಬಂದಾಗ ಬುದ್ಧಿವೃತ್ತಿಯಲ್ಲಿ "ದೇಹ ನಾನು" ಎಂಬ ಜ್ಞಾನೋದಯವಾಗುವುದೇಷ್ಟೋ ಅಷ್ಟೆ. ದೇಹ ಮತ್ತು ಹೊರಗಿನ ಪದಾರ್ಥಗಳ ಜ್ಞಾನವುಂಟಾಗುವುದು ಮಾತ್ರ ಬುದ್ಧಿವೃತ್ತಿಯ ಕಾರ್ಯ. ದೇಹ ಮತ್ತು ಹೊರಗಿನ ಕಾರ್ಯಗಳಲ್ಲಿ ಅಭಿಮಾನರೂಪವಾಗಿರುವುದು ಬುದ್ಧಿವೃತ್ತಿಗೆ ಸೇರಿದುದಲ್ಲ. ಈ ಅಭಿಮಾನವು ಅಂತಃಕರಣದಲ್ಲಿನ ಅಹಂಕಾರಕ್ಕೆ ಸೇರಿದುದು. ಬುದ್ಧಿಯಲ್ಲಿ ಉದಯವಾದ "ದೇಹ ನಾನು" ಎಂಬ ಜ್ಞಾನವು ಕರ್ತೃಭೋಕ್ತೃಸ್ವರೂಪವಾದುದು. ಈ ಕರ್ತೃಭೋಕ್ತೃವನ್ನು ಅಭಿಮಾನಕ್ಕೆ ತಿರುಗಿಸಿಕೊಂಡು ಕಾರ್ಯದಲ್ಲಿ ಪ್ರವರ್ತಿಸುವುದು ಅಹಂಕಾರ ಚಿತ್ತಗಳ ಕಾರ್ಯವಾಗಿರುವುದು. ಆದುದರಿಂದ ಬುದ್ಧಿಯಲ್ಲಿ "ಶರೀರ ನಾನು" ಎಂಬ ಜ್ಞಾನೋದಯವಾದ ಕೂಡಲೆ ಅದನ್ನು ಅಭಿಮಾನರೂಪವಾಗಿ ಪರಿಣಮಿಸಿಕೊಂಡು ಕಾರ್ಯ ಪ್ರವರ್ತನೆಗೆ ಅನುಕೂಲವಾಗಲು, ತಕ್ಷಣವೇ ಅಹಂಕಾರ ಚಿತ್ತಗಳು ಉದಯವಾಗುವುವು. ಈ ತಾತ್ಪರ್ಯವನ್ನು ಅನುಸರಿಸಿಯೇ ರಾಮಾಯಣದಲ್ಲಿ ಮಂದಾಕಿನೀ ವರ್ಣನೆಯಾದ ಮುಂದಿನ ಅಧ್ಯಾಯವೇ ಅಹಂಕಾರಕ್ಕೆ ಅನ್ವಯಮಾಡಿರುವ ಭರತ ಶತ್ರುಘ್ನರ ಆಗಮನವಾಗಿರುತ್ತದೆ.

## ೭ನೆಯ ಪ್ರಕರಣ

| ದಶರಥನ ವಿಯೋಗಾನಂತರ ಭರತ ಶತ್ರುಘ್ನರು ಚಿತ್ರಕೂಟಕ್ಕೆ ಬಂದುದು. | ವಿಜ್ಞಾನಮಯಕೋಶದಲ್ಲಿ ಅಹಂಕಾರ ಮತ್ತು ಚಿತ್ತವೃತ್ತಿಗಳ ಅಭಿವ್ಯಕ್ತತೆಯೆಂದರೆ—ಕರ್ತೃತ್ವ ಭೋಕ್ತೃತ್ವದ ಅಭಿಮಾನೋದಯ. |
|---|---|

ರಾ|| ಶ್ರೀರಾಮನು ವನವಾಸಕ್ಕೆ ಬಂದನಂತರ ದಶರಥನು ಸ್ವರ್ಗಸ್ಥನಾದನು. ಭರತ ಶತ್ರುಘ್ನರು ಶ್ರೀರಾಮನ್ನ ಸಂದರ್ಶನಮಾಡಲು ಗುಹನಸ್ಥಳ, ಭರದ್ವಾಜಾಶ್ರಮಗಳ ಮೂಲಕವಾಗಿ ಚಿತ್ರಕೂಟಕ್ಕೆ ಬಂದರು.

ತತ್ವ॥ ಉದಯವಾದ ಕರ್ತೃತ್ವಭೋಕ್ತೃತ್ವ ಸ್ವರೂಪವಾದ "ದೇಹ ನಾನು" ಎಂಬ ಜ್ಞಾನವು ಮಂದಾಕಿನಿಯೋಪಾದಿಯಲ್ಲಿ ಸಂತೋಷದಿಂದ ಮೆಲ್ಲಮೆಲ್ಲಗೆ ಪ್ರವಾಹ ರೂಪವಾಗಿ ಪರಿಣಮಿಸಿ ದೇಹದಲ್ಲಿ ಹರಡಿತೆಂದು ಹಿಂದಿನಪ್ರಕರಣದಲ್ಲಿ ತಿಳಿಸಿತಷ್ಟೆ! ಹೀಗೆ ಬುದ್ಧಿವೃತ್ತಿಯಲ್ಲಿ "ಶರೀರ ನಾನು" ಎಂಬ ತಿಳಿವಳಿಕೆಮಾತ್ರ ಚನ್ನಾಗಿ ಉದಯ ವಾಗುತ್ತದೆ. ಹೀಗೆ ಉದಯವಾದ "ದೇಹ ನಾನು" ಎಂಬ ಜ್ಞಾನವನ್ನು ಕಾರ್ಯ ರೂಪವಾಗಿ ಪರಿಣಮಿಸಿಕೊಳ್ಳುವುದರ ಕಾರ್ಯವು ಬುದ್ಧಿಯದಲ್ಲ. ಈ ಕಾರ್ಯವು ಅಂತಃ ಕರಣದಲ್ಲಿನ ಅಹಂಕಾರದ ಕಾರ್ಯವಾಗಿರುತ್ತದೆ. "ಶರೀರ ನಾನೆಂಬ" ಈ ಜ್ಞಾನಮಾತ್ರ ದಿಂದಲೇ ಯಾವಕಾರ್ಯವೂ ನಡೆಯುವುದಿಲ್ಲ. ಆದುದರಿಂದ "ದೇಹ ನಾನು" ಎಂಬ ಜ್ಞಾನೋದಯವಾದ ಕೂಡಲೆ ಇದನ್ನು ದೇಹ ಮತ್ತು ಹೊರಗಿನ ವ್ಯಾಪಾರಗಳಲ್ಲಿ ಸೇರಿಸಿಕೊಳ್ಳಬೇಕು. ಹೀಗೆ ಸೇರಿಸಿಕೊಳ್ಳುವುದರ ಕಾರ್ಯವು ಅಹಂಕಾರ ಅಥವಾ ಅಭಿ ಮಾನದ್ದಾಗಿರುವುದು. ದೇಹವೇ ನಾನೆಂಬ ಅಭಿಮಾನ—ಹೊರಗಿನ ಕಾರ್ಯಗಳಲ್ಲಿ ನಾನು ಮಾಡಿದೆನು, ನನ್ನ ಹೆಸರು ಮುಂದಕ್ಕೆ ಬರಬೇಕು, ನಾನು ದೊಡ್ಡವನು, ನಾನು ಸುಖಿ, ದುಃಖಿ, ಮುಂತಾದ ಕರ್ತೃತ್ವಾಭಿಮಾನವೇ ಅಹಂಕಾರದ ಸ್ವರೂಪ ವಾಗಿರುತ್ತದೆ. "ನಾನು" ಎಂಬುದನ್ನು ಕಾರ್ಯಗಳಲ್ಲಿ ಪ್ರದರ್ಶನ ಮಾಡಿಸುವ ಅಭಿ ಮಾನಕ್ಕೆ ಅಹಂಕಾರವೆಂದು ಅರ್ಥ. ಅಂದರೆ ಕರ್ತೃತ್ವ ಭೋಕ್ತೃತ್ವದ ಅಭಿಮಾನವೇ ಅಹಂಕಾರವೆನಿಸಿಕೊಳ್ಳುತ್ತದೆ. ಆದುದರಿಂದ "ದೇಹ ನಾನು" ಎನ್ನುವುದರ ಅಭಿ ಮಾನಪರಿಣಾಮವು ಪ್ರಾರಂಭವಾಗುವ ತತ್ವವೇ ಶ್ರೀರಾಮನು ಮಂದಾಕಿನೀ ನದಿಯ ವರ್ಣನೆಯನ್ನು ಮಾಡುತ್ತಿರುವ ಸಮಯಕ್ಕೆ ಸರಿಯಾಗಿ ಭರತನು ಬಂದುದಾಗಿರುವುದು.

ಭರತನ ಜೊತೆಯಲ್ಲಿ ಶತ್ರುಘ್ನನು ಬಂದ ತಾತ್ಪರ್ಯವೇನೆಂದರೆ—ನಾನು ಮಾಡಿ ದೆನೆಂಬ ಅಭಿಮಾನವು ಯಾರಿಗೋಸ್ಕರವೆಂದರೆ ನನಗೋಸ್ಕರಲೇ. ಸರ್ವಕಾರ್ಯವೂ ಸರ್ವ ಪದಾರ್ಥವೂ ನನಗೋಸ್ಕರವೆಂಬ ಸ್ವಾರ್ಥತೆ ಇಲ್ಲದಿದ್ದರೆ ಕಾರ್ಯಗಳು ನಡೆಯಲು ಅವಕಾಶವಿಲ್ಲ. ಆದುದರಿಂದ ಅಭಿಮಾನ, ಸ್ವಾರ್ಥತೆಗಳೆರಡೂ ಯಾವಾಗಲೂ ಜೊತೆಯಲ್ಲಿ ರುತ್ತವೆ. ಈ ತತ್ವಕ್ಕನುಸಾರವಾಗಿ ಅಹಂಕಾರದ ತತ್ವದವನಾದ ಭರತನ ಜೊತೆಯಲ್ಲಿ ಚಿತ್ತದ ತತ್ವದವನಾದ ಶತ್ರುಘ್ನನು ಯಾವಾಗಲೂ ಇರುತ್ತಾನೆ. ವಿಜ್ಞಾನ ಮಯಕೋಶವಾದ ಚಿತ್ರಕೂಟಪರ್ವತಕ್ಕೂ ಜೊತೆಯಲ್ಲಿ ಬಂದನು. ಮುಖ್ಯತಾತ್ಪರ್ಯ ವೇನೆಂದರೆ—ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೯೬ನೆಯ ಶ್ಲೋಕದಲ್ಲಿ

ಅತ್ರಾಭಿಮಾನಾ ದಹಮಿ ತ್ಯಹಂಕೃತಿಃ ।
ಸ್ವಾರ್ಥಾನುಸಂಧಾನ ಗುಣೇನ ಚಿತ್ತಂ ॥

ಎಂಬದಾಗಿ ಹೇಳಿರುವುದನ್ನು ಭರತ ಶತ್ರುಘ್ನರಿಗೆ ಅನ್ವಯಮಾಡಿ ಅವರ ಜನನದ ಪ್ರಕರಣದಲ್ಲಿ ಬರೆದಿರುತ್ತಷ್ಟೆ! ಇಂತಹ ಅಭಿಮಾನ ಮತ್ತು ಸ್ವಾರ್ಥತೆಗಳು ವಿಜ್ಞಾನ ಮಯಕೋಶದಲ್ಲಿ "ದೇಹೋಹಂ" ಎಂಬ ಜ್ಞಾನೋದಯವಾದೊಡನೆಯೇ ಅಭಿವ್ಯಕ್ತ ವಾಗಿ ಮುಂದೆ ಕಾರ್ಯಕ್ಕೆ ಪ್ರಾರಂಭವಾಗುತ್ತವೆ.

**ರಾ||** ಕೇಕಯರಾಜ್ಯದಲ್ಲಿದ್ದ ಭರತ ಶತ್ರುಘ್ನರು ದಶರಥನ ವಿಯೋಗಾನಂತರ **ಚಿತ್ರಕೂಟಕ್ಕೆ** ಬಂದರು.

**ತತ್ವ||** ಶ್ರೀರಾಮನು ಸೀತಾದೇವಿಯೊಡನೆ ಅಯೋಧ್ಯೆಯಲ್ಲಿದ್ದುದೇ **ಈಶ್ವರತ್ವ** ವೆಂದು ಹಿಂದೆ ತಿಳಿಸಿತಷ್ಟೆ! ಈಶ್ವರತ್ವದಲ್ಲಿ ಅಹಂಕಾರ ಮತ್ತು ಚಿತ್ತದ ಕಾರ್ಯಗಳಾದ ಅಭಿಮಾನ ಮತ್ತು ಸ್ವಾರ್ಥತೆಗಳ ಉದಯವಿಲ್ಲದೆ ತಟಸ್ಥವಾಗಿರುವುವೆಂತಲೂ, ಜೀವ ತ್ವದಲ್ಲಿ ವಿಜ್ಞಾನಮಯಕೋಶದಲ್ಲಿ "ದೇಹೋಹಂ" ಎಂಬ ಜ್ಞಾನೋದಯವಾದ ತಕ್ಷಣವೇ ಅಭಿಮಾನ ಸ್ವಾರ್ಥತೆಗಳು ಅಭಿವ್ಯಕ್ತವಾಗುವುವೆಂತಲೂ ಸೂಚಿಸುತ್ತದೆ. ಭರತ ಶತ್ರುಘ್ನರು ಕೇಕಯರಾಜ್ಯದಲ್ಲಿದ್ದರೆಂದರೆ –ಇಚ್ಛಾಪ್ರದೇಶದಲ್ಲಿದ್ದರು. ಅಂದರೆ ಈಶ್ವರತ್ವವು ಕರ್ತೃತ್ವ ಭೋಕ್ತೃತ್ವದ ಅಭಿಮಾನ ಮತ್ತು ಸ್ವಾರ್ಥತೆಗಳಿಲ್ಲದ ಇಚ್ಛಾ ಮಾತ್ರ ಪ್ರಭುತ್ವವಾಗಿರುವ ತತ್ವವಾಗಿರುವುದು. ಸೀತೆಯೊಡಗೂಡಿದ ಶ್ರೀರಾಮನು ಅಯೋಧ್ಯೆಯಲ್ಲಿದ್ದಾಗ ಇಚ್ಛಾಮಾತ್ರ ಪ್ರಭುವಾಗಿದ್ದನೆಂಬ ತತ್ವವನ್ನು ಸೂಚಿಸುತ್ತದೆ. ಶ್ರೀರಾಮನು ಚಿತ್ರಕೂಟವನ್ನು ಪ್ರವೇಶಿಸಿದನಂತರ ದಶರಥನ ವಿಯೋಗವಾದ ತಾತ್ಪರ್ಯ ವೇನೆಂದರೆ—ದಶರಥನು ದಶೇಂದ್ರಿಯ ಗೋಳಕಗಳುಳ್ಳ ಪ್ರಶಸ್ತವಾದ ಮನುಷ್ಯದೇಹದ ಸೃಷ್ಟಿಯ ಸಂಕಲ್ಪದ ತತ್ವದವನೆಂದು ಹಿಂದೆ ತಿಳಿಸಿರುವುದಷ್ಟೆ! ಇಂತಹ ದೇಹ ವ್ಯಾಪಾರ ಪ್ರಾರಂಭಿಸಿದರೆ ಸೃಷ್ಟಿಯ ಸಂಕಲ್ಪವು ಅನವಶ್ಯವಾಗುವುದೇ ದಶರಥನ ವಿಯೋಗದ ತತ್ವವಾಗಿರುವುದು. ಹೇಗೆಂದರೆ ನಿದ್ರೆಯಿಂದ ಎಚ್ಚತ್ತನಂತರ ನಿದ್ರೆಯು ಹೇಗೆ ತಟಸ್ಥಭಾವವನ್ನು ಹೊಂದುವುದೋ ಹಾಗೆಯೇ ದೇಹವ್ಯಾಪಾರವು ಪ್ರಾರಂಭವಾದ ನಂತರ, ದೇಹಸೃಷ್ಟಿಕಾರ್ಯವು ತಟಸ್ಥಭಾವವನ್ನು ಹೊಂದಿರುತ್ತದೆ.

**ರಾ||**. ಭರತನು ಶ್ರೀರಾಮನಂತೆ ಗುಹನಸ್ಥಳ, ಭರದ್ವಾಜಾಶ್ರಮ ಮುಂತಾದುವು ಗಳ ಮೂಲಕವಾಗಿ ಚಿತ್ರಕೂಟಕ್ಕೆ ಬಂದನು.

**ತತ್ವ||** ಶ್ರೀರಾಮ, ಲಕ್ಷ್ಮಣ, ಭರತ, ಶತ್ರುಘ್ನರನ್ನು, ಅಂತಃಕರಣ **ಚತುಷ್ಟಯಕ್ಕೆ** ಅನ್ವಯ ಮಾಡಿರುವುದಷ್ಟೆ! ಅಂತಃಕರಣಕ್ಕೆ ನಮ್ಮ ಶಿರಸ್ಸಿನಲ್ಲಿ ಒಂದು ಸ್ಥಳ ನಿರ್ದೇಶವಿರುವುದೆಂದು ತಾವರೆಚಿತ್ರಪಠದೊಡನೆ ಭರದ್ವಾಜಾಶ್ರಮದ ತತ್ವ

ದಲ್ಲಿ ವಿವರಿಸಿದೆ. ಅಂತಃಕರಣವು ತನ್ನ ಸ್ಥಾನದಲ್ಲಿದ್ದು ಅದರ ವೃತ್ತಿಯು (ಪ್ರವಾಹವು) ಕೋಶಗಳಲ್ಲಿ ಪ್ರವಹಿಸಿಕೊಂಡು ಬರುವುದೇ ಹೊರತು, ಅಂತಃಕರಣವೇ ತನ್ನ ಸ್ಥಾನವನ್ನು ಬಿಟ್ಟು ಸಂಚರಿಸುವುದಿಲ್ಲ. ಈ ಅಂತಃಕರಣದ ವೃತ್ತಿಗಳು ವಿಜ್ಞಾನಮಯಕೋಶವನ್ನು ಸೇರಿದರೆ ಆ ಕೋಶದ ಗುಣವನ್ನು ಅನುಸರಿಸಿ ಕೆಲವು ಕಾರ್ಯಗಳುದಯವಾಗುವುವು. ಮನೋಮಯಕೋಶವನ್ನು ಸೇರಿದರೆ ಮತ್ತೊಂದು ವಿಧದ ಕಾರ್ಯಗಳುದಯವಾಗುತ್ತವೆ. ಇದರಂತೆ ಯಾವ ಇಂದ್ರಿಯಗಳಲ್ಲಿ ಅಂತಃಕರಣದ ವೃತ್ತಿಯು ಪ್ರಸರಣೆಯಾಗುವುದೋ ಅವುಗಳ ಕಾರ್ಯ ತಕ್ಷಣವೇ ನಡೆಯುತ್ತದೆ. ಅಂತಕರಣದ ವೃತ್ತಿಯ ವೇಗವನ್ನು ಹೇಳಲು ಸಾಧ್ಯವಿಲ್ಲ. ವಾಯುವೇಗ ಮನೋವೇಗವೆಂದು ವಾಡಿಕೆಯಾಗಿ ಹೇಳುವರಷ್ಟೆ! ಕ್ಷಣ ಮಾತ್ರದಲ್ಲಿ ಅಂತಃಕರಣದ ವೃತ್ತಿಯು ನೂರಾವರ್ತಿ ಭೂಪ್ರದಕ್ಷಿಣೆ ಮಾಡಬಲ್ಲುದು. ಆ ದುದರಿಂದ ಅಂತಃಕರಣಕ್ಕೆ ವೃತ್ತಿಯುಂಟಾಗುತ್ತದೆಯೇ ಹೊರತು ಅಂತಃಕರಣವೇ ಸ್ವಸ್ಥಾನವನ್ನು ಬಿಟ್ಟು ಹೋಗುವುದಿಲ್ಲ.

ಶ್ರೀರಾಮಲಕ್ಷ್ಮಣರು ಸೀತೆಯೊಡನೆ ವನವಾಸಕ್ಕೆ ಹೊರಟು ಚಿತ್ರಕೂಟಕ್ಕೆ ಬಂದ ರೆಂದರೆ—ಬುದ್ಧಿಮನಸ್ಸಿನ ವೃತ್ತಿಗಳು ರಜಸ್ಸತ್ವಾಪತ್ತಿಯಲ್ಲಿಯೇ ವಿಜ್ಞಾನಮಯಕೋಶ ವನ್ನು ಸೇರಿದುವೆಂಬ ತಾತ್ಪರ್ಯವಷ್ಟೆ! ಬುದ್ಧಿಮನಸ್ಸಿನ ವೃತ್ತಿಗಳುದಯವಾಗಿ ವಿಜ್ಞಾನ ಮಯಕೋಶವನ್ನು ಪ್ರವೇಶಿಸುವ ಪರ್ಯಂತರ ಅಹಂಕಾರ ಮತ್ತು ಚಿತ್ತಗಳ ವೃತ್ತಿಗಳು ಉದಯವಾಗುವುದಿಲ್ಲ. ಈರೀತಿಯಾಗುವುದೆಂಬುದಕ್ಕೆ ನಿದ್ರೆಯಿಂದೆದ್ದ ಕೂಡಲೆ ತಮೋ ಗುಣದಲ್ಲಿ ಲೀನವಾಗಿದ್ದ ಅಂತಃಕರಣದ ವೃತ್ತಿಗಳಲ್ಲಿ ಪ್ರಥಮದಲ್ಲಿ ಬುದ್ಧಿಮನಸ್ಸಿನ ವೃತ್ತಿಗಳುದಯವಾಗಿ ವಿಜ್ಞಾನಮಯಕೋಶವೆಂದರೆ ಆಜ್ಞಾಚಕ್ರವನ್ನು ಸೇರುತ್ತವೆ. ಆಗ "ದೇಹ ನಾನು" ಎಂಬ ಜ್ಞಾನವು ಪ್ರಥಮದಲ್ಲಿ ಉದಯವಾಗುವುದು. ಅಂದರೆ ನಿದ್ರೆಯಿಂದೆದ್ದವರಿಗೆ ನಾನು ಎಂಬ ತಿಳಿವಳಿಕೆ ಉದಯವಾದ ಹೊರತು ಅಭಿಮಾನವು ಉದಯವಾಗುವುದಿಲ್ಲ. ಇದನ್ನು ಸರ್ವರೂ ವಿಮರ್ಶೆಮಾಡಿಕೊಳ್ಳಬಹುದು. ಆದುದ ರಿಂದ ಬುದ್ಧಿಮನಸ್ಸಿನ ವೃತ್ತಿಗಳು ಪ್ರಥಮದಲ್ಲಿ ಉದಯವಾಗಿ ವಿಜ್ಞಾನಮಯಕೋಶ ವನ್ನು ಸೇರುತ್ತಲೇ ಅಹಂಕಾರ ಮತ್ತು ಚಿತ್ತಗಳ ವೃತ್ತಿಗಳು ಪ್ರಾರಂಭವಾಗುತ್ತವೆ. ಈ ತತ್ವಾರ್ಥಕ್ಕೆ ಅನುಸಾರವಾಗಿಯೇ ಶ್ರೀರಾಮನು ಚಿತ್ರಕೂಟವನ್ನು ಸೇರಿದನಂತರವೇ ಭರ ತನು ಬಂದಿರುವುದಾಗಿದೆ.

ಆದುದರಿಂದ ಭರತ ಶತ್ರುಘ್ನರು ಶ್ರೀರಾಮನು ಬಂದ ದಾರಿಯಲ್ಲಿಯೇ ಚಿತ್ರ ಕೂಟಕ್ಕೆ ಬಂದರೆಂದರೆ—ಅಹಂಕಾರ ಚಿತ್ತಗಳಿಗೂ ವೃತ್ತಿಪ್ರಾರಂಭವಾಗಿ ಆನಂದಮಯ ಕೋಶ ಮತ್ತು ಬಿಂದುಸ್ವರೂಪದ ಮೂಲಕ ವಿಜ್ಞಾನಮಯಕೋಶವನ್ನು ಸೇರಿದುವೆಂಬ ತತ್ವಾರ್ಥವಾಗಿರುತ್ತದೆ.

## ೮ನೆಯ ಪ್ರಕರಣ.

**ಭರತನ ಸೇನೆಯನ್ನು ನೋಡಿ ಕೋಪಿಸಿಕೊಂಡ ಲಕ್ಷ್ಮಣನನ್ನು ಶ್ರೀರಾಮನು ಸಮಾಧಾನಪಡಿಸಿದುದು. ಭರತನ ಇಷ್ಟದಂತೆ ಶ್ರೀರಾಮನು ರಾಜ್ಯಭಾರವನ್ನು ಒಪ್ಪದೆ ಭರತನನ್ನೇ ರಾಜ್ಯವಾಳೆಂದು ಹೇಳಿದುದು.**

**ಅಹಂಕಾರದ ಸ್ವರೂಪ—ದೇಹಪಾಶಬಂಧನದ ಬಿಡುಗಡೆಯಾಗುವವರೆಗೂ ದೇಹಯಾತ್ರೆಗೆ ಅಭಿಮಾನದ ಅವಶ್ಯಕತೆ.**

**ರಾ||** ಚಿತ್ರಕೂಟಕ್ಕೆ ಬರುತ್ತಿದ್ದ ಭರತನ ಸೇನೆಯ ಕೋಲಾಹಲಧ್ವನಿಯನ್ನೂ ಸೇನೆಯಿಂದೆದ್ದ ಕೆಂಧೂಳಿಯನ್ನೂ ನೋಡಿ ಶ್ರೀರಾಮನು ಲಕ್ಷ್ಮಣನನ್ನು ಕುರಿತು ಅಲ್ಲಿ ಬರುವ ಸೇನೆ ಯಾರದೆಂಬುದನ್ನು ನೋಡಿ ವಿಚಾರಿಸೆಂದನು. ಲಕ್ಷ್ಮಣನು ಆ ಸೇನೆಯನ್ನು ನೋಡಿ, ಉಪದ್ರವವಿಲ್ಲದ ರಾಜ್ಯಾಧಿಪತ್ಯವನ್ನು ಬಯಸಿ ನಮ್ಮನ್ನು ಸುತ್ತುವರಿದುಕೊಂಡು ಸಂಹರಿಸುವ ಮರ್ಯಾದೆಯಲ್ಲಿ ಭರತನು ಬರುವಂತೆ ತೋರುತ್ತಿದೆ. ನಮ್ಮೆಲ್ಲರಿಗೂ ಅವನಲ್ಲಿ ರೋಷವಿರಬೇಕಲ್ಲವೆ? ನಾನು ಅವನನ್ನು ಸಂಹರಿಸುತ್ತೇನೆ. ಅನಂತರ ಅಯ್ಯೋಧ್ಯಾಪಟ್ಟಣಕ್ಕೆ ನಾವು ಹೋಗಿ ರಾಜ್ಯವಾಳೋಣವೆಂದು ಹೇಳಿದನು.

**ತತ್ವ||** ಹಿಂದಿನ ಪ್ರಕರಣದಲ್ಲಿ ಬುದ್ಧಿವೃತ್ತಿಯು ವಿಜ್ಞಾನಮಯಕೋಶಕ್ಕೆ ಬಂದಾಗ "ದೇಹೋಹಂ" ಎಂಬ ಜ್ಞಾನಹುಟ್ಟುವುದೆಂದೂ ಈ ಜ್ಞಾನವನ್ನು ಅಭಿಮಾನರೂಪವಾಗಿ ಮಾಡಿಕೊಂಡು ಅಹಂಕಾರ ಉದಯವಾಗುವುದೆಂದೂ ತಿಳಿಸಿತಷ್ಟೆ! ಈಗ ಸೇನೆಯ ಆರ್ಭಟವನ್ನು ನೋಡಿ ಲಕ್ಷ್ಮಣನು ಕೋಪಮಾಡಿದ ತತ್ವಾರ್ಥವು ಅಭಿಮಾನ ಅಥವಾ ಅಹಂಕಾರದಲ್ಲಿರುವ ಮಹತ್ತನ್ನು ಪ್ರತಿಪಾದಿಸುವುದು. ಅಭಿಮಾನವು ಕೆಂಧೂಳಿಯಿಂದ ಕಣ್ಣುಗಳನ್ನು ಮುಚ್ಚಿಸುವಂತಹ ಆರ್ಭಟವುಳ್ಳದ್ದೆಂಬ ತತ್ವಾರ್ಥದ ಸೂಚನೆಯೇ ಭರತನ ಸೇನೆಯಿಂದೆದ್ದ ಕೆಂಧೂಳಿಯಾಗಿರುತ್ತದೆ. ಭರತನ ಸೇನೆಯ ಕೋಲಾಹಲಧ್ವನಿಯಂತೆ ಅಭಿಮಾನವು ಅಲ್ಲೋಲಕಲ್ಲೋಲ ಮಾಡುವಂತಹ ಕಾರ್ಯಗಳನ್ನು ಮಾಡಿಸಬಲ್ಲುದೆಂಬ ತತ್ವವನ್ನು ಸೂಚಿಸುತ್ತದೆ. ಅಂದರೆ ಈ ಮೇಲಿನ ತತ್ವಾರ್ಥಗಳು ಪ್ರಪಂಚವ್ಯಾಪಾರರೂಪವಾದ ಸಂಸಾರಕ್ಕೆ ಮೂಲಕಾರಣವಾದ ಅಭಿಮಾನದ ಮಹತ್ತಾಗಿದೆ. ಈ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೨೯೯ ನೆಯ ಶ್ಲೋಕದಲ್ಲಿ,

**ಸನ್ತ್ಯನ್ಯೇಪ್ರತಿಬಂಧಾಃ ಪುಂಸಸ್ಸಂಸಾರಹೇತವೋ ದೃಷ್ಟಾಃ |**
**ತೇಷಾಮೇವಂ ಮೂಲಂ ಪ್ರಥಮವಿಕಾರೋ ಭವತ್ಯಹಂಕಾರಃ ||**

ತಾ|| ಪುರುಷನಿಗೆ ಪ್ರಾಪಂಚಿಕವ್ಯವಹಾರದ ಮತ್ತು ಜನಮರಣರೂಪವಾದ ಸಂಸಾರಕ್ಕೆ ಕಾರಣಗಳಾದ ಇತರ ಪ್ರತಿಬಂಧಕಗಳು ಬಹಳವಾಗಿವೆ. ಇಂತಹ ಪ್ರತಿಬಂಧಕ

ಗಳಲ್ಲಿ ಅಹಂಕಾರವೆಂದರೆ ದೇಹ ಮತ್ತು ಹೊರಗಿನ ಅಭಿಮಾನವೇ ಪ್ರಥಮವಿಕಾರಸ್ವರೂಪ ವೆಂದು ತಿಳಿಯಬೇಕು ಎಂದು ಹೇಳಿರುತ್ತಾರೆ.

ಆದುದರಿಂದ ಪ್ರಥಮವಿಕಾರವಾಗಿರುವ ಅಭಿಮಾನದ ವೇಗವೇ ಪ್ರಾಣಿಗಳನ್ನು ಬಂಧಿಸಿರುತ್ತದೆ. ಈ ಅಭಿಮಾನದ ಮಹತ್ವದ ಸ್ವರೂಪವೇ ಭರತನ ಸೇನೆಯ ಸ್ವರೂ ಪವು. ಇಂತಹ ಅಹಂಕಾರದ ಸಂಬಂಧದಿಂದಲೇ ಜೀವನಿಗೆ ಸಂಸಾರವುಂಟಾಗುವು ದೆಂದು ವರಾಹೋಪನಿಷತ್ತಿನಲ್ಲಿ "ಅಹಂಕಾರ ಸಂಬಂಧಾದೇವ ಸಂಸಾರ ಆತ್ಮನಃ" ಅಂದರೆ ಅಹಂಕಾರದ ಸಂಬಂಧದಿಂದಲೇ ಪ್ರತಿಬಿಂಬಚೈತನ್ಯನಿಗೆ ಸಂಸಾರವುಂಟಾಗುವುದೆಂದು ಹೇಳಿರುತ್ತದೆ.

ನಿರುಪದ್ರವವಾದ ರಾಜ್ಯಾಧಿಪತ್ಯವನ್ನು ಬಯಸಿ ಭರತನು ಬಂದಿರುವಂತೆ ತೋರು ವುದೆಂದು ಲಕ್ಷ್ಮಣನು ಹೇಳಿರುವುದರ ತಾತ್ಪರ್ಯವೇನೆಂದರೆ---ಅಹಂಕಾರವು ಬುದ್ಧಿ ಮನಸ್ಸಿನ ವೃತ್ತಿಗಳನ್ನು ತನ್ನ ಅಡಿಯಾಳಾಗಿ ಮಾಡಿಕೊಂಡರೆ ಅಭಿಮಾನಕ್ಕೆ ನಿರುಪ ದ್ರವವಾದ ಆಧಿಪತ್ಯವು ಬರುತ್ತದೆ. ಹೇಗೆಂದರೆ - ನಾವು ಪ್ರಪಂಚದಲ್ಲಿ ಮಾಡುವ ದೇಹ ಮತ್ತು ಹೊರಗಿನ ಕಾರ್ಯಗಳಲ್ಲಿ ಯಾವುದಾದರೊಂದು ವಿಧವಾದ ಅಭಿಮಾನ ವನ್ನು ಮುಂದಿಟ್ಟುಕೊಂಡು ಕಾರ್ಯಕ್ಕೆ ಪ್ರವೇಶಮಾಡುತ್ತೇವೆ. ಈ ವಿಧವಾಗಿರುವುದು ಸರ್ವರಿಗೂ ತಿಳಿದ ವಿಚಾರವಾಗಿದೆ. ಹೀಗಿರುವುದರಿಂದ, ಅಭಿಮಾನವೇ ಧೊರೆಯಾಗಿ ಬುದ್ಧಿಮನಸ್ಸುಗಳು ಅಡಿಯಾಳಾಗಿರುತ್ತವೆ. ಈ ಅರ್ಥಕ್ಕೆ ಶ್ರುತಿಪ್ರಮಾಣವೂ ಇದೆ. ಮಹೋಪನಿಷತ್ತು ಪಂಚಮಾಧ್ಯಾಯದಲ್ಲಿ

ಅಹಂಕಾರೋ ವಿನಿರ್ಣೀತಾ ಕಳಂಕೀ ಬುದ್ಧಿರುಚ್ಯತೇ ।
ಬುದ್ಧಿಸ್ಸಂಕಲ್ಪಿತಾಕಾರಾ ಪ್ರಯಾತಿ ಮನಸಾಸ್ಪದಂ ।
ಮನೋಘನವಿಕಲ್ಪಂತು ಗಚ್ಛತೀಂದ್ರಿಯತಾಂಶನೈಃ ॥

ತಾ॥ ಅಭಿಮಾನದಿಂದ ಸಮಸ್ತಕ್ಕೂ ನಾನೇ ಎಂದುಕೊಳ್ಳುವುದು ಅಹಂಕಾರ. ಇಂಥ ಅಭಿಮಾನದಿಂದ ಬುದ್ಧಿಗೆ ಮಲಿನತ್ವವುಂಟಾಗುತ್ತದೆ. ಮಲಿನತ್ವವಾದ ಬುದ್ಧಿಯು ಸಂಕಲ್ಪಿತ ವಸ್ತುವಿನ ಆಕಾರವಾಗಿ ಮನಸ್ಸಿನ ಆಶ್ರಯವನ್ನು ಹೊಂದುತ್ತದೆ. ಅನಂ ತರ ಮನಸ್ಸು ಹೆಚ್ಚಾದ ವಿಕಲ್ಪಗಳುಳ್ಳದ್ದಾಗಿ ಕಾರ್ಯಪ್ರವರ್ತನೆಗೆ ಮೆಲ್ಲಗೆ ಇಂದ್ರಿಯ ಗಳ ಕಡೆಗೆ ಹೊರಡುತ್ತದೆ ಎಂದು ಹೇಳಿರುವುದು.

ವಿಜ್ಞಾನಮಯಕೋಶದಲ್ಲಿ ಉದಯವಾಗುವ ಈ ಅಹಂಕಾರ ಅಥವಾ ಅಭಿ ಮಾನವು ದೇಹವ್ಯಾಪಾರಕ್ಕೆ ಪ್ರಭುವಾಗಿರುವ ತತ್ವಕ್ಕೆ ಶ್ರೀಶಂಕರಭಗವತ್ಪಾದಾಚಾರ್ಯ ರವರು ವಿವೇಕಚೂಡಾಮಣಿ ೧೧೧ನೆಯ ಶ್ಲೋಕದಲ್ಲಿ,

**ದೇಹಾದಿನಿಷ್ಠಾಶ್ರಮಧರ್ಮಕರ್ಮ ಗುಣಾಭಿಮಾನಃಸತತಂಮಮೇತಿ |**
**ವಿಜ್ಞಾನಕೋಶೋಽಯಮತಿಪ್ರಕಾಶಃ ಪ್ರಕೃಷ್ಟಸಾನ್ನಿಧ್ಯವಶಾತ್ಪರಾತ್ಮನಃ ||**

ತಾ|| ಪರಮಾತ್ಮನಿಗೆ ಕೇವಲ ಸಮೀಪದಲ್ಲಿರುವುದರಿಂದ ಅತಿ ಪ್ರಕಾಶಮಾನವಾದ ಈ ವಿಜ್ಞಾನಮಯಕೋಶವು ದೇಹವೇ ಮೊದಲಾದುವುಗಳನ್ನು ಆಶ್ರಯಿಸಿರುವ ಆಶ್ರಮ ಧರ್ಮ, ಕರ್ಮ, ಗುಣ, ಇವುಗಳಲ್ಲಿ ಅಭಿಮಾನವುಳ್ಳದ್ದಾಗಿ ಯಾವಾಗಲೂ ತನ್ನ ದೆಂದುಕೊಳ್ಳುವುದು ಎಂದು ಹೇಳಿರುವರು.

ಆದುದರಿಂದ ಲಕ್ಷ್ಮಣನ ಕೋಪದ ತತ್ವಾರ್ಥವು ಮತ್ತು ಭರತನ ಸೇನೆಯ ಕೋಲಾಹಲವು ಅಹಂಕಾರದ ಅನರ್ಥವನ್ನು ಸೂಚಿಸುವುದು.

**ರಾ||** ಶ್ರೀರಾಮಚಂದ್ರನು ಕೋಪಗೊಂಡ ಲಕ್ಷ್ಮಣನನ್ನು ಸಂತಯಿಸುತ್ತ, ಎಲೈ ಲಕ್ಷ್ಮಣಾ ! ಭರತನು ಸಮೀಪಕ್ಕೆ ಬಂದರೆ ಬಿಲ್ಲು ಬಾಣಗಳಿಂದ ಮಾಡುವ ಕಾರ್ಯ ವೇನು ? ಈ ಸಮುದ್ರಾಂತವಾದ ಭೂಮಿಯು ನನಗೆ ಅಸಾಧ್ಯವಲ್ಲ. ನಿನ್ನನ್ನೂ ಸೀತಾದೇವಿಯನ್ನೂ ಕೂಡಿಕೊಂಡು ನಾರುವಸ್ತ್ರ ಮತ್ತು ಜಟೆಗಳನ್ನು ಧರಿಸಿ ನಾನು ವನಕ್ಕೆ ಬಂದ ವೃತ್ತಾಂತವನ್ನು ಭರತನು ಕೇಳಿ, ನನ್ನ ಮೇಲಿನ ವಿಶ್ವಾಸದಿಂದ ನೋಡಲು ಬಂದಿರಬೇಕೆಂದು ಹೇಳಿದನು. ಅಷ್ಟರಲ್ಲಿ ಭರತನು ಬಂದು ಶ್ರೀರಾಮನಿಗೆ ಅಭಿವಂದಿಸಿ ಅಯೋಧ್ಯೆಗೆ ಬಂದು ರಾಜ್ಯಪರಿಪಾಲನೆ ಮಾಡಬೇಕೆಂದು ಕೇಳಿಕೊಂಡನು.

**ತತ್ವ||** ಈ ಮೇಲಿನ ಅಂಶಗಳಲ್ಲಿ ಶ್ರೀರಾಮನು ವನವಾಸಕ್ಕೆ ಬರುವಾಗ ನಾರು ವಸ್ತ್ರವನ್ನುಟ್ಟುಕೊಂಡು ಜಟಾಧಾರಿಯಾಗಿ ಬಂದನೆಂದರೆ—ವನವಾಸದ ತತ್ವವಾದ ದೇಹವಾಸಕ್ಕೆ ಅಪರೋಕ್ಷಣಮಾಡಿರುವ ಬುದ್ಧಿವೃತ್ತಿಪ್ರಕಾಶಕ ಚೈತನ್ಯವು ದೇಹ ವ್ಯಾಪಾರವೆಂಬ ಮೈಲಿಗೆಗೆ ಅಂಟುವುದಿಲ್ಲವೆಂಬ ಮತ್ತು ಉಪಸಂಹಾರಕ್ರಮದಿಂದ ತನ್ನ ಸ್ವರೂಪವನ್ನು ಪಡೆಯುವುದೆಂಬ ನಿಯಮವನ್ನು ಸೂಚಿಸುವುದು.

ಶ್ರೀರಾಮನು ಸಮುದ್ರಾಂತವಾದ ಈ ಭೂಮಿಯು ತನಗೆ ಅಸಾಧ್ಯವಲ್ಲವೆಂದೂ ಭರತನಿಂದ ಯಾವ ಭಯವೂ ಇಲ್ಲವೆಂದೂ ಲಕ್ಷ್ಮಣನೊಡನೆ ಹೇಳಿದುದರ ತಾತ್ಪರ್ಯ ವೇನೆಂದರೆ -ಅಭಿಮಾನ ಅಥವಾ ಅಹಂಕಾರವು ಎಷ್ಟೇ ಅನರ್ಥಕಾರಿಯಾದರೂ ಬ್ರಹ್ಮನಿಷ್ಠೆಯಲ್ಲಿ ಬುದ್ಧಿಯ ಜ್ಞಾನವೇಗವು ಚನ್ನಾಗಿದ್ದರೆ ಅಭಿಮಾನದ ಕಾರ್ಯನಿಂತು ಬುದ್ಧಿಗೆ ದಾಸನಾಗುವುದೆಂಬ ಸೂಚನೆಯಾಗಿದೆ. ಯಾವಾಗ ಬುದ್ಧಿತತ್ವವು ಹದಿನಾಲ್ಕು ವರ್ಷ ವನವಾಸಪೂರ್ತಿಮಾಡಿ ಸ್ವಸ್ವರೂಪವನ್ನು ಹೊಂದುವ ದೃಢಪ್ರತಿಜ್ಞೆಯಿಂದ ದೇಹ ವಾಸಕ್ಕೆ ಹೊರಟಿರುವುದೋ ಆಗ ಅಹಂಕಾರವು ಬುದ್ಧಿಯ ಅನುವರ್ತಿಯಾಗಿಯೇ ಇರಬೇಕು. ಈ ತತ್ವಾರ್ಥವನ್ನನುಸರಿಸಿ ಭರತನೇ ಪ್ರೀತಿಯಿಂದ ಶ್ರೀರಾಮನಲ್ಲಿಗೆ ಬಂದನು.

ಚಿತ್ರಕೂಟಕ್ಕೆ ಭರತ ಶತ್ರುಘ್ನರು ಬಂದು ಶ್ರೀರಾಮನೊಡನೆ ಸೇರಿದರೆಂದರೆ— ವಿಜ್ಞಾನಮಯಕೋಶದಲ್ಲಿ ಪ್ರಥಮದಲ್ಲಿ ಉದಯವಾಗಿದ್ದ ಕರ್ತೃಭೋಕ್ತೃಸ್ವರೂಪವಾದ ದೇಹ ನಾನು ಎಂಬ ಜ್ಞಾನದ ಜೊತೆಗೆ ಅಭಿಮಾನವು ವಿಜ್ಞಾನಮಯಕೋಶದಲ್ಲಿಯೇ ಉದಯವಾಗುವುದೆಂಬ ತಾತ್ಪರ್ಯವಾಗಿದೆ. ದೇಹಜ್ಞಾನ, ಅಭಿಮಾನ ಮತ್ತು ಸ್ವಾರ್ಥತೆಗಳ ಉದಯವೇ ಜೀವನ ವ್ಯಾಪಾರಕ್ಕೆ ಪ್ರಥಮ ಸೋಪಾನದ ಸಲಕರಣೆಯಾಗಿರುವುದು. ಈ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೧೮೮ ನೆಯ ಶ್ಲೋಕದಲ್ಲಿ,

**ಅನುವ್ರಜಚ್ಚಿತ್ಪ್ರತಿಬಿಂಬಶಕ್ತಿ ರ್ವಿಜ್ಞಾನಸಂಜ್ಞಃ ಪ್ರಕೃತೇರ್ವಿಕಾರಃ |**
**ಜ್ಞಾನಕ್ರಿಯಾವಾನಹಮಿತ್ಯಜಸ್ರಂ ದೇಹೇಂದ್ರಿಯಾದಿಷ್ವಭಿಮನ್ಯತೇಭೃಶಂ ||**

ತಾ|| ಅಂತಃಕರಣದ ವೃತ್ತಿಯನ್ನು ಹಿಂಬಾಲಿಸುತ್ತಿರುವ ಪರಮಾತ್ಮನ ಪ್ರತಿಬಿಂಬ ಚೈತನ್ಯವು ಪ್ರಕೃತಿಯ ಸಂಬಂಧದಿಂದ ವಿಜ್ಞಾನವೆಂಬ ಹೆಸರನ್ನು ಪಡೆದು ಜ್ಞಾನಸಾಧಕ ಕ್ರಿಯೆಯುಳ್ಳದ್ದಾಗಿ ದೇಹಗಳಲ್ಲಿಯೂ ಇಂದ್ರಿಯಗಳಲ್ಲಿಯೂ, ಯಾವಾಗಲೂ ನಾನೆಂಬ ವಿಶೇಷವಾದ ಅಭಿಮಾನವನ್ನು ಪಡೆಯುತ್ತದೆ ಎಂದು ಹೇಳಿರುವರು.

ಆದುದರಿಂದ ಈ ಮೇಲಿನ ತತ್ವಾರ್ಥಕ್ಕೆ ಅನುಸಾರವಾಗಿ ಭರತ ಶತ್ರುಘ್ನರು ಚಿತ್ರಕೂಟಕ್ಕೆ ಬಂದು ಶ್ರೀರಾಮನೊಡನೆ ಸೇರಿದರು.

ರಾ|| ಭರತನು ಚಿತ್ರಕೂಟಕ್ಕೆ ಬಂದು ಶ್ರೀರಾಮನನ್ನು ಬಹಳವಾಗಿ ಪ್ರಾರ್ಥಿಸಿ ಕೊಂಡರೂ ಶ್ರೀರಾಮನು ಅಯೋಧ್ಯೆಗೆ ಹಿಂದಿರುಗಲು ಸಮ್ಮತಿಸಲಿಲ್ಲ.

ತತ್ವ|| ಯಾವಾಗ ವ್ಯಷ್ಟಿದೇಹವು ಸಮಷ್ಟಿಯಾಗಿ ಅಂತಃಕರಣದ ವೃತ್ತಿಯು ಪ್ರಾರಂಭ ವಾಗುವುದೋ, ಆಗ ಉಪಸಂಹಾರಕ್ರಮವನ್ನೆಂದರೆ ಮೋಕ್ಷಕ್ರಮವನ್ನು, ಅನುಸರಿಸಿ ಜೀವನು ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯುವವರೆಗೆ ಬಂಧನದಲ್ಲೆಂದರೆ ದೇಹವ್ಯಾಪಾರ ದಲ್ಲಿರಬೇಕೆಂಬುದು ಸ್ಥಿತಿ ಅಥವಾ ಪಾಲನೆಯ ನಿಯಮವಾಗಿರುವುದು. ಆದುದರಿಂದ ಶ್ರೀರಾಮನು ರಾವಣಾದಿಗಳನ್ನು ನಿಗ್ರಹಿಸುವವರೆಗೆ ಪುನಃ ಅಯೋಧ್ಯೆಗೆ ಪ್ರವೇಶಮಾಡಲು ಸಾಧ್ಯವೇ ಇಲ್ಲ. ಈ ತತ್ವಾರ್ಥವೇ ಶ್ರೀರಾಮಚಂದ್ರನು ಅಯೋಧ್ಯೆಗೆ ಹೋಗಿ ಪಟ್ಟಾಭಿಷಿಕ್ತನಾಗಲು ಒಪ್ಪದೆ ಇದ್ದುದಾಗಿದೆ.

ಶ್ರೀರಾಮನು ಅಯೋಧ್ಯೆಗೆ ಹಿಂದಿರುಗುವುದಕ್ಕೆ ಸಮ್ಮತಿಸದಿರಲು ಭರತ ಶ್ರೀರಾಮ ರಿಗೆ ಉಂಟಾದ ಸಂವಾದವೇನೆಂದರೆ: –

(೧) –ರಾ|| ಎಲೈ ಶ್ರೀರಾಮನೇ! ನೀನು ದುಃಖದಲ್ಲಿ ವ್ಯಥೆಪಡುವುದಿಲ್ಲ. ಸುಖದಲ್ಲಿ ಹರ್ಷಪಡುವುದಿಲ್ಲ. ಇಂತಹ ಮನುಷ್ಯನು ಲೋಕದಲ್ಲಿ ಯಾರುಂಟು ?

**ತತ್ವ||** ಅಭಿಮಾನದಿಂದಲೇ ಸುಖದುಃಖಗಳ ಪ್ರಾಪ್ತಿ ಮತ್ತು ಅವುಗಳ ಅನುಭವ ವಾಗುವುದು. ಅಭಿಮಾನವೊಂದನ್ನು ಬಿಟ್ಟರೆ ಸುಖದುಃಖಾದಿಗಳು ಇರುವುದಿಲ್ಲ. ಸುಖ ದುಃಖಾದಿಗಳು ಅಭಿಮಾನರೂಪವಾದ ಅಹಂಕಾರಕ್ಕಲ್ಲದೆ ಬುದ್ಧಿಗಲ್ಲ. ನಾನು ಸುಖಿ, ನಾನು ದುಃಖಿ, ನಾನು ಕೃಶನಾಗಿದೇನೆ, ಮುಂತಾದವುಗಳು ಅಭಿಮಾನರೂಪದಿಂದಲೇ ಬಂದಿರುವುವು. ಆದುದರಿಂದ ವಿವೇಚನಾಸ್ವರೂಪವಾಗಿರುವ ಬುದ್ಧಿಗಿಂತ ಹೆಚ್ಚಿನದು ಲೋಕದಲ್ಲಿ ಯಾವುದೂ ಇಲ್ಲ.

(೨) —**ರಾ||** ಉತ್ತಮಾಶ್ವವು ಹೊರುವ ಭಾರವನ್ನು ಗಾರ್ದಭವು ಹೊರಲಾಗದಂತೆ ನೀನು ವಹಿಸಲು ಯೋಗ್ಯವಾದ ರಾಜ್ಯಭಾರವನ್ನು ವಹಿಸುವುದಕ್ಕೆ ನನಗೆ ಸಾಮರ್ಥ್ಯವಿಲ್ಲ ವೆಂದು ಭರತನು ಶ್ರೀರಾಮನಿಗೆ ಹೇಳಿದನು.

**ತತ್ವ||** ಅಂತಃಕರಣದಲ್ಲಿನ ಬುದ್ಧಿತತ್ವವೇ ದೇಹವ್ಯಾಪಾರಕ್ಕಾಗಲಿ ಮೋಕ್ಷ ಮಾರ್ಗಕ್ಕಾಗಲಿ ಯಜಮಾನನೇ ಹೊರತು ಅಭಿಮಾನಮಾತ್ರದಿಂದ ಏನೂ ಪ್ರಯೋಜನ ವಿಲ್ಲ. ಬುದ್ಧಿತತ್ವವು ಯಜಮಾನನಾಗಿದ್ದು ಕಾರ್ಯಗಳಲ್ಲಿ ಅಭಿಮಾನವು ತನ್ನದೇ ಎಂಬ ಅಭಿಮಾನದ ಭಾರವನ್ನು ವಹಿಸಿಕೊಂಡು ವಿಜೃಂಭಿಸಬಹುದು.

(೩)—**ರಾ||** ಲೋಕದಲ್ಲಿ ಯಾವನಿಂದ ಬಹು ಮಂದಿ ಜೀವಿಸಿಕೊಂಡಿರುವರೋ ಅವನ ಬದುಕೇ ಬದುಕು. ಪರಾಧೀನನಾಗಿ ಬದುಕುವವನ ಜೀವನವು ವ್ಯರ್ಥವೇಂದು ಭರತನು ಶ್ರೀರಾಮನಿಗೆ ಹೇಳಿದನು.

**ತತ್ವ||** ಬುದ್ಧಿಯಲ್ಲಿಯೇ ಸಾಕ್ಷಾತ್ಪರಮಾತ್ಮನೂ ಅಂತರ್ಯಾಮಿಯೂ, ವಿರಾಟ್ ಚೈತನ್ಯನೂ ಇರುವರು. ಇಂತಹ ಬುದ್ಧಿವೃತ್ತಿಯಲ್ಲಿ "ಶರೀರ ನಾನು" ಎಂಬ ಜ್ಞಾನೋ ದಯವಾದನಂತರವೇ ಅಹಂಕಾರಸ್ವರೂಪವಾದ ಅಭಿಮಾನವು ಉದಯವಾಗುವುದರಿಂದ ಅಹಂಕಾರವು ಯಾವಾಗಲೂ ಪರಾಧೀನವಾದುದಾಗಿದೆ.

ಈ ಮೇಲಿನ ಅಂಶಗಳ ತಾತ್ಪರ್ಯವು ಅಹಂಕಾರಕ್ಕೂ ಬುದ್ಧಿಗೂ ಇರುವ ತಾರತಮ್ಯ ವನ್ನು ಸೂಚಿಸುವುದು. ಭರತನ ಮಾತಿಗೆ ಶ್ರೀರಾಮನು ಪ್ರತ್ಯುತ್ತರವನ್ನು ಹೇಳಿ ದ್ದೇನೆಂದರೆ:—

(೧)—**ರಾ||** ಆದಿಪುರುಷನೊಬ್ಬನೇ ನಿತ್ಯನಲ್ಲದೆ ಮತ್ತೊಬ್ಬನು ನಿತ್ಯನಲ್ಲ. ಲೋಕ ದಲ್ಲಿ ಕಾಣಿಸಿಕೊಳ್ಳುವ ವಸ್ತುಗಳೆಲ್ಲವೂ ಲಯವಾಗಿಯೇ ಮುಗಿಯುವುವು. ಒಬ್ಬರಾದರೂ ಶಾಶ್ವತವಾಗಿರುವುದಿಲ್ಲ. ಕಾಲ ಕರ್ಮ ಸಂಯೋಗದಿಂದ ಒಂದು ದಿಕ್ಕಿನಲ್ಲಿ ಕೂಡಿದ ಸ್ತ್ರೀ ಪುರುಷ ಪುತ್ರ ಮಿತ್ರಾದಿಗಳು ತಮ್ಮ ತಮ್ಮ ಕಾಲ ಬಂದ ತಮ್ಮ ತಮ್ಮ ದಾರಿ ಯನ್ನೇ ಅನುಸರಿಸುವರು.

**ತತ್ವ॥** ಪರಮಾತ್ಮನೊಬ್ಬನೇ ನಿತ್ಯನು. ಉಳಿದ ನಾಮರೂಪಾತ್ಮಕವಾದ ಸರ್ವವೂ ಅನಿತ್ಯವಾದುದು. ಇದರಂತೆ ಅಭಿಮಾನವೂ ಅನಿತ್ಯವಾದುದು. ಕಾಲ ಕರ್ಮ ಸಂಯೋಗದ ಋಣಾನುಬಂಧದಿಂದ ಅಭಿಮಾನವು ಒಬ್ಬರೊಬ್ಬರಿಗೆ ಉಂಟಾಗುತ್ತದೆ. ಕಾಲ ಕರ್ಮ ಪರಿಪಾಕದಿಂದ ಒಬ್ಬರೊಬ್ಬರಿಗೆ ವಿಯೋಗವುಂಟಾಗುವಂತೆ ಅಭಿಮಾನವೂ ನಶಿಸುವುದು. ಅಂದರೆ ಅಭಿಮಾನ ಮೊದಲುಗೊಂಡು ಸರ್ವವೂ ಅನಿತ್ಯವೆಂಬ ತತ್ವವನ್ನು ಶ್ರೀರಾಮನ ವಚನವು ಸೂಚಿಸುವುದು.

(೨) –**ರಾ॥** ಎಲೈ ಭರತನೆ! ನಿನ್ನಲ್ಲಿ ಕಲ್ಯಾಣಗುಣಗಳೇ ಇವೆ. ನಾನು ಹದಿನಾಲ್ಕು ವರ್ಷ ವನವಾಸ ಮುಗಿದನಂತರ ಅಯೋಧ್ಯಾಪಟ್ಟಣಕ್ಕೆ ಬಂದು ನಿನ್ನನ್ನೂ ಕೂಡಿಕೊಂಡು ರಾಜ್ಯಾಧಿಪತ್ಯವನ್ನು ಮಾಡುವೆನು. ಕೈಕೇಯೀದೇವಿಗೆ ವರವನ್ನು ಕೊಟ್ಟದ್ದಾಗಿ ಪ್ರತಿಜ್ಞೆ ಮಾಡಿದ ದಶರಥರಾಯನ ವಾಕ್ಯವನ್ನು ಪಾಲಿಸುವೆನು. ಆದಕಾರಣ ನಾನು ವನವಾಸದಿಂದ ಬರುವವರೆಗೂ ನೀನೇ ಧರ್ಮದಿಂದ ರಾಜ್ಯವನ್ನು ಆಳಬೇಕೆಂದು ಶ್ರೀರಾಮನು ಹೇಳಿದನು.

**ತತ್ವ॥** ಶ್ರೀರಾಮಚಂದ್ರನ ವನವಾಸವು ಪೂರಯಿಸುವುದೆಂದರೆ - ಅವಿದ್ಯೆಯನ್ನು ನಿವಾರಿಸಿ ಪುನಃ ಅಯೋಧ್ಯೆಗೆ ಬರುವುದು. ಅಂದರೆ ಈಶ್ವರೋಪಾಸನಕ್ಕೆ ಬರುವವರೆಗೂ ದೇಹಾಭಿಮಾನದಲ್ಲಿರಬೇಕೆಂಬುವುದು, ನಿತ್ಯವಾಕ್ಯವೆಂದರೆ ಸೂರ್ಯಚಂದ್ರಾದ ಸೃಷ್ಟಿ ಸಂಕಲ್ಪವಾಗಿ ಈಶ್ವರನ ನಿಯಮವಾಗಿದೆ. ಅಂದರೆ, ದೇಹಸೃಷ್ಟಿಯಾಗಿ ದೇಹದ ಸ್ಥಿತಿಯೆಂದರೆ ವ್ಯಾಪಾರಕ್ಕೆ ಪ್ರಾರಂಭವಾಗಿರುವುದು. ಸ್ಥಿತಿಯ ನಿಯಮ ಅಥವಾ ಪಾಲನದ ಕಟ್ಟಳೆಯನ್ನು ಪ್ರೀತಿಮಾಡಬೇಕಾದರೆ ಮೋಕ್ಷಮಾರ್ಗದ ನಿಯಮವನ್ನು ಅನುಸರಿಸಿ ಜೀವತ್ವದಿಂದ ಈಶ್ವರತ್ವಕ್ಕೆ ಬರಬೇಕು.

ಈ ರೀತಿಯಾಗಿ ಈಶ್ವರನೋಪಾಸನವನ್ನು ಪಡೆಯುವವರೆಗೂ ದೇಹವ್ಯಾಪಾರ ನಡೆಯುವ ಬಗೆಯೊಳಗಿಲ್ಲ ಕುಚಿತರಲು ಸಾಧ್ಯವಿಲ್ಲ. ಅಭಿಮಾನವಿಲ್ಲದೆ ದೇಹಯಾತ್ರೆಯು ನಡೆಯುವುದೇ ಇಲ್ಲ. ಆದುದರಿಂದ ಶ್ರೀರಾಮನು ವನವಾಸ ಪೂರಯಿಸುವವರೆಗೂ ಭರತನೇ ರಾಜ್ಯವಾಳಬೇಕೆಂದು ನಿಯಮಿಸಿದನು. ಶ್ರೀರಾಮನು ಭರತನಿಗೆ ಧರ್ಮದಿಂದ ರಾಜ್ಯವನ್ನಾಳು, ನಿನ್ನಲ್ಲಿ ಕಲ್ಯಾಣಗುಣಗಳಿವೆ. ಎಂದು ಹೇಳಿದುದರ ತಾತ್ಪರ್ಯವೇನೆಂದರೆ - ಅಭಿಮಾನವು ಅಧರ್ಮದಲ್ಲಿ ಪ್ರವರ್ತಿಸದಂತೆ ಅಂದರೆ ರಾಜಸ ತಾಮಸಾಹಂಕಾರವಾಗದೆ ಸಾತ್ವಿಕಾಹಂಕಾರವಾಗಿ ದೇಹವ್ಯಾಪಾರ ಮಾಡುತ್ತಿರಬೇಕೆಂಬ ತತ್ವ. ಸಾತ್ವಿಕಾಹಂಕಾರದ ಸ್ವರೂಪವೇನೆಂದರೆ—ನಿರಭಿಮಾನದಿಂದ ಕಾರ್ಯಗಳನ್ನು ಮಾಡಿಕೊಂಡು ಬರುವುದು ಮತ್ತು ಸಕಲ ಕಾರ್ಯಗಳ ಫಲವನ್ನೂ ಪರಮಾತ್ಮನಲ್ಲಿ ಅರ್ಪಣೆಮಾಡುವುದು.

ಭರತನು ಸಾತ್ವಿಕಾಹಂಕಾರದ ತತ್ವದಲ್ಲಿಯೂ ಇರಲು ಸಮ್ಮತಿಸದೆ ಅಭಿಮಾನವೇ ಇಲ್ಲದಿರುವ, ಶ್ರೀರಾಮಚಂದ್ರನು ಅಯೋಧ್ಯೆಯಲ್ಲಿ ಪಟ್ಟಾಭಿಷಿಕ್ತನಾಗುವ, ನಿತ್ಯಮುಕ್ತ ಸ್ವಭಾವವಾದ, ಈಶ್ವರಸೋಪಾನವನ್ನೇ ಬಯಸಿದನು. ಈ ಈಶ್ವರಸೋಪಾನವನ್ನು ಭರತನು ಅಪೇಕ್ಷಿಸಿದುದರಿಂದ ಅವನಲ್ಲಿರುವ ಗುಣವು ಕಲ್ಯಾಣಗುಣವೆನಿಸುವ ತತ್ವವಾಗಿ ರುವುದು. ಆದರೆ ಸ್ಥಿತಿಯೆಂದರೆ ದೇಹಯಾತ್ರೆಯು ನಡೆಯಬೇಕಾಗಿರುವುದರಿಂದ ಈಶ್ವರಸೋಪಾನಕ್ಕೆ ಪುನಃ ಬರುವವರೆಗೆ ರಾಜಸ ತಾಮಸ ಗುಣಗಳೊಡನೆ ಕಲೆಯದೆ ಸಾತ್ವಿಕಾಹಂಕಾರದ ನಿರ್ವಹಣೆಯಲ್ಲಿ ಇರಬೇಕೆಂಬುದೇ ಧರ್ಮದಿಂದ ರಾಜ್ಯವನ್ನಾಳ ಬೇಕೆಂದು ಶ್ರೀರಾಮನು ಭರತನಿಗೆ ಹೇಳಿದುದಾಗಿರುತ್ತದೆ.

## ೯ನೆಯ ಪ್ರಕರಣ.

| ಭರತನು ಶ್ರೀರಾಮನ ಪಾದುಕೆಗಳಿಗೆ ಪಟ್ಟವನ್ನು ಕಟ್ಟಿ ನಂದಿಗ್ರಾಮದಲ್ಲಿ ವಾಸಮಾಡಿಕೊಂಡಿದ್ದುದು. | ಬ್ರಹ್ಮವಿದ್ಯಾಧಿಕಾರಿಯಲ್ಲಿರುವ ಅಭಿಮಾನದ ಸ್ವರೂಪವೆಂದರೆ ನಿರಭಿಮಾನದ ವಿಚಾರ. |
|---|---|

ರಾ|| ಈ ಪ್ರಕಾರವಾಗಿ ಶ್ರೀರಾಮನು ಭರತನಿಗೆ ವಿವೇಕವನ್ನು ಹೇಳಲು ಭರತನು "ಎಲೈ ಶ್ರೀರಾಮನೆ! ನಿನ್ನ ಮಾತಿಗೆ ನಾನು ಪ್ರತ್ಯುತ್ತರವನ್ನು ಕೊಡ ಲಾರೆನು. ಸಮಸ್ತ ಲೋಕಗಳ ಯೋಗಕ್ಷೇಮವನ್ನೂ ವಿಚಾರಿಸಿ ಪರಿಪಾಲಿಸಲು ಶಕ್ತಿಯುಳ್ಳ ನಿನ್ನ ಪಾದುಕೆಗಳನ್ನು ಅನುಗ್ರಹಿಸಿ ಕೊಡು" ಎಂದು ಕೇಳುವಲ್ಲಿ ಶ್ರೀರಾಮನು ಸಮ್ಮತಿಸಿ ಕೊಟ್ಟನು. ಅನಂತರ ಭರತನು ಶ್ರೀರಾಮನನ್ನು ಕುರಿತು "ಎಲೈ ಸ್ವಾಮಿಯೇ! ಒಡೆಯನಾದ ನೀನು ಹದಿನಾಲ್ಕು ವರ್ಷ ಪರ್ಯಂತರ ಜಟೆ ನಾರುವಸ್ತ್ರ ಗಳನ್ನು ಧರಿಸಿ ವ್ರತನಿಯಮದಿಂದಿರುವುದರಿಂದ ನಾನು ಭೋಗವನ್ನು ಅನುಭವಿಸಿ ಕೊಂಡಿರಬಾರದು. ನಾನೂ ಹದಿನಾಲ್ಕು ವರ್ಷಗಳ ಪರ್ಯಂತರ ಜಟೆ ನಾರುವಸ್ತ್ರಗಳನ್ನು ಧರಿಸಿಕೊಂಡು ಕಂದ ಮೂಲ ಫಲಾದಿಗಳನ್ನು ಸೇವಿಸಿಕೊಂಡು ನೀನು ಬರುವುದನ್ನೇ ಬಯಸುತ್ತ, ಅಯೋಧ್ಯಾಪಟ್ಟಣದ ಹೊರಗಿರುತ್ತೇನೆ. ಸಮಸ್ತ ರಾಜ್ಯಭಾರವನ್ನೂ ನಿನ್ನ ಪಾದುಕೆಗಳ ವಶಮಾಡಿ ಹದಿನಾಲ್ಕು ವರ್ಷಗಳ ಪರ್ಯಂತರವೂ ವ್ರತಸ್ಥನಾಗಿರುವೆನು" ಎಂದು ನುಡಿದನು. ಅನಂತರ ಭರತನು ಪಾದುಕೆಗಳನ್ನು ತಲೆಯಮೇಲೆ ಹೊತ್ತುಕೊಂಡು ಹೊರಟು ಅಯೋಧ್ಯೆಯಲ್ಲಿರದೆ ನಂದಿಗ್ರಾಮದಲ್ಲಿ ವಾಸಮಾಡಲು ಹೋಗಿ ಪಾದುಕೆ ಗಳಿಗೆ ಪಟ್ಟಗಟ್ಟಿ ಆ ಪಾದುಕೆಗಳೇ ತನ್ನ ಗುರುವೆಂದು ಭಾವಿಸಿ ಸಮಸ್ತ ರಾಜ್ಯವನ್ನೂ ಅವುಗಳ ಅಧೀನಮಾಡಿದನು. ಅಲ್ಲದೆ ತಾನು ಮಾಡಿದ ಸಕಲ ಪಾರುಪತ್ಯಗಳನ್ನೂ ಅವುಗಳಿಗೆ ಸಮರ್ಪಿಸುತ್ತ ಸಮಸ್ತ ರಾಜ್ಯವನ್ನು ಪರಿಪಾಲಿಸಿಕೊಂಡಿದ್ದನು.

**ತತ್ವ||** ಹಿಂದಿನ ಪ್ರಕರಣದಲ್ಲಿ ಶ್ರೀರಾಮಚಂದ್ರಮೂರ್ತಿಯು ಭರತನನ್ನು ರಾಜ್ಯಭಾರ ಮಾಡುತ್ತಿರೆಂದು ನಿಯಾಮಕಮಾಡಿದುದರ ತತ್ವವು ನಮ್ಮಲ್ಲಿ ಹೇಗೆ ಅನ್ವಯಿಸುವುದೆಂದರೆ—ಜೀವನ್ಮುಕ್ತಾವಸ್ಥೆಯನ್ನು ಪಡೆಯುವವರೆಗೆ ದೇಹಯಾತ್ರೆಯು ನಡೆಯಬೇಕು. ಯಾವ ಮನುಷ್ಯನೂ ಮೌನದಿಂದ ಸ್ತಂಭೀಭೂತನಾಗಿ ಕುಳಿತಿರಲು ಸಾಧ್ಯವಿಲ್ಲ. ತೀವ್ರತಮವಾದ ಮೋಕ್ಷೇಚ್ಛೆಯಿಂದಲೂ ಚಿರಕಾಲ ಸಮಾಧಿಯ ಅನುಷ್ಠಾನದಿಂದಲೂ ಉತ್ಪನ್ನವಾಗುವ ಜೀವನ್ಮುಕ್ತಾವಸ್ಥೆಯಲ್ಲಿರುವವರನ್ನು ಬಿಟ್ಟು ಉಳಿದ ಸರ್ವರೂ ದೇಹಯಾತ್ರೆಯನ್ನು ಮಾಡಬೇಕಾಗಿರುವುದರಿಂದ ಅಹಂಕಾರವೆಂದರೆ ಅಭಿಮಾನವೇ ದೇಹಯಾತ್ರೆಯ ರಾಜ್ಯಭಾರವನ್ನು ವಹಿಸಬೇಕಾಗುವುದು.

ಅಹಂಕಾರದ ರಾಜ್ಯಾಧಿಪತ್ಯವನ್ನು ತಾಮಸಾಹಂಕಾರ, ರಾಜಸಾಹಂಕಾರ, ಸಾತ್ವಿಕಾಹಂಕಾರ ಸ್ವರೂಪಗಳಿಂದ ಮೂರು ವಿಧವಾಗಿ ವಿಂಗಡಿಸಬಹುದು. ಅಹಂಕಾರವೆಂದರೆ ಅಭಿಮಾನವು ತಮೋಗುಣದೊಡನೆ ಕಲೆತರೆ ಮೋಹವನ್ನುಂಟುಮಾಡಿ ಮಮಕಾರವನ್ನೂ ಮಮಕಾರದಿಂದ ದುಃಖವನ್ನೂ ಉಂಟುಮಾಡುತ್ತದೆ. ಹೇಗೆಂದರೆ ದೇಹವೇ ನಾನೆಂಬ ಅಭಿಮಾನವು ತಮೋಗುಣದೊಡನೆ ಸೇರಿದರೆ ದೇಹದಲ್ಲಿ ಮೋಹವುಂಟಾಗಿ ದೇಹವನ್ನು ಚೆನ್ನಾಗಿ ಪೋಷಿಸಬೇಕೆಂಬ ಮಮತೆಯೂ ದೇಹಕ್ಕೇನಾದರೂ ಅಪಾಯಬಂದರೆ ದುಃಖವೂ, ಭಯವೂ ಉಂಟಾಗುತ್ತದೆ. ಅಭಿಮಾನವು ರಜೋಗುಣದೊಡನೆ ಬೆರೆತರೆ ಗರ್ವವನ್ನುಂಟುಮಾಡುತ್ತದೆ. ಹೇಗೆಂದರೆ ನನ್ನ ಸಮಾನರುಂಟೇ! ಎಂಬ ಹೆಮ್ಮೆಯೂ ಬರುತ್ತದೆ. ಅಲ್ಲದೆ ರಜೋಗುಣದ ಉದ್ರೇಕಕಾಲದಲ್ಲಿ ನಾನು ಮಾಡಿದೆನೆಂದು ಗರ್ವದಿಂದ ಎದೆಯನ್ನು ತಟ್ಟಿಕೊಳ್ಳುತ್ತಾರೆ. ಇದು ರಾಜಸಾಹಂಕಾರ. ಸಾತ್ವಿಕಾಹಂಕಾರದ ಸ್ವರೂಪವೇನೆಂದರೆ -ನಿಗರ್ವದಿಂದ ಇರುವುದು ಮತ್ತು ಸರ್ವಕ್ಕೂ ಈಶ್ವರನೇ ನಿಯಾಮಕನೆಂದು ತಿಳಿದುಕೊಂಡು ನನ್ನ ಕಾರ್ಯಗಳ ಫಲವನ್ನೂ ಅವನಿಗೇ ಅರ್ಪಿಸುವುದು ಯಾವುದಕ್ಕೂ ಅಂಟಿಕೊಳ್ಳದೆ ನಿರಭಿಮಾನದಿಂದ ಕಾರ್ಯಗಳನ್ನು ಮಾಡಿಕೊಂಡು ಬರುವುದೆ ಸಾತ್ವಿಕಾಹಂಕಾರವೆನಿಸಿಕೊಳ್ಳುತ್ತದೆ. ಈ ಸಾತ್ವಿಕಾಹಂಕಾರದ ತತ್ವದವನೇ ಭರತನು

ಈ ಮೇಲೆ ವಿವರಿಸಿರುವ ಸಾತ್ವಿಕಾಹಂಕಾರವನ್ನು ಎರಡು ಭಾಗಮಾಡಬಹುದು. ಒಂದನೆಯದು ಕರ್ಮಕಾಂಡಕ್ಕನುಸಾರವಾದ ಸಾತ್ವಿಕಾಹಂಕಾರ. ಎರಡನೆಯದು ಜ್ಞಾನಕಾಂಡಕ್ಕನುಸಾರವಾದ ಸಾತ್ವಿಕಾಹಂಕಾರ. ಕರ್ಮಕಾಂಡಕ್ಕನುಸಾರವಾದ ಅಹಂಕಾರವೆಂದರೆ, ಬ್ರಹ್ಮವಿದ್ಯಾಧಿಕಾರವಿಲ್ಲದೆ ಕರ್ಮಮಾಡಿಕೊಂಡು ಫಲವನ್ನು ಈಶ್ವರನಿಗೆ ಅರ್ಪಣೆ ಮಾಡಿಕೊಂಡು ಬರುವುದು. ಇದು ಉತ್ತರೋತ್ತರ ಚಿತ್ತಶುದ್ಧಿದ್ವಾರ ಬ್ರಹ್ಮನಿಷ್ಠೆಯನ್ನುಂಟುಮಾಡುವುದಾದುದರಿಂದ ಕರ್ಮಕಾಂಡಕ್ಕನುಸಾರವಾದ ಸಾತ್ವಿಕಾಹಂಕಾರವೆನಿಸಿಕೊಳ್ಳುವುದು. ಈ ಅರ್ಥಕ್ಕೆ ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆ ೫ ನೆಯ ಅಧ್ಯಾಯ ೧೦ ನೆಯ ಶ್ಲೋಕದಲ್ಲಿ,

ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾನ್ತಿಮಾಪ್ನೋತಿ ನೈಷ್ಠಿಕೀಂ |
ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ ||

ತಾ|| ಈಶ್ವರಪ್ರೀತಿಗಾಗಿ ಕರ್ಮಮಾಡುತ್ತೇನೆನ್ನುವವನು ಫಲದ ಬಯಕೆಯನ್ನು ಬಿಟ್ಟು ಬಹು ಹೆಚ್ಚಿನದಾದ ಶಾಂತಿಯನ್ನು ಪಡೆಯುವನು. ಹಾಗಿಲ್ಲದವನು ಫಲವನ್ನು ಬಯಸಿ ಮಾಡುವುದರಿಂದ ಕಟ್ಟುಬೀಳುವನು ಎಂಬುದಾಗಿ ಹೇಳಿರುವನು.

ಈ ಮೇಲಿನ ಶ್ಲೋಕದ ಪ್ರಥಮ ಪಾದದ ಅರ್ಥವು ಬ್ರಹ್ಮವಿದ್ಯಾಧಿಕಾರಕ್ಕೆ ಪ್ರವೇಶ ಮಾಡದೆ ಕರ್ಮಮಾರ್ಗದಲ್ಲಿದ್ದುಕೊಂಡು ಸಾತ್ವಿಕ ಕರ್ಮವನ್ನು ಮಾಡತಕ್ಕವರಿಗೆ ಅನ್ವಯ ವಾಗುತ್ತದೆ. ಹೇಗೆಂದರೆ ಅವರುಗಳಿಗೆ ಕರ್ಮಫಲದಲ್ಲಿ ಆಸಕ್ತಿಯಿಲ್ಲದಿದ್ದರೂ ಕರ್ಮಮಾಡ ಬೇಕೆಂಬ ಅಭಿಮಾನವಿರುತ್ತದೆ. ಈ ಮೇಲಿನ ಶ್ಲೋಕದ ಎರಡನೆಯ ಪಾದದ ಅರ್ಥವು ರಾಜಸ ತಾಮಸಾಹಂಕಾರಿಗಳಿಗೆ ಅನ್ವಯವಾಗುತ್ತದೆ.

ಭರತನ ತತ್ವವಾದರೋ ಎರಡನೆಯದಾದ ಜ್ಞಾನಕಾಂಡಕ್ಕೆ ಅನುಸಾರವಾದು ದೆಂದರೆ ಬ್ರಹ್ಮನಿಷ್ಠೆಗೆ ಅನುಸಾರವಾದ ಅಭಿಮಾನದ ತತ್ವದಲ್ಲಿರುವುದು. ಹೇಗೆಂದರೆ ಅಭಿ ಮಾನವು ಕರ್ಮಮಾಡುವುದರಲ್ಲಯಾಗಲೀ ಬ್ರಹ್ಮನಿಷ್ಠೆಯನ್ನು ಹೊಂದುವುದರಲ್ಲಾಗಲೀ ಇರಬೇಕು. ಬ್ರಹ್ಮನಿಷ್ಠೆಯ ಮಾರ್ಗವೇ ಬೇಕಾಗಿಲ್ಲದ ಮತ್ತು ಗೊತ್ತಿಲ್ಲದವರಿಗೆ ಅಭಿ ಮಾನವು ಕರ್ಮಾಸಕ್ತಿಯಲ್ಲಿಯೇ ಎಳೆದುಕೊಂಡು ಹೋಗುತ್ತದೆ. ಬ್ರಹ್ಮನಿಷ್ಠೆಯಲ್ಲಿ ಇರುವ ಅಭಿಮಾನವು ಪರಬ್ರಹ್ಮನಲ್ಲಿ ಆಸಕ್ತಿಯಿರುವುದರಿಂದ ಬ್ರಹ್ಮತ್ವವನ್ನು ಪಡೆಯುವು ದರ ಕಡೆಗೇ ಸೆಳೆದುಕೊಂಡು ಹೋಗುವುದು. ಆದುದರಿಂದ ಬ್ರಹ್ಮನಿಷ್ಠೆಯ ಅಭಿಮಾನದಲ್ಲಿ ಇರುವವನು ಕರ್ಮಮಾಡುತ್ತಿದ್ದರೂ ಕರ್ಮಗಳಿಗೆ ಅಸಂಗನಾಗಿ ಬ್ರಹ್ಮನಿಷ್ಠೆಯ ಸಂಗದಲ್ಲಿರುವನು. ಆದಕಾರಣ ಅಭಿಮಾನವು ಬ್ರಹ್ಮನಿಷ್ಠೆಯಲ್ಲಿದ್ದರೆ ಜ್ಞಾನಕಾಂಡದ ಫಲವೂ ಬರುವುದಲ್ಲದೆ ಕರ್ಮಮಾಡಿ ಈಶ್ವರಾರ್ಪಣ ಮಾಡುವ ಫಲವೂ ದೊರಕುವುದು.

ಭರತನು ಜ್ಞಾನಕಾಂಡಕ್ಕೆ ಅನುಸಾರವಾಗಿರುವ ತತ್ವವವನೇನೆಂದರೆ - ಈಶ್ವರಸ್ವರೂಪ ವಾದ ಪಾದುಕೆಗಳೇ ಸರ್ವ ರಾಜಕಾರ್ಯಗಳನ್ನೂ ನಿರ್ವಹಿಸಿಕೊಂಡು ಮಾಡುವುದೆಂದೂ, ತಾನು ಯಾವ ಕಾರ್ಯಗಳಿಗೂ ನಿಸ್ಸಂಗನೆಂದೂ, ತಿಳಿದುಕೊಂಡು ರಾಜ್ಯಾಡಳಿತವನ್ನು ನೋಡುತ್ತಿದ್ದನು. ಕರ್ಮಮಾಡಿ ಫಲಾರ್ಪಣೆ ಮಾಡುವುದಕ್ಕಿಂತಲೂ ಕರ್ಮದಲ್ಲಿ ಸಂಗವಿಲ್ಲದೆ ಕರ್ಮಮಾಡುವುದು ಬ್ರಹ್ಮನಿಷ್ಠೆಯನ್ನು ಸೂಚಿಸುತ್ತದೆ. ಭರತನು ಪಾದುಕೆಗಳಿಗೆ ಪಟ್ಟಾಭಿಷೇಕ ಮಾಡಿಕೊಂಡು ಮಾತ್ರ ಇರದೆ ತಾನೂ, ಶ್ರೀರಾಮನಂತೆ ಜಟಾಧಾರಿಯಾಗಿ ನಾರುವಸ್ತ್ರಗಳನ್ನುಟ್ಟುಕೊಂಡು ಶ್ರೀರಾಮನ ಅನುವರ್ತಿಯಾಗಿದ್ದ ನೆಂದರೆ—ಮೋಕ್ಷಮಾರ್ಗದಲ್ಲಿ ಪ್ರವರ್ತಿಸುತ್ತಿರುವ ಬುದ್ಧಿಯ ಅನುವರ್ತಿಯಾಗಿ ಬ್ರಹ್ಮ ನಿಷ್ಠೆಯಲ್ಲಿ ಅಭಿಮಾನವಿತ್ತೆಂಬ ತತ್ವಾರ್ಥವನ್ನು ಸೂಚಿಸುತ್ತದೆ.

ಈರೀತಿಯಾಗಿ ಭರತನು ಶ್ರೀರಾಮನಂತೆ ಜಟಾಧಾರಿಯಾಗಿ ವಾಸಮಾಡಿಕೊಂಡಿದ್ದ ಸ್ಥಳಕ್ಕೆ ನಂದಿಗ್ರಾಮವೆಂದು ಹೆಸರು. ನಂದಿಗ್ರಾಮವೆಂದರೆ ಆನಂದದ ಸ್ಥಳ ಎಂದರ್ಥ. ಅಂದರೆ ಆನಂದಮಯಕೋಶದಲ್ಲಿ ವಾಸಮಾಡಿಕೊಂಡಿದ್ದನು. ಅಂದರೆ ಪ್ರಪಂಚದ ಕಾರ್ಯಗಳನ್ನು ಮಾಡುತ್ತಿದ್ದರೂ ತಾವರೆ ಎಲೆಯ ಮೇಲಿನ ನೀರಿನಂತೆ ಪ್ರಪಂಚಕಾರ್ಯಗಳಿಗೆ ಅಂಟದೆ ಬ್ರಹ್ಮಭಾವನೆಯ ಆನಂದವೆಂದರೆ ಬ್ರಹ್ಮನೇ ನಾನೆಂಬ ಅಭಿಮಾನದ ಆನಂದದಲ್ಲಿ ಮಗ್ನನಾಗಿದ್ದುದೇ ಭರತನು ನಂದಿಗ್ರಾಮದಲ್ಲಿ ವಾಸಮಾಡಿಕೊಂಡಿದ್ದ ತತ್ವವಾಗಿರುತ್ತದೆ. ಭರತನ ತತ್ವದಂತೆ ಅಸಂಗನಾಗಿ ಪ್ರಪಂಚಕಾರ್ಯಮಾಡುತ್ತಿದ್ದರೂ ಬ್ರಹ್ಮಭಾವನೆಯಲ್ಲಿರ ಬಹುದೆಂದು ಶ್ರೀಶಂಕರಭಗವತ್ಪಾದರವರು "ಪ್ರಾರಬ್ಧಂತ್ವಿಹಭುಜ್ಯತಾಂ ಅಥ ಪರ ಬ್ರಹ್ಮಾತ್ಮನಾಸ್ಥೀಯತಾಂ" ಎಂಬದಾಗಿ ಸಾಧನಪಂಚಕ ಶ್ಲೋಕದಲ್ಲಿ ಹೇಳಿರುವರು. ಶ್ರೀವಿದ್ಯಾರಣ್ಯರವರು ಕೂಡ ಪಂಚದಶಿ ಧ್ಯಾನದೀಪಿಕೆ ೫೩, ೫೪ ನೆಯ ಶ್ಲೋಕಗಳಲ್ಲಿ,

> ಪರವ್ಯಸನಿನೀ ನಾರೀ ವ್ಯಗ್ರಾಪಿ ಗೃಹಕರ್ಮಣಿ ।
> ತದೇವಾಸ್ವಾದಯತ್ಯಂತಃ ಪರಸಂಗ ರಸಾಯನಮ್ ॥
> ಭುಂಜಾನೋಽಪಿ ನಿಜಾರಬ್ಧ ಮಾಸ್ಥಾತಿಶಯತೋಽನಿಶಮ್ ।
> ಧ್ಯಾತುಂಶಕ್ತೋ ನಸಂದೇಹೋ ವಿಷಯವ್ಯಸನೀಯಥಾ ॥

ತಾ|| ಪರಪುರುಷನ ಸಂಗದಲ್ಲಿ ಕಾಮಜನ್ಯವ್ಯಸನವುಳ್ಳ ಸ್ತ್ರೀಯು ಮನೆಯಲ್ಲಿ ಕೆಲಸಗಳನ್ನು ಮಾಡುತ್ತಿದ್ದರೂ ಪರಪುರುಷನ ಸಂಗದ ಸುಖವಿಶೇಷವನ್ನೇ ಆಸ್ವಾದನೆ ಮಾಡಿಕೊಂಡು ಹೇಗೆ ಸುಖಿಯಾಗಿರುತ್ತಾಳೋ ಹಾಗೆ ಬ್ರಹ್ಮವಿದ್ಯಾಧಿಕಾರಿಯು ಪ್ರಾರ ಬ್ಧದ ಮೂಲಕ ಬಂದಿರುವ ಕರ್ಮಗಳನ್ನು ಮಾಡುತ್ತಿದ್ದರೂ ಪರಬ್ರಹ್ಮದಲ್ಲಿನ ಆಸಕ್ತಿ ವಿಶೇಷದಿಂದ ಸರ್ವದಾ ಬ್ರಹ್ಮಭಾವನೆಯ ಅನುಸಂಧಾನದ ಅಭಿಮಾನದಲ್ಲಿರಲು ಸಂದೇಹ ವಿಲ್ಲದೆ ಸಮರ್ಥನಾಗಿರುತ್ತಾನೆ ಎಂದು ಹೇಳಿರುವರು.

ಆದುದರಿಂದ ಭರತನು ರಾಜಕಾರ್ಯಗಳನ್ನು ಮಾಡುತ್ತಿದ್ದರೂ ಜನಕರಾಯನಂತೆ ಕಾರ್ಯಗಳಲ್ಲಿ ಅಸಂಗನಾಗಿ ಬ್ರಹ್ಮನಿಷ್ಠೆಯನ್ನು ಹೊಂದುವ ಅಭಿಮಾನದ ಆನಂದದಲ್ಲಿ ಮಗ್ನನಾಗಿದ್ದನು. ಈ ಮೇಲಿನ ತತ್ವಗಳಿಗೆ ಅನುಸಾರವಾಗಿ ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆ ೮ ನೇ ಅಧ್ಯಾಯ ೭ ನೇ ಶ್ಲೋಕದಲ್ಲಿ,

> ತಸ್ಮಾತ್ಸರ್ವೇಷುಕಾಲೇಷು ಮಾಮನುಸ್ಮರ ಯುಧ್ಯಚ ।
> ಮಯ್ಯರ್ಪಿತ ಮನೋಬುದ್ಧಿ ರ್ಮಾಮೇವೈಷ್ಯಸ್ಯಸಂಶಯಃ ॥

ತಾ|| ಎಲ್ಲಾ ಕಾಲಗಳಲ್ಲಿಯೂ ನನ್ನನ್ನು ಸ್ಮರಣೆಮಾಡುತ್ತಾ ಯುದ್ಧಮಾಡು. ಮನೋಬುದ್ಧಿಗಳನ್ನು ನನ್ನಲ್ಲಿಯೇ ಇಡುವುದರಿಂದ ನೀನು ಕೊನೆಗೆ ನನ್ನನ್ನೇ ಸೇರುವುದರಲ್ಲಿ ಸಂಶಯವಿಲ್ಲ. ಎಂಬದಾಗಿ ಹೇಳಿರುತ್ತಾನೆ.

ಆದಕಾರಣ ಅಹಂಕಾರದ ತತ್ವದಲ್ಲಿರುವ ಭರತನು ಮೋಕ್ಷಮಾರ್ಗದಲ್ಲಿರುವ ಬುದ್ಧಿಯ ಅನುವರ್ತಿಯಾಗಿ ತಾನೂ ಬ್ರಹ್ಮತ್ವವನ್ನುಂಟುಮಾಡುವ ಆನಂದದಲ್ಲಿ ವಾಸವಾಗಿದ್ದನು. ಭರತನ ತತ್ವವು ಯಾವ ಭಾವನೆಯ ಆನಂದದಲ್ಲಿ ವಾಸವಾಗಿತ್ತೆಂದರೆ— ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೪೯೧ ನೆಯ ಶ್ಲೋಕದಲ್ಲಿ,

**ಅಕರ್ತಾಹಮಭೋಕ್ತಾಹಮವಿಕಾರೋಹಮಕ್ರಿಯಃ |**
**ಶುದ್ಧಬೋಧಸ್ವರೂಪೋಹಂ ಕೇವಲೋಹಂ ಸದಾಶಿವಃ ||**

ತಾ|| ನಾನು ಅಕರ್ತನು ಅಭೋಕ್ತನು ಅವಿಕಾರನು ಅಕ್ರಿಯನು ಶುದ್ಧಜ್ಞಾನಸ್ವರೂಪನು ಕೇವಲ ಪರಮಾತ್ಮಸ್ವರೂಪನು ಎಂದು ಹೇಳಿರುವಂತೆ ಮೋಕ್ಷಸಾಮ್ರಾಜ್ಯಪದವಿಯನ್ನು ಕೊಡುವ ಆನಂದದಲ್ಲಿ ಭರತನೆಂದರೆ ಅಭಿಮಾನವು ವಾಸವಾಗಿತ್ತು.

ಆದುದರಿಂದ ಭರತನ ತತ್ವದ ಅಹಂಕಾರವನ್ನು ಜ್ಞಾನಕಾಂಡಕ್ಕೆ ಅನುಸಾರವಾದ ಸಾತ್ವಿಕಾಹಂಕಾರಕ್ಕೆ ಅನ್ವಯಮಾಡಿರುತ್ತದೆ. ಜ್ಞಾನಕಾಂಡದ ಮಾರ್ಗದಲ್ಲಿಲ್ಲದೆ ಕರ್ಮಾಚರಣೆ ಮಾತ್ರ ಮಾಡಿಕೊಂಡಿರುವವರಿಗೆ ಬ್ರಹ್ಮಭಾವನೆಯ ಅನುಸಂಧಾನದಲ್ಲಿ ಆಸಕ್ತಿಯಿರುವುದಿಲ್ಲವಾದುದರಿಂದ ಇವರನ್ನು ಕರ್ಮಕಾಂಡಕ್ಕನುಸಾರವಾದ ಸಾತ್ವಿಕಾಹಂಕಾರವೆಂಬ ಎರಡನೆಯದಾಗಿ ವಿಭಾಗಮಾಡಿರುತ್ತದೆ.

ಅಭಿಮಾನದ ತತ್ವಸ್ವರೂಪನಾದ ಭರತನು ಬ್ರಹ್ಮಭಾವನೆಯ ಆಸಕ್ತಿಯುಳ್ಳದ್ದುದರಿಂದ ಬುದ್ಧಿತತ್ವಸ್ವರೂಪನಾದ ಶ್ರೀರಾಮನು ಅವಿದ್ಯಾತತ್ವದವರಾದ ರಾಕ್ಷಸರನ್ನು ನಿಗ್ರಹಿಸಲು ಅನುಕೂಲವಾಯಿತು. ಮುಖ್ಯತಾತ್ಪರ್ಯವೇನೆಂದರೆ, ಬ್ರಹ್ಮಭಾವನೆಯಲ್ಲಿ ಅಭಿಮಾನ ಅಥವಾ ಆಸಕ್ತಿಯೂ ಬೇಕು, ಇದರ ಜೊತೆಯಲ್ಲಿ ಅನುಷ್ಠಾನವೂ ಬೇಕು. ಧ್ಯಾನ ಧಾರಣ ಸಮಾಧಿಗಳ ಅನುಷ್ಠಾನವಿಲ್ಲದೆ ಆಸಕ್ತಿಮಾತ್ರದಿಂದಲೇ ಬ್ರಹ್ಮತ್ವವನ್ನು ಪಡೆಯಲಾಗುವುದಿಲ್ಲ. ಈ ತತ್ವಾರ್ಥಕ್ಕೆ ಅನುಸಾರವಾಗಿ ಶ್ರೀಶಂಕರಭಗವತ್ಪಾದರವರು,

**ಯೋಗರತೋವಾ ಭೋಗರತೋವಾ ಸಂಗರತೋವಾ ಸಂಗವಿಹೀನಃ |**
**ಯಸ್ಯಬ್ರಹ್ಮಣಿ ರಮತೇಚಿತ್ತಂ ನಂದತಿ ನಂದತಿ ನಂದತ್ಯೇವ ||**

ತಾ|| ಬ್ರಹ್ಮನಿಷ್ಠೆಯ ಸಾಧನದಲ್ಲಿರಲಿ, ಪ್ರಪಂಚದ ಭೋಗಗಳಲ್ಲಿರಲಿ, ದೇಹಾದಿಗಳಲ್ಲಿ ಅಭಿಮಾನದಿಂದಿರಲಿ, ಇಲ್ಲದೆ ಇರಲಿ, ಯಾರು ತಮ್ಮ ಬುದ್ಧಿಯನ್ನು ಪರಬ್ರಹ್ಮ

ನಲ್ಲಿ ಸಮಾಧಿಯ ಅಭ್ಯಾಸದಿಂದ ರಮಿಸುತ್ತಾರೋ ಅವರು ಆ ಪರಬ್ರಹ್ಮಸ್ವರೂಪರೇ ಆಗುತ್ತಾರೆ ಎಂದು ಹೇಳಿರುತ್ತಾರೆ.

ಆದುದರಿಂದ ಭರತನು ಬ್ರಹ್ಮಭಾವನೆಯ ಅಭಿಮಾನದಲ್ಲಿದ್ದನು. ಬುದ್ಧಿತತ್ತ್ವಸ್ವರೂಪದಲ್ಲಿರುವ ಶ್ರೀರಾಮನು ಸಮಾಧಿಯ ಅಭ್ಯಾಸದಲ್ಲಿ ಸ್ವಸ್ವರೂಪದಲ್ಲಿ ರಮಿಸುವುದರ ಮೂಲಕ ಅವಿದ್ಯಾಸ್ವರೂಪಿಗಳಾದ ರಾವಣಾದಿಗಳನ್ನು ನಿಗ್ರಹಿಸಿದನು.

ಶ್ರೀರಾಮನು ವನವಾಸಮಾಡಿಕೊಂಡು ಬರುವವರೆಗೆ ಭರತನು ಶ್ರೀರಾಮನ ಪಾದುಕೆಗಳಿಗೆ ಪಟ್ಟಗಟ್ಟಿ, ಆ ಪಾದುಕೆಗಳಿಗೆ ಪೂಜೆಮಾಡಿ ತಾನು ಮಾಡಿದ ಕಾರ್ಯಗಳನ್ನು ಅವುಗಳಿಗೆ ಅರ್ಪಣೆಮಾಡುತ್ತ, ಆ ಪಾದುಕೆಗಳೇ ಸರ್ವಕಾರ್ಯಗಳನ್ನೂ ನಿರ್ವಹಿಸುವುವೆಂದು ತಿಳಿದು, ತನ್ನ ಭಾರ ಕೊಂಚವೂ ಇಲ್ಲವೆಂದು ನಿಶ್ಚಿಂತನಾಗಿ ರಾಜ್ಯಭಾರಮಾಡುತ್ತಿದ್ದನಷ್ಟೆ! ಇದರಂತೆ ಕರ್ಮವಮಾಡಿ ಫಲವನ್ನು ಈಶ್ವರಾರ್ಪಣ ಮಾಡುವವರಾಗಲೀ, ಅಥವಾ ಅಸಂಗರಾಗಿ ಕರ್ಮಮಾಡುವವರಾಗಲೀ, ವಿಧಿಸಿರುವ ನಿತ್ಯಕರ್ಮಗಳನ್ನು ಶ್ರೀರಾಮನು ವನವಾಸದಿಂದ ಹಿಂದಿರುಗಿ ಬರುವ ಪರ್ಯಂತರವೆಂದರೆ ಆತ್ಮಸಾಕ್ಷಾತ್ಕಾರವಾಗುವವರೆಗೆ ಮಾಡಲೇಬೇಕೆಂಬ ವಿಧಿಯನ್ನು ಸೂಚಿಸುತ್ತದೆ. ಶ್ರೀರಾಮನ ಪಾದುಕೆಗಳನ್ನೇ ಶ್ರೀರಾಮನೆಂದು ಭಾವಿಸಿ ಭರತನು ಹೇಗೆ ಅದಕ್ಕೆ ಪೂಜೆಮಾಡಿ ಸಕಲವನ್ನೂ ಅದಕ್ಕೆ ಅರ್ಪಣೆಮಾಡುತ್ತಿದ್ದನೋ ಹಾಗೆ ದೇವತಾವಿಗ್ರಹಗಳನ್ನು ಪೂಜಿಸಿ, ಸಕಲ ಕಾರ್ಯಗಳ ಭಾರವನ್ನೂ ಅವಕ್ಕೆ ವಹಿಸಿ, ಮಾಡಿದ ಕಾರ್ಯಗಳ ಫಲವನ್ನು ಅರ್ಪಣೆಮಾಡಬೇಕೆಂಬುದನ್ನೂ ಭರತನ ತತ್ತ್ವವು ಸೂಚಿಸುತ್ತದೆ.

**ರಾ||** ಶ್ರೀರಾಮನು ವನವಾಸಕ್ಕೆ ಹೋಗುವುದನ್ನು ಶತ್ರುಘ್ನನು ಕೂಡ ಒಪ್ಪದೆ ಶ್ರೀರಾಮನನ್ನು ವನವಾಸಕ್ಕೆ ಕಳುಹಿಸಲು ಕಾರಣಳಾದ ಮಂಥರೆಯನ್ನು ಶಿಕ್ಷಿಸ ಹೋಗಲು ಭರತನಿಂದ ತಡೆಯಲ್ಪಟ್ಟವನಾಗಿ ಭರತನ ಜೊತೆಯಲ್ಲಿಯೇ ಚಿತ್ರಕೂಟಕ್ಕೆ ಬಂದನು. ಅನಂತರ ಭರತನು ನಂದಿಗ್ರಾಮದ ವಾಸಕ್ಕೆ ಹೋಗಲು ತಾನೂ ಜೊತೆಯಲ್ಲಿ ಹೋಗಿ ಅವನನ್ನನುಸರಿಸಿಕೊಂಡು ಇದ್ದನು.

**ತತ್ತ್ವ||** ಶತ್ರುಘ್ನನನ್ನು ಚಿತ್ತದ ತತ್ತ್ವಕ್ಕೆ ಅನ್ವಯಮಾಡಿರುತ್ತದಷ್ಟೆ! "ಸ್ವಾರ್ಥಾನುಸಂಧಾನಗುಣೇನಚಿತ್ತಂ" ಎಂಬ ಶ್ರೀಶಂಕರಭಗವತ್ಪಾದರವರ ವಾಕ್ಯದಂತೆ ಪ್ರಪಂಚವ್ಯಾಪಾರದ ಸರ್ವಕಾರ್ಯದಲ್ಲಿಯೂ ಸ್ವಾರ್ಥತೆಯ ಅನುಸಂಧಾನ ಮಾಡುವುದೇ ಚಿತ್ತದ ಕಾರ್ಯವಾಗಿರುವುದು. ಶತ್ರುಘ್ನನು ಸ್ವಾರ್ಥಾನುಸಂಧಾನವನ್ನುಂಟುಮಾಡುವ ದೇಹವ್ಯಾಪಾರ ಬೇಡವೆಂತಲೂ ಸ್ವಾರ್ಥತೆಯೇ ಇಲ್ಲದಿರುವ, ಶ್ರೀರಾಮಚಂದ್ರನು ಅಯೋಧ್ಯೆಯಲ್ಲಿರುವ, ಈಶ್ವರತ್ವವನ್ನೇ ಅಪೇಕ್ಷಿಸಿದ ತತ್ತ್ವವೇ ಶ್ರೀರಾಮನ ವನವಾಸಕ್ಕೆ ಶತ್ರುಘ್ನನು ಇಷ್ಟಪಡದೆ ಮಂಥರೆಯನ್ನು ಶಿಕ್ಷಿಸಲು ಹೋದುದಾಗಿರುವುದು.

ಈ ತತ್ವವನ್ನು ಇನ್ನೊಂದು ವಿಧವಾಗಿಯೂ ಅನ್ವಯಮಾಡಬಹುದು. ಅವ ಧಾರಣವೆಂದರೆ ಧಾರಣೆಮಾಡುವ ಕಾರ್ಯವು ಶತ್ರುಘ್ನನ ತತ್ವವಾದ ಚಿತ್ತಕ್ಕೆ ಸೇರಿದುದು. ವನವಾಸಕ್ಕೆ ಕಾರಣಳಾದ, ಮಂಥರೆಯ ತತ್ವದಲ್ಲಿರುವ, ಅಂತಃಕರಣಕ್ಕೆ ವೃತ್ತಿಯನ್ನುಂಟುಮಾಡುವ, ಕಲಕತಕ್ಕ ಸ್ವಭಾವವನ್ನು ಧಾರಣೆ ಮಾಡಿಕೊಳ್ಳುವುದಿಲ್ಲವೆಂಬ ತತ್ವದ ಸೂಚನೆಯನ್ನನುಸರಿಸಿ ಶತ್ರುಘ್ನನು ಮಂಥರೆಯನ್ನು ಶಿಕ್ಷಿಸಲು ಮಾಡಿದ ಪ್ರಯತ್ನವಾಗಿರುವುದು.

ಭರತನ ಜೊತೆಯಲ್ಲಿ ಶತ್ರುಘ್ನನು ಇದ್ದಂತೆ ಪ್ರಪಂಚವ್ಯಾಪಾರವೇ ಸತ್ಯವೆಂದು ಅದರಲ್ಲಿ ಮಗ್ನರಾಗಿರುವವರಲ್ಲಿ ಅಭಿಮಾನ ಸ್ವಾರ್ಥತೆಗಳೆರಡೂ ಜೊತೆಯಲ್ಲಿ ವೇಗವಾಗಿ ಇದ್ದೇ ಇರುವುವು. ಶ್ರೀರಾಮಚಂದ್ರನ ಲೀಲಾವಿಭೂತಿಯಾದ ಶ್ರೀಮದ್ರಾಮಾಯಣದ ತತ್ವಾರ್ಥವು ಮೋಕ್ಷಮಾರ್ಗವನ್ನೇ ಪ್ರತಿಪಾದನೆ ಮಾಡುವುದರಿಂದ ಭರತ ಶತ್ರುಘ್ನರ ತತ್ವವು ಅಭಿಮಾನ ಸ್ವಾರ್ಥತೆಗಳ ತತ್ವಗಳಾಗಿಲ್ಲ. ನಿರಭಿಮಾನ ಮತ್ತು ಸ್ವಾರ್ಥತ್ಯಾಗಗಳ ತತ್ವಗಳಲ್ಲಿರುವವು. ಅಂದರೆ ಮನುಷ್ಯನು ಮೋಕ್ಷವನ್ನು ಪಡೆಯುವುದಕ್ಕೆ ಯಾವ ವಿಧವಾಗಿ ನಿರಭಿಮಾನದಿಂದಲೂ ಅಸ್ವಾರ್ಥತೆಯಿಂದಲೂ ಇರಬೇಕೆಂಬ ತತ್ವವನ್ನು ಭರತ ಶತ್ರುಘ್ನರ ತತ್ವವು ವ್ಯಕ್ತಪಡಿಸುವುದು. ಭರತ ಶತ್ರುಘ್ನರು ಶ್ರೀರಾಮಚಂದ್ರನು ವನವಾಸವನ್ನು ಪೂರ್ಣಮಾಡಿಕೊಂಡು ಬರುವುದನ್ನೇ ಹೇಗೆ ಧ್ಯೇಯವಾಗಿಟ್ಟುಕೊಂಡಿದ್ದರೋ ಹಾಗೆ ಮನುಷ್ಯನು ತನ್ನ ಅಭಿಮಾನ ಮತ್ತು ಸ್ವಾರ್ಥತೆಗಳನ್ನು ಮೋಕ್ಷವನ್ನು ಪಡೆಯಬೇಕೆಂಬ ಧ್ಯೇಯ ಒಂದರಲ್ಲೇ ಉಪಯೋಗಿಸಿಕೊಂಡು ಈ ಜನ್ಮದಲ್ಲಿ ಅನುಭವಿಸಬೇಕಾದ ಕಾರ್ಯಗಳಲ್ಲಿ ನಿಸ್ಸಂಗನಾಗಿರಬೇಕೆಂಬ ತತ್ವವಾಗಿರುವುದು.

ಭರತನು ಶತ್ರುಘ್ನನೊಡನೆ ಅಧರ್ಮದಿಂದ ರಾಜ್ಯಪರಿಪಾಲನೆ ಮಾಡದೆ ಧರ್ಮದಿಂದ ರಾಜ್ಯಪರಿಪಾಲನೆ ಮಾಡುತ್ತಿದ್ದರೂ ತಾನು ಮಾಡಿದ ನಡೆವಳಿಕೆಯನ್ನೆಲ್ಲಾ ಶ್ರೀರಾಮನ ಪಾದುಕೆಗಳಿಗೆ ಅರ್ಪಣೆಮಾಡುತ್ತ ಜಟಾಧಾರಿಯಾಗಿ ನಿಯಮದಿಂದಿದ್ದು, ಹದಿನಾಲ್ಕುವರ್ಷ ಪೂರ್ಣವಾಗುವ ಅವಧಿಯನ್ನೇ ನಿರೀಕ್ಷಿಸಿಕೊಂಡಿದ್ದ ತತ್ವಕ್ಕೆ ಅನುಸಾರವಾಗಿ ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆ ೧೮ನೆಯ ಅಧ್ಯಾಯದಲ್ಲಿ,

ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ |
ಅಹಂತ್ವಾಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ ||

ತಾ|| ಸರ್ವಧರ್ಮಗಳನ್ನೂ ಬಿಟ್ಟು ನನ್ನೊಬ್ಬನನ್ನು ಶರಣು ಹೊಂದು. ನನ್ನ ಸ್ವರೂಪಪ್ರಕಾಶವನ್ನುಂಟುಮಾಡುವುದರಿಂದ ನಿನ್ನನ್ನು ಎಲ್ಲಾ ಪಾಪಗಳಿಂದಲೂ ನಾನು ಬಿಡಿಸುವೆನು. ವ್ಯಸನಪಡಬೇಡ. ಎಂದು ಹೇಳಿರುವನು.

ವನವಾಸ ಪೂರಯಿಸುವವರೆಗೆ ಭರತನ ರಾಜ್ಯಭಾರವೆಂದರೆ—ಮೋಕ್ಷವನ್ನು ಪಡೆಯುವವರೆಗೆ ಈಶ್ವರಾರಾಧನ ಮತ್ತು ದೇಹಯಾತ್ರಾರೂಪವಾದ ಕ್ರಿಯೆಯನ್ನು ರಾಜಸ ತಾಮಸ ಸ್ವಭಾವವನ್ನು ಬಿಟ್ಟು ಸಾತ್ವಿಕ ಸ್ವಭಾವದಿಂದಲೂ ನಿಸ್ಸಂಗದಿಂದಲೂ ಮಾಡಬೇಕೆಂಬ ತತ್ವ. ಇದರಲ್ಲಿ ರಾಜಸ ತಾಮಸ ಸ್ವಭಾವದ ನಡೆವಳಿಕೆಗಳೇ ಅಧರ್ಮ ಸ್ವರೂಪ. ಸಾತ್ವಿಕ ಸ್ವಭಾವವಾಗಿ ಮೋಕ್ಷಮಾರ್ಗಕ್ಕೆ ಸಹಕಾರಿಯಾದ ನಡೆವಳಿಕೆಗಳೇ ಧರ್ಮಮಾರ್ಗಸ್ವರೂಪ. ಆದುದರಿಂದ ಇರುವುದೇ ಧರ್ಮ ಮತ್ತು ಅಧರ್ಮಗಳೆಂದರೆ ಪಾಪಪುಣ್ಯಗಳೆರಡು. ಶ್ರೀಕೃಷ್ಣಪರಮಾತ್ಮನ ವಾಕ್ಯದಲ್ಲಿ ಸರ್ವಧರ್ಮ ಎಂಬ ಪದವಿರುವುದರಿಂದ ಧರ್ಮಾಧರ್ಮಗಳೆರಡೂ ಬೇಡವೆಂದೂ ಪರಮಾತ್ಮನೊಬ್ಬನೇ ಬೇಕೆಂದೂ ತಾತ್ಪರ್ಯವಾಗಿರುತ್ತದೆ. ಇದರಂತೆ ಭರತನು ಧರ್ಮಮಾರ್ಗದಿಂದ ರಾಜ್ಯಭಾರಮಾಡುತ್ತಿದ್ದರೂ ರಾಜ್ಯದ ಸರ್ವಭಾರವನ್ನೂ ಶ್ರೀರಾಮನ ಪಾದುಕೆಗಳಿಗೆ ಅರ್ಪಣೆಮಾಡುತ್ತಿದ್ದಂತೆ ಧರ್ಮ ಮಾರ್ಗದ ನಡೆವಳಿಕೆಯಲ್ಲಿ ಮನುಷ್ಯರು ಇರಬೇಕು. ಹೀಗಿದ್ದರೂ ತಮ್ಮ ಇರುವಿಕೆಯನ್ನೆಲ್ಲ ಪರಮಾತ್ಮನಲ್ಲಿ ಅರ್ಪಣೆಮಾಡುತ್ತ, ಇರುವಿಕೆಗೆ ಅಸಂಗರಾಗಿ, ಭರತನು ಶ್ರೀರಾಮನ ಅವಧಿಯನ್ನು ನಿರೀಕ್ಷಿಸಿಕೊಂಡಿದ್ದಂತೆ ಬ್ರಹ್ಮತ್ವವನ್ನು ಪಡೆಯುವುದರಲ್ಲಿ ಅಭಿಮಾನವಿರಬೇಕೆಂಬ ತತ್ವಾರ್ಥವೇ ಮೇಲಿನ ಶ್ರೀಕೃಷ್ಣಪರಮಾತ್ಮನ ಶ್ಲೋಕದ ತಾತ್ಪರ್ಯವಾಗಿರುತ್ತದೆ.

ಧರ್ಮಮಾರ್ಗದ ನಡೆವಳಿಕೆಗಳೂ ಅಧರ್ಮಮಾರ್ಗದ ನಡೆವಳಿಕೆಗಳೂ ಕ್ರಿಯಾರೂಪವಾದುವು. ಕ್ರಿಯಾರೂಪವನ್ನು ಬಿಟ್ಟು ಯಾವ ನಡೆವಳಿಕೆಗಳೂ ಇರುವುದಿಲ್ಲ. ಕಬ್ಬಿಣ ಮತ್ತು ಚಿನ್ನದ ಸಂಕೋಲೆಗಳೆರಡೂ ಸಂಕೋಲೆಯಾಗಿರುವಂತೆ ಧರ್ಮ ಮತ್ತು ಅಧರ್ಮಕ್ರಿಯೆಗಳೆರಡೂ ಬೇಡವೆಂದು ಇವುಗಳಿಗೆ ನಿಸ್ಸಂಗರಾಗಿ ಪರಬ್ರಹ್ಮತ್ವವನ್ನು ಪಡೆಯುವ ಅಭಿಮಾನದಲ್ಲಿರಬೇಕು. ಈ ತತ್ವಕ್ಕೆ,

> ಕಾಯೇನ ವಾಚಾ ಮನಸೇಂದ್ರಿಯೈರ್ವಾ ಬುದ್ಧ್ಯಾತ್ಮನಾ ವಾ
> ಪ್ರಕೃತೇಃ ಸ್ವಭಾವಾತ್ | ಕರೋಮಿ ಯದ್ಯತ್ಸಕಲಂ ಪರಸ್ಮೈ
> ನಾರಾಯಣಾಯೇತಿ ಸಮರ್ಪಯಾಮಿ ||

ಎಂಬ ಮಂತ್ರವೂ

> ಯತ್ಕಿಂಚ ದುರಿತಂಮಯಿ ಇದಮಹಂ ಮಾ ಮಮೃತಯೋನೌ
> ಸೂರ್ಯೇಜ್ಯೋತಿಷಿ ಜುಹೋಮಿ ಸ್ವಾಹಾ |

ಎಂಬ ಮಂತ್ರವೂ ನಿತ್ಯಕರ್ಮದಲ್ಲಿ ಉಪಯೋಗಿಸಲ್ಪಡುತ್ತವೆ. ಈ ಮಂತ್ರಗಳಿಂದ ದೇಹ, ವಾಕ್ಕು, ಮನಸ್ಸು, ಇಂದ್ರಿಯ, ಬುದ್ಧಿಗಳಿಂದ ಮಾಡಲ್ಪಟ್ಟ ಸರ್ವಕ್ರಿಯೆಯನ್ನೂ ನಾನೆಂಬುದನ್ನೂ ಸ್ವಯಂಪ್ರಕಾಶನಾದ ಶ್ರೀಮನ್ನಾರಾಯಣನಿಗೆ ಅರ್ಪಣೆಮಾಡುವು

ದೆಂದರೆ, ಎಲ್ಲಾ ವಿಧವಾದ ಕ್ರಿಯೆಗಳನ್ನೂ ಮತ್ತು ನಾನೆಂಬ ಅಭಿಮಾನದೊಡಗೂಡಿದ ಸರ್ವವನ್ನೂ ಶ್ರೀಮನ್ನಾರಾಯಣನಿಗೆ ಅರ್ಪಣೆಮಾಡಿ ಮನುಷ್ಯನು ತಾನು ಭಾರವನ್ನು ವಹಿಸಿಕೊಳ್ಳದೆ ನಿಶ್ಚಿಂತನಾಗಿ ಬ್ರಹ್ಮಜ್ಞಾನವನ್ನು ಪಡೆಯುವ ಸ್ವಾರ್ಥತೆಗಳುಳ್ಳವನಾಗಬೇಕು.

ಅಭಿಮಾನ ಸ್ವಾರ್ಥತೆಗಳು ಪರಮಾತ್ಮಸಾಕ್ಷಾತ್ಕಾರವನ್ನು ಪಡೆಯುವುದರಲ್ಲಿಯೇ ನೆಲೆಗೊಳ್ಳುತ್ತಾ ಬಂದರೆ ಶ್ರೀರಾಮನು ರಾವಣಾದಿ ರಾಕ್ಷಸರನ್ನು ನಿಗ್ರಹಿಸಿ ಬಂದು ಪಟ್ಟಾಭಿಷಿಕ್ತನಾದಂತೆ ಜನನ ಮರಣ ರೂಪವಾದ ಬಂಧನದಿಂದ ಮುಕ್ತನಾಗಿ ಮಾನವನು ಪರಬ್ರಹ್ಮ ಪದವಿಯನ್ನು ಪಡೆಯುತ್ತಾನೆ. ಆದುದರಿಂದ ಈಶ್ವರಾರಾಧನಪೂರ್ವಕವಾದ ಕರ್ಮಗಳನ್ನಾಗಲಿ ದೇಹಯಾತ್ರಾರೂಪವಾದ ಕ್ರಿಯೆಯನ್ನಾಗಲಿ, ಭರತ ಶತ್ರುಘ್ನರು ಶ್ರೀರಾಮನು ವನವಾಸಪೂರ್ತಿಮಾಡಿಕೊಂಡು ಬರುವುದೊಂದನ್ನೇ ಧ್ಯೇಯವಾಗಿಟ್ಟುಕೊಂಡಿದ್ದಂತೆ, ಪರಬ್ರಹ್ಮ ಪದವಿಯನ್ನು ಪಡೆಯಬೇಕೆಂಬ ಇಚ್ಛೆಯೊಂದರಿಂದಲೇ ಮಾಡುತ್ತ ಬರಬೇಕೆಂಬುದು ವ್ಯಕ್ತಪಡುವುದು. ಈ ತತ್ವಾರ್ಥಕ್ಕನುಸಾರವಾಗಿ ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆ ೧೮ನೆಯ ಅಧ್ಯಾಯ ೫೬ನೆಯ ಶ್ಲೋಕದಲ್ಲಿ,

**ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ |**
**ಮತ್ಪ್ರಸಾದಾ ದವಾಪ್ನೋತಿ ಶಾಶ್ವತಂ ಪದಮವ್ಯಯಂ ||**

ತಾ|| ಈಶ್ವರಾರಾಧನಪೂರ್ವಕವಾದ ನಿತ್ಯ ನೈಮಿತ್ತಿಕ ಕರ್ಮಗಳನ್ನೂ, ದೇಹಯಾತ್ರೆಯ ಸರ್ವಕ್ರಿಯೆಗಳನ್ನೂ ನನ್ನನ್ನು ಪಡೆಯಬೇಕೆಂಬ ಒಂದೇ ಇಚ್ಛೆಯಿಂದ ಮಾಡಿದರೆ ಚಿತ್ತಶುದ್ಧಿರೂಪವಾದ ನನ್ನ ಅನುಗ್ರಹದಿಂದ ಶಾಶ್ವತವಾದ ಬ್ರಹ್ಮಪದವಿಯನ್ನು ಪಡೆಯುತ್ತಾನೆ. ಆ ಬ್ರಹ್ಮಪದವಿಯೆಂಬುದು ಎಲ್ಲಾ ಪರಿಮಿತಿಗಳನ್ನೂ ಮೀರಿದ ಪುನರಾವರ್ತಿಯಿಲ್ಲದ ಅಖಂಡಸ್ವರೂಪವಾದುದು. ಎಂಬದಾಗಿ ಹೇಳಿರುವನು.

ಮುಖ್ಯವಾಗಿ ಮನುಷ್ಯನ ನಡೆವಳಿಕೆಯ ಆಚರಣೆಯ ವಿಚಾರಕ್ಕೆ ಭರತ ಶತ್ರುಘ್ನರ ತತ್ವವು ರತ್ನಪ್ರಾಯವಾಗಿರುವುದು.

**ರಾ||** ಕೌಸಲ್ಯಾ, ಸುಮಿತ್ರಾ, ಕೈಕೇಯಿ ಮುಂತಾದವರೂ ಚಿತ್ರಕೂಟಕ್ಕೆ ಬಂದಿದ್ದರು.

**ತತ್ವ||** ಜ್ಞಾನ, ಕ್ರಿಯಾ, ಇಚ್ಛಾರೂಪವಾಗಿರುವ ಅಂತಃಕರಣದ ವೃತ್ತಿಗಳು ಪ್ರಾಣಿಗಳಲ್ಲಿ ಅಭಿವ್ಯಕ್ತವಾಗಿ ಪ್ರಥಮದಲ್ಲಿ ಕಾಣಿಸಿಕೊಳ್ಳುವ ಸ್ಥಳವೇ ವಿಜ್ಞಾನಮಯ ಕೋಶವಾಗಿರುತ್ತದೆ. ವಿಜ್ಞಾನಮಯಕೋಶದಲ್ಲಿ ಪ್ರಥಮದಲ್ಲಿ ಅಭಿವ್ಯಕ್ತವಾಗಿ ಅನಂತರ

ಮನೋಮಯ, ಪ್ರಾಣಮಯ, ಅನ್ನಮಯ ಕೋಶಗಳೊಡನೆ ಕಲೆತು ಕಾರ್ಯದಲ್ಲಿ ಪ್ರದರ್ಶಿಸಲ್ಪಡುತ್ತವೆ. ಆದುದರಿಂದ ವಿಜ್ಞಾನದಲ್ಲಿ ಸರ್ವವೂ ಪ್ರತಿಷ್ಠಿತವಾಗಿರುವುದು. ಹೀಗಿರುವುದೆಂದು ತೈತ್ತಿರೀಯ ಮುಂತಾದ ಶ್ರುತಿವಾಕ್ಯಗಳಿರುವುವು. ಒಳಗಡೆಯಿಂದ ಪ್ರಥಮ ಕೋಶವಾದ ಆನಂದಮಯಕೋಶದಲ್ಲಿ ಕಾರ್ಯ ಕಾರಣ ಭಾವವಿಲ್ಲದಿರುವುದರಿಂದ ವೃತ್ತಿಗಳ ಅಭಿವ್ಯಕ್ತತೆಯು ತೋರುವುದಿಲ್ಲ. ಆದಕಾರಣ ಪರ್ವತಕ್ಕೆ ಶಿಖರದಂತೆ ಪ್ರಾಣಿಗಳಲ್ಲಿನ ಸಕಲ ವ್ಯಾಪಾರಗಳಿಗೂ ವಿಜ್ಞಾನಮಯಕೋಶವು ಶಿಖರದಂತೆ ಇರುವುವೆಂಬ ತತ್ವಪ್ರತಿಪಾದನೆಯೇ ಚಿತ್ರಕೂಟದಲ್ಲಿ ಸಕಲರೂ ಸೇರಿದ್ದುದಾಗಿರುವುದು.

## ೧೧ನೆಯ ಪ್ರಕರಣ

| ವಸಿಷ್ಠ ಮತ್ತು ಜಾಬಾಲಿ ಮುನಿಗಳು ಶ್ರೀರಾಮನಿಗೆ ಬುದ್ಧಿವಾದ ಹೇಳಿದುದು. | ದೇಹಯಾತ್ರೆಗೆ ಬೇಕಾಗಿರುವ ವಿಜ್ಞಾನ ಕರ್ಮಗಳೆರಡೂ ಜ್ಞಾನಕ್ಕೆ ಪ್ರತಿಬಂಧಕವೆಂಬ ವಿಚಾರ. ಗರ್ಭದಲ್ಲಿ ಶಿಶುವು ಜನ್ಮಾಂತರಗಳ ವಿಚಾರವನ್ನು ಜ್ಞಾಪಿಸಿಕೊಂಡು ಪಶ್ಚಾತ್ತಾಪಪಡುವ ವಿಚಾರ. |
|---|---|

ರಾ|| ಚಿತ್ರಕೂಟದಲ್ಲಿ ಶ್ರೀರಾಮ ಭರತರ ಸಂವಾದವಾಗುತ್ತಿರುವಾಗ ಜಾಬಾಲಿ ಮುನೀಶ್ವರನೂ ವಸಿಷ್ಠಮುನಿಗಳೂ ವನವಾಸಕ್ಕೆ ಹೊರಟು ಬಂದಿರುವ ಶ್ರೀರಾಮನಿಗೆ ಅಯೋಧ್ಯೆಗೆ ಹಿಂದಿರುಗಿ ಬರುವಂತೆ ಬುದ್ಧಿವಾದಗಳನ್ನು ಹೇಳಿದರು.

ತತ್ವ|| ಜಾಬಾಲಿಮುನಿಯೆಂದರೆ "ಅಜಾಃ ಪಾಲಯತೀತಿ ಜಾಬಾಲಿಃ ಪಾಲ ರಕ್ಷಣೆ" ಎಂದು ಅಮರದ ವ್ಯಾಖ್ಯಾನದಲ್ಲಿ ವ್ಯುತ್ಪತ್ತಿ ಇರುವುದು. ಮೇಕೆಗಳನ್ನು ಕಾಯುವವನೆಂದು ಇದರ ಸಾಮಾನ್ಯವಾದ ಅರ್ಥ. ಆದರೆ ಇದರ ತತ್ವಾರ್ಥವೇನೆಂದರೆ, ಅಜ ಎಂದರೆ ಚತುರ್ಮುಖಬ್ರಹ್ಮ ಅಥವಾ ಸೃಷ್ಟಿ. ಇಂತಹ ಸೃಷ್ಟಿಯನ್ನು ಪಾಲನೆ ಅಥವಾ ಸ್ಥಿತಿಯಲ್ಲಿಟ್ಟುಕೊಂಡಿರುವುದು ಕ್ರಿಯೆ ಅಥವಾ ಕರ್ಮ. ಜಾಬಾಲಿಯೆಂದರೆ ಕರ್ಮಠ. ಮುನಿಯೆಂದರೆ ಪಂಡಿತ. ಆದುದರಿಂದ ಕರ್ಮಮಾರ್ಗದಲ್ಲಿನ ಸಕಲ ಸಾರವನ್ನೂ ಅನುಭವದಿಂದ ತಿಳಿದಿರುವವನಿಗೆ ಜಾಬಾಲಿಮುನಿಯೆಂದು ಹೆಸರು. ಅಂದರೆ ಕರ್ಮಮಾರ್ಗವನ್ನು ತಿಳಿದು ಅದನ್ನು ದಾಟಿರುವ ಉತ್ತಮವಾದ ಜ್ಞಾನಿಯೆಂಬ ತತ್ವಾರ್ಥ. ಇದಕ್ಕನುಸಾರವಾಗಿ ವಸಿಷ್ಠರೇ ಶ್ರೀರಾಮನೊಡನೆ "ಜಾಬಾಲಿಮುನೀಶ್ವರನು ಸಾಮಾನ್ಯನೆಂದು ತಿಳಿಯಬೇಡ, ಸಮಸ್ತ ಲೋಕಗಳ ಉತ್ಪತ್ತಿ ಲಯಗಳನ್ನು ಬಲ್ಲ ಜ್ಞಾನಿ" ಯೆಂದು ಹೇಳಿರುತ್ತಾರೆ.

**ರಾ||** ಇಂತಹ ಜಾಬಾಲಿಮುನೀಶ್ವರನು ಶ್ರೀರಾಮನ ಸಂಗಡ ಅತ್ಯಂತ ದುರ್ಗಮವಾದ ಮಾರ್ಗಗಳೂ, ಹಳ್ಳ ತಿಟ್ಟುಗಳೂ, ಉಳ್ಳದ್ದಾಗಿ ಎಲ್ಲಿ ನೋಡಿದರೂ ಮುಳ್ಳುಗಳಿಂದ ಪರಿಪೂರ್ಣವಾದ ಈ ವನದಲ್ಲಿ ಸಂಚರಿಸುವುದನ್ನು ಬಿಟ್ಟು ಅಯೋಧ್ಯೆಗೆ ಬಂದು ಪಟ್ಟಾಭಿಷಿಕ್ತನಾಗೆಂದು ಹೇಳಿದನು.

**ತತ್ವ||** ಶ್ರೀರಾಮನು ವನವಾಸಕ್ಕೆ ಹೊರಟಿರುವುದೆಂದರೆ—ಪ್ರತಿಬಿಂಬಚೈತನ್ಯವು ದೇಹವ್ಯಾಪಾರಕ್ಕೆ ಹೊರಟಿರುವುದೆಂಬ ತತ್ವವೆಂದು ಹಿಂದೆ ತಿಳಿಸಿತಷ್ಟೆ! ವನವಾಸವೆಂದರೆ ವಿಜ್ಞಾನ ಮತ್ತು ಕ್ರಿಯಾಸ್ವರೂಪವಾದ ದೇಹಯಾತ್ರೆಯು. ಹಳ್ಳ ತಿಟ್ಟುಗಳೆಂದರೆ ಉತ್ತಮಾಧಮ ಜನ್ಮಗಳುಳ್ಳ ಮತ್ತು ಸುಖದುಃಖರೂಪವಾದ ವ್ಯಾಪಾರಗಳುಳ್ಳದ್ದೆಂಬ ತತ್ವವಾಗಿರುತ್ತದೆ. ಮುಳ್ಳುಗಳಿಂದ ಪರಿಪೂರ್ಣವಾದುದೆಂದರೆ—ಕಷ್ಟಗಳಿಂದ ತುಂಬಿರುವುದೆಂಬ ತತ್ವವಾಗಿರುವುದು. ಇಂತಹ ವನದಲ್ಲಿ ಸಂಚರಿಸುವುದನ್ನು ಬಿಟ್ಟು ಅಯೋಧ್ಯೆಗೆ ಬಂದು ಪಟ್ಟಾಭಿಷಿಕ್ತನಾಗೆಂದರೆ—ಕ್ರಿಯಾರೂಪವಾಗಿರುವ ದೇಹಯಾತ್ರೆಯನ್ನು ಬಿಟ್ಟು ಈಶ್ವರತ್ವಕ್ಕೆ ಬಂದುಬಿಡೆಂಬ ತತ್ವವಾಗಿರುತ್ತದೆ.

**ರಾ||** ಜಾಬಾಲಿಮುನಿಯು ಇನ್ನೂ ಹೇಳಿದುದೇನೆಂದರೆ—ಧರ್ಮಾರ್ಥಗಳನ್ನು ಸಂಪಾದಿಸಬೇಕೆಂದು ಬಹುಮಂದಿ ವನದಲ್ಲಿ ಕಾಯಕ್ಲೇಶಗಳನ್ನು ಹೊಂದಿ ಕಡೆಗೆ ಲೋಕಾಂತರಗಳಿಗೆ ಹೋಗುವರು. ದಾನ ಧರ್ಮಾದಿಗಳಿಂದ ಸ್ವರ್ಗಾದಿ ಲೋಕಗಳುಂಟಾಗಲಾರವು. ಪ್ರತ್ಯಕ್ಷವೇ ಪ್ರಮಾಣವೆಂದು ತಿಳಿಯೆಂಬದಾಗಿ ಅನೇಕ ವಿಧವಾಗಿ ಚಾರ್ವಾಕಮತದಿಂದ ಶ್ರೀರಾಮನಿಗೆ ಹೇಳಿದನು.

**ತತ್ವ||** ವನದಲ್ಲಿ ಸಂಚರಿಸುವುದೆಂದರೆ—ಕ್ರಿಯಾರೂಪವಾದ ದೇಹಯಾತ್ರೆಯಲ್ಲಿ ಕರ್ಮಮಾರ್ಗಾನುಸಾರವಾಗಿ ಧರ್ಮ ಅರ್ಥ ಕಾಮಗಳನ್ನು ಸಂಪಾದನೆ ಮಾಡಬೇಕೆಂದು ಬಹು ಜನರು ದುಃಖಪಟ್ಟು ನೊಂದಿರುತ್ತಾರೆ. ಅಂದರೆ ಕರ್ಮಮಾರ್ಗವು ಬಹಳ ಕಷ್ಟತಮವಾದುದು. ಈ ಕರ್ಮಮಾರ್ಗದ ಫಲವಿದ್ದಷ್ಟು ಕಾಲ ಉತ್ತಮವಾದ ಲೋಕಗಳ ವಾಸ ದೊರಕುವುದೇ ಹೊರತು ಮೋಕ್ಷವೆಂದಿಗೂ ದೊರೆಯುವುದಿಲ್ಲ. ನೀನು ಇದ್ದ ಅಯೋಧ್ಯಾಪಟ್ಟಣದ ವಾಸವೆಂದರೆ, ಈಶ್ವರತ್ವವೇ ಪ್ರತ್ಯಕ್ಷಪ್ರಮಾಣ. ಅಂದರೆ ದೇಹಯಾತ್ರೆಯ ರೂಪವಾದ ಕರ್ಮಮಾರ್ಗವೇ ನಾಸ್ತಿಕಮಾರ್ಗವೆಂಬ ತಾತ್ಪರ್ಯವನ್ನೂ ಸೂಚಿಸುತ್ತದೆ. ದೇಹ ಮತ್ತು ದೇಹವ್ಯಾಪಾರಗಳು ಸ್ಥಿರವಲ್ಲವಾದುದರಿಂದ ಚಾರ್ವಾಕ ಅಥವಾ ನಾಸ್ತಿಕವಾದದಿಂದ ದೇಹವಾಸವು ಬೇಡವೆಂಬ ಅರ್ಥದ ಮೇಲೆ ಜಾಬಾಲಿ ಮುನಿಯು ಶ್ರೀರಾಮನಿಗೆ ಚಾರ್ವಾಕಮತದಿಂದ ಹೇಳಿದ್ದಾಗಿರುತ್ತದೆ.

**ರಾ||** ಜಾಬಾಲಿಮುನಿಯ ಮಾತಿಗೆ ಶ್ರೀರಾಮನು "ಎಲೈ ಜಾಬಾಲಿಮುನೀಶ್ವರನೆ! ಪಿತೃವಾಕ್ಯವನ್ನು ಪರಿಪಾಲಿಸಲು ನಿಶ್ಚಯಿಸಿರುತ್ತೇನೆ. ವನವಾಸದಲ್ಲಿ ಶುಚಿಯಾಗಿದ್ದು

ಹದಿನಾಲ್ಕು ವರ್ಷ ಕಳೆದನಂತರ ಅಯೋಧ್ಯೆಗೆ ಬಂದು ಪಟ್ಟಾಭಿಷಿಕ್ತನಾಗುತ್ತೇನೆ. ಅಗ್ನಿ, ವಾಯು, ಚಂದ್ರ, ಸೂರ್ಯರು ಕರ್ಮಸಾಕ್ಷಿಗಳಾಗಿರುವರು. ಸತ್ಯ, ಧರ್ಮ, ವ್ರತ, ದಯೆ, ಪ್ರಿಯವಚನ, ತಪಸ್ಸು ಮೊದಲಾದುವು ಸ್ವರ್ಗಸಾಧನಗಳೆಂದು ಪುಣ್ಯಾತ್ಮರು ಹೇಳುವರು. ಅನೇಕ ಧರ್ಮಗಳನ್ನು ಮಾಡುತ್ತಾ ಜನಗಳು ಸನ್ಮಾರ್ಗವನ್ನು ಬಯಸುತ್ತಾರೆ. ಹೀಗಿರುವಲ್ಲಿ ಎಲೈ ಮುನೀಶ್ವರನೆ! ಧರ್ಮವನ್ನು ತಿರಸ್ಕರಿಸುವುದೆಂದರೆ ಈಶ್ವರನನ್ನು ತಿರಸ್ಕರಿಸಿ ಮಾತಾಡುವುದರಿಂದ ನಿನ್ನನ್ನು ನಾಸ್ತಿಕನೆಂದು ನಿಂದಿಸುವರು. ನಿನ್ನ ಮಾತನ್ನು ನಾನು ಕೇಳಿದರೆ ನನ್ನನ್ನೂ ನಾಸ್ತಿಕನೆಂದು ಸಮಸ್ತ ಪ್ರಜೆಗಳೂ ನಿಂದಿಸುವರು.'' ಎಂದು ಕೋಪದಿಂದ ಹೇಳಿದನು.

**ತತ್ವ||** ಸ್ಥಿತಿಯೆಂದರೆ ದೇಹವಾಸಕ್ಕೆ ಬಂದಿರುವುದು ಈಶ್ವರನ ನಿಯಮವಾಗಿರುತ್ತದೆ. ಅದನ್ನು ಪೂರಯಿಸಿಕೊಂಡೆಂದರೆ—ಸ್ಥಿತಿಯು ಕ್ರಮವನ್ನು ಪೂರಯಿಸಿಕೊಂಡು ಈಶ್ವರತ್ವವನ್ನು ಪುನಃ ಪಡೆಯಬೇಕೆಂಬ ತತ್ವದ ಸೂಚನೆಯೇ ಶ್ರೀರಾಮನು ಪಿತೃವಾಕ್ಯವನ್ನು ಪರಿಪಾಲಿಸಲು ನಿಶ್ಚಯಿಸಿರುತ್ತೇನೆಂದು ಹೇಳಿರುವುದಾಗಿದೆ. ವನವಾಸದಲ್ಲಿ ಶುಚಿಯಾಗಿದ್ದುಕೊಂಡು ಹದಿನಾಲ್ಕು ವರ್ಷ ಕಳೆವನಂತರ ಅಯೋಧ್ಯೆಗೆ ಬರುವೆನೆಂದು ಹೇಳಿರುವುದರ ತತ್ವವೇನೆಂದರೆ—ದೇಹವ್ಯಾಪಾರಕ್ಕೆ ಅಂಟದೆ ಅಸಂಗನಾಗೆಂದರೆ ಧರ್ಮಮಾರ್ಗದಲ್ಲಿದ್ದುಕೊಂಡು ಮೋಕ್ಷಕ್ರಮವನ್ನು ಹೊಂದಿ ಪುನಃ ಈಶ್ವರತ್ವವನ್ನು ಪಡೆಯಬೇಕೆಂಬ ತತ್ವಾರ್ಥವಾಗಿರುತ್ತದೆ. ವನವಾಸದಲ್ಲಿ ಶುಚಿಯಾಗಿದ್ದುಕೊಂಡು ಇರುತ್ತೇನೆಂದು ಶ್ರೀರಾಮನು ಹೇಳಿದುದರ ಮತ್ತು ಶ್ರೀರಾಮನು ವನವಾಸಕ್ಕೆ ಹೊರಟಾಗ ನಾರುಮಡಿಗಳನ್ನುಟ್ಟು ಜಟಾಧಾರಿಯಾಗಿ ಹೊರಟ ತತ್ವವೇನೆಂದರೆ—ಆತ್ಮಪ್ರತಿಬಿಂಬಚೈತನ್ಯವು ಈಶ್ವರತ್ವದಿಂದ- ಜೀವತ್ವವನ್ನು ಪಡೆದರೂ ಪ್ರಕೃತಿಯ ವಿಕಾರವಾದ ಉಪಾಧಿಗಳನ್ನು ಪ್ರಕಾಶಪಡಿಸಿಕೊಂಡು ತಾನು ನಿರ್ಲಿಪ್ತವಾಗಿರುವುದೇ ಹೊರತು ಪ್ರಕೃತಿಯ ವಿಕಾರಗಳು ಚೈತನ್ಯಕ್ಕೆ ಲೋಪವಿಲ್ಲದಿರುವ ತತ್ವವೇ ಶ್ರೀರಾಮನು ವನವಾಸಕಾಲದಲ್ಲಿ ನಾರುಮಡಿಗಳನ್ನುಟ್ಟು ಶುಚಿಯಾಗಿದ್ದುದರ ತತ್ವವಾಗಿರುವುದು. ಇದೇ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿಯಲ್ಲಿ,

**ಕರ್ತೃತ್ವ ಭೋಕ್ತೃತ್ವ ಬಲತ್ವ ಮತ್ತತಾ |**
**ಜಡತ್ವ ಬದ್ಧತ್ವ ವಿಮುಕ್ತತಾದಯಃ ||**
**ಬುದ್ಧೇರ್ವಿಕಲ್ಪಾನತು ಸನ್ತಿ ವಸ್ತುತಃ ||**
**ಸ್ವಸ್ಮಿನ್ ಪರೇಬ್ರಹ್ಮಣಿ ಕೇವಲೇದ್ವಯೇ ||**

ತಾ|| ಕರ್ತೃತ್ವ, ಭೋಕ್ತೃತ್ವ, ನೀಚತ್ವ, ಮತ್ತತೆ, ಜಡತ್ವ, ಬಂಧ, ಮೋಕ್ಷ ಮೊದಲಾದುವೆಲ್ಲವೂ ಬುದ್ಧಿವೃತ್ತಿಯ ವಿಕಲ್ಪಗಳಲ್ಲದೆ ಬುದ್ಧಿಯನ್ನು ಪ್ರಕಾಶಪಡಿಸುವ ಕೇವಲವಾದ ಅದ್ವಯವಾದ ಪರಬ್ರಹ್ಮಚೈತನ್ಯದಲ್ಲಿ ವಾಸ್ತವವಾಗಿಲ್ಲವು ಎಂದು ಹೇಳಿರುವರು.

ಈ ತತ್ವಾರ್ಥದ ಸೂಚನೆಯೇ ಶ್ರೀರಾಮನು ವನವಾಸಕಾಲದಲ್ಲಿ ನಾರುಮುಡಿಗಳನ್ನುಟ್ಟುಕೊಂಡು ಶುಚಿಯಾಗಿದ್ದ ತತ್ವವಾಗಿರುವುದು. ಜಾಬಾಲಿಮುನಿಯು ನಾಸ್ತಿಕವಾದದಿಂದ ಧರ್ಮಮಾರ್ಗವನ್ನು ನಿಂದಿಸಲು ಶ್ರೀರಾಮನಿಗೆ ಕೋಪ ಬಂದು ಸತ್ಯ, ಧರ್ಮ, ತಪಸ್ಸು ಮೊದಲಾದುವು ಸ್ವರ್ಗಸಾಧನಗಳೆಂದೂ ಧರ್ಮವನ್ನು ತಿರಸ್ಕರಿಸಿದರೆ ಈಶ್ವರನನ್ನು ತಿರಸ್ಕರಿಸುವುದೆಂದೂ ಹೇಳಿದ ಶ್ರೀರಾಮನ ವಾಕ್ಯದ ತತ್ವವೇನೆಂದರೆ—ವಿಧಾಯಕವಾಗಿ ಬಂದಿರುವ ಸತ್ಕರ್ಮ, ಸದಾಚಾರ, ಸತ್ಯಮಾರ್ಗದಲ್ಲಿರುವಿಕೆ ಮುಂತಾದುವು ಸ್ವರ್ಗಸಾಧನಗಳೆಂದರೆ ಮೋಕ್ಷಕ್ಕೆ ಸಾಧನಕಾರಿಗಳಾಗಿರುವುವೆಂತಲೂ, ಇಂತಹವುಗಳನ್ನು ಆಚರಣೆಯಲ್ಲಿಟ್ಟುಕೊಳ್ಳದಿದ್ದರೆ ಪತಿತರಾಗುವರೆಂತಲೂ ಇಂತಹ ಧರ್ಮಮಾರ್ಗಸ್ವರೂಪವನ್ನು ದೂಷಿಸಿದರೆ ಸಾಕ್ಷಾತ್ ಈಶ್ವರನನ್ನೇ ದೂಷಿಸಿದಂತೆ ತಿಳಿದುಕೊಳ್ಳಬೇಕೆಂತಲೂ ತತ್ವಾರ್ಥವಾಗಿರುವುದು. ಮುಖ್ಯವಾಗಿ ಜಾಬಾಲಿಮುನಿಯು ದೇಹವ್ಯಾಪಾರದಲ್ಲಿನ ಧರ್ಮಾಧರ್ಮಮಾರ್ಗಗಳೆರಡೂ ತುಚ್ಛವೆಂಬ ತಾತ್ಪರ್ಯದಿಂದ ಹೇಳಿದನು. ಧರ್ಮಮಾರ್ಗವು ಈಶ್ವರಸಂಬಂಧವಾಗಿ ಮೋಕ್ಷಮಾರ್ಗಕ್ಕೆ ಸಹಕಾರಿಯಾಗಿರುವುದರಿಂದ, ಧರ್ಮಮಾರ್ಗವನ್ನು ಖಂಡಿತವಾಗಿಯೂ ನಿಂದಿಸಬಾರದೆಂಬ ತತ್ವವನ್ನು ಸೂಚಿಸುವುದೇ ಶ್ರೀರಾಮನು ಜಾಬಾಲಿಮುನಿಗೆ ಹೇಳಿರುವ ಉತ್ತರದ ತತ್ವವಾಗಿರುವುದು.

ರಾ|| ಶ್ರೀರಾಮನ ಮಾತಿಗೆ ಜಾಬಾಲಿಮುನಿಯು "ನಾನು ಚಾರ್ವಾಕಪಕ್ಷದವನಲ್ಲ. ದೈವ, ಧರ್ಮ, ದಾನಾದಿಗಳಿಲ್ಲವೆಂದು ನಾಸ್ತಿಕವಾದವನ್ನು ಮಾಡಲಿಲ್ಲ. ನಾನು ಕಾಲೋಚಿತವನ್ನರಿತು ಯಾವ ಕಾಲದಲ್ಲಿ ಸತ್ಯ ಧರ್ಮಗಳನ್ನು ಪ್ರತಿಪಾದಿಸಬೇಕೋ ಯಾವ ಕಾಲದಲ್ಲಿ ಚಾರ್ವಾಕಮತಾನುಸಾರವಾಗಿ ನಾಸ್ತಿಕವಾದವನ್ನು ಪ್ರತಿಪಾದಿಸಬೇಕೋ ವಿಚಾರಿಸಿ ಕಾಲಕ್ಕೆ ತಕ್ಕಂತೆ ಪ್ರತಿಪಾದಿಸುವೆನು. ನೀನು ರಾಜ್ಯವನ್ನು ಬಿಟ್ಟು ವನದಲ್ಲಿ ಕಾಯಕ್ಲೇಶವನ್ನು ಹೊಂದುವುದನ್ನು ಕಂಡು ಯಾವ ಉಪಾಯದಿಂದಲಾದರೂ ವನವಾಸದ ಕಷ್ಟವನ್ನು ಬಿಡಿಸಿ, ಅಯೋಧ್ಯಾಪಟ್ಟಣಕ್ಕೆ ಕರೆದುಕೊಂಡು ಹೋಗಿ ಸುಖದಲ್ಲಿರಿಸಬೇಕೆಂಬ ಬುದ್ಧಿಯಿಂದ ಚಾರ್ವಾಕಮತವನ್ನಾಶ್ರಯಿಸಿ ಬೋಧಿಸಿದೆನಲ್ಲದೆ ನಾನು ನಾಸ್ತಿಕನಲ್ಲ" ವೆಂದು ಮೃದುನುಡಿಗಳಿಂದ ಹೇಳಿದನು.

**ತತ್ವ||** ಕಾಲೋಚಿತ/ಮತ್ತು ಅಧಿಕಾರಿಯ ಲಕ್ಷಣಗಳನ್ನರಿತು ಹಿತೋಪದೇಶವನ್ನು ಮಾಡಬೇಕು. ಅಧರ್ಮಮಾರ್ಗಪ್ರವರ್ತಕನಾಗಿ ದೇವರಿಲ್ಲವೆನ್ನುವ ನಾಸ್ತಿಕನಿಗೆ ಧರ್ಮ ಮಾರ್ಗದಲ್ಲಿ ಪ್ರವರ್ತಿಸುವಂತೆಯೂ, ಕಾರಣಕರ್ತನಾದ ಈಶ್ವರನಿರುವನೆಂತಲೂ ಅವನನ್ನು ಆರಾಧಿಸಬೇಕೆಂತಲೂ ಬೋಧಿಸಬೇಕು. ಧರ್ಮಮಾರ್ಗದಲ್ಲಿದ್ದುಕೊಂಡು ಮೋಕ್ಷಕ್ಕೆ ಅಧಿಕಾರಿಯಾಗಿರುವವನಿಗೆ ಪ್ರಪಂಚವೇ ತುಚ್ಛವೆಂದೂ, ನಶ್ವರವೆಂದೂ ಪರಬ್ರಹ್ಮವೊಂದೇ ಸತ್ಯವಾದುದೆಂದೂ, ಅಂತಹ ಪರಬ್ರಹ್ಮವನ್ನು ಸಾಕ್ಷಾತ್ಕರಿಸಿಕೊಳ್ಳ ಬೇಕೆಂದೂ ಉಪದೇಶಮಾಡಬೇಕೆಂಬ ತತ್ವಾರ್ಥದ ಸೂಚನೆಯೇ ಜಾಬಾಲಿಮುನಿಯು ಕಾಲಕ್ಕೆ ತಕ್ಕಂತೆ ಉಪದೇಶಮಾಡುವುದಾಗಿರುತ್ತದೆ. ಜಾಬಾಲಿ ಶ್ರೀರಾಮರ ಸಂವಾದದ ಮುಖ್ಯತಾತ್ಪರ್ಯವೇನೆಂದರೆ—ಧರ್ಮಮಾರ್ಗವೇ ತುಚ್ಛವೆಂದೂ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣಕರ್ತನಾದ ದೇವರಿಲ್ಲವೆಂದೂ ಮನುಷ್ಯರು ಮೂಢರಾಗಬಾರದು. ಮೋಕ್ಷಾಧಿ ಕಾರವನ್ನು ಹೊಂದಿ ಅನಂತರ ಪ್ರಪಂಚವು ಪ್ರಯೋಜನವಿಲ್ಲವೆಂದು ವೈರಾಗ್ಯವನ್ನು ಹೊಂದಿ ಜ್ಞಾನವಂತರಾಗಬೇಕೆಂಬುದೇ ಮುಖ್ಯ ತತ್ವವಾಗಿರುತ್ತದೆ.

**ರಾ||** ಜಾಬಾಲಿಮುನಿಯು ಶ್ರೀರಾಮನಿಗೆ ಉಪದೇಶಮಾಡಿರುವುದಲ್ಲದೆ ವಸಿಷ್ಠರು ಕೂಡ ಅಯೋಧ್ಯೆಗೆ ಬಂದು ಪಟ್ಟಾಭಿಷಿಕ್ತನಾಗೆಂದು ಶ್ರೀರಾಮನಿಗೆ ಹೇಳಿದರು.

**ತತ್ವ||** ವಸಿಷ್ಠರು ತ್ರಿಕಾಲಾಬಾಧ್ಯವಾದ ಸತ್ಸ್ವರೂಪದ ಮಹಿಮೆಯ ಪ್ರತಿಪಾದಕರ ತತ್ವದವರೆಂದು ಹಿಂದೆ ತಿಳಿಸಿರುತ್ತಷ್ಟೆ ! ಇವರೂ ಶ್ರೀರಾಮನಿಗೆ ವನವಾಸ ಬೇಡವೆಂದು ಹೇಳಿದುದರ ತತ್ವವೇನೆಂದರೆ—ವನವಾಸದ ತತ್ವವಾದ ದೇಹವ್ಯಾಪಾರವು ಅಸತ್ಸ್ವರೂಪ ವಾದುದು. ಜನ್ಮ ಪರಂಪರೆಗಳನ್ನುಂಟುಮಾಡುವ ಬಂಧಕವಾದುದು. ನಿಜವಾದ ಸತ್ಸ್ವರೂಪವನ್ನು ಮರೆಮಾಡುವುದು. ಆದುದರಿಂದ ದೇಹವ್ಯಾಪಾರಸ್ವರೂಪವಾದ ಜೀವತ್ವಕ್ಕೆ ಹೋಗದೆ ನಿತ್ಯಮುಕ್ತಬುದ್ಧಸ್ವರೂಪವಾದ ಈಶ್ವರತ್ವಕ್ಕೆ ಬರಬೇಕೆಂಬ ತತ್ವವೇ ವಸಿಷ್ಠರ ಹೇಳಿಕೆಯ ತಾತ್ಪರ್ಯ.

**ರಾ||** ಶ್ರೀರಾಮಚಂದ್ರನು ಹದಿನಾಲ್ಕು ವರ್ಷ ವನವಾಸವನ್ನು ಪೂರ್ಣಮಾಡಿ ಕೊಂಡೇ ಅಯೋಧ್ಯೆಗೆ ಹಿಂದಿರುಗುವೆನೆಂದು ವಸಿಷ್ಠರಿಗೆ ಉತ್ತರ ಹೇಳಿದನು.

**ತತ್ವ||** ದೇಹಯಾತ್ರೆಗೆ ಹೋಗಿ ಅದನ್ನು ಉಪಸಂಹಾರಮಾಡುವ ಕ್ರಮದಿಂದಲೇ ಉಪಸಂಹಾರಮಾಡಿಕೊಂಡು ಪುನಃ ಈಶ್ವರತ್ವವನ್ನು ಪಡೆಯಬೇಕೆಂದೇ ವಿಧಾಯಕ ವೆಂದು ಶ್ರೀರಾಮನ ವಾಕ್ಯವು ಸೂಚಿಸುವುದು.

ಜಾಬಾಲಿಮುನಿ ಮತ್ತು ವಸಿಷ್ಠರ ವಚನಗಳ ಮುಖ್ಯ ತತ್ವಾರ್ಥವೇನೆಂದರೆ, ವಿಜ್ಞಾನಮಯಕೋಶಸ್ಥನಾದ ಜೀವನು ಉದ್ಧಾರವಾಗುವುದಕ್ಕೆ ಜ್ಞಾನ ಮತ್ತು ಕರ್ಮ

ಕಾಂಡಗಳ ಭಾಗಗಳಾಗಿರುವ ವೇದವೇ ಸಹಾಯಕವಾದದ್ದಾಗಿರುತ್ತದೆ. ಈ ವೇದದಲ್ಲಿನ ಜ್ಞಾನ ಕರ್ಮ ಕಾಂಡಗಳೆರಡರ ಅಭಿಪ್ರಾಯವೂ ಸತ್ಕರ್ಮ ಸದಾಚಾರದಲ್ಲಿದ್ದುಕೊಂಡು ಸ್ವಸ್ವರೂಪವನ್ನು ಹೊಂದಬೇಕೆಂಬುದೇ ಆಗಿರುವುದೆಂದು ಸೂಚಿಸುತ್ತದೆ.

ಪರಮಾತ್ಮನ ಪ್ರತಿಬಿಂಬಚೈತನ್ಯದೊಡನೆ ಅಂತಃಕರಣದ ವೃತ್ತಿಯು ಚಿತ್ರಕೂಟದ ತತ್ವವಾದ ವಿಜ್ಞಾನಮಯಕೋಶಕ್ಕೆ ಪ್ರಸರಿಸಿಕೊಂಡು ಬಂದುದರಿಂದ ವಿಜ್ಞಾನಮಯ ಕೋಶದಲ್ಲಿ "ಶರೀರ ನಾನು" ಎಂಬ ಜ್ಞಾನ ಅಭಿಮಾನ ಚಿತ್ತಗಳ ಉದಯವಾಯಿತೆಂಬ ಒಟ್ಟು ತಾತ್ಪರ್ಯವಾಗಿರುತ್ತದೆ. ಈ ಸಂದರ್ಭದಲ್ಲಿ ಇದಕ್ಕೆ ಸಂಬಂಧಪಟ್ಟ ಕೆಲವು ವಿಚಾರಗಳನ್ನು ವಿವರಿಸಬೇಕಾಗಿರುವುದು.

ಶ್ರೀರಾಮನು ವನವಾಸಕ್ಕೆ ಹೊರಟಾರಭ್ಯ ಅತ್ರಿಋಷಿಗಳ ಆಶ್ರಮವನ್ನು ಬಿಡುವ ಪರ್ಯಂತರ ಇರುವ ಕಥಾಸಂದರ್ಭಗಳು ಜನನವಾಗುವುದಕ್ಕಿಂತ ಮುಂಚೆ ಗರ್ಭದಲ್ಲಿ ನಡೆಯುವ ತತ್ವಗಳೆಂದು ಹಿಂದೆ ಅಯೋಧ್ಯಾಕಾಂಡದ ಪ್ರಥಮಪ್ರಕರಣ ದಲ್ಲಿಯೇ ತಿಳಿಸಿತಷ್ಟೆ! ಸೂಕ್ಷ್ಮದೇಹವಾದ ಅಂತಃಕರಣದ ಕಾರ್ಯಸ್ಫುರಣೆಯಾಗಲು ಗರ್ಭದಲ್ಲಿ ಏಳನೆಯ ತಿಂಗಳಲ್ಲಿಯೇ ಅಂತಃಕರಣಕ್ಕೆ ಅಲೆಯ ರೂಪವಾದ ವೃತ್ತಿಪ್ರವಾಹ ವುಂಟಾಗಿ ಆನಂದಮಯಕೋಶವನ್ನು ದಾಟಿ ವಿಜ್ಞಾನಮಯಕೋಶಕ್ಕೆ ಬಂದು. ಶರೀರ ನಾನೆಂಬ ಜ್ಞಾನ ಅಹಂಕಾರ ಮುಂತಾದುವುಗಳು ಉದಯವಾದರೂ ಇಂದ್ರಿಯ ಗಳೊಡನೆ ಕಲೆತು ವ್ಯಾಪಾರಮಾಡಲು ಶಿಶುವು ಜನನವಾಗುವ ಪರ್ಯಂತರ ಸಾಧ್ಯವಿಲ್ಲ. ಹೀಗಿರುವಲ್ಲಿ ಭರತನ ತತ್ವದಲ್ಲಿರುವ ಅಹಂಕಾರದ ಉದಯವನ್ನು ತಿಳಿಸಿದುದಲ್ಲದೆ ಕಾರ್ಯ ಗಳಲ್ಲಿ ನಿರಭಿಮಾನದಿಂದ ಇರುವಿಕೆಯನ್ನೂ ತಿಳಿಸಲು ಕಾರಣವೇನೆಂದರೆ-ಶ್ರೀರಾಮ ಚಂದ್ರಮೂರ್ತಿಯು ತನ್ನ ಲೀಲಾವತಾರದಲ್ಲಿ ಮೋಕ್ಷಮಾರ್ಗದ ಅಂತರಾರ್ಥವನ್ನು ಇಟ್ಟಿರುವನೆಂದು ಪ್ರಥಮದಲ್ಲಿಯೇ ತಿಳಿಸಿದೆ. ಯಾವ ಯಾವ ಸಂದರ್ಭದಲ್ಲಿ ಯಾವ ಯಾವ ವಿಚಾರಗಳು ಮೋಕ್ಷಮಾರ್ಗಕ್ಕೆ ಅನುಕೂಲವಾಗುವಂತೆ ಇರಬೇಕಾಗುವುದೋ ಅವುಗಳ ವಿಚಾರಗಳನ್ನು ಆಯಾ ಸಂದರ್ಭದಲ್ಲಿಯೇ ರಾಮಾಯಣವು ತಿಳಿಸುವುದು. ಮೋಕ್ಷಾಪೇಕ್ಷಿಗಳು ಅಹಂಕಾರದ ತತ್ವವನ್ನು, ಭರತನು ಪಟ್ಟಕಟ್ಟಿಕೊಂಡು ಆಳಿದಂತೆ ಇಟ್ಟುಕೊಳ್ಳಬೇಕೆಂಬ ತತ್ವಾರ್ಥವನ್ನು ಸೂಚಿಸುತ್ತದೆ. ಇದರಂತೆ ವಿಜ್ಞಾನವನ್ನು ಜ್ಞಾನಸ್ವರೂಪವಾದುದಾಗಿ ಮಾಡಿಕೊಳ್ಳುವುದೇ ಮೋಕ್ಷಮಾರ್ಗದ ತತ್ವವೆಂದು ವಸಿಷ್ಠರು ಶ್ರೀರಾಮನಿಗೆ ಹೇಳಿದ ತತ್ವವಾಗಿರುತ್ತದೆ. ಬುದ್ಧಿ ಮನಸ್ಸು ಅಹಂಕಾರಗಳು ಇಂದ್ರಿಯ ಗಳ ಮೂಲಕ ವ್ಯಾಪಾರಮಾಡುವುದು ಶ್ರೀರಾಮನ ಪಂಚವಟೀವಾಸ ಪ್ರಕರಣದ ತತ್ವದಲ್ಲಿ ಪ್ರಾರಂಭವಾಗುತ್ತದೆ. ಭರತನ ವಿಚಾರವು ಪುನಃ ಅರಣ್ಯಕಾಂಡದ ತತ್ವದಲ್ಲಿ ಬರುವುದು.

ವಸಿಷ್ಠ ಜಾಬಾಲಿಗಳ ತತ್ವಗಳು ಗರ್ಭದಲ್ಲಿದ್ದ ಶಿಶುವಿನಲ್ಲಿ ಹೇಗೆ ಅನ್ವಯವಾಗುವುವೆಂದರೆ—ಗರ್ಭದಲ್ಲಿ ಏಳನೆಯ ತಿಂಗಳಲ್ಲಿ ಪ್ರತಿಬಿಂಬಚೈತನ್ಯನು ದೇಹಕ್ಕೆ ಸಂಯುಕ್ತನಾಗಿ ವಿಜ್ಞಾನಮಯಕೋಶದ ಸ್ಫುರಣೆಯಾದನಂತರ ಶಿಶುವಿಗೆ ಜನ್ಮಾಂತರ ವಿಚಾರಗಳೆಲ್ಲ ತಿಳಿವಳಿಕೆಗೆ ಬರುತ್ತವೆ. ತಾನು ಗರ್ಭದಲ್ಲಿರುತ್ತೇನೆಂಬ ಜ್ಞಾನಬಂದು "ಕಷ್ಟತಮವಾದ ಹುಟ್ಟು ಸಾವುಗಳಿಂದ ಬಿಡಿಸಿಕೊಳ್ಳಲಿಲ್ಲ. ಈ ಗರ್ಭವಾಸವು ಕಷ್ಟತಮವಾದುದು. ಜನನ ಮರಣ ಪ್ರವಾಹರೂಪವಾದ ಈ ಸಂಸಾರದಿಂದ ಬಿಡಿಸಿಕೊಳ್ಳಲು ಜ್ಞಾನವಂತನಾಗಬೇಕು. ದುಷ್ಕಾರ್ಯಗಳನ್ನು ಮಾಡದೆ ಧರ್ಮಮಾರ್ಗದಲ್ಲಿದ್ದುಕೊಂಡು ಜ್ಞಾನವಂತನಾಗಿ ಸದ್ಗತಿಯನ್ನು ಪಡೆಯಬೇಕು." ಎಂಬೀ ಜ್ಞಾನೋದಯವಾಗಿ ಪೇಚಾಡಿಕೊಳ್ಳುವುದು. ಜನನವಾಗುವುದಕ್ಕೆ ಮುಂಚೆ ಗರ್ಭವಾಸದಲ್ಲಿರುವಾಗ ಶಿಶುವಿಗೆ ಈ ತಿಳಿವಳಿಕೆಯುಂಟಾಗುವುದೆಂದು ಗರ್ಭೋಪನಿಷತ್ತಿನಲ್ಲಿ—

ಪೂರ್ವಜಾತಿಂಸ್ಮರತಿ ಕೃತಾಕೃತಂಕರ್ಮಏಿೀ ಭಾತಿ ಶುಭಾಶುಭಂಕರ್ಮವಿಂದತಿ|
ನಾನಾ ಯೋನಿಸಹಸ್ರಾಣಿ ದೃಷ್ಟ್ವಾಚೈವ ತತೋಮಯಾ |
ಗರ್ಭವಾಸೇ ಮಹದ್ದುಃಖಂ ಮೋಹೋದುಃಖಂಚ ಜನ್ಮಸು |
ಗರ್ಭವಾಸಾತ್ಪ್ರಮುಚ್ಯೇಯಂ ಯದಿವಿಷ್ಣುಂಭಜೇಹೃದಿ |
ಅಮೃತಪ್ರದ ಮಾನಂದಂ ನಾರಾಯಣ ಮನಾಮಯಂ |

ತಾ|| ಜೀವನು ಜನನವಾಗುವುದಕ್ಕೆ ಮುಂಚೆ ಗರ್ಭವಾಸದಲ್ಲಿದ್ದಾಗ ಪೂರ್ವಜನ್ಮಪರಂಪರೆಗಳನ್ನೂ ತಾನು ಮಾಡಿದ ಪಾಪ ಪುಣ್ಯಗಳನ್ನೂ ಸ್ಮರಿಸಿಕೊಂಡು "ನಾನಾ ಜಾತಿಯ ಯೋನಿಗಳಲ್ಲಿ ಅನೇಕಾವರ್ತಿ ಜನ್ಮಗಳನ್ನು ಪಡೆದದ್ದಾಯಿತು. ಈ ಗರ್ಭವಾಸವು ಅತ್ಯಂತ ದುಃಖಕರವಾದುದು. ಇದುವರೆಗಿನ ಜನ್ಮಪರಂಪರೆಗಳಲ್ಲೆಲ್ಲಾ ಮೋಹವೇ ದುಃಖಕಾರಿಯಾದುದು. ಈಗಿನ ಗರ್ಭವಾಸದಿಂದ ಬಿಡುಗಡೆಯನ್ನು ಹೊಂದಿದ್ದೇ ಆದರೆ ಅಮೃತಪ್ರದನಾದ ಅನಾಮಯನೆಂದರೆ ಆನಂದಸ್ವರೂಪನಾದ, ವಿಷ್ಣುವೆಂದರೆ ಸರ್ವವ್ಯಾಪಿಯಾದ ನಾರಾಯಣನನ್ನು ನಿರಂತರವೂ ಧ್ಯಾನಿಸುತ್ತೇನೆ. ಅಂದರೆ ಈ ಗರ್ಭವಾಸವು ಪುನಃ ಪ್ರಾಪ್ತವಾಗದಂತೆ ಅಮೃತಪ್ರದನಾದ ಸರ್ವವ್ಯಾಪಿಯನ್ನು ಸಾಕ್ಷಾತ್ಕರಿಸಿಕೊಳ್ಳುವೆನು."

ಎಂದುಕೊಳ್ಳುವನೆಂದೂ ಇನ್ನೂ ಅನೇಕ ವಿಧವಾಗಿ ಈ ಉಪನಿಷತ್ತಿನಲ್ಲಿ ಹೇಳಿದೆ. ಆದುದರಿಂದ ಈ ಜ್ಞಾನೋದಯವು ವಿಜ್ಞಾನಮಯಕೋಶದ ಸ್ಫುರಣೆಯ ಕಾಲದಲ್ಲಿ ಉಂಟಾಗುವುದು. ಗರ್ಭದಲ್ಲಿ ಈ ತಿಳಿವಳಿಕೆಯುಂಟಾಗುವುದೆಂಬುದಕ್ಕೆ ರಾಮಾಯಣದಲ್ಲಿ ಜಾಬಾಲಿ ಮತ್ತು ವಸಿಷ್ಠರು ಶ್ರೀರಾಮನಿಗೆ ಅರಣ್ಯವಾಸವು ಕಷ್ಟತಮವಾದುದು ಅಯೋಧ್ಯೆಗೆ ಬಂದುಬಿಡೆಂದು ಹೇಳಿರುವುದರ ತತ್ವಗಳೂ ಅನ್ವಯವಾಗುತ್ತವೆ.

ಶ್ರೀರಾಮಾದಿಗಳು ಚಿತ್ರಕೂಟ ಪ್ರವೇಶಮಾಡಿದರೆಂದರೆ—ವಿಜ್ಞಾನಮಯಕೋಶವೆಂದರೆ ಆಜ್ಞಾಚಕ್ರಕ್ಕೆ ವೃತ್ತಿಪ್ರಸರಿಸಿಕೊಂಡು ಬಂದಿತೆಂದು ತಿಳಿಸಿತಷ್ಟೆ! ವಿಜ್ಞಾನಮಯಕೋಶವು ನಮ್ಮ ಭ್ರೂಮಧ್ಯಪ್ರದೇಶದಲ್ಲಿರುವ ಆಜ್ಞಾಚಕ್ರವಾಗಿರುತ್ತದೆ. ಸಕಲ ವ್ಯಾಪಾರಗಳಿಗೂ ವಿಜ್ಞಾನವು ಶಿಖರದೋಪಾದಿಯಲ್ಲಿರುತ್ತದೆ. ರಾಜ್ಯದಲ್ಲಿ ರಾಜನ ಆಜ್ಞೆಯಂತೆ ಸಕಲ ವ್ಯವಹಾರಗಳೂ ಹೇಗೆ ನಡೆಯುವುವೋ ಹಾಗೆ ವಿಜ್ಞಾನಸ್ವರೂಪದ ಆಜ್ಞೆಯಂತೆ ಸಕಲ ವ್ಯಾಪಾರಗಳೂ ನಡೆಯುತ್ತವೆ. ಅಂದರೆ ವಿಜ್ಞಾನಗಳು ಯಾವ ಯಾವ ರೀತಿಯಲ್ಲಿ ಹುಟ್ಟುತ್ತವೋ ಕಾರ್ಯಗಳೂ ಅದರಂತೆಯೇ ನಡೆಯಬೇಕೆಂಬ ನಿಯಾಮಕವಿರುವುದರಿಂದ ನಿಯಾಮಕಸ್ವರೂಪವೆನಿಸುವ ಆಜ್ಞಾಚಕ್ರವೂ ವಿಜ್ಞಾನಮಯಕೋಶವೂ ಒಂದೇ ಆಗಿರುತ್ತದೆ. ಭ್ರೂಮಧ್ಯಪ್ರದೇಶದಲ್ಲಿ ಆಜ್ಞಾಚಕ್ರವಿರುವುದೆಂದರೆ ಭ್ರೂಮಧ್ಯಪ್ರದೇಶಕ್ಕೆ ಸರಿಯಾಗಿ ಹಿಂಭಾಗದಲ್ಲಿ ಸುಷುಮ್ನಾನಾಡಿಗೆ ಸೇರಿದಹಾಗೆ ಆಜ್ಞಾಚಕ್ರವಿರುತ್ತದೆ. ಸುಷುಮ್ನಾನಾಡಿಯು ಬೆನ್ನಿನ ಹುರಿಯಲ್ಲಿ ಶಕ್ತಿರೂಪದಲ್ಲಿರುವುದೆಂದೂ ಈ ಸುಷುಮ್ನೆಯ ಹೊರಭಾಗದಲ್ಲಿ ಷಟ್ಚಕ್ರಗಳಿರುವುವೆಂದೂ ಶ್ರುತಿಗಳು ತಿಳಿಸುತ್ತಿವೆ. ಆದುದರಿಂದ ಆಜ್ಞಾಚಕ್ರವೂ ವಿಜ್ಞಾನಮಯಕೋಶವೂ ಒಂದೇ ಆಗಿರುತ್ತದೆ.

ಚಿತ್ರಕೂಟದ ತತ್ವವಾದ ಭ್ರೂಮಧ್ಯದಲ್ಲಿರುವ ಆಜ್ಞಾಚಕ್ರವೆಂದರೆ ವಿಜ್ಞಾನಮಯಕೋಶದಲ್ಲಿ ಉದಯಿಸುವ "ದೇಹ ನಾನು" ಎಂಬ ಜ್ಞಾನ ಮತ್ತು ಅಹಂಕಾರಗಳು ಅಭಿವ್ಯಕ್ತವಾಗಿ ಜಾಗ್ರತ್ಕಾಲದಲ್ಲಿ ಸಕಲ ವ್ಯಾಪಾರಗಳೂ ನಡೆಯುವ ತತ್ವಕ್ಕೆ ಪೈಂಗಲೋಪನಿಷತ್ತಿನಲ್ಲಿ,

> ತತ್ರಭ್ರೂಮಧ್ಯಂಗತೋ ಜೀವ ಆಪಾದಮಸ್ತಕಂವ್ಯಾಪ್ಯ
> ಕೃಷಿಶ್ರವಣಾದ್ಯಖಿಲಕ್ರಿಯಾಕರ್ತಾಭವತಿ |
> ತತ್ತತ್ಫಲಂ ಭುಕ್ತಂ ಭವತಿ ||

ತಾ|| ಭ್ರೂಮಧ್ಯವನ್ನು ಹೊಂದಿದ ಬುದ್ಧಿವೃತ್ತಿಯೊಡಗೂಡಿದ ಪ್ರತಿಬಿಂಬ ಚೈತನ್ಯವು ಪಾದಾರಭ್ಯ ಶಿರಪರ್ಯಂತ ವ್ಯಾಪಿಸಿಕೊಂಡು, ಸಕಲ ಬಹಿರ್ವ್ಯಾಪಾರಗಳನ್ನೂ ಮಾಡುವುದು ಮತ್ತು ಅದರ ಫಲವನ್ನನುಭವಿಸುವುದು ಎಂದು ಹೇಳಿರುವುದು.

ಆದುದರಿಂದ ಆಜ್ಞಾಚಕ್ರವೂ ವಿಜ್ಞಾನಮಯಕೋಶವೂ ಒಂದೇ.

ಇನ್ನು ಶ್ರೀರಾಮಾದಿಗಳನ್ನು ವಿಜ್ಞಾನಮಯಕೋಶ ಅಥವಾ ಆಜ್ಞಾಚಕ್ರದ ತತ್ವವಾದ, ಚಿತ್ರಕೂಟದಿಂದ ಕೆಳಗಿರುವ, ಮನೋಮಯಕೋಶಕ್ಕೆ ಕರೆದುಕೊಂಡು ಹೋಗೋಣ.

## ಮನೋಮಯ ಕೋಶ.

## ೧೧ನೆಯ ಪ್ರಕರಣ

**ಶ್ರೀರಾಮಾದಿಗಳು ಅತ್ರಿಮುನಿಗಳ ಆಶ್ರಮವನ್ನು ಪ್ರವೇಶಿಸಿ ಅವರಿಂದ ಸತ್ಕರಿಸಲ್ಪಟ್ಟುದು.**

**ಬುದ್ಧಿಮನಸ್ಸಿನ ವೃತ್ತಿಗಳು ವಿಜ್ಞಾನಮಯಕೋಶದಿಂದ ಮನೋಮಯ ಕೋಶಕ್ಕೆ ಇಳಿಯುವ ವಿಚಾರ. ಮನೋಮಯಕೋಶದಲ್ಲಿ "ನೀನು ಅಥವಾ ಇದು" ಎಂಬ ಪ್ರತ್ಯಯ ಉದಯವಾಗುವ ವಿಚಾರ.**

**ರಾ||** ಶ್ರೀರಾಮ ಲಕ್ಷ್ಮಣ ಸೀತಾದೇವಿಯರು ಚಿತ್ರಕೂಟಪರ್ವತದಿಂದ ಹೊರಟು ಅತ್ರಿಮುನಿಗಳ ಆಶ್ರಮವನ್ನು ಸೇರಿ ಅವರ ಆತಿಥ್ಯವನ್ನು ಪಡೆದರು.

**ತತ್ವ||** ಬುದ್ಧಿಮನಸ್ಸಿನ ವೃತ್ತಿಗಳು ಶುದ್ಧಸತ್ವಗುಣದೊಡನೆ ವಿಜ್ಞಾನಮಯ ಕೋಶದಿಂದ ಕೆಳಕ್ಕೆ ಪ್ರಸರಿಸಿಕೊಂಡು ಮನೋಮಯಕೋಶಕ್ಕೆ ಪ್ರಧಾನಸ್ಥಳವಾದ ವಿಶುದ್ಧಚಕ್ರಕ್ಕೆ ಬಂದುವು. ಅಂದರೆ ಬುದ್ಧಿಮನಸ್ಸಿನ ವೃತ್ತಿಗಳು ಗರ್ಭದೊಳಗಿರುವ ಶಿಶುವಿನ ಭ್ರೂಮಧ್ಯಸ್ಥಳದಿಂದ ಕಂಠದಲ್ಲಿ ಸುಷುಮ್ನಾನಾಡಿಯ ಹೊರಪ್ರಾಕಾರದಲ್ಲಿರುವ ವಿಶುದ್ಧಚಕ್ರಕ್ಕೆ ಪ್ರವೇಶಿಸಿದುವೆಂಬ ತಾತ್ಪರ್ಯವಾಗಿರುವುದು.

ಈ ಮನೋಮಯಕೋಶದ ಪ್ರಧಾನಸ್ಥಳವಾದ ವಿಶುದ್ಧಚಕ್ರವು ಅತ್ರಿಮಹರ್ಷಿಗಳ ಆಶ್ರಮವೆಂಬ ತತ್ವವಾಗಿರುವುದು. ಹೇಗೆಂದರೆ ಅತ್ರಿಮಹರ್ಷಿಗಳೆಂದರೆ "ಅತ್ರಿಸ್ಮ ಏಕ ಗಂಡೂಷೇಣೈವ ಸರ್ವಮೇವ ಗಂಗಾಜಲಂ ಪೀತವಾಃ ಇತಿ ಅತ್ರಿಃ" ಎಂಬದಾಗಿ ಶಬ್ದಾರ್ಥ ಕಲ್ಪದ್ರುಮದಲ್ಲಿ ವ್ಯುತ್ಪತ್ತಿಯಿರುತ್ತದೆ. ಅಂದರೆ ಗಂಗಾಜಲವನ್ನೆಲ್ಲ ಒಂದೇ ಗುಟಕಿನಲ್ಲಿ ಯಾರು ಕುಡಿದರೋ ಅವರೇ ಅತ್ರಿಮಹರ್ಷಿಗಳು. ಗಂಗೆಯೆಂದರೆ ಪರಮಾತ್ಮನ ಪ್ರತಿಫಲನದ ಪ್ರಕಾಶವೆಂದು ಹಿಂದೆ ಬಾಲಕಾಂಡದ ತತ್ವದಲ್ಲಿ ತಿಳಿಸಿರುತ್ತೆ. ಇಂತಹ ಪರಮಾತ್ಮನ ಪ್ರಕಾಶವನ್ನು ನುಂಗುವುದೆಂದರೆ ಕಾಣದಂತೆ ಮಾಡಿರುವುದೇ ಆಕಾಶವಾಗಿರುತ್ತದೆ. ನಮ್ಮ ದೃಷ್ಟಿಗೆ ಪಂಚಭೂತಸ್ವರೂಪವಾದ ಪ್ರಪಂಚವು ಕಾಣುವುದೇ ವಿನಾ ಪರಮಾತ್ಮನ ಪ್ರಕಾಶವು ಕಾಣುವುದಿಲ್ಲ. ಆದುದರಿಂದ ಪರಮಾತ್ಮನ ಪ್ರಕಾಶವು ಯಾವುದರಿಂದ ಮರೆಯಾಗಿರುವುದೋ ಅದೇ ಆಕಾಶವಾಗಿರುತ್ತದೆ. ಅಂದರೆ ನಿಶ್ಚಯವಾದುದು ಮರೆಯಾಗಿ ಎರಡನೆಯದರ ತಿಳಿವಳಿಕೆಯು ಯಾವ ಸ್ಥಳದಲ್ಲುಂಟಾಗುವುದೋ, ಅಂದರೆ ದ್ವೈತಭಾವಕ್ಕೆ ಯಾವುದು ಮೂಲಕಾರಣವೋ ಮತ್ತು ಬಾಹ್ಯಪ್ರವರ್ತನೆಯು ಯಾವ

ಸ್ಥಳದಿಂದ ಪ್ರಾರಂಭವಾಗುವುದೋ ಅದೇ ಆಕಾಶವಾಗಿ ಮನೋಮಯಕೋಶದ ತತ್ವ ದಲ್ಲಿರುವ ಅತ್ರಿಮಹರ್ಷಿಗಳ ಆಶ್ರಮವಾಗಿರುವುದು.

ಅಲ್ಲದೆ ಪರಮಾತ್ಮನ ಪ್ರಕಾಶವನ್ನು ನುಂಗಿ ನಮಗೆ ಭಾನವಾಗುತ್ತಿರುವ ಪ್ರಪಂಚಕ್ಕೆ ಮೂಲಕಾರಣವಾಗಿ ತೋರುತ್ತಿರುವುದೇ ಅವಕಾಶ ಅಥವಾ ಆಕಾಶವಾಗಿರು ತ್ತದೆ. ಇದನ್ನನುಸರಿಸಿ ವಿಶುದ್ಧಚಕ್ರವು ಕೂಡ ಆಕಾಶದ ತತ್ವದ ಸ್ಥಳವಾಗಿರುವುದೆಂದು ಶಾಸ್ತ್ರವು ತಿಳಿಸುತ್ತಿದೆ. ವಿಶುದ್ಧವೆಂದರೂ "ವಿ-ಗತ" ಪರಿಶುದ್ಧತೆಯಿಂದ ಬಿಡಲ್ಪಟ್ಟಿರುವು ದೆಂದು ಅರ್ಥವಾಗುತ್ತದೆ. ಅಂದರೆ ಪರಮಾತ್ಮನಿಂದ ಬೇರೆಯಾಗಿ ತೋರುವ ದ್ವೈತ ಭಾವವು. ದ್ವೈತಭಾವವೆಂದರೆ ತಾನಲ್ಲದ ಎರಡನೆಯ ಪದಾರ್ಥಜ್ಞಾನ. ಅಂದರೆ ಅಹಂ ಪ್ರತ್ಯಯದ ಜ್ಞಾನವೇ ನಾನೆಂಬದಾಗಿಯೂ ನನಗಿಂತ ಬೇರೆಯಾದ " ನೀನು ಅಥವಾ ಇದು" ಎಂಬ ಜ್ಞಾನವೇ ದ್ವೈತರೂಪವಾದ ಎರಡನೆಯದರ ಜ್ಞಾನವಾಗಿಯೂ ಇರುತ್ತದೆ. ಈ ದ್ವೈತಭಾವದ ತೋರುವಿಕೆಗೆ ಆಕಾಶತತ್ವವೇ ಪ್ರಥಮಕಾರಣವಾಗಿರುವುದರಿಂದ ಶ್ರೀರಾಮಾದಿಗಳು ಅತ್ರಿಋಷಿಗಳ ಆಶ್ರಮಪ್ರವೇಶಮಾಡಿದರೆಂದರೆ—ತಾನಲ್ಲದ ಎರಡನೆಯ ಪದಾರ್ಥದ ಜ್ಞಾನೋದಯವಾಗುವ ಮನೋಮಯಕೋಶಕ್ಕೆ ಬುದ್ಧಿಮನಸ್ಸಿನ ವೃತ್ತಿಗಳು ಪ್ರಸರಿಸಿಕೊಂಡು ಬಂದುವೆಂಬ ತತ್ವಾರ್ಥವಾಗಿರುವುದು.

ಮೇಲಿನ ಅಂಶಗಳ ಮುಖ್ಯತಾತ್ಪರ್ಯವೇನೆಂದರೆ—ವಿಜ್ಞಾನಮಯಕೋಶದಲ್ಲಿ "ದೇಹ ನಾನು" ಎಂಬ ಜ್ಞಾನದ ಉದಯವಾಯಿತಷ್ಟೆ ! ಇದರ ಜೊತೆಗೆ ತಾನಲ್ಲದ ಎರಡನೆಯ ದರ ಜ್ಞಾನವೆಂದರೆ " ನೀನು ಅಥವಾ ಇದು " ಎಂಬ ಪ್ರಪಂಚರೂಪವಾದ ಜ್ಞಾನೋ ದಯವಾಗುವ ಸ್ಥಳವೇ ಅತ್ರಿಮಹರ್ಷಿಗಳ ತತ್ವದಲ್ಲಿರುವ ಮನೋಮಯಕೋಶವಾಗಿರು ತ್ತದೆ. ಶ್ರೀರಾಮ ಲಕ್ಷ್ಮಣರು ಅತ್ರಿಮಹರ್ಷಿಗಳಿಂದ ಸತ್ಕಾರವನ್ನು ಹೊಂದಿದರೆಂದರೆ— ಬುದ್ಧಿಮನಸ್ಸುಗಳ ವೃತ್ತಿಗಳಲ್ಲಿ ತಾನಲ್ಲದ ಎರಡನೆಯದಾದ "ಇದು" ಎಂಬ ಪ್ರತ್ಯಯವು ಮನೋಮಯಕೋಶದಲ್ಲಿ ಉದಯವಾಯಿತೆಂಬ ತಾತ್ಪರ್ಯವಾಗಿರುವುದು. ಈ ಮೇಲಿನ ತತ್ವಾರ್ಥಕ್ಕೆ ಅನುಸಾರವಾಗಿ ಶ್ರೀವಿದ್ಯಾರಣ್ಯರವರು ಪಂಚದಶಿ ಚಿತ್ರದೀಪಿಕೆ ೭೧ ನೆಯ ಶ್ಲೋಕದಲ್ಲಿ,

ಅಹಂವೃತ್ತಿ ರಿದಂವೃತ್ತಿ ರಿತ್ಯಂತಃಕರಣಂ ದ್ವಿಧಾ |
ವಿಜ್ಞಾನಂಸ್ಯಾದಹಂವೃತ್ತಿ ರಿದಂವೃತ್ತಿರ್ಮನೋಭವೇತ್ ||

ತಾ|| ನಾನೆಂಬ ವೃತ್ತಿರೂಪವಾಗಿಯೂ ಇದು ಎಂಬ ವೃತ್ತಿರೂಪವಾಗಿಯೂ ಅಂತಃಕರಣದ ವೃತ್ತಿಯು ಎರಡು ವಿಧವಾಗಿರುವುದು. ಇವೆರಡರಲ್ಲಿ ನಾನೆಂಬ ಅಂತ ರ್ವೃತ್ತಿರೂಪವು ವಿಜ್ಞಾನಮಯಕೋಶವಾಗಿರುವುದು. ಇದು ಎಂಬ ಬಾಹ್ಯವೃತ್ತಿರೂಪವು ಮನೋಮಯಕೋಶವಾಗಿರುವುದು ಎಂದು ಹೇಳಿರುವರು.

ಅಂದರೆ ತನಗಿಂತ ಬೇರೆಯಾದ ನೀನು ಎಂಬುದರ ತಿಳಿವಳಿಕೆಯು ಮನೋಮಯ ಕೋಶದಲ್ಲಿ ಉದಯವಾಗುತ್ತದೆ. ಅಲ್ಲದೆ ಶ್ರೀವಿದ್ಯಾರಣ್ಯರವರು ಪಂಚದಶಿ ಚಿತ್ರದೀಪಿಕೆ ೭೧ನೆಯ ಶ್ಲೋಕದಲ್ಲಿ,

ಅಹಂಪ್ರತ್ಯಯ ಬೀಜತ್ವ ಮಿದಂವೃತ್ತೇ ರಿತಿಸ್ಫುಟಮ್ ।
ಅವಿದಿತ್ವಾ ಸ್ವಮಾತ್ಮಾನಂ ಬಾಹ್ಯಂವೇತ್ತಿ ನತುಕ್ವಚಿತ್ ॥

ತಾ|| "ನೀನು ಅಥವಾ ಇದು" ಎಂಬ ಬಾಹ್ಯವಸ್ತುವನ್ನು ವಿಷಯೀಕರಿಸತಕ್ಕ ವೃತ್ತಿಗೆ ನಾನೆಂಬ ಅಂತರ್ವೃತ್ತಿಯು ಕಾರಣವಾಗುವುದು. ಹೇಗೆಂದರೆ ಮಾನವನು ತನ್ನನ್ನರಿಯದೆ ಹೊರಗಣ ವಿಷಯವನ್ನೆಂದಿಗೂ ಅರಿಯನು ಎಂದು ಹೇಳಿರುವರು. ಅಂದರೆ ನಾನೆಂಬ ವೃತ್ತಿಗೆ ಉದಯವಿಲ್ಲದೆ ಇದು ಎಂಬ ಬಾಹ್ಯವೃತ್ತಿಯುಂಟಾಗುವುದಿಲ್ಲವೆಂಬ ತಾತ್ಪರ್ಯವು. ಈ ತತ್ವಾರ್ಥಕ್ಕೆ ಅನುಸಾರವಾಗಿಯೇ ವನವಾಸದ ಯಾತ್ರೆಯಲ್ಲಿ ಶ್ರೀರಾಮಚಂದ್ರನೂ ಪ್ರಥಮದಲ್ಲಿ ಚಿತ್ರಕೂಟವನ್ನು ಪ್ರವೇಶಿಸಿ ಅನಂತರ ಅತ್ರಿ ಮಹರ್ಷಿಗಳಾಶ್ರಮಕ್ಕೆ ಬಂದನು.

ಆದಕಾರಣ ಚಿತ್ರಕೂಟದ ತತ್ವವಾದ ವಿಜ್ಞಾನಮಯಕೋಶದಲ್ಲಿ "ದೇಹ ನಾನು" ಎಂಬ ಜ್ಞಾನೋದಯವಾಗಿ ಅತ್ರಿಮಹರ್ಷಿಗಳ ಆಶ್ರಮದ ತತ್ವದಲ್ಲಿರುವ ಮನೋಮಯ ಕೋಶದಲ್ಲಿ "ಇದು" ಎಂಬ ಬಾಹ್ಯಪ್ರಪಂಚದ ಜ್ಞಾನೋದಯವಾಗುವುದು. ಅಂದರೆ ಜೀವನಿಗೆ ಬಾಹ್ಯವ್ಯಾಪಾರಕ್ಕೆ ಸಲಕರಣೆಯಾದ, ಬ್ರಹ್ಮಸೂತ್ರಭಾಷ್ಯದ ಪ್ರಥಮದಲ್ಲಿ ಶ್ರೀಶಂಕರಭಗವತ್ಪಾದರವರಿಂದ ವಿವರಿಸಲ್ಪಟ್ಟಿರುವ, "ಅಸ್ಮತ್ ಯುಷ್ಮತ್ಪ್ರತ್ಯಯಗಳ" ಉದಯವಾಯಿತೆಂಬ ತಾತ್ಪರ್ಯವಾಗಿರುತ್ತದೆ. "ನೀನು ನಾನು" ಎಂಬ ಭೇದದ ಕಲ್ಪನೆಗೆ ಕಾರಣವಾಗಿರುವುದೇ ಮನೋಮಯಕೋಶ. ಈ ಮನೋಮಯಕೋಶಕೆ ಸಹಕಾರಿಯಾಗಿ ಜ್ಞಾನೇಂದ್ರಿಯಗಳಿರುವುದೇ ವಿಕಲ್ಪಕ್ಕೆ ಕಾರಣ. ಮನೋಮಯ ಕೋಶದ ತತ್ವದಲ್ಲಿರುವ ಅತ್ರಿಋಷಿಗಳ ಆಶ್ರಮವನ್ನು ಶ್ರೀರಾಮನು ಬಿಟ್ಟಕೂಡಲೆ ಜ್ಞಾನೇಂದ್ರಿಯಗಳು ಸ್ಫುರಣೆಯಾಗುವ ತತ್ವದ ಪ್ರಕರಣಗಳು ಬರುತ್ತವೆ. ಆದುದರಿಂದ ವಿಕಲ್ಪಕ್ಕೆ ಕಾರಣವಾಗಿರುವುದೇ ಮನೋಮಯಕೋಶವು. "ಜ್ಞಾನೇಂದ್ರಿಯಾಣಿಚ ಮನಶ್ಚ ಮನೋಮಯಸ್ಯಾ ತ್ಕೋಶಃ" ಎಂಬ ಪೈಂಗಲೋಪನಿಷದ್ವಾಕ್ಯವಿರುವುದಲ್ಲದೆ ಶ್ರೀಶಂಕರಭಗವತ್ಪಾದರವರೂ ವಿವೇಕಚೂಡಾಮಣಿಯಲ್ಲಿ ಇದೇ ರೀತಿಯಲ್ಲಿ ಹೇಳಿರುತ್ತಾರೆ.

"ಇದು ಅದು" ಎಂಬ ಬಾಹ್ಯಪ್ರಪಂಚದ ವ್ಯಾಪಾರವು ವಿಷಯಸ್ವರೂಪದಲ್ಲಿರುತ್ತದೆ. ಇಂತಹ ವಿಷಯಜ್ಞಾನವುಂಟಾದರೆ ಸಂಕಲ್ಪ ವಿಕಲ್ಪಗಳೆನಿಸಿಕೊಳ್ಳುತ್ತವೆ.

ಪ್ರಥಮದಲ್ಲಿ ಸಂಕಲ್ಪವೆಂದರೆ ಪದಾರ್ಥಗಳನ್ನು ಹೊಂದುವ ಅಥವಾ ಕಾರ್ಯಗಳನ್ನು ಮಾಡಬೇಕೆಂಬ ಇಚ್ಛೆಯುಂಟಾಗುವುದು. ಅನಂತರ ಆ ಸಂಕಲ್ಪವು ಕಾರ್ಯಪ್ರವರ್ತನೆಗೆ ಇಂದ್ರಿಯಗಳ ಮೂಲಕ ಮನಸ್ಸಿನೊಡನೆ ಹೊರಡುತ್ತದೆ. ಇದಕ್ಕೆ ವಿಕಲ್ಪವೆಂದು ಹೆಸರು. ಕಾರ್ಯಪ್ರವರ್ತನೆಯಲ್ಲಿ ಬುದ್ಧಿಮನಸ್ಸುಗಳ ವೃತ್ತಿಗಳು ಇಂದ್ರಿಯಗಳೊಡನೆ ಕೂಡುವುದರಿಂದ ಆಗ ವಿಕಲ್ಪವೆನಿಸಿಕೊಳ್ಳುತ್ತದೆ. ಸಂಕಲ್ಪ ವಿಕಲ್ಪಗಳಲ್ಲಿ ಸಂಕಲ್ಪದ ಕಾರ್ಯದ ತತ್ವವೇ ಅತ್ರಿಮಹರ್ಷಿಗಳ ಪತ್ನಿಯಾದ ಅನಸೂಯಾದೇವಿಯಾಗಿರುತ್ತಾಳೆ.

## ೧೨ನೆಯ ಪ್ರಕರಣ.

**ಅನಸೂಯಾದೇವಿಯು ಸೀತಾದೇವಿಗೆ ಆಭರಣಗಳನ್ನು ಕೊಟ್ಟು ಅನುಗ್ರಹಿಸಿದುದು.**

**ಮನೋಮಯಕೋಶದಲ್ಲಿ ಉದಯವಾಗುವ ಸಂಕಲ್ಪದ ಸ್ವರೂಪ. ಸಂಕಲ್ಪವೇ ಸರ್ವಕ್ಕೂ ಕಾರಣವೆಂಬ ವಿಚಾರ.**

**ರಾ||** ಅತ್ರಿಮುನಿಗಳು ಹೇಳಿದಂತೆ ಶ್ರೀರಾಮನು ಸೀತಾದೇವಿಯನ್ನು ಅನಸೂಯಾದೇವಿಯ ಬಳಿಗೆ ಕಳುಹಿಸಿದನು.

**ತತ್ವ||** ಅನಸೂಯಾದೇವಿಯ ತತ್ವವೇನೆಂದರೆ—ಅತ್ರಿಮಹರ್ಷಿಗಳ ತತ್ವದಲ್ಲಿರುವ ಮನೋಮಯಕೋಶದಲ್ಲಿ "ಇದು" ಎಂಬ ತಾನಲ್ಲದ ಎರಡನೆಯದರ ವೃತ್ತಿಯು ಉದಯವಾಗುವುದೆಂದು ಹಿಂದಿನ ಪ್ರಕರಣದಲ್ಲಿ ತಿಳಿಸಿತಷ್ಟೆ! "ಇದು ಅದು" ಎಂಬುದರ ಛಾಯೆಯೇ ಅನಸೂಯಾದೇವಿಯಾಗಿರುತ್ತಾಳೆ. ಹೇಗೆಂದರೆ ಹೊರಗೆ ಪದಾರ್ಥಗಳಿರುತ್ತವೆ. ಆ ಪದಾರ್ಥಗಳ ಆಕಾರವು ಮನಸ್ಸಿನಲ್ಲಿ ಸಂಕಲ್ಪರೂಪದಲ್ಲಿರುವುದೇ ಹೊರತು ಪದಾರ್ಥವೇ ಮನಸ್ಸಿನಲ್ಲಿರುವುದಿಲ್ಲ. ಆದುದರಿಂದ "ಇದು ಅದು" ಎಂಬ ಪದಾರ್ಥಗಳ ಛಾಯೆ ಅಥವಾ ಭಾವವೇ ಅನಸೂಯೆಯಾಗಿರುತ್ತಾಳೆ. ಸಂಕಲ್ಪ ಅಥವಾ ಬಯಕೆಯ ರೂಪವಾದ ಭಾವನೆಯು ಪದಾರ್ಥಗಳ ಸ್ವರೂಪದ ಅನುವರ್ತಿ ಅಥವಾ ಛಾಯೆಯಾಗಿರುವುದರಿಂದ ಅನಸೂಯಾದೇವಿಯು "ಇದು ಅದು" ಎಂಬುದರ ತತ್ವದಲ್ಲಿರುವ ಅತ್ರಿಮಹರ್ಷಿಗಳ ಪತ್ನಿಯಾಗಿರುವಳು. ಈ ಭಾವ ಅಥವಾ ಸಂಕಲ್ಪರೂಪವು ಪ್ರಾಣಚೇಷ್ಟೆಗಳೊಡನೆ ಕಲೆತು ಇಂದ್ರಿಯವ್ಯಾಪಾರಸ್ವರೂಪವಾದ ಕ್ರಿಯೆಗಳುಳ್ಳದ್ದಾಗುವುದು. ಇಂತಹ ಇಂದ್ರಿಯವ್ಯಾಪಾರಗಳಿಲ್ಲದ ವಿಷಯಭಾವವೇ ಶುದ್ಧ ಸಂಕಲ್ಪದ ಸ್ವರೂಪವಾಗಿರುತ್ತದೆ. ಈ ಶುದ್ಧಸಂಕಲ್ಪಸ್ವರೂಪದ ತತ್ವದವಳೇ ಅತ್ರಿಮಹರ್ಷಿಗಳ ಪತ್ನಿಯಾದ ಅನಸೂಯಾದೇವಿಯು.

ಅನಸೂಯಾ ಎಂಬ ಪದದ ಅರ್ಥವೂ ಈ ಮೇಲಿನ ತತ್ವಾರ್ಥಕ್ಕೆ ಅನ್ವಯವಾಗುವುದು. ಅನಸೂಯಾ ಎಂದರೆ "ಅಸು ಕಂಡ್ವಾದಿತ್ವಾತ್-ಯತ್ ಅಭಾವೇನ ಅಸೂಯಾ ಅಸೂಯಾ ಅಭಾವಃ-ಅನಸೂಯಃ" ಅಂದರೆ ಪ್ರಾಣಚೇಷ್ಟೆಗಳಿಲ್ಲದೆ ಅಥವಾ ಇಂದ್ರಿಯ ಧರ್ಮಗಳಿಲ್ಲದೆ ಇರುವ ವಿಷಯಸಂಕಲ್ಪಕ್ಕೆ ಅನಸೂಯಯೆಂದು ಅರ್ಥ. ಅಂದರೆ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳ ವ್ಯಾಪಾರಪ್ರವರ್ತನೆಯಿಲ್ಲದೆ ಮನಸ್ಸಿನೊಳಗೇ ಉಂಟಾಗುವ ಕಾರ್ಯಗಳ ಸ್ವರೂಪದ ಭಾವನೆಗೆ ಶುದ್ಧಸಂಕಲ್ಪವೆಂಬ ತಾತ್ಪರ್ಯ. ಈ ಶುದ್ಧ ಸಂಕಲ್ಪದ ತತ್ವದವಳೇ ಅನಸೂಯಾದೇವಿಯು.

ಅಲ್ಲದೆ ಅನಸೂಯಾದೇವಿಯು ಅತ್ರಿಮಹರ್ಷಿಗಳ ಪತ್ನಿಯಾಗಿ ಒಂದೇ ಸ್ಥಳದಲ್ಲಿರುವುದರಿಂದ ಅನಸೂಯಾದೇವಿಯ ತತ್ವಕ್ಕೂ ಮನೋಮಯಕೋಶವಾದ ವಿಶುದ್ಧಚಕ್ರವೇ ಪ್ರಧಾನಸ್ಥಳ. ಅನಸೂಯಾದೇವಿಯ ತತ್ವದಲ್ಲಿರುವ ಶುದ್ಧಸಂಕಲ್ಪಕ್ಕೂ ವಿಶುದ್ಧ ಚಕ್ರಕ್ಕೂ ಅನ್ವಯ ಹೇಗೆಂದರೆ—ವಿಶುದ್ಧವೆಂದರೆ ಪರಿಶುದ್ಧವೆಂದು ಅರ್ಥ. ಅಂದರೆ ಇಂದ್ರಿಯಗಳ ವ್ಯಾಪಾರದಿಂದ ವಿಕಲ್ಪವಾಗದ ಶುದ್ಧಸಂಕಲ್ಪ ಅಥವಾ ಭಾವೋದಯವಾಗುವ ಸ್ಥಳವಾದುದರಿಂದ ಇದಕ್ಕೆ ವಿಶುದ್ಧಚಕ್ರ ಅಥವಾ ಮನೋಮಯಕೋಶವೆಂಬ ತತ್ವಾರ್ಥವು. ಆದುದರಿಂದ ಅನಸೂಯಾದೇವಿಯೆಂದರೆ ಶುದ್ಧಸಂಕಲ್ಪಸ್ವರೂಪದ ತತ್ವದವಳೆಂಬ ತಾತ್ಪರ್ಯ.

ಮೇಲೆ ವಿವರಿಸಿರುವ ತತ್ವದಂತೆ ವಿಷಯಸಂಕಲ್ಪವು ಇಂದ್ರಿಯಗಳಲ್ಲಿ ಪ್ರವರ್ತಿಸಿ ಕಾರ್ಯರೂಪವಾಗದೆ ಮನೋಮಯಕೋಶದಲ್ಲಿಯೇ ಸಕಲವ್ಯವಹಾರಗಳನ್ನೂ ಮಾಡಿಕೊಳ್ಳಬಹುದೆನ್ನುವುದಕ್ಕೆ ಸ್ವಪ್ನದ ಉದಾಹರಣೆಯು ಶ್ರೇಷ್ಠವಾದುದು. ಇದೇ ಅರ್ಥಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೧೭೨ ನೆಯ ಶ್ಲೋಕದಲ್ಲಿ,

> ಸ್ವಪ್ನೇರ್ಥಶೂನ್ಯೇ ಸೃಜತಿಸ್ವಶಕ್ತ್ಯಾ |
> ಭೋಕ್ತ್ರಾದಿ ವಿಶ್ವಂ ಮನಏವ ಸರ್ವಂ |
> ತಥೈವ ಜಾಗ್ರತ್ಯಪಿ ನೋ ವಿಶೇಷ |
> ಸ್ತತ್ಸರ್ವಮೇತ ನ್ಮನಸೋ ವಿಜೃಂಭಣಂ ||

ತಾ|| ನಿದ್ರೆಮಾಡುತ್ತಿರುವಾಗ ಯಾವ ಪದಾರ್ಥವೂ ಇಲ್ಲದಿದ್ದರೂ ಮನಸ್ಸು ಕನಸ್ಸಿನೊಳಗೆ ಸಮಸ್ತ ಭೋಗಾರ್ಹವಾದ ಪ್ರಪಂಚವನ್ನೂ ಸೃಷ್ಟಿಮಾಡಿಕೊಂಡು ತನ್ನೊಳಗೆ ತಾನೇ ರಾಜ್ಯಭಾರಮಾಡುತ್ತದೆ. ಇದರಂತೆ ಜಾಗ್ರದವಸ್ಥೆಯಲ್ಲಿಯೂ ಮನೋರಾಜ್ಯದಲ್ಲಿಯೇ ವ್ಯಾಪಾರಮಾಡಿಕೊಳ್ಳಬಹುದು. ಆದುದರಿಂದ ಸಂಕಲ್ಪದ ವಿಚಾರದಲ್ಲಿ ಸ್ವಪ್ನಜಾಗ್ರುತ್ತುಗಳಿಗೆ ಏನೂ ಭೇದವಿರುವುದಿಲ್ಲ. ಆದಕಾರಣ ಕಾಣಬರುವ ಪ್ರಪಂಚದ

ವ್ಯವಹಾರವೆಲ್ಲ ಮನೋಮಯಕೋಶದ ವಿಜೃಂಭಣೆಯೇ ಆಗಿರುತ್ತದೆ ಎಂದು ಹೇಳಿರುತ್ತಾರೆ.

ಆದುದರಿಂದ ಶುದ್ಧಸಂಕಲ್ಪಸ್ವರೂಪದ ತತ್ವದವಳೇ ಅನಸೂಯಾದೇವಿಯು.

**ರಾ||** ಅನಸೂಯಾದೇವಿಯು ದುರ್ಭಿಕ್ಷವಾಗಿದ್ದ ವನದಲ್ಲಿ ತನ್ನ ಪತಿವ್ರತಾಧರ್ಮ ದಿಂದ ಕಂದ ಮೂಲ ಫಲಾದಿಗಳು ಪೂರ್ಣವಾಗುವಂತೆ ಮಾಡಿದಳು.

**ತತ್ವ||** ಶುದ್ಧಸಂಕಲ್ಪದಿಂದಲೇ ಪ್ರಪಂಚ ಮತ್ತು ಚರಾಚರಪ್ರಾಣಿಗಳೂ ವನೌಷಧಿ ಗಳೂ ಸೃಷ್ಟಿಸಲ್ಪಡುವುವೆಂಬ ತಾತ್ಪರ್ಯವಾಗಿರುತ್ತದೆ. ಇದೇ ತತ್ವಕ್ಕೆ ವರಾಹೋಪ ನಿಷತ್ತಿನಲ್ಲಿ,

**ಸಂಕಲ್ಪಮಾತ್ರ ಕಲನೇನ ಜಗತ್ಸಮಗ್ರಂ |**
**ಸಂಕಲ್ಪಮಾತ್ರ ಕಲನೇಹಿ ಜಗದ್ವಿಲಾಸಃ ||**

ತಾ|| ಸಂಕಲ್ಪಮಾತ್ರದಿಂದಲೇ ಜಗತ್ತು ಹುಟ್ಟಿತು. ಸಂಕಲ್ಪಮಾತ್ರದಿಂದಲೇ ಜಗತ್ತಿನ ವಿಲಾಸವು ನಡೆಯುತ್ತಿರುವುದು ಎಂಬದಾಗಿ ಹೇಳಿದೆ.

**ರಾ||** ಅನಸೂಯಾದೇವಿಯು ಬಹು ವೃದ್ಧೆಯಾಗಿರುವಳು.

**ತತ್ವ||** ಸಂಕಲ್ಪವು ಪುರಾತನವೆಂಬ ತತ್ವಾರ್ಥದ ಸೂಚನೆಯಾಗಿರುವುದು. ಸಂಕ ಲ್ಪವು ಪುರಾತನವಾದುದೆಂದರೆ ಸೃಷ್ಟಿಗೆ ಪ್ರಾರಂಭವಾಗುವುದೇ ಸಂಕಲ್ಪಕ್ಕೆ ಪ್ರಾರಂಭವೆಂಬ ತಾತ್ಪರ್ಯ. ಸೃಷ್ಟಿಯ ಪ್ರಾರಂಭದ ಕಾಲವನ್ನು ನಿರ್ಣಯಿಸುವುದಕ್ಕಾಗುವುದಿಲ್ಲವಾದುದ ರಿಂದ ಅನಸೂಯಾದೇವಿಯು ಬಹುವೃದ್ಧಳೆಂಬ ತಾತ್ಪರ್ಯವಾಗಿರುವುದು.

**ರಾ||** ಅನಸೂಯಾದೇವಿಯು ನಮಸ್ಕಾರ ಯೋಗ್ಯಳು.

**ತತ್ವ||** ಸಂಕಲ್ಪವೇ ಪ್ರವೃತ್ತಿ ನಿವೃತ್ತಿಮಾರ್ಗಗಳೆರಡಕ್ಕೂ ಮೂಲಕಾರಣವಾಗಿರು ವುದು. ಅಲ್ಲದೆ ಸೃಷ್ಟಿ ಸ್ಥಿತಿ ಲಯಗಳಿಗೆ ಇದೇ ಕಾರಣವಾದುದರಿಂದ ಶುದ್ಧಸಂಕಲ್ಪದ ತತ್ವದವಳಾದ ಅನಸೂಯಾದೇವಿಯು ನಮಸ್ಕಾರ ಯೋಗ್ಯಳು.

**ರಾ||** ಅನಸೂಯಾದೇವಿಯು ಹತ್ತು ವರ್ಷಗಳ ಪರ್ಯಂತರ ಉಗ್ರವಾದ ತಪಸ್ಸನ್ನು ಮಾಡಿದವಳು.

**ತತ್ವ||** ಶ್ರೀವಿದ್ಯಾರಣ್ಯರವರು ಪಂಚದಶಿಯಲ್ಲಿ "ಮನೋ ದಶೇಂದ್ರಿಯಾಧ್ಯಕ್ಷಂ" ಎಂಬದಾಗಿ ಹೇಳಿರುವಂತೆ ಸಂಕಲ್ಪ ಉದಯವಾಗುವ ಮನೋಮಯಕೋಶವೇ ಹತ್ತು ಇಂದ್ರಿಯುಗಳಿಗೂ ಅಧ್ಯಕ್ಷತೆಯನ್ನು ವಹಿಸಿರುವುದರಿಂದ ಹತ್ತು ವರ್ಷಗಳ ಪರ್ಯಂತರ

ಉಗ್ರವಾದ ತಪಸ್ಸನ್ನಾಚರಿಸಿದ ತತ್ವವಾಗಿರುತ್ತದೆ. ಅಲ್ಲದೆ ಹತ್ತು ಇಂದ್ರಿಯಗಳ ಸಂಪರ್ಕವಿಲ್ಲದ ಶುದ್ಧಸಂಕಲ್ಪಮಾತ್ರವೆಂಬ ತತ್ವಾರ್ಥವನ್ನೂ ಮಾಡಬಹುದು. ಮತ್ತು ಸಂಕಲ್ಪದಿಂದಲೇ ಈಶ್ವರನು ಮತ್ಸ್ಯ ಕೂರ್ಮಾದಿ ದಶಾವತಾರಗಳನ್ನು ತಾಳಿದನೆಂಬ ತತ್ವಾರ್ಥವನ್ನೂ ಮಾಡಬಹುದು.

**ರಾ||** ಅನಸೂಯಾದೇವಿಯು ಸೀತಾದೇವಿಯನ್ನು ಸತ್ಕರಿಸಿ ಯೋಗಕ್ಷೇಮವನ್ನು ವಿಚಾರಿಸುತ್ತ ಸೀತಾದೇವಿಯ ಪಾಣಿಗ್ರಹಣದ ವಿಚಾರವನ್ನು ಹೇಳಬೇಕೆಂದು ಕೇಳಿದಳು. ಅದಕ್ಕೆ ಸೀತಾದೇವಿಯು ಶ್ರೀರಾಮನು ಧನುರ್ಭಂಗಮಾಡಿ ತನ್ನ ಪಾಣಿಗ್ರಹಣ ಮಾಡಿದ ವಿಚಾರವನ್ನೂ ಅಯೋಧ್ಯೆಯಲ್ಲಿ ಶ್ರೀರಾಮನೊಡನೆ ತಾನು ಸುಖವಾಗಿದ್ದುದನ್ನೂ ಅನಸೂಯಾದೇವಿಗೆ ಹೇಳಿದಳು.

**ತತ್ವ||** ಧನುರ್ಭಂಗಮಾಡಿ ಶ್ರೀರಾಮನು ಸೀತಾದೇವಿಯ ಪಾಣಿಗ್ರಹಣ ಮಾಡಿದನೆಂದರೆ—ಉಪಸಂಹಾರ ಅಥವಾ ಮೋಕ್ಷಕ್ರಮದಿಂದ ಮಾಯಾಸಂಬಂಧವನ್ನು ತಪ್ಪಿಸಿಕೊಳ್ಳಲು ಅರ್ಹತೆಯಿರುವುದೆಂಬ ತತ್ವವನ್ನು ಸೂಚಿಸುವುದಷ್ಟೆ! ಮತ್ತು ಸೀತಾರಾಮರು ಅಯೋಧ್ಯೆಯಲ್ಲಿ ಸುಖವಾಗಿದ್ದುದೇ ಈಶ್ವರತ್ವವೆಂದು ನಿಳಿಸಿತಷ್ಟೆ! ಶ್ರೀರಾಮನು ಧನುರ್ಭಂಗಮಾಡಿ ಸೀತಾ ಪಾಣಿಗ್ರಹಣ ಮಾಡಿದನಂತರ ಅಯೋಧ್ಯೆಯಲ್ಲಿ ಯಾವ ಸ್ಥಿತಿಯಲ್ಲಿದ್ದನೋ ಆ ಸ್ಥಿತಿಯೇ ಸೀತಾದೇವಿಗುಂಟಾಗಬೇಕೆಂಬ ಸಂಕಲ್ಪೋದಯದ ತತ್ವವೇ ಅನಸೂಯಾದೇವಿಯು ಸೀತಾದೇವಿಯ ಪಾಣಿಗ್ರಹದ ವಿಚಾರವನ್ನು ಕೇಳಿದುದು.

ಅಂದರೆ ಪ್ರತಿಬಿಂಬಚೈತನ್ಯವು ಅವಿದ್ಯೆಯ ಉಪಾಧಿಯನ್ನು ಪಡೆದು ಜೀವನೆನಿಸಿಕೊಳ್ಳಲು ಇಳಿಯುತ್ತಾ ಇರುವುದಷ್ಟೆ! ಜೀವತ್ವದ ವ್ಯಾಪಾರವು ಸ್ಥಿರೀಕರಿಸಲ್ಪಡಬೇಕಾದರೆ ಸ್ಥೂಲದೇಹದ ವ್ಯಾಪಾರ ಪ್ರಾರಂಭವಾಗಬೇಕು. ಅಂದರೆ ಸೀತಾದೇವಿಯ ತತ್ವವಾದ ಶುದ್ಧಸತ್ವಗುಣವು ಅವಿದ್ಯೆಯ ಬಂಧನಕ್ಕೆ ಸಿಕ್ಕುವುದೇ ಜೀವತ್ವಕ್ಕೆ ಕೊನೆಯ ಸೋಪಾನವಾಗಿರುತ್ತದೆ. ಸಂಕಲ್ಪರೂಪಳಾದ ಅನಸೂಯಾದೇವಿಯು ಬಂಧನಸ್ವರೂಪವಾದ ಜೀವತ್ವದ ಸೋಪಾನದ ಸಂಕಲ್ಪವನ್ನು ಮಾಡದೆ ಈಶ್ವರತ್ವದ ಸೋಪಾನವೇ ಸೀತಾದೇವಿಗುಂಟಾಗಲೆಂದು ಸಂಕಲ್ಪಮಾಡಿದಳೆಂಬ ತತ್ವವಾಗಿರುವುದು. ಬಂಧನಕ್ಕೂ ಮೋಕ್ಷಕ್ಕೂ ಸಂಕಲ್ಪವೇ ಮುಖ್ಯಕಾರಣ. ಈ ತಾತ್ಪರ್ಯಕ್ಕೆ ಅಮೃತಬಿಂದು ಮುಂತಾದ ಶ್ರುತಿಗಳಲ್ಲಿ,

ಮನಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ |
ಬಂಧಾಯ ವಿಷಯಾಸಕ್ತಂ ಮುಕ್ತ್ಯೈನಿರ್ವಿಷಯಂ ಸ್ಮೃತಂ ||

**ತಾ||** ಪ್ರಪಂಚವ್ಯಾಪಾರ ರೂಪವಾದ ಬಂಧನಕ್ಕೂ ಮೋಕ್ಷಕ್ಕೂ ಮನೋಮಯಕೋಶಸ್ವರೂಪವಾದ ಸಂಕಲ್ಪವೇ ಕಾರಣ. ನಿರ್ವಿಷಯವೆಂದರೆ ದೇಹವೂ ದೇಹಕ್ಕೆ

ಸಂಬಂಧಪಟ್ಟ ವ್ಯಾಪಾರವೂ ನಾನಲ್ಲವೆಂದೂ ಪರಬ್ರಹ್ಮನೇ ತಾನೆಂದೂ ಸಂಕಲ್ಪಮಾಡಿ ಅನುಷ್ಠಾನಮಾಡಿಕೊಂಡು ಬಂದಲ್ಲಿ ಬಂಧವಿಮೋಚನೆಯೆಂದರೆ ಮೋಕ್ಷವಾಗುತ್ತದೆ ಎಂದು ಹೇಳಿದೆ.

ಆದುದರಿಂದ ಸಂಕಲ್ಪದ ತತ್ವದಲ್ಲಿರುವ ಅನಸೂಯಾದೇವಿಯು ಸೀತಾದೇವಿಗೆ ಅಯೋಧ್ಯಾವಾಸವಾಗಲೆಂಬ ಇಚ್ಛೆಪಟ್ಟಳೆಂದರೆ—ಈಶ್ವರಸೋಪಾನವನ್ನೇ ಪಡೆಯಲೆಂದು ಸಂಕಲ್ಪಿಸಿದಳೆಂಬ ತತ್ವವಾಗಿರುತ್ತದೆ. ಪ್ರತಿಬಿಂಬಚೈತನ್ಯವು ಜೀವತ್ವಕ್ಕೆ ಇಳಿಯುತ್ತಾ ಇರುವುದರಿಂದ ಜೀವತ್ವದಿಂದ ಉಪಸಂಹಾರಕ್ರಮ ಅಥವಾ ಮೋಕ್ಷಕ್ರಮವೆಂದರೆ ಷಟ್ಚಕ್ರಗಳನ್ನು ಭೇದಿಸಿಕೊಂಡು ಅವಿದ್ಯೆಯನ್ನು ನಿಗ್ರಹಿಸಿ ಪುನಃ ಈಶ್ವರತ್ವವನ್ನು ಸೀತಾದೇವಿಯು ಪಡೆಯಬೇಕೆಂಬ ತತ್ವದ ಸೂಚನೆಯನ್ನು ತೋರಿಸಲು ಅನಸೂಯಾದೇವಿಯು ಸೀತಾಪಾಣಿಗ್ರಹಣಕ್ಕೆ ಇಟ್ಟಿದ್ದ ಧನುಸ್ಸಿನ ವಿಚಾರವನ್ನು ಕೇಳಿದ್ದಾಗಿರುತ್ತದೆ. ಅಂದರೆ ಮೋಕ್ಷಕ್ರಮದಿಂದ ಸೀತಾದೇವಿಯು ಈಶ್ವರತ್ವವನ್ನು ಪಡೆಯಲೆಂದು ಸಂಕಲ್ಪವಾಯಿತೆಂಬ ತಾತ್ಪರ್ಯವಾಗಿರುತ್ತದೆ.

**ರಾ||** ಅನಸೂಯಾದೇವಿಯು ಸೀತಾದೇವಿಗೆ ಆಶೀರ್ವಾದಮಾಡಿ ಪುಷ್ಪಮಾಲಿಕೆಯನ್ನೂ ದಿವ್ಯಗಂಧಾನುಲೇಪನವನ್ನೂ ದಿವ್ಯಾಭರಣಗಳನ್ನೂ ಕೊಟ್ಟು ಇವುಗಳು ಅತಿ ರಮ್ಯವಾಗಿಯೂ ನಿತ್ಯವೂ ಹೊಸ ಅನುಲೇಪಮಾಡಿಕೊಂಡಂತೆ ಅಂದರೆ ನಾಶರಹಿತವಾಗಿಯೂ ಆನಂದಕರವಾಗಿಯೂ ಗಂಧಾನುಲೇಪನದಂತೆ ಇರುವುವೆಂದು ಹೇಳಿದಳು.

**ತತ್ವ||** ಪ್ರಪಂಚದ ವಿಷಯಗಳಲ್ಲುಂಟಾಗುವ ಮನಸ್ಸಂಕಲ್ಪಗಳು ದುರ್ವಾಸನೆಗಳುಳ್ಳದ್ದಾಗಿಯೂ ದುಃಖದಿಂದ ಕೂಡಿಯೂ ಇರುತ್ತವೆ. ಮೋಕ್ಷಮಾರ್ಗದ ಸಂಕಲ್ಪಗಳು ಬ್ರಹ್ಮಾನಂದಜನಕವಾದ ಪರಿಮಳವುಳ್ಳದ್ದಾಗಿಯೂ ನಾಶರಹಿತವಾಗಿಯೂ ಪುರುಷಾರ್ಥಪ್ರದವಾಗಿಯೂ ಇರುವುವೆಂಬ ತತ್ವವೇ ಅನಸೂಯಾದೇವಿಯು ಸೀತಾದೇವಿಗೆ ಕೊಟ್ಟ ಆಭರಣಾದಿಗಳ ಮಹಿಮೆಗಳಾಗಿರುತ್ತವೆ. ಗಂಧಾನುಲೇಪನವು ನಿತ್ಯವೂ ಹೊಸ ಲೇಪನದಂತೆ ನಾಶರಹಿತವಾಗಿ ಆನಂದಕರವಾಗಿ ಇರುವುದೆಂದರೆ —ಮೋಕ್ಷವನ್ನು ಪಡೆಯಲು ಒಂದಾವರ್ತಿ ಸಂಕಲ್ಪಮಾಡಿದರೆ ಸಾಲದು. ಮಾಡಿದ ಸಂಕಲ್ಪವನ್ನು ಪುನಃ ಪುನಃ ಮಾಡಿಕೊಂಡು ನಾಶವಾಗದಂತೆ ಉದ್ರೇಕಗೊಳಿಸುತ್ತಿರಬೇಕೆಂಬ ತತ್ವವಾಗಿರುವುದು. ಅಲ್ಲದೆ ಆನಂದದಿಂದ ಸಂಕಲ್ಪವನ್ನು ಮಾಡಿಕೊಂಡು ಹೋಗಿ ನಿಜಾನಂದವಾದ ಪರಬ್ರಹ್ಮನಲ್ಲಿ ಲೀನವಾಗುವಂತೆಯೂ ಇರಬೇಕೆಂಬ ತತ್ವವಾಗಿರುವುದು. ಅಂದರೆ ಸೀತಾದೇವಿಯು ಈ ತತ್ವದ ಸ್ವರೂಪವಾದ ಪರಮಪದವನ್ನು ಪುನಃ ಪಡೆಯಲೆಂಬ ಸಂಕಲ್ಪವಾಯಿತೆಂಬ ತಾತ್ಪರ್ಯ.

ರಾ|| ಅನಸೂಯಾದೇವಿಯು ದಿವ್ಯ ಗಂಧಾಭರಣ ಮತ್ತು ಮಾಲೆಗಳನ್ನು ಸೀತಾದೇವಿಗೆ ಕೊಟ್ಟು "ಎಲೌ ಸೀತಾದೇವಿಯೇ! ಸರ್ವವನ್ನೂ ಧರಿಸಿಕೊ, ನಾನು ನನ್ನ ಕಣ್ಣುಗಳು ದಣಿಯುವ ಹಾಗೆ ನೋಡಿ ಸಂತೋಷಪಡುವೆನು" ಎಂದು ಹೇಳಿದಳು. ಸೀತಾದೇವಿಯು ಅಲಂಕಾರಮಾಡಿಕೊಂಡುದನ್ನು ಮನದಣಿಯ ನೋಡಿ ಸಂತೋಷಪಟ್ಟಳು.

ತತ್ತ್ವ|| ನಾಶರಹಿತವಾದ ಆನಂದಸ್ವರೂಪವಾದ ಪರಮಪದವನ್ನು ಹೊಂದುವ ಸಂಕಲ್ಪವನ್ನು ಮನಸ್ಸಿನಲ್ಲಿ ಮಾಡಿದಾಕ್ಷಣವೆ ಮೋಕ್ಷವೆಂದಿಗೂ ದೊರೆಯುವುದಿಲ್ಲ. ದೃಢತರವಾದ ಸಂಕಲ್ಪವೂ ಈ ಸಂಕಲ್ಪಕ್ಕನುಸಾರವಾಗಿ ಕಾರ್ಯಸಾಧನೆಯೂ ಇಲ್ಲದೆ ಹೋದರೆ "ಉತ್ಪದ್ಯಂತೆ ವಿಲೀಯಂತೆ ದರಿದ್ರಾಣಾಂ ಮನೋರಥಾಃ" ಎಂಬಂತೆ ದರಿದ್ರನ ಸಂಕಲ್ಪಗಳೆನಿಸಿಕೊಂಡು ಸಂಕಲ್ಪಮಾತ್ರದಲ್ಲಿಯೇ ಲಯವನ್ನು ಹೊಂದುತ್ತವೆ. ಆದುದರಿಂದ ಸಂಕಲ್ಪಮಾಡಿದ್ದನ್ನು ಕಾರ್ಯತಃ ಅನುಷ್ಠಾನಮಾಡಿ ಪೂರ್ತಿಮಾಡಿಕೊಳ್ಳಬೇಕೆಂಬುದರ ತತ್ತ್ವಾರ್ಥವೇ ಸೀತಾದೇವಿಗೆ ಅಲಂಕಾರಮಾಡಿಸಿ ಮನದಣಿಯ ಅನಸೂಯಾದೇವಿಯು ನೋಡಿದುದು. ಅಂದರೆ ಮೋಕ್ಷವನ್ನು ಪಡೆಯಬೇಕೆಂಬ ದೃಢತರವಾದ ಸಂಕಲ್ಪವೂ ಅದಕ್ಕೆ ಸರಿಯಾದ ಅನುಷ್ಠಾನವೂ ಇಲ್ಲದಿದ್ದರೆ ಮೋಕ್ಷವು ದೊರೆಯುವುದಿಲ್ಲವೆಂಬ ತತ್ತ್ವಾರ್ಥವಾಗಿರುತ್ತದೆ.

ರಾ|| ಈ ರೀತಿಯಾಗಿ ಅಲಂಕಾರಮಾಡಿಕೊಂಡು ಬಂದ ಸೀತಾದೇವಿಯನ್ನು ಶ್ರೀರಾಮ ಲಕ್ಷ್ಮಣರು ನೋಡಿ ಸಂತೋಷಪಟ್ಟರು.

ತತ್ತ್ವ|| ಮನೋಮಯಕೋಶದಲ್ಲಿ ಉತ್ಪನ್ನವಾದ ಸಂಕಲ್ಪವನ್ನು ಬುದ್ಧಿ ಮನಸ್ಸುಗಳಲ್ಲಿರುವ ಪ್ರತಿಬಿಂಬಚೈತನ್ಯವು ಅನುಮೋದಿಸಿತು ಅಥವಾ ಪ್ರಕಾಶಪಡಿಸಿತೆಂಬ ತಾತ್ಪರ್ಯವಾಗಿರುತ್ತದೆ. ಅಂದರೆ ಮನೋಮಯಕೋಶದ ಪ್ರಕೃತಿಯ ವಿಕಾರದಿಂದ ಶುದ್ಧಸತ್ವಪ್ರಧಾನವಾಯೆಯು ಆಚ್ಛಾದಿಸಲ್ಪಡುವಿಕೆಯೇ ಸೀತಾದೇವಿಯು ಅನಸೂಯಾದೇವಿಯಿಂದ ಅಲಂಕರಿಸಲ್ಪಟ್ಟ ತತ್ತ್ವವಾಗಿರುವುದು. ಈ ಮನೋಮಯಕೋಶದ ಪ್ರಕೃತಿಯ ವಿಕಾರವಾದ ಯಾವ ವಿಧವಾದ ಸಂಕಲ್ಪವನ್ನೇ ಆಗಲಿ ಪ್ರತಿಬಿಂಬಚೈತನ್ಯವು ಪ್ರಕಾಶಪಡಿಸುವಿಕೆಯೇ ಶ್ರೀರಾಮ ಲಕ್ಷ್ಮಣರು ಸೀತೆಯ ಅಲಂಕಾರವನ್ನು ನೋಡಿ ಸಂತೋಷಪಟ್ಟುದಾಗಿರುವುದು.

ಈ ಅನಸೂಯಾದೇವಿಯ ಮುಖ್ಯತಾತ್ಪರ್ಯವೇನೆಂದರೆ—ಮನೋಮಯಕೋಶದಲ್ಲಿ ಉದಯವಾಗುವ ಸಂಕಲ್ಪದ ಸ್ಫುರಣೆಯ ವಿಚಾರ ಮತ್ತು ಇಂತಹ ಸಂಕಲ್ಪವು ಮೋಕ್ಷಮಾರ್ಗಕ್ಕೆ ಯಾವ ರೀತಿಯಿರಬೇಕೆಂಬ ತತ್ತ್ವವನ್ನು ಸೂಚಿಸುತ್ತದೆ.

ಆದುದರಿಂದ ಅನಸೂಯಾದೇವಿಯ ವಿಚಾರದ ತತ್ವಗಳಂತೆ ಬ್ರಹ್ಮವಿದ್ಯಾಧಿಕಾರಿಗಳು ತಮ್ಮ ತಮ್ಮ ಮನಸ್ಸಂಕಲ್ಪಗಳನ್ನು ಈ ರೀತಿ ಹೊಂದಿ ಅವಿದ್ಯೆಯನ್ನು ನಿಗ್ರಹಿಸಿ ಮೋಕ್ಷವನ್ನು ಪಡೆಯಬೇಕೆಂಬದಾಗಿ ಸೂಚಿಸುತ್ತದೆ. ಶ್ರೀರಾಮ ಲಕ್ಷ್ಮಣರು ಕೂಡ ಅವಿದ್ಯಾಸ್ವರೂಪರಾದ ರಾವಣಾದಿ ರಾಕ್ಷಸರನ್ನು ಕೊಲ್ಲಲು ಈ ವಿಧವಾದ ದೃಢತರ ಸಂಕಲ್ಪವನ್ನು ಅನುಸರಿಸಿರುವರು.

ಗರ್ಭದಲ್ಲಿರುವ ಶಿಶುವಿಗೆ ಜನನವಾದನಂತರ ದೇಹವ್ಯಾಪಾರಮಾಡಲು ಸಲಕರಣೆಗಳು ಒಂದೊಂದಾಗಿ ಉಂಟಾಗುತ್ತಿವೆ. ವಿಜ್ಞಾನಮಯಕೋಶದಲ್ಲಿ "ದೇಹ ನಾನು" ಎಂಬ ಜ್ಞಾನ ಅಭಿಮಾನ ಸ್ವಾರ್ಥತೆಗಳ ಉದಯದ ಸ್ಫುರಣೆಯಾಯಿತು. ಈಗ ಮನೋಮಯಕೋಶದಲ್ಲಿ ತಾನಲ್ಲದ ಎರಡನೆಯದರ ತಿಳಿವಳಿಕೆ ಮತ್ತು ಸಂಕಲ್ಪೋದಯವಾಗಿ ಕಾರ್ಯಕ್ಕೆ ಸಿದ್ಧವಾಯಿತು. ಜ್ಞಾನ ಕರ್ಮೇಂದ್ರಿಯಗಳ ವ್ಯಾಪಾರಗಳಿಲ್ಲದ ಸ್ವಪ್ನಾವಸ್ಥೆಯಲ್ಲಿ ಸಂಕಲ್ಪರೂಪವಾದ ಮನೋರಾಜ್ಯವು ಹೇಗೆ ಇರುವುದೋ ಹಾಗೆ ಜನನವಾಗುವುದಕ್ಕಿಂತ ಮುಂಚೆ ವಿಕಲ್ಪವಿಲ್ಲದ ಸಂಕಲ್ಪ ಉದಯವಾಗುತ್ತದೆ. ಈ ಕಾಲದಲ್ಲಿ ಶಿಶುವು ಗರ್ಭಯಾತನೆಯ ಜ್ಞಾನವನ್ನು ಪಡೆದು ಜನನ ಮರಣ ಪ್ರವಾಹರೂಪವಾದ ಸಂಸಾರದಿಂದ ಪಾರಾಗಲು ಪರಮಾತ್ಮನನ್ನು ಮರೆಹೊಕ್ಕು ಜ್ಞಾನವನ್ನು ಪಡೆಯಬೇಕೆಂದು ಸಂಕಲ್ಪಮಾಡಿಕೊಳ್ಳುತ್ತದೆ. ಈ ತಿಳಿವಳಿಕೆಯು ಗರ್ಭದಲ್ಲಿದ್ದಾಗ ಇದ್ದು ಜನನವಾದ ಕೂಡಲೆ ಇಂದ್ರಿಯಗಳ ಕಡೆ ಸೆಳೆತವು ಪ್ರಾರಂಭವಾಗುವುದರಿಂದ ಮರೆಯಾಗುವುದು.

ಶ್ರೀರಾಮನು ಅಯೋಧ್ಯೆಯಿಂದ ವನವಾಸಕ್ಕೆ ಹೊರಟಾರಭ್ಯ ಇದುವರೆಗೂ ವ್ಯಷ್ಟಿದೇಹದಲ್ಲಿನ ಆನಂದ ವಿಜ್ಞಾನ ಮನೋಮಯ ಕೋಶಗಳ ವಿಚಾರಗಳು ಕ್ರಮವಾಗಿ ಬಂದಿರುತ್ತವೆ. ಈ ಮೂರು ಕೋಶಗಳ ಸ್ಫುರಣೆಯ ವಿಚಾರವೆಂದರೆ—ಅಂತಃಕರಣದ ಕಾರ್ಯಗಳು ಸ್ಫುರಣೆಯಾಗಿ ಕಾರ್ಯಕ್ಕೆ ಸಿದ್ಧವಾಗಿವೆಯೆಂಬ ತಾತ್ಪರ್ಯ. ಜನನವಾಗುವುದಕ್ಕಿಂತ ಮುಂಚೆ ಗರ್ಭದಲ್ಲಿ ಅಂತಃಕರಣದ ಕಾರ್ಯ ಉದಯವಾದರೂ ಜ್ಞಾನ ಕರ್ಮೇಂದ್ರಿಯಗಳೊಡನೆ ಅಂತಃಕರಣದ ವೃತ್ತಿಯು ಕಲೆತು ದೇಹವ್ಯಾಪಾರ ಮಾಡಲು ಸಾಧ್ಯವಿರುವುದಿಲ್ಲ. ಅಲ್ಲದೆ ಗರ್ಭದಲ್ಲಿದ್ದಾಗ ಶಿಶುವಿನ ನಾಭಿಯ ನಾಳವೂ ಮಾತೃವಿನ ನಾಭಿಯ ನಾಳವೂ ಸೇರಿಕೊಂಡಿರುತ್ತವೆ. ಹೀಗಿರುವುದರಿಂದ ತಾಯಿಯ ರಕ್ತವು ನಾಳದ ಮೂಲಕ ಶಿಶುವಿನಲ್ಲಿ ಪ್ರವೇಶಿಸಿ ದೇಹವು ಬೆಳೆಯುವುದೇ ಹೊರತು ಪಂಚಪ್ರಾಣಗಳ ಮತ್ತು ಶ್ವಾಸೋಚ್ಛ್ವಾಸಗಳ ವ್ಯಾಪಾರವಿರುವುದಿಲ್ಲ. ಗರ್ಭದಲ್ಲಿ ನಾಲ್ಕನೆಯ ತಿಂಗಳಿಂದ ಹೃದಯಕೋಶದ ಕಾರ್ಯ ಮಟ್ಟಿಗೆ ನಡೆಯುತ್ತಿರುತ್ತದೆ. ಆದುದರಿಂದ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳ ವ್ಯಾಪಾರಗಳು ಶಿಶುವು ಜನನವಾದ ಮೇಲೆ ನಡೆಯುವುವು.

ಇನ್ನು ಮುಂದೆ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳ ಸ್ಫುರಣೆಯಾಗಿ ಸ್ಥೂಲ ದೇಹದ ವ್ಯಾಪಾರ ಪ್ರಾರಂಭವಾಗುವ ತತ್ವಗಳನ್ನು ವಿವರಮಾಡುವುದರಿಂದ ಮುಂದಿನ ರಾಮಾಯಣದ ವಿಚಾರಗಳನ್ನು ಜನನವಾದ ಶಿಶುವನ್ನು ಅನುಸರಿಸಿ ತಿಳಿದುಕೊಳ್ಳಬೇಕು. ಶ್ರೀರಾಮಾದಿಗಳು ದಂಡಕಾರಣ್ಯವನ್ನು ಪ್ರವೇಶಮಾಡುವ ತತ್ವವೇ ಶಿಶುವು ಜನನವಾಗುವುದಾಗಿರುತ್ತದೆ. ಶ್ರೀರಾಮಾದಿಗಳು ದಂಡಕಾರಣ್ಯ ಪ್ರವೇಶಮಾಡಿದ ನಂತರ ರಾಕ್ಷಸರ ಭಾಧೆಗಳುಂಟಾಗುವುವು. ಮತ್ತು ರಾವಣನಿಂದ ಸೀತಾಪಹರಣವಾಗುವುದು. ಇದರಂತೆ ಶಿಶುವು ಜನನವಾದನಂತರ ಅವಿದ್ಯೆಯ ಬಾಧೆಯಿಂದ ದೇಹವ್ಯಾಪಾರ ವೆಂಬ ಬಂಧನವನ್ನುಹೊಂದುವುದು. ಆದುದರಿಂದ ಶಿಶುವು ಜನನವಾಗುವುದೇ ಶ್ರೀರಾಮಾದಿಗಳು ದಂಡಕಾರಣ್ಯ ಪ್ರವೇಶಮಾಡಿದ ತತ್ವವಾಗಿರುತ್ತದೆ. ಉದ್ಯಾನವನವಾಸ ಅರಣ್ಯವಾಸ ದಂಡಕಾರಣ್ಯವಾಸಗಳ ತಾರತಮ್ಯಗಳ ತತ್ವಗಳನ್ನು ಹಿಂದೆ ತಿಳಿಸಿತಷ್ಟೆ! ಜನನವಾದ ನಂತರ ಉಂಟಾಗುವ ದೇಹವ್ಯಾಪಾರವೇ ದಂಡಕಾರಣ್ಯದಲ್ಲಿನ ಸಂಚಾರದಂತೆ ಘೋರ ಸ್ವರೂಪವೆಂಬ ತತ್ವವಾಗಿರುತ್ತದೆ. ಶ್ರೀರಾಮನು ಅಯೋಧ್ಯೆಯಲ್ಲಿರುವುದೇ ಈಶ್ವರಸೋಪಾನ. ಗುಹನ ಸ್ಥಳದ ತತ್ವವಾದ ಆನಂದಮಯಕೋಶವೂ ಈಶ್ವರಸೋಪಾನಕ್ಕೆ ಸೇರಿರುವುದು. ಆನಂದಮಯಕೋಶದಿಂದ ಹೊರಗೆ ಇರುವ ವಿಜ್ಞಾನ ಮುಂತಾದ ಕೋಶಗಳಲ್ಲಿ ಜೀವವ್ಯಾಪಾರದ ಸೋಪಾನವು ಪ್ರಾರಂಭವಾಗುತ್ತಾ ಬರುವುದೆಂದರೆ—ಪ್ರತಿಬಿಂಬಚೈತನ್ಯನಿಗೆ ಉಪಾಧಿಗಳು ಬರುವ ಕ್ರಮವನ್ನು ತೋರಿಸುತ್ತಾ ಬರುವುದು. ಪಂಚಕೋಶಗಳಲ್ಲಿ ಇನ್ನು ಉಳಿದಿರುವ ಪ್ರಾಣ ಮತ್ತು ಅನ್ನಮಯ ಕೋಶಗಳ ಕಾರ್ಯಗಳು ಸ್ಫುರಣೆಯಾಗಿ ಜೀವತ್ವದ ವ್ಯಾಪಾರವು ಸ್ಥಿರವಾಗುವುದು. ಆದುದರಿಂದ ಶಿಶುವು ಜನನವಾದ ಮೇಲೆ ನಡೆಯುವ ಕಾರ್ಯದ ತತ್ವವಾದ ಅರಣ್ಯಕಾಂಡವನ್ನು ಪ್ರಾರಂಭಿಸೋಣ.



ಶ್ರೀ

# ಅರಣ್ಯಕಾಂಡ



## ಇಂದ್ರಿಯಗಳ ವ್ಯಾಪಾರ ಪ್ರಾರಂಭವಾಗಿ ಅವಿದ್ಯೆಯಿಂದ ಉಂಟಾಗುವ ಬಂಧನ ಮತ್ತು ಮೋಕ್ಷಕ್ರಮದಲ್ಲಿ ವೇದಾಂತ ಶ್ರವಣ ಮನನ ವಿಚಾರಗಳ ತತ್ವ.

## ೧ನೆಯ ಪ್ರಕರಣ.

**ಶ್ರೀರಾಮನನ್ನು ದಂಡಕಾರಣ್ಯ ವಾಸಿಗಳು ಸತ್ಕರಿಸಿದುದು.**



**ಬುದ್ಧಿಮನಸ್ಸಿನ ವೃತ್ತಿಗಳು ತ್ವಗಿಂದ್ರಿಯವನ್ನು ಸ್ಫುರಣೆಮಾಡುವ ವಿಚಾರ.**

**ರಾ॥** ಶ್ರೀರಾಮ ಲಕ್ಷ್ಮಣ ಸೀತಾದೇವಿಯರು ಅತ್ರಿಮಹರ್ಷಿಗಳ ಆಶ್ರಮವನ್ನು ಬಿಟ್ಟು ದಂಡಕಾರಣ್ಯವನ್ನು ಪ್ರವೇಶಿಸಲು ಅಲ್ಲಿಯ ವಾಸಿಗಳಾದ ತಪಸ್ವಿಗಳು ಇವರನ್ನು ಸತ್ಕರಿಸಿದರು.

**ತತ್ವ॥** ಶ್ರೀರಾಮನು ದಂಡಕಾರಣ್ಯವನ್ನು ಪ್ರವೇಶಿಸಿದನೆಂದರೆ, ಬುದ್ಧಿವೃತ್ತಿಯು ಮನೋಮಯಕೋಶದಿಂದ ಕೆಳಗಿನ ಕೋಶಕ್ಕೆ ಇಳಿಯುವುದೆಂದು ಹಿಂದಿನ ಪ್ರಕರಣದಲ್ಲಿ ತಿಳಿಸಿರುತ್ತದಷ್ಟೆ! ಮತ್ತು ಗರ್ಭದಲ್ಲಿ ಶಿಶುವಿಗೆ ಮನೋಮಯಕೋಶದವರೆಗೆ ಸ್ಫುರಣೆಯಾಗಿರುತ್ತದಷ್ಟೆ! ಶಿಶುವು ಜನನವಾದನಂತರ ಪ್ರಥಮದಲ್ಲಿ ಜ್ಞಾನೇಂದ್ರಿಯಗಳು ಸ್ಫುರಣೆಯಾಗಿ ಅನಂತರ ಪ್ರಾಣಮಯ ಅನ್ನಮಯಕೋಶಗಳ ಕಾರ್ಯಗಳು ಸ್ಫುರಣೆಯಾಗುತ್ತವೆ. ಶ್ರೀರಾಮನು ದಂಡಕಾರಣ್ಯವನ್ನು ಪ್ರವೇಶಿಸಿದ ಕೂಡಲೆ ದಂಡಕಾರಣ್ಯವಾಸಿಗಳಿಂದ ಸತ್ಕರಿಸಲ್ಪಟ್ಟನು. ದಂಡಕಾರಣ್ಯದಲ್ಲಿ ವಾಸವಾಗಿರುವ ತಪಸ್ವಿಗಳು ಸತ್ಕರಿಸಿದರೆಂದು ರಾಮಾಯಣದಲ್ಲಿ ಬರೆದಿರುವುದೇ ಹೊರತು ದಂಡಕಾರಣ್ಯದಲ್ಲಿ ವಾಸಮಾಡುವವರ ಹೆಸರು ಮತ್ತು ಅವರು ಇರತಕ್ಕ ಸ್ಥಳಗಳ ಹೆಸರುಗಳನ್ನು ತಿಳಿಸಿಲ್ಲ. ವಾಸವಾಗಿ ಇರುವವರಿಂದ ಸತ್ಕರಿಸಲ್ಪಟ್ಟರೆಂದು ಹೇಳಿರುವುದರಿಂದ "ವಾಸ" ಎಂಬ ಪದದಲ್ಲಿ ತತ್ವಾರ್ಥವಿರುತ್ತದೆ.

ವಾಸವೆಂದರೆ ಹೊದ್ದಿಕೆಯೆಂದು ಅರ್ಥವಾಗುವುದು. ನಮ್ಮ ದೇಹಕ್ಕೆ ಹೊದ್ದಿಕೆಯೋಪಾದಿಯಲ್ಲಿರುವುದು ತ್ವಗಿಂದ್ರಿಯವು. ಇಂತಹ ತ್ವಗಿಂದ್ರಿಯದಲ್ಲಿ ಬುದ್ಧಿಮನಸ್ಸಿನ ವೃತ್ತಿಗಳು ಪ್ರಸರಿಸಿ ತ್ವಗಿಂದ್ರಿಯವನ್ನು ಸ್ಫುರಣೆಮಾಡಿದ ತತ್ವವೇ ದಂಡಕಾರಣ್ಯವಾಸಿಗಳಿಂದ ಶ್ರೀರಾಮನು ಸತ್ಕರಿಸಲ್ಪಟ್ಟುದಾಗಿದೆ. ಶ್ರೀರಾಮನು ದಂಡಕಾರಣ್ಯವನ್ನು ಪ್ರವೇಶ ಮಾಡಿದನೆಂದರೆ, ಗರ್ಭದಲ್ಲಿದ್ದ ಶಿಶುವು ಜನನವಾಗಿ ಇಂದ್ರಿಯಗಳ ಮೂಲಕ ವ್ಯಾಪಾರ ಮಾಡಲು ಪ್ರಾರಂಭಿಸುವುದೆಂದು ಹಿಂದೆ ತಿಳಿಸಿತಷ್ಟೆ! ಜನನವಾದ ಕೂಡಲೆ ತ್ವಗಿಂದ್ರಿಯವು ಸ್ಫುರಣೆಯಾಗಿ ಅದರ ಮೂಲಕ ಛಳಿ ಗಾಳಿ ಶಾಖಗಳ ಇರುವಿಕೆಯು ತಿಳಿಯುತ್ತದೆ. ಮಕ್ಕಳು ಜನನವಾದ ಕೂಡಲೆ ಸಾಧಾರಣವಾಗಿ ಛಳಿಯಿಂದ ಅಳುತ್ತವೆ. ಯಾರಾದರೂ ಮುಟ್ಟದರೆ ತಾನಲ್ಲದ ಎರಡನೆಯ ವಸ್ತುವು ತನ್ನನ್ನು ಮುಟ್ಟಿತೆಂಬ ಜ್ಞಾನವೂ ಮಕ್ಕಳಿಗೆ ತ್ವಗಿಂದ್ರಿಯದ ಮೂಲಕ ಉಂಟಾಗುವುದು.

ಆದುದರಿಂದ ಈ ಮೇಲಿನ ತತ್ವಾರ್ಥಗಳನ್ನನುಸರಿಸಿ ಶ್ರೀರಾಮನು ದಂಡಕಾರಣ್ಯದಲ್ಲಿ ವಾಸವಾಗಿರುವ ತಪಸ್ವಿಗಳಿಂದ ಸತ್ಕರಿಸಲ್ಪಟ್ಟನೆಂದರೆ ಜನನವಾದ ಶಿಶುವಿನಲ್ಲಿ ತ್ವಗಿಂದ್ರಿಯವು ಸ್ಫುರಣೆಯಾಯಿತೆಂಬ ತತ್ವವಾಗಿರುವುದು. ಶಿಶುವು ಗರ್ಭದಲ್ಲಿದ್ದಾಗಲೇ ಅಂತಃಕರಣವು ಸ್ಫುರಣೆಯಾಗಿರುತ್ತೆಂದರೆ ವಿಜ್ಞಾನಮಯ ಮನೋಮಯ ಕೋಶಗಳು ಕಾರ್ಯಮಾಡಲು ಸಿದ್ಧವಾಗಿರುತ್ತವಷ್ಟೆ! ಬುದ್ಧಿಮನಸ್ಸಿನ ವೃತ್ತಿಗಳು ತ್ವಗಿಂದ್ರಿಯದೊಡನೆ ಮಿಳಿತವಾಗುವುದೇ ದಂಡಕಾರಣ್ಯದಲ್ಲಿ ವಾಸವಾಗಿದ್ದ ತಪಸ್ವಿಗಳಿಂದ ಶ್ರೀರಾಮಾದಿಗಳು ಸತ್ಕರಿಸಲ್ಪಟ್ಟುದಾಗಿದೆ.

## ೨ನೆಯ ಪ್ರಕರಣ.

**ಬುದ್ಧಿಮನಸ್ಸಿನ ವೃತ್ತಿಗಳು ಶ್ರೋತ್ರೇಂದ್ರಿಯವನ್ನು ಸ್ಫುರಣೆ ಮಾಡುವ ವಿಚಾರ.**

**ಶ್ರೀರಾಮ ಲಕ್ಷ್ಮಣರು ವಿರಾಧನನ್ನು ವಧೆಮಾಡಿದುದು.**

**ರಾ||** ಶ್ರೀರಾಮಾದಿಗಳು ದಂಡಕಾರಣ್ಯದಲ್ಲಿ ಸಂಚರಿಸುತ್ತಿರುವಾಗ ವಿರಾಧನೆಂಬ ರಾಕ್ಷಸನು ಇವರನ್ನು ಭಕ್ಷಿಸುವುದಕ್ಕೆ ಬರಲು ಶ್ರೀರಾಮ ಲಕ್ಷ್ಮಣರು ಅವನನ್ನು ನಿಗ್ರಹಿಸಿ ಅವನ ಶಾಪವಿಮೋಚನೆ ಮಾಡಿದರು.

**ತತ್ವ||** ವಿರಾಧನೆಂದರೆ—"ವಿ-ರಾಧ" ಯಾರಿಗೂ ವಶನಾಗದವನೆಂಬ ಅರ್ಥವೆಂದು ರಾಮಾಯಣದ ವ್ಯಾಖ್ಯಾನದಲ್ಲಿ ವ್ಯುತ್ಪತ್ತಿ ಇದೆ. ಈ ವಿರಾಧನು ತುಂಬುರನೆಂಬ ಗಂಧರ್ವನು. ಇವನಿಗೆ ಶಾಪದಿಂದ ರಾಕ್ಷಸತ್ವ ಬಂದಿರುವುದು. ಗಂಧರ್ವನೆಂದರೆ— "ಗಾನಂ ಧಾರಯತೀತಿ ಗಂಧರ್ವಃ" ಎಂಬದಾಗಿ ರಾಮಾಯಣದ ವ್ಯಾಖ್ಯಾನದಲ್ಲಿ

ವ್ಯುತ್ಪತ್ತಿ ಇರುವುದು. ಅಲ್ಲದೆ "ಗಾನಂ ಧರ್ಮಃ ಏಷಾಂ ತೇ ಗಂಧರ್ವಾಃ (ಅವು ಅರ್ವ ಪರ್ವ ಶರ್ವ ಗತೌ)" ಗಾನವೇ ಧರ್ಮವಾಗುಳ್ಳವರು ಗಂಧರ್ವರೆಂದು ಅಮರದ ವ್ಯಾಖ್ಯಾನ ದಲ್ಲಿರುವುದು. ತುಂಬುರು ಹೆಸರಿರುವುದರಿಂದ ಗಾನದಲ್ಲಿ ಪರಮ ಪ್ರಸಿದ್ಧರು. ಅಂದರೆ ಶಬ್ದಸ್ವರೂಪವನ್ನು ಚನ್ನಾಗಿ ತಿಳಿದವರೆಂಬ ತಾತ್ಪರ್ಯ. ಇಂತಹ ಶಬ್ದಸ್ವರೂಪವನ್ನು ತಿಳಿದವರಿಗೆ ಶಾಪದಿಂದ ರಾಕ್ಷಸತ್ವ ಬಂದಿರುವುದೆಂದರೆ ಮಲಿನತ್ವ ಬಂದು ಜಡವಾಗುತ್ತ ದೆಂಬ ತಾತ್ಪರ್ಯ. ಇದರಂತೆ ನಮ್ಮ ಶ್ರೋತ್ರೇಂದ್ರಿಯವು ಕೂಡ ಶಬ್ದಗ್ರಾಹಕ ಶಕ್ತಿಯು ಳ್ಳದ್ದು. ಇಂತಹ ಶಬ್ದಗ್ರಾಹಕ ಶಕ್ತಿಗೆ ರಾಕ್ಷಸತ್ವ ಬಂದಿರುವುದೆಂದರೆ ಜಡತ್ವ ಬಂದಿರುತ್ತದೆ.

ಶಬ್ದಗ್ರಾಹಕ ಶಕ್ತಿಗೆ ವಿರೋಧಿಯಾದ ರಾಕ್ಷಸತ್ವವಿರಬೇಕಾದರೆ ಅತ್ಯಂತ ಪ್ರಬಲ ವಾದ ಮಲಿನತ್ವ ಅಥವಾ ಜಡತ್ವದ ಪ್ರತಿಬಂಧಕವಿರಬೇಕು. ಕಾರಣವೇನೆಂದರೆ ಶಬ್ದ ವನ್ನು ಸ್ತಂಭಿಸುವುದು ಅತ್ಯಂತ ಕಷ್ಟವಾದುದರಿಂದ ಇವನಿಗೆ ವಿರಾಧನೆಂದು ಹೆಸರು ಬಂದಿರುತ್ತದೆ. ಇಂತಹ ವಿರಾಧನೆಂಬ ರಾಕ್ಷಸನನ್ನು ಶ್ರೀರಾಮ ಲಕ್ಷ್ಮಣರು ನಿಗ್ರಹಿಸಿ ಅವನ ಶಾಪವನ್ನು ವಿಮೋಚನೆಮಾಡಿದರು. ಅಂದರೆ ಬುದ್ಧಿಮನಸ್ಸುಗಳು ತಮ್ಮ ವೃತ್ತಿ ಯನ್ನು ಶ್ರೋತ್ರೇಂದ್ರಿಯದಲ್ಲಿ ಪ್ರಸರಿಸಿ ಅದರಲ್ಲಿದ್ದ ಜಡತ್ವವನ್ನು ನಿವಾರಣೆಮಾಡಿ ಶಬ್ದಗ್ರಾಹಕಶಕ್ತಿಯೆಂಬ ದೇವತ್ವವನ್ನು ಕೊಟ್ಟರು.

ಈ ಕಥಾಸಂದರ್ಭದ ಮುಖ್ಯತತ್ವವೇನೆಂದರೆ, ಜನನವಾದ ಶಿಶುವಿಗೆ ಹೊರಗಿನ ಶಬ್ದವು ಸ್ವಲ್ಪಸ್ವಲ್ಪವಾಗಿ ಕೇಳಿಬರುತ್ತಾ ಶ್ರೋತ್ರೇಂದ್ರಿಯವು ಚನ್ನಾಗಿ ಸ್ಫುರಣೆಯನ್ನು ಹೊಂದುತ್ತದೆ. ಜ್ಞಾನೇಂದ್ರಿಯಗಳಲ್ಲಿ ತ್ವಗಿಂದ್ರಿಯ ಶ್ರೋತ್ರೇಂದ್ರಿಯಗಳೆರಡೂ ಸ್ಫುರಣೆ ಯನ್ನು ಹೊಂದುತ್ತಾ ಬಂದುವು. ಇನ್ನುಳಿದಿರುವ ರೂಪ ರಸ ಗಂಧಗಳ ಇಂದ್ರಿಯಗಳ ವಿಚಾರಗಳನ್ನು ತೆಗೆದುಕೊಳ್ಳೋಣ.

## ೩ನೆಯ ಪ್ರಕರಣ.

| | |
|---|---|
| **ಶ್ರೀರಾಮ ಲಕ್ಷ್ಮಣರು ಶರಭಂಗ ಸುತೀಕ್ಷ್ಣ ಪಂಚಾಪ್ಸರ ಮತ್ತು ಸುದರ್ಶನಾಶ್ರಮಗಳನ್ನು ಪ್ರವೇಶಿಸಿ ದುದು.** | **ಬುದ್ಧಿಮನಸ್ಸಿನ ವೃತ್ತಿಗಳು ಚಕ್ಷು ರಿಂದ್ರಿಯ ರಸನೇಂದ್ರಿಯ ಮತ್ತು ಘ್ರಾಣೇಂದ್ರಿಯಗಳನ್ನು ಸ್ಫುರಣೆ ಮಾಡುವ ವಿಚಾರ.** |

**ರಾ||** ಶ್ರೀರಾಮ ಲಕ್ಷ್ಮಣರು ವಿರಾಧನನ್ನು ಕೊಂದನಂತರ ಸೀತಾದೇವಿಯೊಡನೆ ಶರಭಂಗಾಶ್ರಮ ಸುತೀಕ್ಷ್ಣಾಶ್ರಮ ಪಂಚಾಪ್ಸರ ಮತ್ತು ಸುದರ್ಶನಾಶ್ರಮಗಳಿಗೆ ಪ್ರವೇಶಮಾಡಿದರು.

**ತತ್ವ॥** ನಮ್ಮಲ್ಲಿರುವ ಎಡಗಣ್ಣು ಶರಭಂಗಾಶ್ರಮದ ತತ್ವವಾಗಿರುತ್ತದೆ. ಶರ ಭಂಗವೆಂದರೆ ನೀರಿನ ಅಲೆಯೆಂದರ್ಥ. ಅಂದರೆ ಎಡಗಣ್ಣಿನ ದೃಷ್ಟಿಯು ಅಷ್ಟು ತಂಪಾ ಗಿರುತ್ತದೆ. ಕಾರಣವೇನೆಂದರೆ ನಮ್ಮ ಭ್ರೂಮಧ್ಯದಲ್ಲಿ ಎಡಗಡೆ ಚಂದ್ರನಿಗೆ ಸ್ಥಾನ ವಾಗಿರುತ್ತದೆ. ಈ ಚಂದ್ರನ ಶೀತಲವಾದ ಕಾಂತಿಯ ಅಲೆಗಳು ಎಡಗಣ್ಣಿನ ದೃಷ್ಟಿ ಯನ್ನು ಪ್ರಕಾಶಪಡಿಸುತ್ತವೆ. ಆದುದರಿಂದ ಎಡಗಣ್ಣು ಶರಭಂಗಾಶ್ರಮದ ತತ್ವವಾಗಿ ರುತ್ತದೆ.

ಸುತೀಕ್ಷ್ಣಾಶ್ರಮದ ತತ್ವವೇ ಬಲಗಣ್ಣಾಗಿರುತ್ತದೆ. ಸುತೀಕ್ಷ್ಣವೆಂದರೆ—"ಸುಷ್ಠು ತೀಕ್ಷ್ಣಃ-ಸುತೀಕ್ಷ್ಣಃ" ಅಂದರೆ ಅತ್ಯಂತ ತೀಕ್ಷ್ಣವಾದ ಪ್ರಕಾಶವುಳ್ಳದ್ದೆಂದು ಅರ್ಥ. ಕಾರಣವೇನೆಂದರೆ ಬಲಗಣ್ಣಿನ ಕರೀಗುಡ್ಡೆಯಲ್ಲಿ ಸೂರ್ಯನು ಪ್ರತಿಫಲಿಸಿ ತೀಕ್ಷ್ಣವಾದ ಕಾಂತಿಯಿಂದ ಪ್ರಕಾಶಪಡಿಸುತ್ತಾನೆ. ಆದುದರಿಂದ ಬಲಗಣ್ಣು ಸುತೀಕ್ಷ್ಣಾಶ್ರಮದ ತತ್ವವಾಗಿರುತ್ತದೆ.

ಈ ಮೇಲಿನ ತತ್ವಾರ್ಥದಂತೆ ನಮ್ಮಲ್ಲಿರುವ ಸೂರ್ಯ ಚಂದ್ರರೇ ನಮ್ಮ ಕಣ್ಣು ಗಳನ್ನು ಪ್ರಕಾಶಪಡಿಸುತ್ತಾರೆಂಬುದಕ್ಕೆ ಅದ್ವಯತಾರಕೋಪನಿಷತ್ತಿನಲ್ಲಿ "ಅಕ್ಷ್ಯನ್ತಸ್ತಾ ರಯೋಃ ಶ್ಚಂದ್ರ ಸೂರ್ಯ ಪ್ರತಿಫಲನಂ ಭವತಿ" ಅಂದರೆ ಕಣ್ಣಿನ ಕರೀಗುಡ್ಡೆಯ ಮಧ್ಯದಲ್ಲಿ ಇರತಕ್ಕ ನೇತ್ರಫಲಕದಲ್ಲಿ ಸೂರ್ಯ ಚಂದ್ರರು ಪ್ರತಿಫಲಿಸುವರೆಂದು ಹೇಳಿರುವುದು. ಐತರೇ ಯೋಪನಿಷತ್ತಿನಲ್ಲಿಯೂ "ಆದಿತ್ಯ ಶ್ಚಕ್ಷು ರ್ಭೂತ್ವಾ" ಎಂಬದಾಗಿ ಹೇಳಿರುವುದು. ಶ್ರೀರಾಮ ಲಕ್ಷ್ಮಣರು ಶರಭಂಗ ಸುತಿಕ್ಷ್ಣಾಶ್ರಮಗಳಲ್ಲಿ ಸತ್ಕರಿಸಲ್ಪಟ್ಟರೆಂದರೆ, ಬುದ್ಧಿಮನ ಸ್ಸಿನ ವೃತ್ತಿಗಳು ಚಕ್ಷುರಿಂದ್ರಿಯವನ್ನು ಸ್ಫುರಣೆಮಾಡಿದುವೆಂಬ ತಾತ್ಪರ್ಯವಾಗಿರುತ್ತದೆ. ಅಂದರೆ ಜನನವಾದ ಶಿಶುವಿಗೆ ದೃಷ್ಟಿಪಾಟವವು ಪ್ರಾರಂಭವಾಯಿತೆಂಬ ತತ್ವಾರ್ಥ.

ಶ್ರೀರಾಮಾದಿಗಳು ಪಂಚಾಪ್ಸರ ಸರಸ್ಸನ್ನು ನೋಡಿದರೆಂದರೆ—ರಸನೇಂದ್ರಿಯವು ಸ್ಫುರಣೆಯಾಯಿತೆಂಬ ತತ್ವವಾಗಿರುವುದು. ಅಪ್ಸರವೆಂದರೆ ಜಲವೆಂದು ಅರ್ಥವಾಗುತ್ತದೆ. ರಸನೇಂದ್ರಿಯವೂ ದ್ರವಸ್ವರೂಪವಾದುದು. ಆದುದರಿಂದ ಅಪ್ಸರವೆಂದರೆ "ಅಪಸಾರ ಯಂತಿ ಸ್ಖಾಲಯಂತಿ ಧೈರ್ಯಾತ್ಸರ್ವಾ ಇತಿ ಅಪ್ಸರಃ" ಸರ್ವರನ್ನೂ ಧೈರ್ಯಶೂನ್ಯರನ್ನಾಗಿ ಮಾಡುವುದು. ಅಂದರೆ ರಸನೇಂದ್ರಿಯವು ತಿನ್ನುವ ಎಂತಹ ಪದಾರ್ಥಗಳು ಬಂದರೂ ಆ ಪದಾರ್ಥಗಳಲ್ಲಿನ ರುಚಿಯ ಯೋಗ್ಯತೆಯನ್ನು ಕಂಡುಹಿಡಿಯುವ ಶಕ್ತಿಯುಳ್ಳದ್ದಾದುದ ರಿಂದ ಸರ್ವಪದಾರ್ಥಗಳ ಧೈರ್ಯವನ್ನೂ ಕೆಡಿಸುವುದೆಂಬ ತತ್ವ. ಪಂಚಾಪ್ಸರದಲ್ಲಿ ಕೇಳಿಬರುವ ಶಬ್ದದ ತತ್ವವೇ ರಸನೇಂದ್ರಿಯ ಇರುವ ಬಾಯಲ್ಲಿ ಉಚ್ಚಾರಣೆಯ ಶಬ್ದ ಗಳುಂಟಾಗುವುದಾಗಿರುವುದು. ಇಂತಹ ಪಂಚಾಪ್ಸರವನ್ನು ಶ್ರೀರಾಮಾದಿಗಳು ನೋಡಿದ

ರೆಂದರೆ—ಜನನವಾದ ಶಿಶುವಿನ ಬುದ್ಧಿಮನಸ್ಸಿನ ವೃತ್ತಿಗಳು ರಸನೇಂದ್ರಿಯದೊಡನೆ ಕಲೆಯಲು ಪ್ರಾರಂಭವಾಗಿ ರಸನೇಂದ್ರಿಯವು ಸ್ಫುರಣೆಹೊಂದುತ್ತಾ ಬಂದಿತೆಂಬ ತಾತ್ಪರ್ಯ.

ಇದರಂತೆ ಶ್ರೀರಾಮಾದಿಗಳು ಸುದರ್ಶನಾಶ್ರಮಕ್ಕೆ ಹೋದರೆಂದರೆ—ಘ್ರಾಣೇಂದ್ರಿಯವು ಸ್ಫುರಣೆಯಾಗುತ್ತಾ ಬಂತೆಂಬ ತಾತ್ಪರ್ಯವಾಗಿರುತ್ತದೆ.

ಮುಖ್ಯವಾಗಿ ಪ್ರಪಂಚವ್ಯವಹಾರಕ್ಕೆ ಬೇಕಾದ ಸಲಕರಣೆಗಳು ಒಂದೊಂದಾಗಿ ಸಿದ್ಧವಾಗುತ್ತಿವೆ. "ಅಹಂ ವೃಕ್ಷಸ್ಯರೇರಿವ" ಎಂದು ಶ್ರುತಿಯಲ್ಲಿ ಹೇಳಿರುವಂತೆ ವಿಜ್ಞಾನಮಯಕೋಶದಲ್ಲಿ "ಶರೀರ ನಾನು" ಎಂಬ ಜ್ಞಾನಸ್ವರೂಪವಾದ ಗಿಡದ ಮೊಳಕೆಯು ಪ್ರಾರಂಭವಾಗಿ ಅಭಿಮಾನ 'ಸ್ವಾರ್ಥತೆ' ಸಂಕಲ್ಪಗಳುದಯವಾಗಿ ಈಗ ಜ್ಞಾನೇಂದ್ರಿಯಗಳೂ ಸ್ಫುರಣೆಯಾದುವು. "ಶರೀರ ನಾನು" ಎನ್ನುವುದು ಅನೇಕ ಶಾಖೆಗಳ ಕಾರ್ಯಗಳ ಸ್ವರೂಪವಾಗಿ ಪ್ರಸರಣೆಗೆ ಅನುಕೂಲಿಸುತ್ತಾ ಬರುತ್ತಿದೆ. ಆದರೆ ಜನನವಾದ ಶಿಶುವಿಗೆ ಜ್ಞಾನೇಂದ್ರಿಯಗಳು ಸ್ಫುರಣೆಯಾಗುತ್ತಾ ಬಂದರೂ ಪ್ರಪಂಚದ ಕಾರ್ಯಪ್ರವರ್ತನೆಗೆ ಇನ್ನೂ ಯೋಗ್ಯತೆ ಬಂದಿಲ್ಲ. ರಾವಣನಿಂದ ಸೀತಾಪಹರಣವಾದರೆ ದೇಹವ್ಯಾಪಾರವು ಪೂರ್ಣಸ್ಥಿತಿಗೆ ಬರುತ್ತದೆ. ಈ ದೇಹವ್ಯಾಪಾರವೇ ಅವಿದ್ಯಾಸ್ವರೂಪವಾಗಿರುತ್ತದೆ.

**ರಾ||** ಶ್ರೀರಾಮನು ಶರಭಂಗ ಸುತೀಕ್ಷ್ಣಾಶ್ರಮದಲ್ಲಿರುವಾಗ ರಾಕ್ಷಸರನ್ನೆಲ್ಲ ನಿಗ್ರಹಿಸುವುದಾಗಿ ಋಷಿಗಳೆದುರಿನಲ್ಲಿ ಪ್ರತಿಜ್ಞೆಮಾಡಿದನು.

**ತತ್ವ||** ಪ್ರಪಂಚವ್ಯವಹಾರಕ್ಕೆ ಜ್ಞಾನೇಂದ್ರಿಯಗಳಲ್ಲಿ ಮುಖ್ಯಕಾರಣವಾಗಿರುವುದು ಚಕ್ಷುರಿಂದ್ರಿಯವು. ಪದಾರ್ಥಗಳ ಮೇಲೆ ದೃಷ್ಟಿಬಿದ್ದು, ಅವುಗಲ್ಲಿ ಅಭಿಲಾಷೆಯುಂಟಾಗಿ, ಬುದ್ಧಿಮನಸ್ಸುಗಳು ಪ್ರಪಂಚಾನುವರ್ತಿಯಾದರೆ ದೇವತೆಗಳ ಸ್ವರೂಪದಲ್ಲಿರುವ ಇಂದ್ರಿಯಗಳಿಗೆ ಅವಿದ್ಯೆಯ ಎಳೆತದಿಂದ ಹಿಂಸೆಯಾಗಿ ಬಾಧೆಯುಂಟಾಗುತ್ತದೆ. ಇಂದ್ರಿಯಗಳಿಗೆ ಈ ಬಾಧೆಯುಂಟಾಗುವ ತತ್ವವೇ ಋಷಿಗಳಿಗೆ ರಾಕ್ಷಸರು ತೊಂದರೆ ಕೊಡುತ್ತಿದ್ದುದಾಗಿದೆ. ಅಂತಹ ಪ್ರತಿಬಂಧಕರೂಪರಾದ ರಾಕ್ಷಸರನ್ನು ಶ್ರೀರಾಮನು ಕೊಲ್ಲುವುದಾಗಿ ಪ್ರತಿಜ್ಞೆಮಾಡಿದನೆಂದರೆ—ಬ್ರಹ್ಮವಿದ್ಯಾಧಿಕಾರಿಗಳು ರಾಕ್ಷಸಭಾವವನ್ನು ಉಂಟುಮಾಡುವ ಪದಾರ್ಥಗಳನ್ನು ಕಣ್ಣೆತ್ತಿಯೂ ನೋಡಬಾರದು ಮತ್ತು ಅನುಭವಿಸಲು ಇಚ್ಛೆಪಡಬಾರದೆಂಬ ತತ್ವವನ್ನು ಸೂಚಿಸುತ್ತದೆ.

ಚಕ್ಷುರಿಂದ್ರಿಯಸ್ವರೂಪವಾದ ಶರಭಂಗಸುತೀಕ್ಷ್ಣಾಶ್ರಮದಲ್ಲಿ ಶ್ರೀರಾಮನು ರಾಕ್ಷಸರನ್ನು ಕೊಲ್ಲುವುದಾಗಿ ಪ್ರತಿಜ್ಞೆಮಾಡಿರುವುದರ ಉತ್ತಮವೂ ಬ್ರಹ್ಮನಿಷ್ಠೆಯನ್ನು ಪಡೆಯಲು ಸಹಕಾರಿಯೂ ಆಗಿರುವ ತತ್ವಾರ್ಥವೇನೆಂದರೆ—ಕಣ್ಣುಮುಚ್ಚಿಕೊಳ್ಳುವುದನ್ನೇ ಅಭ್ಯಾಸಮಾಡಿದರೆ ತಮೋಗುಣದ ಸ್ವರೂಪವಾಗಿ ನಿದ್ರಾವಸ್ಥೆಯನ್ನುಂಟುಮಾಡುವುದು.

ಕಣ್ದೆರೆದು ವ್ಯವಹಾರಗಳನ್ನು ಮಾಡುವುದೇ ರಜೋಗುಣಸ್ವರೂಪವಾದ ಜಾಗ್ರತ್ಕಾಲ. ಕಣ್ಣುಬಿಟ್ಟುಕೊಂಡು ವ್ಯವಹಾರಮಾಡುವುದರಲ್ಲಿಯೂ ಕಣ್ಣುಗಳನ್ನು ನಿಡರಿಸಿಕೊಂಡು ಹುಬ್ಬನ್ನು ಮೇಲಕ್ಕೇರಿದುಕೊಳ್ಳುವ ದರ್ಪ ಮತ್ತು ಕೋಪಸ್ವಭಾವದ ಕಾಲಗಳು ರಜೋ ಗುಣದ ಉದ್ರೇಕದ ಕಾಲಗಳಾಗಿರುತ್ತವೆ. ಈ ಸ್ವಭಾವಗಳೆಲ್ಲ ರಾಕ್ಷಸಸ್ವಭಾವಗಳು. ಅರೆಗಣ್ಣುದೃಷ್ಟಿಯು ಸೌಮ್ಯತೆಯನ್ನುಂಟುಮಾಡಿ ಸತ್ವಗುಣದ ಸೋಪಾನವನ್ನುಂಟು ಮಾಡುತ್ತದೆ. ಈ ಅರೆಗಣ್ಣಿನ ದೃಷ್ಟಿಯು ಸಮಾಧಿಯನ್ನು ಅಭ್ಯಾಸಮಾಡುವವರಲ್ಲಿಯೂ ಉನ್ಮನೀಭಾವದಲ್ಲಿರುವ ಜೀವನ್ಮುಕ್ತರಲ್ಲಿಯೂ ಮಾತ್ರವಿರುತ್ತದೆ. ಅಂದರೆ ಕಣ್ಣು ಮುಚ್ಚಿಕೊಳ್ಳುವ ಸ್ವರೂಪವಾದ ಸುಷುಪ್ತ್ಯವಸ್ಥೆ ಮತ್ತುಕಣ್ದೆರೆದುಕೊಂಡು ವ್ಯವಹಾರ ಮಾಡುವ ಜಾಗ್ರದವಸ್ಥೆಗಳೆರಡೂ ರಾಕ್ಷಸಸ್ವಭಾವಗಳು. ಸಮಾಧಿ ಮತ್ತು ಉನ್ಮನೀ ಸ್ವಭಾವಗಳ ದೃಷ್ಟಿಯು ರಾಕ್ಷಸಸ್ವಭಾವದ ಬಾಧೆಯನ್ನು ತಪ್ಪಿಸುವ ದೇವತ್ವದ ದೃಷ್ಟಿ ಯಾಗಿರುತ್ತದೆ. ಆದುದರಿಂದ ದೇವತ್ವವನ್ನುಂಟುಮಾಡುವ ದೃಷ್ಟಿಯನ್ನು ಅಭ್ಯಾಸ ಮಾಡಿದರೆ ನಮ್ಮಲ್ಲಿ ರಾಕ್ಷಸತ್ವವು ನಾಶವಾಗುವುದು. ಶ್ರೀರಾಮನು ರಾಕ್ಷಸರ ಬಾಧೆಯನ್ನು ತಪ್ಪಿಸುವುದಾಗಿ ಋಷಿಗಳೆದುರಿಗೆ ಪ್ರತಿಜ್ಞೆಮಾಡಿದನೆಂದರೆ—ಬ್ರಹ್ಮವಿದ್ಯಾಧಿಕಾರಿಯು ಅರೆಗಣ್ಣು ದೃಷ್ಟಿಯಿಂದ ಸಮಾಧಿಯ ಅಭ್ಯಾಸವನ್ನು ಮಾಡಿ ಉನ್ಮನೀಭಾವವನ್ನು ಹೊಂದಿ ನಮ್ಮಲ್ಲಿರುವ ದೇವತ್ವವನ್ನು ಕಾಪಾಡಬೇಕೆಂಬ ತತ್ವಾರ್ಥವಾಗಿರುತ್ತದೆ. ಅರೆ ಗಣ್ಣುನೋಟದಲ್ಲಿರುವುದೇ ಜೀವನ್ಮುಕ್ತಾವಸ್ಥೆಯಲ್ಲಿರುವವರ ಸ್ವಭಾವ. ರಾಮಾಯಣ ಕಥೆಯು ಆಯಾಯ ಸಂದರ್ಭದಲ್ಲಿ ಆಯಾಯ ತತ್ವಗಳು ಮೋಕ್ಷಮಾರ್ಗಕ್ಕೆ ಇರ ತಕ್ಕ ವಿಧವನ್ನು ತಿಳಿಸುವುದೆಂದು ಹಿಂದಿನಿಂದ ತಿಳಿಸಿಕೊಂಡು ಬರುತ್ತಿದೆ. ಮೋಕ್ಷಾಧಿ ಕಾರಿಯು ಮೋಕ್ಷಕ್ಕೆ ಸಹಕಾರಿಯಾಗಿರುವಂತೆ ದೃಷ್ಟಿಯನ್ನಿಟ್ಟುಕೊಳ್ಳುವ ತತ್ವದ ಸೂಚ ನೆಯೇ ರಾಕ್ಷಸರನ್ನು ಕೊಲ್ಲುವುದಾಗಿ ಶ್ರೀರಾಮನು ಶರಭಂಗಸುತೀಕ್ಷ್ಣಾಶ್ರಮದಲ್ಲಿ ಪ್ರತಿಜ್ಞೆಮಾಡಿದ್ದಾಗಿರುತ್ತದೆ.

## ೪ನೆಯ ಪ್ರಕರಣ.

**ಸೀತಾದೇವಿಯು ಶ್ರೀರಾಮನಿಗೆ ಕ್ಷತ್ರಿಯ ಧರ್ಮವನ್ನು ಬಿಡಲು ಹೇಳಿದುದು.**

**ಜನನವಾದ ಶಿಶುವಿಗೆ ಜ್ಞಾನೇಂದ್ರಿಯಗಳ ವ್ಯಾಪಾರ ಪ್ರಾರಂಭವಾದನಂತರ ಶುದ್ಧಸತ್ವಗುಣವು ತಗ್ಗುವ ಸಂಭವದ ವಿಚಾರ.**

ರಾ|| ಶ್ರೀರಾಮಾದಿಗಳು ಶರಭಂಗ ಸುತೀಕ್ಷ್ಣಾಶ್ರಮದಿಂದ ಹೊರಟು ಅಗಸ್ತ್ಯರ ಆಶ್ರಮವನ್ನು ಸೇರುವುದಕ್ಕೆ ಮುಂಚೆ ಸೀತಾದೇವಿಯು ಶ್ರೀರಾಮನನ್ನು ಕುರಿತು

ರಾಕ್ಷಸರನ್ನು ಕೊಲ್ಲಲು ಮಾಡಿದ ಪ್ರತಿಜ್ಞೆಯನ್ನು ಬಿಡಬೇಕೆಂದು ಕೇಳಿಕೊಂಡುದಲ್ಲದೆ ಜಟಾಧಾರಿಯಾಗಿ ತಪಸ್ವಿಯಂತೆ ವನವಾಸಕ್ಕೆ ಬಂದು ಯಾವಾಗಲೂ ಆಯುಧಪಾಣಿಯಾಗಿರುವುದು ಕೋಪವನ್ನು ಹುಟ್ಟಿಸಿ ಅನರ್ಥಗಳನ್ನುಂಟುಮಾಡುವುದೆಂಬ ಧರ್ಮವನ್ನು ಹೇಳಿದಳು. ಅದಕ್ಕೆ ಶ್ರೀರಾಮನು ಪ್ರತಿಜ್ಞೆಗೆ ತಪ್ಪಲಾರೆನೆಂದು ಉತ್ತರ ಕೊಟ್ಟನು.

**ತತ್ವ||** ಬುದ್ಧಿತತ್ವದಲ್ಲಿರುವ ಶ್ರೀರಾಮಚಂದ್ರನು ಮೋಕ್ಷಮಾರ್ಗದ ತತ್ವವನ್ನು ತೋರಿಸುವ ಉದ್ದೇಶದಿಂದ ಅವತಾರಮಾಡಿರುವುದು ಸರಿಯಷ್ಟೆ! ತಪಸ್ವಿಯಂತೆ ಇರುವುದೆಂದರೆ ಮೋಕ್ಷಮಾರ್ಗದ ನಿಯಮವನ್ನು ಹಿಡಿದಿರುವಾಗ ವೃತ್ತಿಪ್ರಸರಣೆಮಾಡಿ ಇಂದ್ರಿಯಗಳನ್ನು ಸ್ಫುರಣೆಮಾಡಿಕೊಂಡು ಬರುತ್ತಿರುವುದೇ ಬುದ್ಧಿತತ್ವಕ್ಕೆ ಕ್ಷತ್ರಿಯಧರ್ಮವೆನಿಸಿಕೊಳ್ಳುತ್ತದೆ. ಅಲ್ಲದೆ ದೇಹವಲ್ಲಿದ್ದ ತಮೋಗುಣದ ತತ್ವದಲ್ಲಿರುವ ಮಲಿನತ್ವ ಅಥವಾ ಜಡತ್ವವನ್ನು ನಿವಾರಣೆಮಾಡಲು ಬುದ್ಧಿಮನಸ್ಸಿನ ವೃತ್ತಿಗಳು ಪ್ರಸರಣೆಯಾಗುವುದೇ ಕ್ಷತ್ರಿಯತ್ವವಾಗಿರುತ್ತದೆ. ಇಂದ್ರಿಯಗೋಳಕಗಳು ಸ್ಫುರಣೆಯಾಗಿ ಬಹಿರ್ವ್ಯಾಪಾರಕ್ಕೆ ಪ್ರಾರಂಭವಾದರೆ ಶುದ್ಧಸತ್ವಗುಣಸ್ವರೂಪಳಾದ ಸೀತಾದೇವಿಗೆ ಅಪಾಯ ಸಂಭವಿಸಬಹುದೆಂದರೆ ಶುದ್ಧಸತ್ವಗುಣವನ್ನು ರಜೋಗುಣ ತಮೋಗುಣಗಳು ಆಕ್ರಮಿಸಬಹುದೆಂಬ ಶಂಕೆಯಿಂದ ಸೀತಾದೇವಿಯು ಕ್ಷಾತ್ರಧರ್ಮವನ್ನು ಬಿಡಬೇಕೆಂದು ಹೇಳಿದುದಾಗಿರುತ್ತದೆ. ಅಂದರೆ ಇದುವರೆಗೂ ಶಿಶುವು ಮಾತೃಗರ್ಭದಲ್ಲಿತ್ತು. ಜ್ಞಾನೇಂದ್ರಿಯಗಳ ಸ್ಫುರಣೆಯಾಗಿರಲಿಲ್ಲ. ಆದುದರಿಂದ ಅವಿದ್ಯಾಸ್ವರೂಪರಾದ ರಾಕ್ಷಸರ ಬಾಧೆಗೆ ಅವಕಾಶವಿರಲಿಲ್ಲ. ಈಗ ಶಿಶುವು ಜನನವಾಗಿ ಜ್ಞಾನೇಂದ್ರಿಯಗಳು ಸ್ಫುರಣೆಯಾಗುತ್ತಾ ಬಂದುವು. ಯಾವಾಗ ಜ್ಞಾನೇಂದ್ರಿಯಗಳ ಕಾರ್ಯಗಳು ಪ್ರಾರಂಭವಾಗುವುವೋ ಆಗ ಶಿಶುವಿನಲ್ಲಿ ಶುದ್ಧಸತ್ವಗುಣದ ಪ್ರಕಾಶವು ಆವರಿಸಲ್ಪಡುತ್ತಾ ಬರುವ ಸಂಭವದ ಭಯಸೂಚನೆಯೇ ಸೀತಾದೇವಿಯು ಶ್ರೀರಾಮನಿಗೆ ಕ್ಷತ್ರಿಯಧರ್ಮವನ್ನು ಬಿಡಲು ಹೇಳಿದ ತತ್ವವಾಗಿರುತ್ತದೆ.

ಅಂದರೆ ಸ್ಥಿತಿ ಅಥವಾ ದೇಹವ್ಯಾಪಾರಕ್ಕೆ ಪ್ರಾರಂಭವಾಗಲು ಬುದ್ಧಿಮನಸ್ಸಿನ ವೃತ್ತಿಗಳು ಪ್ರಸರಿಸಿಕೊಂಡು ಬರುತ್ತಿರುವುವಷ್ಟೆ! ವೃತ್ತಿಪ್ರಸರಣೆಯಿಂದ ಇಂದ್ರಿಯಗಳನ್ನು ಸ್ಫುರಣೆಮಾಡಿ ದೇಹವ್ಯಾಪಾರಕ್ಕೆ ಪ್ರಾರಂಭವಾಗುವ ತತ್ವವನ್ನು ತೋರಿಸಿ ಅನಂತರ ಉಪಸಂಹಾರಕ್ರಮದಿಂದ ಈಶ್ವರತ್ವವನ್ನು ಪಡೆಯುವ ಬದಲು ದೇಹವ್ಯಾಪಾರಕ್ಕೆ ಹೋಗದಂತೆ ಇರಬೇಕೆಂಬುದೇ ಸೀತಾದೇವಿಯು ಹೇಳಿರುವ ಕ್ಷತ್ರಿಯಧರ್ಮವನ್ನು ಅವಲಂಬಿಸಬಾರದೆಂಬುದರ ತತ್ವವಾಗಿರುತ್ತದೆ. ಶ್ರೀರಾಮನು ಪ್ರತಿಜ್ಞೆಯನ್ನು ಮೀರಲಾರೆನೆಂದು ಹೇಳಿರುವುದರ ತತ್ವವೇನೆಂದರೆ—ವೃತ್ತಿಪ್ರಸರಣೆಯಿಂದ ಇಂದ್ರಿಯಗಳನ್ನು

ಕಾರ್ಯೋನ್ಮುಖವನ್ನಾಗಿ ಮಾಡುವ ಸ್ಥಿತಿಕ್ರಮದ ತತ್ವವನ್ನು ಪೂರ್ಣಮಾಡಿ ಅನಂತರ ಉಪಸಂಹಾರಕ್ರಮದಿಂದ ಅಂದರೆ ವೃತ್ತಿಯನ್ನು ಲಯಗೊಳಿಸುವ ಕ್ರಮದಿಂದಲೇ ಈಶ್ವರತ್ವವನ್ನು ಪಡೆಯಬೇಕೆಂಬುದೇ ವಿಧಾಯಕವೆಂದು ಸೂಚಿಸುತ್ತದೆ.

## ಪ್ರಾಣಮಯಕೋಶ.

## ೫ನೆಯ ಪ್ರಕರಣ.

**ಶ್ರೀರಾಮಾದಿಗಳು ಅಗಸ್ತ್ಯಾಶ್ರಮವನ್ನು ಪ್ರವೇಶಮಾಡಿ ಅವರಿಂದ ಅಸ್ತ್ರಗಳನ್ನು ಸ್ವೀಕರಿಸಿದುದು.**

**ಬುದ್ಧಿ ಮನಸ್ಸಿನ ವೃತ್ತಿಗಳು ಪ್ರಾಣಮಯಕೋಶಕ್ಕೆ ಪ್ರಧಾನ ಸ್ಥಳವಾದ ಅನಾಹತಚಕ್ರಕ್ಕೆ ಇಳಿಯುವ ಮತ್ತು ಪ್ರಾಣಶಕ್ತಿಯೊಡನೆ ಕಲೆಯುವ ವಿಚಾರ.**

**ರಾ॥** ಸೀತಾ ಲಕ್ಷ್ಮಣರೊಡನೆ ಶ್ರೀರಾಮನು ಅಗಸ್ತ್ಯಾಶ್ರಮವನ್ನು ಪ್ರವೇಶಿಸಿದನು.

**ತತ್ವ॥** ಅಗಸ್ತ್ಯಾಶ್ರಮವು ನಮ್ಮ ದೇಹದಲ್ಲಿ ಪ್ರಾಣಮಯಕೋಶಕ್ಕೆ ಪ್ರಧಾನ ಸ್ಥಳವಾದ ಅನಾಹತಚಕ್ರದ ಸ್ಥಳವಾಗಿದೆ. ಈ ಅನಾಹತಚಕ್ರವು ನಮ್ಮ ಎದೆಯ ಸ್ಥಳದಲ್ಲಿ ಬೆನ್ನಿನ ಹುರಿಯಲ್ಲಿರುವ ಸುಷುಮ್ನಾನಾಡಿಯ ಹೊರಪ್ರಾಕಾರದಲ್ಲಿರುವುದು. ವಿಂಧ್ಯಪರ್ವತದ ತತ್ವವೇ ಅನಾಹತಚಕ್ರ.

ಹೇಗೆಂದರೆ—“ ಅನಹ್ಯತೆ ಅನೇನೇತಿ ಅನಾಹತಃ (ಣಹ ಬಂಧನೆ) ” ಅಂದರೆ ಇದರಿಂದ ಬಂಧಿಸಲ್ಪಟ್ಟಿರುವುದು. ಎರಡನೆಯ ವ್ಯುತ್ಪತ್ತಿಯು “ ಆಹತಾಃ ಕ್ಷಾಳನ ಭೋಗಚ್ಛೇದಾಃ ತದ್ರಹಿತತ್ವಾತ್ ಅನಾಹತಃ ” ಅಂದರೆ ಬಗೆಯುವಿಕೆ ಭೋಗಿಸುವಿಕೆ ಛೇದಿಸುವಿಕೆ ಈ ಮೂರಕ್ಕೂ ಆಹತವೆಂದು ಹೆಸರು ಅದಿಲ್ಲದಿರುವುದು ಅನಾಹತ. ವಿಂಧ್ಯವೆಂದರೂ “ ಸ್ವಗತ ವೈಗುಣ್ಯೇನ ಫಲಾನಿ ಬಧ್ನಾತೀತಿ ವಿಂಧ್ಯಃ (ಬದ-ಬಂಧನೆ) ವಬಯೋರಭೇದಃ ” ತನ್ನಲ್ಲಿರುವ ದುರ್ಗುಣದಿಂದ ಫಲವನ್ನು ಅಡ್ಡಗಟ್ಟಿರುವುದು. ವಿಂಧ್ಯ ಮತ್ತು ಅನಾಹತಗಳೆರಡರ ಅರ್ಥವೂ ಅಡ್ಡಗಟ್ಟಿರುವ ಅಥವಾ ಭೇದಿಸದೆ ಇರುವ ಸ್ಥಳವೆಂದಾಗುವುದರಿಂದ ವಿಂಧ್ಯಪರ್ವತದ ತತ್ವವೇ ಅನಾಹತಚಕ್ರವಾಗಿರುತ್ತದೆ.

ವಿಂಧ್ಯಪರ್ವತದ ತತ್ವವೇ ಅನಾಹತಚಕ್ರವಾದರೆ ಬೆಳೆಯುತ್ತಿದ್ದ ವಿಂಧ್ಯಪರ್ವತವನ್ನು ಅಗಸ್ತ್ಯರು ಮಲಗಿಸಿರುವ ತತ್ವಾರ್ಥವು ಅನಾಹತಚಕ್ರಕ್ಕೆ ಹೇಗೆ ಅನ್ವಯವಾಗುವುದೆಂದರೆ—ನಮ್ಮ ಸ್ಥೂಲದೇಹವನ್ನು ಸೃಷ್ಟಿಸಲು ಕಾರಣವಾದ ಶಬ್ದಬ್ರಹ್ಮಸ್ವರೂಪವಾದ ಓಂಕಾರದಲ್ಲಿನ “ ಅ ” ಕಾರವು ತಾವರೇಗಿಡ ಕುಂಡಲಿನೀಶಕ್ತಿ ಮತ್ತು

ದೇವಸ್ಥಾನಗಳ ಚಿತ್ರಪಠಗಳಲ್ಲಿ ತೋರಿಸಿರುವಂತೆ ನಮ್ಮಲ್ಲಿ ಮೂಲಾಧಾರಚಕ್ರದಲ್ಲಿರುತ್ತದೆ. ಓಂಕಾರದಲ್ಲಿನ "ಉ" ಕಾರವು ಅನಾಹತಚಕ್ರವಾದ ಎದೆಯಲ್ಲಿದೆ. ಓಂಕಾರದಲ್ಲಿನ "ಮ" ಕಾರವು ಭ್ರೂಮಧ್ಯದಲ್ಲಿರುತ್ತದೆ. ಈ ರೀತಿ ಇರುವುದಕ್ಕೆ ಶ್ರುತಿಯು ಆಧಾರವಿದೆ. ಬ್ರಹ್ಮವಿದ್ಯೋಪನಿಷತ್ ಯೋಗಚೂಡಾಮಣ್ಯುಪನಿಷತ್ ಯೋಗಕುಂಡಲಿನ್ಯುಪನಿಷತ್ ಯೋಗಶಿಖೋಪನಿಷತ್ತುಗಳಲ್ಲಿ "ಅಕಾರೆವಹ್ನಿರಿತ್ಯಾಹು ರುಕಾರೇ ಹೃದಿಸಂಸ್ಥಿತಃ ಮಕಾರೇಚ ಭ್ರುವೋರ್ಮಧ್ಯೆ" ಎಂಬದಾಗಿ ಹೇಳಿದೆ. ಈ ರೀತಿಯಾಗಿರುವ ಓಂಕಾರದಲ್ಲಿನ "ಅ" ಕಾರದ ಶಬ್ದವು ಮೂಲಾಧಾರಚಕ್ರದಿಂದ ಹೊರಟು ಅನಾಹತಚಕ್ರದಲ್ಲಿರುವ "ಉ" ಕಾರವನ್ನು ಸೇರುತ್ತಲೆ ಓಕಾರನಾದವಾಗಿ ಪರಿಣಮಿಸುತ್ತದೆ. ಈ "ಓ"ಕಾರನಾದವು ಭ್ರೂಮಧ್ಯವೆಂದರೆ ಆಜ್ಞಾಚಕ್ರದಲ್ಲಿರುವ "ಮ" ಕಾರವನ್ನು ಸೇರಿದರೆ ಓಂಕಾರವಾಗುವುದು. ಓಂಕಾರವಾಗಿ ನಿಂತಲ್ಲಿ "ಓಮಿತ್ಯೇಕಾಕ್ಷರಂ ಬ್ರಹ್ಮ" ಎಂಬ ಶ್ರುತಿವಚನಾನುಸಾರ ಬ್ರಹ್ಮಸಾಕ್ಷಾತ್ಕಾರವಾಗಿ ಸಗುಣತ್ವವೇ ತೋರುವುದಿಲ್ಲ. ಅಂದರೆ ದೇಹವ್ಯಾಪಾರವಿಲ್ಲದೆ ಯಾವಾಗಲೂ ನಿರ್ವಿಕಲ್ಪಸಮಾಧಿಯಲ್ಲಿ ಇರಬೇಕಾದ ಸಂಭವ ಬರುವುದೇ ನಾವುಗಳು ಓಂಕಾರಸ್ವರೂಪವನ್ನು ಪಡೆಯುವುದಾಗಿರುತ್ತದೆ. ಆದುದರಿಂದ ಸಗುಣತ್ವವೆಂದರೆ ದೇಹವ್ಯಾಪಾರ ನಡೆಯಬೇಕಾದರೆ "ಓ" ಕಾರದ ನಾದವು "ಮ" ಕಾರದಲ್ಲಿ ಸೇರದಂತೆ ಬಂಧಿಸಿದರೆ ಸಗುಣತ್ವವು ನಿಲ್ಲುವುದು. ಆದಕಾರಣ "ಓ"ಕಾರ ಸ್ಥಳವಾದ ಅನಾಹತಚಕ್ರದಲ್ಲಿ ಶಬ್ದಬ್ರಹ್ಮವು ಸ್ತಂಭಿಸಲ್ಪಟ್ಟಿದೆ. ಈ ರೀತಿಯಾಗಿ "ಓ"ಕಾರವು "ಮ"ಕಾರದಲ್ಲಿ ಸೇರದಂತೆ ಸ್ತಂಭಿಸಲ್ಪಟ್ಟಿರುವುದೇ ಅಗಸ್ತ್ಯರು ವಿಂಧ್ಯಪರ್ವತವನ್ನು ಮಲಗಿಸಿದ ತತ್ವವಾಗಿರುವುದು.

ಆದುದರಿಂದ ಈ ಮೇಲಿನ ತತ್ವಾರ್ಥವನ್ನು ಅನುಸರಿಸಿ ನಮ್ಮಲ್ಲಿರುವ "ಓ" ಕಾರಶಬ್ದವನ್ನು ಅನಾಹತಚಕ್ರದಲ್ಲಿ ಸ್ತಂಭಿಸಿರುವುದರ ತತ್ವದವರೇ ಅಗಸ್ತ್ಯಮಹರ್ಷಿಗಳಾಗಿರುವರು. ಅಗಸ್ತ್ಯವೆಂಬ ಶಬ್ದಕ್ಕೆ "ಅಗಂ ವಿಂಧ್ಯಂ ಸ್ತ್ಯಾಯತಿ - ಸ್ತಂಭಯತೀತ್ಯಗಸ್ತ್ಯಃ (ಸ್ತ್ಯೈ ಷ್ಟ್ಯೈ ಶಬ್ದ ಸಂಘಾತಯೋಃ)" ಅಂದರೆ ಮೇಲಕ್ಕೆ ಬೆಳೆಯುತ್ತಿದ್ದ ವಿಂಧ್ಯಪರ್ವತವನ್ನು ಮಲಗಿಸಿದುದರಿಂದ ಇವರಿಗೆ ಅಗಸ್ತ್ಯರೆಂದು ಹೆಸರು ಬಂದಿತೆಂದು ಅಮರದ ವ್ಯಾಖ್ಯಾನದಲ್ಲಿ ವ್ಯುತ್ಪತ್ತಿಯಿರುವುದು. ಈ ವ್ಯುತ್ಪತ್ತಿಯಲ್ಲಿಯೂ ವಿಂಧ್ಯಪರ್ವತವು ಶಬ್ದಸಂಘಾತದಲ್ಲಿ ಸ್ತಂಭಿಸಲ್ಪಟ್ಟಿತೆಂದು ಅರ್ಥ ಬರೆದಿರುತ್ತದೆ. ಅಗಸ್ತ್ಯರು ವಿಂಧ್ಯಪರ್ವತವನ್ನು ಮಲಗಿಸಿದ ತತ್ವವು ನಮ್ಮ ದೇಹದಲ್ಲಿ ಯಾವ ತತ್ವಾರ್ಥದಲ್ಲಿರುವುದೆಂದರೆ "ಅಗಂ-ಅನಾಹತಚಕ್ರೇ ಕ್ರಿಯಮಾಣ ಓಕಾರಾಖ್ಯ ಶಬ್ದಂ ಸ್ತ್ಯಾಯತಿ ಸ್ತಬ್ಧಯತೀತ್ಯಗಸ್ತ್ಯಃ" ಅಂದರೆ ಅನಾಹತಚಕ್ರವೆಂಬ ಸ್ಥಳದಲ್ಲಿ ಶಬ್ದಬ್ರಹ್ಮರೂಪದಲ್ಲಿನ "ಓ" ಕಾರವೆಂಬ ಶಬ್ದವನ್ನು ಸ್ತಂಭಿಸಿರುವ ಶಕ್ತಿಗೆ ಅಗಸ್ತ್ಯರೆಂಬ ತತ್ವವಾಗಿರುವುದು. ಆದುದರಿಂದ

ಅಗಸ್ತ್ಯರು ವಿಂಧ್ಯಪರ್ವತವನ್ನು ಮಲಗಿಸಿದ ತತ್ವಾರ್ಥವೇ ನಮ್ಮಲ್ಲಿ "ಓ" ಕಾರಶಬ್ದವು "ಮ" ಕಾರದಲ್ಲಿ ಸೇರಿಕೊಳ್ಳದಂತೆ ಸ್ತಂಭನೆಮಾಡುವುದಾಗಿರುತ್ತದೆ.

ಹೀಗೆ "ಓ" ಕಾರವು ಸ್ತಂಭಿಸಿರುವುದರಿಂದ ನಮ್ಮಲ್ಲಿ ಉಂಟಾಗುವ ಫಲಿತಾರ್ಥ ವೇನೆಂಬುದನ್ನು ತಿಳಿದುಕೊಳ್ಳೋಣ. ಓಂಕಾರವು ಶಬ್ದಬ್ರಹ್ಮವಷ್ಟೆ! ಶಬ್ದಬ್ರಹ್ಮವೆಂದರೆ ನಾವು ಉಚ್ಚಾರಣೆಮಾಡುವ ಅಕ್ಷರಗಳ ಶಬ್ದಗಳು ಸುಷುಮ್ನಾನಾಡಿಯ ಹೊರಭಾಗದಲ್ಲಿ ರುವ ಷಟ್ಚಕ್ರಗಳಿಂದ ಉತ್ಪನ್ನವಾಗುತ್ತವೆ. ನಾವುಗಳು ಎಷ್ಟೇ ಮಾತಾಡುತ್ತಿದ್ದರೂ 'ಓಂ' ಕಾರ ಶಬ್ದವಾಗುವುದಿಲ್ಲ. ನಮ್ಮಲ್ಲಿ ಓಂ ಎಂಬ ಶಬ್ದವಾಗಬೇಕಾದರೆ ನಾವು ಯಾವ ಅಕ್ಷರಕ್ಕೇ ಆಗಲಿ ಬಿಂದು ಅಥವಾ ಅನುಸ್ವಾರವನ್ನು ಸೇರಿಸಿಕೊಂಡು ಬೆಳಿಸುತ್ತಾ ಹೋದರೆ "ಓಂ" ಎಂಬ ಶಬ್ದೋಚ್ಚಾರಣೆಯ ಗುತ್ತದೆ. ಈ "ಓಂ" ಎಂಬ ಶಬ್ದೋ ಚ್ಚಾರಣೆಯನ್ನು ಧ್ಯಾನಾಭ್ಯಾಸಿಗಳು ಮಾಡುತ್ತಾರೆ. ಇದರ ವಿಚಾರವು ಯುದ್ಧಕಾಂಡದಲ್ಲಿ ಶ್ರೀರಾಮನು ಸಮುದ್ರಕ್ಕೆ ಸೇತುವೆಯನ್ನು ಕಟ್ಟಿದ ಮತ್ತು ಸಮುದ್ರರಾಜನು ಪ್ರತ್ಯಕ್ಷ ವಾದ ಪ್ರಕರಣಗಳಲ್ಲಿ ಬರುವುದು. ಮುಖ್ಯವಾಗಿ ನಾವು ಮಾತಾಡುವುದರಲ್ಲಿ ಖಂಡಖಂಡ ವಾಗಿ ವರ್ಣೋಚ್ಚಾರಣೆಯಾಗುವುದೇ ಹೊರತು ತೈಲಧಾರೆಯಂತೆ "ಓಂ" ಎಂಬ ಶಬ್ದೋಚ್ಚಾರಣೆಯು ಬೆಳೆಯುವುದಿಲ್ಲ. ಇದಕ್ಕೆ ಕಾರಣವೇನೆಂದರೆ ನಮ್ಮ ಎದೆಯಲ್ಲಿ ಅನಾಹತಚಕ್ರದಲ್ಲಿರುವ ಶಬ್ದೋಚ್ಚಾರಣೆಯ ಶಕ್ತಿಯನ್ನು ಅಲ್ಲಿಯೇ ಬಂಧಿಸಿರುವುದ ರಿಂದ "ಓಂ" ಎಂಬ ಶಬ್ದೋಚ್ಚಾರಣೆಯ ಲಂಬಿಸುವಿಕೆಯು ನಾವು ಮಾತಾಡುವುದರಲ್ಲಿ ಉಂಟಾಗುವುದಿಲ್ಲ. ಅಲ್ಲದೆ ನಾವು "ಓಂ" ಎಂಬ ಶಬ್ದೋಚ್ಚಾರಣೆಯನ್ನು ಲಂಬಿ ಸುತ್ತಾ ಬರುವಾಗ ತುಟಿಗಳನ್ನು ಮುಚ್ಚಿಕೊಂಡೇ ಇರಬೇಕಾಗುವುದು. ಹಾಗೆ ಮುಚ್ಚಿ ಕೊಂಡೇ ಇದ್ದರೆ ಯಾವ ವರ್ಣೋಚ್ಚಾರಣೆಯನ್ನೂ ಮಾಡಲು ಯತ್ನವಿಲ್ಲ. ಆದುದ ರಿಂದ ಓಂ ಎಂಬ ಶಬ್ದೋಚ್ಚಾರಣೆಯನ್ನು ಲಂಬಿಸುವುದಕ್ಕೂ ನಾವು ಮಾತನಾಡುವು ದಕ್ಕೂ ಭೇದವಿದ್ದೇ ಇದೆ. ನಾವು ಮಾತನಾಡುವುದು ಮತ್ತು ಗಾನ ವಿದ್ಯೆಯು ವ್ಯಷ್ಟಿ ಜೀವರಾದ ನಮ್ಮ ವಾಕ್ಕೆನಿಸುವುದು. "ಓಂ" ಎಂಬ ಶಬ್ದೋಚ್ಚಾರಣೆಯು ಏಕಾಕಾರ ವಾಗಿ ಪ್ರವಹಿಸಿಕೊಂಡಿದ್ದರೆ ಸಗುಣಬ್ರಹ್ಮಸ್ವರೂಪನಾದ ಈಶ್ವರನ ವಾಕ್ಕೆನಿಸಿಕೊಳ್ಳುವು ದಲ್ಲದೆ ಪ್ರಣವಸ್ವರೂಪವೆನಿಸಿಕೊಳ್ಳುವುದು. ಆದುದರಿಂದ ಅಗಸ್ತ್ಯರು ವಿಂಧ್ಯಪರ್ವತ ವನ್ನು ಮಲಗಿಸಿದರೆಂದರೆ ಓಕಾರವನ್ನು ಸ್ತಂಭನೆಮಾಡಿದರೆಂಬ ತತ್ವಾರ್ಥವಾಗಿರುವುದು. ಅಗಸ್ತ್ಯರು ವಿಂಧ್ಯಪರ್ವತವನ್ನು ಮಲಗಿಸಿರುವ ತತ್ವವೆಂದರೆ, ಓಕಾರವಿರುವ ಅನಾಹತ ಚಕ್ರ ಸ್ಥಳವಾದ ಹೃದಯಕೋಶದ ಕಮಲವು ಅಧೋಮುಖವಾಗಿರುವುದೆಂಬ ತಾತ್ಪರ್ಯ. ಇದೇ ತಾತ್ಪರ್ಯಕ್ಕೆ ತೈತ್ತಿರೀಯೋಪನಿಷತ್ತಿನಲ್ಲಿ "ಹೃದಯಂಚಾಪ್ಯಧೋಮುಖಂ" ಎಂಬ ಪ್ರಮಾಣವಿರುವುದು.

**ರಾ||** ಅಗಸ್ತ್ಯಾಶ್ರಮದಲ್ಲಿ ಬ್ರಹ್ಮ, ವಿಷ್ಣು, ದೇವೇಂದ್ರ, ವಾಯು, ಕುಬೇರ, ನಾಗರಾಜ, ಗಾಯತ್ರೀ, ವರುಣ, ಷಣ್ಮುಖ, ಸೂರ್ಯ, ಚಂದ್ರರುಗಳ ಪೂಜಾಸ್ಥಾನಗಳನ್ನೆಲ್ಲ ಶ್ರೀರಾಮನು ನೋಡಿದನು.

**ತತ್ವ||** ಹಿಂದೆ ಅತ್ರಿಮಹರ್ಷಿಗಳ ಆಶ್ರಮದ ತತ್ವವಾದ ವಿಶುದ್ಧಚಕ್ರವೇ ಆಕಾಶ ತತ್ವವೆಂದು ತಿಳಿಸಿತಷ್ಟೆ! ಹೃದಯ ಅಥವಾ ಎದೆಯ ಸ್ಥಳದಲ್ಲಿರುವ ಅನಾಹತಚಕ್ರವೇ ವಾಯುತತ್ವಕ್ಕೆ ಪ್ರಧಾನಸ್ಥಳವಾಗಿರುವುದು. ವಾಯುತತ್ವದ ಕಾರ್ಯವೇನೆಂದರೆ ಚಲನ ಶಕ್ತಿಯು. ಸರ್ವವ್ಯಾಪಾರಗಳೂ ಚಲನಶಕ್ತಿಯಿಂದಲೇ ಪ್ರಾರಂಭವಾಗುವುದರಿಂದ ಇದೇ ಪ್ರಾಣಶಕ್ತಿಯೆನಿಸಿಕೊಳ್ಳುತ್ತದೆ. ಜೀವರಲ್ಲಿ ಪ್ರಾಣಹೋಯಿತೆಂದರೆ ಶ್ವಾಸೋಚ್ಛ್ವಾಸದೊಡಗೂಡಿದ ಸಕಲ ವ್ಯಾಪಾರಗಳೂ ತಟಸ್ಥವಾದುವೆಂಬ ತಾತ್ಪರ್ಯ. ಆದುದರಿಂದ ಅಗಸ್ತ್ಯಾಶ್ರಮದ ತತ್ವದಲ್ಲಿರುವ ಹೃದಯಕೋಶವೆಂದರೆ ಅನಾಹತಚಕ್ರವು ಪ್ರಾಣ ಕೋಶಕ್ಕೆ ಪ್ರಧಾನಸ್ಥಳವಾಗಿರುವುದು. ಪ್ರಾಣಶಕ್ತಿಯು ಹೇಗಾಗುವುದೆಂದರೆ—"ಓಂ" ಕಾರದಲ್ಲಿನ "ಅ" ಕಾರವೂ "ಉ" ಕಾರವೂ ಸೇರಿ ಆಗುವ ಓಕಾರವೇ ಪ್ರಾಣಶಕ್ತಿಯಾಗಿರುವುದು. ಓಕಾರವು "ಮ" ಕಾರದಲ್ಲಿ ಸೇರಿದರೆ ಯಾವ ವ್ಯಾಪಾರಗಳೂ ಇರುವುದಿಲ್ಲವೆಂದು ಮೇಲೆಯೆ ತಿಳಿಸಿರುವುದಷ್ಟೆ! ಆದುದರಿಂದ ಚಲನರೂಪವಾದ ಸರ್ವ ವ್ಯಾಪಾರವೂ "ಓ" ಕಾರಶಕ್ತಿಯಿಂದಲೇ ನಡೆಯುತ್ತದೆ. ಆದರೆ "ಮ" ಕಾರದ ಪ್ರಕಾಶವೂ "ಓ" ಕಾರಕ್ಕಿದ್ದರೇನೇ ಕಾರ್ಯಗಳು ನಡೆಯುತ್ತವೆ. ಹೇಗೆಂದರೆ "ಮ" ಕಾರವಿರುವುದು ನಮ್ಮ ಭ್ರೂಮಧ್ಯದಲ್ಲಿ. ಭ್ರೂಮಧ್ಯವೆಂದರೆ ಆಜ್ಞಾಚಕ್ರ ಅಥವಾ ವಿಜ್ಞಾನಮಯಕೋಶ. ಅಂತಃಕರಣದ ಕಾರ್ಯವಾದ ವಿಜ್ಞಾನವು ಜಾಗ್ರತ್ಕಾಲದಲ್ಲಿ ಪ್ರಾಣಶಕ್ತಿಯೊಡನೆ ಕಲೆಯದಿದ್ದರೆ ವ್ಯಾಪಾರಗಳಿರುವುದಿಲ್ಲ. ಹೇಗೆಂದರೆ, ಭ್ರೂಮಧ್ಯದಲ್ಲಿರುವ "ಮ" ಕಾರವೇ ಜ್ಞಾನ. ಎದೆಯಲ್ಲಿರುವ "ಓ" ಕಾರವೇ ಚಲನಶಕ್ತಿ ಅಥವಾ ಕ್ರಿಯಾಶಕ್ತಿ ಅಥವಾ ಪ್ರಾಣಶಕ್ತಿ. ಆದುದರಿಂದ ಅಗಸ್ತ್ಯಾಶ್ರಮವು ಪ್ರಾಣಕೋಶಕ್ಕೆ ಪ್ರಧಾನವಾದ ಅನಾಹತಚಕ್ರವಾಗಿರುವುದು.

ಅಕಾರವು ಉಕಾರದಲ್ಲಿ ಸೇರಿ ಆಗುವ "ಓ" ಕಾರವೂ "ಓಂ" ಕಾರದಲ್ಲಿನ ಪಾದವಾಗಿರುವದರಿಂದ ಸಗುಣಬ್ರಹ್ಮಶಕ್ತಿಯಾಗಿ ಪ್ರಾಣಶಕ್ತಿಯೆನಿಸಿಕೊಳ್ಳುತ್ತದೆ. ಇಂತಹ ಓಕಾರಸ್ವರೂಪವಾದ ಪ್ರಾಣಶಕ್ತಿಯಲ್ಲಿ ಸಕಲ ದೇವತಾಶಕ್ತಿಗಳೂ ಇರುವುವೆಂಬ ತತ್ವಾರ್ಥವೇ ಅಗಸ್ತ್ಯಾಶ್ರಮದಲ್ಲಿ ಸಕಲ ದೇವರುಗಳ ಪೂಜಾಸ್ಥಾನಗಳೂ ಇರುವುವೆಂಬ ಅರ್ಥದಿಂದ ದ್ಯೋತಿತವಾಗುವುದು. ಈ ಪ್ರಾಣಶಕ್ತಿಯ ಮಹಿಮೆಯ ವಿಚಾರವು ಪ್ರಶ್ನೋಪನಿಷತ್ತಿನ ದ್ವಿತೀಯ ಪ್ರಶ್ನೆಯಲ್ಲೆಲ್ಲಾ ಹೇಳಿದ್ದರೂ ಒಂದೆರಡು ಮಂತ್ರಗಳನ್ನು ಇಲ್ಲಿ ತಿಳಿಸಿದೆ. ದ್ವಿತೀಯ ಪ್ರಶ್ನೆಯಲ್ಲಿ,

ದೇವಾನಾಮಸಿ ವಹ್ನಿತಮಃ ಪಿತೃಣಾಂ ಪ್ರಥಮಸ್ವಧಾ |
ಋಷೀಣಾಂ ಚರಿತಂ ಸತ್ಯ ಮಥರ್ವಾಂಗಿರಸಾಮಸಿ ||
ಇಂದ್ರಸ್ತ್ವಂ ಪ್ರಾಣತೇಜಸಾ ರುದ್ರೋಽಸಿ ಪರಿರಕ್ಷಿತಾ |
ತ್ವಮಂತರಿಕ್ಷೇ ಚರಸಿ ಸೂರ್ಯಸ್ತ್ವಂ ಜ್ಯೋತಿಷಾಂ ಪತಿಃ ||

ತಾ|| ಎಲೈ ಪ್ರಾಣವೇ, ಇಂದ್ರಾದಿದೇವತೆಗಳಲ್ಲಿ ಹವಿಸ್ಸನ್ನು ಒಯ್ಯುವವನು ನೀನು. ಕರ್ಮದಲ್ಲಿ ದೇವತೆಗಳಿಗೆ ಒಪ್ಪಿಸುವ ಸ್ವಧಾಕಾರವೆಂಬ ಮೊದಲನೆಯ ಹವಿಃಪ್ರದಾನವನ್ನು ಒಪ್ಪಿಸುವವನೂ ನೀನು. ಋಷಿಗಳಿಗೆಂದರೆ ಇಂದ್ರಿಯಗಳಿಗೆ ಜ್ಞಾನಜನಕಗಳಾದ ಆಚರಣೆಯು ವ್ಯರ್ಥವಾಗದಂತೆ ದೇಹಧಾರಣ ಮೊದಲಾದ ಉಪಕಾರದ ಸ್ವರೂಪವೂ ನೀನೆ. ನೀನೇ ಪರಮೇಶ್ವರನು. ಸಂಹಾರರೂಪವಾದ ತೇಜಸ್ಸಿನಿಂದ ಸರ್ವಜಗತ್ತನ್ನೂ ಪರಿಹರಿಸುವ ರುದ್ರನೂ ನೀನೆ. ವಿಷ್ಣುವಿನ ರೂಪದಿಂದ ಜಗತ್ತನ್ನು ರಕ್ಷಿಸುವವನೂ ನೀನೆ. ಸೂರ್ಯನಾಗಿ ಅಂತರಿಕ್ಷದಲ್ಲಿ ಚರಿಸುತ್ತೀಯೆ. ಸರ್ವತೇಜಸ್ಸುಗಳಿಗೂ ಕಾಂತಿಯನ್ನು ಕೊಡತಕ್ಕವನು ನೀನೆ. ಎಂದು ಹೇಳಿರುವುದು.

ಮುಖ್ಯತಾತ್ಪರ್ಯವೇನೆಂದರೆ—ಪ್ರಾಣಶಕ್ತಿಯಾದ ಓಕಾರವೂ ಈಶ್ವರಶಕ್ತಿಯಾಗಿರುತ್ತದೆ. ಅಲ್ಲದೆ ಈ ಪ್ರಾಣಶಕ್ತಿಯಲ್ಲಿ ಸಕಲ ದೇವತಾಶಕ್ತಿಗಳೂ ಇರುವುವೆಂಬ ತತ್ವಾರ್ಥವೇ ಅಗಸ್ತ್ಯಾಶ್ರಮದಲ್ಲಿ ಸಕಲ ದೇವರುಗಳ ಸ್ಥಾನವಿರುವುದಾಗಿರುತ್ತದೆ.

**ರಾ||** ಅಗಸ್ತ್ಯಾಶ್ರಮದಲ್ಲಿ ತಪಸ್ಸು ಮಾಡುವ ಪುಣ್ಯಾತ್ಮರು ದೇವಾದಿ ಲೋಕಗಳಲ್ಲಿ ಯಾವುದನ್ನು ಅಪೇಕ್ಷಿಸುವರೋ ಅದನ್ನು ಪಡೆಯುತ್ತಾರೆ.

**ತತ್ವ||** ಇಂತಹ ಪ್ರಾಣಶಕ್ತಿಗೆ ಪ್ರಧಾನಸ್ಥಳವಾದ ಹೃದಯಕೋಶದ ಕಮಲ ಅಥವಾ ಅನಾಹತಚಕ್ರವು ಸಗುಣಬ್ರಹ್ಮಚೈತನ್ಯದ ಸ್ಥಳವಾದುದರಿಂದ ಈ ಸ್ಥಳದಲ್ಲಿ ಬುದ್ಧಿಮನಸ್ಸುಗಳನ್ನು ಧಾರಣೆಮಾಡಿಕೊಂಡು ಧ್ಯಾನಮಾಡಿದ ತಪಸ್ವಿಗಳು ಉತ್ತಮ ಜನ್ಮಗಳನ್ನು ಪಡೆಯುವರೆಂಬ ತತ್ವಾರ್ಥದ ಸೂಚನೆಯೇ ಅಗಸ್ತ್ಯಾಶ್ರಮದಲ್ಲಿ ತಪಸ್ಸು ಮಾಡುವವರು ಉತ್ತಮಗತಿಯನ್ನು ಹೊಂದುವರೆಂದು ಹೇಳಿರುವುದಾಗಿದೆ.

ಹೃದಯಕೋಶದ ಕಮಲವು ಓಂಕಾರದಲ್ಲಿನ ಉಕಾರದ ಸ್ಥಳವಷ್ಟೆ! ಓಂಕಾರದಲ್ಲಿನ ಮಕಾರವು ಭ್ರೂಮಧ್ಯಪ್ರದೇಶವಾದುದರಿಂದ ಓಂಕಾರದ ತುರೀಯಸ್ಥಾನವಾದ ಯಾವ ಉಪಾಧಿಗಳೂ ಇಲ್ಲದ ಪರಮಾತ್ಮಸ್ಥಾನವು ಶಿರಸ್ಸಿನಲ್ಲಿರುವುದು. ಆದುದರಿಂದ ಹೃದಯಕೋಶದ ಕಮಲವು ಸಗುಣಸೋಪಾನವೇ ಹೊರತು ನಿರ್ಗುಣಸೋಪಾನವಲ್ಲ. ಇದರ ವಿಚಾರವನ್ನು ಸೀತಾಗ್ನಿಪ್ರವೇಶದ ತತ್ವದಲ್ಲಿ ಚಿತ್ರಪಠದೊಡನೆ ವಿವರಿಸಿರುವುದು.

**ರಾ||** ಅಗಸ್ತ್ಯರು ಶ್ರೀರಾಮುನಿಗೆ ವಿಷ್ಣುಧನುಸ್ಸನ್ನು ಅನುಗ್ರಹಮಾಡಿಕೊಟ್ಟರು.

**ತತ್ವ||** ಅಗಸ್ತ್ಯಾಶ್ರಮದ ತತ್ವವು ಸಕಲ ದೇವತಾಶಕ್ತಿಗಳ ಸ್ಥಾನವಾಗಿದ್ದರೂ, ಅಗಸ್ತ್ಯರು ಶ್ರೀರಾಮುನಿಗೆ ಮುಖ್ಯವಾಗಿ ವಿಷ್ಣುಧನುಸ್ಸನ್ನೇ ಅನುಗ್ರಹಮಾಡಿಕೊಟ್ಟ ತತ್ವಾರ್ಥವೇನೆಂದರೆ—ಓಂಕಾರದಲ್ಲಿನ "ಅಕಾರ" ಸ್ವರೂಪದ ಶಕ್ತಿಯಾದ ಚತುರ್ಮುಖಬ್ರಹ್ಮನು ಸೃಷ್ಟಿಶಕ್ತಿಯಾಗಿಯೂ, "ಉ"ಕಾರಸ್ವರೂಪದ ವಿಷ್ಣುವು ಪಾಲನೆಯ ಶಕ್ತಿಯಾಗಿಯೂ "ಮ"ಕಾರದ ಶಕ್ತಿಸ್ವರೂಪವಾದ ರುದ್ರನು ಲಯವೆಂದರೆ ಉಪಸಂಹಾರದ ಶಕ್ತಿಯಾಗಿಯೂ, ಸಗುಣಬ್ರಹ್ಮದಲ್ಲಿ ವಿಭಾಗಗಳಾಗಿರುತ್ತಾರೆ. ಈ ಮೂರು ಶಕ್ತಿಗಳೂ ನಮ್ಮಲ್ಲಿ ಯಾವ ಸ್ಥಳಗಳಲ್ಲಿರುವುವೆಂದರೆ, ಮೂಲಾಧಾರಚಕ್ರದಲ್ಲಿ ಬ್ರಹ್ಮಶಕ್ತಿಯೂ, ಅನಾಹತಚಕ್ರದಲ್ಲಿ ವಿಷ್ಣುಶಕ್ತಿಯೂ, ಭ್ರೂಮಧ್ಯ ಅಥವಾ ಆಜ್ಞಾಚಕ್ರದಲ್ಲಿ ರುದ್ರಶಕ್ತಿಯೂ ಇರುತ್ತವೆ. ಈರೀತಿ ಇರುವುವೆಂದು.

> ಅಕಾರೇವಹ್ನಿರಿತ್ಯಾಹು ರುಕಾರೇಹೃದಿಸಂಸ್ಥಿತಃ |
> ಮಕಾರೇಚಭ್ರುವೋರ್ಮಧ್ಯೇ ಪ್ರಾಣಶಕ್ತ್ಯಾಪ್ರಬೋಧಯೇತ್ |
> ಬ್ರಹ್ಮಗ್ರಂಥಿರಕಾರೇಚ ವಿಷ್ಣುಗ್ರಂಥಿರ್ಹೃದಿಸ್ಥಿತಃ |
> ರುದ್ರಗಂಥಿರ್ಭ್ರುವೋರ್ಮಧ್ಯೇ ಭಿದ್ಯತೇಕ್ಷರವಾಯುನಾ |
> ಅಕಾರೇಸಂಸ್ಥಿತೋಬ್ರಹ್ಮಾ ಉಕಾರೇವಿಷ್ಣುರಾಸ್ಥಿತಃ |
> ಮಕಾರೇಸಂಸ್ಥಿತೋರುದ್ರ ಸ್ತತೋಸ್ಯಾಂತತತ್ಪರಾತ್ಪರಃ ||

ಎಂಬದಾಗಿ ಬ್ರಹ್ಮವಿದ್ಯೋಪನಿಷತ್, ಯೋಗಚೂಡಾಮಣ್ಯುಪನಿಷತ್, ಯೋಗಕುಂಡಲಿನ್ಯುಪನಿಷತ್, ಯೋಗಶಿಖೋಪನಿಷತ್ತುಗಳಲ್ಲಿ ಹೇಳಿರುವುದು. ಈ ಶ್ರುತಿವಾಕ್ಯದಲ್ಲಿ ಈ ಪ್ರಕರಣಕ್ಕೆ ಬೇಕಾದ ಮುಖ್ಯತಾತ್ಪರ್ಯವು ಮೂಲಾಧಾರದಲ್ಲಿ ಚತುರ್ಮುಖಬ್ರಹ್ಮಶಕ್ತಿಯೂ, ಹೃದಯದಲ್ಲಿ ವಿಷ್ಣುಶಕ್ತಿಯೂ, ಭ್ರೂಮಧ್ಯದಲ್ಲಿ ರುದ್ರಶಕ್ತಿಯೂ ಇರುತ್ತವೆ. ಪಾಲನೆಯ ಕಾರ್ಯಪ್ರಾರಂಭವಾಗಬೇಕಾದರೆ ಸೃಷ್ಟಿಯಾಗಿ ಸ್ಥಿತಿಗೆಂದರೆ ವ್ಯಾಪಾರಕ್ಕೆ ಪ್ರಾರಂಭವಾಗಬೇಕು. ಅಂದರೆ ಸೃಷ್ಟಿಯು ಸ್ಥಿತಿಯ ರೂಪಕ್ಕೆ ಬರಬೇಕು. ಆದುದರಿಂದ ಸೃಷ್ಟಿಶಕ್ತಿಯಾದ "ಅ"ಕಾರವು ಉಕಾರದಲ್ಲಿ ಸೇರಿ "ಓ"ಕಾರಸ್ವರೂಪದಲ್ಲಿ ಸ್ಥಿತಿ ಅಥವಾ ಪಾಲನೆ ನಡೆಯುತ್ತಿರುವುದು. ಪರಮಾತ್ಮಸಾಕ್ಷಾತ್ಕಾರದಲ್ಲಿ ಸೃಷ್ಟಿ ಸ್ಥಿತಿಗಳೆರಡೂ ಲಯದ ಶಕ್ತಿಯಾದ "ಮ"ಕಾರದಲ್ಲಿ ಲೀನವಾಗುವುವು.

ಆದುದರಿಂದ ಶ್ರೀರಾಮನು ವೈಷ್ಣವಧನುಸ್ಸನ್ನು ಅಗಸ್ತ್ಯರಿಂದ ಸ್ವೀಕರಿಸಿದನೆಂದರೆ ಬುದ್ಧಿಮನಸ್ಸಿನ ವೃತ್ತಿಗಳು ದೇಹವ್ಯಾಪಾರಮಾಡಲು ಪ್ರಾಣಶಕ್ತಿಯೊಡನೆ ಕಲೆತ ತಾತ್ಪರ್ಯವಾಗಿರುತ್ತದೆ.

ಅಗಸ್ತ್ಯಾಶ್ರಮದ ಸಂದರ್ಭದ ಮುಖ್ಯತತ್ವವೇನೆಂದರೆ—ಶಿಶುವಿಗೆ ಜನನವಾದ ಕೂಡಲೆ ಶ್ವಾಸೋಚ್ಛ್ವಾಸಗಳು ಪ್ರಾರಂಭವಾಗಿ ದೇಹದೊಳಗೆ ಪಂಚಪ್ರಾಣಗಳ ಕಾರ್ಯವು ಪ್ರಾರಂಭವಾಗುತ್ತದೆ. ಈ ಪಂಚಪ್ರಾಣಗಳಿಗೆ ಪ್ರಕಾಶಕೊಟ್ಟುಕೊಂಡಿರುವುದೇ ಓಕಾರ ಚೈತನ್ಯ ಅಥವಾ ಪ್ರಾಣಮಯಕೋಶದ ಪ್ರಧಾನಶಕ್ತಿಯು. ಜನನವಾದ ಕೂಡಲೇ ಪಂಚ ಪ್ರಾಣಗಳ ಕಾರ್ಯ ಪ್ರಾರಂಭವಾದರೂ ಕರ್ಮೇಂದ್ರಿಯಗಳ ಸ್ಫುರಣೆಯುಂಟಾಗಿರುವುದಿಲ್ಲ. ಕರ್ಮೇಂದ್ರಿಯಗಳ ಸ್ಫುರಣೆಯುಂಟಾಗಿ ಹೊರಗಿನ ವ್ಯಾಪಾರಮಾಡಬೇಕಾದರೆ ಬುದ್ಧಿ ಮನಸ್ಸಿನ ವೃತ್ತಿಗಳು ಪಂಚಪ್ರಾಣಗಳಿಗೂ ಮುಖ್ಯವೆನಿಸಿರುವ ಓಕಾರದ ಪ್ರಾಣಶಕ್ತಿ ಯೊಡನೆ ಕಲೆತು ಕರ್ಮೇಂದ್ರಿಯಗಳನ್ನು ಸ್ಫುರಣೆಮಾಡಬೇಕಾಗಿರುತ್ತದೆ. ಈ ತತ್ವಾ ರ್ಥವೇ ಶ್ರೀರಾಮನು ಅಗಸ್ತ್ಯರಿಂದ ಅಸ್ತ್ರಗಳನ್ನು ಸ್ವೀಕರಿಸಿದುದು. ಕರ್ಮೇಂದ್ರಿಯಗಳ ಸ್ಫುರಣೆಯಾಗಲು ಪ್ರಾರಂಭಿಸುವಾಗ ಶಿಶುಗಳಲ್ಲಿ ಕೈಕಾಲುಗಳನ್ನಾಡಿಸುವುದು ಮುಂತಾದ ಚೇಷ್ಟೆಗಳು ಪ್ರಾರಂಭಿಸಿದ ಕಾಲದಲ್ಲಿ ಬುದ್ಧಿಮನಸ್ಸಿನ ವೃತ್ತಿಗಳು ಪ್ರಾಣಶಕ್ತಿಯೊಡನೆ ಕಲೆತಿರುವುವೆಂದು ತಿಳಿದುಕೊಳ್ಳಬೇಕು.

ಮುಂದಿನ ರಾಮಾಯಣವನ್ನು ಪ್ರಾರಂಭಮಾಡುವುದಕ್ಕೆ ಮುಂಚೆ ಬಂಧಿ ಸಿರುವ ಓಂಕಾರದಲ್ಲಿನ " ಓ " ಕಾರವು ನಮ್ಮಲ್ಲಿ ಯಾವ ಕಾಲದಲ್ಲಿ ಭೇದನೆಯಾಗಿ ಮಕಾರವನ್ನು ಸೇರುವುದೆಂಬ ವಿಚಾರವನ್ನು ಸೂಕ್ಷ್ಮವಾಗಿ ಬರೆದು ಅನಂತರ ಮುಂದು ವರಿಯೋಣ. ಅನಾಹತಚಕ್ರದಲ್ಲಿ ಬಂಧಿಸಿರುವ ಓಕಾರವು ಮೂಲಾಧಾರಚಕ್ರದಲ್ಲಿ ಬ್ರಹ್ಮರಂಧ್ರದ ಬಾಗಿಲನ್ನು ತೆಗೆಸಿ ಓಂಕಾರೋಪಾಸನೆಯಿಂದ ಸಮಾಧಿಯ ಅಭ್ಯಾಸ ಮಾಡಿದಲ್ಲಿ " ಓ " ಕಾರವು " ಮ " ಕಾರದಲ್ಲಿ ಸೇರಿ ಓಂಕಾರವಾದ ಪರಮಾತ್ಮ ಸಾಕ್ಷಾತ್ಕಾರವಾಗುವುದೇ ಹೊರತು ಇತರ ಕಾಲಗಳಲ್ಲಿ ಸಾಧ್ಯವೇ ಇಲ್ಲ.

ಈ " ಓಂ " ಕಾರದ ವಿಚಾರವು ಅತ್ಯಂತ ಅಮೋಘವಾದುದು. ಅಕಾರ ಉಕಾರ ಮಕಾರಗಳಾದ ಮೂರು ಪಾದಗಳುಳ್ಳ ಈ ಓಂಕಾರವು ಸೃಷ್ಟಿ ಸ್ಥಿತಿ ಲಯಗಳ ಸಕಲ ತತ್ವ ಗಳನ್ನೂ ಒಳಗೊಂಡಿರುತ್ತದೆ. ಈ " ಓಂ " ಕಾರದ ವಿಚಾರವು ಯುದ್ಧಕಾಂಡದಲ್ಲಿ ಸಮುದ್ರರಾಜನ ಮೇಲೆ ಬ್ರಹ್ಮಾಸ್ತ್ರಪ್ರಯೋಗಮಾಡಿದ ಸಂದರ್ಭ, ಸೇತುಬಂಧನ, ಅಗಸ್ತ್ಯರು ಶ್ರೀರಾಮನಿಗೆ ಆದಿತ್ಯಹೃದಯವನ್ನು ಉಪದೇಶಮಾಡಿದ ಮತ್ತು ಸೀತಾಗ್ನಿ ಪ್ರವೇಶದ ಸಂದರ್ಭಗಳಲ್ಲಿ ಬರುವುದು. ಎಲ್ಲಾ ಸಂದರ್ಭಗಳ ತತ್ವಗಳನ್ನೂ ಸಮನ್ವಯ ಮಾಡಿಕೊಂಡರೆ ಓಂಕಾರದ ವಿಚಾರವು ತಕ್ಕಮಟ್ಟಿಗೆ ತಿಳಿಯುತ್ತದೆ.

---

# ಅನ್ನಮಯಕೋಶ.

## ೬ನೆಯ ಪ್ರಕರಣ.

| ಶ್ರೀರಾಮಾದಿಗಳು ಪಂಚವಟಿಯನ್ನು ಸೇರಿದುದು. | ಬುದ್ಧಿಮನಸ್ಸಿನ ವೃತ್ತಿಗಳು ಪ್ರಾಣಮಯಕೋಶದಿಂದ ಅನ್ನಮಯಕೋಶಕ್ಕೆ ಇಳಿಯುವ ವಿಚಾರ. |
|---|---|

**ರಾ||** ಶ್ರೀರಾಮನು ಸೀತಾ ಲಕ್ಷ್ಮಣರೊಡನೆ ಅಗಸ್ತ್ಯಾಶ್ರಮವನ್ನು ಬಿಟ್ಟು ಗೋದಾವರೀನದಿಯ ತೀರದಲ್ಲಿರುವ ಪಂಚವಟಿಯನ್ನು ಸೇರಿ ಅಲ್ಲಿ ವಾಸವಾಗಿದ್ದನು.

**ತತ್ವ||** ಬುದ್ಧಿಮನಸ್ಸಿನ ವೃತ್ತಿಗಳು ಶುದ್ಧಸತ್ವಗುಣದೊಡನೆ ಅಗಸ್ತ್ಯಾಶ್ರಮದ ತತ್ವವಾದ ಪ್ರಾಣಮಯಕೋಶದಿಂದ ಮುಂದಕ್ಕೆ ಪ್ರಸರಿಸಿಕೊಂಡು ಹೋಗಿ ಅನ್ನಮಯ ಕೋಶವನ್ನು ಸೇರಿದುವೆಂಬುದನ್ನು ಸೂಚಿಸುವುದು. ಆನಂದಮಯಾದಿ ಐದು ಕೋಶಗಳು ಅಥವಾ ಪಂಚಭೂತಗಳು ಪಂಚವಟಿಗಳಾಗಿರುತ್ತವೆ. ಈ ಐದು ಕೋಶಗಳಲ್ಲಿ ಅನ್ನಮಯಕೋಶವಾದ ನಮ್ಮ ಸ್ಥೂಲದೇಹವೇ ಕೊನೆಯ ಸೋಪಾನವೆಂದರೆ ಕೊನೆಯದಾಗಿರುವುದು. ಇಂತಹ ಪಂಚವಟಿಯು ಗೋದಾವರೀನದಿಯ ದಡದಲ್ಲಿದೆ. ಗೋದಾವರಿಯೆಂದರೆ "ಗಾಂ ದದಾತಿ ಇತಿ ಗೋದಾ (ತಥಾ ಋಗ್ವೇದೆ ಗೋದಾ ಇದ್ರೇವತೋಮದಃ) ಭೂಮಿಯನ್ನು ಕೊಡತಕ್ಕವರಲ್ಲಿ ಶ್ರೇಷ್ಠಳಾದುದರಿಂದ ಗೋದಾವರಿಯೆಂದು ಶಬ್ದಾರ್ಥಕಲ್ಪದ್ರುಮದಲ್ಲಿ ವ್ಯುತ್ಪತ್ತಿಯು ಇರುತ್ತದೆ. ಭೂಮಿಯನ್ನು ಕೊಡತಕ್ಕವರಲ್ಲಿ ಶ್ರೇಷ್ಠಳೆಂದರೆ—ಭೂತತ್ವವಾದ ಸ್ಥೂಲದೇಹದ ಯಾತ್ರೆಯ ಪ್ರವಾಹರೂಪವನ್ನುಂಟುಮಾಡುವುದರಲ್ಲಿ ಶ್ರೇಷ್ಠವಾದ ಶಕ್ತಿಯೆಂಬ ತತ್ವಾರ್ಥವಾಗಿರುವುದು. ಅಲ್ಲದೆ ಮತ್ತೊಂದು ತತ್ವಾರ್ಥವನ್ನೂ ಮಾಡಬಹುದು. ಹೇಗೆಂದರೆ—ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೧೫೬ನೆಯ ಶ್ಲೋಕದಲ್ಲಿ,

> ದೇಹೋಽಯ ಮನ್ನಭವ ನೋನ್ನಮಯಸ್ತು ಕೋಶ |
> ಶ್ಚಾನ್ನೇನ ಜೀವತಿ ವಿನಶ್ಯತಿ ತದ್ವಿಹೀನಃ ||

ತಾ|| ಕಾಣಬರುವ ಸ್ಥೂಲದೇಹವು ಅನ್ನದಿಂದಲೇ ಉಂಟಾಗತಕ್ಕದ್ದು. ಅನ್ನದಿಂದಲೇ ಬೆಳೆವಣಿಗೆಯನ್ನು ಹೊಂದತಕ್ಕದ್ದು. ಅನ್ನವಿಲ್ಲದೆ ಹೋದರೆ ದೇಹವು ನಶಿಸಿಹೋಗುವುದು ಎಂದು ಹೇಳಿರುವರು.

ಆದುದರಿಂದ ಸ್ಥೂಲದೇಹದ ವ್ಯಾಪಾರ ಅಥವಾ ಸ್ಥೂಲದೇಹದ ಸ್ಥಿತಿಗೆ ಬೇಕಾದ ಅನ್ನವನ್ನು ಕೊಡತಕ್ಕವರಲ್ಲಿ ಗೋದಾವರಿಯು ಶ್ರೇಷ್ಠಳೆಂದು ಹೇಳಬಹುದು. ಮುಖ್ಯ ತಾತ್ಪರ್ಯವೇನೆಂದರೆ ಸ್ಥೂಲದೇಹದ ವ್ಯಾಪಾರಸೌಖ್ಯವನ್ನು ಕೊಡುವ ಶಕ್ತಿಯೆಂಬ ತಾತ್ಪರ್ಯ. ಅಲ್ಲದೆ "ಗಾಂ" ಎಂದರೆ ಜಲವೆಂದೂ ಅರ್ಥವಾಗುವುದು.

ಗೋದಾವರೀ ದಡದಲ್ಲಿರುವ ಪಂಚವಟಿಯೆಂದರೆ ಜಲ ಮತ್ತು ಭೂತತ್ವ ಪ್ರಧಾನ ವಾದ ಸ್ಥೂಲದೇಹದ ವಾಸಕ್ಕೆಂದರೆ ರಕ್ತ ಮಾಂಸ ಮೂಳೆಗಳಿಂದಿರುವ ಸ್ಥೂಲದೇಹ ಅಥವಾ ಅನ್ನಮಯಕೋಶಕ್ಕೆ ಬುದ್ಧಿಮನಸ್ಸಿನ ವೃತ್ತಿಗಳು ಪ್ರಾಣಮಯಕೋಶದಿಂದ ಪ್ರಸರಿಸಿಕೊಂಡು ಬಂದುವೆಂಬ ತಾತ್ಪರ್ಯವಾಗಿರುತ್ತದೆ. ಅನ್ನಮಯಕೋಶವಾದ ಪಂಚ ವಟಿಯಲ್ಲಿ ನಡೆದ ವಿಚಾರಗಳನ್ನು ಒಂದೊಂದಾಗಿ ತೆಗೆದುಕೊಳ್ಳೋಣ.

**ರಾ||** ಶ್ರೀರಾಮಾದಿಗಳು ಪಂಚವಟಿಯಲ್ಲಿ ವಾಸಮಾಡುತ್ತಿದ್ದಾಗ ಗೋದಾವರೀ ನದಿಗೆ ಸ್ನಾನಕ್ಕೆ ಹೋಗುವ ಸಮಯದಲ್ಲಿ ಲಕ್ಷ್ಮಣನು ಶ್ರೀರಾಮನನ್ನು ಕುರಿತು, ಎಲೈ ಶ್ರೀರಾಮನೆ! ಆದಿಪುರುಷನಾದ ನಿನಗೆ ಪ್ರಿಯವಾದ ಹೇಮಂತ ಕಾಲವು ಪ್ರಾಪ್ತವಾ ಯಿತು. ಈ ಮಾರ್ಗಶೀರ್ಷ ಮಾಸದಲ್ಲಿ ಸಮಸ್ತ ಸಸ್ಯಾದಿಗಳೂ ಫಲಿತವಾಗಿರುವುದರಿಂದ ಶುಭಕರವಾದ ಈ ಹೇಮಂತವು ಸರ್ವಾಭರಣಭೂಷಿತೆಯಾದ ಸ್ತ್ರೀಯಂತೆ ಅಲಂಕರಿಸ ಲ್ಪಟ್ಟಿರುವ ರೀತಿಯಲ್ಲಿ ಒಪ್ಪುತ್ತಿರುವುದೆಂದು ಹೇಳಿ ಹೇಮಂತ ಋತುವನ್ನು ಅನೇಕ ವಿಧ ವಾಗಿ ವರ್ಣಿಸಿದನು.

**ತತ್ವ||** ಪಂಚವಟೀ ತತ್ವವಾದ ಅನ್ನಮಯಕೋಶಕ್ಕೆ ಬುದ್ಧಿ ಮನಸ್ಸಿನ ವೃತ್ತಿ ಗಳು ಪ್ರವಹಿಸಿಕೊಂಡು ಬಂದು ಅನ್ನಮಯಕೋಶವಾದ ಸ್ಥೂಲದೇಹದ ವ್ಯಾಪಾರಕ್ಕೆ ಪ್ರಾರಂಭವಾಗಬೇಕಾಗಿರುತ್ತದೆ. ವರ್ಷಾಕಾಲದಲ್ಲಿ ಬಿತ್ತಿದ್ದ ಬೀಜಗಳು ಫಲಕ್ಕೆ ಬಂದು ಹೇಗೆ ಮಾರ್ಗಶೀರ್ಷಮಾಸದಲ್ಲಿ ಪೂರ್ಣಪೈರುಗಳೆನಿಸಿಕೊಳ್ಳುವುವೋ ಹಾಗೆ ಸ್ಥೂಲದೇಹದ ವ್ಯಾಪಾರಕ್ಕೆ ಬೇಕಾದ ಸಲಕರಣೆಗಳು ದೇಹದಲ್ಲಿ ಪೂರ್ಣೋದಯಕ್ಕೆ ಬಂದಿರುವುವೆಂಬ ತಾತ್ಪರ್ಯವಾಗಿರುತ್ತದೆ. ಅಂದರೆ ಸ್ಥೂಲದೇಹದ ವ್ಯಾಪಾರ ಪ್ರಾರಂಭವಾಗಿ ಸಕಲ ಭೋಗಗಳನ್ನೂ ಅನುಭವಿಸುವುದಕ್ಕೆ ಅನುಕೂಲಿಸುವ ಕಾಲವು ಪ್ರಾಪ್ತವಾಯಿತೆಂಬ ತತ್ವವಾಗಿರುವುದು. ಅಂದರೆ ಒಂದು ಬೀಜದಿಂದ ಮೊಳಕೆ ಹುಟ್ಟಿ ತನ್ನ ಸಲಕರಣೆಗಳಿಂದ ಹೇಗೆ ಫಲಕ್ಕೆ ಬಂದು ವೃಕ್ಷವೆನಿಸಿಕೊಳ್ಳುವುದೋ ಹಾಗೆ ಸ್ಥಿತಿ ಅಥವಾ ವ್ಯಾಪಾರದ ಸಲ ಕರಣೆಗಳೆಲ್ಲ ಸಂಪೂರ್ಣಸ್ಥಿತಿಗೆ ಬಂದು ಅನುಭವದ ಕಾಲ ಪ್ರಾಪ್ತವಾಗಿರುವುದೆಂಬ ತತ್ವಾರ್ಥವನ್ನು ಸೂಚಿಸುವ ತಾತ್ಪರ್ಯವೇ ಗೋದಾವರೀ ನದಿಯ ಸ್ನಾನಕ್ಕೆ ಹೋಗುವ ಸಂದರ್ಭದಲ್ಲಿ ಲಕ್ಷ್ಮಣನು ಹೇಮಂತ ಋತುವನ್ನು ವರ್ಣಿಸಿದ್ದಾಗಿರುತ್ತದೆ. ಅಂದರೆ ಅನುಭವಿಸಲು ಅಥವಾ ಭೋಗಿಸಲು ಅರ್ಹತೆಯುಳ್ಳ ವಿರಾಟ್ಪುರುಷಸ್ವರೂಪದ ದೇಹದ

ಸಕಲ ಸಲಕರಣೆಗಳೂ ಒದಗಿದುವೆಂಬ ತಾತ್ಪರ್ಯವಾಗಿರುತ್ತದೆ. ಈ ತತ್ವವನ್ನನುಸರಿಸಿಯೇ ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆಯಲ್ಲಿ "ಮಾಸಾನಾಂ ಮಾರ್ಗಶೀರ್ಷೋಽಸ್ಮಿ" ಎಂಬದಾಗಿ ಹೇಳಿರುತ್ತಾನೆ. ಶ್ರೀಮದ್ರಾಮಾಯಣದಲ್ಲಿಯೂ ಹೇಳಿರುವುದೇನೆಂದರೆ,

ಅಯಂ ಸಕಾಲಸ್ಸಂಪ್ರಾಪ್ತಃ ಪ್ರಿಯೋಯಸ್ತೆಪ್ರಿಯಂವದ |
ಅಲಂಕೃತ ಇವಾಭಾತಿ ಯೇನ ಸಂವತ್ಸರಶ್ಶುಭಃ ||

ತಾ|| ಎಲೈ ಶ್ರೀರಾಮನೆ! ಯಾವ ಹಿಮಂತಋತುವಿನಿಂದ ಶುಭಕರವಾದ ಸಂವತ್ಸರವು ಅಲಂಕರಿಸಲ್ಪಟ್ಟು ಪ್ರಕಾಶಿಸುತ್ತದೋ ಅಲ್ಲದೆ ಯಾವುದು ನಿನಗೆ ಇಷ್ಟವಾಗಿ ತೋರುವುದೋ ಆ ಫಲಪೂರ್ಣವಾಗಿರುವ ಹೇಮಂತಋತು ಕಾಲವು ಬಂದಿರುವುದೆಂದು ಲಕ್ಷ್ಮಣನು ಹೇಳಿದನು.

ಮೇಲಿನ ತತ್ವಾರ್ಥಗಳನ್ನು ಅನುಸರಿಸಿ ಜನನವಾದ ಶಿಶುವಿನಲ್ಲಿ ಬಾಹ್ಯಪ್ರಪಂಚವನ್ನು ಅನುಭವಿಸುವುದಕ್ಕೆ ವಿಶ್ವಸ್ವರೂಪದ ಸಕಲ ಸಲಕರಣೆಗಳೂ ಸಿದ್ಧವಾದುವೆಂಬ ತಾತ್ಪರ್ಯವಾಗಿರುತ್ತದೆ.

**ರಾ||** ಲಕ್ಷ್ಮಣನು ಹೇಮಂತಋತುವನ್ನು ವರ್ಣನೆಮಾಡುತ್ತ "ಎಲೈ ಶ್ರೀರಾಮನೇ, ಈ ಹೇಮಂತಕಾಲದಲ್ಲಿ ಭರತನು ಸಮಸ್ತ ಪ್ರಧಾನಿಗಳನ್ನೂ ಕೂಡಿಕೊಂಡು ಸರಯೂನದಿಗೆ ಸ್ನಾನಮಾಡುವುದಕ್ಕೆ ಹೋಗುವನು. ಲೋಕದಲ್ಲಿ ಜನರು ಮಾತೆಯರ ಸ್ವಭಾವವನ್ನನುಸರಿಸುವರೆಂದು ಪ್ರಸಿದ್ಧಿಯು. ಆದರೆ ಭರತನು ಕೈಕೇಯಿಯು ಇಷ್ಟವನ್ನು ಅನುಸರಿಸದೆ ನಿನ್ನ ಮೇಲಿನ ಭಕ್ತಿಯಿಂದ ಧರ್ಮಯುಕ್ತನಾಗಿ ಸಮಸ್ತ ಭೋಗಗಳಲ್ಲಿಯೂ ಆಶೆಯಿಲ್ಲದವನಾಗಿ ನಿಯಮವನ್ನು ಮಾಡಿಕೊಂಡು ನಿನ್ನಂತೆ ತಪಸ್ವಿಯಾಗಿರುವನು." ಎಂಬದಾಗಿ ಹೇಳಿದನು.

**ತತ್ವ||** ಶ್ರೀರಾಮಾದಿಗಳು ಗೋದಾವರೀ ನದಿಗೆ ಸ್ನಾನಕ್ಕೆ ಹೋಗುತ್ತಿದ್ದ ತತ್ವವೇ ಅನ್ನಮಯಕೋಶವಾದ ಸ್ಥೂಲದೇಹದ ವ್ಯಾಪಾರಕ್ಕೆ ಪ್ರಾರಂಭವಾಗುತ್ತಾ ಬಂತೆಂಬ ತಾತ್ಪರ್ಯ. ಈ ಸ್ಥೂಲದೇಹದ ವ್ಯಾಪಾರ ಪ್ರಾರಂಭವಾಗಲು ಪ್ರಥಮದಲ್ಲಿ ಅಹಂಕಾರವೆಂದರೆ ಅಭಿಮಾನವು ಅವಶ್ಯಕವೆಂಬ ತಾತ್ಪರ್ಯವನ್ನು ಸೂಚಿಸುವಿಕೆಯೇ ಭರತನು ಸರಯೂನದಿಯಲ್ಲಿ ಸ್ನಾನಮಾಡಲು ಹೋಗುವನೆಂದು ಲಕ್ಷ್ಮಣನು ಹೇಳಿರುವುದಾಗಿರುತ್ತದೆ. ಸರಯೂ ಎಂದರೆ "ಸರತೀತಿ ಸರಯೂ" ಅಂದರೆ ಪ್ರವಹಿಸಿಕೊಂಡು ಬರುವುದು ಎಂದರ್ಥ. ಇದರಂತೆ ಜನನವಾದ ಶಿಶುಗಳಲ್ಲಿ ದೇಹವ್ಯಾಪಾರಮಾಡಲು ಪ್ರಾರಂಭಿಸಿದಾಗ ದೇಹ ಮತ್ತು ಹೊರಗಿನ ಪದಾರ್ಥಗಳಲ್ಲಿ ಅಭಿಮಾನವು ಪ್ರಥಮದಲ್ಲಿ ಪ್ರವಹಿಸಿಕೊಂಡು ಬರುತ್ತದೆ. ದೇಹವ್ಯಾಪಾರಕ್ಕೆ ಅಭಿಮಾನವೇ ಪ್ರಥಮದಲ್ಲಿ ಮುಖ್ಯ

ವಾಗಿ ಬೇಕೆನ್ನುವ ತಾತ್ಪರ್ಯವನ್ನು ಅನುಸರಿಸಿ ಕೈಕೇಯಿಯ ಇಷ್ಟದಂತೆ ಭರತನಿಗೆ ರಾಜ್ಯದ ಪಟ್ಟ ಬಂದಿರುವುದನ್ನು ಹಿಂದೆಯೇ ತಿಳಿಸಿರುತ್ತದಷ್ಟೆ! ಅಲ್ಲದೆ ದೇಹವ್ಯಾಪಾರಕ್ಕೆ ಅಭಿಮಾನವೇ ಪ್ರಥಮದಲ್ಲಿ ಇರಬೇಕೆನ್ನುವುದಕ್ಕೆ " ಪ್ರಥಮ ವಿಕಾರೋಽಹಂಕಾರಃ " ಎಂಬದಾಗಿ ಹೇಳಿರುವ ಶ್ರೀಶಂಕರಭಗವತ್ಪಾದರವರ ವಾಕ್ಯವನ್ನು ಸಹ ಹಿಂದೆಯೆ ತಿಳಿಸಿದೆ. ಆದುದರಿಂದ ಜನನವಾದ ಶಿಶುಗಳಲ್ಲಿ ದೇಹವ್ಯಾಪಾರ ಮಾಡಲು ಪ್ರಥಮದಲ್ಲಿ ಅಭಿಮಾನವು ರಾಜನಂತೆ ಪ್ರಾಮುಖ್ಯತೆಯುಳ್ಳದ್ದಾಗಿ ಉದಯವಾಗುವುದೆಂಬ ತತ್ವವೇ ಭರತನು ಸರಯೂನದಿಗೆ ಸ್ನಾನಕ್ಕೆ ಹೋಗುವನೆಂದು ಲಕ್ಷ್ಮಣನು ಹೇಳಿದುದು.

ತಾಯಿಯ ಸ್ವಭಾವವನ್ನು ಮಗನು ಅನುಸರಿಸುವುದು ಸ್ವಾಭಾವಿಕವಾಗಿರುವಂತೆ ಅಭಿಮಾನದ ಪ್ರಭುತ್ವವು ಬ್ರಹ್ಮವಿದ್ಯಾಧಿಕಾರಿಗಳಲ್ಲದ ಇತರರಲ್ಲಿ ಪ್ರಬಲವಾಗಿರುತ್ತೆ. ಅಂದರೆ ಮೋಕ್ಷಮಾರ್ಗಿಗಳಲ್ಲದ ಇತರರಲ್ಲಿ ದೇಹವ್ಯಾಪಾರಕ್ಕೆ ಪ್ರಭುವಾಗಿ ಸಾರ್ವಭೌಮನಂತೆ ಅಹಂಕಾರವು ಇರುವುದೆಂಬ ತತ್ವ. ಬ್ರಹ್ಮವಿದ್ಯಾಧಿಕಾರಿಗಳಲ್ಲಿಮಾತ್ರ ಅಹಂಕಾರವು ಕೈಕೇಯಿಯ ಇಷ್ಟವನ್ನು ಅನುಸರಿಸದೆ ಭಕ್ತಿಯಿಂದ ಶ್ರೀರಾಮನನ್ನೇ ಅನುಸರಿಸಿಕೊಂಡು ಧರ್ಮಯುಕ್ತನಾಗಿ ಸಮಸ್ತ ಭೋಗಗಳಲ್ಲಿಯೂ ಆಶೆಯಿಲ್ಲದವನಾಗಿರುವ ಭರತನ ತತ್ವದಂತೆ ಇರುತ್ತದೆ. ಅಂದರೆ ಹೇಮಂತಋತುವಿನ ಕಾಲದ ತತ್ವವಾದ ಸಕಲ ಭೋಗೋಪಕರಣ ಸಾಮಗ್ರಿಗಳಿದ್ದರೂ ಅಯೋಧ್ಯಾಕಾಂಡದಲ್ಲಿ ವಿವರಿಸಿರುವಂತೆ ನಿರಭಿಮಾನದಿಂದಲೂ, ಸಕಲ ಕಾರ್ಯಗಳ ಫಲವನ್ನೂ ಈಶ್ವರಾರ್ಪಣ ಮಾಡುವ ಬುದ್ಧಿಯಿಂದಲೂ, ಬ್ರಹ್ಮಭಾವನೆಯ ಆನಂದದಿಂದಲೂ, ಅಭಿಮಾನವು ಬ್ರಹ್ಮವಿದ್ಯಾಧಿಕಾರಿಯಲ್ಲಿರಬೇಕೆಂಬುದನ್ನು ಸೂಚಿಸುವುದೇ ಶ್ರೀರಾಮನ ಅನುವರ್ತಿಯಾಗಿ ಭರತನು ಇದ್ದುದು.

ಈ ಕಥಾಸಂದರ್ಭದಲ್ಲಿ ಭರತನ ವಿಚಾರ ಬಂದಿರುವ ತತ್ವವೇನೆಂದರೆ—ಜನನವಾದ ಶಿಶುಗಳಲ್ಲಿ ಬಾಹ್ಯವ್ಯಾಪಾರದ ಸಲಕರಣೆಗಳೆಲ್ಲ ಸ್ಫುರಣೆಯಾಗುತ್ತ ಬಂದುವು. ಮುಂದೆ ವಿಷಯವ್ಯಾಪಾರ ಪ್ರಾರಂಭವಾಗಬೇಕು. ಈ ವಿಷಯವ್ಯಾಪಾರಕ್ಕೆ ಅಭಿಮಾನವು ಪ್ರಧಾನವಾದದ್ದಾಗಿ ಮೆಲ್ಲಮೆಲ್ಲಗೆ ಪ್ರಥಮದಲ್ಲಿ ಶಿಶುಗಳಲ್ಲಿ ಪ್ರವಹಿಸಿಕೊಂಡು ಬರುವುದೆಂಬ ತತ್ವದ ಸೂಚನೆಯಾಗಿರುವುದು.

## ೭ನೆಯ ಪ್ರಕರಣ.

ಖರ ದೂಷಣ ತ್ರಿಶಿರಾದಿ ರಾಕ್ಷಸರ ವಧೆ.



ಬುದ್ಧಿವೃತ್ತಿಯು ಕರ್ಮೇಂದ್ರಿಯಗಳನ್ನು ಸ್ಫುರಣೆಮಾಡುವ ವಿಚಾರ.

ರಾ॥ ಶ್ರೀರಾಮನು ಸೀತಾ ಲಕ್ಷ್ಮಣರೊಡನೆ ಪಂಚವಟಿಯಲ್ಲಿ ವಾಸಮಾಡುತ್ತಿರುವಾಗ ರಾವಣನ ತಂಗಿಯಾದ ಶೂರ್ಪನಖಿಯೆಂಬ ರಾಕ್ಷಸಿಯು ಕಾಮಪೀಡಿತಳಾಗಿ

ಶ್ರೀರಾಮ ಲಕ್ಷ್ಮಣರಲ್ಲಿಗೆ ಬರಲು ಅವರಿಂದ ತಿರಸ್ಕರಿಸಲ್ಪಟ್ಟವಳಾಗಿ ಲಕ್ಷ್ಮಣನಿಂದ ಕಿವಿ ಮೂಗುಗಳನ್ನು ಕೊಯ್ಸಿಕೊಂಡು ತನ್ನ ಸಹೋದರನಾದ ಖರನೆಂಬ ರಾಕ್ಷಸನ ಬಳಿಗೆ ಹೋಗಿ ಮೊರೆಯಿಟ್ಟಳು.

**ತತ್ವ||** ಶೂರ್ಪನಖಿಯು ರಾವಣನ ತಂಗಿಯು. ರಾವಣನು ರಜೋಗುಣ ಚೈತನ್ಯನು. ಶೂರ್ಪನಖಿಯು ರಜೋಗುಣಕ್ಕೆ ಸಂಬಂಧಪಟ್ಟಿದ್ದರೂ ಪತಿವಿಹೀನಳಾದ್ದರಿಂದ ಚೈತನ್ಯಪ್ರಧಾನಳಾಗಲಿಲ್ಲ. ಆದರೂ ಇವಳು ಕಾಮರೂಪಿಣಿಯೆನಿಸಿಕೊಂಡಿದ್ದಳು. ಶೂರ್ಪನಖಾ ಎಂದರೆ—"ಶೂರ್ಪಾಕಾರಾಣಿ ನಖಾನಿ ಯಸ್ಯಾಃ ಸಾ ಶೂರ್ಪನಖಾ" ಎಂದರೆ ಮೊರದ ಆಕಾರದಂತಹ ಉಗುರುಳ್ಳವಳು ಎಂದರ್ಥ. ಒಂದು ಕಡೆಯಿಂದ ಮತ್ತೊಂದು ಕಡೆಗೆ ಬಾಚಿ ಬಾಚಿ ಹಾಕುವುದೇ ಮೊರದ ಕಾರ್ಯ. ಉಗುರಿನ ಕಾರ್ಯವೂ ಕೆರೆಯುವುದೆಂದರೆ ಬಗೆಯುವ ವಿಧವಾದುದು. ಆದುದರಿಂದ ಪಂಚವಟಿಯ ತತ್ವವಾದ ಸ್ಥೂಲದೇಹದಲ್ಲಿ ಶೂರ್ಪನಖಾ ತತ್ವದಲ್ಲಿರುವುದು ಉದರ ಅಥವಾ ಹೊಟ್ಟೆ. ಹೊಟ್ಟೆಯು ಆಹಾರವನ್ನು ಬಾಚಿ ಬಾಚಿ ಹಾಕುತ್ತಲೇ ಇರುವುದರಿಂದ ಶೂರ್ಪನಖಿಯ ತತ್ವ ದಲ್ಲಿರುವುದು.

ಶ್ರೀರಾಮಾದಿಗಳು ಪಂಚವಟಿಯಲ್ಲಿದ್ದಾಗ ಶೂರ್ಪನಖಿಯನ್ನು ಸಂಧಿಸಿದರೆಂದರೆ— ಬುದ್ಧಿಮನಸ್ಸಿನ ವೃತ್ತಿಗಳು ಪ್ರಾಣಮಯಕೋಶದಿಂದ ಅನ್ನಮಯಕೋಶವೆಂದರೆ ಸ್ಥೂಲದೇಹಕ್ಕೆ ಇಳಿದಾಗ ಶೂರ್ಪನಖಿಯ ತತ್ವದಲ್ಲಿರುವ ಹೊಟ್ಟೆಯನ್ನು ಸಂಧಿಸಿದರೆಂಬ ತತ್ವವಾಗಿರುವುದು. ಬುದ್ಧಿ ಮನಸ್ಸಿನ ವೃತ್ತಿಗಳನ್ನು ಉದರದ ಮೋಹದಲ್ಲಿಟ್ಟಿರಬೇಕೆಂಬ ತತ್ವವೇ ಶೂರ್ಪನಖಿಯು ಶ್ರೀರಾಮ ಲಕ್ಷ್ಮಣರನ್ನು ವರಿಸಲು ಬಂದುದಾಗಿರುವುದು. ಆಹಾರವನ್ನು ಬಾಚಿ ಬಾಚಿ ತಳ್ಳುವ ಉದರವೇ ಬುದ್ಧಿ ಮನಸ್ಸುಗಳನ್ನು ತನ್ನಂತೆಂದರೆ ಅನ್ನಮಯಕೋಶಾನುವರ್ತಿಯನ್ನಾಗಿ ಮಾಡಲು ಯತ್ನವಿಲ್ಲದಿರುವುದೇ ಶೂರ್ಪನಖಿಯು ವಿಮುಖಳಾಗಿ ಹೋದುದಾಗಿರುವುದು.

ಶೂರ್ಪನಖಿಯ ತತ್ವದಲ್ಲಿರುವ ಹೊಟ್ಟೆಯೆಂಬ ಚೀಲವು ಎಷ್ಟು ಹಾಕುತ್ತಿದ್ದರೂ ಬಾಚುತ್ತಲೇ ಇರುವುದು. ಪ್ರಾತಃಕಾಲದಿಂದ ಸಾಯಂಕಾಲವಾಗುವವರೆಗೂ ಹೊಟ್ಟೆಯ ಚೀಲವನ್ನು ತುಂಬಿಸುವ ಕಾರ್ಯವೇ ಆಗಿರುವುದು. ಹೊಟ್ಟೆಯ ತತ್ವದಲ್ಲಿರುವ ಶೂರ್ಪ ನಖಿಯೇ ರಾವಣನಿಂದ ಸೀತಾಪಹರಣ ಮಾಡಿಸಲು ಮೂಲಕಾರಣಳು. ಅಲ್ಲದೆ ಖರ ದೂಷಣ ತ್ರಿಶಿರಾದಿಗಳ ವಧೆಗೂ ಇವಳೇ ಕಾರಣಳು.

**ರಾ||** ಅನಂತರ ಶೂರ್ಪನಖಿಯಿಂದ ಪ್ರೇರಿತನಾದ ಖರನು ಹದಿನಾಲ್ಕು ಸಾವಿರ ಸೈನ್ಯದೊಡಗೂಡಿ ದೂಷಣ ತ್ರಿಶಿರರೊಡನೆ ಬಂದು ಶ್ರೀರಾಮನ ಸಂಗಡ ಯುದ್ಧಮಾಡಿ ಮರಣವನ್ನು ಹೊಂದಿದನು.

**ತತ್ವ||** ಜನನವಾದ ಶಿಶುಗಳಿಗೆ ಜ್ಞಾನೇಂದ್ರಿಯಗಳ ಕಾರ್ಯವಾದ ದೃಷ್ಟಿಪಾಟವ ಮುಂತಾದುವುಗಳು ಉದಯವಾದರೂ ಕರ್ಮೇಂದ್ರಿಯಗಳ ಕಾರ್ಯಗಳಾದ ಮಾತಾಡು ವುದು, ನಡೆಯುವುದು, ಮುಂತಾದ ಕಾರ್ಯಗಳಿಗೆ ಇನ್ನೂ ಅಧಿಕಾರ ಬಂದಿಲ್ಲ. ಕಾರಣ ವೇನೆಂದರೆ ದೇಹದಲ್ಲಿ ತಮೋಗುಣದ ಜಡತ್ವ ಪರಿಹಾರವಾಗುವವರೆಗೆ ಕರ್ಮೇಂದ್ರಿಯ ಗಳ ಕಾರ್ಯಕ್ಕೆ ಅವಕಾಶವಿಲ್ಲವಾದುದರಿಂದ ಇಂತಹ ಜಡಸ್ವರೂಪರಾದ ಖರಾದಿಗಳನ್ನು ಬುದ್ಧಿವೃತ್ತಿಯು ನಿಗ್ರಹಿಸಬೇಕಾಗಿರುವುದು. ಖರ ಎಂದರೆ " ಖಾಯು ಅಂತರಿಂದ್ರಿ ಯಾಯ ಖಸ್ಯವಾ ತೀವ್ರತಾರೂಪಗುಣಂ ರಾತೀತಿ ಖರಃ " ಜಡವಾದ ಇಂದ್ರಿಯಗಳು ಳ್ಳದ್ದು ಖರ ಅಥವಾ ಕತ್ತೆಯೆಂದು ಹೆಸರು. ಜಡಸ್ವಭಾವವೇ ಪ್ರಧಾನವಾಗಿ ಉಳ್ಳದ್ದು ಕತ್ತೆಯಾಗಿರುತ್ತದೆ. ಅಂದರೆ ಶಿಶುವಿಗೆ ಕೈ ಕಾಲು ಮುಂತಾದ ಕರ್ಮೇಂದ್ರಿಯಗಳು ತಮ್ಮ ತಮ್ಮ ಕಾರ್ಯಗಳನ್ನು ಮಾಡಲಾರದೆ ಜಡವಾಗಿರುವುವೆಂಬುದೇ ಖರನ ತತ್ವವಾಗಿರು ವುದು. ಅಂದರೆ ಶಿಶುವಿನಲ್ಲಿರುವ ತಮೋಗುಣದ ಜಡತ್ವವನ್ನು ಪ್ರತಿಪಾದನೆಮಾಡುವುದೇ ಖರನ ತತ್ವವಾಗಿರುವುದು.

ದೂಷಣನೆಂದರೆ " ದುಷ-ವೈಕೃತ್ಯೆ " ಜಡಸ್ವರೂಪವಾದ ವಿಕಾರದಿಂದ ದೂಷಿಸ ಲ್ಪಡುವುದು ಎಂದರ್ಥ. ಜಡತ್ವದಿಂದ ದೂಷಿಸಲ್ಪಡುವುದೆಂದರೆ—ದೇಹವ್ಯಾಪಾರದ ಸ್ವಾತಂತ್ರ್ಯವು ಶಿಶುತ್ವದಲ್ಲಿ ಇರದೆ ಪರಾಧೀನದಲ್ಲಿರುವುದರಿಂದ ದೂಷಿಸಲ್ಪಡುವುದೆಂಬ ತತ್ವವಾಗಿರುವುದು. ತ್ರಿಶಿರನ ತತ್ವವೇನೆಂದರೆ—ಜನನವಾದ ಶಿಶುವಿಗೆ ಪ್ರಥಮದಲ್ಲಿ ಕುಳಿತುಕೊಳ್ಳಲು ಮತ್ತು ನಿಲ್ಲಲು ಆಗುವುದಿಲ್ಲ. ಕಾರಣವೇನೆಂದರೆ ರುಂಡ ಮುಂಡ ಮತ್ತು ಪಾದಗಳು ಒಂದಕ್ಕೊಂದು ಸೇರಿರುವುದು ಬಲಪಟ್ಟಿರುವುದಿಲ್ಲ. ಆದುದರಿಂದ ಈ ಮೂರೂ ಬೇರೆ ಬೇರೆ ಪ್ರಧಾನವಾಗಿರುವುದೇ ತ್ರಿಶಿರನ ತತ್ವವಾಗಿರುತ್ತವೆ. ಬುದ್ಧಿ ವೃತ್ತಿಯ ಪ್ರಸರಣೆಯಿಂದ ಸೇರುವಿಕೆಯು ಬಲಪಟ್ಟು ಮಕ್ಕಳಿಗೆ ಕತ್ತು ನಿಲ್ಲುತ್ತಾ ಬರು ತ್ತದೆ. ಅನಂತರ ಕುಳಿತುಕೊಳ್ಳುವುದೂ ತದನಂತರ ನಿಂತುಕೊಳ್ಳುವ ಸರಳತ್ವವೂ ಬರುತ್ತದೆ. ಈ ತತ್ವಾರ್ಥವೇ ಶ್ರೀರಾಮನು ತ್ರಿಶಿರನನ್ನು ನಿಗ್ರಹಮಾಡಿದ್ದಾಗಿರುತ್ತದೆ.

ಇಂತಹ ಜಡಸ್ವಭಾವರಾದ ಖರ ದೂಷಣ ತ್ರಿಶಿರರೆಂಬ ರಾಕ್ಷಸರನ್ನು ಶ್ರೀರಾಮನು ಅಗಸ್ತ್ಯದತ್ತ ಬಾಣದಿಂದ ಕೊಂದನೆಂದರೆ—ಜನನವಾದ ಶಿಶುವಿನ ಬುದ್ಧಿವೃತ್ತಿಯು ಪ್ರಾಣಶಕ್ತಿಯೊಡನೆ ಕಲೆತು ಕರ್ಮೇಂದ್ರಿಯಗಳಲ್ಲಿದ್ದ ಜಡತ್ವವನ್ನು ನಿರ್ಮೂಲವಮಾಡಿ ತೆಂಬ ತತ್ವಾರ್ಥವಾಗಿರುವುದು. ಅಲ್ಲದೆ ಹದಿನಾಲ್ಕುಸಾವಿರ ರಾಕ್ಷಸಸೈನ್ಯವೆಂದರೆ, ಹದಿ ನಾಲ್ಕು ಲೋಕಗಳ ತತ್ವವಾದ ದೇಹದಲ್ಲಿರುವ ತಮೋಗುಣದ ಜಡತ್ವವನ್ನು ಬುದ್ಧಿ ವೃತ್ತಿಯು ಪ್ರಾಣಶಕ್ತಿಯೊಡನೆ ಕಲೆತು ನಿವಾರಣೆಮಾಡುತ್ತ ಬರುವುದೆಂಬ ತಾತ್ಪರ್ಯ ವಾಗಿರುತ್ತದೆ.

**ರಾ||** ಶ್ರೀರಾಮನು ಖರ ದೂಷಣಾದಿಗಳೊಡನೆ ಯುದ್ಧಮಾಡುವಾಗ ಲಕ್ಷ್ಮಣನು ಸೀತಾದೇವಿಯನ್ನು ರಕ್ಷಿಸಿಕೊಂಡು ತಟಸ್ಥನಾಗಿದ್ದನು.

**ತತ್ವ||** ಕರ್ಮೇಂದ್ರಿಯಗಳಿಗಿದ್ದ ಜಡತ್ವವನ್ನು ಬುದ್ಧಿವೃತ್ತಿರೂಪವಾದ ಜ್ಞಾನ ವಾಹಿನಿಯು ಅನ್ನಮಯಕೋಶವಾದ ಸ್ಥೂಲದೇಹದಲ್ಲಿ ಪ್ರಸರಣೆಮಾಡಿ ಸ್ಫುರಣೆಮಾಡು ವುದು. ಬುದ್ಧಿವೃತ್ತಿಯಿಂದ ಜಡತ್ವ ನಿವಾರಣೆಯಾದನಂತರ ಮನಸ್ಸು ಕರ್ಮೇಂದ್ರಿಯ ಗಳಿಗೆ ಪ್ರೇರಕವಾಗಿ ಕಾರ್ಯಪ್ರವರ್ತನೆ ಮಾಡಲು ಅರ್ಹತೆ ಬರುವುದರಿಂದ ಲಕ್ಷ್ಮಣನು ಶುದ್ಧಸತ್ವಗುಣವನ್ನು ಕಾಪಾಡಿಕೊಂಡು ತಟಸ್ಥನಾಗಿದ್ದುದಾಗಿರುತ್ತದೆ.

ಶ್ರೀರಾಮಾದಿಗಳು ಅಯೋಧ್ಯೆಯಿಂದ ಹೊರಟಾರಭ್ಯ ಇದುವರೆಗಿನ ಕಥೆಯ ಮುಖ್ಯಸಾರಾಂಶವೇನೆಂದರೆ—ಶಿಶುವಿಗೆ ಪ್ರಾರಂಭವಾದ ಬುದ್ಧಿಮನಸ್ಸಿನ ವೃತ್ತಿಗಳು ಆನಂದಮಯಕೋಶದಿಂದಲೂ ಸ್ಫುರಣೆಮಾಡಿಕೊಂಡು ಬಂದು ಅನ್ನಮಯಕೋಶವಾದ ಸ್ಥೂಲದೇಹದಲ್ಲಿ ನಿಂತುವು. ಈಗ ಅನ್ನಮಯಕೋಶವೆಂದರೆ ಸ್ಥೂಲದೇಹದಲ್ಲಿ ಕರ್ಮೇಂ ದ್ರಿಯಗಳು ಸ್ಫುರಣೆಯಾಗಿ ದೇಹವೆಲ್ಲಾ ಪ್ರಪಂಚವ್ಯಾಪಾರಕ್ಕೆ ಸಿದ್ಧವಾಗುತ್ತ ಬಂದಿತು. ಅಂದರೆ ಒಂದು ಕಬ್ಬಿಣದ ಗುಂಡಿನಲ್ಲಿ ಬೆಂಕಿಯು ಪ್ರವೇಶಮಾಡಿ ಹೇಗೆ ಆ ಗುಂಡಿನ ಕಬ್ಬಿಣವನ್ನೆಲ್ಲ ವ್ಯಾಪಿಸುವುದೋ ಹಾಗೆ ಬುದ್ಧಿಮನಸ್ಸಿನ ವೃತ್ತಿಗಳೂ ಮತ್ತು ಪಂಚಕೋ ಶಗಳ ಪ್ರಕೃತಿಯ ಕಾರ್ಯವೂ ಒಂದಕ್ಕೊಂದು ಕಲೆತು ಅಭೇದವಾಗಿರುವಂತೆ ತೋರುತ್ತ ಬಾಹ್ಯವ್ಯಾಪಾರಕ್ಕೆ ದೇಹವು ಸಿದ್ಧವಾದರೂ ಜನನವಾದ ಶಿಶುಗಳಿಗೆ ದೇಹದಿಂದ ಹೊರಗಿ ರುವ ವಿಷಯಾದಿಗಳ ವ್ಯಾಪಾರಗಳಿನ್ನೂ ಪ್ರಾರಂಭವಾಗಿಲ್ಲ. ಪ್ರಪಂಚವ್ಯವಹಾರದಲ್ಲಿರುವ ನಮಗೆ ಈ ಕೋಶಸ್ವರೂಪಗಳನ್ನು ವಿಮರ್ಶೆಮಾಡಿ ತಿಳಿಯುವವರೆಗೆ ಅವುಗಳಲ್ಲಿನ ಭೇದವು ಗೊತ್ತಾಗುವುದಿಲ್ಲ.

ಶ್ರೀಮದ್ರಾಮಾಯಣದ ಇದುವರೆಗಿನ ಕಥಾಸಂದರ್ಭಗಳ ತತ್ವಗಳೇನೆಂದರೆ— ಬುದ್ಧಿಮನಸ್ಸಿನ ವೃತ್ತಿಗಳು ಶುದ್ಧಸತ್ವಗುಣದೊಡನೆಂದರೆ, ಶುದ್ಧಸತ್ವಾಪತ್ತಿಯಲ್ಲಿಯೇ ದೇಹದೊಳಗೆ ಮಾತ್ರ ವ್ಯಾಪ್ತಿಯಾಗುತ್ತ ಇಂದ್ರಿಯಗೋಳಕಗಳನ್ನು ಸ್ಫುರಣೆಮಾಡಿ ಕೊಂಡು ಬಂದಿರುವುವೇ ವಿನಾ ಬಾಹ್ಯಪದಾರ್ಥಗಳ ವಿಷಯಾಕಾಂಕ್ಷೆಗಳಿನ್ನೂ ಉಂಟಾಗಿ ರುವುದಿಲ್ಲ. ಈ ಬಾಹ್ಯವಿಷಯಾಕಾಂಕ್ಷೆಯು ಉದಯವಾಗಬೇಕಾದರೆ ಅವಿದ್ಯೆಯ ಆವ ರಣ ವಿಕ್ಷೇಪ ಶಕ್ತಿಗಳ ಸಂಪರ್ಕವು ಅವಶ್ಯಕವಾಗಿರುವುದು. ಆವರಣ ವಿಕ್ಷೇಪ ಶಕ್ತಿಗಳಲ್ಲಿ ಆವರಣದ ತತ್ವವೇನೆಂದರೆ—ಬಾಹ್ಯವಿಷಯಾದಿಗಳೇ ಸತ್ಯವೆಂಬ ಮತ್ತು ಅದನ್ನು ಅನು ಭವಿಸಬೇಕೆಂಬ ಮೋಹವನ್ನುಂಟುಮಾಡುವುದೇ ಭ್ರಾಂತಿಸ್ವರೂಪದ ಕಾರ್ಯವಾಗಿರುವುದು. ವಿಷಯವಾಸನೆಯನ್ನು ತಂದೊಡ್ಡುವುದೂ ಇಂದ್ರಿಯಗೋಳಕಗಳಲ್ಲಿ ವ್ಯಾಪ್ತಿಯಾಗಿ

ಅಂತಃಕರಣವನ್ನು ಬಾಹ್ಯವ್ಯಾಪಾರಕ್ಕೆಳೆಯುವುದೂ ವಿಕ್ಷೇಪಶಕ್ತಿಯ ಕಾರ್ಯಗಳಾಗಿರುವುವು. ಈ ಆವರಣ ವಿಕ್ಷೇಪಶಕ್ತಿಗಳ ತತ್ವದವರಾದ ರಾಕ್ಷಸರು ಹೊಸದಾಗಿ ಹೊರಗಿನಿಂದ ಬಂದು ಪ್ರಾಣಿಗಳನ್ನು ಬಾಹ್ಯವ್ಯಾಪಾರಕ್ಕೆಳೆಯುವುದಿಲ್ಲ. ಬೀಜದ ಮೊಳಕೆಯಲ್ಲಿ ಗಿಡದ ತತ್ವವೆಲ್ಲಾ ಅಡಗಿದ್ದು ಕ್ರಮೇಣ ಉದ್ಬೋಧವಾಗುತ್ತ ಬರುವ ರೀತಿಯಲ್ಲಿ ವ್ಯಷ್ಟಿದೇಹಗಳ ಸೃಷ್ಟಿಯಲ್ಲಿಯೇ ಸರ್ವವೂ ಅಡಗಿದ್ದು ಕಾಲೋಚಿತವಾಗಿ ಉದಯವಾಗುತ್ತವೆ. ಅಂದರೆ ಜನನವಾದ ಶಿಶುಗಳಿಗೆ ಬಾಹ್ಯವಸ್ತುಗಳಲ್ಲಿ ಮೋಹ ಹುಟ್ಟಿ ಅವನ್ನು ಅನುಭವಿಸಬೇಕೆಂಬ ಇಚ್ಛೆಬರುವುದೇ ಅವಿದ್ಯೆಯ ಕಾರ್ಯೋದಯವಾಗಿರುತ್ತದೆ. ಮುಂದಿನ ಪ್ರಕರಣಗಳಲ್ಲಿ ಅವಿದ್ಯೆಯ ಕಾರ್ಯೋದಯವಾಗಿ ಬುದ್ಧಿ ಮನಸ್ಸುಗಳಿಗೆಂದರೆ ಪ್ರತಿಬಿಂಬಚೈತನ್ಯನಿಗೆ ಪ್ರಪಂಚವ್ಯವಹಾರರೂಪವಾದ ಜೀವನೆನಿಸುವ ಬಂಧನವು ಬರುವ ವಿಚಾರವು ತಿಳಿಸಲ್ಪಡುತ್ತದೆ.

## ೮ನೆಯ ಪ್ರಕರಣ

**ಶ್ರೀರಾಮನು ಮಾಯಾಜಿಂಕೆಯ ಸ್ವರೂಪನಾದ ಮಾರೀಚನನ್ನು ಹಿಂಬಾಲಿಸಿದುದು.**



**ತಮೋಗುಣದ ಆವರಣದಿಂದ ಉಂಟಾಗುವ ಭ್ರಾಂತಿಸ್ವರೂಪದ ವಿಚಾರ.**

**ಸಾ||** ಖರ ದೂಷಣ ತ್ರಿಶಿರಾದಿಗಳು ಶ್ರೀರಾಮನಿಂದ ಸಂಹರಿಸಲ್ಪಡಲು ಶೂರ್ಪನಖಿಯು ಲಂಕೆಗೆ ಹೋಗಿ ರಾಕ್ಷಸರಿಗೆ ರಾಜನಾಗಿ ತನಗೆ ಅಣ್ಣನಾದ ರಾವಣನಲ್ಲಿ ಮೊರೆಯಿಟ್ಟಳು. ಅಲ್ಲದೆ ರಾವಣನು ಉದ್ರೇಕಗೊಳ್ಳುವಂತೆ ಮಾತಾಡಿದುದಲ್ಲದೆ ಸೀತಾದೇವಿಯ ರೂಪಾತಿಶಯಗಳನ್ನು ಹೊಗಳಿ ಅವಳನ್ನು ಅಪಹರಿಸಿಕೊಂಡು ಬರುವಂತೆ ಪ್ರೇರಿಸಿದಳು. ಅಕಂಪನನೆಂಬ ರಾಕ್ಷಸನೂ ರಾವಣನನ್ನು ಪ್ರೇರಿಸಿದನು.

**ತತ್ವ||** ಶೂರ್ಪನಖಿಯು ಉದರಕಾರ್ಯದ ತತ್ವದವಳೆಂದು ಹಿಂದೆ ತಿಳಿಸಿತಷ್ಟೆ! ಶೂರ್ಪನಖಿಯ ಗೋಳಿನಿಂದ ರಾವಣನು ಉದ್ರಿಕ್ತನಾಗಿ ಸೀತಾಪಹರಣಕ್ಕೆ ಪ್ರಯತ್ನ ಮಾಡಿದಂತೆ ಶಿಶುಗಳಲ್ಲಿ ಉದರಕಾರ್ಯ ನಿಮಿತ್ತವಾಗಿಯೇ ಬಾಹ್ಯವ್ಯಾಪಾರ ಪ್ರಾರಂಭವಾಗುವುದೆಂಬ ತತ್ವವಾಗಿರುವುದು. ಸೀತಾಪಹರಣಕ್ಕೆ ಶೂರ್ಪನಖಿಯು ಹೇಗೆ ಕಾರಣಳೋ ಹಾಗೆ ಬಾಹ್ಯವ್ಯಾಪಾರದ ಸಕಲಾನರ್ಥಗಳಿಗೂ ಹೊಟ್ಟೆಯೇ ಮೂಲಕಾರಣವೆಂಬ ತತ್ವವು.

ರಾವಣನು ಅಕಂಪನನಿಂದಲೂ ಪ್ರೇರಿತನಾದನೆಂದರೆ—ನೀಚರು ಕಾರ್ಯದಲ್ಲಿ ನಿರ್ಭಯದಿಂದ ಪ್ರಯತ್ನಮಾಡುವರಷ್ಟೆ! ಇದರಂತೆ ನಿರ್ಭಯದ ಸ್ವರೂಪದಲ್ಲಿರುವ ನೀಚರ ಪ್ರೇರಣೆಯಂತೆ ಅವಿದ್ಯಾಕಾರ್ಯವಾದ ಬಾಹ್ಯವ್ಯಾಪಾರವು ಜನನವಾದ ಶಿಶುಗಳಲ್ಲಿ ಪ್ರಾರಂಭವಾಗುವುದೆಂಬ ತತ್ವವಾಗಿರುವುದು.

ರಾವಣನಿಗೆ ರಾಜಧಾನಿಯಾದ ಲಂಕೆಯು ನಮ್ಮ ದೇಹದಲ್ಲಿ ಯಾವ ತತ್ವದಲ್ಲಿರುವು ದೆಂದರೆ—ಅವಿದ್ಯಾಸ್ವರೂಪಕ್ಕೆ ರಾಜಧಾನಿಯಾದ ಸ್ಥಳವು ನಮ್ಮ ದೇಹದಲ್ಲಿ ಭೂಲೋಕ ಅಥವಾ ಭೂತತತ್ವವಾಗಿರುವ ಮೂಲಾಧಾರಚಕ್ರ ಪ್ರದೇಶವು. ಮೂಲಾಧಾರಚಕ್ರ ಪ್ರದೇಶವು ಅವಿದ್ಯೆಯೆಂದರೆ ಪ್ರಪಂಚವ್ಯಾಪಾರಕ್ಕೆ ಪ್ರಧಾನವಾದುದು. ಹೇಗೆಂದರೆ—ಓಂಕಾರ ದಲ್ಲಿನ ಅಕಾರ, ಉಕಾರ, ಮಕಾರಗಳೇ ವಿಶ್ವ ತೈಜಸ ಪ್ರಾಜ್ಞಗಳೆನಿಸುವುವು. ಓಂಕಾರ ದಲ್ಲಿನ ಅಕಾರವೆಂದರೆ ವಿಶ್ವಕ್ಕೆ ಪ್ರಧಾನಸ್ಥಳವು ಮೂಲಾಧಾರಚಕ್ರ. ಮೂಲಾಧಾರದಲ್ಲಿ ಅಕಾರವಿರುವುದೆಂಬುದಕ್ಕೆ ಅಗಸ್ತ್ಯಾಶ್ರಮ ಪ್ರಕರಣದಲ್ಲಿ ಶ್ರುತ್ಯಾಧಾರವನ್ನು ಕೊಟ್ಟಿದೆ. ಮುಂದೆ ಯುದ್ಧಕಾಂಡನಲ್ಲಿಯೂ ಈ ವಿಚಾರದ ಶ್ರುತಿಪ್ರಮಾಣಗಳು ಬಂದಿರುವುವು. ಆದುದರಿಂದ ವಿಶ್ವವೆಂದರೆ ಪ್ರಪಂಚವ್ಯವಹಾರಜ್ಞಾನ ಮತ್ತು ಕಾರ್ಯಗಳು ಮೂಲಾಧಾರ ಚಕ್ರ ಪ್ರದೇಶದ ಶಕ್ತಿಯಿಂದುಂಟಾಗುವುವು. ಆದಕಾರಣ ನಮ್ಮಲ್ಲಿ ಅವಿದ್ಯೆಗೆ ರಾಜಧಾನಿಯು ಮೂಲಾಧಾರಚಕ್ರ ಪ್ರದೇಶವು ಅಂದರೆ ಮೂಲಾಧಾರಚಕ್ರದಲ್ಲಿರುವ ಅವಿದ್ಯಾ ಶಕ್ತಿಗಳಿಂದ ಬಾಹ್ಯವ್ಯಾಪಾರವುಂಟಾಗುತ್ತದೆ.

ಲಂಕೆಯೆಂದರೂ ಅವಿದ್ಯೆಯೆಂದು ಶಿವಸಹಸ್ರನಾಮ ಭಾಷ್ಯದಲ್ಲಿ ಅರ್ಥವಿರುವುದು. ಈ ಅವಿದ್ಯೆಯ ಪಂಗಡದಲ್ಲಿ ರಾವಣನು ರಜೋಗುಣದ ಚೈತನ್ಯನಾಗಿಯೂ ಕುಂಭ ಕರ್ಣನು ತಮೋಗುಣದ ಚೈತನ್ಯನಾಗಿಯೂ ವಿಭೀಷಣನು ಮಲಿನಸತ್ವಗುಣದ ಚೈತನ್ಯ ನಾಗಿಯೂ ಇರುತ್ತಾರೆ. ಹೀಗೆ ಹೋಲಿಸಿರುವುದನ್ನು ಯುದ್ಧಕಾಂಡದಲ್ಲಿ ವಿವರಿಸಿರು ವುದು. ಪ್ರಪಂಚವೇ ಸತ್ಯವೆಂಬ ಭ್ರಾಂತಿಯನ್ನುಂಟುಮಾಡಿ ವಿಷಯವ್ಯಾಪಾರಾಭಿ ಮುಖವಾಗಿ ನಡೆಸುವುದಕ್ಕೆ ರಜೋಗುಣ ತಮೋಗುಣಗಳೆರಡೂ ಕಾರಣವಾದರೂ ತಮೋಗಣವು ಜಡಸ್ವರೂಪವಾದುದರಿಂದ ರಜೋಗುಣಚೈತನ್ಯನಾದ ರಾವಣನೇ ರಾಜನು.

**ರಾ||** ರಾವಣನು ಸೀತೆಯನ್ನು ಅಪಹರಿಸಿಕೊಂಡು ಬರಲು ಮಾರೀಚನ ಸಹಾಯ ವಿಲ್ಲದೆ ಸಾಧ್ಯವಿಲ್ಲದಿರಲು ಅವನ ಸಹಾಯವನ್ನು ಅಪೇಕ್ಷಿಸಿದನು. ಮಾರೀಚನು ಹಿಂದೆ ವಿಶ್ವಾಮಿತ್ರರ ಯಜ್ಞದ ಸಂದರ್ಭದಲ್ಲಿ ಶ್ರೀರಾಮನಿಂದ ಪರಾಜಿತನಾಗಿದ್ದುದನ್ನು ನೆನೆದು ಈ ಕಾರ್ಯಕ್ಕೆ ಸಹಾಯಮಾಡಲು ಸಮ್ಮತಿಸಲಿಲ್ಲ. ರಾವಣನ ಬಲವಂತವು ಅಧಿಕವಾಗಲು ಶ್ರೀರಾಮನಿಂದ ಹತನಾದರೂ ತನಗೆ ಶ್ರೇಯಸ್ಸೆಂದು ತಿಳಿದು ರಾವಣನ ಇಷ್ಟವನ್ನು ಪೂರ್ಣಮಾಡಲು ಒಪ್ಪಿಕೊಂಡನು.

**ತತ್ವ||** ರಾವಣನು ವಿಕ್ಷೇಪಶಕ್ತಿಯ ತತ್ವದವನಾಗಿರುತ್ತಾನೆ. ಮಾರೀಚನು ತಮೋಗುಣದ ಭ್ರಾಂತಿ ಅಥವಾ ಮೋಹಾವರಣಶಕ್ತಿಯ ತತ್ವದವನಾಗಿರುತ್ತಾನೆ. ಪ್ರಾಣಿ ಗಳನ್ನು ಪ್ರಪಂಚವ್ಯಾಪಾರೋನ್ಮುಖರನ್ನಾಗಿ ಮಾಡಲು ತಮೋಗುಣದ ಮೋಹಾವರಣ

ಶಕ್ತಿಯ ಸಹಾಯವಿಲ್ಲದೆ ರಜೋಗುಣಚೈತನ್ಯ ಅಥವಾ ವಿಕ್ಷೇಪಶಕ್ತಿಯಿಂದಲೇ ಸಾಧ್ಯ ವಿಲ್ಲ. ಇದರ ಕಾರಣವನ್ನು ಈ ಪ್ರಕರಣವಲ್ಲಿಯೇ ಮುಂದೆ ವಿವರಿಸಿದೆ. ಆದುದರಿಂದ ರಜೋಗುಣದ ತತ್ವದವನಾದ ರಾವಣನು ಮಾರೀಚನ ಸಹಾಯವನ್ನು ಅಪೇಕ್ಷಿಸಿದನು. ಆವರಣಶಕ್ತಿಯ ತತ್ವದವನಾದ ಮಾರೀಚನು ವಿಶ್ವಾಮಿತ್ರರ ಯಜ್ಞದ ಸಂದರ್ಭದಲ್ಲಿ ಎಂದರೆ-ಈಶ್ವರಸೋಪಾನದಲ್ಲಿ ತಮೋಆವರಣವು ಇರಕೂಡದೆಂಬ ತತ್ವವನ್ನು ಅನು ಸರಿಸಿ ಪರಾಜಿತನಾಗಿದ್ದುದಾಗಿರುತ್ತಷ್ಟೆ! ವಿಶ್ವಾಮಿತ್ರರ ಯಜ್ಞಸಂದರ್ಭದಲ್ಲಿ ಯಾವ ಶ್ರೀರಾಮನು ಮಾರೀಚನನ್ನು ಓಡಿಸಿದ್ದನೋ ಅದೇ ಶ್ರೀರಾಮಚಂದ್ರನೇ ಈಗಲೂ ಬಂದಿರುವನೆಂದರೆ—ಈಶ್ವರ ಜೀವ ಚೈತನ್ಯರಿಗೆ ಭೇದವಿಲ್ಲವೆಂಬ ಮತ್ತು ಪ್ರತಿಬಿಂಬ ಚೈತನ್ಯವೊಂದೇ ಎಂಬ ತತ್ವವನ್ನು ಪ್ರತಿಪಾದನೆಮಾಡುವುದು. ಭ್ರಾಂತಿ ಅಥವಾ ಮೋಹಾವರಣವು ಮಿಥ್ಯಾಸ್ವರೂಪವಾದುದರಿಂದ ಎಂದಿಗಾದರೂ ಸತ್ಸ್ವರೂಪದಿಂದ ನಾಶಹೊಂದುವ ತತ್ವವನ್ನನುಸರಿಸಿ ಮಾರೀಚನು ರಾವಣನ ಇಷ್ಟವನ್ನು ಪೂರ್ಣ ಮಾಡಲು ಒಪ್ಪಿದ್ದಾಗಿರುತ್ತದೆ.

**ರಾ||** ರಾವಣನು ಮಾರೀಚನನ್ನು ಒಪ್ಪಿಸಿ ಅವನೊಡನೆ ಪಂಚವಟಿಗೆ ಬಂದನು. ಮಾರೀಚನು ನಾನಾವಿಧ ರತ್ನಗಳಿಂದ ಕೆತ್ತಲ್ಪಟ್ಟಂತೆ ಥಳಥಳಾಯಮಾನವಾದ ಪ್ರಕಾಶ ವುಳ್ಳ ಅತಿವಿಚಿತ್ರವಾದ ಮೃಗರೂಪವನ್ನು ತಾಳಿ ಕ್ಷಣಮಾತ್ರದಲ್ಲಿ ಅರಣ್ಯವೆಲ್ಲ ಕಂಗೊಳಿ ಸುವಂತೆ ಮಾಡುತ್ತ ಶ್ರೀರಾಮನ ಆಶ್ರಮಪ್ರದೇಶಕ್ಕೆ ಬಂದನು. ಆಶ್ರಮಪ್ರದೇಶದಲ್ಲಿ ಸಂಚರಿಸುತ್ತಿರುವ ವಿಚಿತ್ರವಾದ ಜಿಂಕೆಯನ್ನು ಸೀತಾದೇವಿಯು ಕಂಡು ಅದನ್ನು ಹೊಂದಬೇಕೆಂಬ ಇಚ್ಛೆಯುಳ್ಳವಳಾಗಿ ತಂದುಕೊಡುವಂತೆ ಶ್ರೀರಾಮನನ್ನು ಪ್ರಾರ್ಥಿಸಿ ದಳು. ಶ್ರೀರಾಮನು ಸೀತಾದೇವಿಯ ಇಷ್ಟವನ್ನು ಅನುಮೋದಿಸಿ ಮಾಯಾಜಿಂಕೆಯ ಸ್ವರೂಪನಾದ ಮಾರೀಚನನ್ನು ಹಿಂಬಾಲಿಸಿ ಹೊರಟನು.

**ತತ್ವ||** ಸೀತಾದೇವಿಗೆ ಮಾಯಾಜಿಂಕೆಯಲ್ಲಿ ಇಚ್ಛೆಹುಟ್ಟುವುದು ಅನ್ನಮಯ ಕೋಶದ ಪ್ರಕೃತಿಯ ವಿಕಾರಕ್ಕೆ ಸೇರಿರುತ್ತದೆ. ಅಂದರೆ ಸೀತಾದೇವಿಯು ಶುದ್ಧಸತ್ವ ಗುಣ ಅಥವಾ ಶುದ್ಧಸತ್ವಪ್ರಧಾನಮಾಯೆಯಾಗಿ ಸೂಕ್ಷ್ಮವಾಗಿರುವ "ನಾನು" ಎಂಬ ನಿರ್ಮಲಜ್ಞಾನದ ತತ್ವದವಳಷ್ಟೆ! ಇಂತಹ ಜ್ಞಾನವು ಬುದ್ಧಿಯ ಪ್ರತಿಬಿಂಬಚೈತನ್ಯ ದೊಡನೆ ಕೋಶಗಳಲ್ಲಿ ವರ್ತಿಸಿಕೊಂಡು ಕೊನೆಯದಾದ ಅನ್ನಮಯಕೋಶಕ್ಕೆ ಬಂದಿರು ವುದೇ ಸೀತಾದೇವಿಯು ಶ್ರೀರಾಮನೊಡನೆ ಪಂಚವಟಿಯಲ್ಲಿರುವುದಾಗಿದೆ. ಇಂತಹ ನಾನು ಎಂಬ ನಿರ್ಮಲಜ್ಞಾನವು ಅನ್ನಮಯಕೋಶದ ಪ್ರಕೃತಿಯ ವಿಕಾರವಾದ ವಿಷಯ ಮೋಹದಿಂದ ಆಚ್ಛಾದಿಸಲ್ಪಡುವುದೇ ಸೀತಾದೇವಿಗೆ ಜಿಂಕೆಯಲ್ಲಿ ಇಚ್ಛೆ ಹುಟ್ಟಿದುದು.

ಅಂದರೆ—ಶಿಶುವಿನಲ್ಲಿ ಆನಂದಮಯಕೋಶ ಮೊದಲಗೊಂಡು ಅನ್ನಮಯ ಕೋಶದವರೆಗೂ ಬಹಿರ್ವ್ಯಾಪಾರಕ್ಕೆ ಬೇಕಾದ ಸಲಕರಣೆಗಳೆಲ್ಲ ಸ್ಫುರಣೆಯಾಗಿ ಕಾರ್ಯಾರಂಭಕ್ಕೆ ಸಿದ್ಧವಾಗಿರುತ್ತಷ್ಟೆ! ಬುದ್ಧಿಮನಸ್ಸಿನ ವೃತ್ತಿಗಳಿಂದ ಸ್ಫುರಣೆಯಾದ ಜ್ಞಾನೇಂದ್ರಿಯಗಳ ಮೂಲಕ ಪ್ರಪಂಚದ ಪದಾರ್ಥಗಳ ವೀಕ್ಷಣೆ ಬರುತ್ತದೆ. ಬಾಹ್ಯ ಪದಾರ್ಥಗಳ ವೀಕ್ಷಣೆಯುಂಟಾಗುವಿಕೆಯೇ ಸೀತಾರಾಮರು ಐಂದ್ರಜಾಲಿಕವಾದ ಜಿಂಕೆಯನ್ನು ನೋಡಿದುದರ ತತ್ವ. ಶಿಶುಗಳಿಗೆ ಪದಾರ್ಥಗಳ ಮೇಲೆ ಬಿದ್ದ ವೀಕ್ಷಣೆಯೇ ಕ್ರಮೇಣ ತಮೋಗುಣದ ಮೋಹಾವರಣದಿಂದ ಆವರಿಸಲ್ಪಟ್ಟು ಮಾಯಾಜಿಂಕೆಯ ಸ್ವರೂಪನಾದ ಮಾರೀಚನಂತೆ ಪ್ರಪಂಚದ ಪದಾರ್ಥಗಳು ಇಂದ್ರಜಾಲಸ್ವರೂಪದಂತೆ ಇದ್ದರೂ ಪ್ರಪಂಚದ ಪದಾರ್ಥಗಳೇ ಸತ್ಯವೆಂದು ಮೋಹವುಂಟಾಗುತ್ತದೆ. ಕಪ್ಪೆಯ ಚಿಪ್ಪಿನಲ್ಲಿ ಬೆಳ್ಳಿಯ ಭ್ರಾಂತಿಯುಂಟಾಗುವಂತೆ ಈ ಮೋಹಾವರಣದಿಂದ ಪ್ರಪಂಚವು ರಮ್ಯವಾಗಿ ಕಂಡು ಸತ್ಯತ್ವವು ದೃಢವಾಗುತ್ತದೆ. ಮೋಹಾವರಣದಿಂದ ಮಿಥ್ಯವಾದದ್ದು ಸತ್ಯವಾಗಿಯೂ ರಮಣೀಯವಾಗಿಯೂ ಕಾಣುವ ತತ್ವವೇ ಸೀತಾರಾಮರಿಗೆ ಮಾಯಾ ಜಿಂಕೆಯು ನಿಶ್ಚಯವಾದ ಜಿಂಕೆಯೆಂದು ತೋರಿದ್ದಾಗಿರುತ್ತದೆ.

ಜನನವಾದ ಶಿಶುಗಳಿಗೆ ಪ್ರಪಂಚವೇ ಸತ್ಯವೆಂಬ ಭ್ರಾಂತಿಯನ್ನುಂಟುಮಾಡಿದ ಮೋಹಾವರಣವೇ ಪ್ರಪಂಚದ ಪದಾರ್ಥಗಳನ್ನು ತಾನನುಭವಿಸಬೇಕೆಂಬ ಇಚ್ಛೆಯನ್ನೂ ಉಂಟುಮಾಡುವುದು. ಈ ತತ್ವವೇ ಸೀತಾದೇವಿಯು ಮೃಗವನ್ನು ಅಪೇಕ್ಷಿಸಿದುದು ಮತ್ತು ಶ್ರೀರಾಮನು ಮೃಗವನ್ನು ಹಿಡಿಯಲು ಹೊರಟುದಾಗಿರುವುದು.

ಅಂದರೆ ಪರಮಾತ್ಮನ ಪ್ರತಿಬಿಂಬಚೈತನ್ಯ ಸ್ವರೂಪನಾದ ಶ್ರೀರಾಮನು ಬುದ್ಧಿ ತತ್ವದಲ್ಲಿರುವುದರಿಂದ ಪ್ರಕೃತಿಸ್ವರೂಪವಾದ ವೃತ್ತಿಯು ಬಾಹ್ಯವ್ಯಾಪಾರದಲ್ಲಿಯಾಗಲಿ ಅಂತರ್ವ್ಯಾಪಾರದಲ್ಲಿಯಾಗಲಿ ಯಾವ ಯಾವ ವಿಧಗಳಲ್ಲಿ ಪ್ರವರ್ತಿಸುವುದೋ ಆಯಾಯ ವೃತ್ತಿಗಳ ಜೊತೆಯಲ್ಲಿ ತಾದಾತ್ಮ್ಯದಿಂದ ಪ್ರಕಾಶಪಡಿಸುವುದರಿಂದ ಬುದ್ಧಿತತ್ವದಲ್ಲಿರುವ ಶ್ರೀರಾಮನು ಮಾರೀಚನನ್ನು ಹಿಂಬಾಲಿಸಿ ಹೊರಟನೆಂದರೆ—ಬುದ್ಧಿವೃತ್ತಿ (ಜ್ಞಾನ ವ್ಯಾಪ್ತಿ)ಯು ಪ್ರಪಂಚದ ವಿಷಯಗಳನ್ನು ಹುಡುಕಿಕೊಂಡು ಹೊರಟಿತೆಂಬ ತಾತ್ಪರ್ಯ ವಾಗಿರುತ್ತದೆ. ಅಂದರೆ ಜನನವಾದ ಶಿಶುಗಳಿಗೆ ವಿಷಯಗಳನ್ನು ಹುಡುಕಿಕೊಂಡು ಹೋಗುವ ಜ್ಞಾನೋದಯವಾಯಿತೆಂಬ ತಾತ್ಪರ್ಯವಾಗಿರುತ್ತದೆ.

**ರಾ||** ಮಾಯಾಜಿಂಕೆಯ ಸ್ವರೂಪನಾಗ ಮಾರೀಚನು ದೊರಕುವಂತೆ ಹತ್ತಿರ ಹತ್ತಿರ ಬರುತ್ತ ಕೈಗೆ ಸಿಕ್ಕದೆ ದೂರ ದೂರಕ್ಕೆ ಓಡುತ್ತ ತನ್ನನ್ನು ಬಿಡದೆ ಹಿಂಬಾಲಿಸಿ ಬಂದ ಶ್ರೀರಾಮನನ್ನು ಬಹಳ ದೂರ ಎಳೆದುಕೊಂಡು ಹೋದನು.

**ತತ್ವ||** ಶ್ರೀರಾಮನು ಮಾರೀಚನನ್ನು ಹಿಂಬಾಲಿಸಿ ಹೊರಟನೆಂದರೆ—ಶಿಶುವಿನ ಬುದ್ಧಿವೃತ್ತಿಯಲ್ಲಿ ಪ್ರಪಂಚದ ವಿಷಯಗಳನ್ನು ಹುಡುಕಿಕೊಂಡು ಹೋಗುವ ಜ್ಞಾನೋದಯವಾಯಿತೆಂದು ಮೇಲೆ ತಿಳಿಸಿತಷ್ಟೆ! ಹೀಗೆ ವಿಷಯಗಳನ್ನು ಹುಡುಕಿಕೊಂಡು ಹೋಗುವ ಪ್ರಥಮ ಜ್ಞಾನವು ಪ್ರಾರಂಭವಾದರೆ, ಶ್ರೀರಾಮನು ಮಾರೀಚನನ್ನು ಹಿಂಬಾಲಿಸಿ ಹೊರಟಂತೆ ಬುದ್ಧಿಯ ಜ್ಞಾನವು ವಿಷಯಗಳನ್ನು ಹಿಂಬಾಲಿಸಿಕೊಂಡು ಹೋಗುತ್ತಲೇ ಇರುವುದು. ಅಪೇಕ್ಷಿಸಿದ ವಿಷಯವಾದರೋ ಕೈಗೆ ಸಿಕ್ಕುವಂತೆ ಇದ್ದುಕೊಂಡು ಕೈಗೆ ದೊರಕದಿರುವುದು. ಈ ರೀತಿಯಾಗಿ ಜನನವಾದ ಶಿಶುಗಳಲ್ಲಿನ ಬುದ್ಧಿ ವೃತ್ತಿಯನ್ನು ವಿಷಯರೂಪವಾದ ಮೋಹವು ಎಳೆದುಕೊಂಡು ಹೋಗುತ್ತಲೇ ಇರುತ್ತದೆ. ಬುದ್ಧಿಯ ಜ್ಞಾನವೂ ವಿಷಯಗಳನ್ನು ಹಿಂಬಾಲಿಸಿಕೊಂಡೇ ಹೋಗುತ್ತಿರುವುದು. ಈ ವಿಷಯಾನ್ವೇಷಣೆಯ ಜ್ಞಾನವು ಜನನವಾದ ಕೂಡಲೆ ಪ್ರಾರಂಭವಾದದ್ದು ಜನ್ಮಾಂತ್ಯದ ವರೆಗೂ ಹೋಗುವುದಿಲ್ಲ. ಮಾಯಾಜಿಂಕೆಯ ಸ್ವರೂಪನಾದ ಮಾರೀಚನನ್ನು ಶ್ರೀರಾಮನು ಹಿಂಬಾಲಿಸಿಕೊಂಡು ಹೋಗುತ್ತಿರುವನಷ್ಟೆ! ಮರುಮರೀಚಿಕೆಯ ತತ್ವದಲ್ಲಿರುವವನೇ ಮಾರೀಚನು. ಮರುಮರೀಚಿಕೆಯೆಂದರೆ -- ದೂರದಲ್ಲಿ ಬಿಸಿಲನ್ನೇ ನೀರೆಂದು ಭ್ರಾಂತಿಗೊಂಡು ಅಂತಹ ನೀರನ್ನು ಕುಡಿಯಲು ಹೋಗುವ ತತ್ವ. ಇದರಂತೆಯೇ ಜನಗಳು ಸುಖವನ್ನು ಪಡೆಯುತ್ತೇವೆಂದು ವಿಷಯಗಳನ್ನು ಹಿಂಬಾಲಿಸಿಕೊಂಡು ಹೋಗುತ್ತಿರುವರು.

ಲಕ್ಷ್ಮಣನು ಶ್ರೀರಾಮನಿಗೆ ಜಿಂಕೆಯು ಮಾಯಾರಾಕ್ಷಸನೆಂದು ಹೇಳಿದರೂ ಶ್ರೀರಾಮನು ಜಿಂಕೆಯನ್ನು ಹಿಂಬಾಲಿಸಿದ ತತ್ವದಂತೆ ಜನಗಳಿಗೆ ಪ್ರಪಂಚವು ಮಿಥ್ಯವೆಂದು ತಿಳಿದೂ ತಿಳಿದೂ ಭ್ರಾಂತಿಸ್ವರೂಪವಾದ ಮೋಹಾವರಣದಿಂದ ಬದ್ಧರಾಗಿ ಹಿಂಬಾಲಿಸುತ್ತಿರುವರು. ಇದೇ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕ ಚೂಡಾಮಣಿ ೧೧೬ನೆಯ ಶ್ಲೋಕದಲ್ಲಿ,

ಪ್ರಜ್ಞಾವಾನಪಿಪಂಡಿತೋಪಿಚತುರೋಪ್ಯತ್ಯಂತಸೂಕ್ಷ್ಮಾರ್ಥದೃ |
ಗ್ವ್ಯಾಲೀಢಸ್ತಮಸಾನವೇತ್ತಿಬಹುಧಾಸಂಬೋಧಿತೋಪಿಸ್ಫುಟಂ ||
ಭ್ರಾಂತ್ಯಾರೋಪಿತಮೇವ ಸಾಧುಕಲಯತ್ಯಾಲಂಬತೇತದ್ಗುಣಾ |
ಹಂತಾ ಸೌಪ್ರಬಲಾ ದುರನ್ತತಮಸಃ ಶಕ್ತಿ ರ್ಮಹತ್ಯಾವೃತಿಃ ||

ತಾ|| ಎಷ್ಟೇ ಪ್ರಜ್ಞಾವಂತನಾಗಿರಲಿ, ಪಂಡಿತನಾಗಿರಲಿ, ಸಮರ್ಥನಾಗಿರಲಿ, ದೂರ ದೃಷ್ಟಿಯುಳ್ಳವನಾಗಿರಲಿ, ತಮೋಗುಣದಿಂದ ವ್ಯಾಪ್ತನಾದವನಿಗೆ ಸ್ಪಷ್ಟವಾಗಿ ಎಷ್ಟು ವಿಧವಾಗಿ ತಿಳಿಯಹೇಳಿದಾಗ್ಯೂ, ವಸ್ತುಸ್ವರೂಪವು ಗೊತ್ತಾಗುವುದಿಲ್ಲ. ಭ್ರಾಂತಿಯಿಂದ ಆರೋಪಿತವಾದ ವಸ್ತುವನ್ನೇ ನಿಜವಾದದ್ದೆಂದು ನಂಬುತ್ತಾನೆ. ಅದರ ಗುಣಗಳನ್ನೇ

ಅವಲಂಬಿಸುತ್ತಾನೆ. ಅಯ್ಯೋ ! ಈ ಅಪಾರವಾದ ತಮೋಗುಣದ ಪ್ರಬಲವಾದ ಆವರಣಶಕ್ತಿಯು ದುರನ್ತವಾದದ್ದಲ್ಲವೆ? ಎಂಬದಾಗಿ ಹೇಳಿರುವರು.

ಈ ರೀತಿ ಪ್ರಪಂಚಾಭಿಮುಖವಾಗಿ ಬುದ್ಧಿವೃತ್ತಿಯು ಹೋಗುವಿಕೆಯೇ ಭ್ರಾಂತಿಯೆನಿಸಿಕೊಳ್ಳುತ್ತದೆ. ಯಥಾರ್ಥವಲ್ಲದ ಜ್ಞಾನಕ್ಕೆ ಭ್ರಾಂತಿಯೆಂದು ಹೆಸರು. ಅಂದರೆ ಮಿಥ್ಯವಾದುದನ್ನು ಸತ್ಯವಾಗಿ ತಿಳಿದುಕೊಂಡು ಪ್ರವರ್ತಿಸುವುದಕ್ಕೆ ಭ್ರಾಂತಿ ಎಂದು ಹೆಸರು. ಹೇಗೆಂದರೆ ಸ್ಥೂಲದೇಹವು ನಾನಲ್ಲದಿದ್ದರೂ ಸ್ಥೂಲದೇಹವೇ ನಾನೆಂದು ಪ್ರವರ್ತಿಸುತ್ತಿರುವುದು ಭ್ರಾಂತಿಯು. ಹಾಗೆಯೇ ದೇಹದಂತೆ ಪ್ರಪಂಚವೂ ಮಿಥ್ಯವಾದುದಾದರೂ ಸತ್ಯವೆಂದು ತಿಳಿದು ವಿಷಯಾದಿಗಳಲ್ಲಿ ಪ್ರವರ್ತಿಸುವುದೂ ಭ್ರಾಂತಿಯು. ಈ ಎರಡು ಸ್ವರೂಪಗಳೂ ಭ್ರಾಂತಿಯಾಗಿರುತ್ತದೆ. ಈ ವಿಧವಾದ ಭ್ರಾಂತಿಯೇ ಪ್ರಪಂಚ ವ್ಯವಹಾರದ ಬಂಧನಕ್ಕೆ ಮೂಲಕಾರಣ. ನಿದ್ರೆಮಾಡುವ ಕಾಲದಲ್ಲಿ ನಾನು ಎಂಬ ಜ್ಞಾನಕ್ಕೆ ತೋರಿಕೆ ಇರುವುದಿಲ್ಲವಾದುದರಿಂದ ಯಾವುದೂ ಇಲ್ಲದಂತೆ ತೋರುವುದು. ಜಾಗ್ರತ್ಕಾಲಬಂದರೆ ಭ್ರಾಂತಿಯಿದ್ದೇ ಇರುವುದು. ಈ ಜಾಗ್ರತ್ಕಾಲದಲ್ಲಿಯೇ ಸುಳ್ಳಾದುದನ್ನು ನಿಶ್ಚಯವೆಂದು ತಿಳಿಯುವ ಭ್ರಾಂತಿ ಹುಟ್ಟುವುದು. ಈ ರೀತಿಯಾಗಿ ತಿಳಿದುಕೊಳ್ಳುವಂತೆ ಮಾಡುವುದೇ ಮೋಹಸ್ವರೂಪವಾದ ಆವರಣಶಕ್ತಿ. ಇದೇ ಅರ್ಥಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೧೧೫ನೆಯ ಶ್ಲೋಕದಲ್ಲಿ,

> ಏಷಾವೃತಿರ್ನಾಮ ತಮೋಗುಣಸ್ಯ ।
> ಶಕ್ತಿರ್ಯಯಾವ ಸ್ತ್ವವಭಾಸತೇನ್ಯಥಾ ॥
> ಸೈಷಾನಿದಾನಂ ಪುರುಷಸ್ಯ ಸಂಸೃತೇ ।
> ರ್ವಿಕ್ಷೇಪಶಕ್ತೇಃ ಪ್ರವಣಸ್ಯ ಹೇತುಃ ॥

ತಾ॥ ಈ ತಮೋಗುಣದ ಶಕ್ತಿಗೆ ಆವರಣವೆಂದು ಹೆಸರು. ಈ ಆವರಣದಿಂದ ವಸ್ತುವು ತನ್ನ ನಿಜಸ್ವರೂಪಕ್ಕಿಂತಲೂ ಬೇರೆಯಾಗಿ ಕಾಣುವುದು. ಪುರುಷನ ಸಂಸಾರಕ್ಕೆ ಇದೇ ಆದಿಕಾರಣವಾಗಿದೆ. ವಿಕ್ಷೇಪಶಕ್ತಿಯೆಂದರೆ ಕಾರ್ಯಪ್ರವರ್ತನೆಗೂ ಇದೇ ಕಾರಣಭೂತವಾದುದು ಎಂದು ಹೇಳಿರುವರು.

ಮೇಲೆ ಹೇಳಿರುವ ಶ್ರೀಶಂಕರಭಗವತ್ಪಾದರವರ ಶ್ಲೋಕದಲ್ಲಿನ ತಮೋಗುಣದ ಮೋಹ ಅಥವಾ ಆವರಣಶಕ್ತಿ ಸ್ವರೂಪನೇ ಮಾರೀಚನು. ರಜೋಗುಣದ ಚೈತನ್ಯ ಅಥವಾ ವಿಕ್ಷೇಪಶಕ್ತಿಯ ಸ್ವರೂಪನಾದವನೇ ರಾವಣನು. ರಾವಣನ ಇಷ್ಟಕ್ಕೆ ಸಹಾಯಕನಾಗಿ ಮಾರೀಚನು ಬಂದಿರುವನಷ್ಟೆ! ಅಂದರೆ ವಿಕ್ಷೇಪದ ಕಾರ್ಯಕ್ಕೆ ಆವರಣವು ಸಹಾಯಮಾಡಲು ಬಂದಿರುತ್ತದೆ. ವಿಕ್ಷೇಪಶಕ್ತಿಯಾದ ರಾವಣನೂ ಕಾರ್ಯೋನ್ಮುಖ

ನಾಗಿ ಆವರಣಶಕ್ತಿಯ ಜೊತೆಯಲ್ಲಿ ಬಂದು ಕಾದುಕೊಂಡಿರುವನು. ಆದರೆ ವಿಕ್ಷೇಪ ಶಕ್ತಿ ಅಥವಾ ವಾಸನಾವೃತ್ತಿಸ್ವರೂಪನಾದ ರಾವಣನ ಕಾರ್ಯಪೂರ್ಣವಾಗುವುದಕ್ಕೆ ಪ್ರಥಮ ಕರ್ತವ್ಯವು ಆವರಣಶಕ್ತಿಸ್ವರೂಪನಾದ ಮಾರೀಚನದು. ಇಂತಹ ಮಾರೀಚನು ಬಹಳ ದೂರದವರೆಗೆ ಶ್ರೀರಾಮನನ್ನು ಕರೆದುಕೊಂಡು ಹೋದನೆಂದರೆ ವಿಷಯಜ್ಞಾನದಲ್ಲಿ ಮೋಹವು ದೃಢವಾಗುವಂತೆ ಮಾಡಿತೆಂಬ ತತ್ವಾರ್ಥವಾಗಿರುತ್ತದೆ. ಹೀಗೆ ವಿಷಯಭಾವ ನೆಯು ದೃಢವಾಗುವುದೇ ಅವಿದ್ಯೆಯ ಬಂಧನವೆಂಬುದಕ್ಕೆ ಮಹೋಪನಿಷತ್ತಿನಲ್ಲಿ,

"ಪದಾರ್ಥ ಭಾವನಾದಾರ್ಢ್ಯಂ ಬಂಧ ಇತ್ಯಭಿಧೀಯತೆ"

ತಾ|| ವಿಷಯುಗಳಲ್ಲಿ ಭಾವನೆಯು ದೃಢವಾದರೆ ಬಂಧನವೆಂದು ಹೇಳಿದೆ. ಅಲ್ಲದೆ,

ಸತ್ಯತ್ವೇನ ಜಗದ್ಭಾನಂ ಸಂಸಾರಸ್ಯ ಪ್ರವರ್ತಕಂ |
ಅಸತ್ಯತ್ವೇನ ಭಾನಂತು ಸಂಸಾರಸ್ಯ ನಿವರ್ತಕಂ ||

ತಾ|| ಪ್ರಪಂಚವು ಸತ್ಯವೆಂಬ ಭಾವನೆಯಿಂದ ಸಂಸಾರದಲ್ಲಿ ಪ್ರವರ್ತನೆಯುಂಟಾ ಗುತ್ತದೆ. ಪ್ರಪಂಚವು ಅಸತ್ಯವೆಂಬ ಭಾವನೆಯಿಂದ ಸಂಸಾರವು ಬಿಡುಗಡೆಯಾಗುತ್ತ ಬರುತ್ತದೆ ಎಂದು ಆತ್ಮೋಪನಿಷತ್ತಿನಲ್ಲಿ ಹೇಳಿರುವುದು.

ಈ ಮೇಲಿನ ತತ್ವಾರ್ಥವನ್ನನುಸರಿಸಿಯೇ ಭ್ರಾಂತಿಸ್ವರೂಪನಾದ ಮಾರೀಚನು ಬುದ್ಧಿತತ್ವಸ್ವರೂಪನಾದ ಶ್ರೀರಾಮನನ್ನು ಮಿಥ್ಯಾಸ್ವರೂಪವಾದ ಪ್ರಪಂಚಜ್ಞಾನದ ಕಡೆಗೆ ಸತ್ಯತ್ವದ ತೋರಿಕೆಯನ್ನುಂಟುಮಾಡಿ ಎಳೆದುಕೊಂಡು ಹೋಗುತ್ತಿರುವನು. ಅಂದರೆ ಜನನವಾದ ಶಿಶುಗಳಲ್ಲಿ ಈ ವಿಧವಾದ ಭ್ರಾಂತಿಯಿಂದಲೇ ಅಸತ್ಯವಾದ ದೇಹ ಮತ್ತು ಪ್ರಪಂಚದ ಶಬ್ದ ಸ್ಪರ್ಶ ರೂಪ ರಸ ಗಂಧಸ್ವರೂಪವಾದ ವಿಷಯಜ್ಞಾನದಲ್ಲಿ ಸತ್ಯತ್ವದ ಭಾವನೆಯುಂಟಾಗಿ ಪ್ರವೃತ್ತಿಗೆ ಪ್ರಾರಂಭವಾಗುವುದು. ಮಾರೀಚನು ಮೋಹಾವರಣದ ತತ್ವದವನೆಂದು ಅನ್ವಯಮಾಡಿರುವುದಕ್ಕೆ ಸರಿಯಾಗಿ ಮಾರೀಚನೆಂಬ ಶಬ್ದಕ್ಕೂ, "ಮಾರ ಯತಿ ವಿವೇಕ ಮನೇನೇತಿ ಮಾರೀಚಃ" ಎಂದರೆ ಇವನಿಂದ ಯಥಾರ್ಥಜ್ಞಾನವು ವ್ಯಥೆ ಯನ್ನು ಪಡೆಯುವುದು. ಮಾರೀಚನ ತತ್ವವನ್ನು ಬೇರೊಂದು ವ್ಯುತ್ಪತ್ತಿಯಿಂದಲೂ ಅನ್ವಯಮಾಡಬಹುದು. ಹೇಗೆಂದರೆ—ಮರುಮರೀಚಿಕೆಯಂತೆ ಅಂದರೆ ಬಿಸಿಲಿನಲ್ಲಿ ದೂರದಲ್ಲಿ ನೀರು ಇದ್ದಂತೆ ಭ್ರಾಂತಿಬಂದು ನೀರನ್ನು ಕುಡಿಯಬೇಕೆಂಬ ಅಭಿಪ್ರಾಯದಿಂದ ಪ್ರಾಣಿಗಳು ಓಡಿ ಓಡಿ ಸಾಮರ್ಥ್ಯಕುಗ್ಗಿ ನೀರನ್ನು ಪಡೆಯದೆ ಹಾಳಾಗುತ್ತವೆಂದು ಅಮ ರದ ಟೀಕಿನಲ್ಲಿ ಅರ್ಥವಿದೆ. ಈ ಶಬ್ದಾರ್ಥಕ್ಕೆ ಅನುಸಾರವಾಗಿ ಬುದ್ಧಿತತ್ವಸ್ವರೂಪನಾದ ಶ್ರೀರಾಮನು ಮಾಯಾಜಿಂಕೆಯ ಹಿಂದೆ ಓಡಿ ಓಡಿ ಬಳಲಿ ಆಯಾಸಪರಿಹಾರಕ್ಕಾಗಿ ಒಂದು ಮರದ ಕೆಳಗೆ ಕುಳಿತುಕೊಂಡಿರುವುದಾಗಿದೆ. ಅಂದರೆ ಪ್ರಪಂಚವ್ಯಾಪಾರವೇ ಸುಖ

ವೆಂದು ವಿಷಯಕಾಂಕ್ಷಿಗಳಾಗಿ ಹಿಂಬಾಲಿಸುತ್ತಿರುವರು. ಆ ವಿಷಯಗಳ ದೆಸೆಯಿಂದ ಎಷ್ಟು ಕಷ್ಟಗಳನ್ನು ಅನುಭವಿಸಿದರೂ ತಮೋಗುಣದ ಆವರಣಶಕ್ತಿಯ ಪ್ರಭಾವದಿಂದ ವಿಷಯಗಳಲ್ಲಿ ಮುಳುಗುವುದನ್ನು ಬಿಡುವುದಿಲ್ಲ. ಇದೇ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೧೪೩ನೆಯ ಶ್ಲೋಕದಲ್ಲಿ,

ಮಹಾ ಮೋಹಗ್ರಾಹ ಗ್ರಸನಗಲಿತಾ ತ್ಮಾವಗಮನೋ|
ಧಿಯೋ ನಾನಾವಸ್ಥಾಂ ಸ್ವಯಮಭಿನಯಂ ಸ್ತದ್ಗುಣತಯಾ ||
ಅಪಾರೇ ಸಂಸಾರೇ ವಿಷಯವಿಷಪೂರೇ ಜಲನಿಧೌ |
ನಿಮಜ್ಜ್ಯೋನ್ಮಜ್ಜ್ಯಾ ಯಂ ಭ್ರಮತಿ ಕುಮತಿಃ ಕುತ್ಸಿತಗತಿಃ ||

ತಾ|| ತಮೋಗುಣದ ಆವರಣಕ್ಕೆ ಒಳಪಟ್ಟ ಆತ್ಮನು ಪ್ರಬಲವಾದ ಭ್ರಾಂತಿಯೆಂಬ ಮೊಸಳೆಯ ನುಂಗುವಿಕೆಯಿಂದ ತನ್ನ ಸ್ವರೂಪಜ್ಞಾನವನ್ನು ಕಳೆದುಕೊಳ್ಳುವನು. ಆಗ ಆತ್ಮಗುಣವೇ ಶರೀರ ಮತ್ತು ವಿಷಯಾದಿಗಳಲ್ಲಿರುವುದೆಂಬ ಭಾವನೆಯಿಂದ ಬುದ್ಧಿಯ ಬಗೆ ಬಗೆಯಾದ ಅವಸ್ಥೆಗಳನ್ನು ನಟಿಸುತ್ತ ವಿಷಯಗಳೆಂಬ ಪ್ರವಾಹವುಳ್ಳ ಅಪಾರವಾದ ಸಂಸಾರವೆಂಬ ಸಮುದ್ರದಲ್ಲಿ ಮುಳುಗಿದವನಾಗಿ ವಿವೇಕವಿಲ್ಲದೆ ಅಲೆಯುತ್ತಾನೆ ಎಂದು ಹೇಳಿರುವರು.

ಆದುದರಿಂದ ಮಾರೀಚನ ತತ್ವದಲ್ಲಿರುವ ತಮೋಗುಣದ ಭ್ರಾಂತಿಯೆಂದರೆ ಮೋಹಾವರಣವು ಜನನವಾದ ಕೂಡಲೆ ಪ್ರಾಣಿಗಳನ್ನು ಬಂಧಿಸಿರುತ್ತದೆ. ಈ ತಾತ್ಪರ್ಯಕ್ಕೆ ಶ್ರೀಕೃಷ್ಣಪರಮಾತ್ಮನು ಕೂಡ ಭಗವದ್ಗೀತೆ ೭ನೆಯ ಅಧ್ಯಾಯದಲ್ಲಿ,

ಇಚ್ಛಾ ದ್ವೇಷ ಸಮುತ್ಥೇನ ದ್ವಂದ್ವಮೋಹೇನ ಭಾರತ |
ಸರ್ವಭೂತಾನಿ ಸಂಮೋಹಂ ಸರ್ಗೇಯಾಂತಿ ಪರಂತಪ ||

ತಾ|| ಬೇಕು ಬೇಡವೆಂಬ ಭಾವನೆಗಳಿಂದ ಆದ ಸುಖ ದುಃಖ ಮೊದಲಾದ ದ್ವಂದ್ವಗಳಿಗೆ ಮರುಳಾಗಿ ಸಮಸ್ತ ಪ್ರಾಣಿಗಳೂ ಹುಟ್ಟುವಾಗಲೇ ಮೋಹಕ್ಕೆ ಒಳಗಾಗುವರು ಎಂದು ಹೇಳಿರುವನು.

ಮಾರೀಚನು ಜಿಂಕೆಯೆಂದರೆ ಮೃಗರೂಪವನ್ನು ತಾಳಿ ಬಂದ ತತ್ವವೇನೆಂದರೆ ಮೃಗವೆಂದರೆ "ಮೃಗ್ಯಂತ ಇತಿ ಮೃಗಾಃ ಮೃಗ ಅನ್ವೇಷಣೆ" ಹುಡುಕುವುದು ಎಂಬದಾಗಿ ಅಮರದ ಟೀಕಿನಲ್ಲಿ ಅರ್ಥವಿದೆ. ಆದುದರಿಂದ ಬುದ್ಧಿತತ್ವದಲ್ಲಿರುವ ಶ್ರೀರಾಮನಿಗೆ ಮೃಗತೃಷ್ಣೆಯುಂಟಾಯಿತೆಂದರೆ-ಜನನವಾದ ಶಿಶುವಿಗೆ ಪ್ರಪಂಚರೂಪವಾದ ವಿಷಯಗಳನ್ನು ಹುಡುಕುವುದರಲ್ಲಿ ಜ್ಞಾನವುಂಟಾಯಿತೆಂಬ ತತ್ವಾರ್ಥವಾಗಿರುವುದು.

**ರಾ||** ಶ್ರೀರಾಮನು ಮಾಯಾಜಿಂಕೆಯ ಸ್ವರೂಪನಾದ ಮಾರೀಚನನ್ನು ಎಷ್ಟೇ ಹಿಂಬಾಲಿಸಿ ಹೋದರೂ ಅದು ದೊರಕದೆ ಹೋದುದರಿಂದ ಕೋಪ ಬಂದು ಜಿಂಕೆಯನ್ನು ಕೊಂದು ಚರ್ಮವನ್ನಾದರೂ ತೆಗೆದುಕೊಂಡು ಹೋಗೋಣವೆಂದು ಬಾಣಪ್ರಯೋಗಮಾಡಿದನು.

**ತತ್ವ||** ವಿಷಯಾದಿಗಳ ಆಕಾರವಾಗಿ ಬುದ್ಧಿಯ ಜ್ಞಾನವು ಪ್ರವಹಿಸುತ್ತಿರುವುದೇ ಶ್ರೀರಾಮನು ಮಾರೀಚನನ್ನು ಹಿಂಬಾಲಿಸಿ ಹೋದುದಾಗಿರುತ್ತದೆ. ವಿಷಯಾಕಾರವಾಗಿ ಹೋಗುತ್ತಿದ್ದ ಬುದ್ಧಿಯ ಜ್ಞಾನವು ಹೇಗಾದರೂ ಮಾಡಿ ವಿಷಯವನ್ನು ಕಾರ್ಯತಃ ಅನುಭವಿಸಬೇಕೆಂಬ ಜ್ಞಾನವು ಶಿಶುವಿನಲ್ಲಿ ಉದಯವಾಗುವಿಕೆಯ ತತ್ವವೇ ಶ್ರೀರಾಮನಿಗೆ ಕೋಪ ಬಂದು ಬಾಣಪ್ರಯೋಗಮಾಡಿದುದಾಗಿರುತ್ತದೆ. ಹೇಗೆಂದರೆ, ಜನನವಾದ ಶಿಶುಗಳಿಗೆ ಪ್ರಥಮದಲ್ಲಿ ಪದಾರ್ಥಗಳನ್ನು ನೋಡುವುದು ಮುಂತಾದ ಹೊರಗಿನ ಪದಾರ್ಥಜ್ಞಾನದಿಂದ ಅವನ್ನು ತಾವು ಹೇಗಾದರೂ ಮಾಡಿ ಪಡೆಯ ಬೇಕೆಂಬ ಜ್ಞಾನವು ಕೂಡ ಉದಯವಾಗುತ್ತದೆ. ಅನಂತರ ಪದಾರ್ಥಗಳನ್ನು ಹೊಂದ ಬೇಕೆಂಬ ಜ್ಞಾನವು ವಿಕಲ್ಪರೂಪದ ಪರಿಣಾಮಕ್ಕೆ ತಿರುಗುವುದೆಂದರೆ ಕರ್ಮೇಂದ್ರಿಯ ಗಳ ವ್ಯಾಪಾರಪ್ರಾರಂಭವಾಗಿ ಶಿಶುವು ಅಂಬೆಗಾಲಿಟ್ಟುಕೊಂಡು ಅಥವಾ ನಡೆದುಕೊಂಡು ಉದ್ದಿಷ್ಟವಾದ ಪದಾರ್ಥಗಳನ್ನು ಪಡೆಯಲು ಪ್ರಾರಂಭಿಸುತ್ತದೆ. ಶಿಶುಗಳಿಗೆ ಉದಯ ವಾದ ಪದಾರ್ಥಜ್ಞಾನವು ಪದಾರ್ಥಗಳನ್ನು ಕಾರ್ಯದಿಂದ ಸಾಧಿಸಿ ಕೊಂಚ ಫಲವನ್ನಾದರೂ ಹೊಂದಬೇಕೆಂಬ ಜ್ಞಾನೋದಯವಾಗುವಿಕೆಯೇ ಶ್ರೀರಾಮನು ಮಾಯಾಜಿಂಕೆಯನ್ನು ಕೊಂದು ಚರ್ಮವನ್ನಾದರೂ ತೆಗೆದುಕೊಂಡು ಹೋಗೋಣವೆಂದು ಬಾಣಪ್ರಯೋಗ ಮಾಡಿದುದಾಗಿರುತ್ತದೆ. ಉದ್ದಿಷ್ಟವಾದ ಪದಾರ್ಥವನ್ನು ಹೊಂದಲೇಬೇಕೆಂಬ ಜ್ಞಾನವು ಶಿಶುವಿಗೆ ದೃಢವಾಗುವ ತತ್ವವೇ ಶ್ರೀರಾಮನಿಗೆ ಹುಟ್ಟಿದ ಕೋಪದ ತತ್ವವಾಗಿರುವುದು.

ಮುಖ್ಯತಾತ್ಪರ್ಯವೇನೆಂದರೆ—ಭ್ರಾಂತಿ ಅಥವಾ ಮೋಹಾವರಣವು ಜನನವಾದ ಶಿಶುಗಳನ್ನು ಪ್ರಪಂಚವ್ಯಾಪಾರಜ್ಞಾನದ ಬಂಧನದಲ್ಲಿ ಕಟ್ಟಿಹಾಕುತ್ತ ಬರುವ ತತ್ವಗಳನ್ನು ಮಾರೀಚನ ಪ್ರಕರಣವು ತಿಳಿಸುವುದು. ಬುದ್ಧಿವೃತ್ತಿಯಲ್ಲಿ ಉದಯವಾದ ಪದಾರ್ಥಜ್ಞಾನ ಮತ್ತು ಪದಾರ್ಥಗಳನ್ನು ಪಡೆಯಬೇಕೆಂಬ ಸಂಕಲ್ಪಗಳು ಕ್ರಮೇಣ ಕರ್ಮೇಂದ್ರಿಯಗಳ ಮೂಲಕ ಕಾರ್ಯಪ್ರಾರಂಭವಾಗುವ ವಿಕಲ್ಪದ ಪರಿಣಾಮವನ್ನು ಹೊಂದುವುವು. ಈ ವಿಕಲ್ಪದ ಕಾರ್ಯವುಂಟಾಗುವ ರೀತಿಯನ್ನು ತಿಳಿದುಕೊಳ್ಳಲು ಮುಂದಿನ ಪ್ರಕರಣವನ್ನು ಪ್ರಾರಂಭಮಾಡೋಣ. ಅವಿದ್ಯಾಸ್ವರೂಪವಾದ ಭ್ರಾಂತಿ ಮತ್ತು ಬಂಧನಗಳನ್ನು ತಿಳಿದು ಕೊಳ್ಳಲು ಮುಂದಿನ ಎರಡು ಪ್ರಕರಣಗಳನ್ನೂ ಈ ಪ್ರಕರಣದ ತತ್ವಗಳೊಡನೆ ಸಮನ್ವಯ ಮಾಡಿಕೊಂಡರೆ ಅವಿದ್ಯಾಬಂಧನದ ಸ್ವರೂಪವು ಚೆನ್ನಾಗಿ ಮುಂದಟ್ಟಾಗುವುದು.

## ೮ನೆಯ ಪ್ರಕರಣ.

ಮಾರೀಚನನ್ನು ಹಿಂಬಾಲಿಸಿ ಹೋದ ಶ್ರೀರಾಮನನ್ನು ಲಕ್ಷ್ಮಣನು ಹಿಂಬಾಲಿಸಿದನಂತರ ರಾವಣನು ಸೀತಾದೇವಿಯನ್ನು ಅಪಹರಿಸಿದುದು.

ಶುದ್ಧಸತ್ವಗುಣವು ವಿಕಲ್ಪಕ್ಕೊಳಗಾಗುವ ವಿಚಾರ. ವಿಷಯಾಧೀನವಾದ ಬುದ್ಧಿವೃತ್ತಿಯನ್ನು ಮನಸ್ಸು ಹಿಂಬಾಲಿಸುವ ವಿಚಾರ. ಮತ್ತು ರಜೋಗುಣವು ಶುದ್ಧಸತ್ವಗುಣವನ್ನು ಆಕ್ರಮಿಸುವ ವಿಚಾರ.

**ರಾ||** ಶ್ರೀರಾಮನು ಮಾಯಾಜಿಂಕೆಯ ಸ್ವರೂಪನಾದ ಮಾರೀಚನ ಮೇಲೆ ಬಾಣಪ್ರಯೋಗ ಮಾಡಿದನು. ಶ್ರೀರಾಮನ ಬಾಣಪ್ರಯೋಗದಿಂದ ಹತನಾಗುತ್ತಿದ್ದ ಮಾರೀಚನು ಲಕ್ಷ್ಮಣ ಸೀತಾದೇವಿಯರಿಗೆ ಅಗಲಿಕೆಯನ್ನುಂಟುಮಾಡಬೇಕೆಂದು ಶ್ರೀರಾಮನ ಧ್ವನಿಯಂತೆ ಹಾ! ಲಕ್ಷ್ಮಣಾ! ಹಾ! ಸೀತೇ! ಎಂದು ಕೂಗುತ್ತಾ ಪ್ರಾಣಬಿಟ್ಟನು.

**ತತ್ವ||** ಜನನವಾದ ಶಿಶುಗಳಿಗೆ ಪದಾರ್ಥಜ್ಞಾನವುಂಟಾಗುತ್ತ ಬಂದು ಅನಂತರ ಪದಾರ್ಥಗಳನ್ನು ಹೊಂದಬೇಕೆಂಬ ಜ್ಞಾನವೂ ಉದಯಿಸುತ್ತ ಬರುವುದೇ ಶ್ರೀರಾಮನು ಮಾರೀಚನನ್ನು ಕೊಲ್ಲಬೇಕೆಂದು ಮಾಡಿದ ಪ್ರಯತ್ನದ ತತ್ವವೆಂದು ಹಿಂದಿನ ಪ್ರಕರಣದಲ್ಲಿ ತಿಳಿಸಿತಷ್ಟೆ! ಶಿಶುವಿಗೆ ಇಷ್ಟವಾದ ಪದಾರ್ಥವನ್ನು ಹೊಂದಲೇಬೇಕೆಂದು ಉದಯವಾದ ಜ್ಞಾನವು ಆ ಪದಾರ್ಥಗಳನ್ನು ಹೊಂದುವ ಕಾರ್ಯದಲ್ಲಿ ಪ್ರಯತ್ನಮಾಡಲು ಭ್ರಾಂತಿಸ್ವರೂಪವಾದ ಮೋಹಾವರಣವೇ ಕಾರಣವಾಗಿರುತ್ತೆ. ಮೋಹಾವರಣವು ಕಾರ್ಯದಲ್ಲಿ ಪ್ರಯತ್ನಮಾಡುವುದಕ್ಕೆ ಮನಸ್ಸಿನ ವೃತ್ತಿಯನ್ನು ಕೂಡ ಆಕರ್ಷಣೆಮಾಡುವುದು. ಇಂದ್ರಿಯಗಳ ಮೂಲಕ ವ್ಯಾಪಾರಮಾಡುವುದಕ್ಕೆ ಮನೋವೃತ್ತಿಯು ಅವಶ್ಯಕವಾಗಿರಬೇಕು. ವಸ್ತುವನ್ನು ಪಡೆಯಬೇಕೆಂಬ ಬುದ್ಧಿಯ ಜ್ಞಾನವು ಕಾರ್ಯರೂಪವಾದ ವಿಕಲ್ಪದ ಪರಿಣಾಮಕ್ಕೆ ಪ್ರಾರಂಭವಾಗುವ ತತ್ವದ ಸೂಚನೆಯೇ ಮಾರೀಚನು ಪ್ರಾಣಬಿಡುವಾಗ "ಹಾ! ಲಕ್ಷ್ಮಣಾ ಹಾ! ಸೀತೇ" ಎಂದು ಕೂಗಿದ್ದಾಗಿರುತ್ತದೆ. ಅಂದರೆ ಭ್ರಾಂತಿಯೆಂದರೆ ಮೋಹಾವರಣವು ವಿಷಯಾದಿಗಳಲ್ಲಿನ ಜ್ಞಾನ ಮತ್ತು ವಿಷಯಾದಿಗಳನ್ನು ಹೊಂದಬೇಕೆಂಬ ಜ್ಞಾನಗಳನ್ನು ಉಂಟುಮಾಡಿಸುವುದಲ್ಲದೆ ಕಾರ್ಯಪರಿಣಾಮಕ್ಕೆ ಪ್ರಾರಂಭಮಾಡಿಸುವುದು.

ಮಾರೀಚನು ಪ್ರಾಣಬಿಡುವಾಗ ಶ್ರೀರಾಮನ ಧ್ವನಿಯಂತೆ ತನ್ನ ಧ್ವನಿಮಾಡಿಕೊಂಡು "ಹಾ! ಲಕ್ಷ್ಮಣಾ ಹಾ! ಸೀತೆ" ಎಂಬದಾಗಿ ಕೂಗಿದ ತತ್ವವೇನೆಂದರೆ— ಮೋಹಾವರಣ ಅಥವಾ ಭ್ರಾಂತಿಯೇ ಬುದ್ಧಿಯ ಜೊತೆಗೆ ಮನಸ್ಸನ್ನೂ ಎಳೆಯುವ ಶಕ್ತಿಯುಳ್ಳದ್ದಾಗಿರುತ್ತದೆ. ಅಂದರೆ ಬುದ್ಧಿಯ ಪ್ರೇರಣೆಯಿಲ್ಲದೆ ಮನಸ್ಸು ಇಂದ್ರಿಯಗಳನ್ನು ಪ್ರೇರಿಸಿಕೊಂಡು ಕಾರ್ಯರೂಪವಾಗಿ ಪರಿಣಮಿಸಲಾರದು. ಭ್ರಾಂತಿಯು ಮನಸ್ಸಿಗೆ ಉಂಟಾಗಬೇಕಾಗಿರುವ ಬುದ್ಧಿಯ ಪ್ರೇರಣೆಯನ್ನು ಬುದ್ಧಿಯೇ ಪ್ರೇರೇಪಿಸಿದಂತೆ ತಾನೇ ಮಾಡುವುದು. ಈ ತತ್ವಾರ್ಥವೇ ಶ್ರೀರಾಮನ ಧ್ವನಿಯಂತೆ ಮಾರೀಚನು ಕೂಗಿದುದು. ಅಂದರೆ ಭ್ರಾಂತಿಯು ಪ್ರಾಣಿಗಳನ್ನು ಪ್ರಪಂಚವ್ಯಾಪಾರರೂಪವಾದ ಕಾರ್ಯಕ್ಕೆ ಪ್ರಾರಂಭ ಮಾಡಿಸುವವರೆಗೂ ಬಿಡುವುದೇ ಇಲ್ಲವೆಂಬ ಮುಖ್ಯತಾತ್ಪರ್ಯವಾಗಿರುತ್ತದೆ.

**ರಾ||** ಸೀತಾದೇವಿಯು ಮಾರೀಚನ ಧ್ವನಿಯನ್ನೇ ಶ್ರೀರಾಮನ ಧ್ವನಿಯೆಂದು ತಿಳಿದು ಲಕ್ಷ್ಮಣನನ್ನು ಬಲವಂತದಿಂದ ಶ್ರೀರಾಮನಿದ್ದೆಡೆಗೆ ಕಳುಹಿಸಿ ಏಕಾಂಗಿಯಾಗಿರುವಾಗ ರಾವಣನು ಬಲಾತ್ಕಾರದಿಂದ ಆ ದೇವಿಯನ್ನು ಅಪಹರಿಸಿಕೊಂಡು ಹೋದನು.

**ತತ್ವ||** ಮನಸ್ಸಿಗುಂಟಾಗಬೇಕಾಗಿರುವ ಬುದ್ಧಿಪ್ರೇರಣೆಯನ್ನು ಭ್ರಾಂತಿಯೇ ಮಾಡಿಸುವುದೆಂದು ಮೇಲೆ ತಿಳಿಸಿತಷ್ಟೆ! ಯಾವಾಗ ಭ್ರಾಂತಿಯ ವೇಗವು ಅಧಿಕವಾಗುವುದೋ ಆಗ ಶುದ್ಧಸತ್ವಪ್ರಧಾನಮಾಯೆಯು ಕೂಡ ಅನ್ನಮಯಕೋಶದ ವಿಕಾರಕ್ಕೆ ಅಧೀನವಾಗಬೇಕಾಗುವುದು. ಅಂದರೆ ಅವಿದ್ಯೆಯ ವಿಕಾರಕ್ಕೆ ಶುದ್ಧಸತ್ವಪ್ರಧಾನ ಮಾಯೆಯೂ ಒಳಗಾಗುವ ತತ್ವವೇ ಸೀತಾದೇವಿಗೂ ಯಥಾರ್ಥ ತಿಳಿಯದೆ ಮಾರೀಚನ ಧ್ವನಿಯನ್ನೇ ಶ್ರೀರಾಮನ ಧ್ವನಿಯೆಂದು ತಿಳಿದು ಲಕ್ಷ್ಮಣನನ್ನು ಕಳುಹಿಸಿದುದು. ಅಂದರೆ ಅನ್ನಮಯಕೋಶದ ಪ್ರಕೃತಿ ಅಥವಾ ಮಲಿನಮಾಯೆಯು ಶುದ್ಧಸತ್ವಪ್ರಧಾನಮಾಯೆಯನ್ನು ಅತಿಕ್ರಮಿಸುತ್ತ ಬಂದಿತೆಂಬ ತಾತ್ಪರ್ಯವಾಗಿದೆ. ಈ ತಾತ್ಪರ್ಯವನ್ನು ಅನುಸರಿಸಿ ಮಲಿನಮಾಯೆ ಅಥವಾ ಅವಿದ್ಯೆಯಲ್ಲಿನ ಭ್ರಾಂತಿಯು ಬುದ್ಧಿಗೆ ವಿಷಯಾಕಾರವನ್ನುಂಟುಮಾಡುವುದಲ್ಲದೆ ವಿಷಯವನ್ನು ಪಡೆಯಲು ಕಾರ್ಯಕ್ಕೆ ಪ್ರಾರಂಭಮಾಡಿಸುವುದೇ ಶ್ರೀರಾಮನ ಜೊತೆಗೆ ಲಕ್ಷ್ಮಣನನ್ನೂ ಎಳೆದ ತತ್ವವಾಗಿರುವುದು.

ಸೀತಾದೇವಿಯಿಂದ ಲಕ್ಷ್ಮಣನು ಅಗಲುವುದೆಂದರೆ ಮನೋವೃತ್ತಿಯು ಕೂಡ ಇಂದ್ರಿಯಗಳನ್ನು ಪ್ರೇರಿಸಿಕೊಂಡು ಬಹಿರ್ವ್ಯಾಪಾರದ ಕಾರ್ಯೋನ್ಮುಖವಾಗುವುದೆಂಬ ತತ್ವ. ಈ ಕೆಳಗಿನ ಶ್ರುತಿವಾಕ್ಯದಿಂದ ಮೇಲಿನ ತತ್ವಗಳೆಲ್ಲ ದೃಢಪಡುವುವು. ಮಹೋಪನಿಷತ್ ಪಂಚಮಾಧ್ಯಾಯದಲ್ಲಿ,

ಬುದ್ಧಿಸ್ಸಂಕಲ್ಪಿತಾಕಾರಾ ಪ್ರಯಾತಿ ಮನನಾಸ್ಪದಂ |
ಮನೋಘನವಿಕಲ್ಪಂತು ಗಚ್ಛತೀಂದ್ರಿಯತಾಂಶನೈಃ ||

ತಾ|| ಬುದ್ಧಿಯು ಸಂಕಲ್ಪಿತ ವಸ್ತುವಿನ ಆಕಾರವಾಗಿ ಮನಸ್ಸಿನ ಆಶ್ರಯವನ್ನು ಹೊಂದುತ್ತದೆ. ಅನಂತರ ಮನಸ್ಸು ಹೆಚ್ಚಾದ ವಿಕಲ್ಪಗಳುಳ್ಳದ್ದಾಗಿ ಇಂದ್ರಿಯುಗಳನ್ನು ಪ್ರೇರಿಸಿ ಕಾರ್ಯರೂಪವಾಗಿ ಮಾಡುವುದು ಎಂದು ಹೇಳಿರುವುದು.

ಲಕ್ಷ್ಮಣನ ತತ್ವದಲ್ಲಿರುವ ಮನೋವೃತ್ತಿಗೆ ವಿಕಲ್ಪವೆಂದರೆ ಇಂದ್ರಿಯಾಧೀನವಾಗಿ ವಿಷಯಾದಿಗಳನ್ನು ಪಡೆಯುವ ಕಾರ್ಯರೂಪವಾಗುವ ತತ್ವಾರ್ಥದ ಸೂಚನೆಯೇ ಮಾರೀಚನು ಪ್ರಾಣಬಿಡುವಾಗ "ಹಾ ಲಕ್ಷ್ಮಣಾ ಹಾ ಸೀತೇ" ಎಂದು ಶ್ರೀರಾಮನ ಧ್ವನಿಯಂತೆ ಕೂಗಿದ ಮತ್ತು ಸೀತಾದೇವಿಯಿಂದ ಲಕ್ಷ್ಮಣನು ಅಗಲಿದ ತತ್ವ.

ಲಕ್ಷ್ಮಣನು ಸೀತಾದೇವಿಯನ್ನು ಬಿಟ್ಟು ಹೊರಟ ಕೂಡಲೆ ರಾವಣನು ಸೀತಾದೇವಿಯನ್ನು ಅಪಹರಿಸಿದ ತತ್ವವೇನೆಂದರೆ—ಬುದ್ಧಿವೃತ್ತಿಯು ದೇಹದಿಂದ ಹೊರಕ್ಕೆ ವಿಷಯಾಕಾರವಾಗಿ ಹೊರಟದ್ದರಿಂದ ಬುದ್ಧಿತತ್ವಕ್ಕೆಂದರೆ ಪ್ರತಿಬಿಂಬಚೈತನ್ಯನಿಗೂ ಶುದ್ಧಸತ್ವಪ್ರಧಾನವಾಯೆಗೂ ಅಗಲಿಕೆಯುಂಟಾಯಿತು. ಅಂದರೆ ಇದುವರೆಗೂ ಬುದ್ಧಿವೃತ್ತಿಯಲ್ಲಿ ನಿರ್ಮಲವಾದ ಸೂಕ್ಷ್ಮವಾದ ನಾನು ಎಂಬ ಜ್ಞಾನಸ್ವರೂಪವಾದ ಶುದ್ಧಸತ್ವಗುಣವಿತ್ತು. ಇಂತಹ ಸತ್ವಗುಣವನ್ನು ಪ್ರತಿಬಿಂಬಚೈತನ್ಯವು ಪ್ರಕಾಶಪಡಿಸುತ್ತಿತ್ತು. ಯಾವಾಗ ಬುದ್ಧಿವೃತ್ತಿಯು ಹೊರಗಿನ ವಿಷಯಾಕಾರವಾಗಿ ಹೊರಟಿತೋ ಆಗ ಪ್ರತಿಬಿಂಬಚೈತನ್ಯವು ಹೊರಗಿನ ವಿಷಯವನ್ನು ಪ್ರಕಾಶಪಡಿಸುತ್ತ ತಾನೂ ವಿಷಯಾಕಾರದ ಜೊತೆಗೆ ಹೋಗುವುದೇ ಶ್ರೀರಾಮಚಂದ್ರನು ಮಾರೀಚನನ್ನು ಹಿಂಬಾಲಿಸಿ ಹೊರಟ ತತ್ವವಾಗಿರುವುದು. ಇದೇ ಸೀತಾ ರಾಮರಿಗೆ ಅಗಲಿಕೆಯುಂಟಾದ ತತ್ವ.

ಮನಸ್ಸಿನ ವೃತ್ತಿಯು ದೇಹದಿಂದ ಹೊರಕ್ಕೆ ಪ್ರಸರಣೆಯಾಗದಿದ್ದುದರಿಂದ ಶುದ್ಧ ಸತ್ವಗುಣವು ಮನಸ್ಸಿನ ವೃತ್ತಿಯೊಡನೆ ದೇಹದಲ್ಲಿಯೇ ಇತ್ತು. ಅಂದರೆ ಸೀತಾದೇವಿಯು ಲಕ್ಷ್ಮಣನೊಡನೆ ಇದ್ದಳು. ಅವಿದ್ಯೆಯು ಮನಸ್ಸಿನ ವೃತ್ತಿಯನ್ನೂ ಬಾಹ್ಯದ ಕಾರ್ಯಗಳಿಗೆ ಎಳೆದುದರಿಂದ ಶುದ್ಧಸತ್ವಗುಣಕ್ಕೆ ನಿರಾಧಾರವುಂಟಾಯಿತು. ಅಂದರೆ ಶ್ರೀರಾಮ ಲಕ್ಷ್ಮಣರಿಬ್ಬರ ಅಗಲಿಕೆಯಿಂದ ಸೀತಾದೇವಿಯು ಏಕಾಂಗಿಯಾಗಿದ್ದುದಾಗಿದೆ. ರಜೋಗುಣಚೈತನ್ಯವೆಂದರೆ ವಿಕ್ಷೇಪಶಕ್ತಿಯು ಬುದ್ಧಿಮನಸ್ಸುಗಳನ್ನು ಹೊರಗಿನ ವಿಷಯವ್ಯಾಪಾರಕ್ಕೆ ಹೊರಡುವಂತೆ ಮಾಡಿ ಶುದ್ಧಸತ್ವಗುಣವನ್ನು ತನ್ನ ಸ್ವಾಧೀನಮಾಡಿಕೊಳ್ಳುವುದೇ ರಾವಣನು ಸೀತಾಪಹರಣಮಾಡಿದ್ದಾಗಿರುತ್ತದೆ. ಅಂದರೆ ಶುದ್ಧಸತ್ವಗುಣವನ್ನು ಆಕ್ರಮಿಸಿ ಜನನವಾದ ಶಿಶುಗಳಲ್ಲಿ ಆವರಣ ವಿಕ್ಷೇಪ ಶಕ್ತಿಗಳ ಕಾರ್ಯವಾದ ವಿಷಯವ್ಯಾಪಾರ ಪ್ರಾರಂಭವಾಯಿತೆಂಬ ತಾತ್ಪರ್ಯವಾಗಿರುತ್ತದೆ.

ಶ್ರೀರಾಮಾದಿಗಳು ಅಯೋಧ್ಯೆಯಿಂದ ಹೊರಟು ಪಂಚವಟಿಯನ್ನು ಸೇರುವ ಪರ್ಯಂತರ ಬುದ್ಧಿ ಮನಸ್ಸಿನ ವೃತ್ತಿಗಳು ದೇಹದೊಳಗೇ ಇಂದ್ರಿಯಗೋಳಕಗಳನ್ನು

ಸ್ಫುರಣೆಮಾಡಿಕೊಂಡು ಬಂದಿರುತ್ತವಷ್ಟೆ! ದೇಹದೊಳಗೆ ಬುದ್ಧಿವೃತ್ತಿಯು ಮನೋಮಯಕೋಶದಿಂದ ಇಳಿದು ಪ್ರಾಣಮಯಕೋಶಕ್ಕೆ ಬರುವಾಗಲೇ ಶುದ್ಧಸತ್ವಗುಣದ ಪ್ರಕಾಶವು ಕುಂದುತ್ತ ಬರುವುದು. ಇದೇ ತಾತ್ಪರ್ಯಕ್ಕೆ ಶ್ರೀರಾಮಾದಿಗಳು ಅಗಸ್ತ್ಯಾಶ್ರಮದಲ್ಲಿದ್ದಾಗ ಅಗಸ್ತ್ಯರು ವನವಾಸದಿಂದ ಸೀತಾದೇವಿಯಲ್ಲಿ ಬಳಲಿಕೆಯುಂಟಾಗಿರುವುದೆಂದು ಹೇಳಿರುವರು. ಸ್ಥೂಲದೇಹವಾದ ಅನ್ನಮಯಕೋಶಕ್ಕೆ ಬುದ್ಧಿವೃತ್ತಿಯು ಬಂದಾಗ ಆವರಣ ವಿಕ್ಷೇಪ ಶಕ್ತಿಗಳ ಕಾರ್ಯಗಳು ಪ್ರಾರಂಭವಾಗಿ ವಿಕ್ಷೇಪಶಕ್ತಿಯು ಶುದ್ಧಸತ್ವಗುಣವನ್ನು ಆಕ್ರಮಿಸುವುದೇ ರಾವಣನು ಸೀತಾಪಹರಣ ಮಾಡಿದ್ದಾಗಿರುತ್ತದೆ. ಅಂದರೆ ಬೂದಿಯು ಕೆಂಡವನ್ನು ಮುಚ್ಚುವಂತೆ ಜನನವಾದ ಶಿಶುಗಳಲ್ಲಿ ಶುದ್ಧಸತ್ವಗುಣದ ಪ್ರಕಾಶವನ್ನು ಮುಚ್ಚಿ ಅವಿದ್ಯೆಯ ವೈಭವವೇ ಅಧಿಕವಾಯಿತೆಂಬ ತಾತ್ಪರ್ಯ. ಆದುದರಿಂದ ಅವಿದ್ಯಾಸ್ವರೂಪವಾದ ಪ್ರಪಂಚವ್ಯಾಪಾರದಲ್ಲಿ ನಮ್ಮಲ್ಲಿ ಶುದ್ಧಸತ್ವಗುಣದ ಸೋಪಾನವು ಖಂಡಿತ ತೋರುವುದಿಲ್ಲ.

ಈ ಮೇಲಿನ ತತ್ವಾರ್ಥಗಳನ್ನು ಅನುಸರಿಸಿ ರಾವಣನು ಸೀತಾಪಹರಣಮಾಡಿದನೆಂದರೆ—ಜನನವಾದ ಶಿಶುಗಳಲ್ಲಿ ಬಾಹ್ಯವಿಷಯವ್ಯಾಪಾರವು ಪ್ರಾರಂಭವಾಯಿತೆಂಬ ತಾತ್ಪರ್ಯವಾಗಿರುವುದು. ರಾಮಾಯಣ ಕಥೆಯುಂಟಾದುದಕ್ಕೆ ರಾವಣನೇ ಮೂಲ ಪುರುಷನೆಂಬುದು ಸರ್ವರಿಗೂ ತಿಳಿದಿರುವುದಷ್ಟೆ! ಇದರಂತೆ ರಜೋಗುಣದ ಚೈತನ್ಯವೇ ಪ್ರಪಂಚವ್ಯಾಪಾರಕ್ಕೆ ಪ್ರಧಾನವಾದುದು. ಇದೇ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೧೪೩ನೆಯ ಶ್ಲೋಕದಲ್ಲಿ,

ತಿರೋಭೂತೆಸ್ವಾತ್ಮ ನ್ಯಮಲತರ ತೇಜೋವತಿ ಪುಮಾ |
ನನಾತ್ಮಾನಂ ಮೋಹಾ ದಹಮಿತಿ ಶರೀರಂ ಕಲಯತಿ ||
ತತಃ ಕಾಮ ಕ್ರೋಧ ಪ್ರಭೃತಿಭಿ ರಮುಂ ಬಂಧನಗುಣ್ಯೈಃ |
ಪರಂ ವಿಕ್ಷೇಪಾಖ್ಯಾ ರಜಸ ಉರುಶಕ್ತಿ ರ್ವ್ಯಥಯತಿ ||

ತಾ|| ತಮೋಮಯವಾದ ಆವರಣಶಕ್ತಿಯು ತೇಜೋಮಯವಾಗಿರುವ ಪರಮಾತ್ಮನಿಗೆ ಮರೆಯಾಗುತ್ತಿರಲು ಪುರುಷನು ಆತ್ಮಭಿನ್ನವಾದ ದೇಹವನ್ನೇ ನಾನು ಎಂಬದಾಗಿ ಎಣಿಸುತ್ತಾನೆ. ಅನಂತರ ವಿಕ್ಷೇಪವೆಂಬ ಹೆಸರುಳ್ಳ ರಜೋಗುಣದ ಪ್ರಬಲವಾದ ಪ್ರಧಾನಶಕ್ತಿಯು ಕಾಮ ಕ್ರೋಧ ಮೊದಲಾದ ಗುಣಗಳೆಂಬ ಪಾಶಗಳಿಂದ ಪುರುಷನನ್ನು ಬಂಧನಕ್ಕೊಳಪಡಿಸುವುದು ಎಂಬದಾಗಿ ಹೇಳಿರುವರು.

ಶ್ರೀಶಂಕರಭಗವತ್ಪಾದರವರು ಹೇಳಿರುವ ಈ ಒಂದು ಶ್ಲೋಕದ ತಾತ್ಪರ್ಯವು ಶ್ರೀರಾಮಾದಿಗಳು ಅಯೋಧ್ಯೆಯಿಂದ ಹೊರಟಾರಭ್ಯ ಸೀತಾಪಹರಣ ಪೂರಯಿಸುವ

ವರೆಗಿನ ಮುಖ್ಯತಾತ್ಪರ್ಯಗಳನ್ನೆಲ್ಲ ಸಂದೇಹವಿಲ್ಲದೆ ಒಳಗೊಂಡಿರುವುದು. ಹೇಗೆಂದರೆ ಈ ಶ್ಲೋಕದ ಪ್ರಥಮ ಪಾದದ ತಾತ್ಪರ್ಯವು ಶ್ರೀರಾಮನು ಅಯೋಧ್ಯೆಯಿಂದ ಹೊರಟ ತಕ್ಷಣವೇ ಪ್ರಥಮದಲ್ಲಿ ದಾಟದ ತಮಸಾನದಿಯ ತತ್ವದ ಮೂಲಾಜ್ಞಾನಾವರಣಶಕ್ತಿಯಾಗಿ ತೇಜೋರೂಪನಾದ ಪರಮಾತ್ಮನಿಗೆ ಮರೆಯಾದುದಕ್ಕೆ ಅನ್ವಯವಾಗುತ್ತದೆ. ಚಿತ್ರಕೂಟವೆಂದರೆ ವಿಜ್ಞಾನಮಯಕೋಶದಲ್ಲಿ ಅಹಂಕಾರದ ಉದಯವಾಗಿರುತ್ತದೆ. ಅನಂತರ ಕ್ರಮೇಣ ಅನ್ನಮಯಕೋಶಕ್ಕಿಳಿದು ರಜೋಗುಣದ ಉರುಶಕ್ತಿಯೆಂದರೆ ರಾಜನಾದ ರಾವಣನ ಪಾಶಗಳಿಂದ ಕಟ್ಟಲ್ಪಡುವುದರ ತತ್ವಗಳೆಲ್ಲಾ ಈ ಮೇಲಿನ ಶ್ಲೋಕದ ಕಡೆಯ ಮೂರು ಪಾದಗಳಲ್ಲಡಗಿರುತ್ತವೆ. ತಮೋಗುಣದ ಆವರಣಶಕ್ತಿಗಳಲ್ಲಿ ಅನೇಕ ಪ್ರಭೇದಗಳಿದ್ದರೂ ತಮಸಾನದಿಯ ತತ್ವದಲ್ಲಿರುವ ಮೂಲಾಜ್ಞಾನಾವರಣವೂ ಪ್ರಪಂಚವ್ಯಾಪಾರದ ಕಡೆಗೆ ಮೋಹವನ್ನುಂಟುಮಾಡಿ ಬಹಿರ್ವ್ಯಾಪಾರಕ್ಕೆಳೆಯುವ ಮಾರೀಚನ ತತ್ವದಲ್ಲಿರುವ ಭ್ರಾಂತಿಯೂ ಪ್ರಬಲವಾದುವಾಗಿರುತ್ತವೆ.

ರಾವಣನು ಸೀತೆಯನ್ನಪಹರಿಸಲು ಮಾರೀಚನನ್ನು ಕರೆದುಕೊಂಡು ಬಂದವನು ಮಾರೀಚನ ಕಾರ್ಯವಾಗುವ ಪರ್ಯಂತರ ಕಾದುಕೊಂಡಿದ್ದು ಸೀತೆಯನ್ನಪಹರಿಸಿದನು. ಭ್ರಾಂತಿತತ್ವದಲ್ಲಿರುವ ಮಾರೀಚನ ಕಾರ್ಯ ನಡೆಯುವುದಕ್ಕೂ ರಾವಣನೇ ಪ್ರಧಾನನಾಗಿರುವುದರಿಂದ ವಿಕ್ಷೇಪಶಕ್ತಿಯೇ ಅವಿದ್ಯೆಗೆ ರಾಜನಾಗಿರುವುದು.

ಆದುದರಿಂದ ರಜೋಗುಣ ತಮೋಗುಣಗಳೆರಡೂ ಬಾಹ್ಯವ್ಯಾಪಾರಕ್ಕೆಳೆಯಲು ಮೂಲಕಾರಣಗಳು. ಇವೆರಡರಲ್ಲಿ ಪ್ರಬಲವಾದ ರಜೋಗುಣವು ಶುದ್ಧಸತ್ವಗುಣವನ್ನು ಮುಚ್ಚಿಕೊಂಡು ಇಂದ್ರಿಯ ಮತ್ತು ಅಂತಃಕರಣದಲ್ಲಿ ತಾನೇ ಅಧಿಕಾರಮಾಡಲು ಪ್ರಾರಂಭವಾಗುವುದೇ ರಾವಣನು ಸೀತಾಪಹರಣಮಾಡಿದುದರ ತತ್ವವಾಗಿರುತ್ತದೆ. ಅಂದರೆ ಜನನವಾದ ಶಿಶುಗಳಲ್ಲಿ ಆವರಣ ವಿಕ್ಷೇಪ ಶಕ್ತಿಗಳಿಂದ ವಿಷಯಜ್ಞಾನ ಮತ್ತು ಕಾರ್ಯಗಳು ಪ್ರಾರಂಭವಾಗುವುವೆಂಬ ತಾತ್ಪರ್ಯವಾಗಿರುತ್ತದೆ.

## ೧೦ನೆಯ ಪ್ರಕರಣ.

| ರಾವಣನು ಸೀತಾದೇವಿಯನ್ನು ಲಂಕೆಯಲ್ಲಿ ಬಂಧನದಲ್ಲಿಟ್ಟು ಶ್ರೀರಾಮಲಕ್ಷ್ಮಣರನ್ನು ಬಂಧನದಲ್ಲಿಡಲು ಎಂಟು ಜನ ರಾಕ್ಷಸರನ್ನು ಕಳುಹಿಸಿದುದು. | ಭ್ರಾಂತಿಯಿಂದ ಉಂಟಾಗುವ ಬಂಧನದ ಸ್ವರೂಪ. |
|---|---|

**ರಾ||** ರಾವಣನು ಸೀತಾದೇವಿಯನ್ನು ಅಪಹರಿಸಿಕೊಂಡು ಲಂಕೆಗೆ ಹೋಗಿ ಅಶೋಕವನದಲ್ಲಿ ಬಂಧನದಲ್ಲಿಟ್ಟನು.

**ತತ್ವ||** ಬುದ್ಧಿವೃತ್ತಿಯಲ್ಲಿದ್ದ ಶುದ್ಧಸತ್ವಗುಣವನ್ನು ರಜೋಗುಣವು ಸ್ವಾಧೀನ ಪಡಿಸಿಕೊಂಡಿತೆಂದು ಹಿಂದಿನ ಪ್ರಕರಣದಲ್ಲಿ ತಿಳಿಸಿರುತ್ತದಷ್ಟೆ! ಶುದ್ಧಸತ್ವಗುಣಕ್ಕಿಂತ ರಜೋಗುಣವು ಮೇಲಾಯಿತೆಂದರೆ ಶುದ್ಧಸತ್ವಗುಣವು ರಜೋಗುಣದ ಅಧೀನದಲ್ಲಿರಬೇಕು. ಆದುದರಿಂದ ಶುದ್ಧಸತ್ವಪ್ರಧಾನಮಾಯೆಯನ್ನು ವಿಕ್ಷೇಪಶಕ್ತಿಯು ಆಕರ್ಷಣೆ ಮಾಡಿಕೊಂಡು ತನ್ನ ರಾಜಧಾನಿಯಾದ ಲಂಕೆಯಲ್ಲಿ ಬಂಧನದಲ್ಲಿರಿಸಿತೆಂದರೆ—ನಮ್ಮಲ್ಲಿರುವ ಮೂಲಾಧಾರಚಕ್ರದಲ್ಲಿ ಶುದ್ಧಸತ್ವಗುಣದ ಪ್ರಕಾಶವು ಬಂಧಿಸಲ್ಪಟ್ಟಿತೆಂಬ ತತ್ವವಾಗಿರುತ್ತದೆ. ಅಂದರೆ ಅವಿದ್ಯಾವ್ಯಾಪಾರಕ್ಕೆ ಭೂತತ್ವವಾದ ಸ್ಥೂಲದೇಹವೇ ಪ್ರಧಾನ ಸ್ಥಳ. ಇಂತಹ ಭೂತತ್ವವಾದ ಸ್ಥೂಲದೇಹಕ್ಕೆ ಪ್ರಧಾನವೆಂದರೆ ರಾಜಧಾನಿಯು "ಭೂ" ಅಥವಾ ಮೂಲಾಧಾರಚಕ್ರ ಪ್ರದೇಶವು. ಈ ಮೂಲಾಧಾರಚಕ್ರ ಪ್ರದೇಶವೇ ಲಂಕೆಯೆಂದು ಹಿಂದೆ ತಿಳಿಸಿತಷ್ಟೆ! ಲಂಕೆಯೆಂದರೆ ಅವಿದ್ಯೆಯೆಂದು ಶಿವಸಹಸ್ರನಾಮ ಭಾಷ್ಯದಲ್ಲಿ ವ್ಯುತ್ಪತ್ತಿಯಿರುವುದು. ಆದುದರಿಂದ ಅವಿದ್ಯೆಗೆ ಪ್ರಧಾನಸ್ಥಳವಾದ ಲಂಕೆಯು ತತ್ವವಾದ ಮೂಲಾಧಾರಚಕ್ರಕ್ಕೆ ಶುದ್ಧಸತ್ವಗುಣವನ್ನು ಆಕರ್ಷಣೆಮಾಡಿಕೊಂಡು ಹೋಗಿ ಬಂಧನದಲ್ಲಿಡುವ ತತ್ವವೇ ರಾವಣನು ಸೀತಾದೇವಿಯನ್ನು ತೆಗೆದುಕೊಂಡು ಹೋಗಿ ಲಂಕೆಯಲ್ಲಿ ಬಂಧನದಲ್ಲಿಟ್ಟದ್ದಾಗಿರುತ್ತದೆ.

ಮೇಲಿನ ಅಂಶಗಳ ಮುಖ್ಯತಾತ್ಪರ್ಯವೇನೆಂದರೆ—ದೇಹದೊಳಗೆ ಅನಾಹತಚಕ್ರ ಅಥವಾ ಪ್ರಾಣಮಯಕೋಶದಿಂದ ಕೆಳಕ್ಕೆ ಬುದ್ಧಿಮನಸ್ಸಿನ ವೃತ್ತಿಗಳು ಪ್ರಸರಿಸಿಕೊಂಡು ಅನ್ನಮಯಕೋಶಕ್ಕೆ ಬಂದ ಮೇಲೆ ಅವಿದ್ಯೆಯು ಬುದ್ಧಿಮನಸ್ಸುಗಳ ವೃತ್ತಿಗಳನ್ನು ದೇಹದ ಹೊರಗಿರುವ ವಿಷಯಾದಿಗಳಲ್ಲಿರುವಂತೆ ಸೆಳೆಯಿತು. ಅಲ್ಲದೆ ಶುದ್ಧಸತ್ವಗುಣವನ್ನು ಕೂಡ ದೇಹದೊಳಗೇ ತನ್ನ ಸ್ಥಳವಾದ ಮೂಲಾಧಾರಚಕ್ರಕ್ಕೆ ಆಕರ್ಷಣೆಮಾಡಿಕೊಂಡು ಹೋಗಿ ಬಂಧನದಲ್ಲಿರಿಸಿತೆಂಬ ತತ್ವಾರ್ಥವೇ ರಾವಣನು ಸೀತೆಯನ್ನು ಲಂಕೆಯಲ್ಲಿ ಬಂಧನದಲ್ಲಿಟ್ಟುದು.

**ರಾ||** ರಾವಣನು ಸೀತಾದೇವಿಯನ್ನು ಲಂಕೆಗೆ ತಂದ ತಕ್ಷಣವೇ ಶ್ರೀರಾಮ ಲಕ್ಷ್ಮಣರನ್ನು ಬಂಧನದಲ್ಲಿಟ್ಟಿರಬು ಮಹಾಪರಾಕ್ರಮಿಗಳಾದ ಮತ್ತು ಕೇವಲ ಆಪ್ತರಾದ ಎಂಟು ಜನ ರಾಕ್ಷಸರನ್ನು ಕಳುಹಿಸಿಕೊಟ್ಟನು.

**ತತ್ವ||** ರಾವಣಸ್ವರೂಪಿಯಾದ ವಿಕ್ಷೇಪಶಕ್ತಿಯು ಅಂತಃಕರಣ ಮತ್ತು ದಶೇಂದ್ರಿಯಗಳನ್ನೂ ಆಕ್ರಮಿಸಿಕೊಂಡಿತೆಂದು ಇದುವರೆಗೂ ತಿಳಿಸಿತಷ್ಟೆ! ರಾವಣನ ಹತ್ತು ತಲೆಯ ಶಕ್ತಿಗಳೇ ಹತ್ತು ಇಂದ್ರಿಯಗಳಲ್ಲಿಯೂ ಬಾಹ್ಯಕ್ಕೆ ಎಳೆಯುವ ಶಕ್ತಿಗಳಾಗಿರುತ್ತವೆ. ಅವನ ಎದೆಯಲ್ಲಿರುವ ಅಮೃತಕಲಶದ ಶಕ್ತಿಯೇ ವಿಷಯವಾಸನಾವೃತ್ತಿಯ ಶಕ್ತಿಯಾಗಿರು

ತ್ತದೆ. ಇವನ ವಿಚಾರದ ತತ್ವಗಳು ಸುಂದರ ಮತ್ತು ಯುದ್ಧಕಾಂಡಗಳಲ್ಲಿ ವಿವರವಾಗಿ ಬರುವುವು.

ಶ್ರೀರಾಮ ಲಕ್ಷ್ಮಣರನ್ನು ಬಂಧನದಲ್ಲಿಟ್ಟಿರಲು ರಾವಣನು ಕಳುಹಿಸಿಕೊಟ್ಟ ಮಹಾ ಪರಾಕ್ರಮಿಗಳಾದ ಮತ್ತು ಕೇವಲ ಆಪ್ತರಾದ ಎಂಟು ಜನ ರಾಕ್ಷಸರ ತತ್ವವೇ ರಜೋಗುಣದ ಪ್ರಬಲವಾದ ವೃತ್ತಿಯ ಶಕ್ತಿಗಳಾಗಿವೆ. ಅವಿದ್ಯೆಯ ರಾಜನಾದ ಈ ರಜೋಗುಣದ ವೃತ್ತಿಗಳೇ ವಾಸನಾವೃತ್ತಿಯೆಂದು ಕರೆಯಲ್ಪಡುವುದು. ಯಾವುದಾದರೂ ವಿಷಯ ರೂಪವಾಗಿ ಈ ವೃತ್ತಿಗಳು ಇರುವುವಲ್ಲದೆ ವಿಷಯರೂಪವಿಲ್ಲದೆ ಈ ವೃತ್ತಿಗಳು ಹುಟ್ಟುವುದೇ ಇಲ್ಲ. ನಾವು ಜನ್ಮಜನ್ಮಾಂತರಗಳಿಂದ ಕೂಡಿರಿಸಿಟ್ಟುಕೊಂಡಿರುವ ವಿಷಯವಾಸನೆಗಳಲ್ಲಿ ಈ ಜನ್ಮಕ್ಕೆ ಬೇಕಾಗುವಷ್ಟು ತೆಗೆದುಕೊಂಡು ಈ ಜನ್ಮದ ವ್ಯಾಪಾರವನ್ನು ಪ್ರಾರಂಭಮಾಡುತ್ತೇವೆ. ಆದುದರಿಂದ ಈ ಜನ್ಮದ ವ್ಯಾಪಾರಕ್ಕೆ ತೆಗೆದುಕೊಂಡಿರುವ ಜನ್ಮಾಂತರದ ವಿಷಯವಾಸನೆಗಳು ವಾಸನೆಯ ವೃತ್ತಿರೂಪಗಳಲ್ಲಿರುತ್ತವೆ. ರಾವಣನು ಶ್ರೀರಾಮ ಲಕ್ಷ್ಮಣರನ್ನು ಬಂಧನದಲ್ಲಿಟ್ಟಿರಲು ಎಂಟು ಜನ ರಾಕ್ಷಸರನ್ನು ಕಳುಹಿಸಿದನೆಂದರೆ –ಜನನವಾದ ಶರೀರಗಳಲ್ಲಿ ಜನ್ಮಾಂತರಗಳ ವಿಷಯವಾಸನೆಯ ಕಾರ್ಯವು ಪ್ರಾರಂಭವಾಯಿತೆಂಬ ತತ್ವವಾಗಿರುತ್ತದೆ. ಜನ್ಮಾಂತರದ ಈ ವಿಷಯವಾಸನೆಗಳು ರಾವಣನು ಕಳುಹಿಸಿಕೊಟ್ಟ ಎಂಟು ಜನ ರಾಕ್ಷಸರ ತತ್ವದಲ್ಲಿರುತ್ತವೆ. ಅಂದರೆ ವಾಸನಾವೃತ್ತಿಯು ಎಂಟು ಸ್ವರೂಪವಾದುದು. ಈ ಎಂಟು ಪ್ರಧಾನಶಕ್ತಿಗಳು ಯಾವುವೆಂದರೆ—ಶ್ರೀಶಂಕರ ಭಗವತ್ಪಾದರವರು ವಿವೇಕಚೂಡಾಮಣಿ ೧೧೧ನೆಯ ಶ್ಲೋಕದಲ್ಲಿ ಹೇಳಿರುವ,

> ಕಾಮ ಕ್ರೋಧೋ ಲೋಭ ದಂಭಾ ದ್ಯಸೂಯಾ ।
> ಹಂಕಾ ರೇರ್ಷ್ಯಾ ಮತ್ಸರಾ ದ್ಯಾಸ್ತು ಘೋರಾಃ ।
> ಧರ್ಮಾ ಏತೇ ರಾಜಸಾ ಪುಂಪ್ರವೃತ್ತಿ ।
> ರ್ಯಸ್ಮಾ ದೇಷಾ ತದ್ರಜೋ ಬಂಧ ಹೇತುಃ ॥

ತಾ॥ ಕಾಮ, ಕ್ರೋಧ, ಲೋಭ, ದಂಭಾ, ಅಸೂಯಾ, ಅಹಂಕಾರ, ಈರ್ಷ್ಯಾ, ಮಾತ್ಸರ್ಯಗಳೆಂಬ ಎಂಟೂ ರಜೋಗುಣ ಸಂಬಂಧವಾದ ಘೋರ ವೃತ್ತಿಗಳು. ಈ ರಜೋಗುಣಧರ್ಮದಿಂದಲೇ ಪುರುಷನು ಪ್ರಪಂಚಾಕಾರನಾಗಿ ವರ್ತಿಸುವುದರಿಂದ ಬಂಧನಕ್ಕೆ ಕಾರಣವಾಗಿದೆ.

ಈ ಮೇಲಿನ ಎಂಟು ವಿಧ ವೃತ್ತಿಗಳು ಶ್ರೀರಾಮ ಲಕ್ಷ್ಮಣರನ್ನು ಬಂಧನದಲ್ಲಿಡುವುವೆಂದರೆ—ಈ ಎಂಟು ವೃತ್ತಿಗಳ ಅನುವರ್ತಿಯಾಗಿ ಬುದ್ಧಿಮನಸ್ಸಿನ ವೃತ್ತಿಗಳಿರುವುವೆಂಬ ಮತ್ತು ಪ್ರತಿಬಿಂಬಚೈತನ್ಯನು ಇಂತಹ ವೃತ್ತಿ ಪ್ರಕಾಶಕನಾಗಿರುವನೆಂಬ ತಾತ್ಪರ್ಯ.

ಪ್ರಾಣಿಗಳನ್ನು ದೇಹವ್ಯಾಪಾರವೆಂಬ ಬಂಧನದಲ್ಲಿಟ್ಟಿರುವುದೇ ಪ್ರಧಾನರೂಪವಾದ ಈ ವೃತ್ತಿಯೆಂಬುದು ಸರ್ವರಿಗೂ ವೇದ್ಯವಾದ ವಿಷಯವೇ ಆಗಿದೆ. ಮುಖ್ಯ ತಾತ್ಪರ್ಯವೇನೆಂದರೆ, ಜನನವಾದ ಶಿಶುಗಳಿಗೆ ವಿಷಯಜ್ಞಾನ, ಮತ್ತು ವಿಷಯಗಳನ್ನು ಕಾರ್ಯತಃ ಅನುಭವಿಸುವ ವಿಕಲ್ಪಗಳು ಪ್ರಥಮದಲ್ಲಿ ಪ್ರಾರಂಭವಾಗುತ್ತವೆ. ಅನಂತರ ಜನ್ಮಾಂತರದ ವಾಸನಾವೃತ್ತಿಗಳು ಜನ್ಮಪೂರಯಿಸುವ ಪರ್ಯಂತರ ಬಿಡುವುದಿಲ್ಲ. ಕ್ಷಣಮಾತ್ರವೂ ವ್ಯವಧಾನ ಕೊಡದೆ ನೀರಿನ ಪ್ರವಾಹದೋಪಾದಿಯಲ್ಲಿ ವಿಷಯವೃತ್ತಿಗಳು ಉಂಟಾಗುತ್ತಲೇ ಇರುವುದು ಸರ್ವರಿಗೂ ತಿಳಿದ ಅಂಶವೇ ಆಗಿದೆ. ಆತ್ಮಸಾಕ್ಷಾತ್ಕಾರವಾಗುವ ಪರ್ಯಂತರ ಈ ವಾಸನಾವ್ಯಾಪಾರವು ನಾಶವಾಗಲಾರದು. ಈ ದೇಹ ಹೋದರೂ ಮತ್ತೊಂದು ದೇಹವು ವಾಸನೆಯಿಂದಲೇ ಪ್ರಾಪ್ತವಾಗುವುದು. ಆದುದರಿಂದ ಜನನವಾದ ಶಿಶುಗಳಲ್ಲಿ ಸ್ಫುರಣೆಯ ರೂಪದಲ್ಲಿ ಪ್ರಾರಂಭಿಸಿರುವ ಈ ವೃತ್ತಿಗಳ ಸ್ವರೂಪವೇ ಅವಿದ್ಯಾ ಬಂಧನದ ಸ್ವರೂಪ.

ಈ ಮೇಲಿನ ತತ್ವಾರ್ಥವನ್ನನುಸರಿಸಿ ರಾವಣನು ಪ್ರಬಲರಾದ ಎಂಟು ಮಂದಿ ರಾಕ್ಷಸರನ್ನು ಶ್ರೀರಾಮ ಲಕ್ಷ್ಮಣರನ್ನು ಬಂಧನದಲ್ಲಿಟ್ಟಿರಲು ಕಳುಹಿಸಿಕೊಟ್ಟನೆಂದರೆ— ಜನನವಾದ ಶಿಶುಗಳಲ್ಲಿ ವಿಕ್ಷೇಪಶಕ್ತಿಯು ಬುದ್ಧಿಮನಸ್ಸುಗಳಿಗೆ ವಿಷಯವಾಸನೆ ಮತ್ತು ಇಂದ್ರಿಯಗಳಲ್ಲಿ ಬಹಿರಾಕರ್ಷಣೆಯ ಬಂಧನವು ಪ್ರಾರಂಭವಾಯಿತೆಂಬ ತತ್ವವಾಗಿರುವುದು. ಬುದ್ಧಿ ಮನಸ್ಸಿನ ವೃತ್ತಿಗಳಿಗೂ ಶುದ್ಧಸತ್ವಗುಣಕ್ಕೂ ಈ ವಿಧವಾಗಿ ಬಂಧನ ಬರಲು ವಿಕ್ಷೇಪಶಕ್ತಿಯಾದ ರಜೋಗುಣವೇ ಕಾರಣವೆಂಬದಾಗಿ ಶ್ರೀಕೃಷ್ಣಪರಮಾತ್ಮನು ಕೂಡ ಭಗವದ್ಗೀತೆ ೩ನೆಯ ಅಧ್ಯಾಯ ೪೦ನೆಯ ಶ್ಲೋಕದಲ್ಲಿ,

ಇಂದ್ರಿಯಾಣಿ ಮನೋ ಬುದ್ಧಿ ರಸ್ಯಾಧಿಷ್ಠಾನ ಮುಚ್ಯತೇ |
ಏತೈ ರ್ವಿಮೋಹಯ ತ್ಯೇಷ ಜ್ಞಾನ ಮಾವೃತ್ಯ ದೇಹಿನಂ ||

ತಾ|| ಇಂದ್ರಿಯಗಳೂ, ಬುದ್ಧಿಮನಸ್ಸುಗಳೂ, ರಜೋಗುಣಸ್ವರೂಪವಾದ ವಿಷಯವ್ಯಾಪಾರಕ್ಕೆ ವಾಸಸ್ಥಾನಗಳೆಂದು ಹೇಳಲ್ಪಡುವುವು. ಈ ವಿಕ್ಷೇಪಶಕ್ತಿಯಾದ ರಜೋಗುಣವು ಶುದ್ಧಸತ್ವಗುಣವನ್ನು ಮುಚ್ಚಿಕೊಂಡು ಪ್ರಪಂಚವ್ಯಾಪಾರಾಭಿಮುಖವಾಗಿ ಎಳೆಯುತ್ತದೆ ಎಂಬದಾಗಿ ಹೇಳಿರುವನು.

ಈ ಮೇಲಿನ ತತ್ವಾರ್ಥಗಳೇ ಅವಿದ್ಯೆಯಿಂದುಂಟಾಗುವ ಬಂಧನದ ಸ್ವರೂಪವು.

**ರಾ||** ಈರೀತಿಯಾಗಿ ರಾವಣನು ಶ್ರೀರಾಮ ಲಕ್ಷ್ಮಣರನ್ನು ಬಂಧನದಲ್ಲಿಟ್ಟಿರಲು ಎಂಟು ಜನ ರಾಕ್ಷಸರನ್ನು ಕಳುಹಿಸಿಕೊಟ್ಟು ಸೀತಾದೇವಿಯನ್ನು ತನ್ನ ಅನುವರ್ತಿನಿಯನ್ನಾಗಿ ಮಾಡಿಕೊಳ್ಳಲು ಅಶೋಕವನದಲ್ಲಿ ಶಿಂಶುಪಾವೃಕ್ಷದ ಕೆಳಗೆ ಬಂಧನದಲ್ಲಿಟ್ಟನು.

**ತತ್ವ**॥ ಅಶೋಕವೆಂಬ ಶಬ್ದಕ್ಕೆ "ನಾಸ್ತಿ ಶೋಕೋ ಯಸ್ಮಿನ್ ಸ ಅಶೋಕಃ" ಎಂದರೆ ದುಃಖವಿಲ್ಲದ ಸ್ಥಳವೆಂದು ಅರ್ಥ. ಅಥವಾ ದುಃಖವಿದ್ದರೂ ಪರಿಹಾರವಾಗುವ ಸ್ಥಳವೆಂದು ಅರ್ಥ. ಶಿಂಶುಪಾವೃಕ್ಷವೆಂಬ ಶಬ್ದಕ್ಕೆ "ಶೋಕಂ ಶಿನೋತೀತಿ ಶಿಂಶುಪಃ (ಶಿ ಇಞ್ ನಿಶಾತನೆ)" ಎಂದರೆ ಶೋಕವನ್ನು ಹಾಳುಮಾಡುವ ವೃಕ್ಷವೆಂದು ಅರ್ಥವಾಗುವುದು. ಸೀತಾದೇವಿಯನ್ನು ಅಶೋಕವನದಲ್ಲಿಟ್ಟರೆ ತನ್ನ ಅನುವರ್ತಿನಿಯಾಗುವಳೆಂಬದಾಗಿ ರಾವಣನ ತಾತ್ಪರ್ಯ. ಆದುದರಿಂದ ರಾವಣನ ಇಷ್ಟಾರ್ಥಕ್ಕೆ ಮೇಲಿನ ಅಶೋಕ ಮತ್ತು ಶಿಂಶುಪಾವೃಕ್ಷಗಳ ಶಬ್ದಾರ್ಥಗಳು ಹೇಗೆ ಅನ್ವಯಿಸುವುವೆಂದರೆ—ಲಂಕೆಯು ಅವಿದ್ಯೆಯ ಪ್ರಧಾನಸ್ಥಳವೆಂದರೆ—ಪ್ರಪಂಚವ್ಯಾಪಾರವನ್ನುಂಟುಮಾಡುವ ಪ್ರಧಾನಸ್ಥಳವಾಗಿರುತ್ತದೆ. ಇಂತಹ ಪ್ರಪಂಚವ್ಯಾಪಾರಕ್ಕೆ ಪ್ರಧಾನವಾದ ಸ್ಥಳದಲ್ಲಿ ದುಃಖವನ್ನು ನಾಶಪಡಿಸುವುದೆಂದರೆ—ವ್ಯಾಪಾರವಿಲ್ಲದ ನಿತ್ಯಮುಕ್ತ ಸ್ಥಿತಿಯಾದ ಈಶ್ವರತ್ವವನ್ನು ಪಡೆಯಬೇಕೆಂಬ ದುಃಖವನ್ನು ನಾಶಪಡಿಸಿ ಪ್ರಪಂಚಮಾರ್ಗದ ಸಂತೋಷವನ್ನುಂಟು ಮಾಡುವ ಸ್ಥಳವಾಗಿದೆ. ಅಂದರೆ ಪ್ರಪಂಚವ್ಯಾಪಾರದ ಬೆಡಗಿಗೆ ಶುದ್ಧಸತ್ವಪ್ರಧಾನ ಮಾಯಯು ಬುದ್ಧಿಯಲ್ಲಿರುವ ಪ್ರತಿಬಿಂಬಚೈತನ್ಯದೊಡನೆ ತಾನಿರುವುದೆಂದರೆ ಈಶ್ವರತ್ವವನ್ನು ಮರೆತು ರಜೋಗುಣದ ಚೈತನ್ಯಾನುವರ್ತಿನಿಯಾಗಬಹುದೆಂಬ ತತ್ವಾರ್ಥವಾಗಿರುವುದೇ ಅಶೋಕವನದಲ್ಲಿಟ್ಟರೆ ಸೀತೆಯು ತನ್ನಂತೆ ಆಗುವಳೆಂದು ರಾವಣನು ನಂಬಿದ್ದುದಾಗಿರುತ್ತದೆ.

ಅಶೋಕ ಮತ್ತು ಶಿಂಶುಪಾವೃಕ್ಷಗಳ ತತ್ವಾರ್ಥವು ರಾವಣನ ಇಷ್ಟಾರ್ಥದ ತತ್ವದಂತೆ ಮೇಲೆ ವಿವರಿಸಿತು. ಇದು ಸೀತಾದೇವಿಯ ತತ್ವಕ್ಕೆ ಹೇಗೆ ಅನ್ವಯಿಸುವುದೆಂದರೆ—ಸೀತಾದೇವಿಯು ದುಃಖವಿಲ್ಲದ ಸ್ಥಳದ ತತ್ವವಾದ ಅಶೋಕವನದಲ್ಲಿಡಲ್ಪಟ್ಟಳು. ಸೀತಾದೇವಿಯನ್ನು ದುಃಖವಿಲ್ಲದ ಸ್ಥಳದಲ್ಲಿಟ್ಟದ್ದರಿಂದ ಅವಳಿಗೆ ಯಾವ ವಿಧವಾದ ದುಃಖವಿಲ್ಲವೆಂದರೆ—ರಾವಣನ ಇಷ್ಟಾರ್ಥದಂತೆ ತಾನು ಹೋಗಬೇಕೆಂಬ ದುಃಖವೇ ಉಂಟಾಗದ ಸ್ಥಳದಲ್ಲಿ ಸೀತೆಯು ಇದ್ದಳೆಂಬ ತತ್ವಾರ್ಥವು. ಅಂದರೆ ಬೆಡಗಿನಿಂದ ಬೆರಗಾಗುವಂತಹ ಯಾವ ವಿಧವಾದ ಪ್ರಪಂಚವ್ಯಾಪಾರಗಳು ನಮ್ಮಲ್ಲಿ ನಡೆಯುತ್ತಿದ್ದರೂ ಸೀತಾದೇವಿಯ ತತ್ವದಲ್ಲಿರುವ ಶುದ್ಧಸತ್ವಗುಣಕ್ಕೆಂದರೆ ನಿರ್ಮಲವಾದ ಅಖಂಡವಾದ ನಾನು ಎಂಬ ಜ್ಞಾನಕ್ಕೆ ಲೇಶವೇ ಇರುವುದಿಲ್ಲವೆಂಬ ತತ್ವಾರ್ಥವೇ ಸೀತಾದೇವಿಯು ಅಶೋಕವನದಲ್ಲಿ ವಾಸವಾಗಿದ್ದುದಾಗಿರುತ್ತದೆ.

ಆದುದರಿಂದ ಸೀತಾದೇವಿಯು ಅಶೋಕವನದಲ್ಲಿದ್ದಳೆಂದರೆ—ನಮ್ಮಲ್ಲಿ ಶುದ್ಧಸತ್ವಗುಣ ಅಥವಾ ಶುದ್ಧಸತ್ವಪ್ರಧಾನಮಾಯೆಯು ಅವಿದ್ಯಾಸ್ವರೂಪವಾದ ಪ್ರಪಂಚ

ವ್ಯಾಪಾರದ ಬಂಧನದಲ್ಲಿದ್ದರೂ ಪ್ರಪಂಚವ್ಯಾಪಾರಕ್ಕೆ ಲೇಶವೂ ಸಂಪರ್ಕವಿಲ್ಲವೆಂಬ ತತ್ವಾರ್ಥವಾಗಿರುತ್ತದೆ. ಅಂದರೆ ನಾನು ಎಂಬ ಅಖಂಡವಾದ ನಿರ್ಮಲಜ್ಞಾನವನ್ನು ಜಾಗ್ರತ್ಕಾಲದಲ್ಲಿ ವಿಜ್ಞಾನಮಯಕೋಶದ "ಶರೀರ ನಾನು" ಎಂಬ ಜ್ಞಾನವು ಕೊಂಚ ಮರೆ ಮಾಡುವುದು. ಅನಂತರ ಹೊರಗಿನ ವಿಷಯಜ್ಞಾನಗಳುದಯಿಸಿ ವಿಜೃಂಭಿಸುವುದರಿಂದ ನಾನು ಎಂಬ ಅಖಂಡವಾದ ನಿರ್ಮಲಜ್ಞಾನವು ಒಳಗಡೆ ನಿರ್ಲಿಪ್ತವಾಗಿ ಪ್ರಕಾಶಮಾಡಿ ಕೊಂಡಿದ್ದರೂ ಜಾಗ್ರತ್ಕಾಲದಲ್ಲಿ ಅಖಂಡವಾಗಿ ನಿರ್ಮಲವಾಗಿರುವ ನಾನೆಂಬ ಜ್ಞಾನದ ಸ್ಥಿತಿಯನ್ನು ಊಹಿಸಿ ತಿಳಿದುಕ್ಕೊಳ್ಳುವುದಕ್ಕೂ ಸಾಧ್ಯವಿಲ್ಲ. ಇದೇ ಸೀತಾದೇವಿಯು ರಾವಣನ ಬಂಧನದಲ್ಲಿರುವ ಸ್ವರೂಪ. ಸುಷುಪ್ತಿಕಾಲದಲ್ಲಿ ನಾನು ಎಂಬ ಅಖಂಡಜ್ಞಾನವನ್ನು ತಮೋ ಆವರಣವು ಸಂಪೂರ್ಣವಾಗಿ ಮುಚ್ಚಿಕೊಳ್ಳುವುದು.

ಅಂದರೆ ಅವಿದ್ಯಾಬಂಧನವಾದ ಪ್ರಪಂಚವ್ಯವಹಾರ ಕಾಲದಲ್ಲಿ ನಾವುಗಳು ಶುದ್ಧ ಸತ್ವಗುಣದ ಸೋಪಾನವನ್ನು ಪಡೆಯಲಾರೆವೆಂಬ ತಾತ್ಪರ್ಯ. ನಮ್ಮಲ್ಲಿ ತೋರುವ ಸಾತ್ವಿಕ ಸ್ವಭಾವವು ಮಿಶ್ರಸತ್ವಗುಣ ಅಥವಾ ಮಲಿನಸತ್ವಗುಣವೇ ಹೊರತು ಶುದ್ಧಸತ್ವಗುಣವಲ್ಲ. ಶುದ್ಧಸತ್ವಗುಣದ ಸೋಪಾನವು ನಮಲ್ಲಿ ಸವಿಕಲ್ಪಸಮಾಧಿಯ ಅಂತ್ಯದಲ್ಲಿಯೂ, ಪರಮ ಹಂಸಸ್ವರೂಪವಾದ ಜೀವನ್ಮುಕ್ತಾವಸ್ಥೆಯಲ್ಲಿಯೂ ಉಂಟಾಗುವುದು. ಇದರ ವಿಚಾರಗಳು ಮುಂದೆ ಬರುವುವು.

ಆದುದರಿಂದ ಸೀತಾದೇವಿಯು ರಾವಣನ ಬಂಧನದಲ್ಲಿ ಸಿಕ್ಕಿದ್ದಳೆಂದರೆ—ಜನನವಾದ ಶಿಶುಗಳಲ್ಲಿ ಪ್ರಪಂಚವಿಷಯಗಳ ವ್ಯಾಪಾರ ಪ್ರಾರಂಭವಾಗಿ ಶುದ್ಧಸತ್ವಗುಣದ ಸೋಪಾನವನ್ನು ಬುದ್ಧಿವೃತ್ತಿಯು ಕಳೆದುಕೊಂಡು ಅವಿದ್ಯೆಯ ಸೋಪಾನವಾದ ಪ್ರಪಂಚವ್ಯವಹಾರವೆಂಬ ಜೀವಸೋಪಾನವುಂಟಾಯಿತೆಂಬ ತಾತ್ಪರ್ಯವಾಗಿರುತ್ತದೆ.

## ೧೧ನೆಯ ಪ್ರಕರಣ

| | | |
|---|---|---|
| **ಶ್ರೀರಾಮನು ಮಾರೀಚನನ್ನು ಕೊಂದು ಪುನಃ ಲಕ್ಷ್ಮಣನನ್ನು ಸಂಧಿಸಿದುದು. ಸೀತೆಯು ಪಂಚವಟಿಯಲ್ಲಿ ಕಾಣದೆ ಹೋದುದು.** |  | **ಬುದ್ಧಿಮನಸ್ಸುಗಳಿಗೆ ಅವಿದ್ಯೆಯಿಂದುಂಟಾಗುವ ಬಂಧನದ ಫಲಿತಾರ್ಥ ಮತ್ತು ಅನಿತ್ಯ ವಸ್ತು ವಿಚಾರ.** |

ರಾ|| ಶ್ರೀರಾಮಚಂದ್ರನು ಮಾಯಾಜಿಂಕೆಯ ಸ್ವರೂಪನಾದ ಮಾರೀಚನ ಮೇಲೆ ಬಾಣಪ್ರಯೋಗಮಾಡಲು ಮಾರೀಚನು ಜಿಂಕೆಯ ರೂಪವನ್ನು ಬಿಟ್ಟು ವಿಚಿತ್ರವಾದ ರಾಕ್ಷಸ ರೂಪವನ್ನು ತಾಳಿ ಮರಣವನ್ನೈದಿದನು. ಮಾಯಾಜಿಂಕೆಯು ಭಯಂಕರವಾದ ರಾಕ್ಷಸನಾಗಿ ಪ್ರಾಣಬಿಟ್ಟದ್ದನ್ನು ನೋಡಿ ಮಾರೀಚನ ಮಾಯೆಯೆಂದು ಲಕ್ಷ್ಮ

ಣನು ಪ್ರಥಮದಲ್ಲಿ ಹೇಳಿದ್ದಂತೆಯೇ ಆಯಿತೆಂಬ ತಿಳಿವಳಿಕೆಯು ಶ್ರೀರಾಮನಲ್ಲಿ ಉದಯಿಸಿತು. ತನ್ನ ಧ್ವನಿಯಂತೆಯೇ ಮಾರೀಚನು ಕೂಗಿದುದರಿಂದ ಸೀತೆಗೇನು ಅಪಾಯ ಸಂಭವಿಸಿತೋ ಎಂಬ ಯೋಚನಾಪರನಾಗಿ ನಿಜವಾದ ಒಂದು ಜಿಂಕೆಯನ್ನು ಕೊಂದು ಆದರ ಮಾಂಸವನ್ನು ತೆಗೆದುಕೊಂಡು ಸೀತೆಯನ್ನು ನೋಡಲು ಹಿಂದಿರುಗಿದನು.|

**ತತ್ವ||** ಸೀತಾ ಲಕ್ಷ್ಮಣರಿಗೆ ಅಗಲಿಕೆಯಾಗಿ ರಾವಣನು ಸೀತಾಪಹರಣ ಮಾಡಿದ ನಂತರ ಶ್ರೀರಾಮ ಲಕ್ಷ್ಮಣರನ್ನು ಬಂಧನದಲ್ಲಿಟ್ಟರಲು ಎಂಟುಜನ ರಾಕ್ಷಸರನ್ನು ಯಾವಾಗ ಕಳುಹಿಸಿದನೋ ಆಗ ಜನ್ಮಾಂತರದ ವಿಷಯವಾಸನೆಯು ಪ್ರಾರಂಭವಾಗುವುದು. ಅವಿದ್ಯಾಪ್ರಧಾನವಾದ ವಿಕ್ಷೇಪಶಕ್ತಿಯಿಂದ ವಿಷಯವಾಸನಾವೃತ್ತಿ ಮತ್ತು ಇಂದ್ರಿಯಗಳ ಬಹಿರಾಕರ್ಷಣೆಗಳು ಅವಿಚ್ಛಿನ್ನವಾಗಿ ಉದಯವಾಗುತ್ತಲೇ ಇರುವುದರಿಂದ ಮಾರೀಚನ ಕಾರ್ಯವು ಪ್ರತಿಯೊಂದು ವಿಷಯವೃತ್ತಿಯಲ್ಲಿಯೂ ಇದ್ದೇ ಇರುವುದು. ಸೀತಾ ರಾಮರು ಪುನಃ ಸೇರುವವರೆಗೆ ಪ್ರಧಾನಪುರುಷನಾದ ರಾವಣನಿಂದಲೇ ಬಂಧಕವಿರುವಂತೆ ಅವಿದ್ಯಾ ಪ್ರಧಾನವಾದ ವಿಕ್ಷೇಪಶಕ್ತಿಯಿಂದಲೇ ಭ್ರಾಂತಿ ಮೊದಲಾದವುಗಳ ಕಾರ್ಯಗಳು ನಡೆದು ಕೊಂಡು ಬರುವುವು.

ರಾಜನಾದ ರಾವಣನನ್ನು ಅನುಸರಿಸಿಕೊಂಡು ಇತರ ರಾಕ್ಷಸರು ಹೇಗಿರುವರೋ ಹಾಗೆ ಅವಿದ್ಯೆಯ ಇತರ ಶಕ್ತಿಗಳು ಪ್ರಧಾನಶಕ್ತಿಯನ್ನು ಅನುಸರಿಸಿಕೊಂಡು ಕಾರ್ಯ ಮಾಡುತ್ತವೆ. ಹೀಗಿರುವ ಅವಿದ್ಯೆಯ ಶಕ್ತಿಗಳಲ್ಲಿ ಕುಂಭಕರ್ಣ, ಕುಂಭ, ನಿಕುಂಭ, ಮಕರಾಕ್ಷ, ವಿದ್ಯುಜ್ಜಿಹ್ವ, ಮೊದಲಾದವರ ತಮುಶ್ಶಕ್ತಿಗಳಿರುವುದರಿಂದ ಸೀತಾಪಹರಣಕ್ಕೆ ಪ್ರಥಮ ಸಹಾಯಕನಾದ ಮಾರೀಚನ ಕಾರ್ಯವನ್ನು ಕಾಪಾಡಿಕೊಂಡು ಬರುವರು. ಆದುದರಿಂದ ಈ ಶಕ್ತಿಗಳೆಲ್ಲ ನಿಗ್ರಹವಾಗುವವರೆಗೂ ಭ್ರಾಂತಿಜನ್ಯವಾದ, ಭ್ರಾಂತಿಯೇ ಸ್ವರೂಪವಾಗುಳ್ಳ, ಕಾರ್ಯಪರಂಪರೆಗಳು ನಡೆದುಕೊಂಡೇ ಬರುವುವು.

ರಾಕ್ಷಸನೇ ಮಾಯಾಜಿಂಕೆಯ ಸ್ವರೂಪದಲ್ಲಿದ್ದುದು ನಿಶ್ಚಯವೆಂದು ಶ್ರೀರಾಮನು ತಿಳಿದುಕೊಂಡಂತೆ ವಿಷಯವು ಮಿಥ್ಯೆಯೆಂಬ ತಿಳಿವಳಿಕೆಯು ಮನುಷ್ಯನಲ್ಲಿ ಉದಯಿಸುವುದೇ ಮೋಕ್ಷಮಾರ್ಗಕ್ಕೆ ಅಂಕುರವಾಗಿರುವುದು. ಅಂದರೆ ಮಾನವನು ಮೋಕ್ಷ ಮಾರ್ಗದ ಕಡೆಗೆ ತಿರುಗಬೇಕಾದರೆ ದೇಹ ಮತ್ತು ವಿಷಯಾದಿಗಳೆಲ್ಲಾ ಅನಿತ್ಯವಾದು ವೆಂಬ ತಿಳಿವಳಿಕೆಯು ಪ್ರಥಮದಲ್ಲಿ ಚೆನ್ನಾಗಿ ನೆಲೆಗೊಳ್ಳಬೇಕೆಂಬ ತತ್ವವೇ ಶ್ರೀರಾಮ ಚಂದ್ರನಿಗೆ ಮಾಯಾಜಿಂಕೆಯ ನಿಶ್ಚಯತ್ವವು ಗೊತ್ತಾದುದು. ಲಕ್ಷ್ಮಣನು ಶ್ರೀರಾಮ ಚಂದ್ರನಿಗೆ ಜಿಂಕೆಯು ಮಾಯಾಸ್ವರೂಪವಾದುದೆಂದು ಹೇಳುತ್ತಿದ್ದರೂ, ಶ್ರೀರಾಮ ಚಂದ್ರನು ಮಾಯಾಜಿಂಕೆಯನ್ನು ಹಿಂಬಾಲಿಸಿಕೊಂಡು ಹೊರಟಂತೆ, ಆಪ್ತರು ದೇಹ

ಮತ್ತು ವಿಷಯಾದಿಗಳು ಅನಿತ್ಯಗಳೆಂದು ತಿಳಿಸುತ್ತಿದ್ದರೂ ಮನುಷ್ಯನು ಮಿಥ್ಯವಾದ ವಿಷಯಾದಿಗಳನ್ನೇ ಹಿಂಬಾಲಿಸುವನು.

ಆದುದರಿಂದ ದೇಹ ಮತ್ತು ವಿಷಯಾದಿಗಳು ಅನಿತ್ಯವಾದುವೆಂದೂ, ಜನನ ಮರಣ ಪ್ರವಾಹರೂಪವಾದ ಸಂಸಾರದಿಂದ ಉತ್ತೀರ್ಣನಾಗಬೇಕೆಂದೂ, ತನ್ನಲ್ಲಿಯೇ ಯಾವಾಗ ನೈಜವಾದ ತಿಳಿವಳಿಕೆಯುದಯಿಸುವುದೋ ಆಗ ಆಪ್ತರು ಹೇಳಿದ್ದ ವಾಕ್ಯವೂ ಸಹಾಯಕ ವಾಗಿ ಮಾನವನು ನಿತ್ಯವಾದ ಪದಾರ್ಥವನ್ನು ಹುಡುಕಲು ಹೊರಡುವನು. ಈ ತತ್ವವೇ ಶ್ರೀರಾಮನು ಮಾರೀಚನ ಸ್ವರೂಪವನ್ನು ತಿಳಿದು ಸೀತೆಯನ್ನು ಜ್ಞಾಪಿಸಿಕೊಂಡು ನಿಜ ವಾದ ಮೃಗ (ಜಿಂಕೆ) ದ ಮಾಂಸವನ್ನು ತೆಗೆದುಕೊಂಡು ಹಿಂದಿರುಗಿದ್ದಾಗಿರುವುದು. ಮೃಗವೆಂದರೆ ಅನ್ವೇಷಣ, ಅಥವಾ ಹುಡುಕುವುದೆಂಬ ಅರ್ಥವೆಂದು ಹಿಂದೆಯೇ ತಿಳಿಸಿದೆ. ಶ್ರೀರಾಮಚಂದ್ರನು ನಿಜವಾದ ಜಿಂಕೆಯ ಮಾಂಸವನ್ನು ತೆಗೆದುಕೊಂಡು ಹಿಂದಿರುಗಿದ ನೆಂದರೆ—ನಿಶ್ಚಯವಾದುದನ್ನು ಹುಡುಕಿಕೊಂಡು ಹೊರಟನೆಂಬ ತತ್ವವಾಗಿರುವುದು. ಶ್ರೀರಾಮಚಂದ್ರನು ಮಾಯಾಮಾರೀಚನ ನಿಜಸ್ಥಿತಿಯನ್ನು ತಿಳಿದುಕೊಂಡಂತೆ ಪ್ರಪಂಚವು ಅನಿತ್ಯವೆಂಬ ತಿಳಿವಳಿಕೆಯು ಬೇರೂರಿ ದುಃಖಸ್ವರೂಪವಾದ ಜನನ ಮರಣ ಗಳನ್ನು ತಪ್ಪಿಸಿಕೊಳ್ಳಲು ಆತ್ಮಾನಾತ್ಮವಿವೇಕವೇ ಮೊದಲನೆಯ ಕರ್ತವ್ಯ[illegible]ವು ದೆಂದು ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿಯಲ್ಲಿ,

> ಆದೌ ನಿತ್ಯಾನಿತ್ಯವಸ್ತು ವಿವೇಕಃ ಪರಿಗಣ್ಯತೇ |
> ಬ್ರಹ್ಮ ಸತ್ಯಂ ಜಗನ್ಮಿಥ್ಯೇ ತ್ಯೇವಂ ರೂಪೋ ವಿನಿಶ್ಚಯಃ |
> ಸೋಽಯಂ ನಿತ್ಯಾನಿತ್ಯವಸ್ತು ವಿವೇಕ ಸ್ಸಮುದಾಹೃತಃ |

ತಾ|| ಮೋಕ್ಷಾಧಿಕಾರವನ್ನು ಪಡೆಯಲು ಮೊದಲನೆಯದು ನಿತ್ಯಾನಿತ್ಯವಸ್ತು ವಿವೇಕವು. ಪರಬ್ರಹ್ಮವು ಸತ್ಯವಾದದ್ದು, ಜಗತ್ತು ಸುಳ್ಳಾದದ್ದು, ಈ ವಿಧವಾದ ನಿಶ್ಚಯ ಜ್ಞಾನ ಯಾವುದೋ, ಅದೇ ನಿತ್ಯಾನಿತ್ಯವಸ್ತುವಿವೇಕವೆಂದು ಹೇಳಲ್ಪಡುತ್ತದೆ ಎಂಬ ದಾಗಿ ಹೇಳಿರುವರು.

ಆದುದರಿಂದ ಶುಭವಾಗಬೇಕಾದರೆ ಪ್ರಥಮದಲ್ಲಿ ಅನಿಷ್ಟ ನಿವೃತ್ತಿಯಾಗಬೇಕು. ಮಾರೀಚನನ್ನು ಹಿಂಬಾಲಿಸಿಕೊಂಡು ಹೊರಟ ಶ್ರೀರಾಮನಿಗೆ ಮಾರೀಚನ ನಿಶ್ಚಯತ್ವವು ತಿಳಿದ ಅನಂತರವೇ ಸೀತೆಯು ಜ್ಞಾಪಕಕ್ಕೆ ಬಂದುದು. ಅಂದರೆ ವಿಷಯಾದಿಗಳೆಲ್ಲ ಅನಿತ್ಯ ಮತ್ತು ದುಃಖಪರಿಣಾಮವುಳ್ಳದ್ದೆಂಬ ತಿಳಿವಳಿಕೆಯು ಚೆನ್ನಾಗಿ ಅಂಕುರಿಸುವುದೇ ಮೋಕ್ಷಮಾರ್ಗದ ಕಡೆಗೆ ತಿರುಗುವ ಲಕ್ಷಣವಾಗಿರುವುದು.

**ರಾ||** ಶ್ರೀರಾಮನು ಮಾರೀಚನನ್ನು ಕೊಂದನಂತರ, ಸೀತಾದೇವಿಯನ್ನು ನೋಡುವ ಆತುರದಿಂದ ಹಿಂದಿರುಗಿ ಅತಿ ಶೀಘ್ರವಾಗಿ ಬರುತ್ತಿರುವಾಗ ಅಪಶಕುನಗಳನ್ನು ಕಂಡನು. ಇದರಿಂದ ಮನಸ್ಸು ಕಳವಳಗೊಂಡು ಬರುತ್ತಾ ಇರುವಾಗ ದಾರಿಯಲ್ಲಿ ಲಕ್ಷ್ಮಣನನ್ನು ಸಂಧಿಸಿದನು. ಸೀತಾದೇವಿಯನ್ನು ಬಿಟ್ಟು ಬಂದುದಕ್ಕೆ ಬಹಳವಾಗಿ ಆಕ್ಷೇಪಿಸಿ ಲಕ್ಷ್ಮಣನೊಡನೆ ಸೀತಾದೇವಿಯು ಇದ್ದ ಪಂಚವಟಿಗೆ ಹೋಗಿ ನೋಡುವಲ್ಲಿ ಸೀತಾದೇವಿಯು ಇರಲಿಲ್ಲ.

**ತತ್ತ್ವ||** ಬುದ್ಧಿತತ್ತ್ವಸ್ವರೂಪನಾದ ಶ್ರೀರಾಮನು ವಿಷಯಜ್ಞಾನ ಪ್ರಕಾಶಕನಾಗಿ ಹೊರಗೆ ಪ್ರವರ್ತಿಸಿದ್ದನಷ್ಟೆ! ಹೀಗೆ ಪ್ರಸರಿಸಿದ ಬುದ್ಧಿವೃತ್ತಿಯು ವಸ್ತುವಿನ ಆಕಾರವನ್ನು ಬಿಟ್ಟು ಪುನಃ ಅನ್ನಮಯಕೋಶಕ್ಕೆ ಬರುವುದರೊಳಗೆ ಮನಸ್ತತ್ತ್ವದಲ್ಲಿರುವ ಲಕ್ಷ್ಮಣನೂ ವಿಕಲ್ಪವಂತನಾಗಿ ಇಂದ್ರಿಯಗಳ ಮೂಲಕ ಬಂದಿದ್ದನೆಂದರೆ—ಬಾಹ್ಯವಿಷಯವನ್ನು ಪಡೆಯುವುದರಲ್ಲಿ ಇಂದ್ರಿಯಗಳ ವ್ಯಾಪಾರ ನಡೆಯುತ್ತಾ ಇತ್ತು. ಅಂದರೆ ಬುದ್ಧಿಯು ಯಾವಾಗ ಬಾಹ್ಯದ ವಿಷಯಸಂಕಲ್ಪಾಕಾರವಾಗುವುದೋ ಆಗ ಮನಸ್ಸು ಬುದ್ಧಿಯ ಹಿಂದೆಯೇ ಸಿದ್ಧವಾಗಿರುತ್ತದೆ. ವಾಯುವೇಗಕ್ಕಿಂತಲೂ ಮನೋವೇಗವು ಅತಿವೇಗವಾದುದು. ವೃತ್ತಿಗಳಿಗೆ ಅವಿನಾಭಾವವಿರುವುದರಿಂದ ಇವುಗಳ ಗತಿಗಳ ವೇಗವನ್ನು ಹೇಳಲು ಸಾಧ್ಯವಿಲ್ಲ.

ಈ ಮೇಲಿನ ತತ್ತ್ವಾರ್ಥಗಳಿಂದ ಮಾರೀಚನನ್ನು ಕೊಂದು ಶ್ರೀರಾಮನು ಹಿಂದಿರುಗಿದನೆಂದರೆ—ವಿಷಯಾಕಾರವಾಗಿ ಹೋಗಿದ್ದ ಬುದ್ಧಿವೃತ್ತಿಯು ಆ ವಿಷಯಜ್ಞಾನದಿಂದ ಹಿಂದಿರುಗಲು ಪ್ರಾರಂಭವೆಂಬ ತತ್ತ್ವ. ಅಂದರೆ ದೇಹದಿಂದ ಹೊರಕ್ಕೆ ಪ್ರಸರಿಸಿದ್ದ ಬುದ್ಧಿವೃತ್ತಿಯು ದೇಹಕ್ಕೆ ಬರುವುದೇ ಶ್ರೀರಾಮನು ಪಂಚವಟಿಗೆ ಹಿಂದಿರುಗಿ ಬರುವ ಉದ್ದೇಶದ ತಾತ್ಪರ್ಯವಾಗಿರುತ್ತದೆ. ಶ್ರೀರಾಮನು ಸೀತಾದೇವಿಯನ್ನು ನೋಡುವ ಉದ್ದೇಶದಿಂದ ಹಿಂದಿರುಗಿ ಬರುತ್ತಿದ್ದನೆಂದರೆ—ಭ್ರಾಂತಿಬರುವುದಕ್ಕೆ ಮುಂಚೆ ಇದ್ದ ಶುದ್ಧಸತ್ತ್ವಗುಣದ ಸೋಪಾನವೇ ಇರುವುದೆಂದು ತಿಳಿದುಕೊಂಡು ಆ ಸೋಪಾನದಲ್ಲಿಯೇ ಇರೋಣವೆಂಬ ಅಭಿಲಾಷೆಯಿಂದ ಬುದ್ಧಿವೃತ್ತಿಯು ಹಿಂದಿರುಗಿದ್ದಾಗಿರುತ್ತದೆ. ಶ್ರೀರಾಮನು ಹಿಂದಿರುಗಿ ಬರುವಾಗ ದುಶ್ಶಕುನಗಳನ್ನು ಕಂಡನೆಂದರೆ—ಭ್ರಾಂತಿಕಾರ್ಯದಿಂದ ಶುದ್ಧಸತ್ತ್ವಗುಣದ ಅಗಲುವಿಕೆಯನ್ನು ಹೊಂದುವ ಸೂಚನೆಯಾಗಿರುತ್ತದೆ. ಅಂದರೆ ಜೀವಸೋಪಾನದ ಸ್ವರೂಪದಲ್ಲಿಯೇ ಸ್ಥಿರವಾಗಿರಬೇಕಾಗಿ ಬಂದ ಸೂಚನೆಯೇ ಶ್ರೀರಾಮನಿಗುಂಟಾದ ಕಳವಳದ ತತ್ತ್ವವಾಗಿರುತ್ತದೆ.

ಶ್ರೀರಾಮನು ಮಾರೀಚನನ್ನು ಕೊಂದು ಹಿಂದಿರುಗಿ ಬರುತ್ತಾ ದಾರಿಯಲ್ಲಿ ದುಶ್ಶಕುನಗಳಿಂದ ಕಳವಳಗೊಂಡು ಲಕ್ಷ್ಮಣನನ್ನು ಸಂಧಿಸಿದ ತತ್ತ್ವವೇನೆಂದರೆ—ದೇಹದಿಂದ

ಹೊರಕ್ಕೆ ವಿಷಯಾಕಾರವಾಗಿ ಪ್ರಸರಣೆಯಾಗಿದ್ದ ಬುದ್ಧಿವೃತ್ತಿಯು ವಿಷಯಜ್ಞಾನವನ್ನು ಬಿಟ್ಟು ಹಿಂದಿರುಗುತ್ತಿರುವಾಗ ವಿಷಯಾನುಭವದ ಕ್ರಿಯಾಪ್ರವರ್ತನೆಯಲ್ಲಿರುವ ಮನೋವೃತ್ತಿಯನ್ನು ಸಂಧಿಸಿದ ತತ್ವ. ಅಂದರೆ ವಿಷಯಸಂಕಲ್ಪದ ಜ್ಞಾನವನ್ನು ಬುದ್ಧಿಯು ತ್ಯಜಿಸಿ ಹಿಂದಕ್ಕೆ ಬರುವಷ್ಟರಲ್ಲಿ ವಿಷಯವನ್ನು ಪಡೆಯುವ ಕಾರ್ಯ ನಡೆಯಲು ಪ್ರಾರಂಭವಾಗಿತ್ತು. ಈ ಕಾರ್ಯದ ತಿಳಿವಳಿಕೆಯು ಬರುವುದೇ ಬುದ್ಧಿಯು ಮನಸ್ಸನ್ನು ಸಂಧಿಸಿದುದಾಗಿರುತ್ತದೆ. ಅಂದರೆ ಬುದ್ಧಿಯು ಕೂಡ ವಿಷಯಜ್ಞಾನವನ್ನು ಬಿಟ್ಟು ಕ್ರಿಯಾರೂಪವಾದ ಇಂದ್ರಿಯಗಳ ವ್ಯಾಪಾರವಾದ ವಿಕಲ್ಪವನ್ನು ಆಶ್ರಯಿಸಿತೆಂಬ ತತ್ವಾರ್ಥದ ಸೂಚನೆಯೇ ಶ್ರೀರಾಮನು ಲಕ್ಷ್ಮಣನನ್ನು ಸಂಧಿಸಿದುದು.

ಸೀತಾದೇವಿಯನ್ನು ಬಿಟ್ಟು ಏಕಾಂಗಿಯಾಗಿ ಬರುತ್ತಿರುವ ಲಕ್ಷ್ಮಣನನ್ನು ನೋಡಿ ಶ್ರೀರಾಮನಿಗೆ ಬಹಳ ಕಳವಳವುಂಟಾಗಿ ಲಕ್ಷ್ಮಣನನ್ನು ಆಕ್ಷೇಪಿಸಿದ ತತ್ವವೇನೆಂದರೆ— ಕ್ರಿಯಾರೂಪವಾದ ಇಂದ್ರಿಯಗಳ ವ್ಯಾಪಾರದ ವಿಕಲ್ಪದಲ್ಲಿರುವ ಮನಸ್ಸಿನ ವೃತ್ತಿಯನ್ನು ನೋಡಿದನಷ್ಟೆ! ಇಂತಹ ವಿಕಲ್ಪವಾದ ಮನೋವೃತ್ತಿಯ ಜೊತೆಯಲ್ಲಿ ಶುದ್ಧಸತ್ವಗುಣ ಅಥವಾ ಸೀತಾದೇವಿಯು ಇಲ್ಲದಿರುವುದನ್ನು ನೋಡಿದನೆಂದರೆ--ಇಂದ್ರಿಯವ್ಯಾಪಾರದ ವಿಕಲ್ಪದಲ್ಲಿ ಶುದ್ಧಸತ್ವಗುಣವಿರುವುದಿಲ್ಲವೆಂಬ ತತ್ವಾರ್ಥವಾಗಿರುವುದು. ಶ್ರೀರಾಮನು ಲಕ್ಷ್ಮಣನನ್ನು ನಿಂದಿಸಿದನೆಂದರೆ--ಇಂದ್ರಿಯವ್ಯಾಪಾರದ ವಿಕಲ್ಪದಿಂದ ಶುದ್ಧಸತ್ವಗುಣವು ಯಾವ ಪರಿಣಾಮವನ್ನು ಹೊಂದಿತೋ, ಈ ಇಂದ್ರಿಯಗಳ ವ್ಯಾಪಾರದ ವಿಕಲ್ಪವು ಏಕೆ ಪ್ರಾರಂಭವಾಯಿತೋ ಎಂಬ ತಿಳಿವಳಿಕೆಯು ಬುದ್ಧಿಯಲ್ಲಿ ಹುಟ್ಟುವುದೇ ಶ್ರೀರಾಮನು ಲಕ್ಷ್ಮಣನನ್ನು ನಿಂದಿಸಿದುದರ ತತ್ವವು. ಲಕ್ಷ್ಮಣನು ಸೀತೆಯನ್ನು ಬಿಟ್ಟು ಹೊರಟದ್ದರಿಂದ ವಿಕ್ಷೇಪಶಕ್ತಿಯಾದ ರಾವಣನ ಕಾರ್ಯಕ್ಕೆ ಅನುಕೂಲವಾಯಿತು. ರಾವಣನ ಕಾರ್ಯದಿಂದ ಸೀತೆಗೆ ಬಂಧನ ಬಂದುದಲ್ಲದೆ ಶ್ರೀರಾಮ ಲಕ್ಷ್ಮಣರಿಗೂ ರಾವಣನ ಕಾರ್ಯದ ಫಲಿತಾಂಶದಿಂದ ತೊಂದರೆ ಬಂದಂತೆ ಬುದ್ಧಿಮನಸ್ಸಿನ ಪ್ರತಿಬಿಂಬಚೈತನ್ಯಕ್ಕೆ ಅವಿದ್ಯೆಯ ಉಪಾಧಿಯೆಂಬ ಬಂಧನವುಂಟಾಯಿತು. ಆದುದರಿಂದ ವಿಕ್ಷೇಪಶಕ್ತಿಯ ಸ್ವರೂಪನಾದ ರಾವಣನಿಂದ ಬುದ್ಧಿ ಮನಸ್ಸಿನ ತತ್ವದವರಾದ ಶ್ರೀರಾಮಲಕ್ಷ್ಮಣರಿಗೂ ಬಂಧನ ಬಂದಿತೆಂಬ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೧೭೭ನೆಯ ಶ್ಲೋಕದಲ್ಲಿ,

ತಸ್ಮಾನ್ಮನಃ ಕಾರಣಮಸ್ಯಜಂತೋಃ ।
ಬಂಧಸ್ಯ ಮೋಕ್ಷಸ್ಯಚ ವಾ ವಿಧಾನೇ ॥
ಬನ್ಧಸ್ಯ ಹೇತು ರ್ಮಲಿನಂ ರಜೋಗುಣೈಃ ।
ರ್ಮೋಕ್ಷಸ್ಯ ಶುದ್ಧಂ ವಿರಜಸ್ತಮಸ್ಕಂ ॥

ತಾ|| ಪುರುಷನು ಸಂಸಾರಬಂಧನವನ್ನಾಗಲಿ ಮೋಕ್ಷವನ್ನಾಗಲಿ ಹೊಂದಲು ಮನಸ್ಸೇ ಕಾರಣವಾಗಿದೆ. ರಜೋಗುಣದ ಕಾರ್ಯದಿಂದ ಯಾವಾಗ ಮಲಿನತ್ವವಾಗುವುದೋ ಆಗ ಬಂಧನಕ್ಕೆ ಕಾರಣವಾಗುತ್ತದೆ. ರಜಸ್ತಮೋಗುಣಗಳಿಂದ ರಹಿತವಾಗಿ ನಿರ್ಮಲವಾದ ಮನಸ್ಸು ಮೋಕ್ಷಕ್ಕೆ ಕಾರಣವಾಗಿರುತ್ತದೆ ಎಂದು ಹೇಳಿರುತ್ತಾರೆ.

ಆದುದರಿಂದ ಆವರಣ ವಿಕ್ಷೇಪಶಕ್ತಿಗಳ ಬಲೆಗೆ ಮನೋವೃತ್ತಿಯು ಕೂಡ ಒಳಗಾದುದಕ್ಕೆ ಪಶ್ಚಾತ್ತಾಪವುಂಟಾಗುವ ತತ್ವವೇ ಶ್ರೀರಾಮನು ಲಕ್ಷ್ಮಣನನ್ನು ನಿಂದಿಸಿದುದು. ಎಂತಹ ತಿಳಿವಳಿಕೆಯುಳ್ಳವರಾದರೂ ಜೀವಕೋಶಾನದಲ್ಲಿ ಆವರಣ ವಿಕ್ಷೇಪಶಕ್ತಿಗಳ ಬಲೆಗೆ ಸಿಕ್ಕಿಬೀಳುವ ತತ್ವವೇ ಶ್ರೀರಾಮ ಲಕ್ಷ್ಮಣ ಸೀತಾದೇವಿಯರು ರಾವಣ ಮಾರೀಚರ ಬಲೆಗೆ ಬಿದ್ದುದಾಗಿರುತ್ತದೆ.

ಶ್ರೀರಾಮನು ಲಕ್ಷ್ಮಣನೊಡನೆ ಪಂಚವಟಿಯ ಪರ್ಣಶಾಲೆಗೆ ಹೋಗಿ ಸೀತಾದೇವಿಯನ್ನು ನೋಡಲು ಇರಲಿಲ್ಲವಾದುದರಿಂದ ಪರ್ಣಶಾಲೆಯು ಭಯಂಕರವಾಗಿ ಕಂಡ ತತ್ವವೇನೆಂದರೆ—ಬುದ್ಧಿಮನಸ್ಸಿನ ವೃತ್ತಿಗಳು ವಿಷಯವ್ಯಾಪಾರವನ್ನು ಬಿಟ್ಟು ಸ್ಥೂಲದೇಹವಾದ ಅನ್ನಮಯಕೋಶದಲ್ಲಿ ಶುದ್ಧಸತ್ವಗುಣವನ್ನು ನೋಡಲು ತಿಳಿವಳಿಕೆ ಬಂದುದೇ ಪಂಚವಟಿಯಲ್ಲಿ ಸೀತಾದೇವಿಯನ್ನು ಶ್ರೀರಾಮನು ನೋಡಬೇಕೆಂದು ಬಂದುದಾಗಿರುತ್ತದೆ. ಜನನವಾದ ಶಿಶುವಿನಲ್ಲಿ ಭ್ರಾಂತಿ ಬಂದು ಇಂದ್ರಿಯಗಳ ಮೂಲಕ ವಿಷಯವ್ಯಾಪಾರ ಪ್ರಾರಂಭವಾದರೆ ಶುದ್ಧಸತ್ವಗುಣವನ್ನು ವಿಕ್ಷೇಪಶಕ್ತಿಯಾದ ರಜೋಗುಣವು ಮುಚ್ಚಿಕೊಳ್ಳುವುದರಿಂದ ಶ್ರೀರಾಮನಿಗೆ ಸೀತಾದೇವಿಯು ದೊರೆಯಲಿಲ್ಲ. ಆದುದರಿಂದ ಸುಳ್ಳಾದುದನ್ನು ನಿಶ್ಚಯವಾಗಿ ತಿಳಿದುಕೊಳ್ಳುವ ಭ್ರಾಂತಿಯಿಂದ ಸೀತಾರಾಮರಿಗೆ ಯಾವ ವಿಧವಾಗಿ ಅನರ್ಥಗಳುಂಟಾದುವೋ ಅದೇ ರೀತಿಯಲ್ಲಿ ಪ್ರಾಣಿಗಳಲ್ಲಿ ಈ ಭ್ರಾಂತಿಯ ಕಾರ್ಯದಿಂದ ಬಂಧನ ಬಂದಿರುತ್ತದೆ. ಇದೇ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೧೪೦ನೆಯ ಶ್ಲೋಕದಲ್ಲಿ,

> ಅತಸ್ಮಿಂ ಸ್ತದ್ಬುದ್ಧಿಃ ಪ್ರಭವತಿ ವಿಮೂಢಸ್ಯ ತಮಸಾ |
> ವಿವೇಕಾಭಾವಾ ದ್ವೈಸ್ಫುರತಿ ಭುಜಗೇ ರಜ್ಜುಧಿಷಣಾ ||
> ತತೋ ನರ್ಥವ್ರಾತೋ ನಿಪತತಿ ಸಮಾದಾತು ರಧಿಕ |
> ಸ್ತತೋ ಯೋ ಸದ್ಗ್ರಾಹಃ ಸಹಿ ಭವತಿ ಬನ್ಧ ಶ್ಶೃಣು ಸಖೇ ||

ತಾ|| ಎಲೈ ಪ್ರಿಯಪುತ್ರನಂತಿರುವ ಶಿಷ್ಯನೇ ಅಜ್ಞಾನಾಂಧಕಾರದಿಂದ ಅವಿವೇಕಿಯಾದವನಿಗೆ ಅಯಥಾರ್ಥವಾದ ವಸ್ತುವಿನಲ್ಲಿ ಯಥಾರ್ಥವಾದ ಬುದ್ಧಿಯುಂಟಾಗುತ್ತದೆ. ವಿವೇಕವಿಲ್ಲದಿರುವ ದೆಸೆಯಿಂದಲ್ಲವೇ ರಜ್ಜುವಿನಲ್ಲಿ ಸರ್ಪವೆಂಬ ಬುದ್ಧಿಯು ಹೊಳೆಯು

ತ್ತದೆ. ಈ ರೀತಿಯಾದ ಬುದ್ಧಿಯಿಂದ ಹೆಚ್ಚಾದ ಅನರ್ಥಪರಂಪರೆಗಳು ಒದಗುತ್ತವೆ. ಹೀಗೆ ಅಸತ್ತಾದುದನ್ನು ಸತ್ಯವಾಗಿ ತಿಳಿಯುವುದೇ ಬಂಧನವಾಗುವುದು. ಎಂದು ಹೇಳಿರುವರು.

ಆದಕಾರಣ ೮, ೯, ೧೦, ೧೧, ನೇ ಪ್ರಕರಣಗಳ ತತ್ವಗಳನ್ನು ಅನುಸರಿಸಿ ಬಂಧನವು ಬಂದು ಶ್ರೀರಾಮಚಂದ್ರನ ತತ್ವವಾದ ಬುದ್ಧಿಯಲ್ಲಿರುವ ಪ್ರತಿಬಿಂಬಚೈತನ್ಯನಿಗೆ ವಿಷಯ ಗಳ ಜ್ಞಾನವನ್ನು ಪ್ರಕಾಶಪಡಿಸುವ ಅವಿದ್ಯಾ ಉಪಾಧಿ ಬಂದಿತೆಂಬ ತಾತ್ಪರ್ಯ.

ಸೀತಾಪಹರಣದ ಕಥೆಯ ಸಂದರ್ಭದ ಮುಖ್ಯತಾತ್ಪರ್ಯವೇನೆಂದರೆ—ಜನನವಾದ ಶಿಶುವಿನಲ್ಲಿ ಬುದ್ಧಿಮನಸ್ಸಿನ ವೃತ್ತಿಯು ಕೋಶಗಳಲ್ಲಿ ಪ್ರಸರಿಸಿಕೊಂಡು ಬಂದು ಕೊನೆಯ ಕೋಶವಾದ ಅನ್ನಮಯಕೋಶಕ್ಕೆ ಇಳಿದು ಬಂದ ಸಂದರ್ಭಗಳನ್ನು ಒಂದೊಂದಾಗಿ ವಿವರಿಸಿರುತ್ತಷ್ಟೆ! ಬಾಹ್ಯವಸ್ತುವಿನಲ್ಲಿ ದೃಷ್ಟಿಬಿದ್ದು ಶಿಶುವಿಗೆ ಒಂದು ವಿಷಯಜ್ಞಾನವಾದರೆ ಸಾಕು. ಅನಂತರ ಅವಿದ್ಯೆಯ ಬಂಧನದಿಂದ ಜನ್ಮಾಂತ್ಯದವರೆಗೂ ಬಾಹ್ಯವೃತ್ತಿಯಲ್ಲಿಯೇ ಇರಬೇಕಾಗುತ್ತದೆ. ಇದೇ ಭ್ರಾಂತಿಯಿಂದ ಬಂಧನವುಂಟಾಗುವ ಸ್ವರೂಪವು. ಜನನ ವಾದ ಶಿಶುವಿಗೆ ಈ ರೀತಿಯಾಗಿ ಪ್ರಥಮದಲ್ಲಿ ಒಂದು ವಿಷಯಜ್ಞಾನ ಉದಯಿಸಿದನಂತರ ಪ್ರಪಂಚವ್ಯಾಪಾರಾಭಿಮುಖವಾಗುವುದು. ವಿಕ್ಷೇಪಶಕ್ತಿಯ ಬಂಧನದಿಂದ ಬೆಳಗಿನಿಂದ ಸಂಜೆಯವರೆಗೂ ಸ್ವಲ್ಪವೂ ವ್ಯವಧಾನವಿಲ್ಲದೆ ಅವಿಚ್ಛಿನ್ನವಾಗಿ ಬುದ್ಧಿವೃತ್ತಿಯು ಶಬ್ದ ಸ್ಪರ್ಶ, ರೂಪ, ರಸ, ಗಂಧಗಳ ವಿಷಯಜ್ಞಾನದಲ್ಲ ನೆಲೆಗೊಂಡಿರುವುದಲ್ಲದೆ ಈ ವಿಷಯ ಜ್ಞಾನದಿಂದ ನಿವೃತ್ತವಾಗುವುದಿಲ್ಲ. ಈ ವಿಷಯಸಂಕಲ್ಪವೇ ಪ್ರಪಂಚದ ನಡೆವಳಿಕೆಯ ಬಂಧನಕ್ಕೆ ಕಾರಣವೆಂದು ವರಾಹೋಪನಿಷತ್ತಿನ ದ್ವಿತೀಯಾಧ್ಯಾಯದಲ್ಲಿ,

ಸಂಕಲ್ಪಮಾತ್ರ ಕಲನೇನ ಜಗತ್ಸಮಗ್ರಂ |
ಸಂಕಲ್ಪಮಾತ್ರ ಕಲನೇಹಿ ಜಗದ್ವಿಲಾಸಃ |
ಸಂಕಲ್ಪಮಾತ್ರ ಮಿದ ಮುತ್ಸೃಜ ||

ತಾ|| ಸಂಕಲ್ಪಮಾತ್ರದಿಂದಲೇ ಪ್ರಪಂಚವುಂಟಾಗುತ್ತದೆ. ಸಂಕಲ್ಪಮಾತ್ರದಿಂದಲೇ ಪ್ರಪಂಚವ್ಯಾಪಾರದ ವಿಲಾಸವುಂಟಾಗುತ್ತದೆ. ಆದುದರಿಂದ ಇಂಥ ವಿಷಯಸಂಕಲ್ಪ ವನ್ನು ಬಿಡಬೇಕೆಂದು ಹೇಳಿರುವುದು.

ಈ ವಿಷಯಸಂಕಲ್ಪದಿಂದಲೇ ನಾವುಗಳು ಬಾಲ್ಯ, ಯೌವನ, ಕೌಮಾರಾವಸ್ಥೆಗಳ ಲ್ಲಿಯೂ ಹುಟ್ಟು ಸಾವುಗಳಲ್ಲಿಯೂ ಬಿದ್ದು ಒದ್ದಾಡಿಕೊಂಡಿರುವುದು. ರಾವಣನು ಸೀತಾಪಹರಣಮಾಡುವ ಪರ್ಯಂತರವಿರುವ ರಾಮಾಯಣದ ಕಥೆಯ ತತ್ವಗಳು ಜನನ ವಾಗುವ ಪ್ರತಿಯೊಂದು ಶಿಶುವಿನಲ್ಲಿಯೂ ಸ್ಫುರಣೆಯ ವಿಧವಾಗಿ ನಡೆಯುತ್ತಲೇ ಇರು ವುವು. ಈಗ ಹೊಂದಿರುವ ಜನ್ಮ ಕಳೆದರೂ ಅವಿದ್ಯೆಯಿರುವ ಪರ್ಯಂತರ ಪುನಃ ಜನ್ಮ

ಬಂದೇ ಬರುವುದು. ಅವಿದ್ಯೆಯು ನಿಗ್ರಹವಾಗುವ ಪರ್ಯಂತರ ಜನ್ಮಪರಂಪರೆಗಳು ಇದ್ದೇ ಇರುವುದರಿಂದ ಶ್ರೀರಾಮನು ಮುಂದೆ ಸೀತಾನ್ವೇಷಣೆಗಾಗಿ ನಡೆಸಿರುವ ಕಾರ್ಯಗಳ ತತ್ವಗಳಂತೆ ಅನುಸರಿಸಿದರೆ ಜನ್ಮಗಳು ಬರುವುದು ನಾಶವಾಗುವುದು. ಮೋಕ್ಷವನ್ನು ಪಡೆಯುವ ಪರ್ಯಂತರ ಜನ್ಮಪರಂಪರೆಗಳುಂಟೆಂದು ಗರ್ಭೋಪನಿಷತ್ತಿನಲ್ಲಿ,

ಜಾತಶ್ಚಾಸ್ಮಿ ಮೃತಶ್ಚಾಸ್ಮಿ ಸಂಸಾರ್ಯಸ್ಮಿ ಪುನಃ ಪುನಃ |
ಜನ್ಮ ಮೃತ್ಯು ಪುನರ್ಜನ್ಮ ಪುನರ್ಮೃತ್ಯುಃ ಪುನರ್ಜನಿಃ ||

ತಾ|| ಹುಟ್ಟುವುದೂ ಸಾಯುವುದೂ ಸಂಸಾರವಾಗಿರುತ್ತದೆ. ಇಂತಹ ಸಂಸಾರವು ಅನೇಕ ಸೋಳಿ ಪ್ರಾಪ್ತವಾಗುತ್ತಿದೆ. ಎಂದು ಹೇಳಿರುವುದು.

ಆದುದರಿಂದ ಮೋಕ್ಷವನ್ನು ಪಡೆಯುವ ಪರ್ಯಂತರ ಜನ್ಮಪರಂಪರೆಗಳಲ್ಲಿರಬೇಕಾಗುತ್ತದೆ. ಮತ್ತು ಪ್ರತಿಯೊಂದು ಜನ್ಮದಲ್ಲಿಯೂ ಸೀತಾಪಹರಣದವರೆಗಿನ ರಾಮಾಯಣದ ಅಂತರಾರ್ಥದ ತತ್ವವು ಸ್ಫುರಣೆಯ ರೂಪವಾಗಿ ನಡೆಯುವುದು. ಮುಂದಿನ ಕಥೆಯ ತತ್ವಗಳು ಮೋಕ್ಷಮಾರ್ಗದಲ್ಲಿರುವವರಲ್ಲಿ ಮಾತ್ರ ಇರುತ್ತವೆ. ಶ್ರೀರಾಮಾವತಾರದ ಮುಖ್ಯ ಉದ್ದೇಶವು ರಾವಣಾದಿ ರಾಕ್ಷಸರನ್ನು ನಿಗ್ರಹಿಸುವುದಕ್ಕಲ್ಲದೆ ಸೀತಾದೇವಿಯನ್ನು ರಾವಣನ ನಿರ್ಬಂಧಕ್ಕೆ ಗುರಿಮಾಡುವುದಕ್ಕೆಂದಿಗೂ ಅಲ್ಲವಷ್ಟೆ! ಆದುದರಿಂದ ಶ್ರೀರಾಮಚಂದ್ರನ ಚರಿತ್ರೆಯ ಮುಂದಿನ ತತ್ವಗಳನ್ನು ಅನುಸರಿಸಿದರೆ ಜನನಮರಣಪ್ರವಾಹರೂಪವಾದ ಸಂಸಾರವನ್ನು ದಾಟುವುದರಲ್ಲಿ ಕೊಂಚವೂ ಸಂದೇಹವಿರುವುದಿಲ್ಲ.

ಬಾಲಕಾಂಡದಿಂದ ಇದುವರೆಗೂ ಮಾನವನಲ್ಲಿಯೇ ಪರಮಾತ್ಮಸ್ವರೂಪದಿಂದ ಈಶ್ವರ ಸೋಪಾನ ಬರುವ ವಿಚಾರ ಮತ್ತು ಈ ಈಶ್ವರಸೋಪಾನದಿಂದ ಜೀವಸೋಪಾನ ಉಂಟಾಗುವ ಕ್ರಮವನ್ನು ತಿಳಿಸಿತಷ್ಟೆ! ಪ್ರತಿಬಿಂಬಚೈತನ್ಯನು ಜೀವತ್ವದ ಉಪಾಧಿಯನ್ನು ಪಡೆಯಬೇಕಾದರೆ ಪಂಚಕೋಶಗಳ ಕಾರ್ಯಗಳೂ ಪ್ರಾರಂಭವಾಗಬೇಕು. ಪಂಚಕೋಶಗಳ ಕಾರ್ಯಗಳುದಯಿಸಿ ಒಂದಕ್ಕೊಂದು ಅಭೇದವಾಗಿ ಹೆಣೆದುಕೊಂಡು ಬಹಿರ್ವ್ಯಾಪಾರ ಮಾಡಲು ಪ್ರಾರಂಭವಾಗುವ ತತ್ವವೇ ಅಯೋಧ್ಯೆಯಿಂದ ಹೊರಟಾರಭ್ಯ ಸೀತಾಪಹರಣದ ವರೆಗಿನ ಕಥೆಯ ಮುಖ್ಯತತ್ವವಾಗಿರುವುದು. ಅಂದರೆ ಬುದ್ಧಿ ಮನಸ್ಸಿನ ವೃತ್ತಿಗಳು ಅನ್ನಮಯಕೋಶದ ಕಾರ್ಯವಾದ ವಿಷಯಜ್ಞಾನಗಳಲ್ಲಿ ಯಾವಾಗ ಬಂಧಿಸಲ್ಪಟ್ಟುವೋ ಆಗ ಈ ವಿಷಯಗಳ ಅನುವರ್ತಿಯಾಗಿ ಪ್ರಾಣ, ಮನೋ, ವಿಜ್ಞಾನ, ಆನಂದಮಯಕೋಶಗಳ ಕಾರ್ಯಗಳು ಒಂದಕ್ಕೊಂದು ಹೆಣೆದುಕೊಂಡು ವಿಷಯಾನುವರ್ತಿಯಾಗಿ ಏಕರೂಪವಾಗಿ ತೋರುವುವು. ಆದುದರಿಂದ ಪ್ರತಿಬಿಂಬಚೈತನ್ಯವು ಈಶ್ವರಸೋಪಾನದಿಂದ ಇಳಿದು

ಕೋಶಗಳ ಅನುವರ್ತಿಯಾಗುವುದರಿಂದ ಜೀವನೆಂಬ ಹೆಸರನ್ನು ಪಡೆಯುವದು. ಇದೇ ತಾತ್ಪರ್ಯಕ್ಕೆ ತ್ರಿಶಿಖಿಬ್ರಾಹ್ಮಣೋಪನಿಷತ್ತಿನಲ್ಲಿ,

ಯಥಾಕೋಶ ಸ್ತಥಾ ಜೀವೋ ಯಥಾ ಜೀವ ಸ್ತಥಾ ಶಿವಃ |
ಸವಿಕಾರ ಸ್ತಥಾ ಜೀವೋ ನಿರ್ವಿಕಾರ ಸ್ತಥಾ ಶಿವಃ ||

ತಾ|| ಕೋಶಾನುಗುಣವಾಗಿ ಜೀವನೂ ಜೀವಾನುಗುಣವಾಗಿ ಪರಮಾತ್ಮನೂ ತೋರುತ್ತಾರೆ. ಆದರೆ ಜೀವನು ಕೋಶಗಳೆಂಬ ವಿಕಾರಸಹಿತನು. ಪರಮಾತ್ಮನು ನಿರ್ವಿಕಾರನು. ಎಂದು ಹೇಳಿರುವುದು.

ಆದುದರಿಂದ ಪ್ರತಿಬಿಂಬಚೈತನ್ಯನು ಪಂಚಕೋಶಗಳ ಕಾರ್ಯಗಳನ್ನು ಪ್ರಕಾಶಪಡಿಸುವ ತತ್ವವು ಬಂದಂತಾಗಿ ಜೀವನೆನಿಸಿಕೊಂಡು ಪ್ರಪಂಚವ್ಯಾಪಾರವೆಂಬ ಸ್ಥಿತಿಯಲ್ಲಿ ನಿಂತನು. ಅಂದರೆ ಅಯೋಧ್ಯೆಯಿಂದ ಹೊರಟ ಕೂಡಲೆ ತಮಸಾನದಿಯ ಸಂಪರ್ಕದಿಂದ ಸುಷುಪ್ತ್ಯವಸ್ಥೆಯ ಪ್ರಕಾಶಕನಾಗಿ ಪ್ರಾಜ್ಞನೆನಿಸಿಕೊಂಡನು. ರಾವಣನ ತೋಂದರೆ ಬಂದು ಜನ್ಮಾಂತರದ ವಾಸನಾವ್ಯಾಪಾರ ಪ್ರಾರಂಭವಾಗಿ ಜಾಗ್ರತ್ಸ್ವಪ್ನವ್ಯಾಪಾರದ ಪ್ರಕಾಶಕನಾಗಿ ವಿಶ್ವತೈಜಸನೆನಿಸಿಕೊಂಡನು. ಅಂದರೆ ಆತ್ಮಚೈತನ್ಯನು ಈಶ್ವರಸೋಪಾನವನ್ನು ಬಿಟ್ಟು ಇದುವರೆಗಿನ ಕಥೆಯ ತತ್ವಗಳನ್ನು ಸ್ವೀಕರಿಸಿ ಜೀವನೆನಿಸಿಕೊಂಡನು. "ಅವಿದ್ಯೋಪಾಧಿಕೋ ಜೀವಃ" ಎಂಬ ಶ್ರುತಿವಚನಾನುಸಾರವಾಗಿ ರಾವಣನಿಂದುಂಟಾದ ಬಂಧನದಲ್ಲಿರುವಿಕೆಯಿಂದ ಜೀವತ್ವವು ದೃಢೀಕರಿಸಲ್ಪಟ್ಟಿತು. ಶ್ರೀಮನ್ನಾರಾಯಣನೇ ಪ್ರಥಮದಲ್ಲಿ ಶ್ರೀರಾಮನೆನಿಸಿಕೊಂಡು ಅನಂತರ ಸೀತೆಯೊಡಗೂಡಿದ ಶ್ರೀರಾಮನೆನಿಸಿಕೊಂಡಿದ್ದು ಈಗ ಸೀತೆಯಿಂದ ಅಗಲಿ ರಾವಣನ ತೊಂದರೆಯಲ್ಲಿರುವ ಶ್ರೀರಾಮನೆನಿಸಿಕೊಂಡು ಹೇಗಿರುವನೋ ಹಾಗೆ ಪರಮಾತ್ಮಚೈತನ್ಯವೇ ಪ್ರತಿಬಿಂಬ ಚೈತನ್ಯವೆಂದು ಹೆಸರು ಪಡೆದು ಈಶ್ವರಸೋಪಾನದಲ್ಲಿದ್ದು ಈಗ ಜೀವನೆನಿಸಿಕೊಂಡಿರುವುದೆಂಬ ತತ್ವವಾಗಿರುವುದು.

ಹಿಂದಿನ ಮೂರು ನಾಲ್ಕು ಪ್ರಕರಣಗಳ ತಾತ್ಪರ್ಯಗಳನ್ನು ಅನುಸರಿಸಿ ರಾವಣನ ಸೀತಾಪಹರಣದಿಂದ ಶ್ರೀರಾಮ ಲಕ್ಷ್ಮಣರಿಗೂ ಬಂಧನವುಂಟಾಯಿತು. ಅಂದರೆ ಬುದ್ಧಿಗೂ ಮನಸ್ಸಿಗೂ ಬುದ್ಧಿಮನಸ್ಸುಗಳನ್ನು ಪ್ರೇರಿಸುವ ಪ್ರತಿಬಿಂಬಚೈತನ್ಯಕ್ಕೂ ಪ್ರಪಂಚ ವ್ಯಾಪಾರರೂಪವಾದ ಬಂಧನ ಬಂದಿತೆಂಬ ತಾತ್ಪರ್ಯವಾಗಿರುತ್ತದೆ.

ಬಂಧನದಿಂದುಂಟಾದ ಪ್ರಪಂಚವ್ಯಾಪಾರಸ್ವರೂಪವು ಎಂಥಾದ್ದೆಂದರೆ, ರಾವಣನು ಶ್ರೀರಾಮ ಲಕ್ಷ್ಮಣರನ್ನು ಬಂಧನದಲ್ಲಿಟ್ಟಿರಲು ಕಳುಹಿಸಿಕೊಟ್ಟ ಎಂಟು ಜನ ಪ್ರಬಲರಾದ ರಾಕ್ಷಸರ ತತ್ವವಾದ ಕಾಮ ಕ್ರೋಧಾದಿಗಳ ಸ್ವರೂಪದಲ್ಲಿರುತ್ತವೆ. ಅಲ್ಲದೆ ರಾವಣನ

ಇತರ ಪರಿವಾರಗಳ ಶಕ್ತಿಗಳ ತತ್ವದಲ್ಲಿಯೂ ಇರುತ್ತವೆ. ಈ ಶಕ್ತಿಗಳ ಸ್ವರೂಪ ಮತ್ತು ಅವುಗಳನ್ನು ನಿಗ್ರಹಿಸುವ ವಿಧಾನಗಳು ಸುಂದರ ಮತ್ತು ಯುದ್ಧಕಾಂಡಗಳಲ್ಲಿ ಬರುವುವು.

ಆದುದರಿಂದ ಜನನವಾದ ಶಿಶುವಿಗೆ ಒಂದು ವಿಷಯಾಕಾಂಕ್ಷೆ ಅಂಕುರಿಸುವುದೇ ಅವಿದ್ಯೆಯ ಬಂಧನ ಬಂದಂತಾಗುವುದೆಂದು ಸೂಚಿತವಾಗುವುದು. ಹೀಗೆ ಬಂದ ಬಂಧನವು ಮೋಕ್ಷವಾಗುವವರೆಗೂ ಹೋಗುವುದಿಲ್ಲ.

ಬಾಲಕಾಂಡದಾರಭ್ಯ ಇದುವರೆಗಿನ ರಾಮಾಯಣಕಥೆಯ ತತ್ವಗಳು ಮನುಷ್ಯ ಜನ್ಮದಲ್ಲಿ ಜನನವಾದ ಪ್ರತಿಯೊಂದು ಶಿಶುವಿನಲ್ಲಿಯೂ ಉಂಟಾಗುತ್ತವೆ. ಆದರೆ ಮುಂದಿನ ರಾಮಾಯಣಕಥೆಯ ತತ್ವಗಳು ಮೋಕ್ಷಮಾರ್ಗದಲ್ಲಿ ಪ್ರವೇಶಮಾಡಿದವರಲ್ಲಿ ಮಾತ್ರ ಇರುತ್ತವೆ. ಕಾರಣವೇನೆಂದರೆ ಶ್ರೀಮನ್ನಾರಾಯಣನು ರಾವಣಾದಿ ರಾಕ್ಷಸರನ್ನು ನಿಗ್ರಹಿಸಲು ಮಾನವನಾಗಿ ಅವತಾರಮಾಡಿದನು. ಅಂದರೆ ಜೀವನು ಅವಿದ್ಯೆಯ ಉಪಾಧಿಯನ್ನು ನಿಗ್ರಹಿಸಿಕೊಂಡು ಸ್ವಸ್ವರೂಪವನ್ನು ಹೊಂದುವ ತತ್ವವನ್ನು ತಿಳಿಸುವುದೇ ಶ್ರೀರಾಮಾವತಾರದ ಮುಖ್ಯತತ್ವವಾಗಿರುತ್ತದೆ. ಪ್ರತಿಬಂಧಕವಾದ ಅವಿದ್ಯೆಯ ಬಂಧನವು ಹೇಗೆ ಉಂಟಾಗುವುದೆಂಬುದನ್ನು ಪ್ರಥಮದಲ್ಲಿ ತೋರಿಸಿ ಅನಂತರ ಬಂಧನದ ಬಿಡುಗಡೆಯ ದಾರಿಯನ್ನು ತೋರಿಸಿದರೆ ಬಂಧನದ ಸ್ವರೂಪವೂ, ಅದರ ಬಿಡುಗಡೆಗೆ ಮಾಡಬೇಕಾದ ಕಾರ್ಯಗಳ ವಿವರವೂ ಗೊತ್ತಾಗುತ್ತವೆ. ಆದುದರಿಂದ ಶ್ರೀಮದ್ರಾಮಾಯಣದಲ್ಲಿ ರಾವಣನಿಂದ ಸೀತಾಪಹರಣವಾಗುವವರೆಗೂ ಬಂಧನ ಬರುವ ರೀತಿಯನ್ನು ತೋರಿಸುತ್ತದೆ. ಮುಂದಿನ ರಾಮಾಯಣಕಥೆಯ ತತ್ವಗಳು ಬಂಧನದ ಬಿಡುಗಡೆಗೆ ಆಚರಿಸಬೇಕಾಗಿರುವ ಕರ್ತವ್ಯಗಳನ್ನು ಸೂಚಿಸುತ್ತವೆ. ಅಂದರೆ ಮೋಕ್ಷಾಪೇಕ್ಷಿಗಳು ಮೋಕ್ಷವನ್ನು ಪಡೆಯಲು ಎಷ್ಟು ಸೋಪಾನಗಳನ್ನು ಹತ್ತಬೇಕೆಂಬುದು ಗೊತ್ತಾಗುತ್ತದೆ. ಮೋಕ್ಷಮಾರ್ಗದ ತತ್ವವಾದ ಮುಂದಿನ ರಾಮಾಯಣಕಥೆಯನ್ನು ಶ್ರೀರಾಮಚಂದ್ರ ಮತ್ತು ಗುರುಚರಣಾರವಿಂದಗಳಿಗೆ ನಮಸ್ಕಾರಮಾಡಿ ಪ್ರಾರಂಭಿಸೋಣ.

## ಆರೋಹಣಕ್ರಮ

## ೧೨ನೆಯ ಪ್ರಕರಣ.

**ಶ್ರೀರಾಮನು ಸೀತಾವಿಯೋಗ ದುಃಖದಿಂದ ಪರಿತಾಪಪಡುತ್ತಾ ಸೀತೆಯನ್ನು ಹುಡುಕುತ್ತಿದ್ದುದು.** | **ಮೋಕ್ಷಾಧಿಕಾರಕ್ಕೆ ಬೇಕಾದ ಮುಮುಕ್ಷುತೆ, ವಿರಕ್ತಿ, ಶ್ರದ್ಧೆ, ಭಕ್ತಿ, ಮತ್ತು ಉತ್ಸಾಹಗಳ ವಿಚಾರ.**

**ರಾ||** ಶ್ರೀರಾಮನು ಪರ್ಣಶಾಲೆಯಲ್ಲಿ ಸೀತಾದೇವಿಯನ್ನು ಕಾಣದೆ ಶೋಕದಿಂದ ಉನ್ಮತ್ತನಂತಾಗಿ ಲಕ್ಷ್ಮಣನೊಂದಿಗೆ ಅರಣ್ಯದಲ್ಲೆಲ್ಲಾ ಸೀತಾದೇವಿಯನ್ನು ಹುಡುಕುತ್ತಿದ್ದನು.

**ತತ್ವ||** ಬುದ್ಧಿಮನಸ್ಸ್ತತ್ವದವರಾದ ಶ್ರೀರಾಮ ಲಕ್ಷ್ಮಣರಿಗೆ ಆವರಣ ವಿಕ್ಷೇಪ ಶಕ್ತಿಗಳ ಸಂಬಂಧದಿಂದ ಪ್ರಪಂಚವ್ಯವಹಾರರೂಪವಾದ ಬಂಧನವು ಬಂದ ವಿಚಾರವನ್ನು ಇದುವರೆಗೂ ತಿಳಿಸಿತು. ಅಲ್ಲದೆ ಮೋಕ್ಷದ ದಾರಿಗೆ ಪ್ರವೇಶಿಸಲು ಪ್ರಥಮದಲ್ಲಿ ನಿತ್ಯಾನಿತ್ಯವಸ್ತುವಿವೇಕವನ್ನು ಹೊಂದಬೇಕೆಂದೂ ತಿಳಿಸಿತಷ್ಟೆ! ಸೀತಾದೇವಿಯನ್ನು ಪರ್ಣಶಾಲೆಯಲ್ಲಿ ಕಾಣದೆ ಸಂತಾಪಪಡುತ್ತ ಸೀತಾದೇವಿಯ ಅಗಲಿಕೆಗೋಸ್ಕರ ಅತ್ಯಂತವಾಗಿ ದುಃಖಪಡುತ್ತಿದ್ದುದರ ತತ್ವವೇನೆಂದರೆ—ಶ್ರೀರಾಮನು ಬುದ್ಧಿತತ್ವಪ್ರಕಾಶಕನಾಗಿ ಶುದ್ಧಸತ್ವಪ್ರಧಾನಮಾಯಾ ಸ್ವರೂಪಳಾದ ಸೀತಾದೇವಿಯ ಜೊತೆಯಲ್ಲಿದ್ದುದರಿಂದ ಈಶ್ವರಸೋಪಾನದಲ್ಲಿದ್ದನು. ಈಗ ಸೀತಾದೇವಿಯ ಅಗಲಿಕೆಯಿಂದ ಅವಿದ್ಯೆಯ ಉಪಾಧಿ ಬಂದು ಜೀವನೆನಿಸಿಕೊಂಡನು. ಜನನ ಮರಣ ದುಃಖವನ್ನುಂಟುಮಾಡುವ ವಿಷಯವ್ಯಾಪಾರವನ್ನು ಪ್ರಕಾಶಿಸುವ ಜೀವತ್ವವು ಬೇಡವೆಂಬ ಮತ್ತು ಈ ಜೀವತ್ವದ ಬಂಧನದಿಂದ ಬಿಡುಗಡೆಯಾಗಿ ದುಃಖಗಳಿಲ್ಲದ ಮತ್ತು ವಿಷಯವ್ಯಾಪಾರಗಳಿಲ್ಲದ ಈಶ್ವರಸೋಪಾನವನ್ನು ಹೊಂದಬೇಕೆಂಬ ಅಭಿಲಾಷೆ ಅಥವಾ ಇಚ್ಛೆಯು ಬುದ್ಧಿಯಲ್ಲಿ ಉದಯವಾಗುವಿಕೆಯೇ ಶ್ರೀರಾಮನು ಸೀತಾದೇವಿಗೋಸ್ಕರ ದುಃಖಪಡುತ್ತಿರುವುದಾಗಿದೆ. ಅಂದರೆ ಪ್ರಪಂಚವ್ಯಾಪಾರರೂಪವಾದ ಬಂಧನವನ್ನು ತಪ್ಪಿಸಿಕೊಳ್ಳಲು ಮೋಕ್ಷವನ್ನು ಪಡೆಯಬೇಕೆಂಬ ಜ್ಞಾನವು ಬುದ್ಧಿಯಲ್ಲಿ ಉದಯವಾಗುವುದೇ ಶ್ರೀರಾಮನು ಸೀತಾದೇವಿಗೋಸ್ಕರ ದುಃಖಪಡುತ್ತಿರುವುದಾಗಿರುತ್ತದೆ.

ಸೀತಾ ರಾಮರು ಪುನಃ ಸೇರುವುದೆಂದರೆ—ಜೀವನು ನಿತ್ಯಮುಕ್ತಸ್ವಭಾವವಾದ ಈಶ್ವರಸೋಪಾನವನ್ನು ಹೊಂದುವ ತತ್ವವಾಗಿರುವುದು. ಶ್ರೀರಾಮನು ಸೀತೆಯೊಡಗೂಡಬೇಕಾದರೆ ರಾವಣನ ಬಂಧನದಲ್ಲಿರುವ ಸೀತಾದೇವಿಗೆ ಬಿಡುಗಡೆಯಾಗಬೇಕು. ಸೀತಾದೇವಿಗೆ ಬಿಡುಗಡೆಯಾಗಬೇಕಾದರೆ, ರಾವಣನ ನಿಗ್ರಹವಾಗಬೇಕು. ಆದುದರಿಂದ ರಾವಣನ ನಿಗ್ರಹವಾಗಿ ಶ್ರೀರಾಮನು ಸೀತೆಯೊಡಗೂಡುವ ತತ್ವವೇ ಮೋಕ್ಷವೆನಿಸುತ್ತದೆ. ಹೇಗೆಂದರೆ—ಶ್ರೀರಾಮನು ರಾವಣನ ವಧೆಮಾಡಿ, ಸೀತಾದೇವಿಯನ್ನು ಅಗ್ನಿಪ್ರವೇಶಮಾಡಿಸಿ ಅಗ್ನಿಯಿಂದ ಬಂದನಂತರದಲ್ಲಿಯೇ ಸೀತೆಯೊಡಗೂಡಿ ಪಟ್ಟಾಭಿಷಿಕ್ತನಾದನಷ್ಟೆ! ಇದರಲ್ಲಿ ರಾವಣನ ವಧೆಯ ತತ್ವವೇ ಅವಿದ್ಯೋಪಾಧಿಯ ನಿವೃತ್ತಿಯಾಗಿಯೂ, ಸೀತಾದೇವಿಯ ಅಗ್ನಿಪ್ರವೇಶದ ತತ್ವವೇ ಮಾಯೋಪಾಧಿಯು ಪರಬ್ರಹ್ಮನಲ್ಲಿ ಲೀನವಾಗುವುದಾಗಿಯೂ ಇರುತ್ತವೆ. ಪ್ರತಿಬಿಂಬಚೈತನ್ಯನಿಗೆ ಅವಿದ್ಯಾ, ಮಾಯೋಪಾಧಿಗಳೆರಡೂ ಯಾವ ಕಾಲದಲ್ಲಿರುವುದಿಲ್ಲವೋ ಆ ಕಾಲವೇ ಆತ್ಮಸಾಕ್ಷಾತ್ಕಾರದ ಕಾಲವಾಗಿರುವುದು. ಎಂದರೆ ಜೀವಬ್ರಹ್ಮಸಾಕ್ಷಾತ್ಕಾರದ ಕಾಲವಾಗಿರುವುದು. ಅಂದರೆ ಸೀತಾದೇವಿಯು ಅಗ್ನಿಪ್ರವೇಶಮಾಡಿ ಪುನಃ ಬರುವ ಪರ್ಯಂತರ ಇರುವ ಮಧ್ಯಕಾಲದ ಸ್ಥಿತಿಯೇ ಜೀವಬ್ರಹ್ಮಸಾಕ್ಷಾ

ತ್ಕಾರವಾಗಿರುವುದು. ಅಗ್ನಿಯಿಂದ ಒಂದಿರುಗಿ ಬಂದ ಸೀತಾದೇವಿಯನ್ನು ಸ್ವೀಕರಿಸಿ ಪಟ್ಟಾಭಿಷಿಕ್ತನಾಗುವುದೇ ಈಶ್ವರಸೋಪಾನವಾಗಿರುವುದು. ಆದುದರಿಂದ ಶ್ರೀರಾಮನು ಸೀತಾವಿಯೋಗದುಃಖದಿಂದಲೂ ಸೀತಾದೇವಿಯನ್ನು ಪಡೆಯಬೇಕೆಂಬ ಇಚ್ಛೆಯಿಂದಲೂ ಪರಿತಾಪಪಡುತ್ತಿದ್ದುದೇ ಮೋಕ್ಷೇಚ್ಛೆಯ ತತ್ವವಾಗಿರುವುದು. ಮೇಲಿನ ತತ್ವಾರ್ಥಗಳಿಂದ ಮೋಕ್ಷೇಚ್ಛೆಯೆಂದರೆ ಪರಮಾತ್ಮಸಾಕ್ಷಾತ್ಕಾರ ಮತ್ತು ಈಶ್ವರಸೋಪಾನಗಳೆರಡರ ತತ್ವಕ್ಕೂ ಅನ್ವಯವಾಗುವುದು.

ಸೀತಾದೇವಿಯು ಇದುವರೆಗೂ ಶ್ರೀರಾಮನೊಡನೆ ಇದ್ದಳಷ್ಟೆ! ಇದನ್ನೇ ಮೋಕ್ಷವೆಂದು ಏತಕ್ಕೆ ಹೇಳಬಾರದೆಂದರೆ—ಪ್ರಥಮಸೃಷ್ಟಿಯೆಂದು ಪರಿಗಣನೆಮಾಡಿದಲ್ಲಿ "ತತ್ಸೃಷ್ಟ್ವಾ ತದೇವಾನುಪ್ರಾವಿಶತ್" ಎಂಬ ಶ್ರುತಿಪ್ರಮಾಣದಂತೆ ವ್ಯಷ್ಟಿದೇಹಗಳಲ್ಲಿ ಈಶ್ವರ ಚೈತನ್ಯವೇ ಜೀವಚೈತನ್ಯವಾಗಿ ಪ್ರವೇಶಿಸಿ ಅವಿದ್ಯೋಪಾಧಿಯನ್ನು ಪಡೆಯುವುದು. ಅವಿದ್ಯೋಪಾಧಿಯು ಬಂದನಂತರ ಅದು ನಿವೃತ್ತಿಯಾಗುವವರೆಗೂ ಎಷ್ಟೇ ಜನ್ಮಗಳು ಬಂದರೂ ಆತ್ಮಸಾಕ್ಷಾತ್ಕಾರ ಮತ್ತು ಈಶ್ವರಸೋಪಾನಗಳು ದೊರಕುವುದಿಲ್ಲ. ಅವಿದ್ಯೆಯಿಂದಲೇ ಜನ್ಮಪರಂಪರೆಗಳು ಬರುತ್ತಿವೆ. ವಾಸನಾಮಯವಾದ ಅವಿದ್ಯೆಯ ದೆಸೆಯಿಂದಲೇ ಬುದ್ಧಿ ಮನಸ್ಸುಗಳಲ್ಲಿರುವ ಪ್ರತಿಬಿಂಬಚೈತನ್ಯವು ಒಂದು ಸ್ಥೂಲದೇಹ ಹೋದರೂ ಮತ್ತೊಂದು ಸ್ಥೂಲದೇಹವನ್ನು ಮಾತೃಗರ್ಭದಲ್ಲಿ ಸೃಷ್ಟಿಮಾಡಿಕೊಳ್ಳುತ್ತದೆ ಮತ್ತು ಪುನಃ ವ್ಯಾಪಾರಕ್ಕೆ ತೊರಡುತ್ತದೆ.

ರಾವಣನನ್ನು ನಿಗ್ರಹಿಸುವ ಮುಖ್ಯಕಾರ್ಯಕ್ಕೋಸ್ಕರ ಹೇಗೆ ಶ್ರೀರಾಮಚಂದ್ರಮೂರ್ತಿಯು ಅವತಾರಮಾಡಿರುವನೋ ಹಾಗೆ ಅವಿದ್ಯಾಬಂಧನ ನಿವೃತ್ತಿಯಾದ ಹೊರತು ಜನ್ಮಪರಂಪರೆಗಳು ತಪ್ಪುವುದಿಲ್ಲ. ಅಲ್ಲದೆ ಅವಿದ್ಯೆಯ ಬಂಧನವನ್ನು ಪರಿಹರಿಸಿಕೊಳ್ಳುವುದು ಮನುಷ್ಯಜನ್ಮದ ಸ್ಥಿತಿ ಅಥವಾ ವ್ಯಾಪಾರಕಾಲದಲ್ಲೇ ಹೊರತು ಮನುಷ್ಯದೇಹದ ಸೃಷ್ಟಿಯ ಕಾಲದಲ್ಲಿ ಎಂದಿಗೂ ಸಾಧ್ಯವಿಲ್ಲ. ಇದರಂತೆ ಸ್ಥಿತಿ ಅಥವಾ ದೇಹವ್ಯಾಪಾರ ಪ್ರಾರಂಭವಾಗುವವರೆಗೆಂದರೆ ರಾವಣನಿಂದ ಸೀತಾಪಹರಣವಾಗುವವರೆಗೆ ಸೀತಾದೇವಿಯು ಶ್ರೀರಾಮನೊಡನಿದ್ದರೂ ಮೋಕ್ಷವೆನಿಸಿಕೊಳ್ಳುವುದಿಲ್ಲ. ಆದುದರಿಂದ ಮನುಷ್ಯಜನ್ಮ ಬಂದು ಜೀವಂತನಾಗಿ ವ್ಯಾಪಾರಮಾಡುತ್ತಿರುವ ಕಾಲದಲ್ಲಿಯೇ ಶ್ರೀರಾಮಚಂದ್ರಮೂರ್ತಿಯು ರಾವಣನನ್ನು ನಿಗ್ರಹಿಸಿ ಸೀತಾದೇವಿಯೊಡನೆ ಪಟ್ಟಾಭಿಷಿಕ್ತನಾದ ತತ್ವದಂತೆ, ಅವಿದ್ಯಾಬಂಧನವನ್ನು ಹೋಗಲಾಡಿಸಿಕೊಂಡು ಮೋಕ್ಷಸಾಮ್ರಾಜ್ಯವನ್ನು ಅನುಭವಿಸಬೇಕು.

ಈ ಕಾರಣಗಳಿಂದ ಸೀತಾದೇವಿಯನ್ನು ಪಡೆಯಬೇಕೆಂಬ ಶ್ರೀರಾಮನ ಇಚ್ಛೆಯ ತತ್ವವೇ ಮನುಷ್ಯನಲ್ಲಿ ಮೋಕ್ಷೇಚ್ಛೆಯಾಗಿರುವುದು.

**ರಾ||** ಶ್ರೀರಾಮನು ಈ ರೀತಿಯಾಗಿ ಸೀತಾವಿಯೋಗ ದುಃಖದಿಂದ ಪರಿತಾಪ ಪಡುತ್ತ ಆ ದುಃಖವು ಹೆಚ್ಚುತ್ತ ಹೆಚ್ಚುತ್ತ ಉನ್ಮತ್ತನಂತಾಗಿ ಸೀತಾದೇವಿಯನ್ನು ಹುಡುಕಲು ಹೊರಟನು.

**ತತ್ವ||** ಪ್ರಪಂಚವ್ಯಾಪಾರ ಸ್ವರೂಪವಾದ ಬಂಧನವನ್ನು ಬಿಡಿಸಿಕೊಳ್ಳಲು ಕೇವಲ ಸಾಮಾನ್ಯವಾದ ಮೋಕ್ಷಾಪೇಕ್ಷೆಯಿಂದ ಖಂಡಿತವಾಗಿ ಸಾಧ್ಯವಿಲ್ಲ. ತೀವ್ರತಮವಾದ ಮೋಕ್ಷೇಚ್ಛೆಯೇ ಹುಟ್ಟಬೇಕು. ಶ್ರೀರಾಮನು ಸೀತಾವಿಯೋಗ ದುಃಖದಿಂದ ಉನ್ಮತ್ತನಂತೆ ಹೇಗೆ ಇದ್ದನೋ ಹಾಗೆ ತೀವ್ರತಮವಾದ ಮೋಕ್ಷೇಚ್ಛೆಯನ್ನು ಅಧಿಕಾರಿಯು ಹೊಂದಬೇಕೆಂಬ ತತ್ವದ ಸೂಚನೆಯಾಗಿರುತ್ತದೆ. ಮೋಕ್ಷವನ್ನು ಪಡೆಯಬೇಕೆಂಬ ಇಚ್ಛೆಯನ್ನು ಸಾಧಾರಣವಾಗಿ ಹೊಂದಿ ಪ್ರಪಂಚವ್ಯಾಪಾರದಲ್ಲಿಯೂ ಆಸಕ್ತಿಯಿದ್ದುಕೊಂಡು ಮೋಕ್ಷವನ್ನು ಹೊಂದಲು ಎಂದಿಗೂ ಸಾಧ್ಯವಿಲ್ಲ. ಮೋಕ್ಷೇಚ್ಛೆಯ ಜೊತೆಗೆ ವಿಷಯವ್ಯಾಪಾರಗಳಲ್ಲಿ ವೈರಾಗ್ಯ ಹುಟ್ಟಿದರೇನೇ ಮೋಕ್ಷಮಾರ್ಗಕ್ಕೆ ಅನುಕೂಲಿಸುತ್ತದೆ. ಅಂದರೆ ಮೋಕ್ಷೇಚ್ಛೆಯ ಜೊತೆಗೆ ಪ್ರಪಂಚವ್ಯಾಪಾರದಲ್ಲಿ ಜುಗುಪ್ಸೆಯೆಂದರೆ ವಿರಕ್ತಿಯು ಹುಟ್ಟಿದರೇನೇ ಮೋಕ್ಷಮಾರ್ಗಕ್ಕೆ ಅಧಿಕಾರ ಬರುವುದು.

ಲಕ್ಷ್ಮಣನನ್ನು ಮನಸ್ಸತ್ವಕ್ಕೆ ಅನ್ವಯಿಸಿರುತ್ತಷ್ಟೆ! ಇಂದ್ರಿಯಗಳ ಮೂಲಕ ಪ್ರಪಂಚವ್ಯಾಪಾರ ಮಾಡತಕ್ಕದ್ದೇ ಮನಸ್ಸು. ಇಂತಹ ಮನಸ್ಸತ್ವದಲ್ಲಿರುವ ಲಕ್ಷ್ಮಣನು ಅಣ್ಣನಾದ ಶ್ರೀರಾಮನ ಆಜ್ಞೆಯನ್ನು ಸ್ವಲ್ಪವೂ ಮೀರದೆ ಶ್ರೀರಾಮನ ಅನುವರ್ತಿಯಾಗಿ ಎಡೆಬಿಡದೆ ನಡೆದುಕೊಂಡು ಇರುತ್ತಾನೆ. ಈ ಕಥೆಯ ತತ್ವದ ಸಂದರ್ಭದಲ್ಲಿ ಶ್ರೀರಾಮನ ಪ್ರಬಲವಾದ ಇಚ್ಛೆಯೇನೆಂದರೆ—ಸೀತಾದೇವಿಯನ್ನು ಪಡೆಯಬೇಕೆಂಬುದು. ಮನಸ್ಸತ್ವದಲ್ಲಿರುವ ಲಕ್ಷ್ಮಣನು ಶ್ರೀರಾಮನ ಇಚ್ಛೆಗೆ ಸಹಕಾರಿಯಾಗಿದ್ದನೆಂದರೆ ಲಕ್ಷ್ಮಣನ ತತ್ವದಲ್ಲಿರುವ ಮನಸ್ಸು ಕೂಡ ಪ್ರಪಂಚವ್ಯಾಪಾರದಲ್ಲಿ ಜುಗುಪ್ಸೆಯುಂಟಾಗಿ ಮೋಕ್ಷೇಚ್ಛೆಯ ಜೊತೆಗೆ ವಿರಕ್ತಿ ಅಥವಾ ವೈರಾಗ್ಯ ಸ್ವರೂಪದಲ್ಲಿದ್ದಿತೆಂಬ ತತ್ವಾರ್ಥವಾಗಿರುತ್ತದೆ. ಮುಖ್ಯತಾತ್ಪರ್ಯವೇನೆಂದರೆ ಪ್ರಬಲವಾದ ಮೋಕ್ಷೇಚ್ಛೆಯೂ, ಇದರ ಜೊತೆಯಲ್ಲಿ ಪ್ರಬಲವಾದ ವಿರಕ್ತಿಯೂ ಅಧಿಕಾರಿಯಲ್ಲಿರಬೇಕೆಂಬ ತತ್ವಾರ್ಥವನ್ನು ರಾಮಾಯಣವು ಸೂಚಿಸುತ್ತದೆ.

ಪ್ರಪಂಚವ್ಯಾಪಾರಗಳಲ್ಲಿ ವಿರಕ್ತಿಯಿಲ್ಲದೆ ಅದನ್ನೂ ಅನುಭವಿಸಿಕೊಂಡು ಮೋಕ್ಷವನ್ನೂ ಹೊಂದಬಹುದೆನ್ನುವುದು ಮೊಸಳೆಯನ್ನು ಬೆನ್ನಿನಲ್ಲಿ ಕಟ್ಟಿಕೊಂಡು ನೀರಿನಲ್ಲಿ ಹೋದಂತೆಯೇ ಸರಿ. ಪೂರ್ವ ಪಶ್ಚಿಮ ದಿಕ್ಕುಗಳು ಹೇಗೆ ಒಂದಕ್ಕೊಂದು ವ್ಯತ್ಯಸ್ತವಾಗಿರುತ್ತವೋ ಹಾಗೆ ಪ್ರಪಂಚವ್ಯಾಪಾರ ಮತ್ತು ಪರಮಾತ್ಮಸಾಕ್ಷಾತ್ಕಾರಗಳೆರಡೂ ಇರುತ್ತವೆ. ವಿಷಯಾಧೀನವಾಗಿ ಹೊರಕ್ಕೆ ಹೊರಡುತ್ತಿರುವ ವೃತ್ತಿಯೇ ಪ್ರಧಾನವಾಗುಳ್ಳ

ಪ್ರಪಂಚವ್ಯಾಪಾರವೂ, ವೃತ್ತಿಕ್ಷಯಾನಂತರದಲ್ಲಿ ದೊರಕುವ ಸಾಕ್ಷಾತ್ಕಾರಸ್ಥಿತಿಯೂ ಒಂದಕ್ಕೊಂದು ಸೇರುವುದಿಲ್ಲ.

ಆದುದರಿಂದ ವಿಷಯಾದಿಗಳನ್ನು ಕಟ್ಟಿಕೊಂಡು ಮೋಕ್ಷವನ್ನು ಹೊಂದಬೇಕೆಂದು ಹೊರಡುವವರು ಮೋಕ್ಷೇಚ್ಛೆಯನ್ನು ವಿಷಯೇಚ್ಛೆಯಿಂದ ಕೊಲ್ಲುತ್ತಾರೆ. ಅಂದರೆ ಪ್ರಪಂಚದ ಕಡೆಗೆ ಚೆನ್ನಾಗಿ ವಿರಕ್ತಿಯಿರಬೇಕೆಂಬ ತಾತ್ಪರ್ಯವಾಗಿರುತ್ತದೆ. ಎಡೆಬಿಡದೆ ಶ್ರೀರಾಮನ ಅನುವರ್ತಿಯಾಗಿ ಲಕ್ಷ್ಮಣನು ಇದ್ದನೆಂದರೆ ತೀವ್ರತಮವಾದ ಮೋಕ್ಷೇಚ್ಛೆಯ ಜೊತೆಗೆ ತೀವ್ರತಮವಾದ ವಿರಕ್ತಿಯೆಂದರೆ ವೈರಾಗ್ಯವೂ ಸೇರಿಕೊಂಡಿರಬೇಕೆಂಬ ತಾತ್ಪರ್ಯವಾಗಿರುತ್ತದೆ.

ಆದುದರಿಂದ ಮನೆಯ ಕಟ್ಟಡಕ್ಕೆ ತಳಪಾಯವು ಮುಖ್ಯವಾಗಿರುವಂತೆ ಮೋಕ್ಷವನ್ನು ಬಯಸತಕ್ಕವರಿಗೆ ತೀವ್ರತಮವಾದ ವಿರಕ್ತಿಯೊಡಗೂಡಿದ ಮುಮುಕ್ಷುತ್ವವು ಪ್ರಧಾನವಾಗಿರುತ್ತದೆ. ಇದೇ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೩೦, ೩೧ನೆಯ ಶ್ಲೋಕಗಳಲ್ಲಿ ಹೇಳಿರುವುದೇನೆಂದರೆ,

ವೈರಾಗ್ಯಂಚ ಮುಮುಕ್ಷುತ್ವಂ ತೀವ್ರಂ ಯಸ್ಯತು ವಿದ್ಯತೇ ।
ತಸ್ಮಿನ್ನೇವಾರ್ಥವಂತಸ್ಸ್ಯುಃ ಫಲವಂತಶ್ಶಮಾದಯಃ ॥
ಏತಯೋರ್ಮಂದತಾ ಯತ್ರ ವಿರಕ್ತತ್ವ ಮುಮುಕ್ಷಯೋಃ ।
ಮರೌ ಸಲಿಲವತ್ತತ್ರ ಶಮಾದೇರ್ಭಾನಮಾತ್ರತಾ ॥

ತಾ॥ ಯಾವನಲ್ಲಿ ತೀವ್ರವೈರಾಗ್ಯವೂ, ತೀವ್ರಮೋಕ್ಷಾಪೇಕ್ಷೆಯೂ, ವಿಶೇಷವಾಗಿರುತ್ತವೋ ಅಂಥಾವನಲ್ಲಿಯೇ ಶಮಾದಿ ಗುಣಗಳು ಫಲಕಾರಿಗಳಾಗುತ್ತವೆ. ಮಿಕ್ಕವರಲ್ಲಿ ಇಲ್ಲವು. ವೈರಾಗ್ಯ ಮೋಕ್ಷಾಪೇಕ್ಷೆಗಳು ಯಾವನಲ್ಲಿ ವೇಗವಾಗಿರುವುದಿಲ್ಲವೋ ಅಂಥವನಲ್ಲಿ ಮರುಭೂಮಿಯಲ್ಲಿ ಜಲವು ತೋರ್ಕೆಗೆ ಮಾತ್ರವಿದ್ದಂತೆ ಶಮಾದಿಗುಣಗಳು ಹೆಸರಿಗೆ ಮಾತ್ರವಿರುತ್ತವೆ.

ಆದುದರಿಂದ ಮೋಕ್ಷಮಾರ್ಗಕ್ಕೆ ಅಧಿಕಾರ ಪಡೆಯಬೇಕೆಂಬುವವರು ಪ್ರಥಮದಲ್ಲಿ ವೈರಾಗ್ಯವನ್ನೂ ಮುಮುಕ್ಷುತ್ವವನ್ನೂ ಅಭಿವೃದ್ಧಿಮಾಡಿಕೊಂಡು ತೀವ್ರತಮವಾಗುವಂತೆ ಮಾಡಿಕೊಳ್ಳಬೇಕು. ಶ್ರೀರಾಮನು ಸೀತಾದೇವಿಗೋಸ್ಕರ ಹಂಬಲಿಸುತ್ತ ಅವಳನ್ನು ಹುಡುಕುತಿದ್ದುದು ಅವಳ ಮೇಲಿನ ಪರಮಪ್ರೀತಿಗೋಸ್ಕರ. ಆದುದರಿಂದ ಮೋಕ್ಷವನ್ನು ಪಡೆಯಬೇಕೆಂಬ ಅಧಿಕಾರಿಗಳು ಪ್ರೀತಿಯಿಂದೊಡಗೂಡಿದ ಮುಮುಕ್ಷುತ್ವವೆಂದರೆ ಮೋಕ್ಷವನ್ನು ಪಡೆಯುವುದರಲ್ಲಿ ಪರಮಪ್ರೀತಿಯನ್ನು ಹೊಂದಬೇಕು. ಮುಮುಕ್ಷುತೆ

ಯಲ್ಲಿ ಪ್ರೀತಿಮಾಡುವುದೆಂದರೆ, ಪರಮಾತ್ಮನಲ್ಲಿ ಪ್ರೀತಿಮಾಡುವುದು. ಪರಮಾತ್ಮನಲ್ಲಿ ಮಾಡುವ ಪ್ರೀತಿಗೆ ಭಕ್ತಿಯೆಂದು ಹೆಸರು. ಪ್ರೀತಿಯು ಹೆಚ್ಚಿದರೆ ಪರಮಪ್ರೀತಿ ಯೆನಿಸಿಕೊಳ್ಳುವುದು. ಹಾಗೆಯೇ ಭಕ್ತಿಯೆಂಬುದನ್ನು ಹೆಚ್ಚಿಸಿಕೊಂಡರೆ ಪರಾಭಕ್ತಿಯೆನಿಸಿ ಕೊಳ್ಳುವುದು. ಇಂತಹ ಪರಮಪ್ರೀತಿ ಸ್ವರೂಪವಾದ ಪರಾಭಕ್ತಿಯಿಂದೊಡಗೂಡಿದ ಮೋಕ್ಷಾಭಿಲಾಷೆಯು ಅತ್ಯಂತ ಶೀಘ್ರವಾಗಿ ಪರಮಪದವನ್ನು ಕೊಡುವುದರಿಂದ ಬಹಳ ದೊಡ್ಡ ಸಹಾಯವಾಗುತ್ತದೆ. ಮುಮುಕ್ಷುತೆಯಲ್ಲಿ ಪ್ರೀತಿಯು ಅಭಿವೃದ್ಧಿಯಾಗುತ್ತ ಬಂದಲ್ಲಿ ಅಧಿಕಾರಿಯು ಯಾವ ಪರಿಣಾಮವನ್ನು ಹೊಂದುತ್ತಾನೆಂದರೆ ನಾರದಭಕ್ತಿಸೂತ್ರ ದಲ್ಲಿ ಹೇಳಿರುವಂತೆ,

"ತತ್ಪ್ರಾಪ್ಯ ತದೇವಾವಲೋಕಯತಿ ತದೇವಶೃಣೋತಿ |
ತದೇವಭಾಷಯತಿ ತದೇವಚಿಂತಯತಿ ||"

ತಾ|| ಮುಮುಕ್ಷುತೆಯು ಪರಮಪ್ರೀತಿಯನ್ನು ಹೊಂದಿದ ಮೇಲೆ ಪರಮಾತ್ಮ ಭಾವನೆಯನ್ನೇ ಮಾಡಲು ಹೋಗುತ್ತಾನೆ; ಪರಮಾತ್ಮ ಸಂಬಂಧವಾದ ಮಾತುಗಳನ್ನೇ ಕೇಳುವನು ; ಪರಮಾತ್ಮ ವಿಷಯವನ್ನೇ ಮಾತನಾಡುವನು ಮತ್ತು ಪರಮಾತ್ಮ ವಿಷಯ ವನ್ನೇ ಯೋಚಿಸುವನು.

ಅಂದರೆ ಅಧಿಕಾರಿಯು ಮೋಕ್ಷದಲ್ಲಿ ಈ ವಿಧವಾದ ಪರಮಪ್ರೀತಿಯನ್ನು ಸಂಪಾ ದನೆ ಮಾಡಬೇಕೆಂಬ ತತ್ವವಾಗಿರುತ್ತದೆ. ಶ್ರೀರಾಮನು ಸೀತಾದೇವಿಯ ಮೇಲಿನ ಪರಮ ಪ್ರೀತಿಯಿಂದಲ್ಲವೆ ಉನ್ಮತ್ತನಂತಾಗಿ ಗಿಡ, ಬಳ್ಳಿ, ಮರಗಳನ್ನೆಲ್ಲಾ ಸೀತೆ ಇರುವ ಸ್ಥಳ ವೆಲ್ಲೆಂದು ಕೇಳುತ್ತಿದ್ದನು. ಈ ಮೇಲಿನ ತತ್ವಾರ್ಥವನ್ನು ಅನುಸರಿಸಿಯೇ ಶ್ರೀರಾಮನಿಗೆ ಸೀತಾದೇವಿಯಲ್ಲದೆ ಮತ್ಯಾವುದೂ ಬೇಕಾಗಲಿಲ್ಲ. ಆದುದರಿಂದ ಭಕ್ತಿಯೇ ಮೋಕ್ಷಕ್ಕೆ ದೊಡ್ಡ ಸಹಾಯವಾಗಿರುತ್ತದೆ. ಇದೇ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿಯಲ್ಲಿ,

ಮೋಕ್ಷಕಾರಣ ಸಾಮಗ್ರ್ಯಾಂ ಭಕ್ತಿರೇವ ಗರೀಯಸೀ |
ಸ್ವಸ್ವರೂಪಾನುಸಂಧಾನಂ ಭಕ್ತಿರಿತ್ಯಭಿಧೀಯತೆ ||

ತಾ|| ಮೋಕ್ಷವನ್ನು ಪಡೆಯಲು ಸಹಾಯಕಗಳಾಗಿರುವ ಸಕಲ ಸಲಕರಣೆಗ ಳೊಳಗೆ ಭಕ್ತಿಯೆಂಬುದೇ ಬಹಳ ದೊಡ್ಡ ಸಲಕರಣೆಯಾಗಿರುತ್ತದೆ. ತನ್ನ ಸ್ವರೂಪಾನು ಸಂಧಾನವೇ ಭಕ್ತಿ ಎಂಬದಾಗಿ ಹೇಳಿರುತ್ತಾರೆ.

ಈ ಶ್ಲೋಕದ ತಾತ್ಪರ್ಯದಂತೆ ಈಗ ಸೀತೆಯಿಂದೊಡಗೂಡಿದ ಸೀತಾರಾಮನಲ್ಲ. ಸೀತೆಯೊಡಗೂಡಿದರೆ ಜೀವತ್ವ ಹೋಗಿ ಈಶ್ವರತ್ವವು ಬರುತ್ತದೆ. ಇದೇ ಸ್ವಸ್ವರೂಪಾನುಸಂಧಾನ. ಈಶ್ವರತ್ವ ಬಂದನಂತರ ಸುಲಭವಾಗಿ ತನ್ನ ನಾರಾಯಣಸ್ವರೂಪವನ್ನು ಹೊಂದಬಹುದು. ಆದುದರಿಂದ ಶ್ರೀರಾಮನು ಸೀತೆಯಲ್ಲಿ ಪ್ರೀತಿಯನ್ನಿಟ್ಟುಕೊಂಡು ಹೇಗೆ ಸಂತಾಪಪಡುತ್ತಿದ್ದನೋ ಹಾಗೆಯೇ ಮೋಕ್ಷಾಧಿಕಾರ ಬೇಕೆನ್ನುವವರು ಆದರಲ್ಲಿ ಪ್ರೀತಿಯನ್ನು ಚೆನ್ನಾಗಿ ಹೊಂದಬೇಕು.

**ರಾ||** ಅನಂತರ ಶ್ರೀರಾಮನು ಲಕ್ಷ್ಮಣನನ್ನು ಕೂಡಿಕೊಂಡು ಪರ್ವತ, ವನ, ಕೊಳ, ನದಿ, ತಪ್ಪಲು, ಗುಹೆ, ಮೊದಲಾದ ನಾನಾ ಸ್ಥಳಗಳಲ್ಲಿ ಸೀತಾದೇವಿಯನ್ನು ಹುಡುಕಿ ನೋಡಿದರೂ ಸೀತಾದೇವಿಯು ದೊರೆಯಲಿಲ್ಲ.

**ತತ್ವ||** ವೈರಾಗ್ಯದಿಂದೊಡಗೂಡಿದ ತೀವ್ರತಮವಾದ ಮೋಕ್ಷೇಚ್ಛೆಯನ್ನು ಹೊಂದಬೇಕೆಂದು ಮೇಲೆ ತಿಳಿಸಿತಷ್ಟೆ! ಅಧಿಕಾರಿಯು ವಿರಕ್ತಿಯೊಡಗೂಡಿದ ಮೋಕ್ಷೇಚ್ಛೆಯನ್ನು ಹೊಂದಿದರೂ ತನಗೆ ಉಂಟಾಗಿರುವ ಬಂಧನದ ಸ್ವರೂಪದ ವಿಚಾರವನ್ನು ತಿಳಿದುಕೊಂಡು ಅದರ ನಿವೃತ್ತಿಗೆ ಬೇಕಾಗಿರುವ ಅನುಷ್ಠಾನಮಾಡಿ ತನ್ನ ಬಂಧನವನ್ನು ಪರಿಹರಿಸಿಕೊಳ್ಳದೆ ವಿರಕ್ತಿಯಿಂದ ಬೆಟ್ಟಗಳಲ್ಲಿ ಏಕಾಂಗಿಯಾಗಿ ವಾಸವಾಗಿದ್ದರೂ, ಊರುಗಳನ್ನು ಬಿಟ್ಟು ಗುಹೆಗಳಲ್ಲಿ ವಾಸಮಾಡಿಕೊಂಡಿದ್ದರೂ, ದೇಶಗಳನ್ನು ಅಲೆದಲೆದು ಹುಡುಕಿದರೂ, ಮೋಕ್ಷವು ದೊರಕುವುದಿಲ್ಲ. ಈ ತತ್ವಾರ್ಥದ ಸೂಚನೆಯು ತಾತ್ಪರ್ಯವೇ ಶ್ರೀರಾಮನು ಸೀತಾದೇವಿಯನ್ನು ಪರ್ವತ, ವನ, ಮುಂತಾದ ಕಡೆಗಳಲ್ಲಿ ಹುಡುಕಿದರೂ ಸೀತೆಯು ದೊರಕದೇ ಇದ್ದುದಾಗಿರುತ್ತದೆ.

**ರಾ||** ಶ್ರೀರಾಮನು ಪರ್ವತ ಮುಂತಾದ ಸ್ಥಳಗಳಲ್ಲಿ ಸೀತಾದೇವಿಯನ್ನು ಹುಡುಕಿದರೂ ದೊರಕದ್ದರಿಂದ ಲಕ್ಷ್ಮಣನನ್ನು ಗೋದಾವರೀನದಿಗೆ ಹೋಗಿ ಹುಡುಕಿಕೊಂಡು ಬರಹೇಳಿ ಕಳುಹಿಸಿದನು. ಶ್ರೀರಾಮನ ವಾಕ್ಯದಂತೆ ಲಕ್ಷ್ಮಣನು ಗೋದಾವರೀ ನದಿಗೆ ಹೋಗಿ ಹುಡುಕಿದರೂ ಸೀತಾದೇವಿಯು ದೊರೆಯಲಿಲ್ಲ.

**ತತ್ವ||** ಗೋದಾವರೀನದಿಯೆಂದರೆ—ದೇಹಯಾತ್ರೆಯ ಪ್ರವಾಹರೂಪವನ್ನು ಕೊಡತಕ್ಕವಳಲ್ಲಿ ಶ್ರೇಷ್ಠಳೆಂದು ಹಿಂದೆ ಪಂಚವಟೀವಾಸದ ಪ್ರಕರಣದಲ್ಲಿ ಬರೆದಿರುತ್ತಷ್ಟೆ! ದೇಹಯಾತ್ರೆಯೇ ಕರ್ಮರೂಪವಾದುದು. ಸ್ವರ್ಗಾದಿ ಫಲಗಳನ್ನಾಗಲಿ, ಭೂಲೋಕದಲ್ಲಿನ ಐಶ್ವರ್ಯವನ್ನಾಗಲಿ, ಕೊಡತಕ್ಕವರಲ್ಲಿ ಗೋದಾವರಿಯು ಶ್ರೇಷ್ಠಳೆಂದು ಮತ್ತೊಂದು ಅರ್ಥವೂ ಶಬ್ದಾರ್ಥಕಲ್ಪದ್ರುಮದಲ್ಲಿರುತ್ತದೆ. ಆದುದರಿಂದ ಭೂಲೋಕದ ಐಶ್ವರ್ಯಕ್ಕಾಗಲಿ

ಸ್ವರ್ಗಾದಿ ಸುಖಗಳ ಅನುಭವಕ್ಕಾಗಲಿ ಕರ್ಮಮಾರ್ಗವೇ ಮುಖ್ಯ. ಇಂತಹ ಕರ್ಮ ಮಾರ್ಗದಲ್ಲಿನ ಐಶ್ವರ್ಯವನ್ನು ಕೊಡತಕ್ಕವರಲ್ಲಿ ಗೋದಾವರಿಯು ಶ್ರೇಷ್ಠಳಾಗಿರುತ್ತಾಳೆ. ಇಂದ್ರಿಯುಗಳ ಮೂಲಕ ಕರ್ಮಮಾಡತಕ್ಕದ್ದು ಲಕ್ಷ್ಮಣನ ತತ್ವದಲ್ಲಿರುವ ಮನಸ್ಸು. ಆದುದರಿಂದ ಕರ್ಮಮಾರ್ಗದಲ್ಲಿ ಮೋಕ್ಷವು ದೊರಕಬಹುದೆಂಬ ಅನುಮಾನದಿಂದ ಕರ್ಮಮಾರ್ಗವನ್ನು ಅನುಸರಿಸಿಕೊಂಡು ಹೋಗುವ ತತ್ವವೇ ಲಕ್ಷ್ಮಣನು ಗೋದಾವರೀ ನದಿಗೆ ಸೀತಾದೇವಿಯನ್ನು ಹುಡುಕಿಕೊಂಡು ಹೋದುದಾಗಿರುತ್ತದೆ. ಗೋದಾವರೀ ನದಿಯಲ್ಲಿ ಸೀತೆಯು ದೊರಕದೆ ಲಕ್ಷ್ಮಣನು ಹಿಂದಕ್ಕೆ ಬಂದನೆಂದರೆ, ಕರ್ಮಮಾರ್ಗದಲ್ಲಿ ಆತ್ಮಸಾಕ್ಷಾತ್ಕಾರವು ದೊರಕುವುದಿಲ್ಲವೆಂಬ ತತ್ವಾರ್ಥದ ಸೂಚನೆಯಾಗಿರುತ್ತದೆ. ಬ್ರಹ್ಮಜ್ಞಾನದಿಂದಲ್ಲದೆ ಕರ್ಮಮಾರ್ಗದಿಂದ ಮುಕ್ತಿಯು ದೊರಕುವುದಿಲ್ಲವೆಂಬದಾಗಿ ಶ್ರುತಿಗಳೂ,

(೧) ನಕರ್ಮಣಾ ನಪ್ರಜಯಾ ಧನೇನ ತ್ಯಾಗೇನೈಕೆ ಅಮೃತತ್ವಮಾನಶುಃ

(೨) ತದ್ಯಥೇಹ ಕರ್ಮಚಿತೋ ಲೋಕಃ ಕ್ಷೀಯತೆ.

(೩) ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದ ಮಾಯಾ ನ್ನಾಸ್ತ್ಯ ಕೃತಃ ಕೃತೇನ.

ತಾ|| ಕರ್ಮಗಳಿಂದಲೂ, ಸಂತಾನಗಳಿಂದಲೂ, ಧನದಿಂದಲೂ ಮುಕ್ತಿಯು ದೊರಿಯುವುದಿಲ್ಲ. ವಿರಕ್ತಿಯಿಂದೊಡಗೂಡಿದ ಮುಮುಕ್ಷುತೆಯಿಂದಲೇ ದೊರೆಯುವುದು. (೨) ವ್ಯವಸಾಯದಿಂದ ಪಡೆದ ಧಾನ್ಯಾದಿಗಳು ಹೇಗೆ ನಾಶವನ್ನು ಪಡೆಯುತ್ತವೋ ಹಾಗೆಯೇ ಕರ್ಮಸುಕೃತಗಳಿಂದ ಸಂಪಾದಿಸಿದ ಸ್ವರ್ಗಾದಿ ಸುಖಗಳೂ ನಾಶವಾಗುತ್ತವೆ. (೩) ಕರ್ಮದಿಂದ ಕರ್ಮಸ್ವರೂಪವಲ್ಲದ ಬ್ರಹ್ಮಾನಂದಸ್ವರೂಪವಾದ ಮೋಕ್ಷವು ದೊರಿಯುವುದೇ ಇಲ್ಲ. ಇಹಲೋಕ ಪರಲೋಕಗಳು ಅನಿತ್ಯಗಳೆಂದು ತಿಳಿದು ವಿರಕ್ತನಾಗಬೇಕೆಂದು ಶ್ರುತಿಗಳು ಸಾರೆಯುತ್ತವೆ. ಇದೇ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೧೧ನೆಯ ಶ್ಲೋಕದಲ್ಲಿ,

ಚಿತ್ತಸ್ಯ ಶುದ್ಧಯೇ ಕರ್ಮ ನತು ವಸ್ತೂಪಲಬ್ಧಯೇ |
ವಸ್ತು ಸಿದ್ಧಿರ್ವಿಚಾರೇಣ ನಕಿಂಚಿ ತ್ಕರ್ಮಕೋಟಿಭಿಃ ||

ತಾ|| ಚಿತ್ತಶುದ್ಧಿಗೋಸ್ಕರ ಕರ್ಮಮಾಡಬೇಕಲ್ಲದೆ ವಸ್ತುಲಾಭಕ್ಕೋಸ್ಕರವಲ್ಲವು. ವಸ್ತುಲಾಭವಾದರೋ ಅನೇಕ ಕೋಟಿ ಕರ್ಮಾಚರಣೆಗಳಿಂದಲೂ ಆಗಲಾರದು ಎಂದು ಹೇಳಿರುತ್ತಾರೆ.

ಈ ಮೇಲಿನ ಪ್ರಮಾಣಗಳಿಗೆ ಅನುಸಾರವಾಗಿ ಗೋದಾವರೀನದಿಯಲ್ಲಿಯೂ ಲಕ್ಷ್ಮಣನಿಗೆ ಸೀತಾದೇವಿಯು ದೊರೆಯಲಿಲ್ಲ. ಹಾಗಾದರೆ ಈಶ್ವರಾರಾಧನರೂಪವಾದ ಕರ್ಮ ಮಾಡದೆ ಮತ್ತು ಪ್ರಾರಬ್ಧವನ್ನು ಅನುಭವಿಸುವುದಕ್ಕೆ ಬಂದಿರುವ ದೇಹಯಾತ್ರೆಯನ್ನು ಮಾಡದೆ ಮರದ ಬೊಂಬೆಯೋಪಾದಿಯಲ್ಲಿ ಮೌನದಿಂದ ಕುಳಿತಿರಲು ಸಾಧ್ಯವಿಲ್ಲ. ಮೋಕ್ಷವನ್ನು ಪಡೆಯುವ ಪರ್ಯಂತರ ಮೋಕ್ಷಮಾರ್ಗಕ್ಕೆ ಪ್ರತಿಬಂಧಕವಲ್ಲದ ಸಾತ್ವಿಕವಾದ ಈಶ್ವರಪ್ರಣೀತವಾದ ಕರ್ಮ ಮತ್ತು ದೇಹಯಾತ್ರೆಯ ಕ್ರಿಯೆಗಳನ್ನು ಮಾಡಲೇಬೇಕು. ಆದರೆ ಬ್ರಹ್ಮಜ್ಞಾನ ಪಡೆಯುವ ಪರ್ಯಂತರ ಅಸಂಗನಾಗಿ ಕರ್ಮಗಳನ್ನು ಮಾಡಿಕೊಂಡು ಬರಬೇಕು.

ರಾಮಾಯಣದ ತತ್ವದಲ್ಲಿ ನಂದಿಗ್ರಾಮದಲ್ಲಿ ವಾಸಮಾಡಿಕೊಂಡು ಶ್ರೀರಾಮನ ಪಾದುಕೆಗಳಿಗೆ ಸರ್ವಭಾರವನ್ನೂ ವಹಿಸಿದ ಭರತನ ರಾಜ್ಯಪರಿಪಾಲನೆಯ ತತ್ವದ ಸಹಾಯವು ಈ ಪ್ರಕರಣದಿಂದ ಪ್ರಾರಂಭವಾಗಿರುತ್ತದೆ. ಅಂದರೆ ಕಾರ್ಯಗಳಲ್ಲಿ ಅಸಂಗನಾಗಿರುವಿಕೆಯು ಇಲ್ಲಿಂದ ಪ್ರಾರಂಭವಾಗುತ್ತದೆ. ಭರತನು ಶ್ರೀರಾಮನ ಅನುವರ್ತಿಯಾಗಿ ಇರುವ ತತ್ವವನ್ನು ಅಯೋಧ್ಯಾಕಾಂಡದಲ್ಲಿಯೇ ಬರೆದಿರುತ್ತಷ್ಟೆ! ಆ ತತ್ವಗಳು ಇಲ್ಲಿಗೆ ಅನ್ವಯವಾಗುತ್ತವೆ. ಮುಖ್ಯತಾತ್ಪರ್ಯವೇನೆಂದರೆ, ಬುದ್ಧಿ ಮನಸ್ಸುಗಳು ಮೋಕ್ಷೇಚ್ಛೆಯಲ್ಲಿ ಹೊರಟರೆ ಅಹಂಕಾರವು ಕೂಡ ನಿರಭಿಮಾನದಿಂದ ಕಾರ್ಯಗಳನ್ನು ನಡೆಸುತ್ತಿರಬೇಕೆಂಬ ಅರ್ಥಮಾಡಬಹದು. ಅಥವಾ ತೀವ್ರತಮವಾದ ವಿರಕ್ತಿಯಿಂದೊಡಗೂಡಿದ ಮುಮುಕ್ಷುತೆಯು ಬುದ್ಧಿ ಮನಸ್ಸುಗಳಿಗೆ ಇದ್ದರೆ ನಿರಭಿಮಾನವು ತಾನಾಗಿಯೇ ಹಿಂಬಾಲಿಸುವುದೆಂದೂ ಹೇಳಬಹುದು ಮುಖ್ಯವಾಗಿ ಮೋಕ್ಷಮಾರ್ಗಕ್ಕೆ ಭರತ ಶತ್ರುಘ್ನರ ಸಹಾಯವೆಂದರೆ—ಅಭಿಮಾನ ಮತ್ತು ಸ್ವಾರ್ಥತೆಗಳಿಲ್ಲದಿರುವುದರ ಸಹಾಯವು ಇಲ್ಲಿಂದ ಪ್ರಾರಂಭವಾಗುತ್ತದೆ.

ಮೋಕ್ಷಮಾರ್ಗದಲ್ಲಿ ತೀವ್ರತಮವಾದ ಇಚ್ಛೆಯುಳ್ಳವರು ಮೋಕ್ಷಮಾರ್ಗದ ಕರ್ಮವಾದ ಶ್ರವಣ ಮನನ, ನಿದಿಧ್ಯಾಸ, ಮತ್ತು ಸಮಾಧಿ ಅನುಷ್ಠಾನವಾದ ಕರ್ಮಗಳ ಸೋಪಾನದ ಕಡೆಗೆ ಹೆಚ್ಚು ಗಮನವನ್ನು ಖಂಡಿತವಾಗಿಯೂ ಕೊಡಬೇಕು. ಈ ಮೋಕ್ಷಮಾರ್ಗದ ಕರ್ಮವು ಈಶ್ವರಾರಾಧನವನ್ನು ಒಳಕೊಂಡಿರುವುದಲ್ಲದೆ ಈಶ್ವರತ್ವವನ್ನೇ ಪಡೆಯುವ ಕ್ರಿಯೆಯಾದುದರಿಂದ ನಿಸ್ಸಂದೇಹವಾಗಿ ಅತ್ಯಂತ ಶ್ರೇಷ್ಠವಾದುದು. ಶ್ರೀರಾಮಚಂದ್ರನು ಕೂಡ ಈರೀತಿಯಾದ ಕರ್ಮದ ಸಹಾಯದಿಂದಲೇ ಸೀತಾದೇವಿಯನ್ನು ಪಡೆದನೆಂಬುದು ಮುಂದಿನ ಕಥಾಸಂದರ್ಭಗಳಿಂದ ವ್ಯಕ್ತವಾಗುತ್ತದೆ.

**ರಾ||** ಲಕ್ಷ್ಮಣನು ಗೋದಾವರೀ ನದಿಗೆ ಹೋಗಿ ಸೀತಾದೇವಿಯನ್ನು ಕಾಣದೆ ವಿಮುಖನಾಗಿ ಬರಲು ಶ್ರೀರಾಮನೇ ಗೋದಾವರೀ ನದಿಯಲ್ಲಿ ಸೀತೆಯನ್ನು ಹುಡುಕಲು

ಹೊರಟನು. ಶ್ರೀರಾಮನು ಕೂಡ ಗೋದಾವರೀ ನದಿಯಲ್ಲಿ ಸೀತೆಯನ್ನು ಕಾಣದೆ ವಿಮುಖನಾಗಿ ಬಂದನು.

**ತತ್ವ||** ಲಕ್ಷ್ಮಣನು ಗೋದಾವರೀ ನದಿಗೆ ಹೋಗಿ ವಿಮುಖನಾಗಿ ಬಂದನೆಂದರೆ, ದೇಹಯಾತ್ರಾರೂಪವಾದ ಕ್ರಿಯೆಯಲ್ಲಿಯೂ ಮೋಕ್ಷ ದೊರೆಯುವುದಿಲ್ಲವೆಂಬ ತತ್ವಾರ್ಥ ವಾಗಿರುತ್ತಷ್ಟೆ! ಈಗ ಬುದ್ಧಿತತ್ವಸ್ವರೂಪನಾದ ಶ್ರೀರಾಮನೂ ಗೋದಾವರೀನದಿಗೆ ಹೋಗಿ ಸೀತೆಯನ್ನು ಹುಡುಕಿದನೆಂದರೆ, ಪ್ರಪಂಚಸ್ವರೂಪಜ್ಞಾನವಾದ ವಿಜ್ಞಾನದಲ್ಲಿ ಮೋಕ್ಷವು ದೊರೆಯಬಹುದೆಂದು ತಿಳಿದು ಬುದ್ಧಿವೃತ್ತಿಯೂ ವಿಜ್ಞಾನದಲ್ಲಿ ಪ್ರವೇಶಿಸು ವಿಕೆಯೇ ಶ್ರೀರಾಮನು ಕೂಡ ಗೋದಾವರೀ ನದಿಯಲ್ಲಿ ಸೀತೆಯನ್ನು ಹುಡುಕಲು ಹೊರಟುದಾಗಿರುತ್ತದೆ. ಅಂದರೆ ಯಾವುದಾದರೂ ವಸ್ತುವಿನ ಅಥವಾ ವಿಷಯದ ಆಕಾರ ವಾಗುವುದು ಮತ್ತು ವಿಮರ್ಶೆಮಾಡುವುದೇ ಬುದ್ಧಿಯ ಕರ್ತವ್ಯವಾಗಿರುತ್ತದೆ. ಇಂತಹ ಬುದ್ಧಿಯು ಗೋದಾವರೀ ನದಿಯ ತತ್ವದಲ್ಲಿರುವ ಪ್ರಪಂಚವ್ಯಾಪಾರದಲ್ಲಿ ಹೋಗುವು ದೆಂದರೆ ಪ್ರಪಂಚದ ಜ್ಞಾನ ಅಥವಾ ವಿಜ್ಞಾನದಲ್ಲಿ ವರ್ತಿಸುವುದೆಂಬ ತಾತ್ಪರ್ಯವಾಗಿರು ತ್ತದೆ. ನಮಗೆ ಕಂಡು ಕೇಳಿ ಬರುವ ನಾಮರೂಪಾತ್ಮಕವಾದ ಸಕಲ ಪದಾರ್ಥಗಳೂ ಪಂಚಭೂತಗಳ ಸ್ವರೂಪವಾಗಿರುತ್ತವೆ. ಈ ಪಂಚಭೂತಗಳಲ್ಲಿನ ಜ್ಞಾನವು ವಿಜ್ಞಾನ ವೆನಿಸಿಕೊಳ್ಳುತ್ತದೆ. ದೇಹಯಾತ್ರೆಯು ಜ್ಞಾನ ಮತ್ತು ವಿವೇಚನೆಯು ವಿಜ್ಞಾನವಾಗಿರು ವುದರಿಂದ ಪ್ರಪಂಚದ ಯಾವ ವಸ್ತುವಿನ ಜ್ಞಾನದಲ್ಲಿಯೂ ಮುಕ್ತಿಯು ದೊರಕುವುದಿಲ್ಲ ವೆಂಬ ತತ್ವಾರ್ಥವೇ ಶ್ರೀರಾಮನು ಗೋದಾವರೀ ನದಿಗೆ ಹೋಗಿ ಸೀತಾದೇವಿಯನ್ನು ಕಾಣದೆ ವಿಮುಖನಾಗಿ ಬಂದುದಾಗಿರುತ್ತದೆ.

ದೇಹಯಾತ್ರೆಯ ರೂಪವಾದ ಕ್ರಿಯಾ ಮತ್ತು ಜ್ಞಾನಗಳಲ್ಲಿ ಮೋಕ್ಷವು ದೊರಕು ವುದಿಲ್ಲವೆಂಬುದಕ್ಕೆ ಮೇಲಿನ ಕಥೆಯ ತತ್ವಗಳ ಜೊತೆಗೆ ಅಯೋಧ್ಯಾಕಾಂಡದಲ್ಲಿ ವಸಿಷ್ಠ ಜಾಬಾಲಿಋಷಿಗಳು ಶ್ರೀರಾಮನಿಗೆ ದೇಹಯಾತ್ರೆಯ ರೂಪವಾದ ವನವಾಸ ಬೇಡವೆಂದು ಹೇಳಿರುವ ತತ್ವಗಳನ್ನು ಇಲ್ಲಿಗೆ ಅನ್ವಯಮಾಡಿಕೊಳ್ಳಬೇಕು. ಶ್ರೀರಾಮ ಲಕ್ಷ್ಮಣರು ಗೋದಾವರೀ ನದಿಗೆ ಹೋಗಿ ಸೀತಾದೇವಿಯನ್ನು ಹುಡುಕಿ ವಿಮುಖರಾಗಿ ಬಂದ ಮುಖ್ಯ ತಾತ್ಪರ್ಯವೇನೆಂದರೆ—ಪ್ರಪಂಚದಲ್ಲಿ ಎಂತಹ ಅದ್ಭುತಕಾರ್ಯಮಾಡಿದರೂ ಮತ್ತು ಒಳ್ಳೆಯ ಮೇಧಾಶಕ್ತಿಯಿಂದ ಕೂಡಿದ ಪ್ರಚಂಡವಾದ ತಿಳವಳಿಕೆಯಿದ್ದರೂ ಅಸತ್ತಾದ ವಿಜ್ಞಾನ ವೆನಿಸುತ್ತದೆ. ಇಂತಹ ಪಂಚಭೂತಗಳ ಕಾರ್ಯ ಮತ್ತು ಜ್ಞಾನದಿಂದ ಮೋಕ್ಷವು ದೊರೆಯು ವುದಿಲ್ಲವೆಂಬ ತತ್ವವಾಗಿರುತ್ತದೆ.

**ರಾ||** ಎಲ್ಲಿ ಹುಡುಕಿದರೂ ಸೀತಾದೇವಿಯು ದೊರಕದ್ದರಿಂದ ಶ್ರೀರಾಮನಿಗೆ ಅತ್ಯಂತ ಕೋಪ ಬಂದು ತನ್ನ ಧನುಸ್ಸನ್ನು ತೆಗೆದುಕೊಂಡು "ಸೀತಾವಿಯೋಗಕ್ಕೆ

ಕಾರಣರಾದ ರಾಕ್ಷಸರೂ, ಪಿಶಾಚಿಗಳೂ ಇಲ್ಲದಂತೆ ಪ್ರಳಯಮಾಡುತ್ತೇನೆ. ನನ್ನ ಸೌಮ್ಯ ಗುಣಗಳಿಂದ ನನ್ನ ಸದ್ಗುಣಗಳು ಅವಗುಣಗಳಾಗಿಯೇ ತೋರುತ್ತಿವೆ. " ಎಂದುಕೊಂಡು ಪ್ರಳಯಕಾಲದ ಕಾಲಾಗ್ನಿಯಂತೆ ಕೋಪದಿಂದ ನಿಟ್ಟುಸುರು ಬಿಟ್ಟನು.

**ತತ್ವ**|| ವಿರಕ್ತಿಯೊಡಗೂಡಿದ ತೀವ್ರತಮವಾದ ಮುಮುಕ್ಷುತೆಯನ್ನು ಹೊಂದಿ ಅದರ ಕಾರ್ಯಸಾಧನೆಯನ್ನು ಮಾಡಿಯೇ ಮಾಡುತ್ತೇನೆಂಬ ದೃಢಪ್ರತಿಜ್ಞೆಯೂ, ಮೋಕ್ಷ ವನ್ನು ಪಡೆಯುವವರೆಗೂ ಎಂತಹ ವಿಘ್ನಗಳು ಬಂದರೂ ಅವುಗಳನ್ನು ಖಂಡಿಸಿಕೊಂಡು ಹೋಗುವಷ್ಟು ದಾರ್ಢ್ಯವೂ, ಮೋಕ್ಷವನ್ನು ಪಡೆಯಲು ಯಾವ ವಿಧವಾದ ಕಷ್ಟಕಾರ್ಯಗಳಿ ದ್ದರೂ ಅವುಗಳನ್ನು ಹೇಗಾದರೂ ಸಾಧಿಸುತ್ತೇನೆಂಬ ಧೈರ್ಯ ಮತ್ತು ಉತ್ಸಾಹಗಳೂ ಇಲ್ಲ ದಿದ್ದರೆ ಉದ್ದಿಷ್ಟಫಲವು ದೊರೆಯುವುದಿಲ್ಲ. ಆದುದರಿಂದ ದೃಢತರವಾದ ಸಂಕಲ್ಪವೂ, ಅತ್ಯಂತ ಶ್ರದ್ಧೆ, ಉತ್ಸಾಹಗಳೂ ಅವಶ್ಯಕವಾಗಿರಬೇಕೆಂಬ ತತ್ವಾರ್ಥದ ಸೂಚನೆಯೇ. ಶ್ರೀರಾಮನು ಕೋಪೋದ್ರಿಕ್ತನಾಗಿದ್ದುದರ ತತ್ವ.

ಮುಖ್ಯತಾತ್ಪರ್ಯವೇನೆಂದರೆ, ದೃಢತರವಾದ ಸಾಧನೆಯಿಲ್ಲದೆ ಸಾಧ್ಯವು ದೊರೆಯುವು ದಿಲ್ಲ. ಆದುದರಿಂದ ಮೋಕ್ಷಪಡೆಯಬೇಕೆಂಬ ಅಧಿಕಾರಿಗಳಿಗೆ ತೀವ್ರತಮವಾದ ವೈರಾಗ್ಯ ಮತ್ತು ಭಕ್ತಿಯಿಂದೊಡಗೂಡಿದ ಮುಮುಕ್ಷುತೆ, ಧೈರ್ಯ, ಉತ್ಸಾಹ, ದೃಢಸಂಕಲ್ಪಗಳಿದ್ದ ರೇನೇ ಅಧಿಕಾರಲಕ್ಷಣ ಬರುತ್ತದೆ. ಇಂತಹವರೇನೇ ಅಧಿಕಾರಿಗಳೆಂದು ಶ್ರೀಶಂಕರಭಗವ ತ್ಪಾದರವರು ವಿವೇಕಚೂಡಾಮಣಿ ೧೧ನೆಯ ಶ್ಲೋಕದಲ್ಲಿ,

> ಸನ್ಯಸ್ಯ ಸರ್ವಕರ್ಮಾಣಿ ಭವಬಂಧವಿಮುಕ್ತಯೇ |
> ಯತ್ಯತಾಂ ಪಂಡಿತೈರ್ಧೀರೈ ರಾತ್ಮಾಭ್ಯಾಸ ಉಪಸ್ಥಿತೈಃ ||

ತಾ|| ಆತ್ಮವಿಚಾರದಲ್ಲಿ ಅತ್ಯಂತ ಆಸಕ್ತರಾದ ಧೀರರು ಕರ್ಮಗಳಲ್ಲಿ ಅಸಂಗರಾಗಿ ಕರ್ಮಮಾಡುತ್ತ ಇಲ್ಲವೆ ಆತ್ಮವಿಚಾರವ್ಯತಿರಿಕ್ತವಾದ ಸರ್ವಕರ್ಮಗಳನ್ನೂ ಪರಿತ್ಯಜಿಸಿ ಹುಟ್ಟು ಸಾವುಗಳ ಭೀತಿಯ ಬಿಡುಗಡೆಗಾಗಿ ಪ್ರಯತ್ನಮಾಡಲಿ ಎಂದು ಹೇಳಿರುವರು.

ಶ್ರೀರಾಮ ಲಕ್ಷ್ಮಣರು ಮೇಲೆ ವಿವರಿಸಿರುವ ರೀತಿಯಾಗಿ ಎಲ್ಲಿ ಹುಡುಕಿದರೂ ಸೀತಾದೇವಿಯು ದೊರೆಯಲಿಲ್ಲ. ಕಾರಣವೇನೆಂದರೆ, ಸೀತಾದೇವಿಯನ್ನು ಯಾರು ಎತ್ತಿ ಕೊಂಡು ಹೋದರೋ ಅವಳು ಎಲ್ಲಿರುವಳೋ ಎಂಬ ವಿಚಾರವೇ ತಿಳಿಯದೆ ಅವಳಿಲ್ಲದ ಇತರ ಕಡೆಗಳಲ್ಲಿ ಹುಡುಕಿದುದರಿಂದ ಅದು ವ್ಯರ್ಥವಾಗಿ ಫಲ ದೊರೆಯಲಿಲ್ಲ. ಇದರಂತೆ ಮೋಕ್ಷವನ್ನು ಪಡೆಯಲು ಪ್ರತಿಬಂಧಕವು ಎಲ್ಲಿರುವುದೆಂಬ ವಿಚಾರಮಾಡದೆ, ಕರ್ಮ, ವಿಜ್ಞಾನಗಳಲ್ಲಿ ತೊಡಗುವುದರಿಂದ ಮುಕ್ತಿಯು ಎಂದಿಗೂ ದೊರೆಯುವುದಿಲ್ಲ.

ಈ ತತ್ವಾರ್ಥಕ್ಕೆ ಅನುಸಾರವಾಗಿ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೬ನೆಯ ಶ್ಲೋಕದಲ್ಲಿ,

> ವದನ್ತು ಶಾಸ್ತ್ರಾಣಿ ಯಜನ್ತು ದೇವಾ‌ನ್ |
> ಕುರ್ವನ್ತು ಕರ್ಮಾಣಿ ಭಜನ್ತು ದೇವತಾಃ ||
> ಆತ್ಮೈಕ್ಯ ಬೋಧೇನ ವಿನಾಪಿ ಮುಕ್ತಿಃ |
> ನಸಿಧ್ಯತಿ ಬ್ರಹ್ಮಶತಾಂತರೇಪಿ ||

ತಾ|| ಅನೇಕ ಶಾಸ್ತ್ರಗಳನ್ನು ಪಠಿಸಲಿ, ದೇವತೆಗಳನ್ನು ಪೂಜಿಸಿ ಯಾಗಾದಿಗಳನ್ನು ಮಾಡಲಿ, ನಾನಾವಿಧವಾದ ಸತ್ಕರ್ಮಗಳನ್ನಾಚರಿಸಲಿ, ಬಗೆಬಗೆಯಾದ ದೇವತೆಗಳನ್ನು ಸೇವಿಸಲಿ, ಬ್ರಹ್ಮಾತ್ಮೈಕ್ಯಜ್ಞಾನವಿಲ್ಲದೆ ಹೋದರೆ ನೂರಾರು ಬ್ರಹ್ಮಕಲ್ಪಗಳು ಕಳೆದರೂ ಮುಕ್ತಿಯು ದೊರಕುವುದಿಲ್ಲ ಎಂದು ಹೇಳಿರುವರು.

ಆದುದರಿಂದ ಅಧಿಕಾರಿಯು ಮೋಕ್ಷವನ್ನು ಪಡೆಯಬೇಕೆಂಬ ಪ್ರಬಲವಾದ ಇಚ್ಛೆಯನ್ನು ಪಡೆದುಕೊಂಡು ಪ್ರಪಂಚದ ಕಡೆಗೂ ವೈರಾಗ್ಯವನ್ನು ಹೊಂದಿ ಮೋಕ್ಷಪಡೆಯುವುದರಲ್ಲಿ ಶ್ರದ್ಧೆಯನ್ನು ಸಂಪಾದಿಸಿಕೊಂಡು ಅನಂತರ ತನಗೆ ಉಂಟಾಗಿರುವ ಬಂಧನವು ಎಲ್ಲಿರುವುದೆಂಬ ವಿಚಾರವನ್ನು ಗುರುಮುಖೇನ ತಿಳಿದುಕೊಳ್ಳಬೇಕು. ಅವಿದ್ಯಾಬಂಧನದ ವಿಚಾರವನ್ನು ತಿಳಿಯುವುದೆಂದರೆ—ಸೀತಾದೇವಿಯನ್ನು ಎತ್ತಿಕೊಂಡು ಹೋದವರು ಯಾರೆಂಬ ವಿಚಾರವನ್ನು ತಿಳಿಯುವುದು. ಮುಮುಕ್ಷುತೆ, ಶ್ರದ್ಧಾ, ಭಕ್ತಿ, ವೈರಾಗ್ಯಗಳೆಲ್ಲವೂ ಸೇರಿ ಶುಭೇಚ್ಛೆಯೆಂದು ಕರೆಯಲ್ಪಡುತ್ತದೆ. ಆದುದರಿಂದ ಇಂತಹ ಶುಭೇಚ್ಛೆಯು ತಳಪಾಯದಂತೆ ಪ್ರಥಮದಲ್ಲಿ ಇದ್ದರೆ ಅನಂತರ ವಿಚಾರಕ್ಕೆ ಅಧಿಕಾರ ಬರುವುದು. ಇದೇ ತಾತ್ಪರ್ಯಕ್ಕೆ ವರಾಹೋಪನಿಷತ್ತಿನಲ್ಲಿ,

"ಶುಭೇಚ್ಛಾ ಪ್ರಥಮಾ ಭೂಮಿಕಾ ಭವತಿ ವಿಚಾರಣಾ ದ್ವಿತೀಯಾ"

ಎಂಬದಾಗಿ ಹೇಳಿರುತ್ತದೆ. ಆದುದರಿಂದ ಈ ಪ್ರಕರಣದ ತತ್ವಗಳೆಲ್ಲಾ ಶುಭೇಚ್ಛೆಯ ಸೋಪಾನದ ತತ್ವಗಳಾಗಿರುತ್ತವೆ. ಮುಂದಿನ ಸೋಪಾನವಾದ ಬಂಧನದ ವಿಚಾರವನ್ನು ತಿಳಿಸುವ ಅಥವಾ ವೇದಾಂತಶ್ರವಣದ ಪ್ರಕರಣವಾದ ಜಟಾಯುವಿನ ಕಥೆಯನ್ನು ಪ್ರಾರಂಭಮಾಡೋಣ.

---

## ೧೩ನೆಯ ಪ್ರಕರಣ.

ಸೀತಾದೇವಿಯನ್ನು ರಾವಣನೆತ್ತಿಕೊಂಡು ಹೋದನೆಂದು ಜಟಾಯುವು ಶ್ರೀರಾಮನಿಗೆ ತಿಳಿಸಿದುದು. | ಅಧಿಕಾರಿಯು ತನ್ನ ಬಂಧನದ ಪರಿಹಾರಕ್ಕಾಗಿ ಗುರುವಿನಲ್ಲಿ ವೇದಾಂತ ವಿಚಾರ ಮಾಡುವುದು.

**ರಾ||** ಶ್ರೀರಾಮನು ಲಕ್ಷ್ಮಣನೊಡನೆ ಸೀತಾದೇವಿಯನ್ನು ಹುಡುಕುತ್ತ ಬರುತ್ತಿರುವಲ್ಲಿ ಸೀತಾದೇವಿಗೋಸ್ಕರ ರಾವಣನೊಡನೆ ಯುದ್ಧಮಾಡಿ ಜರ್ಝರಿತನಾಗಿರುವ ಜಟಾಯುವೆಂಬ ಹದ್ದನ್ನು ಕಂಡನು. ರಾವಣನು ಸೀತೆಯನ್ನು ಅಪಹರಿಸಿಕೊಂಡು ಹೋದನೆಂದು ಜಟಾಯುವು ಶ್ರೀರಾಮನಿಗೆ ತಿಳಿಸಿದನು.

**ತತ್ವ||** ಜಟಾಯುವು ಯಾರೆಂದರೆ—ಜಟಾಯು, ಸಂಪಾತಿ, ಗರುಡರು, ಸಹೋದರರೆಂದೂ, ಆಕಾಶಕ್ಕೆ ಹಾರುವುದರಲ್ಲಿ ಜಟಾಯುವಿಗಿಂತ ಸಂಪಾತಿಯು ಮೇಲಕ್ಕೆ ಹಾರುತ್ತಾನೆಂದೂ, ಸಂಪಾತಿಗಿಂತ ಗರುಡನು ಇನ್ನೂ ಮೇಲಕ್ಕೆ ಹಾರುವನೆಂದೂ, ಸಂಪಾತಿಯು ವಾನರರ ಸಂಗಡ ಕಿಷ್ಕಿಂಧಾಕಾಂಡದಲ್ಲಿ ಹೇಳಿರುತ್ತಾನೆ. ಅಲ್ಲದೆ ಭೂಮಿಯಿಂದ ಮೇಲಕ್ಕೆ ಸಪ್ತಭಾಗಮಾಡಿರುವುದೆಂದೂ, ಈ ಸಪ್ತಭಾಗಗಳಲ್ಲಿ ಹಕ್ಕಿಗಳು ತಮ್ಮ ತಮ್ಮ ಯೋಗ್ಯತಾನುಸಾರ ಮೊದಲನೆಯ ಭಾಗಕ್ಕೆ ಕೆಲವು ಹಾರುತ್ತವೆ, ಕೆಲವು ಎರಡನೆಯ ಭಾಗಕ್ಕೆ ಹಾರಬಲ್ಲವು ; ಇನ್ನು ಕೆಲವು ಮೂರನೆಯ ಭಾಗಕ್ಕೆ ಹಾರಬಲ್ಲವು, ಗುರುಡನಾದರೋ ಏಳನೆಯ ಭಾಗಕ್ಕೆ ಹಾರಬಲ್ಲನೆಂದೂ ಆದುದರಿಂದ ಎಲ್ಲಾ ಪಕ್ಷಿಗಳಿಗಿಂತಲೂ ಸರ್ವಶ್ರೇಷ್ಠನೆಂದೂ ಸಂಪಾತಿಯು ವಾನರರ ಸಂಗಡ ಹೇಳಿರುತ್ತಾನೆ. ಈ ಸಪ್ತಸ್ಕಂಧ ಅಥವಾ ಸಪ್ತಭಾಗಗಳೇ ಮೋಕ್ಷಮಾರ್ಗದಲ್ಲಿನ ಸಪ್ತಭೂಮಿಕೆಗಳಾಗಿವೆ. ಸಂಪಾತಿಯು ಹೇಳಿರುವ ಪ್ರತಿಯೊಂದು ಸ್ಕಂಧದಲ್ಲಿ ಹಾರುವ ಪಕ್ಷಿಗಳಿಗೂ ಮೋಕ್ಷಮಾರ್ಗದಲ್ಲಿನ ಆಯಾಯ ಭೂಮಿಕೆಗಳಿಗೂ ಶಬ್ದಗಳ ವ್ಯುತ್ಪತ್ತಿಯೊಡನೆ ಅನ್ವಯಮಾಡಬಹುದು. ಗ್ರಂಥಬಾಹುಳ್ಯವಾಗುವುದೆಂಬ ಭೀತಿಯಿಂದ ಅವುಗಳನ್ನು ಇಲ್ಲಿ ವಿವರಿಸಿಲ್ಲ.

ರಾಮಾಯಣದಲ್ಲಿ ಗರುಡ, ಸಂಪಾತಿ, ಜಟಾಯುಗಳ ಮುಖ್ಯತತ್ವಾರ್ಥವೇನೆಂದರೆ-ಇವರು ಮೋಕ್ಷದ ಸೋಪಾನಗಳನ್ನು ಹತ್ತಿಸತಕ್ಕ ತತ್ವಬೋಧಕರು. ಇವರುಗಳಲ್ಲಿ ಜಟಾಯುವು ಆತ್ಮ ಮತ್ತು ಬಂಧನದ ವಿಚಾರವನ್ನು ಬೋಧೆಮಾಡಿ ಶ್ರವಣಸೋಪಾನವನ್ನು ಹತ್ತಿಸುವ ಗುರುವಿನ ತತ್ವದವನಾಗಿರುತ್ತಾನೆ. ಸಂಪಾತಿಯು ಬಂಧನವಿರತಕ್ಕ ಯಥಾರ್ಥವಾದ ಸ್ಥಾನವನ್ನು ತೋರಿಸಿ ಪ್ರಾಣಾಯಾಮಸೋಪಾನವನ್ನು ಹತ್ತಿಸುವ ಗುರುವಿನ

ತತ್ವದವನಾಗಿರುತ್ತಾನೆ. ಗರುಡನು ಆತ್ಮಸಾಕ್ಷಾತ್ಕಾರವಾಗುವ ಸಮಾಧಿಸೋಪಾನವನ್ನು ಹತ್ತಿಸುವ ಗುರುವಿನ ತತ್ವದವನಾಗಿರುತ್ತಾನೆ. ಅವರವರ ಕಥೆಯ ಸಂದರ್ಭಗಳಲ್ಲಿ ಅವರವರ ತತ್ವಗಳು ಆಯಾಯ ಶಬ್ದಾರ್ಥದೊಡನೆ ವಿವರಿಸಲ್ಪಟ್ಟಿವೆ. ಆಯಾಯ ಕಥಾಸಂದರ್ಭವಲ್ಲಿ ಈ ವಿವರಗಳನ್ನು ಜ್ಞಾಪಕಕ್ಕೆ ತಂದುಕೊಂಡರೆ ಅನುಕೂಲ. ಪ್ರಕೃತದಲ್ಲಿ ಜಟಾಯುವಿನ ವಿಚಾರವನ್ನು ತೆಗೆದುಕೊಳ್ಳೋಣ.

ಜಟಾಯುವೆಂದರೆ—" ಜಟತೀತಿ ಜಟಾ (ಜಟ ಸಂಘಾತೇ) ಗುಂಪಾಗಿರುವ್ರದು. ಆಯಃ ಏತೀತ್ಯಾಯುಃ ( ಸ—ನ —ಇಣಾಗತೌ ) ಕಳೆಯುವುದು ಅಥವಾ ಹೋಗುವುದು." ಅಂದರೆ ಗುಂಪಾಗಿ ಸೇರಿಕೊಂಡಿರುವುದನ್ನು ಹೋಗಲಾಡಿಸುವವನಿಗೆ ಜಟಾಯುವೆಂದು ಹೆಸರು. ಆಲದಮರದ ಬಿಳಲುಗಳು ಆಲದಮರದಲ್ಲಿಯೇ ಹುಟ್ಟಿ ಆಲದ ಮರವನ್ನೇ ಮುಚ್ಚಿಕೊಳ್ಳುವಂತೆ ಪರಮಾತ್ಮಾವಲಂಬನದಿಂದ ಕಾರ್ಯರೂಪವನ್ನು ಹೊಂದಿದ ಮಾಯೆಯು, ಪರಮಾತ್ಮನನ್ನೇ ಆವರಿಸಿಕೊಂಡು ತಾನೇ ವಿಜೃಂಭಿಸುವುದು. ಆಲದ ಮರದ ಬಿಳಲುಗಳು ಗುಂಪುಗುಂಪಾಗಿ ಇಳಿಬಿದ್ದು ಮರದ ಬುಡವನ್ನು ಹೇಗೆ ಮುಚ್ಚಿಕೊಳ್ಳುತ್ತವೋ ಹಾಗೆಯೇ ಪಂಚಕೋಶಗಳೆಂಬ ಆವರಣಗಳು ಮೂಲಪುರುಷನಾದ ಪರಮಾತ್ಮನನ್ನು ಮುಚ್ಚಿಕೊಂಡು ತಾವೇ ತಾವಾಗಿ ಕಾಣಿಸುತ್ತವೆ. ಈ ರೀತಿಯಾಗಿ ಪರಮಾತ್ಮನನ್ನು ಮುಚ್ಚಿಕೊಂಡಿರುವ ಪಂಚಕೋಶಸ್ವರೂಪಗಳ ವಿಚಾರವನ್ನು ಬಿಡಿಸಿ ಬೋಧೆಮಾಡುವ ಗುರುವಿನ ತತ್ವದವನೇ ಜಟಾಯುವು.

**ರಾ||** ರಾವಣನು ಸೀತಾಪಹರಣಮಾಡಿಕೊಂಡು ಹೋಗುತ್ತಿರುವ ಕಾಲದಲ್ಲಿ ಜಟಾಯುವು ರಾವಣನನ್ನು ಅಡ್ಡಗಟ್ಟಿ ಅವನೊಡನೆ ಯುದ್ಧಮಾಡಿ ಸೀತೆಯನ್ನು ಬಿಡಿಸಬೇಕೆಂದು ಪ್ರಯತ್ನಮಾಡಿದನು.

**ತತ್ವ||** ಬೋಧೆಮಾಡತಕ್ಕ ಗುರುವು ಶಿಷ್ಯನಿಗೆ ಹೇಗೆ ಬೋಧೆಮಾಡುವನೆಂಬ ತತ್ವದ ಕ್ರಮವನ್ನು ತಿಳಿಸುವುದೇ ಜಟಾಯು ರಾವಣರ ಯುದ್ಧದ ತತ್ವವಾಗಿರುತ್ತದೆ. ಶಿಷ್ಯನಲ್ಲಿರುವ ಅವಿದ್ಯೆಯ ಸ್ವರೂಪದವನೇ ರಾವಣನು. ಜಟಾಯುವು ಸೀತೆಯನ್ನು ಬಿಡಿಸಿಕೊಳ್ಳಲು ರಾವಣನ ಸಂಗಡ ಯಾವ ವಿಧವಾಗಿ ಹೋರಾಡಿದನೋ ಅದೇ ವಿಧವಾಗಿ ಬೋಧೆಮಾಡತಕ್ಕ ಗುರುವು ಶಿಷ್ಯನಲ್ಲಿರುವ ಅವಿದ್ಯೆಯ ಜೊತೆಯಲ್ಲಿ ಹೋರಾಡಬೇಕಾಗಿರುತ್ತದೆ. ಸೀತಾದೇವಿಯನ್ನು ಬಿಡಿಸಿಕೊಳ್ಳಲು ಜಟಾಯುವು ರಾವಣನೊಡನೆ ಯುದ್ಧಮಾಡಿದನಷ್ಟೆ! ಇದರಂತೆ ಶಿಷ್ಯನಿಗೆ ಶುದ್ಧಸತ್ವಗುಣದ ಸೋಪಾನವನ್ನೆಂದರೆ, ಈಶ್ವರತ್ವವನ್ನುಂಟುಮಾಡಲು ಶಿಷ್ಯನಲ್ಲಿರುವ ಅವಿದ್ಯೆ ಅಥವಾ ಅಜ್ಞಾನವನ್ನು ಖಂಡಿಸಲು ಬೋಧೆಮಾಡುವ ಗುರುವು ಶಿಷ್ಯನಲ್ಲಿರುವ ಅಜ್ಞಾನದೊಡನೆ ಯುದ್ಧಮಾಡಬೇಕಾಗುತ್ತದೆ.

ಗುರುವಿನ ಬೋಧೆಯಿಂದ ಶಿಷ್ಯನಿಗೆ ಕೊಂಚ ತಿಳಿದಂತಾಗುತ್ತದೆ. ಅನಂತರ ಹಿಂದೆಯೇ ಅಜ್ಞಾನದಿಂದ ಅನುಮಾನ ಬರುತ್ತದೆ. ಇದರಂತೆ ಜಟಾಯುವಿನ ಹೊಡೆತದಿಂದ ರಾವಣನು ತತ್ತರಿಸಿದನು. ಪುನಃ ಚೇತರಿಸಿಕೊಂಡು ಜಟಾಯುವಿನೊಡನೆ ಯುದ್ಧಕ್ಕೆ ಸಿದ್ಧನಾದನು. ರಾವಣ ಜಟಾಯುಗಳ ಯುದ್ಧವು ಪುನಃ ಪ್ರಾರಂಭವಾಗಿ ಇಬ್ಬರಿಗೂ ಹೋರಾಟ ಪ್ರಬಲವಾಯಿತೆಂದರೆ, ಪುನಃ ಗುರುವು ಶಿಷ್ಯನಲ್ಲಿರುವ ಅನುಮಾನಗಳನ್ನು ಖಂಡಿಸಿ ಬೋಧೆಮಾಡುತ್ತಾನೆ. ಪುನಃ ಶಿಷ್ಯನಿಗೆ ಮತ್ತೂ ಸಂಶಯಗಳು ತಲೆದೋರುತ್ತವೆ. ಜಟಾಯು ರಾವಣರು ಬಿಡದೇ ಯುದ್ಧಮಾಡುತ್ತಿರುವಂತೆ ಗುರುವು ಶಿಷ್ಯನಿಗೆ ವಿವರಿಸಿ ವಿವರಿಸಿ ಚನ್ನಾಗಿ ಅನುಮಾನ ಪರಿಹಾರಮಾಡುತ್ತಾನೆ.

ಜಟಾಯು ರಾವಣರ ಯುದ್ಧವೆಂದರೆ—ಬೋಧೆಮಾಡತಕ್ಕ ಗುರುವಿಗೂ ಶಿಷ್ಯನಲ್ಲಿರುವ ಅವಿದ್ಯೆಗೂ ಯುದ್ಧವೆಂದು ಮೇಲೆ ತಿಳಿಸಿತಷ್ಟೆ! ಶಿಷ್ಯನಲ್ಲಿರುವ ಅವಿದ್ಯೆಯಲ್ಲಿನ ಪ್ರಧಾನಶಕ್ತಿಯಾದ ವಿಕ್ಷೇಪಶಕ್ತಿಯೇ ಬೋಧೆಮಾಡತಕ್ಕ ಗುರುವಿಗೆ ಅಧಿಕವಾಗಿ ತೊಂದರೆಯನ್ನು ಕೊಡುವುದು. ರಜೋಗುಣ ಅಥವಾ ವಿಕ್ಷೇಪಶಕ್ತಿಯ ತತ್ವದವನೇ ರಾವಣನೆಂದು ಹಿಂದೆ ಸೀತಾಪಹರಣದ ಸಂದರ್ಭದಲ್ಲಿ ಅನ್ವಯಮಾಡಿ ತಿಳಿಸಿರುತ್ತಷ್ಟೆ! ರಾವಣನ ತತ್ವದಲ್ಲಿರುವ ವಿಕ್ಷೇಪಶಕ್ತಿಯೇ ಶಿಷ್ಯನಲ್ಲಿದ್ದುಕೊಂಡು ಶಿಷ್ಯನಿಗೆ ಆತ್ಮಬೋಧೆಯನ್ನು ಗ್ರಹಿಸುವುದಕ್ಕೆ ತೊಂದರೆಕೊಡುವುದಲ್ಲದೆ ಬೋಧೆಮಾಡತಕ್ಕ ಗುರುವಿಗೂ ತೊಂದರೆಯನ್ನುಂಟುಮಾಡುತ್ತದೆ. ಈ ಅಭಿಪ್ರಾಯವನ್ನು ಸಮರ್ಥಿಸುತ್ತ ಶ್ರೀಶಂಕರ ಭಗವತ್ಪಾದರವರು ವಿವೇಕಚೂಡಾಮಣಿ ೧೧೭ನೆಯ ಶ್ಲೋಕದಲ್ಲಿ,

> ಅಭಾವನಾವಾ ವಿಪರೀತಭಾವನಾ |
> ಸಂಭಾವನಾ ವಿಪ್ರತಿಪತ್ತಿರಸ್ಯಾಃ ||
> ಸಂಸರ್ಗಯುಕ್ತಂ ನವಿಮುಂಚತಿಧ್ರುವಂ |
> ವಿಕ್ಷೇಪಶಕ್ತಿಃ ಕ್ಷಪಯತ್ಯಜಸ್ರಂ ||

ತಾ|| ಲೋಕದಲ್ಲಿ ರಜೋಗುಣದ ಶಕ್ತಿಯಾದ ವಿಕ್ಷೇಪಶಕ್ತಿಯು ಯಾವ ಪುರುಷನನ್ನು ಆಶ್ರಯಿಸಿರುತ್ತದೆಯೋ ಅಂಥವನಿಗೆ ಆತ್ಮವಸ್ತುವು ಈರೀತಿಯಾಗಿಯೇ ಇರುವುದೆಂಬ ತಿಳಿವಳಿಕೆಯುಂಟಾಗುವುದಿಲ್ಲ. ಆತ್ಮಪದಾರ್ಥವು ಒಂದು ಬಗೆಯಾಗಿದ್ದರೆ ಮತ್ತೊಂದು ಬಗೆಯಾಗಿರುವುದೆಂಬ ತಿಳಿವಳಿಕೆಯುಂಟಾಗುವುದು. ಅಥವಾ ಆತ್ಮವಸ್ತುವು ಯಾವ ವಿಧವಾಗಿರುವುದೋ ಆ ವಿಧವಾಗಿಲ್ಲವೆಂಬ ನಂಬಿಕೆಯುಂಟಾಗುವಂತೆ

ಮಾಡುವುದು. ಈ ಸಂದೇಹಗಳು ವಿಕ್ಷೇಪಶಕ್ತಿಯಿಂದುಂಟಾಗಿ ಪುರುಷನನ್ನು ಯಾವಾಗಲೂ ಹಾಳುಮಾಡುತ್ತವೆ ಎಂದು ಹೇಳಿರುತ್ತಾರೆ.

ಈ ಮೇಲಿನ ಶ್ಲೋಕದ ತಾತ್ಪರ್ಯವನ್ನನುಸರಿಸಿ ಶಿಷ್ಯನಲ್ಲಿರುವ ಸಕಲ ಸಂಶಯಗಳನ್ನೂ ನಿವೃತ್ತಿಮಾಡಲು ಜಟಾಯುವು ಬಿಡದೆ ರಾವಣನೊಡನೆ ಹೇಗೆ ಮೇಲೆ ಮೇಲೆ ಯುದ್ಧಮಾಡುತ್ತಿದ್ದನೋ ಹಾಗೆಯೇ ಬೋಧಿಸತಕ್ಕ ಗುರುವು ಶಿಷ್ಯನಲ್ಲಿರುವ ಸಕಲ ಸಂಶಯಗಳನ್ನೂ ಖಂಡಿಸಲು ಶಿಷ್ಯನಲ್ಲಿರುವ ಅವಿದ್ಯೆಯೊಂದಿಗೆ ಹೊಡೆದಾಡಬೇಕಾಗಿರುತ್ತದೆ. ಶಿಷ್ಯನಿಗೆ ಯಾವ ವಿಧವಾದ ಅನುಮಾನಗಳು ಬಂದರೂ ಅವುಗಳನ್ನೆಲ್ಲ ಕತ್ತರಿಸಿಬಿಡುವಷ್ಟು ಸೂಕ್ಷ್ಮವಿಚಾರಗಳು ಸದ್ಗುರುವಿಗೆ ಗೊತ್ತಿರುತ್ತವೆ. ಇಂತಹ ಸೂಕ್ಷ್ಮವಿಚಾರಗಳೆಲ್ಲ ಮಹಾನುಭಾವನಾದ ಗುರುವಿಗೆ ಕರತಲಾಮಲಕವಾಗಿ ಗೊತ್ತಿರುವುದೆಂಬ ತತ್ತ್ವಾರ್ಥವನ್ನು ಅನುಸರಿಸಿಯೇ ಜಟಾಯುವಿನಲ್ಲಿ ಇದ್ದ ಆಯುಧಕ್ಕೆ "ಕ್ಷುರ" ಎಂದು ಹೆಸರು. ಕ್ಷುರವೆಂದರೆ "ಪಾರುಷ್ಯಾತ್ ಕ್ಷುರ ಇವ ಕ್ಷುರಃ" ತೀಕ್ಷ್ಣದಿಂದ ಕತ್ತಿಯಂತೆ ಇರುವುದೆಂಬ ಅರ್ಥವಿರುತ್ತದೆ. ಅಂದರೆ ಶಿಷ್ಯನಲ್ಲಿ ಎಂತಹ ಬಲವತ್ತರವಾದ ಸಂಶಯಗಳಿದ್ದರೂ ಪರಿಹರಿಸುವಂತಹ ಸೂಕ್ಷ್ಮಬುದ್ಧಿಯು ಗುರುವಿನಲ್ಲಿರಬೇಕೆಂಬ ಸೂಚನೆಯೇ ಜಟಾಯುವಿನಲ್ಲಿದ್ದ ಕ್ಷುರವೆಂಬ ಕತ್ತಿಯ ತತ್ತ್ವ.

**ರಾ||** ಜಟಾಯುವು ರಾವಣನೊಡನೆ ಬಹಳವಾಗಿ ಯುದ್ಧಮಾಡಿ ಅವನ ಬಿಲ್ಲುಗಳನ್ನೂ, ಸಾರಥಿರಥಗಳನ್ನೂ, ಧ್ವಂಸಮಾಡಿದರೂ ಕೊನೆಗೆ ರಾವಣನು ಜಟಾಯುವನ್ನೇ ಕಂಠಗತಪ್ರಾಣನನ್ನಾಗಿ ಮಾಡಿ ಸೀತಾದೇವಿಯನ್ನು ಅಪಹರಿಸಿಕೊಂಡು ಹೋದನು.

**ತತ್ತ್ವ||** ಗುರುವು ಶಿಷ್ಯನಿಗೆ ಎಷ್ಟೇ ಬೋಧಿಸಿದರೂ ಶಿಷ್ಯನು ಎಷ್ಟೇ ಶ್ರವಣಮಾಡಿದರೂ ಶಿಷ್ಯನಲ್ಲಿರುವ ಅವಿದ್ಯೆಯು ನಾಶವಾಗಿ ಮೋಕ್ಷವುಂಟಾಗುವುದಿಲ್ಲ. ಬೋಧಿಸತಕ್ಕ ಗುರುವು ಶಿಷ್ಯನಲ್ಲಿರುವ ಅವಿದ್ಯಾಬಂಧನದ ಸ್ವರೂಪವನ್ನೂ ಆತ್ಮಸ್ವರೂಪವನ್ನೂ ವಿವರವಾಗಿ ಬೋಧಿಸಬಲ್ಲನೇ ಹೊರತು ಶಿಷ್ಯನಲ್ಲಿರುವ ಬಂಧನವನ್ನೇ ಪರಿಹಾರಮಾಡಲಾರನು. ಹೇಗೆಂದರೆ, ಕಾಶೀಪಟ್ಟಣವನ್ನು ನೋಡದೆ ಇರತಕ್ಕವನು ಕಾಶೀಪಟ್ಟಣದ ವಿಚಾರವನ್ನು ಯಾರ ಮುಖದಿಂದಲಾದರೂ ಚನ್ನಾಗಿ ಶ್ರವಣಮಾಡಿದಮಾತ್ರದಿಂದಲೇ ಕಾಶೀಯಾತ್ರೆಯನ್ನು ಮಾಡಿದಂತಾಗಲಿಲ್ಲ. ಇದರಂತೆಯೇ ಗುರುವಿನಿಂದ ಉಪದೇಶಿಸಲ್ಪಟ್ಟ ವೇದಾಂತಾರ್ಥಗಳನ್ನು ಶಿಷ್ಯನೇ ಮನನಮಾಡಿಕೊಂಡು ಅನುಷ್ಠಾನಮಾಡಿ ತನ್ನಲ್ಲಿರುವ ಅವಿದ್ಯೆಯನ್ನು ನಿಗ್ರಹಿಸಿಕೊಂಡು ಪರಮಪದವನ್ನು ಹೊಂದಬೇಕಲ್ಲದೆ, ವಿಚಾರಮಾತ್ರದಿಂದಲೇ ಬಂಧನದ ಬಿಡುಗಡೆಯಾಗುವುದಿಲ್ಲ.

ಈ ಮೇಲಿನ ತತ್ತ್ವಾರ್ಥಗಳಿಗನುಸಾರವಾಗಿ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೫೪ನೆಯ ಶ್ಲೋಕದಲ್ಲಿ,

ಮಸ್ತಕನ್ಯಸ್ತ ಭಾರಾದೇಃ ದುಃಖಮನ್ಯೈರ್ನಿವಾರ್ಯತೆ ।
ಕ್ಷುಧಾದಿ ಕೃತದುಃಖಂತು ವಿನಾಸ್ವೇನ ನಕೇನಚಿತ್ ॥

ತಾ॥ ತನ್ನ ತಲೆಯಮೇಲೆ ಹೊತ್ತುಕೊಂಡಿರುವ ಭಾರದಿಂದುಂಟಾದ ದುಃಖವನ್ನು ಇತರರು ಹೋಗಲಾಡಿಸಬಲ್ಲರು. ಹಶಿವು ಮೊದಲಾದವುಗಳಿಂದುಂಟಾದ ದುಃಖವನ್ನಾದರೋ ತಾನೇ ಹೋಗಲಾಡಿಸಿಕೊಳ್ಳಬೇಕಲ್ಲದೆ ಮತ್ತಾರಿಂದಲೂ ಆಗಲಾರದು.

ಅಕೃತ್ವಾದೃಶ್ಯ ವಿಲಯ ಮಜ್ಞಾತ್ವಾ ತತ್ವಮಾತ್ಮನಃ ।
ಬಾಹ್ಯಶಬ್ದೈಃ ಕುತೋಮುಕ್ತಿ ರುಕ್ತಿಮಾತ್ರ ಫಲೈರ್ನೃಣಾಂ ॥

ತಾ॥ ಚರ್ಮಚಕ್ಷುಸ್ಸಿಗೆ ಕಾಣಿಸುವ ಪದಾರ್ಥಗಳು ಅನಿತ್ಯವಾದವುಗಳೆಂಬ ಭಾವವ ದೃಢವಾಗಿ ಕರಗಿಕೊಳ್ಳದೆ, ಆತ್ಮತತ್ವವನ್ನು ನಿಸ್ಸಂಶಯವಾಗಿ ಅರಿಯದೆ, ಉಚ್ಚಾರಣೆ ಮಾತ್ರಪ್ರಯೋಜನಗಳಾದ ಬಾಹ್ಯಶಬ್ದಗಳಿಂದ ಮನುಷ್ಯರಿಗೆ ಮುಕ್ತಿಯು ಹೇಗೆ ಉಂಟಾಗುವುದು? ಎಂದಿಗೂ ಉಂಟಾಗಲಾರದು ಎಂದು ಹೇಳಿರುವರು.

ಆದುದರಿಂದ ಗುರುವಿನಲ್ಲಿ ವೇದಾಂತವಿಚಾರವಮಾಡುವ ಮಾತ್ರದಿಂದಲೇ ಬಂಧನ ಬಿಡುಗಡೆಯಾಗುವುದಿಲ್ಲ. ಈ ತತ್ವವೇ ರಾವಣನು ಜಟಾಯುವನ್ನು ಕಂಠಗತಪ್ರಾಣನನ್ನಾಗಿಮಾಡಿ ಹೊರಟುಹೋದುದಾಗಿದೆ.

**ರಾ॥** ಶ್ರೀರಾಮ ಲಕ್ಷ್ಮಣರು ಸೀತಾದೇವಿಯನ್ನು ಹುಡುಕಿಕೊಂಡು ಬರುತ್ತಾ ಜಟಾಯುವನ್ನು ಕಂಡರು. ಜಟಾಯುವು ಸೀತೆಯನ್ನು ರಾವಣನು ಎತ್ತಿಕೊಂಡು ಹೋದನೆಂದು ಶ್ರೀರಾಮನಿಗೆ ತಿಳಿಸಿದನು. ಈರೀತಿಯಾಗಿ ತಿಳಿಸಲು ಶ್ರೀರಾಮನು ಸೀತಾಪಹರಣದ ವಿಚಾರವನ್ನು ಮತ್ತಷ್ಟು ಮತ್ತಷ್ಟು ಹೇಳಬೇಕೆಂಬದಾಗಿ ಜಟಾಯುವನ್ನು ಕೇಳಿಕೊಂಡನು. ಜಟಾಯುವು ರಾವಣನೊಡನೆ ಯುದ್ಧಮಾಡಿ ಕಂಠಗತಪ್ರಾಣನಾದುದರಿಂದ ತನ ದೃಷ್ಟಿಯನ್ನೆಲ್ಲಾ ಶ್ರೀರಾಮನಲ್ಲಿರಿಸಿ ಶ್ರೀರಾಮನ ದೃಷ್ಟಿಯನ್ನೆಲ್ಲಾ ತನ್ನಲ್ಲಿರಿಸಿಕೊಂಡು ಈಗ ಒಳ್ಳೆಯ ಲಗ್ನವಾದುದರಿಂದ ನಷ್ಟಳಾದ ಸೀತಾದೇವಿಯು ದೊರಕುವಳೆಂಬದಾಗಿ ಹೇಳುತ್ತಾ ಪ್ರಾಣಬಿಟ್ಟನು.

**ತತ್ವ॥** ಮೋಕ್ಷವನ್ನು ಪಡೆಯಬೇಕೆಂಬ ಅಧಿಕಾರಿಯು ಅಧಿಕಾರಲಕ್ಷಣಗಳನ್ನು ಹೊಂದಿ ತನಗೆ ಬಂದಿರುವ ಬಂಧನದ ವಿಚಾರವನ್ನು ತಿಳಿದುಕೊಳ್ಳಲು ಗುರುವನ್ನು ಮರೆಹೊಕ್ಕ ತಾತ್ಪರ್ಯವೇ ಶ್ರೀರಾಮನು ಜಟಾಯುವನ್ನು ಸಂದರ್ಶಿಸಿದುದಾಗಿರುತ್ತದೆ. ಜಟಾಯುವು ಸೀತೆಯನ್ನು ರಾವಣನು ಎತ್ತಿಕೊಂಡು ಹೋದನೆಂದು ತಿಳಿಸಲು ಸೀತಾಪಹರಣದ ವಿಚಾರವನ್ನು ಮತ್ತಷ್ಟು ಮತ್ತಷ್ಟು ತಿಳಿಸಬೇಕೆಂದು ಶ್ರೀರಾಮನು ಜಟಾಯುವನ್ನು

ಕೇಳಿದ ತತ್ವವೇನೆಂದರೆ—ಶಿಷ್ಯನು ಅವಿದ್ಯಾಬಂಧನವನ್ನು ಬಿಡಿಸಿಕೊಳ್ಳುವ ವಿಚಾರವನ್ನು ವಿವರವಾಗಿ ಗುರುವಿನಲ್ಲಿ ಹೆಚ್ಚುಹೆಚ್ಚಾಗಿ ಕೇಳಿ ತಿಳಿದುಕೊಳ್ಳಬೇಕೆಂಬ ತಾತ್ಪರ್ಯ.

ಜಟಾಯುವು ರಾವಣನು ಸೀತೆಯನ್ನೆತ್ತಿಕೊಂಡು ಹೋದನೆಂದೇ ಪುನಃಪುನಃ ಹೇಳಿ ತನ್ನ ದೃಷ್ಟಿಯನ್ನೆಲ್ಲಾ ಶ್ರೀರಾಮನಲ್ಲಿರಿಸಿ ಶ್ರೀರಾಮನ ದೃಷ್ಟಿಯನ್ನೆಲ್ಲಾ ತನ್ನಲ್ಲಿರಿಸಿಕೊಂಡು ನಷ್ಟಳಾದ ಸೀತೆಯು ದೊರಕುವಳೆಂದು ಹೇಳಿದ ತಾತ್ಪರ್ಯವೇನೆಂದರೆ—ಬೋಧೆಮಾಡತಕ್ಕ ಗುರುವು ಬಹಳ ಕಷ್ಟಪಟ್ಟು ಆತ್ಮವಿದ್ಯೆಯನ್ನು ಹತ್ತಿಯನ್ನು ಬಿಡಿಸಿದಂತೆ ಬಿಡಿಸಿ, ಶಿಷ್ಯನಿಗೆ ಬೋಧಿಸಿ ಬೋಧಿಸಿ ಶಿಷ್ಯನನ್ನು ಪರಿಪಕ್ವಾವಸ್ಥೆಗೆ ತಂದು ಅವಿದ್ಯಾದಾರಿಗೆಳೆಯುತ್ತಿದ್ದ ಶಿಷ್ಯನ ಚಿತ್ತವೃತ್ತಿಯನ್ನು "ಶಿಷ್ಯ ಹೃತ್ತಾಪಹಾರಕಃ" ಎಂಬಂತೆ ಅಪಹರಿಸಿ ಆತ್ಮಜ್ಞಾನದ ದಾರಿಯಲ್ಲಿ ಚನ್ನಾಗಿ ನೆಲೆಗೊಳಿಸಿ ತನ್ನಂತೆಯೇ ಶಿಷ್ಯನನ್ನೂ ವಿದ್ಯಾವಂತನನ್ನಾಗಿ ಮಾಡುವ ತತ್ವವೇ ಜಟಾಯುವು ತನ್ನ ದೃಷ್ಟಿಯನ್ನು ಶ್ರೀರಾಮನಲ್ಲಿರಿಸಿ ಶ್ರೀರಾಮನ ದೃಷ್ಟಿಯನ್ನು ತನ್ನಲ್ಲಿರಿಸಿಕೊಂಡುದಾಗಿರುತ್ತದೆ.

ಈಗ ಉತ್ತಮವಾದ ಲಗ್ನವಾದುದರಿಂದ ನಷ್ಟಳಾದ ಸೀತಾದೇವಿಯು ದೊರಕುವಳೆಂದು ಜಟಾಯುವು ಶ್ರೀರಾಮನಿಗೆ ಹೇಳಿದ ತತ್ವವೇನೆಂದರೆ—ಶಿಷ್ಯನು ಗುರುವಿನ ಬೋಧೆಯಿಂದ ಉತ್ತಮವಾದ ಅಧಿಕಾರಿಯಾಗಿ ಆತ್ಮವಿಚಾರಮಾಡುವ ಶ್ರವಣಸೋಪಾನದ ಪರಿಪಕ್ವಾವಸ್ಥೆಯನ್ನು ಹೊಂದುವ ಕಾಲದ ತತ್ವವೇ ಈಗ ಉತ್ತಮವಾದ ಲಗ್ನದ ಕಾಲವೆಂದು ಜಟಾಯುವು ಹೇಳಿದುದಾಗಿರುತ್ತದೆ.

ಸೀತಾದೇವಿಯು ದೊರಕುವಳೆಂದು ಜಟಾಯುವು ಹೇಳಿರುವುದರ ತತ್ವವೇನೆಂದರೆ ಶಿಷ್ಯನು ಉತ್ತಮಾಧಿಕಾರಿಯಾದುದರಿಂದ ಖಂಡಿತವಾಗಿಯೂ ಆತ್ಮಜ್ಞನಾಗುತ್ತಾನೆಂದು ತಿಳಿದು ಶಿಷ್ಯನಿಗೆ ಆಶೀರ್ವದಿಸುವುದೇ ಸೀತಾದೇವಿಯು ದೊರಕುವಳೆಂದು ಜಟಾಯುವು ಶ್ರೀರಾಮನಿಗೆ ಹೇಳಿದುದಾಗಿರುತ್ತದೆ. ಶಿಷ್ಯನು ಉತ್ತಮಾಧಿಕಾರಿಯಾಗಿ ಸದ್ಗುರುವಿನಿಂದ ಈ ವಿಧವಾಗಿ ಆಶೀರ್ವಾದ ಪಡೆಯುವ ತತ್ವಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೫೦ನೆಯ ಶ್ಲೋಕದಲ್ಲಿ,

ಧನ್ಯೋಽಸಿ ಕೃತಕೃತ್ಯೋಽಸಿ ಪಾವಿತಂ ತೇಕುಲಂ ತ್ವಯಾ ।
ಯದವಿದ್ಯಾಬನ್ಧಮುಕ್ತ್ಯಾ ಬ್ರಹ್ಮೀಭವಿತು ಮಿಚ್ಛಸಿ ॥

ತಾ॥ ಅಯ್ಯಾ, ನಿನಗೆ ಬಂದಿರುವ ಅವಿದ್ಯಾಬನ್ಧನವನ್ನು ತಪ್ಪಿಸಿಕೊಂಡು ಪರಬ್ರಹ್ಮಸ್ವರೂಪನಾಗಬೇಕೆಂದು ಬಯಸುತ್ತೀಯಾದ್ದರಿಂದ ನೀನು ಪುಣ್ಯವಂತನಾದೆ. ಮಾಡಬೇಕಾದದ್ದೆಲ್ಲವನ್ನೂ ಮಾಡಿದವನಾದೆ. ನಿನ್ನ ಕುಲವೆಲ್ಲವೂ ನಿನ್ನಿಂದ ಪಾವನಮಾಡಲ್ಪಟ್ಟಿತು. ಎಂದು ಹೇಳಿರುವರು.

ಆದುದರಿಂದ ಮೋಕ್ಷಪಡೆಯಬೇಕೆಂಬ ಅಧಿಕಾರಿಯು ಆತ್ಮ ಮತ್ತು ಅನಾತ್ಮ ವಿಚಾರಗಳನ್ನು ಗುರುಮುಖೇನ ಶ್ರವಣಮಾಡುವುದು ಅತ್ಯವಶ್ಯಕವಾಗಿರುತ್ತದೆ. ಬಂಧನದ ವಿಚಾರ ತಿಳಿಯದೆ ಬಂಧನದಿಂದ ಬಿಡಿಸಿಕೊಳ್ಳುವ ಕಾರ್ಯವೆಂದಿಗೂ ಆಗುವುದಿಲ್ಲ. ಆದ ಕಾರಣ ಪೈಂಗಲೋಪನಿಷತ್ತಿನಲ್ಲಿ ಹೇಳಿರುವಂತೆ,

ಅವಿಚಾರಕೃತೋ ಬಂಧೋ ವಿಚಾರಾ ನ್ಮೋಕ್ಷೋಭವತಿ |
ತಸ್ಮಾತ್ಸದಾ ವಿಚಾರಯೇ ಜ್ಜಗಜ್ಜೀವ ಪರಮಾತ್ಮನಃ ||

ತಾ|| ವಿಚಾರಮಾಡದೆ ಇರುವುದರಿಂದ ಅವಿದ್ಯಾಬಂಧನವು ಇರುತ್ತದೆ. ವಿಚಾರ ದಿಂದ ಬಂಧನಸ್ವರೂಪ ಗೊತ್ತಾಗಿ ಬಂಧವಿಮೋಚನೆಯದ್ವಾರಾ ಮೋಕ್ಷವಾಗುತ್ತದೆ. ಆದ್ದುದರಿಂದ ಜಗತ್ತು ಜೀವ ಮತ್ತು ಪರಮಾತ್ಮಸಂಬಂಧವಾದ ವಿಚಾರಗಳನ್ನು ಬಂಧನ ಬಿಡುಗಡೆಯಾಗುವವರೆಗೂ ವಿಚಾರಮಾಡತಕ್ಕದ್ದು.

**ರಾ||** ಜಟಾಯುವು ರಾವಣನೊಡನೆ ಯುದ್ಧಮಾಡಿ ಜರ್ಝರಿತನಾಗಿದ್ದುದರಿಂದ ಶ್ರೀರಾಮನಿಗೆ ಸೀತಾವೃತ್ತಾಂತವನ್ನು ಹೇಳಿ ಪ್ರಾಣಬಿಟ್ಟನು.

**ತತ್ವ||** ವೇದಾಂತ ವಿಚಾರವನ್ನು ಬೋಧೆಮಾಡತಕ್ಕ ಗುರುವು ಜನ್ಮಾವಧಿ ಶಿಷ್ಯರು ಗಳಿಗೆ ಬೋಧೆಮಾಡಿ ಬೋಧೆಮಾಡಿ ಜಟಾಯುವು ರಾವಣನಿಂದ ಜರ್ಝರಿತನಾದಂತೆ ಜನ್ಮದ ಕೊನೆಯವರೆಗೂ ಪರೋಪಕಾರಕ್ಕಾಗಿ ಬಳಲುವನೆಂಬ ತತ್ವಾರ್ಥವೇ ಜಟಾಯುವು ರಾವಣನ ಹೊಡೆತಗಳಿಂದ ಜರ್ಝರಿತನಾಗಿ ಪ್ರಾಣಬಿಟ್ಟುದಾಗಿರುತ್ತದೆ.

**ರಾ||** ಶ್ರೀರಾಮನು, ಪ್ರಾಣಬಿಟ್ಟ ಜಟಾಯುವಿಗೆ ಮಗನೋಪಾದಿಯಲ್ಲಿ ಸಂಸ್ಕಾರ ಮಾಡಿ ಯಜ್ಞಾದಿ ಸತ್ಕರ್ಮಗಳನ್ನು ಮಾಡಿದ ಪುಣ್ಯಾತ್ಮರು ಹೊಂದುವ ಉತ್ತಮಲೋಕ ವನ್ನು ಆತನು ಹೊಂದಲೆಂದು ಅಪ್ಪಣೆ ಮಾಡಿದನು.

**ತತ್ವ||** ವೇದಾಂತವಿಚಾರ ಸ್ವರೂಪವಾದ ಜ್ಞಾನೋಪದೇಶಮಾಡಿದ ಗುರುವು ಜನನ ಮರಣ ಪ್ರವಾಹರೂಪವಾದ ಸಂಸಾರದ ಬಂಧನವನ್ನು ನಿವಾರಿಸಲು ಸಹಾಯ ಮಾಡುವುದರಿಂದ ಇಂತಹ ಬ್ರಹ್ಮವಿದ್ಯೆಯನ್ನು ದಾನಮಾಡಿದವರಿಗೆ ಉತ್ತಮವಾದ ಗತಿ ಯುಂಟಾಗುವುದೆಂದು ಸೂಚಿಸುತ್ತದೆ. ಅಲ್ಲದೆ ಆತ್ಮೋಪದೇಶಮಾಡಿದ ಗುರುವು ಪ್ರತ್ಯಕ್ಷ ಈಶ್ವರಸ್ವರೂಪನೆಂತಲೂ, ಸರ್ವಶ್ರೇಷ್ಠನೆಂತಲೂ, ತಿಳಿದುಕೊಂಡು ಭಕ್ತಿ ವಿಶ್ವಾಸಗಳಿಂದ ಆತನನ್ನು ಪೂಜಿಸಬೇಕು. ಅಲ್ಲದೆ ಬ್ರಹ್ಮವಿದ್ಯಾದಾನಮಾಡಿದ ಗುರುವು ತಂದೆಗಿಂತಲೂ ಅಧಿಕನೆಂಬ ತತ್ವಾರ್ಥವನ್ನೂ ಸೂಚಿಸುತ್ತದೆ.

ಶ್ರೀರಾಮನು ಮೃತಪಟ್ಟ ಜಟಾಯುವಿಗೆ ಉತ್ತಮಲೋಕವು ತನ್ನಪ್ಪಣೆಯಿಂದ ದೊರೆಯಲೆಂದು ಹೇಳಿರುವುದರಿಂದ ಶ್ರೀರಾಮನ ವಾಕ್ಯ ವಿಧಿವಾಕ್ಯಾಯಿತು. ಈ ವಿಧಿ

ವಾಕ್ಯ ಇರುವುದರಿಂದ ಪರಮಾತ್ಮನೇ ಶ್ರೀರಾಮಾವತಾರಮಾಡಿರುವನೆಂಬುದನ್ನೂ ಅವತಾರವು ನಿಶ್ಚಯವೆಂಬುದನ್ನೂ ದೃಢೀಕರಿಸುವುದು.

**ರಾ||** ಜಟಾಯುವಿನ ವಿಚಾರದಲ್ಲಿ ಇನ್ನೊಂದು ತತ್ವವೂ ಇರುತ್ತದೆ. ಶ್ರೀರಾಮನು ಪಂಚವಟೀವಾಸಕ್ಕೆ ಬರುವಾಗಲೇ ಜಟಾಯುವು ಶ್ರೀರಾಮನನ್ನು ಸಂಧಿಸಿ ಸೀತಾದೇವಿಯ ರಕ್ಷಣಾರ್ಥವಾಗಿ ಬೆಂಬಲವಾಗಿ ನಿಮ್ಮ ಜೊತೆಯಲ್ಲಿಯೇ ಇರುವೆನೆಂದು ಹೇಳಿರುತ್ತಾನೆ.

**ತತ್ವ||** ಶ್ರೀರಾಮನು ಪಂಚವಟೀವಾಸಕ್ಕೆ ಬಂದುದೆಂದರೆ ಜನನವಾದ ಶಿಶುಗಳಲ್ಲಿ ವಿಷಯವ್ಯಾಪಾರ ಪ್ರಾರಂಭವಾಗಿ ಅವಿದ್ಯೆಯ ಬಂಧನ ಬರುವುದೆಂದು ಹಿಂದೆಯೇ ತಿಳಿಸಿರುತ್ತಷ್ಟೆ! ಪ್ರಪಂಚಮಾರ್ಗದಲ್ಲಿಯೇ ಸರ್ವರೂ ಮಗ್ನರಾಗಿದ್ದರೆ ಮೋಕ್ಷವೆಂದರೆ ಈಶ್ವರ ಪರಮಾತ್ಮರ ವಿಚಾರವನ್ನು ತಿಳಿಸುವವರು ಯಾರೂ ಇಲ್ಲದಂತಾಗಬಹುದು. ಸೀತಾದೇವಿಯ ರಕ್ಷಣೆಗೆ ಬೆಂಬಲವಾಗಿ ಜಟಾಯುವು ತಾನೂ ಇರುತ್ತೇನೆಂದು ಹೇಳಿದನೆಂದರೆ— ಶುದ್ಧಸತ್ವಗುಣದ ರಕ್ಷಣೆಗೆ ಬೆಂಬಲವಾಗಿರುತ್ತೇನೆಂಬ ತಾತ್ಪರ್ಯ. ಶುದ್ಧಸತ್ವಗುಣದ ರಕ್ಷಣೆಗೆ ಬೆಂಬಲವಾಗಿರುವುದೆಂದರೆ—ಶುದ್ಧಸತ್ವಗುಣದ ಸೋಪಾನವಾದ ಈಶ್ವರತ್ವದ ರಕ್ಷಣೆಗೆ ಬೆಂಬಲವಾಗಿರುವುದೆಂಬ ತತ್ವವಾಗಿರುತ್ತದೆ.

ಈಶ್ವರತ್ವದ ರಕ್ಷಣೆಯೆಂದರೆ—ಪ್ರಪಂಚದಲ್ಲಿ ಆತ್ಮವಿಚಾರವನ್ನು ತಿಳಿದಿರತಕ್ಕವರು ಯಾರೂ ಇಲ್ಲವಾದರೆ ನಾಸ್ತಿಕತೆಯೇ ಇರಬೇಕಾಗುತ್ತದೆ. ಆತ್ಮವಿಚಾರವನ್ನು ತಿಳಿದಿರತಕ್ಕ ಮಹನೀಯರುಗಳೂ ಇರುತ್ತಾ ಬಂದರಲ್ಲವೇ ಆತ್ಮವಿಚಾರವು ಮತ್ತೊಬ್ಬರಿಗೆ ತಿಳಿಯುವುದು. ಆದುದರಿಂದ ಇಂತಹ ಮಹನೀಯರುಗಳಿಂದಲೇ ಈಶ್ವರಸೋಪಾನವಿಚಾರಗಳು ರಕ್ಷಿತಗಳಾಗಿ ಬರುತ್ತಿರುವುವು. ನಿವೃತ್ತಿಮಾರ್ಗವನ್ನು ಕಾಪಾಡಿಕೊಂಡು ಲೋಕಕ್ಕೆ ಹಿತವನ್ನುಂಟುಮಾಡುವ ಅವ್ಯಾಜಕರುಣಾಮೂರ್ತಿಗಳಾದ ಮಹನೀಯರು ಲೋಕದಲ್ಲಿರುವರೆಂಬ ತತ್ವಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೩೯ನೆಯ ಶ್ಲೋಕದಲ್ಲಿ,

ಶಾನ್ತಾ ಮಹಾನ್ತೋ ನಿವಸನ್ತಿ ಸನ್ತೋ |
ವಸಂತವಲ್ಲೋಕಹಿತಂ ಚರನ್ತಃ ||
ತೀರ್ಣಾಃ ಸ್ವಯಂಭೀಮಭವಾರ್ಣವಂ ಜನಾ |
ನ ಹೇತುನಾನ್ಯಾನಪಿ ತಾರಯನ್ತಃ ||

ತಾ|| ಶಾನ್ತಸ್ವಭಾವವುಳ್ಳ ಮಹಾನುಭಾವರಾದ ಸತ್ಪುರುಷರು ವಸನ್ತಋತುವಿನಂತೆ ಲೋಕಹಿತವನ್ನು ಆಚರಿಸುವವರಾಗಿ, ಭಯಂಕರವಾದ ಸಂಸಾರವೆಂಬ ಸಮುದ್ರವನ್ನು ದಾಟಿ ಯಾವುದೊಂದು ಕಾರಣವೂ ಇಲ್ಲದೆ ಇತರರನ್ನು ದಾಟಿಸುತ್ತಾ ವಾಸಮಾಡುತ್ತಿರುವರು. ಎಂದು ಹೇಳಿರುವರು,

ಈ ತತ್ವಾರ್ಥವೇ ಸೀತಾದೇವಿಗೆ ಬೆಂಬಲವಾಗಿರುತ್ತೇನೆಂದು ಜಟಾಯುವು ಹೇಳಿ ದುದಾಗಿದೆ.

ಜಟಾಯುವಿನ ವಿಚಾರವು ರಾಮಾಯಣದಲ್ಲಿ ಮೂರು ಸಂದರ್ಭಗಳಲ್ಲಿ ಬಂದಿರುತ್ತದೆ. ಈ ಮೂರು ಸಂದರ್ಭಗಳ ತತ್ವಾರ್ಥಗಳನ್ನೂ ಇಲ್ಲಿ ಒಂದೇಕಡೆ ವಿವರಮಾಡಿರುತ್ತದೆ. ಜಟಾಯುವಿನ ವಿಚಾರದ ಮುಖ್ಯತಾತ್ಪರ್ಯವೇನೆಂದರೆ—ಮೋಕ್ಷಾಧಿಕಾರಿಯು ಸದ್ಗುರುವಿನಲ್ಲಿ ವೇದಾಂತವಿಚಾರವನ್ನು ಶ್ರವಣಮಾಡಿ ತನಗೆ ಬಂದಿರುವ ಬಂಧನದ ಕಾರಣವನ್ನು ತಿಳಿದುಕೊಳ್ಳುವುದಾಗಿದೆ. ಆತ್ಮ ಮತ್ತು ಅನಾತ್ಮಗಳಿಂಥಾದ್ದೆಂದು ಜಟಾಯು ಪ್ರಕರಣದಲ್ಲಿ ಬರಲಿಲ್ಲವೆಂದು ಕೆಲವರು ಯೋಚಿಸಬಹುದು. ಶ್ರೀರಾಮನು ಅವಿದ್ಯಾತತ್ವದವರಾದ ರಾವಣಾದಿ ರಾಕ್ಷಸರನ್ನು ನಿಗ್ರಹಿಸುವ ಸಂದರ್ಭಗಳಲ್ಲಿ, ಅವರವರ ಸ್ವರೂಪಗಳನ್ನೂ ಮತ್ತು ನಿಗ್ರಹಮಾಡತಕ್ಕ ಕ್ರಮಗಳ ತತ್ವಗಳನ್ನೂ ವಿವರವಾಗಿ ತಿಳಿಸಿರುತ್ತದೆ. ಅಲ್ಲದೆ ಸೀತೆಯ ಅಗ್ನಿಪ್ರವೇಶದ ಸಂದರ್ಭದಲ್ಲಿ ಆತ್ಮತತ್ವದ ವಿವರವೂ ಬರುತ್ತದೆ.

ಮುಮುಕ್ಷುವು ವೇದಾಂತಶ್ರವಣ ಮಾಡಿದನಂತರ ಮಾಡಬೇಕಾದ ಕರ್ತವ್ಯವೇನೆಂಬುದಕ್ಕೆ ಮುಂದಿನ ರಾಮಾಯಣ ಕಥೆಯನ್ನು ಅನುಸರಿಸೋಣ.

## ೧೪ನೆಯ ಪ್ರಕರಣ

**ಲಕ್ಷ್ಮಣನು ಅಯೋಮುಖಿಯನ್ನು ವಿಮುಖಮಾಡಿದುದು.**



**ಮುಮುಕ್ಷುವಿಗೆ ಸತ್ಸಂಗದ ಅವಶ್ಯಕತೆಯ ವಿಚಾರ.**

**ರಾ||** ಶ್ರೀರಾಮ ಲಕ್ಷ್ಮಣರು ಜಟಾಯುವಿನಿಂದ ಸೀತಾವೃತ್ತಾಂತವನ್ನು ತಿಳಿದು ಸೀತಾದೇವಿಯನ್ನು ಹುಡುಕುತ್ತಾ ಮುಂವಕ್ಕೆ ಪ್ರಯಾಣಮಾಡಿದರು. ದಾರಿಯಲ್ಲಿ ಅಯೋಮುಖಿಯೆಂಬ ರಾಕ್ಷಸಿಯು ಸಿಕ್ಕಿ ಶ್ರೀರಾಮನ ಮುಂದೆ ನಿಂತಿದ್ದ ಲಕ್ಷ್ಮಣನ ಬಳಿಗೆ ಬಂದು "ಬಾ! ನಾವಿಬ್ಬರೂ ಕ್ರೀಡಿಸೋಣ" ಎಂದು ಲಕ್ಷ್ಮಣನನ್ನು ಅಪ್ಪಿಕೊಂಡು "ನಿನ್ನ ಒಳ್ಳೆಯ ಪ್ರಾಯಕಾಲಕ್ಕೆ ನಾನು ದೊರೆತಿರುವೆನು. ನಿನಗೊಂದು ಲಾಭವಲ್ಲವೆ? ನೀನೊಬ್ಬನೇ ಅಲೆಯುವುದೇಕೆ? ನಿನ್ನ ಆಯುಶ್ಶೇಷವನ್ನು ನನ್ನೊಡನೆ ಆನಂದದಿಂದ ಕಳೆ" ಎಂಬದಾಗಿ ಲಕ್ಷ್ಮಣನನ್ನು ತಬ್ಬಿ ಬಲವಂತಮಾಡಲು ಲಕ್ಷ್ಮಣನು ಕೋಪಗೊಂಡು ಅವಳ ಕಿವಿಮೂಗುಗಳನ್ನು ಛೇದಿಸಿಬಿಟ್ಟನು. ಅಯೋಮುಖಿಯು ವಿರೂಪಳಾಗಿ ತನ್ನ ದಾರಿಯನ್ನು ಹಿಡಿದು ಓಡಿಹೋದಳು.

**ತತ್ವ||** ಅಯೋಮುಖಿಯೆಂದರೆ ಕಬ್ಬಿಣದ ಮುಖವೆಂದು ಅರ್ಥವಾಗುತ್ತದೆ. ಕಬ್ಬಿಣವು ತುಕ್ಕುಹಿಡಿದು ನಶಿಸುವುದಾದುದರಿಂದ ಈ ತತ್ವಾರ್ಥರಾಮಾಯಣದಲ್ಲಿ

ಮೋಕ್ಷಮಾರ್ಗಕ್ಕೆ ನಾಸ್ತಿಕರಾಗಿ ಪ್ರಾಪಂಚಿಕ ಭೋಗಗಳಲ್ಲಿ ಬಿದ್ದು ಒದ್ದಾಡುವವರು ಕಬ್ಬಿಣದಂತೆಂಬ ತತ್ವವಾಗಿರುತ್ತದೆ. ಪ್ರಪಂಚಭೋಗದಲ್ಲಿಯೇ ಬಿದ್ದು ಒದ್ದಾಡುವಿಕೆಯು ಕಬ್ಬಿಣದಂತೆ ತುಕ್ಕುಹಿಡಿಯುವುದು. ಮೋಕ್ಷಮಾರ್ಗಾವಲಂಬನವು ಸುವರ್ಣದಂತೆ ನಿರ್ಮಲವಾಗಿರುವುದು. ಪ್ರಪಂಚದ ಭೋಗಗಳಲ್ಲಿಯೇ ಬಿದ್ದು ಒದ್ದಾಡುವವರು ಭೋಗದ ಥಳಕನ್ನು ವರ್ಣಿಸುತ್ತಾ ಮೋಕ್ಷಮಾರ್ಗಿಗಳನ್ನು ತಮ್ಮ ಅನುಯಾಯಿಗಳನ್ನಾಗಿ ಮಾಡಿಕೊಳ್ಳಲು ಯತ್ನಿಸುವ ತತ್ವವೇ ಅಯೋಮುಖಿಯು ಲಕ್ಷ್ಮಣನನ್ನು ಭೋಗಪಡುವುದಕ್ಕೆ ಕರೆದುದಾಗಿರುತ್ತದೆ.

ಭೋಗಪದಾರ್ಥಗಳ ಜೊತೆಯಲ್ಲಿರುವುದಕ್ಕಿಂತಲೂ ವಿಷಯಕಾಮುಕರ ಸಹವಾಸ ಮಾಡುವುದು ಬಹಳ ಕೆಟ್ಟದ್ದು. ಮೋಕ್ಷಾಭಿಲಾಷಿಗಳು ಬ್ರಹ್ಮನಿಷ್ಠೆಯಲ್ಲಿರುವವರ ಸಹವಾಸ ಮಾಡಿದರೆ, ಮೋಕ್ಷ ಪಡೆಯುವುದಕ್ಕೆ ಅತ್ಯಂತ ಸಹಾಯವಾಗುತ್ತದೆ. ಹಾಗಿಲ್ಲದೆ ಭೋಗಲಂಪಟರ ಸಹವಾಸ ಮಾಡಿದ್ದೇ ಆದರೆ, ಶ್ರೀಶಂಕರಭಗವತ್ಪಾದರವರು ವಿವೇಕ ಚೂಡಾಮಣಿಯಲ್ಲಿ ಹೇಳಿರುವಂತೆ ಕೊಳಕ್ಕೆ ಬೀಳುತ್ತಿರುವ ಚೆಂಡು ಮೆಟ್ಟಲಿಂದ ಮೆಟ್ಟಲಿಗೆ ಜಾರಿ ಕೊಳದೊಳಗೆ ಬಿದ್ದುಹೋಗುವಂತೆ ಮೋಕ್ಷಮಾರ್ಗದಲ್ಲಿರತಕ್ಕವರು ಪ್ರಪಂಚದ ಬಂಧನವೆಂಬ ಕೊಳದಲ್ಲಿ ಮುಳುಗಿಬಿಡುತ್ತಾರೆ.

ಈ ಅಯೋಮುಖಿಯು ಬುದ್ಧಿತತ್ವಸ್ವರೂಪನಾದ ಶ್ರೀರಾಮನನ್ನು ಅಪೇಕ್ಷಿಸದೆ ಮನಸ್ಸ್ತತ್ವಸ್ವರೂಪಿಯಾದ ಲಕ್ಷ್ಮಣನನ್ನೇ ಹೊಂದಲು ಇಚ್ಛಿಸಿದುದರ ತತ್ವವೇನೆಂದರೆ— ಪ್ರಪಂಚದ ಭೋಗಗಳನ್ನು ಅನುಭವಿಸುವುದಕ್ಕೆ ಮನಸ್ಸೇ ಪ್ರಧಾನವಾದುದರಿಂದ ಮನಸ್ಸ್ತತ್ವದಲ್ಲಿರುವ ಲಕ್ಷ್ಮಣನನ್ನೇ ಅಯೋಮುಖಿಯು ಅಪ್ಪಿಕೊಳ್ಳಲು ಬಂದಳು. ಮನಸ್ತತ್ವದಲ್ಲಿರುವ ಲಕ್ಷ್ಮಣನು ಎಡೆಬಿಡದೆ ಶ್ರೀರಾಮನ ಅನುವರ್ತಿಯಾಗಿ ಸೀತಾದೇವಿಯನ್ನು ಹೊಂದುವ ಕಾರ್ಯದಲ್ಲಿ ದೃಢವ್ರತನಾಗಿದ್ದನೆಂದರೆ—ವಿರಕ್ತಿಯ ತತ್ವದಲ್ಲಿದ್ದುದರಿಂದ ಅಯೋಮುಖಿಯನ್ನೇ ವಿಮುಖಳನ್ನಾಗಿಮಾಡಿ ಕಳುಹಿಸಿದನು.

ಅಯೋಮುಖೀಲಕ್ಷ್ಮಣರ ವಿಚಾರದ ಮುಖ್ಯತತ್ವವೇನೆಂದರೆ—ಮೋಕ್ಷಮಾರ್ಗದಲ್ಲಿರತಕ್ಕವರು ಭೋಗಲಂಪಟರ ಆಕರ್ಷಣಾಶಕ್ತಿಗೆ ಒಳಪಡದಂತೆ ಖಂಡಿತವಾಗಿ ನಿಯಮವನ್ನು ಇಟ್ಟುಕೊಂಡಿರಬೇಕು. ಅಲ್ಲದೆ ಶ್ರೀಶಂಕರಭಗವತ್ಪಾದರವರು,

ಸತ್ಸಂಗತ್ವೇ ನಿಸ್ಸಂಗತ್ವಂ ನಿಸ್ಸಂಗತ್ವೇ ನಿರ್ಮೋಹತ್ವಂ ||
ನಿರ್ಮೋಹತ್ವೇ ನಿಶ್ಚಲತತ್ವಂ ನಿಶ್ಚಲತತ್ವೇ ಜೀವನ್ಮುಕ್ತಿಃ ||

ಎಂಬದಾಗಿ ಹೇಳಿರುವಂತೆ ಅತ್ಯವಶ್ಯಕವಾಗಿ ವಿಷಯಲಂಪಟರ ಸಹವಾಸತ್ಯಾಗ ಮಾಡಿ ಬ್ರಹ್ಮನಿಷ್ಠರ ಸಹವಾಸದಲ್ಲಿರಬೇಕೆಂಬ ತತ್ವವೇ ಅಯೋಮುಖಿ ಮತ್ತು ಲಕ್ಷ್ಮಣರ

ವಿಚಾರದ ತತ್ವವಾಗಿರುತ್ತದೆ. ಮುಮುಕ್ಷುತೆ ಮತ್ತು ವೇದಾಂತಶ್ರವಣದ ಮುಂದಿನ ಸೋಪಾನದ ಅವಶ್ಯಕತೆಯೇ ಸತ್ಸಂಗದ ವಿಚಾರವಾಗಿರುವುದರಿಂದ ಅಧಿಕಾರಿಯು ಸತ್ಸಹವಾಸದಲ್ಲಿದ್ದರೇನೆ ಮುಂದಿನಸೋಪಾನವನ್ನು ಹತ್ತುವನು.

## ೧೫ನೆಯ ಪ್ರಕರಣ.

**ಶ್ರೀರಾಮ ಲಕ್ಷ್ಮಣರು ಕಬಂಧಾಸುರನ ಶಾಪವನ್ನು ವಿಮೋಚನೆ ಮಾಡಿದುದು.**

**(೧) ಮೋಕ್ಷಾಧಿಕಾರಿಯಲ್ಲಿರಬೇಕಾದ ಆಹಾರನಿಯಮದವಿಚಾರ.**

**(೨) ಅಧಿಕಾರಿಯು ಗುರುವಿನಲ್ಲಿ ಶ್ರವಣಮಾಡಿದ ವೇದಾಂತವಿಚಾರವನ್ನು ಮನನಮಾಡಿಕೊಳ್ಳಬೇಕಾದ ವಿಚಾರ.**

**ರಾ||** ಶ್ರೀರಾಮ ಲಕ್ಷ್ಮಣರು ಅಯೋಮುಖಿಯನ್ನು ವಿಮುಖಮಾಡಿ ಮುಂದಕ್ಕೆ ಪ್ರಯಾಣಮಾಡುತ್ತಿರುವಾಗ ತಲೆಯಾಗಲಿ ಕಂಠವಾಗಲಿ ಇರದೆ ಬರೀ ಮುಂಡದಂತೆ ಇರುವ ಹೊಟ್ಟೆಯಲ್ಲಿಯೇ ಬಾಯಿ ಇರುವ, ಒಂದೊಂದು ಗಾವುದ ದೂರ ತೋಳುಗಳುಳ್ಳ ಕಬಂಧಾಸುರನೆಂಬ ಭೂತವನ್ನು ಕಂಡರು. ಇಂತಹ ಕಬಂಧನನ್ನು ಶ್ರೀರಾಮ ಲಕ್ಷ್ಮಣರು ದಹಿಸಿ ಅವನ ಶಾಪವಿಮೋಚನೆಮಾಡಿದರು.

**ತತ್ವ||** ಇದುವರೆಗೂ, ಮೋಕ್ಷಪಡೆಯಬೇಕೆಂಬ ಅಧಿಕಾರಿಯು ಪಡೆಯಬೇಕಾದ ಮುಮುಕ್ಷುತ್ವ, ವೈರಾಗ್ಯ, ವೇದಾಂತಶ್ರವಣ, ಮತ್ತು ಸತ್ಸಂಗದ ತತ್ವಗಳ ವಿಚಾರಗಳನ್ನು ತಿಳಿಸಿತಷ್ಟೆ! ಇನ್ನು ಮುಂದೆ ಅಧಿಕಾರಿಯು ಮಾಡಿಕೊಳ್ಳಬೇಕಾದ ಸಾಧನೆಗಳ ವಿಚಾರಗಳು ಒಂದೊಂದಾಗಿ ಬರುತ್ತವೆ. ಈ ಕಬಂಧಾಸುರನ ವಿಚಾರದಲ್ಲಿ ಎರಡು ತತ್ವಗಳಿರುತ್ತವೆ. ಒಂದನೆಯದು ಆಹಾರನಿಯಮದ ವಿಚಾರ. ಎರಡನೆಯದು ಗುರುವಿನಲ್ಲಿ ವೇದಾಂತಶ್ರವಣಮಾಡಿದುದನ್ನು ಮನನಮಾಡಿಕೊಳ್ಳುವುದು. ಈ ಎರಡರಲ್ಲಿ ಆಹಾರನಿಯಮದ ವಿಚಾರವನ್ನು ಪ್ರಥಮದಲ್ಲಿ ತೆಗೆದುಕೊಳ್ಳೋಣ.

ಕಬಂಧ ಎನ್ನುವ ಶಬ್ದಕ್ಕೆ “ ಕಂ-ಸುಖಂ ಬಧ್ಯತೇ-ಬಧ್ಯತೇ ಅಸ್ಮಾತ್ ಕಬಂಧಃ ” ಸುಖವನ್ನು ಬಂಧನಮಾಡತಕ್ಕವನಿಗೆ ಕಬಂಧನೆಂದು ಹೆಸರು. ಸುಖವೆಂದರೆ, ಆತ್ಮ ಸಾಕ್ಷಾತ್ಕಾರವೇ ನಿಶ್ಚಯವಾದ ಸುಖವಲ್ಲದೆ ಇತರ ಸುಖಗಳೆಲ್ಲ ದುಃಖದೊಡನೆ ದ್ವಂದ್ವವಾಗಿರುವುದರಿಂದ ನಿಜವಾದ ಸುಖವೆನಿಸುವುದಿಲ್ಲ. ಇಂತಹ ನಿಶ್ಚಯವಾದ ಆತ್ಮಸುಖವನ್ನು ರಜೋಗುಣ ತಮೋಗುಣಗಳ ಸೋಪಾನದಿಂದ ಹೊಂದಲು ಸಾಧ್ಯವಿಲ್ಲ. ಸತ್ವ

ಗುಣಸೋಪಾನದಿಂದ ನಿರ್ಗುಣಸೋಪಾನವನ್ನು ನಾವು ಹೊಂದಬೇಕಾಗಿರುವುದರಿಂದ ಸತ್ವಗುಣಸೋಪಾನವನ್ನು ಸುಖವೆಂದು ಕರೆಯಬಹುದು. ಸ್ಥೂಲ ಸೂಕ್ಷ್ಮ ದೇಹಗಳು ರಜೋಗುಣ ತಮೋಗುಣಗಳ ಉಲ್ಬಣವಿಲ್ಲದೆ ಸತ್ವಾಂಶವಾಗಿರುವುದೇ ಸುಖ. ಇಂತಹ ಸತ್ವಾಂಶದ ಸ್ಥಿತಿಯನ್ನು ಪಡೆಯದೆ ಶಾಶ್ವತಸುಖಸ್ವರೂಪವಾದ ಸಾಕ್ಷಾತ್ಕಾರವಾಗುವುದಿಲ್ಲ. ಆದುದರಿಂದ ಸ್ಥೂಲ ಮತ್ತು ಸೂಕ್ಷ್ಮ ದೇಹಗಳನ್ನು ಸತ್ವಾಂಶದಕಡೆಗೆ ತಿರುಗಿಸಿಕೊಳ್ಳುವುದೇ ಕಬಂಧನ ಶಾಪವಿಮೋಚನೆಯ ತತ್ವವಾಗಿರುತ್ತದೆ. ಪ್ರಥಮದಲ್ಲಿ ಸ್ಥೂಲದೇಹದ ವಿಚಾರವನ್ನು ತೆಗೆದುಕೊಳ್ಳೋಣ.

ಸ್ಥೂಲದೇಹಕ್ಕೆ ಪ್ರಧಾನವಾದುದು ಪ್ರಾಣಶಕ್ತಿ ಮತ್ತು ಅಂತಃಕರಣ. ಪ್ರಾಣಶಕ್ತಿಯೂ ಅಂತಃಕರಣವೂ ಆಹಾರವನ್ನು ಆಶ್ರಯಿಸಿಕೊಂಡಿರುತ್ತವೆ. ಯಾವ ವಿಧವಾದ ಆಹಾರ ಸೇವನೆಮಾಡುತ್ತೇವೋ ಪ್ರಾಣ ಮತ್ತು ಅಂತಃಕರಣದ ವ್ಯಾಪಾರವೂ ಅದೇ ರೀತಿಯಾಗುತ್ತದೆ. ಆದುದರಿಂದ ಸತ್ವಾಂಶದ ಆಹಾರಸೇವನೆಯಿಂದ ಪ್ರಥಮದಲ್ಲಿ ಜಠರಾಗ್ನಿಯು ತೀಕ್ಷ್ಣವಾದ ಕಾಂತಿಯುಳ್ಳದ್ದಾಗುತ್ತದೆ. ಅನಂತರ ಪ್ರಾಣಶಕ್ತಿ ಮತ್ತು ಅಂತಃಕರಣಗಳು ಜಠರಾಗ್ನಿಯಂತೆ ಸತ್ವಾಪತ್ತಿಯನ್ನು ಹಿಂಬಾಲಿಸುವುವು. ದೇಹದಲ್ಲಿ ಜಠರಾಗ್ನಿಯೊಂದು ಸರಿಯಾಗಿದ್ದರೆ ಪಂಚಭೂತಗಳ ತತ್ವಗಳೂ ಸರಿಯಾಗಿದ್ದು ಆರೋಗ್ಯವಿರುತ್ತದೆ. ಈ ಪಂಚಭೂತಗಳ ಪ್ರತಿಯೊಂದು ತತ್ವದ ಸುಖದ ಬಂಧನಕ್ಕೂ ಕಬಂಧ ಎಂಬ ಪದದ ವ್ಯುತ್ಪತ್ತಿ ಮಾಡಬಹುದು. ಗ್ರಂಥಬಾಹುಳ್ಯವಾಗುವುದರಿಂದಲೂ, ಸುಖವೆಂಬ ಒಂದು ಅರ್ಥದಿಂದಲೇ ಸರ್ವ ಅರ್ಥಗಳೂ ಬರುವುದರಿಂದಲೂ ಉಳಿದ ಅರ್ಥಗಳನ್ನು ಬರೆಯಲಿಲ್ಲ.

ನಮ್ಮ ದೇಹದಲ್ಲಿ ಸಣ್ಣಕರುಳಿನಲ್ಲಿ ಇಂತಹ ಜಠರಾಗ್ನಿಯು ಇರುವುದು. ಈ ಕರುಳು ಸಣ್ಣದಾಗಿ ಬಹಳ ಉದ್ದವಾಗಿ ಕೊಳವಿಯಂತೆ ಟೊಳ್ಳಾಗಿರುವುದು. ಇದರಂತೆ ಕಬಂಧನಿಗೆ ಕತ್ತು ಮತ್ತು ತಲೆಗಳಿಲ್ಲದೆ ಎರಡು ಕೈಗಳೂ ಒಂದೊಂದು ಗಾವುದವಿತ್ತು. ಅಂದರೆ ಉದ್ದವಾಗಿರುವ ಸಣ್ಣ ಕರುಳಿನ ಮಧ್ಯದಲ್ಲಿರುವ ಜಠರಾಗ್ನಿ ಅಥವಾ ಪಚನಶಕ್ತಿಗೆ ಕಬಂಧನ ತತ್ವವು ಅನ್ವಯವಾಗುತ್ತದೆ. ರಾಜಸ ಮತ್ತು ತಾಮಸಾಹಾರಗಳನ್ನು ತಿನ್ನತಕ್ಕವರ ಮತ್ತು ಮಿತಿಮೀರಿ ತಿನ್ನತಕ್ಕವರ ಜಠರಾಗ್ನಿ ಅಥವಾ ಪಚನಶಕ್ತಿಗೆ ಕಬಂಧನೆಂದು ಅನ್ವಯವಾಗುತ್ತದೆ. ಕಾರಣವೇನೆಂದರೆ, ಸತ್ವಾಹಾರದಿಂದ ಜಠರಾಗ್ನಿಯು ಸೂಕ್ಷ್ಮಗ್ರಹಣಶಕ್ತಿಯುಳ್ಳ ಕಾಂತಿಯುಳ್ಳದ್ದಾಗುವುದು. ಆಹಾರವು ಯಾವ ಗುಣವನ್ನು ಅನುಸರಿಸುತ್ತದೋ, ಅದೇ ಗುಣವನ್ನೇ ದೇಹವು ಅನುಸರಿಸಬೇಕು. ದೇಹವು ಯಾವ ಗುಣವನ್ನು ಅನುಸರಿಸುವುದೋ, ಆ ಗುಣವನ್ನೇ ಮನಸ್ಸೂ ಅನುಸರಿಸಬೇಕಾಗುತ್ತದೆ. ತಿಂದ ಆಹಾರವು ಮೂರು ಭಾಗವಾಗಿ, ಒಂದು ಭಾಗವು ಮಲವಾಗಿಯೂ, ಇನ್ನೊಂದು ಭಾಗವು ಪ್ರಾಣಶಕ್ತಿಯಾಗಿಯೂ, ಮೂರನೆಯ ಭಾಗವು ಮನಸ್ಸಾಗಿಯೂ ಪರಿಣಾಮವಾಗುತ್ತದೆ.

ಈ ರೀತಿಯಾಗುವುದೆಂದು ಛಾಂದೋಗ್ಯೋಪನಿಷತ್ತಿನಲ್ಲಿ "ಅನ ಮಶಿತಂ ತ್ರೇಧಾ ಭವತಿ" ಮತ್ತು "ಅನ್ನಮಯಂಹಿ ಸೌಮ್ಯಮನಃ" ಎಂಬದಾಗಿ ಹೇಳಿರುತ್ತದೆ.

ಈ ಮೇಲಿನ ವಿಚಾರವನ್ನು ಸ್ವಾನುಭವದಿಂದಲೂ ತಿಳಿದುಕೊಳ್ಳಬಹುದು. ಮದ್ಯ, ತಂಗಳನ್ನ ಮುಂತಾದ್ದರಲ್ಲಿರುವ ತಮೋಗುಣವೂ, ಖಾರ, ಹುಳಿ, ಮಾಂಸ, ಮುಂತಾದ್ದರಲ್ಲಿರುವ ರಜೋಗುಣವೂ, ದೇಹ ಮನಸ್ಸು ಬುದ್ಧಿಗಳನ್ನು ಆವರಿಸಿಕೊಂಡು ತಮ್ಮ ಗುಣಗಳನ್ನು ತೋರಿಸುವುವು. ಮಾಂಸಾಹಾರವೇ ಪ್ರಧಾನವಾಗುಳ್ಳ ಸಿಂಹ, ಹುಲಿ ಮುಂತಾದ ಪ್ರಾಣಿಗಳಿಗೂ, ಮಾಂಸಾಹಾರವಿಲ್ಲದೆ ತೃಣ, ಪತ್ರ ಮುಂತಾದ್ದು ಆಹಾರವಾಗುಳ್ಳ ಆನೆ ಮುಂತಾದ ಪ್ರಾಣಿಗಳಿಗೂ ಹೀಗೆ ಭೇದವಿರುವುದೆಂಬುದನ್ನು ಸರ್ವರೂ ಯೋಚಿಸಿಕೊಳ್ಳಲಿ.

ಇಂತಹ ತಮೋಗುಣ ರಜೋಗುಣಗಳ ಆಹಾರವನ್ನು, ಅದರಲ್ಲೂ ಮಿತಿಮೀರಿ ತಿಂದರೆ, ಜಠರಾಗ್ನಿ ಅಥವಾ ಪಚನಶಕ್ತಿಗೆ ಕಬಂಧತ್ವವು ಬರುತ್ತದೆ. ಇಲ್ಲಿ ಆಹಾರಕ್ಕೂ ಮೋಕ್ಷಮಾರ್ಗಕ್ಕೂ ಏನು ಸಂಬಂಧವಿರುವುದೆಂಬ ಪ್ರಶ್ನೆ ಬರಬಹುದು. ದೇಹ ಮನಸ್ಸುಗಳು ಎಷ್ಟೇ ಶುಚಿಯಾಗಿದ್ದರೂ, ಆಹಾರದಲ್ಲಿರುವ ಗುಣಗಳನ್ನು ಅನುವರ್ತಿಸುವುವೆಂದು ಮೇಲೆಯೇ ತಿಳಿಸಿರುತ್ತೆ. ಆಹಾರದಲ್ಲಾಗಲಿ ವ್ಯವಹಾರದಲ್ಲಾಗಲಿ ನಮಗೆ ಮೋಕ್ಷಕ್ಕೆ ಪ್ರತಿಬಂಧಕವಾಗಿರುವುದು ರಜಸ್ತಮೋಗುಣಗಳು. ಇವುಗಳ ಸಂಪರ್ಕವಿಲ್ಲದಂತೆ ಮಾಡಿಕೊಳ್ಳಬೇಕು. ಅಲ್ಲದೆ ಮೋಕ್ಷಮಾರ್ಗದಲ್ಲಿ ಇನ್ನು ಮುಂದೆ ನಿದಿಧ್ಯಾಸಸಮಾಧಿಯೆಂದರೆ ಯೋಗದ ಕಾರ್ಯಕ್ಕೆ ಪ್ರವೇಶಮಾಡಬೇಕಾಗಿರುತ್ತದೆ. ಧ್ಯಾನಕ್ಕೆ ಪ್ರತಿಬಂಧಕವಾಗಿರುವುದೇ ಮನಶ್ಚಂಚಲತ್ವ. ಬುದ್ಧಿ ಮನಸ್ಸುಗಳು ಸ್ವಾಧೀನಕ್ಕೆ ಬರಬೇಕಾದರೆ ದೇಹವು ಸ್ವಾಧೀನಕ್ಕೆ ಬರಬೇಕು. ದೇಹವು ಸ್ವಾಧೀನಕ್ಕೆ ಬರಬೇಕಾದರೆ, ಆಹಾರದಲ್ಲಿ ನಿಯಮವಿರಬೇಕು. ಅನ್ಯಥಾ ದೇಹ, ಬುದ್ಧಿ, ಮನಸ್ಸುಗಳು ಸ್ವಾಧೀನದಲ್ಲಿರುವುದಿಲ್ಲವೆಂಬುದು ಸರ್ವರಿಗೂ ವೇದ್ಯವಾಗಿಯೇ ಇರುತ್ತದೆ. ಆದುದರಿಂದ ಆಹಾರನಿಯಮವು ಅತ್ಯವಶ್ಯಕವಾಗಿರಬೇಕು. ಈ ಮೇಲಿನ ತತ್ವಾರ್ಥಗಳನ್ನು ಸೂಚಿಸುವ ತಾತ್ಪರ್ಯವೇ ಕಬಂಧನ ಶಾಪವಿಮೋಚನೆಯ ತತ್ವವಾಗಿದೆ.

**ರಾ||** ಶ್ರೀರಾಮ ಲಕ್ಷ್ಮಣರು ಕಬಂಧನನ್ನು ಕುರಿತು ಸೀತಾವೃತ್ತಾಂತವೇನಾದರೂ ಗೊತ್ತಿದ್ದರೆ ಹೇಳಬೇಕೆಂದು ಕೇಳಲು ಕಬಂಧನು "ಈ ಜಡತ್ವದಲ್ಲಿ ನಾನು ಏನೂ ಹೇಳಲಾರೆ. ನನ್ನನ್ನು ಸುಡಿ, ನನ್ನನ್ನು ಸುಟ್ಟರೆ ನನಗೆ ದಿವ್ಯಚಕ್ಷುಸ್ಸು ಬರುತ್ತದೆ. ಮುಂದೆ ನೀವು ಸೀತೆಯನ್ನು ಪಡೆಯಲು ಮಾಡಬೇಕಾದ ಕರ್ತವ್ಯದ ವಿಚಾರವನ್ನು ತಿಳಿಸುತ್ತೇನೆ" ಎಂದು ಹೇಳಿದನು.

ತತ್ವ|| ಮೇಲೆ ತಿಳಿಸಿರುವಂತೆ ಜಠರಾಗ್ನಿ ಅಥವಾ ಪಚನಶಕ್ತಿಗೆ ಇದುವರೆಗೂ ರಜೋಗುಣ ತಮೋಗುಣಗಳ ಆಹಾರದ ಸಂಬಂಧದಿಂದ ಜಡತ್ವವುಂಟಾಗಿ ರಾಕ್ಷಸತ್ವ ಬಂದಿದ್ದಿತು. ಮಿತವಾದ ಸತ್ವಾಹಾರ ಸೇವನೆಯಿಂದ ಜಠರಾಗ್ನಿಗೆ ಉತ್ತಮವಾದ ಪ್ರಕಾಶವು ಬರುವುದೆಂಬ ತತ್ವವೇ ಕಬಂಧನ ಶಾಪವಿಮೋಚನೆಯಾಗಿ ದಿವ್ಯದೇಹ ಬರುವುದಾಗಿ ಇರುತ್ತದೆ. ಸತ್ವರಜಸ್ತಮೋಗುಣಗಳ ಆಹಾರಗಳ ಸ್ವರೂಪಕ್ಕೂ, ಇವುಗಳಲ್ಲಿ ಸತ್ವಗುಣದ ಆಹಾರವೇ ಶ್ರೇಷ್ಠವೆನ್ನುವುದಕ್ಕೂ ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆ ಶ್ರದ್ಧಾತ್ರಯ ವಿಭಾಗಯೋಗವೆಂಬ ೧೭ನೆಯ ಅಧ್ಯಾಯದಲ್ಲಿ ಈ ಮುಂದೆ ಹೇಳುವ ನಾಲ್ಕು ಶ್ಲೋಕಗಳನ್ನು ಅಪ್ಪಣೆ ಕೊಡಿಸಿರುತ್ತಾನೆ:—

ಆಹಾರಸ್ತ್ವಪಿ ಸರ್ವಸ್ಯ ತ್ರಿವಿಧೋ ಭವತಿ ಪ್ರಿಯಃ |
ಯಜ್ಞ ಸ್ತಪಃ ತಥಾ ದಾನಂ ತೇಷಾಂ ಭೇದ ಮಿಮಂ ಶ್ರುಣು |

ಈ ಸತ್ವರಜಸ್ತಮೋರೂಪವಾದ ಗುಣತ್ರಯಗಳಿಂದ ಕೂಡಿರುವ ಸಮಸ್ತ ಪ್ರಾಣಿಗಳಿಗೂ ಆಹಾರವು ಮೂರು ವಿಧದಲ್ಲಿ ಹಿತವಾಗಿರುವುದು. ತದನುಗುಣವಾಗಿ ಯಜ್ಞವೂ ದಾನವೂ, ತಪಸ್ಸೂ, ಬೇರೆ ಬೇರೆಯಾಗಿರುವುದು.

ಆಯು ಸ್ಸತ್ವ ಬಲಾರೋಗ್ಯ ಸುಖ ಪ್ರೀತಿ ವಿವರ್ಧನಾಃ |
ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತ್ವಿಕಪ್ರಿಯಾ ||

ಬಹುಕಾಲ ಬದುಕಲನುಕೂಲವಾದದ್ದಾಗಿಯೂ, ಚಿತ್ತಚಾಂಚಲ್ಯವನ್ನು ನಿವಾರಿಸುವುದಾಗಿಯೂ, ಕರ್ತವ್ಯಕರ್ಮದಲ್ಲಿ ಶ್ರಮೆತೋರದಂತಹ ಶಕ್ತಿಕೊಡತಕ್ಕದ್ದಾಗಿಯೂ, ರೋಗವನ್ನೇ ಬರಗೊಡಿಸದುದಾಗಿಯೂ, ಊಟವಾದನಂತರ ತೃಪ್ತಿದಾಯಕವಾದದ್ದಾಗಿಯೂ, ಸಂತೋಷಕರವಾದದ್ದಾಗಿಯೂ, ದೇಹದಲ್ಲಿ ಸ್ವಲ್ಪಕಾಲವಿರುವಂಥಾದ್ದಾಗಿಯೂ, ದುರ್ಗಂಧ, ಅಶುಚಿ, ಮೊದಲಾದವುಗಳಿಲ್ಲದೆ ಮನಸ್ಸಿಗೆ ಉಲ್ಲಾಸಕರವಾದದ್ದಾಗಿಯೂ, ಇರುವ ಆಹಾರಗಳು ಸಾತ್ವಿಕರಿಗೆ ಪ್ರಿಯವಾದವುಗಳಾಗಿರುವವು.

ಕಟ್ವಮ್ಲ ಲವಣಾ ತ್ಯುಷ್ಣ ತೀಕ್ಷ್ಣ ರೂಕ್ಷ ವಿದಾಹಿನಃ |
ಆಹಾರಾ ರಾಜಸ ಸ್ಯೇಷ್ಟಾ ದುಃಖ ಶೋಕಾಮಯ ಪ್ರದಾಃ ||

ತಾ|| ಅತಿಕಹಿಯಾಗಿಯೂ, ಅತಿಹುಳಿಯಾಗಿಯೂ, ಅತಿಉಪ್ಪಾಗಿಯೂ, ಅತಿಬಿಸಿಯಾಗಿಯೂ, ಅತಿಖಾರವಾಗಿಯೂ, ಸ್ವಲ್ಪವೂ ಜಿಡ್ಡಿನ ಅಂಶವಿಲ್ಲದ್ದಾಗಿಯೂ, ಹೊಟ್ಟೆಯುರಿಯುವಂತೆ ಮಾಡುವದಾಗಿಯೂ, ಇರುವ ಆಹಾರಗಳು ರಾಜಸರಿಗೆ ಇಷ್ಟವಾದವುಗಳಾಗಿರುವುವು. ಇವು ಭೋಜನಕಾಲದಲ್ಲಿ ದುಃಖವನ್ನೂ, ಆಮೇಲೆ ಶೋಕವನ್ನೂ, ಮುಂದೆ ರೋಗಗಳನ್ನೂ ಉಂಟುಮಾಡುವಂಥವುಗಳು.

ಯಾತಯಾಮಂ ಗತರಸಂ ಪೂತಿಪರ್ಯುಷಿತಂಚ ಯತ್ |
ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಂ ||

ತಾ|| ಅಡಿಗೆಯಾಗಿ ಒಂದು ಜಾವ ಕಳೆದುಹೋಗಿ ತಣ್ಣಗಾಗಿರುವಂಥಾದ್ದಾಗಿಯೂ, ಸಹಜವಾದ ರಸವು ಹೋಗಿ ಬೇರೇ ರಸವು ಹುಟ್ಟಿರುವಂಥಾದ್ದಾಗಿಯೂ, ದುರ್ವಾಸನೆ ಯುಳ್ಳದ್ದಾಗಿಯೂ, ಅಡಿಗೆಯಾಗಿ ಒಂದು ರಾತ್ರಿ ಕಳೆದಿರುವಂಥಾದ್ದಾಗಿಯೂ, ಉಂಡು ಮಿಕ್ಕದ್ದಾಗಿಯೂ, ದೇವರ ನೈವೇದ್ಯಕ್ಕನರ್ಹವಾದ, ಅಶುಚಿಯಾದ ಮಾಂಸ ಮೊದಲಾದವು ಗಳಾಗಿಯೂ ಇರುವ ಊಟವು ತಾಮಸರಿಗೆ ಹಿತವಾಗಿರುವುದು. ಇಂತಹ ಆಹಾರವು ಬುದ್ಧಿಮಾಂದ್ಯವನ್ನುಂಟುಮಾಡುವುದಲ್ಲದೆ, ದುಃಖ, ಶೋಕ, ರೋಗಾದಿಗಳನ್ನುಂಟು ಮಾಡುವುದು.

ರಾ|| ಶ್ರೀರಾಮ ಲಕ್ಷ್ಮಣರು ಕಬಂಧನ ಇಷ್ಟದಂತೆ ಅವನ ದೇಹವನ್ನು ಸುಡಲು ಕಬಂಧನು ದಿವ್ಯದೇಹವನ್ನು ಹೊಂದಿ, "ಅಗ್ನಿಸಾಕ್ಷಿಯಾಗಿ ಸುಗ್ರೀವನ ಸಖ್ಯಮಾಡಿದರೆ ನಿಮ್ಮ ಕಾರ್ಯವು ನೆರವೇರುವುದು" ಎಂದು ಅವರಿಗೆ ಹೇಳಿದನು.

ತತ್ವ|| ಸುಗ್ರೀವನೇ ಪ್ರಾಣವಾಯುತತ್ವದವನು. ಆಹಾರನಿಯಮವಿದ್ದ ಹೊರತು ಪಂಚಪ್ರಾಣ ಮತ್ತು ಶ್ವಾಸೋಚ್ಛ್ವಾಸವು ಸ್ವಾಧೀನಕ್ಕೆ ಬರುವುದಿಲ್ಲ. ಕಬಂಧನ ಶಾಪ ವಿಮೋಚನೆಯ ತತ್ವವೇ ಮೋಕ್ಷಾಧಿಕಾರಿಯು ಆಹಾರದಲ್ಲಿ ನಿಯಮದಿಂದರಬೇಕೆಂಬು ದನ್ನು ಸೂಚಿಸುತ್ತದೆ. ಆಹಾರದಲ್ಲಿ ನಿಯಮವನ್ನು ಕೈಗೊಳ್ಳುವುದರಿಂದ ಮುಂದಿನ ಅನುಷ್ಠಾನವಾದ ಯೋಗಕ್ಕೆ ಅಧಿಕಾರಿಯಾಗುತ್ತಾನೆ. ಈ ತತ್ವಾರ್ಥದ ತಾತ್ಪರ್ಯವೇ ಕಬಂಧನು ಶ್ರೀರಾಮ ಲಕ್ಷ್ಮಣರಿಗೆ ಸುಗ್ರೀವನಲ್ಲಿ ಅಗ್ನಿಸಾಕ್ಷಿಯಾಗಿ ಸ್ನೇಹ ಬೆಳೆಸಿರೆಂದು ತನಗೆ ದಿವ್ಯದೇಹ ಬಂದ ಮೇಲೆ ಹೇಳಿದುದಾಗಿರುತ್ತದೆ.

ಈ ಮೇಲಿನ ಅಂಶಗಳ ಮುಖ್ಯತಾತ್ಪರ್ಯವೇನೆಂದರೆ—ಮೋಕ್ಷಾಧಿಕಾರಿಯು ಆಹಾರ ದಲ್ಲಿ ನಿಯಮವನ್ನು ಕೈಗೊಂಡು ಮುಂದೆ ಯೋಗಾಭ್ಯಾಸಮಾಡಲು ಪ್ರಾಣವಾಯುವಿನ ಸ್ನೇಹಬೆಳೆಸಬೇಕೆಂಬ ತಾತ್ಪರ್ಯವಾಗಿರುತ್ತದೆ. ಆಹಾರನಿಯಮವಿದ್ದ ಹೊರತು ನಿದಿಧ್ಯಾಸ ಸಮಾಧಿಗಳ ಅನುಷ್ಠಾನಕ್ಕೆ ಅಧಿಕಾರ ಖಂಡಿತ ದೊರೆಯದು. ಆಹಾರನಿಯಮವಿಲ್ಲದೆ ದೇಹದಲ್ಲಿರುವ ಪಂಚಪ್ರಾಣಗಳು ಮತ್ತು ಶ್ವಾಸೋಚ್ಛ್ವಾಸಗಳು ಸ್ವಾಧೀನಕ್ಕೆ ಬರಲಾರವು. ಇದೇ ತಾತ್ಪರ್ಯಕ್ಕೆ ಪಾಶುಪತಬ್ರಹ್ಮೋಪನಿಷತ್ತಿನಲ್ಲಿ,

ಅಭಕ್ಷ್ಯಸ್ಯ ನಿವೃತ್ಯಾತು ವಿಶುದ್ಧಂ ಹೃದಯಂ ಭವೇತ್ |
ಆಹಾರ ಶುದ್ಧೌ ಚಿತ್ತಸ್ಯ ವಿಶುದ್ಧಿ ರ್ಭವತಿ ಸ್ವತಃ ||

ತಾ|| ರಜಸ್ತಮೋಗುಣಗಳ ಆಹಾರವನ್ನು ಬಿಟ್ಟು ಸಾತ್ವಿಕಾಹಾರವನ್ನು ತೆಗೆದು ಕೊಳ್ಳುವುದರಿಂದ ಹೃದಯವೆಂದರೆ ಪ್ರಾಣಶಕ್ತಿಯು ಪರಿಶುದ್ಧವಾಗುತ್ತದೆ. ಶುದ್ಧವಾದ ಆಹಾರದಿಂದ ಅಂದರೆ ಸತ್ವಗುಣದ ಆಹಾರದಿಂದ ಅಂತಃಕರಣವು ಕೂಡ ತಾನಾಗಿಯೇ ಪರಿಶುದ್ಧವಾಗುತ್ತದೆ ಎಂದು ಹೇಳಿದೆ.

ಆದುದರಿಂದ ಮೋಕ್ಷಮಾರ್ಗದಲ್ಲಿರತಕ್ಕವರೂ, ಇತರರೂ ಆಹಾರವಿಷಯದಲ್ಲಿ ನಿಯಮವಾಗಿದ್ದು, ಸತ್ವಗುಣದ ಆಹಾರವನ್ನೇ ಸೇವಿಸಬೇಕು. "ಹಿತಭುಕ್, ಮಿತ ಭುಕ್, ಕಾಲಭುಕ್" ಎಂಬಂತೆ ಹಿತವಾದುದೆಂದರೆ ಸತ್ವಗುಣದ ಆಹಾರವನ್ನು ಕಾಲಕ್ಕೆ ಸರಿಯಾಗಿ ಮಿತವಾಗಿ ತೆಗೆದುಕೊಳ್ಳಬೇಕು. ಕ್ಷುತ್ತು ಇಲ್ಲದಿದ್ದರೂ ಜಿಹ್ವಾಚಾಪಲ್ಯ ಪಾಶ ಬದ್ಧರಾಗಿ ಅಗ್ನಿಪಟುತ್ವವನ್ನು ಕೆಡಿಸಿಕೊಳ್ಳಬಾರದು. ಹೆಚ್ಚಾದ ಆಹಾರದಿಂದಲೂ, ರಾಜಸ, ತಾಮಸಾಹಾರಗಳಿಂದಲೂ, ಬ್ರಹ್ಮವಿದ್ಯಾಧಿಕಾರಿಯು ಅಧೋಗತಿಯನ್ನು ಹೊಂದುವನೆಂದು ಅನೇಕ ಶ್ರುತಿಗಳಲ್ಲಿ ಹೇಳಿರುವುದು. ಅಲ್ಲದೆ ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆ ೬ನೆಯ ಅಧ್ಯಾಯ ೧೬ನೆಯ ಶ್ಲೋಕದಲ್ಲಿ,

ನಾ ತ್ಯಶ್ನತಸ್ತು ಯೋಗೋಽಸ್ತಿ ನಚೈಕಾಂತ ಮನಶ್ನತಃ |
ನ ಚಾತಿಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ ||

ತಾ|| ಅತಿಯಾಗಿ ಆಹಾರ ತಿನ್ನುವ ಮನುಷ್ಯನಿಗೂ, ಶುದ್ಧ ಉಪವಾಸ ಮಾಡ ತಕ್ಕವನಿಗೂ, ಅತಿನಿದ್ರೆ ಮಾಡತಕ್ಕವನಿಗೂ, ಅತಿ ಎಚ್ಚರಿಕೆಯಿಂದ ಇರತಕ್ಕವನಿಗೂ, ನಿದಿಧ್ಯಾಸ ಸಮಾಧಿಗಳ ಕಾರ್ಯವೆಂದರೆ ಯೋಗಾನುಷ್ಠಾನವು ಸಂಭವಿಸಲಾರದೆಂದು ಹೇಳಿರುತ್ತಾನೆ.

ಆದುದರಿಂದ ಆಹಾರನಿಯಮವು ಸ್ಥೂಲ ಸೂಕ್ಷ್ಮ ದೇಹಗಳೆರಡಕ್ಕೂ ಅನ್ವಯ ವಾಗುವುದರಿಂದ ಮೋಕ್ಷಾಧಿಕಾರಿಯು ಖಂಡಿತವಾಗಿಯೂ ನಿಯಮದಲ್ಲಿರಬೇಕು. ಕಬಂಧನ ತತ್ವವನ್ನು ಆಹಾರನಿಯಮಕ್ಕೆ ಅನ್ವಯಿಸಿ ಮೇಲೆ ಬರೆದಿರುವುದಷ್ಟೆ! ಸ್ಥೂಲ ದೇಹಕ್ಕಿಂತ ಸೂಕ್ಷ್ಮದೇಹವಾದ ಅಂತಃಕರಣವು ಇನ್ನೂ ಅತಿಶಯವಾಗಿ ಶುದ್ಧಿಯಾಗ ಬೇಕು. ಅಂತಃಕರಣಕ್ಕೆ ರಾಜಸ ತಾಮಸಾಹಾರಗಳಿಂದುಂಟಾಗುವ ತೊಂದರೆಯೂ ತಪ್ಪಬೇಕು, ರಾಜಸ ತಾಮಸ ವಿಷಯವಾಸನೆಗಳ ಉಲ್ಬಣವೂ ತಗ್ಗಬೇಕು. ಆದುದರಿಂದ ವಿಷಯವಾಸನೆಗಳು ಅಂತಃಕರಣಕ್ಕೆ ಆಹಾರವಾಗಿರುವುವು. ತಿನ್ನುವ ಪದಾರ್ಥಗಳು ದೇಹಕ್ಕೆ ಆಹಾರವಾಗಿಯೂ, ವಿಷಯಗಳು ಅಂತಃಕರಣಕ್ಕೆ ಆಹಾರವಾ ಗಿಯೂ ಇರುವುವೆಂದು ಶ್ರೀಶಂಕರಭಗವತ್ಪಾದರವರು ಗೀತಾಭಾಷ್ಯದಲ್ಲಿ ಹೇಳಿರುತ್ತಾರೆ. ವಿಷಯವಾಸನೆಗಳು ಸತ್ವಾಂಶವಾದಲ್ಲಿ ನಮ್ಮಲ್ಲಿರುವ ಕಬಂಧತ್ವವು ನಿವೃತ್ತಿಯಾಗಿ

ಮುಂದಿನ ಸಾಧನೆಗಳಿಗೆ ಅನುಕೂಲವಾಗಿ ಬ್ರಹ್ಮಸಾಕ್ಷಾತ್ಕಾರವಾಗುತ್ತದೆ. ಆದುದರಿಂದ ಮುಮುಕ್ಷುವಿನಲ್ಲಿ ವಿಷಯವಾಸನೆಗಳ ಉಲ್ಬಣವು ತಗ್ಗುವುದಕ್ಕೆ ಗುರುಮುಖೇನ ಮಾಡಿದ ನಿತ್ಯಾನಿತ್ಯವಸ್ತುಗಳ ವಿಚಾರಗಳನ್ನು ಚನ್ನಾಗಿ ಮನನಮಾಡುತ್ತಿದ್ದರೆ ವಿಷಯ ವಾಸನೆಗಳ ಉಲ್ಬಣದಿಂದುಂಟಾದ ಬಂಧನವು ತಗ್ಗುತ್ತದೆ.

ಮುಖ್ಯವಾಗಿ ಬ್ರಹ್ಮವಿದ್ಯೆಯ ಸಾಧನೆಗೆ ಪ್ರತಿಬಂಧಕಗಳಾಗಿರುವವುಗಳಿಲ್ಲ, ಕಬಂಧನ ತತ್ವವಾಗಿರುವುವು. ಯಮ ನಿಯಮಗಳಲ್ಲಿ ಸ್ಥೂಲ ಸೂಕ್ಷ್ಮ ದೇಹಗಳಿಗೆ ಲಘ್ವಾಹಾರ ವೊಂದೇ ಮುಖ್ಯವಾದದ್ದೆಂದು ಯೋಗತತ್ತ್ವೋಪನಿಷತ್ತಿನಲ್ಲಿ,

"ಲಘ್ವಾಹಾರೋ ಯಮೇಷ್ವೇಕೋ ಮುಖ್ಯೋ ಭವತಿ ನೇತರಃ"

ಎಂಬದಾಗಿ ಹೇಳಿದೆ. ಅಲ್ಲದೆ ಸ್ವಾತ್ಮಾರಾಮಯೋಗಿಗಳು ಶ್ರುತಿವಾಕ್ಯಗಳನ್ನು ಅನುಸರಿಸಿ ಬರೆದಿರುವ ಹಠಯೋಗಪ್ರದೀಪಿಕೆಯಲ್ಲಿ,

ಅತ್ಯಾಹಾರಃ ಪ್ರಯಾಸಶ್ಚ ಪ್ರಜಲ್ಪೋ ನಿಯಮಗ್ರಹಃ |
ಜನಸಂಗಶ್ಚ ಲೌಲ್ಯಂಚ ಷಡ್ಭಿರ್ಯೋಗೋ ವಿನಶ್ಯತಿ ||

ತಾ|| ಅತ್ಯಾಹಾರವೂ, ದೇಹಕ್ಕೆ ಬಹಳ ಆಯಾಸವಾಗುವ ಕಾರ್ಯಗಳೂ, ಅಧಿಕವಾಗಿ ಮಾತನಾಡುವುದೂ, ಪ್ರಯಾಸಕರವಾದ ಉಪವಾಸಮಾಡುವುದೂ, ಬೆಳಗಿನ ಝಾವದಲ್ಲಿ ಕೊರತನ ನೀರಿನಲ್ಲಿ ಸ್ನಾನಮಾಡುವಂತಹ ನಿಯಮಗಳೂ, ಪ್ರಪಂಚವ್ಯವಹಾರದಲ್ಲಿಯೇ ಬಿದ್ದು ಒದ್ದಾಡುವವರ ಸ್ನೇಹ, ಮನಶ್ಚಾಂಚಲ್ಯ ಈ ಆರೂ ಮೋಕ್ಷಮಾರ್ಗದಲ್ಲಿನ ನಿದಿಧ್ಯಾಸ ಸಮಾಧಿಯೆಂದರೆ ಯೋಗಮಾರ್ಗದಲ್ಲಿ ಆಸಕ್ತರಾಗಬೇಕೆಂಬುವವರನ್ನು ಕೆಡಿಸು ವುವು. ಎಂದು ಹೇಳಿರುತ್ತಾರೆ.

ಆದುದರಿಂದ ಸ್ಥೂಲ ಸೂಕ್ಷ್ಮ ದೇಹಗಳ ಸುಖದ ಬಂಧನರೂಪದ ತತ್ವವಾಗ, ಈ ಕಬಂಧನ ಚರಿತ್ರೆಯಿಂದ ಮೋಕ್ಷಮಾರ್ಗಾವಲಂಭಿಗಳು ಆಹಾರ ವ್ಯವಹಾರಗಳಲ್ಲಿ ನಿಯಮ ದಿಂದರಬೇಕೆಂದು ಗೋಚರವಾಗುತ್ತದೆ.



## ೧೬ನೆಯ ಪ್ರಕರಣ.

ಶ್ರೀರಾಮ ಲಕ್ಷ್ಮಣರು ಶಬರಿಯ ಆಶ್ರಮವನ್ನು ಪ್ರವೇಶಮಾಡಿ ಫಲಗಳನ್ನು ಸ್ವೀಕರಿಸಿದುದು.

(೧) ಸತ್ವಾಹಾರದಿಂದ ಉಂಟಾಗುವ ಫಲ. (೨) ವೇದಾಂತವಿಚಾರ ಮತ್ತು ಮನನಗಳಿಂದ ಬ್ರಹ್ಮನೇ ನಾನೆಂಬ ಅಮೃತವನ್ನು ಕಡೆದು ಅದನ್ನೇ ಚಿಂತಿಸಬೇಕೆಂಬ ವಿಚಾರ.

**ರಾ||** ಶ್ರೀರಾಮ ಲಕ್ಷ್ಮಣರು ಕಬಂಧನ ಶಾಪವನ್ನು ಪರಿಹರಿಸಿ ಶಬರಿಯ ಆಶ್ರಮವನ್ನು ಪ್ರವೇಶಮಾಡಿ ಅವಳೊಪ್ಪಿಸಿದ ಫಲಗಳನ್ನು ಸ್ವೀಕರಿಸಿದರು.

**ತತ್ವ||** ಶಬರಿಯ ವಿಚಾರದಲ್ಲಿ ಎರಡು ತತ್ವಗಳಿರುವುವು. ಒಂದನೆಯದು, ಸತ್ವಾಹಾರದಿಂದ ಉಂಟಾಗುವ ಫಲದ ವಿಚಾರ. ಎರಡನೆಯದು ಉಪಶಾಂತಿಯನ್ನು ಹೊಂದುವ ವಿಚಾರ. ಶಬರಿಯ ವಾಸಸ್ಥಳವು ಮತಂಗಋಷಿಗಳಾಶ್ರಮವಾಗಿರುತ್ತದೆ. ಶಬರಿಯು ಬೇಡರವಳು. ನಮ್ಮ ದೇಹದಲ್ಲಿರುವ ಪಿತ್ತಕೋಶವು ಮತಂಗಋಷಿಗಳಾಶ್ರಮವಾಗಿಯೂ, ಆ ಪಿತ್ತಕೋಶದ ಕಾರ್ಯವು ಶಬರಿಯ ಸ್ವರೂಪವಾಗಿಯೂ ಇರುವುವು.

ಹೇಗೆಂದರೆ—" ಮತಂಗವೆಂದರೆ ಮಥ್ನಾತೀತಿ ಮತಂಗಃ ಮಂಥ ವಿಲೋಢನೇ " ಕಡೆಯುವ ಶಕ್ತಿಗೆ ಮತಂಗವೆಂದು ಹೆಸರು. ತಿಂದ ಆಹಾರವು ಜಠರಾಗ್ನಿಯಿಂದ ಪಚನವಾದ ಮೇಲೆ ದೇಹದಲ್ಲಿರುವ ಪಿತ್ತಕೋಶವು ಅದನ್ನು ಕಡೆದು ದೇಹಕ್ಕೆ ಬೇಕಾದ ಸಾರವನ್ನು ಪ್ರತ್ಯೇಕಿಸಿ, ಅಸಾರವಾದುದನ್ನು ತಳ್ಳಿಬಿಡುತ್ತದೆ. ದೇಹಕ್ಕೆ ಬೇಕಾದ ಆಹಾರದ ಸಾರವನ್ನು ಹಂಚಿಕೊಡುವ ಕಾರ್ಯವು ಶಿಷ್ಯಳಾದ ಶಬರಿಯ ಕಾರ್ಯದ ತತ್ವವಾಗಿರುವುದು. ಆಹಾರದ ಸಾರವನ್ನು ಹಂಚಿಕೊಡುವ ಶಬರಿಯ ಜಾತಿಲಕ್ಷಣವೇನೆಂದರೆ ನಾರದೀಯದಲ್ಲಿ,

ನೃಪಾಣಾಂ ವೈಶ್ಯತೋ ಜಾತ ಶ್ಯಬರಃ ಪರಿಕೀರ್ತಿತಃ |
ಮಧೂನಿ ವೃಕ್ಷಾ ದಾನೀಯ ವಿಕ್ರೀಣೀತೇ ಸ್ವವೃತ್ತಯಃ ||

**ತಾ||** ವೈಶ್ಯಜಾತಿಯಲ್ಲಿ ಮಧುವನ್ನು ಮರದಿಂದ ತಂದು ವಿಕ್ರಯಮಾಡುವವರಿಗೆ ಶಬರರೆಂದು ಹೆಸರು.

ಆದುದರಿಂದ ಮೇಲೆ ಹೇಳಿರುವಂತೆ ಶಬರಿಯ ತತ್ವವು ಆಹಾರಪದಾರ್ಥಗಳಲ್ಲಿನ ಸಾರವನ್ನು ದೇಹಕ್ಕೆ ಹಂಚಿಕೊಡತಕ್ಕ ಶಕ್ತಿಯಾಗಿರುತ್ತದೆ. ಮೇಲಿನ ಅಂಶಗಳಿಂದ ನಾವು ತಿಳಿದುಕೊಳ್ಳಬೇಕಾದ ತತ್ವಾರ್ಥವೇನೆಂದರೆ—ಪಕ್ವವಾಗಿಯೂ ಸಾರವತ್ತಾಗಿಯೂ ಮಧುರ ಮತ್ತು ಸಾತ್ವಿಕವಾಗಿಯೂ ಇರುವ ಆಹಾರವನ್ನು ಮೋಕ್ಷಮಾರ್ಗದಲ್ಲಿರುವ ಸಾಧಕರು ಮಿತವಾಗಿ ಸೇವನೆಮಾಡಬೇಕೆಂದೂ, ಅಂತಹ ಸಾತ್ವಿಕವಾದ ಮತ್ತು ಮಧುರವಾದ ಆಹಾರದ ಸಾರವು ದೇಹಕ್ಕೂ ಅಂತಃಕರಣಕ್ಕೂ, ಶಬರಿಯು ಶ್ರೀರಾಮನಿಗೆ ಮಧುವನ್ನೂ ಫಲಗಳನ್ನೂ ಒಪ್ಪಿಸಿದಂತೆ, ವ್ಯಾಪಿಸುವುದೆಂದೂ ತಿಳಿಯಬೇಕು. ಅಲ್ಲದೆ ಯೋಗಶಾಸ್ತ್ರದಲ್ಲಿ ಹೇಳಿರುವಂತೆ ಪಿತ್ತವನ್ನುಂಟುಮಾಡುವಂತಹ ಪದಾರ್ಥಗಳನ್ನು ಯೋಗಸಾಧಕರು ಸ್ವಲ್ಪವೂ ಸೇವಿಸಕೂಡದೆಂಬ ತಾತ್ಪರ್ಯವಾಗಿರುತ್ತದೆ. ಶಬರಿಯ ವಿಚಾರಕ್ಕೆ ಅನ್ವಯ ಮಾಡಿರುವ ಈ ಮೇಲಿನ ತತ್ವಗಳು ಪ್ರಥಮ ವಿಚಾರವಾದ ಆಹಾರದ ವಿಚಾರಗಳಾಗಿರುವುವು. ಇನ್ನು ಎರಡನೆಯ ವಿಚಾರವನ್ನು ತೆಗೆದುಕೊಳ್ಳೋಣ.

ಶಬರಿಯ ವಿಚಾರದಲ್ಲಿನ ಎರಡನೆಯ ತತ್ವಾರ್ಥವೇನೆಂದರೆ, ಹಿಂದೆ ಕಬಂಧನ ತತ್ವದಲ್ಲಿ ಅಂತಃಕರಣಕ್ಕೆ ರಜಸ್ತಮೋಗುಣಗಳೆಂಬ ವಿಷಯಗಳ ಉಲ್ಬಣಗಳ ಬಾಧೆ ತಪ್ಪಲು ಗುರುಮುಖೇನ ವೇದಾಂತಶ್ರವಣ ಮಾಡಿದುದನ್ನು ಮನನಮಾಡಬೇಕೆಂದು ತಿಳಿಸಿತು. ವೇದಾಂತಶಾಸ್ತ್ರದ ಪರೀಕ್ಷೆಯಲ್ಲಿ ತೇರ್ಗಡೆಯಾಗಲು ವಿದ್ಯಾರ್ಥಿಗಳು ವೇದಾಂತಪಾಠವನ್ನು ಮನನಮಾಡುತ್ತಾರಷ್ಟೆ! ಪರೀಕ್ಷೆಯಲ್ಲಿ ತೇರ್ಗಡೆಯಾದನಂತರ ವೇದಾಂತದ ಉಪಯೋಗವನ್ನು ಹೊಂದಲು ಹೊರಡದೆ ಅಲ್ಲಿಗೇ ಬಿಟ್ಟುಬಿಡುವಂತೆ ಆತ್ಮವಿದ್ಯಾಧಿಕಾರಿಯು ಮನನ ಸೋಪಾನದಲ್ಲಿಯೇ ನಿಂತುಬಿಟ್ಟರೆ ಉದ್ದಿಷ್ಟವಾದ ಮೋಕ್ಷವು ದೊರಕುವುದಿಲ್ಲ. ಆದುದರಿಂದ ಆತ್ಮವಿದ್ಯಾಧಿಕಾರಿಯು ತಾನು ಯಾವ ಉದ್ದೇಶದಿಂದ ವೇದಾಂತವಿಚಾರ ಮಾಡುತ್ತಾನೋ ಆ ಉದ್ದೇಶವನ್ನು ಸಾರ್ಥಕಗೊಳಿಸಬೇಕು. ಅಂದರೆ ಮನನಮಾಡಿದ ವೇದಾಂತವಿಚಾರವನ್ನು ಚೆನ್ನಾಗಿ ಕಡೆದು ಅದರ ಸಾರವಾದ ಬ್ರಹ್ಮನೇ ನಾನೆಂಬ ಭಾವನೆಯ ಅಮೃತವನ್ನು ಪಾನಮಾಡುತ್ತಿರಬೇಕು. ಅಂದರೆ ಮನನದಿಂದ ದೃಢೀಕರಿಸಲ್ಪಟ್ಟ ವೇದಾಂತವಿಚಾರದಲ್ಲಿ ಆತ್ಮ ಮತ್ತು ಅನಾತ್ಮ ವಸ್ತುಗಳನ್ನು ಪ್ರತ್ಯೇಕಿಸಿಕೊಳ್ಳಲು ಚೆನ್ನಾಗಿ ಮಥನಮಾಡುವುದೇ ಮತಂಗಋಷಿಗಳ ಆಶ್ರಮದ ತತ್ವವಾಗಿರುತ್ತದೆ. ಅನಾತ್ಮ ವಸ್ತುವನ್ನು ತಳ್ಳಿ ಆತ್ಮಭಾವನೆಯ ಚಿಂತನೆಯನ್ನೇ ಮಾಡುತ್ತಾ ಬರುವುದೇ ಶಬರಿಯ ತತ್ವವಾಗಿರುತ್ತದೆ.

**ರಾ||** ಶ್ರೀರಾಮನು ಪಂಪಾನದಿಯಲ್ಲಿ ಮತಂಗವೆಂಬ ಮಡುವಿನಲ್ಲಿ ಸ್ನಾನ ಮಾಡಿದನು.

**ತತ್ವ||** ಶ್ರೀರಾಮನು ಮತಂಗಮಡುವಿನಲ್ಲಿ ಸ್ನಾನಮಾಡಿದನೆಂದು ರಾಮಾಯಣ ದಲ್ಲಿ ಹೇಳಿರುವ ತತ್ವವು ಕೂಡ ಮುಮುಕ್ಷುವು ಆತ್ಮಾನಾತ್ಮವಿವೇಚನೆಯಲ್ಲಿ ಚೆನ್ನಾಗಿ ಮುಳುಗಬೇಕೆಂಬ ತತ್ವವಾಗಿರುತ್ತದೆ. ಆತ್ಮಾನಾತ್ಮಗಳಲ್ಲಿ ಆತ್ಮವೇ ನಾನೆಂಬ ಭಾವ ನೆಯು ಅಮೃತಪಾನಮಾಡುವುದೇ ಶಬರಿಯು ಶ್ರೀರಾಮನಿಗೆ ಮಧುವನ್ನು ಒಪ್ಪಿಸಿದ ತತ್ವವಾಗಿರುತ್ತದೆ. ಅನೇಕ ಜೇನುಹುಳುಗಳು ಹಲವು ಹೂಗಳಲ್ಲಿರುವ ಮಕರಂದವನ್ನು ಪಾನಮಾಡಿ ಬಂದು ಒಂದು ಗೂಡು ಕಟ್ಟುತ್ತವೆ. ಆ ಗೂಡಿನಲ್ಲಿರುವ ಅಸಾರವಾದು ವನ್ನು ಬಿಟ್ಟು ಸಾರವಾದ ಮಧುವನ್ನು ತಂದು ಶೋಧಿಸಿ ವಿಕ್ರಯಮಾಡುವವಳೇ ಶಬರಿ ಯಷ್ಟೆ! ಇದರಂತೆ ಶಾಸ್ತ್ರಗ್ರಂಥಗಳು ಅನಂತಾನಂತವಾಗಿವೆ. ಅಲ್ಲದೆ "ಅನಂತಾವೈ ವೇದಾಃ" ವೇದಗಳೇ ಅನಂತವಾಗಿವೆಯೆಂದು ಶ್ರುತಿಯು ತಿಳಿಸುತ್ತದೆ. ಆದುದರಿಂದ ಶಬ್ದಾರಣ್ಯಸ್ವರೂಪವಾದ ಗ್ರಂಥಗಳ ಸಮೂಹದಲ್ಲಿಯೇ ಮಗ್ನರಾಗದೆ ಶಬರಿಯು ಶ್ರೀರಾಮನಿಗೆ ಅರ್ಪಿಸಿದ ಲಕ್ಷೋಪಲಕ್ಷ ಹೂಗಳ ಸಾರವಾದ ಮಧುವಿನಂತೆ ವೇದಶಾಸ್ತ್ರಗಳ ಸಾರವಾದ "ನಾನೇ ಬ್ರಹ್ಮ"ನೆಂಬ ಭಾವನೆಯ ಅಮೃತರಸವನ್ನು ನಿಶ್ಚಯವಾಗಿಯೂ ಮೋಕ್ಷವನ್ನು ಪಡೆಯಬೇಕೆಂಬ ಅಧಿಕಾರಿಯು ಚಿಂತನೆಮಾಡುತ್ತಾ ಬರಬೇಕು. ಈ ತತ್ವಾರ್ಥಕ್ಕೆ ಅನುಸಾರವಾಗಿ ಶ್ರೀಕೃಷ್ಣಪರಮಾತ್ಮನು ಉತ್ತರಗೀತೆಯಲ್ಲಿ,

ಅನಂತಶಾಸ್ತ್ರಂ ಬಹುವೇದಿತವ್ಯಂ |
ಅಲ್ಪಶ್ಚ ಕಾಲೋ ಬಹವಶ್ಚ ವಿಘ್ನಾಃ ||
ಯತ್ಸಾರಭೂತಂ ತದುಪಾಸಿತವ್ಯಂ |
ಹಂಸೋ ಯಥಾ ಕ್ಷೀರಮಿವಾಂಬು ಮಿಶ್ರಂ ||

**ಶಾ||** ತಿಳಿಯಬೇಕಾದ ಶಾಸ್ತ್ರಗಳು ಅನಂತವಾಗಿರುವುವು. ಕಾಲವಾದರೋ ಅಲ್ಪ ವಾಗಿರುವುದು. ವಿಘ್ನಗಳು ಅನೇಕವಾಗಿರುವುವು. ಆದುದರಿಂದ, ನೀರುಬೆರೆದ ಹಾಲಿ ನಲ್ಲಿ ನೀರನ್ನು ಬಿಟ್ಟು ಹಾಲನ್ನೇ ಗ್ರಹಿಸುವ ಹಂಸದಂತೆ ಸಾರವಾದುದನ್ನು ಗ್ರಹಿಸಿ ಉಪಾಸನೆ ಮಾಡಬೇಕು.

ಎಂಬದಾಗಿ ಹೇಳಿರುವಂತೆ ವೇದಗಳ ಮತ್ತು ಶಾಸ್ತ್ರಗಳ ಸಾರವಾದ ಬ್ರಹ್ಮನೇ ನಾನೆಂಬ ಭಾವನೆಯ ಅನುಸಂಧಾನಮಾಡಲು ಪ್ರಾರಂಭಿಸಬೇಕು. ಈ ಶ್ಲೋಕದ ತಾತ್ಪ ರ್ಯವು ಶಬರಿಯ ತತ್ವಕ್ಕೆ ಚೆನ್ನಾಗಿ ಅನ್ವಯವಾಗುತ್ತದೆ. ಆದಕಾರಣ ಶಾಸ್ತ್ರವಾಸನೆ, ದೇಹವಾಸನೆ, ಲೋಕವಾಸನೆಗಳನ್ನು ತ್ಯಜಿಸುತ್ತ ಅಧಿಕಾರಿಯು ಬ್ರಹ್ಮಭಾವನೆಯ ಅನು ಸಂಧಾನ ಮಾಡುವುದನ್ನು ಅಭ್ಯಾಸಮಾಡಬೇಕು. ಶಾಸ್ತ್ರವಿಚಾರವು ಮಹಾರಣ್ಯದಂತೆ ಇರುತ್ತದೆ. ಇದರಲ್ಲಿ ತನಗೆ ಶ್ರೇಯಸ್ಕರವಾದ ಅಂಶವನ್ನೇ ಗುರುಮುಖದಿಂದ ತಿಳಿದು

ಕೊಂಡು ಉದ್ಧಾರವಾಗಬೇಕೆಂಬ ತಾತ್ಪರ್ಯವಾಗಿದೆ. ಮೇಲೆ ಹೇಳಿರುವ ಶ್ರೀಕೃಷ್ಣಪರಮಾತ್ಮನ ಶ್ಲೋಕದಂತೆ ಶ್ರೀಶಂಕರಭಗವತ್ಪಾದರವರು ಕೂಡ ವಿವೇಕಚೂಡಾಮಣಿ ೬೨ನೆಯ ಶ್ಲೋಕದಲ್ಲಿ,

ಶಬ್ದಜಾಲಂ ಮಹಾರಣ್ಯಂ ಚಿತ್ತಭ್ರಮಣಕಾರಣಂ ।
ಅತಃ ಪ್ರಯತ್ನಾತ್ ಜ್ಞಾತವ್ಯಂ ತತ್ವಜ್ಞಾತ್ತತ್ವಮಾತ್ಮನಃ ॥

ತಾ॥ ಶಾಸ್ತ್ರಗಳಲ್ಲಿನ ಶಬ್ದಸಮೂಹವು ದೊಡ್ಡ ಅಡವಿಯಂತೆ ಇದೆ. ಮನಸ್ಸು ಇದರಲ್ಲಿಯೇ ಹೊಕ್ಕರೆ ನೆಲೆಗಾಣದೆ ಸುತ್ತುತ್ತಿರುವುದೇ ಹೊರತು ಬೇರೆಯಿಲ್ಲ. ಆದುದರಿಂದ ಬ್ರಹ್ಮವೇತ್ತನಾದ ಗುರುವಿನಿಂದ ನಿಜತ್ವವನ್ನು ತಿಳಿದುಕೊಂಡು ತಾನು ಅದನ್ನು ಅನುಭವಿಸಬೇಕು. ಎಂದು ಹೇಳಿರುತ್ತಾರೆ.

ಮಧುವು ಮಧುರರಸವುಳ್ಳದ್ದಾಗಿರುವಂತೆಯೇ ನಾನೇ ಬ್ರಹ್ಮನೆಂಬ ಭಾವನೆಯ ಸ್ಮರಣೆಯು ಅಮೃತಸ್ವರೂಪವಾಗಿರುವುದರಿಂದ ಮೋಕ್ಷಾಧಿಕಾರಿಯು ಉಪಶಾಂತತೆಯನ್ನು ಹೊಂದುತ್ತಾನೆ. ಶಬರಿಯು ತತ್ವದಲ್ಲಿ ವಿವರಿಸಿರುವ ಆತ್ಮಭಾವನೆಯನ್ನು ಹೊಂದಬೇಕೆನ್ನುವುದಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೨೬೨ನೆಯ ಶ್ಲೋಕದಲ್ಲಿ,

ನಿರ್ವಿಕಲ್ಪಕ ಮನಲ್ಪಮಕ್ಷರಂ ।
ಯತ್ ಕ್ಷರಾಕ್ಷರ ವಿಲಕ್ಷಣಂ ಪರಂ ॥
ನಿತ್ಯಮವ್ಯಯ ಸುಖಂ ನಿರಂಜನಂ ।
ಬ್ರಹ್ಮತತ್ವ ಮಸಿ ಭಾವಯಾತ್ಮನಿ ॥

ತಾ॥ ವಿಕಲ್ಪವಿಲ್ಲದ, ಮಹತ್ತರ ಹಾನಿ ವೃದ್ಧಿಗಳಿಲ್ಲದ, ಪ್ರಕೃತಿ ಮತ್ತು ಇದರ ಕಾರ್ಯಗಳಿಗಿಂತಲೂ ದೂರವಾಗಿ, ಸರ್ವೋತ್ತಮವೂ, ಶಾಶ್ವತವೂ ನಿತ್ಯಸುಖಸ್ವರೂಪವೂ, ನಿರ್ಲಿಪ್ತವೂ ಆಗಿರುವ ಬ್ರಹ್ಮಪದಾರ್ಥ ಯಾವುದುಂಟೋ ಅದೇ ನೀನಾಗಿರುವೆಯೆಂದು ನಿನ್ನಲ್ಲಿಯೇ ನೀನು ಭಾವನೆಮಾಡಿಕೊ ಎಂಬದಾಗಿ ಹೇಳಿರುವರು.

ಈ ಶಬರಿಯು ತತ್ವಕ್ಕೆ ಏಕಾದಶೀ ಮುಂತಾದ ದಿನಗಳಲ್ಲಿ ಉಪವಾಸಮಾಡಲು ಯೋಗ್ಯತೆಯಿಲ್ಲದವರು ಫಲಾಹಾರ ಮಾಡಬಹುದೆಂದಿರುವ ತತ್ವವನ್ನು ಅನ್ವಯಮಾಡಬಹುದು. ಉಪವಾಸವೆಂಬ ತತ್ವಕ್ಕೆ ಶ್ರುತಿಯಲ್ಲಿ,

'' ಉಪ ಸಮೀಪೇ ಯೋ ವಾಸಃ ಜೀವಾತ್ಮ ಪರಮಾತ್ಮನೋಃ ''

ಎಂಬದಾಗಿ ಹೇಳಿರುವುದು. ಜೀವಾತ್ಮ ಪರಮಾತ್ಮರ ಸಾಕ್ಷಾತ್ಕಾರವನ್ನುಂಟು ಮಾಡುವ ಸಮಾಧಿಯ ಅಭ್ಯಾಸದಲ್ಲಿರುವುದೇ ಉಪವಾಸದ ತತ್ವವಾಗಿರುವುದು. ಉಪ ವಾಸಮಾಡಲು ಯೋಗ್ಯತೆಯಿಲ್ಲದವರು ಫಲಾಹಾರ ಮಾಡುವಂತೆ ಸಮಾಧಿಯ ಅನುಷ್ಠಾ ನಕ್ಕೆ ಅಧಿಕಾರವಿಲ್ಲದವರೂ, ಸಮಾಧಿಯ ಅಭ್ಯಾಸಮಾಡತಕ್ಕವರು ಸಮಾಧಿಯ ಅನು ಷ್ಠಾನವಿಲ್ಲದ ಕಾಲದಲ್ಲಿಯೂ, ಪರಮಾತ್ಮಭಾವನೆಯನ್ನೇ ಸ್ಮರಣೆಮಾಡುತ್ತಿರುವುದೇ ಫಲಾ ಹಾರದ ತತ್ವವಾಗಿರುವುದು. ಮೋಕ್ಷಾಧಿಕಾರಿಗೆ ಫಲವಾವುದೆಂದರೆ, ವೇದಾಂತಶ್ರವಣ ಮನನಗಳ ಸಾರದಿಂದ ಹೊಂದುವ ಆತ್ಮನೇ ನಾನೆಂಬ "ಅಹಂ ಬ್ರಹ್ಮಾಸ್ಮಿ, ಶಿವೋಹಂ, ವಿಷ್ಣುರಹಂ" ಎಂಬುದರ ಸ್ಮರಣರೂಪವಾದ ಫಲವೇ ಫಲವಾಗಿರುವುದು. ಇಂತಹ ಫಲ ವನ್ನೇ ಯಥೇಷ್ಟವಾಗಿ ಅಧಿಕಾರಿಯು ಸ್ವೀಕರಿಸುವುದೆಂದರೆ "ನಾನೇ ಬ್ರಹ್ಮ"ನೆಂಬದಾಗಿ ಮನದಣಿಯ ಸ್ಮರಣೆಮಾಡಿಕೊಂಡಿರಬೇಕೆಂಬ ತತ್ವವೇ ಶ್ರೀರಾಮನು ಶಬರಿಯ ಆತಿಥ್ಯಕ್ಕೆ ಒಳಪಟ್ಟ ತತ್ವವಾಗಿರುವುದು.

ಮೋಕ್ಷಮಾರ್ಗಿಗಳು ನಾನೇ ಬ್ರಹ್ಮನೆಂದು ಹೇಗೆ ಸ್ಮರಿಸಿಕೊಂಡಿರುವರೋ ಹಾಗೆ ಮೋಕ್ಷಮಾರ್ಗದಲ್ಲಿಲ್ಲದ ಆಸ್ತಿಕರು ಕೂಡ ಪರಮಾತ್ಮನ ನಾಮಸ್ಮರಣೆಯನ್ನು ಮಾಡು ತ್ತಿರಬೇಕು. ಹೀಗೆ ನಾಮಸ್ಮರಣೆ ಮಾಡುತ್ತಿದ್ದರೆ ಒಳಗೂ ಹೊರಗೂ ಶುದ್ಧರಾಗುತ್ತಾರೆ. ಇದೇ ತಾತ್ಪರ್ಯಕ್ಕೆ ಶ್ರುತಿಯಲ್ಲಿ,

ಅಪವಿತ್ರಃ ಪವಿತ್ರೋವಾ ಸರ್ವಾವಸ್ಥಾಂ ಗತೋಪಿವಾ |
ಯಸ್ಸ್ಮರೇ ತ್ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ||

ತಾ|| ಅಪರಿಶುದ್ಧನಾಗಿದ್ದರೂ, ಪರಿಶುದ್ಧನಾಗಿದ್ದರೂ, ಯಾವ ವಿಧವಾದ ಅವಸ್ಥೆ ಗಳನ್ನು ಪಡೆದಿದ್ದರೂ, ಶ್ರೀಮನ್ನಾರಾಯಣನನ್ನು ಯಾವನು ಸ್ಮರಿಸುತ್ತಾನೋ ಅವನು ಒಳಗೂ ಹೊರಗೂ ಪರಿಶುದ್ಧನಾಗುವನು ಎಂದು ಹೇಳಿದೆ.

ಈ ಮೇಲಿನ ಶ್ರುತಿವಾಕ್ಯವು ಕಬಂಧಾಸುರನ ವಧೆಯ ತತ್ವವಾದ ರಜೋಗುಣ ತಮೋಗುಣಸ್ವರೂಪವಾದ, ವಿಷಯದಿಂದ ಬಿಡಿಸಿಕೊಳ್ಳುವ ಮತ್ತು ಶಬರಿಯ ತತ್ವಗಳೆರ ಡನ್ನೂ ಒಳಗೊಂಡಿದೆ. ವಿಷಯವಾಸನೆಯನ್ನು ತಪ್ಪಿಸಿಕೊಂಡು ಪರಮಾತ್ಮನ ಸ್ಮರಣೆ ಯಲ್ಲಿರುವ ಅಭ್ಯಾಸಮಾಡುವ ಸೌಕರ್ಯಕ್ಕೋಸ್ಕರ ನೂರೆಂಟು ಮಣಿಗಳುಳ್ಳ ಜಪಸರ ಗಳನ್ನು ಇಟ್ಟುಕೊಂಡು ಮಣಿಗಳೊಂದೊಂದಕ್ಕೂ ಪರಮಾತ್ಮನ ಸ್ಮರಣೆಮಾಡುತ್ತಾ ಮಣಿ ಗಳೊಂದೊಂದನ್ನೂ ತಿರಿವಿಹಾಕುತ್ತಾ ಬರುವ ಅಭ್ಯಾಸವನ್ನು ಪೂರ್ವೀಕರು ಗೊತ್ತು ಮಾಡಿರುವರು. ಈಗಿನ ಕಾಲದ ಕೆಲವರಿಗೆ ಇದು ಅಪಹಾಸ್ಯವಾಗಿ ಕಾಣುವುದು.

ಆದುದರಿಂದ ಪರಬ್ರಹ್ಮಸಾಕ್ಷಾತ್ಕಾರವಾಗುವವರೆಗೂ ವೇದಾಂತ ವಿಚಾರ ಮಾಡುತ್ತಲೂ, ಗ್ರಂಥಗಳನ್ನು ನೋಡುತ್ತಲೂ, ಸದ್ವಿಚಾರವನ್ನು ಮನನಮಾಡುತ್ತಲೂ, ಆತ್ಮಭಾವನೆಯನ್ನೇ ಚಿಂತನೆಮಾಡುತ್ತಲೂ ಇರಬೇಕು. ಹೀಗಿರುವುದರಿಂದ ಬುದ್ಧಿಗೆ ಇತರ ವಿಷಯಕವಾದ ಕೊಳಕು ಸೇರದಂತೆ ತಡೆಯುವುದಕ್ಕೂ ಪರಮಾತ್ಮನನ್ನು ಹೊಂದುವ ಪ್ರೀತಿಯನ್ನು ಅಭಿವೃದ್ಧಿಮಾಡಿಕೊಳ್ಳುವುದಕ್ಕೂ ಖಂಡಿತವಾಗಿಯೂ ಸಹಕಾರಿಯಾಗಿರುವುದು.

ಈ ಮೇಲಿನ ತತ್ವಾರ್ಥಗಳನ್ನು ಅನುಸರಿಸಿ ಬುದ್ಧಿತತ್ವಪ್ರಕಾಶಕನಾದ ಶ್ರೀರಾಮನು "ನಾನೇ ಬ್ರಹ್ಮ"ನೆಂಬ ಭಾವನೆಯ ಸ್ಮರಣರೂಪವಾದ ಮಧುವನ್ನು ಶಬರಿಯಿಂದ ಸ್ವೀಕರಿಸಿ ಕಬಂಧನು ಹೇಳಿದಂತೆ ಸುಗ್ರೀವನನ್ನು ಹುಡುಕಿಕೊಂಡು ಮುಂದಕ್ಕೆ ಪ್ರಯಾಣ ಮಾಡಿದನು.

ಶಬರಿಯು ತಾನು ರುಚಿನೋಡಿಟ್ಟಿದ್ದ ಫಲಗಳನ್ನೇ ಶ್ರೀರಾಮನಿಗೆ ಅರ್ಪಣೆ ಮಾಡಿದಳೆಂದು ಜನಜನಿತವಾಗಿ ಪ್ರಚಾರದಲ್ಲಿರುವ ಅಭಿಪ್ರಾಯವು ವಾಲ್ಮೀಕಿ ರಾಮಾಯಣದಲ್ಲಿಲ್ಲ.



ಶ್ರೀ

# ಕಿಷ್ಕಿಂಧಾ ಕಾಂಡ



## ಆಸನಾಭ್ಯಾಸದ ಮತ್ತು ನಾಡೀಶುದ್ಧಿಯ ವಿಚಾರ.

## ೧ನೆಯ ಪ್ರಕರಣ.

ಶ್ರೀರಾಮನು ಸೀತಾವಿರಹ ದುಃಖದಿಂದ ವಸಂತಋತುವನ್ನು ವರ್ಣಿಸಿದುದು.



ಬ್ರಹ್ಮಭಾವನೆಯ ತೀವ್ರತಮವಾದ ಇಚ್ಛೆಯೊಡನೆ ಯೋಗಾಭ್ಯಾಸವನ್ನು ಮಾಡಬೇಕೆಂಬ ವಿಚಾರ.

ರಾ|| ಶ್ರೀರಾಮನು ಶಬರಿಯಿಂದ ಕೊಡಲ್ಪಟ್ಟ ಫಲಗಳನ್ನು ಸ್ವೀಕರಿಸಿ ಸುಗ್ರೀವನನ್ನು ಹುಡುಕಿಕೊಂಡು ಬರುತ್ತ ವಸಂತಕಾಲವಾದುದರಿಂದ ಸೀತಾವಿರಹ ದುಃಖವನ್ನು ಹೊಂದಿ ಹಂಬಲಿಸುತ್ತಿದ್ದನು.

ತತ್ವ|| ಶಾಸ್ತ್ರಗಳಿಂದ ಕಡೆದು ತೆಗೆದುಕೊಂಡ ಆತ್ಮಭಾವನೆಯ ಅಮೃತವನ್ನು ಪಾನಮಾಡುತ್ತಿರಬೇಕೆಂಬ ತತ್ವಾರ್ಥವನ್ನು ಹಿಂದಿನ ಪ್ರಕರಣದಲ್ಲಿ ತಿಳಿಸಿತಷ್ಟೆ! ಅಂತಹ ಆತ್ಮಭಾವನೆಯನ್ನು ದೃಢಪಡಿಸಿಕೊಂಡು ಅನಂತರ ಆಸನ ಪ್ರಾಣಾಯಾಮ ಪ್ರತ್ಯಾಹಾರ ಮುಂತಾದ ನಿದಿಧ್ಯಾಸದ ಅನುಷ್ಠಾನಮಾಡಬೇಕೆಂಬುದೇ ಶ್ರೀರಾಮನು ಶಬರಿಯ ಆಶ್ರಮವನ್ನು ಬಿಟ್ಟಕೂಡಲೇ ಸೀತಾವಿರಹದೊಡನೆ ವಸಂತಋತುವಿನ ವರ್ಣನೆಯನ್ನು ಮಾಡಿದ ತತ್ವವಾಗಿದೆ. ಭಾವನೆಯ ಉತ್ಕಟಾವಸ್ಥೆಯೇ ಕಾರ್ಯವಾಗಿ ಪರಿಣಮಿಸುವುದು. ಹೇಗೆಂದರೆ, ಲಕ್ಷಾಧಿಪತಿಗಳಾಗಿರತಕ್ಕವರೆಲ್ಲರೂ ಧನಾರ್ಜನೆಯನ್ನು ಮಾಡಬೇಕೆಂಬ ಸಂಕಲ್ಪದ ಪರಿಪೂರ್ತಿಗಾಗಿ ದ್ರವ್ಯವನ್ನು ಆರ್ಜಿಸಿ ಲಕ್ಷಾಧಿಪತಿಗಳಾಗಿರುವರು. ಹಾಗೆಯೇ ಸಕಲ ವಿಧವಾದ ಫಲಪ್ರಾಪ್ತಿಗಳೂ "ಯೋ ಭಾವಃ ಸ ಭವತಿ" ಎಂಬಂತೆ ಭಾವನೆಯ ಕಾರ್ಯಗಳಾಗಿವೆ.

ಇದರಂತೆ ಬ್ರಹ್ಮಭಾವನೆಯ ಚಿಂತನೆಯಲ್ಲಿಯೇ ಮಗ್ನರಾಗಿದ್ದರೆ ಪರಬ್ರಹ್ಮತ್ವವನ್ನು ಪಡೆಯುತ್ತಾರೆ. ಬ್ರಹ್ಮಭಾವನೆಯ ಅನುಸಂಧಾನದಿಂದ ಅನುಷ್ಠಾನ ಮಾಡದೇ ಇದ್ದಲ್ಲಿ ಅವಿದ್ಯೆಯ ಬಂಧನದ ವಿಮೋಚನೆಗೆ ಅರ್ಹರಲ್ಲ. ಹೇಗೆಂದರೆ, ಪ್ರಪಂಚ ಮತ್ತು ಪರಮಾತ್ಮಗಳೆರಡರಲ್ಲಿ ಪ್ರಪಂಚವಿಷಯಾದಿಗಳ ಭಾವನೆಯ ಕಡೆಗಿರುವ ಬುದ್ಧಿಯನ್ನು ಪರಮಾತ್ಮಭಾವನೆಯ ಕಡೆಗೆ ತಿರುಗಿಸಿಕೊಂಡವನು ಬ್ರಹ್ಮವಿದ್ಯಾಧಿಕಾರಿಯೆನಿಸಿಕೊಳ್ಳುವನು. ಆದುದರಿಂದ ಮುಮುಕ್ಷುವು ವಸಂತಕಾಲದ ತತ್ವದಂತೆ ಬ್ರಹ್ಮಭಾವನೆಯ ಅನುಸಂಧಾನವನ್ನು ಅಭಿವೃದ್ಧಿಮಾಡಿಕೊಂಡು ನಿದಿಧ್ಯಾಸ ಸಮಾಧಿರೂಪವಾದ ಯೋಗಾನುಷ್ಠಾನ ಮಾಡುತ್ತಾ ಬಂದಲ್ಲಿ ಬ್ರಹ್ಮತ್ವವನ್ನೇ ಪಡೆಯುವನು. ಈ ತಾತ್ಪರ್ಯಕ್ಕೆ ತ್ರಿಪುರತಾಪಿನ್ಯುಪನಿಷತ್ತಿನಲ್ಲಿ,

ಅತೋ ನಿರ್ವಿಷಯಂ ನಿತ್ಯಂ ಮನಃ ಕಾರ್ಯಂ ಮುಮುಕ್ಷುಣಾ |
ಯತೋ ನಿರ್ವಿಷಯೋ ನಾಮ ಮನಸೋ ಮುಕ್ತಿರಿಷ್ಯತೇ ||

ತಾ|| ಮುಮುಕ್ಷುವು ತನ್ನ ಮನಸ್ಸನ್ನು ಸರ್ವದಾ ನಿರ್ವಿಷಯವನ್ನಾಗಿ ಮಾಡಿಕೊಳ್ಳುತ್ತಿರಬೇಕು. ಈ ರೀತಿ ನಿರ್ವಿಷಯವಾಗೋಣವೇ ಮೋಕ್ಷವೆಂದು ಹೇಳಲ್ಪಡುತ್ತದೆ ಎಂದು ಹೇಳಿದೆ.

ಅಲ್ಲದೆ ದರ್ಶನೋಪನಿಷತ್ತಿನಲ್ಲಿಯೂ,

ಬ್ರಹ್ಮಭಾವೇ ಮನಶ್ಚಾರಂ ಬ್ರಹ್ಮಚರ್ಯಂ ಪರಂತಪ |

ತಾ|| ಬ್ರಹ್ಮಭಾವನೆಯಲ್ಲಿಯೇ ಮನಸ್ಸು ಪ್ರವರ್ತಿಸುತ್ತಿದ್ದರೆ ಆ ಸ್ಥಿತಿಗೆ ಬ್ರಹ್ಮಚರ್ಯವೆಂದು ಹೆಸರು ಎಂಬದಾಗಿ ಹೇಳಿದೆ.

ಆದುದರಿಂದ ಬ್ರಹ್ಮಭಾವನೆಯ ಚಿಂತನೆಯನ್ನು ಅಭಿವೃದ್ಧಿಮಾಡಿಕೊಂಡು ಅನಂತರ ನಿದಿಧ್ಯಾಸ ಸಮಾಧಿಗಳ ಅಭ್ಯಾಸಕ್ಕೆ ಪ್ರಾರಂಭಮಾಡಬೇಕೆಂಬುದೇ ಶ್ರೀರಾಮನು ಈ ಸಂದರ್ಭದಲ್ಲಿ ಸೀತಾವಿಯೋಗ ದುಃಖದಿಂದ ಪರಿತಾಪ ಪಟ್ಟುದಾಗಿರುತ್ತದೆ.

ವಸಂತಕಾಲದ ವರ್ಣನೆಯೊಡಗೂಡಿ ಸೀತಾವಿರಹದಿಂದ ಶ್ರೀರಾಮನು ಪರಿತಾಪ ಪಟ್ಟುದರ ತತ್ವವೇನೆಂದರೆ—"ವಸತಿ ಕಾಮೋಽಸ್ಮಿನ್ನಿತಿ ವಸಂತಃ" ಅಂದರೆ ಯಾವ ಕಾಲದಲ್ಲಿ ಕಾಮಾಸಕ್ತಿಯು ಹೆಚ್ಚಾಗಿರುವುದೋ ಅಂತಹ ಕಾಲವೇ ವಸಂತಕಾಲವೆನಿಸಿಕೊಳ್ಳುವುದು. ಯಾವ ಕಾಲದಲ್ಲಿ ಸ್ತ್ರೀಪುರುಷರಿಗೆ ಕಾಮೋದ್ರೇಕವು ಅಧಿಕವಾಗುವುದೋ ಅಂತಹ ಕಾಲವೇ ವಸಂತಕಾಲ. ಇದರಂತೆ ಬ್ರಹ್ಮವಿದ್ಯಾಧಿಕಾರಿಗೆ ಬ್ರಹ್ಮಚಿಂತನೆಯ ಉದ್ರೇಕದ ಅವಸ್ಥೆಯು ಪ್ರಾಪ್ತವಾಗುವ ಕಾಲವೇ ವಸಂತಕಾಲದ ತತ್ವವಾಗಿ

ಇರುವುದು. ವಸಂತಋತುವಾದ ಚೈತ್ರ ವೈಶಾಖಮಾಸಗಳಲ್ಲಿ ಸೂರ್ಯನ ತಾಪವು ಅಧಿಕವಾಗಿ ಹೇಗೆ ಪ್ರಾಣಿಗಳನ್ನು ಬಳಲಿಸುವುದೋ ಹಾಗೆ ಬ್ರಹ್ಮಚಿಂತನೆಯು ಅಧಿಕವಾಗಿ ಅಧಿಕಾರಿಯು ಬ್ರಹ್ಮತ್ವವನ್ನು ಪಡೆಯುವ ತಾಪದಿಂದ ಬಳಲಬೇಕು. ಅಂದರೆ ಮುಮುಕ್ಷುವಿಗೆ ಮೋಕ್ಷಾಪೇಕ್ಷೆಯು ಅಧಿಕವಾದಷ್ಟು ಬ್ರಹ್ಮಚಿಂತನೆಯು ಉದ್ರೇಕವಾಗುತ್ತ ಬರಬೇಕೆಂಬ ತಾತ್ಪರ್ಯವಾಗಿರುವುದು. ಉದ್ರೇಕವಾದ ಬ್ರಹ್ಮಚಿಂತನೆಯು ಬೇರೂರಿದನಂತರ ಮುಂದಿನಸೋಪಾನದ ಕಾರ್ಯವಾದ ನಿದಿಧ್ಯಾಸಕ್ಕೆ ಪ್ರಾರಂಭಿಸಬೇಕು. ಬ್ರಹ್ಮತ್ವದ ದೃಢಭಾವನೆಯನ್ನು ಸಂಪಾದಿಸಿಕೊಳ್ಳದೆ ಮೋಕ್ಷವು ದೊರೆಯುವುದಿಲ್ಲ. ಅಂದರೆ ಅದ್ವೈತಭಾವನೆಯಲ್ಲಿ ದಾರ್ಢ್ಯವಿಲ್ಲದೆ ಅದ್ವೈತಸಿದ್ಧಿಯಾಗುವುದಿಲ್ಲವೆಂಬ ತಾತ್ಪರ್ಯ.

ಈ ಬ್ರಹ್ಮಚಿಂತನೆಯ ಅಭ್ಯಾಸದ ವಿಚಾರಕ್ಕೆ ಒಂದು ಸಣ್ಣ ಉದಾಹರಣೆಯನ್ನು ಕೊಡಬಹುದು. ರಾಜ್ಯದ ಆಡಳಿತಗಳಲ್ಲಿ ಅತ್ಯಂತ ನಿರತನಾಗಿರುವ ರಾಜನ ಭಾವನೆಯೆಲ್ಲ ರಾಜ್ಯದ ಆಡಳಿತದಲ್ಲಿಯೇ ನಿರತವಾಗಿರುತ್ತದೆ. ರಾಜನು ಸಂಚಾರಮಾಡುವ ಕಾಲದಲ್ಲಿ ಕೋಲುಕಾರರೆಂಬ ಸೇವಕರು "ಸ್ವಾಮಿ ಪರಾಕ್ ಎಚ್ಚರಿಕೆ" ಎಂದು ಕೂಗಿ ರಾಜನಿಗೆ ಎಚ್ಚರಿಕೆ ಕೊಡುತ್ತಾರೆ. ಕಾರಣವೇನೆಂದರೆ ರಾಜ್ಯಾಡಳಿತದ ಭಾವನೆಯಲ್ಲಿಯೇ ಮಗ್ನನಾಗಿರುವ ರಾಜನು ಎಡವಿಬಿದ್ದಾನೆಂಬ ಶಂಕೆಯಿಂದ ಕೋಲುಕಾರರು ಎಚ್ಚರಿಸುತ್ತಾರೆ. ಇದರಂತೆಯೇ ಮಠಗಳಲ್ಲಿ ಶ್ರೀಸ್ವಾಮಿಗಳವರು "ಅಹಂ ಬ್ರಹ್ಮಾಸ್ಮಿ ಅಥವಾ ಶಿವೋಹಂ ಅಚ್ಯುತೋಹಂ" ಎಂಬ ಬ್ರಹ್ಮಭಾವನೆಯಲ್ಲಿಯೇ ಸರ್ವದಾ ನಿರತರಾಗಿರುವುದರಿಂದ ಸಂಚಾರಮಾಡುವ ಕಾಲದಲ್ಲಿ ದೇಹಕ್ಕೆ ಅಪಾಯವಾಗಬಹುದೆಂಬ ತಾತ್ಪರ್ಯದ ಮೇಲೆ ಕೋಲುಕಾರರು "ಸ್ವಾಮಿ! ಪರಾಕ್! ಎಚ್ಚರಿಕೆ!" ಎಂಬದಾಗಿ ಶ್ರೀಸ್ವಾಮಿಗಳವರಿಗೆ ಎಚ್ಚರಿಕೆ ಕೊಡುತ್ತಾರೆ. ಇದರಂತೆ ಮೋಕ್ಷಾಧಿಕಾರಿಯು ಕೂಡ ಬ್ರಹ್ಮಭಾವನೆಯಲ್ಲಿ ನಿರತನಾಗಿರಬೇಕು. ಈ ತಾತ್ಪರ್ಯಕ್ಕೆ ಶ್ರೀಮಚ್ಛಂಕರಾಚಾರ್ಯರು ಲಘುವಾಕ್ಯವೃತ್ತಿಯಲ್ಲಿ:

ತಚ್ಚಿಂತನಂ ತತ್ಕಥನ ಮನ್ಯೋನ್ಯಂ ತತ್ಪ್ರಬೋಧನಂ |
ಏತ ದೇಕ ಪರತ್ವಂ ಚ ಬ್ರಹ್ಮಾಭ್ಯಾಸಂ ವಿದು ರ್ಬುಧಾಃ ||

ತಾ|| ನಿರಂತರದಲ್ಲಿಯೂ ತಚ್ಚಿಂತನೆ, ತತ್ಕಥನ ಮತ್ತು ಪರಸ್ಪರ ಅಭೇದಜ್ಞಾನದಿಂದ ಕೂಡಿ ಏಕವಾಚ್ಯನಾದ ಪರಬ್ರಹ್ಮನನ್ನೇ ಚಿಂತಿಸುವವರಾಗಬೇಕು. ಎಂದು ಹೇಳಿರುವರು.

ಈ ರೀತಿಯಾಗಿ ಆತ್ಮಭಾವನೆಯನ್ನು ದೃಢೀಕರಿಸಿಕೊಂಡಿರುವ ಸೋಪಾನವೇ ಮನಃಪರಿಪಕ್ವಾವಸ್ಥೆಯೆಂದೂ, ಉಪಶಾಂತಿಯೆಂದೂ, ಸುಖದುಃಖಗಳಲ್ಲಿನ ಸಮತ್ವಬುದ್ಧಿ

ಯೆಂದೂ ಹೇಳಲ್ಪಡುತ್ತದೆ. ಈ ಸ್ವರೂಪವೇ ಪರೋಕ್ಷಜ್ಞಾನದ ಪರಿಪಕ್ವಾವಸ್ಥೆ. ಇದೇ ಭ್ರಾಂತಿಯಲ್ಲಿನ ಆವರಣಶಕ್ತಿಯ ವಿಭಾಗವಾದ ಅಸತ್ವಾವರಣವು ನಿವೃತ್ತಿಯಾಗುವ ಸೋಪಾನವೆಂದರೆ ಅವಿದ್ಯೆಯ ಯೋಗ್ಯತೆಯು ಯಥಾರ್ಥವು ಮಂದಟ್ಟಾಗುವ ಸ್ಥಿತಿಯಾಗಿ ಇರುವುದು. ಈರೀತಿಯಾಗಬೇಕಾದರೆ ತಳಪಾಯದಂತಿರುವ ಮೋಕ್ಷಾಭಿಲಾಷೆಯನ್ನು ಪ್ರಥಮದಲ್ಲಿ ಹೊಂದಬೇಕು. ಅನಂತರ ಗುರುಮುಖೇನ ವೇದಾಂತವಿಚಾರಮಾಡಿ, ಪ್ರಪಂಚ ಮತ್ತು ಆತ್ಮಸ್ವರೂಪವನ್ನು ತಿಳಿದುಕೊಂಡು, ಶಾಸ್ತ್ರತರ್ಕದಲ್ಲಿಯೇ ಮಗ್ನನಾಗದೆ, ತಾನು ಉದ್ಧಾರವಾಗುವುದಕ್ಕೋಸ್ಕರ ಶಾಸ್ತ್ರಗಳ ಸಾರವಾದ ಬ್ರಹ್ಮಭಾವನೆಯನ್ನು ಮನನಮಾಡುತ್ತ, ಆ ಅಮೃತರಸವನ್ನು ಯಥೇಷ್ಟವಾಗಿ ಪಾನಮಾಡುತ್ತಿರಬೇಕು.

ಈ ದೇಹದಿಂದ ಅನುಭವಿಸಬೇಕಾಗಿರುವ ಪ್ರಾರಬ್ಧಕರ್ಮಗಳಲ್ಲಿ ಆಸಕ್ತನಾಗದೆ ನಿರಭಿಮಾನದಿಂದ ಭರತನ ತತ್ವದಂತೆ ಕಾರ್ಯಮಾಡಿಕೊಂಡು ಆಹಾರ ವ್ಯವಹಾರಗಳಲ್ಲಿ ಸತ್ವಾಪತ್ತಿಯುಳ್ಳವನಾಗಿಯೂ ಸತ್ಸಂಗ ಉಳ್ಳವನಾಗಿಯೂ ಇರಬೇಕು. ಈರೀತಿಯಾಗಿ ಇದ್ದುಕೊಂಡು ಬ್ರಹ್ಮಚಿಂತನೆಯಲ್ಲಿ ತೀವ್ರತಮವಾದ ಇಚ್ಛಾವಂತನಾದರೆ ಮೇಲೆ ಹೇಳಿದಂತೆ ಉಪಶಾಂತತೆಯು ಬಂದು ಸುಖದುಃಖರೂಪವಾದ ಪ್ರಪಂಚ ವ್ಯವಹಾರಕ್ಕೆ ಬೆರಗಾಗದೆ ಇರುತ್ತಾನೆ. ಅಂದರೆ ಪ್ರಪಂಚದ ಸಾರವಿಂಥಾದ್ದೆಂದು ಚನ್ನಾಗಿ ತಿಳಿದು ದೃಢವಾಗಿ ಆತ್ಮಚಿಂತನೆಯಲ್ಲಿ ಬುದ್ಧಿ ಮನಸ್ಸುಗಳು ಎಳೆಯೋಣದರಿಂದ ಅಸತ್ವಾವರಣವು ನಿವಾರಣೆಯಾಗುತ್ತದೆ. ಇಷ್ಟಾದರೂ ಪರಮಾತ್ಮಸಾಕ್ಷಾತ್ಕಾರವಾಗುವುದಿಲ್ಲ. ಕಾರಣವೇನೆಂದರೆ, ಆವರಣದ ಇನ್ನೊಂದು ಭಾಗವಾದ ಅಭಾನಾವರಣವು ನಿವೃತ್ತಿಯಾಗಿರುವುದಿಲ್ಲ. ಭಾನವೆಂದರೆ ನೋಡುವುದು; ಅಥವಾ ಸಾಕ್ಷಾತ್ಕಾರಮಾಡಿಕೊಳ್ಳುವುದು. ಅಭಾನವೆಂದರೆ ನೋಡದೆ ಇರುವುದು. ಭಾನವೆಂದರೆ ಆತ್ಮಸಾಕ್ಷಾತ್ಕಾರಕ್ಕೆ ಅಂತರ್ಮುಖದ ದಾರಿಯಲ್ಲಿ ಪ್ರವೇಶಿಸುವುದು. ಆದುದರಿಂದ ಸೀತಾಪಹರಣದಿಂದ ಇದುವರೆಗೂ ಇರುವ ಕಥೆಯ ತತ್ವಗಳು ಪರೋಕ್ಷಜ್ಞಾನದ ಸೋಪಾನಗಳಾಗಿವೆ.

ಅಂದರೆ ವೇದಾಂತಶ್ರವಣ, ಮನನ, ಆತ್ಮಭಾವನೆಗಳು ಅಂತರ್ಮುಖಕ್ಕೆ ಪ್ರವೇಶಿಸದೆ ಬಾಹ್ಯವ್ಯಾಪಾರದ ಸ್ಥಿತಿಯಲ್ಲಿಯೇ ನಡೆಯುವುವು. ಆದುದರಿಂದಲೇ ಈ ಸೋಪಾನಗಳ ವಿಚಾರಗಳು ಬಾಹ್ಯವ್ಯಾಪಾರದ ತತ್ವಪ್ರತಿಪಾದಕವಾಗಿರುವ ಅರಣ್ಯಕಾಂಡದಲ್ಲಿಯೇ ಬಂದಿರುತ್ತವೆ. ಮುಂದೆ ಸುಗ್ರೀವನ ಸಖ್ಯದಾರಭ್ಯ ಸೀತಾಗ್ನಿಪ್ರವೇಶದವರೆಗೆ ಅಪರೋಕ್ಷಜ್ಞಾನದ ಸಾಧನೆಗಳ ಸೋಪಾನಗಳ ವಿಚಾರಗಳಾಗಿವೆ.

ಇನ್ನು ಶ್ರೀರಾಮ ಲಕ್ಷ್ಮಣರನ್ನು ಸುಗ್ರೀವನಲ್ಲಿಗೆ ಕರೆದುಕೊಂಡು ಹೋಗೋಣ.

---

## ೨ನೆಯ ಪ್ರಕರಣ.

| ಶ್ರೀರಾಮನು ಸುಗ್ರೀವನೊಡನೆ ಅಗ್ನಿ ಸಾಕ್ಷಿಯಾಗಿ ಸ್ನೇಹಬೆಳೆಸಿದುದು. | ಯೋಗಾನುಷ್ಠಾನದ ಅವಶ್ಯಕತೆ ಮತ್ತು ಪಂಚಪ್ರಾಣಗಳಲ್ಲಿ ಪ್ರಾಣ ವಾಯುವಿನ ಸಹಾಯದ ಅವಶ್ಯಕತೆಯ ವಿಚಾರ. |
|---|---|

**ರಾ||** ಶ್ರೀರಾಮನು ಸೀತಾವಿರಹದಿಂದ ಅತ್ಯಂತ ದುಃಖಪಡುತ್ತಿರುವಲ್ಲಿ ಲಕ್ಷ್ಮಣನು ಶ್ರೀರಾಮನನ್ನು ಕುರಿತು, ದುಃಖವನ್ನು ಸಹಿಸಿಕೊಂಡು ಉತ್ಸಾಹದೊಡನೆ ಸೀತಾದೇವಿಯನ್ನು ಹುಡುಕುವ ಕಾರ್ಯದಲ್ಲಿ ತೊಡಗೋಣವೆಂದು ಹೇಳಿದನು.

**ತತ್ವ||** ಆತ್ಮಭಾವನೆಯಲ್ಲಿನ ಇಚ್ಛೆಯನ್ನು ಹೆಚ್ಚಿಸಿಕೊಂಡಿದ್ದರೂ, ಮುಂದಿನ ಸೋಪಾನಗಳ ಕಾರ್ಯಗಳನ್ನು ಮಾಡದೆ ಸಾಕ್ಷಾತ್ಕಾರವಾಗುವುದಿಲ್ಲ. ಆದುದರಿಂದ ಬ್ರಹ್ಮ ಚಿಂತನೆಯಲ್ಲಿ ಮಗ್ನರಾಗಿ ಇದರ ಜೊತೆಗೆ ಉತ್ಸಾಹದೊಡನೆ ಮಾಡಬೇಕಾಗಿರುವ ಮುಂದಿನ ಕರ್ತವ್ಯಗಳಿಗೆ ಗಮನಕೊಡಬೇಕಾದುದೇ ಉತ್ಸಾಹದೊಡನೆ ಸೀತಾದೇವಿಯನ್ನು ಪಡೆಯುವ ಕಾರ್ಯದಲ್ಲಿ ತೊಡಗೋಣವೆಂದು ಲಕ್ಷ್ಮಣನು ಹೇಳಿದುದರ ತಾತ್ಪರ್ಯವಾಗಿರುತ್ತದೆ. ಇದುವರೆಗೂ ವೇದಾಂತಶ್ರವಣ ಮನನಗಳೆಂದರೆ ಅಷ್ಟಾಂಗಯೋಗದಲ್ಲಿನ ಯಮ ನಿಯಮ ಕಾರ್ಯಗಳು ಪೂರಯಿಸಿದುವು. ಇನ್ನು ಮುಂದಿನ ಸೋಪಾನಗಳಾದ ನಿದಿಧ್ಯಾಸ ಸಮಾಧಿಗಳೆರಡರ ಕಾರ್ಯಗಳೂ ಸೇರಿ ಯೋಗವೆನಿಸಿಕೊಳ್ಳುವುದು. ಯೋಗವೆಂದರೆ,

> ಜ್ಞಾನೇಂದ್ರಿಯಾಣಿ ಸರ್ವಾಣಿ ನಿಗೃಹ್ಯ ಮನಸಾ ಸಹ |
> ಏಕತ್ವ ಭಾವನಾ ಏವ ಯೋಗಃ ||

ತಾ|| ಬುದ್ಧಿವೃತ್ತಿಯು ಜ್ಞಾನೇಂದ್ರಿಯಗಳ ಕಾರ್ಯಗಳನ್ನು ಉಪಸಂಹರಿಸಿಕೊಂಡು ತೈಲಧಾರೆಯಂತೆ ಏಕಾಕಾರವೃತ್ತಿಸ್ವರೂಪವಾಗುವುದಕ್ಕೆ ಯೋಗವೆಂದು ಹೆಸರು.

ಅಲ್ಲದೆ ಯೋಗವೆಂದರೆ—“ಯೋಗ ಶ್ಚಿತ್ತವೃತ್ತಿ ನಿರೋಧಃ” ಎಂಬದಾಗಿ ಹೇಳಲ್ಪಟ್ಟಿರುವುದು. ಅಂದರೆ ಭ್ರಾಂತಿಯಿಂದ ಬುದ್ಧಿಮನಸ್ಸುಗಳು, ಪ್ರಾಣಶಕ್ತಿಯೊಡನೆ ಕಲೆತು ಬಹಿರ್ವ್ಯಾಪಾರಕ್ಕೆ ಹೋಗುತ್ತಿರುವುದನ್ನು ತಡೆದು ಆ ಬುದ್ಧಿಮನಸ್ಸಿನ ವೃತ್ತಿಗಳನ್ನು ಪರಮಾತ್ಮನಲ್ಲಿ ಏಕಾಕಾರವಾಗುವಂತೆ ಮಾಡುವುದೇ ಯೋಗವೆನಿಸಿಕೊಳ್ಳುತ್ತದೆ. ಈ ಏಕಾಕಾರವೃತ್ತಿಯನ್ನು ಪಡೆಯಲು ಬೇಕಾದ ಸಲಕರಣೆಗಳು ಯಾವುವೆಂದರೆ—ವೈರಾಗ್ಯ

ದೊಡಗೂಡಿದ ಮುಮುಕ್ಷುತ್ವ, ವೇದಾಂತ ಶ್ರವಣ ಮನನ, ನಿದಿಧ್ಯಾಸ ಮತ್ತು ಸಮಾಧಿಗಳು. ನಿದಿಧ್ಯಾಸ ಸಮಾಧಿಗಳ ವಿಭಾಗಗಳು ಯಾವುವೆಂದರೆ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣೆ, ಸಮಾಧಿಗಳು. ಇವುಗಳಲ್ಲಿ ಮುಮುಕ್ಷುತ್ವ, ವೇದಾಂತ ಶ್ರವಣ ಮನನಗಳು ಅಂತಃಕರಣವನ್ನು ಮಾತ್ರ ಮೋಕ್ಷೇಚ್ಛೆಯಲ್ಲಿ ಪರಿಪಕ್ವಾವಸ್ಥೆಯುಳ್ಳದ್ದನ್ನಾಗಿ ಮಾಡುವುವು. ನಿದಿಧ್ಯಾಸ ಸಮಾಧಿಗಳ ಕಾರ್ಯಗಳು ಸ್ಥೂಲ ಮತ್ತು ಸೂಕ್ಷ್ಮ ದೇಹಗಳೆರಡರ ಕಾರ್ಯವನ್ನೂ ಮೋಕ್ಷಮಾರ್ಗಕ್ಕೆ ಅನುಸಾರವಾಗುವಂತೆ ಮಾಡುತ್ತವೆ.

ಸೂಕ್ಷ್ಮದೇಹದ ಜೊತೆಗೆ ಸ್ಥೂಲದೇಹದ ಸಹಾಯದ ಅವಶ್ಯಕತೆಗೆ ಕಾರಣವೇನೆಂದರೆ-ದೇಹದಲ್ಲಿ ರೋಗಾದಿ ಉಪದ್ರವಗಳಿಲ್ಲದಿದ್ದರೂ ರಜೋಗುಣ ತಮೋಗುಣಗಳ ಮಲಿನತ್ವವಿರುತ್ತದೆ. ಈ ಮಲಿನತ್ವದಿಂದ ಅನ್ನಮಯಕೋಶ ಮೊದಲುಗೊಂಡು ಆನಂದಮಯಕೋಶದವರೆಗೂ ಒರಟಾಗಿರುತ್ತದೆ. ಅಂದರೆ ಅನ್ನಮಯಕೋಶಾನುವರ್ತಿಯಾಗಿ ಉಳಿದ ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಕೋಶಗಳು ಕಾರ್ಯಮಾಡುವುದರಿಂದ ಇತರ ಕೋಶಗಳು ಅನ್ನಮಯಕೋಶವನ್ನು ಅನುಸರಿಸುವುವು. ಹೀಗೆ ಒಂದಕ್ಕೊಂದು ಅಂಟಿಕೊಂಡು ಒರಟಾಗಿರುವುದನ್ನು, ಹತ್ತಿಯನ್ನು ಬಿಡಿಸಿದಂತೆ ಮಾಡಿ ದೇಹದಲ್ಲಿನ ಒರಟುತನ ಹೋಗಿ ಲಲಿತವಾಗುವಂತೆ ಬುದ್ಧಿಮನಸ್ಸುಗಳ ವೃತ್ತಿಗಳಿಗೆ ಅನುಕೂಲಮಾಡಿಕೊಡಬೇಕು. ಹೀಗೆ ಲಲಿತವಾದರೆ ಬುದ್ಧಿವೃತ್ತಿಯು ಧ್ಯೇಯಾಕಾರ ವಸ್ತುವನ್ನು ಎಡೆಬಿಡದೆ ಧರಿಸಿಕೊಂಡು ಸಮಾಧಿಯ ಅಭ್ಯಾಸಮಾಡಲು ಅನುಕೂಲಿಸುತ್ತದೆ. ಈರೀತಿಯಾಗಿ ದೇಹವನ್ನು ಲಲಿತವಾಗುವಂತೆ ಮಾಡಬೇಕಾದರೆ ಆಸನ ಪ್ರಾಣಾಯಾಮಗಳ ಅಭ್ಯಾಸವನ್ನು ಮಾಡಬೇಕು.

ನಾವು ದೇಹವನ್ನು ಆಹಾರದಿಂದಲೂ ನೀರಿನಿಂದಲೂ ಎಷ್ಟೇ ಶುಚಿಯಾಗಿಟ್ಟುಕೊಂಡರೂ ರಜೋಗುಣ ತಮೋಗುಣಗಳ ಮಲಿನತ್ವವಿದ್ದೇ ಇರುವುದು. ಸತ್ವಾಹಾರ ತೆಗೆದುಕೊಂಡು ದೇಹವನ್ನು ಶುಚಿಯಾಗಿಟ್ಟುಕೊಂಡರೂ ಈರೀತಿ ಇರುವಲ್ಲಿ ಸಾತ್ವಿಕಾಹಾರವೇ ಇಲ್ಲದೆ ರಾಜಸ ತಾಮಸಾಹಾರಗಳಿಂದಲೇ ಇರತಕ್ಕವರು ಮೋಕ್ಷಕರ್ಮಕ್ಕೆ ಅನಧಿಕಾರಿಗಳೆಂದು ಹಿಂಗೆ ಕಬಂಧಾಸುರನ ತತ್ವದಲ್ಲಿಯೇ ತಿಳಿಸಿದೆ. ಈ ದೇಹದೊಳಗಿರುವ ಮಲಿನತ್ವ ಹೋಗುವುದೆಂದರೆ, ನಾಡಿಗಳು ಶುದ್ಧಿಯಾಗಬೇಕಾಗಿರುವುದು. ಇದಕ್ಕೆ ಆಸನ ಪ್ರಾಣಾಯಾಮಗಳ ಅನುಷ್ಠಾನಮಾಡಬೇಕು. ಹೇಗೆಂದರೆ ಚರ್ಮವನ್ನು ಎಷ್ಟೇ ತೊಳೆದರೂ ಮೃದುವಾಗುವುದಿಲ್ಲ. ಅದನ್ನು ಹದಮಾಡುವ ವಿಧಾನದಿಂದ ಹದಮಾಡಿದರೆ ಹತ್ತಿಗಿಂತಲೂ ಮೃದುವಾಗುತ್ತದೆ. ಇದರಂತೆ ದೇಹವನ್ನು ಧ್ಯಾನಕ್ಕೆ ಅನುಕೂಲವಾಗುವಂತೆ ಆಸನ ಪ್ರಾಣಾಯಾಮಗಳಿಂದ ಶಿಕ್ಷಿಸಬೇಕು. ಈರೀತಿಯಾಗಿ ದೇಹವನ್ನು ಶಿಕ್ಷಿಸಿ

ದರೆ ಸತ್ವಪ್ರಧಾನವಾದದ್ದಾಗುತ್ತದೆ. ಇದೇ ದೇವತ್ವ. ಈರೀತಿ ಸತ್ವಪ್ರಧಾನವಾದ ದೇಹ ವಾಗುವುದರಿಂದ ನೂರಾರು ಸಂವತ್ಸರಗಳು ಸಮಾಧಿಯಲ್ಲಿ ಕುಳಿತಿದ್ದರೂ ಮಣ್ಣಿನ ಹುತ್ತವು ಮುಚ್ಚಿಕೊಂಡರೂ ದೇಹವು ಕೆಡದಿರುತ್ತದೆ.

ಅಲ್ಲದೆ ನಮಗೆ ಜಾಗ್ರತ್ಸ್ವಪ್ನ ಸುಷುಪ್ತಿಗಳೆಂಬ ಮೂರು ಅವಸ್ಥೆಗಳೂ ಬಂಧಕಗಳಾಗಿವೆ. ಸ್ವಪ್ನಾವಸ್ಥೆಯು ಸುಷುಪ್ತ್ಯವಸ್ಥೆಯೊಳಗಿನ ಜಾಗ್ರದವಸ್ಥೆಯಾಗಿರುವುದರಿಂದ ಮುಖ್ಯವಾದ ವಿಭಾಗಗಳು ಜಾಗ್ರತ್ ಮತ್ತು ಸುಷುಪ್ತ್ಯವಸ್ಥೆಗಳು. ಸುಷುಪ್ತ್ಯವಸ್ಥೆಯಲ್ಲಿ ತಮಸಾನದಿಯ ರೂಪವಾದ ಮೂಲಾಜ್ಞಾನದಲ್ಲಿ ಪಂಚಪ್ರಾಣಗಳು ವಿನಾ ಉಳಿದ ಸಕಲ ಶಕ್ತಿಗಳೂ ಅಂತಃಕರಣದೊಡನೆ ಲೀನವಾಗುತ್ತವೆ. ಅಂದರೆ ಸುಷುಪ್ತಿಕಾಲದಲ್ಲಿ ಪಂಚ ಪ್ರಾಣಗಳ ಮತ್ತು ಶ್ವಾಸೋಚ್ಛ್ವಾಸಗಳ ಕಾರ್ಯವಿರುತ್ತದೆ. ಜಾಗ್ರತ್ಕಾಲ ಉಂಟಾದಾಗ ಬಹಿರ್ವ್ಯಾಪಾರಕ್ಕೆ ಕಾರಣವಾದ ಅವಿದ್ಯೆಯ ವಾಸನಾವೃತ್ತಿಗಳೂ ಶ್ವಾಸೋಚ್ಛ್ವಾಸಗಳೂ ಬುದ್ಧಿಮನಸ್ಸಿನ ವೃತ್ತಿಗಳೊಡನೆ ಮಿಳಿತವಾಗಿ ಸಹಚರಿಸುತ್ತವೆ. ಹೀಗಿರುವುದರಿಂದ ವಾಸನಾವೃತ್ತಿ ಮತ್ತು ಶ್ವಾಸೋಚ್ಛ್ವಾಸಗಳು ಬುದ್ಧಿ ಮನಸ್ಸುಗಳನ್ನು ಬಹಿರ್ವ್ಯಾಪಾರ ದಲ್ಲಿಯೇ ಮಗ್ನಮಾಡುತ್ತವೆ. ಜಾಗ್ರತ್ಕಾಲದಲ್ಲಿ ಕಿಂಚಿತ್ಕಾಲವಾದರೂ ಬುದ್ಧಿಮನಸ್ಸು ಗಳಿಗೆ ಚಂಚಲತ್ವವಿಲ್ಲದೆ ಇರುವುದಿಲ್ಲ. ಈ ಚಂಚಲತ್ವಕ್ಕೆ ಕಾರಣವಾಗಿರುವುವೇ ಅವಿದ್ಯೆಯ ವಾಸನಾವೃತ್ತಿ ಮತ್ತು ಶ್ವಾಸೋಚ್ಛ್ವಾಸಗಳು. ಈ ಎರಡರಲ್ಲಿ ಒಂದನ್ನಾದರೂ ಮೊದಲು ನಮ್ಮ ಸ್ವಾಧೀನಕ್ಕೆ ತೆಗೆದುಕೊಂಡು ಅನಂತರ ಮತ್ತೊಂದನ್ನು ನಾಶಮಾಡ ಬೇಕು. ಈ ಅವಿದ್ಯಾವಾಸನೆ ಮತ್ತು ವಾಯುಗಳಲ್ಲಿ ವಾಯುಸ್ವರೂಪವಾದ ಪಂಚಪ್ರಾಣ ಗಳು ದೇವತೆಗಳ ಸ್ವರೂಪಗಳು. ದೇವತೆಗಳೇ ವಾನರ ಭಲ್ಲೂಕರಾಗಿ ಅವತಾರಮಾಡಿರು ತ್ತಾರೆಂದು ಬಾಲಕಾಂಡದಲ್ಲಿಯೂ ತಿಳಿಸಿದೆ. ಸುಗ್ರೀವನೇ ಮುಂತಾದ ವಾನರರ ಸಹಾಯ ದಿಂದ ರಾವಣನನ್ನು ನಿಗ್ರಹಿಸಿ ಸೀತಾದೇವಿಯನ್ನು ಪಡೆಯುವುದಕ್ಕೆ ಶ್ರೀರಾಮಚಂದ್ರನು ಹೇಗೆ ಉದ್ದೇಶಪಟ್ಟನೋ ಹಾಗೆಯೇ ಬ್ರಹ್ಮವಿದ್ಯಾಧಿಕಾರಿಯು ಶ್ವಾಸೋಚ್ಛ್ವಾಸ ಮತ್ತು ಪ್ರಾಣವಾಯುಗಳನ್ನು ತನ್ನ ಸ್ವಾಧೀನಕ್ಕೆ ತಂದುಕೊಂಡು ಅವಿದ್ಯೆಯನ್ನು ನಿಗ್ರಹಿಸಿ ಮೋಕ್ಷವನ್ನು ಪಡೆಯಬೇಕು. ಈ ತತ್ವಾರ್ಥವನ್ನನುಸರಿಸಿಯೇ ಕಬಂಧನು ಕೂಡ ಸುಗ್ರೀವನೊಡನೆ ಅಗ್ನಿಸಾಕ್ಷಿಯಾಗಿ ಸ್ನೇಹಬೆಳೆಸೆಂದು ಶ್ರೀರಾಮನಿಗೆ ಹೇಳಿದುದಾಗಿದೆ.

ಹಾಗಾದರೆ ಸುಗ್ರೀವಾದಿ ವಾನರರಲ್ಲಿ ಪಂಚಪ್ರಾಣಗಳ ತತ್ವದವರು ಯಾರೆಂದರೆ— ಸುಗ್ರೀವನೇ ಪ್ರಾಣವಾಯು, ವಾಲಿಯೇ ಅಪಾನವಾಯು, ಜಾಂಬುವಂತನೇ ಉದಾನ ವಾಯು, ನೀಲನೇ ಸಮಾನವಾಯು, ನಳನೇ ವ್ಯಾನವಾಯು. ಈ ಪಂಚಪ್ರಾಣಗಳ ಚಲನೆಗೆ ಅವಶ್ಯಕವಾದ ಶ್ವಾಸೋಚ್ಛ್ವಾಸದ ವಾಯುವೇ ಹನುಮಂತನು.

೧. ಸುಗ್ರೀವನು ರವಿಪುತ್ರನು. ರವಿಯೆಂದರೆ "ರಸಾನಾಂಚ ತಥಾದಾನಾ ದ್ರವಿರಿತ್ಯಭಿಧೀಯತೆ" ರಸವನ್ನು ಸ್ವೀಕರಿಸುವವನಾದುದರಿಂದ ರವಿಯೆನ್ನಲ್ಪಡುವನು. ಅಂದರೆ ರಸವನ್ನು ಹೀರುವವನೆಂದು ಅರ್ಥವಾಗುತ್ತದೆ. ಸಮಷ್ಟಿಯಲ್ಲಿನ ರಸವನ್ನು ರವಿಯು ಸ್ವೀಕರಿಸುತ್ತಾನೆ. ವ್ಯಷ್ಟಿದೇಹಗಳಲ್ಲಿನ ರಸವನ್ನು ಸುಗ್ರೀವನೆಂದರೆ ಪ್ರಾಣ ವಾಯುವು ಸೂರ್ಯನಂತೆ ಉಷ್ಣಸ್ವರೂಪದ್ದಾಗಿ ಆಹಾರದಲ್ಲಿನ ರಸವನ್ನು ಹೀರುತ್ತದೆ. "ಪ್ರಾಣಮುಷ್ಣಸ್ವರೂಪಕಂ" ಎಂಬದಾಗಿ ಶ್ರುತಿವಾಕ್ಯವೂ ಇರುತ್ತದೆ. ಆದುದರಿಂದ ಸುಗ್ರೀವನು ಪ್ರಾಣವಾಯು ತತ್ವದಲ್ಲಿರುತ್ತಾನೆ. ಅಲ್ಲದೆ ಸುಗ್ರೀವ ಎಂಬ ಶಬ್ದಕ್ಕೆ "ಗೀರ್ಯಂತೇ ಅನಯಾ ರಸಾದಿಕ ಮಿತಿ ಗ್ರೀವಾ (ಗ್ಯೈನಿಗರಣೆ)" ರಸವನ್ನು ಚನ್ನಾಗಿ ಭಕ್ಷಿಸುವವನಿಗೆ ಸುಗ್ರೀವನೆಂಬ ತಾತ್ಪರ್ಯ. ಅಂದರೆ ಆಹಾರಪದಾರ್ಥದಲ್ಲಿನ ರಸವನ್ನು ಹೀರುವುದೇ ಪ್ರಾಣ. ಇದು "ಹೃದಿಪ್ರಾಣ ಸ್ಥಿತೋ ನಿತ್ಯಂ" ಎಂಬ ಯೋಗಚೂಡಾಮಣ್ಯುಪನಿಷತ್ತಿನ ವಚನದಂತೆ ಪ್ರಾಣವಾಯುವಿಗೆ ಹೃದಯಕೋಶವು ಸ್ಥಾನವಾಗಿದೆ. ಪ್ರಾಣ ಎಂಬ ಶಬ್ದಕ್ಕೂ "ಪ್ರಕರ್ಷೇಣ ಅನಂತ್ಯನೇ ನೇತಿ ಪ್ರಾಣಃ" ಈ ಪ್ರಾಣವಾಯುವಿನಿಂದ ಚೆನ್ನಾಗಿ ಬದುಕುವರು. ಪ್ರಾಣವು ಆಹಾರದಲ್ಲಿರುವ ಸಾರವತ್ತಾದ ರಸವನ್ನು ಭಕ್ಷಿಸಿ ದೇಹಕ್ಕೆ ಕಾಂತಿಯನ್ನೂ ಬಲವನ್ನೂ ಕೊಡುತ್ತದೆ. ಆದುದರಿಂದ ಸುಗ್ರೀವನು ಪ್ರಾಣವಾಯು ತತ್ವದವನು.

೨. ವಾಲಿಯೇ ಅಪಾನವಾಯು ತತ್ವದವನು. ವಾಲಿಯೆಂದರೆ "ವಲತೇ ಅಧೋ ಮುಖಂ ಇತಿ ವಾಲಂ, ವಾಲಮಸ್ಯಾಸ್ತೀತಿ ವಾಲೀ" ಪುಚ್ಛಭಾಗಕ್ಕೆಳೆಯುವ ಶಕ್ತಿಯೆಂದರೆ ಅಪಾನವಾಯುವಿಗೆ ವಾಲಿಯೆಂದು ಹೆಸರು. ಅಪಾನವೆನ್ನುವ ಶಬ್ದಕ್ಕೂ "ಅಧೋ ಮಲಾನ್ನಯತೀತಿ ಅಪಾನಃ" ಮಲಮೂತ್ರಾದಿಗಳನ್ನು ಅಧೋಭಾಗವನ್ನು ಹೊಂದಿಸುವುದು ಅಪಾನವಾಯುವು. "ಅಪಾನೋ ಗುದಮಂಡಲೇ" ಎಂಬ ಯೋಗಚೂಡಾಮಣಿ ಉಪನಿಷದ್ವಾಕ್ಯದಂತೆ ಗುದಮಂಡಲದಲ್ಲಿದ್ದುಕೊಂಡು ಮಲಮೂತ್ರಾದಿ ವಿಸರ್ಜನೆ ಮಾಡಿಸುವ ವಾಯುವಾದುದರಿಂದ ವಾಲಿಯು ಅಪಾನವಾಯು ತತ್ವದವನು.

೩. ಜಾಂಬುವಂತನೇ ಉದಾನವಾಯು ತತ್ವದವನು. ಜಮು ಧಾತುವಿನ ಮೇಲೆ ಭಕ್ಷಿಸುವವನು ಅಥವಾ ಗ್ರಾಸಮಾಡುವವನೆಂದು ವ್ಯುತ್ಪತ್ತಿಯಾಗುತ್ತದೆ. "ಜಮತೀತಿ ಜಂಬುಃ ತಸ್ಯಾಸ್ತೀತಿ ಜಾಂಬವಾನ್" ಉದಾನವಾಯುವು ಕಂಠದಲ್ಲಿದ್ದುಕೊಂಡು ಪ್ರಾಣೋತ್ಕ್ರಮಣಕಾಲದಲ್ಲಿ ದೇಹದಲ್ಲಿರುವ ಸರ್ವಶಕ್ತಿಗಳನ್ನೂ ಸೆಳೆದುಕೊಳ್ಳುವುದು. ಉದಾನವೆಂಬ ಶಬ್ದದ ವ್ಯುತ್ಪತ್ತಿಯು ಕೂಡ ಹೋಲಿಕೆಯಾಗಿದೆ. ಉದಾನವೆಂದರೆ "ಊರ್ಧ್ವಮನಂತ್ಯನೇ ನೇತ್ಯುದಾನಃ" ಊರ್ಧ್ವಮುಖವಾಗಿ ಸೆಳೆದುಕೊಳ್ಳುವ ವಾಯುವಿಗೆ

ಉದಾನವೆಂದು ಹೆಸರು. "ಉದಾನಃ ಕಂಠಮಧ್ಯಗಃ" ಎಂಬದಾಗಿ ಯೋಗಚೂಡಾಮಣ್ಯುಪನಿಷತ್ತಿನಲ್ಲಿ ಹೇಳಿರುವುದರಿಂದ ಜಾಂಬುವಂತನು ಉದಾನವಾಯು ತತ್ವದವನು.

೪. ನಳನು ವ್ಯಾನವಾಯು ತತ್ವದವನು. ನಳನೆಂದರೆ "ನಲತೀತಿ ನಳಃ" ಬಂಧನವನ್ನು ಮಾಡತಕ್ಕವನು. ಶರೀರದಲ್ಲೆಲ್ಲಾ ವ್ಯಾಪಿಸಿಕೊಂಡು ಶರೀರವನ್ನು ಬಂಧಿಸಿರುವುದು. ವ್ಯಾನವಾಯುವು. "ವ್ಯಾನ ಸ್ಸರ್ವ ಶರೀರಗಃ" ಎಂಬದಾಗಿ ಯೋಗಚೂಡಾಮಣ್ಯುಪನಿಷತ್ತಿನಲ್ಲಿ ಹೇಳಿರುತ್ತದೆ. ಅಲ್ಲದೆ ವ್ಯಾನವೆಂಬ ಶಬ್ದಕ್ಕೂ "ವಿನಯತೀತಿ ವ್ಯಾನಃ" ಶರೀರದಲ್ಲಿ ಸರ್ವತ್ರವಿರುವುದು ಆದುದರಿಂದ ನಳನು ವ್ಯಾನವಾಯುತತ್ವದವನು.

೫. ನೀಲನೇ ಸಮಾನವಾಯುತತ್ವದವನು. ನೀಲನೆಂದರೆ "ನೀಲತೀತಿ ನೀಲಃ" ಆಹಾರವನ್ನು ಜೀರ್ಣಮಾಡುವುದು. ಆಹಾರವನ್ನು ಜೀರ್ಣಮಾಡುವುದು ಪಂಚಪ್ರಾಣಗಳಲ್ಲಿ ಸಮಾನವಾಯುವಿನ ಕಾರ್ಯವು. ಸಮಾನವೆಂಬ ಶಬ್ದಕ್ಕೂ "ಸರ್ವತ್ರ ಅಸೃಗಾದಿ ನಯತೀತಿ ವಾ ಸಮಾನಃ" ಅಂದರೆ ಆಹಾರವನ್ನು ಜೀರ್ಣಿಸಿ ಶರೀರಕ್ಕೆ ರಕ್ತ ಮೊದಲಾದ್ದನ್ನು ಹೊಂದಿಸಿಕೊಡುವುದು. "ಸಮಾನೋ ನಾಭಿ ದೇಶೇತು" ಎಂಬದಾಗಿ ಯೋಗಚೂಡಾಮಣ್ಯುಪನಿಷತ್ತಿನಲ್ಲಿ ಹೇಳಿರುವುದರಿಂದ ನೀಲನು ಸಮಾನವಾಯುತತ್ವದವನು.

೬. ಹನುಮಂತನು ಶ್ವಾಸೋಚ್ಛ್ವಾಸದ ತತ್ವದವನು. ಹೇಗೆಂದರೆ—ಪಂಚಭೂತಗಳಲ್ಲಿ ವಾಯುವಿರುವುದಷ್ಟೆ! ಸಮಷ್ಟಿಯಲ್ಲಿ ಇದಕ್ಕೆ ವಾಯುವೆಂದು ಹೆಸರು. ವ್ಯಷ್ಟಿಯಲ್ಲಿ ಈ ವಾಯುವೇ ಶ್ವಾಸೋಚ್ಛ್ವಾಸರೂಪವಾಗಿ ಪರಿಣಮಿಸುವುದರಿಂದ ಇದಕ್ಕೆ ವಾಯುಪುತ್ರನೆಂದು ಹೆಸರು ಬರುವುದು. ಹನು ಎಂದರೆ, ಮೂಸೆಯಿರುವ ಸ್ಥಳಕ್ಕೆ ಹೆಸರು. ಈ ಸ್ಥಳದಲ್ಲಿ ಉಚ್ಛ್ವಾಸ ನಿಶ್ವಾಸಸ್ವರೂಪಗಳಲ್ಲಿ ಸಂಚರಿಸುವ ವಾಯುವು ಹನುಮಂತನ ತತ್ವವಾಗಿರುವುದು. ತಿದಿ ಒತ್ತುವ ಕಾಲದಲ್ಲಿ ತಿದಿಯೊಳಕ್ಕೆ ಹೊರಗಿನ ಗಾಳಿಯು ಪ್ರವೇಶಿಸಿ ಅನಂತರ ಹೊರಕ್ಕೆ ಬರುವುದು. ಇದರಂತೆ ಹನು ಪ್ರದೇಶದಲ್ಲಿರುವ ವಾಯುವು ಪ್ರಾಣಾಪಾನಗಳ ಉಚ್ಛ್ವಾಸ ನಿಶ್ವಾಸರೂಪದಿಂದ ದೇಹದೊಳಕ್ಕೆ ಪ್ರವೇಶಿಸುವುದು ಮತ್ತು ಹೊರಕ್ಕೆ ಬರುವುದು. ಆದುದರಿಂದ ಹನುಮಂತನ ತತ್ವವು ನಮ್ಮಲ್ಲಿ ಶ್ವಾಸೋಚ್ಛ್ವಾಸವಾಗಿರುವುದು.

ಅನೇಕ ವಾಯುಗಳಲ್ಲಿ ಮೇಲೆ ವಿವರಿಸಿರುವ ಪ್ರಾಣಾಪಾನಾದಿಗಳು ಐದು ಮುಖ್ಯವಾದುವು. ಇದರಂತೆ ವಾನರರಲ್ಲಿ ಸುಗ್ರೀವಾದಿ ಐವರು ಮುಖ್ಯರು. ಈ ಐದರಲ್ಲೂ ಪ್ರಾಣಾಪಾನಾದಿಗಳೆರಡೂ ಪ್ರಧಾನವಾದವುಗಳು. ಇದರಂತೆ ವಾನರರಲ್ಲಿ ವಾಲಿ ಸುಗ್ರೀವರೇ ಪ್ರಧಾನರು. ಈ ಪ್ರಾಣಾಪಾನಗಳಲ್ಲೂ ಹೃದಯಕೋಶಕ್ಕೆ ಪ್ರಭುವಾಗಿರುವ ಪ್ರಾಣವಾಯುವೇ ಅತ್ಯಂತ ಪ್ರಧಾನವಾದುದು. ಕಾರಣವೇನೆಂದರೆ, ಹೃದಯಕೋಶವೇ

ದೇಹಕ್ಕೆ ಮುಖ್ಯವಾದುದರಿಂದ ಜೀವತ್ವವನ್ನು ಧರಿಸಿರುತ್ತದೆ. ಈರೀತಿಯಾದ ಶ್ರೇಷ್ಠತೆ
ತಾರತಮ್ಯವಿರುವುದೆಂದು ತ್ರಿಶಿಖಿಬ್ರಾಹ್ಮಣೋಪನಿಷತ್ತಿನಲ್ಲಿ,

ಪ್ರಾಣಾದಿ ಪಂಚಕಂ ತೇಷು ಪ್ರಧಾನಂ ತತ್ರ ಚ ದ್ವಯಂ |
ಪ್ರಾಣ ಏವಾಥವಾ ಶ್ರೇಷ್ಠೋ ಜೀವಾತ್ಮಾನಂ ಭಿಭರ್ತಿ ಯಃ ||

ತಾ|| ಪ್ರಾಣಾಪಾನಾದಿ ಐದು ವಾಯುಗಳು ಮುಖ್ಯವು. ಈ ಐದರಲ್ಲಿ ಪ್ರಾ
ಪಾನಗಳೆರಡೇ ಮುಖ್ಯ. ಈ ಎರಡರಲ್ಲಿಯೂ ಜೀವವನ್ನು ಧರಿಸಿರುವ ಪ್ರಾಣವಾಯು
ಅತ್ಯಂತ ಮುಖ್ಯವಾದುದು ಎಂದು ಹೇಳಿರುವುದು.

ಆದುದರಿಂದ ಇಂತಹ ಪ್ರಾಣವಾಯುಸ್ವರೂಪದ ತತ್ವದಲ್ಲಿರುವ ಸುಗ್ರೀವನೊ
ಬುದ್ಧಿತತ್ವಸ್ವರೂಪನಾದ ಶ್ರೀರಾಮನು ಅಗ್ನಿಸಾಕ್ಷಿಯಾಗಿ ಸ್ನೇಹ ಬೆಳೆಸಿದನು. ನಮ್ಮಲ್ಲಿರ
ಶ್ವಾಸೋಚ್ಛ್ವಾಸ ಮತ್ತು ಪ್ರಾಣವಾಯುವನ್ನು ಸ್ವಾಧೀನಕ್ಕೆ ತಂದುಕೊಳ್ಳದೆ ಮೋಕ್ಷವೇ
ಪ್ರಸ್ತಾಪವಮಾಡುವುದಕ್ಕೂ ಅಧಿಕಾರವಿರುವುದಿಲ್ಲ. ಕಾರಣವೇನೆಂದರೆ ಅಂತಃಕರಣ
ಅವಿದ್ಯಾಸ್ವರೂಪವಾದ ವಾಸನೆ ಮತ್ತು ಪ್ರಾಣವಾಯುಗಳೊಂದಿಗೆ ಸಹಚರಿಸಿಕೊಂ
ಏಕವಾದಂತಾಗಿ ದೇಹಯಾತ್ರೆಯನ್ನು ಮಾಡಿಸುವುದೆಂದು ಮೇಲೆಯೇ ತಿಳಿಸಿರುತ್ತ
ಈರೀತಿ ಇರುವುದೆಂದು ಯೋಗಕುಂಡಲಿನೀ ಮುಂತಾದ ಕೆಲವು ಉಪನಿಷತ್ತುಗಳ ವಾ
ಗಳನ್ನು ಇಲ್ಲಿ ಬರೆದಿರುತ್ತದೆ.

ಹೇತುದ್ವಯಂ ಹಿ ಚಿತ್ತಸ್ಯ ವಾಸನಾ ಚ ಸಮೀರಣಃ |
ತಯೋ ರ್ವಿನಷ್ಟ ಏಕಸ್ಮಿಂ ಸ್ತದ್ದ್ವಾವಪಿ ವಿನಶ್ಯತಃ ||
ತಯೋರಾದೌ ಸಮೀರಸ್ಯ ಜಯಂ ಕುರ್ಯಾನ್ನರ ಸ್ಸದಾ |
ಮನೋ ಯತ್ರ ವಿಲೀಯೇತ ಪವನ ಸ್ತತ್ರ ಲೀಯತೆ ||
ಪವನೋ ಲೀಯತೇ ಯತ್ರ ಮನ ಸ್ತತ್ರ ವಿಲೀಯತೆ |
ತತ್ರೈಕನಾಶಾ ದಪರಸ್ಯನಾಶ ಏಕಃ ಪ್ರವೃತ್ತೇ ರಪರಪ್ರವೃತ್ತಿಃ |
ಅಧ್ವಸ್ತಯೋ ಶ್ಚೇಂದ್ರಿಯ ವರ್ಗ ವೃತ್ತಿಃ ಪ್ರಧ್ವಸ್ತಯೋ
ರ್ಮೋಕ್ಷಪದಸ್ಯ ಸಿದ್ಧಿಃ ||

ತಾ|| ಅಂತಃಕರಣದ ಪ್ರವರ್ತನೆಗೆ ವಾಸನಾವೃತ್ತಿ ಮತ್ತು ಪ್ರಾಣವಾಯುಗಳೆರಡ
ಕಾರಣವಾಗಿರುತ್ತವೆ. ಇದರಲ್ಲಿ ಒಂದು ನಷ್ಟವಾದರೆ ಎರಡೂ ನಷ್ಟವಾಗುತ್ತವೆ. ವಿಷ
ವಾಸನೆ ಮತ್ತು ಪಂಚಪ್ರಾಣಗಳಲ್ಲಿ ಮುಮುಕ್ಷುವು ಪ್ರಥಮದಲ್ಲಿ ಪ್ರಾಣವಾಯುವ
ತನ್ನ ಸ್ವಾಧೀನಕ್ಕೆ ತೆಗೆದುಕೊಳ್ಳಬೇಕು. ಯಾವುದರಲ್ಲಿ ಅಂತಃಕರಣವು ಲೀನವಾಗುವುದೆ

ಅಲ್ಲಿ ಪ್ರಾಣವಾಯುವು ಲೀನವಾಗುತ್ತದೆ. ಪ್ರಾಣವಾಯುವು ಯಾವ ನರದಲ್ಲಿ ಲೀನವಾಗುವುದೋ ಅಲ್ಲ ಅಂತಃಕರಣವು ಲೀನವಾಗುತ್ತದೆ. ಪ್ರಾಣವಾಯು ಮತ್ತು ಅಂತಃಕರಣಗಳಲ್ಲೊಂದು ನಾಶವಾದರೆ ಇನ್ನೊಂದೂ ನಾಶವಾಗುತ್ತದೆ. ಒಂದು ದೇಹಯಾತ್ರೆಗೆ ಹೊರಟರೆ ಇನ್ನೊಂದೂ ಜೊತೆಯಲ್ಲಿ ಹೊರಡುತ್ತದೆ. ಇವೆರಡೂ ಎಲ್ಲಿಯವರೆಗೆ ಧ್ಯೇಯಾಕಾರವಸ್ತುವಿನಲ್ಲಿ ಐಕ್ಯವಾಗಲು ಸಿದ್ಧವಾಗಿ ನಿಲ್ಲುವುದಿಲ್ಲವೋ ಅಲ್ಲಿಯವರೆಗೂ ಅವಿದ್ಯಾಸ್ವರೂಪವಾದ ಇಂದ್ರಿಯಗಳ ಆಕರ್ಷಣೆಯ ಶಕ್ತಿಗೂ ಮತ್ತು ವಾಸನಾವೃತ್ತಿಗಳಿಗೂ ಒಳಪಟ್ಟು ಬಹಿರ್‍ವ್ಯಾಪಾರದಲ್ಲಿ ಪ್ರವರ್ತಿಸುವುವು.

ಈ ಶ್ರುತಿವಾಕ್ಯದ ತಾತ್ಪರ್ಯವನ್ನು ಅನುಸರಿಸಿ ಅವಿದ್ಯಾಸ್ವರೂಪರಾದ ರಾವಣಾದಿಗಳನ್ನು ನಿಗ್ರಹಿಸಲು ಶ್ರೀರಾಮನು ಸುಗ್ರೀವನೊಡನೆ ಅಗ್ನಿಸಾಕ್ಷಿಯಾಗಿ ಸ್ನೇಹ ಬೆಳೆಸಿದನು. ಶ್ರೀರಾಮನು ಸುಗ್ರೀವನೊಡನೆ ಅಗ್ನಿಸಾಕ್ಷಿಯಾಗಿ ಸ್ನೇಹ ಬೆಳೆಸಿದ ತತ್ವಕ್ಕೆ ಮೇಲಿನ ಶ್ರುತಿಪ್ರಮಾಣಗಳಲ್ಲದೆ ಶ್ರೀರಾಮಚಂದ್ರನೇ ಮುಕ್ತಿಕೋಪನಿಷತ್ ಎರಡನೆಯ ಅಧ್ಯಾಯದಲ್ಲಿ,

ದ್ವೇ ಬೀಜೇ ಚಿತ್ತವೃಕ್ಷಸ್ಯ ಪ್ರಾಣಸ್ಪಂದನ ವಾಸನೇ |
ಏಕಸ್ಮಿಂಶ್ಚ ತಯೋಃ ಕ್ಷೀಣೇ ಕ್ಷಿಪ್ರಂ ದ್ವೇ ಅಪಿ ನಶ್ಯತಃ ||

ತಾ|| ಚಿತ್ತವೆಂಬುದಕ್ಕೆ ಪ್ರಾಣಚಲನೆಯ ಸ್ವರೂಪವಾದ ಶ್ವಾಸೋಚ್ಛ್ವಾಸ ಮತ್ತು ವಾಸನೆಗಳೆಂಬೆರಡು ಬೀಜಗಳಿರುತ್ತವೆ. ಆ ಎರಡು ಬೀಜಗಳಲ್ಲಿ ಒಂದು ಬೀಜವು ನಾಶವಾಗಲು ಮತ್ತೊಂದೂ ನಾಶವಾಗುತ್ತದೆ. ಅಂದರೆ ಪ್ರಾಣವಾಯುವು ಸ್ವಾಧೀನಕ್ಕೆ ಬಂದಲ್ಲಿ ವಿಷಯವಾಸನಾವೃತ್ತಿಯನ್ನು ನಾಶಮಾಡಲು ಅನುಕೂಲವಾಗುತ್ತದೆ ಎಂದು ಹನುಮಂತನಿಗೆ ಉಪದೇಶಮಾಡಿರುವನು.

ಆದುದರಿಂದ ಮೋಕ್ಷಾಧಿಕಾರಿಯು ಪ್ರಾಣವಾಯು ಮತ್ತು ಶ್ವಾಸೋಚ್ಛ್ವಾಸಗಳನ್ನು ತನ್ನ ಅನುವರ್ತಿಗಳಾಗುವಂತೆ ಮಾಡಿಕೊಂಡು ಯೋಗಾನುಷ್ಠಾನವನ್ನು ಪ್ರಾರಂಭಮಾಡಬೇಕಾದ ತತ್ವವೇ ಶ್ರೀರಾಮನು ಸುಗ್ರೀವ ಹನುಮಂತರೊಡನೆ ಸ್ನೇಹವನ್ನು ಬೆಳೆಸಿದುದಾಗಿದೆ.

ಎಷ್ಟೇ ವೇದಾಂತವಿಚಾರಮಾಡಿ ಬ್ರಹ್ಮಚಿಂತನೆಯಲ್ಲಿ ಮಗ್ನರಾಗಿದ್ದರೂ ನಿದಿಧ್ಯಾಸರೂಪವಾದ ಯೋಗವಿಲ್ಲದಿದ್ದಲ್ಲಿ ಮೋಕ್ಷವೆಂಬುದು ಎಂದೆಂದಿಗೂ ದೊರೆಯುವುದಿಲ್ಲವೆಂದು ಯೋಗಶಿಖೋಪನಿಷತ್ತಿನ ಪ್ರಥಮಾಧ್ಯಾಯದಲ್ಲಿ,

ನಾನಾವಿಧೈರ್ವಿಚಾರೈಸ್ತು ನ ಬಾಧ್ಯಂ ಜಾಯತೆ ಮನಃ |
ತಸ್ಮಾತ್ತಸ್ಯ ಜಯೋಪಾಯಃ ಪ್ರಾಣ ಏವ ಹಿ ನಾನ್ಯಥಾ |
ತರ್ಕೈರ್ಜಲ್ಪೈಶ್ಶಾಸ್ತ್ರಜಾಲೈರ್ಯುಕ್ತಿಭಿರ್ಮಂತ್ರಭೇಷಜೈಃ |
ನ ವಶೋ ಜಾಯತೇ ಪ್ರಾಣಸ್ಸಿದ್ಧ್ಯುಪಾಯಂ ವಿನಾ ವಿಧೇ |
ಉಪಾಯಂ ತಮವಿಜ್ಞಾಯ ಯೋಗಮಾರ್ಗೇ ಪ್ರವರ್ತತೆ |

ತಾ|| ನಾನಾವಿಧವಾದ ವಿಚಾರಗಳಿಂದಲೇ ಮನಸ್ಸನ್ನು ನಿಗ್ರಹಿಸುವುದಕ್ಕಾಗುವುದಿಲ್ಲ. ಆದುದರಿಂದ ಮನಸ್ಸನ್ನು ನಿಗ್ರಹಿಸುವುದಕ್ಕೆ ಉಪಾಯವು ಪ್ರಾಣವಾಯುವನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವುದರ ಹೊರತು ಬೇರೆ ಯಾವುದೂ ಇರುವುದಿಲ್ಲ. ತರ್ಕಶಾಸ್ತ್ರದಿಂದಾಗಲಿ, ವಾಗ್ವಾದದಿಂದಾಗಲಿ, ಶಾಸ್ತ್ರಗಳಿಂದಾಗಲಿ, ಯುಕ್ತಿಗಳಿಂದಾಗಲಿ, ಮಂತ್ರೋಚ್ಚಾರಣೆಯ ವೇಷದಿಂದಾಗಲಿ, ಪ್ರಾಣವಾಯುವೂ ಶ್ವಾಸೋಚ್ಛ್ವಾಸವೂ ಎಂದಿಗೂ ವಶವಾಗುವುದಿಲ್ಲ. ಇದಕ್ಕೆ ಉಪಾಯವೇನೆಂದರೆ, ಅಂಧಕಾರವನ್ನು ನಾಶಗೊಳಿಸತಕ್ಕ ಯೋಗಮಾರ್ಗದಲ್ಲಿ ಪ್ರವರ್ತನೆಯಾಗಬೇಕು ಎಂದು ಹೇಳಿದೆ.

ಈ ಮೇಲಿನ ತತ್ವಾರ್ಥಗಳನ್ನು ಅನುಸರಿಸಿ ಶ್ರೀರಾಮಚಂದ್ರನು ಹನುಮಂತನನ್ನು ಮಧ್ಯದಲ್ಲಿ ನಿಲ್ಲಿಸಿಕೊಂಡು ಸುಗ್ರೀವನೊಡನೆ ಅಗ್ನಿಸಾಕ್ಷಿಯಾಗಿ ಸ್ನೇಹಬೆಳೆಸಿದನು. ಹನುಮಂತನನ್ನು ಮಧ್ಯದಲ್ಲಿಟ್ಟುಕೊಂಡ ತತ್ವವೇನೆಂದರೆ—ನಮ್ಮಲ್ಲಿರುವ ಶ್ವಾಸೋಚ್ಛ್ವಾಸದ ಮೂಲಕವೇ ಪಂಚಪ್ರಾಣಗಳನ್ನು ಸ್ವಾಧೀನಕ್ಕೆ ತೆಗೆದುಕೊಳ್ಳಬೇಕು. ಅಲ್ಲದೆ ಶ್ವಾಸೋಚ್ಛ್ವಾಸದಿಂದ ಮುಂದೆ ಅತ್ಯಂತ ಸಹಾಯವಾಗಬೇಕಾಗಿರುವುದರ ತತ್ವವನ್ನು ಅನುಸರಿಸಿ ಹನುಮಂತನನ್ನು ಮಧ್ಯದಲ್ಲಿಟ್ಟುಕೊಂಡು ಸುಗ್ರೀವನ ಸಖ್ಯವನ್ನು ಬೆಳೆಸಿದುದಾಗಿರುತ್ತದೆ.

**ರಾ||** ರಾವಣನು ಸೀತಾದೇವಿಯನ್ನು ಅಪಹರಿಸಿಕೊಂಡು ಹೋದ ಕಾಲದಲ್ಲಿ ಸೀತಾದೇವಿಯು ತನ್ನ ಆಭರಣಗಳನ್ನು ವಾನರರಿದ್ದೆಡೆಗೆ ಎಸೆದಿದ್ದಳು. ಈ ಆಭರಣಗಳನ್ನು ಸುಗ್ರೀವನು ಶ್ರೀರಾಮನಿಗೆ ಕೊಟ್ಟನು.

**ತತ್ವ||** ಈ ವಾಯುಸ್ವರೂಪರೇ ಶುದ್ಧಸತ್ವಗುಣದ ಬಂಧನವನ್ನು ಬಿಡಿಸಲು ಸಹಾಯಕರೆಂಬ ತತ್ವಾರ್ಥದ ಸೂಚನೆಯಾಗಿದೆ. ಅಂದರೆ ಪಂಚಪ್ರಾಣ ಮತ್ತು ಶ್ವಾಸೋಚ್ಛ್ವಾಸವನ್ನು ಸ್ವಾಧೀನಕ್ಕೆ ತೆಗೆದುಕೊಂಡಲ್ಲದೆ, ಅವಿದ್ಯೆಯು ನಿಗ್ರಹವಾಗಿ ಶುದ್ಧಸತ್ವಗುಣದ ಸೋಪಾನವು ನಮ್ಮಲ್ಲಿ ಉದಯವಾಗುವುದಿಲ್ಲ. ಆದುದರಿಂದ ವಾಯುಗಳ ಸಹಾಯದ ಪ್ರಧಾನತ್ವವನ್ನು ಅನುಸರಿಸಿ ಸೀತಾದೇವಿಯು ವಾನರರಿದ್ದೆಡೆಗೆ ಆಭರಣಗಳನ್ನು ಎಸೆದದ್ದಾಗಿರುತ್ತದೆ.

ಆದರೆ ಸುಗ್ರೀವನು ಈಗ ಯಾವ ಸ್ಥಿತಿಯಲ್ಲಿರುವನೆಂದರೆ, ಅಣ್ಣನಾದ ವಾಲಿಯಿಂದ ಓಡಿಸಲ್ಪಟ್ಟು ರಾಜ್ಯಭ್ರಷ್ಟನಾಗಿರುತ್ತಾನೆ. ವಾಲಿಯನ್ನು ನಿಗ್ರಹಿಸಿ ಸುಗ್ರೀವನಿಗೆ ಪಟ್ಟ ಕಟ್ಟಿದ್ದಲ್ಲದೆ ಸುಗ್ರೀವನು ಶ್ರೀರಾಮನಿಗೆ ಏನೂ ಸಹಾಯಮಾಡಲಾರನು. ಇದರ ಕಾರಣ ವನ್ನು ತಿಳಿದುಕೊಳ್ಳಲು ಮುಂದಿನ ರಾಮಾಯಣ ಕಥೆಯನ್ನು ಪ್ರಾರಂಭಿಸೋಣ.

## ೩ನೆಯ ಪ್ರಕರಣ.

**ವಾಲಿಯ ವಿಚಾರ ಮತ್ತು ವಧೆ.** — **ಯೋಗದಲ್ಲಿನ ಆಸನಾಭ್ಯಾಸದ ಮತ್ತು ದೇಹಾರೋಗ್ಯದ ವಿಚಾರ.**

**ರಾ||** ವಾಲಿಯು ಮಾಯಾವಿಯೊಡನೆ ಯುದ್ಧಮಾಡಿದ ಸಂದರ್ಭದಿಂದ ತನ್ನ ತಮ್ಮನಾದ ಸುಗ್ರೀವನನ್ನು ರಾಜಧಾನಿಯಿಂದ ಹೊರಡಿಸಲು ಸುಗ್ರೀವನು ರಾಜ್ಯಭ್ರಷ್ಟ ನಾಗಿ ಜಾಂಬುವಂತ ಮುಂತಾದವರೊಡನೆ ಇದ್ದನು. ಶ್ರೀರಾಮನು ಸುಗ್ರೀವನನ್ನು ವಾಲಿಯೊಡನೆ ಯುದ್ಧಮಾಡುವಂತೆ ಪ್ರೇರಿಸಿದನು. ಸುಗ್ರೀವನು ವಾಲಿಯೊಡನೆ ಯುದ್ಧ ಮಾಡುತ್ತಿರಲು ಶ್ರೀರಾಮನು ವಾಲಿಯನ್ನು ನಿಗ್ರಹಿಸಿ ಸುಗ್ರೀವನಿಗೆ ರಾಜ್ಯದ ಪಟ್ಟಾಭಿ ಷೇಕವನ್ನೂ ಅಂಗದನಿಗೆ ಯೌವರಾಜ್ಯಾಭಿಷೇಕವನ್ನೂ ಮಾಡಿದನು.

**ತತ್ವ||** ಪಂಚಪ್ರಾಣಗಳಲ್ಲಿ ಪ್ರಾಣಾಪಾನಗಳೆರಡು ಮುಖ್ಯವಾದುವೆಂದು ಹಿಂದಿನ ಪ್ರಕರಣದಲ್ಲಿ ತಿಳಿಸಿತಷ್ಟೆ! ಹನುಮಂತನೂ ಸುಗ್ರೀವನೂ ಪರಮಮಿತ್ರರು. ಹನುಮಂತನೇ ನಮ್ಮ ದೇಹದಲ್ಲಿರುವ ಶ್ವಾಸೋಚ್ಛ್ವಾಸದ ತತ್ವದವನು. ಸುಗ್ರೀವನೇ ಹೃದಯದಲ್ಲಿರುವ ಪ್ರಾಣವಾಯು ತತ್ವದವನು. ಅಪಾನವಾಯು ತತ್ವದಲ್ಲಿರುವ ವಾಲಿಯು ಹನುಮಂತ ಸುಗ್ರೀವಾದಿಗಳನ್ನು ತನ್ನ ರಾಜಧಾನಿಯಿಂದ ಓಡಿಸಿದ್ದನೆಂದರೆ--ಪ್ರಾಣವಾಯುವಿನ ಬಲ ಕ್ಕಿಂತಲೂ ಅಪಾನವಾಯುವಿನ ಶಕ್ತಿಯು ಅಧಿಕವಾಗಿತ್ತೆಂಬ ತಾತ್ಪರ್ಯ. ಅಪಾನವಾಯು ವಿನ ಶಕ್ತಿಯು ಯಾವಾಗಲೂ ಅಧೋಮುಖಕ್ಕೆ ಜೀಸುತ್ತಾದುದರಿಂದ ಇದು ಅಧಿಕವಾದಲ್ಲಿ ಪ್ರಾಣಕೋಶದಲ್ಲಿರತಕ್ಕ ಪ್ರಾಣವಾಯುವನ್ನು ಅಧೋಮುಖಕ್ಕೆ ಎಳೆದುಕೊಳ್ಳುತ್ತದೆ. ಹೀಗಾಗುವುದರಿಂದ ಜಠರಾಗ್ನಿಯಲ್ಲಿರತಕ್ಕ ಸಮಾನವಾಯುವು ಕೂಡ ಅಧೋಮುಖ ವಾಗುವುದರಿಂದ ಜಠರಾಗ್ನಿಗೂ ಹೃದಯಕ್ಕೂ ಶ್ವಾಸಕೋಶಕ್ಕೂ ಬಲತಗ್ಗುತ್ತದೆ. ಹೀಗೆ ಅಧೋಮುಖಕ್ಕೆ ಎಳೆದುಕೊಳ್ಳುವುದರಿಂದ ಪ್ರಾಣವಾಯುವಿನ ಭಾರವೆಲ್ಲ ಪಿತ್ತಕೋಶದ ಮೇಲೆ ಬೀಳುವುದಲ್ಲದೆ ಈ ಅಧೋಮುಖದ ಶಕ್ತಿಯು ವೇಗದಿಂದ ಶ್ವಾಸೋಚ್ಛ್ವಾಸಗಳ ಮಿಡುಕು ಅಧಿಕವಾಗುವುದು. ಇದರಿಂದ ವ್ಯಾನ ಉದಾನ ಸಮಾನ ವಾಯುಗಳ ಶಕ್ತಿಯೂ ಕುಗ್ಗುತ್ತದೆ.

ಈ ಮೇಲಿನ ತತ್ವಗಳೇ ಸುಗ್ರೀವಾದಿಗಳು ರಾಜ್ಯಭ್ರಷ್ಟರಾಗಿ ಇರುವುದಾಗಿರುತ್ತದೆ. ಜಠರಾಗ್ನಿ ಮತ್ತು ಹೃದಯಕೋಶಗಳ ಬಲವು ಯಾವಾಗ ತಗ್ಗುವುದೋ ಆಗ ಆರೋಗ್ಯಭಾಗ್ಯವೂ, ಅಗ್ನಿಪುಟತ್ವವೂ, ತೇಜಸ್ಸೂ ಕುಂದುವುದು. ಅನೇಕ ರೋಗಗಳಿಗೆ ಇದೇ ಮುಖ್ಯಕಾರಣ. ಈ ಮೇಲಿನ ಅಂಶಗಳು ಎಂತಹವರಿಗೆ ಅನ್ವಯವಾಗುವುದೆಂದರೆ ಯಾವಾಗಲೂ ಸೊಂಟ ಎದೆಗಳನ್ನು ಬಗ್ಗಿಸಿ ಹೊಟ್ಟೆಯನ್ನು ಅದುಮಿಕೊಂಡು ಕುಳಿತು ಕೊಳ್ಳುವವರಿಗೆ ಅನ್ವಯವಾಗಿ ಅವರವರ ಯೋಗ್ಯತಾನುಸಾರವಾಗಿ ಅನುಭವಿಸುತ್ತಾರೆ. ಇದನ್ನು ಪರಿಹರಿಸಿಕೊಳ್ಳಲು ಋಜುವಾಗೆಂದರೆ—ನಮ್ಮ ಬೆನ್ನಿನ ಹುರಿಯು ಶಿರಸ್ಸಿನ ವರೆಗೂ ಒಂದೇ ಸಮನಾಗಿರುವಂತೆಯೂ, ಮುಖವೂ ಎದೆಯೂ ಸರಿಯಾಗಿರುವಂತೆಯೂ ಕುಳಿತುಕೊಳ್ಳಬೇಕು. ಈರೀತಿಯಾಗಿ ಋಜುವಾಗಿ ಕುಳಿತುಕೊಳ್ಳುವುದರಲ್ಲಿಯೂ ಶಾಸ್ತ್ರ ದಲ್ಲಿ ವಿಧಿಸಿರುವ ಪದ್ಮ ಸಿದ್ಧಾಸನಗಳಲ್ಲಿ ಕುಳಿತುಕೊಳ್ಳಲು ಅಭ್ಯಾಸಮಾಡಬೇಕಲ್ಲದೆ ಮನಸ್ಸು ಬಂದಂತೆ ಕುಳಿತುಕೊಳ್ಳಬಾರದು. ಪತಂಜಲಿಮಹರ್ಷಿಗಳು "ಸ್ಥಿರಸುಖ ಮಾಸನಂ" ಅಂದರೆ ಚಲಿಸದ ಮತ್ತು ಋಜುತ್ವವನ್ನು ಹಾಳುಮಾಡದ, ಸುಖವನ್ನು ಕೊಡುವ ಆಸನವನ್ನು ಹಾಕಿಕೊಳ್ಳಬೇಕೆಂದು ಯೋಗಸೂತ್ರದಲ್ಲಿ ಹೇಳಿರುತ್ತಾರೆ. ಇದೇ ಅಭಿಪ್ರಾಯದಂತೆ ಶ್ರೀಕೃಷ್ಣಪರಮಾತ್ಮನೂ ಭಗವದ್ಗೀತೆಯಲ್ಲಿ ಹೇಳಿರುವುದಲ್ಲದೆ ಶ್ರೀಶಂಕರ ಭಗವತ್ಪಾದರವರೂ ಸಾಧನಾಪಂಚಕ ಶ್ಲೋಕದಲ್ಲಿ "ಏಕಾಂತೇ ಸುಖಮಾಸ್ಯತಾಂ" ಎಂಬದಾಗಿ ಹೇಳಿರುವುದರಿಂದ ಶಾಸ್ತ್ರೋಕ್ತವಾದ ಆಸನಗಳನ್ನು ಅಭ್ಯಾಸಮಾಡ ಬೇಕೆಂಬುದೇ ಸುಖಾಸನವೆಂಬ ವಾಕ್ಯದ ತಾತ್ಪರ್ಯವಾಗಿರುತ್ತದೆ.

ಮೋಕ್ಷಕರ್ಮಕ್ಕೆ ಅನುಕೂಲಿಸುವುದಕ್ಕೆ ಸ್ಥೂಲದೇಹದಲ್ಲಿನ ಪ್ರತಿಬಂಧಕ ನಿವಾರಣೆ ಯಾಗುವಂತಹ, ಆದಿನಾಥನಾದ ಪರಮೇಶ್ವರನಿಂದ ನಿರೂಪಿಸಲ್ಪಟ್ಟು ಋಷಿಪಾರಂಪರ್ಯ ದಿಂದ ಅನುಷ್ಠಿಸಿಕೊಂಡು ಬಂದಿರುವ ಅನೇಕ ಆಸನಗಳನ್ನು ಅಧಿಕಾರಿಗಳ ದೇಹಾನು ಗುಣ್ಯವಾಗಿ ಅಭ್ಯಾಸಮಾಡಿ ದೇಹವನ್ನು ಸ್ವಾಧೀನಕ್ಕೆ ತಂದುಕೊಳ್ಳಬೇಕು. ಆಸನಾ ಭ್ಯಾಸಗಳನ್ನು ಮಾಡಬೇಕಾಗಿರುವ ತತ್ವಕ್ಕೆ ವಾಲಿಸುಗ್ರೀವರಿಗೆ ಬಂದ ಮನಸ್ತಾಪಕ್ಕೆ ಕಾರಣವಾದ, ವಾಲಿ, ದುಂದುಭಿ, ಮಾಯಾವಿಗಳ ಯುದ್ಧದ ವಿಚಾರವನ್ನು ಸ್ವಲ್ಪಮಟ್ಟಿಗೆ ತಿಳಿದುಕೊಳ್ಳೋಣ.

ದುಂದುಭಿಯೆಂದರೆ ನಗಾರಿ. "ದುಂದುಭಿ ಸಮಾನ ಮಧ್ಯಮಂ" ಎಂದು ಹೇಳು ವಂತೆ ಬೊಜ್ಜು ಬೆಳೆದು ನಗಾರಿಯಂತೆ ಹೊಟ್ಟೆ ಸೊಂಟಗಳು ಅತ್ಯಂತ ದಪ್ಪವಾಗಿರುವ ವರಿಗೆ ದುಂದುಭಿರಾಕ್ಷಸತ್ವವು ಅನ್ವಯವಾಗುತ್ತದೆ. ಈ ರೀತಿಯಾಗಿ ನಗಾರಿಯಂತೆ ಬೆಳೆದಿರುವ ಬೊಜ್ಜು ಜಡಸ್ವರೂಪವೇ ಹೊರತು ಚೈತನ್ಯಸ್ವರೂಪವಾದುದಲ್ಲ. ಇದರಿಂದ ಖಚಿತವಾದ ದೇಹಕ್ಕೆ ಕೊಂಚವೂ ಪ್ರಯೋಜನವಿರುವುದಿಲ್ಲ, ಕೊಳೆತ ಕುಂಬಳ

ಕಾಯಿಯು ಮೇಲೆ ನೋಡುವುದಕ್ಕೆ ಚೆನ್ನಾಗಿದ್ದರೂ ಒಳಗೆ ಸಾರವಿರುವುದಿಲ್ಲ. ಇಂತಹ ಬೊಜ್ಜು ಜಡಸ್ವಭಾವದ್ದೆಂದು ಸೂಚಿಸುವ ತಾತ್ಪರ್ಯಕ್ಕೆ ಮಹಿಷರೂಪನಾದ ದುಂದುಭಿ ಯೆಂದು ಹೆಸರು ಬಂದಿರುತ್ತದೆ. ಈ ಜಡಸ್ವರೂಪವಾದ ಬೊಜ್ಜು ಮುಖದಲ್ಲಿಯೂ ವ್ಯಾಪಿಸಬಹುದಾದ ತತ್ವವೇ ದುಂದುಭಿಯು ಗಿರಿರಾಜನಲ್ಲಿ ಯುದ್ಧಕ್ಕೆ ಹೋದುದಾಗಿರುತ್ತದೆ. ಈ ಜಡಸ್ವರೂಪವಾದ ಬೊಜ್ಜು ಮತಂಗಾಶ್ರಮದ ತತ್ವದಲ್ಲಿರುವ ಪಿತ್ತ ಕೋಶಕ್ಕೆ ವ್ಯಾಪಿಸಿದರೆ, ಗುಲ್ಮ, ಶೋಭೆ ಮುಂತಾದ ರೋಗಗಳು ಉತ್ಪತ್ತಿಯಾಗುವ ತತ್ವವೇ ದುಂದುಭಿಯು ಮತಂಗಾಶ್ರಮದಲ್ಲಿ ಬಿದ್ದುದಾಗಿರುತ್ತದೆ.

ಈ ದುಂದುಭಿವಾಲಿಗಳ ವೈಷಮ್ಯದ ಮುಖ್ಯತತ್ವಗಳು ಬೊಜ್ಜುದೇಹಸ್ವರೂಪ ಮತ್ತು ಇದರಿಂದ ದೇಹಕ್ಕುಂಟಾಗುವ ರೋಗಗಳ ವಿಚಾರಗಳಾಗಿರುತ್ತವೆ. ಈ ರೀತಿ ಯಿರುವುದು ಯೋಗಾನುಷ್ಠಾನಕ್ಕೆ ಪ್ರತಿಬಂಧಕವೆಂಬ ಮತ್ತು ಶಾಸ್ತ್ರೋಕ್ತವಾದ ಆಸನ ಗಳ ಅಭ್ಯಾಸದಿಂದ ನಿವೃತ್ತಿಯಾಗುವುದೆಂಬ ತಾತ್ಪರ್ಯವಾಗಿರುತ್ತೆ. ದುಂದುಭಿ ಸಮಾನ ವಾದ ಹೊಟ್ಟೆಯು ಹೋಗಿ, ಮೃಗರಾಜಮಧ್ಯದಂತೆ ಯೋಗಾನುಷ್ಠಾನದ ಅಧಿಕಾರಿಯ ಹೊಟ್ಟೆಯು ಬರಬೇಕು. ಅಲ್ಲದೆ “ವಪುಃ ಕೃಶತ್ವಂ ವದನೇ ಪ್ರಸನ್ನತಾ” ಮುಂತಾದ ಶ್ರುತಿವಾಕ್ಯಗಳಂತೆ ದೇಹವು ಬೊಜ್ಜಿಲ್ಲದೆ ಖಚಿತವಾಗಿರಬೇಕೆಂಬ ತಾತ್ಪರ್ಯವಾಗಿರುತ್ತದೆ.

**ರಾ||** ದುಂದುಭಿಯ ಮಗನಾದ ಮಾಯಾವಿಗೂ ವಾಲಿಗೂ ಯುದ್ಧ ನಡೆಯುತ್ತಿರುವಲ್ಲಿ ಮಾಯಾವಿಯು ಮೇಲೆ ಹುಲ್ಲು ಮುಚ್ಚಿದ್ದ ಒಂದು ಮಹಾಬಿಲಕ್ಕೆ ಅತಿವೇಗದಿಂದ ಪ್ರವೇಶಿಸಿಬಿಟ್ಟನು. ಅವನನ್ನು ಬೆನ್ನಟ್ಟಿ ಹೋಗಿ ವಾಲಿಯೂ ಆ ಬಿಲದೊಳಕ್ಕೆ ಪ್ರವೇಶಿಸಿಬಿಟ್ಟನು. ಬಹಳ ಕಾಲವಾದರೂ ವಾಲಿಯು ಬರಲಿಲ್ಲವಾಗಿ ಸುಗ್ರೀವನು ವಾಲಿಯು ಹತನಾದನೆಂದು ಆ ಬಿಲದ್ವಾರವನ್ನು ಗಟ್ಟಿಯಾಗಿ ಮುಚ್ಚಿಬಂದನು.

**ತತ್ವ||** ದುಂದುಭಿಯೇ ದೇಹದಲ್ಲಿರುವ ಬೊಜ್ಜುಸ್ವರೂಪವೆಂದು ಮೇಲೆ ತಿಳಿಸಿತಷ್ಟೆ! ಈ ಬೊಜ್ಜುಸ್ವರೂಪದ ಮಗನಾದ ಮಾಯಾವಿಯು ವಾಯುಪ್ರಕೋಪದ ತತ್ವದವನು. ವಾಯುಪ್ರಕೋಪವೆಂದರೆ—ಅಪಾನ ಸಡಲುವುದೆಂಬ ತಾತ್ಪರ್ಯ. ವಾಯುಪ್ರಕೋಪ ವಾಗಿ ಅಪಾನ ಸಡಲಿದಲ್ಲಿ ಅಪಾನವಾಯುವೂ ವಾಯುಪ್ರಕೋಪವನ್ನು ಬೆನ್ನಟ್ಟಿ ಬರುವುದೇ ಮಾಯಾವಿಯೊಡನೆ ವಾಲಿಯು ಬಿಲಪ್ರವೇಶಮಾಡಿದುದರ ತತ್ವವಾಗಿದೆ. ಈ ವಾಯುಪ್ರಕೋಪದಿಂದ ಅಜೀರ್ಣ, ಮಲಬದ್ಧತೆ, ಆಮಶಂಕೆ ಮೊದಲಾದ ರೋಗಗಳುಂಟಾಗುವುದೇ ಸುಗ್ರೀವನು ಬಿಲವನ್ನು ಕಲ್ಲುಗುಂಡುಗಳಿಂದ ಮುಚ್ಚಿದ ತಾತ್ಪರ್ಯವಾಗಿದೆ.

ಈ ರೀತಿ ವಾಲಿ ಮಾಯಾವಿಗಳ ದ್ವಂದ್ವಯುದ್ಧದ ತತ್ವವಾದ ವಾಯುಪ್ರಕೋಪ ವುಳ್ಳವರಿಗುಂಟಾಗುವ ಫಲಿತಾರ್ಥವೇನೆಂದರೆ—ಮಲಬದ್ಧತೆ ಆಮಶಂಕೆ ಮುಂತಾದ ರೋಗ

ಗಳೂ, ಪ್ರಾಣವಾಯುವನ್ನು ಅಧೋಮುಖಕ್ಕೆಳೆಯುವುದರಿಂದ ಅಜೀರ್ಣರೋಗ ಗಳೂ ಉಂಟಾಗಿ ಅವರವರ ಯೋಗ್ಯತಾನುಸಾರವಾಗಿ ಅನುಭವಿಸುತ್ತಾರೆ. ಅಲ್ಲದೆ ಈ ಅಪಾನವಾಯುವೇ ವೃದ್ಧಾಪ್ಯದಲ್ಲಿ ಮನುಷ್ಯನನ್ನು ಬಗ್ಗಿಸಿಬಿಡುತ್ತದೆ. ಮುಖ್ಯವಾಗಿ ದುಂದುಭಿ ಮಾಯಾವಿಗಳ ಮತ್ತು ವಾಲಿಯ ಯುದ್ಧಸ್ವರೂಪಗಳಾದ ರೋಗಾದಿಗಳು ನಮ್ಮ ದೇಹದಲ್ಲುಂಟಾದರೂ ಇವನ್ನು ಪರಿಹಾರ ಮಾಡಿಕೊಳ್ಳಬಹುದಾದ ಆಸನಾ ಭ್ಯಾಸಗಳಿವೆ, ಇವುಗಳನ್ನು ಗುರುಮುಖೇನ ತಿಳಿದು ಅಭ್ಯಾಸಮಾಡಿದರೆ ರೋಗಗಳು ನಿವೃತ್ತಿಯಾಗುವುವೆಂಬ ತಾತ್ಪರ್ಯವಾಗಿರುತ್ತದೆ. ರೋಗಗಳು ನಿವಾರಣೆಯಾಗಲು ಅನೇಕ ಆಸನಗಳ ಮತ್ತು ಮುದ್ರೆಗಳ ವಿಚಾರಗಳು ಶ್ರುತಿ ಮೊದಲುಗೊಂಡು ಅನೇಕ ಶಾಸ್ತ್ರಗಳಲ್ಲಿ ವಿವರಿಸಲ್ಪಟ್ಟಿವೆ.

**ರಾ||** ಶ್ರೀರಾಮನು ಸುಗ್ರೀವನೊಡಗೂಡಿ ವಾಲಿಯನ್ನು ಸಂಹರಿಸುವುದಕ್ಕೆ ಹೋಗುತ್ತಿದ್ದಾಗ ದಾರಿಯಲ್ಲಿ ನೀರಿನಲ್ಲೇ ಮುಳುಗುವವರಾಗಿ ಸಪ್ತಜನರೆಂದು ಹೆಸರು ಪಡೆದಿರುವ ಋಷಿಗಳ ಆಶ್ರಮವನ್ನು ಕಂಡನು. ಆಗ ಸುಗ್ರೀವನು ಶ್ರೀರಾಮಲಕ್ಷ್ಮಣ ರನ್ನು ಕುರಿತು ಈ ಮಹಾತ್ಮರಾದ ಋಷಿಗಳನ್ನು ಉದ್ದೇಶಿಸಿ ಭಕ್ತಿಯಿಂದ ನಮಸ್ಕರಿಸಿ ರೆಂದು ಹೇಳಿದನು. ಅಲ್ಲದೆ ಈ ಮುನಿಗಳನ್ನುದ್ದೇಶಿಸಿ ಯಾರು ನಮಸ್ಕರಿಸುವರೋ ಅವರಿಗೆ ದೇಹದಲ್ಲಿ ಯಾವ ಅಶುಭವೂ ಉಂಟಾಗಲಾರದೆಂದು ಹೇಳಲು ಶ್ರೀರಾಮ ಲಕ್ಷ್ಮಣರು ಆ ಮುನಿಗಳನ್ನುದ್ದೇಶಿಸಿ ನಮಸ್ಕರಿಸಿದರು.

**ತತ್ವ||** ಸಪ್ತಜನರೆಂಬ ಹೆಸರುಳ್ಳ ಮಹರ್ಷಿಗಳ ಆಶ್ರಮವೆಂದರೆ--ದೇಹದಲ್ಲಿರುವ ಸಪ್ತಧಾತುಗಳು ಸೇರುವ ವೀರ್ಯವಿರುವ ಸ್ಥಳವೆಂಬ ತತ್ವಾರ್ಥವಾಗಿರುತ್ತದೆ. ಈ ವೀರ್ಯ ವನ್ನು ಅನ್ಯಾಯವಾಗಿ ಕಳೆಯದೆ ಯಾರು ಸಂರಕ್ಷಿಸಿಕೊಂಡಿರುತ್ತಾರೋ ಅವರಿಗೆ ದೇಹದಲ್ಲಿ ಯಾವ ಅಶುಭವೂ ಉಂಟಾಗುವುದಿಲ್ಲವೆಂಬ ತತ್ವವೇ ಸಪ್ತಜನರೆಂಬ ಹೆಸರುಳ್ಳ ಮಹರ್ಷಿಗಳನ್ನುದ್ದೇಶಿಸಿ ನಮಸ್ಕರಿಸಿದವರಿಗೆ ದೇಹದಲ್ಲಿ ಎಂದಿಗೂ ಅಶುಭ ಉಂಟಾಗದೇ ಇರುವ ತತ್ವವಾಗಿರುವುದು. "ತೇಜೋಬಲಂ ವೀರ್ಯಬಲಂ" ಎಂಬದಾಗಿ ಹೇಳಿರುವಂತೆ ವೀರ್ಯಬಲವು ಸರ್ವೋತ್ಕೃಷ್ಟವಾದುದೆಂಬ ತತ್ವವನ್ನನುಸರಿಸಿ ಶ್ರೀರಾಮ ಲಕ್ಷ್ಮಣರು ಅದಕ್ಕೆ ನಮಸ್ಕಾರಮಾಡಿರುತ್ತಾರೆ. ಬುದ್ಧಿಮನಸ್ತತ್ವದಲ್ಲಿರುವ ಶ್ರೀರಾಮ ಲಕ್ಷ್ಮಣರಿಂದಲೂ ನಮಸ್ಕಾರಯೋಗ್ಯವೆಂದರೆ-ಸ್ಥೂಲದೇಹಕ್ಕಲ್ಲದೆ ಬುದ್ಧಿಮನಸ್ಸುಗಳಿಗೂ ವೀರ್ಯಬಲವು ಅತ್ಯಂತ ಶ್ರೇಷ್ಠವಾದುದೆಂಬ ತತ್ವವನ್ನು ಸೂಚಿಸುತ್ತದೆ. ಆದುದರಿಂದ ಯೋಗಾನುಷ್ಠಾನಪರರು ವೀರ್ಯಬಲವನ್ನು ಚೆನ್ನಾಗಿ ಕಾಪಾಡಿಕೊಳ್ಳಬೇಕು.

**ರಾ||** ಶ್ರೀರಾಮನು ವಾಲಿಯನ್ನು ನಿಗ್ರಹಿಸಿ ಅವನ ಮಗನಾದ ಅಂಗದನಿಗೆ ಯೌವರಾಜ್ಯಾಭಿಷೇಕವನ್ನು ಮಾಡಿದನು.

**ತತ್ವ॥** ವಾಲಿಯೇ ಅಪಾನವಾಯುವೆಂದೂ, ಸುಗ್ರೀವನೇ ಪ್ರಾಣವಾಯುಸ್ವರೂಪನೆಂದೂ ತಿಳಿಸಿರುತ್ತಷ್ಟೆ! ಅಪಾನವಾಯುವು ನಿಶ್ವಾಸವನ್ನುಂಟುಮಾಡುತ್ತದೆ. ಪ್ರಾಣವಾಯುವು ಉಚ್ಛ್ವಾಸವನ್ನುಂಟುಮಾಡುತ್ತದೆ. ಉಚ್ಛ್ವಾಸದಲ್ಲಿ ನಿಶ್ವಾಸವನ್ನು ಸೇರಿಸಬೇಕೆಂದು "ಪ್ರಾಣೇ ಅಪಾನಂ ಜುಹೋಮಿ" ಎಂಬದಾಗಿ ಶ್ರುತಿಯು ತಿಳಿಸುವುದಲ್ಲದೆ ಶ್ರೀಕೃಷ್ಣಪರಮಾತ್ಮನೂ ಭಗವದ್ಗೀತೆಯಲ್ಲಿ ಹೇಳಿರುವನು. ಹೀಗೆ ಸೇರಿಸುವುದರಿಂದ ಉಸಿರಿನ ಗುಡುಕು ತಗ್ಗಿ ಕುಂಭಕದಲ್ಲಿ ನಿಲ್ಲುವುದು. ಅಧೋಮುಖವಾಗಿರುವ ಅಪಾನವಾಯುವು ಊರ್ಧ್ವಮುಖವಾಗಿ ಪ್ರಾಣವಾಯುವಿನ ಜೊತೆಯಲ್ಲಿ ಸೇರಿ ಬ್ರಹ್ಮರಂಧ್ರದ ಮಾರ್ಗವಾಗಿ ಸಹಸ್ರಾರಕಮಲದಲ್ಲಿ ಲೀನವಾಗಬೇಕು. ಆದುದರಿಂದ ಪ್ರಾಣವಾಯುವಿಗೆ ಅಪಾನವಾಯುವು ಅಧೀನವಾಗಬೇಕಾಗಿದೆ. ಅಂದರೆ ಶುದ್ಧ ಪ್ರಪಂಚವ್ಯವಹಾರವಾದ ದೇಹವ್ಯಾಪಾರದಲ್ಲಿ ಅಪಾನವಾಯುವು ಅಧೋಮುಖಕ್ಕೆಳೆಯುತ್ತಲೇ ಇರುತ್ತದೆ. ಪ್ರಪಂಚವ್ಯವಹಾರ ಮತ್ತು ಮೋಕ್ಷಗಳೆರಡೂ ವಿರುದ್ಧವಾದ್ದರಿಂದಲೂ, ವಿರಕ್ತನವರೆಗೂ ಅಪಾನವಾಯುವು ಊರ್ಧ್ವಮುಖವಾಗಬೇಕಾಗಿರುವುದರಿಂದಲೂ, ಮೋಕ್ಷಮಾರ್ಗಿಗಳಿಗೆ ಮೇಲ್ಮುಖವಾಗಿ ಬೀಸಬೇಕಾಗಿರುತ್ತದೆ. ಮೋಕ್ಷಮಾರ್ಗದಲ್ಲಿರುವವರೆಂದರೆ, ದೇಹದಲ್ಲಿರುವ ಮೂಲಾಧಾರ ಮೊದಲಾದ ಚಕ್ರಗಳನ್ನು ಭೇದನೆಮಾಡಿಕೊಂಡು ಸಹಸ್ರಾರಕಮಲದಲ್ಲಿರುವ ಪರಮಾತ್ಮನಲ್ಲಿ ಲೀನವಾಗುವ ಶಕ್ತಿಯು ಯಾರಿಗಿದೆಯೋ ಅಂಥವರೇ ಅಪಾನವಾಯುವನ್ನು ಜಯಿಸಲು ಯೋಗ್ಯತೆಯುಳ್ಳವರು. ಈ ತತ್ವಾರ್ಥದ ಸೂಚನೆಯೇ ಶ್ರೀರಾಮನು ಸಪ್ತಸಾಲಗಳನ್ನು ಭೇದಿಸಿದ್ದಾಗಿದೆ. ಅಂದರೆ ದೇಹದಲ್ಲಿರುವ ಮೂಲಾಧಾರ ಮೊದಲಾದ ಚಕ್ರಭೇದನೆಯಾಗಿ ಬ್ರಹ್ಮಸಾಕ್ಷಾತ್ಕಾರ ಮಾಡಿಕೊಳ್ಳಲು ಯೋಗ್ಯತೆ ಇದ್ದವರೇ ಅಧೋಮುಖವಾಗಿರುವ ಅಪಾನವಾಯುವನ್ನು ಊರ್ಧ್ವಮುಖವಾಗಿ ಮಾಡಬಲ್ಲರಲ್ಲದೆ ಇತರರಿಂದ ಸಾಧ್ಯವೇ ಇಲ್ಲವೆಂಬ ತತ್ವಾರ್ಥವೇ ಸಪ್ತಸಾಲಗಳನ್ನು ಭೇದಿಸಲು ಯೋಗ್ಯತೆ ಇದ್ದವರೇ ವಾಲಿಯನ್ನು ನಿಗ್ರಹಿಸಬಲ್ಲರೆಂಬುದಾಗಿದೆ.

ಆದುದರಿಂದ ಪ್ರಾಣವಾಯುವಿಗೆ ಅಪಾನವಾಯುವು ಅಧೀನವಾಗಿರಬೇಕು ಹೇಗೆಂದರೆ, ಕಮ್ಮಾರನು ಕಬ್ಬಿಣ ಮುಂತಾದುವನ್ನು ಕಾಯಿಸುವುದಕ್ಕೆ ಒಂದು ಅಗ್ಗಿಷ್ಟಿಕೆಯಲ್ಲಿ ಕೆಂಡವಿಟ್ಟುಕೊಂಡು, ಆ ಅಗ್ಗಿಷ್ಟಿಕೆಯ ಕೆಳಗಡೆಯಿಂದ ಒಂದು ತಿದಿಯ ಮೂಲಕ ಅಗ್ನಿಪ್ರಜ್ವಲನೆ ಮಾಡುತ್ತಾನಷ್ಟೆ! ಸಾಧಾರಣದ ಅಡಿಗೆ ಒಲೆಗಳಿಗಿಂತಲೂ ಈ ಅಗ್ನಿಜ್ವಾಲೆಯು ಅಧಿಕವಾಗಿರುತ್ತದೆ. ಇದೇರೀತಿ ನಮ್ಮ ಗುದದ ಭಾಗದಲ್ಲಿರತಕ್ಕ ಅಪಾನವಾಯುವು ತಿದಿಯೊತ್ತಿದಂತೆ ಮೇಲಕ್ಕೆ ಬೀಸುತ್ತಿರಬೇಕು. ಅಧೋಗತಿಯಾಗಿರುವ ಅಪಾನವಾಯುವನ್ನು ಊರ್ಧ್ವಮುಖವಾಗಿ ಮಾಡಬೇಕೆಂದು ಯೋಗಕುಂಡಲ್ಯುಪನಿಷತ್ ಮುಂತಾದ ಉಪನಿಷತ್ತುಗಳಲ್ಲಿ,

' ಅಧೋಗತಿ ಮಪಾನ ಮೂರ್ಧ್ವಂ ಕುರುತೇ ಬಲಾತ್ |

ತಾ|| ಅಧೋಗತಿಯಾಗಿರುವ ಅಪಾನವಾಯುವನ್ನು ಬಲವಂತದಿಂದ ಊರ್ಧ್ವ ಗತಿಮಾಡಬೇಕು ಎಂದು ಹೇಳಿರುವುದು.

ಆರೋಗ್ಯವಂತರಾಗಿದ್ದರೂ ಯೋಗಕ್ಕೆ ಪ್ರಾರಂಭಮಾಡುವವರು ಅಪಾನವಾಯುವನ್ನು ಊರ್ಧ್ವಮುಖ ಮಾಡಿಕೊಳ್ಳಬೇಕಾಗಿರುವುದರಿಂದ ಖಂಡಿತವಾಗಿಯೂ ಲೋಲಾಸನ, ಪಶ್ಚಿಮತಾನಾಸನ, ಅಗಸ್ತ್ಯಾಸನ, ಗೋಮುಖಾಸನಗಳನ್ನು, ಸಿದ್ಧಾಸನ, ಪದ್ಮಾಸನಗಳೊಂದಿಗೆ ಅಭ್ಯಾಸಮಾಡಬೇಕು. ಆದುದರಿಂದ ಅಪಾನವಾಯುವನ್ನು ಪ್ರಾಣವಾಯುವಿನ ಅಧೀನದಲ್ಲಿ ಖಂಡಿತವಾಗಿ ಇಟ್ಟುಕೊಳ್ಳಬೇಕಾಗಿರುವ ತತ್ವವೇ ಶ್ರೀರಾಮನು ವಾಲಿಯನ್ನು ನಿಗ್ರಹಿಸಿ ಸುಗ್ರೀವನಿಗೆ ಪಟ್ಟವನ್ನೂ ಅಂಗದನಿಗೆ ಯೌವರಾಜ್ಯಾಭಿಷೇಕವನ್ನೂ ಮಾಡಿದುದಾಗಿರುತ್ತದೆ. ಅಂಗದನಿಗೆ ಯೌವರಾಜ್ಯಾಭಿಷೇಕವನ್ನು ಮಾಡಿದುದರ ಮುಖ್ಯ ಸಾರಾಂಶವೇನೆಂದರೆ—ಅಪಾನವಾಯುವು ಅಧೋಮುಖಕ್ಕೆ ಬೀಸುವಾಗ ವಾಲಿ ಎನಿಸಿಕೊಳ್ಳುತ್ತದೆ. ಊರ್ಧ್ವಮುಖಕ್ಕೆ ಬೀಸುವಾಗ ಅಂಗದನೆನಿಸಿಕೊಳ್ಳುತ್ತದೆ. ಆದುದರಿಂದ ಶ್ರೀರಾಮನು ವಾಲಿಯನ್ನು ನಿಗ್ರಹಿಸಿ ಅಂಗದನಿಗೆ ಯೌವರಾಜ್ಯಾಭಿಷೇಕವನ್ನು ಮಾಡಿದನೆಂದರೆ ಅಪಾನವಾಯುವಿನ ಕಾರ್ಯವನ್ನು ಊರ್ಧ್ವಮುಖವಾಗಿ ಬೀಸುವಂತೆ ಮಾಡಿದನಲ್ಲದೆ ಅಪಾನವಾಯುವನ್ನೇ ಹಾಳುಮಾಡಲಿಲ್ಲವೆಂಬ ತತ್ವವಾಗಿರುತ್ತದೆ. ಮುಂದಿನ ರಾಮಾಯಣ ಕಥೆಯಲ್ಲೆಲ್ಲ ಅಂಗದನ ಕಾರ್ಯವಾಗಿರುತ್ತೆಂದರೆ—ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿಗಳ ಕಾರ್ಯಗಳಲ್ಲಿ ಅಪಾನವಾಯುವು ಊರ್ಧ್ವಮುಖವಾಗಿಯೇ ಇರುವುದೆಂಬ ತಾತ್ಪರ್ಯ.

**ರಾ||** ವಾಲಿ ಸುಗ್ರೀವರಿಗಾದ ಪ್ರಥಮ ಯುದ್ಧದಲ್ಲಿ ಸುಗ್ರೀವನಿಗೆ ಅಪಜಯವಾಯಿತು. ಎರಡನೆಯ ಯುದ್ಧದಲ್ಲಿ ಶ್ರೀರಾಮನು ಬಾಣಪ್ರಯೋಗಮಾಡಿ ವಾಲಿಯನ್ನು ನಿಗ್ರಹಿಸಿದನು.

**ತತ್ವ||** ವಾಲಿಯು ಅಪಾನವಾಯುತತ್ವದವನು. ಶ್ರೀರಾಮನು ಬುದ್ಧಿತತ್ವಸ್ವರೂಪನು. ಬುದ್ಧಿಯ ಕಾರ್ಯದಲ್ಲಿ ಎರಡು ವಿಭಾಗಗಳು. ಒಂದನೆಯದು ವಿವೇಚನಾಶಕ್ತಿ. ಎರಡನೆಯದು ಯಾವುದಾದರೂ ವಸ್ತುವಿನ ಆಕಾರವಾಗುವ ಜ್ಞಾನ. ಆಸನಾಭ್ಯಾಸ ಕಾಲದಲ್ಲಿ ಪ್ರಾಣಾಪಾನಗಳು ಯುದ್ಧಮಾಡುತ್ತಿರುತ್ತವೆ. ಯಾವ ವಿಧವಾದ ಯುದ್ಧವೆಂದರೆ ಪ್ರಾಣವಾಯುವು ಅಪಾನವಾಯುವನ್ನು ಮೇಲಕ್ಕೆಳೆದುಕೊಂಡು ತನ್ನಧೀನದಲ್ಲಿ ಇಟ್ಟುಕೊಳ್ಳುವ ವಿಧವಾದ ಯುದ್ಧ. ಈ ಆಸನಾಭ್ಯಾಸಗಳಲ್ಲಿ ಉಂಟಾಗುವ ಪ್ರಾಣಾಪಾನವಾಯುಗಳ ಕಲಹದಲ್ಲಿ ಶ್ರೀರಾಮನ ಬಾಣದಿಂದ ಎಂದರೆ, ಬುದ್ಧಿಯ

ವಿವೇಚನಾಶಕ್ತಿಯಿಂದ ಅಪಾನವಾಯುವನ್ನು ನಿರೋಧಿಸಿ ಪ್ರಾಣವಾಯುವಿಗೆ ಪ್ರಾಶಸ್ತ್ಯ ಕೊಟ್ಟನು. ಅಂದರೆ ಮೋಕ್ಷಾಧಿಕಾರಿಯು ಗುರುಮುಖೇನ ತಿಳಿದುಕೊಂಡು ತನ್ನ ವಿವೇಚನಾಶಕ್ತಿಯಿಂದ ಅಧೋಮುಖವಾಗಿರುವ ಅಪಾನವಾಯುವು ಊರ್ಧ್ವಮುಖವಾಗುವಂತಹ ಆಸನಾಭ್ಯಾಸಗಳನ್ನು ಅನುಷ್ಠಾನಮಾಡಿದನೆಂಬ ತತ್ವವಾಗಿದೆ.

ವಾಲಿ ಸುಗ್ರೀವರ ಯುದ್ಧದ ತತ್ವವು ಆಸನಾಭ್ಯಾಸದಲ್ಲಿ ಉಂಟಾಗುತ್ತಷ್ಟೆ! ಈ ಆಸನಾಭ್ಯಾಸದ ಪ್ರಥಮದಲ್ಲಿ ಆಯಾಸವು ಹೆಚ್ಚಾಗಿರುವುದಲ್ಲದೆ ಆಸನಾಭ್ಯಾಸವು ಸ್ಥಿಮಿತಕ್ಕೆ ಬರುವ ಪರ್ಯಂತರ ಇಂಥಾದ್ದೇ ಅಪಾನವಾಯುವೆಂದೂ, ಇಂಥಾದ್ದೇ ಪ್ರಾಣವಾಯುವೆಂದೂ, ಅಧಿಕಾರಿಯು ವಿವೇಚನೆಮಾಡಿ ತಿಳಿದುಕೊಳ್ಳಲಾರನು. ಆದುದರಿಂದ ವಾಲಿ ಸುಗ್ರೀವರ ಪ್ರಥಮ ಯುದ್ಧದಲ್ಲಿ ಶ್ರೀರಾಮನು ವಾಲಿ ಸುಗ್ರೀವರನ್ನು ಬೇರ್ಪಡಿಸಿ ತಿಳಿಯದೆ ಇದ್ದುದರಿಂದ ಸುಗ್ರೀವನಿಗೆ ಅಪಜಯವಾಯಿತು. ಎರಡನೆಯ ಯುದ್ಧವೆಂದರೆ ಆಸನಾಭ್ಯಾಸದ ಪರಿಪಕ್ವಾವಸ್ಥೆಯುಂಟಾಗುತ್ತ ಬಂದಲ್ಲಿ ಅಧಿಕಾರಿಯು ಪ್ರಾಣಾಪಾನಸ್ವರೂಪಗಳನ್ನು ತಿಳಿದುಕೊಳ್ಳುತ್ತ ಬರುತ್ತಾನೆ. ಇಂತಹ ಕಾಲದಲ್ಲಿ ವಿವೇಚನಾಶಕ್ತಿಯಿಂದ ಆಸನಾಭ್ಯಾಸವು ದೃಢವಾಗಿ ಅಪಾನವಾಯುವಿನ ಕಾರ್ಯವು ಊರ್ಧ್ವಮುಖವಾಗುವುದೇ ಶ್ರೀರಾಮನು ವಾಲಿಯನ್ನು ನಿಗ್ರಹಿಸಿದ್ದಾಗಿರುತ್ತದೆ.

ವಾಲಿ ಸುಗ್ರೀವರು ಸ್ನೇಹಭಾವದಲ್ಲಿದ್ದರಷ್ಟೆ! ಇದರಂತೆ ಸಾಧಾರಣವಾಗಿ ಆರೋಗ್ಯವಾಗಿರುವ ಮನುಷ್ಯರಲ್ಲಿ ಪ್ರಾಣಾಪಾನಗಳೆರಡೂ ಸಮಭಾವದಲ್ಲಿರುವುವು. ವಾಲಿಯು ಸುಗ್ರೀವನನ್ನು ಓಡಿಸಿ ಅವನ ಹೆಂಡತಿಯಾದ ರುಮೆಯನ್ನು ತಾನೇ ಅನುಭವಿಸುತ್ತಿದ್ದನೆಂದರೆ, ಅಪಾನ ವಾಯುವಿನ ವೇಗವೇ ಅಧಿಕವಾಗಿ ಪ್ರಾಣವಾಯುವಿಗಿದ್ದ ಸೌಖ್ಯವನ್ನು ಅಪಹರಿಸಿತ್ತೆಂಬ ತತ್ವವಾಗಿರುವುದು. ಆದುದರಿಂದ ವಾಲಿಯು ದೋಷಿಯಾಗಿರುವನು. ಇಂತಹ ಅಪರಾಧಿಯನ್ನು ಶಿಕ್ಷಿಸುವುದು ರಾಜನ ಧರ್ಮ. ಈಗ ಭರತನ ರಾಜ್ಯಭಾರವಾಗಿರುವುದು. ಭರತನ ರಾಜ್ಯಭಾರದ ತತ್ವವು ಶುದ್ಧ ಮೋಕ್ಷಮಾರ್ಗದ ತತ್ವವಾಗಿರುವುದಷ್ಟೆ! ಇಂತಹ ಮೋಕ್ಷಮಾರ್ಗದ ರಾಜ್ಯಧರ್ಮದ ಪರಿಪಾಲನೆಯ ತತ್ವಕ್ಕೆ ಅಪರಾಧಿಯನ್ನು ನಿಗ್ರಹಿಸುವುದು ಧರ್ಮವಾಗಿರುವುದರಿಂದ ಅಪಾನವಾಯುವಿಗೆ ಪ್ರಾಶಸ್ತ್ಯವನ್ನು ತಪ್ಪಿಸಿ ಪ್ರಾಣವಾಯುವಿಗೆ ಪ್ರಾಶಸ್ತ್ಯಕೊಟ್ಟ ತತ್ವವಾಗಿರುವುದು.

ಮುಖ್ಯತಾತ್ಪರ್ಯವೇನೆಂದರೆ—ಅಧಿಕಾರಿಯು ಗುರುಮುಖೇನ ತಿಳಿದು ತನ್ನ ವಿವೇಚನಾಶಕ್ತಿಯಿಂದ ಮೋಕ್ಷಮಾರ್ಗಕ್ಕೆ ಸಹಕಾರಿಯಾಗುವಂತೆ ಪ್ರಾಣಾಪಾನಗಳನ್ನು ಯಾವ ವಿಧದಲ್ಲಿಟ್ಟುಕೊಳ್ಳಬೇಕೋ ಅದರಂತೆ ಆಸನಾಭ್ಯಾಸಗಳನ್ನು ಮಾಡಿದನೆಂಬ ತತ್ವವೇ

ಶ್ರೀರಾಮನು ವಾಲಿಯನ್ನು ನಿಗ್ರಹಿಸಿದ್ದಾಗಿರುತ್ತದೆ. ಶ್ರೀರಾಮನು ಸುಗ್ರೀವನ ಹಿಂದೆ ನಿಂತು ಬಾಣಪ್ರಯೋಗಮಾಡಿದನೆಂಬ ಅಪಖ್ಯಾತಿಯು ಶ್ರೀರಾಮಚಂದ್ರನಿಗೆ ಸಲ್ಲದು. ಕಾರಣ ವೇನೆಂದರೆ, ಬುದ್ಧಿತತ್ವವು ಅಪಾನವಾಯುವನ್ನು ನಿಗ್ರಹಿಸುವಂತಹ ಆಸನ ವಿಧಾನಗಳನ್ನು ವಿವೇಚನೆಮಾಡಿ ತಿಳಿದುಕೊಂಡಾಕ್ಷಣವೇ ಆಸನಾಭ್ಯಾಸದ ಕಾರ್ಯವುಂಟಾಗಿ ಅಪಾನ ವಾಯು ನಿಗ್ರಹವಾಗುವುದಿಲ್ಲ. ವಿವೇಚನೆ ಮತ್ತು ಕಾರ್ಯಗಳೆರಡೂ ಜೊತೆಯಲ್ಲಿಯೇ ಇರಬೇಕು. ಆದರೆ ಆಸನಾಭ್ಯಾಸವನ್ನು ಮುಂದುಮಾಡಿಕೊಂಡು ವಿವೇಚನಾಶಕ್ತಿಯು ಅಪಾನವಾಯುವನ್ನು ತಿಳಿದು ಅದನ್ನು ನಿಗ್ರಹಿಸುವುದಾದಕಾರಣ ಸುಗ್ರೀವನ ಹಿಂದೆ ಶ್ರೀರಾಮನು ನಿಂತು ವಾಲಿಯನ್ನು ನಿಗ್ರಹಿಸಿದುದರ ತತ್ವಾರ್ಥವಾಗಿರುವುದು. ಈ ತತ್ವಾರ್ಥವನ್ನು ಅನುಸರಿಸಿಯೇ ಸುಗ್ರೀವ ವಾಲಿಗಳ ಯುದ್ಧಸ್ವರೂಪವಾದ ಕಾರ್ಯ ಮತ್ತು ವಾಲಿಯು ನಿಗ್ರಹವಾಗುವಂತಹ ಆಸನಾಭ್ಯಾಸದ ವಿವೇಚನೆಗಳೆರಡೂ ಅವಶ್ಯಕವಾಗಿರು ವುದರಿಂದ ವಾಲಿ ಸುಗ್ರೀವರು ಯುದ್ಧಮಾಡುತ್ತಿದ್ದಾಗ ಶ್ರೀರಾಮನು ವಾಲಿಯನ್ನು ನಿಗ್ರಹಿಸಿದ್ದಾಗಿದೆ.

ಮುಖ್ಯವಾಗಿ ಅಪಾನವಾಯು ತತ್ವದಿಂದ ನಾವುಗಳು ತಿಳಿದುಕೊಳ್ಳಬೇಕಾದು ದೇನೆಂದರೆ—ಪ್ರಥಮದಲ್ಲಿ ಋಜುವಾಗಿ ಕುಳಿತುಕೊಳ್ಳುವುದನ್ನು ಕಲಿಯಬೇಕು. ಇದರಿಂದ ಬಹಳಮಟ್ಟಿಗೆ ಆರೋಗ್ಯಕರವಾಗಿರುವುದರಿಂದಲೇ ಮೋಕ್ಷಮಾರ್ಗಿಗಳಲ್ಲದವರು ಕೂಡ ಋಜುವಾದ ಆಸನದಲ್ಲಿ ಕುಳಿತುಕೊಳ್ಳಬೇಕೆಂದು ಪೂರ್ವದಿಂದಲೂ ವಿಧಾಯಕವಾಗಿ ಬಂದಿದೆ. ಮೋಕ್ಷಮಾರ್ಗದಲ್ಲಿರತಕ್ಕವರು ಎಲ್ಲಾ ಆಸನಾಭ್ಯಾಸಗಳನ್ನೂ ಚೆನ್ನಾಗಿ ಪರಿಶ್ರಮಮಾಡಿಕೊಂಡು ಅನಂತರ ಪ್ರಾಣಾಯಾಮಯಕ್ಕೆ ಪ್ರಾರಂಭ ಮಾಡುವುದಕ್ಕೆ ಬದಲಾಗಿ ಶಾಸ್ತ್ರಗಳಲ್ಲಿ ಹೇಳಿರುವ ಮತ್ತು ಸುಲಭವಾಗಿರುವ ಕೆಲವು ಆಸನಗಳನ್ನು ಅಭ್ಯಾಸಮಾಡಿಕೊಂಡು ಅನಂತರ ನಾಡೀಶುದ್ಧಿಗಾಗಿ ಮುಂದಿನ ಪ್ರಕರಣದಲ್ಲಿ ತಿಳಿಸಿರುವ ರೇಚಕ ಪೂರಕ ಪ್ರಾಣಾಯಾಮಗಳನ್ನು ಮಾಡಿಕೊಳ್ಳುತ್ತ ಅಪಾನವಾಯುವಿನ ಬಲವನ್ನೇ ತಗ್ಗಿಸಿ ಮೇಲಕ್ಕೆ ಬೀಸುವಂತೆ ಮಾಡಲು ಪಶ್ಚಿಮತಾನಾಸನ ಮುಂತಾದುವುಗಳನ್ನು ಅಭ್ಯಾಸ ಮಾಡಿಕೊಂಡರೆ ಕುಂಡಲಿನಿಯ ಉತ್ಥಾಪನೆಗೆಂದರೆ ಬ್ರಹ್ಮರಂಧ್ರದ ಬಾಗಿಲನ್ನು ತೆಗೆಸಲು ಅನುಕೂಲವಾಗುವುದು. ಆಸನ ಪ್ರಾಣಾಯಾಮಗಳನ್ನು ಮಾಡುತ್ತ ಬಂದರೆ ಅಧಿಕಾರಿಯು ಅಪಾನವಾಯುವು ಮೇಲಕ್ಕೆ ಬೀಸುವುದನ್ನು ನಿಶ್ಚಯವಾಗಿಯೂ ಅನುಭವ ದಿಂದ ತಿಳಿದುಕೊಳ್ಳುತ್ತಾನೆ. ಅಲ್ಲದೆ ಮೂಲಾಧಾರದಲ್ಲಿರುವ ಅಗ್ನಿಯು ಪ್ರಜ್ವಲಿತವಾಗಿ ಊರ್ಧ್ವಮುಖವಾಗಿ ಎರಚುವುದನ್ನು ಅನುಭವಿಸುತ್ತಾನೆ. ಈ ತತ್ವವು ಸುಂದರ ಕಾಂಡದಲ್ಲಿ ಬರುವುದು. ಆಸನಾಭ್ಯಾಸಕಾಲದಲ್ಲಿ ಒಂದು ಪಂಚಪಾತ್ರೆಯಷ್ಟು ನೀರನ್ನು ಕುಡಿದು ಆಸನಪ್ರಾಣಾಯಾಮಾಭ್ಯಾಸವನ್ನು ಮಾಡಬೇಕು. ಇದರಿಂದ ಬೊಜ್ಜು

ದೇಹವು ಕರಗಿ ದೇಹವು ಖಚಿತಕ್ಕೆ ಬರುವುದಲ್ಲದೆ ದೇಹದೊಳಗೆ ಕಟ್ಟಿರುವ ಕಲ್ಮಷಗಳು ಹೋಗುವುದರಿಂದ ರೋಗಾದಿಗಳು ಹೋಗಿ ನಾಡೀಶುದ್ಧಿಯುಂಟಾಗುವುದು.

ಸಂಧ್ಯಾವಂದನೆ ಮತ್ತು ಇತರ ಉಪಾಸನೆಗಳನ್ನೂ, ಜಪಗಳನ್ನೂ ಮಾಡುವುದಕ್ಕೆ ಶಾಸ್ತ್ರೋಕ್ತವಾದ ಆಸನಗಳಲ್ಲಿ ಕುಳಿತುಕೊಳ್ಳುವುದು ಪ್ರಥಮ ಕರ್ತವ್ಯವಾಗಿರುತ್ತದೆ. " ಅನಂತಾಸನಾಯನಮಃ ಕೂರ್ಮಾಸನಾಯನಮಃ " ಎಂಬ ಪ್ರಾರ್ಥನೆಯ ಶ್ಲೋಕಗಳನ್ನು ಹೇಳಿ ಮನಸ್ಸು ಬಂದಂತೆ ಕುಳಿತುಕೊಳ್ಳಬಾರದು. ಆಸನದ ಪ್ರಾರ್ಥನೆ ಮಾಡಿ ಶಾಸ್ತ್ರೋಕ್ತವಾದ ಆಸನಗಳಲ್ಲಿಯೇ ಕುಳಿತುಕೊಂಡು ಜಪಮಾಡಬೇಕೆಂಬ ತಾತ್ಪರ್ಯದಿಂದಲೇ ಆ ಮಂತ್ರಗಳು ವಿಧಾಯಕವಾಡಲ್ಪಟ್ಟಿರುವುವು.

ನಮ್ಮ ಕಥಾನಾಯಕರಾದ ಬುದ್ಧಿಮನಸ್ತತ್ವದಲ್ಲಿರುವ ಶ್ರೀರಾಮ ಲಕ್ಷ್ಮಣರು ಈ ರೀತಿಯಾಗಿ ಸುಗ್ರೀವ ಹನುಮಂತರ ಸಖ್ಯ ಬೆಳೆಸಿ ವಾಲಿಯನ್ನು ನಿಗ್ರಹಿಸಿ ಅಂಗದನಿಗೆ ಯೌವರಾಜ್ಯಾಭಿಷೇಕವನ್ನೂ ಸುಗ್ರೀವನಿಗೆ ಪಟ್ಟಾಭಿಷೇಕವನ್ನೂ, ಮಾಡಿ ಕೆಲವು ಕಾಲ ಅಲ್ಲಿಯೇ ವಾಸಮಾಡಿಕೊಂಡಿದ್ದರು.

# ೪ನೆಯ ಪ್ರಕರಣ.

**ಸುಗ್ರೀವನು ಶ್ರೀರಾಮಕಾರ್ಯವನ್ನು ಮರೆತು ಕಾಮಾಸಕ್ತನಾಗಿದ್ದುದು.**

**ಆಸನಾಭ್ಯಾಸದಲ್ಲಿಯೇ ಮಗ್ನರಾಗಿರಬಾರದೆಂಬ ವಿಚಾರ.**

**ರಾ||** ಶ್ರೀರಾಮ ಲಕ್ಷ್ಮಣರು ಸುಗ್ರೀವನಿಗೆ ಪಟ್ಟಕಟ್ಟಿ ವರ್ಷಾಕಾಲವಾದುದರಿಂದ ಅದು ಕಳೆಯುವ ಪರ್ಯಂತರ ಸಮೀಪದಲ್ಲಿದ್ದ ಮಾಲ್ಯಪರ್ವತದಲ್ಲಿ ವಾಸಮಾಡಿಕೊಂಡಿದ್ದರು. ಹೀಗೆ ವಾಸಮಾಡಿಕೊಂಡಿರುವಾಗ ಶ್ರೀರಾಮನು ವರ್ಷಾಕಾಲವನ್ನು ವರ್ಣಿಸುತ್ತ ಭರತನು ಸ್ವಸ್ಥಚಿತ್ತನಾಗಿರುವನೆಂದು ಹೇಳಿದುದಲ್ಲದೆ ಸೀತೆಯನ್ನು ನೆನೆಸಿಕೊಂಡು ದುಃಖಿಸುತ್ತಲೇ ಇದ್ದನು. ಸುಗ್ರೀವನು ಕಾಮಾಸಕ್ತನಾಗಿ ತನ್ನ ಕಾರ್ಯಕ್ಕೆ ತಡಮಾಡಿದುದನ್ನು ನೋಡಿ ಶ್ರೀರಾಮನು ಕೋಪಗೊಳ್ಳಲು ಸುಗ್ರೀವನು ಮುಂದಿನ ಕಾರ್ಯ ನಡೆಸಲು ಪ್ರಯತ್ನಪಟ್ಟನು.

**ತತ್ವ||** ಬುದ್ಧಿಮನಸ್ತತ್ವಸ್ವರೂಪರಾದ ಶ್ರೀರಾಮ ಲಕ್ಷ್ಮಣರು ಸುಗ್ರೀವನಿಗೆ ಪಟ್ಟಕಟ್ಟಿ ತಾವು ಮಾಲ್ಯಪರ್ವತದಲ್ಲಿ ವಾಸಮಾಡಿಕೊಂಡಿದ್ದರೆಂದರೆ—ಆಸನಾಭ್ಯಾಸಕ್ಕೆ ಪ್ರಾರಂಭಮಾಡಿದ ಮೇಲೆ ಆಸನಗಳ ಅಭ್ಯಾಸವು ದೃಢವಾಗಿ ಸ್ತಿಮಿತಕ್ಕೆ ಬರುವ ಪರ್ಯಂತರ ಬುದ್ಧಿಮನಸ್ಸಿನ ವೃತ್ತಿಗಳು ಆಸನಾಭ್ಯಾಸದಲ್ಲಿ ಮಗ್ನವಾಗಿರುವುದೇ ಮಾಲ್ಯಪರ್ವತದಲ್ಲಿ ಶ್ರೀರಾಮ ಲಕ್ಷ್ಮಣರು ವಾಸಮಾಡಿಕೊಂಡಿದ್ದುದಾಗಿರುತ್ತದೆ. ಮಾಲ್ಯ

ವೆಂದರೆ—"ಮಲ್ಯತೆ ಧಾರ್ಯತೆ ಇತಿ ಮಾಲ್ಯಂ ಮಲ ಮಲ್ಲ ಧಾರಣೆ" ಧರಿಸುವುದೆಂಬ ಅರ್ಥ. ಆದುದರಿಂದ ಆಸನಾಭ್ಯಾಸಕ್ರಮವನ್ನು ದೃಢಪಡಿಸಿಕೊಳ್ಳುವ ಕಾರ್ಯದಲ್ಲಿ ಬುದ್ಧಿ ಮನಸ್ಸುಗಳು ನಿರತವಾಗಿದ್ದವು.

ಬುದ್ಧಿಮನಸ್ಸುಗಳು ಆಸನಾಭ್ಯಾಸದ ಕಾರ್ಯದಲ್ಲಿ ಉತ್ಸಾಹದಿಂದಿದ್ದರೂ ಬುದ್ಧಿಯು ತನ್ನ ಮುಖ್ಯೋದ್ದೇಶವಾದ ಮುಮುಕ್ಷುತೆಯ ತೀವ್ರತಮವಾದ ಇಚ್ಛೆಯನ್ನು ಬಿಡ ಕೂಡದೆಂಬ ತಾತ್ಪರ್ಯವನ್ನನುಸರಿಸಿಯೇ ಶ್ರೀರಾಮನು ಸೀತಾವಿಯೋಗ ದುಃಖದಿಂದ ಮಾಲ್ಯಪರ್ವತದಲ್ಲಿದ್ದುದಾಗಿದೆ. ಶ್ರೀರಾಮನು ಸೀತಾವಿರಹ ದುಃಖದಲ್ಲಿದ್ದರೂ ಕಾರ್ಯೋತ್ಸಾಹವನ್ನು ಬಿಟ್ಟಿರಲಿಲ್ಲವೆಂದರೆ—ಉತ್ಸಾಹದಿಂದ ಆಸನಾಭ್ಯಾಸದ ಕಾರ್ಯವೂ ನಡೆಯ ಬೇಕು, ಮತ್ತು ಅಂತರಂಗದಲ್ಲಿ ಮುಮುಕ್ಷುತೆಯ ತೀವ್ರತಮವಾದ ಇಚ್ಛೆಯೂ ಇರ ಬೇಕೆಂಬ ತತ್ವವಾಗಿದೆ.

ಶ್ರೀರಾಮನು ಮಾಲ್ಯಪರ್ವತದಲ್ಲಿದ್ದಾಗ ವರ್ಷಾಕಾಲವಾಗಿದ್ದುದರಿಂದ ವರ್ಷಾ ಕಾಲವನ್ನು ವರ್ಣನೆ ಮಾಡಿರುವ ತತ್ವವೇನೆಂದರೆ—ಈ ಆಸನಾಭ್ಯಾಸದ ಕಾಲವು ವರ್ಷಾ ಕಾಲದ ಸ್ವರೂಪದಲ್ಲಿರುತ್ತದೆ. ಮಳೆಗಾಲ ಬಂದರೆ ಭೂಮಿಯನ್ನು ಉತ್ತು ಹಸನು ಮಾಡಿ ಬೀಜಗಳನ್ನು ಹೇಗೆ ಬಿತ್ತುವರೋ ಹಾಗೆ ಆಸನಾಭ್ಯಾಸದ ಕಾಲವು ದೇಹವನ್ನು ಉತ್ತು ಹದಮಾಡುವ ಕಾಲವಾಗಿರುತ್ತೆಂಬ ತಾತ್ಪರ್ಯವು. ಆದುದರಿಂದ ವರ್ಷಾಕಾಲ ವೆಂದರೆ, ದೇಹಶೋಧನೆಯ ಕಾಲವೆಂಬ ತಾತ್ಪರ್ಯವಾಗಿರುತ್ತದೆ.

ಸುಗ್ರೀವನು ಕಾಮಾಸಕ್ತನಾಗಿ ಶ್ರೀರಾಮಕಾರ್ಯವನ್ನು ಮರೆತಿದ್ದನೆಂದರೆ—ಆಸನಗಳ ಅಭ್ಯಾಸವು ಸ್ತಿಮಿತಕ್ಕೆ ಬಂದಹಾಗೆ ಪ್ರಾಣಶಕ್ತಿಯ ಪ್ರಭೆಯೂ ಹೆಚ್ಚಿ ದೇಹಕ್ಕೆ ಉತ್ಸಾಹದ ಬಲವು ಬರುವುದಲ್ಲದೆ ವರ್ಷಋತುವಿನಲ್ಲಿ ಬಿತ್ತಿದ ಬೀಜಗಳು ಶಿಶಿರಋತುವಿನಲ್ಲಿ ಹಸುರು ಪೈರಿನಿಂದ ಭೂಮಿಯೆಲ್ಲವೂ ಮುಚ್ಚಿಕೊಂಡು ಹೇಗೆ ಮನೋಹರವಾಗಿರುವುದೋ ಹಾಗೆ ಆಸನಾಭ್ಯಾಸದ ಪರಿಪಕ್ವಾವಸ್ಥೆಯಲ್ಲಿ ದೇಹಾಭಿಮಾನ ಬರಬಹುದು. ಗರಡಿ ಮುಂತಾದ ಅಂಗಸಾಧನೆಗಳನ್ನು ಮಾಡಿದವರಿಗೆ ಯಾವ ವಿಧವಾಗಿ ದೇಹದಲ್ಲಿ ಉತ್ಸಾಹ ಮತ್ತು ಮೋಹವುಂಟಾಗುತ್ತದೋ ಅದರಂತೆ ಆಸನಾಭ್ಯಾಸಗಳು ಸ್ತಿಮಿತಕ್ಕೆ ಬಂದಂತೆ ದೇಹದಲ್ಲಿ ಆಸ್ಥೆಯು ಬರುವುದು. ಈ ತತ್ವಾರ್ಥವನ್ನು ಅನುಸರಿಸಿಯೇ ಸುಗ್ರೀವನು ಸ್ತ್ರೀಲೋಲ ನಾಗಿ ಮೈಮರೆತಿದ್ದನು. ಗರಡಿಸಾಧನೆ ಮಾಡತಕ್ಕವರೂ, ಹಾವಾಡಿಗರೂ, ಅನೇಕ ಆಸನಗಳನ್ನು ಹಾಕಬಲ್ಲರು. ಇಂತಹ ಸಾಧಕರಿಗೆ ಪ್ರಾಣಶಕ್ತಿಯು ಪ್ರಫುಲ್ಲವಾಗಿ ದೇಹ ದಲ್ಲಿ ಆಸ್ಥೆಬರುವಂತೆ ಆಸನಾಭ್ಯಾಸದಿಂದಲೂ ಉಂಟಾಗುವುದೇ ಸುಗ್ರೀವನು ಸ್ತ್ರೀಲೋಲ ನಾಗಿದ್ದ ತತ್ವವಾಗಿರುತ್ತದೆ.

ಆದುದರಿಂದ ಆಸನಾಭ್ಯಾಸದಿಂದ ದೇಹಾಭಿಮಾನ ಬರಬಹುದು. ಈರೀತಿ ಬರಕೊಡದೆಂಬ ತತ್ವವನ್ನು ಸೂಚಿಸುವುದಕ್ಕೆ ಭರತನು ಸ್ವಸ್ಥಚಿತ್ತನಾಗಿ ಕಾಲವನ್ನು ಕಳೆಯುತ್ತಿರುವನೆಂದು ವರ್ಷಾಕಾಲದ ವರ್ಣನೆಯಲ್ಲಿ ಶ್ರೀರಾಮನು ಲಕ್ಷ್ಮಣನೊಡನೆ ಹೇಳಿರುತ್ತಾನೆ. ಭರತನನ್ನು ಅಭಿಮಾನದ ತತ್ವಕ್ಕೆ ಅನ್ವಯಿಸಿ ಹಿಂದೆ ಬರೆದಿರುತ್ತಷ್ಟೆ! ಆಸನಾಭ್ಯಾಸದಿಂದುಟಾಗಬಹುದಾದ ದೇಹಾಭಿಮಾನಯುತನಾಗದೆ ಅಧಿಕಾರಿಯು ನಿರಭಿಮಾನದಿಂದಲೇ ಇರಬೇಕೆಂಬ ತತ್ವವನ್ನು ವ್ಯಕ್ತಪಡಿಸುವಿಕೆಯೇ ಭರತನು ಸ್ವಸ್ಥಚಿತ್ತನಾಗಿರುವನೆಂದು ಶ್ರೀರಾಮನು ಹೇಳಿದುದಾಗಿರುತ್ತದೆ. ಅಲ್ಲದೆ ಆಸನಾಭ್ಯಾಸದಲ್ಲಿಯೇ ಮುಮುಕ್ಷುವು ಮಗ್ನನಾಗಿದ್ದರೆ ಮುಂದಿನ ಮೋಕ್ಷಮಾರ್ಗವನ್ನು ತಡೆದಂತಾಗುವುದು. ಆದುದರಿಂದ ಆಸನಾಭ್ಯಾಸದಲ್ಲಿಯೇ ಮಗ್ನರಾಗದೆ ಮುಂದಿನ ಕಾರ್ಯದಲ್ಲಿ ಪ್ರವೇಶಿಸಬೇಕೆಂಬ ತತ್ವವೇ ಶ್ರೀರಾಮನು ಕೋಪಗೊಂಡುದು ಮತ್ತು ಸುಗ್ರೀವನು ಮುಂದೆ ನಡೆಸಬೇಕಾದ ಕಾರ್ಯಗಳ ಪ್ರಯತ್ನಮಾಡಿದ್ದಾಗಿರುತ್ತದೆ.

## ೫ನೆಯ ಪ್ರಕರಣ.

| ಅನೇಕ ದಿಕ್ಕುಗಳಲ್ಲಿಯೂ ಸೀತೆಯನ್ನು ಹುಡುಕಲು ವಾನರರು ಹೊರಟುದು. |  | ನಾಡೀಶುದ್ಧಿಗಾಗಿ ರೇಚಕಪೂರಕ ಪ್ರಾಣಾಯಾಮ ಮತ್ತು ರೇಚಕ ಪೂರಕ ಭಸ್ತ್ರಿಕಾ. |
|---|---|---|

ರಾ|| ಸುಗ್ರೀವನು ಸೀತಾನ್ವೇಷಣೆಗಾಗಿ ಅನೇಕ ವಾನರರನ್ನು ದಿಕ್ಕು ದಿಕ್ಕುಗಳಿಗೂ ಕಳುಹಿಸಿದನು. ಹೀಗೆ ಸುಗ್ರೀವನು ವಾನರರನ್ನು ಕಳುಹಿಸುವಾಗ ಶ್ರೀರಾಮನು ಹನುಮಂತನ ಕೈಗೆ ತನ್ನ ಉಂಗುರವನ್ನು ಕೊಟ್ಟನು.

ತತ್ವ|| ಸುಗ್ರೀವನು ಪ್ರಾಣವಾಯುತತ್ವದವನೆಂದೂ, ಹನುಮಂತನು ಶ್ವಾಸೋಚ್ಛ್ವಾಸದ ತತ್ವದವನೆಂದೂ ಹಿಂದೆಯೇ ತಿಳಿಸಿದೆ. ಆದುದರಿಂದ ವಾಯುಸ್ವರೂಪರ ಸೈನ್ಯವು ಕೂಡ ವಾಯುಪ್ರಭೇದಗಳಾಗಿರುವುದು. ಈ ವಾಯುಪ್ರಭೇದಗಳಾದ ವಾನರರು ದೇಹದಲ್ಲಿ ಹುಡುಕುವುದೆಂದರೆ—ಮೋಕ್ಷಾಧಿಕಾರಿಯಲ್ಲಿ ಪ್ರಾಣಾಯಾಮದ ಕಾರ್ಯನಡೆಯಲು ಪ್ರಾರಂಭವಾಯಿತೆಂಬ ತಾತ್ಪರ್ಯವಾಗಿದೆ. ಶ್ರೀರಾಮನು ಹನುಮಂತನ ಕೈಗೇ ಉಂಗುರಕೊಟ್ಟ ತತ್ವವೇನೆಂದರೆ—ಪ್ರಾಣಾಯಾಮದ ಕಾರ್ಯಕ್ಕೆ ಶ್ವಾಸೋಚ್ಛ್ವಾಸಸ್ವರೂಪವಾದ ವಾಯುವೇ ಮುಖ್ಯವಾದುದು. ಸೀತಾದೇವಿಯ ತತ್ವವಾದ ಶುದ್ಧಸತ್ವಗುಣದ ಇರುವಿಕೆಯನ್ನು ತಿಳಿಯುವ ಸೋಪಾನವನ್ನು ಮೋಕ್ಷಾಧಿಕಾರಿಯು ಹೊಂದಬೇಕಾದರೆ ಶ್ವಾಸೋಚ್ಛ್ವಾಸದ ಸಹಾಯವೇ ಮುಖ್ಯವೆಂಬ ತತ್ವವನ್ನು ಅನುಸರಿಸಿ ಶ್ರೀರಾಮನು ಹನುಮಂತನ ಕೈಗೇ ತನ್ನ ಉಂಗುರಕೊಟ್ಟದ್ದಾಗಿದೆ.

ರಾ॥ ಸುಗ್ರೀವನಿಂದ ಕಳುಹಲ್ಪಟ್ಟ ವಾನರರು ಸಕಲ ದಿಕ್ಕುಗಳಿಗೂ ವೀರಗರ್ಜನೆಯಿಂದ ಕುಣಿಯುತ್ತಾ ಹೊರಟರು. ಹನುಮಂತನೇ ಮುಂತಾದ ಕೆಲವರು ದಕ್ಷಿಣದಿಕ್ಕಿನಲ್ಲಿರುವ ಅಗಸ್ತ್ಯನಿವಾಸವಾದ ವಿಂಧ್ಯಪರ್ವತದಲ್ಲಿ ಸೀತೆಯನ್ನು ಹುಡುಕಲು ಹೊರಟರು.

ತತ್ವ॥ ವಾನರರು ಎಲ್ಲಾ ದಿಕ್ಕುಗಳಿಗೂ ವೀರಗರ್ಜನೆಯಿಂದ ಹೊರಟುದೇ ರೇಚಕಪೂರಕ ಪ್ರಾಣಾಯಾಮದಲ್ಲುಂಟಾಗುವ ಧ್ವನಿಯಾಗಿರುತ್ತದೆ. ಹನುಮಂತನು ಈ ಸಂದರ್ಭದಲ್ಲಿ ಸೀತಾದೇವಿಯನ್ನು ಹುಡುಕಿದುದು ವಿಂಧ್ಯಪರ್ವತದಲ್ಲೇ ಹೊರತು ವಿಂಧ್ಯಪರ್ವತವನ್ನು ಬಿಟ್ಟು ಹೋಗಲಿಲ್ಲ. ಇದು ಹೇಗೆ ಅನ್ವಯವಾಗುವುದೆಂದರೆ— ಪ್ರಾಣಾಯಾಮಕ್ಕೆ ಮುಖ್ಯಾಧಿಕಾರಿಯಾಗಿರುವುದೇ ಹನುಮಂತನ ತತ್ವದಲ್ಲಿರುವ ಶ್ವಾಸೋಚ್ಛ್ವಾಸ. ಈ ವಾಯುವಿನ ಕಾರ್ಯದ ಮುಖ್ಯಸ್ಥಾನವು ಎದೆಯಲ್ಲಿರುವ ಶ್ವಾಸಕೋಶ. ಪ್ರಾಣಾಯಾಮದಲ್ಲಿನ ರೇಚಕಪೂರಕ ಕುಂಭಕಗಳು ನಡೆಯಬೇಕಾದರೆ ಎದೆಯೇ ಪ್ರಧಾನಸ್ಥಳವಾಗಿರುತ್ತದೆ. ಈ ಎದೆಯ ಸ್ಥಾನದಲ್ಲಿ ಸುಷುಮ್ನಾನಾಡಿಯ ಹೊರಪ್ರಾಕಾರದಲ್ಲಿ ಅನಾಹತಚಕ್ರವಿರುವುದೆಂದೂ ಇದೇ ವಿಂಧ್ಯಪರ್ವತವಾಗಿ ಅಗಸ್ತ್ಯಾಶ್ರಮದ ತತ್ವವೆಂದೂ ಹಿಂದೆಯೇ ತಿಳಿಸಿರುತ್ತೆ. ಶ್ವಾಸಕೋಶವು ಎದೆಯಲ್ಲಿದ್ದು ಪ್ರಾಣಾಯಾಮದ ಕಾರ್ಯವು ಶ್ವಾಸಕೋಶದ ಕಾರ್ಯವಾಗಿರುವುದರಿಂದ ಹನುಮಂತನು ಸೀತಾದೇವಿಯನ್ನು ಹುಡುಕಲು ಹೊರಟನೆಂದರೆ—ಪ್ರಾಣಾಯಾಮದ ತತ್ವಾರ್ಥವೆಂದು ನಿಸ್ಸಂದೇಹವಾಗಿ ತಿಳಿಯಬೇಕು.

ಹನುಮದಾದಿ ವಾನರರು ಕೆಲವು ಕಾಲ ಸೀತಾದೇವಿಯನ್ನು ಹುಡುಕುತ್ತಿದ್ದು ಅನಂತರ ಸ್ವಯಂಪ್ರಭೆಯ ಬಿಲಕ್ಕೆ ಪ್ರವೇಶಮಾಡಿರುತ್ತಾರೆ. ಸ್ವಯಂಪ್ರಭೆಯ ಬಿಲಪ್ರವೇಶ ಮಾಡುವುದೇ ಕುಂಭಕಪ್ರಾಣಾಯಾಮದ ತತ್ವಾರ್ಥವಾಗಿರುತ್ತದೆ. ಸ್ವಯಂಪ್ರಭೆಯ ಬಿಲಪ್ರವೇಶ ಮಾಡುವುದಕ್ಕೆ ಮುಂಚೆ ಕೆಲವು ಕಾಲ ಸೀತಾದೇವಿಯನ್ನು ಹುಡುಕುತ್ತಿದ್ದುದೇ ರೇಚಕಪೂರಕಪ್ರಾಣಾಯಾಮದ ತತ್ವವಾಗಿರುತ್ತದೆ. ಈ ರೇಚಕಪೂರಕ ಪ್ರಾಣಾಯಾಮದ ವಿಚಾರವನ್ನು ಪ್ರಥಮದಲ್ಲಿ ವಿವರಿಸೋಣ.

ಆಸನಾಭ್ಯಾಸವು ಕೊಂಚ ಸ್ತಿಮಿತಕ್ಕೆ ಬಂದನಂತರ ಸಿದ್ಧ, ಪದ್ಮ, ಸ್ವಸ್ತಿಕಾಸನಗಳಲ್ಲಿ ಯಾವುದಾದರೊಂದು ಆಸನದಲ್ಲಿ ಕುಳಿತುಕೊಂಡು ಬಲಗಡೆ ಮೂಗಿನ ಹೊಳ್ಳೆಯ ಮೇಲೆ ಹೆಬ್ಬೆರಳಿಟ್ಟು, ಎಡಗಡೆ ಮೂಗಿನಹೊಳ್ಳೆಯ ಮೇಲೆ ಪವಿತ್ರಧಾರಣೆಯ ಮತ್ತು ಮಧ್ಯದ ಬೆರಳುಗಳೆರಡನ್ನೂ ಇಟ್ಟುಕೊಳ್ಳಬೇಕು. ಅನಂತರ ಎಡದ ಹೊಳ್ಳೆಯನ್ನು ಮುಚ್ಚಿಕೊಂಡು ಬಲಗಡೆಯ ಹೊಳ್ಳೆಯಿಂದ ಉಸಿರನ್ನು ಎಲ್ಲಿಯವರೆಗೆ ಎಳೆಯಲು ಸಾಧ್ಯವೋ ಅಲ್ಲಿಯವರೆಗೂ ಮೆಲ್ಲಮೆಲ್ಲಗೆಳೆದುಕೊಂಡು ನೆತ್ತಿಯಲ್ಲಿ ಶೇಖರಮಾಡಿಕೊಳ್ಳಬೇಕು. ಹಾಗ ಶೇಖರಮಾಡಿಕೊಂಡದ್ದನ್ನು ನೆತ್ತಿಯಲ್ಲಿ ನಿಲ್ಲಿಸದೆ ಶೇಖರಮಾಡುವ ಕಾರ್ಯವು

ಪೂರೈಸಿದನಂತರ, ಬಲದ ಹೊಳ್ಳೆಯನ್ನು ಮುಚ್ಚಿಕೊಂಡು ಕೂಡಲೇ ಎಡದ ಹೊಳ್ಳೆಯಿಂದ ಅತ್ಯಂತ ನಿಧಾನವಾಗಿ ಬಿಡುತ್ತಾ ಬರಬೇಕು. ಉಸಿರನ್ನು ಬಿಡುವಾಗ ಖಂಡಿತವಾಗಿಯೂ ವೇಗವಾಗಿ ಬಿಡಕೂಡದು. ಎಡದ ಹೊಳ್ಳೆಯಿಂದ ವಾಯುವನ್ನೆಲ್ಲ ಬಿಟ್ಟನಂತರ ಅದೇ ಎಡದ ಹೊಳ್ಳೆಯಿಂದ ಪುನಃ ಮೇಲಕ್ಕೆ ಮೆಲ್ಲಮೆಲ್ಲಗೆಳೆದು ನೆತ್ತಿಯಲ್ಲಿ ಶೇಖರಿಸಿಕೊಳ್ಳಬೇಕು. ಶೇಖರಿಸಿಕೊಳ್ಳುವ ಕಾರ್ಯ ಪೂರ್ಣವಾದನಂತರ ಬಲದ ಹೊಳ್ಳೆಯಿಂದ ಅತ್ಯಂತ ನಿಧಾನವಾಗಿ ಬಿಡಬೇಕು. ಇದೇ ರೀತಿಯಾಗಿ ಎಡದ ಹೊಳ್ಳೆಯನಂತರ ಬಲದಹೊಳ್ಳೆ, ಬಲದ ಹೊಳ್ಳೆಯ ನಂತರ ಎಡದ ಹೊಳ್ಳೆಯಲ್ಲಿ ಅಭ್ಯಾಸಮಾಡಬೇಕು. ಪ್ರಥಮಾಭ್ಯಾಸದಲ್ಲಿ ಸಾಧ್ಯವಾದಷ್ಟು ಮಾಡಿಕೊಂಡುಬಂದು ಅನಂತರ ಪ್ರಾಣಾಯಾಮವನ್ನು ಹೆಚ್ಚಿಸಿಕೊಳ್ಳಬೇಕು. ಈ ವಿಧವಾದ ಪ್ರಾಣಾಯಾಮದಲ್ಲಿ ಉಸಿರನ್ನು ನೆತ್ತಿಯಲ್ಲಿ ಶೇಖರಿಸಿಕೊಳ್ಳುವ ಕಾರ್ಯ ಹೊರತು ಎರಡು ಕಡೆ ಮೂಗಿನ ಹೊಳ್ಳೆಯನ್ನೂ ಭದ್ರವಾಗಿ ಮುಚ್ಚಿಕೊಂಡು ಶೇಖರಿಸಿಕೊಂಡದ್ದನ್ನು ನೆತ್ತಿಯಲ್ಲಿ ನಿಲ್ಲಿಸಿಕೊಳ್ಳುವುದಲ್ಲ. ಅಂದರೆ ಕುಂಭಕಪ್ರಾಣಾಯಾಮದ ಸ್ಥಿತಿಯಲ್ಲ. ಪೂರಕವು ಪೂರ್ಣವಾದ ಕೂಡಲೆ ಮತ್ತೊಂದು ಹೊಳ್ಳೆಯಿಂದ ಮೆಲ್ಲಗೆ ಬಿಟ್ಟುಬಿಡುವುದರಿಂದ ಇದಕ್ಕೆ ರೇಚಕಪೂರಕಪ್ರಾಣಾಯಾಮವೆಂದು ಹೆಸರು.

ಈ ರೇಚಕಪೂರಕಪ್ರಾಣಾಯಾಮ ಮಾಡುವ ಬೇರೊಂದು ರೀತಿ ಯಾವುದೆಂದರೆ— ಪದ್ಮಾಸನದಲ್ಲಿ ಕುಳಿತುಕೊಂಡು ಮೂಗು ಹಿಡಿದುಕೊಳ್ಳದೆ, ಅಂಗೈಗಳೆರಡನ್ನೂ ಒಂದರ ಮೇಲೊಂದು ಇರುವಂತೆ ಮಾಡಿಕೊಂಡು, ಹೊಕ್ಕಳ ಹತ್ತಿರ ಇಟ್ಟುಕೊಂಡು, ಎದೆಯನ್ನು ಮುಂದಕ್ಕೆ ಚಾಚಿ, ಗಡ್ಡವನ್ನು ಕೊಂಚ ಎದೆಯ ಕಡೆಗೆ ಬಗ್ಗಿಸಿಕೊಂಡು ಕುಳಿತುಕೊಳ್ಳಬೇಕು. ಅನಂತರ ಮೂಗಿನ ಎರಡು ಹೊಳ್ಳೆಗಳಿಂದಲೂ ಉಸಿರನ್ನೆಲ್ಲಾ ಸಾಧಾರಣ ವೇಗದಿಂದ ಪೂರ್ಣವಾಗಿ ಹೊರಕ್ಕೆ ಬಿಟ್ಟು, ತಕ್ಷಣವೇ ಸಾಧಾರಣವೇಗದಿಂದ ಮೇಲಕ್ಕೆ ಎಳೆದುಕೊಂಡು, ಕೂಡಲೇ ಪುನಃ ಕೆಳಕ್ಕೆ ಬಿಡಬೇಕು. ಪುನಃ ಮೇಲಕ್ಕೆ ಎಳೆದುಕೊಳ್ಳುವುದು. ಹೀಗೆ ಮೇಲಕ್ಕೆ ಕೆಳಕ್ಕೆ ಎಳೆದುಕೊಳ್ಳುತ್ತಾ ಬರುವಿಕೆಯು ತಿದಿ ಒತ್ತಿದಂತೆ ಕೆಳಗಿನಿಂದ ಮೇಲಕ್ಕೆ ಮೇಲಿನಿಂದ ಕೆಳಕ್ಕೆ ಬರುತ್ತಿರಬೇಕು. ಈರೀತಿಯಾಗಿ ಅವರವರಿಗೆ ಸಾಧ್ಯವಾದಷ್ಟು ಅಭ್ಯಾಸಮಾಡಿ ಪ್ರಾಣಾಯಾಮವನ್ನು ನಿಲ್ಲಿಸುವಾಗ ನಿಧಾನದಿಂದ ನಿಲ್ಲಿಸಿಕೊಳ್ಳಬೇಕು.

ಈ ಎರಡನೆಯ ವಿಧದ ಪ್ರಾಣಾಯಾಮಕ್ಕೆ ಭಸ್ತ್ರಿಕಪ್ರಾಣಾಯಾಮದಲ್ಲನ ರೇಚಕಪೂರಕಪ್ರಾಣಾಯಾಮವೆಂದು ಹೆಸರು. ನಾಡಿಗಳ ಶುದ್ಧಿಗೂ ಮತ್ತು ಉಸಿರಿನ ದುಡುಕನ್ನು ತಗ್ಗಿಸುವುದೆಂದರೆ, ಉಸಿರಿನ ಕ್ಷಿಪ್ರಗತಿಯನ್ನು ತಗ್ಗಿಸುವುದಕ್ಕೂ ಇದು ಉತ್ತಮವಾಗಿರುತ್ತದೆ. ಆಸನಾಭ್ಯಾಸದಿಂದ ಮತ್ತು ಈ ಮೇಲಿನ ಎರಡು ವಿಧವಾದ ರೇಚಕ

ಪೂರಕ ಪ್ರಾಣಾಯಾಮಗಳಿಂದ ಉಸಿರಿನ ದುಡುಕು ಸ್ವಲ್ಪಮಟ್ಟಿಗೆ ತಗ್ಗುವುದಲ್ಲದೆ, ತಕ್ಕ ಮಟ್ಟಿಗೆ ನಾಡಿಗಳೂ ಶುದ್ಧಿಯಾಗುವುವು. ಉಸಿರಿನ ಕ್ಷಿಪ್ರಗತಿಯನ್ನು ತಗ್ಗಿಸಿಕೊಳ್ಳಲು ಈ ಮೇಲಿನ ಎರಡು ವಿಧವಾದ ರೇಚಕಪೂರಕ ಪ್ರಾಣಾಯಾಮಗಳು ಸ್ತಿಮಿತಕ್ಕೆ ಬಂದಲ್ಲದೆ ಮುಂದಿನ ಪ್ರಕರಣದಲ್ಲಿ ಹೇಳಿರುವ ಕುಂಭಕಪ್ರಾಣಾಯಾಮವನ್ನು ಮಾಡಲೇ ಕೂಡದು. ಈ ಎರಡು ವಿಧವಾದ ಪ್ರಾಣಾಯಾಮಗಳನ್ನು ಮಾಡಲು ಯಾವ ವಿಧವಾದ ಭೀತಿಯೂ ಅಪಾಯವೂ ಇರುವುದಿಲ್ಲ. ಆಧುನಿಕ ಶಾಸ್ತ್ರಗಳಲ್ಲಿ ಹೇಳುವುದಕ್ಕಿಂತಲೂ ಉತ್ತಮವಾಗಿರುವುದು. ಅಲ್ಲದೆ ನಾಡಿಗಳು ಶುದ್ಧಿಯಾಗಿ ರೋಗಾದಿಗಳು ನಿವೃತ್ತಿಯಾಗುತ್ತವೆ. ಇದೂ ಅಲ್ಲದೆ ಅಂತಃಕರಣವೂ ನಿರ್ಮಲವಾಗುತ್ತ ಬಂದು ಮೇಧಾಶಕ್ತಿಯೂ ವೃದ್ಧಿಯಾಗುವುದು.

ಆಸನಪ್ರಾಣಾಯಾಮಾಭ್ಯಾಸಕಾಲದಲ್ಲಿ ಪ್ರಥಮದಲ್ಲಿ ಒಂದು ಬಟ್ಟಲು ನೀರನ್ನು ಕುಡಿದು ಅನುಷ್ಠಾನಕ್ಕೆ ಪ್ರಾರಂಭಮಾಡಬೇಕೆಂದು ಹಿಂದಿನ ಪ್ರಕರಣದಲ್ಲಿಯೇ ತಿಳಿಸಿರುತ್ತಷ್ಟೆ! ಇದಕ್ಕೆ ಕಾರಣವೇನೆಂದರೆ, ಕಬ್ಬಿಣದ ಮೇಲೆ ಹೇಗೆ ತುಕ್ಕುಕಟ್ಟಿರುವುದೋ ಹಾಗೆಯೇ ನಮ್ಮ ದೇಹದ ಅಂಗಗಳಲ್ಲಿ ಆಹಾರದೋಷದಿಂದ, ನೀರಿನಲ್ಲಿ ಪಾಚಿಕಟ್ಟಿಕೊಂಡಿರುವಂತೆ ಕಲ್ಮಷವು ಕಟ್ಟಿರುತ್ತದೆ. ರೋಗಾದಿಗಳು ಬರಲು ಇದೇ ಕಾರಣ. ಅನುಷ್ಠಾನಕ್ಕೆ ಪ್ರಥಮದಲ್ಲಿ ಜಲಪಾನಮಾಡಿದರೆ ಆಸನಪ್ರಾಣಾಯಾಮಗಳ ಅನುಷ್ಠಾನಕಾಲದಲ್ಲಿ ಅಂಗಗಳು ಒಂದಕ್ಕೊಂದು ಉಜ್ಜುವುದರಿಂದ ದೇಹದೊಳಗೆ ಕಟ್ಟಿರುವ ಕಲ್ಮಷಗಳು ಬಿಡುತ್ತಾ ಬರುತ್ತವೆ. ಅನುಷ್ಠಾನದ ಪ್ರಥಮದಲ್ಲಿ ಕೆಲವು ದಿನಗಳು ಈ ಕಲ್ಮಷವು ಕೆರಳುವುದರಿಂದ ಬಾಯೆಲ್ಲಾ ಅಂಟಾಗಿ ಅಸಹ್ಯವಾಗುವುದಲ್ಲದೆ ದೇಹಕ್ಕೆ ಆಯಾಸವುಂಟಾಗುವುದು. ಅನಂತರ ಪರಿಹಾರವಾಗಿ ದೇಹದೊಳಗಿನ ಅವಯವಗಳೆಲ್ಲ ಒಳ್ಳೆಯ ಪ್ರಕಾಶಕ್ಕೆ ಬರುತ್ತವೆ.

ಆದುದರಿಂದ ಕುಂಭಕಪ್ರಾಣಾಯಾಮ ಮಾಡುವುದಕ್ಕಿಂತ ಮುಂಚೆ ಈ ರೇಚಕ ಪೂರಕ ಪ್ರಾಣಾಯಾಮಗಳಿಂದ ತಕ್ಕಮಟ್ಟಿಗೆ ನಾಡಿಗಳನ್ನು ಶುದ್ಧಿಮಾಡಿಕೊಳ್ಳುವುದಲ್ಲದೆ ಉಸಿರಿನ ಕ್ಷಿಪ್ರಗತಿಯನ್ನು ತಗ್ಗಿಸಿಕೊಳ್ಳಬೇಕು. ಇದನ್ನೇ ಶ್ರೀಶಂಕರಭಗವತ್ಪಾದರವರು ಹೇಳಿರುವರೆಂದು ಸ್ವಾಮಿವಿವೇಕಾನಂದರವರು ತಮ್ಮ ರಾಜಯೋಗದಲ್ಲಿ ಬರೆದಿರುತ್ತಾರೆ. ಅಲ್ಲದೆ ರೇಚಕಪೂರಕಗಳನ್ನೂ ಪ್ರಾಣಾಯಾಮವೆಂದೂ, ಇದರಿಂದ ನಾಡಿಗಳನ್ನೆಲ್ಲ ಶುದ್ಧಿ ಮಾಡಿಕೊಳ್ಳಬೇಕೆಂದೂ ಯೋಗಚೂಡಾಮಣ್ಯುಪನಿಷತ್ತಿನಲ್ಲಿ,

"ವಾಮ ದಕ್ಷಿಣ ಮಾರ್ಗೇಣ ಪ್ರಾಣಾಯಾಮೋ ವಿಧೀಯತೆ |
ಶುದ್ಧಿಮೇತಿ ಯದಾ ಸರ್ವಂ ನಾಡೀಚಕ್ರಂ ಮಲಾಕುಲಂ |
ತದೈವ ಜಾಯತೆ ಯೋಗೀ ಪ್ರಾಣಸಂಗ್ರಹಣ ಕ್ಷಮಃ ||

ತಾ|| ಪ್ರಾಣಾಯಾಮವನ್ನು ಬಲದ ಮತ್ತು ಎಡದ ಹೊಳ್ಳೆ ಅಂದರೆ ಇಡಾ, ಪಿಂಗಳಗಳ ಮಾರ್ಗವಾಗಿ ಮಾಡಬೇಕೆಂದು ವಿಧಿಸಿರುತ್ತದೆ. ಈ ವಿಧವಾಗಿ ಪ್ರಾಣಾಯಾಮದ ಅಭ್ಯಾಸದಿಂದ ನಾಡೀಚಕ್ರಗಳಲ್ಲಿರುವ ಕಲ್ಮಷಗಳೆಲ್ಲಾ ನಾಶವಾಗಿ ನಾಡಿಗಳು ಶುದ್ಧವಾಗುವುವು. ಇಂತಹ ಕಾಲದಲ್ಲಿ ಯೋಗಾಭ್ಯಾಸಿಗೆ ಪ್ರಾಣಶಕ್ತಿಯನ್ನು ಸ್ವಾಧೀನಪಡಿಸಿಕೊಳ್ಳಲು ಯೋಗ್ಯತೆಯುಂಟಾಗುವುದು. ಎಂದು ಹೇಳಿರುವುದು.

ಆದುದರಿಂದ ಪ್ರಥಮದಲ್ಲಿ ನಾಡಿಗಳ ಶುದ್ಧಿಗೋಸ್ಕರ ರೇಚಕಪೂರಕ ಪ್ರಾಣಾಯಾಮವನ್ನು ಅನುಷ್ಠಾನಮಾಡುವುದುತ್ತಮ. ದೇಹದೊಳಗಿರುವ ಕಲ್ಮಷವನ್ನು ಹೋಗಲಾಡಿಸಿಕೊಳ್ಳಲು ರೇಚಕಪೂರಕ ಪ್ರಾಣಾಯಾಮವನ್ನು ಅನುಷ್ಠಾನಮಾಡಬೇಕೆಂಬ ತತ್ವಕ್ಕೆ ಧ್ಯಾನಬಿಂದೂಪನಿಷತ್ತಿನಲ್ಲಿ,

ಶೋಧನಂ ಮಲಜಾಲಾನಾಂ ಘಟನಂ ಚಂದ್ರ ಸೂರ್ಯಯೋಃ |

ಎಂದು ಹೇಳಿರುವುದು.

ಆದುದರಿಂದ ಕುಂಭಕಪ್ರಾಣಾಯಾಮವನ್ನು ಮಾಡುವುದಕ್ಕೆ ಪ್ರಥಮದಲ್ಲಿ ರೇಚಕಪೂರಕ ಪ್ರಾಣಾಯಾಮವನ್ನು ಅನುಷ್ಠಾನಮಾಡಬೇಕು. ಅಲ್ಲದೆ ರಾಮಾಯಣಕಥೆಯ ತತ್ವವೂ ಈ ರೀತಿಯಾಗಿ ಅನ್ವಯವಾಗಿ ಬರುತ್ತಿರುವುದರಿಂದ ಪ್ರಥಮದಲ್ಲಿ ರೇಚಕಪೂರಕ ಪ್ರಾಣಾಯಾಮವನ್ನು ಮೋಕ್ಷಾಧಿಕಾರಿಯು ಅಗತ್ಯವಾಗಿ ಅನುಷ್ಠಾನಮಾಡಬೇಕು. ಮೋಕ್ಷಮಾರ್ಗಿಗಳಲ್ಲದವರು ಕೂಡ ಆಸನಾಭ್ಯಾಸಗಳನ್ನೂ ರೇಚಕಪೂರಕ ಪ್ರಾಣಾಯಾಮಗಳನ್ನೂ ಅಭ್ಯಾಸಮಾಡಿದರೆ ರೋಗಾದಿಗಳು ಹೋಗಿ ಆರೋಗ್ಯಭಾಗ್ಯವೂ ಮೇಧಾಶಕ್ತಿಯೂ ಚೆನ್ನಾಗಿರುತ್ತವೆ.

ಈ ಮೇಲಿನ ತತ್ವಾರ್ಥಗಳೇ ಹನುಮದಾದಿ ವಾನರರು ಸೀತಾದೇವಿಯನ್ನು ಹುಡುಕುತ್ತಿದ್ದುದಾಗಿದೆ.

## ೬ನೆಯ ಪ್ರಕರಣ.

**ಹನುಮದಾದಿ ವಾನರರು ಸ್ವಯಂಪ್ರಭೆಯ ದರ್ಶನಮಾಡಿದುದು.**



**ಕುಂಭಕ ಪ್ರಾಣಾಯಾಮದ ಸ್ವರೂಪ.**

ರಾ|| ಹನುಮದಾದಿ ವಾನರರು ಸೀತಾದೇವಿಯನ್ನು ಹುಡುಕುತ್ತ ಯಾರಿಗೂ ಪ್ರವೇಶಿಸಲು ಸಾಧ್ಯವಿಲ್ಲದ ಋಕ್ಷಬಿಲವೆಂಬ ಬಿಲದೊಳಗೆ ಪ್ರಥಮದಲ್ಲಿ ಗಾಢಾಂಧಕಾರವಾಗಿದ್ದುದರಿಂದ ಒಬ್ಬರನ್ನೊಬ್ಬರು ತಬ್ಬಿಕೊಂಡು ಪ್ರವೇಶಮಾಡಿದರು. ಆ ಬಿಲದ್ವಾರಕ್ಕೆ

ಬರುವಷ್ಟರಲ್ಲಿ, ಅಲ್ಲಲ್ಲಿ ಸುತ್ತಿ ಬಂದ ಬಾಯಾರಿಕೆಯಿಂದಲೂ ಹಸಿವಿನಿಂದಲೂ ಬಳಲಿ ದಾಹಶಾಂತಿಗಾಗಿ ಆತುರಪಡುತ್ತಿದ್ದರು. ಆ ಬಿಲವು ಪ್ರಥಮದಲ್ಲಿ ಗಾಢಾಂಧಕಾರವಾಗಿದ್ದರೂ ಬಹುದೂರಕ್ಕೆ ಹೋದ ಮೇಲೆ ಪ್ರಕಾಶಮಾನವಾಗಿ ರಮಣೀಯವಾದ ಒಂದು ಪ್ರದೇಶವಿರುವುದನ್ನು ಹನುಮದಾದಿಗಳು ಕಂಡರು. ಇಂತಹ ಪ್ರದೇಶದಲ್ಲಿ ಚಿನ್ನದ ಬಣ್ಣದ ತೇಜಸ್ಸಿನಿಂದ ಜ್ವಲಿಸುತ್ತಿರುವ ಸ್ವಯಂಪ್ರಭೆಯೆಂಬ ವ್ಯಕ್ತಿಯನ್ನು ಕಂಡರು. ಈ ಸ್ವಯಂಪ್ರಭೆಯಿಂದ ಅತಿಥಿಸತ್ಕಾರವನ್ನು ಹೊಂದಿ ಕ್ಷುತ್ಪಿಪಾಸಗಳನ್ನು ಹೋಗಲಾಡಿಸಿಕೊಂಡು ಶಾಂತರಾಗಿ ಅಲ್ಲಿಂದ ಹೊರಗೆ ಹೊರಟರು.

**ತತ್ತ್ವ||** ಈ ಮೇಲಿನ ಕಥೆಯು ತತ್ತ್ವಗಳೆಲ್ಲ ಕುಂಭಕ ಪ್ರಾಣಾಯಾಮಕ್ಕೆ ಹೋಲಿಕೆಯಾಗಿರುವುದು. ಕುಂಭಕವೆಂದರೆ ತುಂಬಿಸುವುದೆಂದರ್ಥವಾಗುತ್ತದೆ. ಹಿಂದೆ ಹೇಳಿರುವ ರೇಚಕಪೂರಕ ಪ್ರಾಣಾಯಾಮದಲ್ಲಿ ಉಸಿರನ್ನು ಶಿರಸ್ಸಿನಲ್ಲಿ ನಿಲ್ಲಿಸುವುದಿಲ್ಲ. ದೇಹದಲ್ಲಿ ಇರುವ ನಾಡಿಗಳ ಶುದ್ಧಿಗೋಸ್ಕರ ಮತ್ತು ಉಸಿರಿನ ಕ್ಷಿಪ್ರಗತಿಯನ್ನು (ದಮ್ಮನ್ನು) ತಗ್ಗಿಸುವುದಕ್ಕೋಸ್ಕರ ರೇಚಕಪೂರಕ ಪ್ರಾಣಾಯಾಮವನ್ನು ಅನುಷ್ಠಿಸಬೇಕೆಂದು ಹಿಂದೆ ತಿಳಿಸಿರುತ್ತಷ್ಟೆ! ಈ ರೇಚಕಪೂರಕ ಪ್ರಾಣಾಯಾಮಗಳನ್ನು ಎರಡು ಮೂರು ತಿಂಗಳಕಾಲ ದಿನಕ್ಕೆ ಎರಡು ಮೂರಾವರ್ತಿಯಂತೆ ಚೆನ್ನಾಗಿ ಅಭ್ಯಾಸಮಾಡಿ ಉಸಿರನ್ನು ಕೊಂಚ ಸ್ಥಿಮಿತಕ್ಕೆ ತಂದುಕೊಂಡು ಅನಂತರದಲ್ಲಿಯೇ ಕುಂಭಕಪ್ರಾಣಾಯಾಮವನ್ನು ಮಾಡಬೇಕು.

ಕುಂಭಕಪ್ರಾಣಾಯಾಮವನ್ನು ಮಾಡುವುದು ಹೇಗೆಂದರೆ—ರೇಚಕಪೂರಕ ಪ್ರಾಣಾಯಾಮದಲ್ಲಿ ಹೇಳಿರುವ ಎರಡು ವಿಧದಲ್ಲಿ ಪ್ರಥಮವಾದ ಒಂದು ಮೂಗಿನಿಂದ ಉಸಿರನ್ನು ಎಳೆದುಕೊಂಡು ಇನ್ನೊಂದು ಮೂಗಿನಲ್ಲಿ ಬಿಡುವ ವಿಧಾನದಲ್ಲಿ ಕುಂಭಕಮಾಡಬೇಕು. ಯಾವಾಗ ಒಂದು ಮೂಗಿನಲ್ಲಿ ಉಸಿರನ್ನು ಮೆಲ್ಲಮೆಲ್ಲಗೆ ಮೇಲಕ್ಕೆಳೆದುಕೊಂಡು ನೆತ್ತಿಯಲ್ಲಿ ಶೇಖರಿಸುತ್ತವೆಯೋ ಆ ಶೇಖರಿಸುವ ಉಸಿರನ್ನು ನೆತ್ತಿಯಲ್ಲಿ ನಿಲ್ಲಿಸಿಕೊಂಡು ಮೂಗಿನ ಎರಡು ಹೊಳ್ಳೆಗಳನ್ನೂ ಬೆರಳುಗಳಿಂದ ಮುಚ್ಚಿಕೊಂಡು, ಒಂದಾವರ್ತಿಯಾಗಲಿ ಎರಡಾವರ್ತಿಯಾಗಲಿ ಅವರವರ ಚೈತನ್ಯವಿದ್ದಂತೆ ಗಾಯತ್ರೀಮೂಲಮಂತ್ರವನ್ನಾಗಲೀ ಮತ್ತಾವ ದೇವತಾ ಮೂಲಮಂತ್ರವನ್ನಾಗಲಿ ಪುನಶ್ಚರಣೆ ಮಾಡಬೇಕು. ಯಾವ ಮಂತ್ರವೂ ಇಲ್ಲದಿದ್ದರೆ ಒಂದು ಎರಡು ಮುಂತಾದ ಸಂಖ್ಯೆಗಳನ್ನಾದರೂ ಮನಸ್ಸಿನಲ್ಲಿ ಎಣಿಸಿಕೊಳ್ಳಬೇಕು. ಕುಂಭಕ ಮಾಡಿದ ಕಾಲದಲ್ಲಿ ಹತ್ತು ಸಂಖ್ಯೆ ಎಣಿಸುವಷ್ಟು ಚೈತನ್ಯವಿದ್ದಲ್ಲಿ ಐದುಸಂಖೆಯನ್ನು ಎಣಿಸುವಷ್ಟು ಕಾಲವೇ ಉಸಿರನ್ನು ನಿಲ್ಲಿಸಿದ್ದು ಯಾವ ಮೂಗಿನಿಂದ ಉಸಿರನ್ನು ಎಳೆದುಕೊಂಡು ನಿಲ್ಲಿಸಿಕೊಂಡಿದ್ದೆವೋ ಆ ಮೂಗಿನ ಪಕ್ಕದ ಹೊಳ್ಳೆಯಿಂದ ಅತ್ಯಂತ ನಿಧಾನವಾಗಿ ಬಿಡಬೇಕು. ಖಂಡಿತವಾಗಿಯೂ ವೇಗವಾಗಿ ಬಿಡಕೂಡದು. ವೇಗವಾಗಿ ಬಿಡುವುದೇ ಅಪಾಯಕರ. ಯಾವ ಹೊಳ್ಳೆಯಿಂದ ಉಸಿರನ್ನು ಬಿಡು

ತ್ತೇವೆಯೋ ಆ ಹೊಳ್ಳೆಯಿಂದಲೇ ಪುನಃ ಮೇಲಕ್ಕೆ ಮೆಲಮೆಲ್ಲಗೆ ತೆಗೆದುಕೊಂಡು, ಮೇಲೆ ಹೇಳಿದಂತೆ ನೆತ್ತಿಯಲ್ಲಿ ಶೇಖರಿಸಿ ನಿಲ್ಲಿಸಿಕೊಂಡು, ಮೂಗಿನ ಹೊಳ್ಳೆಗಳನ್ನು ಮುಚ್ಚಿಕೊಂಡು, ಕುಂಭಕಮಾಡಿದ್ದು ಅನಂತರ ಯಾವ ಹೊಳ್ಳೆಯಿಂದ ಮೇಲಕ್ಕೆ ತೆಗೆದುಕೊಂಡಿರುತ್ತೇವೆಯೋ ಅದರ ಪಕ್ಕದ ಹೊಳ್ಳೆಯಿಂದ ಅತ್ಯಂತ ನಿಧಾನವಾಗಿ ಬಿಡಬೇಕು. ಇದೇ ರೀತಿಯಲ್ಲಿ ಎಡದ ಹೊಳ್ಳೆಯನಂತರ ಬಲದ ಹೊಳ್ಳೆ, ಬಲದ ಹೊಳ್ಳೆಯನಂತರ ಎಡದ ಹೊಳ್ಳೆಗಳಿಂದ ಮೇಲಕ್ಕೆ ಉಸಿರನ್ನು ತೆಗೆದುಕೊಂಡು ಕುಂಭಕಾಭ್ಯಾಸವನ್ನು ಮಾಡಬೇಕು. ಹೆಚ್ಚಾದ ಆಯಾಸವಾಗುವಂತೆ ದಿನಕ್ಕೆ ಒಂದೇ ಕಾಲದಲ್ಲಿ ಅಧಿಕವಾಗಿ ಪ್ರಾಣಾಯಾಮ ಮಾಡುವುದಕ್ಕೆ ಬದಲಾಗಿ ದಿನಕ್ಕೆ ಎರಡು ಅಥವಾ ಮೂರು ಕಾಲಗಳಲ್ಲಿ ಕೊಂಚ ಸಂಖ್ಯೆಗಳನ್ನು ಪ್ರಥಮದಲ್ಲಿ ಮಾಡಿಕೊಂಡುಬಂದು ದಿನಕ್ರಮೇಣ ಹೆಚ್ಚಿಸಿಕೊಳ್ಳಬೇಕು.

ಹನುಮಂತ ಮುಂತಾದವರು ಪ್ರವೇಶಮಾಡಿದ ಬಿಲವೇ ಶಿರಸ್ಸು. ಋಕ್ಷವೆಂದರೆ "ಋಕ್ಷತಿ ತಮೋನಾಶಯತೀತಿ ಋಕ್ಷಂ" ಋಕ್ಷವೆಂದರೆ ನಕ್ಷತ್ರವೆಂದು ಅಮರದಲ್ಲಿದೆ. ಆದುದರಿಂದ ಋಕ್ಷಬಿಲವೆಂದರೆ ನಕ್ಷತ್ರದ ಬೆಳಕಿನ ಬಿಲವೆಂದಾಗುತ್ತದೆ. ಇಂತಹ ಬಿಲದಲ್ಲಿ ವಾಸಮಾಡತಕ್ಕವರು ಯಾರೆಂದರೆ, ಸ್ವಯಂಪ್ರಭೆ ಎಂಬ ವ್ಯಕ್ತಿಯು. ಅವಳೇ ಪ್ರಭೆಯ ಸ್ವರೂಪಳು. ತಮೋರೂಪವಾದ ರಾತ್ರಿಯ ಗಾಢಾಂಧಕಾರವನ್ನು ಹಾಳು ಮಾಡುವಂತಹ ನಕ್ಷತ್ರದಂತೆ ಪ್ರಕಾಶಸ್ವರೂಪಳು. ಹನುಮದಾದಿ ವಾನರರು ಸ್ವಯಂಪ್ರಭೆಯ ದರ್ಶನಮಾಡಿದರೆಂದರೆ—ಶಿರಸ್ಸಿನಲ್ಲಿ ವಾಯುವನ್ನು ನಿಲ್ಲಿಸಿಕೊಂಡು ಕುಂಭಕ ಮಾಡುವ ತತ್ವವಾಗಿರುತ್ತದೆ. ಶಿರಸ್ಸಿನಲ್ಲಿ ಶ್ವಾಸಧಾರಣೆ ಮಾಡಿಕೊಂಡು ನಿಲ್ಲಿಸಿಕೊಂಡಲ್ಲಿ ಶಿರಸ್ಸಿನಲ್ಲಿ ಕಾಣುವ ತೇಜಸ್ಸೇ ಸ್ವಯಂಪ್ರಭೆ. ಪ್ರಾಣಾಯಾಮ ಮಾಡುತ್ತಿರುವಾಗ ಉಸಿರಿನ ಕ್ಷಿಪ್ರಗತಿಯಿಂದ ಆಯಾಸವಾಗುವ ತತ್ವವೇ ಹನುಮದಾದಿ ವಾನರರ ಬಳಲಿಕೆಯಾಗಿರುವುದು. ಕುಂಭಕ ಮಾಡುವಾಗ ಶ್ವಾಸೋಚ್ಛ್ವಾಸಗಳು ಪ್ರಥಮದಲ್ಲಿ ಎಲ್ಲಿಯೋ ಗಾಢಾಂಧಕಾರಕ್ಕೆ ಹೋಗುವ ಹಾಗೆ ಕಾಣುತ್ತದೆ. ಇದೇ ವಾನರರು ಪ್ರಥಮದಲ್ಲಿ ಅಂಧಕಾರದಲ್ಲಿ ಪ್ರವೇಶಮಾಡಿದುದಾಗಿರುತ್ತದೆ. ಶ್ವಾಸೋಚ್ಛ್ವಾಸಗಳನ್ನೆಲ್ಲಾ ನೆತ್ತಿಯಲ್ಲಿ ನಿಲ್ಲಿಸಿ ಕುಂಭಕ ಮಾಡಿದರೆ ತೇಜೋಮಯನಾದ ಪ್ರಕಾಶ ಕಾಣುವುದೇ ಹನುಮದಾದಿಗಳು ಸ್ವಯಂಪ್ರಭೆಯ ದರ್ಶನ ಮಾಡಿದ್ದಾಗಿರುತ್ತದೆ. ಕುಂಭಕ ಮಾಡುವ ಕಾಲದಲ್ಲಿ ಉಸಿರನ್ನು ಒಂದುಕಡೆ ನಿಲ್ಲಿಸುವುದರಿಂದ ಸ್ವಲ್ಪ ಆಯಾಸ ಪರಿಹಾರವಾಗುವುದೇ ಸ್ವಯಂಪ್ರಭೆಯಿಂದ ವಾನರರು ಸತ್ಕರಿಸಲ್ಪಟ್ಟುದಾಗಿದೆ. ಸ್ವಯಂಪ್ರಭೆಯು ಹನುಮದಾದಿ ವಾನರರಿಗೆ ಸತ್ಕಾರಮಾಡಿ ಜಾಗ್ರತೆಯಾಗಿ ಅವರನ್ನು ಬಿಲದಿಂದ ಹೊರಗೆ ಕಳುಹಿಸಿಕೊಟ್ಟ ತತ್ವವೇನೆಂದರೆ—ಮೇಲೆ ಹೇಳಿರುವಂತೆ ಕುಂಭಕವನ್ನು ಹತ್ತು ಸಂಖ್ಯೆ ಎಣಿಸುವಷ್ಟು ಚೈತನ್ಯವಿದ್ದರೂ ಐದುಸಂಖ್ಯೆಯನ್ನು ಎಣಿಸುವಷ್ಟು ಕಾಲ ಮಾತ್ರವೇ

ಕುಂಭಕ ಮಾಡಬೇಕೆಂಬುದಾಗಿರುತ್ತದೆ. ಆದುದರಿಂದ ಈ ಮೇಲಿನ ತತ್ತ್ವಾರ್ಥಗಳು ಕುಂಭಕಪ್ರಾಣಾಯಾಮದ ಲಕ್ಷಣವಾಗಿರುವುದೆಂಬುದು ನಿಸ್ಸಂದೇಹವಾಗಿರುವುದು. ಕುಂಭಕಪ್ರಾಣಾಯಾಮ ಮಾಡುವಾಗ ಈ ಮೇಲಿನ ತತ್ತ್ವಗಳಂತೆ ನಡೆಯುವುದೆಂಬುದನ್ನು ಯೋಗಾನುಷ್ಠಾನಪರರು ಬಲ್ಲರು.

ಆದುದರಿಂದ ಮೋಕ್ಷಾಧಿಕಾರಿಯು ರೇಚಕ, ಪೂರಕ, ಪ್ರಾಣಾಯಾಮಗಳನ್ನು ಪ್ರಥಮದಲ್ಲಿ ಅನುಷ್ಠಾನಮಾಡಿ ಸ್ತಿಮಿತಕ್ಕೆ ತಂದುಕೊಂಡು ಅನಂತರ ಕುಂಭಕಪ್ರಾಣಾಯಾಮವನ್ನು ಅಭ್ಯಾಸ ಮಾಡಬೇಕು. ರೇಚಕ, ಪೂರಕ ಪ್ರಾಣಾಯಾಮಗಳಿಂದ ಪ್ರಥಮದಲ್ಲಿ ಉಸಿರಿನ ಕ್ಷಿಪ್ರಗತಿಯನ್ನು ತಗ್ಗಿಸಿಕೊಳ್ಳದೆ ಕೆಲವರು ಕುಂಭಕಪ್ರಾಣಾಯಾಮವನ್ನೇ ಪ್ರಾರಂಭಮಾಡುತ್ತಾರೆ. ಇದು ಕಷ್ಟವಾಗಿಯೂ, ಅಪಾಯಕರವಾಗಿಯೂ ಇರುತ್ತದೆ. ಕಾರಣವೇನೆಂದರೆ—ಉಸಿರಿನ ದುಡುಕು ಅಥವಾ ಕ್ಷಿಪ್ರಗತಿಯನ್ನು ಮುರಿಯದೆ ಕುಂಭಕಮಾಡಿದರೆ ಕುಂಭಕದಲ್ಲಿ ಬಲವಂತದಿಂದ ಉಸಿರನ್ನು ತಡೆದು ನಿಲ್ಲಿಸಬೇಕಾಗುತ್ತದೆ. ಉಸಿರಿನ ದುಡುಕು ಮುರಿಯದೇ ಇರುವುದರಿಂದ ಕುಂಭಕದಿಂದ ರೇಚಕ ಮಾಡುವಾಗ ಅಂದರೆ ಉಸಿರನ್ನು ಬಿಡುವಾಗ ತುಂಬಾ ಆಯಾಸವಾಗುತ್ತದೆ. ಅಲ್ಲದೆ ಕುಂಭಕದಲ್ಲಿ ನಿಲ್ಲಿಸಿದನಂತರ ಇನ್ನೂ ಸ್ವಲ್ಪಕಾಲ ಕುಂಭಕದಲ್ಲಿಯೇ ಇರೋಣವೆಂದು ಮನಸ್ಸಾಗುತ್ತದೆ. ಈ ರೀತಿಯಾಗಿ ಕುಂಭಕದಕಾಲ ವಿಳಂಬವಾಗುವುದರಿಂದ ಆಯಾಸ ಹೆಚ್ಚಾಗಿ ಉಸಿರನ್ನು ಥಟ್ಟನೆ ಬಿಟ್ಟುಬಿಡುವ ಹಾಗೆ ಆಗುತ್ತದೆ. ಸರಿಯಾಗಿ ತಿಳಿದುಕೊಳ್ಳದೆ ಹೀಗೆ ಮಾಡಿದರೆ ನಿರ್ಬಲತ್ವವುಂಟಾಗುವುದಲ್ಲದೆ ಬುದ್ಧಿಭ್ರಮಣೆ ಮುಂತಾದ ಅಪಾಯಕ್ಕೂ ಕಾರಣವಾಗುತ್ತದೆ.

ಕೆಲವರು ಈ ಕುಂಭಕ ಪ್ರಾಣಾಯಾಮವನ್ನು ಶಕ್ತಿಗೆ ತಕ್ಕಂತೆಯೂ ಶಾಸ್ತ್ರೋಕ್ತವಾಗಿಯೂ ಮಾಡದೆ, ಮತ್ತು ಈ ಪ್ರಾಣಾಯಾಮದ ಸೋಪಾನಕ್ಕೆ ತಕ್ಕಂತೆ ಆಹಾರ ವ್ಯವಹಾರಗಳಲ್ಲಿ ನಿಯಮದಿಂದಿರದೆ ಅನೇಕ ಅಪಾಯಗಳನ್ನು ಅನುಭವಿಸಿ ಯೋಗಕ್ಕೇ ಕೆಟ್ಟ ಹೆಸರನ್ನು ತಂದಿರುತ್ತಾರೆ. ಈ ಅಪಾಯಗಳನ್ನು ಹೋಗಲಾಡಿಸಿಕೊಳ್ಳಲು ಹಿಂದಿನ ಪ್ರಕರಣದಲ್ಲಿ ಹೇಳಿರುವ ರೇಚಕಪೂರಕ ಪ್ರಾಣಾಯಾಮಗಳನ್ನು ಚೆನ್ನಾಗಿ ಅಭ್ಯಾಸ ಮಾಡಬೇಕು. ಈ ರೀತಿ ಮಾಡಿದರೆ ಯಾವ ಅಪಾಯವೂ ಇಲ್ಲದೆ ಕುಂಭಕಪ್ರಾಣಾಯಾಮವು ಸಿದ್ಧಿಸುತ್ತದೆ. ಕುಂಭಕಮಾಡುವುದರಲ್ಲಿ ಐವತ್ತು ಸಂಖ್ಯೆ ಎಣಿಸುವಷ್ಟು ಕಾಲ ನಿಲ್ಲಿಸಲು ಶಕ್ತಿಯಿದ್ದರೆ ಇಪ್ಪತ್ತೈದು ಸಂಖ್ಯೆ ಎಣಿಸುವಷ್ಟು ಕಾಲವೇ ಕುಂಭಕ ಮಾಡಿ ಅನಂತರ ಉಸಿರನ್ನು ನಿಧಾನವಾಗಿ ಬಿಡುವುದು ಉತ್ತಮವಾಗಿಯೂ ಅಪಾಯವಿಲ್ಲದೆಯೂ ಇರುತ್ತದೆ. ಪ್ರತಿದಿನವೂ ಕುಂಭಕಪ್ರಾಣಾಯಾಮ ಮಾಡುವಾಗ ಹಿಂದಿನ

ಪ್ರಕರಣದಲ್ಲಿ ಹೇಳಿದ ರೇಚಕಪೂರಕ ಪ್ರಾಣಾಯಾಮಗಳನ್ನು ಕೊಂಚಮಾಡಿ ಅನಂತರ ಕುಂಭಕಪ್ರಾಣಾಯಾಮ ಮಾಡಬೇಕು.

ಈ ಕುಂಭಕದಲ್ಲಿ ಎಂಟು ವಿಧಗಳಿರುತ್ತವೆ. ಎಲ್ಲಾ ವಿಧಗಳೂ ನಮಗೆ ಅನಾವಶ್ಯಕ. ಬೇಕಾದರೆ ಅಧಿಕಾರಿಯು ಗುರುಮುಖೇನ ತಿಳಿದು ಅನುಷ್ಠಾನಮಾಡಬಹುದು. ಈ ಎಂಟು ಕುಂಭಕಗಳಲ್ಲಿ ಮೇಲೆ ಬರೆದಿರುವ ವಿಧಾನದ ಜೊತೆಗೆ ಭಸ್ತ್ರಿಕಪ್ರಾಣಾಯಾಮದ ಕುಂಭಕವನ್ನು ಮೋಕ್ಷಾಧಿಕಾರಿಯು ಅನುಷ್ಠಾನಮಾಡಿದರೆ ಉತ್ತಮ. ಈ ಭಸ್ತ್ರಿಕ ಪ್ರಾಣಾಯಾಮದಲ್ಲಿ ಬಾಹ್ಯಭಸ್ತ್ರಿಕ ಮತ್ತು ಅಂತರ್ಭಸ್ತ್ರಿಕಗಳೆಂಬ ಎರಡು ವಿಧಗಳಿರುತ್ತವೆ. ಅಂತರ್ಭಸ್ತ್ರಿಕದ ಅನುಷ್ಠಾನವೇ ಹನುಮಂತನು ಸುಂದರಕಾಂಡದಲ್ಲಿ ನಡೆಸಿರುವ ಕಾರ್ಯಗಳ ತತ್ವದ ಪ್ರಾಣಾಯಾಮವಾಗಿರುತ್ತದೆ. ಈ ಅಂತರ್ಭಸ್ತ್ರಿಕ ಪ್ರಾಣಾಯಾಮದ ವಿಚಾರವು ಮುಂದಿನ ಪ್ರಕರಣದಿಂದ ಪ್ರಾರಂಭವಾಗುತ್ತದೆ. ಈ ಪ್ರಕರಣದಲ್ಲಿ ಮೊದಲು ತಿಳಿಸಿದ ಕುಂಭಕದ ಜೊತೆಗೆ ಬಾಹ್ಯಭಸ್ತ್ರಿಕದ ಕುಂಭಕವನ್ನು ಅಭ್ಯಾಸಮಾಡಿದರೆ ಉತ್ತಮವೆಂದು ಉಕ್ತವಾಗಿದೆ. ಹಿಂದಿನ ಪ್ರಕರಣದಲ್ಲಿ ನಾಡಿಗಳ ಶುದ್ಧಿಗಾಗಿ ಹೇಳಿರುವ ಎರಡು ವಿಧವಾದ ರೇಚಕಪೂರಕ ಪ್ರಾಣಾಯಾಮಗಳಲ್ಲಿ ಎರಡನೆಯ ವಿಧವಾದ ತಿದಿಯೊತ್ತಿದಂತೆ ಹೇಳಿರುವ ವಿಧದಲ್ಲಿ ತಕ್ಕಮಟ್ಟಿಗೆ ರೇಚಕಪೂರಕ ಮಾಡಿಕೊಂಡು ಅನಂತರ ಶಿರಸ್ಸಿನಲ್ಲಿ ಕುಂಭಕಮಾಡಿ ಬಲದ ಕೈ ಹೆಬ್ಬೆರಳಿನಿಂದ ಮೂಗನ್ನು ಮುಚ್ಚಿಕೊಂಡು ಚೈತನ್ಯವಿರುವುದಕ್ಕಿಂತ ಸ್ವಲ್ಪ ಕಡಿಮೆಯಾಗಿ ಉಸಿರನ್ನು ನಿಲ್ಲಿಸಿದ್ದು ಅನಂತರ ಎಡದ ಮೂಗಿನ ಹೊಳ್ಳೆಯಿಂದ ನಿಧಾನವಾಗಿ ಬಿಡಬೇಕು.

ಮೇಲೆ ವಿವರಿಸಿರುವ ತತ್ವಾರ್ಥಗಳೇ ಹನುಮದಾದಿಗಳು ಋಕ್ಷಬಿಲದಲ್ಲಿದ್ದ ಸ್ವಯಂಪ್ರಭೆಯ ದರ್ಶನಮಾಡಿದುದಾಗಿರುತ್ತದೆ. ಕುಂಭಕಪ್ರಾಣಾಯಾಮ ಮಾಡುವ ಅಧಿಕಾರಿಯು ಕುಂಭಕಮಾಡುವ ಕಾಲದಲ್ಲಿ ಶಿರಸ್ಸಿನಲ್ಲಿ ಉಸಿರನ್ನೆಲ್ಲ ನಿಲ್ಲಿಸಿಕೊಂಡಾಗ ತೇಜಸ್ಸನ್ನು ನೋಡುತ್ತಾನೆ. ಈ ತೇಜಸ್ಸು ಯಾರದೆಂದರೆ ಸ್ವಯಂ ಎಂದರೆ ತನ್ನ ಪ್ರಭೆಯೇ ಹೊರತು ಮತ್ತೊಬ್ಬರ ಪ್ರಭೆಯಲ್ಲ. ಸ್ವಯಂ ಎಂಬ ಶಬ್ದವು ಆತ್ಮವಾಚಕವಾಗಿ ಪ್ರಯೋಗಿಸಲ್ಪಟ್ಟಿರುತ್ತದೆ. ಇದೇ ತಾತ್ಪರ್ಯಕ್ಕೆ ಶ್ರೀವಿದ್ಯಾರಣ್ಯರವರು ಪಂಚದಶಿ ಚಿತ್ರದೀಪಿಕೆ ೪೧ನೆಯ ಶ್ಲೋಕದಲ್ಲಿ,

ಅಹಂತ್ವಾದ್ಭಿದ್ಯತಾಂ ಸ್ವತ್ವಂ ಕೂಟಸ್ಥೆ ತೇನ ಕಿಂತವ |
ಸ್ವಯಂ ಶಬ್ದಾರ್ಥ ಏವೈಷ ಕೂಟಸ್ಥ ಇತಿ ಮೇ ಭವೇತ್ ||

ತಾ|| ಅಹಂ ಎಂಬ ಶಬ್ದಾರ್ಥಕ್ಕಿಂತಲೂ ಸ್ವಯಂ ಎಂಬ ಶಬ್ದಾರ್ಥವು ಭೇದವಾಗಲ್ಪಡಲಿ! ಈ ಭೇದದಿಂದ ಇರುವ ಲಾಭವೇನೆಂದರೆ, ಈ ಸ್ವಯಂ ಶಬ್ದಾರ್ಥವೇ ಪರಮಾತ್ಮ ಪ್ರತಿಪಾದಕವಾದ ನಾಮವೆಂಬ ಲಾಭವು ಉಂಟಾಗುವುದು. ಎಂದು ಹೇಳಿರುವರು.

ಆದುದರಿಂದ ಸ್ವಯಂ ಎಂದರೆ ನಮ್ಮ ನಿಶ್ಚಯವಾದ ಸ್ವರೂಪವೆಂದರೆ, ಆತ್ಮ. ಸ್ವಯಂಪ್ರಭೆಯೆಂದರೆ, ನಮ್ಮ ಪ್ರಕಾಶ ಅಥವಾ ಆತ್ಮಪ್ರಭೆ. ಅಂದರೆ, ನಮಗೆ ಕುಂಭಕ ಮಾಡುವ ಕಾಲದಲ್ಲಿ ಕಾಣುವ ಸ್ವಯಂಪ್ರಭೆಯು ಆತ್ಮನ ಪ್ರತಿಫಲನದ ಜ್ಯೋತಿಯು. ಇದು ಹೇಗೆಂದರೆ ನಾವು ಹಗಲಿನಲ್ಲಿ ಸೂರ್ಯನ ಪ್ರಕಾಶದಿಂದಲೂ ರಾತ್ರಿಯಲ್ಲಿ ಅಗ್ನಿಯ ಪ್ರಕಾಶದಿಂದಲೂ ಪದಾರ್ಥಗಳನ್ನು ನೋಡುತ್ತೇವೆ. ನೋಡುವ ನಮ್ಮ ಕಣ್ಣುಗಳನ್ನು ಮುಚ್ಚಿಕೊಂಡರೂ ನಮ್ಮೊಳಗಡೆಯೇ ತೇಜಸ್ಸು ಕಾಣಿಸುತ್ತದೆ. ನಾವು ಕಣ್ಣು ಮುಚ್ಚಿಕೊಂಡು ಒಳಗಡೆ ತೇಜಸ್ಸನ್ನು ನೋಡಿದರೂ ನಾನು ಎಂಬ ಜ್ಞಾನವಿರುತ್ತದೆ. ಆದುದರಿಂದ ಒಳಗಡೆ ಕಾಣುವ ತೇಜಸ್ಸಿನ ಅಂತರ್ಗತವಾಗಿ ನಮ್ಮ ನಿಶ್ಚಯವಾದ ಪರಮಾತ್ಮ ಸ್ವರೂಪವಿರುತ್ತದೆ. ನಮಗೆ ಕಾಣುವ ತೇಜಸ್ಸೇ ಪ್ರತಿಬಿಂಬ ಅಥವಾ ಚಿದಾಭಾಸಸ್ವರೂಪದ ಬೆಳಕು. ಈ ತತ್ವಗಳನ್ನು ಒಳಗೊಂಡಿರುವಂತೆ ಶ್ರೀಶಂಕರಭಗವತ್ಪಾದರವರು ಹೇಳಿರುವ ಏಕಶ್ಲೋಕೀ ಎಂಬುದನ್ನು ಯುದ್ಧಕಾಂಡದಲ್ಲಿ ಅಗಸ್ತ್ಯರು ಶ್ರೀರಾಮನಿಗೆ ಆದಿತ್ಯಹೃದಯುವನ್ನು ಉಪದೇಶಮಾಡಿದ ತತ್ವದಲ್ಲಿ ಬರೆದಿರುತ್ತದೆ.

ನಾವು ಸದ್ಯದಲ್ಲಿ ರಾತ್ರಿಯ ಗಾಢಾಂಧಕಾರದ ತತ್ವದ ಅವಿದ್ಯೆಯಲ್ಲಿ ಬಿದ್ದಿರುತ್ತೇವೆ. ಗಾಢಾಂಧಕಾರದ ನಿವೃತ್ತಿಗೆ ನಕ್ಷತ್ರಗಳ ಬೆಳಕಿನಿಂದ ಎಷ್ಟುಮಾತ್ರ ಸಹಾಯವಾಗುವುದೋ, ಅಷ್ಟುಮಾತ್ರವೇ ಸ್ವಯಂಪ್ರಭೆಯ ದರ್ಶನದ ತತ್ವವಾದ ಕುಂಭಕಪ್ರಾಣಾಯಾಮದಿಂದ ಸಹಾಯವಾಗುವುದು. ಹನುಮಂತನು ಸುಂದರಕಾಂಡದಲ್ಲಿ ಲಂಕೆಯನ್ನು ಪ್ರವೇಶಿಸಿ ಪೂರ್ಣಚಂದ್ರನನ್ನು ವರ್ಣಿಸಿರುವ ಸೋಪಾನದ ತತ್ವಕ್ಕೆ ಅಧಿಕಾರಿಯು ಬಂದರೆ, ಅಧಿಕಾರಿಯಲ್ಲಿರುವ ಗಾಢಾಂಧಕಾರವಾದ ಅವಿದ್ಯೆಯು ಪೂರ್ಣಚಂದ್ರೋದಯದಿಂದ ಅಂಧಕಾರವು ಎಷ್ಟರಮಟ್ಟಿಗೆ ನಿವಾರಣೆಯಾಗುವುದೋ ಅಷ್ಟರಮಟ್ಟಿಗೆ ನಿವೃತ್ತಿಯಾಗುತ್ತದೆ. ಇದರಂತೆ ಶ್ರೀರಾಮಾದಿಗಳು ಲಂಕಾಪಟ್ಟಣವನ್ನು ಮುತ್ತಿದ ತತ್ವವಾದ ಓಂಕಾರೋಪಾಸನೆಯೊಡಗೂಡಿದ ಸಮಾಧಿಯ ಪ್ರಥಮಾವಸ್ಥೆಯ ಸೋಪಾನಕ್ಕೆ ಅಧಿಕಾರಿಯು ಬಂದರೆ, ಅಧಿಕಾರಿಯಲ್ಲಿ ಗಾಢಾಂಧಕಾರದ ತತ್ವದಲ್ಲಿರುವ ಅವಿದ್ಯೆಯು ಅರುಣೋದಯದ ಬೆಳಕಿನಿಂದ ನಾಶವಾಗುವಷ್ಟು ನಾಶವಾಗುತ್ತದೆ. ಕುಂಭಕರ್ಣನ ವಧೆಯ ತತ್ವದ ಸೋಪಾನವನ್ನು ಅಧಿಕಾರಿಯು ಹತ್ತಿದರೆ, ಸೂರ್ಯೋದಯದಿಂದ ಅಂಧಕಾರವು ಹೇಗೆ ಪರಿಹಾರವಾಗುತ್ತದೋ ಹಾಗೆ ಅಂಧಕಾರದ ತತ್ವದಲ್ಲಿರುವ ಅವಿದ್ಯೆಯು ಅಷ್ಟರಮಟ್ಟಿಗೆ ನಾಶವಾಗುತ್ತದೆ. ಅಗಸ್ತ್ಯರು ಶ್ರೀರಾಮನಿಗೆ ಉಪದೇಶಮಾಡಿದ ಆದಿತ್ಯಹೃದಯದ ತತ್ವದ ಸೋಪಾನವನ್ನು ಅಧಿಕಾರಿಯು ಪಡೆದರೆ, ಅಂಧಕಾರದ ತತ್ವದಲ್ಲಿರುವ ಅವಿದ್ಯೆಯು ಮಧ್ಯಾಹ್ನಕಾಲದಲ್ಲಿರುವ ಹಂಸಸ್ವರೂಪನಾದ ಆದಿತ್ಯನ ಪ್ರಕಾಶದಿಂದ ಎಷ್ಟೋ ಅಷ್ಟು ತೊಲಗುತ್ತದೆ. ಅಂದರೆ ಅಧಿಕಾರಿಯು ಅಗಸ್ತ್ಯರು ಆದಿತ್ಯಹೃದಯವನ್ನು ಉಪದೇಶಮಾಡಿದ ತತ್ವದ ಸೋಪಾನ

ವನ್ನು ಹತ್ತಿದರೆ ತನ್ನಲ್ಲಿರುವ ಆತ್ಮಪ್ರತಿಫಲನದ ಅಥವಾ ಚಿದಾಭಾಸದ ಸಂಪೂರ್ಣಪ್ರಕಾಶ ವನ್ನು ನೋಡುತ್ತಾನೆ. ಆದಿತ್ಯಹೃದಯವೆಂದರೆ—ಸಂಪೂರ್ಣ ಪ್ರತಿಫಲನದ ಅಂತರ್ಗತವಾ ಗಿರುವ ಬಿಂಬಸ್ವರೂಪನಾದ ಪರಮಾತ್ಮನು. ಅಧಿಕಾರಿಯು ಸೀತಾಗ್ನಿಪ್ರವೇಶದ ತತ್ವವಾದ ನಿರ್ವಿಕಲ್ಪಸಮಾಧಿಯ ಸೋಪಾನವನ್ನು ಪಡೆದರೆ, ಸ್ವಯಂಪ್ರಭೆಯೆಂಬ ಶಬ್ದದಲ್ಲಿನ ಪ್ರಭೆ ಯೆಂಬುದು ಹೋಗಿ ಸ್ವಯಂ ಶಬ್ದ ವಾಚ್ಯನಾದ ತನ್ನ ಸ್ವರೂಪವಾದ ಆತ್ಮಸಾಕ್ಷಾತ್ಕಾರ ವನ್ನು ಪಡೆಯುತ್ತಾನೆ.

ಆದುದರಿಂದ ಮೋಕ್ಷಾಧಿಕಾರಿಯು ಈ ಕುಂಭಕಪ್ರಾಣಾಯಾಮದಲ್ಲಿ ನಕ್ಷತ್ರದ ಬೆಳಕಿನಲ್ಲಿರುತ್ತಾನೆ. ತನ್ನಲ್ಲಿಯೇ ಇರುವ ಪೂರ್ಣಚಂದ್ರನ ಪ್ರಕಾಶ, ಸೂರ್ಯನ ಪ್ರಕಾಶ ಗಳನ್ನು ಹೊಂದಲು ಖಂಡಿತವಾಗಿಯೂ ಪ್ರಯತ್ನಮಾಡಬೇಕು. ಈ ಮೇಲಿನ ತತ್ವಾರ್ಥ ಗಳನ್ನನುಸರಿಸಿ ಹನುಮದಾದಿ ವಾನರರು ಋಕ್ಷಬಿಲದಲ್ಲಿ ಸ್ವಯಂಪ್ರಭೆಯನ್ನು ಕಂಡ ರೆಂದರೆ, ಪರಮಾತ್ಮನ ಪ್ರತಿಬಿಂಬದ ಬೆಳಕಿನಲ್ಲಿ ನಕ್ಷತ್ರದಂತಹ ಪ್ರಕಾಶವನ್ನು ಹೊಂದಿದ ರೆಂಬ ತಾತ್ಪರ್ಯವಾಗಿರುವುದು.

## ೭ನೆಯ ಪ್ರಕರಣ.

**ವಾನರರ ಪ್ರಾಯೋಪವೇಶದ ಯತ್ನ. ಸಂಪಾತಿಯಿಂದ ವಾನರರು ಸೀತಾದೇವಿಯು ಇದ್ದ ಸ್ಥಳವನ್ನು ತಿಳಿದುದು.**

**ಕುಂಭಕಪ್ರಾಣಾಯಾಮದಿಂದಲೇ ಶುದ್ಧಸತ್ವಾಪತ್ತಿಯ ಇರುವಿಕೆಯು ನಮ್ಮಲ್ಲಿ ತೋರುವುದಿಲ್ಲವೆಂಬ ವಿಚಾರ. ಗುರುವಿನಿಂದ ಯೋಗ ರಹಸ್ಯದಲ್ಲಿನ ಶಕ್ತಿಚಲನ ಪ್ರಾಣಾ ಯಾಮದ ಉಪದೇಶ.**

**ರಾ||** ಹನುಮಂತನೇ ಮೊದಲಾದ ವಾನರರು ಸೀತಾದೇವಿಯು ದೊರೆಯದೇ ವೃಥಾ ಕಾಲಹರಣವಾದುದಕ್ಕೆ ಬಹಳ ದುಃಖಪಟ್ಟು ಪ್ರಾಯೋಪವೇಶಮಾಡಿ ದೇಹತ್ಯಾಗ ಮಾಡಲುದ್ಯುಕ್ತರಾದರು. ಹೀಗೆ ಉದ್ಯುಕ್ತರಾಗಿರುವ ವಾನರರನ್ನು ಸಂಪಾತಿಯೆಂಬ ಗೃಧ್ರನು ನೋಡಿ ಕನಿಕರಪಟ್ಟು ತನ್ನ ಯೋಗದೃಷ್ಟಿಯಿಂದ ಸೀತಾದೇವಿಯಿರುವ ಸ್ಥಳವನ್ನು ತಿಳಿಸಿದನು.

**ತತ್ವ||** ಕುಂಭಕಪ್ರಾಣಾಯಾಮದ ಅನುಷ್ಠಾನದ ತತ್ವವನ್ನು ಹಿಂದಿನ ಪ್ರಕರಣ ದಲ್ಲಿ ವಿವರಿಸಿರುತ್ತಷ್ಟೆ! ಕುಂಭಕಪ್ರಾಣಾಯಾಮವೆಂದರೆ—ಉಸಿರನ್ನು ನೆತ್ತಿಯಲ್ಲಿ ನಿಲ್ಲಿಸಿ ಕೊಳ್ಳುವ ಅಭ್ಯಾಸಮಾಡುವ ಸೋಪಾನದಿಂದ ಸೀತಾದೇವಿ ಅಥವಾ ಶುದ್ಧಸತ್ವಪ್ರಧಾನ

ಮಾಯೆಯ ದರ್ಶನವು ವಾನರರಿಗೆ ಲಭ್ಯವಾಗಲಿಲ್ಲ. ಅಂದರೆ ಕುಂಭಕಪ್ರಾಣಾಯಾಮದ ಸೋಪಾನದಿಂದ ನಮ್ಮಲ್ಲಿ ಶುದ್ಧಸತ್ವಗುಣದ ಇರುವಿಕೆಯೂ ಕೂಡ ತೋರುವುದಿಲ್ಲ. ಅಂದರೆ ಲಕ್ಷ್ಯಕ್ಕೂ ದೊರಕುವುದಿಲ್ಲ. ಸೀತಾದೇವಿಯು ಲಂಕಾಪಟ್ಟಣದಲ್ಲಿ ಬಂಧನದಲ್ಲಿ ಇರುವಳೆಂದರೆ—ನಮ್ಮಲ್ಲಿರುವ ಶುದ್ಧಸತ್ವಗುಣವು ಲಂಕೆಯ ತತ್ವವಾದ ಮೂಲಾಧಾರ ಚಕ್ರದಲ್ಲಿ ಬಂಧನದಲ್ಲಿರುವ ತತ್ವವಾಗಿದೆ. ಸೀತಾದೇವಿಯು ಲಂಕೆಯಲ್ಲಿ ಬಂಧನದಲ್ಲಿರುವ ವಿಚಾರವು ವಾನರರಿಗೆ ಗೊತ್ತಿಲ್ಲ. ಅಂದರೆ ಮೋಕ್ಷದ ಅಧಿಕಾರಿಗೆ ಶುದ್ಧಸತ್ವಗುಣದ ಬಂಧನದ ಯಥಾರ್ಥ ವಿಚಾರದ ತತ್ವವಾದ ಯೋಗದ ಸೂಕ್ಷ್ಮಾರ್ಥದ ಉಪದೇಶ ವಾಗಿಲ್ಲವೆಂಬ ತಾತ್ಪರ್ಯ.

ಮುಖ್ಯತಾತ್ಪರ್ಯವೇನೆಂದರೆ—ಕುಂಭಕಪ್ರಾಣಾಯಾಮ ಮಾತ್ರದಿಂದ ಅಧಿಕಾರಿಯು ಶುದ್ಧಸತ್ವಗುಣದ ಸೋಪಾನದ ಸ್ವರೂಪವೆಂಥಾದ್ದೋ ಅದರ ಇರುವಿಕೆಯನ್ನೂ ತಿಳಿಯ ಲಾರನು. ಹಿಂದಿನ ಪ್ರಕರಣದಲ್ಲಿ ವಿವರಿಸಿರುವ ಕುಂಭಕಪ್ರಾಣಾಯಾಮಕ್ಕಿಂತ ಶ್ರೇಷ್ಠ ವಾದ ಪ್ರಾಣಾಯಾಮದ ಅನುಷ್ಠಾನವಿನ್ನೊಂದುಂಟು. ಅದನ್ನು ಅನುಷ್ಠಾನಮಾಡಿದರೆ ಪ್ರಾಣಾಯಾಮದಿಂದ ಹೊಂದಬೇಕಾದ ಲಕ್ಷ್ಯವು ಕೈಸೇರುವುದು. ಸೀತಾದೇವಿಯು ಬಂಧನದಲ್ಲಿರುವ ಲಂಕಾಪಟ್ಟಣದ ತತ್ವವಾದ ಮೂಲಾಧಾರಚಕ್ರಕ್ಕೆ ಶ್ವಾಸೋಚ್ಛ್ವಾಸದ ವಾಯುವು ನುಗ್ಗಿ ಹೋಗಿ ಬರುವುದೇ ಪ್ರಾಣಾಯಾಮಕ್ಕೆ ಸಾರ್ಥಕವಾಗಿರುತ್ತದೆ. ಹೇಗೆಂದರೆ ಕಳೆದುಕೊಂಡ ಪದಾರ್ಥವು ಯಾವ ಸ್ಥಳದಲ್ಲಿರುವುದೋ ಅದನ್ನೂ ಆ ಸ್ಥಳಕ್ಕೆ ಹೋಗುವ ದಾರಿಯನ್ನೂ ತಿಳಿದುಕೊಳ್ಳದೆ ಆ ಪದಾರ್ಥವು ಹೇಗೆ ದೊರೆಯುವುದಿಲ್ಲವೋ ಹಾಗೆಯೇ ಅನ್ಯವಶಳಾದ ಸೀತಾದೇವಿಯಿರುವ ಸ್ಥಳನಿರ್ದೇಶವಿಲ್ಲದೆ ಮತ್ತು ಆ ಸ್ಥಳಕ್ಕೆ ಹೋಗುವ ದಾರಿಯ ವಿಚಾರವು ತಿಳಿಯದೆ ಇದ್ದರೆ ಸೀತಾದೇವಿಯ ನಿಜಸ್ಥಿತಿಯು ಗೊತ್ತಾ ಗುವುದಿಲ್ಲ. ಅಂದರೆ ಶುದ್ಧಸತ್ವಗುಣವು ಯಾವ ಸ್ಥಳದಲ್ಲಿ ಬಂಧನದಲ್ಲಿರುವುದೆಂದು ತಿಳಿದು ಆ ಶುದ್ಧಸತ್ವಗುಣದ ಇರುವಿಕೆಯನ್ನು ಅಧಿಕಾರಿಯು ಹೊಂದುವ ಪ್ರಾಣಾಯಾಮದ ಸೂಕ್ಷ್ಮಾರ್ಥಗಳನ್ನು ಗುರುಮುಖೇನ ಉಪದೇಶತೆಗೆದುಕೊಂಡು ಅದರಂತೆ ಅನುಷ್ಠಾನ ಮಾಡದಿದ್ದರೆ ಅಧಿಕಾರಿಯಲ್ಲಿ ಶುದ್ಧಸತ್ವಗುಣದ ಸೋಪಾನವು ಉದಯಿಸುವ ಗುರುತೂ ಕಾಣುವುದಿಲ್ಲವೆಂಬ ತಾತ್ಪರ್ಯವಾಗಿರುತ್ತದೆ.

ಆದುದರಿಂದ ಸಂಪಾತಿಯು ವಾನರರಿಗೆ ಸೀತಾದೇವಿಯಿರುವ ಸ್ಥಳವನ್ನೂ, ಅಲ್ಲಿಗೆ ಹೋಗುವ ದಾರಿಯನ್ನೂ ತಿಳಿಸುವವನೆಂದರೆ ಯೋಗದ ಸೂಕ್ಷ್ಮಾರ್ಥಗಳನ್ನು ತಿಳಿಸತಕ್ಕ ಗುರುವಿನ ತತ್ವದವನಾಗಿರುತ್ತಾನೆ. ಹಿಂದೆ ಜಟಾಯು ಪ್ರಕರಣದಲ್ಲಿ ಗರುಡನು ಸಮಾಧಿ ಸೋಪಾನವನ್ನು ಹತ್ತಿಸುವ ಗುರುವಿನ ತತ್ವದವನೆಂದೂ, ಜಟಾಯುವು ಶ್ರವಣದ ಸೋಪಾನ ವನ್ನು ಹತ್ತಿಸತಕ್ಕ ಗುರುವಿನ ತತ್ವದವನೆಂದೂ ತಿಳಿಸಿರುತ್ತಷ್ಟೆ! ಸಂಪಾತಿಯೆಂದರೆ

"ಸಮ್ಯಕ್ ಪತತೀತಿ ಸಂಪಾತಿಃ" ನಿಜಸ್ಥಿತಿ ಅಥವಾ ಯಥಾರ್ಥವನ್ನು ಕುರಿತು ಗಮನ ಮಾಡುವವನು. ಅಂದರೆ ನಮ್ಮ ದೇಹದಲ್ಲಿ ಯಾವ ಸ್ಥಳದಲ್ಲಿ ಪ್ರತಿಬಂಧಕವಾದ ಅವಿದ್ಯೆಯ ಸ್ವರೂಪವು ಇರುವುದೋ, ಶುದ್ಧಸತ್ವಗುಣವು ಯಾವ ಸ್ಥಳದಲ್ಲಿ ಬಂಧನದಲ್ಲಿರುವುದೋ, ಶುದ್ಧಸತ್ವಗುಣವಿರುವ ಸ್ಥಳಕ್ಕೆ ಹೋಗುವ ಮಾರ್ಗವಾವುದೋ ಇವುಗಳ ಯಥಾರ್ಥ ಅಥವಾ ನಿಜಸ್ಥಿತಿಯನ್ನು ಉಪದೇಶಮಾಡತಕ್ಕ ಗುರುವಿನ ತತ್ವದವನೇ ಸಂಪಾತಿಯಾಗಿರುತ್ತಾನೆ.

ಈ ಸ್ವರೂಪಗಳೆಲ್ಲ ಚೆನ್ನಾಗಿ ಗೊತ್ತಿರಬೇಕಾದರೆ ಯೋಗದಲ್ಲಿ ಚೆನ್ನಾಗಿ ಅನುಭವಶಾಲಿಯಾಗಿರಬೇಕು. ಸಂಪಾತಿಯು ಹೇಗೆ ಸೂರ್ಯನ ಕಿರಣಗಳಿಂದ ಗರಿಗಳನ್ನು ಹೋಗಲಾಡಿಸಿಕೊಂಡಿದ್ದನೋ ಹಾಗೆ ಸೂರ್ಯನಕಿರಣಸ್ವರೂಪವಾದ ಆತ್ಮನ ಪ್ರಭೆಯಲ್ಲಿ ಚೆನ್ನಾಗಿ ರಮಿಸಿ ಅನುಭವಶಾಲಿಯಾದ ಗುರುವಾಗಿದ್ದಲ್ಲಿ ಯಥಾರ್ಥವಾದ ದಾರಿಯನ್ನು ಉಪದೇಶ ಮಾಡುತ್ತಾನೆ. ಇಂತಹ ಗುರುಗಳು ತಂದೆಗೆ ಸಮಾನರಾದುದರಿಂದ ಸಂಪಾತಿಯೂ ತಾನು ದಶರಥರಾಯನ ಸ್ನೇಹಿತನೆಂದು ತಿಳಿಸಿರುತ್ತಾನೆ. ಸಂಪಾತಿಯು ಜಟಾಯುವಿಗಿಂತಲೂ ಗಗನದಲ್ಲಿ ಮೇಲಕ್ಕೆ ಹಾರಬಲ್ಲವನೆಂದು ಹಿಂದೆ ಜಟಾಯುಪ್ರಕರಣದಲ್ಲಿ ತಿಳಿಸಿರುತ್ತೆ. ಅಂದರೆ ಮೋಕ್ಷಮಾರ್ಗದಲ್ಲಿ ವೇದಾಂತಶ್ರವಣದ ಸೋಪಾನಕ್ಕಿಂತಲೂ ನಿದಿಧ್ಯಾಸ ಅಥವಾ ಯೋಗಾನುಷ್ಠಾನದ ಸೋಪಾನವು ಶ್ರೇಷ್ಠವಾದುದೆಂಬ ತತ್ವವಾಗಿರುತ್ತದೆ. ಆದುದರಿಂದ ವಾನರರು ಸಂಪಾತಿಯ ದರ್ಶನ ಮಾಡಿದರೆಂದರೆ ಮೋಕ್ಷಾಧಿಕಾರಿಯು ಯೋಗರಹಸ್ಯಗಳನ್ನು ತಿಳಿದುಕೊಳ್ಳಲು ಗುರುವಿನ ಮರೆಹೊಕ್ಕನೆಂಬ ತತ್ವವಾಗಿರುವುದು.

**ರಾ||** ಸಂಪಾತಿಯು ವಾನರರು ಹೇಳುತ್ತಿದ್ದ ತನ್ನ ತಮ್ಮನಾದ ಜಟಾಯುವಿನ ವೃತ್ತಾಂತವನ್ನು ಕೇಳಿದನಂತರವೇ ವಾನರರ ಮೇಲೆ ಕನಿಕರ ಹುಟ್ಟಿ ಸೀತಾದೇವಿಯಿರುವ ಸ್ಥಳ, ಅಲ್ಲಿಗೆ ಹೋಗುವ ದಾರಿಯ ವಿಚಾರಗಳನ್ನು ವಾನರರಿಗೆ ತಿಳಿಸಿದನು.

**ತತ್ವ||** ಯೋಗವಿದ್ಯಾರಹಸ್ಯಗಳನ್ನು ಉಪದೇಶಮಾಡುವ ಗುರುವು ವೇದಾಂತ ಶ್ರವಣ, ಮನನ ಸೋಪಾನಗಳ ಪರಿಪಕ್ವಾವಸ್ಥೆಗೆ ಬಂದು ಮುಂದಿನ ಸೋಪಾನವಾದ ಯೋಗದ ಅನುಷ್ಠಾನಕ್ಕೆ ಅತ್ಯಂತ ಆರ್ತನಾಗಿರುವ ಶಿಷ್ಯನಿಗೇನೇ ಯೋಗರಹಸ್ಯಗಳನ್ನು ಉಪದೇಶಮಾಡಬೇಕೆಂಬ ತಾತ್ಪರ್ಯವೇ ಸಂಪಾತಿಯು ತನ್ನ ತಮ್ಮನಾದ ಜಟಾಯುವಿನ ವೃತ್ತಾಂತವನ್ನು ತಿಳಿದನಂತರವೇ ವಾನರರಿಗೆ ಸೀತಾವೃತ್ತಾಂತದ ಯಥಾರ್ಥವನ್ನು ತಿಳಿಸಿದ್ದಾಗಿರುತ್ತದೆ. ಅಂದರೆ ಅನಧಿಕಾರಿಗಳಿಗೆ ಯೋಗರಹಸ್ಯಗಳನ್ನು ಖಂಡಿತವಾಗಿಯೂ ಉಪದೇಶಮಾಡಕೂಡದೆಂಬ ತತ್ವವಾಗಿರುವುದು. ಯೋಗರಹಸ್ಯಗಳನ್ನು

ಉಪದೇಶಪಡೆದುಕೊಳ್ಳತಕ್ಕ ಶಿಷ್ಯನು ಬ್ರಹ್ಮವಿದ್ಯೆಯಲ್ಲಿ ಯಾವ ಸ್ಥಿತಿಗೆ ಬಂದಿರಬೇಕೆಂದರೆ ನಿಶಾಕರಮುನಿಯು ಸಂಪಾತಿಗೆ ತಿಳಿಸಿರುವ ಸೋಪಾನಕ್ಕೆ ಬಂದಿರಬೇಕು. ನಿಶಾಕರ ಮುನಿಯು ಸಂಪಾತಿಗೆ ತಿಳಿಸಿರುವುದೇನೆಂದರೆ:—

**ರಾ||** ಶ್ರೀರಾಮಕಾರ್ಯಕ್ಕಾಗಿ ವಾನರರು ಸೀತಾದೇವಿಯನ್ನು ಹುಡುಕುತ್ತಾ ಬಂದು ಸೀತಾದೇವಿಯು ದೊರೆಯದೇ ಇದ್ದಾಗ ಪ್ರಾಯೋಪವೇಶಮಾಡಲು ಯತ್ನಿಸುತ್ತಾರೆ. ಆಗ ಸೀತಾವೃತ್ತಾಂತವನ್ನು ವಾನರರಿಗೆ ತಿಳಿಸೆಂಬದಾಗಿ ಹೇಳಿರುತ್ತಾನೆ.

**ತತ್ವ||** ಅಂದರೆ ಮೇಲಿನ ಅನ್ವಯದಲ್ಲಿ ತಿಳಿಸಿರುವಂತೆ ಬ್ರಹ್ಮವಿದ್ಯಾಧಿಕಾರಿಯು ಸೀತಾಪಹರಣದಿಂದ ಇದುವರೆಗೂ ಇರುವ ಶ್ರೀರಾಮಚರಿತ್ರೆಯ ತತ್ವದ ಸೋಪಾನವನ್ನು ಹೊಂದಿ ವಾನರರು ಸೀತೆಗೋಸ್ಕರ ದುಃಖಪಡುತ್ತಿದ್ದಂತೆ ಶುದ್ಧಸತ್ವಗುಣದ ಲಕ್ಷ್ಯಕ್ಕೆ ಅತ್ಯಂತ ಆರ್ತನಾಗಿದ್ದರೆ ಯೋಗರಹಸ್ಯಗಳಿಗೆ ಅಧಿಕಾರಿಯಾಗುತ್ತಾನೆ. ಅಂದರೆ ತೀವ್ರತಮವಾದ ಮೋಕ್ಷೇಚ್ಛೆಯಿಂದಲೂ ಗುರುಮುಖೇನ ವೇದಾಂತವಿಚಾರಮಾಡಿ ಅವಿದ್ಯೆಯನ್ನು ನಿಗ್ರಹಿಸಿ ಮೋಕ್ಷವನ್ನು ಪಡೆಯಬೇಕೆಂದು ಅತ್ಯಂತ ಆರ್ತನಾಗಿಯೂ ಇರುವ ಅಧಿಕಾರಿಯಾಗಿರಬೇಕೆಂಬ ತಾತ್ಪರ್ಯವೇ ನಿಶಾಕರಮುನಿಯು ಸಂಪಾತಿಗೆ ಹೇಳಿದುದರ ತತ್ವವಾಗಿರುತ್ತದೆ.

ಅಂದರೆ ಭವಬಂಧನದಿಂದ ಬಿಡಿಸಿಕೊಳ್ಳುವ ತಾಪಕ್ಕೆ ಅಧಿಕಾರಿಯು ಒಳಗಾಗಿ ವಾನರರು ಸಂಪಾತಿಯನ್ನು ಕೇಳಿಕೊಂಡಂತೆ ಸದ್ಗುರುವನ್ನು ಮರೆಹೊಕ್ಕು ಭವಬಂಧನ ಪಾಶದ ಯಥಾರ್ಥವನ್ನು ತಿಳಿದುಕೊಳ್ಳಬೇಕು. ಈ ತತ್ವಾರ್ಥಕ್ಕೆ ಅನುಸಾರವಾಗಿ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೩೭ನೆಯ ಶ್ಲೋಕದಲ್ಲಿ,

> ಸ್ವಾಮಿನ್ನಮಸ್ತೆ ನತಲೋಕಬನ್ಧೋ |
> ಕಾರುಣ್ಯಸಿನ್ಧೋ ಪತಿತಂ ಭವಾಬ್ಧೌ ||
> ಮಾಮುದ್ಧ ರಾತ್ಮೀಯಕಟಾಕ್ಷದೃಷ್ಟ್ಯಾ |
> ಋಜ್ವ್ಯಾತಿ ಕಾರುಣ್ಯಸುಧಾಭಿವೃಷ್ಟ್ಯಾ ||

ತಾ|| ನಮ್ರರಾದ ಜನಗಳಿಗೆ ಬಂಧುವಾದ, ಕರುಣಾಸಮುದ್ರನಾದ, ಎಲೈ ಸ್ವಾಮಿಯೆ ನಿನಗೆ ನಮಸ್ಕಾರವು. ವಕ್ರವಲ್ಲದ, ಕರುಣವೆಂಬ ಅಮೃತವನ್ನು ಕರೆಯುವ ನಿನ್ನ ಸಂಬಂಧವಾದ ಕಟಾಕ್ಷದೃಷ್ಟಿಯಿಂದ ಸಂಸಾರಸಮುದ್ರದಲ್ಲಿ ಬಿದ್ದಿರುವ ನನ್ನನ್ನು ಉದ್ಧಾರಮಾಡು, ಎಂದು ಹೇಳಿರುವರು.

**ರಾ||** ಸಂಪಾತಿಯು ಅಂತರಿಕ್ಷದಲ್ಲಿ ಹಾರಿ ಸೂರ್ಯನ ಕಿರಣಗಳಿಂದ ದಹಿಸಲ್ಪಟ್ಟು ವಿಂಧ್ಯಪರ್ವತದಲ್ಲಿ ಬಿದ್ದು ಕೆಲವು ದಿನಗಳು ಪ್ರಜ್ಞೆಯಿಲ್ಲದೆ ಅನಂತರ ಪ್ರಜ್ಞೆಬಂದು

ನಿಶಾಕರಮುನಿಯನ್ನು ಸಂದರ್ಶಿಸಲು ಆತನು ಶ್ರೀರಾಮಕಾರ್ಯಕ್ಕಾಗಿ ವಾನರರು ಬರುತ್ತಾರೆ, ಅವರಿಗೆ ಸೀತಾವೃತ್ತಾಂತವನ್ನು ತಿಳಿಸಿದಲ್ಲಿ ನಿನ್ನ ರೆಕ್ಕೆಗಳು ಪುನಃ ಚಿಗುರುವುವೆಂದು ಹೇಳಿದನು.

**ತತ್ವ||** ಸಮಾಧಿಯಲ್ಲಿ ಸೂರ್ಯಕಿರಣರೂಪದ ತತ್ವವಾದ ಆತ್ಮತೇಜಸ್ಸಿನಲ್ಲಿ ಲೀನವಾಗಿದ್ದ ಯೋಗಿಯ ಶ್ವಾಸವು ಪುನಃ ತನ್ನ ಸ್ಥಾನವಾದ ವಿಂಧ್ಯಪರ್ವತದ ತತ್ವವಾದ ಎದೆಯಲ್ಲಿರುವ ಶ್ವಾಸಕೋಶವನ್ನು ಸೇರಿತೆಂಬ ತತ್ವಾರ್ಥವೇ ಸಂಪಾತಿಯು ಸೂರ್ಯಕಿರಣಗಳಿಂದ ದಹಿಸಲ್ಪಟ್ಟು ವಿಂಧ್ಯಪರ್ವತದ ಒಂದು ಕಡೆ ಬಿದ್ದುದಾಗಿದೆ. ವಿಂಧ್ಯಪರ್ವತ ಪ್ರದೇಶದಲ್ಲಿ ಬಿದ್ದ ಸಂಪಾತಿಗೆ ಕೆಲವು ದಿನಗಳು ಪ್ರಜ್ಞೆಯಿರಲಿಲ್ಲವೆಂಬುದರ ತತ್ವಾರ್ಥವೇನೆಂದರೆ—ಸಮಾಧಿಯಿಂದ ಬಹಿರ್ಮುಖವಾದಾಗ ಯೋಗಿಗೆ ಕೆಲವು ಕಾಲ ಶ್ವಾಸೋಚ್ಛ್ವಾಸದ ವ್ಯಾಪಾರವಿಲ್ಲದೆ ತಟಸ್ಥವಾಗಿರುತ್ತದೆ. ಈ ತತ್ವವೇ ವಿಂಧ್ಯಪರ್ವತದಲ್ಲಿ ಬಿದ್ದ ಸಂಪಾತಿಗೆ ಕೆಲವು ದಿನಗಳು ಪ್ರಜ್ಞೆಯಿಲ್ಲದಿದ್ದುದಾಗಿದೆ. ಸಂಪಾತಿಗೆ ಪ್ರಜ್ಞೆಬಂದು ನಿಶಾಕರಮುನಿಯ ಸಂದರ್ಶನಮಾಡಿದನೆಂದು ಹೇಳಿರುವುದರ ತತ್ವವೇನೆಂದರೆ—ಯೋಗಿಗಳಿಗೆ ಸಮಾಧಿಯಲ್ಲಿ ಕಾಣುವ ಸೂರ್ಯಕಿರಣರೂಪವಾದ ಆತ್ಮತೇಜಸ್ಸಿನಲ್ಲಿರುವುದೇ ಹಗಲಾಗಿಯೂ, ಬಹಿರ್ಮುಖವಾಗಿ ಅವಿದ್ಯಾಸ್ವರೂಪದ ತತ್ವದಲ್ಲಿರುವ ಗಾಢಾಂಧಕಾರದ ತತ್ವವಾದ ಪ್ರಪಂಚವ್ಯವಹಾರದಲ್ಲಿರುವುದೇ ರಾತ್ರಿಯಾಗಿಯೂ ಇರುತ್ತದೆ.

ಇದೇ ತಾತ್ಪರ್ಯಕ್ಕೆ ಶ್ರೀಕೃಷ್ಣಪರಮಾತ್ಮನು ಭಗವದ್ಗೀತಾ ಎರಡನೇ ಅಧ್ಯಾಯದಲ್ಲಿ,

ಯಾನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ |
ಯಸ್ಯಾಂ ಜಾಗ್ರತಿ ಭೂತಾನಿ ಸಾನಿಶಾ ಪಶ್ಯತೋ ಮುನೇಃ ||

ತಾ|| ಎಲೈ ಅರ್ಜುನನೆ ಪ್ರಕಾಶರೂಪವಾಗಿರುವ ಪರಮಾರ್ಥತತ್ವವು ಜ್ಞಾನಿಯಾದವನಿಗೆ ಹಗಲಾಗಿಯೂ, ಅಜ್ಞಾನಿಗೆ ರಾತ್ರಿಯಾಗಿಯೂ ಇರುವುದು. ಜಾಗ್ರತ್ಸ್ವಪ್ನಸುಷುಪ್ತಿಸ್ವರೂಪವಾದ ಅಜ್ಞಾನದಲ್ಲಿ ಅಜ್ಞಾನಿಗಳು ಎಚ್ಚರವಾಗಿರುವರು. ಇಂತಹ ಸ್ಥಿತಿಯು ಜ್ಞಾನಿಗೆ ರಾತ್ರಿಯಾಗಿರುವುದು

ಎಂಬದಾಗಿ ಹೇಳಿರುತ್ತಾನೆ. ಅಂದರೆ ಅಂತರ್ಮುಖದಲ್ಲಿ ತೇಜೋರೂಪವಾದ ಸಮಾಧಿಯಿಂದ ಬಹಿರ್ಮುಖವಾಗಿ ಪ್ರಪಂಚಜ್ಞಾನಕ್ಕೆ ಬರುವ ತತ್ವವೇ ಸಂಪಾತಿಯು ನಿಶಾಕರಮುನಿಯನ್ನು ಸಂದರ್ಶಿಸಿದುದಾಗಿರುವುದು.

**ರಾ||** ಸಂಪಾತಿಯು ಸೂರ್ಯಕಿರಣಗಳಿಂದ ದಹಿಸಲ್ಪಟ್ಟ ರೆಕ್ಕೆಗಳುಳ್ಳವನಾಗಿ ಸಂಚರಿಸಲು ಶಕ್ತಿಯಿಲ್ಲದೆ ಇದ್ದ ಕಾಲದಲ್ಲಿ ತನ್ನ ಮಗನಾದ ಸುಪಾರ್ಶ್ವನಿಂದ ಆಹಾರಾದಿಗಳನ್ನು ಹೊಂದಿ ಜೀವವಂತನಾಗಿ ಕಾಲಕಳೆಯುತ್ತಿದ್ದನು.

**ತತ್ವ||** ಸುಪಾರ್ಶ್ವನೆಂಬ ಶಬ್ದಕ್ಕೆ ಮೃದುಸ್ವಭಾವದವನೆಂಬ ತತ್ವವಾಗುವುದು. ಸುಪಾರ್ಶ್ವನ ತತ್ವವಾದ ಮೃದುಸ್ವಭಾವದವರೆಂದರೆ, ಸಾಧು, ಸತ್ಪುರುಷರು. ಇಂತಹವರು ಸಮಾಧಿಯಿಂದ ಬಹಿರ್ಮುಖರಾಗಿ ಉನ್ಮನೀಸ್ವಭಾವದಲ್ಲಿರುವ ಯೋಗಿಯನ್ನು ತಮ್ಮ ತಂದೆಯೋಪಾದಿಯಲ್ಲಿ ತಿಳಿದು ಅಂತಹ ಯೋಗಿಯನ್ನು ಕಾಪಾಡಿಕೊಂಡು ಬರುತ್ತಾರೆಂಬ ತತ್ವಾರ್ಥವೇ ಸುಪಾರ್ಶ್ವನೆಂಬ ಮಗನಿಂದ ಸಂಪಾತಿಯು ಸಂರಕ್ಷಿಸಲ್ಪಡುತ್ತಿದ್ದುದರ ತಾತ್ಪರ್ಯವಾಗಿರುತ್ತದೆ. ಸುಪಾರ್ಶ್ವನನ್ನು ಸಾಧು ಸತ್ಪುರುಷರಿಗೆ ಹೇಗೆ ಅನ್ವಯಮಾಡಿರುತ್ತೇಂದರೆ, ಯುದ್ಧಕಾಂಡದಲ್ಲಿ ರಾವಣನ ಮಂತ್ರಿಯಾದ ಮಹಾಪಾರ್ಶ್ವನನ್ನು ಅತ್ಯಂತ ಕಾಠಿಣ್ಯಸ್ವರೂಪನೆಂದು ಶಬ್ದದ ವ್ಯುತ್ಪತ್ತಿಯೊಡನೆ ಅನ್ವಯಮಾಡಿರುವುದನ್ನು ಇಲ್ಲಿಗೆ ಅನ್ವಯಿಸಿಕೊಂಡಲ್ಲಿ ಸುಪಾರ್ಶ್ವನೆಂದರೆ ಸಾಧು ಸತ್ಪುರುಷರೆಂದು ವ್ಯುತ್ಪತ್ತಿಯಾಗುವುದು.

ಈ ಮೇಲಿನ ತತ್ವಾರ್ಥಗಳೇ ಸಂಪಾತಿಯ ವಿಚಾರವಾಗಿರುವುದು. ಮುಖ್ಯವಾಗಿ ಯೋಗಿಯು ಬಹಿರ್ಮುಖನಾಗಿರುವಾಗ ಅವಿದ್ಯಾಪ್ರತಿಬಂಧಕಗಳನ್ನು ನಿವಾರಣೆಮಾಡಿಕೊಳ್ಳಲು ಯೋಗರಹಸ್ಯಗಳನ್ನು ತಿಳಿದುಕೊಂಡು ಅನುಷ್ಠಾನಮಾಡಬೇಕೆಂದು ಆರ್ತರಾಗಿರುವ ಶಿಷ್ಯರಿಗೆ ಯೋಗರಹಸ್ಯಗಳನ್ನು ಉಪದೇಶಮಾಡುವುದೇ ಸಂಪಾತಿಯು ವಾನರರಿಗೆ ಸೀತಾವೃತ್ತಾಂತವನ್ನು ತಿಳಿಸಿದುದಾಗಿದೆ.

**ರಾ||** ಪ್ರಾಯೋಪವೇಶಮಾಡುತ್ತಿದ್ದ ವಾನರರಿಗೆ ಸಂಪಾತಿಯು ಸೀತಾದೇವಿಯು ಲಂಕೆಯಲ್ಲಿ ಅಶೋಕವನದಲ್ಲಿ ರಾವಣನ ಬಂಧನದಲ್ಲಿರುತ್ತಾಳೆಂತಲೂ, ಸಮುದ್ರವನ್ನು ಹಾರಿ ಲಂಕೆಗೆ ಹೋಗಬೇಕೆಂತಲೂ ತಿಳಿಸಿದುದಲ್ಲದೆ, ತಾನು ಇದ್ದ ಸ್ಥಳದಿಂದಲೇ ಸೀತಾದೇವಿಯು ಇರುವ ಸ್ಥಳ ಮುಂತಾದುವುಗಳನ್ನೆಲ್ಲ ನೋಡುತ್ತಿರುವೆನೆಂದು ಹೇಳಿದನು.

**ತತ್ವ||** ಮೇಲಿನ ಅಂಶವು ಗುರುವು ಶಿಷ್ಯನಿಗೆ ಉಪದೇಶಮಾಡುವ ಯೋಗರಹಸ್ಯದ ವಿಚಾರವಾಗಿರುವುದು. ಲಂಕೆಯ ತತ್ವವಾದ ಮೂಲಾಧಾರಚಕ್ರದಲ್ಲಿ ಸೀತಾದೇವಿಯ ತತ್ವವಾದ ಶುದ್ಧಸತ್ವಗುಣವು, ರಜೋಗುಣದ ಪ್ರತಿಬಿಂಬಚೈತನ್ಯದ ಬಂಧನದಲ್ಲಿರುತ್ತದೆ. ಲಂಕೆಯು ಸಮುದ್ರಮಧ್ಯದಲ್ಲಿರುವಂತೆ ಮೂಲಾಧಾರಚಕ್ರವು ಸಮುದ್ರರೂಪವಾದ ಸ್ವಾಧಿಷ್ಠಾನಚಕ್ರದಲ್ಲಿ ನಾಡಿಗಳ ಸಮುದಾಯಗಳಿಂದ ಆವೃತವಾಗಿರುತ್ತದೆ. ಸಮುದ್ರರೂಪವಾದ ನಾಡಿಗಳ ಸಮುದಾಯದೊಳಗೆ ಹೋಗಬೇಕೆಂದರೆ ಶ್ವಾಸೋಚ್ಛ್ವಾಸವು ನಾಡೀ ಸಮುದಾಯಗಳೊಳಗೆ ಬಲವಂತದಿಂದ ನುಗ್ಗಿ ಮೂಲಾಧಾರಕ್ಕೆ ಹೋಗಿ ನಿಂತರೆ, ಶುದ್ಧಸತ್ವಗುಣದ ಇರುವಿಕೆಯು ತೋರುವುದೇ ಸಂಪಾತಿಯು ವಾನರರಿಗೆ ಸೀತಾವೃತ್ತಾಂತವನ್ನು ತಿಳಿಸಿದ್ದಾಗಿರುತ್ತದೆ. ಅಂದರೆ ಕುಂಭಕಪ್ರಾಣಾಯಾಮದಲ್ಲಿ ಶಿರಸ್ಸಿನಲ್ಲಿ ಉಸಿರನ್ನು ನಿಲ್ಲಿಸುವುದನ್ನು ತಪ್ಪಿಸಿ ಮೂಲಾಧಾರಕ್ಕೆ ತೆಗೆದುಕೊಂಡು ಹೋಗಿ ನಿಲ್ಲಿಸಿ

ಕುಂಭಕಾಭ್ಯಾಸವನ್ನು ಮಾಡಿದರೆ ಶುದ್ಧಸತ್ವಗುಣದ ಇರುವಿಕೆಯ ಸೋಪಾನವು ಅಧಿಕಾರಿಯಲ್ಲುಂಟಾಗುವುದೆಂಬ ತತ್ವಾರ್ಥವೇ ಸಂಪಾತಿಯು ವಾನರರಿಗೆ ಸೀತಾವೃತ್ತಾಂತ ವನ್ನು ತಿಳಿಸಿದ್ದಾಗಿದೆ. ಗುರುವು ಶಿಷ್ಯನಿಗೆ ಯೋಗರಹಸ್ಯಗಳ ವಿಚಾರವನ್ನು ಬೋಧಿಸಿದ ಮಾತ್ರವೇ ಪ್ರಯೋಜನವಿಲ್ಲ. ಶಿಷ್ಯನಿಗೆ ಅನುಷ್ಠಾನಮಾಡಿ ತೋರಿಸಿಕೊಡಬೇಕೆಂಬ ತತ್ವಾರ್ಥದ ಸೂಚನೆಯೇ ಸಂಪಾತಿಯು ಸೀತಾದೇವಿಯಿರುವ ಸ್ಥಳ ಮುಂತಾದುವು ಗಳನ್ನೆಲ್ಲಾ ನೋಡುತ್ತಿರುವೆನೆಂದು ಹೇಳಿದುದಾಗಿದೆ.

**ರಾ||** ಸಂಪಾತಿಯು ವಾನರರಿಗೆ ಸೀತಾವೃತ್ತಾಂತವನ್ನು ತಿಳಿಸುತ್ತಾ ಬಂದಂತೆ ಸಂಪಾತಿಗೆ ಹೊಸರೆಕ್ಕೆಗಳು ಬಂದುವು. ಹೊಸದಾಗಿ ಬಂದ ರೆಕ್ಕೆಗಳಿಂದ ಹಾರಲು ಶಕ್ತಿ ಇರು ವುದೋ ಇಲ್ಲವೋ ಎಂದು ತಿಳಿಯಲು ಇಚ್ಛಿಸಿ ವಿಂಧ್ಯಪರ್ವತದ ಶಿಖರದಿಂದ ಹಾರಿದನು.

**ತತ್ವ||** ಗುರುವು ಶಿಷ್ಯನಿಗೆ ಯೋಗರಹಸ್ಯಗಳ ಅನುಷ್ಠಾನ ಕ್ರಮವನ್ನು ಬೋಧೆ ಮಾಡುವುದಲ್ಲದೆ, ಶಿಷ್ಯನಿಗೆ ತಿಳಿಯುವುದಕ್ಕೋಸ್ಕರ ತಾನೂ ಅನುಷ್ಠಾನಮಾಡಿ ತೋರಿಸ ಬೇಕಾಗುವುದು. ಹೀಗೆ ಗುರುವು ತಾನು ಅನುಷ್ಠಾನಮಾಡಿ ತೋರಿಸುವಾಗ ಯೋಗದ ಉತ್ಸಾಹ ಬಂದು ಸಮಾಧಿಸೋಪಾನಕ್ಕೆ ಹಾರಿ ಹೋಗಿ ನಿಲ್ಲುವುದೇ ಸಂಪಾತಿಗೆ ಪುನಃ ರೆಕ್ಕೆಗಳು ಬಂದು ಅಂತರಿಕ್ಷದಲ್ಲಿ ಹಾರಿದುದಾಗಿರುತ್ತದೆ. ಅಂದರೆ ಗುರುವು ತಾನು ಅನು ಷ್ಠಾನಮಾಡಿ ಶಿಷ್ಯನಿಗೆ ಚೆನ್ನಾಗಿ ತೋರಿಸಬೇಕು ಮತ್ತು ಶಿಷ್ಯನಿಂದಲೂ ಯೋಗದ ಕ್ರಮ ವನ್ನು ಮಾಡಿಸಬೇಕು. ಶಿಷ್ಯನು ಗುರುಸನ್ನಿಧಿಯಲ್ಲಿ ಅಭ್ಯಾಸಕ್ರಮಗಳನ್ನು ಮಾಡಿ ತಿಳಿದುಕೊಂಡು ಅನಂತರ ತಾನು ಅನುಷ್ಠಾನಮಾಡಬೇಕಲ್ಲದೆ, ಗುರೂಪದೇಶವಿಲ್ಲದೆ ಪುಸ್ತಕಗಳನ್ನು ಪಠಿಸಿ ಅನುಷ್ಠಿಸಬಾರದು. ಆದುದರಿಂದ ಗುರುವು ಶಿಷ್ಯನಿಗೆ ಯೋಗರಹಸ್ಯಗಳನ್ನು ಪರಿಶ್ರಮಮಾಡಿಕೊಡುವುದೇ ಸಂಪಾತಿ ವಾನರರ ಕಥೆಯ ತತ್ವವಾಗಿರುವುದು.

ಸಂಪಾತಿಯು ಸೀತಾವೃತ್ತಾಂತವನ್ನೂ, ತನ್ನ ಗರಿಗಳು ಸೂರ್ಯನಿಂದ ದಹಿಸಲ್ಪಟ್ಟ ವೃತ್ತಾಂತವನ್ನೂ ವಾನರರಿಗೆ ತಿಳಿಸಿರುತ್ತಾನೆಯೇ ಹೊರತು ಬುದ್ಧಿಮನಸ್ಸತ್ವದವರಾದ ಶ್ರೀರಾಮಲಕ್ಷ್ಮಣರಿಗೆ ತಿಳಿಸಲಿಲ್ಲ. ಅಂದರೆ ಸಂಪಾತಿಯ ವಿಚಾರವು ದೇಹದಲ್ಲಿನ ಶ್ವಾಸೋ ಚ್ಛ್ವಾಸವು ಮೋಕ್ಷಮಾರ್ಗಕ್ಕೆ ಯಾವ ರೀತಿ ಸಹಾಯಕವಾಗಿರಬೇಕೆಂಬ ತತ್ವವನ್ನು ಸೂಚಿಸುವುದು. ಶ್ವಾಸೋಚ್ಛ್ವಾಸಸ್ವರೂಪವಾದ ವಾಯುವು ಶುದ್ಧಸತ್ವಗುಣದ ಇರು ವಿಕೆಯ ಉದಯವನ್ನುಂಟುಮಾಡಿಕೊಟ್ಟು, ನಿರ್ವಿಕಲ್ಪಸಮಾಧಿಯ ಪರ್ಯಂತರ ಹೇಗೆ ಬುದ್ಧಿಮನಸ್ಸುಗಳಿಗೆ ಸಹಾಯಕವಾಗಿರಬೇಕೆಂಬ ತತ್ವವನ್ನೂ ಸೂಚಿಸುತ್ತದೆ.

ಪ್ರಾಣಾಯಾಮದ ಇಂತಹ ಒಳತತ್ವವನ್ನು ತಿಳಿದುಕೊಂಡು ಅನುಷ್ಠಾನಮಾಡು ವವರು ಅತ್ಯಂತ ವಿರಳ. ಕಾರಣವೇನೆಂದರೆ, ಈ ವಿಧವಾದ ಪ್ರಾಣಾಯಾಮವು ಬಹಳ

ವಿಚಿತ್ರವಾದುದು ಮತ್ತು ಗೋಪ್ಯವಾದುದು. ಈರೀತಿ ಗೋಪ್ಯವಾದುದೆಂಬ ತಾತ್ಪರ್ಯ ವನ್ನು ಶ್ರೀಸ್ವಾತ್ಮಾರಾಮಯೋಗಿಗಳು ಯೋಗಪ್ರದೀಪಿಕೆಯಲ್ಲಿ ಸೂಚಿಸಿರುತ್ತಾರೆ. ಈ ವಿಧವಾದ ಪ್ರಾಣಾಯಾಮಕ್ಕೆ ಶಕ್ತಿಚಲನ ಅಥವಾ ಅಂತರ್ಭಸ್ತ್ರಿಕಪ್ರಾಣಾಯಾಮವೆಂದು ಹೆಸರು. ಹಿಂದಿನ ಪ್ರಕರಣದಲ್ಲಿ ತಿಳಿಸಿರುವ ಕುಂಭಕಪ್ರಾಣಾಯಾಮದಲ್ಲಿ ಉಸಿರನ್ನು ನೆತ್ತಿಯಲ್ಲಿ ನಿಲ್ಲಿಸುತ್ತೇವೆ. ಮತ್ತು ಮೂಗನ್ನು ಹಿಡಿದುಕೊಂಡು ಪ್ರಾಣಾಯಾಮ ಮಾಡುತ್ತೇವೆ. ಸಂಪಾತಿಯಿಂದ ವಾನರರಿಗೆ ಉಪದಿಷ್ಟವಾದ ಈ ಪ್ರಾಣಾಯಾಮವು ಹಿಂದಿನ ಪ್ರಕರಣದಲ್ಲಿ ತಿಳಿಸಿರುವ ಪ್ರಾಣಾಯಾಮದ ವಿಧವಾದುದಲ್ಲ. ಏಕೆಂದರೆ, ಶ್ವಾಸೋಚ್ಛ್ವಾಸಸ್ವರೂಪನಾದ ಹನುಮಂತನು ಸಮುದ್ರವನ್ನು ದಾಟಿ ಲಂಕೆಗೆ ಹೋಗಬೇಕು. ಸಮುದ್ರದ ತತ್ವದಲ್ಲಿರುವ ನಾಡಿಗಳ ಸಮುದಾಯವು ಲಂಕೆಯ ಸ್ವರೂಪ ವಾದ ಮೂಲಾಧಾರಚಕ್ರವನ್ನು ಮುಚ್ಚಿಕೊಂಡಿರುತ್ತೆ. ಆದುದರಿಂದ ಹನುಮಂತನ ತತ್ವದಲ್ಲಿರುವ ಶ್ವಾಸೋಚ್ಛ್ವಾಸವು ಮೂಲಾಧಾರಚಕ್ರವನ್ನು ಆವರಿಸಿಕೊಂಡಿರುವ ನಾಡಿ ಗಳೊಳಗೆ ನುಗ್ಗಿ ಹೋಗಿ ಮೂಲಾಧಾರವನ್ನು ಶೋಧನೆಮಾಡಬೇಕು.

ಮೂಲಾಧಾರ ಚಕ್ರದಲ್ಲಿ ಕುಂಭಕ ಮಾಡಬೇಕಾದರೆ ಶ್ವಾಸೋಚ್ಛ್ವಾಸವನ್ನು ಆ ಚಕ್ರಕ್ಕೆ ತೆಗೆದುಕೊಂಡು ಹೋಗಿ ನಿಲ್ಲಿಸಬೇಕಾಗುವುದು. ಮೂಲಾಧಾರಚಕ್ರವು ಬೆನ್ನಿನ ಹುರಿಯಲ್ಲಿ ಗುದದ ಮೇಲೆ ಸೊಂಟದಲ್ಲಿರುತ್ತೆ. ಈ ಸ್ಥಳಕ್ಕೆ ಉಸಿರನ್ನು ತೆಗೆದುಕೊಂಡು ಹೋಗಬೇಕಾದರೆ ಮೂಗಿನಿಂದ ಉಸಿರಾಡುವುದನ್ನು ನಿಲ್ಲಿಸಿ ಗಂಟಲಿನಿಂದ ಉಸಿರನ್ನು ಸೂರ್ಯನಾಡಿಯಲ್ಲೆಂದರೆ, ನಮ್ಮ ಬಲಭಾಗದಲ್ಲಿ ಅಮುಕಿಕೊಂಡು ಹೋಗಿ, ಮೂಲಾಧಾರ ಚಕ್ರದಲ್ಲಿ ಕುಂಭಕಮಾಡಿ, ಅನಂತರ ಚಂದ್ರನಾಡಿಯ ಮೂಲಕವೆಂದರೆ, ನಮ್ಮ ಎಡದ ಭಾಗದಿಂದ ಗಂಟಲಿನ ಹತ್ತಿರಕ್ಕೆ ತರಬೇಕು. ಈ ಪ್ರಾಣಾಯಾಮದ ವಿಧಾನವನ್ನು ಬರ ವಣಿಗೆಯಲ್ಲಿ ಬರೆದರೂ ಗ್ರಾಹ್ಯಮಾಡಿಕೊಳ್ಳುವುದು ಕಷ್ಟ. ಗುರುಮುಖೇನವೇ ತಿಳಿದು ಕೊಂಡು ಅಭ್ಯಾಸಮಾಡಬೇಕು. ಎಷ್ಟೋ ಜನರು ವೇದಾಂತಶ್ರವಣಮಾಡಿ ನಿದಿಧ್ಯಾಸಕ್ಕೆ ಬಂದು ಹಿಂದಿನ ಪ್ರಕರಣದಲ್ಲಿ ವಿವರಿಸಿರುವ ಸ್ವಯಂಪ್ರಭೆಯ ತತ್ವವಾದ ಕುಂಭಕ ಪ್ರಾಣಾಯಾಮವನ್ನು ಬಹಳಕಾಲ ಮಾಡಿಕೊಂಡು ಬಂದರೂ ಸಮಾಧಿಯ ಅನುಷ್ಠಾನ ಪ್ರಾರಂಭಿಸುವ ಸೋಪಾನವು ದೊರೆಯದೆ ಕೊನೆಗೆ ಪ್ರಾಣಾಯಾಮವನ್ನೇ ಬಿಟ್ಟುಬಿಡು ತ್ತಾರೆ. ಋಕ್ಷಬಿಲದ ತತ್ವವಾದ ಕುಂಭಕಪ್ರಾಣಾಯಾಮದಿಂದಲೇ ಶಕ್ತಿಚಲನ ಅಥವಾ ಅಂತರ್ಭಸ್ತ್ರಿಕ ಪ್ರಾಣಾಯಾಮದ ಫಲವನ್ನು ಹೊಂದಬೇಕಾದರೆ ಅತ್ಯಂತ ದೀರ್ಘಕಾಲ ಕಷ್ಟಪಟ್ಟು ಕುಂಭಕಪ್ರಾಣಾಯಾಮವನ್ನು ಅಭ್ಯಾಸಮಾಡಬೇಕಾಗುತ್ತದೆ. ಹಿಂದಿನ ಪ್ರಕರಣದ ಋಕ್ಷಬಿಲದ ತತ್ವವಾದ ಕುಂಭಕಪ್ರಾಣಾಯಾಮದಲ್ಲಿ ಉಸಿರನ್ನು ನೆತ್ತಿಯಲ್ಲಿ ನಿಲ್ಲಿಸಿಕೊಳ್ಳುತ್ತೇವಷ್ಟೆ! ಈ ರೀತಿಯಾಗಿ ಅಭ್ಯಾಸಮಾಡುತ್ತಾ ಇರುವ ಕಾಲದಲ್ಲಿ ಶ್ವಾಸೋ

ಚ್ಛ್ವಾಸದ ಕಾರ್ಯವು ಎದೆಯಿಂದ ನೆತ್ತಿಯವರೆಗೆ ಅಧಿಕವಾಗಿರುತ್ತದೆ. ಈ ಕುಂಭಕ ಪ್ರಾಣಾಯಾಮದಲ್ಲಿ ಮೂಲಾಧಾರ ಪ್ರದೇಶವಾಗಿರುವ ಸೊಂಟದ ಭಾಗದಲ್ಲಿ ಶ್ವಾಸೋಚ್ಛ್ವಾಸಗಳ ಕಾರ್ಯ ಅತ್ಯಲ್ಪ. ಆದುದರಿಂದ ಶಿರಸ್ಸಿನಲ್ಲಿ ಕುಂಭಕಮಾಡಿ ನಿಲ್ಲಿಸಿಕೊಳ್ಳುವುದು ಸ್ವಲ್ಪ ಸ್ತಿಮಿತಕ್ಕೆ ಬಂದನಂತರ ಉಸಿರಿನ ವೇಗವು ನೆತ್ತಿಯಲ್ಲಿ ಮೇಲ್ಮುಖವಾಗಿರುವುದರಿಂದ ಈ ಉಸಿರಿನ ಮೇಲ್ಮುಖದ ವೇಗದಿಂದ ದೇಹವು ನೆಲದಿಂದ ಮೇಲಕ್ಕೆ ಉತ್ಥಾಪನೆಯಾಗುತ್ತದೆ. ಕುಂಭಕಮಾಡಿದಷ್ಟು ಕಾಲ ದೇಹ ಉತ್ಥಾಪನೆಯಾಗಿದ್ದು ಅನಂತರ ನೆಲಕ್ಕೆ ಬರಬೇಕಾಗುತ್ತದೆ. ಆದಕಾರಣ ಈ ಕುಂಭಕಪ್ರಾಣಾಯಾಮದ ಅಭ್ಯಾಸದಿಂದಲೇ ಸಮಾಧಿಯ ಅನುಷ್ಠಾನದ ಸೋಪಾನಕ್ಕೆ ಬರುವುದು ಅತ್ಯಂತ ಕಷ್ಟವಾಗಿಯೂ ಅಪಾಯಕರವಾಗಿಯೂ ದೀರ್ಘಕಾಲ ಮಾಡಬೇಕಾದುದಾಗಿಯೂ ಇರುತ್ತದೆ.

ಶ್ರೀಸ್ವಾಮಿವಿವೇಕಾನಂದರವರು ಕೂಡ ರಾಜಯೋಗದಲ್ಲಿ ಮೂಲಾಧಾರದಲ್ಲಿ ಪ್ರಥಮದಲ್ಲಿ ಕುಂಭಕಮಾಡುವ ಅಭ್ಯಾಸವನ್ನು ಮಾಡಬೇಕೆಂದೂ, ಇದೇ ಸರ್ವಶ್ರೇಷ್ಠವೆಂದೂ, ಗೂಢಾರ್ಥದಲ್ಲಿ ಬರೆದಿರುತ್ತಾರೆ. ಈ ಶಕ್ತಿಚಲನ ಅಥವಾ ಅಂತರ್ಭಸ್ತ್ರಿಕ ಪ್ರಾಣಾಯಾಮ ಮಾಡುವ ಕ್ರಮವನ್ನು ಸುಂದರಕಾಂಡದ ಪ್ರಥಮ ದ್ವಿತೀಯ ಪ್ರಕರಣಗಳಲ್ಲೂ ತಕ್ಕ ಮಟ್ಟಿಗೆ ವಿವರಿಸಿರುತ್ತದೆ. ಅಲ್ಲದೆ ಹನುಮಂತನು ಸುಂದರಕಾಂಡದಲ್ಲಿ ನಡೆಸಿರುವ ತತ್ವಗಳ ಮಹಿಮೆಗಳೆಲ್ಲಾ ಈ ಶಕ್ತಿಚಲನ ಅಥವಾ ಅಂತರ್ಭಸ್ತ್ರಿಕ ಪ್ರಾಣಾಯಾಮದ ಪ್ರಭಾವದ್ದಾಗಿರುವುವು. ಈಗಿನ ಕಾಲದಲ್ಲಿ ಅನುಷ್ಠಾನದ ದಾರಿಯಲ್ಲಿ ಹೋಗುವವರು ವಿರಳ ಮತ್ತು ಮಾಯೆಯ ಬಲೆಯನ್ನು ಭೇದಿಸುವಂತಹ ಸಂಪಾತಿಯ ತತ್ವದಂತೆ ಯಥಾರ್ಥವಾದ ದಾರಿಯನ್ನು ತಿಳಿಸತಕ್ಕ ಗುರುಗಳು ದೊರೆಯುವುದೂ ದುರ್ಲಭ.

ಇಂತಹ ಮಹನೀಯರುಗಳ ಕರುಣಾಕಟಾಕ್ಷವಿಲ್ಲದೆ ನಿಜಸ್ಥಿತಿಯ ಮಾರ್ಗವು ದೊರೆಯುವುದಿಲ್ಲವೆಂಬ ತಾತ್ಪರ್ಯಕ್ಕೆ ಮಹೋಪನಿಷತ್ತಿನಲ್ಲಿಯೂ ವರಾಹೋಪನಿಷತ್ತಿನ ಎರಡನೇ ಅಧ್ಯಾಯದಲ್ಲಿಯೂ,

ದುರ್ಲಭೋ ವಿಷಯತ್ಯಾಗೋ ದುರ್ಲಭಂ ತತ್ವದರ್ಶನಂ |
ದುರ್ಲಭಾ ಸ್ಸಹಜಾವಸ್ಥಾ ಸ್ಸದ್ಗುರೋಃ ಕರುಣಾಂ ವಿನಾ ||

ತಾ|| ಗುರುವಿನ ಕರುಣವಿಲ್ಲದೆ ವಿಷಯತ್ಯಾಗವೂ ಪರಮಾತ್ಮಜ್ಞಾನವೂ ಸ್ವಸ್ವರೂಪವನ್ನು ಹೊಂದುವ ಯಥಾರ್ಥವಾದ ದಾರಿಯೂ ದೊರಕುವುದು ದುರ್ಲಭವೆಂದು ಹೇಳಿದೆ.

ಆದುದರಿಂದ ಪ್ರತಿಯೊಂದು ಸೋಪಾನಕ್ಕೂ ಸದ್ಗುರುವಿನ ಉಪದೇಶವು ಅವಶ್ಯಕವಾಗಿರುವುದೆಂಬ ತತ್ವವನ್ನು ಅನುಸರಿಸಿ ಸಂಪಾತಿಯಿಂದಲೇ ವಾನರರಿಗೆ ಸೀತಾದೇವಿಯ ನಿಜಸ್ಥಿತಿಯು ಗೊತ್ತಾಯಿತು. ಯಥಾರ್ಥವಾದ ದಾರಿಯು ಗೊತ್ತಿಲ್ಲದಿರುವುದರಿಂದ

ಪ್ರಯತ್ನಮಾಡಿದ ಎಷ್ಟೋ ಜನಗಳಲ್ಲಿ ಒಬ್ಬನು ನಿಜಸ್ಥಿತಿಯನ್ನು ತಿಳಿಯುತ್ತಾನೆಂದು ಶ್ರೀಕೃಷ್ಣಪರಮಾತ್ಮನು ಹೇಳಿರುತ್ತಾನೆ. ಇದೇ ಅರ್ಥಕ್ಕೆ ಕಠೋಪನಿಷತ್ ದ್ವಿತೀಯ ವಲ್ಲಿಯಲ್ಲಿ,

> ಶ್ರವಣಾಯಾಪಿ ಬಹುಭಿರ್ಯೋನಲಭ್ಯಃ |
> ಶೃಣ್ವಂತೋಽಪಿ ಬಹವೋಯಂ ನವಿದ್ಯುಃ ||

ತಾ|| ಆತ್ಮವಿದ್ಯಾಶ್ರವಣ ಮಾಡುವುದಕ್ಕೂ ಬಹುಮಂದಿಯೊಳಗೆ ಒಬ್ಬನು ದೊರೆಯನು, ಶ್ರವಣಾಧಿಕಾರ ಬರುವುದೂ ಬಹುಸುಕೃತದ ಫಲವಾಗಿರುತ್ತದೆ. ಹಾಗೆ ಬಹುಮಂದಿ ಶ್ರವಣಮಾಡುವವರಾದರೂ ಆತ್ಮನನ್ನು ತಿಳಿಯಲಾರರು, ಎಂದು ಹೇಳಿರುವುದು.

ಕಾರಣವೇನೆಂದರೆ ಮುಮುಕ್ಷುತೆಯಲ್ಲಿ ತೀವ್ರತಮವಾದ ಇಚ್ಛೆಯಿಲ್ಲದಿರುವುದೇ ಪ್ರಥಮ ಕಾರಣ. ಮೋಕ್ಷೇಚ್ಛೆಯನ್ನು ಹೊಂದಿ ವೇದಾಂತಶ್ರವಣ ಮಾಡಿದರೂ ಅನುಷ್ಠಾನದ ಸೋಪಾನಗಳಲ್ಲಿ ಆಸ್ತಿಕ್ಯಬುದ್ಧಿಯುಂಟಾಗುವುದು ದುರ್ಲಭ. ಅನುಷ್ಠಾನಮಾರ್ಗದಲ್ಲಿ ಆಸ್ತಿಕ್ಯಬುದ್ಧಿ ಬಂದು ಪ್ರವೇಶಮಾಡಿದ ಬಹುಮಂದಿಯಲ್ಲಿ ಯಥಾರ್ಥವಾದ ದಾರಿಯನ್ನು ತಿಳಿಯದೆ ಅನೇಕರು ಅಸಂಸ್ಕೃತರಾಗಿ ಆತ್ಮನನ್ನು ತಿಳಿಯಲಾರರು.

ಸಂಪಾತಿಯಿಂದ ವಾನರರಿಗೆ ತಿಳಿಸಲ್ಪಟ್ಟ ತತ್ವವಾದ ಶಕ್ತಿಚಲನ ಅಥವಾ ಅಂತರ್ಭಸ್ತ್ರಿಕ ಪ್ರಾಣಾಯಾಮವು ಕಂಠದಿಂದ ಮೂಲಾಧಾರಚಕ್ರಕ್ಕೆ ಶ್ವಾಸೋಚ್ಛ್ವಸವನ್ನು ತೆಗೆದುಕೊಂಡು ಹೋಗಿ ಕುಂಭಕಮಾಡುವುದು ಒಂದು ವಿಚಿತ್ರ ವಿಧವಾಗಿದ್ದರೂ ಸರಿಯಾಗಿ ತಿಳಿದು ಅನುಷ್ಠಾನಮಾಡಿದರೆ ಅಪಾಯಕರವಲ್ಲ. ಹನುಮಂತನು ಲಂಕೆಗೆ ಹೋಗಿ ಸಂತೋಷದಿಂದ ನಡೆಸಿಕೊಂಡು ಬಂದ ಕಾರ್ಯಗಳೆಲ್ಲ ಈ ಪ್ರಾಣಾಯಾಮದ ಪ್ರಭಾವದ್ದು. ಈ ಪ್ರಾಣಾಯಾಮದ ವಿಧಾನ ಮತ್ತು ಪ್ರಭಾವವು ಸುಂದರಕಾಂಡದ ತತ್ವಗಳಲ್ಲಿ ಗೊತ್ತಾಗುವುದು. ಹಿಂದಿನ ಪ್ರಕರಣಗಳಲ್ಲಿ ಹೇಳಿರುವ ರೇಚಕಪೂರಕ ಮತ್ತು ಕುಂಭಕಪ್ರಾಣಾಯಾಮಗಳನ್ನು ಚೆನ್ನಾಗಿ ಪರಿಶ್ರಮಮಾಡಿಕೊಂಡು ಅವುಗಳ ಅಭ್ಯಾಸವು ಸ್ತಿಮಿತಕ್ಕೆ ಬಂದನಂತರವೇ ಈ ಶಕ್ತಿಚಲನಪ್ರಾಣಾಯಾಮವನ್ನು ಮಾಡಬೇಕು. ಅಂದರೆ ಈ ಪ್ರಾಣಾಯಾಮವನ್ನು ಅನುಷ್ಠಾನಮಾಡುವಾಗ ಪ್ರತಿದಿನವೂ ರೇಚಕ ಪೂರಕ ಕುಂಭಕಪ್ರಾಣಾಯಾಮಗಳನ್ನು ಕೊಂಚ ಅನುಷ್ಠಾನಮಾಡಿದನಂತರ ಈ ಪ್ರಾಣಾಯಾಮವನ್ನು ಪ್ರಾರಂಭಿಸಬೇಕು.

**ರಾ||** ಸಂಪಾತಿಯಿಂದ ನಿರೂಪಿಸಲ್ಪಟ್ಟಂತೆ ಲಂಕೆಗೆ ಹೋಗಿ ಸೀತಾದೇವಿಯನ್ನು **ಹುಡುಕಿಕೊಂಡು** ಬರಲು ವಾನರರು ಯೋಚನೆಮಾಡುತ್ತಿದ್ದರು. ಅಗಾಧವಾದ ಸಮುದ್ರವನ್ನು ಹಾರಿಹೋಗಿ ಬರಲು ಯಾವ ವಾನರನಿಗೂ ಚೈತನ್ಯವಿಲ್ಲದ್ದರಿಂದ ಖಿನ್ನರಾಗಿದ್ದರು.

ದ್ದರು. ಹೀಗಿರುವಲ್ಲಿ ಹನುಮಂತನ ಹೊರತು ಉಳಿದವರಲ್ಲಿ ಯಾರಿಗೂ ಸಮುದ್ರವನ್ನು ದಾಟಿ ಹೋಗಲು ಯೋಗ್ಯತೆಯಿಲ್ಲವೆಂದು ಜಾಂಬುವಂತನು ಹನುಮಂತನನ್ನು ಪ್ರೇರಿಸಿದನು. ಅವರಂತೆ ಹನುಮಂತನು ಪ್ರಯಾಣಬೆಳೆಸಲು ಸಿದ್ಧನಾದನು.

**ತತ್ವ||** ಸೀತೆಯು ಲಂಕೆಯಲ್ಲಿ ಬಂಧನದಲ್ಲಿರುತ್ತಾಳೆಂತಲೂ, ಸಮುದ್ರವನ್ನು ಹಾರಿ ಹೋಗಿ ಲಂಕೆಯನ್ನು ಸೇರಬೇಕೆಂತಲೂ, ಸಂಪಾತಿಯು ತಿಳಿಸಿ ಹೊರಟುಹೋದ ನೆಂದರೆ—ಮೂಲಾಧಾರವು ನಾಡಿಗಳ ಸಮುದಾಯದಿಂದ ಆವೃತವಾಗಿರುವುದರಿಂದ ಈ ಸಮುದಾಯದಲ್ಲಿ ನುಗ್ಗಿ ಹೋಗಲು ಶ್ವಾಸೋಚ್ಛ್ವಾಸರೂಪನಾದ ಹನುಮಂತನೊಬ್ಬನಿಂದ ಸಾಧ್ಯವೇ ಹೊರತು ಉಳಿದ ಇತರ ವಾಯುಗಳಿಂದ ಸಾಧ್ಯವಿಲ್ಲ. ಆದುದರಿಂದ ಶ್ವಾಸೋಚ್ಛ್ವಾಸದ ತತ್ವದವನಾದ ಹನುಮಂತನು ಲಂಕೆಯ ತತ್ವವಾದ ಮೂಲಾಧಾರ ಚಕ್ರಕ್ಕೆ ಹೊರಡಲುದ್ಯುಕ್ತನಾದನು. ಹನುಮಂತನು ಜಾಂಬುವಂತನಿಂದಲೇ ಪ್ರೇರಿತ ನಾದ ತತ್ವವೇನೆಂದರೆ—ಜಾಂಬುವಂತನೆಂದರೆ, ಉದಾನವಾಯುತತ್ವದವನಾಗಿರುತ್ತಾನೆಂದು ಹಿಂದೆಯೇ ತಿಳಿಸಿರುತ್ತೆ. ಉದಾನವಾಯುವು ನಮ್ಮಲ್ಲಿ ಕಂಠದಲ್ಲಿರುವುದು. ಈ ಪ್ರಾಣಾಯಾಮದ ಕಾರ್ಯವು ಕಂಠದಿಂದ ಮೇಲಕ್ಕೆ ಇರುವುದಿಲ್ಲ. ಕಂಠದಿಂದಲೇ ಪ್ರಾರಂಭವಾಗಿ ಮೂಲಾಧಾರಪ್ರದೇಶಕ್ಕೆ ಹೋಗಬೇಕಾಗಿರುವುದರಿಂದಲೂ ಮೂಲಾಧಾರದಿಂದ ಹಿಂದಿರುಗಿ ಬರುವಾಗಲೂ ಕಂಠದಲ್ಲಿಯೇ ನಿಲ್ಲಬೇಕಾಗಿರುವುದರಿಂದಲೂ, ಕಂಠದಲ್ಲಿರುವ ಉದಾನವಾಯುವಿನ ಪ್ರೇರಣೆಯು ಅತ್ಯವಶ್ಯಕವಾಗಿ ಬೇಕೆಂಬ ತತ್ವಾರ್ಥವೇ ಜಾಂಬುವಂತನು ಹನುಮಂತನನ್ನು ಪ್ರೇರಿಸಿದ್ದಾಗಿರುತ್ತದೆ. ಜಾಂಬುವಂತನಿಂದ ಪ್ರೇರಿತನಾದ ಹನುಮಂತನು ಉತ್ಸಾಹದಿಂದ ಲಂಕೆಗೆ ಹಾರಲುದ್ಯುಕ್ತನಾದನೆಂದರೆ—ಶಕ್ತಿಚಲನಪ್ರಾಣಾಯಾಮದ ಅನುಷ್ಠಾನವು ಪ್ರಾರಂಭವಾಯಿತೆಂಬ ತತ್ವವಾಗಿರುತ್ತದೆ.

ಇನ್ನು ನಮ್ಮ ಮಾರುತಿಯ ದಿಗ್ವಿಜಯ ಸ್ವರೂಪವಾದ ಸುಂದರಕಾಂಡದ ತತ್ವವನ್ನು ತಿಳಿದುಕೊಳ್ಳಲು ಪ್ರಾರಂಭಿಸೋಣ.



ಶ್ರೀ



# ಸುಂದರಕಾಂಡ



## ಪ್ರಾಣಾಯಾಮದಿಂದ ಬ್ರಹ್ಮರಂಧ್ರದ ಬಾಗಿಲನ್ನು ತೆಗೆಯಿಸಿ ಮೋಕ್ಷದ ಸೌಂದರ್ಯವನ್ನು ಪಡೆಯುವ ತತ್ವದ ವಿಚಾರ.

### ೧ನೆಯ ಪ್ರಕರಣ.

**ಹನುಮಂತನು ಮೈನಾಕ ಪರ್ವತವನ್ನು ಅಪ್ಪಳಿಸಿದುದು.**

**ಶಕ್ತಿಚಲನ ಪ್ರಾಣಾಯಾಮದಿಂದ ಸ್ವಾಧಿಷ್ಠಾನಚಕ್ರದಲ್ಲಿರುವ ಕಂದವನ್ನು ಚಲನೆಮಾಡಿಸುವ ವಿಚಾರ.**

**ರಾ॥** ಹನುಮಂತನು ಜಾಂಬುವಂತನಿಂದ ಪ್ರೇರಿತನಾಗಿ ಮಹೇಂದ್ರಪರ್ವತವನ್ನೇರಿ ಅಲ್ಲಿಂದ ಸಮುದ್ರದ ಮೇಲೆ ಹಾರಿ ಲಂಕೆಯಕಡೆಗೆ ಹೋಗುತ್ತಿದ್ದನು. ಹೀಗೆ ಹಾರಿ ಹೋಗುತ್ತಿರುವಾಗ ಸಮುದ್ರಮಧ್ಯದಲ್ಲಿ ತನಗೆ ಅಡ್ಡವಾದ ಸುವರ್ಣನಾಭನೆಂದು ಹೆಸರುಗೊಂಡ ಮೈನಾಕ ಪರ್ವತವನ್ನು ಅಪ್ಪಳಿಸಿದನು. ಅನಂತರ ಮೈನಾಕ ಪರ್ವತದ ಸತ್ಕಾರದಿಂದ ಸಂತುಷ್ಟನಾಗಿ ಮುಂದಕ್ಕೆ ಪ್ರಯಾಣಮಾಡಿದನು,

**ತತ್ವ||** ಇದುವರೆಗೂ ನಿದಿಧ್ಯಾಸದ ಅಂಗಗಳಾದ ಆಸನ, ರೆಚಕ, ಪೂರಕ, ಕುಂಭಕ ಪ್ರಾಣಾಯಾಮಗಳ ಅನುಷ್ಠಾನದ ವಿಚಾರವನ್ನು ವಿವರಿಸಿತು. ಅಲ್ಲದೆ ಸಂಪಾತಿಯಿಂದ ವಾನರರಿಗೆ ಉಪದಿಷ್ಟವಾದ ಶಕ್ತಿಚಲನ ಪ್ರಾಣಾಯಾಮದ ವಿಚಾರವನ್ನೂ ತಕ್ಕ ಮಟ್ಟಿಗೆ ಹಿಂದಿನ ಪ್ರಕರಣದಲ್ಲಿ ಬರೆದಿರುವುದಷ್ಟೆ! ಸಂಪಾತಿಯಿಂದ ಉಪದೇಶಿಸಲ್ಪಟ್ಟ ಅಮೋಘವಾದ ಶಕ್ತಿಚಲನ ಪ್ರಾಣಾಯಾಮದ ಅನುಷ್ಠಾನವು ಈ ಪ್ರಕರಣದಿಂದ ಪ್ರಾರಂಭವಾಗುವುದು. ಈ ಶಕ್ತಿಚಲನ ಪ್ರಾಣಾಯಾಮವನ್ನು ಮೋಕ್ಷದ ಬಾಗಿಲನ್ನು ತೆಗೆಸುವ ಪ್ರಾಣಾಯಾಮವೆಂದೂ ಹೇಳಬಹುದು. ಮೋಕ್ಷದ ಬಾಗಿಲಾದ ಬ್ರಹ್ಮರಂಧ್ರದ ಬಾಗಿಲನ್ನು ಪರಾಶಕ್ತಿಯಾದ ಕುಂಡಲಿನೀಶಕ್ತಿಯು ಮುಚ್ಚಿಕೊಂಡಿರುವುದು. ಈ ಕುಂಡಲಿನೀಶಕ್ತಿಯನ್ನು ಎಬ್ಬಿಸಿ ಬಾಗಿಲನ್ನು ತೆಗೆಸುವುದರಿಂದ ಈ ಪ್ರಾಣಾಯಾಮಕ್ಕೆ ಶಕ್ತಿಚಲನಪ್ರಾಣಾಯಾಮವೆಂದು ಹೆಸರು.

ಈ ಪ್ರಾಣಾಯಾಮದಲ್ಲಿ ಮೊದಲು ರೇಚಕಪೂರಕಪ್ರಾಣಾಯಾಮವನ್ನು ಮಾಡಿಕೊಂಚ ಸ್ಥಿತಿಕ್ಕೆ ತಂದುಕೊಂಡು, ಅನಂತರ ಇದರಲ್ಲಿನ ಕುಂಭಕಪ್ರಾಣಾಯಾಮವನ್ನು ಮಾಡುವುದುತ್ತಮವಾದುದರಿಂದ ಪ್ರಥಮದಲ್ಲಿ ಮಾಡಬೇಕಾದ ರೇಚಕಪೂರಕಪ್ರಾಣಾಯಾಮದಲ್ಲಿ ನಡೆಯತಕ್ಕ ಕಾರ್ಯ್ಯಗಳನ್ನು ವಿವರಿಸೋಣ.

ಈ ವಿಧವಾದ ಪ್ರಾಣಾಯಾಮವು ಕಂಠದಲ್ಲಿ ಪ್ರಾರಂಭವಾಗಿ, ದೇಹದಲ್ಲಿ ಸೂರ್ಯನಾಡಿಯ ಮೂಲಕ ಮೂಲಾಧಾರಚಕ್ರದ ಪರ್ಯಂತರ ಹೋಗಿ ಮೂಲಾಧಾರಚಕ್ರದಲ್ಲಿ ಕೊಂಚ ನಿಂತಂತೆ ಮಾಡಿ, ಅನಂತರ ಚಂದ್ರನಾಡಿಯ ಮೂಲಕ ಪುನಃ ಕಂಠಕ್ಕೆ ಬರತಕ್ಕ ಪ್ರಾಣಾಯಾಮವೆಂದು ಹಿಂದಿನ ಪ್ರಕರಣದಲ್ಲಿ ತಿಳಿಸಿರುವುದಷ್ಟೆ! ಕಂಠದಿಂದ ಸೂರ್ಯನಾಡಿಯ ಮೂಲಕ ಮೂಲಾಧಾರಚಕ್ರದವರೆಗೆ ಅದುಮಿಕೊಂಡು ತೆಗೆದುಕೊಂಡು ಹೋದ ಉಸಿರನ್ನು ಮೂಲಾಧಾರಚಕ್ರದಲ್ಲಿ ಸೇರಿಸಿಕೊಂಡು, ಹಾಗೆಯೇ ಚಂದ್ರನಾಡಿಯ ಮೂಲಕ ತೆಗೆದುಕೊಂಡು ನಿಧಾನವಾಗಿ ಹಿಂದಕ್ಕೆ ಕಂಠಕ್ಕೆ ತರಬೇಕು. ಪುನಃ ಚಂದ್ರನಾಡಿಯ ಮೂಲಕ ಉಸಿರನ್ನು ಮೂಲಾಧಾರಚಕ್ರದವರೆಗೆ ಅದುಮಿ ತೆಗೆದುಕೊಂಡು ಹೋಗಿ ಮೂಲಾಧಾರಚಕ್ರದಲ್ಲಿ ಸೇರಿಸಿಕೊಂಡು, ಹೆಚ್ಚುಕಾಲ ನಿಲ್ಲದೆ ಪುನಃ ಸೂರ್ಯನಾಡಿಯ ಮೂಲಕ ಅತ್ಯಂತ ನಿಧಾನವಾಗಿ ಕಂಠಕ್ಕೆ ತರಬೇಕು. ಅಂದರೆ ಕಂಠದಿಂದ ಬಲಗಡೆ ಹೊರಟು ಮೂಲಾಧಾರಚಕ್ರದ ಮೂಲಕ ಎಡಗಡೆ ಚಂದ್ರನಾಡಿಯ ಭಾಗದಿಂದ ಬರುವುದೊಂದು ಪ್ರದಕ್ಷಿಣೆ. ಪುನಃ ಕಂಠದಿಂದ ಎಡಗಡೆಯಿಂದ ಕೆಳಕ್ಕೆ ಮೂಲಾಧಾರಚಕ್ರಕ್ಕೆ ಹೋಗಿ ಬಲಗಡೆಯಿಂದ ಕಂಠಕ್ಕೆ ಬರುವುದೊಂದು ಪ್ರದಕ್ಷಿಣೆ. ಈ ರೀತಿಯಾಗಿ ಮಾಡುವುದೇ ಶಕ್ತಿಚಲನರೇಚಕಪೂರಕ ಪ್ರಾಣಾಯಾಮವಾಗಿದೆ.



ಸಹಸ್ರಾರ
ಆಜ್ಞಾಚಕ್ರ.
ವಿಶುದ್ಧಚಕ್ರ.
ಅನಾಹತಚಕ್ರ.
ಮಣಿಪೂರ ಚಕ್ರ.
ಮೈನಾಕಪರ್ವತ.
ಸ್ವಾಧಿಷ್ಠಾನಚಕ್ರ.
ಕುಂಡಲಿನೀಶಕ್ತಿ(ಸುರಸೆ)
ಮೂಲಾಧಾರ ಚಕ್ರ.
(ಲಂಕಾದಹನ).


ತಾವರೆಗಿಡದ ಚಿತ್ರ.

ಈ ರೇಚಕಪೂರಕಪ್ರಾಣಾಯಾಮದಲ್ಲಿ ಮೂಲಾಧಾರದಲ್ಲಿ ವಾಯುವನ್ನು ಶೇಖರಿಸಿ ಕೊಳ್ಳುವುದೆಷ್ಟೋ ಅಷ್ಟೇ ಹೊರತು, ಕುಂಭಕಮಾಡಲು ಪ್ರಥಮದಲ್ಲಿ ಹೆಚ್ಚು ಕಾಲ ನಿಲ್ಲಿಸ ಬಾರದು. ಮೂಲಾಧಾರದಿಂದ ಮೇಲಕ್ಕೆ ತರುವಾಗ ಅತ್ಯಂತ ನಿಧಾನವಾಗಿ ಕಂಠಕ್ಕೆ ತರಬೇಕು. ಮೂಲಾಧಾರದ ಕಡೆಗೆ ಹೋದ ಉಸಿರನ್ನು ಮೂಲಾಧಾರದಲ್ಲಿ ಶೇಖರಿಸಿ ಕೊಳ್ಳಲು ಮೂಲಾಧಾರದ ಸಮೀಪಕ್ಕೆ ಹೋದಾಗ ಉಸಿರನ್ನು ಚೆನ್ನಾಗಿ ಅದುಮಬೇಕು. ಈ ಅದುಮುವುದೆಂದರೆ ಘಟಿತಕ್ರಿಯೆ ಮಾಡಬೇಕೆಂಬ ತಾತ್ಪರ್ಯ.

ಈ ಪ್ರಾಣಾಯಾಮವನ್ನು ಮಾಡುವಾಗ ನಡೆಯುವ ಕಾರ್ಯವು ಯಾವುದೆಂದರೆ— ಕಂಠದಿಂದ ಕೆಳಕ್ಕೆ ತಳ್ಳಿಕೊಂಡು ಹೋದ ಉಸಿರು ಸ್ವಾಧಿಷ್ಠಾನಚಕ್ರದಲ್ಲಿರುವ ಕಂದ ವೆಂದರೆ ಗೆಡ್ಡೆಗೆ ಬಡಿಯುತ್ತದೆ. ಈ ಕಂದದ ಮೇಲೆ ನಿಂತುಕೊಳ್ಳದೆ ಕಂದವನ್ನು ವಾಯು ವಿನಿಂದ ಚೆನ್ನಾಗಿ ತಳ್ಳಿ ಅಥವಾ ಚಲಿಸಿಕೊಂಡು ಮೂಲಾಧಾರಚಕ್ರದಲ್ಲಿ ಉಸಿರನ್ನು ಕೊಂಚ ಶೇಖರಿಸಿಕೊಂಡಂತೆ ಮಾಡಿ, ಮುಂದಕ್ಕೆ ಚಂದ್ರನಾಡಿಯ ಮೂಲಕ ಉಸಿರನ್ನು ಕಂಠಕ್ಕೆ ತರಬೇಕು. ಈ ತತ್ವಾರ್ಥವನ್ನು ಅನುಸರಿಸಿ ಹನುಮಂತನಿಗೆ ಸಮುದ್ರಮಧ್ಯ ದಲ್ಲಿ ಅಡ್ಡಲಾಗಿ ಬಂದ ಮೈನಾಕಪರ್ವತವೇ ಕಂದದ ತತ್ವ. ಈ ಕಂದವು ನಮ್ಮ ದೇಹ ದಲ್ಲಿ ಯಾವ ಸ್ಥಳದಲ್ಲಿರುವುದು ? ಮತ್ತು ಇದರ ತತ್ವಾರ್ಥವೇನು ? ಎಂಬುದನ್ನು ವಿಮರ್ಶೆ ಮಾಡುವುದಕ್ಕೆ ತಾವರೆಪುಷ್ಪದ ಗಿಡವನ್ನು ಉದಾಹರಣೆಗೆ ತೆಗೆದುಕೊಂಡು ತಾವರೆಪುಷ್ಪದ ಗಿಡಕ್ಕೂ ನಮ್ಮ ದೇಹಕ್ಕೂ ಹೋಲಿಕೆಮಾಡಿ ಇದರಲ್ಲಿರುವ ತತ್ವಾರ್ಥವನ್ನು ತಿಳಿದು ಕೊಳ್ಳೋಣ. ಈ ಉದಾಹರಣೆಯನ್ನು ತೋರಿಸಲು ಬೇರುಸಹಿತವಾದ ತಾವರೇಗಿಡದ ಚಿತ್ರಪಠವನ್ನು ಕೊಟ್ಟಿರುತ್ತದೆ.

ತಾವರೇ ಪುಷ್ಪದ ದಿಂಡಿನ ಮೇಲ್ಭಾಗದಲ್ಲಿರುವ ಕರ್ಣಿಕದ ಪ್ರದೇಶವು ಸಹಸ್ರಾರ ಕಮಲವಾದ ಪರಮಾತ್ಮನ ಸ್ಥಾನವಾಗಿರುತ್ತದೆ. ಪುಷ್ಪ ಮತ್ತು ಕರ್ಣಿಕೆಯಪ್ರದೇಶದ ತತ್ವವನ್ನು ಅಯೋಧ್ಯಾಕಾಂಡದ ಭರದ್ವಾಜಾಶ್ರಮ ಪ್ರಕರಣದ ತತ್ವದಲ್ಲಿ ವಿವರಿಸಿರುತ್ತೆ. ಸಪ್ತಚಕ್ರಗಳಲ್ಲಿ ಸಹಸ್ರಾರ ಹೊರತು ಉಳಿದ ಆಜ್ಞಾ ಮುಂತಾದ ಷಟ್ಚಕ್ರಗಳು ತಾವರೇ ಗಿಡದ ಚಿತ್ರಪಠದಲ್ಲಿ ಗುರುತುಮಾಡಿರುವಂತೆ ನಮ್ಮ ಬೆನ್ನಿನ ಮೂಳೆಯಲ್ಲಿ ಶಕ್ತಿರೂಪದಲ್ಲಿರು ತ್ತವೆ. ಈ ಷಟ್ಚಕ್ರಗಳಲ್ಲಿ ಸ್ವಾಧಿಷ್ಠಾನಚಕ್ರದ ಪ್ರದೇಶದಲ್ಲಿ ಕಂದವೆಂದರೆ ಗೆಡ್ಡೆಯು ಇರುತ್ತದೆ. ಈ ಗೆಡ್ಡೆಯ ತಾಯಿಬೇರೇ ಮೂಲಾಧಾರಚಕ್ರ ಅಥವಾ ಭೂಲೋಕ ವಾಗಿದೆ. ಗಿಡಕ್ಕೆ ಬೇರು ಮೂಲಕಾರಣ ಅಥವಾ ಆಧಾರವಾಗಿರುವುದರಿಂದ ಈ ಸ್ಥಳಕ್ಕೆ ಮೂಲಾಧಾರಚಕ್ರ ಅಥವಾ ಭೂಲೋಕವೆಂದು ಹೆಸರು. ಸ್ವಾಧಿಷ್ಠಾನಚಕ್ರದಲ್ಲಿರುವ ಗೆಡ್ಡೆಯ ಬೇರುಗಳು ಪಾತಾಳಲೋಕದ ಕೊನೆಯವರೆಗೆಂದರೆ, ಪಾದದ ಅಂಗುಷ್ಠದ ವರೆಗೆ ಹೋಗಿದ್ದರೂ ಬೇರಿನ ಮುಖ್ಯಬಲವೆಲ್ಲ ಮೂಲಾಧಾರಚಕ್ರಕ್ಕೆ ಸೇರಿರುತ್ತದೆ.

ತಾವರೇ ಗಿಡದಲ್ಲಿ, ಗೆಡ್ಡೆಯಿಂದ ಬೇರುಗಳು ಅಧೋಮುಖವಾಗಿ ಹೊರಟಿರುತ್ತವೆ. ಮತ್ತೊಂದು ಕಡೆಯಿಂದ ನಾಳವು ಮೇಲ್ಮುಖವಾಗಿ ಹೊರಟಿರುತ್ತದೆ. ಈ ಗೆಡ್ಡೆಯ ಕೆಳಗಿರುವ ಬೇರಿಗೂ ಮೇಲಕ್ಕೆ ಹೊರಟಿರುವ ನಾಳಕ್ಕೂ ಅಧಿಷ್ಠಾನವೆಂದರೆ ಆಶ್ರಯವಾಗಿರುವುದರಿಂದ ಈ ಕಂದಕ್ಕೆ ಸ್ವಾಧಿಷ್ಠಾನಚಕ್ರವೆಂದು ಹೆಸರು. ನಾಳವು ಗೆಡ್ಡೆಯ ಒಳಭಾಗದಲ್ಲಿಯೂ ಮೂಲಾಧಾರಚಕ್ರದವರೆಗೆ ಇರುತ್ತದೆ. ಈ ಗೆಡ್ಡೆಯು ನಮ್ಮ ದೇಹದಲ್ಲಿ ನಾಭಿಗೂ ಲಿಂಗಕ್ಕೂ ಮಧ್ಯೆ ಹಕ್ಕಿಯ ಮೊಟ್ಟೆಯಂತೆ ಇರುತ್ತದೆ. ಇದು ನಮ್ಮ ದೇಹದಲ್ಲಿರುವ ಎಪ್ಪತ್ತೆರಡು ಸಾವಿರ ನಾಡಿಗಳು ಸೇರುವ ಸ್ಥಳವಾಗಿದೆಯೆಂದು ಧ್ಯಾನಬಿಂದೂಪನಿಷತ್ತಿನಲ್ಲಿ,

> ಊರ್ಧ್ವಂ ಮೇಢ್ರಾ ದಧೋನಾಭೇಃ ಕಂದಯೋಸ್ತಿ ಖಗಾಂಡವತ್
> ತತ್ರ ನಾಡ್ಯಸ್ಸಮುತ್ಪನ್ನಾ ಸ್ಸಹಸ್ರಾಣಿ ದ್ವಿಸಪ್ತತಿ ||

ತಾ|| ಮೇಢ್ರ ಅಥವಾ ಲಿಂಗಪ್ರದೇಶಕ್ಕೂ ನಾಭಿಗೂ ಮಧ್ಯದಲ್ಲಿ ಪಕ್ಷಿಯ ಮೊಟ್ಟೆಯಂತಿರುವ ಕಂದವಿರುತ್ತದೆ. ಈ ಕಂದವಿರುವ ಪ್ರದೇಶದಲ್ಲಿ ಎಪ್ಪತ್ತೆರಡುಸಹಸ್ರ ನಾಡಿಗಳೂ ಸಮುತ್ಪನ್ನವಾಗಿರುತ್ತವೆ. ಎಂಬದಾಗಿ ಹೇಳಿರುವುದು.

ಈ ಕಂದದ ವಿಚಾರವಾಗಿ ತ್ರಿಶಿಖಿ, ಯೋಗಚೂಡಾಮಣಿ, ಧ್ಯಾನಬಿಂದು, ವರಾಹ, ಶಾಂಡಿಲ್ಯ ಮುಂತಾದ ಇನ್ನೂ ಅನೇಕ ಉಪನಿಷತ್ತುಗಳಲ್ಲಿಯೂ ಹೇಳಿರುತ್ತದೆ. ನಮ್ಮ ದೇಹವನ್ನು ಧಾರಣೆಮಾಡಿಕೊಂಡಿರುವ ಮುಖ್ಯವಾದ ಎಪ್ಪತ್ತೆರಡುಸಾವಿರ ನಾಡಿಗಳಲ್ಲದೆ ಇನ್ನೂ ಅಸಂಖ್ಯಾತವಾದ ನಾಡಿಗಳು ಈ ಗೆಡ್ಡೆಯಿಂದ ಬಂಧಿಸಲ್ಪಟ್ಟಿರುತ್ತವೆ.

ಈ ತಾವರೆ ಗಿಡದ ಗೆಡ್ಡೆಯೇ ಕಂದವಾಗಿಯೂ, ಗೆಡ್ಡೆಯೊಳಗಿನಿಂದ ಮೇಲಕ್ಕೆ ಹೊರಟಿರುವ ನಾಳವೇ ಸುಷುಮ್ನಾನಾಡಿಯ ತತ್ವವಾಗಿಯೂ, ಈ ನಾಳದೊಳಗಿರುವ ರಂಧ್ರವೇ ಬ್ರಹ್ಮರಂಧ್ರದ್ವಾರದ ತತ್ವವಾಗಿಯೂ ಇರುವುವು. ಈ ಬ್ರಹ್ಮರಂಧ್ರನಾಡಿಯು ಗೆಡ್ಡೆಯೊಳಗೆ ಕೆಳಗಿನ ಭಾಗದಿಂದಲೂ ಪ್ರಾರಂಭವಾಗುತ್ತದೆ. ಕಂದದ ತತ್ವವಾದ ಮೈನಾಕಪರ್ವತಕ್ಕೆ ಸುವರ್ಣನಾಭವೆಂದು ಹೆಸರು ಬರಲು ಕಾರಣವೇನೆಂದರೆ — ಈ ಗೆಡ್ಡೆಯ ಮಧ್ಯಪ್ರದೇಶದಲ್ಲಿ ಕಾಂತಿಯುಕ್ತವಾದ ಸುಷುಮ್ನಾನಾಡಿಯು ಇರುವುದರಿಂದ ಇದಕ್ಕೆ ಸುವರ್ಣನಾಭವೆಂದು ಹೆಸರು ಬಂದಿರುವುದು. ಸೀತಾಸ್ವಯಂವರದಲ್ಲಿ ಪಂಥವಾಗಿಟ್ಟಿದ್ದ ಸುನಾಭವೆಂಬ ಶಿವಧನುಸ್ಸಿನ ತತ್ವವೂ ಸುಷುಮ್ನೆಗೆ ಹೋಲಿಸಲ್ಪಟ್ಟಿರುವುದಷ್ಟೆ! ಸುನಾಭವೆಂದರೂ ಸುವರ್ಣನಾಭವೆಂದರೂ ಒಂದೇ ಅರ್ಥ. ಆದುದರಿಂದ ಸುವರ್ಣನಾಭವೆಂಬ ಮೈನಾಕಪರ್ವತವೆಂದರೆ ಮಧ್ಯದಲ್ಲಿ ಕಾಂತಿಯುಕ್ತವಾದ ಸುಷುಮ್ನಾನಾಡಿಯು ಇರುವ ಕಂದವೆಂಬ ತತ್ವಾರ್ಥವಾಗಿರುವುದು. ಇದಕ್ಕೆ,

ಕಂದಮಧ್ಯಸ್ಥಿತಾ ನಾಡೀ ಸುಷುಮ್ನೇತಿ ಪ್ರಕೀರ್ತಿತಾ |

ಎಂದು ದರ್ಶನೋಪನಿಷತ್ತಿನ ಆಧಾರವೂ ಇರುವುದು. ಈ ಸುಷುಮ್ನಾನಾಡಿಯ ವಿಚಾರವು ಮುಂದಿನ ಪ್ರಕರಣಗಳಲ್ಲಿಯೂ ಬರುತ್ತದೆ.

ತಾವರೇಗೆಡ್ಡೆಯು ಹೇಗೆ ನೀರಿನಲ್ಲಿರುತ್ತದೋ ಹಾಗೆ ಮೈನಾಕಪರ್ವತವು ಸಮುದ್ರದಲ್ಲಿ ಇರುತ್ತದೆ. ಮೇಲೆ ತಿಳಿಸಿರುವ "ಊರ್ಧ್ವಂ ಮೇಢ್ರಾ ದಧೋನಾಭೇಃ" ಎಂಬ ಶ್ರುತಿವಾಕ್ಯದ ಸೂಚನೆಯಂತೆ ನಮ್ಮಲ್ಲಿ ಕಂದವು ಮೂತ್ರಕೋಶಸ್ವರೂಪವಾದ ಜಲಕೋಶದಲ್ಲಿರುವುದು. ಸಮುದ್ರವು ಅನೇಕಾನೇಕ ನದಿಗಳ ಪ್ರವಾಹಗಳನ್ನು ಸೇರಿಸಿಕೊಂಡು ಜಲನಿಧಿಯಾಗಿರುವುದು. ನದೀಪ್ರವಾಹಗಳ ತತ್ವವೇ ನಮ್ಮಲ್ಲಿರುವ ನಾಡಿಗಳು. ಈ ನಾಡಿಗಳಿಗೆ ನಿಧಿಯಾಗಿ, ಸಮುದಾಯವೆಂದರೆ ಗುಂಪಿಗೆ ಸಮುದ್ರವೆಂದು ಹೆಸರು. ಅಸಂಖ್ಯಾತವಾಗಿರುವ ನಾಡಿಗಳು ಸೇರುವ ಸ್ಥಳವಾದುದರಿಂದ ಅತ್ಯಂತ ಬಲವಾಗಿ ಹೊಂದಿಕೊಂಡು ಸಮುದ್ರದಂತೆ ಇರುತ್ತದೆ. ಸಮುದ್ರವು ಯಾವ ರೀತಿಯಲ್ಲಿ ಲಂಕಾದ್ವೀಪವನ್ನು ಆವರಿಸಿಕೊಂಡಿರುವುದೋ ಅದರಂತೆ ನಮ್ಮಲ್ಲಿರುವ ಭೂತತ್ವವಾದ ಮೂಲಾಧಾರಚಕ್ರವನ್ನು ಈ ನಾಡೀ ಸಮುದಾಯಗಳು ತಾವರೇಗಿಡದ ಚಿತ್ರಪಟದಲ್ಲಿ ಬೇರುಗಳನ್ನು ತೋರಿಸಿರುವಂತೆ ಆವರಿಸಿ ಮುಚ್ಚಿಕೊಂಡಿರುತ್ತವೆ. ಈ ರೀತಿ ತೆಂಗಿನ ಗಿಡದ ಬೇರುಗಳಂತೆ ಆವರಿಸಿಕೊಂಡಿರುವ ನಾಡೀ ಸಮುದಾಯದೊಳಕ್ಕೆ ಶ್ವಾಸವು ನುಗ್ಗಿ ಮೂಲಾಧಾರಚಕ್ರಪ್ರದೇಶಕ್ಕೆ ಹೋಗುತ್ತಿರುವ ತತ್ವವೇ ಹನುಮಂತನು ಸಮುದ್ರದ ಮೇಲೆ ಹಾರಿ ಲಂಕಾದ್ವೀಪಕ್ಕೆ ಹೋಗುತ್ತಿರುವ ತತ್ವವಾಗಿರುತ್ತದೆ. ಸಮುದ್ರದ ವಿಚಾರವು ಸೇತುಬಂಧನದಲ್ಲಿಯೂ ಬರುವುದರಿಂದ ಇಲ್ಲಿ ಬರೆದಿರುವುದನ್ನು ಅಲ್ಲಿಗೆ ಅನ್ವಯ ಮಾಡಿಕೊಂಡಲ್ಲಿ ಸಮುದ್ರದ ವಿಚಾರವು ಇನ್ನೂ ವಿವರವಾಗಿ ಗೊತ್ತಾಗುವುದು.

ಅಸಂಖ್ಯಾತವಾದ ನಾಡಿಗಳು ಅಧಿಷ್ಠಾನವಾಗಿದ್ದರೂ ಕಂದದ ಕೆಳಭಾಗದಲ್ಲಿ ಮೂಲಾಧಾರಚಕ್ರಕ್ಕೆ ಸೇರಿದ ಹಾಗೆ ಇರುವ ಶಕ್ತಿಯಿಂದ ಕಂದಕ್ಕೆ ಪ್ರಾಶಸ್ತ್ಯ ಬಂದಿರುತ್ತದೆ. ಈ ಶಕ್ತಿಯೇ ಪರಾಶಕ್ತಿಯು. ಈ ಶಕ್ತಿಯು ಕುಂಡಲಾಕಾರವಾಗಿರುವ ಸರ್ಪದಂತೆ ಇರುತ್ತದೆ. ಈ ಪರಾಶಕ್ತಿಯ ವಿಚಾರವು ಮುಂದಿನ ಪ್ರಕರಣದಲ್ಲಿ ಬರುವುದು. ಈ ಕಂದದ ಕೆಳಭಾಗವೆಂದರೆ ಮೂಲಾಧಾರಚಕ್ರದಿಂದ ಹೊರಡುವ ಸುಷುಮ್ನೆಯೊಳಗಿರುವ ಬ್ರಹ್ಮರಂಧ್ರದ ಬಾಗಿಲ ಸ್ಥಳಕ್ಕೆ ಸರಿಯಾಗಿ ಕುಂಡಲಿನೀಶಕ್ತಿಯು ಸರ್ಪಾಕಾರವಾಗಿ ತಾವರೇ ಗಿಡದ ಚಿತ್ರಪಟದಲ್ಲಿ ತೋರಿಸಿರುವಂತೆ ತನ್ನ ತಲೆಯನ್ನು ಇಟ್ಟುಕೊಂಡು ಮಲಗಿ ನಿದ್ರಿಸುತ್ತಾ ಇರುತ್ತದೆ. ಕಂದದ ತತ್ವದಲ್ಲಿರುವ ಮೈನಾಕಪರ್ವತವೂ ಈ ಪರಾಶಕ್ತಿಯೂ ಗಿರಿರಾಜನ ಮಕ್ಕಳು. ಮೈನಾಕನೆಂದರೆ—"ಮೇನಕಾಯಾಃ

ಅಪತ್ಯಂ ಪುಮಾನ್ ಮೈನಾಕಃ" ಮೇನಕೆಯ ಪುತ್ರನು. ಈ ಪರಾಶಕ್ತಿಯು ಗಿರಿರಾಜನ ಮಗಳಾಗಿರುವ ತತ್ವದ ವಿಚಾರವು ಮುಂದಿನ ಪ್ರಕರಣದಲ್ಲಿ ವಿವರಿಸಲ್ಪಟ್ಟಿರುವುದು. ಈ ಕುಂಡಲಿನೀಶಕ್ತಿಯು ತಾವರೇಗಿಡದ ಚಿತ್ರಪಠದಲ್ಲಿ ತೋರಿಸಿರುವಂತೆ ಗೆಡ್ಡೆಯ ಕೆಳಭಾಗದಲ್ಲಿ ಬ್ರಹ್ಮರಂಧ್ರದ ಬಾಗಿಲಿಗೆ ಸರಿಯಾಗಿ ತನ್ನ ಹೆಡೆಯನ್ನು ಇಟ್ಟುಕೊಂಡು ಮಲಗಿರುತ್ತದೆ. ಇದೇ ತಾತ್ಪರ್ಯಕ್ಕೆ ಯೋಗಕುಂಡಲಿನ್ಯುಪನಿಷತ್ ಪ್ರಥಮಾಧ್ಯಾಯದಲ್ಲಿ,

ಶಕ್ತಿಃ ಕುಂಡಲಿನೀ ನಾಮ ಬಿಸತಂತುನಿಭಾ ಶುಭಾ |
ಮೂಲಕಂದಂ ಫಣಾಗ್ರೇಣ ದೃಷ್ಟ್ವಾ ಕಮಲಕಂದವತ್ |
ಮುಖೇನ ಪುಚ್ಛಂ ಸಂಗೃಹ್ಯ ಬ್ರಹ್ಮರಂಧ್ರ ಸಮನ್ವಿತಾ |

ತಾ|| ತಾವರೇದಂಟಿನ ಒಳಗಿನ ಸೂಕ್ಷ್ಮತಂತುವಿಗೆ ಸಮಾನವಾಗಿಯೂ, ಮಂಗಳ ಕರವಾಗಿಯೂ, ಇರುವ ಕುಂಡಲಿನೀಶಕ್ತಿಯು, ತಾವರೆಯ ಕಂದದೋಪಾದಿಯಲ್ಲಿರುವ ನಮ್ಮ ದೇಹದ ಕಂದದ ಮೂಲಭಾಗವನ್ನು ಮುಖದಿಂದ ಹಿಡಿದುಕೊಂಡು ಬ್ರಹ್ಮರಂಧ್ರ ದ್ವಾರದಲ್ಲಿ ಅಡ್ಡಲಾಗಿರುವುದು, ಎಂದು ಹೇಳಿದೆ.

ಆದುದರಿಂದ ಕುಂಡಲಿನೀಶಕ್ತಿಯಾದ ಪರಾಶಕ್ತಿಯೂ ಕಂದದ ಸ್ವರೂಪವಾದ ಮೈನಾಕಪರ್ವತವೂ, ಗಿರಿರಾಜನ ಮಕ್ಕಳಾಗಿರುತ್ತಾರೆ. ಈ ಕಂದವನ್ನು ಶಕ್ತಿಚಲನೆಯ ರೇಚಕಪೂರಕಪ್ರಾಣಾಯಾಮದಿಂದ ಚೆನ್ನಾಗಿ ಅಳ್ಳಾಡಿಸುವ ತತ್ವವೇ ಹನುಮಂತನು ಮೈನಾಕಪರ್ವತವನ್ನು ಅಪ್ಪಳಿಸಿದುದಾಗಿದೆ. ಅಂದರೆ ಮೂಲಾಧಾರಚಕ್ರಪ್ರದೇಶದೊಳಕ್ಕೆ ಉಸಿರನ್ನು ನುಗ್ಗಿಸಲು ಕಂದವು ಅಡ್ಡಲಾಗಿ ಸಿಕ್ಕುವುದರಿಂದ ಉಸಿರನ್ನು ಕೆಳಕ್ಕೆ ಅದುಮಿ ಕೊಂಡು ಹೋಗಿ ಘಟಿತಕ್ರಿಯೆಯನ್ನು ಮಾಡುವುದರಿಂದ ಗ್ರಂಥಿಸ್ವರೂಪದಲ್ಲಿರುವ ಕಂದವು ಅಳ್ಳಾಡಿ ಶಿಥಿಲವಾಗುವುದೇ ಹನುಮಂತನು ಮೈನಾಕಪರ್ವತವನ್ನು ಅಪ್ಪಳಿಸಿದು ದಾಗಿದೆ. ಅಂದರೆ ಉಸಿರಿನ ವೇಗವು ಕಂದವನ್ನು ಚಲಿಸುವಂತೆ ಮಾಡುವುದು. ಹೀಗೆ ಉಸಿರಿನ ವೇಗವು ಕಂದವನ್ನು ಅಪ್ಪಳಿಸಿದಲ್ಲಿ ನೀರಿನ ಬದಿಯಲ್ಲಿದ್ದ ತಾವರೇಗೆಡ್ಡೆಯು ಸ್ವಲ್ಪ ಮೇಲಕ್ಕೇಳುವಂತೆ ಕಂದವು ಅಳ್ಳಾಡಿ ಸಡಲುತ್ತದೆ. ಹೀಗೆ ಕಂದವು ಅಳ್ಳಾಡಿ ಸಡಲುವುದರಿಂದ ಕಂದದ ಕೆಳಭಾಗದಲ್ಲಿ ಮಲಗಿರುವ ಕುಂಡಲಿನೀಶಕ್ತಿಯನ್ನು ಎಬ್ಬಿಸಲು ಅನುಕೂಲವಾಗುವುದು. ಈ ವಿಚಾರಗಳನ್ನೆಲ್ಲ ಮುಂದಿನ ಪ್ರಕರಣದಲ್ಲಿ ಸುರಸೆಯ ಕಥಾ ಸಂದರ್ಭದಲ್ಲಿ ವಿವರವಾಗಿ ಹೇಳಿರುವುದರಿಂದ ಈ ಎರಡು ಪ್ರಕರಣಗಳನ್ನೂ ಹೊಂದಿಸಿ ಕೊಂಡು ಅನ್ವಯಮಾಡಿಕೊಳ್ಳಬೇಕು.

ಕಂದವನ್ನು ಶಕ್ತಿಚಲನಪ್ರಾಣಾಯಾಮದಿಂದ ಅಳ್ಳಾಡಿಸಬೇಕೆಂದು ಮೇಲೆ ಬರೆ ದಿರುವುದಷ್ಟೆ! ಈ ಶಕ್ತಿಚಲನಪ್ರಾಣಾಯಾಮವನ್ನು ಸಿದ್ಧಾಸನ ಪದ್ಮಾಸನಗಳೆರಡರಲ್ಲಿ

ಯಾವುದಾದರೂ ಒಂದು ಆಸನದಲ್ಲಿ ಕುಳಿತುಕೊಂಡು ಮಾಡಬೇಕು. ಉಳಿದ ಆಸನಗಳಲ್ಲಿ ಆಗುವುದಿಲ್ಲ. ಸಿದ್ಧಾಸನವು ಯಾರಿಗೆ ಸಿದ್ಧಿಸಿರುತ್ತದೋ ಅವರು ಸಿದ್ಧಾಸನದಲ್ಲಿ ಮಾಡಬಹುದು. ಉಳಿದವರು ಪದ್ಮಾಸನದಲ್ಲಿ ಕೆಲವು ದಿನ ಈ ಪ್ರಾಣಾಯಾಮವನ್ನು ಮಾಡಿ, ಅನಂತರ ಬೇಕಾದರೆ ಸಿದ್ಧಾಸನದಲ್ಲಿ ಮಾಡಬಹುದು. ಎರಡು ಆಸನಗಳಲ್ಲಿ ಮಾಡಿದರೂ, ಕೈಗಳನ್ನು ಮುಂದಕ್ಕೆ ಚಾಚಿ, ಮಂಡಿಗಳನ್ನು ಬಿಗಿಬರುವಂತೆ ಹಿಡಿದುಕೊಂಡು, ಎದೆಯು ಮುಂದಕ್ಕೆ ಬರುವಂತೆಯೂ, ಗುದವು ಮೇಲಕ್ಕೆ ಆಕುಂಚನವಾಗುವಂತೆಯೂ, ಕುಳಿತು ಈ ಪ್ರಾಣಾಯಾಮದ ರೇಚಕಪೂರಕ ಮತ್ತು ಕುಂಭಕಗಳನ್ನು ಮಾಡಬೇಕು. ಸಿದ್ಧಾಸನ ಪದ್ಮಾಸನಗಳೆರಡರಲ್ಲಿಯೂ ಈ ಪ್ರಾಣಾಯಾಮವನ್ನು ಮಾಡಬಹುದೆಂಬುದಕ್ಕೆ ಮುಂದಿನ ಪ್ರಕರಣದಲ್ಲಿ ಬರುವ ಶ್ರುತಿವಾಕ್ಯಗಳನ್ನೂ ಹನುಮಂತನು ಲಂಕಾದಹನಮಾಡಿದ ಪ್ರಕರಣದಲ್ಲಿ ಬರೆದಿರುವ ಶ್ರುತಿವಾಕ್ಯಗಳನ್ನೂ ಅನ್ವಯ ಮಾಡಿಕೊಳ್ಳಬೇಕು. ಈ ಪ್ರಕರಣದ ತತ್ವವಾದ ಕಂದವನ್ನು ಅಳ್ಳಾಡಿಸುವ ತತ್ವಕ್ಕೆ ಯೋಗಕುಂಡಲಿನ್ಯುಪನಿಷತ್ ಮುಂತಾದ ಶ್ರುತಿಗಳ ಆಧಾರವನ್ನು ಅನುಸರಿಸಿರುವಂತೆ ಶ್ರೀಸ್ವಾತ್ಮಾರಾಮಯೋಗಿಗಳು ಯೋಗಪ್ರದೀಪಿಕೆ, ಶಕ್ತಿಚಲನೆಯ ವಿವರಣದಲ್ಲಿ,

> ಸತಿ ವಜ್ರಾಸನೇ ಪಾದೌ ಕರಾಭ್ಯಾಂ ಧಾರಯೇದ್ದೃಢಮ್ ।
> ಗುಲ್ಫದೇಶ ಸಮೀಪೇಚ ಕನ್ದಂ ತತ್ರ ಪ್ರಪೀಡಯೇತ್ ॥

ತಾ|| ವಜ್ರಾಸನದಲ್ಲಿ ಕುಳಿತುಕೊಂಡು ಕೈಗಳನ್ನು ಚಾಚಿ ಬಿಗಿಬರುವಂತೆ ಮಂಡಿಯನ್ನು ಹಿಡಿದುಕೊಂಡು ಶಕ್ತಿಚಲನಪ್ರಾಣಾಯಾಮದಿಂದ ಕಂದವನ್ನು ಪೀಡನೆಮಾಡಬೇಕು ಎಂದು ಹೇಳಿರುತ್ತಾರೆ.

ಈ ಮೇಲಿನ ತತ್ವಾರ್ಥವೇ ಹನುಮಂತನು ಮೈನಾಕಪರ್ವತವನ್ನು ಅಪ್ಪಳಿಸಿದುದು.

## ೨ನೆಯ ಪ್ರಕರಣ.

**ಹನುಮಂತನು ಸುರಸಾದೇವಿಯ ಅನುಗ್ರಹಕ್ಕೆ ಪಾತ್ರನಾದುದು.**

**ಶಕ್ತಿಚಲನಪ್ರಾಣಾಯಾಮದಿಂದ ಕುಂಡಲಿನೀ ಉತ್ಥಾಪನೆ ಅಥವಾ ಬ್ರಹ್ಮರಂಧ್ರದ ಬಾಗಿಲನ್ನು ತೆಗೆಸುವ ವಿಚಾರ.**

**ರಾ||** ಹನುಮಂತನು ಮೈನಾಕಪರ್ವತವನ್ನು ಅಪ್ಪಳಿಸಿ ಮುಂದಕ್ಕೆ ಹಾರಿಬರುತ್ತಿರುವಾಗ ಸುರಸೆಯೆಂಬ ನಾಗಮಾತೆಯು ದೇವತೆಗಳಿಂದ ಪ್ರೇರಿಸಲ್ಪಟ್ಟು ಹನುಮಂತನನ್ನು ಪರೀಕ್ಷಿಸಲು ಘೋರವೇಷವನ್ನು ತಾಳಿ, ಹನುಮಂತನನ್ನು ಭಕ್ಷಿಸಬೇಕೆಂದು

ಬಂದಳು. ಹನುಮಂತನು ಸಂತೋಷದಿಂದ ಕೈಜೋಡಿಸಿಕೊಂಡು ನಾನು ಶ್ರೀರಾಮ ಚಂದ್ರನ ಕಾರ್ಯಕ್ಕೆ ಬಂದಿರುತ್ತೇನೆಂದು ಪ್ರಾರ್ಥಿಸಿಕೊಂಡನು. ಅದಕ್ಕೆ ಸುರಸೆಯು ನನ್ನನ್ನು ಮೀರಿ ಹೋಗಕೂಡದು. ಪೂರ್ವದಲ್ಲಿ ಬ್ರಹ್ಮನು ಈ ವರವನ್ನು ನನಗೆ ಕೊಟ್ಟಿರುವ ನೆಂದು ಹೇಳಿ ಹನುಮಂತನನ್ನು ನುಂಗಲು ತನ್ನ ಬಾಯನ್ನು ದೊಡ್ಡದಾಗಿ ಬೆಳೆಸಿದಳು. ಇದನ್ನು ಆಂಜನೇಯನು ನೋಡಿ ತಾನೂ ತನ್ನ ದೇಹವನ್ನು ಹೆಚ್ಚಾಗಿ ಬೆಳೆಸಲು ಪ್ರಾರಂಭಮಾಡಿದನು. ಸುರಸೆಯು ಮತ್ತಷ್ಟು ಅಧಿಕವಾಗಿ ಬೆಳೆಸಿದಳು. ಹನುಮಂತನು ಅದಕ್ಕಿಂತ ಅಧಿಕವಾಗಿ ತನ್ನ ದೇಹವನ್ನು ಬೆಳೆಸಿದನು. ಸುರಸೆಯ ಬಾಯಿ ಅತ್ಯಧಿಕವಾಗಿ ಬೆಳೆಯಲು ಧೀಮಂತನಾದ ಹನುಮಂತನು ನೋಡಿ, ಸೂಕ್ಷ್ಮರೂಪದಿಂದ ಸುರಸೆಯ ಬಾಯೊಳಗೆ ನುಗ್ಗಿ ಥಟ್ಟನೆ ಹೊರಕ್ಕೆ ಬರಲು ಸರಿಯಾದ ಸಮಯವೆಂದು ಯೋಚಿಸಿ ತನ್ನ ಮೈಯನ್ನು ಅತಿಸೂಕ್ಷ್ಮವಾಗಿ ಮಾಡಿಕೊಂಡು ಸುರಸೆಯ ಬಾಯೊಳಗೆ ನುಗ್ಗಿ ರೆಪ್ಪೆ ಹಾರುವಷ್ಟರಲ್ಲಿ ವೇಗದಿಂದ ಹೊರಗೆ ಬಂದು ಆಕೆಯನ್ನು ಕುರಿತು ಹೇಳಿದುದೇನೆಂದರೆ— "ಎಲೌ ದಕ್ಷಪುತ್ರೀ! ನಾನು ನಿನ್ನ ಬಾಯಲ್ಲಿ ನುಗ್ಗಿ ಬಂದೆನಷ್ಟೆ! ನಿನಗೆ ನಮಸ್ಕಾರವು, ನನ್ನನ್ನು ಬಿಡು" ಎಂದನು. ಈರೀತಿಯಾಗಿ ಕೇಳಿಕೊಳ್ಳುವ ಆಂಜನೇಯನನ್ನು ನೋಡಿ ಸುರಸೆಯು ಸಂತುಷ್ಟಳಾಗಿ ತನ್ನ ನಿಜರೂಪವನ್ನು ತೋರಿಸುತ್ತಾ, ಅಯ್ಯಾ ವಾನರೋತ್ತಮಾ, ಇನ್ನು ನೀನು ಸುಖವಾಗಿ ನಿನ್ನ ಕಾರ್ಯಸಿದ್ಧಿಗೆ ಹೋಗಿಬಾ. ಸೀತೆಯನ್ನು ತಂದು ಶ್ರೀರಾಮನೊಡನೆ ಸೇರಿಸೆಂದಳು.

**ತತ್ವ||** ಪ್ರಥಮದಲ್ಲಿ ಕಂದವನ್ನು ಅಭ್ಯಾಸಿಸಲು ಶಕ್ತಿಚಲನ ರೇಚಕಪೂರಕ ಪ್ರಾಣಾಯಾಮವನ್ನು ಮಾಡಬೇಕೆಂದು ಹೇಳಿತಷ್ಟೆ! ಈಗ ಅದೇ ಶಕ್ತಿಚಲನ ಕುಂಭಕಪ್ರಾಣಾಯಾಮವನ್ನು ಮಾಡುವ ತತ್ವವಾಗಿರುತ್ತದೆ. ಈ ಶಕ್ತಿಚಲನ ರೇಚಕಪೂರಕ ಪ್ರಾಣಾಯಾಮವನ್ನು ಪ್ರಥಮದಲ್ಲ ಅಭ್ಯಾಸಮಾಡದೆ ಕುಂಭಕಪ್ರಾಣಾಯಾಮದಿಂದಲೇ ಪ್ರಾರಂಭ ಮಾಡಬಹುದು. ಆದರೂ ದಾರಿಯು ಸುಲಲಿತವಾದ ಮತ್ತು ಅಪಾಯವಿಲ್ಲದುದಾಗಿರ ಬೇಕೆಂಬ ತಾತ್ಪರ್ಯದಿಂದ ಶಕ್ತಿಚಲನ ರೇಚಕಪೂರಕಪ್ರಾಣಾಯಾಮವನ್ನು ಪ್ರಥಮದಲ್ಲಿ ಕೊಂಚಕಾಲ ಮಾಡಲೆಂದು ತಿಳಿಸಿರುತ್ತದೆ. ಅಲ್ಲದೆ ರಾಮಾಯಣಕಥೆಗೂ ಹೋಲಿಕೆ ಯಾಗಿರುವುದರಿಂದ ಪ್ರಥಮದಲ್ಲಿ ಶಕ್ತಿಚಲನೆಯ ರೇಚಕಪೂರಕವನ್ನು ಮಾಡುವುದು ಉತ್ತಮ. ಇದರಲ್ಲಿ ಕುಂಭಕಪ್ರಾಣಾಯಾಮವೆಂದರೆ—ಗಂಟಲಿನಿಂದ ಉಸಿರನ್ನು ತೆಗೆದು ಕೊಂಡು, ಸೂರ್ಯನಾಡಿಯ ಮೂಲಕ ಹೋಗಿ, ಮೂಲಾಧಾರಚಕ್ರದಲ್ಲಿ ಕುಂಭಕಮಾಡಿ, ಅವರವರ ಶಕ್ತ್ಯಾನುಸಾರ ನಿಲ್ಲಿಸಿಕೊಂಡಿದ್ದು, ಅನಂತರ ಚಂದ್ರನಾಡಿಯ ಪ್ರದೇಶವಾದ ಎಡಭಾಗದಿಂದ ಕಂಠಕ್ಕೆ ತರುವುದು. ಮೂಲಾಧಾರದಲ್ಲಿ ಕುಂಭಕಮಾಡುವಾಗ ಉಸಿ ರನ್ನು ಚೆನ್ನಾಗಿ ತಳ್ಳುವುದೆಂದರೆ—ಘಟಿತಕ್ರಿಯೆ ಮಾಡಿಕೊಂಡು ಕುಂಭಕಮಾಡುವುದು.

ಬಲಗಡೆ ಭಾಗವಾದ ಸೂರ್ಯನಾಡಿಯ ಮೂಲಕ ತೆಗೆದುಕೊಂಡು ಹೋದ ಉಸಿರನ್ನು ಮೂಲಾಧಾರದಲ್ಲಿ ಕುಂಭಕವಮಾಡಿ ಎಡಭಾಗವಾದ ಚಂದ್ರನಾಡಿಯ ಮೂಲಕ ಕಂಠಕ್ಕೆ ತಂದನಂತರ ಪುನಃ ಚಂದ್ರನಾಡಿಯ ಮೂಲಕ ಮೂಲಾಧಾರಕ್ಕೆ ಉಸಿರನ್ನು ತೆಗೆದು ಕೊಂಡು ಹೋಗಿ ಕುಂಭಕವಮಾಡುವುದು. ಕುಂಭಕವಮಾಡಿದನಂತರ ಜಾಲಂಧರಬಂಧ ವೆಂಬುದನ್ನು ಮಾಡಿದರೆ ಉತ್ತಮ. ಇದೇ ಶಕ್ತಿಚಲನ ಪ್ರಾಣಾಯಾಮವಾಗಿರುತ್ತದೆ. ಮಾಡುವ ವಿಧಾನವನ್ನು ಇಲ್ಲಿ ಬರೆದಿದ್ದರೂ ಖಂಡಿತವಾಗಿ ಗುರುಮುಖೇನ ತಿಳಿದುಕೊಂಡೇ ಅನುಷ್ಠಾನಮಾಡಬೇಕು.

ತಾವರೆ ಗಿಡದ ಚಿತ್ರಪಠದಲ್ಲಿ ತೋರಿಸಿರುವಂತೆ ಕಂದದ ಕೆಳಭಾಗದಲ್ಲಿ ಮೂಲಾ ಧಾರಚಕ್ರಕ್ಕೂ ಸೇರಿದಹಾಗೆ ಇರುವ ಸುಷುಮ್ನಾನಾಡಿಯ ಒಳಗಿರುವ ಬ್ರಹ್ಮರಂಧ್ರದ ಭಾಗಿಲನ್ನು ಮುಚ್ಚಿಕೊಂಡು ಕುಂಡಲಿನೀಶಕ್ತಿಯು ಇರುವುದೆಂದು ಹಿಂದಿನ ಪ್ರಕರಣದಲ್ಲಿ ತಿಳಿಸಿತಷ್ಟೆ! ಈ ಕುಂಡಲಿನೀಶಕ್ತಿಯೇ ಹನುಮಂತನನ್ನು ಎದುರಿಸಿದ ಸುರಸೆಯಾಗಿರು ತ್ತಾಳೆ. ಈ ಕುಂಡಲಿನೀಶಕ್ತಿಗೆ ಸುರಸೆ, ಶಕ್ತಿ, ಅರುಂಧತಿ, ಈಶ್ವರಿ ಮುಂತಾದ ಅನೇಕ ನಾಮಗಳಿವೆಯೆಂದು ಶ್ರುತ್ಯಾಧಾರವಿದೆ. ಇಂತಹ ಕುಂಡಲಿನೀಶಕ್ತಿಯನ್ನು ಹನುಮಂತನು ಸಂಧಿಸಿದನೆಂದರೆ—ಕುಂಡಲಿನೀಶಕ್ತಿಯು ತನಗೆ ಅಧಿಷ್ಠಾನವಾದ ಕಂದವು ಯಾವಾಗ ಚಲಿಸಿತೋ ಆಗ ನಿದ್ರೆಯಿಂದ ಎಚ್ಚರವಾಯಿತು. ಸರ್ಪಾಕಾರವಾಗಿರುವ ಈ ಕುಂಡಲಿನೀ ಶಕ್ತಿಯು ಹೆಡೆಯ ಮೇಲಿರುವ ಮೈನಾಕಪರ್ವತದ ತತ್ವದಲ್ಲಿರುವ ಕಂದವನ್ನು ಹನುಮಂ ತನ ತತ್ವದಲ್ಲಿರುವ ಶ್ವಾಸೋಚ್ಛ್ವಾಸವು ಯಾವಾಗ ಚೆನ್ನಾಗಿ ಅಳ್ಳಾಡಿಸಿತೋ ಆಗ ಕುಂಡ ಲಿನೀಶಕ್ತಿಗೆ ಎಚ್ಚರವಾಯಿತು. ಅಂದರೆ ಕುಂಡಲಿನೀಶಕ್ತಿಯು ತನಗೆ ಆಶ್ರಯವಾಗಿದ್ದ ಕಂದವು ಚಲಿಸಲು ತನಗೂ ಚಲನೆ ಬಂದತಾದುದರಿಂದ ಬ್ರಹ್ಮರಂಧ್ರದ ಬಾಗಿಲನ್ನು ಮುಚ್ಚಿಕೊಂಡಿರುವುದನ್ನು ಬಿಟ್ಟಿತೆಂಬ ತತ್ವಾರ್ಥವಾಗಿರುತ್ತದೆ. ಈ ರೀತಿಯಾಗಿ ಸುಖ ವಾಗಿ ಮಲಗಿಕೊಂಡಿದ್ದ ಕುಂಡಲಿನೀಶಕ್ತಿಯು ತನ್ನ ನಿದ್ರೆಗೆ ಭಂಗಬರಲು ಕೋಪದಿಂದ ರೌದ್ರವನ್ನು ತಾಳಿದುದೇ ಸುರಸೆಯು ಘೋರರೂಪವನ್ನು ತಾಳಿ ಹನುಮಂತನನ್ನು ನುಂಗಲು ಬಂದ ತಾತ್ಪರ್ಯವಾಗಿರುತ್ತದೆ.

ಸುರಸೆಯ ತತ್ವದಲ್ಲಿರುವ ಕುಂಡಲಿನೀಶಕ್ತಿ ಯಾರು? ಮೋಕ್ಷದಬಾಗಿಲಾದ ಬ್ರಹ್ಮ ರಂಧ್ರದ ಬಾಗಿಲನ್ನು ಮುಚ್ಚಿಕೊಂಡು ಮಲಗಿರಲು ಕಾರಣವೇನು? ಅಲ್ಲದೆ ನಿದ್ರೆಯಿಂದ ಎಬ್ಬಿಸಿದರೆ ಕೋಪ ಬರಲು ಕಾರಣವೇನು? ಎಂಬ ಪ್ರಶ್ನೆಗಳಿಗೆ ಉತ್ತರವನ್ನು ತಕ್ಕಮಟ್ಟಿಗೆ ತಿಳಿದುಕೊಳ್ಳೋಣ.

ಯೋಗಶಿಖೋಪನಿಷತ್ ನಾಲ್ಕನೆ ಅಧ್ಯಾಯದಲ್ಲಿಯೂ ಇನ್ನೂ ಅನೇಕ ಉಪ ನಿಷತ್ತುಗಳಲ್ಲಿಯೂ "ಕುಂಡಲಿನೀ ನಾಮ ಪರಾಶಕ್ತಿಃ ಪ್ರತಿಷ್ಠಿತಾ" ಎಂಬನಾಗಿ

ಹೇಳಿರುವಂತೆ ಈ ಶಕ್ತಿಯೇ ಆದಿಶಕ್ತಿ ಅಥವಾ ಚಿಚ್ಛಕ್ತಿಯಾಗಿರುತ್ತಾಳೆ. ಸೃಷ್ಟಿಮಾಡಿದ ಪ್ರಪಂಚವು ವೃದ್ಧಿಹೊಂದಿ ಸ್ಥಿತಿಯಲ್ಲಿರುವುದಕ್ಕೋಸ್ಕರ ಈ ಚಿಚ್ಛಕ್ತಿ ಅಥವಾ ಮೂಲ ಪ್ರಕೃತಿಯು ದಕ್ಷಬ್ರಹ್ಮನ ಉದರದಲ್ಲಿ ಅವತರಿಸಿ, ದಕ್ಷಪುತ್ರಿಯೆನಿಸಿಕೊಂಡಳು. ದಕ್ಷನೆಂದರೆ—ಪ್ರಪಂಚಾಕಾರವಾಗಿ ವೃದ್ಧಿಹೊಂದುವವನೆಂದು ಶಿವಸಹಸ್ರನಾಮ ಭಾಷ್ಯದಲ್ಲಿ ಹೇಳಿರುವುದು. ಪ್ರಪಂಚಾಕಾರವಾಗಿ ವೃದ್ಧಿಹೊಂದುವವನ ಪುತ್ರಿಯಾದುದರಿಂದ, ದಕ್ಷಪುತ್ರಿಯೆನಿಸಿಕೊಂಡಳು. ಹನುಮಂತನು ಕೂಡ "ಎಲೌ ದಕ್ಷಪುತ್ರೀ" ಎಂದು ಸಂಬೋಧನೆ ಮಾಡಿರುತ್ತಾನೆ. ಪ್ರಪಂಚವ್ಯಾಪಾರ ನಡೆಯಬೇಕಾದರೆ ಪರಮಾತ್ಮನ ಕಡೆಯ ದಾರಿಯನ್ನು ಮುಚ್ಚಿರಬೇಕಷ್ಟೆ! ಹೀಗೆ ಪರಮಾತ್ಮನ ಕಡೆಗೆ ಪ್ರಾಣಿಗಳು ಹೋಗದೆ ಪ್ರಪಂಚಾಕಾರವಾಗಿಯೇ ವ್ಯಾಪಾರಮಾಡುತ್ತಿರುವುದಕ್ಕೋಸ್ಕರ ಬ್ರಹ್ಮರಂಧ್ರದ ಬಾಗಿಲನ್ನು ಮುಚ್ಚಿಕೊಂಡು ಮಲಗಿರುತ್ತಾಳೆ. ಸುರಸೆಯು ಪರಾಶಕ್ತಿಸ್ವರೂಪಳಾದುದರಿಂದ ಹನುಮಂತನು ನಮ್ರಭಾವದಿಂದ ಕೈಜೋಡಿಸಿಕೊಂಡು ಪ್ರಾರ್ಥಿಸಿಕೊಂಡಿರುವನು. ಸುರಸೆಯು ತತ್ವಸ್ವರೂಪದಲ್ಲಿರುವ ಕುಂಡಲಿನೀಶಕ್ತಿಯು ಬ್ರಹ್ಮರಂಧ್ರದ ಬಾಗಿಲನ್ನು ಮುಚ್ಚಿಕೊಂಡು ಮಲಗಿರುವ ತತ್ವಕ್ಕೆ ದರ್ಶನೋಪನಿಷತ್ತಿನ ಚತುರ್ಥಖಂಡದಲ್ಲಿ,

ಪೃಷ್ಠಮಧ್ಯಸ್ಥಿತೇನಾಸ್ಥ್ನಾ ವೀಣಾದಂಡೇನ ಸುವ್ರತ ।
ಸಹಮಸ್ತಕಪರ್ಯಂತಂ ಸುಷುಮ್ನಾ ಸಂಪ್ರತಿಷ್ಠಿತಾ ॥
ನಾಭಿಕಂದಾದಧಃಸ್ಥಾನಂ ಕುಂಡಲ್ಯಾದ್ವ್ಯಂಗುಲಂ ಮುನೇ ।
ಅಷ್ಟಪ್ರಕೃತಿರೂಪಾ ಸಾ ಕುಂಡಲೀ ಮುನಿಸತ್ತಮ ॥

ಪರಿತಃ ಕಂದಪಾರ್ಶ್ವೇಷು ನಿರುಧ್ಯೈವ ಸದಾಸ್ಥಿತಾ ।
ಸ್ವಮುಖೇನ ಸಮಾವೇಷ್ಟ್ಯ ಬ್ರಹ್ಮರಂಧ್ರಮುಖಂ ಮುನೇ ॥

ತಾ॥ ಎಲೈ ಪಂಡಿತನೆ; ಪೃಷ್ಠಮಧ್ಯೆ ವೀಣಾದಂಡದಂತೆ ಇರುವ ಮೂಳೆಯು ಶಿರಸ್ಸಿನವರೆಗೂ ಹೋಗಿರುವುದು. ಅದರಲ್ಲಿ ಸುಷುಮ್ನಾ ಎಂಬ ನಾಡಿಯು ಶಕ್ತಿರೂಪದಲ್ಲಿ ಟೊಳ್ಳಾಗಿರುವುದು. ಅಷ್ಟಪ್ರಕೃತಿರೂಪಳಾದ ಆ ಕುಂಡಲಿನಿಯು ನಾಭಿಕಮಲದ ಗೆಡ್ಡೆಯ ಕೆಳಗಡೆ ಎರಡು ಅಂಗುಲದ ಪರ್ಯಾಯಾಕಾರವಾಗಿ ಸುತ್ತಿಕೊಂಡು ತನ್ನ ಮುಖದಿಂದಲೇ ಬ್ರಹ್ಮರಂಧ್ರವನ್ನು ಮುಚ್ಚಿಕೊಂಡು ಏನೂ ಕೆಲಸವಿಲ್ಲದವಳಾಗಿ ಯಾವಾಗಲೂ ಇರುತ್ತಾಳೆ ಎಂದು ಹೇಳಿರುವುದು.

ಈ ಮೇಲಿನ ಶ್ರುತಿಪ್ರಮಾಣದಲ್ಲಿ ಹಿಂದಿನ ಪ್ರಕರಣದ ತತ್ವವಾದ ಕಂದ ಮತ್ತು ಈ ಪ್ರಕರಣದ ವಿಚಾರವಾದ ಕುಂಡಲಿನೀಶಕ್ತಿಯು ವಿಚಾರಗಳೆರಡೂ ಬಂದಿರುತ್ತವೆ. ಅಲ್ಲದೆ ತಾವರೇಗಿಡದ ಚಿತ್ರಪಟಕ್ಕೂ ಹೋಲಿಕೆಯಾಗಿದೆ. ಈ ಮೇಲಿನ ಶ್ರುತಿಯು ಆಧಾರ

ವಲ್ಲದೆ ತ್ರಿಶಿಖಿಬ್ರಾಹ್ಮಣೋಪನಿಷತ್, ಯೋಗಕುಂಡಲ್ಯುಪನಿಷತ್, ದರ್ಶನೋಪನಿಷತ್ತು ಗಳಲ್ಲಿ,

ಅಷ್ಟಪ್ರಕೃತಿರೂಪಾ ಸಾ ಸಾಷ್ಟಧಾಕುಂಡಲೀಕೃತಾ |
ಯಥಾವದ್ವಾಯು ಸಾರಂಚ ಜ್ವಲನಾದಿಚ ನಿತ್ಯಶಃ ||
ಪರಿತಃ ಕಂದಪಾರ್ಶ್ವೇತು ನಿರುಧ್ಯೈವ ಸದಾಸ್ಥಿತಾ |
ಸ್ವಮುಖೇನ ಸಮಾವೇಷ್ಟ್ಯ ಬ್ರಹ್ಮರಂಧ್ರ ಮುಖಂ ತಥಾ |
ಯೋಗಕಾಲೇನ ಮರುತಾ ಸಾಗ್ನಿನಾ ಬೋಧಿತಾ ಸತೀ |
ಸ್ಫುರಿತಾ ಹೃದಯಾಕಾಶೆ ನಾಗರೂಪಾ ಮಹೋಜ್ವಲಾ |

ತಾ|| ಅಷ್ಟಪ್ರಕೃತಿರೂಪವಾಗಿಯೂ ಅಷ್ಟವಿಧವಾಗಿಯೂ ಇರುವ ಶಕ್ತಿಯು ಕುಂಡಲಾಕಾರವಾಗಿದೆ. ಆ ಶಕ್ತಿಯು ಕಂದಪಾರ್ಶ್ವದಲ್ಲಿ ಸುತ್ತಲೂ ವಾಯುವಿನ ಸಾರ ವನ್ನೂ, ಅಗ್ನಿಯ ಜ್ವಾಲೆಯನ್ನೂ ತಡೆದುಕೊಂಡು ಬ್ರಹ್ಮರಂಧ್ರದ ದ್ವಾರವನ್ನು ತನ್ನ ಮುಖದಿಂದ ಮುಚ್ಚಿಕೊಂಡು ಯಾವಾಗಲೂ ಇರುತ್ತದೆ. ಯೋಗಕಾಲದಲ್ಲಿ ಆ ಶಕ್ತಿಯು ಅಗ್ನಿಯಿಂದಲೂ ವಾಯುವಿನಿಂದಲೂ ಎಬ್ಬಿಸಲ್ಪಟ್ಟು ಹೃದಯಾಕಾಶವಾದ ಸುಷುಮ್ನೆ ಯಲ್ಲಿ ಸ್ಫುರಣೆಗೊಂಡು ಪ್ರಕಾಶವಾನವಾದ ನಾಗರೂಪಳಾಗಿರುತ್ತಾಳೆ, ಎಂಬದಾಗಿ ಹೇಳಿರುವುದು.

ಇಂತಹ ಪರಾಶಕ್ತಿಸ್ವರೂಪಳಾದ ಸುರಸೆಯೊಡನೆ ಹನುಮಂತನು ಹೋರಾಡಿ ಅವಳ ಬಾಯಲ್ಲಿ ಹೊಕ್ಕು ಬಂದನೆಂದರೆ—ಕುಂಡಲಾಕಾರವಾಗಿ ಹಾವಿನೋಪಾದಿಯಲ್ಲಿ ಮಲಗಿರುವ ಈ ಶಕ್ತಿಯನ್ನು ಎಬ್ಬಿಸಿದನು. ಈರೀತಿ ಚಿಚ್ಛಕ್ತಿಯೇ ಕುಂಡಲಿನೀಶಕ್ತಿ ಯಾಗಿ ಬ್ರಹ್ಮರಂಧ್ರದ ಬಾಗಿಲನ್ನು ಮುಚ್ಚಿಕೊಂಡಿರುವುದೆಂದು ಶ್ರೀಶಂಕರಭಗವತ್ಪಾದ ರವರು ಸೌಂದರ್ಯಲಹರಿ ೧೦ನೆಯ ಶ್ಲೋಕದಲ್ಲಿ,

ಸುಧಾಧಾರಾಸಾರೈ ಶ್ಚರಣಯುಗಳಾಂತರ್ವಿಗಳಿತೈಃ |
ಪ್ರಪಂಚಂ ಸಿಂಚಂತೀ ಪುನರಪಿ ರಸಾಮ್ನಾಯಮಹಸಃ ||
ಅವಾಪ್ಯಂ ಸ್ವಾಂಭೂಮಿಂ ಭುಜಗನಿಭ ಮಧ್ಯುಷ್ಟವಲಯಂ |
ಸ್ವಮಾತ್ಮಾನಂ ಕೃತ್ವಾ ಸ್ವಪಿಷಿಕುಲಕುಂಡೇ ಕುಹರಿಣಿ ||

ತಾ|| ಎಲೌ ಜನನಿಯೆ! ನೀನು ಸಹಸ್ರಾರಕಮಲದಲ್ಲಿರುವ ನಿನ್ನ ಚರಣಯುಗಳ ದಿಂದ ಜನಿಸಿದ ಅಮೃತವೃಷ್ಟಿಪ್ರವಾಹದಿಂದ ದೇಹದಲ್ಲಿರುವ ಎಪ್ಪತ್ತೆರಡುಸಾವಿರ ನಾಡಿ ಗಳನ್ನೂ ತೋಯಿಸಿ ಅಮೃತರಸದ ಅತಿಶಯವಾದ ಕಾಂತಿಯುಳ್ಳ ಚಂದ್ರನ ಮೂಲಕವಾಗಿ

ಪುನಃ ಮೂಲಾಧಾರಚಕ್ರವನ್ನು ಸೇರಿ ಸರ್ಪದಂತೆ ಕುಂಡಲಾಕಾರವಾಗಿ ತೆಕ್ಕೆಹಾಕಿಕೊಂಡು ನಿನ್ನ ಶಕ್ತಿರೂಪವನ್ನು ತಾಳಿ, ತಾವರೇದಂಟಿನೊಳಗಿರುವ ರಂಧ್ರದಂತೆ ಸೂಕ್ಷ್ಮವಾದ ರಂಧ್ರವುಳ್ಳ, ಪೃಥ್ವೀತತ್ವವು ಲಯವಾಗುವ, ಸುಷುಮ್ನಾನಾಡಿಯು ಮೂಲದಲ್ಲಿರುವ, ಆಧಾರಚಕ್ರದಲ್ಲಿ ನಿದ್ದೆಗೈಯ್ಯುವೆ. ಎಂದು ಹೇಳಿರುತ್ತಾರೆ.

ಆದುದರಿಂದ ದಕ್ಷಪುತ್ರಿ, ಶಕ್ತಿ, ಕುಂಡಲಿನೀ ಸುರಸೆ ಮುಂತಾದ ನಾಮಗಳು ಒಂದೇ ಶಕ್ತಿಗೆ ಅನ್ವಯವಾಗುತ್ತವೆ. ಸುರಸಾ ಎಂಬ ಪದಕ್ಕೂ " ಶೋಭನೋ ರಸೋ ಯಸ್ಯಾ ಸ್ಸಾ ಸುರಸಾ " ಯಾರು ಅಮೃತಸ್ವರೂಪಳೋ ಅವಳು ಸುರಸಾ. ಅಂದರೆ ಚಂದ್ರಕಳಾಸ್ವರೂಪಳು ಅಥವಾ ಚಿಚ್ಛಕ್ತಿ. ಈ ಶಕ್ತಿಯು ಬ್ರಹ್ಮರಂಧ್ರಸ್ಥಾನವನ್ನು ಮುಚ್ಚಿಕೊಂಡು ಜೀವರುಗಳನ್ನು ಪ್ರಪಂಚಮಾರ್ಗದಲ್ಲಿಯೇ ನಡೆಸುತ್ತಿದೆ. ಪ್ರಪಂಚಮಾರ್ಗದಿಂದ ತನ್ನನ್ನು ವಿಮುಖಳನ್ನಾಗಿ ಮಾಡಲು ಹನುಮಂತನಿಗೆ ಶಕ್ತಿ ಇರುವುದೋ ಇಲ್ಲವೋ ಎಂಬುದನ್ನು ಪರೀಕ್ಷಿಸಲು ತಾನು ಘೋರರೂಪಿಣಿಯಾದಳು. ಹನುಮಂತನ ಕಾರ್ಯವಾದ ಶಕ್ತಿಚಲನ ಪ್ರಾಣಾಯಾಮದ ವೇಗವು ಅಧಿಕವಾಗುತ್ತಾ ಬಂದುದರಿಂದ ಮೋಕ್ಷಮಾರ್ಗಕ್ಕೆ ಸರಿಯಾದ ಅಧಿಕಾರಿಲಕ್ಷಣಗಳಿವೆಯೆಂದು ಯೋಚಿಸಿ ತಾನು ತನ್ನ ವಲ್ಲಭನಾದ ಸದಾಶಿವನನ್ನು ಸೇರುವುದಕ್ಕೆ ಹೊರಡಲು ಸಿದ್ಧಳಾದಳು. ಅಂದರೆ, ತಾನು ಮಾಡಿದ್ದ ಸೃಷ್ಟಿಸ್ಥಿತಿಯ ತತ್ವವನ್ನು ಉಪಸಂಹಾರಮಾಡಿಕೊಂಡು ಸಹಸ್ರಾರಕಮಲದಲ್ಲಿರುವ ತನ್ನ ವಲ್ಲಭನಾದ ಪರಮಾತ್ಮಸ್ವರೂಪನಾದ ಸದಾಶಿವನಲ್ಲೈಕ್ಯವಾಗಲು ಇಚ್ಛೆಪಟ್ಟ ತತ್ವವೇ ಸುರಸೆಯು ಹನುಮಂತನನ್ನು ಪರೀಕ್ಷಿಸಿ ಅನುಗ್ರಹಮಾಡಿದುದಾಗಿರುತ್ತದೆ. ಈ ಪರಾಶಕ್ತಿಯು ಸೃಷ್ಟಿಯನ್ನು ಉಪಸಂಹಾರಮಾಡಿಕೊಳ್ಳಲು ಪ್ರಾರಂಭವಾಗುವ ತತ್ವವೇ ಅಥವಾ ಪ್ರತಿಬಿಂಬಚೈತನ್ಯನಿಗೆ ಇರುವ ಅವಿದ್ಯೋಪಾಧಿಯು ನಿವೃತ್ತಿಯಾಗಿ ಈಶ್ವರತ್ವವು ಪ್ರಾರಂಭವಾಗುವ ತತ್ವವೇ ಸುರಸೆಯು ಹನುಮಂತನೊಡನೆ, ಇನ್ನು ಸೀತಾದೇವಿಯನ್ನು ಶ್ರೀರಾಮನೊಡನೆ ಸೇರಿಸಲು ಪ್ರಯತ್ನಮಾಡೆಂದು ಹೇಳಿದುದಾಗಿರುತ್ತದೆ.

ಅಂದರೆ ಸೃಷ್ಟಿ ಸ್ಥಿತಿ ಮತ್ತು ಮೋಕ್ಷಕ್ರಮಗಳುಂಟಷ್ಟೆ! ಇವುಗಳಲ್ಲಿ ಈ ಸುರಸೆಯ ತತ್ವದಾರಭ್ಯ ಮೋಕ್ಷಕ್ರಮವು ಪ್ರಾರಂಭವಾಗುವುದು. ಸುರಸೆ ಅಥವಾ ಕುಂಡಲಿನೀ ಶಕ್ತಿಯು ಶಂಭುವಿನಶಕ್ತಿಯಾಗಿ ಶಾಂಭವಿಯಾಗಿರುವಳು. ಆತ್ಮಸುಖವನ್ನು ಕೊಡಿಸುವವಳಾದುದರಿಂದ ಈ ಪ್ರಕರಣದ ತತ್ವದಾರಭ್ಯ ಮೋಕ್ಷಕ್ರಮವು ಪ್ರಾರಂಭವಾಗಿರುವುದು. ಈ ವಿಚಾರಗಳ ತತ್ವವನ್ನು ದೃಢೀಕರಿಸಲು ಈ ಪ್ರಕರಣವಲ್ಲಿ ಮುಂದೆ ಶ್ರುತಿವಾಕ್ಯಗಳನ್ನೂ ಶ್ರೀಶಂಕರಭಗವತ್ಪಾದರವರ ವಾಕ್ಯಗಳನ್ನೂ ಉದಹರಿಸಿರುವುದು. ಈ ಕುಂಡಲಿನೀಶಕ್ತಿಯನ್ನು ಎಬ್ಬಿಸಿದನಂತರದಲ್ಲಿಯೇ ಬುದ್ಧಿಮನಸ್ಸುಗಳ ವೃತ್ತಿಗಳು ಒಂದು ಕಡೆ ನಿಲ್ಲುವುವೇ ಹೊರತು ಮತ್ತಾವ ವಿಧದಿಂದಲೂ ಸಾಧ್ಯವಿಲ್ಲ. ಆದುದರಿಂದ ಮೋಕ್ಷದ

ಬಾಗಿಲಾದ ಬ್ರಹ್ಮರಂಧ್ರದ ಬಾಗಿಲನ್ನು ಪ್ರಾಣಾಯಾಮದಿಂದ ತೆಗೆಯಿಸಬೇಕು. ಮೇಲೆ ಶ್ರೀಶಂಕರಭಗವತ್ಪಾದರವರು ಹೇಳಿರುವ ಮತ್ತು ಶ್ರುತಿವಾಕ್ಯಗಳ ಆಧಾರವೇ ಸಾಕಾಗಿದ್ದರೂ, ಯೋಗಕುಂಡಲ್ಯುಪನಿಷತ್ ಯೋಗಚೂಡಾಮಣ್ಯುಪನಿಷತ್, ಧ್ಯಾನಬಿಂದೂಪನಿಷತ್ತುಗಳಲ್ಲಿ,

ಯೇನದ್ವಾರೇಣ ಗಂತವ್ಯಂ ಬ್ರಹ್ಮದ್ವಾರ ಮನಾಮಯಂ |
ಮುಖೇನಾಚ್ಛಾದ್ಯ ತದ್ದ್ವಾರಂ ಪ್ರಸುಪ್ತಾ ಪರಮೇಶ್ವರೀ ||
ಉದ್ಘಾಟಯೇ ತ್ಕವಾಟಂತು ಯಥಾ ಕುಂಚಿಕಯಾ ಹಠಾತ್ |
ಕುಂಡಲಿನ್ಯಾ ತಥಾ ಯೋಗೀ ಮೋಕ್ಷದ್ವಾರಂ ವಿಭೇದಯೇತ್ ||

ತಾ|| ಕುಂಡಲಿನೀಶಕ್ತಿಯು ಬ್ರಹ್ಮರಂಧ್ರದ್ವಾರವನ್ನು ತನ್ನ ಮುಖದಿಂದ ಯಾವಾಗಲೂ ಮುಚ್ಚಿಕೊಂಡು ಮಲಗಿರುತ್ತಾಳೆ. ಅಗಣಿಯನ್ನು ತೆಗೆದು ಮನೆಯ ಬಾಗಿಲನ್ನು ಹೇಗೆ ತೆರೆಯುತ್ತೇವೆಯೋ ಹಾಗೆ ಯೋಗಿಯು ಮೋಕ್ಷದ ಬಾಗಿಲನ್ನು ತೆಗೆಯಿಸುವುದಕ್ಕೋಸ್ಕರ ಕುಂಡಲಿನಿಯನ್ನು ಉತ್ಥಾಪನೆಮಾಡಬೇಕು. ಎಂದು ಹೇಳಿರುವುದು.

ಈ ಮೇಲಿನ ಶ್ರುತಿಪ್ರಮಾಣವನ್ನು ಅನುಸರಿಸಿ ಹನುಮಂತನು ಸುರಸೆಯ ಬಾಯೊಳಗೆ ಸೂಕ್ಷ್ಮರೂಪದಿಂದ ನುಗ್ಗಿ ಹೊರಕ್ಕೆ ಬಂದನೆಂದರೆ—ಶಕ್ತಿಚಲನಪ್ರಾಣಾಯಾಮದಲ್ಲಿ ಮೂಲಾಧಾರದಲ್ಲಿ ಕುಂಭಕಮಾಡಲು ಉಸಿರನ್ನು ಕೆಳಕ್ಕೆ ತೆಗೆದುಕೊಂಡು ಹೋಗಿ ಘಟಿತ ಅಥವಾ ಅಮುಕುವ ಕ್ರಿಯೆಯನ್ನು ಮಾಡುವುದರಿಂದಲೂ, ಮೂಲಾಧಾರದಲ್ಲಿ ಕುಂಭಕಮಾಡುವುದರಿಂದಲೂ ಉಸಿರಿನ ವೇಗದಿಂದ ಬ್ರಹ್ಮರಂಧ್ರದ ಬಾಗಿಲನ್ನು ಮುಚ್ಚಿಕೊಂಡಿರುವ ಕುಂಡಲಿನೀಶಕ್ತಿಯು ಬಿಡುತ್ತಾ ಬರುವಳು. ಈ ತತ್ವಾರ್ಥವೇ ಹನುಮಂತನು ಸುರಸೆಯ ಬಾಯೊಳಗೆ ನುಗ್ಗಿ ಈಚೆಗೆ ಬಂದುದಾಗಿರುತ್ತದೆ. ಅಗಣಿಯನ್ನು ತೆಗೆದು ಮನೆಯ ಬಾಗಿಲನ್ನು ಹೇಗೆ ತೆರೆಯುತ್ತೇವೆಯೋ ಹಾಗೆಯೇ ಮೋಕ್ಷದ ಬಾಗಿಲಾದ ಬ್ರಹ್ಮರಂಧ್ರದ ಬಾಗಿಲನ್ನು ಪ್ರಾಣಾಯಾಮದಿಂದ ತೆಗೆಯಿಸುವುದಾಗಿರುತ್ತದೆ.

ಮಲಗಿದ್ದ ಈ ಶಕ್ತಿಯನ್ನು ಹನುಮಂತನು ಎಬ್ಬಿಸಿ ಬ್ರಹ್ಮರಂಧ್ರದ ಬಾಗಿಲಲ್ಲಿದ್ದ ಅಡಚಣೆಯನ್ನು ನಿವಾರಣೆ ಮಾಡಿದನಷ್ಟೆ! ಇನ್ನು ಮುಂದಿನ ಸೋಪಾನಗಳಾದ ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿಗಳನ್ನು ಅಭ್ಯಾಸಮಾಡಿದರೆ ಈ ಶಕ್ತಿಯು ಬ್ರಹ್ಮರಂಧ್ರದ ನಾಡಿಯಲ್ಲಿ ಮೇಲಕ್ಕೆ ಹೊರಟು ಸಹಸ್ರಾರಕಮಲವನ್ನು ಸೇರುವುದು. ಈ ಶಕ್ತಿಯು ಸಹಸ್ರಾರಕಮಲವನ್ನು ಸೇರುವುದೇ ಮೋಕ್ಷ ಅಥವಾ ಆತ್ಮಸಾಕ್ಷಾತ್ಕಾರವೆನಿಸಿಕೊಳ್ಳುವುದು. ಈ ಶಕ್ತಿಯು ದೇಹದಲ್ಲಿರುವ ಸಕಲ ತತ್ವಗಳನ್ನೂ ತನ್ನೊಡನೆ ಸೇರಿಸಿ

ಕೊಂಡು, ಪರಮಾತ್ಮನಲ್ಲಿ ಲೀನವಾಗುವುದು. ಸ್ವಾಮಿವಿವೇಕಾನಂದರವರು ತಮ್ಮ ರಾಜಯೋಗದಲ್ಲಿ ಕುಂಡಲಿನೀಶಕ್ತಿಯು ಬ್ರಹ್ಮರಂಧ್ರದ ನಾಡಿಯಲ್ಲಿ ಮೇಲಕ್ಕೆ ಹೊರಟು ಸಹಸ್ರಾರಕಮಲವನ್ನು ಸೇರಿರುವ ಚಿತ್ರಪಠವನ್ನು ಕೊಟ್ಟಿರುವರು. ಆ ವಿಧವಾದ ಚಿತ್ರ ಪಠವನ್ನೇ ಇಲ್ಲಿಯೂ ಕೊಟ್ಟಿದೆ. ಮಲಗಿದ್ದ ಈ ಶಕ್ತಿಯನ್ನು ಎಚ್ಚರಗೊಳಿಸಿ ಬ್ರಹ್ಮ ರಂಧ್ರದ ಬಾಗಿಲನ್ನು ಬಿಡಿಸಿದನಂತರ, ಧ್ಯಾನಾಭ್ಯಾಸವನ್ನು ಎಷ್ಟೆಷ್ಟು ಹೆಚ್ಚಿಸುತ್ತೇವೆಯೋ ಅಷ್ಟಷ್ಟು ಈ ಶಕ್ತಿಯೂ ಬ್ರಹ್ಮರಂಧ್ರದೊಳಗೆ ಮೇಲ್ಮುಖವಾಗಿ ಹೋಗುತ್ತದೆ. ಈ ಕುಂಡಲಿನೀಶಕ್ತಿಯನ್ನು ಯಾರು ಎಬ್ಬಿಸಿ ಶಿರಸ್ಸಿನಲ್ಲಿರುವ ಸಹಸ್ರಾರಕಮಲದವರೆಗೆ ಹೋಗುವಂತೆ ಸಮಾಧಿಯ ಅಭ್ಯಾಸವನ್ನು ಮಾಡುವರೋ ಅವರು ಮುಕ್ತರೆನ್ನುವುದಕ್ಕೆ ಶಾಂಡಿಲ್ಯೋಪನಿಷತ್ ಪ್ರಥಮಾಧ್ಯಾಯದಲ್ಲಿ,

ಸಾ ಶಕ್ತಿ ರ್ಯೇನ ಚಲಿತಾ ಸ್ಯಾತ್ಸತು ಮುಕ್ತೋ ಭವತಿ
ಸಾ ಕುಂಡಲಿನೀ ಕಂಠೋರ್ಧ್ವಭಾಗೆ ಸುಪ್ತಾಚೇ ದ್ಯೋ
ಗಿನಾಂ ಮುಕ್ತಯೇ ಭವತಿ ಬಂಧನಾಯಾಥೋ ಮೂಢಾನಾಂ |

ತಾ|| ಈ ಕುಂಡಲಿನೀಶಕ್ತಿಯನ್ನು ಯಾರು ಚಲನೆ ಮಾಡಿಸುತ್ತಾರೋ ಅವರು ಮುಕ್ತರಾಗುತ್ತಾರೆ. ಆ ಕುಂಡಲಿನೀಶಕ್ತಿಯು ಮನುಷ್ಯನ ಕಂಠದ ಮೇಲ್ಭಾಗಕ್ಕೆ ಪ್ರವೇಶಿಸಿ ಮಲಗಿದರೆ ಅಧಿಕಾರಿಗೆ ಮುಕ್ತಿಯಾಗುತ್ತದೆ. ಹೀಗೆ ಶಕ್ತಿಯನ್ನು ಎಬ್ಬಿಸಿ ಚಲನೆ ಮಾಡಿಸದೇ ಇದ್ದರೆ ಮೂಢರಾಗಿ ಬಂಧನದಲ್ಲಿರುತ್ತಾರೆ ಎಂಬದಾಗಿ ಹೇಳಿರುತ್ತದೆ.

ಈ ಶ್ರುತಿಪ್ರಮಾಣಕ್ಕೆ ಅನುಸಾರವಾಗಿ ಚಿತ್ರಪಠವನ್ನೂ ಕೊಟ್ಟಿದೆ. ಅಲ್ಲದೆ ಈ ಮೇಲಿನ ಶ್ರುತಿವಚನದಂತೆ ಈ ಕುಂಡಲಿನೀಶಕ್ತಿಯು ಮೂಲಾಧಾರಚಕ್ರದಿಂದ ಎದ್ದು ಷಟ್ಚಕ್ರಗಳನ್ನು ಭೇದಿಸಿಕೊಂಡು ಸಹಸ್ರಾರಕಮಲವನ್ನು ಸೇರಬೇಕೆಂಬ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ಕೂಡ ಸೌಂದರ್ಯಲಹರಿಯಲ್ಲಿ,

ಮಹೀಂ ಮೂಲಾಧಾರೇ ಕಮಪಿಮಣಿಪೂರೇ ಹುತವಹಂ |
ಸ್ಥಿತಂ ಸ್ವಾಧಿಷ್ಠಾನೇ ಹೃದಿಮರುತ ಮಾಕಾಶ ಮುಪರಿ ||
ಮನೋಪಿ ಭ್ರೂಮಧ್ಯೇ ಸಕಲಮಪಿ ಭಿತ್ವಾಕುಲಪಥಂ |
ಸಹಸ್ರಾರೇ ಪದ್ಮೇ ಸಹರಹಸಿ ಪತ್ಯಾ ವಿಹರಸೇ ||

ಮಾತೆಯೆ! ನೀನು ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ, ಆಜ್ಞಾಚಕ್ರಗಳೆಂಬ ಪೃಥ್ವಿ, ಅಪ್ಪು, ಅಗ್ನಿ, ವಾಯು ಆಕಾಶ ಮತ್ತು ಅಂತಃಕರಣ ತತ್ವಗಳನ್ನೆಲ್ಲಾ ಅತಿಕ್ರಮಿಸುವಂತೆ ಸುಷುಮ್ನೆಯ ಮಾರ್ಗವನ್ನು ಭೇದಿಸಿಕೊಂಡು


ಸಹಸ್ರಾರ.
ಆಜ್ಞಾಚಕ್ರ.
ವಿಶುದ್ಧಚಕ್ರ.
ಅನಾಹತಚಕ್ರ.
ಮಣಿಪೂರಚಕ್ರ.
ಸ್ವಾಧಿಷ್ಠಾನಚಕ್ರ.


ಮೂಲಾಧಾರಚಕ್ರ.
(ಲಿಂಗ).

ಸಹಸ್ರಾರಕಮಲದಲ್ಲಿ ನಿನ್ನ ವಲ್ಲಭನಾದ ಸದಾಶಿವನೊಂದಿಗೆ ಕ್ರೀಡಿಸುತ್ತಿರುವೆ. ಎಂದು ಹೇಳಿರುವರು.

ಕುಂಡಲಿನೀಶಕ್ತಿಯು ಮೂಲಾಧಾರದಿಂದ ಹೊರಟು ಹೃದಯಾಕಾಶವೆನಿಸುವ ಸಹಸ್ರಾರಕ್ಕೆ ಸೇರುವುದೇ ಮುಕ್ತಿಯೆನಿಸುವ ತತ್ವಕ್ಕೆ ಶ್ರುತ್ಯಾದಿ ಆಧಾರಗಳನ್ನೂ ಕೊಟ್ಟು ಮೇಲೆ ತಿಳಿಸಿರುತ್ತಷ್ಟೆ! ಅಂದರೆ ಕುಂಡಲಿನೀಶಕ್ತಿಯು ಆತ್ಮಸಾಕ್ಷಾತ್ಕಾರವಾದ ನಿರ್ವಿಕಲ್ಪ ಸಮಾಧಿಸ್ಥಿತಿಯಲ್ಲಿ ಶಿರಸ್ಸಿನಲ್ಲಿರುವ ಹೃದಯಾಕಾಶವೆನಿಸುವ ಸಹಸ್ರಾರಕಮಲವನ್ನು ಹೊಂದುವುದು. ಸಮಾಧಿಯಿಂದ ಬಹಿರ್ಮುಖವಾದಾಗ ಸಹಸ್ರಾರದಿಂದ ಪುನಃ ಇಳಿದು ಮೂಲಾಧಾರಕ್ಕೆ ಬರುವುದು. ಜೀವಂತರಾಗಿದ್ದಾಗ ಎಷ್ಟಾವರ್ತಿ ಸಮಾಧಿಸ್ಥಿತಿಯನ್ನು ಪಡೆದರೂ ಅಷ್ಟು ಸಲ ಸಹಸ್ರಾರವನ್ನು ಸೇರಿ ಪರಬ್ರಹ್ಮನಲ್ಲಿ ಲೀನವಾಗುವುದು. ದೇಹ ಪತನಕಾಲದಲ್ಲೆಂದರೆ ವಿದೇಹಮುಕ್ತಿಯಲ್ಲಿ ಸಹಸ್ರಾರಕಮಲದಿಂದ ಪುನಃ ಇಳಿಯದೇ ಪರಬ್ರಹ್ಮನಲ್ಲಿ ಲಯವೇ ಆಗುವುದು. ಅಂದರೆ ಸೀತಾದೇವಿಯ ಅಗ್ನಿಪ್ರವೇಶದ ತತ್ವವೇ ಕುಂಡಲಿನೀಶಕ್ತಿಯು ಸಹಸ್ರಾರದಲ್ಲಿ ಲೀನವಾಗುವುದಾಗಿರುವುದು. ಉತ್ತರಕಾಂಡದಲ್ಲಿ ಸೀತಾದೇವಿಯು ಭೂಪ್ರವೇಶಮಾಡಿದಾಗ ನಾಗಮಾತೆಯರು ಕರೆದೊಯ್ಯುವ ತತ್ವವೇ ವಿದೇಹಕೈವಲ್ಯದ ತತ್ವವಾಗಿರುವುದು. ಸೀತಾದೇವಿಯೂ ಕುಂಡಲಿನೀಶಕ್ತಿಯಾದ ಪರಾ ಶಕ್ತಿಯೂ ಪ್ರತ್ಯೇಕರಲ್ಲ. ಒಂದೇ ತತ್ವದವರು. ಸೃಷ್ಟಿ ಸ್ಥಿತಿಯ ಕಾರ್ಯಭೇದದಿಂದ ಪ್ರತ್ಯೇಕ ಹೆಸರು ಬಂದಿರುವುದು.

ಹೀಗೆ ಪರಾಶಕ್ತಿಯಾದ ಕುಂಡಲಿನೀಶಕ್ತಿಯು ನಿರ್ವಿಕಲ್ಪಸಮಾಧಿಕಾಲದಲ್ಲಿ ಹೃದಯಾ ಕಾಶವೆನಿಸುವ ಸಹಸ್ರಾರಕಮಲದಲ್ಲಿ ಲೀನವಾಗುವ ತತ್ವವನ್ನೂ, ಸಮಾಧಿಯಿಂದ ಬಹಿರ್ಮುಖವಾದ ಕಾಲದಲ್ಲಿ ಸಹಸ್ರಾರದಿಂದ ಪುನಃ ಇಳಿದು ಸ್ವಸ್ಥಾನವಾದ ಪೃಥ್ವೀತತ್ವ ವಾದ ಮೂಲಾಧಾರದ ಶಿಖರಭಾಗಕ್ಕೆ ಬರುವ ತತ್ವವನ್ನೂ ಈ ಕೆಳಗಿನ ಸಂಧ್ಯೋಪಾಸ ನೆಯ ಮಂತ್ರಗಳು ಒಳಗೊಂಡಿವೆ—

ಉತ್ತಿಷ್ಠ ದೇವಿ ಗಂತವ್ಯಂ ಪುನರಾಗಮನಾಯಚ |
ಪ್ರಸೀದ ದೇವಿ ತುಷ್ಟ್ಯರ್ಥಂ ಪ್ರವಿಶ್ಯ ಹೃದಯಂ ಮಮ ||

ತಾ|| ಹೇ ದೇವಿ, ನೀನು ಸಂತುಷ್ಟಳಾದುದರಿಂದ ನನ್ನ ಹೃದಯಾಕಾಶವನ್ನು ಹೊಕ್ಕು ಪ್ರಸನ್ನಳಾಗಿ ಪುನಃ ಅಲ್ಲೀದ ಬರುವವಳಾಗು.

ಉತ್ತಮೇ ಶಿಖರೇ ಜಾತೇ ಭೂಮ್ಯಾಂ ಪರ್ವತಮೂರ್ಧನಿ |
ಬ್ರಾಹ್ಮಣೇಭ್ಯೋ ಭ್ಯನುಜ್ಞಾತಾ ಗಚ್ಛ ದೇವಿ ಯಥಾ ಸುಖಮ್ ||

ತಾ|| ಭೂತತ್ವ (ಮೂಲಾಧಾರ) ದ ಅಗ್ರಭಾಗದಲ್ಲಿ ಉತ್ಪನ್ನಳಾದ ದೇವಿಯೇ, ನೀನು ಬ್ರಹ್ಮವಿತ್ತರಿಂದ ಅನುಜ್ಞೆಪಡೆದು ಸಂತೋಷದಿಂದ ಹೊರಡುವವಳಾಗು.

ಈ ಮೇಲಿನ ಶ್ರುತಿವಾಕ್ಯದ ತಾತ್ಪರ್ಯದಿಂದ ಕುಂಡಲಿನಿಯನ್ನು ಉತ್ಥಾಪನೆಮಾಡಿ ಬ್ರಹ್ಮರಂಧ್ರನಾಡಿಯ ಬಾಗಿಲನ್ನು ತೆಗೆಸುವಿಕೆಯು ... ಕರ್ಮಸ್ವರೂಪವೇ ಆಗಿರುವುದು. ಈ ಮೇಲಿನ ಶ್ರುತ್ಯಾಧಾರ ಮತ್ತು ಶ್ರೀಶಂಕರಭಗವತ್ಪಾದರವರ ವಾಕ್ಯಗಳ ತಾತ್ಪರ್ಯದಂತೆ ಹನುಮಂತನು, ಮಲಗಿದ್ದ ಕುಂಡಲಿನೀ ಶಕ್ತಿಯನ್ನು ಪ್ರಬೋಧೆಮಾಡಿರುತ್ತಾನೆ. ಯುದ್ಧಕಾಂಡದ ತತ್ವವಾದ ಸಮಾಧಿಯ ಅಭ್ಯಾಸದಿಂದ ಈ ಶಕ್ತಿಯು ಕುಂಡಲಿನಿ ಚಿತ್ರಪಠದಲ್ಲಿ ತೋರಿಸಿರುವಂತೆ ಸಹಸ್ರಾರಕಮಲವನ್ನು ಸೇರುವುದು. ಈ ರೀತಿ ಈ ಶಕ್ತಿಯು ಬ್ರಹ್ಮರಂಧ್ರದ ನಾಡಿಯೊಳಗೆ ಮೇಲಕ್ಕೆ ಹೋಗುವಾಗ ಇದು ಮೂರು ಮಹಿಮೆ ಗಳುಳ್ಳದ್ದೆಂದು ಹೇಳಿರುವ ಶ್ರುತಿವಾಕ್ಯವನ್ನು ಇಲ್ಲಿ ಬರೆದಿರುವುದು. ಈ ಯಜುರಾರಣ್ಯಕ ಶ್ರುತಿವಾಕ್ಯವನ್ನು ಶ್ರೀಶಂಕರಭಗವತ್ಪಾದರವರ ಸೌಂದರ್ಯಲಹರಿ ಭಾಷ್ಯದಲ್ಲಿ ಕುಂಡಲಿನೀ ಶಕ್ತಿಗೆ ಅನ್ವಯಮಾಡಿ ಬರೆದಿರುತ್ತದೆ,

ಯತ್ಕುಮಾರೀ ಮನ್ದ್ರಯತೇ ಯದ್ಯೋಷಿ ದ್ಯತ್ಪತಿವ್ರತಾ |
ಅರಿಷ್ಟಂ ಯತ್ಕಿಂಚ ಕ್ರಿಯತೆ ಅಗ್ನಿ ಸ್ತದನುವೇಧತಿ ||

ತಾ|| ಕುಂಡಲಿನೀಶಕ್ತಿಯು ಅವಸ್ಥಾತ್ರಯವುಳ್ಳದ್ದು. ಕೌಮಾರಾವಸ್ಥೆಯಲ್ಲಿ ಮೊದಲು ನಿದ್ರೆಯಿಂದ ಎಚ್ಚತ್ತು ಮಂದ್ರವಾದ ಓಂಕಾರಧ್ವನಿಯೊಡಗೂಡಿರುವುದು. ಯೋಷಿದವಸ್ಥೆಯಲ್ಲಿ ಓಂಕಾರನಾದದೊಡಗೂಡಿರುವುದು. ಪತಿವ್ರತಾವಸ್ಥೆಯಲ್ಲ ಕಳಾ ಸ್ವರೂಪವಾಗಿರುವುದು. ಅನಂತರ ಅಗ್ನಿನಾಮಕನಾದ ಆತ್ಮನು ಸಾಕ್ಷಾತ್ಕೃತನಾಗಿರುವಲ್ಲಿ ಯಾವ ಅರಿಷ್ಟ ತಾನೇ ಏನುಮಾಡೀತು?.

ಈ ಶ್ರುತಿಪ್ರಮಾಣವೊಂದೇ ಸೀತಾದೇವಿಯು ಅಗ್ನಿಪ್ರವೇಶಮಾಡಿದ ಕಥೆಯವರೆಗಿನ ತತ್ವಗಳನ್ನೆಲ್ಲಾ ಒಳಗೊಂಡಿದೆ. ಆದುದರಿಂದ ಹನುಮಂತನು ಸುರಸೆಯ ಬಾಯೊಳಗೆ ನುಗ್ಗಿ ಬಂದನೆಂದರೆ—ಶಕ್ತಿಚಲನಪ್ರಾಣಾಯಾಮದ ಕುಂಭಕವು ಮೂಲಾಧಾರದಲ್ಲಿ ಸ್ತಿಮಿತಕ್ಕೆ ಬರುತ್ತಿರುವ ತಾತ್ಪರ್ಯವಾಗಿರುವುದು. ಹೀಗೆ ಕುಂಭಕವು ಸ್ತಿಮಿತಕ್ಕೆ ಬಂದಲ್ಲಿ ಕುಂಡಲಿನೀಶಕ್ತಿಯು ನಿದ್ರೆಯಿಂದ ಎಚ್ಚರಗೊಂಡು, ಕೋಲಿನಿಂದ ಹೊಡೆಯಲ್ಪಟ್ಟ ಹಾವಿನಂತೆ ಮೇಲಕ್ಕೇಳಲು ಪ್ರಾರಂಭವಾಗುತ್ತದೆ. ಈ ಪ್ರಕರಣದ ಮುಖ್ಯ ತಾತ್ಪರ್ಯ ವೇನೆಂದರೆ—ಹನುಮಂತನ ತತ್ವದಲ್ಲಿರುವ ಶ್ವಾಸೋಚ್ಛ್ವಾಸವು ಪ್ರಾಣಾಯಾಮದ ಕ್ರಿಯೆ ಯಿಂದ ಮೋಕ್ಷದ ಬಾಗಿಲನ್ನು ತೆಗೆಯಿಸಿತೆಂಬ ತಾತ್ಪರ್ಯವಾಗಿರುವುದು.

ಸಂಪಾತಿಯಿಂದ ತಿಳಿಸಲ್ಪಟ್ಟ ತತ್ವವಾದ ಈ ಶಕ್ತಿಚಲನಪ್ರಾಣಾಯಾಮವೇ ಅಂತರ್ಭಸ್ತ್ರಿಕ ಎಂದು ಶ್ರುತಿಯಲ್ಲಿ ಹೇಳಿದೆ. ಅಂತರ್ಭಸ್ತ್ರಿಕ ಎಂದರೆ, ದೇಹದೊಳಗಡೆ ತಿದಿಯೊತ್ತುವ ವಿಧವಾದ ಪ್ರಾಣಾಯಾಮವೆಂದು ಹೆಸರು. ಕಂಠದಿಂದ ಕೆಳಕ್ಕೆ ಬಲಭಾಗ ಅನಂತರ ಎಡಭಾಗಗಳಲ್ಲಿ ಕೆಳಕ್ಕೆ ಮೂಲಾಧಾರಚಕ್ರದವರೆಗೆ ತಿದಿಯೊತ್ತಿದಂತೆ ಅಮುಕಿಕೊಂಡು ಹೋಗುವ ಕಾರ್ಯವಾದುದರಿಂದ ಇದಕ್ಕೆ ಅಂತರ್ಭಸ್ತ್ರಿಕ ಪ್ರಾಣಾಯಾಮವೆಂದು ಹೆಸರು. ಇದೇ ತಾತ್ಪರ್ಯಕ್ಕೆ ಯೋಗಶಿಖೋಪನಿಷತ್ ಪ್ರಥಮಾಧ್ಯಾಯದಲ್ಲಿ,

ವಜ್ರಾಸನ ಸ್ಥಿತೋ ಯೋಗೀ ಚಾಲಯಿತ್ವಾ ತು ಕುಣ್ಡಲೀಂ ।
ಕುರ್ಯಾದಂತರತೋಭಸ್ತ್ರೀಂ ಕುಣ್ಡಲೀ ಮಾಶುಬೋಧಯೇತ್ ॥

ತಾ॥ ಬ್ರಹ್ಮನಿಷ್ಠನು ವಜ್ರಾಸನದಲ್ಲಿ ಕುಳಿತು ಕುಂಡಲಿನಿಗೆ ಚಲನೆಯನ್ನುಂಟುಮಾಡಿಸಬೇಕು. ಹೇಗೆಂದರೆ, ಅಂತರ್ಭಸ್ತ್ರಿಕ ಪ್ರಾಣಾಯಾಮವನ್ನು ಮಾಡಿ ಕುಂಡಲಿನಿಯನ್ನು ಉತ್ಥಾಪನೆಮಾಡಬೇಕು. ಎಂದು ಹೇಳಿರುವುದು.

ಈ ಮೇಲಿನ ಶ್ರುತಿವಾಕ್ಯವನ್ನೇ ಶ್ರೀಸ್ವಾತ್ಮಾರಾಮಯೋಗಿಗಳು ಹಠಯೋಗಪ್ರದೀಪಿಕೆ ತೃತೀಯಾಧ್ಯಾಯದಲ್ಲಿ ಹೇಳಿರುವುದಲ್ಲದೆ, ಮೈನಾಕಪರ್ವತದ ತತ್ವವಾದ ಕಂದದ ವಿಚಾರವನ್ನೂ ಈ ಶಕ್ತಿಚಲನಪ್ರಾಣಾಯಾಮದ ವಿಚಾರವನ್ನೂ ಸೂಕ್ಷ್ಮವಾಗಿ ತಿಳಿಸಿರುತ್ತಾರೆ. ಈ ಶಕ್ತಿಚಲನಪ್ರಾಣಾಯಾಮದ ವಿಧಾನವನ್ನು ಯಾವ ರೀತಿಯಲ್ಲಿ ಹೇಳಿರುವರೆಂದರೆ—

ಅವಸ್ಥಿತಾಚೈವ ಫಣಾವತೀಸಾ ।
ಪ್ರಾತಶ್ಚ ಸಾಯಂ ಪ್ರಹರಾರ್ಧ ಮಾತ್ರಮ್ ॥
ಪ್ರಪೂರ್ಯ ಸೂರ್ಯಾತ್ಪರಿಧಾನ ಯುಕ್ತ್ಯಾ ।
ಪ್ರಗೃಹ್ಯ ನಿತ್ಯಂ ಪರಿಚಾಲನೀಯಾ ॥

ತಾ॥ ಮೂಲಾಧಾರದಲ್ಲಿ ಸರ್ಪರೂಪದಲ್ಲಿರುವ ಆ ಕುಂಡಲಿನಿಯನ್ನು ಸೂರ್ಯನಾಡಿಯಲ್ಲಿ ಪೂರಕಮಾಡಿ ಪ್ರದಕ್ಷಿಣೆಯಂತೆ ಸುತ್ತುವ ಪರಿಧಾನಯುಕ್ತಿಯಿಂದ ಗ್ರಹಿಸಿ ಪ್ರಾತಃ ಸಾಯಂಕಾಲಗಳಲ್ಲಿ ಎರಡು ಮುಹೂರ್ತಕಾಲ ಚಲನೆ ಮಾಡಿಸಬೇಕು.

ಇವರು ಸೂಕ್ಷ್ಮವಾಗಿ ಹೇಳಿರುವ ಪರಿಧಾನಯುಕ್ತಿಯಿಂದ ಗ್ರಹಿಸಿ ಸೂರ್ಯನಾಡಿಯಲ್ಲಿ ಪೂರಕಮಾಡುವ ತತ್ವವೇ ಕಂಠದಿಂದ ಸೂರ್ಯನಾಡಿಯ ಮೂಲಕ ಉಸಿರನ್ನು ಮೂಲಾಧಾರಕ್ಕೆ ತೆಗೆದುಕೊಂಡು ಹೋಗಿ ಮೂಲಾಧಾರದಲ್ಲಿ ಕುಂಭಕಮಾಡುವುದು.

ಆದುದರಿಂದ ಶಕ್ತಿಚಲನಪ್ರಾಣಾಯಾಮ ಮತ್ತು ಅಂತರ್ಭಸ್ತ್ರಿಕಗಳೆರಡೂ ಒಂದೇ ತಾತ್ಪರ್ಯವುಳ್ಳವುಗಳು. ಬಾಹ್ಯಭಸ್ತ್ರಿಕಪ್ರಾಣಾಯಾಮದ ವಿಚಾರವು ಕಿಷ್ಕಿಂಧಾಕಾಂಡ

ದಲ್ಲಿಯೇ ಬಂದಿರುತ್ತದೆ. ಮೇಲೆ ಸ್ವಾತ್ಮಾರಾಮಯೋಗಿಗಳು ಹೇಳಿರುವುದಕ್ಕೆ ಅನುಸಾರ ವಾಗಿ ಯೋಗಶಿಖೋಪನಿಷತ್ ಪ್ರಥಮಾಧ್ಯಾಯದಲ್ಲಿ "ನಿರುಧ್ಯ ಮಾರುತಂ ಗಾಢಂ ಶಕ್ತಿಚಾಲನಯುಕ್ತಿತಃ" ಎಂಬದಾಗಿ ಹೇಳಿರುತ್ತದೆ. ಆದುದರಿಂದ ಶಕ್ತಿಚಾಲನಯುಕ್ತಿ ಯೆಂಬುವುದೇ ಹಿಂದಿನ ಮೂರು ಪ್ರಕರಣಗಳಿಂದಲೂ ವಿವರಿಸಿಕೊಂಡು ಬಂದಿರುವ ಪ್ರಾಣಾಯಾಮದ ತತ್ವವಾಗಿರುವುದು. ಈ ಕುಂಡಲಿನೀಶಕ್ತಿಯನ್ನು ಚಲನೆಮಾಡಿಸು ವುದೇ ಪ್ರಥಮಕರ್ತವ್ಯವೆಂದು ಸ್ವಾಮಿ ವಿವೇಕಾನಂದರವರು ಕೂಡ ರಾಜಯೋಗದಲ್ಲಿ ಹೇಳಿರುತ್ತಾರೆ. ಕುಂಡಲಿನಿಯನ್ನು ಎಬ್ಬಿಸಿ ಭ್ರೂಮಧ್ಯದವರೆಗೆ ಹೋಗುವಂತೆ ಮಾಡುವ ವರೆಗೂ ಶಕ್ತಿಚಲನೆಯೆಂಬದಾಗಿ ಯೋಗಕುಂಡಲ್ಯುಪನಿಷತ್ತಿನಲ್ಲಿ,

ಕುಂಡಲ್ಯೇವ ಭವೇಚ್ಛಕ್ತಿ ಸ್ತಾಂತು ಸಂಚಾರಯೇದ್ಬುಧಃ ।
ಸ್ವಸ್ಥಾನಾ ದಾಭ್ರುವೋರ್ಮಧ್ಯಂ ಶಕ್ತಿಚಾಲನ ಮುಚ್ಯತೇ ॥
ತತ್ಸಾಧನೇ ದ್ವಯಂ ಮುಖ್ಯಂ ಸರಸ್ವತ್ಯಾಸ್ತು ಚಾಲನಂ ।
ಪ್ರಾಣರೋಧ ಮಥಾಭ್ಯಾಸಾ ದೃಜ್ವೀ ಕುಂಡಲಿನೀ ಭವೇತ್ ॥

ತಾ॥ ವಿದ್ವಾಂಸನಾಗಿರತಕ್ಕವನು ಕುಂಡಲಿನಿಯನ್ನು ಚಲನೆಮಾಡಿಸಬೇಕು. ಮೂಲಾಧಾರವೆಂಬ ಸ್ವಸ್ಥಾನದಿಂದ ಈ ಶಕ್ತಿಯನ್ನು ಭ್ರೂಮಧ್ಯಪ್ರದೇಶಕ್ಕೆ ಸೇರಿಸುವು ದನ್ನೇ ಶಕ್ತಿಚಲನೆಯೆನ್ನುತ್ತಾರೆ. ಇದನ್ನು ಸಾಧಿಸಲು ಎರಡು ಸಾಧನೆಗಳು ಅವಶ್ಯಕ. ಒಂದನೆಯದು ಪ್ರಾಣಾಯಾಮ, ಎರಡನೆಯದು ಸರಸ್ವತೀಚಾಲನೆಯೆಂದರೆ—"ಓಂ" ಕಾರೋಪಾಸನೆ. ಈ ರೀತಿಯಾಗಿ ಪ್ರಾಣಾಯಾಮವನ್ನು ಅಭ್ಯಾಸಮಾಡಿದರೆ ಸುತ್ತಿ ಕೊಂಡು ಮಲಗಿರುವ ಕುಂಡಲಿನಿಯು ಎದ್ದು ಮೇಲ್ಮುಖವಾಗುವುದೆಂದು ಹೇಳಿರುವುದು.

ಆದುದರಿಂದ ಬ್ರಹ್ಮರಂಧ್ರದ ಬಾಗಿಲನ್ನು ಮುಚ್ಚಿಕೊಂಡು ಮಲಗಿರುವ ಕುಂಡಲಿನಿ ಯನ್ನು ಎಬ್ಬಿಸುವುದಕ್ಕೆ ಶಕ್ತಿಚಲನಪ್ರಾಣಾಯಾಮವನ್ನು ಮಾಡಬೇಕು. ಕುಂಡಲಿನಿ ಯನ್ನು ಪ್ರಾಣಾಯಾಮದಿಂದ ಎಬ್ಬಿಸಿದನಂತರ ಭ್ರೂಮಧ್ಯದವರೆಗೆ ತೆಗೆದುಕೊಂಡು ಹೋಗಲು ಪ್ರಣವೋಪಾಸನೆಯನ್ನು ಮಾಡಬೇಕು. ಈ ಓಂಕಾರವನ್ನು ಅನುಸಂಧಾನ ಮಾಡಿ ಸಮಾಧಿ ಅಭ್ಯಾಸಮಾಡುವುದೇ ಸರಸ್ವತೀಚಲನೆಯೆನಿಸಿಕೊಳ್ಳುವುದು. ಸರಸ್ವತೀ ಚಲನೆಯೆನಿಸಿಕೊಳ್ಳುವ ಓಂಕಾರದ ವಿಚಾರವು ಯುದ್ಧಕಾಂಡದಲ್ಲಿ ಸೇತುಬಂಧನದಾರಭ್ಯ ಪ್ರಾರಂಭವಾಗುತ್ತದೆ. ಶ್ವಾಸೋಚ್ಛ್ವಾಸದ ತತ್ವದವನಾದ ಹನುಮಂತನಿಂದಲೇ ಭ್ರೂಮಧ್ಯದವರೆಗೆ ತೆಗೆದುಕೊಂಡು ಹೋಗಲು ಸಾಧ್ಯವಾಗಲಾರದು. ಅಂದರೆ ಪ್ರಾಣಾ ಯಾಮದಿಂದಲೇ ಸಮಾಧಿಸೋಪಾನವನ್ನು ಅಧಿಕಾರಿಯು ಪಡೆಯಲಾರನು. ಸಮಾಧಿಯ ಅನುಷ್ಠಾನ ಪ್ರಾರಂಭಮಾಡುವುದಕ್ಕೆ ಇನ್ನೂ ಕೆಲವು ಕಾರ್ಯಗಳು ಹನುಮಂತನಿಂದ ನಡೆಯ

ಬೇಕಾಗಿರುವುದರಿಂದ ಮುಂದಿನ ಕಥೆಯನ್ನು ನೋಡೋಣ. ಸುಂದರಕಾಂಡ ಪೂರಯಿಸು ವವರೆಗೂ ಇರುವ ಕಥೆಯ ತತ್ವಗಳೆಲ್ಲಾ ಈ ಶಕ್ತಿಚಲನಪ್ರಾಣಾಯಾಮಕ್ಕೇ ಸೇರಿರುತ್ತವೆ.

## ೩ನೆಯ ಪ್ರಕರಣ.

| ಹನುಮಂತನು ಸಿಂಹಿಕೆಯನ್ನು ನಿಗ್ರಹಿಸಿದುದು. |  | ಯೋಗಿಗಳಿಗೆ ಉಂಟಾಗುವ ತೇಜಃ ಪ್ರತಿಬಂಧ ನಿವೃತ್ತಿ. |
|---|---|---|

**ರಾ||** ಹನುಮಂತನು ಸುರಸೆಯಿಂದ ಅಪ್ಪಣೆಯನ್ನು ಪಡೆದು ಹಾರಿ ಹೋಗುತ್ತಿರು ವಲ್ಲಿ ಸಿಂಹಿಕೆಯೆಂಬ ಛಾಯಾಗ್ರಾಹಿಣಿಯೊಬ್ಬಳು ಇವನನ್ನು ತಡೆಯಲು ಆಕೆಯನ್ನು ಕೊಂದನು.

**ತತ್ವ||** ಸಾಧಾರಣ ಮನುಷ್ಯರಲ್ಲಿರುವ ತೇಜಸ್ಸಿಗಿಂತಲೂ ಯೋಗದಲ್ಲಿ ಪ್ರವರ್ಧಮಾನ ರಾದವರಲ್ಲಿರುವ ತೇಜಸ್ಸು ಒಂದು ವಿಧವಾದ ಲಕ್ಷಣವುಳ್ಳದ್ದಾಗಿರುತ್ತದೆ. ಯೋಗಿಗಳಿಗೆ ಈ ತೇಜಸ್ಸು ಬರಬೇಕಾದರೆ ಕುಂಡಲಿನೀ ಚಿತ್ರಪಠದಲ್ಲಿ ತೋರಿಸಿರುವಂತೆ ಮೂಲಾಧಾರ ಚಕ್ರದಲ್ಲಿರುವ ಅಗ್ನಿಯನ್ನು ಪ್ರಜ್ವಲನೆಮಾಡಿಸಬೇಕು. ಈ ಅಗ್ನಿಯಿಂದ ಉಂಟಾದ ತೇಜಸ್ಸು ದೇಹಕ್ಕೆ ಹರಡುವುದಲ್ಲದೆ, ಈ ಅಗ್ನಿಜ್ವಾಲೆಯಿಂದ ಕುಂಡಲಿನೀಶಕ್ತಿಯು ಸುಷುಮ್ನೆಯಲ್ಲಿ ಪ್ರವೇಶಿಸಲು ಅನುಕೂಲವಾಗುತ್ತದೆ. ಇಂತಹ ಅಗ್ನಿಜ್ವಾಲೆಯು ಮೂಲಾ ಧಾರದಿಂದ ಊರ್ಧ್ವಮುಖವಾಗಿ ನುಗ್ಗಲು ಅಡ್ಡಿಯಾಗಿರುವ ಶಕ್ತಿಗೆ ಸಿಂಹಿಕೆಯೆಂದು ಹೆಸರು. ಸಿಂಹಿಕೆಯೆಂದರೆ "ಸಿಂಹ ಹಿಂಸಾಯಾಂ" ಹಿಂಸೆಮಾಡುವುದು. ಹಿಂಸೆಮಾಡು ವುದೆಂದರೆ, ಮೂಲಾಧಾರದಲ್ಲಿರುವ ಅಗ್ನಿಯನ್ನು ವಾಯುವಿನೊಡನೆ ಊರ್ಧ್ವಮುಖವಾಗ ದಂತೆ ಮಾಡುವುದು. ಇಂತಹ ಸಿಂಹಿಕೆಯೆಂಬ ರಾಕ್ಷಸಿಯು ಹನುಮಂತನನ್ನು ಎದುರಿಸಲು ಹನುಮಂತನು ಅವಳನ್ನು ನಿಗ್ರಹಿಸಿದನು.

ಸಿಂಹ ಎನ್ನುವುದಕ್ಕೆ " ಸಿಂಚತಿ ತೇಜಃ ಪಶುಷು ಇತಿ ಸಿಂಹಃ" ಎಂಬದಾಗಿ ಶಿವ ಸಹಸ್ರನಾಮ ಭಾಷ್ಯದಲ್ಲಿ ಮತ್ತೊಂದು ವ್ಯುತ್ಪತ್ತಿಯೂ ಇರುವುದು. ಈ ವ್ಯುತ್ಪತ್ತಿಯ ಮೇಲೆ ಮೂಲಾಧಾರದಲ್ಲಿರುವ ಬ್ರಹ್ಮತೇಜೋರೂಪವಾದ ಅಗ್ನಿಯ ತೇಜಸ್ಸು ಊರ್ಧ್ವ ಮುಖವಾಗಿ ನುಗ್ಗಲು ಅಡ್ಡಿಯಾಗಿದ್ದುದರಿಂದ, ಈ ಅಡ್ಡಿಯಾಗಿದ್ದ ಶಕ್ತಿಯಾದ ಸಿಂಹಿಕೆಗೆ ಛಾಯಾಗ್ರಾಹಿಣಿ ಎಂಬ ಹೆಸರೂ ಇರುವುದು. ಅಂದರೆ ತೇಜಸ್ಸು ಚೆನ್ನಾಗಿ ಪ್ರಸರಣೆ ಯಾಗದಂತೆ ಮಾಡುವವಳು ಎಂಬ ತಾತ್ಪರ್ಯ. ಈ ರಾಕ್ಷಸಿಯನ್ನು ಹನುಮಂತನು ನಿಗ್ರಹಿಸಿದನೆಂದರೆ ಅಗ್ನಿಯ ತೇಜಸ್ಸು ಊರ್ಧ್ವಮುಖವಾಗಿ ಹೋಗಲು ಅಡ್ಡಿಯಾಗಿದ್ದ ಶಕ್ತಿಯು ನಿವಾರಣೆಯಾಯಿತೆಂಬ ತಾತ್ಪರ್ಯ. ಅಂದರೆ ಶಕ್ತಿಚಲನಪ್ರಾಣಾಯಾಮದ

ಕುಂಭಕದಿಂದ ಈ ಫಲವುಂಟಾಗುವುದೆಂಬ ತಾತ್ಪರ್ಯವಾಗಿರುತ್ತದೆ. ಮೂಲಾಧಾರ ದಲ್ಲಿರುವ ಅಗ್ನಿಯ ವಿಚಾರವು ಮುಂದೆ ಹನುಮಂತನು ಲಂಕೆಯನ್ನು ದಹನಮಾಡಿದ ತತ್ವದಲ್ಲಿ ಬರುವುದು.

## ೪ನೆಯ ಪ್ರಕರಣ.

| ಹನುಮಂತನು ಲಂಕಿಣಿಯನ್ನು ಜರ್ಝರಿತಳನ್ನಾಗಿ ಮಾಡಿದುದು. | ಅವಿದ್ಯಾನಗರಾಭಿಮಾನ ದೇವತೆಯ ಜರ್ಝರತ್ವದ ವಿಚಾರ. |
|---|---|

**ರಾ||** ಹನುಮಂತನು ಸಿಂಹಿಕೆಯನ್ನು ಸಂಹರಿಸಿದನಂತರ ಲಂಕಾಪಟ್ಟಣದ ದ್ವಾರಕ್ಕೆ ಬರಲು, ಆ ದ್ವಾರದಲ್ಲಿದ್ದ ಲಂಕಾಭಿಮಾನದೇವತೆಯಾದ ಲಂಕಿಣಿಯು ಹನುಮಂತನನ್ನು ಲಂಕೆಯೊಳಕ್ಕೆ ಬಿಡದೆ ತಡೆದಳು, ಇದರಿಂದ ಹನುಮಂತನಿಗೂ ಲಂಕಿಣಿಗೂ ಯುದ್ಧ ನಡೆದು ಹನುಮಂತನು ಲಂಕಿಣಿಯನ್ನು ಜರ್ಝರಿತಳನ್ನಾಗಿ ಮಾಡಿ ಪ್ರಾಣಮಾತ್ರದಿಂದ ಉಳಿಸಿದನು.

**ತತ್ವ||** ಲಂಕಾ ಎಂಬ ಶಬ್ದಕ್ಕೆ ಶಿವಸಹಸ್ರನಾಮ ಭಾಷ್ಯದಲ್ಲಿ ಅವಿದ್ಯೆಯೆಂಬ ಅರ್ಥವಿರುತ್ತದೆಂದು ಅರಣ್ಯಕಾಂಡ್ಯದಲ್ಲಿಯೇ ಬರೆದಿದೆ. ಲಂಕಿಣಿಯೆಂದರೆ ಅವಿದ್ಯೆಯು ಸ್ಥಳವನ್ನು ಧರಿಸಿಕೊಂಡಿರತಕ್ಕ ಶಕ್ತಿಯಾದುದರಿಂದ ನಗರಾಭಿಮಾನದೇವತೆ. ಅವಿದ್ಯೆಯು ಸ್ಥಳವು ಯಾವುದೆಂದರೆ ಲಂಕೆಯು ತತ್ವವಾದ ಮೂಲಾಧಾರಚಕ್ರ. ಲಂಕಿಣಿಯು ಹನುಮಂತನಿಂದ ಜರ್ಝರಿತಳಾದವಳೆಂದರೆ ಸ್ಥಳಾಭಿಮಾನಶಕ್ತಿಗೆ ನಿರ್ವೀರ್ಯತೆ ಉಂಟಾಯಿತೆಂಬ ತಾತ್ಪರ್ಯವಾಗಿರುವುದು.

ಅವಿದ್ಯಾಸ್ಥಳಾಭಿಮಾನಶಕ್ತಿಯು ನಿರ್ವೀರ್ಯವುಳ್ಳದ್ದಾದರೆ ಅವಿದ್ಯೆಯ ಸ್ವರೂಪಕ್ಕೂ ನಾಶದ ಕಾಲ ಒದಗಿತೆಂದು ಹೇಳಬೇಕು. ಹೇಗೆಂದರೆ, ನಮ್ಮ ದೇಹವನ್ನು ಧರಿಸಿ ಕೊಂಡಿರುವ ಶಕ್ತಿಗೆ ಯಾವಾಗ ಜರ್ಝರತ್ವ ಬರುವುದೋ ಆಗ ದೇಹಕ್ಕೂ ವಿನಾಶ ಒದಗಿತೆಂದು ಹೇಳುವಂತೆ ಲಂಕೆಯನ್ನು ಧರಿಸಿಕೊಂಡಿರುವ ಶಕ್ತಿಗೆ ನಿರ್ವೀರ್ಯವುಂಟಾದರೆ ಲಂಕೆಗೂ ವಿನಾಶಕಾಲವೆಂದು ಹೇಳಬೇಕಾಗುತ್ತದೆ. ಈ ತತ್ವಾರ್ಥವು ಲಂಕಾದೇವಿಯು ಹನುಮಂತನೊಡನೆ ಹೇಳಿರುವುದಕ್ಕೆ ಹೋಲಿಕೆಯಾಗಿರುವುದು.

ಲಂಕಾದೇವಿಯು ಹನುಮಂತನೊಡನೆ ಹೇಳಿರುವುದೇನೆಂದರೆ "ಎಲೈ ಹನುಮಂತನೇ, ನಾನೇ ಲಂಕಾನಗರಿಯೆಂದು ತಿಳಿ! ಈಗ ನೀನು ನಿನ್ನ ಪರಾಕ್ರಮದಿಂದ ನನ್ನನ್ನು ಜಯಿಸಿದಂತಾಯಿತು. ಈಗ ನಿನಗೊಂದು ಸಾರವಾದ ರಹಸ್ಯವನ್ನು ತಿಳಿಸುವೆನು. ಪೂರ್ವದಲ್ಲಿ ಸ್ವಯಂಭುವಾದ ಬ್ರಹ್ಮನು ನನಗೆ -"ಯಾವಾಗ ಒಬ್ಬ ವಾನರನು ಬಂದು ತನ್ನ ಪರಾಕ್ರಮದಿಂದ ನಿನ್ನನ್ನು ವಶಪಡಿಸಿಕೊಳ್ಳುವನೋ ಆಗಲೇ ಇಲ್ಲಿನ

ರಾಕ್ಷಸರಿಗೆ ವಿಪತ್ಕಾಲ ಬಂದುದಾಗಿ ತಿಳಿಯಬೇಕು," ಎಂದು ವರವನ್ನು ಕೊಟ್ಟಿರುವನು. ಆದುದರಿಂದ ಎಲೈ ಹನುಮಂತನೇ! ಈಗ ನಿನ್ನ ದರ್ಶನದಿಂದ ಆ ಬ್ರಹ್ಮನು ನನಗೆ ಹೇಳಿದ್ದ ಕಾಲವು ಪ್ರಾಪ್ತವಾಯಿತೆಂದು ತೋರುವುದು. ಬ್ರಹ್ಮನ ವಾಕ್ಯವು ಅನ್ಯತವಾಗುವುದಿಲ್ಲ." ಎಂಬದಾಗಿ ಲಂಕಿಣಿಯು ಹನುಮಂತನಿಗೆ ಹೇಳಿದಳು.

ಈ ಮೇಲಿನ ವಾಕ್ಯದ ತತ್ವಾರ್ಥವನ್ನು ಪ್ರಥಮದಲ್ಲಿಯೇ ವಿವರಿಸಿರುತ್ತದೆ. ಮುಖ್ಯತಾತ್ಪರ್ಯವೇನೆಂದರೆ, ಬ್ರಹ್ಮನ ವರವೇ ಸೃಷ್ಟಿಯ ನಿಯಮವಾಗಿರುತ್ತದೆ. ಯಾವಾಗ ಮೋಕ್ಷದ ದಾರಿಯಲ್ಲಿ ಸಂತತವಾದ ಪ್ರವರ್ತನೆಯುಂಟಾಗುವುದೋ, ಆಗ ಶಕ್ತಿಚಲನ ಪ್ರಾಣಾಯಾಮದ ಕುಂಭಕದ ಮಹತ್ತಿನಿಂದ ಅವಿದ್ಯಾಸ್ಥಳಾಭಿಮಾನಶಕ್ತಿಯು ನಿರ್ವೀರ್ಯವಾಗುವುದೆಂಬುದೇ ಬ್ರಹ್ಮದೇವನು ಲಂಕಿಣಿಗೆ ಹೇಳಿದ ರಹಸ್ಯವಾಗಿರುವುದು. ಅಂದರೆ ಸೃಷ್ಟಿ, ಸ್ಥಿತಿ, ನಿಯಮಗಳು ಮೋಕ್ಷನಿಯಮಗಳಿಂದ ನಾಶವಾಗುವುವೆಂಬ ತಾತ್ಪರ್ಯ. ಅಂದರೆ "ಓಂ" ಕಾರದಲ್ಲಿನ ಅಕಾರ ಅಥವಾ ವಿಶ್ವತ್ವದ ಸ್ಥಳವಾದ ಮೂಲಾಧಾರಚಕ್ರ ಅಥವಾ ಬ್ರಹ್ಮಗ್ರಂಥಿಯನ್ನು ಧಾರಣೆಮಾಡಿಕೊಂಡಿರುವ ಶಕ್ತಿಗೆ ಪ್ರಾಣಾಯಾಮದಿಂದ ನಿರ್ವೀರ್ಯವುಂಟಾಗುವುದೆಂಬ ತತ್ವಾರ್ಥವೇ ಲಂಕಿಣಿಯನ್ನು ಹನುಮಂತನು ಜರ್ಝರಿತಳನ್ನಾಗಿ ಮಾಡಿದುದಾಗಿರುವುದು. ಆದುದರಿಂದ ಮೂಲಾಧಾರಚಕ್ರದಲ್ಲಿರುವ ಅವಿದ್ಯಾಶಕ್ತಿಗೆ ಪ್ರಾಣದ ಸತ್ವಕ್ಕೆ ಅಂತ್ಯಕಾಲ ಸಮೀಪಿಸುವ ಸೂಚನೆಯಾಗಿರುವುದು. ಶಕ್ತಿಚಲನಪ್ರಾಣಾಯಾಮದ ಕುಂಭಕವು ಮೂಲಾಧಾರದಲ್ಲಿ ಸ್ತಿಮಿತಕ್ಕೆ ಬರುತ್ತಿರುವಾಗ ಈ ಫಲಗಳೆಲ್ಲಾ ಉಂಟಾಗುವುವು.

## ೫ನೆಯ ಪ್ರಕರಣ.

| **ಹನುಮಂತನು ಲಂಕೆಯನ್ನು ಪ್ರವೇಶಮಾಡಿ ಸೀತಾದೇವಿಯನ್ನು ಕಂಡು ಮುದ್ರಿಕೆಯನ್ನು ಒಪ್ಪಿಸಿದುದು.** | **ಬಂಧನದ ಬಿಡುಗಡೆಯ ಲಕ್ಷಣ ಸೂಚಕವಾದ ಶುದ್ಧಸತ್ವಗುಣದ ಇರುವಿಕೆಯ ಉದಯ.** |
|---|---|

**ರಾ||** ಹನುಮಂತನು ಲಂಕಿಣಿಯನ್ನು ಜರ್ಝರಿತಳನ್ನಾಗಿ ಮಾಡಿದನಂತರ ಲಂಕಾಪಟ್ಟಣದೊಳಕ್ಕೆ ಪ್ರವೇಶಿಸಿ ಸೀತಾದೇವಿಯನ್ನು ಹುಡುಕುತ್ತಿರುವಲ್ಲಿ ಅರ್ಧರಾತ್ರಿಯ ಸಮಯವಾದುದರಿಂದ ಕಾಂತಿವಿಶಿಷ್ಟನಾದ ಪೂರ್ಣಚಂದ್ರನನ್ನು ನೋಡಿದನು.

**ತತ್ವ||** ಶಕ್ತಿಚಲನಪ್ರಾಣಾಯಾಮವು ಸ್ತಿಮಿತಕ್ಕೆ ಬಂದಂತೆ ಮೂಲಾಧಾರದಲ್ಲಿ ಕುಂಭಕಮಾಡುವ ಕಾಲವು ಅಧಿಕವಾಗುತ್ತಾ ಬರುತ್ತದೆ. ಹೀಗೆ ಕುಂಭಕವು ಸ್ತಿಮಿತಕ್ಕೆ ಬರುವುದರಿಂದ, ಮುಚ್ಚಿದ್ದ ಮನೆಯ ಬಾಗಿಲನ್ನು ತೆರೆಯುವಂತೆ ಬ್ರಹ್ಮರಂಧ್ರದ

ಬಾಗಿಲು ತೆರೆಯಲ್ಪಡುತ್ತದೆ. ಅಂದರೆ ಕುಂಡಲಿನಿಯು ಉತ್ಥಾಪನೆಯಾಗುತ್ತದೆ. ಯಾವಾಗ ಕುಂಡಲಿನಿಯು ನಿದ್ರೆಯಿಂದ ಎಚ್ಚರಗೊಳ್ಳುವಳೋ ಆಗ ಅವಿದ್ಯಾನಗರಾಭಿಮಾನದೇವತಾಶಕ್ತಿಯು ಜರ್ಝರೀಭೂತವಾಗುತ್ತದೆ. ಈ ಕಾರ್ಯಗಳಿಂದುಂಟಾಗುವ ಫಲಿತಾಂಶವೇನೆಂದರೆ—ಗಾಢಾಂಧಕಾರವಾದ ರಾತ್ರಿಯಲ್ಲಿ ಪೂರ್ಣಚಂದ್ರನ ಬೆಳಕು ಪ್ರಾಪ್ತವಾದರೆ, ಅಂಧಕಾರವು ಆ ಬೆಳಕಿನಿಂದ ಎಷ್ಟರಮಟ್ಟಿಗೆ ನಿವೃತ್ತಿಯಾಗುವುದೋ ಅದರಂತೆ ಬ್ರಹ್ಮವಿದ್ಯಾಧಿಕಾರಿಯು ತನ್ನಲ್ಲಿ ಗಾಢಾಂಧಕಾರದ ತತ್ವದಲ್ಲಿರುವ ಅವಿದ್ಯೆಯ ನಾಶದ ಸೂಚನೆಯನ್ನು ಈ ಶಕ್ತಿಚಲನಪ್ರಾಣಾಯಾಮದ ಪರಿಪಕ್ವಾವಸ್ಥೆಯಿಂದ ಹೊಂದುವನು. ಈ ತಾತ್ಪರ್ಯವೇ ಹನುಮಂತನು ಪೂರ್ಣಚಂದ್ರೋದಯವನ್ನು ಕಂಡು ವರ್ಣಿಸಿದುದು.

ಗಾಢಾಂಧಕಾರವು ಪೂರ್ಣಚಂದ್ರೋದಯದಿಂದ ತೊಲಗುವುದಕ್ಕಿಂತಲೂ ಮಧ್ಯಾಹ್ನ ಸೂರ್ಯನ ಪ್ರಕಾಶದಿಂದ ತೊಲಗುವುದು ಅತ್ಯಂತ ಶ್ರೇಷ್ಠವಾಗಿರುತ್ತಷ್ಟೆ! ಇದನ್ನು ಬ್ರಹ್ಮವಿದ್ಯಾಧಿಕಾರಿಯು ಹೊಂದುವ ರಾಮಾಯಣಕಥೆಯು ಮುಂದೆ ಬರುವುದು. ಹಿಂದೆ ಕಿಷ್ಕಿಂಧಾಕಾಂಡದಲ್ಲಿ ವಾನರರು ಋಕ್ಷಬಿಲದಲ್ಲಿ ಪ್ರವೇಶಮಾಡಿ ಸ್ವಯಂಪ್ರಭೆಯನ್ನು ನೋಡಿದಾಗ ಗಾಢಾಂಧಕಾರವು ನಕ್ಷತ್ರದ ಪ್ರಕಾಶದಿಂದ ಪರಿಹಾರವಾಗುವ ಸೋಪಾನವು ಬಂದಿರುತ್ತಷ್ಟೆ! ಆ ನಕ್ಷತ್ರಪ್ರಕಾಶವು ಈಗ ಪೂರ್ಣಚಂದ್ರನ ಪ್ರಕಾಶಕ್ಕೆ ಹೆಚ್ಚಿತು. ಇನ್ನು ಸೂರ್ಯನ ಪ್ರಕಾಶಕ್ಕೆ ಹೆಚ್ಚಬೇಕು. ಇದು ಯುದ್ಧಕಾಂಡದಲ್ಲಿ ಬರುವುದು.

**ರಾ||** ಅನಂತರ ಹನುಮಂತನು ಸೀತಾದೇವಿಯನ್ನು ಲಂಕೆಯಲ್ಲಿ ಹುಡುಕುತ್ತಾ ರಾವಣನ ಅರಮನೆಯೊಳಗೆ ಪ್ರವೇಶಮಾಡಿ ಪುಷ್ಪಕವಿಮಾನವನ್ನು ನೋಡಿದನು. ಈ ಪುಷ್ಪಕವಿಮಾನದಲ್ಲಿ ನಿದ್ರಿಸುತ್ತಿದ್ದ ರಾವಣ ಮತ್ತು ಇವನ ಹೆಂಡತಿ ಮಂಡೋದರಿ ಮುಂತಾದ ಸ್ತ್ರೀಯರನ್ನು ನೋಡಿದನು. ಪ್ರಥಮದಲ್ಲಿ ಮಂಡೋದರಿಯನ್ನೇ ಸೀತೆಯೆಂದು ಭ್ರಮಿಸಿದನು.

**ತತ್ವ||** ಶಕ್ತಿಚಲನಪ್ರಾಣಾಯಾಮದ ಕುಂಭಕದ ಕಾಲವನ್ನು ಹೆಚ್ಚಿಸಿಕೊಳ್ಳುತ್ತಾ ಬಂದಂತೆ ಮೂಲಾಧಾರದಲ್ಲಿನ ಮಲಿನಮಾಯಾಪ್ರಧಾನ ಸ್ಥಳವೆಲ್ಲಾ ಶ್ವಾಸೋಚ್ಛ್ವಾಸದಿಂದ ತುಂಬಿಕೊಂಡು, ಕುಂಭಕವು ಸೂಕ್ಷ್ಮವಾಗಿ ಸ್ತಿಮಿತಕ್ಕೆ ಬರುವುದು. ಈ ರೀತಿ ಪ್ರಾಣಾಯಾಮ ಮಾಡುವ ಕಾಲದಲ್ಲಿ ವಾಸನಾವೃತ್ತಿಗಳ ಕಾರ್ಯಕ್ಕೆ ಅವಕಾಶವಿಲ್ಲದುದರಿಂದ ರಾವಣಾದಿಗಳೆಲ್ಲ ಪುಷ್ಪಕವಿಮಾನದಲ್ಲಿ ನಿದ್ರಿಸುತ್ತಿದ್ದರೆಂಬ ತತ್ವಾರ್ಥವಾಗಿರುತ್ತದೆ. ಅಂದರೆ ವಿಕ್ಷೇಪಶಕ್ತಿಯ ಕಾರ್ಯವಾದ ವಾಸನಾವೃತ್ತಿಗಳ ಕಾರ್ಯವಿಲ್ಲದೆ ಇರುವ ಕಾಲವೇ ರಾವಣನು ನಿದ್ರಿಸುತ್ತಿದ್ದುದಾಗಿದೆ. ಇಂತಹ ವೃತ್ತಿಗೆ ಕಾರಣವಾಗಿರುವುದೇ ಜನ್ಮಾಂತರಗಳಿಂದ

ಬಂದು ಈಗ ಅನುಭವಿಸಬೇಕಾಗಿರುವ ಪ್ರಾರಬ್ಧಕರ್ಮದ ವಿಷಯವಾಸನೆ. ಈ ಪ್ರಾರಬ್ಧ ಕರ್ಮದ ವಾಸನೆಯ ಸ್ವರೂಪವೇ ಪುಷ್ಪಕವಿಮಾನ. ಇದರಲ್ಲಿ ವಿಹರಿಸುವ ವಿಕ್ಷೇಪ ಶಕ್ತಿಯೇ ರಾವಣನಾಗಿರುತ್ತಾನೆ. ಪುಷ್ಪಕವಿಮಾನವೆಂದರೆ, ವಾಸನೆಯ ವಿಮಾನ. ಪುಷ್ಪವೆಂದರೆ —" ಪುಷ್ಪವತ್ ಪುಷ್ಪ (ಪುಷ್ಪ ವಿಕಸನೆ)" ವಿಸ್ತಾರವನ್ನು ಹೊಂದುವುದು. ಅಂದರೆ ಈ ದೇಹವ್ಯಾಪಾರಕ್ಕೆ ಕಾರಣವಾದ ಪ್ರಾರಬ್ಧಕರ್ಮದ ವಾಸನೆಗಳ ಗುಂಪಿಗೆ ಪುಷ್ಪಕವಿಮಾನವೆಂದು ಹೆಸರು. ಪುಷ್ಪವು ವಾಸನೆಯೊಡನೆ ವಿಸ್ತಾರವಾಗುವಂತೆ ಪ್ರಾರಬ್ಧ ಕರ್ಮದ ವಾಸನೆಯು ವ್ಯಾಪಿಸಿಕೊಂಡು ಕಾರ್ಯಗಳನ್ನು ಮಾಡಿಸುತ್ತದೆ. ಆದುದರಿಂದ ರಾವಣನಲ್ಲಿರುವ ಪುಷ್ಪಕವಿಮಾನವೆಂದರೆ—ಅನುಭವಿಸಬೇಕಾದ ಪ್ರಾರಬ್ಧಕರ್ಮದ ವಾಸನೆ. ವಾಸನೆಯು ಯಾವ ಯಾವ ವಿಧದಲ್ಲಿರುವುದೋ, ವೃತ್ತಿಗಳೂ, ಅದರಂತೆಯೇ ಉತ್ಪತ್ತಿಯಾಗುವುವು. ಈ ಪುಷ್ಪಕವಿಮಾನದ ವಿಚಾರವು ಶ್ರೀರಾಮನು ಅಯೋಧ್ಯೆಗೆ ಹಿಂದಿರುಗಿ ಹೋಗುವ ಸಂದರ್ಭದಲ್ಲಿಯೂ ಉತ್ತರಕಾಂಡದಲ್ಲಿಯೂ ಬರುವುದರಿಂದ ಇಲ್ಲಿ ಬರೆದಿರುವುದನ್ನು ಅಲ್ಲಿಗೂ ಅನ್ವಯಮಾಡಿಕೊಳ್ಳಬೇಕು.

ಹನುಮಂತನು ಮಂಡೋದರಿಯನ್ನು ನೋಡಿ ಸೀತೆಯೆಂದು ಭ್ರಾಂತನಾದ ತತ್ತ್ವವೇನೆಂದರೆ--ಅವಿದ್ಯಾಸ್ವರೂಪದಲ್ಲಿಯೂ ಪುರುಷ ಪ್ರಕೃತಿಗಳೆಂದು ವಿಭಾಗಮಾಡಬಹುದು. ಮಂಡೋದರಿಯ ... ಕುಂಭಕರ್ಣನ ಹೆಂಡತಿಯೂ, ಅವಿದ್ಯಾಸ್ವರೂಪದ ಪ್ರಕೃತಿಗಳೆಂದು ಹೇಳಬಹುದು. ಅವಿದ್ಯಾಸ್ವರೂಪದಲ್ಲಿ ಸೇರಿದ ಪ್ರಕೃತಿಯ ವಿಭಾಗಕ್ಕೆ ವಿಕೃತಿಯೆಂದು ಹೆಸರು.

" ಪ್ರಕೃತಿಂ ವಿಕೃತಿಂ ವಿದ್ಯಾಂ ಸರ್ವಭೂತಹಿತಾತ್ಮಿಕಾಂ "

ಎಂಬದಾಗಿ ಲಕ್ಷ್ಮ್ಯಷ್ಟೋತ್ತರ ಪ್ರಥಮ ಶ್ಲೋಕದಲ್ಲಿ ಹೇಳಿದೆ. ಶ್ರೀಶಂಕರಭಗವತ್ಪಾದರವರೂ ವಿವೇಕಚೂಡಾಮಣಿ ೧೩೭ನೆಯ ಶ್ಲೋಕದಲ್ಲಿ ಅಸತ್ತಾದ ಅವಿದ್ಯೆಯು ವಿಕೃತಿ ಎಂದು ಹೇಳಿರುವರು:—

ಪ್ರಕೃತಿ ವಿಕೃತಿ ಭಿನ್ನ ಶ್ಶುದ್ಧಬೋಧಸ್ವಭಾವಃ |
ಸದಸದಿದ ಮಶೇಷಂ ಭಾಸಯನ್ನಿರ್ವಿಶೇಷಃ ||

ತಾ|| ಪರಮಾತ್ಮನು ಪ್ರಕೃತಿ ವಿಕೃತಿಗಳಿಂದ ಭಿನ್ನನಾದವನು. ಶುದ್ಧಜ್ಞಾನ ಸ್ವರೂಪನು. ಸದಸದ್ರೂಪವಾದೆಲ್ಲವನ್ನೂ ಪ್ರಕಾಶಪಡಿಸುವವನು. ಆದರೂ ಯಾವ ವಿಶೇಷಣವೂ ಇಲ್ಲದವನು.

ಆದುದರಿಂದ ವಿಕೃತಿಯೆಂದರೆ, ವಿಕಾರವನ್ನು ಹೊಂದುವವಳು. ಕುಂಭಕರ್ಣನ ಹೆಂಡತಿಯಾದ ವಜ್ರಾರೆಯು ತಮೋಗುಣ, ಮಂಡೋದರಿಯು ರಜೋಗುಣ. ಈ ರಜೋಗುಣದಲ್ಲಿ ಪ್ರತಿಬಿಂಬಿತವಾದ ಪರಮಾತ್ಮಚೈತನ್ಯವೇ ರಾವಣನಾಗಿರುತ್ತಾನೆ. ಬುದ್ಧಿಯಲ್ಲಿನ ಪ್ರತಿಬಿಂಬಚೈತನ್ಯವನ್ನು ಬುದ್ಧಿತತ್ವವೆಂಬದಾಗಿ ವ್ಯವಹಾರಮಾಡಿಕೊಂಡು ಬರುತ್ತಿರುವ ರೀತಿಯಲ್ಲಿ ರಜೋಗುಣದಲ್ಲಿನ ಪ್ರತಿಬಿಂಬಚೈತನ್ಯನಾದ ರಾವಣನನ್ನು ರಜೋಗುಣದ ತತ್ವವೆಂದು ವ್ಯವಹಾರಮಾಡಿಕೊಂಡು ಬರುತ್ತಿದ್ದರೂ ಪ್ರತಿಬಿಂಬಚೈತನ್ಯನೇ ಹೊರತು ರಜೋಗುಣವೇ ರಾವಣನಲ್ಲ. ಪರಮಾತ್ಮನ ಪ್ರತಿಬಿಂಬಚೈತನ್ಯವೇ ಅವಿದ್ಯಾಸ್ವರೂಪದಲ್ಲಿನ ಪುರುಷತ್ವಕ್ಕೆ ನಿಮಿತ್ತಕಾರಣವೆಂದು ಶ್ರೀವಿದ್ಯಾರಣ್ಯರವರ ಪಂಚದಶಿ ಪ್ರತ್ಯಕ್ತತ್ವವಿವೇಕ ಪ್ರಕರಣದ ವಾಕ್ಯವನ್ನು ಬಲಾತಿಬಲಾ ಪ್ರಕರಣದಲ್ಲ ತಿಳಿಸಿರುವುದಷ್ಟೆ! ರಜೋಗುಣದಲ್ಲಿರುವ ಪ್ರತಿಬಿಂಬಚೈತನ್ಯವನ್ನು ಉಪಸಂಹಾರಮಾಡುವುದೆಂದರೆ, ನಮ್ಮಲ್ಲಿರುವ ರಜೋಗುಣದಲ್ಲಿನ ಪ್ರತಿಬಿಂಬಚೈತನ್ಯವನ್ನು ರಜೋಗುಣಕ್ಕೆ ಪ್ರಕಾಶವಾಗಿರದಂತೆ ಮಾಡಿ ಈಶ್ವರತ್ವದಲ್ಲಿ ಸೇರಿಸಿಕೊಳ್ಳುವುದೆಂದರ್ಥ. ಹೀಗಾದರೆ ರಜೋಗುಣಸ್ವರೂಪಿಣಿಯಾದ ಮಂಡೋದರಿಯು ವಿಧವೆಯಾಗುತ್ತಾಳೆ. ಮಂಡೋದರಿ ಎಂಬ ಶಬ್ದಕ್ಕೂ "ಮಂದಂ ಉದರಂ ಯಸ್ಯಾಃ ಸಾ ಮಂಡೋದರಿ" ಬ್ರಹ್ಮಾಂಡದಲ್ಲಿ ಯಾರು ಜಡಸ್ವರೂಪಳೋ ಅವಳೇ ಮಂಡೋದರಿ ಎಂಬ ವ್ಯುತ್ಪತ್ತಿಯಿದೆ. ಅಂದರೆ ಮಲಿನಮಾಯೆಯೆಂಬ ತಾತ್ಪರ್ಯ. ನಿಮಿತ್ತ ಕಾರಣವಾದ ಈಶ್ವರನ ಪ್ರಕಾಶವನ್ನು ಉಪಸಂಹಾರಮಾಡಿಕೊಂಡರೆ ಮಲಿನಮಾಯೆಯು ಹುರಿದ ಬೀಜದಂತಾಗಿ ವಿಕಾರವಾಗುವುದು. ಮಂಡೋದರಿಯು ಪ್ರಕೃತಿ ಅಥವಾ ಶುದ್ಧ ಸತ್ವಪ್ರಧಾನಮಾಯಾಸ್ವರೂಪಳಾದ ಸೀತಾದೇವಿಯಂತೆ ಇದ್ದರೂ ವಿಧವೆಯೆಂಬ ವಿಕಾರವುಂಟಾಗುವುದು. ಅಂದರೆ ತಮಃಪ್ರಧಾನಮಾಯೆಗೆ ಪರಿಣಾಮ ಭೇದವುಂಟಾದ್ದರಿಂದ ವಿಕೃತಿಯೆನಿಸಿಕೊಳ್ಳುವುದು. ಈ ತತ್ವಾರ್ಥವನ್ನನುಸರಿಸಿ ಹನುಮಂತನು ಮಂಡೋದರಿಯನ್ನು ಸೀತೆಯಲ್ಲವೆಂದು ಗೊತ್ತುಮಾಡಿಕೊಂಡುದಾಗಿರುವುದು.

**೮೩||** ಅನಂತರ ಹನುಮಂತನು ಸೀತಾದೇವಿಯನ್ನು ಹುಡುಕುತ್ತಾ ಅಶೋಕ ವನವನ್ನು ಸೇರುವ ಹೊತ್ತಿಗೆ ಸರಿಯಾಗಿ ರಾವಣನು ಸೀತೆಯನ್ನು ತನ್ನವಳನ್ನಾಗಿ ಮಾಡಿಕೊಳ್ಳಬೇಕೆಂದು ಬಂದು ಸೀತಾದೇವಿಯನ್ನು ಹೆದರಿಸಿ ಹೋದನು. ಸೀತಾದೇವಿಯು ರಾವಣನ ಹಿಂಸೆಯನ್ನು ತಡೆಯಲಾರದೆ ತನ್ನ ಜಡೆಯಿಂದಲೇ ಪ್ರಾಣತ್ಯಾಗಕ್ಕೆ ಉದ್ಯುಕ್ತಳಾಗಲು ಶುಭಶಕುನಗಳಾದುವು

**ತತ್ವ||** ರಾವಣನೆಂದರೆ ರಜೋಗುಣದ ಪ್ರತಿಬಿಂಬಚೈತನ್ಯ ಅಥವಾ ವಿಕ್ಷೇಪ ಶಕ್ತಿಯು ಶುದ್ಧಸತ್ವಗುಣವನ್ನು ಸ್ವಾಧೀನಮಾಡಿಕೊಂಡು ಪ್ರಪಂಚವ್ಯವಹಾರರೂಪವಾದ ವಿಜೃಂಭಣೆಯನ್ನು ಉಂಟುಮಾಡುವುದೆಂದು ಹಿಂದೆ ರಾವಣನು ಸೀತಾಪಹರಣ ಮಾಡಿದ

ಸಂದರ್ಭದಲ್ಲಿ ತಿಳಿಸಿರುತ್ತದಷ್ಟೆ! ಪ್ರಪಂಚವ್ಯವಹಾರದಲ್ಲಿ ಶುದ್ಧಸತ್ವಗುಣದ ಇರು ವಿಕೆಯೂ ತೋರಿ ಬರುವುದಿಲ್ಲ. ಈಶ್ವರಸೋಪಾನವಾದ ಸವಿಕಲ್ಪಸಮಾಧಿಯ ಅಂತ್ಯ ದಲ್ಲಿಯೂ ಜೀವನ್ಮುಕ್ತಾವಸ್ಥೆಯ ಸ್ವಭಾವವಾದ ಉನ್ಮನೀಭಾವದಲ್ಲಿಯೂ ಶುದ್ಧಸತ್ವ ಗುಣದ ಸೋಪಾನವುಂಟಾಗುವುದು. ರಾವಣನು ಸೀತೆಯನ್ನು ತನ್ನಂತೆ ಮಾಡಿಕೊಳ್ಳು ವುದೆಂದರೆ ಶುದ್ಧಸತ್ವಗುಣದ ಸೋಪಾನವೇ ಇಲ್ಲದಂತೆ ಮಾಡಬೇಕೆಂಬ ತತ್ವವಾಗಿರು ವುದೆಂದು ಅರಣ್ಯಕಾಂಡದಲ್ಲಿ ತಿಳಿಸಿರುತ್ತದಷ್ಟೆ! ರಾವಣನು ಸೀತಾದೇವಿಯನ್ನು ಹೆದರಿಸಿ ಹೋಗಲು ಸೀತೆಯು ಅತ್ಯಂತ ದುಃಖಪಟ್ಟು ಪ್ರಾಣತ್ಯಾಗಮಾಡಲು ಯತ್ನಿಸಿದಳು. ಅಂದರೆ ನಮ್ಮಲ್ಲಿರುವ ಶುದ್ಧಸತ್ವಗುಣಕ್ಕೆ ರಜೋಗುಣದ ಘೋರವೃತ್ತಿಗಳುಂಟಾದಾಗ ಪ್ರಾಣವನ್ನು ಕಳೆದುಕೊಳ್ಳಬೇಕೆಂಬುವಷ್ಟು ಹಿಂಸೆಯುಂಟಾಗುವುದು. ಕೊನೆಗೆ ಶುದ್ಧಸತ್ವಗುಣಕ್ಕೆ ನಾಶವಾಗಬೇಕೆಂಬುವಷ್ಟು ಹಿಂಸೆಯಾಗುತ್ತದೆ. ಇತಹ ಸಂದರ್ಭವು ನಮ್ಮಲ್ಲಿ ಯಾವ ಕಾಲದಲ್ಲಿ ಉಂಟಾಗುವುದೆಂದರೆ—ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆ ೨ನೆಯ ಅಧ್ಯಾಯ ೬೨ನೆಯ ಶ್ಲೋಕದಲ್ಲಿ,

> ಧ್ಯಾಯತೋ ವಿಷಯಾನ್ಪುಂಸಃ ಸಂಗಸ್ತೇಷೂಪಜಾಯತೇ |
> ಸಂಗಾ ತ್ಸಂಜಾಯತೆ ಕಾಮಃ ಕಾಮಾ ತ್ಕ್ರೋಧೋಭಿಜಾಯತೆ ||
> ಕ್ರೋಧಾ ದ್ಭವತಿ ಸಮ್ಮೋಹಃ ಸಮ್ಮೋಹಾ ತ್ಸ್ಮೃತಿವಿಭ್ರಮಃ |
> ಸ್ಮೃತಿಭ್ರಂಶಾ ದ್ಬುದ್ಧಿನಾಶೋ ಬುದ್ಧಿನಾಶಾ ತ್ಪ್ರಣಶ್ಯತಿ ||

ತಾ|| ವಿಷಯಚಿಂತನೆಮಾಡುವ ಪುರುಷನಿಗೆ ಅವುಗಳಲ್ಲಿ ಆಸಕ್ತಿಯುಂಟಾಗುತ್ತದೆ. ಆಸಕ್ತಿಯಿಂದ ಕಾಮನೆಯು ಹುಟ್ಟುತ್ತದೆ. ಕಾಮನೆಯಿಂದ ಕ್ರೋಧವು ಅವತರಿಸುತ್ತದೆ. ಕ್ರೋಧದಿಂದ ಕಾರ್ಯಾಕಾರ್ಯಜ್ಞಾನ ನಾಶವಾಗುತ್ತದೆ. ಕಾರ್ಯಾಕಾರ್ಯಜ್ಞಾನವು ತಪ್ಪು ವುದರಿಂದ ಭ್ರಾಂತಿಯಲ್ಲಿ ಮುಳುಗಿ ತನ್ನನ್ನು ತಾನು ಮರೆಯುತ್ತಾನೆ (ತಾನಿರುವೆನೆಂಬ ಜ್ಞಾನವೂ ಇರುವುದಿಲ್ಲ.) ಹೀಗೆ ಭ್ರಾಂತಿಯಲ್ಲಿ ಮುಳುಗುವುದರಿಂದ ಬುದ್ಧಿಕೆಟ್ಟು ಅಧೋ ಗತಿಯನ್ನು ಹೊಂದುವನು.

ಎಂಬದಾಗಿ ಹೇಳಿರುವಂತೆ ವಿಷಯದಲ್ಲಿ ಕಾಮನೆಯು ಹುಟ್ಟಿ ಕ್ರೋಧವಾಗಿ ಪರಿ ಣಮಿಸಿ, ಕ್ರೋಧದಿಂದ ಕಾರ್ಯಾಕಾರ್ಯಜ್ಞಾನವು ನಾಶವಾಗಿ, ಅನಂತರ ಸ್ಮೃತಿ ತಪ್ಪುವ ರೀತಿಯಾದ ರಜೋಗುಣದ ಘೋರವೃತ್ತಿಯು ಯಾವಾಗ ತಲೆದೋರುವುದೋ ಆಗ ನಮ್ಮಲ್ಲಿ ಸೀತಾದೇವಿಯ ತತ್ವದಲ್ಲಿರುವ ಶುದ್ಧಸತ್ವಗುಣಕ್ಕೆ ನಾಶವಾಗುವಷ್ಟು ಸಂಕಟ ವುಂಟಾಗುತ್ತದೆ. ಇದೇ ರಾವಣನು ಬಂದು ಸೀತೆಯನ್ನು ಹೆದರಿಸಿದ ಮತ್ತು ಸೀತಾ ದೇವಿಯು ಪ್ರಾಣತ್ಯಾಗಮಾಡಲು ಯತ್ನಿಸಿದ ತತ್ವವು.

ಆದುದರಿಂದ ಇಂತಹ ಘೋರವೃತ್ತಿಗಳು ನಮ್ಮಲ್ಲಿ ತಲೆದೋರದಿರುವಂತೆ ಎಚ್ಚರಿಕೆ ಯಿಂದಿರಬೇಕು. ಸೀತಾದೇವಿಗೆ ಅವಿದ್ಯಾಸ್ವರೂಪದಲ್ಲಿಯೂ ಮಲಿನಸತ್ವವೆಂದರೆ— ಧರ್ಮಮಾರ್ಗಸ್ವರೂಪರಾದ ವಿಭೀಷಣ, ಇವನ ಹೆಂಡತಿಯಾದ ಸರಮೆ ಮತ್ತು ಇವರ ಮಗಳಾದ ತ್ರಿಕಾಲಜ್ಞಾನದ ತತ್ವದಲ್ಲಿರುವ ತ್ರಿಜಟೆಯೂ ಸಹಾಯಕರಾಗಿರುತ್ತಾರೆ. ಅಂದರೆ ಪ್ರಪಂಚವ್ಯಾಪಾರದಲ್ಲಿ ಮಲಿನಸತ್ವಗುಣವೆಂದರೆ ಸಾತ್ವಿಕಸ್ವಭಾವವು ನಮ್ಮಲ್ಲಿರುವ ಶುದ್ಧಸತ್ವಗುಣಕ್ಕೆ ಎಷ್ಟೋ ಸಹಾಯವಮಾಡಿದಂತಾಗುತ್ತದೆ. ಮಲಿನಸತ್ವಗುಣವು ಅವಿದ್ಯೆಗೆ ಸೇರಿದ್ದರೂ, ಮಲಿನಸತ್ವಗುಣದ ತತ್ವವಾದ ಧರ್ಮಮಾರ್ಗವು ಶುದ್ಧಸತ್ವಗುಣಕ್ಕೆ ಹಿತಚಿಂತನೆಯ ಸ್ವರೂಪದ್ದಾಗಿರುವುದು. ಮಲಿನಸತ್ವಗುಣದ ನಡೆವಳಿಕೆಗಿಂತಲೂ ಸೀತಾದೇವಿಯ ತತ್ವದಲ್ಲಿರುವ ಶುದ್ಧಸತ್ವಗುಣಕ್ಕೆ ಹೆಚ್ಚಿನ ಸಹಾಯಕರು ಯಾರೆಂದರೆ—ಹನುಮಂತನ ಕಾರ್‍ಯದ ತತ್ವವಾದ ಪ್ರಾಣಾಯಾಮವು. ಈ ಪ್ರಾಣಾಯಾಮಕ್ಕಿಂತಲೂ ಸಮಾಧಿಯ ಅಭ್ಯಾಸವನ್ನು ಮಾಡಿ ಅವಿದ್ಯೆಯನ್ನು ನಿಗ್ರಹಿಸುವ ಮತ್ತು ಸುಗ್ರೀವ ಹನುಮಂತ ಲಕ್ಷ್ಮಣರನ್ನು ತನ್ನ ಆಜ್ಞೆಯಲ್ಲಿಟ್ಟುಕೊಂಡಿರುವ ಬುದ್ಧಿತತ್ವಪ್ರಕಾಶಕನಾದ ಶ್ರೀರಾಮನು ಸೀತೆಗೆ ಪ್ರಧಾನಪುರುಷನು. ಈರೀತಿ ತಾರತಮ್ಯವಿರುವುದನ್ನು ಅನ್ವಯಮಾಡಿ ಸರ್ವರೂ ತಿಳಿದುಕೊಳ್ಳಬಹುದು.

ಮೇಲೆ ಹೇಳಿರುವಂತಹ ಘೋರ ಮತ್ತು ಮೂಢವೃತ್ತಿಗಳ ಸ್ವರೂಪವಾದ ಅವಿದ್ಯೆಯು ವಿನಾಶವಾಗುವ ಕಾಲದ ಸೂಚನೆಗೂ, ಶುದ್ಧಸತ್ವಗುಣದ ಬಂಧನೆಯ ಬಿಡುಗಡೆಯನ್ನು ಸೂಚಿಸುವ ತತ್ವಾರ್ಥದ ಪ್ರತಿಪಾದನೆಗೂ ಹನುಮಂತನು ಬಂದು ಸೀತಾದೇವಿಯನ್ನು ಸಂದರ್ಶಿಸಿ ಬಂಧನಬಿಡುಗಡೆಯ ಸೂಚನೆಯಾದ ಮುದ್ರಿಕೆಯನ್ನು ಒಪ್ಪಿಸಿದುದಾಗಿರುತ್ತದೆ. ಮುಖ್ಯತಾತ್ಪರ್ಯವೇನೆಂದರೆ, ಶಕ್ತಿಚಲನಪ್ರಾಣಾಯಾಮವು ಸಿದ್ಧಿಸಿ ಕುಂಡಲಿನೀ ಉತ್ಥಾಪನೆಯಾಗಿ ಮೂಲಾಧಾರಚಕ್ರವು ಶೋಧನೆಯಾಗುತ್ತಾ ಎಂದರೆ ಅಧಿಕಾರಿಯಲ್ಲಿ ಶುದ್ಧಸತ್ವಗುಣಕ್ಕೆ ಇದ್ದ ಬಂಧನಗಳು ನಿವಾರಣೆಯಾಗಲು ಉಪಕ್ರಮಿಸುವ ಕಾಲ ಒದಗಿತೆಂಬ ತಾತ್ಪರ್ಯವಾಗಿರುವುದು. ಇಂತಹ ಶುದ್ಧಸತ್ವಗುಣದ ಭೂಮಿಕೆಯ ಉದಯವನ್ನು ಪಡೆಯುವುದು ಅವಿದ್ಯೆಯು ನಾಶವಾಗಿ ಈಶ್ವರಸೋಪಾನವನ್ನು ಪಡೆಯುವ ಸೂಚನೆಯಾಗಿರುತ್ತದೆ. ಈ ಸೂಚನೆಯ ತಾತ್ಪರ್ಯವೇ ತ್ರಿಕಾಲಜ್ಞಾನದ ತತ್ವದಲ್ಲಿರುವ ತ್ರಿಜಟೆಯ ಸ್ವಪ್ನವಾಗಿರುವುದು. ಈ ತ್ರಿಜಟೆಯನ್ನು ತ್ರಿಕಾಲಜ್ಞಾನದ ತತ್ವಕ್ಕೆ ಅನ್ವಯಮಾಡಿರುವುದನ್ನು ಯುದ್ಧಕಾಂಡದಲ್ಲಿ ವಿವರಮಾಡಿರುವುದು.

**ರಾ||** ಹನುಮಂತನು ಸೀತಾದೇವಿಯನ್ನು ತನ್ನ ಹೆಗಲಮೇಲೆ ಕೂರಿಸಿಕೊಂಡು ಶ್ರೀರಾಮನ ಬಳಿಗೆ ಕರೆದುಕೊಂಡು ಹೋಗುವುದಾಗಿ ಹೇಳಿದನು. ಸೀತಾದೇವಿಯು ತನ್ನನ್ನು ಹನುಮಂತನು ಕರೆದುಕೊಂಡು ಹೋಗುವಾಗ ರಾಕ್ಷಸರು ಅಡ್ಡಗಟ್ಟಿ ಯುದ್ಧ

ಮಾಡುವ ಸಂದರ್ಭ ಬಂದರೆ ತಾನು ಪುನಃ ರಾಕ್ಷಸರ ವಶವಾಗಬಹುದೆಂದು ಯೋಚಿಸಿ ಶ್ರೀರಾಮನನ್ನು ಲಂಕೆಗೆ ಕರೆದುಕೊಂಡು ಬರುವುದೇ ಅತ್ಯಂತ ಗಂಭೀರವೆಂದು ಹೇಳಿದಳು.

ತತ್ವ|| ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿಯಲ್ಲಿ "ನಸ್ನಾನೇನ ನದಾನೇನ ಪ್ರಾಣಾಯಾಮಶತೇನಚ" ಎಂಬದಾಗಿ ಹೇಳಿರುವಂತೆ ಹನುಮಂತನ ಕಾರ್ಯದ ತತ್ವವಾದ ಪ್ರಾಣಾಯಾಮದಿಂದಲೇ ಈಶ್ವರಸೋಪಾನವನ್ನು ಪಡೆಯಲು ಆಗುವದಿಲ್ಲ. ಆದರೆ ಶ್ವಾಸೋಚ್ಛ್ವಾಸನಿರೋಧವಿಲ್ಲದೆ ಸೀತಾ ರಾಮರು ಸೇರುವಿಕೆಯಾದ ಸಮಾಧಿ ಮತ್ತು ಉನ್ಮನೀಸ್ವರೂಪವು ಉಂಟಾಗುವುದಿಲ್ಲ. ಆದುದರಿಂದ ಸೀತಾದೇವಿಯನ್ನು ಹನುಮಂತನು ಕರೆದುಕೊಂಡು ಹೋಗಿ ಶ್ರೀರಾಮನೊಡನೆ ಸೇರಿಸಬಲ್ಲನು. ಆದರೆ ರಾವಣಾದಿಗಳೆಂದರೆ ವಾಸನಾವೃತ್ತಿಗಳನ್ನು ಶ್ವಾಸೋಚ್ಛ್ವಾಸಸ್ವರೂಪನಾದ ಹನುಮಂತ ನೊಬ್ಬನೇ ನಿಗ್ರಹಿಸಲು ಶಕ್ತನಲ್ಲ. ಅಂದರೆ ಶ್ವಾಸೋಚ್ಛ್ವಾಸವನ್ನು ಬಂಧಿಸಿದ ಮಾತ್ರ ದಿಂದಲೇ ಬುದ್ಧಿಗೆ ಏಕಾಕಾರವೃತ್ತಿಯು ಬಂದು ವಾಸನಾವೃತ್ತಿಯು ನಾಶವಾಗಲಾರ ದಾದುದರಿಂದ ವಾಸನಾವೃತ್ತಿಯನ್ನು ನಾಶಮಾಡಬಲ್ಲವನಾದ ಬುದ್ಧಿತತ್ವದಲ್ಲಿರುವ ಶ್ರೀರಾಮನನ್ನು ಕರೆದುಕೊಂಡು ಬರುವುದೇ ಗಂಭೀರವಾಗಿರುವುದೆಂದು ಸೀತಾದೇವಿಯು ಹೇಳಿದುದರ ತಾತ್ಪರ್ಯವಾಗಿರುತ್ತದೆ. ಈ ಅಂಶದ ಮುಖ್ಯತತ್ವವೇನೆಂದರೆ—ಸೀತಾ ರಾಮರು ಸೇರುವ ತತ್ವವಾದ ಈಶ್ವರತ್ವದ ಸೋಪಾನವಾಗಬೇಕಾದರೆ ಬುದ್ಧಿಯಲ್ಲಿರುವ ಬ್ರಹ್ಮಾತ್ಮೈಕ್ಯಜ್ಞಾನದ ಕಾರ್ಯವೇ ಪ್ರಧಾನವಾಗಿ ಶ್ವಾಸನಿರೋಧವು ಇದಕ್ಕೆ ಸಹಾಯಕ ವಾಗಿದ್ದು ಸಮಾಧಿಯ ಅನುಷ್ಠಾನಮಾಡಬೇಕೆಂಬ ತಾತ್ಪರ್ಯವಾಗಿರುತ್ತದೆ. ಈ ತತ್ವಾರ್ಥದ ಸೂಚನೆಯೇ ಸೀತಾದೇವಿಯು ಶ್ರೀರಾಮನನ್ನು ಕರೆತರುವುದೇ ಗಂಭೀರವಾಗಿರುವುದೆಂದು ಹೇಳಿದುದಾಗಿರುವುದು.

## ೬ನೆಯ ಪ್ರಕರಣ.

**ಹನುಮಂತನು ಜಂಬುಮಾಲಿ, ವಿರೂಪಾಕ್ಷ, ಯೂಪಾಕ್ಷ, ಭಾಸ ಕರ್ಣ ಮತ್ತು ಪ್ರಘಸರೆಂಬ ರಾಕ್ಷಸ ರನ್ನು ನಿಗ್ರಹಿಸಿದುದು.**

**ಶಕ್ತಿಚಲನಪ್ರಾಣಾಯಾಮದಿಂದ ರಾಳಿಸ್ವಭಾವ, ಕ್ರೂರದೃಷ್ಟಿ, ಕೋಪ, ಕಠಿಣತ್ವ ಮತ್ತು ಹೊಟ್ಟೆಬಾಕತನಗಳು ತಗ್ಗುವ ವಿಚಾರ.**

**ರಾ||** ಸೀತಾದೇವಿಯ ಅಪ್ಪಣೆಯನ್ನು ಹೊಂದಿ ಹನುಮಂತನು ಅಶೋಕವನವನ್ನು ಭಂಗಪಡಿಸುತ್ತಿರಲು, ರಾವಣನ ಪ್ರೇರಣೆಯಿಂದ ಬಂದ ಜಂಬುಮಾಲಿ, ವಿರೂಪಾಕ್ಷ, ಯೂಪಾಕ್ಷ, ಪ್ರಘಸ, ಭಾಸಕರ್ಣ, ದುರ್ಧರ್ಷ ಮುಂತಾದ ಸೇನಾಪತಿಗಳನ್ನು ಕೊಂದನು.

**ತತ್ತ್ವ॥** ಜಂಬುಮಾಲಿಯೆಂಬುವವನು ಪ್ರಹಸ್ತನ ಮಗನು. ಪ್ರಹಸ್ತನೆಂದರೆ— ಭಯಂಕರಸ್ವರೂಪನೆಂದು.ಅರ್ಥವಾಗುತ್ತದೆ. ಇದರ ವಿವರವು ಮುಂದೆ ಯುದ್ಧಕಾಂಡ ದಲ್ಲಿ ಬರುವುದು. ಇಂತಹ ಭಯಂಕರದ ತತ್ತ್ವದಲ್ಲಿರುವವನ ಮಗನಾದ ಜಂಬುಮಾಲಿ ಯೆಂದರೆ, ರಕ್ತಿಮದ ಸ್ವರೂಪನು. ಹೇಗೆಂದರೆ—"ಜಮತಿ, ವೀಕ್ಷತೆ, ಗ್ರಸತಿ, ಜಂಬುಃ (ಜಮು ಅದನೆ)" ವೀಕ್ಷಣೆಯ ಗಮನವನ್ನು ಗ್ರಾಸಮಾಡುವುದು. ಇಂತಹ ವೀಕ್ಷಣೆಯ ಗಮನವನ್ನು ಗ್ರಾಸಮಾಡುವುದನ್ನು ಮಾಲ ಎಂದರೆ ಧರಿಸಿರತಕ್ಕವನು ಜಂಬುಮಾಲಿ. ಅತ್ಯಂತ ರಣಗೆಂಪಾದ ಪದಾರ್ಥಗಳು ರೌಳಿಯಾಗಿರುವುದರಿಂದ ನೋಡುವುದಕ್ಕೆ ಆಗ ದಂತೆ ನಮ್ಮ ದೃಷ್ಟಿಯನ್ನೇ ಗ್ರಾಸಮಾಡುತ್ತವೆ. ಆದುದರಿಂದ ಜಂಬುಮಾಲಿಯೆಂದರೆ ರಕ್ತಿಮೆಯಸ್ವರೂಪ ಅಥವಾ ರೌಳಿಸ್ವಭಾವ. ಈ ರೌಳಿಸ್ವಭಾವದ ಅನ್ವಯಕ್ಕೆ ಸರಿಯಾಗಿ ಜಂಬುಮಾಲಿಯ ಉಡುಪುಗಳೂ ಆಭರಣಗಳೂ ರಕ್ತದಂತೆ ಅತ್ಯಂತ ಕೆಂಪಾಗಿ ನೋಡುವು ದಕ್ಕೆ ಆಗದಂತೆ ಇದ್ದುವು. ಇಂತಹ ರೌಳಿ ಅಥವಾ ರಕ್ತಿಮೆಯ ತತ್ತ್ವದವನಾದ ಜಂಬು ಮಾಲಿಯನ್ನು ಹನುಮಂತನು ನಿಗ್ರಹಿಸಿದನೆಂದರೆ—ಶಕ್ತಿಚಲನಪ್ರಾಣಾಯಾಮವನ್ನು ಸ್ತಿಮಿತಕ್ಕೆ ತಂದುಕೊಳ್ಳುವ ಅಧಿಕಾರಿಯಲ್ಲಿ ರೌಳಿಸ್ವಭಾವವು ಹೋಗಿ ಸತ್ತ್ವಾಪತ್ತಿಯು ತಲೆ ದೋರುವುದೆಂಬ ತತ್ತ್ವಾರ್ಥವಾಗಿರುತ್ತದೆ. ಈ ತತ್ತ್ವಾರ್ಥಕ್ಕೆ ಅನುಸಾರವಾಗಿ ಪತಂಜಲಿ ಮಹರ್ಷಿಗಳು ಯೋಗಸೂತ್ರದಲ್ಲಿ "ತತಃ ಕ್ಷೀಯತೆ ಪ್ರಕಾಶಾವರಣಂ" ಪ್ರಾಣಾಯಾ ಮದ ದೆಶೆಯಿಂದ ಚಿತ್ತದಲ್ಲಿನ ಸಾತ್ತ್ವಿಕಸ್ವಭಾವಕ್ಕೆ ಸುತ್ತಿಕೊಂಡಿರುವ ಮಲರೂಪವಾದ ಕ್ಲೇಶವು ನಶಿಸುವುದೆಂದು ಹೇಳಿರುತ್ತಾರೆ.

ಈ ಯೋಗಸೂತ್ರದ ತಾತ್ಪರ್ಯಕ್ಕನುಸಾರವಾಗಿಯೇ ಹನುಮಂತನು ದುರ್ಧರ್ಷ, ಯೂಪಾಕ್ಷ, ಮುಂತಾದ ಸೇನಾಪತಿಗಳನ್ನು ಸಹ ಕೊಂದ ತತ್ತ್ವವಾಗಿರುತ್ತದೆ. ವಿರೂ ಪಾಕ್ಷನೆಂದರೆ—ಕ್ರೌರ್ಯದಿಂದ ವಿಕಾರವಾಗಿ ನೋಡುವುದು. ಈ ಸ್ವಭಾವದವನನ್ನು ಹನು ಮಂತನು ಕೊಂದನೆಂದರೆ—ಪ್ರಾಣಾಯಾಮದಿಂದ ಕ್ರೂರವಾದ ನೋಟವು ಹೋಗಿ ಸೌಮ್ಯವಾದ ದೃಷ್ಟಿಯುಂಟಾಗುವುದೆಂದರ್ಥ.

ಯೂಪಾಕ್ಷನೆಂದರೆ—ಕೋಪದಿಂದ ಕಣ್ಣುಗಳನ್ನು ಕಂಭದೋಪಾದಿಯಲ್ಲಿ ಮೇಲಕ್ಕೆ ನಿಡರಿಸಿಕೊಂಡು ನೋಡುವ ಸ್ವಭಾವ. ಪ್ರಾಣಾಯಾಮದಿಂದ ಈ ಸ್ವಭಾವವು ತಗ್ಗಿ ಸೌಮ್ಯದೃಷ್ಟಿಯುಂಟಾಗುವ ತತ್ತ್ವವೇ ಹನುಮಂತನು ಯೂಪಾಕ್ಷನನ್ನು ಕೊಂದುದು.

ಭಾಸಕರ್ಣನೆಂದರೆ—ಪ್ರಕಾಶಮಾನವಾದ ಕಿವಿಯೆಂಬ ಅರ್ಥ. ಪ್ರಕಾಶಮಾನ ವಾದ ಕಿವಿಯೆಂದರೆ, ಬಹಳ ಕಠೋರವಾದ ಅಥವಾ ದೊಡ್ಡ ಶಬ್ದಗಳನ್ನು ಕೇಳಬಲ್ಲ ಕಿವಿ ಯೆಂದಾಗುತ್ತದೆ. ಪ್ರಾಣಾಯಾಮದಿಂದ ಶ್ರೋತ್ರೇಂದ್ರಿಯವೂ ಚಕ್ಷುರಿಂದ್ರಿಯವೂ ಅತ್ಯಂತ ಸೂಕ್ಷ್ಮವಾದರೂ, ಶ್ರೋತ್ರೇಂದ್ರಿಯವು ಕಠೋರವಾದ ಶಬ್ದವನ್ನು ಸಹಿಸ

ಲಾರದು. ಅಂದರೆ ಪ್ರಾಣಾಯಾಮ ಮಾಡತಕ್ಕವರು ಅತ್ಯಂತ ಪ್ರಕಾಶಮಾನವಾದ ಬೆಳಕನ್ನೂ ದೊಡ್ಡ ಶಬ್ದಗಳನ್ನೂ ಸಹಿಸಲಾರರು.

ದುರ್ಧರ್ಷನೆಂದರೆ—ಅತ್ಯಂತ ಅಸಹ್ಯಸ್ವಭಾವ. ಅಲ್ಲದೆ ಅತ್ಯಂತ ದುಷ್ಟತನ ಅಥವಾ ಕೆಟ್ಟಸ್ವಭಾವವೆಂದೂ ಅರ್ಥವಾಗುವುದು. ಶಕ್ತಿಚಲನಪ್ರಾಣಾಯಾಮದಿಂದ ದುಷ್ಟಸ್ವಭಾವವು ತಗ್ಗಿ ಸೌಮ್ಯತ್ವ ಬರುವುದಲ್ಲದೆ ನಿರ್ಮಲತ್ವವೂ ಬರುವ ತತ್ವವೇ ಹನುಮಂತನು ದುರ್ಧರ್ಷನನ್ನು ಕೊಂದ ತಾತ್ಪರ್ಯವಾಗಿರುತ್ತದೆ.

ಪ್ರಘಸನೆಂದರೆ—"ಘಸಲ್ ಆದನೆ (ಅದ ಭಕ್ಷಣೆ)" ಚೆನ್ನಾಗಿ ತಿನ್ನುವವನೆಂದರೆ, ಅತಿಯಾಗಿ ತಿನ್ನುವವನು ಅಥವಾ ಹೊಟ್ಟೆಬಾಕನೆಂದು ಅರ್ಥ. ಶಕ್ತಿಚಲನಪ್ರಾಣಾಯಾಮದ ಸಿದ್ಧಿಯಿಂದ ಹೊಟ್ಟೆಬಾಕತನ ಹೋಗಿ ಮಿತಾಹಾರಿಯಾಗುತ್ತಾನೆ.

ಈ ಮೇಲಿನ ಅಂಶಗಳ ಮುಖ್ಯತಾತ್ಪರ್ಯವೇನೆಂದರೆ—"ತತಃ ಕ್ಷೀಯತೆ ಪ್ರಕಾಶಾವರಣಂ" ಎಂಬ ಯೋಗಸೂತ್ರದಂತೆ ಪ್ರಾಣಾಯಾಮವು ಸಿದ್ಧಿಸುವುದರಿಂದ ಸತ್ವಾಪತ್ತಿಯು ಬ್ರಹ್ಮವಿದ್ಯಾಧಿಕಾರಿಯಲ್ಲಿ ಉಂಟಾಗುವುದು.

## ೭ನೆಯ ಪ್ರಕರಣ.

**ಹನುಮಂತನು ಅಕ್ಷಕುಮಾರನನ್ನು ನಿಗ್ರಹಿಸಿದುದು.**



**ಶಕ್ತಿಚಲನ ಪ್ರಾಣಾಯಾಮದಿಂದ ಸತ್ವಾಪತ್ತಿ ಬಂದು ಅವಿದ್ಯಾ ಆಗಾಮಿ ವಾಸನೆಯು ತಗ್ಗುವ ವಿಚಾರ.**

**ರಾ||** ರಾವಣನ ಸೇನಾಪತಿಗಳ ಮಕ್ಕಳಾದ ಜಂಬುಮಾಲಿ ಮುಂತಾದವರನ್ನು ಹನುಮಂತನು ಕೊಲ್ಲಲು ರಾವಣನು ತನ್ನ ಮಗನಾದ ಅಕ್ಷಕುಮಾರನನ್ನು ಕಳುಹಿಸಿದನು. ಅಕ್ಷಕುಮಾರನು ಯುದ್ಧಕ್ಕೆ ಬರಲು ಹನುಮಂತನು ಅವನನ್ನು ನಿಗ್ರಹಿಸಿದನು.

**ತತ್ವ||** ರಾವಣನ ಮಗನಾದ ಅಕ್ಷಕುಮಾರನು ಆಗಾಮಿವಾಸನೆಯ ತತ್ವದವನಾಗಿರುತ್ತಾನೆ. ಅವಿದ್ಯಾರಾಜನಾಗಿಯೂ, ವಿಕ್ಷೇಪಶಕ್ತಿಸ್ವರೂಪದ ಮತ್ತು ರಜೋಗುಣದ ಪ್ರತಿಬಿಂಬಚೈತನ್ಯದ ತತ್ವದವನಾಗಿಯೂ ಇರುವ ರಾವಣೇಶ್ವರನಿಗೆ ಅಕ್ಷಕುಮಾರ, ಅತಿಕಾಯ, ಇಂದ್ರಜಿತು ಎಂಬ ಮೂವರು ಮಕ್ಕಳು. ಈ ಮೂವರು ಮಕ್ಕಳಲ್ಲಿ ಯುವರಾಜನಾದ ಇಂದ್ರಜಿತು ಭೋಗಶಕ್ತಿಯಾಗಿಯೂ, ಅತಿಕಾಯನು ಅವಿದ್ಯಾಕಾರ್ಯಗಳನ್ನೆಲ್ಲಾ ಒಂದಕ್ಕೊಂದು ಜೋಡಿಸಿ ಸಮ್ಮೇಳನಮಾಡಿ ಪುಷ್ಟಿಯನ್ನು

ಕೊಡುವ ಶಕ್ತಿಯಾಗಿಯೂ, ಅಕ್ಷಕುಮಾರನು ಪ್ರಾರಬ್ಧಕರ್ಮದ ವಾಸನೆಯ ಫಲವನ್ನು ಶೇಖರಮಾಡಿಕೊಂಡು ಚಿರಕಾಲ ಕಾಪಾಡುವ ಶಕ್ತಿಯಾಗಿಯೂ ಇರುತ್ತಾರೆ. ಇಂದ್ರಜಿತು ಮತ್ತು ಅತಿಕಾಯರ ತತ್ವಗಳು ಯುದ್ಧಕಾಂಡದಲ್ಲಿ ಅವರವರ ಯುದ್ಧಸಂದರ್ಭಗಳಲ್ಲಿ ಬರುವುವು. ಪ್ರಕೃತಕ್ಕೆ ಅಕ್ಷಕುಮಾರನ ವಿಚಾರವನ್ನು ತೆಗೆದುಕೊಳ್ಳೋಣ. ಅಕ್ಷ ಕುಮಾರನನ್ನು ಪ್ರಾರಬ್ಧಕರ್ಮದ ಫಲವನ್ನು ಶೇಖರಮಾಡುವ ಶಕ್ತಿಯ ತತ್ವದವನೆಂದು ಮೇಲೆ ಹೇಳಿರುವುದಷ್ಟೆ! ಅವಿದ್ಯಾಕಾರ್ಯಗಳ ಸ್ವರೂಪವೇನು? ಇವುಗಳ ಫಲವನ್ನು ಶೇಖರಮಾಡುವುದೆಂದರೇನು? ಎಂಬುದನ್ನು ವಿಚಾರಮಾಡೋಣ. ಭ್ರಾಂತಿ ಬಂದು ಬಹಿರ್ವ್ಯಾಪಾರದ ಬಂಧನಕ್ಕೆ ಸಿಕ್ಕಿ, ಬುದ್ಧಿಮನಸ್ಸುಗಳ ವೃತ್ತಿಪ್ರಸರಣೆಯು ಇಂದ್ರಿಯಗಳ ಮೂಲಕ ಬಹಿರ್ವ್ಯಾಪಾರಕ್ಕೆ ಪ್ರವಹಿಸುತ್ತಿರುವುದೇ ಅವಿದ್ಯೆಯ ಕಾರ್ಯವೆಂದು ಹಿಂದೆ ತಿಳಿಸಿತಷ್ಟೆ! ಈ ರೀತಿಯಾಗಿ ಬಹಿರ್ವ್ಯಾಪಾರಕ್ಕೆ ಪ್ರವಹಿಸಿ ಅಲ್ಲಾಗತಕ್ಕ ಕಾರ್ಯದ ಫಲಿತಾರ್ಥದ ವಾಸನೆಯನ್ನು ಶೇಖರಿಸಿಕೊಂಡು ಕಾಪಾಡುವ ಶಕ್ತಿಗೆ ಅಕ್ಷಕುಮಾರ ಅಥವಾ ಆಗಾಮಿವಾಸನೆಯೆಂದು ಹೆಸರು. ಒ ವ್ಯಾಪಾರವನ್ನುಂಟುಮಾಡಲು ಕಾರಣವಾದ ಅವಿದ್ಯೆಗೆ ಪ್ರಧಾನವೂ ವಿಕ್ಷೇಪಶಕ್ತಿಯೂ ಆದ ರಾವಣನ ಕಾರ್ಯಕ್ಕೆ ವಾಸನಾ ವೃತ್ತಿಯೆಂದು ಹೆಸರು.

ಈ ವಾಸನಾವೃತ್ತಿಯ ವಿಚಾರವನ್ನು ಒಂದು ಉದಾಹರಣೆಯ ಮೂಲಕ ತಿಳಿಸಿದರೆ ಮನಸ್ಸಿಗೆ ಮುಂದಟ್ಟಾಗುವುದರಿಂದ ಶಾಸ್ತ್ರೋಕ್ತವಾಗಿ ಕಟ್ಟಿರುವ ಒಂದು ದೇವಸ್ಥಾನದ ಉದಾಹರಣೆಯನ್ನು ತೆಗೆದುಕೊಂಡು ಈ ದೇವಸ್ಥಾನವನ್ನು ಮನುಷ್ಯದೇಹಕ್ಕೆ ಹೋಲಿಸಿ ಮನುಷ್ಯದೇಹದಲ್ಲಿ ಯಾವ ಸ್ಥಳದಿಂದ ವಾಸನಾವೃತ್ತಿಯು ಹೊರಟು ಪ್ರಸರಣೆಯಾಗು ತ್ತದೆ. ಮತ್ತು ಇದು ಪುನಃ ಆಗಾಮಿವಾಸನಾರೂಪವಾಗಿ ಬಂದು ಯಾವ ಸ್ಥಳದಲ್ಲಿ ಸೇರುವುದೆಂಬ ವಿಚಾರಗಳನ್ನು ವಿಮರ್ಶೆಮಾಡಿ ತಿಳಿದುಕೊಳ್ಳೋಣ. ಈ ಉದಾಹರಣೆಯ ಸೌಕರ್ಯಕ್ಕೆ ದೇವಸ್ಥಾನದ ಚಿತ್ರಪಠವನ್ನು ಕೊಟ್ಟಿರುವುದು.

ದೇವಸ್ಥಾನವನ್ನು ಮನಸ್ಸಿಗೆ ಬಂದಂತೆ ಕಟ್ಟದೆ ಒಂದು ನಿಬಂಧನೆಯಲ್ಲಿಯೇ ಕಟ್ಟ ಬೇಕೆಂದು ಪೂರ್ವಿಕರು ವಿಧಾಯಕಮಾಡಿರುತ್ತಾರೆ. ಈರೀತಿ ವಿಧಾಯಕಮಾಡಿರುವ ಶಿಲ್ಪಿಶಾಸ್ತ್ರವು ಮನುಷ್ಯನ ದೇಹ ಮತ್ತು ಮೋಕ್ಷಮಾರ್ಗದ ತತ್ವಾರ್ಥಗಳನ್ನು ಅನುಸರಿ ಸಿರುತ್ತದೆ. ಕುಂಡಲಿನೀ ಉತ್ಥಾಪನೆಯಾಗಿರುವುದನ್ನು ತೋರಿಸಿರುವ ಚಿತ್ರಪಠ ಮತ್ತು ತಾವರೇಗಿಡದ ಚಿತ್ರಪಠಗಳ ತತ್ವವೂ ದೇವಸ್ಥಾನದ ಚಿತ್ರಪಠದ ತತ್ವಕ್ಕೆ ಹೋಲಿಕೆ ಯಾಗಿಯೇ ಇರುತ್ತದೆ. ದೇವಸ್ಥಾನದ ಗೋಪುರದ ಬಾಗಿಲಿನಿಂದ ಗರ್ಭಗುಡಿಯವರೆಗೆ ೭, ೫ ಅಥವಾ ೩ ಬಾಗಿಲುಗಳಿರುವುವು. ಏಳುಬಾಗಿಲುಗಳಿದ್ದರೆ ಸಪ್ತಚಕ್ರಗಳು ಅಥವಾ ಸಪ್ತಲೋಕಗಳಿಗೆ ಅನ್ವಯವಾಗುವುದು. ಐದು ಬಾಗಿಲುಗಳಿದ್ದರೆ ಪಂಚಕೋಶಗಳಿಗೆ

ಅಂತಃಕರಣ.
(ಬುದ್ಧಿ- ಮನಸ್ಸು-ಅಹಂಕಾರ-ಚಿತ್ತ.)

ಮೂಲವಿಗ್ರಹ ಅಥವಾ ಸಹಸ್ರಾರ



ಕಮಂ

ಆಜ್ಞಾ ಚಕ್ರದ ಬಾಗಿಲು

ವಿಶುದ್ಧ ಚಕ್ರದ ಬಾಗಿಲು.

ಅನಾಹತ ಚಕ್ರದ ಬಾಗಿಲು.

ಮಣಿಪೂರ ಚಕ್ರದ ಬಾಗಿಲು.

ಸ್ವಾಧಿಷ್ಠಾನ ಚಕ್ರದ ಬಾಗಿಲು.



ಕುಂಡಲಿನಿ (ಸುರಸೆ).

ಮೂಲಾಧಾರ ಚಕ್ರ. (ಲಂಕ)

ದೇವಸ್ಥಾನದ ಚಿತ್ರ.

ಅನ್ವಯವಾಗುವುದು. ಮೂರು ಬಾಗಿಲುಗಳಿದ್ದರೆ ಓಂಕಾರದಲ್ಲಿನ ಅಕಾರ ಉಕಾರ ಮಕಾರ ಅಥವಾ ಭೂರ್ಭುವಸ್ಸುವಃ (ಸ್ವರ್ಗ, ಮರ್ತ್ಯ, ಪಾತಾಳ) ಎಂಬ ತತ್ವಕ್ಕೆ ಅನ್ವಯವಾಗುವುದು.

ಪರಮಾತ್ಮಸ್ವರೂಪವಾದ ಮೂಲವಿಗ್ರಹವು ಏಳು, ಐದು, ಅಥವಾ ಮೂರು ಬಾಗಿಲುಗಳಿಗಿಂತಲೂ ಒಳಗಡೆ ಗರ್ಭಗುಡಿಯಲ್ಲಿರುವುದು. ಶಾಸ್ತ್ರೋಕ್ತವಾಗಿರುವ ಯಾವ ದೇವಸ್ಥಾನವನ್ನು ನೋಡಿದರೂ, ಏಳು, ಐದು, ಅಥವಾ ಮೂರು ಬಾಗಿಲುಗಳಿರುತ್ತವೆಯೇ ಹೊರತು ಸಮಸಂಖ್ಯೆಯ ಬಾಗಿಲುಗಳು ಇರುವುದಿಲ್ಲ. ದೇವಸ್ಥಾನದೊಳಗೆ ಮೂಲವಿಗ್ರಹಕ್ಕೆ ಬಲಭಾಗದಲ್ಲಿ ಪ್ರದಕ್ಷಿಣೆಗೋಸ್ಕರ ಮಾಡಿರುವ ಸ್ಥಳವು ಸೂರ್ಯ ಅಥವಾ ಪಿಂಗಳ ನಾಡಿಯಾಗಿರುವುದು. ಮೂಲವಿಗ್ರಹಕ್ಕೆ ಎಡಭಾಗದಲ್ಲಿ ಪ್ರದಕ್ಷಿಣೆಗೆ ಮಾಡಿರುವ ಸ್ಥಳವೇ ಚಂದ್ರ ಅಥವಾ ಇಡಾನಾಡಿಯೆನಿಸಿಕೊಳ್ಳುವುದು. ಈ ರೀತಿ ಇರುವುದನ್ನು ಚಿತ್ರಪಟದಲ್ಲಿ ತೋರಿಸಿದೆ. ಅಲ್ಲದೆ ದೇವಸ್ಥಾನದ ಪ್ರಥಮ ಬಾಗಿಲಿನಿಂದ ಗರ್ಭಗುಡಿಯವರೆಗೆ ಏಳು ಬಾಗಿಲುಗಳನ್ನು ತೋರಿಸಿ ಅವುಗಳಿಗೆ ಹೋಲಿಕೆಯಾಗಿರುವ ಏಳು ಚಕ್ರಗಳನ್ನೂ ಬರೆದಿದೆ.

ನಮ್ಮ ದೇಹದಲ್ಲಿ ತಾವರೆಗಿಡದ ನಾಳದಂತೆ ಸುಷುಮ್ನಾನಾಡಿಯು ದೇಹದ ಬೆನ್ನಿನ ಹುರಿಯ ಮಧ್ಯಭಾಗದಲ್ಲಿರುವುದೆಂದು ಹಿಂದೆಯೇ [illegible]ದೆ ಈ ಸುಷುಮ್ನಾನಾಡಿಯ ತತ್ವವು ದೇವಸ್ಥಾನದಲ್ಲಿ ಗರ್ಭಗುಡಿಗೆ ಹೋಗುವ ದಾರಿಯಾಗಿರುತ್ತದೆ. ಮುಖ್ಯವಾಗಿ ಆಗಮಶಾಸ್ತ್ರದ ಸಾರವು ನಮ್ಮ ದೇಹ ಮತ್ತು ಮೋಕ್ಷಮಾರ್ಗದ ತತ್ವಕ್ಕೆ ಹೊಂದಿಕೆಯಾಗುವಂತೆ ಪೂರ್ವದ ಮಹನೀಯರು ಮಾಡಿರುತ್ತಾರೆ. ದೇವಸ್ಥಾನವು ನಮ್ಮ ದೇಹಕ್ಕೆ ಹೋಲಿಕೆಯಾಗಿರುವುದಕ್ಕೆ ಶ್ರುತಿವಾಕ್ಯಗಳೂ ಇರುತ್ತವೆ.

ದೇಹೋ ದೇವಾಲಯಃ ಪ್ರೋಕ್ತೋ ಜೀವೋ ದೇವಸ್ಸದಾಶಿವಃ |

ಎಂದರೆ ದೇಹವೇ ದೇವಾಲಯವು. ಜೀವಾತ್ಮನೇ ಪರಮಾತ್ಮನೆಂಬದಾಗಿ ಸ್ಕಂದೋಪನಿಷತ್ತಿನಲ್ಲಿ ಹೇಳಿರುವುದು. ಅಲ್ಲದೆ "ದೇಹಂ ವಿಷ್ಣ್ವಾಲಯಂ ಪ್ರೋಕ್ತಂ" ಎಂದರೆ ದೇಹವೇ ವಿಷ್ಣುದೇವಸ್ಥಾನವೆಂದು ಯೋಗಶಿಖೋಪನಿಷತ್ತಿನಲ್ಲಿ ಹೇಳಿರುವುದು. ಆದುದರಿಂದ ನಮ್ಮ ದೇಹವನ್ನು ದೇವಸ್ಥಾನಕ್ಕೆ ಹೋಲಿಸಿ ನಮ್ಮಲ್ಲಿ ನಡೆಯುವ ಅವಿದ್ಯೆಯ ಕಾರ್ಯಗಳನ್ನು ದೇವಸ್ಥಾನದ ಉದಾಹರಣೆಯ ಮೂಲಕ ತಕ್ಕಮಟ್ಟಿಗೆ ತಿಳಿದುಕೊಳ್ಳೋಣ.

ಅವಿದ್ಯೆಯಸ್ವರೂಪವಾದ ರಜೋಗುಣ ತಮೋಗುಣ ಮತ್ತು ಮಲಿನಸತ್ವಗುಣಗಳಿಗೆ ವಾಸಸ್ಥಾನವು ಮೂಲಾಧಾರಚಕ್ರವೆಂದು ಹಿಂದಿನ ಪ್ರಕರಣಗಳಲ್ಲಿಯೇ ತಿಳಿಸಿರುವುದು. ಈ ಮೂಲಾಧಾರಚಕ್ರಪ್ರದೇಶವನ್ನು ದೇವಸ್ಥಾನದ ಚಿತ್ರಪಟದಲ್ಲಿ ಗುರುತು

ಮಾಡಿದೆ. ಅವಿದ್ಯೆಯ ವಾಸನಾವೃತ್ತಿಗಳು ಮೂಲಾಧಾರಚಕ್ರದಿಂದ ಪ್ರಾರಂಭವಾಗಿ ಸೂರ್ಯನಾಡಿಯ ಮೂಲಕ ಗರ್ಭಗುಡಿಯ ಹೊರಪ್ರಾಕಾರದಲ್ಲಿರುವ ಅಂತಃಕರಣವನ್ನು ಸೇರುವುವು. ಈ ವಾಸನಾವೃತ್ತಿಗಳು ಅಂತಃಕರಣವನ್ನು ಸೇರಿದ ಕೂಡಲೇ ಅಂತಃಕರಣ ದಲ್ಲಿ ವಿಷಯರೂಪವಾದ ಸಂಕಲ್ಪಗಳು ಪ್ರಾರಂಭವಾಗುವುವು. ಅನಂತರ ಕ್ರಮೇಣ ಇಂದ್ರಿಯಗಳ ಮೂಲಕ ಬಹಿರ್ವ್ಯಾಪಾರ ಪ್ರಾರಂಭವಾಗುವುದು. ವಾಸನಾವೃತ್ತಿಗಳುಂಟಾ ಗುವುದಕ್ಕೆ ಮೊದಲು ಅಂತಃಕರಣವು ಕೊಂಚವಾದರೂ ಅಲೆಯಿಲ್ಲದೆ ತಟಸ್ಥವಾಗಿರುವ ನೀರಿನೋಪಾದಿಯಲ್ಲಿರುತ್ತದೆ. ಯಾವಾಗ ವಾಸನಾವೃತ್ತಿಗಳು ಅಂತಃಕರಣಕ್ಕೆ ಪ್ರವೇಶ ಮಾಡುವುವೋ ಆಗ ನೀರಿನಲ್ಲಿ ಅಲೆಗಳು ಉತ್ಪತ್ತಿಯಾಗಿ ಅಲೆಗಳ ಮೇಲೆ ಅಲೆಗಳುಂಟಾ ಗುವಂತೆ ಅಂತಃಕರಣಕ್ಕೆ ವೃತ್ತಿಗಳುಂಟಾಗಿ ವಿಚ್ಛಿತ್ತಿಇಲ್ಲದೆ ಬಹಿರ್ವ್ಯಾಪಾರವುಂಟಾಗುವುದು.

ಇದುದರಿಂದ ಮೂಲಾಧಾರದಿಂದ ಹೊರಡುವ ಪ್ರಾರಬ್ಧಕರ್ಮರೂಪವಾದ ವಾಸನಾ ವೃತ್ತಿಗಳ ಮತ್ತು ಇಂದ್ರಿಯಗಳ ಆಕರ್ಷಣೆಯ ಶಕ್ತಿಗಳೆರಡೂ ಸೇರಿ ಅಂತಃಕರಣವನ್ನು ಬಂಧಿಸಿರುತ್ತವೆ. ಅಂದರೆ ದೇವಸ್ಥಾನದ ಗರ್ಭಗುಡಿಗೆ ಹೋಗುವ ೨, ೩, ೪, ೫, ೬ನೇ ಬಾಗಿಲುಗಳನ್ನು ಮುಚ್ಚಿದರೆ ದೇವಸ್ಥಾನಕ್ಕೆ ಹೋದವನು ಗರ್ಭಗುಡಿಗೆ ಹೋಗುವ ೫ ಬಾಗಿಲುಗಳ ದಾರಿಯನ್ನು ಮುಚ್ಚಿರುವುದರಿಂದ ದೇವಸ್ಥಾನದೊಳಗೆ ಗರ್ಭಗುಡಿಯ ಹೊರಪ್ರಾಕಾರದಲ್ಲಿಯೇ ಪ್ರದಕ್ಷಿಣೆ ಮಾಡಬೇಕಾಗುತ್ತದಷ್ಟೆ! ಇದರಂತೆ ವಾಸನಾವೃತ್ತಿ ಗಳು ದೇವಸ್ಥಾನದ ಚಿತ್ರಪಟದಲ್ಲಿ ತೋರಿಸಿರುವಂತೆ, ಮೂಲಾಧಾರದಿಂದ ಹೊರಟು ಒಳಗಿನ ಪ್ರಾಕಾರದಲ್ಲಿ ಪ್ರದಕ್ಷಿಣೆಮಾಡಿಕೊಂಡು, ಬಂದು ಪುನಃ ಮೂಲಾಧಾರಚಕ್ರವನ್ನೇ ಸೇರುವುವು. ಗರ್ಭಗುಡಿಯೊಳಕ್ಕೆ ಹೋಗಲು ಅವಕಾಶವಿಲ್ಲದೆ ದೇವಸ್ಥಾನದೊಳಗೆ ವೃಥಾ ಪ್ರದಕ್ಷಿಣೆಮಾಡುತ್ತಿರುವಂತೆ ನಮ್ಮಲ್ಲಿ ಮೂಲಾಧಾರಚಕ್ರದಿಂದ ಹೊರಟ ವಾಸನಾವೃತ್ತಿ ಗಳು ಸೂರ್ಯನಾಡಿಯ ಮೂಲಕ ಅಂತಃಕರಣವನ್ನು ಸೇರಿ, ಅಂತಃಕರಣ ಮತ್ತು ಇಂದ್ರಿಯ ಗಳ ಕಾರ್ಯಮಾಡಿಕೊಂಡು, ಅನಂತರ ಕಾರ್ಯಗಳ ಫಲಿತಾಂಶದ ವಾಸನೆಯಾಗಿ, ಚಂದ್ರ ನಾಡಿಯ ಮೂಲಕ ಪುನಃ ಮೂಲಾಧಾರಚಕ್ರವನ್ನು ಸೇರುವುವು. ಇದೇ ದೇವಸ್ಥಾನದಲ್ಲಿ ಮಾಡುವ ಪ್ರದಕ್ಷಿಣೆಯ ತತ್ವವಾಗಿರುವುದು.

ಮೂಲಾಧಾರಚಕ್ರದಲ್ಲಿ ವಾಸನೆಗಳಿದ್ದು ಅಂತಃಕರಣವನ್ನು ಸೇರುವುವೆಂದು ಮೇಲೆ ತಿಳಿಸಿತಷ್ಟೆ! ಮೂಲಾಧಾರದಲ್ಲಿಯೇ ವಾಸನೆಗಳಿದ್ದು ಬಹಿರ್ವ್ಯಾಪಾರಮಾಡಿಸುವುದು. ಹೇಗೆಂದರೆ—ಮೂಲಾಧಾರಚಕ್ರವೇ ಓಂಕಾರದಲ್ಲಿನ ಅಕಾರವೆಂದು ಶ್ರುತಿಪ್ರಮಾಣಗ ಳೊಡನೆ ಅರಣ್ಯಕಾಂಡದಲ್ಲಿ ಅಗಸ್ತ್ಯಾಶ್ರಮ ಪ್ರಕರಣದಲ್ಲಿ ತಿಳಿಸಿರುವುದು. ಓಂಕಾರದಲ್ಲಿನ ಅಕಾರವು ವಿಶ್ವತ್ವವನ್ನುಂಟುಮಾಡುವುದೆಂದರೆ—ಬಹಿರ್ವ್ಯಾಪಾರವನ್ನುಂಟುಮಾಡುವು ದಾಗಿದೆ. ಬಹಿರ್ವ್ಯಾಪಾರವನ್ನುಂಟುಮಾಡುವುದೇ ವಾಸನಾವೃತ್ತಿಯು.

ಆದುದರಿಂದ, ಮೂಲಾಧಾರಚಕ್ರವೇ ವಾಸನೆಯ ಸ್ಥಳವಾಗಿರುತ್ತದೆ. ಒಂದೇ ರೀತಿ ಯಾಗಿ ಬರುವ ನೀರಿನ ಅಥವಾ ತೈಲದ ಪ್ರವಾಹವು ಆದಿ ಅಂತ್ಯಸ್ಥಳಗಳೆರಡನ್ನೂ ಸೇರಿಸಿ ಕೊಂಡು ಇರುವಂತೆ, ಮೂಲಾಧಾರದಿಂದ ಹೊರಟ ವಾಸನಾವೃತ್ತಿಯು ಮೂಲಾಧಾರಕ್ಕೂ ಅಂತಃಕರಣಕ್ಕೂ ಏಕವಾಗಿರುವ ಅಥವಾ ಸೇರಿಕೊಂಡಿರುವ ಸಂಬಂಧವನ್ನುಂಟುಮಾಡು ತ್ತದೆ. ಇದರಿಂದ ಅಂತಃಕರಣಕ್ಕೂ ಬಹಿರ್ವ್ಯಾಪಾರವುಂಟಾಗುವುದು. ಆದುದರಿಂದ ಅಂತಃಕರಣದ ವ್ಯಾಪಾರವು ತಟಸ್ಥವಾಗಬೇಕಾದರೆ ವಾಸನೆಯೂ ತಟಸ್ಥವಾಗಬೇಕು. ಅಂತಃಕರಣ ಮತ್ತು ವಾಸನೆಗಳೆರಡೂ ನಾಶವಾಗಬೇಕಾದರೆ ಆತ್ಮಸಾಕ್ಷಾತ್ಕಾರವಾಗ ಬೇಕು. ಈ ವಾಸನಾಕ್ಷಯ, ಮನೋನಾಶ ಜ್ಞಾನದ ವಿಚಾರದಲ್ಲಿ ಶ್ರೀವಿದ್ಯಾರಣ್ಯ ರವರು ಜೀವನ್ಮುಕ್ತಿವಿವೇಕ ಗ್ರಂಥವನ್ನು ರಚಿಸಿರುತ್ತಾರೆ.

ದೇವಸ್ಥಾನದಲ್ಲಿ ಪ್ರದಕ್ಷಿಣೆಮಾಡಿದಂತೆ ಮೂಲಾಧಾರದಿಂದ ಪ್ರಾರಂಭವಾದ ವಾಸ ನಾವೃತ್ತಿಗಳು ಸೂರ್ಯನಾಡಿಯ ಮೂಲಕ ಅಂತಃಕರಣವನ್ನು ಸೇರಿ, ಅಂತಃಕರಣದಲ್ಲಿನ ಕಾರ್ಯ ನಡೆದನಂತರ, ಆ ಕಾರ್ಯದ ಫಲಿತಾರ್ಥವು ವಾಸನೆಯ ರೂಪವಾಗಿ ಪುನಃ ಬಂದು ಸೇರುವುದು. ಆದುದರಿಂದ ಪ್ರಪಂಚದ ಸ್ಥಿತಿಗೆ ಸೂರ್ಯಚಂದ್ರರು ಹೇಗೆ ಮುಖ್ಯರೋ ಹಾಗೆಯೇ ವಾಸನಾವ್ಯಾಪಾರಕ್ಕೆ ಮನುಷ್ಯನ ದೇಹದಲ್ಲಿ ಶಕ್ತಿರೂಪದಲ್ಲಿರುವ ಸೂರ್ಯ ಚಂದ್ರನಾಡಿಗಳು ಮುಖ್ಯವಾಗಿವೆ. ಸೂರ್ಯ ಚಂದ್ರನಾಡಿಗಳಲ್ಲಿ ನಡೆಯುತ್ತಿರುವ ವ್ಯಾಪಾರ ವನ್ನು ನಿಲ್ಲಿಸಿ ಮಧ್ಯನಾಡಿಯಾದ ಬ್ರಹ್ಮರಂಧ್ರದಲ್ಲಿ ಬುದ್ಧಿವೃತ್ತಿಯು ಪ್ರವೇಶಿಸಬೇಕೆಂಬ ದಾಗಿ ಶ್ರೀಶಂಕರಭಗವತ್ಪಾದರವರು ಹೇಳಿರುವ "ತ್ರಿಕೂಟನಾಮ್ನಿ ಸ್ತಿಮಿತೇಂತರಂಗೆ" ಮೊದಲಾದ ಶ್ಲೋಕಗಳನ್ನು ಯುದ್ಧಕಾಂಡದಲ್ಲಿ ಶ್ರೀರಾಮಾದಿಗಳು ಲಂಕೆಯನ್ನು ಮುತ್ತಿದ ಪ್ರಕರಣದಲ್ಲಿ ಬರೆದಿದೆ. ಅವುಗಳ ತಾತ್ಪರ್ಯವನ್ನು ಇಲ್ಲಿಗೆ ಅನ್ವಯಮಾಡಿಕೊಳ್ಳ ಬೇಕು. ಅಲ್ಲದೆ ಸೂರ್ಯನು ದ್ರವವನ್ನು ಆಕರ್ಷಿಸುವವನು. ಚಂದ್ರನು ಪುನಃ ವರ್ಷಿಸು ವವನು. ಇದರಂತೆ ಸೂರ್ಯನಾಡಿಯು ವಾಸನಾವೃತ್ತಿಯನ್ನು ಆಕರ್ಷಿಸುವುದು, ಚಂದ್ರನಾಡಿಯು ಪುನಃ ಅದನ್ನು ಅಭಿವೃದ್ಧಿಮಾಡುವುದು. ಅಂದರೆ ವಾಸನಾವೃತ್ತಿಯು ಸೂರ್ಯನಾಡಿಯಲ್ಲಿ ಹೊರಟು ಅಂತಃಕರಣವನ್ನು ಸೇರಿ ಅನಂತರ ಅಂತಃಕರಣವನ್ನು ಕೋಶ ಮತ್ತು ಇಂದ್ರಿಯಗಳ ಮೂಲಕ ವೃತ್ತಿರೂಪವಾಗಿ ಎಳೆದುಕೊಂಡು ನಡೆಯಬೇಕಾದ ಕಾರ್ಯ ಗಳನ್ನು ನಡೆಸಿ ಕಾರ್ಯಗಳ ಫಲಿತಾರ್ಥವು ನಶಿಸದಂತೆ ವಾಸನಾರೂಪವಾಗಿ ಚಂದ್ರನಾಡಿಯ ಮೂಲಕ ಮೂಲಾಧಾರಚಕ್ರಕ್ಕೆ ಪುನಃ ಹಿಂದಿರುಗುವುದು. ಆದುದರಿಂದ ವಾಸನಾ ವ್ಯಾಪಾರಕ್ಕೆ ಸೂರ್ಯ ಚಂದ್ರನಾಡಿಗಳೇ ಪ್ರಧಾನವಾಗಿವೆ.

ಈ ಮೇಲಿನ ಅಂಶಗಳ ತಾತ್ಪರ್ಯಕ್ಕೆ,

ಗಂಗಾ ಯಮುನಯೋ ರ್ಮಧ್ಯೇ ಯೇ ವಸಂತಿ |
ತೇಮೇ ಪ್ರಸನ್ನಾತ್ಮಾನಃ ಚಿರಂಜೀವಿತಂ ವರ್ಧಯಂತೀ ||

ಎಂಬ ಶ್ರುತಿವಾಕ್ಯದ ಅರ್ಥವೂ ಅನ್ವಯವಾಗುವುದು. ಗಂಗಾ ಯಮುನಾ ನದಿಗಳ ಮಧ್ಯೆ ವಾಸಮಾಡತಕ್ಕವರು ಪ್ರಸನ್ನರಾಗಿ ಚಿರಂಜೀವಿತ್ವವು ಅಭಿವೃದ್ಧಿಯಾಗುವಂತೆ ನನ್ನನ್ನು ಆಶೀರ್ವದಿಸಲಿ ಎಂಬದಾಗಿ ಸಾಧಾರಣ ಅರ್ಥವಾಗುವುದು. ಗಂಗಾ ಯಮುನಾ ಮಧ್ಯದಲ್ಲಿರುವ ಯಾರಾದರೂ ಸರಿಯೇ ಅವರಿಂದ ಹೀಗೆ ಆಶೀರ್ವಾದವಮಾಡಿಸಿಕೊಳ್ಳ ಬೇಕೆಂಬ ತಾತ್ಪರ್ಯವಲ್ಲ. ಅಲ್ಲದೆ ಗಂಗಾ ಯಮುನಾ ನದಿಗಳ ಮಧ್ಯದಲ್ಲಿ ವಾಸಮಾಡುವ ಮಹನೀಯರೇ ಮೇಲಿನ ವಿಧವಾಗಿ ಆಶೀರ್ವಾದವಮಾಡಬಲ್ಲರೆಂತಲೂ ಇತರಸ್ಥಳಗಳಲ್ಲಿರುವ ಮಹನೀಯರು ಈ ವಿಧವಾಗಿ ಆಶೀರ್ವಾದ ಮಾಡಲಾರರೆಂಬ ಆಕ್ಷೇಪಣೆ ಬರುವುದು. ಆದುದರಿಂದ ಇದರ ನೈಜವಾದ ಅರ್ಥವೇನೆಂದರೆ, ಗಂಗಾ ಯಮುನಾ ನದಿಗಳೇ ನಮ್ಮ ಲ್ಲಿರುವ ಸೂರ್ಯ ಚಂದ್ರ ನಾಡಿಗಳೆಂದು ಶ್ರುತ್ಯಾಧಾರವಿದೆ. ಗಂಗಾ ಯಮುನಾ ನದಿಗಳ ಮಧ್ಯದಲ್ಲಿ ವಾಸಮಾಡುವುದೆಂದರೆ, ಸೂರ್ಯ ಚಂದ್ರ ಅಥವಾ ಇಡಾ ಪಿಂಗಳ ನಾಡಿಗಳ ಮಧ್ಯದಲ್ಲಿರುವ ಬ್ರಹ್ಮರಂಧ್ರದಲ್ಲಿ "ನಾನು" ಎಂಬುದನ್ನು ಲೀನವಮಾಡಿಕೊಂಡಿರುವವ ರೆಂಬ ತಾತ್ಪರ್ಯ. ಅಂದರೆ ಸಮಾಧಿಯ ಅಭ್ಯಾಸವಮಾಡಿಕೊಂಡಿರುವವರೆಂಬ ತತ್ವಾರ್ಥ ವಾಗಿದೆ. ಇಂತಹವರು ನನಗೆ ಚಿರಂಜೀವಿತ್ವವನ್ನು ಅನುಗ್ರಹವಮಾಡಿಕೊಡಲೆಂದರೆ, ಆತ್ಮ ಸಾಕ್ಷಾತ್ಕಾರವುಂಟಾಗುವಂತೆ ಅನುಗ್ರಹಮಾಡಲೆಂಬುದೇ ಈ ಮೇಲಿನ ಶೃತಿವಾಕ್ಯದ ಅಂತ ರಾರ್ಥವು. ಗಂಗಾ ಯಮುನಾ ನದಿಗಳ ತತ್ವಾರ್ಥವಾದ ನಮ್ಮಲ್ಲಿರುವ ಸೂರ್ಯ ಚಂದ್ರ ನಾಡಿಗಳು ಬಹಿರ್ವ್ಯಾಪಾರಕ್ಕೆ ಪ್ರಧಾನವಾಗಿರುವುವು. ಆದುದರಿಂದ ಬಹಿರ್ವ್ಯಾಪಾರ ದಲ್ಲಿದ್ದರೂ ಬಹಿರ್ವ್ಯಾಪಾರಕ್ಕೆ ಅಂಟದೆ ನಿಸ್ಸಂಗರಾದ ಮುನಿಗಳಿಗೂ ನಾನು ನಮಸ್ಕಾರ ಮಾಡುತ್ತೇನೆಂಬುದೇ "ಗಂಗಾ ಯಮುನಯೋ ರ್ಮುನಿಭ್ಯಶ್ಚ ನಮಃ" ಎಂಬ ಶ್ರುತಿಯ ತತ್ವಾರ್ಥವಾಗಿರುವುದು. ಆದಕಾರಣ ನಮ್ಮಲ್ಲಿರುವ ಮೂಲಾಧಾರಚಕ್ರಪ್ರದೇ ಶವೇ ಅವಿದ್ಯೆಗೆ ಪ್ರಧಾನಸ್ಥಳ ಮತ್ತು ಅವಿದ್ಯೆಯ ಕಾರ್ಯಕ್ಕೆ ಅಂದರೆ ವಾಸನಾವ್ಯಾಪಾರಕ್ಕೆ ಸೂರ್ಯ ಚಂದ್ರ ನಾಡಿಗಳೇ ಪ್ರಧಾನವಾಗಿವೆ.

ಮೇಲೆ ವಿವರಿಸಿರುವ ತತ್ವಾರ್ಥದಂತೆ, ಮೂಲಾಧಾರದಿಂದ ಪ್ರಾರಂಭವಾದ ವಾಸನಾ ವೃತ್ತಿಯು, ಸೂರ್ಯನಾಡಿಯ ಮೂಲಕ ಅಂತಃಕರಣವನ್ನು ಸೇರಿ, ವಾಸನೆಯ ಬಲ ವಿದ್ದಂತೆ, ಅಂತಃಕರಣ ಮತ್ತು ಇಂದ್ರಿಯಗಳ ಕಾರ್ಯ ನಡೆದನಂತರ ಕಾರ್ಯಗಳ ಫಲಿತಾಂಶವು ಆಗಾಮಿವಾಸನೆಯಾಗಿ ಚಂದ್ರನಾಡಿಯ ಮೂಲಕ ಪುನಃ ಮೂಲಾಧಾರಚಕ್ರವನ್ನು ಸೇರುವುದು. ಇದು ಹೇಗೆಂಬುದನ್ನು ವಿದ್ಯುಚ್ಛಕ್ತಿಯ ದೀಪದ ಉದಾಹರಣೆಯನ್ನು ತೆಗೆದುಕೊಂಡು ತಕ್ಕಮಟ್ಟಿಗೆ ವಿವರಿಸೋಣ.

ವಿದ್ಯುಚ್ಛಕ್ತಿಯ ದೀಪದಲ್ಲಿ ಸಂಕಲನ ವ್ಯವಕಲನರೂಪವಾದ ಎರಡು ತಂತಿಗಳಿರುವುವಷ್ಟೆ!—ಸಂಕಲನ ವ್ಯವಕಲನ ರೂಪವಾದ ತಂತಿಗಳಿಲ್ಲದಿದ್ದರೆ ದೀಪವೇ ಇಲ್ಲ. ಇದೇ ರೀತಿಯಾಗಿ ಮೂಲಾಧಾರದಲ್ಲಿರುವ ವಾಸನಾಸ್ವರೂಪವಾದ ವಿದ್ಯುಚ್ಛಕ್ತಿಯ ಪ್ರವಾಹವು ಸಂಕಲನರೂಪವಾದ ಸೂರ್ಯನಾಡಿಯ ಮೂಲಕ ಹೊರಟು ಅಂತಃಕರಣವೆಂಬ ದೀಪವನ್ನು ಸೇರಿ ಪುನಃ ಅಂತಃಕರಣದಿಂದ ಹೊರಟು ವ್ಯವಕಲನರೂಪವಾದ ಚಂದ್ರನಾಡಿಯ ಮಾರ್ಗವಾಗಿ ಮೂಲಾಧಾರಚಕ್ರವನ್ನು ಸೇರುತ್ತಲೇ ಇರುತ್ತದೆ. ಈ ರೀತಿ ಸ್ವಲ್ಪವೂ ವಿಚ್ಛಿತ್ತಿ ಇಲ್ಲದೆ ನೀರಿನ ಪ್ರವಾಹದಂತೆ ಅವಿದ್ಯೆಯ ವಾಸನಾರೂಪವಾದ ವಿದ್ಯುಚ್ಛಕ್ತಿಯ ಪ್ರವಾಹವು ದೀಪದ ಸ್ವರೂಪವಾದ ಅಂತಃಕರಣದ ಮೂಲಕ ಪ್ರದಕ್ಷಿಣೆಮಾಡುತ್ತಿರುವುದೇ ನಮ್ಮ ಜಾಗ್ರತ್ಕಾಲವಾಗಿರುತ್ತದೆ. ಅಂದರೆ ವಿದ್ಯುಚ್ಛಕ್ತಿಯ ಪ್ರವಾಹದಿಂದ ಸಂತತವಾಗಿ ಹೇಗೆ ದೀಪವು ಉರಿಯುತ್ತಿರುವುದೋ ಹಾಗೆ ನಮ್ಮ ಜಾಗ್ರತ್ಸ್ವಪ್ನಕಾಲಗಳಲ್ಲಿ ಸಂತತವಾದ ವಾಸನೆಯ ಪ್ರವಾಹದಿಂದ ಅಂತಃಕರಣವು ಮುಚ್ಚಲ್ಪಟ್ಟಿರುತ್ತದೆಂಬುದನ್ನು ಸ್ವಾನುಭವದಿಂದ ಸರ್ವರೂ ತಿಳಿದುಕೊಳ್ಳಬಹುದು.

ಮೇಲೆ ವಿವರಿಸಿರುವಂತೆ ಜಾಗ್ರತ್ಕಾಲವು ಬಂಧಕವಾಗಿರುವಂತೆ ಸುಷುಪ್ತಿಕಾಲವು ಹೇಗೆ ಬಂಧಕವೆಂಬುದನ್ನೂ ಉದಾಹರಣೆಯ ಮೂಲಕ ತಿಳಿದುಕೊಳ್ಳಬಹುದು. ದೇವಸ್ಥಾನದ ಚಿತ್ರಪಟದಲ್ಲಿ ತೋರಿಸಿರುವಂತೆ, ಮೂಲವಿಗ್ರಹವಿರುವ ಗರ್ಭಗುಡಿಯು ನಮ್ಮಲ್ಲಿರುವ ಸಹಸ್ರಾರಕಮಲ (ಪರಮಾತ್ಮಸ್ಥಾನ) ವಾಗಿರುತ್ತದಷ್ಟೆ! ಈ ಮೂಲವಿಗ್ರಹದ ಸುತ್ತಲೂ ಇರುವ ಗೋಡೆಯೇ ತಮಸ್ಸಿನ ಮೂಲಾಜ್ಞಾನಾವರಣದ ತತ್ವದಲ್ಲಿರುವುದು. ಗರ್ಭಗುಡಿಯ ಗೋಡೆಯ ಹೊರಭಾಗದ ಪಕ್ಕದಲ್ಲಿ ಅಂತಃಕರಣವಿದೆ. ಅಂದರೆ ಅಂತಃಕರಣಕ್ಕೂ ಮೂಲವಿಗ್ರಹವಾದ ಪರಮಾತ್ಮನಿಗೂ ಮಧ್ಯದಲ್ಲಿ ಗೋಡೆಯ ರೂಪವಾದ ಮೂಲಾಜ್ಞಾನಾವರಣವಿದೆ. ಈ ತಮೋರೂಪವಾದ ಗೋಡೆಯು ಅಂತಃಕರಣದ ವೃತ್ತಿಯನ್ನು ಸೆಳೆದು ತನ್ನಲ್ಲಿ ಲೀನಮಾಡಿಕೊಂಡು ನಿದ್ರಾರೂಪವೆನಿಸಿಕೊಳ್ಳುತ್ತದೆ. ಇದೇ ಸುಷುಪ್ತ್ಯವಸ್ಥೆ. ಅಂತಃಕರಣವು ಪರಮಾತ್ಮಸ್ವರೂಪವಾದ ಮೂಲವಿಗ್ರಹದ ಪಕ್ಕದಲ್ಲಿದ್ದರೂ ಮಧ್ಯದಲ್ಲಿರುವ ತಮಸ್ಸಿನ ರೂಪವಾದ ಗೋಡೆಯಿಂದ ಮೂಲವಿಗ್ರಹವಿರುವ ಸ್ಥಳಕ್ಕೆ ಪ್ರವೇಶಿಸಲು ಯತ್ನವಿಲ್ಲ. ತಮೋರೂಪವಾದ ಗೋಡೆಯಿಲ್ಲದೆ ಇದ್ದರೆ ಅಂತಃಕರಣವು ಪರಮಾತ್ಮಸ್ವರೂಪವಾದ ಮೂಲವಿಗ್ರಹದೊಡನೆ ಸೇರಿಕೊಳ್ಳಬಹುದಷ್ಟೆ! ವ್ಯಷ್ಟಿಜೀವರುಗಳಲ್ಲಿ ಈ ಆವರಣವಿರುವುದರಿಂದ ಸುಷುಪ್ತ್ಯವಸ್ಥೆಯ ಸ್ವರೂಪವಾದ ಬಂಧನವಿರುತ್ತದೆ.

ಮೇಲೆ ವಿವರಿಸಿರುವಂತೆ ವಾಸನಾವೃತ್ತಿಗಳ ಕಾಲವಾದ ಜಾಗ್ರದವಸ್ಥೆಯೂ, ಗಾಢಾಂಧಕಾರವಾದ ಸುಷುಪ್ತ್ಯವಸ್ಥೆಯೂ, ಮನುಷ್ಯನಿಗೆ ಬಂಧನಸ್ವರೂಪವಾಗಿರುತ್ತವೆ. ಈ ಎರಡವಸ್ಥೆಗಳೂ ಬಂಧಕವಾದರೆ ಬಂಧನಬಿಡುಗಡೆಯ ಅವಸ್ಥೆ ಯಾವುದೆಂದರೆ,

ಸಮಾಧಿಯ ಅವಸ್ಥೆ. ಈ ಸಮಾಧಿಸ್ಥಿತಿಯುಂಟಾಗುವ ಸ್ವರೂಪವನ್ನು ದೇವಸ್ಥಾನದ ಚಿತ್ರ ಪಠಕ್ಕೆ ಅನ್ವಯಮಾಡಿ ತಿಳಿದುಕೊಳ್ಳೋಣ. ದೇವಸ್ಥಾನದ ಚಿತ್ರಪಠದಲ್ಲಿ ತೋರಿಸಿರುವಂತೆ ಗರ್ಭಗುಡಿಗೆ ಹೋಗುವ ೨, ೩, ೪, ೫, ೬ ನೇ ಬಾಗಿಲುಗಳನ್ನು ತೆಗೆಸಿ ಮೂಲ ವಿಗ್ರಹಸ್ವರೂಪವಾದ ಪರಮಾತ್ಮನಿರುವ ಸ್ಥಳವನ್ನು ಬುದ್ಧಿವೃತ್ತಿಯು ಸೇರಿದರೆ ಸಮಾಧಿ ಸ್ಥಿತಿ ಎನಿಸಿಕೊಳ್ಳುವುದು. ಆದುದರಿಂದ ಸಮಾಧಿಸ್ಥಿತಿಯನ್ನು ಪಡೆಯಲು ೨ನೇ ಬಾಗಿಲನ್ನು ತೆಗೆಸುವುದಲ್ಲದೆ, ಮೂಲಾಧಾರಚಕ್ರಪ್ರದೇಶವನ್ನು ಪ್ರಥಮದಲ್ಲಿ ಶುದ್ಧಿ ಮಾಡಿಕೊಳ್ಳಬೇಕು. ಈ ಕಾರ್ಯಗಳೇ ಹನುಮಂತನು ಸುಂದರಕಾಂಡದಲ್ಲಿ ನಡೆಸಿದ ಕಾರ್ಯಗಳ ತತ್ವವಾಗಿರುವುವು. ದೇವಸ್ಥಾನದ ಚಿತ್ರಪಠದಲ್ಲಿ ತೋರಿಸಿರುವ ೩, ೪, ೫, ೬ ನೇ ಬಾಗಿಲುಗಳನ್ನು ತೆಗೆಸಿಕೊಂಡು ಮೂಲವಿಗ್ರಹದ ಸಮೀಪಕ್ಕೆ ಹೋಗಲು ಲಕ್ಷ್ಮಣ ಹನುಮಂತ ಸುಗ್ರೀವರೊಡಗೂಡಿದ ಶ್ರೀರಾಮನೆಂದರೆ, ವಾಯುಗಳೊಡನೆ ಬುದ್ಧಿ ಮನಸ್ಸಿನ ವೃತ್ತಿಯು ಗರ್ಭಗುಡಿಯ ದಾರಿಯ ತತ್ವವಾದ ಬ್ರಹ್ಮರಂಧ್ರದ ನಾಡಿಯೊಳಗೆ ಪ್ರವೇಶಿಸಿ ಬಾಗಿಲುಗಳ ಸ್ವರೂಪದಲ್ಲಿರುವ ಚಕ್ರಗಳನ್ನು ಭೇದಿಸಿಕೊಂಡು ಮೂಲವಿಗ್ರಹವಾದ ಪರಮಾತ್ಮನಲ್ಲಿ ಲೀನವಾಗಬೇಕು. ಈ ತತ್ವಗಳು ಸಮಾಧಿಯ ತತ್ವವಾದ ಯುದ್ಧಕಾಂಡದ ಕಥೆಯ ತತ್ವಗಳಾಗಿರುತ್ತವೆ.

ದೇವಸ್ಥಾನದ ತತ್ವದಲ್ಲಿ ಪರಮಾತ್ಮಸ್ವರೂಪವಾದ ಮೂಲವಿಗ್ರಹವಿರುವ ಸ್ಥಳಕ್ಕೆ ಹೋಗಬೇಕಾದರೆ, ಮೂಲಾಧಾರದ ಮೂಲಕ ಬಾಗಿಲುಗಳನ್ನು ತೆಗೆಸಿಕೊಂಡು ಹೋಗಬೇಕಲ್ಲದೆ ಬೇರೆ ಯಾವ ದಾರಿಯೂ ಇರುವುದಿಲ್ಲ. ಕಾರಣವೇನೆಂದರೆ, ಪರಮಾತ್ಮಸ್ವರೂಪವಾದ ಮೂಲವಿಗ್ರಹದ ಕೊಠಡಿಯ ಸುತ್ತಲೂ ಗೋಡೆಯ ರೂಪವಾದ ತಮಸ್ಸಿನ ಆವರಣವಿರುವುದರಿಂದ ಆ ಸ್ಥಳದಲ್ಲಿ ಗರ್ಭಗುಡಿಗೆ ಪ್ರವೇಶಮಾಡಲು ಯತ್ನವಿಲ್ಲ. ಗರ್ಭಗುಡಿಯ ಕೊಠಡಿಗೆ ಸೇರಿದ ಹಾಗೆ ಕೆಳಗಿನವರೆಗೆ ಉದ್ದಕ್ಕೂ ಬಾಗಿಲುಗಳ ಪಕ್ಕಗಳಲ್ಲಿ ಗೋಡೆಗಳಿರುವುದರಿಂದ ಗರ್ಭಗುಡಿಗೆ ಬಾಗಿಲುಗಳ ಮಾರ್ಗವಾಗಿಯೇ ಹೋಗಬೇಕು. ಅಂದರೆ ಗರ್ಭಗುಡಿಗೆ ಸೇರಿಕೊಂಡಿರುವಂತೆ ಬಾಗಿಲುಗಳ ಪಕ್ಕಗಳಲ್ಲಿರುವ ಗೋಡೆಯ ಸ್ವರೂಪದ ಸ್ಥಳವೇ ನಮ್ಮಲ್ಲಿ ಸುಷುಮ್ನಾನಾಡಿಯಾಗಿರುತ್ತದೆ. ಈ ಸುಷುಮ್ನೆಯಲ್ಲಿರುವ ಚಕ್ರಗಳೇ ದೇವಸ್ಥಾನದ ಬಾಗಿಲುಗಳ ತತ್ವಗಳು. ಆದುದರಿಂದ ಈ ಸುಷುಮ್ನೆಯ ಪ್ರಥಮ ಬಾಗಿಲಿನ ಸ್ಥಳವಾದ ಮೂಲಾಧಾರಚಕ್ರದಿಂದ ಹೊರಟು ಇತರ ಚಕ್ರಗಳನ್ನು ಭೇದಿಸಿಕೊಂಡು ಸಹಸ್ರಾರಕಮಲವನ್ನು ಸೇರುವುದೇ ಬಂಧನಬಿಡುಗಡೆ ಅಥವಾ ಮೋಕ್ಷವೆನಿಸುತ್ತದೆ. ಅಂದರೆ ಸಹಸ್ರಾರಕಮಲವನ್ನು ಸೇರಲು ಸುಷುಮ್ನಾನಾಡಿಯ ಮಾರ್ಗ ಹೊರತು ಇತರ ಯಾವ ದಾರಿಯೂ ಇಲ್ಲವೆಂಬುದೇ, ದೇವಸ್ಥಾನ, ತಾವರೇಗಿಡ, ಕುಂಡಲಿನೀ ಉತ್ಥಾಪನೆಯ ಚಿತ್ರಪಠಗಳ ತತ್ವಗಳಿಂದ ಸೂಚಿತವಾಗುತ್ತದೆ.

ಮೂಲಾಧಾರದಿಂದ ಸಹಸ್ರಾರದವರೆಗೂ ಇರುವ ತಾವರೇದಂಟಿನ ರೂಪವಾದ ಸುಷುಮ್ನಾನಾಡಿಯೊಳಕ್ಕೆ ಮೂಲಾಧಾರದಿಂದ ಪ್ರವೇಶಮಾಡದೆ ಇತರ ಕಡೆಗಳಿಂದ ಪ್ರವೇಶಮಾಡಬಹುದೆಂದು ಶ್ರುತಿ, ಸ್ಮೃತಿ ಪುರಾಣಗಳಲ್ಲಿ ಎಲ್ಲಿಯೂ ಕಾಣುವುದಿಲ್ಲ. ಅನುಭವಶಾಲಿಗಳಾದ ಮಹಾತ್ಮರಿಂದಲೂ ಹೇಳಲ್ಪಟ್ಟಿಲ್ಲ. ಶ್ರೀಶಂಕರಭಗವತ್ಪಾದರವರು ಕೂಡ ಬುದ್ಧಿಮನಸ್ಸಿನ ವೃತ್ತಿಗಳು ಮೂಲಾಧಾರದಿಂದಲೇ ಹೊರಟು ಷಟ್ಚಕ್ರಗಳನ್ನು ಭೇದಿಸಿಕೊಂಡು ಸಹಸ್ರಾರದಲ್ಲಿ ಲೀನವಾಗಬೇಕೆಂದು ಹೇಳಿರುವ ವಾಕ್ಯ ಮತ್ತು ಶ್ರುತಿವಾಕ್ಯಗಳನ್ನು ಹಿಂದೆ ಸುರಸೆಯ ಪ್ರಕರಣದಲ್ಲಿ ತಿಳಿಸಿರುವುದು. ಆದುದರಿಂದ ಮೂಲಾಧಾರದಿಂದ ಹೊರಟು ಷಟ್ಚಕ್ರಗಳನ್ನು ಭೇದಿಸಿಕೊಂಡು ಸಹಸ್ರಾರದಲ್ಲಿ ಬುದ್ಧಿಮನಸ್ಸಿನ ವೃತ್ತಿಗಳು ಲೀನವಾಗಬೇಕು. ಈ ವಿಧವಾದ ಬಂಧಕಗಳಿಲ್ಲದಿದ್ದರೆ ಸುಲಭವಾಗಿ ಎಲ್ಲರೂ ಮೋಕ್ಷವನ್ನು ಪಡೆಯಬಹುದಾಗಿತ್ತು. ಅಘಟನಘಟನಾಶಕ್ತಿಯುಳ್ಳ ಮಾಯೆಯ ಸೃಷ್ಟಿಸ್ಥಿತಿ ಕ್ರಮಗಳ ಬಲೆಯು ಸಾಧಾರಣವಾದುದಲ್ಲ. ಇದನ್ನು ದಾಟುವುದು ಕಷ್ಟ. ಇದೇ ಅರ್ಥಕ್ಕೆ ಶಿವಗೀತೆಯಲ್ಲಿ, "ದುಜ್ಞೇಯಾ ಶಾಂಭವೀ ಮಾಯಾ ತಯಾ ಸಮ್ಮೋಹ್ಯತೇ ಜಗತ್" ಎಂಬದಾಗಿ ಹೇಳಿದೆ. ಅಲ್ಲದೆ "ಮಮ ಮಾಯಾ ದುರತ್ಯಯಾ" ಎಂಬ ಶ್ರೀಕೃಷ್ಣಪರಮಾತ್ಮನ ವಾಕ್ಯವೂ ಇರುವುದು. ಆದುದರಿಂದಲೇ ಮುಕ್ತಿಬೇಕೆಂದು ಪ್ರಯತ್ನಮಾಡಿದ ಅನೇಕ ಜನಗಳಲ್ಲಿ ಒಬ್ಬರು ನಿಶ್ಚಯವಾದ ತತ್ವವನ್ನು ತಿಳಿಯುತ್ತಾರೆಂದು ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆಯಲ್ಲಿ ತಿಳಿಸಿರುತ್ತಾನೆ. ಮೂಲಾಧಾರದಿಂದ ಹೊರಟಿರುವ ಸುಷುಮ್ನಾನಾಡಿ, ಷಟ್ಚಕ್ರ, ಕುಂಡಲಿನೀ ಮುಂತಾದುವುಗಳೆಲ್ಲಾ ಶಕ್ತಿರೂಪದಲ್ಲಿರುವುವೆಂದು,

ಸ್ಥಾನಾನ್ಯೇತಾನಿ ದೇಹೇಸ್ಮಿನ್ ಶಕ್ತಿರೂಪಂ ಪ್ರಕಾಶತೆ

ಎಂಬದಾಗಿ ಯೋಗಶಿಖೋಪನಿಷತ್ತಿನಲ್ಲಿ ಹೇಳಿರುವುದು. ಶಕ್ತಿರೂಪದಲ್ಲಿರುವ ಅದ್ಭುತವಾದ ಮಾಯಾಬಲೆಯನ್ನು ದೇಹವನ್ನು ಸೀಳಿ ಪರೀಕ್ಷಿಸಿದರೂ ಕಾಣಿಸುವುದಿಲ್ಲ. ಕಲ್ಕತ್ತೆಯಲ್ಲಿದ್ದ ಶ್ರೀರಾಮಕೃಷ್ಣಪರಮಹಂಸರ ಶಿಷ್ಯರೊಬ್ಬರಿಗೆ ಧ್ಯಾನಮಾಡಲು ಮನಸ್ಸು ಒಂದು ಕಡೆ ನಿಲ್ಲದೆ ಹೋಗಲು, ಒಂದು ಹೆಣವನ್ನು ಕೊಯಿದು ದೇಹದಲ್ಲಿ ಕುಂಡಲಿನೀ ಇರುವುದನ್ನು ನೋಡಲು ಹೊರಟರು. ಅವರು ಏನನ್ನೂ ಕಾಣದೆ ಭಗ್ನಮನೋರಥರಾದರು. ನಾಡಿ ಮತ್ತು ಚಕ್ರಗಳಿಗೂ ಸ್ಥೂಲವಾದ ನರಗಳಿಗೂ ಭೇದವಿದೆ. ನಾಡಿ ಮತ್ತು ಚಕ್ರಗಳು ಶಕ್ತಿರೂಪದಲ್ಲಿ ಬಲೆಯಂತಿದೆ. ಎಂತಹ ಆಧುನಿಕ ವೈದ್ಯರಾಗಿ ದೇಹವನ್ನು ಕೊಯ್ದರೂ, "ಎಕ್ಸ್‌ರೇ" ಎಂಬ ಯಂತ್ರದಿಂದ ನೋಡಿದರೂ, ಶಕ್ತಿರೂಪದಲ್ಲಿರುವುದು ಖಂಡಿತವಾಗಿ ಕಾಣುವುದಿಲ್ಲ. ವಾಯುವೇ ನಮ್ಮ ಚಕ್ಷುಸ್ಸಿಗೆ ಗೋಚರವಾಗದೆ ಇರುವಾಗ ಶಕ್ತಿಯು ಕಾಣುವುದೆ? ಆದುದರಿಂದ ಸ್ವಾನುಭವದಿಂದ ತಿಳಿದುಕೊಳ್ಳಬೇಕಾದ

ವಿಚಾರಗಳೇ ಆಗಿರುವುವು. ಸ್ವಾನುಭವಕ್ಕೆ ಬಂದನಂತರ ಶಾಸ್ತ್ರಾಧಾರದಂತೆ ಒಪ್ಪಿಕೊಳ್ಳುವರು.

ಮೂಲವಿಗ್ರಹಸ್ವರೂಪವಾದ ಪರಮಾತ್ಮನ ಸ್ಥಳಕ್ಕೆ ಹೋಗಬೇಕಾದರೆ ಗರ್ಭಗುಡಿಗೆ ಹೋಗುವ ಬಾಗಿಲುಗಳ ದಾರಿಯು ಸ್ವರೂಪವಾದ ಸುಷುಮ್ನೆಯ ಮಾರ್ಗವಲ್ಲದೆ ಮತ್ತಾವ ಮಾರ್ಗವೂ ಇಲ್ಲವೆಂಬ ತಾತ್ಪರ್ಯಕ್ಕೆ ಇನ್ನೂ ಒಂದು ವಿಧವಾಗಿ ವಿಮರ್ಶೆಮಾಡಿ ತಿಳಿದುಕೊಳ್ಳಬಹುದು. ನಮ್ಮ ದೇಹದಲ್ಲಿರುವ ಮೂಲಾಧಾರ ಮೊದಲಾದ ಚಕ್ರಗಳೇ ಬ್ರಹ್ಮಾಂಡದಲ್ಲಿನ ಭೂಲೋಕ ಭುವರ್ಲೋಕ ಮುಂತಾದ ಸಪ್ತಲೋಕಗಳಾಗಿವೆ. ಈ ಏಳು ಚಕ್ರಗಳ ಸ್ವರೂಪವಾದ ಏಳು ಲೋಕಗಳೂ ಬ್ರಹ್ಮರಂಧ್ರನಾಡಿಯ ಹೊರ ಪ್ರಾಕಾರದಲ್ಲಿರುತ್ತವೆ. ಜೀವರುಗಳು ಸುಕೃತಕರ್ಮಗಳಿಂದ ಭೂಲೋಕದಿಂದ ಮೇಲಕ್ಕೆ ಸತ್ಯಲೋಕವೇ ಕೊನೆಯಾಗಿರುವ ಉತ್ತಮಲೋಕಗಳಿಗೆ ಹೋದರೂ,

"ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ"

ಎಂಬ ಶ್ರುತಿವಾಕ್ಯದಂತೆಯೂ,

"ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋರ್ಜುನ"

ಎಂಬ ಭಗವದ್ಗೀತಾ ವಾಕ್ಯದಂತೆಯೂ ಮೋಕ್ಷವಿಲ್ಲದೆ ಪುನಃ ಭೂಲೋಕಕ್ಕೆ ಬೀಳಬೇಕಾಗುತ್ತದೆ. ಒಂದುವೇಳೆ ಆ ಲೋಕಗಳಲ್ಲಿಯೇ ಇದ್ದು ಮೋಕ್ಷವನ್ನು ಪಡೆಯಬೇಕಾದರೆ ಆತ್ಯಂತಿಕ ಪ್ರಳಯದವರೆಗೂ ಕಾಯಬೇಕು. ಅಲ್ಲಿಯವರಿಗೆ ಆತ್ಮಸಾಕ್ಷಾತ್ಕಾರವಾಗುವುದಿಲ್ಲ. "ಬ್ರಹ್ಮಣಾ ಸಹ ಮುಚ್ಯತೆ" ಎಂಬ ಶ್ರುತಿವಾಕ್ಯದ ತತ್ವವು ಆತ್ಯಂತಿಕ ಪ್ರಳಯದವರೆಗೆ ಮೋಕ್ಷವಾಗುವುದಿಲ್ಲವೆಂಬ ತಾತ್ಪರ್ಯವನ್ನು ಸೂಚಿಸುತ್ತದೆ. ಕಾರಣವೇನೆಂದರೆ, ಪಂಚಭೂತಗಳು ಮೊದಲುಗೊಂಡು ಸಕಲಸೃಷ್ಟಿಯೂ ಯಾವಾಗ ಪರಮಾತ್ಮನಲ್ಲಿ ಲಯವಾಗುವುದೋ, ಆಗ ಚತುರ್ಮುಖಬ್ರಹ್ಮನಿಗೆ ಮುಕ್ತಿಯೆಂಬುದು ಸ್ಪಷ್ಟವಾಗುತ್ತದೆ. ಸಾಧಾರಣ ಪ್ರಳಯವಲ್ಲದ ಆತ್ಯಂತಿಕ ಪ್ರಳಯಕಾಲದಲ್ಲಿಯೇ ಚರಾಚರವಾದ ಸಕಲ ಪ್ರಾಣಿಗಳಿಗೂ ಮುಕ್ತಿಯು ದೊರಕುವುದು. ಅಲ್ಲಿಯವರೆಗೆ ಬ್ರಹ್ಮಲೋಕಮೊದಲುಗೊಂಡು ಯಾವ ಲೋಕದಲ್ಲಿದ್ದರೂ ಬಂಧಕವುಂಟೆಂಬ ತಾತ್ಪರ್ಯ. ಅಲ್ಲದೆ ಬ್ರಹ್ಮಲೋಕಕ್ಕೆ ಹೋದವರು ಆತ್ಯಂತಿಕ ಪ್ರಳಯದವರೆಗೂ ಅಲ್ಲಿಯೇ ಇರುತ್ತಾರೆಂಬ ಭರವಸೆಯು ಎಂದಿಗೂ ಇರುವುದಿಲ್ಲ. ಆದುದರಿಂದ "ಇಹಾಮುತ್ರಫಲಭೋಗವಿರಾಗಃ" ಎಂಬ ವಾಕ್ಯದಂತೆ ಉತ್ತಮವಾದ ನರಜನ್ಮ ಬಂದಿರುವಾಗ ಲೋಕಾಂತರಗಳ ಮತ್ತು ಈ ಲೋಕದಲ್ಲಿನ ಸುಖದಲ್ಲಿ ಜಿಹಾಸೆಯನ್ನು ಹೊಂದಿ ಈ ಜನ್ಮದಲ್ಲಿಯೇ ಗರ್ಭಗುಡಿಗೆ ಹೋಗುವ ದಾರಿಯು ತತ್ವವಾದ ಬ್ರಹ್ಮರಂಧ್ರದ ನಾಡಿಯಲ್ಲಿ ಬುದ್ಧಿಮನಸ್ಸಿನ ವೃತ್ತಿಯು ಹೋಗಿ

ಮೂಲವಿಗ್ರಹವಾದ ಪರಮಾತ್ಮನಲ್ಲಿ ಲೀನವಾಗುವಂತೆ ಮಾಡಿ ಭವಬಂಧನದಿಂದ ಬಿಡುಗಡೆ ಹೊಂದಬೇಕೆಂಬುದೇ ದೇವಸ್ಥಾನದ ತತ್ವವಾಗಿರುವುದು. ಶಾಸ್ತ್ರೋಕ್ತವಾದ ದೇವಸ್ಥಾನವನ್ನು ಉದಾಹರಣೆಗೆ ಇಟ್ಟುಕೊಂಡು ಇನ್ನೂ ಅನೇಕ ತತ್ವಗಳನ್ನು ತಿಳಿದುಕೊಳ್ಳಲು ಅನುಕೂಲವಿರುವುದು. ದೇವಸ್ಥಾನದ ಚಿತ್ರಪಟದ ತತ್ವವನ್ನು ತಾವರೇಗಿಡದ ಚಿತ್ರಪಟಕ್ಕೂ ಹೋಲಿಸಿ ತಿಳಿದುಕೊಳ್ಳಬಹುದು.

ಮುಖ್ಯವಾಗಿ ವಾಸನಾವೃತ್ತಿಗಳ ವಿಚಾರವನ್ನು ದೇವಸ್ಥಾನದ ತತ್ವಕ್ಕೆ ಹೋಲಿಸಿ ತಕ್ಕಮಟ್ಟಿಗೆ ತಿಳಿದುಕೊಳ್ಳಲು ಇಷ್ಟು ವಿವರಿಸಬೇಕಾಯಿತು. ಈ ವಾಸನೆಗಳಲ್ಲಿರುವ ಭೇದಗಳನ್ನೂ ಅಕ್ಷಕುಮಾರನ ತತ್ವದಲ್ಲಿರುವ ಆಗಾಮಿವಾಸನೆಯುಂಟಾಗತಕ್ಕ ವಿಧಾನವನ್ನೂ ಸ್ವಲ್ಪಮಟ್ಟಿಗೆ ವಿಮರ್ಶೆಮಾಡಿದರೆ, ಅಕ್ಷಕುಮಾರನ ತತ್ವವು ವಿಶದವಾಗಿ ಗೊತ್ತಾಗುವುದು. ಆದುದರಿಂದ ಮೂಲಾಧಾರದಿಂದ ಹೊರಟ ವಾಸನಾವೃತ್ತಿಯು ಅಂತಃಕರಣವನ್ನು ಪ್ರವೇಶಿಸಿ ಪ್ರಥಮದಲ್ಲಿ ಬುದ್ಧಿಯನ್ನು ವಿಷಯಾಕಾರವಾಗಿ ಎಳೆಯುತ್ತದೆ. ಅನಂತರ ಮನಸ್ಸನ್ನು ಎಳೆದುಕೊಂಡು ಕಾರ್ಯರೂಪವಾಗಿ ಪರಿಣಾಮ ಹೊಂದುತ್ತದೆ. ಮೂಲಾಧಾರದಿಂದ ಸೂರ್ಯನಾಡಿಯ ಮೂಲಕವಾಗಿ ಹೊರಟ ವೃತ್ತಿಯು ಯಾವುದಾದರೊಂದು ವಿಷಯರೂಪವಾಗಿರುವುದೇ ಹೊರತು ವಿಷಯವನ್ನು ಬಿಟ್ಟು ಇರುವುದಿಲ್ಲ. ನಿದ್ರೆಯಿಂದೆದ್ದು ಪುನಃ ನಿದ್ರೆಗೆ ಹೋಗುವ ಪರ್ಯಂತರ ಪ್ರತಿಯೊಬ್ಬರಲ್ಲಿಯೂ ಅವಿಚ್ಛಿನ್ನವಾಗಿ ಕೊಂಚವೂ ವ್ಯವಧಾನವಿಲ್ಲದೆ ಅಂತಃಕರಣವು ವಿಷಯಾಕಾರವಾಗಿರುವುದೇ ಹೊರತು ಅರ್ಧಕ್ಷಣವಾದರೂ ವಿರಾಮವಿರುವುದಿಲ್ಲ.

ಈ ರೀತಿ ವಿಷಯಾಕಾರವೃತ್ತಿಗಳು ಅಂತಃಕರಣವನ್ನು ಅವಿಚ್ಛಿನ್ನವಾಗಿ ಸೇರುತ್ತಲೇ ಇರುತ್ತವಷ್ಟೆ! ವಿಷಯವಾಸನೆಗಳ ಶಕ್ತಿ ಇದ್ದಂತೆಯೂ ಮನೋಬುದ್ಧಿಗಳ ಶಕ್ತಿ ಇದ್ದಂತೆಯೂ ಇಂದ್ರಿಯಗಳ ಮೂಲಕ ಕಾರ್ಯಪ್ರವರ್ತನೆಗಳು ನಡೆಯುತ್ತವೆ. ಈ ವಿಷಯವಾಸನೆಯ ಅನುಭವವನ್ನು ನಾಲ್ಕು ತರಗತಿಗಳಾಗಿ ವಿಂಗಡಿಸಬಹುದು. ಮೊದಲನೆಯದು ಕಾರ್ಯತಃ ಹೋಗದೆ ಸಂಕಲ್ಪರೂಪವಾಗಿ ಮನೋರಾಜ್ಯದಲ್ಲಿಯೇ ಅನುಭವಿಸುವುದು. ಎರಡನೆಯದು ಕಾರ್ಯಪ್ರಸ್ತಾಪದಲ್ಲಿ ಅನುಭವಿಸಿ, ಅಲ್ಲಿಗೇ ನಿಂತುಹೋಗುವುದು. ಮೂರನೆಯದು ಕಾರ್ಯಸಿದ್ಧಿಯಾಗದೆ ಕಾರ್ಯಪ್ರಯತ್ನದಲ್ಲಿಯೇ ತಟಸ್ಥವಾಗುವುದು. ನಾಲ್ಕನೆಯದು ಕಾರ್ಯಸಿದ್ಧಿಯಲ್ಲಿ ಅನುಭವಿಸುವುದು. ವಿಷಯವಾಸನಾ ಶಕ್ತಿಯೂ, ಮನೋ ಬುದ್ಧಿ ಶಕ್ತಿಯೂ ಇದ್ದಂತೆ ಈ ನಾಲ್ಕು ತರಗತಿಗಳಲ್ಲಿ ಜೀವನು ಅನುಭವಿಸಬೇಕಾಗುತ್ತದೆ. ಅಂದರೆ ವಿಷಯವಾಸನೆಯು ಬುದ್ಧಿ ಮನಸ್ಸಿನಲ್ಲಿ ಉಂಟಾಗಿ ಇಂದ್ರಿಯಗಳ ಮೂಲಕ ಕಾರ್ಯವಿಲ್ಲದೆ ಬುದ್ಧಿಯಲ್ಲಿಯೇ ತಟಸ್ಥವಾಗುವಿಕೆಯು ಒಂದನೆಯ.

ತರಗತಿಗೆ ಸೇರಿರುತ್ತದೆ. ಎರಡು, ಮೂರು, ನಾಲ್ಕನೆಯ ತರಗತಿಗಳು ಇಂದ್ರಿಯಗಳ ಮೂಲಕ ನಡೆಯುವುದರಲ್ಲಿನ ಭೇದಗಳಾಗಿರುವುವು.

ಆದುದರಿಂದ ವಿಷಯರೂಪವಾದ ವಾಸನಾವೃತ್ತಿಯು ಅಂತಃಕರಣವನ್ನು ಸೇರಿ, ಅಂತಃಕರಣ ಮತ್ತು ಇಂದ್ರಿಯಗಳಲ್ಲಿ ನಡೆಯಬೇಕಾದ ಕಾರ್ಯ ನಡೆದನಂತರ ಕಾರ್ಯದ ಫಲಿತಾರ್ಥವು ನಶಿಸುವುದಿಲ್ಲ. ಈ ಕಾರ್ಯದ ಫಲಿತಾರ್ಥವು ವಾಸನೆಯ ರೂಪದಲ್ಲಿ ಚಂದ್ರ ನಾಡಿಯ ಮೂಲಕವಾಗಿ ಮೂಲಾಧಾರಚಕ್ರಕ್ಕೆ ಪುನಃ ಬಂದು ಸೇರಿಕೊಳ್ಳುವುದು. ಚಂದ್ರನಾಡಿಯ ಮೂಲಕ ಪುನಃ ಮೂಲಾಧಾರಚಕ್ರಕ್ಕೆ ಬಂದು ಸೇರುವ ವಿಷಯರೂಪದ ಫಲಿತಾರ್ಥವೇ ಆಗಾಮಿವಾಸನೆಯೆಂದು ಕರೆಯಲ್ಪಡುವುದು. ನಾಶವಾಗದಂತೆ ವಾಸನೆ ಯನ್ನು ಕಾಪಾಡುವ ಶಕ್ತಿಯೇ ಅಕ್ಷಕುಮಾರನ ತತ್ವವು. "ನಕ್ಷೀಯತ ಇತಿ ಅಕ್ಷಃ" ಎಂದರೆ ನಾಶವಿಲ್ಲದೆ ಅಭಿವೃದ್ಧಿಯಾಗುವುದು. ಆಗಾಮಿವಾಸನೆಯು ಯಾವ ಸ್ವರೂಪ ದಲ್ಲಿರುವುದೆಂದರೆ, ಅರಣ್ಯಕಾಂಡದಲ್ಲಿ ಸೀತಾದೇವಿಯನ್ನು ರಾವಣನು ಅಪಹರಿಸಿ ಬಂಧನ ದಲ್ಲಿಟ್ಟ ಪ್ರಕರಣದಲ್ಲಿ ಹೇಳಿರುವ ಶ್ರೀಶಂಕರಭಗವತ್ಪಾದರವರ ಶ್ಲೋಕದಂತೆ ಕಾಮ, ಕ್ರೋಧ ಮುಂತಾದ ಎಂಟು ಸ್ವರೂಪದಲ್ಲಿರುತ್ತದೆ. ಈ ತತ್ವಾರ್ಥವನ್ನು ಅನುಸರಿಸಿಯೇ ಅಕ್ಷಕುಮಾರನು ಎಂಟು ಅಲಗುಳ್ಳ ಮಹಾಭಯಂಕರವಾದ ತೋಮರವನ್ನು ತೆಗೆದು ಕೊಂಡು ಯುದ್ಧಕ್ಕೆ ಬಂದಿದ್ದನು. ನಮಗೆ ಎಷ್ಟು ಜನ್ಮಗಳಾಗಿವೆಯೋ ಮತ್ತು ನಾವು ಎಷ್ಟು ವಾಸನೆಗಳ ಸಮೂಹವನ್ನು ಶೇಖರಿಸಿಕೊಂಡಿರುತ್ತೇವೋ ಬಲ್ಲವರು ಯಾರು? ಹೀಗೆ ಜನ್ಮ ಜನ್ಮಾಂತರಗಳಿಂದಲೂ ಶೇಖರಿಸಿಕೊಂಡು ಬಂದಿರುವ ವಾಸನೆಗಳ ಸಮೂಹವು ಮೂಲಾಧಾರದಲ್ಲಿರುತ್ತದೆ. ಪ್ರಾಣೋತ್ಕ್ರಮಣಕಾಲದಲ್ಲಿ ಅಂತಃಕರಣದಲ್ಲಿನ ಒಂದು ಭಾಗವಾದ ಚಿತ್ತವು ವಾಸನೆಗಳ ಸಮೂಹವನ್ನು ಬೀಜರೂಪವಾಗಿ ತನ್ನಲ್ಲಿ ಧರಿಸಿಕೊಂಡು ಮುಂದಿನ ಜನ್ಮವೆತ್ತಿದನಂತರ ಪುನಃ ಮೂಲಾಧಾರಚಕ್ರದಲ್ಲಿ ನಿಲ್ಲಿಸುವುದು. ಆದುದರಿಂದ ಈ ಸಂಚಿತವಾಸನೆಗಳ ಸಮೂಹವು ವಿದೇಹಮುಕ್ತಿಯಲ್ಲಲ್ಲದೆ ಇತರ ಕಾಲದಲ್ಲಿ ನಾಶ ವಾಗುವುದಿಲ್ಲ.

ಮೇಲೆ ತಿಳಿಸಿರುವಂತೆ ಈ ವಾಸನೆಗಳನ್ನು ಸಂಚಿತ, ಆಗಾಮಿ, ಪ್ರಾರಬ್ಧವೆಂದು ಮೂರು ಭಾಗವಾಗಿ ವಿಂಗಡಿಸಬಹುದು. ಜನ್ಮ ಜನ್ಮಾಂತರಗಳಿಂದಲೂ ಕೂಡಿಕೊಂಡು ಬಂದು ರಾಶಿಯಂತೆ ಇರುವುದಕ್ಕೆ ಸಂಚಿತವೆಂದು ಹೆಸರು. ರಾಶಿಯಾಗಿ ಬಿದ್ದಿರುವ ಧಾನ್ಯದಲ್ಲಿ ಒಂದು ಹಿಡಿಯಷ್ಟು ಧಾನ್ಯವನ್ನು ಹಸ್ತದಲ್ಲಿ ತೆಗೆದುಕೊಳ್ಳುವಂತೆ ಜನ್ಮ ಜನ್ಮಾಂತರಗಳಿಂದ ಬಂದ ವಾಸನೆಗಳ ರಾಶಿಯಲ್ಲಿ ಒಂದು ಹಿಡಿಯಷ್ಟನ್ನು ತೆಗೆದುಕೊಂಡು ಒಂದು ಜನ್ಮವೆತ್ತಲ್ಪಡುತ್ತದೆ. ಇದಕ್ಕೆ ಪ್ರಾರಬ್ಧವೆಂದು ಹೆಸರು. ಒಂದು ಜನ್ಮಕ್ಕೆ ಬೇಕಾಗುವಷ್ಟು ತೆಗೆದುಕೊಂಡಿರುವ ವಾಸನೆಗಳಿಗೆ ಪ್ರಾರಬ್ಧವೆಂದು ಹೆಸರು. ಅಂದರೆ

ಈಗಿನ ಜನ್ಮ ನಡೆಯಲು ರಾಶಿಯಲ್ಲಿ ತೆಗೆದ ಒಂದು ಹಿಡಿಯಷ್ಟು ಧಾನ್ಯಕ್ಕೆ ಪ್ರಾರಬ್ಧವೆಂದು ಹೆಸರು. ಪ್ರಾರಬ್ಧಕರ್ಮದ ವಾಸನಾಸ್ವರೂಪದ ತತ್ವವೇ ರಾವಣನ ಪುಷ್ಪಕವಿಮಾನ. ಜನನವಾದವರಿಗೆ ಜಾತಕ ಬರೆಯುವಾಗ "ಪದವೀ ಪೂರ್ವ ಪುಣ್ಯಾನಾಂ ಲಿಖ್ಯತೆ ಜನ್ಮಪತ್ರಿಕಾ" ಎಂದರೆ ಜನ್ಮಾಂತರಗಳಲ್ಲಿ ಸಂಪಾದಿಸಿ ಈಗ ಅನುಭವಿಸುವುದಕ್ಕೆ ತೆಗೆದು ಕೊಂಡಿರುವ ವಾಸನೆಗಳ ವಿವರಣೆಗೆ ಜಾತಕವೆಂದು ಹೆಸರು.

ಸಂಚಿತ, ಪ್ರಾರಬ್ಧ, ಆಗಾಮಿಗಳಲ್ಲಿ, ಆಗಾಮಿವಾಸನೆಯ ವಿಚಾರವನ್ನು ತೆಗೆದು ಕೊಳ್ಳೋಣ. ಆಗಾಮಿ ಎಂದರೆ ಮುಂದೆ ಬರುವುದು. ಅಂದರೆ ಮುಂದೆ ಉತ್ಪತ್ತಿ ಯಾಗುವುದು. ಮುಂದೆ ಉತ್ಪತ್ತಿಯಾಗಬೇಕಾದರೆ ಪ್ರಾರಬ್ಧದ ವಾಸನೆಯಿಂದಲೂ, ಇಂದ್ರಿ ಯಗಳ ಆಕರ್ಷಣಾಶಕ್ತಿಯಿಂದ ಹೊಸ ಹೊಸದಾಗಿ ನೋಡುವ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳ ತಿಳಿವಳಿಕೆಯ ವಾಸನೆಯಿಂದಲೂ, ಆಗಾಮಿಯಾಗುವುದು. ಆದುದರಿಂದ ಆಗಾಮಿವಾಸನೆಗೆ ಕಾರಣವಾಗಿರುವುದೇ ಪ್ರಾರಬ್ಧವಾಗಿದೆ. ಹೇಗೆಂದರೆ, ಈ ಜನ್ಮ ಬಂದ ಮೇಲೆ ವಾಸನೆಯು ಮೂಲಾಧಾರದಿಂದ ಸೂರ್ಯನಾಡಿಯ ಮೂಲಕ ಹೊರಟು ಅಂತಃ ಕರಣವನ್ನು ಸೇರಿ ಅಲ್ಲಿಯ ಕಾರ್ಯ ನಡೆದನಂತರ ಚಂದ್ರನಾಡಿಯ ಮೂಲಕವಾಗಿ ಪುನಃ ಮೂಲಾಧಾರವನ್ನು ಸೇರುವುದೆಂದು ಮೇಲೆ ತಿಳಿಸಿತಷ್ಟೆ! ಹೀಗೆ ಹೊರಟ ವಾಸನಾವೃತ್ತಿಯು ಅಂತಃಕರಣವನ್ನು ಸೇರಿ ಅಲ್ಲಿ ನಡೆಸುವ ಕಾರ್ಯದ ಫಲಿತಾರ್ಥವೇ ಆಗಾಮಿವಾಸನೆಯೆನಿಸಿ ಕೊಳ್ಳುವುದು.

ಮೂಲಾಧಾರದಿಂದ ಹೊರಟ ವಾಸನಾವೃತ್ತಿಯು ಅಂತಃಕರಣದಿಂದ ವ್ಯತ್ಯಸ್ತ ವಾಗದೆ ಹೊರಟಂತೆಯೇ ಚಂದ್ರನಾಡಿಯ ಮೂಲಕ ಪುನಃ ಮೂಲಾಧಾರಕ್ಕೆ ಬಂದು ಸೇರಬಹುದು. ಅಥವಾ ವ್ಯತ್ಯಸ್ತವಾಗಿಯೂ ಬರಬಹುದು. ಅಂದರೆ ಕಾಲಾನುಗುಣ್ಯ ವಾಗಿಯೂ, ದೇಶಾನುಗುಣ್ಯವಾಗಿಯೂ, ಅಂತಃಕರಣದಲ್ಲಿನ ಬುದ್ಧಿಯ ವಿವೇಚನಾ ಶಕ್ತಿಯ ತಾರತಮ್ಯಾನುಸಾರವಾಗಿಯೂ, ವ್ಯತ್ಯಸ್ತವಾಗಿ ಚಂದ್ರನಾಡಿಯ ಮೂಲಕ ಪುನಃ ಮೂಲಾಧಾರವನ್ನು ಸೇರಬಹುದು. ಹೇಗೆಂದರೆ, ನಮಗೆ ಮೊದಲು ಕಳ್ಳತನ ಮಾಡ ಬೇಕೆಂಬ ವೃತ್ತಿಯು ಅಂಕುರಿಸುತ್ತದೆ. ಈ ವೃತ್ತಿಯು ಅಂತಃಕರಣದೊಡನೆ ಕಲೆತನಂತರ ಕಳ್ಳತನ ಕೆಟ್ಟದ್ದೆಂದು ಬುದ್ಧಿಯ ವಿವೇಚನಾಶಕ್ತಿಯಿಂದ ಈ ವೃತ್ತಿಯನ್ನು ಖಂಡನೆ ಮಾಡಿದರೆ ಕಾರ್ಯಪ್ರವರ್ತನೆಯಾಗದೆ ಕಳ್ಳತನ ಮಾಡುವುದು ನಿಲ್ಲುತ್ತದೆ. ಕೋಪವು ಕೆಟ್ಟದ್ದೆಂದು ಬುದ್ಧಿಯ ವಿವೇಚನಾಶಕ್ತಿಯಿಂದ ತಡೆದರೆ ಕೋಪದ ವಾಸನೆಯು ತಗ್ಗು ತ್ತದೆ. ಮೂಲಾಧಾರದಿಂದ ಹೊರಡುವ ವಾಸನಾವೃತ್ತಿಯು ಅತ್ಯಂತ ಕಠಿಣವಾಗಿದ್ದರೆ ಬುದ್ಧಿಯ ವಿವೇಚನಾಶಕ್ತಿಯನ್ನೂ ಮೀರಿ ಕಾರ್ಯಪ್ರವರ್ತನೆಯಾಗುವುದು. ಇಂತಹ ಕಾಲದಲ್ಲಿ ಕಾರ್ಯವಾದ ತಕ್ಷಣವಾದರೂ ಪಶ್ಚಾತ್ತಾಪಪಟ್ಟರೆ ವಾಸನೆಯ ಫಲಿತಾರ್ಥದ

ವೇಗವು ಕುಗ್ಗುತ್ತದೆ. ಇದೇ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ಸಾಧನಪಂಚಕ ಶ್ಲೋಕದಲ್ಲಿ,

> ಪ್ರಾಕ್ಕರ್ಮ ಪ್ರವಿಲಾಪ್ಯತಾಂ |
> ಚಿತಿಬಲಾನ್ನಾಪ್ಯುತ್ತರೈ ಶ್ಲಿಷ್ಯತಾಂ ||
> ಪ್ರಾರಬ್ಧ್ವಂ ತ್ವಿಹಭುಜ್ಯತಾ |
> ಮಥ ಪರ ಬ್ರಹ್ಮಾತ್ಮನಾಸ್ಥೀಯತಾಂ ||

ತಾ|| ಹಿಂದೆ ಮಾಡಿದ ಕರ್ಮಗಳಿಗಾಗಿ ವ್ಯಥೆಪಟ್ಟು, ಮುಂದೆ ಉಂಟಾಗಬಹುದಾದ ಕರ್ಮಗಳ ವೇಗವನ್ನು ಬುದ್ಧಿಬಲದಿಂದ ನಿರೋಧಿಸಿ, ಈಗ ಇರುವ ಪ್ರಾರಬ್ಧರೂಪವಾದ ಕರ್ಮಫಲವನ್ನು ಅನುಭವಿಸುತ್ತಾ ಸುಖ ದುಃಖಗಳಿಗೆ ಅಂಟದೆ ಆತ್ಮನಲ್ಲಿ ರಮಿಸುತ್ತಿರಬೇಕು. ಎಂದು ಹೇಳಿರುವರು.

ಈ ಮೇಲಿನ ಶ್ಲೋಕದ ತಾತ್ಪರ್ಯವನ್ನು ಅನುಸರಿಸಿ ಬುದ್ಧಿಯ ವಿವೇಚನಾಶಕ್ತಿಯಿಂದ ವಾಸನೆಯ ವೇಗವನ್ನು ತಗ್ಗಿಸಿಕೊಂಡು, ಆತ್ಮನಲ್ಲಿ ಬುದ್ಧಿಮನಸ್ಸನ್ನು ನಿಲುಗಡೆ ಮಾಡುತ್ತಾ ಬಂದಂತೆ ಉಪಶಾಂತತೆಯುಂಟಾಗುವುದು. ಹೀಗೆ ಅಭಿವೃದ್ಧಿ ಮಾಡಿಕೊಳ್ಳಲು ಎಲ್ಲಾ ಪ್ರಾಣಿಗಳಿಗಿಂತಲೂ ಮನುಷ್ಯನಲ್ಲಿ ಅಧಿಕವಾಗಿ ಬುದ್ಧಿಯ ಸ್ಫುರಣೆಯು ಇರುವುದರಿಂದ ತನ್ನನ್ನು ತಾನೇ ಉದ್ಧಾರಮಾಡಿಕೊಳ್ಳಬೇಕಲ್ಲದೆ ನಾಶಮಾಡಿಕೊಳ್ಳಬಾರದು. ಈ ವಿವೇಚನಾಶಕ್ತಿಯ ಬಲವೇ ಪುರುಷಪ್ರಯತ್ನ ಎನಿಸಿಕೊಳ್ಳುವುದು.

ಮೇಲೆ ಹೇಳಿರುವ ಸಂಚಿತ, ಆಗಾಮಿ, ಪ್ರಾರಬ್ಧವಾಸನೆಗಳಲ್ಲಿ ಅಕ್ಷಕುಮಾರನು ಆಗಾಮಿವಾಸನೆಯ ಸ್ವರೂಪದವನಾಗಿರುತ್ತಾನೆ. ಇಂತಹ ಅಕ್ಷಯವಾಗುವ ಆಗಾಮಿ ವಾಸನಾಶಕ್ತಿಯನ್ನು ಆಂಜನೇಯನು ನಿಗ್ರಹಿಸಿದನು. ಅಂದರೆ ಶಕ್ತಿಚಲನಪ್ರಾಣಾಯಾಮವು, ಸ್ತಿಮಿತಕ್ಕೆ ಬಂದು ಮೂಲಾಧಾರಚಕ್ರವು ಶುದ್ಧಿಯಾಗುತ್ತಾ ಬಂದ ಹಾಗೆಲ್ಲ ಸತ್ವಾಪತ್ತಿಯುಂಟಾಗುವುದು. ಅಂದರೆ ಶುದ್ಧಸತ್ವಗುಣಸ್ವರೂಪಳಾದ ಸೀತಾದೇವಿಯನ್ನು ಹನುಮಂತನು ದರ್ಶನಮಾಡಿದನಷ್ಟೆ! ಅಧಿಕಾರಿಯು ಈ ಕಥೆಯ ತತ್ವದ ಅನುಷ್ಠಾನದ ಸೋಪಾನವನ್ನು ಹೊಂದಿದರೆ, ಅಧಿಕಾರಿಯಲ್ಲಿ ಶುದ್ಧಸತ್ವಗುಣದ ಚಿಹ್ನೆಯು ಉದಯವಾಗುತ್ತಾ ಬರುವುದೇ ಸತ್ವಾಪತ್ತಿಯುಂಟಾಗುವುದೆಂಬುದರ ತಾತ್ಪರ್ಯ.

ಧಾನ್ಯದ ರಾಶಿಯಲ್ಲಿ ಒಂದು ಹಿಡಿಯನ್ನು ಕೈಗೆ ತೆಗೆದುಕೊಳ್ಳುವಂತೆ ನಮ್ಮ ಜನ್ಮಾಂತರಗಳ ವಾಸನೆಗಳ ಸಮೂಹದಲ್ಲಿ ಅಲ್ಪಭಾಗ ತೆಗೆದುಕೊಂಡು ಈಗ ನಾವು ಹೊಂದಿರುವ ಜನ್ಮವುಂಟಾಗಿರುತ್ತದೆ. ಹೀಗೆ ಈ ಜನ್ಮವನ್ನು ಪಡೆಯುವಾಗ ನವಗ್ರಹಗಳ ಕಾ[illegible]ವನ್ನು ಅನುಸರಿಸಿಕೊಂಡು ಸಂಚಿತವಾಸನೆಗಳ ಸಮೂಹದಲ್ಲಿ ಈ ಜನ್ಮಕ್ಕೆ

ಬೇಕಾಗುವಷ್ಟು ಬರುತ್ತವೆ. ಈ ಜನ್ಮದಲ್ಲಿ ಅನುಭವಿಸಲು ತೆಗೆದುಕೊಂಡಿರುವ ಸಂಚಿತ ವಾಸನೆಯ ಭಾಗಕ್ಕೆ ಪ್ರಾರಬ್ಧವೆಂದು ಹೆಸರು. ಈಗ ನಾವು ಹೊಂದಿರುವ ಜನ್ಮಕ್ಕೆ ತೆಗೆದುಕೊಂಡಿರುವ ವಾಸನೆಯನ್ನು ಅನುಸರಿಸಿ ಆಯಾ ಗ್ರಹಗಳ ದಶಾ, ಅಂತರಾಂತರ ದೆಶೆಗಳಲ್ಲಿ ಅದಕ್ಕೆ ಅನುಸಾರವಾದ ವಾಸನಾವೃತ್ತಿಗಳು ನಮ್ಮಲ್ಲಿ ತಲೆದೋರಿ, ಕಾರ್ಯ ಮಾಡಿಸುತ್ತಿರುತ್ತವೆ. ಕಾಲಚಕ್ರಸ್ವರೂಪವಾದ ನವಗ್ರಹಗಳ ಗತಿಯನ್ನು ಅನುಸರಿಸಿ ಕೊಂಡಿರುವ ಜನ್ಮಾಂತರದ ವಾಸನೆಯಂತೆ ಕಷ್ಟ ಸುಖಗಳು ಬರುತ್ತವೆ. ಈ ಕಾಲ ಚಕ್ರದ ಗತಿಯನ್ನು ಅನುಸರಿಸಿರುವ ವಾಸನೆಯ ಸುಳಿಯಲ್ಲಿ ಸಿಕ್ಕಿದನಂತರ ಅದರ ಅನುಭವಿಕೆಯನ್ನು ತಪ್ಪಿಸಿಕೊಳ್ಳುವುದು ಅತ್ಯಂತ ದುಸ್ತರ.

ಕಾಲಚಕ್ರವನ್ನು ಅನುಸರಿಸಿ ವಾಸನೆಯ ನಡೆವಳಿಕೆಯನ್ನೇ ದೈವವೆಂದು ಕರೆಯು ತ್ತಾರೆ. ವಾಸನೆಯು ಯಾವ ವಿಧದಿಂದ ಎಳೆದುಕೊಂಡು ಹೋಗುವುದೋ ಅದಕ್ಕೆ ನಾವು ಅಧೀನವಾಗುವುದನ್ನು ತಡೆಯುತ್ತಾ ಬರಬೇಕು. ವಾಸನಾವೃತ್ತಿಗಳಿಗೆ ಅಡಿಯಾಳಾಗಿದ್ದರೆ ಪಶುಗಳಿಗೂ ನಮಗೂ ಭೇದವೇ ಇರುವುದಿಲ್ಲ. ಪಶುಗಳೂ ಸುಖ ದುಃಖಗಳನ್ನು ಅನುಭವಿಸುತ್ತವೆ. ಮನುಷ್ಯರೂ ಸುಖ ದುಃಖಗಳನ್ನು ಅನುಭವಿಸು ತ್ತಾರೆ. ಈ ಸುಖದುಃಖಗಳ ತಾರತಮ್ಯದ ಮೇಲೆ ಮನುಷ್ಯಜನ್ಮವು ಖಂಡಿತವಾಗಿಯೂ ಉತ್ತಮವೆನಿಸಿಕೊಳ್ಳುವುದಿಲ್ಲ. ಉಳಿದ ಇತರ ಎಲ್ಲಾ ಪ್ರಾಣಿಗಳಿಗಿಂತಲೂ ಮನುಷ್ಯನಿಗೆ ಅತಿಶಯವಾದ ರತ್ನವನ್ನು ಪರಮಾತ್ಮನು ಅನುಗ್ರಹಿಸಿ ಕೊಟ್ಟಿರುವುದರಿಂದ ಮನುಷ್ಯ ಜನ್ಮವು ಶ್ರೇಷ್ಠವಾದುದು. ಈ ರತ್ನವು ಯಾವುದೆಂದರೆ ಬುದ್ಧಿಗಿರುವ ಜ್ಞಾನ ಮತ್ತು ವಿವೇಚನಾಶಕ್ತಿ. ಈ ಶಕ್ತಿಯಿಂದ ಮನುಷ್ಯಜನ್ಮವು ಶ್ರೇಷ್ಠವೇ ಹೊರತು ಸುಖ ದುಃಖಗಳ ತಾರತಮ್ಯದಿಂದ ಎಂದಿಗೂ ಶ್ರೇಷ್ಠವಲ್ಲ. ಇದೇ ಅರ್ಥಕ್ಕೆ ಶ್ರೀಕೃಷ್ಣಪರಮಾತ್ಮನು ಉತ್ತರ ಗೀತೆಯಲ್ಲಿ ಅರ್ಜುನನಿಗೆ ಉಪದೇಶಮಾಡಿರುವುದೇನೆಂದರೆ :—

ಆಹಾರ ನಿದ್ರಾ ಭಯ ಮೈಥುನಂಚ |
ಸಾಮಾನ್ಯಮೇತ ತ್ಪಶುಭಿ ರ್ನರಾಣಾಂ ||
ಜ್ಞಾನಂ ನರಾಣಾ ಮಧಿಕೋ ವಿಶೇಷೋ |
ಜ್ಞಾನೇನ ಹೀನಃ ಪಶುಭಿ ಸ್ಸಮಾನಃ ||

ತಾ|| ಆಹಾರ, ನಿದ್ರೆ, ಭೀತಿ, ವಿಷಯಾಸಕ್ತಿಗಳು ಮನುಷ್ಯನಿಗೂ ಪಶುಗಳಿಗೂ ಸಮಾನವಾಗಿರುವುವು. ಪಶುಗಳಿಗಿಂತಲೂ ಅಧಿಕವಾಗಿ ಮನುಷ್ಯನಲ್ಲಿರುವುದು ಆತ್ಮ ವಿವೇಕ. ಈ ವಿವೇಕವಿಲ್ಲದಿರುವ ಮನುಷ್ಯರು ಪಶುಸಮಾನರು.

ಆದುದರಿಂದ ಮನುಷ್ಯನು ಆತ್ಮವಿವೇಕವನ್ನು ಸಂಪಾದನೆಮಾಡಬೇಕು. ಮನುಷ್ಯನಲ್ಲಿ ವಿವೇಚನಾಶಕ್ತಿಯಿರುವುದು, ತನ್ನನ್ನು ತಾನು ಉದ್ಧಾರಮಾಡಿಕೊಳ್ಳುವುದಕ್ಕಲ್ಲದೆ ಪ್ರಪಂಚವ್ಯಾಪಾರಗಳಲ್ಲಿಯೇ ಬಿದ್ದು ಒದ್ದಾಡುತ್ತಿರುವುದಕ್ಕಲ್ಲ. ಇಂತಹ ರತ್ನವು ಮನುಷ್ಯನಲ್ಲಿರುವುದರಿಂದಲೇ ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆ, ೬ನೆಯ ಅಧ್ಯಾಯದಲ್ಲಿ,

ಉದ್ಧರೇ ದಾತ್ಮನಾತ್ಮಾನಂ ನಾತ್ಮಾನ ಮವಸಾದಯೇತ್ |
ಆತ್ಮೈವ ಹ್ಯಾತ್ಮನೋ ಬಂಧು ರಾತ್ಮೈವ ರಿಪುರಾತ್ಮನಃ ||

ತಾ|| ಪುರುಷನು ತನ್ನಿಂದಲೇ ತನ್ನನ್ನು ಉದ್ಧರಿಸಿಕೊಳ್ಳಬೇಕು. ತನ್ನನ್ನು ತನ್ನಿಂದಲೇ ನಾಶಮಾಡಿಕೊಳ್ಳಬಾರದು. ಕಾರಣವೇನೆಂದರೆ, ತನಗೆ ತಾನೇ ಬಂಧುವು, ಶತ್ರುವು. ಎಂದು ಹೇಳಿರುವನು.

ಆದುದರಿಂದ ತನ್ನಿಂದಲೇ ತಾನು ಉದ್ಧಾರವಾಗಬೇಕೆಂದರೆ ರತ್ನಪ್ರಾಯವಾದ ಬುದ್ಧಿಯ ವಿವೇಚನೆ ಮತ್ತು ಜ್ಞಾನಶಕ್ತಿಗಳಿಂದ ಆತ್ಮಜ್ಞಾನವನ್ನು ಪಡೆಯುವುದಾಗಿರುತ್ತದೆ. ಹಾಗಲ್ಲದೆ ಪ್ರಪಂಚವ್ಯಾಪಾರದಲ್ಲಿಯೇ ಮಗ್ನನಾಗಿದ್ದರೆ ತನ್ನನ್ನು ತಾನೇ ನಾಶಮಾಡಿಕೊಂಡಂತಾಗುವುದು.

ಜ್ಯೋತಿಶ್ಶಾಸ್ತ್ರವು ಮೋಕ್ಷಮಾರ್ಗಕ್ಕೆ ಸಹಕಾರಿಯು. ಹೇಗೆಂದರೆ, ಮೋಕ್ಷವನ್ನು ಹೊಂದಬೇಕಾದರೆ ಪರಮಾತ್ಮನು ಇಂತಹವನೆಂಬ ವಿಚಾರವೂ ಬೇಕು. ವಸ್ತುವೆಂದರೆ ಪ್ರಪಂಚದ ಸ್ವರೂಪದ ತತ್ತ್ವ. ಪ್ರಪಂಚ ಅಥವಾ ಗುಣಗಳ ಸ್ವರೂಪವು ತಿಳಿಯಬೇಕಾದರೆ ಜ್ಯೋತಿಷ್ಯವು ಸಹಕಾರಿ. ನಮ್ಮಲ್ಲಿ ಅಂಕುರವಾಗುವ ವಾಸನೆಗಳ ವೃತ್ತಿಗಳು ಭೇದವಾಗುತ್ತಿರುವುದೂ, ಕಷ್ಟ ಸುಖಗಳು ಬರುವುದೂ, ಕೆಲವು ಕಾಲ ಕೆಲವು ಕಾರ್ಯ ನಡೆದು ಅನಂತರ ನಿಂತು ಹೋಗುವುದೂ, ಈ ಬದಲಾವಣೆಗಳ ಯೋಗ್ಯತೆಗಳೆಲ್ಲಾ ಜ್ಯೋತಿಷ್ಯದಿಂದ ಗೊತ್ತಾಗಿ ನಾವು ಪ್ರಪಂಚದ ಬೆಡಗಿಗೆ ಬೆರಗಾಗದಿರಬಹುದು. ಅಲ್ಲದೆ ಪ್ರಪಂಚದ ಸಾರವೇ ಇಷ್ಟೆಂದು ತಿಳಿದು ನಾವು ಪ್ರಪಂಚಕ್ಕೆ ಅಂಟದೆ ಪರಮಾತ್ಮನ ಕಡೆಯ ಜ್ಞಾನದಲ್ಲಿರಲು ಸಹಾಯಮಾಡುವುದಕ್ಕೆ ಜ್ಯೋತಿಶ್ಶಾಸ್ತ್ರವು ಹುಟ್ಟಿರುವುದೇ ಹೊರತು ನಮಗೆ ಯಾವಾಗ ಶುಕ್ರಮಹರ್ದೆಶೆ ಬರುವುದೆಂಬ ಪ್ರಪಂಚವ್ಯವಹಾರಕ್ಕಾಗಿಯೇ ಹುಟ್ಟಿಲ್ಲ. ಆದುದರಿಂದ ಶ್ರೀಶಂಕರಭಗವತ್ಪಾದರವರು ದ್ವಾದಶಮಂಜರಿಯಲ್ಲಿ,

ಯೋಗರತೋವಾ ಭೋಗರತೋವಾ |
ಸಂಗರತೋವಾ ಸಂಗವಿಹೀನಃ |
ಯಸ್ಯ ಬ್ರಹ್ಮಣಿ ರಮತೇ ಚಿತ್ತಂ |
ನಂದತಿ ನಂದತಿ ನಂದತ್ಯೇವ ||

ಎಂಬದಾಗಿ ಹೇಳಿರುವಂತೆ ನಮಗೆ ಪ್ರಾರಬ್ಧಕಾಲಚಕ್ರದ ವಾಸನೆಗಳು ಯಾವ ವಿಧವಾಗಿ ಬೇಕಾದರೂ ಇರಲಿ. ಅವುಗಳಿಗೆ ಅಂಟದೆ ಬುದ್ಧಿಯು ವಿವೇಕವೆಂಬ ರತ್ನದಿಂದ ಆತ್ಮಭಾವನೆಯಲ್ಲಿಯೇ ಮನನ ಮತ್ತು ಧ್ಯಾನಾಸಕ್ತರಾಗಿರಬೇಕೆಂಬ ತತ್ವವು ಜ್ಯೋತಿಷ್ಯದ ಸಾರವಾಗಿರುತ್ತದೆ.

ಈ ಮೇಲಿನ ತತ್ವಾರ್ಥಗಳನ್ನು ಅನುಸರಿಸಿ ಹನುಮಂತನು ಆಗಾಮಿವಾಸನಾರೂಪನಾದ ಅಕ್ಷಕುಮಾರನನ್ನು ನಿಗ್ರಹಿಸಿದನು. ಶ್ರೀರಾಮ ರಾವಣರ ಯುದ್ಧಪ್ರಕರಣದಲ್ಲಿಯೂ ವಾಸನಾವೃತ್ತಿಯ ವಿಚಾರವು ಬರಬೇಕಾಗಿರುವುದರಿಂದ ಈ ಪ್ರಕರಣದಲ್ಲಿ ಬರಿದಿರುವ ವಿಚಾರಗಳನ್ನೆಲ್ಲ ಚೆನ್ನಾಗಿ ಮುಂದಟ್ಟುಮಾಡಿಕೊಂಡರೆ, ಆ ಸ್ಥಳದ ತತ್ವಕ್ಕೆ ಸಹಕಾರಿಯಾಗುವುದು. ವಾಸನೆಯಲ್ಲಿ ಧರ್ಮ ಅಥವಾ ಪುಣ್ಯದ ವಾಸನೆಯ ವೃತ್ತಿಗಳೂ ಇರುವುವು. ಇದರಲ್ಲಿ ಧರ್ಮ ಅಥವಾ ಪುಣ್ಯದ ವಾಸನೆಯ ತತ್ವದವನು ವಿಭೀಷಣನೊಬ್ಬನೇ. ಉಳಿದವರೆಲ್ಲ ಅಧರ್ಮದ ತತ್ವದವರಾಗಿರುತ್ತಾರೆ. ಇದು ಅವರವರ ಕಥಾ ಸಂದರ್ಭಗಳಲ್ಲಿ ಗೊತ್ತಾಗುವುದು.

## ೮ನೆಯ ಪ್ರಕರಣ

**ಹನುಮಂತನು ಇಂದ್ರಜಿತ್ತಿನ ಬ್ರಹ್ಮಾಸ್ತ್ರಕ್ಕೆ ಕಟ್ಟುಬಿದ್ದಿದ್ದುದು.**

**ಪ್ರಾಣಾಯಾಮಕ್ಕೆ ಭೋಗಶಕ್ತಿಯೊಂದೇ ಪ್ರತಿಬಂಧಕವೆಂಬ ವಿಚಾರ.**

**ರಾ||** ಹನುಮಂತನು ಅಕ್ಷಕುಮಾರನನ್ನು ಕೊಂದುದಕ್ಕಾಗಿ ರಾವಣನು ಯೋಚನಾಪರನಾಗಿ ತನ್ನ ಮಗನಾದ ಇಂದ್ರಜಿತ್ತನ್ನು ಹನುಮಂತನೊಡನೆ ಯುದ್ಧಮಾಡಲು ಕಳುಹಿಸಿದನು. ಇಂದ್ರಜಿತ್ತು ಹನುಮಂತನನ್ನು ಬ್ರಹ್ಮಾಸ್ತ್ರದಿಂದ ಕಟ್ಟಿ ರಾವಣನ ಬಳಿಗೆ ಕರೆದುಕೊಂಡು ಹೋದನು.

**ತತ್ವ||** ರಾವಣನ ಮಗನಾದ ಇಂದ್ರಜಿತು ಭೋಗಶಕ್ತಿಯ ತತ್ವದವನು. ಇವನನ್ನು ಅನ್ವಯಮಾಡಿರುವ ವಿಚಾರವನ್ನು ಯುದ್ಧಕಾಂಡದಲ್ಲಿ ವಿವರವಾಗಿ ತಿಳಿಸಿರುವುದು. ಇಂದ್ರಜಿತ್ತನ್ನು ನಿಗ್ರಹಿಸಲು ಹನುಮಂತನಿಂದ ಸಾಧ್ಯವಿಲ್ಲ. ಹನುಮಂತನನ್ನು ಇಂದ್ರಜಿತುವೂ ನಿಗ್ರಹಿಸಲಾರನು. ಅಂದರೆ ಇಂದ್ರಜಿತು ತತ್ವದಲ್ಲಿರುವ ಭೋಗಶಕ್ತಿಯನ್ನು ಲಕ್ಷ್ಮಣನ ತತ್ವದಲ್ಲಿರುವ ವೈರಾಗ್ಯವೇ ನಿಗ್ರಹಿಸಬೇಕಲ್ಲದೆ ಹನುಮಂತನ ಕಾರ್ಯದ ತತ್ವವಾದ ಪ್ರಾಣಾಯಾಮದಿಂದ ಸಾಧ್ಯವಿಲ್ಲ. ವಿರಕ್ತಿಯ ತತ್ವದಲ್ಲಿರುವ ಲಕ್ಷ್ಮಣನು ಇಂದ್ರಜಿತ್ತನ್ನು ನಿಗ್ರಹಿಸುವ ವಿಚಾರವು ಯುದ್ಧಕಾಂಡದಲ್ಲಿ ಬರುವುದು. ಆದುದರಿಂದ ಹನುಮಂತನು ಇಂದ್ರಜಿತ್ತನ್ನು ನಿಗ್ರಹಿಸಲಾರನು. ಇದರಂತೆ ಇಂದ್ರಜಿತುವೂ ಹನುಮಂತ

ನನ್ನು ನಿಗ್ರಹಿಸಲಾರನು. ಅಂದರೆ ಭೋಗಶಕ್ತಿಯು ಶ್ವಾಸೋಚ್ಛ್ವಾಸವನ್ನು ಹಾಳುಮಾಡ ಲಾರದು. ಹಾಗಾದರೆ, ಇಂದ್ರಜಿತ್ತಿನ ಬ್ರಹ್ಮಾಸ್ತ್ರದಿಂದ ಹನುಮಂತನು ಕಟ್ಟಲ್ಪಟ್ಟ ತತ್ವವೇನೆಂದರೆ—ಭೋಗಪ್ರಧಾನಶಕ್ತಿಗೆ ಇಂದ್ರಜಿತ್ತಿನ ಬ್ರಹ್ಮಾಸ್ತ್ರವೆಂದು ಹೆಸರು. ಸೃಷ್ಟಿಕ್ರಮದಲ್ಲಿ ಆಯಾಯಾ ತತ್ವಗಳಿಗೆ ಲಭಿಸಿರುವ ಪ್ರಧಾನಶಕ್ತಿಸ್ವರೂಪಕ್ಕೆ ಆಯಾಯಾ ತತ್ವಗಳ ಬ್ರಹ್ಮಾಸ್ತ್ರವೆಂದು ಸೂಚಿತವಾಗುವುದು. ರಾವಣನ ಬ್ರಹ್ಮಾಸ್ತ್ರವೆಂದರೆ ವಾಸನಾ ವೃತ್ತಿ. ಶ್ರೀರಾಮನ ಬ್ರಹ್ಮಾಸ್ತ್ರವೆಂದರೆ ಜ್ಞಾನಶಕ್ತಿ. ಲಕ್ಷ್ಮಣನ ಬ್ರಹ್ಮಾಸ್ತ್ರವೆಂದರೆ ವಿರಕ್ತಿಶಕ್ತಿ. ಇಂದ್ರಜಿತ್ತಿನ ಬ್ರಹ್ಮಾಸ್ತ್ರವೆಂದರೆ ಭೋಗಶಕ್ತಿ. ಹೀಗೆಯೇ ಪ್ರತಿಯೊಂದು ತತ್ವಕ್ಕೂ ಅನ್ವಯಿಸಿಕೊಳ್ಳಬೇಕು.

ಮುಖ್ಯತಾತ್ಪರ್ಯವೇನೆಂದರೆ, ಪ್ರಾಣಾಯಾಮದ ಅನುಷ್ಠಾನದಿಂದ ಭೋಗಶಕ್ತಿಯ ಉಲ್ಬಣವು ತಗ್ಗಿದರೂ ಭೋಗಶಕ್ತಿಯೇ ನಿಗ್ರಹವಾಗಲಾರದು. ಭೋಗಶಕ್ತಿಯು ನಿಗ್ರಹವಾಗಬೇಕಾದರೆ ವೈರಾಗ್ಯವನ್ನು ಹೊಂದಿರುವ ಮನಸ್ಸು ಪ್ರಾಣಾಯಾಮದ ಸಹಾಯದಿಂದ ಭೋಗಶಕ್ತಿಯನ್ನು ನಿಗ್ರಹಿಸಬೇಕಾಗಿರುವುದರಿಂದ ಯುದ್ಧಕಾಂಡದಲ್ಲಿ ಮನಸ್ತತ್ವದಲ್ಲಿರುವ ಲಕ್ಷ್ಮಣನು ಹನುಮಂತನ ಸಹಾಯದಿಂದ ಇಂದ್ರಜಿತ್ತನ್ನು ನಿಗ್ರಹಿ ಸಿರುತ್ತಾನೆ. ಆದರೆ ಪ್ರಾಣಾಯಾಮದ ಅನುಷ್ಠಾನ ಮಾಡುತ್ತಿರುವಾಗ ಪ್ರಬಲವಾದ ವಿಷಯಭೋಗೇಚ್ಛೆಯು ಏನಾದರೂ ಅಂಕುರಿಸಿದರೆ, ಪ್ರಾಣಾಯಾಮವು ಸ್ತಿಮಿತಕ್ಕೆ ನಿಲ್ಲದೆ ಹೋಗುವುದು. ಈ ವಿಧದ ಭೋಗೇಚ್ಛೆಯ ಶಕ್ತಿಯಿಂದ ಪ್ರಾಣಾಯಾಮದ ಸ್ಥೈರ್ಯವು ತಪ್ಪುವುದೇ ಇಂದ್ರಜಿತ್ತು ಹನುಮಂತನನ್ನು ಬ್ರಹ್ಮಾಸ್ತ್ರದಲ್ಲಿ ಬಂಧಿಸಿದ್ದುದು.

ಹನುಮಂತನು ಇಂದ್ರಜಿತ್ತಿನ ಬ್ರಹ್ಮಾಸ್ತ್ರದಲ್ಲಿ ಸಿಕ್ಕಿಬಿದ್ದ ತತ್ವದಲ್ಲಿ ನಾವು ತಿಳಿದು ಕೊಳ್ಳಬೇಕಾದ ಮುಖ್ಯಾಂಶವೇನೆಂದರೆ, ಯೋಗಕ್ಕೆ ಭೋಗಶಕ್ತಿಯೊಂದೇ ವಿಘ್ನಕಾರಿ ಯಾದುದು. ಪ್ರಾಣಾಯಾಮದ ಅನುಷ್ಠಾನವು ಚೆನ್ನಾಗಿ ಸ್ತಿಮಿತಕ್ಕೆ ಬರಬೇಕಾದರೆ ಆಹಾರ ವ್ಯವಹಾರಗಳಲ್ಲಿ ದೃಢವಾದ ನಿಯಮದಿಂದ ಇರಬೇಕು. ಇಲ್ಲದಿದ್ದರೆ ಅನೇಕ ರೋಗಾದಿಗಳಿಗೆ ಕಾರಣವಾಗಿ ಅಧಿಕಾರಿಯು ಕೆಡುತ್ತಾನೆ. ಯೋಗಾಭ್ಯಾಸವು ಸ್ತಿಮಿತಕ್ಕೆ ಬಂದನಂತರ ಅಷ್ಟು ನಿಯಮವಾಗಿರಬೇಕಾದುದಿಲ್ಲ. ಒಂದು ಸಸಿಯನ್ನು ನೆಟ್ಟರೆ ಪ್ರಥಮದಲ್ಲಿ ಪಶ್ವಾದಿಗಳಿಂದ ಉಪದ್ರವವುಂಟಾಗದಂತೆ ಬೇಲಿಯಿಂದ ಭದ್ರಪಡಿಸಿದರೆ ದೊಡ್ಡ ವೃಕ್ಷವಾಗಿ ಫಲಗಳನ್ನು ಕೊಡುವುದು. ಸಸಿಯನ್ನು ಬೇಲಿ ಮುಂತಾದುವುಗಳಿಂದ ಚೆನ್ನಾಗಿ ಕಾಪಾಡದಿದ್ದರೆ ಪಶ್ವಾದಿಗಳು ತಿನ್ನುವುದರಿಂದ ಸಸಿಯು ಅಭಿವೃದ್ಧಿಗೆ ಬರುವು ದಿಲ್ಲ. ಕೊನೆಗೆ ಸಸಿಯೇ ನಾಶವಾಗಬಹುದು. ಹಾಗೆಯೇ ಯೋಗಾನುಷ್ಠಾನದ ಪ್ರಥಮದಲ್ಲಿ ಆಹಾರ ವ್ಯವಹಾರಗಳಲ್ಲಿ ಅತಿ ಜಾಗರೂಕತೆಯಿಂದಲೂ, ದೃಢವಾದ ನಿಯಮದಿಂದಲೂ ಇರಬೇಕು.

ಈ ಮೇಲಿನ ತಾತ್ಪರ್ಯಗಳಿಂದ ಹನುಮಂತನು ಇಂದ್ರಜಿತ್ತಿನ ಬ್ರಹ್ಮಾಸ್ತ್ರಕ್ಕೆ ಸಿಕ್ಕಿದ್ದ ನೆಂದರೆ-ಭೋಗಶಕ್ತಿಯು ಉಲ್ಬಣದಿಂದ ಪ್ರಾಣಾಯಾಮದ ಅನುಷ್ಠಾನವು ಕುಂಠಿತ ವಾಗುವ ಸಂಭವ ಬರುವುದೆಂಬ ತಾತ್ಪರ್ಯ.

## ೯ನೆಯ ಪ್ರಕರಣ.

**ಹನುಮಂತನು ಲಂಕಾದಹನ ಮಾಡಿದುದು.**

**ಶಕ್ತಿಚಲನಪ್ರಾಣಾಯಾಮದಿಂದ ಮೂಲಾಧಾರದಲ್ಲಿರುವ ಅಗ್ನಿಯು ಪ್ರಜ್ವಲನೆಯಾಗುವ ವಿಚಾರ.**

**ರಾ||** ಹನುಮಂತನನ್ನು ಇಂದ್ರಜಿತು ಬ್ರಹ್ಮಾಸ್ತ್ರದಿಂದ ಬಂಧಿಸಿ ರಾವಣನ ಬಳಿಗೆ ಹಿಡಿದುಕೊಂಡು ಹೋದನು. ರಾವಣನಿಗೆ ಹನುಮಂತನು ಹಿತೋಪದೇಶಮಾಡಲು, ಅವನು ಹನುಮಂತನನ್ನು ಕೊಲ್ಲುವಂತೆ ಆಜ್ಞೆಮಾಡಿದನು.

**ತತ್ವ||** ಶಕ್ತಿಚಲನಪ್ರಾಣಾಯಾಮವು ಸಿದ್ಧಿಸುತ್ತಾ ಬಂದರೆ, ಅವಿದ್ಯೆಯ ಸ್ಥಳ ವಾದ ಮೂಲಾಧಾರಚಕ್ರವು ಶೋಧಿಸಲ್ಪಡುತ್ತದೆ. ಹೀಗೆ ಶೋಧಿಸಲ್ಪಡುವುದರಿಂದ ಮೂಲಾಧಾರದ ತತ್ವವಾದ ಬ್ರಹ್ಮಗ್ರಂಥಿಯಲ್ಲಿರುವ ಕಲ್ಮಷವು ಕ್ಷಯಿಸುತ್ತ ಬರುವುದು. ಮೂಲಾಧಾರದ ಕಲ್ಮಷವು ಹೋಗಿ ಶುದ್ಧಿಯಾದರೆ ಶ್ವಾಸೋಚ್ಛ್ವಾಸದ ವಾಯುವಿಗೆ ಅವಿದ್ಯಾಪ್ರಧಾನಶಕ್ತಿಯು ಸಂಪರ್ಕವಾಗುವುದು. ಈ ತತ್ವಾರ್ಥವೇ ಹನುಮಂತನು ರಾವಣನ ಸಂದರ್ಶನ ಮಾಡಿದುದಾಗಿರುತ್ತದೆ.

**ರಾ||** ರಾವಣನ ತೇಜಸ್ಸನ್ನು ನೋಡಿ ಹನುಮಂತನು ಮೋಹಿತನಾಗಿ ತನ್ನಲ್ಲಿ ತಾನು ಆಶ್ಚರ್ಯಪಟ್ಟು, ಈ ರಾಕ್ಷಸೇಶ್ವರನು ಧರ್ಮಹೀನನಾಗದಿದ್ದರೆ ಇಂದ್ರನೊಡ ಗೂಡಿದ ಸ್ವರ್ಗಲೋಕಕ್ಕೂ ರಕ್ಷಕನಾಗಿರುತ್ತಿದ್ದನೆಂದು ಯೋಚಿಸಿಕೊಂಡನು.

**ತತ್ವ||** ರಾವಣನು ರಜೋಗುಣದಲ್ಲಿ ಪ್ರತಿಬಿಂಬಿತವಾದ ಪರಮಾತ್ಮಚೈತನ್ಯವೆಂದು ಹಿಂದೆ ಹನುಮಂತನು ಸೀತಾದೇವಿಗೆ ಚೂಡಾಮಣಿಯನ್ನು ಒಪ್ಪಿಸಿದ ಪ್ರಕರಣದಲ್ಲಿ ತಿಳಿಸಿರುತ್ತದಷ್ಟೆ! ರಜೋಗುಣದಲ್ಲಿ ಪ್ರತಿಬಿಂಬಿತವಾದ ಆತ್ಮಚೈತನ್ಯವು ಕೂಡ ಅಸಾಧಾರಣವಾದುದೆಂಬ ತತ್ವವನ್ನು ಸೂಚಿಸುವುದೇ ಹನುಮಂತನು ರಾವಣನ ತೇಜಸ್ಸನ್ನು ನೋಡಿ ಆಶ್ಚರ್ಯಪಟ್ಟುದಾಗಿರುವುದು. ರಜೋಗುಣದಲ್ಲಿ ಪ್ರತಿಬಿಂಬಿತ ವಾದ ಆತ್ಮಚೈತನ್ಯವು ಅಸಾಧಾರಣವಾದುದಾದರೂ, ಈಶ್ವರ ಮತ್ತು ಆತ್ಮರಿಗೆ ಶತ್ರು ವಾಗಿರುತ್ತದೆ. ಅಂದರೆ ಪ್ರಾಣಿಗಳಿಗೆ ಸಮಾಧಿರೂಪವಾದ ಈಶ್ವರ ಸೋಪಾನವನ್ನು

ಹೊಂದುವುದಕ್ಕೆ ವಿರೋಧಿಯಾಗಿರುವುದು. ಅಂದರೆ ಪ್ರಾಣಿಗಳನ್ನು ಪ್ರಪಂಚವ್ಯಾಪಾರದ ಕ್ರಿಯೆಯಲ್ಲಿಯೇ ಮಗ್ನಮಾಡಿಸುವುದಾದುದರಿಂದ ರಾವಣನ ತತ್ವದಲ್ಲಿರುವ ವಿಕ್ಷೇಪ ಶಕ್ತಿಯು ಧರ್ಮಹೀನವಾದುದು.

ಸತ್ವಾಂಶವಾಗಿ ಪರಮಾತ್ಮನಿಷ್ಠೆಗೆ ಸಹಕರಿಸಿಕೊಂಡಿರುವ ಕ್ರಿಯೆಗಳಿಗೆ ಧರ್ಮವೆಂದು ಸಾಧಾರಣವಾಗಿ ವಾಡಿಕೆಯಾಗಿರುವುದು. ಎಷ್ಟೇ ಸತ್ವಾಂಶವುಳ್ಳ ಕರ್ಮವಾದರೂ ಮಲಿನಸತ್ವವಾದುದರಿಂದ ಕಿಂಚಿತ್ತಾದರೂ, ಜೊತೆಯಲ್ಲಿ ಅಧರ್ಮವಿದ್ದೇ ಇರುವುದು. ಆದುದರಿಂದ ಮಲಿನಸತ್ವವನ್ನೇ ಶುದ್ಧವಾದ ಧರ್ಮವೆಂದು ಹೇಳಬಾರದು. ಪರಮಾತ್ಮ ಸಾಕ್ಷಾತ್ಕಾರದ ಸ್ವರೂಪವನ್ನೇ ಶುದ್ಧವಾದ ಧರ್ಮವೆಂದು ಶ್ರುತಿಯು ತಿಳಿಸುತ್ತದೆ. ಇದೇ ಅರ್ಥಕ್ಕೆ ಶ್ರೀವಿದ್ಯಾರಣ್ಯರವರು ವೇದಾಂತಪಂಚದಶಿ ಪ್ರತ್ಯಕ್ತತ್ವವಿವೇಕ ಪ್ರಕರಣದಲ್ಲಿ,

ಧರ್ಮಮೇಘ ಮಿಮಂಪ್ರಾಹು ಸ್ಸಮಾಧಿಂ ಯೋಗವಿತ್ತಮಾಃ |
ವರ್ಷತ್ಯೇಷ ಯತೋ ಧರ್ಮಾಮೃತಧಾರಾ ಸ್ಸಹಸ್ರಶಃ ||

ತಾ|| ಬ್ರಹ್ಮಸಾಕ್ಷಾತ್ಕಾರವುಳ್ಳವರು ಈ ನಿರ್ವಿಕಲ್ಪಸಮಾಧಿಯನ್ನು ಧರ್ಮಮೇಘ ವನ್ನಾಗಿ ಹೇಳುವರು. ಈ ನಿರ್ವಿಕಲ್ಪಸಮಾಧಿಯು ಧರ್ಮಲಕ್ಷಣಗಳಾದ ಅಮೃತಧಾರೆ ಗಳನ್ನು ಅಪರಿಮಿತವಾಗಿ ವರ್ಷಿಸುವುದರಿಂದ ಆತ್ಮಸಾಕ್ಷಾತ್ಕಾರಸ್ವರೂಪವೇ ಧರ್ಮಮೇಘ ವೆಂದು ಹೇಳಿರುತ್ತದೆ. ಎಂದು ಹೇಳಿರುವರು.

ಆದುದರಿಂದ ಆತ್ಮಸಾಕ್ಷಾತ್ಕಾರದ ಸ್ವರೂಪವೇ ಶುದ್ಧಧರ್ಮ. ಇಂತಹ ಆತ್ಮ ಸಾಕ್ಷಾತ್ಕಾರದ ನಿಷ್ಠೆಗೆ ಸಹಕರಿಸಿಕೊಂಡಿರುವ ಕ್ರಿಯೆಗಳು ಧರ್ಮಮಾರ್ಗ ಅಥವಾ ಮಲಿನ ಸತ್ವಗುಣದ ನಡೆವಳಿಕೆಗಳೆಂದು ಕರೆಯಲ್ಪಡುವುವು. ಈ ಮೇಲಿನ ತತ್ವಾರ್ಥಗಳಿಗನು ಸಾರವಾಗಿ ಆತ್ಮಸಾಕ್ಷಾತ್ಕಾರಕ್ಕೆ ವಿರೋಧಿಯಾಗಿ ಪ್ರಪಂಚವ್ಯಾಪಾರದಲ್ಲಿ ಮುಳುಗಿಸುವವ ನಾದುದರಿಂದ ವಿಕ್ಷೇಪಶಕ್ತಿಯ ತತ್ವದಲ್ಲಿರುವ ರಾವಣನು ಧರ್ಮಹೀನನು. ಶ್ರೀಮನ್ನಾರಾ ಯಣನಿಗೆ ವಿರೋಧಿಯಾಗಿಯೇ ಇರಬೇಕೆಂಬ ಶಾಪವೂ ಇರುವುದರಿಂದ ರಾವಣನು ಧರ್ಮ ಹೀನನು. ಅಲ್ಲದೆ ಸೀತಾ ರಾಮರು ಕೂಡಿರುವುದೇ ಈಶ್ವರತ್ವ. ಇಂತಹ ಈಶ್ವರತ್ವಕ್ಕೆ ರಾವ ಣನು ವಿಘ್ನಕಾರಿಯಾದನೆಂದರೆ, ಪ್ರಾಣಿಗಳನ್ನು ಇಂದ್ರಿಯಗಳ ಮೂಲಕ ಬಹಿರ್ವ್ಯಾಪಾರಕ್ಕೆ ಸೆಳೆದು, ಶುದ್ಧಸತ್ವಗುಣವನ್ನು ತನ್ನಧೀನವಾಗಿರುವಂತೆ ಮಾಡಿಕೊಳ್ಳುವುದರಿಂದಲೂ, ರಾವಣನು ಧರ್ಮಹೀನನು. ಅಂದರೆ ರಾವಣನ ತತ್ವದಲ್ಲಿರುವ ವಿಕ್ಷೇಪಶಕ್ತಿಯು ಈ ಈಶ್ವರತ್ವಕ್ಕೂ ಆತ್ಮಸ್ವರೂಪಕ್ಕೂ ವಿರೋಧಿಯೆಂಬ ತಾತ್ಪರ್ಯವೇ ಹನುಮಂತನು ಹೇಳಿದ ರಾವಣನಲ್ಲಿರುವ ಅಧರ್ಮದ ತತ್ವವಾಗಿರುವುದು.

ರಾ|| ಲಂಕೆಯನ್ನು ಅಲ್ಲೋಲಕಲ್ಲೋಲಮಾಡಿದ ಹನುಮಂತನನ್ನು ಕೊಲ್ಲಿಸ ಬೇಕೆಂದು ರಾವಣನು ಉದ್ಯುಕ್ತನಾದನು. ದೂತಕಾರ್ಯದಲ್ಲಿ ಬಂದವರನ್ನು ಕೊಲ್ಲಬಾರ ದೆಂದು ವಿಭೀಷಣನು ರಾವಣನಿಗೆ ಹಿತೋಪದೇಶಮಾಡಿದನು.

ತತ್ವ|| ಪರಮಾತ್ಮಸಾಕ್ಷಾತ್ಕಾರವೇ ಶುದ್ಧವಾದ ಧರ್ಮವೆಂದೂ ಪ್ರಪಂಚವ್ಯವ ಹಾರದಲ್ಲಿ ಸತ್ವಾಂಶವಾಗಿ ಪರಮಾತ್ಮನಿಷ್ಠೆಗೆ ಅನುಕೂಲವಾಗಿರುವ ನಡೆವಳಿಕೆಗಳನ್ನು ಧರ್ಮಮಾರ್ಗವೆಂದೂ ಮೇಲೆ ತಿಳಿಸಿತ್ತಷ್ಟೆ! ಹೀಗೆ ಹೇಳಲು ಕಾರಣವೇನೆಂದರೆ, ಆತ್ಮನ ಕಡೆಗೆ ವ್ಯತಿರೇಕವಾಗಿರುವ ರಜೋಗುಣ ತಮೋಗುಣಗಳ ಸೋಪಾನದಿಂದ ಆತ್ಮಸಾಕ್ಷಾ ತ್ಕಾರವನ್ನು ಪಡೆಯಲು ಸಾಧ್ಯವಿಲ್ಲ. ಅಧಿಕಾರಿಯು ಮಲಿನಸತ್ವಗುಣದ ಸೋಪಾನಕ್ಕೆ ಬಂದು, ಮಲಿನಸತ್ವಗುಣದಿಂದ ಶುದ್ಧಸತ್ವಗುಣದ ಸೋಪಾನವನ್ನು ಹೊಂದಿ, ಅನಂತರ ಪರಮಾತ್ಮಸಾಕ್ಷಾತ್ಕಾರವಾದ ನಿರ್ಗುಣಸೋಪಾನವನ್ನು ಹೊಂದಬೇಕು. ಪರಮಾತ್ಮ ಸಾಕ್ಷಾತ್ಕಾರ ಸ್ವರೂಪವಾದ ಶುದ್ಧಧರ್ಮಕ್ಕೆ ಮಲಿನಸತ್ವವು ಸಹಕಾರಿಯಾಗಿರುವುದರಿಂದ ಮಲಿನಸತ್ವಗುಣದ ನಡೆವಳಿಕೆಗಳನ್ನು ಧರ್ಮಮಾರ್ಗವೆಂದು ವಿಧಿಸಿರುವುದು. ಈ ಮಲಿನಸತ್ವಗುಣದ ಚೈತನ್ಯಸ್ವರೂಪ ಅಥವಾ ಧರ್ಮಮಾರ್ಗಸ್ವರೂಪದವನೇ ವಿಭೀ ಷಣನು.

ಈ ವಿಭೀಷಣನ ಇಷ್ಟಕ್ಕೆ ರಾವಣನು ಸಮ್ಮತಿಸಿ ಕಾರ್ಯಗಳನ್ನು ನಡೆಸುತ್ತಿದ್ದಲ್ಲಿ, ಪ್ರಾಣಿಗಳ ವ್ಯವಹಾರವು ಸಾತ್ವಿಕದ ಸ್ವಭಾವವೆನಿಸಿ ಧರ್ಮಮಾರ್ಗವೆನಿಸಿಕೊಳ್ಳುವುದು. ವಿಭೀಷಣನ ಇಷ್ಟಕ್ಕೆ ವಿರೋಧವಾಗಿ ರಾವಣನು ಕಾರ್ಯಗಳನ್ನು ನಡೆಸಿದಲ್ಲಿ ಪ್ರಾಣಿಗಳ ವ್ಯವಹಾರವು ಅಧರ್ಮವೆನಿಸುವುದು. ಅಂದರೆ ಪ್ರಪಂಚದ ನಡೆವಳಿಕೆಯಾದ ಅವಿದ್ಯೆ ಯಲ್ಲಿ ಧರ್ಮಾಧರ್ಮಮಾರ್ಗಗಳೆಂಬ ವಿಭಾಗವುಂಟಾಗಿರುವುದು. ವಿಭೀಷಣನ ಇಷ್ಟ ದಂತೆ ರಾವಣನು ಸಮ್ಮತಿಸಿ ಹನುಮಂತನನ್ನು ಕೊಲ್ಲಿಸಲಿಲ್ಲವೆಂದರೆ—ಧರ್ಮಮಾರ್ಗಾನು ಸಾರವಾಗಿ ನಡೆವಳಿಕೆಗಳು ಇದ್ದುವೆಂಬ ತತ್ವವಾಗಿರುವುದು. ವಿಭೀಷಣನಿಗೆ ಅನ್ವಯ ಮಾಡಿರುವ ವಿಚಾರಗಳನ್ನು ಮುಂದೆ ಯುದ್ಧಕಾಂಡದಲ್ಲಿ ಬರೆದಿರುತ್ತದೆ. ಇಲ್ಲಿನ ವಿಚಾರ ವನ್ನು ಅಲ್ಲಿಗೂ ಅನ್ವಯಮಾಡಿಕೊಳ್ಳಬೇಕು.

ರಾ|| ರಾವಣನ ಆಜ್ಞೆಯಂತೆ ಹನುಮಂತನ ಬಾಲಕ್ಕೆ ಎಣ್ಣೆಯ ಬಟ್ಟೆಗಳನ್ನು ಸುತ್ತಿ ಬೆಂಕಿಯನ್ನು ಹತ್ತಿಸಲು, ಹನುಮಂತನು ಲಂಕಾನಗರಿಯನ್ನೆಲ್ಲ ತನ್ನ ಬಾಲದ ಅಗ್ನಿಯಿಂದ ದಹಿಸಿದನು.

ತತ್ವ|| ಶಕ್ತಿಚಲನಪ್ರಾಣಾಯಾಮವು ಸಿದ್ಧಿಸುತ್ತಾ ಬಂದರೆ ಅವಿದ್ಯೆಯ ಸ್ಥಳವಾದ ಮೂಲಾಧಾರಚಕ್ರವು ಶೋಧಿಸಲ್ಪಡುತ್ತದೆ. ಮೂಲಾಧಾರಚಕ್ರವೇ ಬ್ರಹ್ಮಗ್ರಂಥಿ ಅಥವಾ

ಓಂಕಾರದಲ್ಲಿನ "ಅ"ಕಾರವೆಂದರೆ ವಿಶ್ವತ್ವದ ಸ್ಥಳವಾಗಿರುವುದು. ಈ ಸ್ಥಳದಲ್ಲಿ ವೈಶ್ವಾನರನಿರುವನೆಂದು ಯೋಗಶಿಖೋಪನಿಷತ್ತಿನಲ್ಲಿ,

ಗುದಮೇಢ್ರಾಂತರಾಳಸ್ಥಂ ಮೂಲಾಧಾರತ್ರಿಕೋಣಕಂ |
ಯಸ್ಮಾದುತ್ಪದ್ಯತೇವಾಯು ರ್ಯಸ್ಮಾದ್ವಹ್ನಿಃಪ್ರವರ್ತತೇ ||

ತಾ|| ಗುದಸ್ಥಾನ ಮತ್ತು ರಹಸ್ಯಸ್ಥಾನದ ಮಧ್ಯದಲ್ಲಿರುವ ತ್ರಿಕೋಣಾಕಾರವಾದ ಮೂಲಾಧಾರಚಕ್ರವು ವಾಯುವಿನಿಂದ ಪೀಡಿತವಾದಮಾತ್ರದಲ್ಲಿಯೇ ಅಗ್ನಿಯು ಸ್ಫುಟವಾಗುವುದು ಎಂದು ಹೇಳಿರುವುದು.

ವೈಶ್ವಾನರನೆಂದರೆ, ಯಜ್ಞೇಶ್ವರನು. ಬೂದಿ ಮುಂತಾದ್ದು ಮುಚ್ಚಿಕೊಂಡಿದ್ದರೆ ಅಗ್ನಿಯು ಚೆನ್ನಾಗಿ ಜ್ವಲಿಸದೇ ಇರುತ್ತದಷ್ಟೆ! ಇದರಂತೆ ಸಾಧಾರಣ ಮನುಷ್ಯರ ಮೂಲಾಧಾರದಲ್ಲಿರುವ ಅಗ್ನಿಯು ಕಲ್ಮಷಗಳಿಂದ ಮುಚ್ಚಿಕೊಂಡು ಪ್ರಜ್ವಲಿಸುವುದಿಲ್ಲ. ಯಾರು ಯೋಗಾನುಷ್ಠಾನದಲ್ಲಿ ಪ್ರವೇಶಿಸಿ, ಪ್ರಾಣಾಯಾಮದಲ್ಲಿ ಸಿದ್ಧಿಹೊಂದುವರೋ ಅವರಲ್ಲಿ ಮಾತ್ರ ಮೂಲಾಧಾರದಲ್ಲಿನ ಕಲ್ಮಷವು ಹೋಗಿ ಅಗ್ನಿಯು ಅತಿಶಯವಾಗಿ ಪ್ರಜ್ವಲಿಸುವುದು. ಶಕ್ತಿಚಲನಪ್ರಾಣಾಯಾಮದ ಅನುಷ್ಠಾನದಲ್ಲಿ ಗಂಟಲಿನ ಸ್ಥಳದಿಂದ ಉಸಿರನ್ನು ಸೂರ್ಯನಾಡಿಯ ಮೂಲಕ ಮೂಲಾಧಾರಚಕ್ರಕ್ಕೆ ತೆಗೆದುಕೊಂಡು ಹೋಗಿ, ಅಲ್ಲಿ ಕುಂಭಕ ಮಾಡಿ, ಪುನಃ ಚಂದ್ರನಾಡಿಯಲ್ಲಿ ಮೇಲಕ್ಕೆ ಕಂಠಕ್ಕೆ ತೆಗೆದುಕೊಂಡು ಬರಬೇಕೆಂದು ಪ್ರಥಮದಲ್ಲಿಯೇ ತಿಳಿಸಿರುತ್ತದಷ್ಟೆ! ಈ ಪ್ರಾಣಾಯಾಮದಿಂದ ಮೂಲಾಧಾರದಲ್ಲಿರುವ ಅಗ್ನಿಜ್ವಾಲೆಯು ಅತ್ಯಂತ ಪ್ರಜ್ವಲಿತವಾಗಿ ನಮ್ಮ ದೇಹದಲ್ಲಿ ಮೂಲಾಧಾರಚಕ್ರವು ಇರುವ ಸ್ಥಳದಲ್ಲಿ ಅತ್ಯಂತ ಶಾಖವುಂಟಾಗುವುದು. ಆಗ ದೇಹದಲ್ಲಿ ಯಜ್ಞೇಶ್ವರನ ದೀಪನವು ಅತಿಶಯವಾಗುವುದು. ಈ ವಿಧವಾದ ಅಗ್ನಿಯು ಪ್ರಜ್ವಲಿಸುವ ತತ್ವವೇ ಹನುಮಂತನು ಲಂಕೆಯನ್ನು ದಹನಮಾಡಿದ್ದಾಗಿರುತ್ತದೆ. ಹನುಮಂತನು ಲಂಕಾದಹನ ಮಾಡಿದ ಮತ್ತು ಶಕ್ತಿಚಲನ ಪ್ರಾಣಾಯಾಮದ ಅನುಷ್ಠಾನದ ವಿವರಣೆಯನ್ನು ಯೋಗಕುಂಡಲ್ಯುಪನಿಷತ್ ಪ್ರಥಮಾಧ್ಯಾಯದಲ್ಲಿ,

ಪದ್ಮಾಸನಗತಸ್ವಸ್ಥೋ ಗುದಮಾಕುಂಚ್ಯಸಾಧಕಃ |
ವಾಯುಮೂರ್ಧ್ವಗತಂಕುರ್ವನ್ ಕುಂಭಕಾವಿಷ್ಟಮಾನಸಃ |
ವಾಯ್ವಾಘಾತವಶಾದಗ್ನೀ ಸ್ವಾಧಿಷ್ಠಾನಗತೋಜ್ವಲನ್ |
ಜ್ವಲನಾಘಾತಪವನಾ ಘಾತೋರುನ್ನಿದ್ರಿತೋಹಿರಾಟ್ |
ಬ್ರಹ್ಮಗ್ರಂಥಿಂತತೋಭಿತ್ವಾ ವಿಷ್ಣುಗ್ರಂಥಿಂ ಭಿನತ್ಯತಃ |

ರುದ್ರಗ್ರಂಥಿಂಚ ಭಿತ್ವೈವ ಕಮಲಾನಿಭಿನತ್ತಿಷಟ್ |
ಸಹಸ್ರಕಮಲೇಶಕ್ತಿ ಶ್ಶಿವೇನಸಹಮೋದತೆ |

ತಾ|| ಗುದವನ್ನು ಮೇಲಕ್ಕೆಳೆದುಕೊಳ್ಳುವ ವಿಧಾನದ ಪದ್ಮಾಸನವನ್ನು ಅಭ್ಯಾಸ ಮಾಡಿ, ಸ್ತಿಮಿತಕ್ಕೆ ತಂದುಕೊಂಡಿರುವ ಸಾಧಕನು ಅಪಾನವಾಯುವನ್ನು ಮೇಲಕ್ಕೆಬ್ಬಿಸಿ ಕುಂಭಕವನ್ನು ಮಾಡಿದರೆ, ವಾಯುವಿನ ಹೊಡೆತದಿಂದ ಮೂಲಾಧಾರದಲ್ಲಿರುವ ಅಗ್ನಿ ಜ್ವಾಲೆಯು ಸ್ವಾಧಿಷ್ಠಾನಚಕ್ರವನ್ನು ಸೇರುವುದು. ಆ ಕಾಲದಲ್ಲಿ ಅಗ್ನಿ ಮತ್ತು ವಾಯುವಿನ ಹೊಡೆತದಿಂದ ಗಾಢನಿದ್ರೆಯಲ್ಲಿರುವ ಪರಾಶಕ್ತಿಸ್ವರೂಪಳಾದ ಕುಂಡಲಿನಿಯು ಎಚ್ಚರಗೊಳ್ಳುವಳು. ಅನಂತರ ಈ ಶಕ್ತಿಯು ಮೂಲಾಧಾರದಲ್ಲಿರುವ ಬ್ರಹ್ಮಗ್ರಂಥಿಯನ್ನು ಭೇದಿಸಿಕೊಂಡು, ಹೃದಯದಲ್ಲಿರುವ ವಿಷ್ಣುಗ್ರಂಥಿ, ಭ್ರೂಮಧ್ಯದಲ್ಲಿರುವ ರುದ್ರಗ್ರಂಥಿ, ಮೊದಲಾದ ಆರು ಕಮಲಗಳೆಂದರೆ ಷಟ್ಚಕ್ರಗಳನ್ನು ಭೇದಿಸಿಕೊಂಡು ಸಹಸ್ರಾರಕಮಲದಲ್ಲಿರುವ ಪರಮಾತ್ಮನೊಡನೆ ಸೇರಿ ಆನಂದಮಗ್ನವಾಗುವುದು ಎಂದು ಹೇಳಿರುವುದು.

ಆದುದರಿಂದ ಹನುಮಂತನು ಲಂಕಾದಹನ ಮಾಡಿದನೆಂದರೆ—ಮೂಲಾಧಾರದಲ್ಲಿರುವ ಯಜ್ಞೇಶ್ವರನು ಪ್ರಜ್ವಲಿತನಾದನೆಂಬ ತತ್ವವಾಗಿರುವುದು.

ಶಕ್ತಿಚಲನಪ್ರಾಣಾಯಾಮವನ್ನು ಮಾಡಲು ಸಿದ್ಧ ಪದ್ಮಾಸನಗಳೆರಡರಲ್ಲಿ ಪದ್ಮಾಸನವೇ ಶ್ರೇಷ್ಠವೆಂದು ಹಿಂದೆ ತಿಳಿಸಿರುತ್ತದಷ್ಟೆ! ಪದ್ಮಾಸನವನ್ನು ಹಾಕಿ ಕುಳಿತುಕೊಳ್ಳುವುದರಲ್ಲಿಯೂ ಕೈಗಳನ್ನು ಮಂಡಿಯಲ್ಲಿ ಬಿಗಿ ಕೊಟ್ಟುಕೊಂಡು ಕುಳಿತರೇನೆ ಗುದವು ಆಕುಂಚನೆಯಾಗಿ ಅಪಾನವಾಯುವನ್ನು ಮೇಲಕ್ಕೆಬ್ಬಿಸಲು ಅನುಕೂಲವಾಗುವುದು. ಈ ವಿಧವಾಗಿ ಗುದವನ್ನು ಆಕುಂಚನೆಮಾಡಿಕೊಳ್ಳುವ ರೀತಿಯಲ್ಲಿ ಕುಳಿತು ಮಾಡುವ ಶಕ್ತಿಚಲನಪ್ರಾಣಾಯಾಮದ ಪರಿಪಕ್ವಾವಸ್ಥೆಯಲ್ಲಿ ಮೇಲಿನ ಶ್ರುತಿಪ್ರಮಾಣವನ್ನು ಅನುಸರಿಸಿಯೂ, ಹನುಮಂತನು ಲಂಕಾದಹನ ಮಾಡಿದ ತತ್ವದಂತೆಯೂ, ಮೂಲಾಧಾರದ ಅಗ್ನಿಪ್ರಜ್ವಲನೆಯಾಗುವುದು. ಈ ಮೇಲಿನ ಶ್ರುತಿವಾಕ್ಯಗಳಲ್ಲ " ಉನ್ನಿದ್ರಿತೋಹಿರಾಟ್ " ಎಂಬ ವಾಕ್ಯದ ಪರ್ಯಂತರದ ಕಾರ್ಯಗಳೆಲ್ಲ ಹನುಮಂತನ ಕಾರ್ಯದ ತತ್ವವಾದ ಪ್ರಾಣಾಯಾಮಕ್ಕೆ ಸಂಬಂಧಪಟ್ಟವು. ಗ್ರಂಥಿಭೇದನೆಯೆಂದರೆ, ಷಟ್ಚಕ್ರಗಳನ್ನು ಭೇದಿಸಿಕೊಂಡು ಸಹಸ್ರಾರಕಮಲವನ್ನು ಸೇರಲು ಹನುಮಂತ, ಸುಗ್ರೀವ, ಲಕ್ಷ್ಮಣರೊಡಗೂಡಿದ ಶ್ರೀರಾಮನೆಂದರೆ—ಬುದ್ಧಿತತ್ವಪ್ರಕಾಶಕನು ಮುಂದೆ ಓಂಕಾರೋಪಾಸನೆಯಿಂದ ಸಮಾಧಿಯ ಅನುಷ್ಠಾನ ಮಾಡಬೇಕಾಗುವುದು. ಇದರ ವಿಚಾರವು ಯುದ್ಧಕಾಂಡದಲ್ಲಿ ಬರುವುದು.

ಮೇಲೆ ತಿಳಿಸಿರುವ ಶ್ರುತಿಪ್ರಮಾಣವಲ್ಲದೆ ಯೋಗತತ್ವೋಪನಿಷತ್ತಿನಲ್ಲಿಯೂ,

ವಾಯುಃಪರಿಚಿತೋಯತ್ನಾ ದಗ್ನಿನಾಸಹಕುಂಡಲೀ |
ಭಾವಯಿತ್ವಾಸುಷುಮ್ನಾಯಾಂ ಪ್ರವಿಶೇದನಿರೋಧತಃ |
ವಾಯುನಾಸಹಚಿತ್ರಂಚ ಪ್ರವಿಶೇಚ್ಚ ಮಹಾಪದಂ |

ತಾ|| ಪ್ರಾಣಾಯಾಮವು ಪ್ರಯತ್ನದಿಂದ ಸಿದ್ಧಿಸುತ್ತಾ ಬಂದರೆ ಕುಂಡಲಿನೀಶಕ್ತಿಯು ಅಗ್ನಿಯೊಡನೆ ಎದ್ದು ಸುಷುಮ್ನೆಯಲ್ಲಿ ಅಡ್ಡಿ ಇಲ್ಲದೆ ಪ್ರವೇಶಮಾಡಿ ಅನಂತರ ವಾಯುವಿನೊಡನೆ ಸಹಸ್ರಾರಕಮಲವನ್ನು ಸೇರುವುದು, ಎಂದು ಹೇಳಿರುವುದು. ಆದುದರಿಂದ ಹನುಮಂತನು ಲಂಕೆಯನ್ನು ದಹನಮಾಡಿದನೆಂದರೆ—ಮೂಲಾಧಾರದಲ್ಲಿರುವ ಅಗ್ನಿಯು ಪ್ರಜ್ವಲನೆಯಾಯಿತೆಂಬ ತತ್ವಾರ್ಥವಾಗಿರುವುದು.

**ರಾ||** ಹನುಮಂತನು ತನ್ನ ಬಾಲದ ಅಗ್ನಿಯಿಂದ ಮಹಾಪಾರ್ಶ್ವ, ವಜ್ರದಂಷ್ಟ್ರ, ಶುಕ, ಸಾರಣ, ಜಂಬುಮಾಲಿ, ಸುಮಾಲಿ, ರಶ್ಮಿಕೇತು, ಸೂರ್ಯಶತ್ರು, ಹ್ರಸ್ವಕರ್ಣ, ದಂಷ್ಟ್ರ, ರೋಮಶ, ಯುದ್ಧೋನ್ಮತ್ತ, ಧ್ವಜಗ್ರೀವ, ವಿದ್ಯುಜ್ಜಿಹ್ವ, ಘೋರ, ಹಸ್ತಿಮುಖ, ಪಿಶಾಚ, ಕರಾಳ, ಶೋಣಿತಾಕ್ಷ, ಮಕರಾಕ್ಷ, ಯಜ್ಞಶತ್ರು, ಬ್ರಹ್ಮಶತ್ರು, ನರಾಂತಕ ಮುಂತಾದ ಪ್ರಧಾನರ ಮತ್ತು ಸೇನಾಪತಿಗಳ ಗೃಹಗಳನ್ನು ದಗ್ಧಮಾಡಿದುದಲ್ಲದೆ, ರಾವಣ, ಕುಂಭಕರ್ಣ, ಇಂದ್ರಜಿತು, ಕುಂಭನಿಕುಂಬರ ಅರಮನೆಗಳನ್ನೆಲ್ಲಾ ಸುಟ್ಟನು, ವಿಭೀಷಣನ ಮನೆಯೊಂದನ್ನು ಮಾತ್ರ ಸುಡಲಿಲ್ಲ. ಈ ರೀತಿಯಾಗಿ ಲಂಕಾನಗರಿಯನ್ನೆಲ್ಲಾ ಅಗ್ನಿಗೆ ಆಹುತಿಕೊಟ್ಟದ್ದಲ್ಲದೆ, ಲಂಕೆಯ ಕೋಟೆಕೊತ್ತಳಗಳನ್ನೂ ಮುರಿದು ಧ್ವಂಸಮಾಡಿದನು.

**ತತ್ವ||** ಶಕ್ತಿಚಲನಪ್ರಾಣಾಯಾಮದಿಂದ ಮೂಲಾಧಾರಚಕ್ರವು ಶೋಧನೆಯಾಗುತ್ತಾ ಬಂದನಂತರ ಅಗ್ನಿಜ್ವಾಲೆಯು ಪ್ರಾರಂಭವಾಗಿ ಮೂಲಾಧಾರದಲ್ಲ ಅತ್ಯಂತ ಶಾಖ ಹುಟ್ಟುವುದನ್ನು ಅಧಿಕಾರಿಯು ಅನುಭವಿಸುತ್ತಾನೆ. ಇಂತಹ ಅಗ್ನಿಪ್ರಜ್ವಲನೆಯ ತತ್ವದಿಂದ ರಜೋಗುಣ ತಮೋಗುಣಗಳ ಅನೇಕ ಶಕ್ತಿಗಳ ಸೌಖ್ಯದ ಸ್ಥಳಗಳೆಲ್ಲಾ ಭಸ್ಮವಾಗುವುವು. ಅಂದರೆ ಮೇಲೆ ಹೇಳಿರುವ ರಾಕ್ಷಸರ ಹೆಸರುಗಳೆಲ್ಲಾ ರಜೋಗುಣ ತಮೋಗುಣಗಳ ಶಕ್ತಿಗಳಾಗಿರುತ್ತವೆ. ಇವರುಗಳ ಅನ್ವಯದ ತತ್ವದ ವಿಚಾರವನ್ನು ಯುದ್ಧಕಾಂಡದಲ್ಲಿ ವಿವರಿಸಿರುತ್ತದೆ. ಲಂಕಾದಹನರೂಪವಾದ ಅಗ್ನಿಪ್ರಜ್ವಲನೆಯಿಂದ ಈ ಅವಿದ್ಯಾಶಕ್ತಿಗಳು ಭ್ರಷ್ಟವಾಗಿ ಕಾಂತಿಗುಂದುತ್ತವೆಂಬ ತಾತ್ಪರ್ಯವಾಗಿರುವುದು. ಅಲ್ಲದೆ ಈ ಶಕ್ತಿಚಲನಪ್ರಾಣಾಯಾಮದಿಂದ ಮೂಲಾಧಾರಚಕ್ರವೆಂದರೆ—ಬ್ರಹ್ಮಗ್ರಂಥಿಯ ಬಿಗಿಯು ಶಿಥಿಲವಾಗುವುದೆಂಬ ತಾತ್ಪರ್ಯವೇ ಹನುಮಂತನು ಕೋಟೆ ಕೊತ್ತಳಗಳನ್ನೆಲ್ಲಾ ಮುರಿದು ಧ್ವಂಸಮಾಡಿರುವುದಾಗಿರುತ್ತದೆ. ಈ ರಜೋಗುಣ ತಮೋಗುಣಗಳಂತೆ

ಮಲಿನಸತ್ವಗುಣವು ಮೋಕ್ಷಮಾರ್ಗಕ್ಕೆ ವಿರೋಧಿಯಲ್ಲವಾದುದರಿಂದ, ಮಲಿನಸತ್ವಗುಣದ ತತ್ವದವನಾದ ವಿಭೀಷಣನ ಅರಮನೆಯನ್ನು ಹನುಮಂತನು ದಹಿಸಲಿಲ್ಲವೆಂಬ ತಾತ್ಪರ್ಯ. ಹನುಮಂತನು ತನ್ನ ಬಾಲದ ಬೆಂಕಿಯಿಂದಲೇ ಲಂಕೆಯನ್ನು ಸುಟ್ಟನೆಂದರೆ, ಗಾಳಿಯು ಬೀಸುವಿಕೆಯಿಂದ ಯಜ್ಞೇಶ್ವರನ ಜ್ವಾಲೆಯು ಅಧಿಕವಾಗಿ ಹರಡಿಕೊಳ್ಳುವಂತೆ ಶ್ವಾಸೋಚ್ಛ್ವಾಸದಹೊಡೆತದಿಂದ ಮೂಲಾಧಾರಚಕ್ರಪ್ರದೇಶವೆಲ್ಲಾ ಯಜ್ಞೇಶ್ವರನ ಪಾಲಾಯಿತು. ಅಂದರೆ ಮೇಲೆ ಹೇಳಿರುವ ಶ್ರುತಿವಾಕ್ಯಗಳಂತೆ, ಮೂಲಾಧಾರದ ಅಗ್ನಿಯು ವಾಯುವಿನೊಡನೆ ಪ್ರಜ್ವಲಿಸಿತೆಂಬ ತಾತ್ಪರ್ಯವೇ ಹನುಮಂತನು ತನ್ನ ಬಾಲದ ಬೆಂಕಿಯಿಂದಲೇ ಲಂಕೆಯನ್ನುದಗ್ಧಮಾಡಿದುದಾಗಿರುತ್ತದೆ. ಮೂಲಾಧಾರದ ಅಗ್ನಿಯು ಪ್ರಜ್ವಲನೆಯಾಗಿ ದೇಹಕ್ಕೆ ಹರಡಿಕೊಂಡು ಅತ್ಯಂತಪ್ರಕಾಶಮಾನವಾಗಿ ಕಾಂತಿಯುಳ್ಳದ್ದಾಗುವುದು. ಈ ತಾತ್ಪರ್ಯಕ್ಕೆ ಶ್ರುತಿವಾಕ್ಯವೂ ಇರುವುದು,

> ತತೋಯಾತೋವಹ್ನ್ಯಪಾನೌ ಪ್ರಾಣಮುಷ್ಣಸ್ವರೂಪಕಮ್ |
> ತೇನಾತ್ಯಂತಪ್ರದೀಪಸ್ತು ಜ್ವಲನೋದೇಹಜಸ್ತಥಾ |

ತಾ|| ದೇಹದಲ್ಲ ಅಪಾನವಾಯುವು ಮತ್ತು ಅಗ್ನಿಯು ಮೇಲಕ್ಕೆ ಬೀಸಿಕೊಂಡು ಸ್ವಾಭಾವಿಕವಾಗಿ ಉಷ್ಣವಾಗಿರುವ ಪ್ರಾಣಶಕ್ತಿಯನ್ನು ಯಾವಾಗ ಸೇರುವುದೋ ಆಗ ದೇಹದಲ್ಲಿ ಅಗ್ನಿದೀಪನವು ಅತ್ಯಂತ ಪ್ರಕಾಶಮಾನವಾಗಿಯೂ ಜ್ವಾಲೆಯುಳ್ಳದ್ದಾಗಿಯೂ ಆಗುವುದು. ಇದನ್ನು ಅಧಿಕಾರಿಯು ಅನುಭವಿಸುವನು.

ಮೂಲಾಧಾರಚಕ್ರವೇ "ಓಂ"ಕಾರದಲ್ಲಿನ "ಅ"ಕಾರ ಅಥವಾ ವಿಶ್ವಸ್ವರೂಪವೆಂದು ಮೇಲೆ ತಿಳಿಸಿರುವುದಲ್ಲದೆ, ಅಗಸ್ತ್ಯಾಶ್ರಮ ಪ್ರಕರಣದಲ್ಲಿಯೂ ತಿಳಿಸಿರುತ್ತದಷ್ಟೆ! ವಿಶ್ವದ ತತ್ವದಲ್ಲಿರುವ ಅಗ್ನಿಯಾದುದರಿಂದ ಈ ಮೂಲಾಧಾರದಲ್ಲಿರುವ ಅಗ್ನಿಗೆ ವೈಶ್ವಾನರವೆಂಬ ಹೆಸರುಬಂದಿರುವುದು. "ವೈಶ್ವಾನರಾಯ ವಿದ್ಮಹೆ ಲಾಲೀಲಾಯ ಧೀಮಹಿ ತನ್ನೋ ಅಗ್ನಿಃ ಪ್ರಚೋದಯಾತ್," ಎಂಬ ಶ್ರುತಿವಾಕ್ಯದಂತೆ ಬ್ರಹ್ಮಚಾರಿಗಳೂ ಗೃಹಸ್ಥರೂ ಉಪಾಸನೆಮಾಡುವ ಅಗ್ನಿಯೇ ಈ ತತ್ವದ ಅಗ್ನಿಯು, ಈ ಅಗ್ನಿಯೇ ಗಾರ್ಹಪತ್ಯಾಗ್ನಿಯಾಗಿರುವುದು. ಇದರ ವಿವರವು ಸೀತಾಗ್ನಿಪ್ರವೇಶದ ತತ್ವದಲ್ಲಿ ಬರುವುದು. ಈ ಅಗ್ನಿಯ ಉಪಾಸನೆಯ ಮೂಲಕ ಆತ್ಮಸಾಕ್ಷಾತ್ಕಾರಮಾಡಿಕೊಳ್ಳಬೇಕಾಗಿರುವುದು. ಈ ಅಗ್ನಿಜ್ವಾಲೆಯು ಎದ್ದು ಬ್ರಹ್ಮರಂಧ್ರದ ಮಾರ್ಗವಾಗಿ ಸಹಸ್ರಾರಕಮಲವನ್ನು ಸೇರಬೇಕು. ಹೀಗೆ ಸೇರಿದರೆ ಆತ್ಮಸಾಕ್ಷಾತ್ಕಾರವಾಗುವುದು. ಈ ತಾತ್ಪರ್ಯಕ್ಕೆ "ತಸ್ಯಾಶ್ಶಿಖಾಯಾಮಧ್ಯೆಪರಮಾತ್ಮಾವ್ಯವಸ್ಥಿತಃ" ಎಂಬ ಶ್ರುತಿಪ್ರಮಾಣವೂ ಇರುವುದು. ಈ ಶ್ರುತಿಪ್ರಮಾಣಕ್ಕೆ ಅನುಸಾರವಾಗಿ ಮೂಲಾಧಾರದಲ್ಲಿರುವ ಅಗ್ನಿಜ್ವಾಲೆಯು ಬ್ರಹ್ಮರಂಧ್ರನಾಡಿಯಲ್ಲಿ ಹೊರಟು ಸಹಸ್ರಾರಕಮಲವನ್ನು ಸೇರುವ ತತ್ವವನ್ನು ಅನುಸರಿಸಿ ಯುದ್ಧ

ಕಾಂಡದಲ್ಲಿ ಶ್ರೀರಾಮನು ಪುನಃ ಲಂಕಾದಹನ ಮಾಡಿಸಿರುತ್ತಾನೆ. ಅಲ್ಲದೆ ಸೀತಾ ದೇವಿಯು ಅಗ್ನಿಪ್ರವೇಶಮಾಡಿರುತ್ತಾಳೆ. ಈ ತತ್ವದ ವಿವರಣೆಗಳು ಯುದ್ಧಕಾಂಡದಲ್ಲಿ ಬರುವುವು.

ಲಂಕಾದಹನತತ್ವದಲ್ಲಿರುವ ಅಗ್ನಿದೀಪನವು ದೇಹದಲ್ಲಿ ಎಲ್ಲಾ ಸ್ಥಳಕ್ಕಿಂತಲೂ ಮೂಲಾಧಾರದಲ್ಲಿ ಅಧಿಕವಾಗುತ್ತದೆ. ಮೂಲಾಧಾರದಲ್ಲಿ ಅಧಿಕವಾದರೂ ಆನಂದಜನಕ ವಾದ ಶುದ್ಧಸತ್ವಗುಣಕ್ಕೆ ಬಾಧಕವಾಗುವುದಿಲ್ಲ. ಅಂದರೆ ಅಧಿಕಾರಿಯಲ್ಲಿ ಈ ವಿಧವಾದ ಅಗ್ನಿದೀಪನವಾದರೂ ಬಾಧಕವಾಗದೆ ಅಧಿಕವಾದ ಆನಂದದಲ್ಲಿರುತ್ತಾನೆ. ಅಲ್ಲದೆ ಈ ಅಗ್ನಿದೀಪನದಿಂದ ಪ್ರಾಣಾಯಾಮದ ಕಾರ್ಯಮಾಡುತ್ತಿರುವ ಹನುಮಂತನ ತತ್ವದಲ್ಲಿರುವ ಶ್ವಾಸೋಚ್ಛ್ವಾಸಕ್ಕೂ ಯಾವ ಬಾಧಕವೂ ಇಲ್ಲದೆ ಅತ್ಯಂತ ಹಿತವಾಗಿರುವುದೆಂಬುದನ್ನು ಅನುಭವಿಸಿ ತಿಳಿದುಕೊಳ್ಳಬಹುದು. ಆದುದರಿಂದ ಈ ಮೇಲಿನ ತತ್ವಾರ್ಥಗಳನ್ನು ಅನು ಸರಿಸಿ ಸೀತಾದೇವಿಗೂ ಹನುಮಂತನಿಗೂ ಲಂಕಾದಹನದಿಂದ ಯಾವ ತೊಂದರೆಯೂ ಇಲ್ಲದೆ ಹಿತವಾಗಿಯೇ ಇತ್ತು.

ಲಂಕಾದಹನವು ಮೂಲಾಧಾರದಲ್ಲಿರುವ ಅಗ್ನಿಪ್ರಜ್ವಲನೆಯ ತತ್ವವಾಗಿರುವುದಕ್ಕೆ ಶ್ರೀರಾಮಕೃಷ್ಣಪರಮಹಂಸರ ಶಿಷ್ಯರಾದ ಸ್ವಾಮಿವಿವೇಕಾನಂದರವರು ತಮ್ಮ ರಾಜ ಯೋಗ ಗ್ರಂಥಗಲ್ಲಿ ಚಿತ್ರಪಠವನ್ನು ಕೊಟ್ಟಿರುವಂತೆ ಇಲ್ಲಿಯೂ ಕೊಟ್ಟಿದೆ. ಈ ಪಠದಲ್ಲಿ ಅಗ್ನಿಪ್ರಜ್ವಲನೆಯನ್ನು ಸಹ ತೋರಿಸಿದೆ.

## ೧೦ನೆಯ ಪ್ರಕರಣ.

| **ವಾನರರು ವನದಲ್ಲಿ ಮಧುಪಾನ ಮಾಡಿದುದು.** | **ಶಕ್ತಿಚಲನ ಪ್ರಾಣಾಯಾಮದ ಪರಿಪಕ್ವಾವಸ್ಥೆಯಲ್ಲಿ ದೇಹದಲ್ಲಿನ ವಾಯುಶಕ್ತಿಗಳು ಅಮೃತದಿಂದ ತೋಯಿಸಲ್ಪಡುವ ವಿಚಾರ.** |
|---|---|

**ರಾ||** ಹನುಮಂತನು ಲಂಕೆಯಿಂದ ಹೊರಟು ಸಮುದ್ರವನ್ನು ದಾಟಿ ಜಾಂಬು ವಂತನೇ ಮೊದಲಾದವರನ್ನು ಸೇರಿ ಲಂಕೆಯಲ್ಲಿ ನಡೆದ ವೃತ್ತಾಂತಗಳನ್ನು ತಿಳಿಸಿದನು. ಅನಂತರ ವಾನರರೆಲ್ಲರೂ ಶ್ರೀರಾಮನ ಬಳಿಗೆ ಪ್ರಯಾಣಹೊರಟು ನಡುದಾರಿಯಲ್ಲಿ ಮಧು ವನವನ್ನು ಪ್ರವೇಶಿಸಿ ಅಂಗದನ ಅನುಮತಿಯಿಂದ ತೃಪ್ತಿಯಾಗಿ ಮಧುಪಾನ ಮಾಡು ತ್ತಿರಲು, ದಧಿಮುಖನು ವಾನರರನ್ನು ತಡೆದನು. ದಧಿಮುಖನಿಂದ ನಿವಾರಿತರಾದ ವಾನರ ರನ್ನು ಹನುಮಂತ ಅಂಗದರು ಮತ್ತಷ್ಟು ಪ್ರೋತ್ಸಾಹಮಾಡಲು ವಾನರರು ತೃಪ್ತಿಯಾಗಿ ಮಧುಪಾನಮಾಡಿದರು.

**ತತ್ವ||** ದಧಿಮುಖನೆಂದರೇನು ? ಇವನು ಮಧುವನಕ್ಕೆ ಕಾವಲಿರುವುದೆಂದರೇನು? ಹನುಮಂತನ ಕಾರ್ಯವಾದ ಪ್ರಾಣಾಯಾಮದ ಅನುಷ್ಠಾನದ ಅಂತ್ಯದಲ್ಲಿ ಮಧುಪಾನಮಾಡ ಬೇಕಾದ ಪ್ರಮೇಯವೇನು ? ಈ ಅಂಶಗಳ ತತ್ವಾರ್ಥಗಳೇನೆಂದರೆ—ದಧಿಮುಖನೆಂದರೆ, ಹವಿಸ್ಸನ್ನು ಭುಂಜಿಸುವ ದಹನಸ್ವರೂಪವಾದ ಜ್ವಾಲೆ. ಇದನ್ನೇ ಅಗ್ನಿಯೆಂದು ಕರೆಯ ಬಹುದು. ದಧಿಯೆಂದರೆ ಸಾಧಾರಣವಾಗಿ ಮೊಸರೆಂದು ಅರ್ಥ. ಇಲ್ಲಿ ದಧಿಯೆಂದರೆ ಹವಿಸ್ಸು. ಸಾಧಾರಣವಾಗಿ ಸಂಧ್ಯೋಪಾಸನೆಯಲ್ಲಿಯೂ ದೇವರ ಪೂಜೆಯಲ್ಲಿಯೂ ಹೇಳುವ ಶ್ರುತಿವಾಕ್ಯವಾದ,

ದಧಿಕ್ರಾವಣ್ಣೋ ಅಕಾರಿಷಂ ಜಿಷ್ಣೋರಶ್ವಸ್ಯ ವಾಜಿನಃ |
ಸುರಭಿನೋ ಮುಖಾಕರ ತ್ಪ್ರಾಣ ಆಯುಗ್ಂಷಿ ತಾರಿಷತ್ |

ಎಂಬ ಲಿಂಗಮಂತ್ರವು ದಹನರೂಪನಾದ ಅಗ್ನಿಯ ಪ್ರಾರ್ಥನೆ. ಇದರಲ್ಲಿ ದಧಿ ಕ್ರಾವಣ್ಣನೆಂದರೆ, ದಧಿ-ಹವಿಸ್ಸನ್ನು, ಕ್ರಾವಣ್ಣ-ಭುಂಜಿಸುವವನಾದುದರಿಂದ ದಹನರೂಪ ವಾದ ಅಗ್ನಿ. ದಧಿಮುಖನೆಂದರೆ-ಹವಿಸ್ಸನ್ನು ಭುಂಜಿಸುವ ದಹನಸ್ವರೂಪವಾದ ಜ್ವಾಲೆ.

ಇಲ್ಲಿ ದಹನಸ್ವರೂಪವಾದ ಜ್ವಾಲೆಯು ಭುಂಜಿಸುವ ಹವಿಸ್ಸು ಯಾವುದೆಂದರೆ— ಚಂದ್ರನಿಂದ ಉತ್ಪತ್ತಿಯಾಗುವ ಅಮೃತ. ಅಂದರೆ ನಮ್ಮ ದೇಹದಲ್ಲಿ ಭ್ರೂಮಧ್ಯಪ್ರದೇಶ ದಲ್ಲಿ ಚಂದ್ರನಿರುವನು. ಈ ಚಂದ್ರನು ಕಳಾಶಕ್ತಿ ಪ್ರಭಾವದಿಂದ ಅಮೃತವನ್ನು ನಮ್ಮ ಗಂಟಲಿನ ಅಂಗಳಿನಮೂಲಕ ದೇಹಕ್ಕೆ ವ್ಯಾಪಿಸಲು ಸ್ರವಿಸುತ್ತಿರುವನು. ಹೀಗೆ ಸ್ರವಿಸು ತ್ತಿರುವ ಅಮೃತವನ್ನು ನಾಭಿದೇಶದಲ್ಲಿರುವ ಸೂರ್ಯನ ದಹನರೂಪವಾದ ಶಕ್ತಿಯು ಪಾನ ಮಾಡಿ ದೇಹಕ್ಕೆ ಸರಿಯಾಗಿ ವ್ಯಾಪಿಸದಂತೆ ಮಾಡಿ ದೇಹವನ್ನು ಹೀನಸ್ಥಿತಿಗೆ ತರುವುದು. ಈ ಅರ್ಥಕ್ಕೆ ಶ್ರುತಿಯಲ್ಲಿ,

ಯತ್ಕಿಂಚತ್ಸ್ರವತೇಚಂದ್ರಾ ದಮೃತಂದಿವ್ಯರೂಪಿಣಃ |
ತತ್ಸರ್ವಂಗ್ರಸತೇಸೂರ್ಯ ಸ್ತೇನಪಿಣ್ಡೋಜರಾಯುತಃ ||

ತಾ|| ಉತ್ಕೃಷ್ಟವಾದ ಯಾವ ಅಮೃತವು ಚಂದ್ರನಿಂದ ಸ್ರವಿಸಲ್ಪಡುವುದೋ ಅದೆಲ್ಲ ವನ್ನೂ ನಾಭಿಯಲ್ಲಿರುವ ಅಗ್ನಿತೇಜೋಸಮಾನವಾದ ಸೂರ್ಯನ ದಹನಶಕ್ತಿಯು ಪಾನ ಮಾಡುವುದು. ಇದರಿಂದ ದೇಹವು ಹೀನಸ್ಥಿತಿಯನ್ನು ಹೊಂದುವುದು. ಎಂದು ಹೇಳಿರುವುದು.

ಯಾವಾಗ ಶಕ್ತಿಚಲನಪ್ರಾಣಾಯಾಮವು ಪರಿಪಕ್ವಾವಸ್ಥೆಗೆ ಬಂದು ಬ್ರಹ್ಮರಂಧ್ರದ ಬಾಗಿಲು ತೆರೆದು ಮೂಲಾಧಾರದಲ್ಲಿರುವ ಅಗ್ನಿಯು ಚಿತ್ರಸಠದಲ್ಲಿ ತೋರಿಸಿರುವಂತೆ

ಪ್ರಜ್ವಲನೆಯಾಗುವುದೋ, ಮತ್ತು ಶಕ್ತಿಚಲನೆಯ ಕುಂಭಕದಿಂದ ಅಪಾನವಾಯುವು ತಿದಿಯೊತ್ತಿದಂತೆ ಮೇಲಕ್ಕೆ ಬೀಸುವುದೋ ಆಗ ಅಧೋಮುಖದಲ್ಲಿರುವ ಸೂರ್ಯನ ಜ್ವಾಲೆಯು ಊರ್ಧ್ವಮುಖವಾಗಿ, ತಾಲುಮೂಲದಲ್ಲಿರುವ ಅಂದರೆ ಅಂಗಳಲ್ಲಿರುವ ಚಂದ್ರ ಮಂಡಲದಿಂದ ಅಮೃತವು ಸ್ರವಿಸಿ ದೇಹಕ್ಕೆ ವ್ಯಾಪಿಸುವುದು. ಈ ತಾತ್ಪರ್ಯಕ್ಕೆ ಯೋಗ ಶಿಖೋಪನಿಷತ್ ಪಂಚಮ ಷಷ್ಠಾಧ್ಯಾಯಗಳಲ್ಲಿ,

ನಭಸ್ಥಸ್ಸೂರ್ಯರೂಪೋಗ್ನಿ ರ್ನಾಭಿಮಂಡಲಮಾಶ್ರಿತಃ |
ವಿಷಂವರ್ಷತಿಸೂರ್ಯೋಸೌ ಸ್ರವತ್ಯಮೃತಮುನ್ಮುಖಃ |
ಸುಷುಮ್ನಾಯೈಕುಂಡಲಿನ್ಯೈ ಸುಧಾಯೈಚಂದ್ರಮಂಡಲಾತ್ |
ಮನೋನ್ಮನ್ಯೈನಮಸ್ತುಭ್ಯಂ ಮಹಾಶಕ್ತ್ಯೈಚಿದಾತ್ಮನೆ ||

ತಾ|| ಆಕಾಶಗತನಾದ ಸೂರ್ಯನು ತನ್ನ ಜ್ವಾಲೆಯಿಂದಲೇ ವರ್ಷವನ್ನು ಕರೆಯು ವಂತೆ ನಮ್ಮ ದೇಹದಲ್ಲಿ ಮಣಿಪೂರವನ್ನಾಶ್ರಯಿಸಿಕೊಂಡಿರುವ ಸೂರ್ಯನ ದಹನರೂಪ ಜ್ವಾಲೆಯು ಉನ್ಮುಖವಾದಲ್ಲಿ ಅದು ಚಂದ್ರಮಂಡಲವನ್ನು ಸೇರಿ ಅಮೃತವರ್ಷವನ್ನು ಕರೆ ಯುವುದು. ಸುಷುಮ್ನಾನಾಡಿಗೂ, ಕುಂಡಲಿನೀಶಕ್ತಿಗೂ, ಚಂದ್ರಮಂಡಲದಿಂದುಂಟಾ ಗುವ ಅಮೃತಕ್ಕೂ, ಮನೋನ್ಮನಿಗೂ, ಚಿಚ್ಛಕ್ತಿಗೂ ಪರಬ್ರಹ್ಮನಾದ ನಿನಗೆ ನಮಸ್ಕಾರ ಎಂದು ಹೇಳಿರುವುದು.

ಈ ಮೇಲಿನ ಶ್ರುತಿಪ್ರಮಾಣವನ್ನನುಸರಿಸಿ ವಾನರರು ಮಧುಪಾನಮಾಡಿದರೆಂದರೆ ಅಧಿಕಾರಿಯ ದೇಹದಲ್ಲಿನ ವಾಯುಶಕ್ತಿಗಳು ಅಮೃತದಿಂದ ತೋಯಿಸಲ್ಪಟ್ಟುವೆಂಬ ತಾತ್ಪರ್ಯವಾಗಿರುವುದು.

ವಾನರರು ಮಧುಪಾನಮಾಡಿದ ಕಾಲದಲ್ಲಿ ಹನುಮಂತ ಮತ್ತು ಅಂಗದನ ಅತ್ಯಂತ ಪ್ರೋತ್ಸಾಹದೊಡನೆ ಮಧುಪಾನ ಮಾಡಿರುತ್ತಾರೆ. ಹನುಮಂತ ಅಂಗದರ ಪ್ರೋತ್ಸಾಹದ ತತ್ವವೇನೆಂದರೆ--ಕುಂಡಲಿನೀ ಉತ್ಥಾಪನೆಯಾಗಿ ಪ್ರಾಣಾಯಾಮವು ಸ್ಥಿಮಿತಕ್ಕೆ ಬಂದ ನಂತರ, ಕುಂಭಕ ಮಾಡಿದರೆ ಉಸಿರಿನ ನಡುಕು ತಗ್ಗಿ ಒಂದೇ ಸ್ಥಳದಲ್ಲಿ ನಿಲ್ಲುವುದೇ ವಾನರರು ಮಧುಪಾನಮಾಡಲು ಹನುಮಂತನು ಪ್ರೋತ್ಸಾಹಮಾಡಿದುದಾಗಿದೆ. ಅಂಗದನೂ ಪ್ರೋತ್ಸಾಹ ಮಾಡಿದನೆಂದರೆ ಅಪಾನವಾಯುವು ಊರ್ಧ್ವಮುಖವಾಗಿ ಬೀಸುವುದೇ ಅಂಗದನಿಂದ ಪ್ರೋತ್ಸಾಹವು. ಪ್ರಾಣಾಯಾಮವನ್ನು ಅಭ್ಯಾಸಮಾಡಿ ಪರಿ ಪಕ್ವಾವಸ್ಥೆಗೆ ಬಂದಿರತಕ್ಕವರಿಗೆ ಅಗ್ನಿಯ ಊರ್ಧ್ವಮುಖವಾದ ಜ್ವಾಲೆಯಿಂದ ಅಮೃತವು ಅಧಿಕವಾಗಿ ಸ್ರವಿಸಿ ಸೂರ್ಯನ ಜ್ವಾಲೆಯು ದಹಿಸದೆ ದೇಹಕ್ಕೆ ಹರಡಿಕೊಂಡು ವಾಯುಗಳೆಲ್ಲ

ಪಾನಮಾಡುತ್ತವೆ. ಇದೇ ತಾತ್ಪರ್ಯಕ್ಕೆ ಮೇಲೆ ತೀಸಿರುವ ಶ್ರುತಿಪ್ರಮಾಣವಲ್ಲದೆ ವರಾಹೋಪನಿಷತ್ ಪಂಚಮಾಧ್ಯಾಯದಲ್ಲಿ,

ಗುದಯೋನಿಸಮಾಯುಕ್ತ ಆಕುಂಚತ್ಯೇಕಕಾಲತಃ |
ಅಪಾನಮೂರ್ಧ್ವಗಂಕೃತ್ವಾ ಸಮಾನೋನೇನಯೋಜಯೇತ್ |
ಸ್ವಾತ್ಮಾನಂಚಶಿವಂಧ್ಯಾಯೇ ದಮೃತಪ್ಲಾವನಂತತಃ |

ಗುದ ಯೋನಿಗಳನ್ನು ಏಕಕಾಲದಲ್ಲಿ ಆಕುಂಚನೆಮಾಡಿ ಅಧೋಗಾಮಿಯಾದ ಅಪಾನವಾಯುವನ್ನು ಊರ್ಧ್ವಮುಖಮಾಡಿಕೊಂಡು ಸಮಾನವಾಯುವಿನೊಡನೆ ಸೇರಿಸಬೇಕು. ಇದರಿಂದುಂಟಾದ ಅಮೃತಸ್ರಾವದಿಂದ ತೋಯಿಸಲ್ಪಟ್ಟವನಾಗಿ ಸ್ವಸ್ವರೂಪನಾದ ಶಿವನನ್ನು ಧ್ಯಾನಮಾಡಬೇಕು. ಎಂದು ಹೇಳಿರುವುದು.

ಆದುದರಿಂದ ವಾನರರು ಮಧುಪಾನಮಾಡಿದರೆಂದರೆ—ಸೂರ್ಯನ ದಹನರೂಪವಾದ ಜ್ವಾಲೆಯು ಅಮೃತವನ್ನು ಭಕ್ಷಿಸುತ್ತಿದ್ದುದನ್ನು ತಪ್ಪಿಸಿ ದೇಹದಲ್ಲಿರುವ ವಾಯುಗಳೆಲ್ಲಾ ಅಮೃತದಿಂದ ತೋಯಿಸಲ್ಪಟ್ಟ ತಾತ್ಪರ್ಯವಾಗಿರುವುದು. ಅಧಿಕಾರಿಯು ಶಕ್ತಿಚಲನ ಪ್ರಾಣಾಯಾಮವನ್ನು ಮಾಡಲು ಪ್ರಾರಂಭಿಸಿದನಂತರ ತನ್ನ ದೇಹದಲ್ಲಿ ಉತ್ಪನ್ನವಾಗುವ ಸ್ವೇದವೆಂದರೆ ಬೆವರನ್ನು ಬಟ್ಟೆಯಲ್ಲಿ ತಿಕ್ಕದೆ ಹಸ್ತಗಳಿಂದ ದೇಹಕ್ಕೇ ಉಜ್ಜಿಕೊಳ್ಳಬೇಕು. ಕಾರಣವೇನೆಂದರೆ, ಈ ಬೆವರಿನಲ್ಲಿ ಅಮೃತವಿರುವುದರಿಂದ ಇದನ್ನು ಹೊರಕ್ಕೆ ಬಿಡದೆ ದೇಹಕ್ಕೆ ತಿಕ್ಕಿಕೊಂಡರೆ ಆಯಾಸವು ಪರಿಹಾರವಾಗುವುದಲ್ಲದೆ, ದೇಹಕ್ಕೂ ಕಾಂತಿ ಬರುವುದು. ಈ ತಾತ್ಪರ್ಯವನ್ನೇ ಶ್ರೀಸ್ವಾತ್ಮಾರಾಮಯೋಗಿಗಳು ಹಟಯೋಗಪ್ರದೀಪಿಕೆಯಲ್ಲಿ ಸೂಚಿಸಿರುತ್ತಾರೆ. ಈ ವಿಷಯದಲ್ಲಿ ಆಧುನಿಕ ವೈದ್ಯಶಾಸ್ತ್ರಕ್ಕೂ ಯೋಗಶಾಸ್ತ್ರಕ್ಕೂ ಭೇದವಿರುವುದು.

ಹನುಮಂತನ ಮುಖ್ಯಕಾರ್ಯದ ತತ್ವವಾದ ಪ್ರಾಣಾಯಾಮದ ಕಾರ್ಯವು ಅಂತ್ಯಕ್ಕೆ ಬಂದರೂ ಮುಂದೆ ಯುದ್ಧಕಾಂಡದ ಕಥೆಯ ತತ್ವವಾದ ಸಮಾಧಿಯ ಅನುಷ್ಠಾನದಲ್ಲಿಯೂ ಹನುಮಂತನು ಮುಖ್ಯಸಹಾಯಕನಾಗಿರುತ್ತಾನೆ. ಅಂದರೆ ಸಮಾಧಿಯ ಅಭ್ಯಾಸದಲ್ಲಿಯೂ ಶ್ವಾಸೋಚ್ಛ್ವಾಸದ ಸಹಾಯವು ಮುಖ್ಯವಾದುದಾಗಿರುತ್ತದೆ. ವಾಲಿಯನ್ನು ಕೊಂದ ಪ್ರಕರಣದಲ್ಲಿ ಅಪಾನವಾಯುವು ಮೋಕ್ಷಮಾರ್ಗದಲ್ಲಿರತಕ್ಕವರಿಗೆ ಊರ್ಧ್ವಮುಖವಾಗಿ ಬೀಸುತ್ತಿರಬೇಕೆಂದು ಕಮ್ಮಾರನು ಅಗ್ನಿಪ್ರಜ್ವಲನೆಮಾಡಲು ತಿದಿಯೊತ್ತಿದಂತೆ ಇರಬೇಕೆಂಬ ಉದಾಹರಣೆಯನ್ನು ಕೊಟ್ಟು ಹಿಂದೆ ವಿವರಿಸಿತಷ್ಟೆ! ಇದರ ತತ್ವವು ಈ ಪ್ರಕರಣದ ತತ್ವದಿಂದ ತಕ್ಕಮಟ್ಟಿಗೆ ಮನಸ್ಸಿಗೆ ಮಂದಟ್ಟಾಗುವುದು. ಅಲ್ಲದೆ ಮುಂದೆ ಇಂದ್ರಜಿತ್ತಿನ ಯುದ್ಧಕಾಲದಲ್ಲಿ ಗರುಡನು ಬಂದ ಸಂದರ್ಭದಲ್ಲಿಯೂ ಇದರ ತತ್ವವು ಬರೆಯಲ್ಪಟ್ಟಿರುವುದು.

ಈ ಮೇಲಿನ ಅಂಶಗಳೇ ವಾನರರು ಮಧುಪಾನಮಾಡಿದ ತತ್ವವಾಗಿರುವುದು. ಮಧುವೆಂದರೆ "ಮಧುನಾ ಪುಷ್ಪರಸೇನ ಯೋಗಾದ್ವಾ ಮಧುಃ" ಅಂದರೆ ಇದರಲ್ಲಿ ಮಕರಂದವಿರುವುದು. ಮಕರಂದವೇ ಅಮೃತಸ್ವರೂಪ. ಆದುದರಿಂದ ವಾನರರು ಮಧುಪಾನಮಾಡಿದ ಕಥೆಯ ಅಂತರಾರ್ಥವೇ ದೇಹದಲ್ಲಿನ ವಾಯುಗಳು ಅಮೃತಪಾನಮಾಡಿ ಹರ್ಷದಿಂದ ಮದವೇರಿ ಕುಣಿದಾಡುತ್ತಿದ್ದುದಾಗಿದೆ. ವಾನರರು ಮಧುಪಾನಮಾಡಿದ ತತ್ವವಲ್ಲದೆ, ಲಂಕಾದಹನ ಮೊದಲಾಗಿ ಹನುಮಂತನು ಸುಂದರಕಾಂಡದಲ್ಲಿ ನಡೆಸಿದ ಕಾರ್ಯಗಳ ತತ್ವಗಳನ್ನೂ ಒಳಗೊಂಡಿರುವಂತೆ ಶ್ರೀಶಂಕರಭಗವತ್ಪಾದರವರು ಯೋಗತಾರಾವಳಿಯಲ್ಲಿ,

ಉತ್ಥಾಪಿತಾಧಾರಹುತಾಶನೋಲ್ಕೈ |
ರಾಕುಂಚನೈಶ್ಶ್ವ ದಪಾನವಾಯೋಃ |
ಸಂತಾಪಿತಾಚ್ಚಂದ್ರಮಸಸ್ಸ್ರವಂತೀಂ |
ಪೀಯೂಷಧಾರಾಂ ಪಿಬತೀಹಧನ್ಯಃ ||

ತಾ|| ಮೂಲಾಧಾರದಿಂದೆಬ್ಬಿಸಲ್ಪಟ್ಟ ಅಗ್ನಿಜ್ವಾಲೆಯನ್ನು ಅಪಾನವಾಯುವಿನಿಂದ ಮೇಲಕ್ಕೆ ಏಳುವಂತೆ ಮಾಡಿ, ಇದರಿಂದ ಉಂಟಾಗುವ ಶಾಖದಿಂದ ಚಂದ್ರಮಂಡಲದಿಂದ ಕರಗಿ ಸ್ರವಿಸುವ ಅಮೃತಧಾರೆಯನ್ನು ಪಾನಮಾಡುವಂತಹ ಮಹಾತ್ಮನು ಧನ್ಯನು ಎಂದು ಹೇಳಿರುತ್ತಾರೆ.

ಶ್ರೀಶಂಕರಭಗವತ್ಪಾದರವರ ಈ ಒಂದು ಶ್ಲೋಕದಲ್ಲಿಯೇ ಹನುಮಂತನು ನಡೆಸಿರುವ ಸುಂದರಕಾಂಡದ ತತ್ವವೆಲ್ಲಾ ಅಡಗಿರುವುದು. ಅಲ್ಲದೆ ಅಮೃತಪಾನಮಾಡುವ ಮಹಾತ್ಮನು ಧನ್ಯನೆಂದು ಸರ್ವಜ್ಞಮೂರ್ತಿಯಾದ ಶ್ರೀಶಂಕರಭಗವತ್ಪಾದರವರು ಹೇಳಿರುವಾಗ ಹನುಮಂತನ ಕಾರ್ಯದ ತತ್ವವಾದ ಪ್ರಾಣಾಯಾಮದ ಶ್ರೇಷ್ಠತೆಯು ಎಷ್ಟರಮಟ್ಟಿಗೆಂಬುದನ್ನು ಸರ್ವರೂ ಯೋಚಿಸಿಕೊಳ್ಳಬಹುದು. ಈ ಶಕ್ತಿಚಲನಪ್ರಾಣಾಯಾಮದ ಜೊತೆಗೆ ಅನೇಕ ಶ್ರುತಿಗಳಲ್ಲಿ ಹೇಳಿರುವ ಮತ್ತು ಶ್ರೀಶಂಕರಭಗವತ್ಪಾದರವರೂ ಅನುಮೋದಿಸಿ ಶ್ಲಾಘಿಸಿರುವ ಮೂಲಬಂಧ, ಉಡ್ಯಾಣಬಂಧ ಮತ್ತು ಜಾಲಂಧರಬಂಧವೆಂಬ ಮೂರು ಮುದ್ರೆಗಳ ಅನುಷ್ಠಾನವನ್ನು ಮಾಡಬೇಕಾಗಿದೆ. ಆದರೆ ಶಕ್ತಿಚಲನಪ್ರಾಣಾಯಾಮವು ಕೊಂಚ ಸ್ಥಿತಿಗೆ ಬಂದಮೇಲೆ ಧ್ಯಾನ ಧಾರಣ ಸಮಾಧಿಗಳ ಅನುಷ್ಠಾನದ ಜೊತೆಯಲ್ಲಿ ಇವುಗಳನ್ನು ಮಾಡಬೇಕು. ಆದರೂ ಗುರುಮುಖೇನ ತಿಳಿದು ಶಕ್ತಿಚಲನಪ್ರಾಣಾಯಾಮದೊಡನೆಯೂ ಕೊಂಚವಾಗಿ ಅಭ್ಯಾಸಮಾಡುತ್ತಾ ಬಂದರೆ ಸಮಾಧಿ ಅನುಷ್ಠಾನಕ್ಕೆ ಉತ್ತಮ. ಈ ಮುದ್ರೆಗಳ ವಿಚಾರವು ಮುಂದಿನ ಕಥೆಯ ತತ್ವಗಳಲ್ಲಿ ವಿವರಿಸಲ್ಪಟ್ಟಿರುವುದು.

ಈ ಶಕ್ತಿಚಲನಪ್ರಾಣಾಯಾಮನೇ ಅಂತರ್ಭಸ್ತ್ರಿಕವೆಂದು ಹಿಂದೆ ತಿಳಿಸಿದೆಯಷ್ಟೆ! ಪ್ರಾಣಾಯಾಮಕ್ಕೆ ಇದೇ ಕೊನೆಯಸೋಪಾನ. ಅಧಿಕಾರಿಯು ಅಂತರ್ಭಸ್ತ್ರಿಕ ಅಥವಾ ಶಕ್ತಿಚಲನಪ್ರಾಣಾಯಾಮದ ಅನುಷ್ಠಾನದ ಅಂತಸ್ತಿಗೆ ಬಂದನಂತರದಲ್ಲಿಯೂ ಕಿಷ್ಕಿಂಧಾ ಕಾಂಡದಲ್ಲಿ ತಿಳಿಸಿರುವ ರೇಚಕ ಪೂರಕ ಮತ್ತು ಕುಂಭಕಪ್ರಾಣಾಯಾಮಗಳನ್ನು ಶಕ್ತಿ ಚಲನಪ್ರಾಣಾಯಾಮದೊಡನೆ ಅಭ್ಯಾಸಮಾಡಬೇಕು. ಅಂದರೆ ಅಧಿಕಾರಿಯು ರೇಚಕ ಪೂರಕ ಪ್ರಾಣಾಯಾಮಗಳನ್ನೂ ಶಕ್ತಿಚಲನಪ್ರಾಣಾಯಾಮದೊಂದಿಗೆ ಅಗತ್ಯವಾಗಿ ಅಭ್ಯಾಸಮಾಡಬೇಕು. ಇವುಗಳೆಲ್ಲವನ್ನೂ ಜೊತೆಯಲ್ಲಿ ಮಾಡುವುದರಿಂದ ಪ್ರಾಣಾ ಯಾಮದಿಂದ ಹೊಂದಬಹುದಾದ ಫಲವು ಶೀಘ್ರವಾಗಿ ದೊರಕುವುದು. ಈ ಅಂತರ್ಭ ಸ್ತ್ರಿಕ ಅಥವಾ ಶಕ್ತಿಚಲನಪ್ರಾಣಾಯಾಮವನ್ನು ತಿಳಿದ ಗುರುವು ದೊರಕದೇ ಇದ್ದರೆ ರೇಚಕ ಪೂರಕ ಕುಂಭಕಪ್ರಾಣಾಯಾಮಗಳನ್ನೂ ಬಾಹ್ಯಭಸ್ತ್ರಿಕಪ್ರಾಣಾಯಾಮವನ್ನೂ ಕುಂಭಕ ಪ್ರಾಣಾಯಾಮದಲ್ಲಿ ಪಳಗಿದನಂತರ ಮಹಾಮುದ್ರೆ ಮಹಾಬಂಧ ಮಹಾವೇಧಗಳನ್ನೂ ಗುರುಮುಖೇನ ತಿಳಿದು ಅಭ್ಯಾಸಮಾಡಿದರೆ ಇದ್ದದ್ದರಲ್ಲಿ ಶೀಘ್ರವಾಗಿ ಕುಂಡಲಿನಿಯು ಉತ್ಥಾಪನೆಯಾಗಿ ಸುಂದರಕಾಂಡದ ತತ್ವವನ್ನು ಅಧಿಕಾರಿಯು ಹೊಂದಿದಂತಾಗಿ ಪ್ರಾಣಾ ಯಾಮದ ಸೋಪಾನವನ್ನು ದಾಟಿದಂತಾಗುವುದು.

ಪ್ರಾಣಾಯಾಮದ ಅನುಷ್ಠಾನವನ್ನು ಪುಸ್ತಕಗಳಲ್ಲಿ ಓದಿಕೊಂಡು ಎಂದಿಗೂ ಅಭ್ಯಾಸಮಾಡಬಾರದು. ಗುರುಮುಖೇನ ಉಪದೇಶ ತೆಗೆದುಕೊಂಡೇ ಅನುಷ್ಠಾನ ಮಾಡಬೇಕು! ಗುರುಮುಖೇನ ತಿಳಿದುಕೊಂಡನಂತರ ಗ್ರಂಥಗಳನ್ನು ಪಠಿಸಿ ಗುರುವಿ ನೊಡನೆ ಚರ್ಚಿಸಿ ತಿಳಿದುಕೊಳ್ಳಬಹುದು. ದಿನಕ್ಕೆ ಎರಡಾವರ್ತಿಯಾಗಲಿ, ಮೂರಾವರ್ತಿ ಯಾಗಲಿ, ಮೂರು ನಾಲ್ಕು ತಿಂಗಳ ಕಾಲ ಆಸನ ಮತ್ತು ರೇಚಕ ಪೂರಕ ಪ್ರಾಣಾ ಯಾಮಗಳನ್ನು ಅಭ್ಯಾಸಮಾಡಿದರೆ, ದೇಹದಲ್ಲಿನ ಕಲ್ಮಷಗಳು ಹೋಗುವುವಲ್ಲದೆ ಉಸಿರಿನ ದುಡುಕು ತಗ್ಗುವುದು. ಅನಂತರ ನಾಲ್ಕಾರು ತಿಂಗಳಕಾಲ ಕುಂಭಕಪ್ರಾಣಾಯಾಮ ವನ್ನು ಮಾಡಿದಮೇಲೆ ಜೊತೆಗೆ ಶಕ್ತಿಚಲನಪ್ರಾಣಾಯಾಮವನ್ನೂ ನಾಲ್ಕೈದು ತಿಂಗಳ ಕಾಲ ಅನುಷ್ಠಿಸಿದಲ್ಲಿ ಪ್ರಾಣಾಯಾಮದ ಸೋಪಾನವನ್ನು ದಾಟಬಹುದು. ಜೀವಮಾನ ವನ್ನೆಲ್ಲಾ ಪ್ರಾಣಾಯಾಮದ ಅನುಷ್ಠಾನಕ್ಕೋಸ್ಕರ ಕಳೆಯಬೇಕಾದುದಿಲ್ಲ.

ವಾನರರು ಸ್ವಯಂಪ್ರಭೆಯನ್ನು ದರ್ಶನಮಾಡಿಕೊಂಡು ಬರುವಪರ್ಯಂತರ ಆಯಾಸದಿಂದ ಬಳಲಿದ್ದರು. ಈ ತತ್ವದಂತೆ ಪ್ರಾಣಾಯಾಮದ ಅನುಷ್ಠಾನದ ಪ್ರಥಮ ದಲ್ಲಿ ಕೆಲವು ಕಾಲ ಕಷ್ಟವಾಗಿ ಕಂಡುಬರುವುದು. ಅನಂತರ ಹನುಮಂತನು ಲಂಕೆಗೆ ಹೋಗಿ ಮಾಡಿರುವ ಕಾರ್ಯಗಳನ್ನೆಲ್ಲ ಕೊಂಚವೂ ಬಳಲಿಕೆಯಿಲ್ಲದೆ ಉತ್ಸಾಹದಿಂದ ನೆರ ವೇರಿಸಿರುತ್ತಾನೆ. ಇದರಂತೆ ಪ್ರಾಣಾಯಾಮದ ಅಭ್ಯಾಸದ ಪ್ರಥಮದಲ್ಲಿ ಕೆಲವು ಕಾಲ

ಕಳೆದನಂತರ ಉಲ್ಲಾಸದಿಂದ ಕೊನೆಯುವರೆಗೂ ಅನುಷ್ಠಾನಮಾಡಬಹುದು. ಸ್ವಾತ್ಮಾರಾಮಯೋಗಿಗಳು ಯೋಗಪ್ರದೀಪಿಕೆಯಲ್ಲಿ ಕುಂಭಕವು ಚೆನ್ನಾಗಿ ಸ್ತಿಮಿತಕ್ಕೆ ಬಂದ ನಂತರ ನಲವತ್ತೈದು ದಿನಗಳಲ್ಲಿ ಕುಂಡಲಿನಿಯನ್ನು ಉತ್ಥಾಪನೆಮಾಡಿಕೊಳ್ಳಬಹುದೆಂದು ಬರೆದಿರುವರು. ಕುಂಭಕವು ಸ್ತಿಮಿತಕ್ಕೆ ಬರುತ್ತಾ ಬರುತ್ತಾ ಆಹಾರವು ತಗ್ಗುತ್ತಾ ಬರುವುದು. ಅಂದರೆ, ಕುಂಭಕವು ಸಿದ್ಧಿಸುತ್ತಾ ಬಂದಾಗ ಅತಿಯಾದ ಆಹಾರವು ಬೇಕಾಗಿರುವುದಿಲ್ಲವಾದುದರಿಂದ ಇಂತಹ ಕಾಲದಲ್ಲಿ ಖಂಡಿತವಾಗಿಯೂ ಅಧಿಕಾರಿಯು ಅತ್ಯಾಹಾರವನ್ನು ಮಾಡಲೇ ಕೂಡದು. ಅಲ್ಲದೆ ಆಸನ ಪ್ರಾಣಾಯಾಮಗಳನ್ನು ಅಭ್ಯಾಸಮಾಡುವ ಕಾಲದಲ್ಲಿ ಕ್ಷೀರ ಮತ್ತು ಘೃತಮಿಶ್ರವಾದ ಆಹಾರವನ್ನು ಮಿತವಾಗಿ ಸೇವನೆ ಮಾಡಬೇಕು. ಖಾರ ಹುಳಿಗಳ ಸೇವನೆಯನ್ನು ಅತ್ಯಂತ ತಗ್ಗಿಸಬೇಕು. ಸೇವನೆಮಾಡುವುದನ್ನೇ ಬಿಟ್ಟರೆ ಅತ್ಯುತ್ತಮ.

ಸೀತಾದೇವಿಯ ವೃತ್ತಾಂತವನ್ನು ತಿಳಿಸಲು ಹನುಮಂತನನ್ನು ಶ್ರೀರಾಮಚಂದ್ರನ ಬಳಿಗೆ ಕರೆದುಕೊಂಡು ಹೋಗೋಣ.

## ೧೧ನೆಯ ಪ್ರಕರಣ.

**ಶ್ರೀರಾಮನು ಸೀತಾದೇವಿಯು ಕಳುಹಿಸಿದ ಚೂಡಾಮಣಿಯನ್ನು ಸ್ವೀಕರಿಸಿದುದು.**

**ಅಧಿಕಾರಿಯು ಪ್ರಾಣಾಯಾಮದ ಪರಿಪಕ್ವಾವಸ್ಥೆಯ ಸೋಪಾನಕ್ಕೆ ಬರುವುದು ಮತ್ತು ಶುದ್ಧಸತ್ವ ಗುಣದ ಇರುವಿಕೆಯ ಸೂಚನೆ.**

**ರಾ||** ವಾನರರು ಮಧುಪಾನ ಮಾಡಿದನಂತರ ಹನುಮಂತನೊಡಗೂಡಿ ಸುಗ್ರೀವನ ಬಳಿಗೆ ಬಂದರು. ಹನುಮಂತನು ತಾನು ಸೀತಾದೇವಿಯನ್ನು ನೋಡಿ ಬಂದ ಸಂಗತಿಯನ್ನು ಶ್ರೀರಾಮನಿಗೆ ತಿಳಿಸಿದುದಲ್ಲದೆ ಸೀತಾದೇವಿಯು ಕೊಟ್ಟಿದ್ದ ಚೂಡಾಮಣಿಯನ್ನು ಒಪ್ಪಿಸಿದನು. ಶ್ರೀರಾಮನು ಚೂಡಾಮಣಿಯನ್ನು ನೋಡಿ ಸೀತಾದೇವಿಯ ಮೇಲಿನ ಪ್ರೀತಿಗೋಸ್ಕರ ಕಣ್ಣೀರು ಸುರಿಸಿ ರೋದನ ಮಾಡಿದನು. ಲಕ್ಷ್ಮಣನೂ ರೋದನ ಮಾಡಲು ಪ್ರಾರಂಭಿಸಿದನು.

**ತತ್ವ||** ಮೋಕ್ಷಾಧಿಕಾರಿಯು ವೇದಾಂತಶ್ರವಣ ಮನನ ಮಾಡಿ ನಿದಿಧ್ಯಾಸಕ್ಕೆ ಸಲಕರಣೆಯಾದ ಆಸನ ಪ್ರಾಣಾಯಾಮಗಳ ಅನುಷ್ಠಾನದ ಸೋಪಾನವನ್ನು ದಾಟಿದಂತಾಯಿತು. ಹನುಮಂತನ ಕಾರ್ಯದ ತತ್ವವಾದ ಪ್ರಾಣಾಯಾಮದ ಅನುಷ್ಠಾನವಾಗುವ ಪರ್ಯಂತರ ಬುದ್ಧಿ ಮನಃ ಪ್ರಕಾಶಕರಾದ ಶ್ರೀರಾಮ ಲಕ್ಷ್ಮಣರು ತಟಸ್ಥರಾಗಿರದೆ ಸೀತಾವಿಯೋಗ ದುಃಖದಿಂದ ಪರಿತಾಪ ಪಡುತ್ತಲೇ ಇದ್ದರು. ಅಂದರೆ ಅಧಿಕಾರಿಯು ಬ್ರಹ್ಮಾ

ತ್ಮೈಕ್ಯದ ಚಿಂತನೆಯಲ್ಲಿಯೇ ಇದ್ದುಕೊಂಡು ಪ್ರಾಣಾಯಾಮದ ಅನುಷ್ಠಾನವನ್ನು ಮಾಡುತ್ತಿದ್ದನೆಂಬ ತತ್ತ್ವ. ಸೀತಾದೇವಿಯಾದರೋ ಪ್ರಪಂಚಾನುವರ್ತಿಯಾಗಿ ಅಂದರೆ ರಾವಣನ ಇಷ್ಟದಂತೆ ಇರಲು ಸಮ್ಮತಿಸದೆ ಈಶ್ವರತ್ವವೇ ಸರ್ವಸ್ವವೆಂದೂ ಇಂತಹ ಈಶ್ವರಸ್ವರೂಪಿಯಾದ ಶ್ರೀರಾಮಚಂದ್ರನನ್ನೇ ಹೊಂದಬೇಕೆಂದೂ ಅನವರತವೂ ದುಃಖ ಪಡುತ್ತಿದ್ದಳು. ಅಲ್ಲದ ಪ್ರಪಂಚಾನುವರ್ತಿಯಾಗಿರಲು ಸಮ್ಮತಿಯಿಲ್ಲದುದರಿಂದ ಕೊನೆಗೆ ಪ್ರಾಣವನ್ನಾದರೂ ಕಳೆದುಕೊಳ್ಳಬೇಕೆಂದು ಪ್ರಯತ್ನಮಾಡಿದಳು.

**ರಾ||** ಸೀತಾದೇವಿಯ ಅವಯವಗಳೆಲ್ಲವೂ ದುಃಖದಿಂದ ಕೃಶವಾಗಿ ಹೋಗಿದ್ದರೂ ಅವಳು ತನ್ನ ಪತಿವ್ರತಾಧರ್ಮವನ್ನು ಮಾತ್ರ ಬಿಡದೆ ನಡೆಸುತ್ತಿರುವಳೆಂದೂ, ಶೀಘ್ರ ದಲ್ಲಿಯೇ ಶ್ರೀರಾಮನ ಸಂದರ್ಶನವಾಗದಿದ್ದರೆ ಪ್ರಾಣತ್ಯಾಗಮಾಡುವುದಾಗಿ ಖಂಡಿತವಾಗಿ ಹೇಳಿರುತ್ತಾಳೆಂದೂ ಹನುಮಂತನು ಶ್ರೀರಾಮನಿಗೆ ಅರಿಕೆಮಾಡಿರುತ್ತಾನೆ. ಶ್ರೀರಾಮ ನಾದರೋ ಸೀತೆಯು ಕಳುಹಿಸಿದ, ಆಕೆಯ ಅಖಂಡಪ್ರೀತಿಯನ್ನು ಸೂಚಿಸುವ ಚೂಡಾ ಮಣಿಯನ್ನು ಸ್ವೀಕರಿಸಿದೊಡನೆಯೇ ದುಃಖದಿಂದ ಕಣ್ಣೀರು ಸುರಿಸುತ್ತಾ ರೋದನ ಮಾಡಿದನು. ಲಕ್ಷ್ಮಣನೂ ಅಳುವುದಕ್ಕಾರಂಭಿಸಿದನು.

**ತತ್ತ್ವ||** ಪ್ರಾಣಾಯಾಮದ ಅನುಷ್ಠಾನವು ಅಧಿಕಾರಿಗೆ ಸಿದ್ಧಿಸಿದರೂ ಅದೇ ಮೋಕ್ಷಕ್ಕೆ ಕೊನೆಯ ಸೋಪಾನವಲ್ಲ. ಪ್ರಾಣಾಯಾಮವು ಸಿದ್ಧಿಸುವುದರಿಂದ ಶುದ್ಧಸತ್ತ್ವಗುಣದ ಇರುವಿಕೆಯು ಅಧಿಕಾರಿಯಲ್ಲಿ ಕಾಣಿಸಿಕೊಳ್ಳುವುದೇ ವಿನಾ ಶುದ್ಧಸತ್ತ್ವಗುಣದ ಸೋಪಾನ ವಾದ ಈಶ್ವರತ್ವವನ್ನು ಪಡೆದಂತಾಗುವುದಿಲ್ಲ. ಆದುದರಿಂದ ಅಧಿಕಾರಿಯು ಪ್ರಾಣಾ ಯಾಮದ ಸೋಪಾನವನ್ನು ದಾಟಿದರೂ ಬ್ರಹ್ಮಾತ್ಮೈಕ್ಯದ ಭಾವನೆಯ ತಾಪದಿಂದ ವಿರಹಪಡುತ್ತಿರಬೇಕು. ಶ್ರೀರಾಮನು ಸೀತಾವಿರಹದಿಂದ ಹೇಗೆ ರೋದನ ಮಾಡಿದನೋ ಹಾಗೆ ಪ್ರಪಂಚದಲ್ಲಿ ಯಾವನು ಮೋಕ್ಷೇಚ್ಛೆಯನ್ನು ಉತ್ಕಟಾವಸ್ಥೆಗೆ ತಂದುಕೊಂಡು ತನ್ನ ಅಂತರಂಗಶುದ್ಧಿಯಿಂದ ಇನ್ನೂ ಸಾಕ್ಷಾತ್ಕಾರವಾಗಲಿಲ್ಲವಲ್ಲಾ ಎಂಬದಾಗಿ ಹಂಬಲಿ ಸುತ್ತಾ ಇಚ್ಛೆಯ ಉತ್ಕಟಾವಸ್ಥೆಯನ್ನು ಮೀರಿಹೋದ ದುಃಖದಿಂದ ಕಣ್ಣೀರು ಸುರಿಸು ತ್ತಾನೋ ಮತ್ತು ಸೀತಾದೇವಿಯು ಬಂಧನದಲ್ಲಿ ಸಿಕ್ಕಿದ್ದರೂ ಪತಿಯೇ ತನ್ನ ಸರ್ವಸ್ವ ವೆಂದು ಹೇಗೆ ಜೀವಿತದ ಮೇಲೆಯೇ ಲಕ್ಷ್ಯವಿಲ್ಲದೆ ಇದ್ದಳೋ, ಹಾಗೆಯೇ ಯಾವ ಮುಮುಕ್ಷುವು ನಾನು ಎಂಬ ಶುದ್ಧಜ್ಞಾನವು ಪ್ರಪಂಚಾನುವರ್ತಿಯಾಗಿರಲು ಇಚ್ಛೆ ಯಿಲ್ಲದೆ, ಆತ್ಮಸಾಕ್ಷಾತ್ಕಾರದಲ್ಲಿಯೇ ನೆಟ್ಟ ಮನಸ್ಕನಾಗಿ, ತನ್ನ ಜೀವಿತದ ಮೇಲೂ ಲಕ್ಷ್ಯವಿಲ್ಲದೆ ಇರುವನೋ, ಅಂತಹವನೇ ಮಹಾನುಭಾವನು, ಧನ್ಯನು, ಮಹಾತ್ಮನು. ಅವನ ಜೀವಿತವೇ ಸರ್ವಶ್ರೇಷ್ಠವಾದುದು. ಈ ರೀತಿ ಇರುವುದೇ ಪರಾಭಕ್ತಿಯೆನಿಸಿ

ಕೊಳ್ಳುವುದು. ಪರಮಹಂಸತ್ವವನ್ನು ಹೊಂದುವ ಸೂಚನೆಯಾಗಿರುವುದು. ಅಂದರೆ ಅಧಿಕಾರಿಯು ಈ ಲಕ್ಷಣಕ್ಕೆ ಬರಬೇಕೆಂಬ ತಾತ್ಪರ್ಯ.

ಮಾರುತೀದಿಗ್ವಿಜಯಸ್ವರೂಪವಾದ ಸುಂದರಕಾಂಡವು ಪೂರೈಸಿತು. ಈ ಸುಂದರ ಕಾಂಡದ ತತ್ವದಲ್ಲಿ ಹನುಮಂತನ ಕಾರ್ಯಗಳೆಂದರೆ—ಪ್ರಾಣಾಯಾಮದ ಅನುಷ್ಠಾನದಿಂದ ಮೋಕ್ಷದ ಬಾಗಿಲನ್ನು ತೆಗೆಸುವುದು, ಅವಿದ್ಯಾಸ್ಥಳಾಭಿಮಾನದೇವತಾಶಕ್ತಿಯ ಜರ್ಝರತ್ವ, ಮೂಲಾಧಾರಚಕ್ರವನ್ನು ಶುದ್ಧಿಮಾಡಿ ಶುದ್ಧಸತ್ವಗುಣದ ಇರುವಿಕೆಯನ್ನು ತೋರಿಸುವುದು, ಅಗ್ನಿಯ ಪ್ರಜ್ವಲನೆ, ಈ ಕಾರ್ಯಗಳ ಫಲಿತಾಂಶದಿಂದ ಮುಮುಕ್ಷುವು ಮೋಕ್ಷದ ಸೌಂದರ್ಯ ಅಂದರೆ ಕಾಂತಿ ಯುಕ್ತನಾಗುವುದರಿಂದ, ಈ ಕಾಂಡಕ್ಕೆ ಸುಂದರ ಕಾಂಡವೆಂದು ಹೆಸರು ಬಂದಿರುತ್ತದೆ. ಶ್ರೀಮದ್ರಾಮಾಯಣದ ಎಲ್ಲಾ ಕಾಂಡಗಳ ಪಾರಾಯಣಕ್ಕಿಂತಲೂ ಸುಂದರಕಾಂಡದ ಪಾರಾಯಣವು ಶ್ರೇಯಸ್ಕರ ಮತ್ತು ಶ್ರೇಷ್ಠತರ ವೆಂದು ಪ್ರಾಚೀನದಿಂದ ವಾಡಿಕೆಯಾಗಿ ಬಂದು, ಅನೇಕರು ಈಗಲೂ ಸುಂದರಕಾಂಡ ಒಂದನ್ನೇ ವಿಶೇಷವಾಗಿ ಪಾರಾಯಣಮಾಡುತ್ತಿರುತ್ತಾರಷ್ಟೆ! ಇದಕ್ಕೆ ಕಾರಣವೇನೆಂದರೆ, ಇದರಲ್ಲಿರುವ ಅಂತರಾರ್ಥದ ಸಾರವನ್ನು ತಿಳಿದ ಪೂರ್ವದ ಮಹನೀಯರು ಯಾರೋ ಜನಗಳಿಗೆ ತಿಳಿಸಿದುದರ ಫಲವಾಗಿ ಇದು ವಾಡಿಕೆಯಾಗಿ ಬಂದಿರಬಹುದೆಂದೂ ಊಹಿಸ ಬಹುದು. ಅಲ್ಲದೆ ಮೋಕ್ಷದ ಬಾಗಿಲನ್ನು ತೆರೆಸುವುದು ಮತ್ತು ಈಶ್ವರಸೋಪಾನದ ಉದಯವಾಗುವಿಕೆಯ ಚಿಹ್ನೆಯು ಸುಂದರಕಾಂಡದ ತತ್ವದಲ್ಲಿದ್ದು ಅಧಿಕಾರಿಯು ಇವು ಗಳನ್ನು ಹೊಂದಿ ಮೋಕ್ಷದ ಲಕ್ಷಣಗಳನ್ನು ಪಡೆಯುವನಾದುದರಿಂದ, ಇತರ ಎಲ್ಲಾ ಕಾಂಡಗಳಿಗಿಂತಲೂ ಸುಂದರಕಾಂಡವು ಶ್ರೇಷ್ಠತೆಯನ್ನು ಪಡೆದಿರುವುದು. ಈ ಸುಂದರ ಕಾಂಡದ ಮಹತ್ತನ್ನು ಮುಂದಿನ ಪ್ರಕರಣದಲ್ಲಿ ಶ್ರೀರಾಮನು ಪರಮಪ್ರೀತಿಯಿಂದ ಹನುಮಂತನನ್ನು ಆಲಿಂಗನಮಾಡಿಕೊಂಡ ಸಂದರ್ಭದಲ್ಲಿಯೂ ವಿವರಮಾಡಿರುತ್ತದೆ.

ಇನ್ನು ಪ್ರಾಣಾಯಾಮದ ಮುಂದಿನ ಅನುಷ್ಠಾನವಾದ ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿಗಳ ತತ್ವಗಳನ್ನು ಒಳಗೊಂಡಿರುವ ಯುದ್ಧಕಾಂಡವನ್ನು ಪ್ರಾರಂಭಿ ಸೋಣ.



ಶ್ರೀ

# ಯುದ್ಧಕಾಂಡ

## ಸಮಾಧಿಸೋಪಾನ. ಅವಿದ್ಯೆಯ ಸ್ವರೂಪಗಳು ಮತ್ತು ಅವುಗಳ ನಿಗ್ರಹದ ತತ್ವ.

### ೧ನೆಯ ಪ್ರಕರಣ

**ಹನುಮಂತನು ಮಾಡಿದ ಮಹತ್ಕಾರ್ಯಕ್ಕಾಗಿ ಶ್ರೀರಾಮನು ಪರಮ ಪ್ರೀತಿಯಿಂದ ಹನುಮಂತನನ್ನು ಆಲಿಂಗಿಸಿಕೊಂಡುದು.**

**ಯೋಗದ ಶ್ರೇಷ್ಠತೆ ಮತ್ತು ಮಹಿಮೆಯ ವಿಚಾರ.**

**ರಾ||** ಸೀತಾದೇವಿಯು ಕೊಟ್ಟ ಚೂಡಾಮಣಿಯನ್ನು ಹನುಮಂತನು ಶ್ರೀರಾಮನಿಗೆ ಒಪ್ಪಿಸಲು ಶ್ರೀರಾಮನು ಸೀತಾದೇವಿಯನ್ನು ಸ್ಮರಿಸಿಕೊಂಡು ರೋದನಮಾಡಿದನು. ಅನಂತರ ಹನುಮಂತನು ಸಾಧಿಸಿಕೊಂಡು ಬಂದ ಮಹತ್ಕಾರ್ಯಕ್ಕೆ ತಕ್ಕ ಯಾವ ಪ್ರತ್ಯುಪಕಾರವನ್ನು ಮಾಡಬೇಕೆಂಬ ಯೋಚನೆಯು ಶ್ರೀರಾಮನನ್ನು ಅತ್ಯಂತವಾಗಿ ಬಾಧಿಸಲು, ಪ್ರೀತಿಗೆ ಕೊನೆಯಾದ ಅಂದರೆ ಪ್ರೀತಿಯ ಸಮುದ್ರದಲ್ಲಿ ಮುಳುಗಿದವನಾಗಿ, ಹನುಮಂತನನ್ನು ಆಲಿಂಗಿಸಿಕೊಂಡು, ಆ ಆಲಿಂಗನದಲ್ಲಿಯೇ ಕೊಂಚಕಾಲವಿದ್ದು, ಆ ಪ್ರೇಮಾತಿಶಯದ ಅಮೃತವನ್ನು ಪಾನಮಾಡಿದನು.

**ತತ್ವ||** ಹನುಮಂತನ ಕಾರ್ಯದ ತತ್ವವೆಲ್ಲಾ ಪ್ರಾಣಾಯಾಮದ ಅನುಷ್ಠಾನದ ವಿಚಾರವಾಗಿರುವುದಷ್ಟೆ! ಹೇಳಲೂ ಬರೆಯಲೂ ಅಸಾಧ್ಯವಾಗಿರುವ, ಸ್ವಾನುಭವದಿಂದಲೇ ತಿಳಿದುಕೊಳ್ಳುವಂತಹ ಪ್ರೇಮಾತಿಶಯದಿಂದ. ಶ್ರೀರಾಮನು ಹನುಮಂತನನ್ನು ಆಲಿಂಗನೆಮಾಡಿಕೊಂಡನೆಂದರೆ—ಮೋಕ್ಷಮಾರ್ಗಕ್ಕೆ ಪ್ರಾಣಾಯಾಮವು ಅತ್ಯಂತ

ಸಹಕಾರಿಯಾಗಿಯೂ, ಸಾಧನಭೂತವಾಗಿಯೂ, ಇರುವುದೆಂಬುದನ್ನು ಸೂಚಿಸುತ್ತದೆ. ಪ್ರಾಣಾಯಾಮವು ಯೋಗದ ಅಂಗವಾಗಿರುವುದು. ಯೋಗದ ಇತರ ಅಂಗಗಳಾದ ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿಗಳಲ್ಲಿಯೂ ಹನುಮಂತನ ತತ್ವದಲ್ಲಿರುವ ಶ್ವಾಸೋಚ್ಛ್ವಾಸದ ಸಹಾಯವು ಅತ್ಯವಶ್ಯಕ. ಯೋಗವನ್ನು ಅನೇಕರು ಧಿಕ್ಕರಿಸುವರು. ವೇದಾಂತ ಶ್ರವಣ ಮನನಗಳಿಂದಲೇ ಮೋಕ್ಷವನ್ನು ಸಂಪಾದಿಸಿಕೊಳ್ಳಬಹುದೆಂದು ತಿಳಿದುಕೊಂಡು ನಿದಿಧ್ಯಾಸದ ಅಂಗಗಳಾದ ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ ಧಾರಣಗಳಿಗೆ ಗಮನಕೊಡದೆ ತಾತ್ಸಾರಮಾಡುತ್ತಾರೆ. ಮೋಕ್ಷವನ್ನು ಸರಿಯಾದ ಸಾಧನೆಗಳಿಲ್ಲದೆ, ಇಂತಹವರು ತಿಳಿದಿರುವಂತೆ ಎಂದಿಗೂ ಹೊಂದುವುದಕ್ಕೆ ಸಾಧ್ಯವಿಲ್ಲ. ನಿರ್ವಿಕಲ್ಪಸಮಾಧಿ ಅಥವಾ ಆತ್ಮಸಾಕ್ಷಾತ್ಕಾರದ ತತ್ವವಾದ ಸೀತಾದೇವಿಯ ಅಗ್ನಿಪ್ರವೇಶದ ಪರ್ಯಂತರ, ಬುದ್ಧಿತತ್ವಪ್ರಕಾಶಕನಾದ ಶ್ರೀರಾಮನಿಗೆ ವೈರಾಗ್ಯದ ತತ್ವದಲ್ಲಿರುವ ಲಕ್ಷ್ಮಣನ ಮತ್ತು ಯೋಗದ ಕಾರ್ಯಗಳ ತತ್ವದಲ್ಲಿರುವ ಹನುಮಂತ, ಸುಗ್ರೀವರ ಸಹಾಯವೇ ಪ್ರಧಾನವಾದುವುಗಳು. ಲಕ್ಷ್ಮಣ ಸುಗ್ರೀವಾದಿಗಳ ಸಹಾಯಗಳಿಗಿಂತಲೂ ಹನುಮಂತನ ಸಹಾಯವೇ ಅತ್ಯಧಿಕವಾದುದು. ಆದುದರಿಂದ ಆತ್ಮಸಾಕ್ಷಾತ್ಕಾರ ಬೇಕೆಂಬ ಅಧಿಕಾರಿಗೆ ಬ್ರಹ್ಮಾತ್ಮೈಕ್ಯದ ಪರೋಕ್ಷಜ್ಞಾನ, ಯೋಗ, ಇವೆರಡೂ ಅವಶ್ಯಕವಾಗಿ ಬೇಕೆನ್ನುವುದಕ್ಕೆ ಯೋಗಶಿಖೋಪನಿಷತ್ ಮತ್ತು ಯೋಗತತ್ವೋಪನಿಷತ್ತುಗಳೆರಡರಲ್ಲಿಯೂ :—

ಯೋಗಹೀನಂ ಕಥಂ ಜ್ಞಾನಂ ಮೋಕ್ಷದಂ ಭವತಿಧ್ರುವಂ |
ಯೋಗೋಪಿ ಜ್ಞಾನಹೀನಸ್ತು ನಕ್ಷಮೋ ಮೋಕ್ಷಕರ್ಮಣಿ |
ತಸ್ಮಾತ್ ಜ್ಞಾನಂಚ ಯೋಗಂಚ ಮುಮುಕ್ಷುಂ ರ್ದೃಢಮಭ್ಯಸೇತ್||

ತಾ|| ಸಂಯಮರೂಪವಾದ ಯೋಗವಿಲ್ಲದ ಬ್ರಹ್ಮಾತ್ಮೈಕ್ಯಸ್ವರೂಪವಾದ ಪರೋಕ್ಷಜ್ಞಾನವು ಮೋಕ್ಷವನ್ನೆಂದರೆ ಅಪರೋಕ್ಷಜ್ಞಾನವನ್ನು ಕೊಡುವುದಿಲ್ಲ. ಅಸ್ತಿಭಾರವಾದ ಬ್ರಹ್ಮಾತ್ಮೈಕ್ಯಸ್ವರೂಪವಾದ ಪರೋಕ್ಷಜ್ಞಾನವಿಲ್ಲದೆ, ಸಂಯಮರೂಪವಾದ ಯೋಗಮಾತ್ರವೇ ಮೋಕ್ಷವನ್ನು ಕೊಡಲು ಸಮರ್ಥವಾದುದಲ್ಲ. ಆದುದರಿಂದ ವೇದಾಂತ ವಿಚಾರದಿಂದ ಹೊಂದಬೇಕಾದ ಬ್ರಹ್ಮಾತ್ಮೈಕ್ಯದ ಪರೋಕ್ಷಜ್ಞಾನವನ್ನೂ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿರೂಪವಾದ ಯೋಗವನ್ನೂ ಅಧಿಕಾರಿಯು ದೃಢವಾಗಿ ಅಭ್ಯಾಸಮಾಡಬೇಕು. ಎಂದು ಹೇಳಿರುವುದು.

ಈ ಮೇಲಿನ ತಾತ್ಪರ್ಯಕ್ಕೆ ಅನುಸಾರವಾಗಿ, ತ್ರಿಶಿಖಿಬ್ರಾಹ್ಮಣೋಪನಿಷತ್ತಿನಲ್ಲಿಯೂ,

ಯೋಗಾ ತ್ಸಂಜಾಯತೆ ಜ್ಞಾನಂ ಜ್ಞಾನಾ ದ್ಯೋಗಃ ಪ್ರವರ್ತತೆ |
ಯೋಗೆ ಜ್ಞಾನ ಪರೋನಿತ್ಯಂ ಸಯೋಗೀ ನಪ್ರಣಶ್ಯತಿ ||

ತಾ|| ಮುಮುಕ್ಷುತೆ, ಶ್ರವಣ, ಮನನ ಸ್ವರೂಪವಾದ ಆತ್ಮನ ಪರೋಕ್ಷಜ್ಞಾನದಿಂದ ಮುಂದಿನ ಸೋಪಾನವಾದ ಯೋಗಕ್ಕೆ ಪ್ರವರ್ತನೆಯಾಗುವುದು. ಯೋಗದಿಂದ ಪರೋಕ್ಷಜ್ಞಾನವು ದೃಢವಾಗುವುದೆಂದರೆ ಅಪರೋಕ್ಷಜ್ಞಾನಸ್ವರೂಪವಾದ ಮೋಕ್ಷವು ದೊರೆಯುವುದು. ಆದುದರಿಂದ ಯೋಗ ಮತ್ತು ಪರೋಕ್ಷಜ್ಞಾನಗಳಲ್ಲಿ ಸರ್ವದಾ ಆಸಕ್ತನಾಗುವವನು ನಾಶವಾಗುವುದಿಲ್ಲ. ಅಂದರೆ ಮೋಕ್ಷಸಾಮ್ರಾಜ್ಯವನ್ನು ಅನುಭವಿಸುವನು. ಎಂದು ಹೇಳಿದೆ.

ಈ ಮೇಲಿನ ಶ್ರುತಿವಾಕ್ಯಗಳ ತಾತ್ಪರ್ಯಗಳಿಗೆ ಅನುಸಾರವಾಗಿಯೇ ಶ್ರೀರಾಮಚಂದ್ರನು ನಡೆದುಕೊಂಡಿರುವನು. ಪ್ರಥಮದಲ್ಲಿ ಶ್ರೀರಾಮನು ಹೊಂದಿದ ಸೀತಾವಿಯೋಗ ದುಃಖವೇ ಮುಮುಕ್ಷುತೆಯಾಗಿಯೂ, ಜಟಾಯುವಿನಿಂದ ತಿಳಿದ ಸೀತಾವೃತ್ತಾಂತವೇ ವೇದಾಂತಶ್ರವಣವಾಗಿಯೂ, ಕಬಂಧನ ವಿಚಾರವೇ ಮನನ ಮತ್ತು ಆಹಾರನಿಯಮವಾಗಿಯೂ, ಶಬರಿಯ ವಿಚಾರವೇ ಬ್ರಹ್ಮಾತ್ಮೈಕ್ಯದ ಭಾವನೆಯಾಗಿಯೂ, ಅಯೋಮುಖಿಯ ವಿಚಾರವೇ ಸತ್ಸಂಗವಾಗಿಯೂ, ವಾಲೀಸುಗ್ರೀವರ ವಿಚಾರವೇ ಆಸನಾಭ್ಯಾಸವಾಗಿಯೂ, ವಾನರರು ಸೀತಾನ್ವೇಷಣ ಮಾಡಿದುದೇ ನಾಡೀಶುದ್ಧಿಗಾಗಿ ಮಾಡುವ ಪ್ರಾಣಾಯಾಮವಾಗಿಯೂ, ಸುಂದರಕಾಂಡದಲ್ಲಿ ಹನುಮಂತನು ನಡೆಸಿದ ಕಾರ್ಯಗಳ ವಿಚಾರಗಳೇ ಮೋಕ್ಷದ ಬಾಗಿಲನ್ನು ತೆಗೆಸಿ ಬಂಧನ ಬಿಡುಗಡೆಯ ಸೌಂದರ್ಯವನ್ನು ಕೊಡುವ ವಿಚಾರವಾಗಿಯೂ, ಯುದ್ಧಕಾಂಡದ ತತ್ವಗಳೇ ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿಯ ವಿಚಾರಗಳಾಗಿಯೂ ಇರುವುವು. ಈ ಮೇಲಿನ ವಿಚಾರಗಳೆಲ್ಲಾ ಮುಮುಕ್ಷುವಿಗೆ ಅತ್ಯಂತ ಪ್ರಧಾನವಾದ ಸಹಾಯಗಳಾಗಿವೆ. ಇವುಗಳೆಲ್ಲ ಮುಖ್ಯಸಹಾಯವೆನ್ನುವುದಕ್ಕೆ ಮುಕ್ತಿಕೋಪನಿಷತ್ ದ್ವಿತೀಯಾಧ್ಯಾಯದಲ್ಲಿ ಶ್ರೀರಾಮಚಂದ್ರನೇ ಹನುಮಂತನಿಗೆ,

ಅಂಕುಶೇನ ವಿನಾ ಮತ್ತೋ ಯಥಾ ದುಷ್ಟ ಮತಂಗಜಃ |
ಅಧ್ಯಾತ್ಮ ವಿದ್ಯಾಧಿಗಮ ಸ್ಸಾಧು ಸಂಗತಿ ರೇವಚ ||
ವಾಸನಾ ಸಂಪರಿತ್ಯಾಗಃ ಪ್ರಾಣಸ್ಪಂದ ನಿರೋಧನಂ |
ಏತಾಸ್ತಾಯುಕ್ತಯಃ ಪುಷ್ಟಾ ಸಂತಿ ಚಿತ್ತಜಯೇಕಿಲ ||

ತಾ|| ಮದಿಸಿದ ದುಷ್ಟವಾದ ಆನೆಯನ್ನು ವಶಪಡಿಸಿಕೊಳ್ಳಲು ಅಂಕುಶವು ಹೇಗೋ ಹಾಗೆ ಅಂತಃಕರಣವನ್ನು ನಿಗ್ರಹಿಸುವುದಕ್ಕೆ ಅಧ್ಯಾತ್ಮವಿದ್ಯೆಯ ತಿಳಿವಳಿಕೆ, ಸತ್ಸಹವಾಸ, ವಾಸನೆಗಳ ಸಂಪೂರ್ಣ ಪರಿತ್ಯಾಗ, ಪ್ರಾಣವಾಯು ನಿರೋಧ ಮೊದಲಾದ ಯೋಗಗಳು ಬಲಿಷ್ಠವಾದ ಉಪಾಯಗಳು, ಎಂದು ಉಪದೇಶಮಾಡಿರುವನು.

ಆದುದರಿಂದ, ಯೋಗಾನುಷ್ಠಾನವು ಅತ್ಯವಶ್ಯಕವಾಗಿ ಮಾಡಬೇಕಾದ ಕರ್ತವ್ಯವಾಗಿ ರುವುದು. ಶ್ರೀಶಂಕರಭಗವತ್ಪಾದರವರು ಯೋಗವೇ ಬೇಕಾಗಿಲ್ಲವೆಂದು ಧಿಕ್ಕಾರಮಾಡಿ ಅನೇಕ ಗ್ರಂಥಗಳಲ್ಲಿ ಹೇಳಿರುವರೆಂದು ಕೆಲವರು ತಿಳಿದುಕೊಂಡು, ಯೋಗಾನುಷ್ಠಾನದ ವಿಚಾರಕ್ಕೂ ಹೋಗದೆ, ಯೋಗವನ್ನು ಧಿಕ್ಕಾರಮಾಡುತ್ತಾರೆ. ಯಾವ ಸೋಪಾನವನ್ನು ಹತ್ತಿದ ಮೇಲೆ ಯೋಗವನ್ನು ಧಿಕ್ಕಾರಮಾಡಲು ನಮಗೆ ಯೋಗ್ಯತೆ ಬರುವುದೆಂಬುದನ್ನು ನಾವು ತಿಳಿದುಕೊಳ್ಳಬೇಕು. ಶ್ರೀಶಂಕರಭಗವತ್ಪಾದರವರು ವೇದಾಂತವಿಚಾರ ಮಾಡುವು ದನ್ನೂ ಖಂಡನೆಮಾಡಿರುತ್ತಾರೆ. ಇದರಿಂದ ವೇದಾಂತವಿಚಾರವನ್ನೇ ಮಾಡಕೂಡ ದೆಂದೂ, ಯೋಗವನ್ನೇ ಅನುಷ್ಠಾನ ಮಾಡಕೂಡದೆಂದೂ, ಎಂದಿಗೂ ತಾತ್ಪರ್ಯವಲ್ಲ. ಆಯಾಯಾ ಸೋಪಾನಗಳಲ್ಲಿ ಆಯಾಯಾ ಸೋಪಾನಗಳಿಗೆ ಪ್ರಾಶಸ್ತ್ಯವನ್ನು ಕೊಡಲು ಕೆಳಗಿನ ಸೋಪಾನವನ್ನು ಧಿಕ್ಕಾರಮಾಡಿರುತ್ತಾರೆ.

ಬ್ರಹ್ಮತ್ವದಲ್ಲಿ ಇಚ್ಛೆಯು ಅಂಕುರಿಸುವುದೇ ತಳಪಾಯ; ಬ್ರಹ್ಮತ್ವವನ್ನು ಪಡೆಯು ವುದೇ ಕೊನೆಯಾದುದರಿಂದ ಮುಮುಕ್ಷುತೆಯೊಂದರಿಂದಲೇ ಬ್ರಹ್ಮತ್ವವನ್ನು ಪಡೆಯುವ ಹಾಗಿದ್ದರೆ, ಜನಗಳು ಅತ್ಯಂತ ಸುಲಭವಾಗಿ ಮುಕ್ತರಾಗಬಹುದಾಗಿತ್ತು. ಅಷ್ಟೋತ್ತರ ಶತೋಪನಿಷತ್ತುಗಳಲ್ಲಿ ಅನುಷ್ಠಾನದ ವಿಚಾರವಿಲ್ಲದಿರುವ ಉಪನಿಷತ್ತೇ ಇಲ್ಲ. ಆದರೆ, ಕೆಲವು ಉಪನಿಷತ್ತುಗಳಲ್ಲಿ ಅನುಷ್ಠಾನದ ವಿಚಾರವು ವಿವರವಾಗಿರುತ್ತದೆ. ಕೆಲವುಗಳಲ್ಲಿ ಗೂಢವಾಗಿರುತ್ತದೆ. ಹನುಮಂತನು ಸುಂದರಕಾಂಡದಲ್ಲಿ ನಡೆಸಿರುವ ತತ್ವವನ್ನೆಲ್ಲಾ ಶ್ರೀಶಂಕರಭಗವತ್ಪಾದಾಚಾರ್ಯರವರು ಒಂದೇ ಶ್ಲೋಕದಲ್ಲಿ ಅಡಗಿಸಿ ಆ ವಿಧವಾದ ಅನು ಷ್ಠಾನಮಾಡಿ ಪರಿಪಕ್ವಾವಸ್ಥೆಗೆ ಬಂದಿರುವ ಅಧಿಕಾರಿಯೇ ಧನ್ಯನೆಂದು ಬರೆದಿರುವಾಗ ಯೋಗವನ್ನು ನಿರಾಕರಿಸಿರುತ್ತಾರೆಂಬ ತಿಳಿವಳಿಕೆಯು ತುಂಬಾ ಶೋಚನೀಯವಾದುದು. ಸರ್ವಜ್ಞಮೂರ್ತಿಗಳಾದ ಶ್ರೀಶಂಕರಭಗವತ್ಪಾದರವರ ವಾಕ್ಯಗಳನ್ನು ಈ ಅಂತರಾರ್ಥರಾಮಾ ಯಣದ ಪ್ರತಿಯೊಂದು ಪ್ರಕರಣಕ್ಕೂ ಅನ್ವಯಮಾಡಿ ಬರೆದಿರುವುದು. ಇನ್ನು ಮುಂದೆ ಯೋಗಸ್ವರೂಪವಾದ ಧ್ಯಾನ, ಧಾರಣ, ಸಮಾಧಿಗಳಲ್ಲಿಯೂ ಶ್ರೀಶಂಕರಭಗವತ್ಪಾದರವರ ವಾಕ್ಯಗಳನ್ನು ಅನ್ವಯಮಾಡಿ ಬರೆದಿರುವುದರಲ್ಲಿಯೂ ಅವರು ಯೋಗವನ್ನು ಅನುಮೋದಿ ಸಿರುವರೋ ಇಲ್ಲವೋ ಎಂಬುದು ಗೊತ್ತಾಗುವುದು. ಯಾವ ಸೋಪಾನದಲ್ಲಿರುವವರಿಗೆ ಯೋಗಸಾಧನ ನಿಯಮಗಳು ಬೇಕಾಗಿಲ್ಲವೆಂಬುದನ್ನು ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೫೩೦ನೆಯ ಶ್ಲೋಕದಲ್ಲಿ,

ನ ದೇಶ ಕಾಲಾಸನ ದಿಗ್ಯಮಾದಿ |
ಲಕ್ಷ್ಯಾದ್ಯಪೇಕ್ಷಾ ಪ್ರತಿಬುದ್ಧವೃತ್ತೇಃ |

ಸಂಸಿದ್ಧತತ್ವಸ್ಯ ಮಹಾತ್ಮನೋಽಸ್ತಿ |
ಸ್ವವೇದನೇ ಕಾ ನಿಯಮಾದ್ಯವಸ್ಥಾ ||

ತಾ|| ತತ್ವಸ್ವರೂಪವನ್ನೊಳಗೊಂಡ ವೃತ್ತಿರಹಿತನಾದ ಮಹಾತ್ಮನಿಗೆ ದೇಶ, ಕಾಲ, ಆಸನ, ದಿಕ್ಕು, ಯಮ ನಿಯಮಾದ್ಯಷ್ಟಾಂಗಗಳು, ಲಕ್ಷ್ಯ ಮೊದಲಾದುವುಗಳ ಅಪೇಕ್ಷೆಯಿಲ್ಲವು. ತನ್ನನ್ನು ತಾನು ತಿಳಿದುಕೊಂಡಿರುವವನಿಗೆ ನಿಯಮಾದ್ಯವಸ್ಥೆಗಳೆತ್ತಣದು ? ಎಂದು ಹೇಳಿರುತ್ತಾರೆ.

ಅಂದರೆ ಆತ್ಮಸಾಕ್ಷಾತ್ಕಾರವಾದವರಿಗೆ ಯಮ ನಿಯಮಾದಿಗಳು ಬೇಕಾಗಿಲ್ಲ. ಸಾಕ್ಷಾತ್ಕಾರವಾಗುವ ಪರ್ಯಂತರ ಅಗತ್ಯವಾಗಿ ಈ ಸಾಧನೆಗಳೆಲ್ಲವೂ ಬೇಕಾಗಿಯೇ ಇರುವುವೆಂಬ ತಾತ್ಪರ್ಯವಾಗಿರುವುದು. ಅಲ್ಲದೆ ವೇದಾಂತಶ್ರವಣಕ್ಕಿಂತ ಮನನದ ಸೋಪಾನವು ಶ್ರೇಷ್ಠವಾದುದು. ಮನನಕ್ಕಿಂತ ನಿದಿಧ್ಯಾಸರೂಪವಾದ ಆಸನ ಪ್ರಾಣಾಯಾಮ ಪ್ರತ್ಯಾಹಾರ ಮುಂತಾದುವು ಮತ್ತೂ ಹೆಚ್ಚಿನ ಸೋಪಾನಗಳು. ನಿರ್ವಿಕಲ್ಪಸಮಾಧಿಯಾದ ಮೋಕ್ಷವು ಅಂತ್ಯದ ಸೋಪಾನವಾಗಿರುವುದೆಂದು ಸೋಪಾನಗಳ ಫಲಗಳ ತಾರತಮ್ಯಗಳನ್ನು ವಿಂಗಡಿಸಿ ಶ್ರೀಶಂಕರಭಗವತ್ಪಾದರವರು ಈ ಪರಂಪರಾಶ್ರೇಷ್ಠತೆಯನ್ನು ವಿವೇಕಚೂಡಾಮಣಿ ೩೬೫ ನೆಯ ಶ್ಲೋಕದಲ್ಲಿ,

ಶ್ರುತೇಃ ಶತಗುಣಂ ವಿದ್ಯಾನ್ಮನನಂ ಮನನಾದಪಿ |
ನಿದಿಧ್ಯಾಸಂ ಲಕ್ಷಗುಣ ಮನನ್ತಂ ನಿರ್ವಿಕಲ್ಪಕಂ ||

ತಾ|| ಶ್ರವಣಕ್ಕಿಂತ ಮನನವು ನೂರು ಪಾಲು ಗುಣಾಧಿಕವಾದುದು. ಮನನಕ್ಕಿಂತ ನಿದಿಧ್ಯಾಸವು ಲಕ್ಷಗುಣಾಧಿಕವಾದುದು. ನಿರ್ವಿಕಲ್ಪಸಮಾಧಿಯಾದರೋ ಆತ್ಮಸ್ವರೂಪವೇ ಆದದ್ದು.

ಎಂಬದಾಗಿ ಉತ್ತರೋತ್ತರ ಶ್ರೇಷ್ಠತೆಯನ್ನು ಕೂಡ ತಿಳಿಸಿರುತ್ತಾರೆ. ಆದುದರಿಂದ ಮೋಕ್ಷವನ್ನು ಪಡೆಯಬೇಕೆಂದು ಅಪೇಕ್ಷಿಸುವವರು ವೇದಾಂತವಿಚಾರ ಮಾಡಿ ಅತ್ಯವಶ್ಯಕವಾಗಿ ಯೋಗಾಭ್ಯಾಸವನ್ನು ಮಾಡಬೇಕು. ಶಕ್ತಿರೂಪದಲ್ಲಿರುವ ಮಾಯೆಯು ನಮ್ಮ ದೇಹದಲ್ಲಿ ಅಸಾಧಾರಣವಾದ ಬಲೆಯನ್ನು ಮಾಡಿಕೊಂಡು ಪರಮಾತ್ಮನಿಗೆ ಮರೆಮಾಡಿಕೊಂಡಿರುವುದರಿಂದ, ಇಂತಹ ಬಲೆಯನ್ನು ಭೇದಿಸಿ ಮಾರ್ಗವನ್ನು ಸುಲಲಿತ ಮಾಡಬೇಕಾದರೆ, ಯೋಗವಲ್ಲದೆ ಮತ್ತಾವ ದಾರಿಯೂ ಖಂಡಿತ ಇರುವುದಿಲ್ಲ. ಎಷ್ಟೇ ವೇದಾಂತಶ್ರವಣ ಮಾಡಿದರೂ ನಿದಿಧ್ಯಾಸ ಸಮಾಧಿ ರೂಪವಾದ ಯೋಗವಿಲ್ಲದೆ ಹೋದರೆ ಮೋಕ್ಷವು ಖಂಡಿತವಾಗಿಯೂ ದೊರಕುವುದಿಲ್ಲ. ಇದೇ ಅರ್ಥಕ್ಕೆ ಯೋಗಶಿಖೋಪನಿಷತ್ ಷಷ್ಠಾಧ್ಯಾಯದಲ್ಲಿ,

ಯಥಾಗ್ನಿ ರ್ದಾರುಮಧ್ಯಸ್ಥೋ ನೋತ್ತಿಷ್ಠೇ ನ್ಮಥನಂ ವಿನಾ |
ವಿನಾ ಚಾಭ್ಯಾಸಯೋಗೇನ ಜ್ಞಾನದೀಪ ಸ್ತಥಾ ನಹಿ ||

ತಾ|| ಕಟ್ಟಿಗೆಯಲ್ಲಿರುವ ಅಗ್ನಿಯು ಮಥನವಿಲ್ಲದೆ ಹೇಗೆ ಹೊರಡಲಾರದೋ, ಹಾಗೆ ಯೋಗಾಭ್ಯಾಸ ಮಾಡಿದ ಹೊರತು, ಜ್ಞಾನದೀಪವು ಪ್ರಜ್ವಲಿಸುವುದಿಲ್ಲವೆಂದರೆ ಆತ್ಮ ಸಾಕ್ಷಾತ್ಕಾರವಾಗುವುದಿಲ್ಲ ಎಂದು ಹೇಳಿರುವುದು. ಸನ್ಯಾಸೋಪನಿಷತ್ತಿನಲ್ಲಿ ಕೂಡ,

ವಾಗ್ದಣ್ಡೇ ಮೌನಮಾತಿಷ್ಠೇ ತ್ಕಾಯದಣ್ಡೇ ತ್ವಭೋಜನಮ್ |
ಮಾನಸೇತು ಕೃತೇ ದಣ್ಡೇ ಪ್ರಾಣಾಯಾಮೋ ವಿಧೀಯತೇ ||

ತಾ|| ವಾಕ್ಕನ್ನು ಶಿಕ್ಷಿಸಬೇಕಾದರೆ ಮೌನವನ್ನಾಚರಿಸಬೇಕು. ದೇಹವನ್ನು ಶಿಕ್ಷಿಸ ಬೇಕಾದರೆ ಆಹಾರದಲ್ಲಿ ನಿಯಮವಿರಬೇಕು. ಅಂತಃಕರಣವನ್ನು ನಿಗ್ರಹಿಸಬೇಕಾದರೆ ಪ್ರಾಣಾಯಾಮವನ್ನು ಅನುಷ್ಠಿಸಬೇಕು. ಎಂದು ಹೇಳಿರುವುದು. ಅಲ್ಲದೆ ಪತಂಜಲಿ ಮಹರ್ಷಿಗಳು ಯೋಗಸೂತ್ರದಲ್ಲಿ "ಧ್ಯಾನಹೇಯಾಸ್ತದ್ವೃತ್ತಯಃ" ಚಿತ್ತೈಕಾಗ್ರತೆ ಯಿಂದಲೇ ಅವಿದ್ಯಾವೃತ್ತಿಗಳು ಹೋಗಬೇಕೆಂದು ಹೇಳಿರುವರು.

ಯೋಗವೆಂದರೆ ಸಾಮಾನ್ಯವಾಗಿ ನಮ್ಮ ಅಂತಃಕರಣದ ವೃತ್ತಿಗಳು ಯಾತರಲ್ಲಿ ಸಂಯೋಗವಾಗುವುವೋ ಅದಕ್ಕೆ ಯೋಗವೆಂದು ಹೆಸರು. ಈಶ್ವರಾರಾಧನಪೂರ್ವಕವಾದ ಕರ್ಮದಲ್ಲಿ ನಮ್ಮ ಅಂತಃಕರಣದ ವೃತ್ತಿಯು ಮಿಳಿತವಾದರೆ ಕರ್ಮಯೋಗವೆಂದು ಹೆಸರು. ಪರಮಾತ್ಮನಲ್ಲಿ ಪ್ರೀತಿಮಾಡುವುದರಲ್ಲಿ ನಮ್ಮ ಅಂತಃಕರಣದ ವೃತ್ತಿಯು ಮಿಳಿತವಾದರೆ ಭಕ್ತಿಯೋಗವೆಂದು ಹೆಸರು. ಜ್ಞಾನಯೋಗವು ವೇದಾಂತಶ್ರವಣ ಮೊದಲುಗೊಂಡು ಸಮಾಧಿಯ ಅನುಷ್ಠಾನಮಾಡಿ ನಿರ್ವಿಕಲ್ಪಸಮಾಧಿಯನ್ನು ಪಡೆಯುವು ವರೆಗಿನ ಅನುಷ್ಠಾನಗಳನ್ನೆಲ್ಲಾ ಒಳಗೊಂಡಿದೆ. ಲಯಯೋಗವು ನಾಮರೂಪಾತ್ಮಕವು ನಾನಲ್ಲವೆಂದೂ ಪರಮಾತ್ಮನೇ ನಾನೆಂಬದಾಗಿ ತ್ಯಾಜ್ಯದ ಅಭ್ಯಾಸಮಾಡುವ ಮುಮು ಕ್ಷುತೆಯಿಂದ ಪ್ರಾರಂಭವಾಗಿ ಸಮಾಧಿಯ ಅನುಷ್ಠಾನ ಪೂರ್ಣವಾಗುವವರೆಗೆ ಇರುವುದು. ಹಠವೆಂದರೆ ಸೂರ್ಯ ಚಂದ್ರರುಗಳು. ಹಠಯೋಗವೆಂದರೆ ಸೂರ್ಯಚಂದ್ರನಾಡಿಗಳಿಂದುಂಟಾ ಗುವ ಬಹಿರ್ವ್ಯಾಪಾರದಿಂದ ಹಿಂದಿರುಗಿ ಅಂತರ್ಮುಖದ ದಾರಿಯಲ್ಲಿ ಧ್ಯಾನಾಭ್ಯಾಸಮಾಡು ವುದು. ರಾಜಯೋಗವೆಂದರೆ—"ಸ್ವರಾಜ್ಯಂ" ಎಂಬ ಶ್ರುತಿವಚನದಂತೆ ಪರಮಾತ್ಮನೇ ರಾಜನಲ್ಲದೆ ದೇಶದ ರಾಜತ್ವವಲ್ಲ. ಆದುದರಿಂದ ಆತ್ಮಸಾಕ್ಷಾತ್ಕಾರದ ಸ್ಥಿತಿಯೇ ರಾಜತ್ವವಾಗಿರುವುದು. ಈ ಆತ್ಮಸಾಕ್ಷಾತ್ಕಾರವನ್ನು ಪಡೆಯಲು ಮಾಡುವ ಸಾಧನೆಗಳಿಗೆ ರಾಜಯೋಗವೆಂದು ಹೆಸರು.

ಅಲ್ಲದೆ ಲೋಕವ್ಯವಹಾರದಲ್ಲಿಯೂ ಯೋಗಶಬ್ದವು ಉಪಯೋಗಿಸಲ್ಪಡುವುದು. ಒಳ್ಳೆಯ ರಾಜಯೋಗದ ಜಾತಕವೆಂದು ಹೇಳುವರು. ಅಂದರೆ ಅಂತಃಕರಣವು ಐಶ್ವರ್ಯ ದಲ್ಲಿಯೂ ಭೋಗದಲ್ಲಿಯೂ ಮಗ್ನವಾಗಿದ್ದರೆ ರಾಜಯೋಗದ ಅನುಭವವೆಂದು ಹೇಳುವರು. ಇದರಂತೆ ನಮ್ಮ ಅಂತಃಕರಣವು ದುಷ್ಟವ್ಯಾಪಾರಗಳಲ್ಲಿ ಮಿಳಿತವಾಗಿದ್ದರೆ ದುರ್ಯೋಗವೆಂದು ಕರೆಯುವರು.

ಆದುದರಿಂದ ಯೋಗ ಶಬ್ದಾರ್ಥವು ಅನೇಕ ವಿಧದಲ್ಲಿ ಪ್ರಯೋಗಿಸಲ್ಪಡುವುದು. ಆದರೆ ವೇದಾಂತಾರ್ಥದಲ್ಲಿ ಯೋಗಶಬ್ದವು ಧ್ಯಾನಾಭ್ಯಾಸದ ಕಾರ್ಯದಿಂದ ಪ್ರಾರಂಭ ವಾಗುವುದು. ಅಂದರೆ ಧ್ಯಾನ, ಧಾರಣ, ಸಮಾಧಿಗಳ ಅಭ್ಯಾಸದ ಕಾರ್ಯಕ್ಕೆ ಯೋಗ ವೆಂದು ಹೆಸರು. ಆಸನ, ಪ್ರಾಣಾಯಾಮ, ಪ್ರತ್ಯಾಹಾರಗಳು ಯೋಗದ ಅಂಗಗಳು.

ಆದಕಾರಣ ಜ್ಞಾನಯೋಗ, ರಾಜಯೋಗ, ಪರಾಭಕ್ತಿಯೋಗ, ಲಯಯೋಗ, ಹಠಯೋಗಗಳೆಲ್ಲಾ ಏಕಾರ್ಥವಾದವುಗಳೇ ಹೊರತು ಖಂಡಿತವಾಗಿಯೂ ಭಿನ್ನಾಭಿ ಪ್ರಾಯಗಳದಾಗಿಲ್ಲ. ಯೋಗದಲ್ಲಿ ರಾಜಯೋಗ ಹೆಚ್ಚಿನದೆಂದೂ ಹಠಯೋಗ ಕೀಳಾದು ದೆಂದೂ ಅನೇಕರು ಅಭಿಪ್ರಾಯಪಡುವರು. ಇವುಗಳ ತತ್ವಗಳನ್ನು ಸರಿಯಾಗಿ ತಿಳಿಯದೆ ಶಬ್ದಭೇದದಿಂದ ಕೀಳು ಮೇಲೆಂಬ ಅಭಿಪ್ರಾಯಪಡುವುದು ತಪ್ಪು. ಶ್ರೀರಾಮಚಂದ್ರನು ರಾವಣಾದಿಗಳನ್ನು ನಿಗ್ರಹಿಸಲು ಹೇಗೆ ಒಂದೇ ಮಾರ್ಗವನ್ನನುಸರಿಸಿರುವನೋ ಹಾಗೆ ಅಜ್ಞಾನವನ್ನು ಹೋಗಲಾಡಿಸಲು ಇರುವ ದಾರಿಯೊಂದೇ ಹೊರತು ಅನೇಕ ದಾರಿಗ ಳೆಂದಿಗೂ ಇಲ್ಲ. ಈ ದಾರಿಯೇ ಮುಮುಕ್ಷುತೆ, ವೇದಾಂತಶ್ರವಣ, ಮನನ, ನಿದಿಧ್ಯಾಸ ಸಮಾಧಿಗಳಾಗಿವೆ. ನಿದಿಧ್ಯಾಸದ ವಿಭಾಗಗಳೇ ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣೆಗಳಾಗಿವೆ.

ಅಲ್ಲದೆ ಮೋಕ್ಷವನ್ನು ಹೊಂದಲು ಪ್ರಥಮಸೋಪಾನದಿಂದ ಅಂತ್ಯದ ಸೋಪಾನ ವನ್ನು ಹತ್ತುವ ಕ್ರಮವಾದ ಕ್ರಿಯೆ ಮತ್ತು ಪ್ರತಿಸೋಪಾನಗಳ ಸ್ವರೂಪವೂ ಈ ತತ್ವಾರ್ಥಗ್ರಂಥದಲ್ಲಿ ಬಂದಿರುವುದರಿಂದ ಯೋಗಜ್ಞಾನಗಳೆರಡೂ ಒಂದಕ್ಕೊಂದು ಹೆಣೆದುಕೊಂಡು ಅನುಭವದ ವೇದಾಂತವಾಗಿದೆಯೆಂದು ಒತ್ತಿ ತಿಳಿಸಬೇಕಾಗಿದೆ. ಸತ್ಯ ಸಂಧನಾದ ಶ್ರೀರಾಮಚಂದ್ರಸ್ವಾಮಿಯ ಲೀಲಾವತಾರದ ರಹಸ್ಯಾಮೃತವಾದ ಈ ಗ್ರಂಥದ ವಿಚಾರಗಳು ಶ್ರುತಿಸಮ್ಮತವಲ್ಲದ ಮತಸಿದ್ಧಾಂತಗಳಿಗೆಲ್ಲಾ ಉತ್ತರವಾಗಿರುವುದು.

ಅನೇಕರು ಯೋಗವೆಂದರೆ ಹೆದರಿಕೊಳ್ಳುವರು. ಇದಕ್ಕೆ ಕಾರಣಗಳೇನೆಂದರೆ— ಧ್ಯಾನಾಸಕ್ತಿಯಲ್ಲಿ ಶ್ರದ್ಧೆ ಇಲ್ಲದಿರುವುದೇ ಪ್ರಥಮಕಾರಣ. ಆಹಾರ ವ್ಯವಹಾರಗಳಲ್ಲಿ

ತಕ್ಕಮಟ್ಟಿಗೆ ನಿಯಮವಾಗಿರುವುದಕ್ಕೆ ಮನಸ್ಥೈರ್ಯವಿಲ್ಲದೆ ವಿಷಯೋಪಭೋಗವೇ ಪ್ರಧಾನವೆಂದು ಅವರಲ್ಲಿ ಮುಳುಗಿರುವುದೇ ಎರಡನೆಯದು. ಯೋಗಾನುಷ್ಠಾನದಲ್ಲಿ ಚೆನ್ನಾಗಿ ಪರಿಶ್ರಮವುಳ್ಳ ಗುರುವು ಲಭಿಸದಿರುವುದೇ ಮೂರನೆಯ ಕಾರಣ. ಈ ಪ್ರತಿಬಂಧಕಗಳನ್ನು ನಿವಾರಣೆಮಾಡಿಕೊಂಡರೆ ಯೋಗಕ್ಕೆ ಭಯಪಡಬೇಕಾದುದಿಲ್ಲ. ಯೋಗಾಭ್ಯಾಸವು ಅಂತಹ ಹೆದರಿಕೆಯ ಕಾರ್ಯವಾಗಿದ್ದರೆ ಆಬಾಲವೃದ್ಧರೂ ಅನುಷ್ಠಿಸಬೇಕೆಂದು ಸಂಧ್ಯಾ ಮತ್ತು ಇತರ ದೇವತೋಪಾಸನೆಗಳಲ್ಲಿ ಆಸನ ಪ್ರಾಣಾಯಾಮಾದಿಗಳನ್ನು ಮಾಡಬೇಕೆಂದು ಶ್ರುತಿಯು ವಿಧಾಯಕ ಮಾಡುತ್ತಿರಲಿಲ್ಲ ಮತ್ತು ಮಹರ್ಷಿಗಳು ಆಚರಣೆಗೆ ತರುತ್ತಿರಲಿಲ್ಲ. ಸಂಧ್ಯಾವಂದನೆ ಮತ್ತು ಇತರೋಪಾಸನೆಗಳಲ್ಲಿ ಪ್ರಾಣಾಯಾಮವನ್ನು ಮಾಡಬೇಕೆಂದು ವಿಧಿಸಿರುವುದು, ಮೂಗು ಹಿಡಿದುಕೊಂಡು ಮಂತ್ರಪಠನೆ ಮಾಡುವ ಕಾರ್ಯರೂಪವಾದುದಲ್ಲ. ಯಥಾವತ್ತಾಗಿ ಅನುಷ್ಠಿಸಲೇ ಬೇಕಾದ ಕರ್ತವ್ಯವಾಗಿರುವುದು. ಪ್ರತಿ ಸಂಧ್ಯಾವಂದನೆಯ ಕಾಲದಲ್ಲಿಯೂ ಕನಿಷ್ಠಪಕ್ಷ ಹದಿನಾರು ಪ್ರಾಣಾಯಾಮಗಳನ್ನು ಮಾಡಬೇಕೆಂದು ವಿಧಾಯಕವಿದ್ದರೂ ಯಾರೂ ಇದಕ್ಕೆ ಗಮನಕೊಡುವುದಿಲ್ಲ. ಪ್ರಾಣಾಯಾಮದಿಂದ ದೇಹಕ್ಕೆ ಅತ್ಯುತ್ತಮವಾದ ಗುಣವಿರುವುದು. ಅಲ್ಪ ಸಂಖ್ಯೆಯಾದ ಹದಿನಾರು ಪ್ರಾಣಾಯಾಮಗಳಾದರೂ ಮನೋನಿಗ್ರಹಕ್ಕೂ ಸತ್ವಾಪತ್ತಿಗೂ ಅತ್ಯಂತ ಸಹಾಯವಾಗುವುದು. ಪೂರ್ವದಿಂದ ಮಹನೀಯರು ಆಚರಿಸಿಕೊಂಡು ಬಂದ ಈ ಅನುಷ್ಠಾನವು ಈಗ ಅರಣ್ಯದ ಪಾಲಾಗಿದೆ.

ಪೂರ್ವಕಾಲದಲ್ಲಿ ಉಪನಯನವಾದನಂತರ ಗುರುಕುಲವಾಸದಲ್ಲಿ ಎಂಟು ವಯಸ್ಸಿನ ಮೊದಲು ಹದಿನಾರು ಸಂವತ್ಸರಗಳ ಪರ್ಯಂತರ ವೇದ ಮತ್ತು ಸಾಹಿತ್ಯ ವಿದ್ಯಾಭ್ಯಾಸ ಮಾಡಿ, ಹದಿನಾರನೇ ವಯಸ್ಸಿನಾರಭ್ಯ ಇಪ್ಪತ್ತು ವಯಸ್ಸಿನವರೆಗೆ ಗುರುಸಮೀಪದಲ್ಲಿ ಪ್ರಾಣಾಯಾಮಾದಿಗಳನ್ನು ಚೆನ್ನಾಗಿ ಅಭ್ಯಾಸಮಾಡಿ, ಅನಂತರ ಗೃಹಸ್ಥಾಶ್ರಮಕ್ಕೆ ಬಂದಾಗ ಗಾಯತ್ರೀ ಉಪಾಸನೆಗೆ ಬೇಕಾದಷ್ಟು ಯೋಗಾನುಷ್ಠಾನ ಮಾಡಿಕೊಂಡು ಬರುತ್ತಿದ್ದರು. ಅಂತಹವರ ದೇಹಸ್ಥಿತಿಯೂ, ಮೇಧಾಶಕ್ತಿಯೂ ಅತ್ಯದ್ಭುತವಾಗಿರುತ್ತಿತ್ತು. ಪ್ರಾಣಾಯಾಮವನ್ನು ನಿಯಮದಿಂದಿರುವ ಬ್ರಹ್ಮಚರ್ಯಾಶ್ರಮದಲ್ಲಿಯೇ ಪೂರ್ಣಮಾಡಿಕೊಂಡಿರುವುದರಿಂದ, ಗೃಹಸ್ಥಾಶ್ರಮದಲ್ಲಿ ಸುಲಭವಾಗಿಯೂ ಕೊಂಚಕೊಂಚವಾಗಿಯೂ, ಧ್ಯಾನಾಭ್ಯಾಸ ಮಾಡಿಕೊಂಡು ಬರಬಹುದು. ಗೃಹಸ್ಥಾಶ್ರಮದಲ್ಲಿ ಕಾಲಕ್ರಮೇಣ ಮುಕ್ತರಾಗಬೇಕೆಂಬ ಇಚ್ಛೆಯು ಅಂಕುರಿಸಿದರೆ, ಬ್ರಹ್ಮಚರ್ಯಾಶ್ರಮದಲ್ಲಿ ಮಾಡಿದ್ದ ವಿದ್ಯಾಭ್ಯಾಸವೂ, ಯೋಗಾನುಷ್ಠಾನವೂ ಅತ್ಯಂತ ಸಹಕಾರಿಗಳಾಗುವುವು. ಈಗಿನ ಕಾಲದಲ್ಲಿ ಈ ನಿಬಂಧನೆಗಳಿಲ್ಲವಾದರೂ ಬ್ರಹ್ಮಚಾರಿಗಳಾಗಲಿ ಗೃಹಸ್ಥರಾಗಲಿ ಮೋಕ್ಷವನ್ನು ಅಪೇಕ್ಷಿಸತಕ್ಕವರು ಅಗತ್ಯವಾಗಿ ಯೋಗಾನುಷ್ಠಾನವನ್ನು ಮಾಡಬೇಕು.

ಯೋಗಾಭ್ಯಾಸದಲ್ಲಿ ಅದ್ಭುತವಾದ ಫಲಗಳನ್ನು ಕೊಡತಕ್ಕ ಅನೇಕ ಅನುಷ್ಠಾನ ಗಳಿರುವುವು. ಯೋಗಾನುಷ್ಠಾನದ ಸಹಾಯದಿಂದ ಹಸಿವು ಬಾಯಾರಿಕೆಗಳಿಲ್ಲದಂತೆ ಇರಬಹುದು, ನೀರಿನ ಮೇಲೆ ನಡೆಯಬಹುದು, ಒಂದು ಕೂದಲಾದರೂ ನರೆಯದಂತೆ ಸಾವಿರಾರು ವರ್ಷಗಳು ಬದುಕಿರಬಹುದು. ಅಲ್ಲದೆ ಇನ್ನೂ ವಿಚಿತ್ರವಾದ ಫಲಗಳನ್ನೂ ಕೊಡುವ ಅನುಷ್ಠಾನಗಳಿವೆ. ಆದರೆ ಅವುಗಳೆಲ್ಲವೂ ನಮಗೆ ಅನಾವಶ್ಯಕ. ಸಾವಿರ ವರ್ಷ ಬದುಕಿದ್ದರೆ ಫಲವೇನು? ನಮಗೆ ಬೇಕಾಗಿರುವುದು ಮೋಕ್ಷಸಾಧನೆಯೊಂದೇ. ಈ ಸಾಧನೆಗೆ ಸ್ಥೂಲ ಮತ್ತು ಸೂಕ್ಷ್ಮ ದೇಹಗಳಲ್ಲಿರತಕ್ಕ ಪ್ರತಿಬಂಧಕ ನಿವಾರಣೆಗೆಷ್ಟು ಮಟ್ಟಿಗೆ ಯೋಗಸಾಧನೆಯು ಅಗತ್ಯವೋ ಅಷ್ಟನ್ನು ಮಾತ್ರ ಅನುಷ್ಠಿಸಲೇಬೇಕು. ಮೋಕ್ಷಮಾರ್ಗಕ್ಕೆ ಯಾವ ವಿಧದಲ್ಲಿ ಅನುಷ್ಠಾನ ಮಾಡಬೇಕೆಂಬುದಕ್ಕೆ ಶ್ರೀರಾಮಚಂದ್ರನು ಲೀಲಾವತಾರಮಾಡಿ ತೋರಿಸಿರುವ ದಾರಿಯೂ ಶ್ರೀಕೃಷ್ಣಪರಮಾತ್ಮನೂ ಶ್ರೀಶಂಕರ ಭಗವತ್ಪಾದಾಚಾರ್ಯರವರೂ ಉಪದೇಶಿಸಿರುವ ದಾರಿಯೂ ಸಂಶಯವಿಲ್ಲದೆ ಒಂದೇ ಆಗಿರುವುದು.

ಶ್ರೀಕೃಷ್ಣಪರಮಾತ್ಮನು ಕೂಡ ಯೋಗಾಭ್ಯಾಸವನ್ನು ಅಗತ್ಯವಾಗಿ ಮಾಡಬೇಕೆಂದು ಇದರ ಶ್ರೇಷ್ಠತೆಯನ್ನು ಕುರಿತು ಭಗವದ್ಗೀತೆ ಆರನೆ ಅಧ್ಯಾಯದಲ್ಲಿ,

ತಪಸ್ವಿಭ್ಯೋಧಿಕೋ ಯೋಗೀ ಜ್ಞಾನಿಭ್ಯೋಪಿ ಮತೋಧಿಕಃ |
ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ ||

ತಾ|| ಯೋಗಿಯು ಕೃಛ್ರ ಚಾಂದ್ರಾಯಣ ತಪಸ್ಸನ್ನು ಮಾಡುವವರಿಗಿಂತಲೂ ಅಧಿಕನು, ಪರೋಕ್ಷಜ್ಞಾನಿಗಳಿಗಿಂತಲೂ ಹೆಚ್ಚಿನವನು, ಕರ್ಮಿಗಳಿಗಿಂತಲೂ ಶ್ರೇಷ್ಠನು. ಆದಕಾರಣ ಅರ್ಜುನನೇ, ನೀನು ಯೋಗಿಯಾಗು, ಎಂಬದಾಗಿ ಹೇಳಿರುವನು.

ಈ ಅಂತರಾರ್ಥರಾಮಾಯಣದಲ್ಲಿ ಗೀತಾವಾಕ್ಯಗಳನ್ನು ಅನೇಕ ಕಡೆಗಳಲ್ಲಿ ಅನ್ವಯ ಮಾಡಿ ಉದಹರಿಸಿರುವುದರಿಂದಲೂ ಶ್ರೀಕೃಷ್ಣಪರಮಾತ್ಮನು ಯೋಗವನ್ನು ಅನುಮೋದಿ ಸಿರುವನೆಂಬ ವಿಚಾರವು ವ್ಯಕ್ತವಾಗುವುದು. ಈ ಅಂತರಾರ್ಥರಾಮಾಯಣವೂ ಗಾಯತ್ರೀ ಮೂಲಮಂತ್ರವೂ ಒಂದೇ ಆಗಿರುವುದರಿಂದ ಸಂಧ್ಯಾವಂದನೆಯಲ್ಲಿ ಈ ರಾಮಾಯಣದ ತತ್ವನೆಲ್ಲಾ ಇದ್ದೇ ಇರುವುದು.

ಕೆಲವು ಗ್ರಂಥಗಳಲ್ಲಿ ಪ್ರಾಣಾಯಾಮ ಮುಂತಾದ್ದನ್ನು ಹೇಳದೆ ಸುಖಾಸನದಲ್ಲಿ ಕುಳಿತುಕೊಂಡು ಧ್ಯಾನಮಾಡಬೇಕೆಂದು ತಿಳಿಸಿರುತ್ತಾರಷ್ಟೆ! ಈ ವಿಧವಾಗಿ ಹೇಳಲು ಕಾರಣವೇನೆಂದರೆ, ತೀವ್ರತಮವಾದ ಮೋಕ್ಷೇಚ್ಛೆಯಿಂದ ಸಂತಪ್ತರಾಗದ ಇರತಕ್ಕವರಿಗೆ ಯೋಗಾನುಷ್ಠಾನವನ್ನು ಉಪದೇಶಮಾಡಿದರೆ ಎಂದಿಗೂ ಸಾರ್ಥಕವಾಗುವುದಿಲ್ಲ. ಗುರು ಗಳು ಶಿಷ್ಯರ ಯೋಗ್ಯತೆಯನ್ನು ಚೆನ್ನಾಗಿ ಪರೀಕ್ಷಿಸಿ ಅಧಿಕಾರಿಯ ಯೋಗ್ಯತೆಗೆ ತಕ್ಕಂತೆ

ಉಪದೇಶಮಾಡುತ್ತಾರೆ. ಎಂಟು ಹತ್ತು ವಯಸ್ಸಿನ ಬಾಲಕರೂ ಅತಿ ವೃದ್ಧರೂ ಆಸನ ಪ್ರಾಣಾಯಾಮಾದಿಗಳನ್ನು ಮಾಡಿ ದೇವರ ಧ್ಯಾನಮಾಡುವುದು ಸಾಧ್ಯವೆ ? ದೃಢತರ ವಾದ ಮೋಕ್ಷಮಾರ್ಗದಲ್ಲಿರುವವರಂತೆ, ಯೋಗಾನುಷ್ಠಾನ ಮಾಡುವ ವಿಧಾನವನ್ನು ಗೃಹಸ್ಥರಾಗಿ ಪ್ರಪಂಚಾನುವರ್ತಿಗಳಾಗಿರತಕ್ಕವರಿಗೆ ಉಪದೇಶಮಾಡಬಹುದೆ ? ಎಂಬ ಪ್ರಶ್ನೆಗಳಿಗೆ ಉತ್ತರವನ್ನು ಅರಿತು ಅವರವರ ಯೋಗ್ಯತಾನುಸಾರವಾಗಿ ಮಹನೀಯರು ಹೇಳಿರುತ್ತಾರೆ. ಹೇಗಾದರೂ ಈ ದಾರಿಯಲ್ಲಿದ್ದರೆ ಯಾವುದಾದರೊಂದು ಕಾಲದಲ್ಲಿ ಪರಿಪಕ್ವವಾಗಿ ದಾರಿಗೆಬಂದು ಪುನೀತರಾಗಲೆಂದು ಅನೇಕ ವಿಧದಿಂದ ಹೇಳಿರುವರು.

ಶ್ರೀಶಂಕರಭಗವತ್ಪಾದರವರು ಶಿವಾನಂದಲಹರಿಯಲ್ಲಿ ಅಂತಃಕರಣವನ್ನು ಕಪಿಗೆ ಹೋಲಿಸಿ ಅತ್ಯಂತ ಚಂಚಲವಾದುದೆಂದು ಹೇಳಿರುತ್ತಾರೆ. ಮನಸ್ಸು ಅತ್ಯಂತ ಚಂಚಲ ವಾದುದು, ಮತ್ತು ನಿಗ್ರಹಿಸಲು ಅಶಕ್ಯವಾದದ್ದೆಂದು ಭಗವದ್ಗೀತೆಯಲ್ಲಿಯೂ ಹೇಳಿದೆ. ಅವಿದ್ಯೆಯ ಸಂಪರ್ಕದಿಂದ ಅತ್ಯಂತ ಚಂಚಲವಾದ ಈ ಮನಸ್ಸನ್ನು ಹೇಗಾದರೂ ಬಂಧಿಸಿ ನಾವು ಅಪೇಕ್ಷಿಸುವ ಸ್ಥಳದಲ್ಲಿರುವಂತೆ ಮಾಡಲು ಅನೇಕಾನೇಕ ಉಪಾಯಗಳನ್ನು ಶಾಸ್ತ್ರ ಗಳು ಉಪದೇಶಮಾಡುತ್ತವೆ. ವಿಗ್ರಹಗಳಲ್ಲಿ ಅಷ್ಟೋತ್ತರ ಪೂಜೆ, ಸಹಸ್ರನಾಮ ಪೂಜೆ, ಲಕ್ಷ ಪೂಜೆ ಮಾಡುವುದೂ, ಇದರಂತೆ ನೂರೆಂಟು ಜಪ, ಸಾವಿರ ಜಪ, ಲಕ್ಷ ಜಪಗಳನ್ನು ಮಾಡುವುದರ ಮುಖ್ಯೋದ್ದೇಶವೇನೆಂದರೆ — ಪ್ರಪಂಚವ್ಯಾಪಾರದಲ್ಲಿ ಹೋಗುತ್ತಿರುವ ಅಂತಃಕರಣವನ್ನು ಅಂತರ್ಮುಖದ ಮಾರ್ಗಕ್ಕೆ ಹಿಂತಿರುಗಿಸಿ ಯಾವ ಸಗುಣರೂಪವಾದ ಮೂರ್ತಿಯನ್ನು ಕುರಿತು ಜಪ ಅಥವಾ ಪೂಜೆಮಾಡುತ್ತೇವೋ ಆ ಮೂರ್ತಿಯ ಆಕಾರದಲ್ಲಿ ನಮ್ಮ ಅಂತಃಕರಣವು ಹೋಗಿ, ತದಾಕಾರವಾಗಿ, ಪೂಜೆಮಾಡುವ ಪುಷ್ಪ ಅಥವಾ ಜಪ ಮಾಡುವ ಮಂತ್ರದೊಡನೆ ನೂರೆಂಟು, ಸಾವಿರ, ಅಥವಾ ಲಕ್ಷಾವರ್ತಿ ಸಗುಣಮೂರ್ತಿಯ ಆಕಾರವಾಗಲೆಂದೂ, ಇದರಿಂದ ದೇವತಾಸುಪ್ರೀತಿಯಾಗುವುದಲ್ಲದೆ ಮನೋನಿಗ್ರಹಾ ಭ್ಯಾಸ ಬರುವುದೆಂದೂ ಶಾಸ್ತ್ರದ ತತ್ವವಾಗಿರುವುದು. ಮನಸ್ಸೆಲ್ಲೋ, ಸಗುಣಮೂರ್ತಿ ಯೆಲ್ಲೋ ಈ ವಿಧವಾಗಿ ಮಾಡಿದಲ್ಲಿ ಪೂಜೆ ಮತ್ತು ಜಪದ ಫಲಿತಾಂಶವು ದೊರೆಯು ವುದು ಕಷ್ಟ. ನಮ್ಮ ಹಬ್ಬ ಮುಂತಾದುವು ಭಕ್ತಿಯ ಶ್ರೇಷ್ಠತೆಯ ಹಬ್ಬಗಳಾಗಿಲ್ಲದೆ, ಭುಕ್ತಿಯ ಪ್ರಾಮುಖ್ಯತೆಯ ಹಬ್ಬಗಳಾಗಿ ಪರಿಣಮಿಸಿರುವುವು. ಮುಖ್ಯವಾಗಿ ಭತ್ತ ದೊಳಗಿರುವ ಅಕ್ಕಿಯನ್ನು ಬಿಟ್ಟು ಮೇಲಿನ ಹೊಟ್ಟನ್ನು ಹಿಡಿದುಕೊಂಡು ಒದ್ದಾಡು ತ್ತಿರುವ ಮಾರ್ಗವೇ ಈಗಿನ ಕಾಲದಲ್ಲಿ ಅಧಿಕವಾಗಿದೆ. ಯೋಗಾನುಷ್ಠಾನ ಮಾರ್ಗದಲ್ಲಿ ರಲು ಅಧಿಕಾರ ಬರದೆ ಇರತಕ್ಕವರಿಗೆ ಈ ಮೇಲೆ ಕಂಡ ಉಪಾಯಗಳ ಸಾಧನೆಗಳಾದರೂ ಇದ್ದಲ್ಲಿ, ಜನ್ಮ ಜನ್ಮಾಂತರಗಳಲ್ಲಿಯಾದರೂ ಫಲಕಾರಿಗಳಾಗಿ ಚಿತ್ತೈಕಾಗ್ರತೆಯ ಮೂಲಕ ಜ್ಞಾನವಂತರಾಗಲೆಂದು ಶಾಸ್ತ್ರಗಳು ವಿಧಾಯಕವಾಗಿವೆ.

ಈ ಮೇಲಿನ ಯೋಗದ ವಿಚಾರಗಳ ಮಹತ್ತನ್ನು ಅನುಸರಿಸಿ, ಹನುಮಂತನು ನಡೆಸಿದ ಮಹತ್ಕಾರ್ಯದ ಉಪಕಾರಕ್ಕೆ ಪ್ರತ್ಯುಪಕಾರವೇನು ಮಾಡಬೇಕೆಂಬುದರ ಯೋಚನೆಯಲ್ಲಿ ಮುಳುಗಿ, ಸರಿಯಾಗಿ ಪ್ರತಿಫಲವಾಗಿ ಕೊಡುವಂತಹ ಪದಾರ್ಥವನ್ನರಿಯದೆ, ಅಂದರೆ ಉಪಕಾರಕ್ಕೆ ಪ್ರತ್ಯುಪಕಾರ ಮಾಡಲು ಸಮವಾದ ಅನ್ಯಪದಾರ್ಥವಾವುದನ್ನೂ ಕಾಣದೆ, ಶ್ರೀರಾಮನು ಪ್ರೀತಿಗಿಂತ ದೊಡ್ಡ ವಸ್ತುವಾವುದೂ ಇಲ್ಲವೆಂದು ತಿಳಿದು, ಪ್ರೇಮದಿಂದ ಪುಳಕಿತವಾದ ಮೈಯುಳ್ಳವನಾಗಿ, ಮಹಾತ್ಮನಾದ ಹನುಮಂತನನ್ನು ತನ್ನ ಎರಡು ಕೈಗಳಿಂದಲೂ ಬಿಗಿಯಾಗಿ ಅಪ್ಪಿಕೊಂಡು, ಆ ಪ್ರೇಮವೆಂಬ ಸಮುದ್ರದಲ್ಲಿ ಮುಳಗಿದವನಾಗಿ, ಕೊಂಚ ಕಾಲ ಆ ಆಲಿಂಗನದಲ್ಲಿಯೇ ಇದ್ದು ತನ್ನನ್ನು ತಾನು ಮರೆತಿದ್ದನು. ಇದೇ ಅರ್ಥ ಬರುವಂತೆ ಶ್ರೀಮದ್ರಾಮಾಯಣದಲ್ಲಿಯೂ,

> ಇತ್ಯುಕ್ತ್ವಾ ಪ್ರೀತಿಹೃಷ್ಟಾಂಗೋ ರಾಮಸ್ತ್ವಂಪರಿಷಸ್ವಜೇ ।
> ಹನೂಮಂತಂ ಮಹಾತ್ಮಾನಂ ಕೃತಕಾರ್ಯಮುಪಾಗತಂ ॥

ಎಂಬದಾಗಿ ಹೇಳಿದೆ. ಹನುಮಂತನಲ್ಲಿಟ್ಟ ಶ್ರೀರಾಮನ ಪ್ರೇಮವನ್ನು ವರ್ಣಿಸುವುದಕ್ಕೆ ಸಾಧ್ಯವೇ ? ಸ್ತ್ರೀ ಪುರುಷರು ಪ್ರೇಮದಿಂದ ಉಬ್ಬಿ ಒಬ್ಬರಿಗೊಬ್ಬರು ಗಾಢಾಲಿಂಗನ ಮಾಡಿಕೊಂಡು ಆನಂದ ಪಡುವ ಕಾಲದ ಪ್ರೀತಿಯನ್ನೂ, ತಾಯಿಯು ಶಿಶುವನ್ನು ಪರಮ ಪ್ರೇಮದಿಂದ ಎತ್ತಿ ಮುದ್ದಾಡುವ ಪ್ರೀತಿಯನ್ನೂ ವರ್ಣಿಸಲು ಸಾಧ್ಯವೇ ? ಪ್ರಪಂಚದಲ್ಲಿ ಮೇಲಿನ ಎರಡು ವಿಧವಾದ ಪ್ರೀತಿಯೇ ಬಹು ಹೆಚ್ಚಿನ ಪ್ರೀತಿಯೆಂದು ಭಾವಿಸುವರು. ಆದರೆ ಇಂತಹ ಪ್ರೀತಿಯು ಕೂಡ ಶಾಶ್ವತವಾದುದಲ್ಲ. ಶ್ರೀರಾಮಚಂದ್ರನು ತನ್ನ ಭಕ್ತನಾದ ಹನುಮಂತನಲ್ಲಿ ತೋರಿಸಿದ ಪ್ರೀತಿಯಾದರೋ ಅಸಮಾನವಾಗಿಯೂ ನಶ್ವರವಲ್ಲದ್ದಾಗಿಯೂ ಇರುವುದರಿಂದಲೇ ಹನುಮಂತನ ತತ್ವವಾದ ಶ್ವಾಸೋಚ್ಛ್ವಾಸವು ಪ್ರಾಣಗಳಲ್ಲಿ " ಅಹಂಸಃ ಅಹಂಸಃ " ಎಂಬದಾಗಿ ಸರ್ವದಾ ಆ ರಾಮನನ್ನೇ ಧ್ಯಾನಮಾಡುತ್ತಿರುವುದು. ಆದುದರಿಂದ ಶ್ರೀರಾಮನ ಇಂತಹ ಪರಮಪ್ರೀತಿಗೆ ಪಾತ್ರವಾದ ಹನುಮಂತನ ಕಾರ್ಯದ ತತ್ವವಾದ ಯೋಗವನ್ನು ಧಿಕ್ಕರಿಸಬಾರದು. ಶ್ರೀರಾಮನು ಹನುಮಂತನನ್ನು ಕುರಿತು " ರಘುವಂಶದಲ್ಲಿ ಜನಿಸಿದವರೆಲ್ಲರನ್ನೂ ನೀನು ಧರ್ಮಮಾರ್ಗದಲ್ಲಿ ನಿಲ್ಲಿಸಿದಂತಾಯಿತು. ಆದುದರಿಂದ ಪ್ರಾಣದಾನ ಮಾಡಿರುತ್ತೀಯೆ " ಎಂದು ಹರ್ಷದಿಂದ ಕೊಂಡಾಡಿದನು. ಇದರ ತತ್ವವೇನೆಂದರೆ--ಮೋಕ್ಷಮಾರ್ಗದಲ್ಲಿರುವ ಬುದ್ಧಿ ಮನಸ್ಸುಗಳಿಗೆ ಹನುಮಂತನು ಇಂತಹ ಅದ್ಭುತವಾದ ಕಾರ್ಯಗಳ ಸಲಕರಣೆಗಳನ್ನು ಮಾಡಿಕೊಡದಿದ್ದರೆ, ಮೋಕ್ಷವನ್ನು ಪಡೆಯುವ ಧರ್ಮವುಂಟಾಗುತ್ತಿರಲಿಲ್ಲ. ಅಂದರೆ ಸೀತಾದೇವಿಯನ್ನು ಪಡೆಯಲು ಆಗುತ್ತಿರಲಿಲ್ಲ. ಆದುದರಿಂದ ಹನುಮಂತನ ಕಾರ್ಯದ ತತ್ವವಾದ ಯೋಗವು ಶ್ರೇಷ್ಠವಾಗಿಯೂ, ಮೋಕ್ಷದ ಸೋಪಾನಕ್ಕೆ ಅತ್ಯಂತ ಸಹಕಾರಿಯಾಗಿಯೂ

ಇರುವುದು. ಶ್ರೀರಾಮನು ಪರಮಪ್ರೀತಿಯಿಂದ ಆಲಿಂಗನ ಮಾಡಿಕೊಂಡ ಹನುಮಂತನ ಕಾರ್ಯದ ಮಹತ್ವವನ್ನು ಶ್ರುತಿಯೂ ಹೊಗಳುತ್ತದೆ. ಯೋಗಶಿಖೋಪನಿಷತ್ತಿನಲ್ಲಿ,

ಆಧಾರಶಕ್ತಿ ನಿದ್ರಾಯಾಂ ವಿಶ್ವಂ ಭವತಿ ನಿದ್ರಯಾ |
ತಸ್ಯಾಂ ಶಕ್ತಿಪ್ರಬೋಧೇನ ತ್ರೈಲೋಕ್ಯಂ ಪ್ರತಿಬುಧ್ಯತೇ |
ಆಧಾರಂ ಯೋ ವಿಜಾನಾತಿ ತಮಸಃ ಪರಮಶ್ನುತೇ |
ತಸ್ಯ ವಿಜ್ಞಾನ ಮಾತ್ರೇಣ ನರಃ ಪಾಪೈಃ ಪ್ರಮುಚ್ಯತೇ |
ಆಧಾರ ಚಕ್ರ ಮಹಸಾ ವಿದ್ಯುತ್ಪುಂಜ ಸಮಪ್ರಭಾ |
ಆಧಾರ ಚಕ್ರ ಮಹಸಾ ಪುಣ್ಯ ಪಾಪೇ ನಿಕೃಂತಯೇತ್ |
ಆಧಾರ ವಾತ ರೋಧೇನ ಲೀಯತೇ ಗಗನಾಂತರೇ |
ಆಧಾರ ವಾತ ರೋಧೇನ ಶರೀರಂ ಕಮ್ಪತೇ ಯಥಾ |
ಆಧಾರ ವಾತ ರೋಧೇನ ವಿಶ್ವಂ ತತ್ರೈವ ದೃಶ್ಯತೇ |
ಸೃಷ್ಟಿ ರಾಧಾರ ಮಾಧಾರ ಮಾಧಾರೇ ಸರ್ವ ದೇವತಾಃ |
ಆಧಾರೇ ಸರ್ವವೇದಾಶ್ಚ ತಸ್ಮಾ ದಾಧಾರ ಮಾಶ್ರಯೇತ್ ||

ತಾ|| ಮೂಲಾಧಾರದಲ್ಲಿ ಸುಪ್ತೆ ಅಥವಾ ಕುಂಡಲಿನಿಯಾದ ಪರಾಶಕ್ತಿಯು ಬ್ರಹ್ಮರಂಧ್ರವನ್ನು ಮುಚ್ಚಿಕೊಂಡು ಮಲಗಿರುವ ಪರ್ಯಂತರ ಪ್ರಪಂಚವು ಪ್ರಪಂಚಕಾರ್ಯರೂಪವಾದ ನಿದ್ರೆಯಲ್ಲಿರುತ್ತದೆ. ಅಂದರೆ ನಮ್ಮಲ್ಲಿರುವ ಕುಂಡಲಿನಿಯು ನಿದ್ರೆಯಲ್ಲಿರುವ ಪರ್ಯಂತರ ಪ್ರಪಂಚವ್ಯಾಪಾರ ಬಂಧನವು ನಮ್ಮನ್ನು ಬಿಡುವುದಿಲ್ಲ. ಆ ಕುಂಡಲಿನೀ ಶಕ್ತಿಯನ್ನು ನಿದ್ರೆಯಿಂದ ಎಬ್ಬಿಸಿದರೆ ಮೂರು ಲೋಕಗಳೂ ತಿಳಿಯುತ್ತವೆಂದರೆ—ಅಕಾರ, ಉಕಾರ, ಮಕಾರ, ಸ್ವರೂಪವಾದ ಓಂಕಾರೋಪಾಸನೆ ಮಾಡಲು ಗೊತ್ತಾಗುವುದು. ಮೂಲಾಧಾರಚಕ್ರದ ತತ್ವವನ್ನು ಯಾವನು ಚೆನ್ನಾಗಿ ತಿಳಿದು ಪ್ರತಿಬಂಧಕಗಳನ್ನು ನಿವಾರಣೆ ಮಾಡಿಕೊಳ್ಳುವನೋ ಅವನು ಅವಿದ್ಯೆಯನ್ನು ದಾಟುವನು. ಮೂಲಾಧಾರದಲ್ಲಿರುವ ಆ ಪರಾಶಕ್ತಿಯನ್ನು ತಿಳಿದ ಮಾತ್ರದಿಂದಲೇ ಮನುಷ್ಯನು ಪುಣ್ಯ ಪಾಪಗಳಿಂದ ಬಿಡಲ್ಪಡುತ್ತಾನೆ. ಈ ಪರಾಶಕ್ತಿಯೇ ಮಹತ್ತರವಾದ ಮಿಂಚುಗಳ ಸಮೂಹಕ್ಕೆ ಸಮಾನವಾದ ಪ್ರಭೆಯುಳ್ಳವಳು. ಮಹತ್ತರವಾದ ಈ ಪರಾಶಕ್ತಿಯಿಂದ ಪುಣ್ಯ ಪಾಪಗಳೆಲ್ಲ ಕತ್ತರಿಸಬೇಕು. ಮೂಲಾಧಾರದಲ್ಲಿ ವಾಯುನಿರೋಧ ಮಾಡುವುದರಿಂದ ಬ್ರಹ್ಮರಂಧ್ರದ ಮೂಲಕ ಆಕಾಶಾಂತರ್ಗತವಾದ ಪರಮಾತ್ಮನಲ್ಲಿ ಬುದ್ಧಿವೃತ್ತಿಯು ಲೀನವಾಗುವುದು. ಮೂಲಾಧಾರದಲ್ಲಿ ವಾಯುನಿರೋಧ ಮಾಡುವುದೆಂದರೆ, ಪ್ರಾಣಾಯಾಮದ ಪರಿಪಕ್ವಾವಸ್ಥೆಯಲ್ಲಿ ಶರೀರದಲ್ಲಿ ಕಂಪನ ಹುಟ್ಟುವುದು. ಈ ಕಂಪನ ಬರುವುದು ಉತ್ತಮವೇ ಹೊರತು ಇದ

ರಿಂದ ಯಾವ ಹೆದರಿಕೆಯೂ ಇರುವುದಿಲ್ಲ. ಮೂಲಾಧಾರದಲ್ಲಿ ವಾಯುನಿರೋಧ ಮಾಡುವುದರಿಂದ ಬ್ರಹ್ಮಾಂಡದಲ್ಲಿನ ಜ್ಞಾನವುಂಟಾಗುವುದು. ಸೃಷ್ಟಿಗೆ ಆಧಾರವಾಗಿರುವುದು ಆಧಾರಚಕ್ರವು. ಹೇಗೆಂದರೆ, ಪುರುಷನಲ್ಲಿ ಸೃಷ್ಟಿಮಾಡುವ ಮತ್ತು ಸ್ತ್ರೀಯಲ್ಲಿ ಸೃಷ್ಟಿಯಾಗುವ ಸ್ಥಳವು ಮೂಲಾಧಾರಚಕ್ರ ಪ್ರದೇಶಕ್ಕೇ ಸೇರಿದ ಸ್ಥಳವಾಗಿರುವುದು. ಆದುದರಿಂದ ಸೃಷ್ಟಿಗಾಧಾರವು ಮೂಲಾಧಾರಚಕ್ರ. ಆಧಾರದಲ್ಲಿ ಸರ್ವ ದೇವತೆಗಳೂ ಇರುವರು. ಇದರಲ್ಲಿಯೇ ಸರ್ವ ವೇದಗಳೂ ಇರುವುದರಿಂದ ಈ ಆಧಾರಚಕ್ರವನ್ನು ಆಶ್ರಯಿಸತಕ್ಕದ್ದು. ಎಂಬದಾಗಿ ಹೇಳಿರುವುದು.

ಈ ಮೇಲಿನ ಶ್ರುತಿಪ್ರಮಾಣಕ್ಕೆ ಅನುಸಾರವಾಗಿ ಹನುಮಂತನ ಕಾರ್ಯದ ತತ್ವವಾದ ಪ್ರಾಣಾಯಾಮದಿಂದ ಮೂಲಾಧಾರವೆಲ್ಲ ಶುದ್ಧಿಯಾಗಿರುವುದು. ಈ ಮೂಲಾಧಾರ ಚಕ್ರವೇ ಓಂಕಾರದಲ್ಲಿನ ಅಕಾರ ಅಥವಾ ಬ್ರಹ್ಮಗ್ರಂಥಿಯ ಸ್ಥಳವಾಗಿರುವುದು. ಓಂಕಾರಕ್ಕೆ ಪಾದಸ್ವರೂಪದಲ್ಲಿರುವುದು ಅಕಾರ. ಇಂತಹ ಅಕಾರವನ್ನು ಉಕಾರ ಮಕಾರಗಳಲ್ಲಿ ಸೇರಿಸುವುದಕ್ಕೆ ಸಹಾಯಕನು ಹನುಮಂತನು. ಅಲ್ಲದೆ ಈ ಮೇಲಿನ ಶ್ರುತಿವಾಕ್ಯಕ್ಕೆ ಅನುಸಾರವಾದ ಮಹತ್ತು ಹನುಮಂತನ ಕಾರ್ಯದಲ್ಲಿರುವುದರಿಂದಲೇ ಶ್ರೀರಾಮನು ಆಂಜನೇಯನನ್ನು ಪರಮಪ್ರೀತಿಯಿಂದ ಆಲಿಂಗನಮಾಡಿಕೊಂಡನು.

ಕುಂಡಲಿನೀ ಪ್ರಬೋಧೆಯೆಂದರೆ—ಮೋಕ್ಷದ ಬಾಗಿಲನ್ನು ತೆಗೆಸುವುದೆಂದು ಸುಂದರಕಾಂಡದಲ್ಲಿ ತಿಳಿಸಿರುತ್ತದಷ್ಟೆ! ಬ್ರಹ್ಮರಂಧ್ರದ ಬಾಗಿಲಲ್ಲಿ ಕುಂಡಲಿನೀಶಕ್ತಿಯು ಇರುವುದರಿಂದ ಭಾವನೋಪನಿಷತ್ತಿನಲ್ಲಿ "ಕುಣ್ಡಲಿನೀ ಜ್ಞಾನಶಕ್ತಿಗ್ರಹಮ್" ಎಂಬದಾಗಿ ಹೇಳಿರುತ್ತದೆ. ಅಲ್ಲದೆ ಯೋಗಕುಂಡಲ್ಯುಪನಿಷತ್ತಿನಲ್ಲಿ,

> ಕುಂಡಲಿನ್ಯಾಃ ಸಮುದ್ಭೂತಾ ಗಾಯತ್ರೀ ಪ್ರಾಣಧಾರಿಣೀ ।
> ಪ್ರಾಣವಿದ್ಯಾ ಮಹಾವಿದ್ಯಾ ಯಸ್ತಾಂ ವೇದಸವೇದವಿತ್ ॥

ತಾ|| ಕುಂಡಲಿನಿಯ ದೆಸೆಯಿಂದ ಉತ್ಪನ್ನವಾಗುವ ಗಾಯತ್ರಿಯು ಪ್ರಾಣವನ್ನು ಧರಿಸಿರುವಳು. ಅಂದರೆ ಕುಂಡಲಿನಿಯ ದೆಸೆಯಿಂದ ಉತ್ಪನ್ನವಾಗುವ ಗಾಯತ್ರೀ ಸ್ವರೂಪದಲ್ಲಿರುವ "ಓಂ" ಕಾರವು ಪ್ರಾಣವನ್ನು ಧರಿಸಿರುವುದೆಂದರೆ ಬ್ರಹ್ಮಾಂಡವನ್ನು ಧರಿಸಿರುವುದು. ಈ "ಓಂ"ಕಾರಸ್ವರೂಪಳಾದ ಗಾಯತ್ರಿಯನ್ನು ಅರಿಯುವುದೇ ಮಹಾವಿದ್ಯೆಯು. ಈ ಮಹಾವಿದ್ಯೆಯನ್ನು ತಿಳಿದವರೆಂದರೆ "ಓಂ"ಕಾರಸ್ವರೂಪವನ್ನು ಅರಿತವರೇ ಜ್ಞಾನಿಗಳು. ಅಂದರೆ ಆತ್ಮಸಾಕ್ಷಾತ್ಕಾರವನ್ನು ಪಡೆದವರೆಂದು ಅರ್ಥ.

"ಓಂ"ಕಾರಾನುಸಂಧಾನ ಮಾಡಲು ಹನುಮಂತನ ತತ್ವದಲ್ಲಿರುವ ಪ್ರಾಣಾಯಾಮದಿಂದ ಸಾಧ್ಯವೇ ಇಲ್ಲ. ಬುದ್ಧಿತತ್ವದಲ್ಲಿರುವ ಶ್ರೀರಾಮನು ಇತರರ ಸಹಾಯದೊಡನೆ

ಓಂಕಾರಾನುಸಂಧಾನ ಮಾಡಬೇಕಾಗಿರುವುದು. ಈ "ಓಂ"ಕಾರಾನುಷ್ಠಾನದ ವಿಚಾರವು ಶ್ರೀರಾಮಚಂದ್ರನು ಸಮುದ್ರರಾಜನ ಮೇಲೆ ಬ್ರಹ್ಮಾಸ್ತ್ರ ಪ್ರಯೋಗಮಾಡಿರುವ ಸಂದರ್ಭದಿಂದ ಪ್ರಾರಂಭವಾಗಿ ಸೀತಾಗ್ನಿಪ್ರವೇಶದವರೆಗೂ ಬರುತ್ತದೆ. ಆದುದರಿಂದ ಹನುಮಂತನು ಮಾಡಿರುವ ಸಲಕರಣೆಗಳೆಲ್ಲ ಈ "ಓಂ"ಕಾರೋಪಾಸನೆಗೋಸ್ಕರವಾಗಿಯೇ ಇರುವುವು.

ಮೂಲಾಧಾರ ಶೋಧನೆ ಮತ್ತು ಕುಂಡಲಿನೀ ಉತ್ಥಾಪನೆ ಆಗುವ ಪರ್ಯಂತರ ದೇಹದಲ್ಲಿರುವ ನಾಡಿಗಳೂ ಚೆನ್ನಾಗಿ ಶುದ್ಧಿಯಾಗಿರುವುದಿಲ್ಲ. ನಾಡಿಗಳು ಚೆನ್ನಾಗಿ ಶುದ್ಧಿಯಾಗಿ ಕುಂಡಲಿನೀ ಉತ್ಥಾಪನೆಯಾಗದೆ ಬುದ್ಧಿ ಮನಸ್ಸುಗಳನ್ನು ಪ್ರಾಣಶಕ್ತಿಯೊಡನೆ ಒಂದೇ ಕಡೆ ನಿಲ್ಲಿಸಲು ಖಂಡಿತವಾಗಿಯೂ ಸಾಧ್ಯವಿಲ್ಲ. ಈ ತತ್ವವನ್ನು ಅನುಸರಿಸಿ ಶ್ರೀರಾಮ ಲಕ್ಷ್ಮಣರೂ ಪ್ರಾಣವಾಯು ತತ್ವದಲ್ಲಿರುವ ಸುಗ್ರೀವನೂ ಸೀತಾದೇವಿಯನ್ನು ಪಡೆಯುವ ಕಾರ್ಯದಲ್ಲಿ ಪ್ರವರ್ತಕರಾಗಲಿಲ್ಲ. ಹನುಮಂತನು ಕಾರ್ಯವನ್ನು ನೆರವೇರಿಸಿಕೊಂಡು ಬರುವುದನ್ನೇ ನಿರೀಕ್ಷಿಸಿಕೊಂಡಿದ್ದರು. ಇದೇ ತಾತ್ಪರ್ಯಕ್ಕೆ ಯೋಗಚೂಡಾಮಣ್ಯುಪನಿಷತ್ತಿನಲ್ಲಿ,

ಶುದ್ಧಿಮೇತಿ ಯದಾ ಸರ್ವಂ ನಾಡೀಚಕ್ರಂ ಮಲಾಕುಲಂ |
ತದೈವಜಾಯತೇ ಯೋಗೀ ಪ್ರಾಣಸಂಗ್ರಹಣ ಕ್ಷಮಃ ||

ತಾ|| ಮಲದಿಂದ ಕೂಡಿರತಕ್ಕ ನಾಡೀಚಕ್ರಗಳು ಯಾವಾಗ ಪರಿಶುದ್ಧತೆಯನ್ನು ಹೊಂದುವುವೋ ಆಗಲೇ ಪ್ರಾಣವಾಯುವನ್ನು ಸಂಗ್ರಹಿಸುವುದರಲ್ಲಿ ಅಧಿಕಾರಿಯು ಸಮರ್ಥನಾಗುವನು. ಅಂದರೆ ಪ್ರಾಣವಾಯುವು ಬುದ್ಧಿ ಮನಸ್ಸಿನೊಡನೆ ಮುಂದಿನ ಕಾರ್ಯವಾದ ಪ್ರತ್ಯಾಹಾರ, ಧ್ಯಾನ, ಧಾರಣಗಳ ಕಾರ್ಯಕ್ಕೆ ಅರ್ಹತೆಯನ್ನು ಪಡೆಯುವುದು. ಅಂದರೆ ಸುಗ್ರೀವನು ಶ್ರೀರಾಮನೊಡನೆ ಸೀತಾದೇವಿಯನ್ನು ಪಡೆಯುವ ಕಾರ್ಯಕ್ಕೆ ಹೊರಡಲು ಅರ್ಹನಾಗುವನು. ಎಂದು ಹೇಳಿರುವುದು.

ಈ ಶ್ರುತಿವಾಕ್ಯಕ್ಕೆ ಅನುಸಾರವಾಗಿ ಶ್ರೀರಾಮನು ಕಪಿಸೈನ್ಯಗಳನ್ನೆಲ್ಲ ಸಾಗಿಸಿಕೊಂಡು ಲಂಕೆಗೆ ಸೇರುವುದು ಹೇಗೆಂದು ಯೋಚಿಸುತ್ತಿರುವಲ್ಲಿ ವ್ಯಸನಪಡಕೂಡದೆಂದೂ ತಾನು ನಿರ್ವಾಹ ಮಾಡುವೆನೆಂದೂ ಸುಗ್ರೀವನು ಶ್ರೀರಾಮನೊಡನೆ ಹೇಳಿರುವನು. ಮುಖ್ಯ ತಾತ್ಪರ್ಯವೇನೆಂದರೆ, ಹನುಮಂತನ ಕಾರ್ಯದ ಜಯದಿಂದ ಪ್ರಾಣವಾಯುತತ್ವದಲ್ಲಿರುವ ಸುಗ್ರೀವನು ತನ್ನ ಸೈನ್ಯಗಳೊಡನೆಂದರೆ ದೇಹದಲ್ಲಿರುವ ಎಲ್ಲಾ ವಾಯುಗಳೊಡನೆ ಮುಂದಿನ ಪ್ರತ್ಯಾಹಾರ ಮುಂತಾದ ಅನುಷ್ಠಾನಕ್ಕೆ ಅರ್ಹತೆಯನ್ನು ಪಡೆದನು. ಕುಂಡಲಿನೀ ಉತ್ಥಾಪನೆಯಾದ ಹೊರತು ಬುದ್ಧಿಮನಸ್ಸುಗಳಿಗೆ ಏಕಾಗ್ರತೆಯು ಮತ್ತಾವ ವಿಧದಿಂದಲೂ ಬರುವುದಿಲ್ಲವಾದುದರಿಂದ ಹನುಮಂತನು ರಘುವಂಶದವರನ್ನೆಂದರೆ, ಮೋಕ್ಷಗಾಮಿಗಳಾ

ಗಿರತಕ್ಕ ಬುದ್ಧಿ ಮನಸ್ಸುಗಳನ್ನು ಅವರ ಧರ್ಮದಲ್ಲಿ ನಿಲ್ಲಿಸಿದನೆಂಬ ತಾತ್ಪರ್ಯ. ಆದುದರಿಂದ ನಾಡಿಗಳೆಲ್ಲಾ ಚೆನ್ನಾಗಿ ಶುದ್ಧಿಯಾಗುವ ಮತ್ತು ಮೋಕ್ಷದ ಬಾಗಿಲನ್ನು ತೆಗೆಸುವ ಪರ್ಯಂತರ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧಿಗಳ ಅನುಷ್ಠಾನಕ್ಕೆ ಅಧಿಕಾರವೇ ಇಲ್ಲವೆಂದು ಗೊತ್ತಾಗುವುದು. ಆದಕಾರಣ ಮೋಕ್ಷದಲ್ಲಿ ತೀವ್ರತಮವಾದ ಇಚ್ಛೆಯುಳ್ಳವರು ಪ್ರಾಣಾಯಾಮವನ್ನು ಅಗತ್ಯವಾಗಿ ಅಭ್ಯಾಸಮಾಡಬೇಕು. ಕುಂಡಲಿನೀ ಉತ್ಥಾಪನೆ ಯಾಗದೆ ನಾಡೀಚಕ್ರಗಳಲ್ಲಿನ ಮಲವು ನಿವಾರಣೆಯಾಗುವುದಿಲ್ಲವೆಂದು ಮೇಲೆ ತಿಳಿಸಿರು ವುದಷ್ಟೆ! ಇದೇ ತಾತ್ಪರ್ಯಕ್ಕೆ ಶ್ರುತಿಯಲ್ಲಿ,

ದ್ವಾಸಪ್ತತಿ ಸಹಸ್ರಾಣಾಂ ನಾಡೀನಾಂ ಮಲಶೋಧನೇ |
ಕುತಃ ಪ್ರಕ್ಷಾಳನೋಪಾಯಃ ಕುಣ್ಡಲ್ಯಭ್ಯಸನಾದೃತೇ ||

ತಾ|| ದೇಹವೆಂಬ ಪಂಜರದಲ್ಲಿರತಕ್ಕ ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿರುವ ಮಲ ವನ್ನು ಶುದ್ಧಿಮಾಡಲು ಶಕ್ತಿಚಲನಪ್ರಾಣಾಯಾಮದಿಂದ ಕುಂಡಲಿನೀ ಉತ್ಥಾಪನೆಯ ಅಭ್ಯಾಸ ಹೊರತು ಬೇರೆ ಉಪಾಯ ಯಾವುದು? ಅಂದರೆ ಬೇರೆ ಉಪಾಯವೇ ಇಲ್ಲ ಎಂದು ಹೇಳಿರುವುದು.

ಈ ಕುಂಡಲಿನೀ ಉತ್ಥಾಪನೆಯಿಂದ ನಾಡೀಶುದ್ಧಿಮಾತ್ರವಲ್ಲದೆ ಪಂಚಭೂತಾತ್ಮಕ ವಾದ ಈ ದೇಹವೇ ಶುದ್ಧಿಯಾಗುವುದೆಂಬ ತಾತ್ಪರ್ಯಕ್ಕೆ ದೇವೀಸಪ್ತಶತೀ ಪು[illegible] ವಿಧಾನದಲ್ಲಿ, ಅಧಿಕಾರಿಯು ಸಪ್ತಶತೀ ಪುನಶ್ಚರಣೆಗೆ ಭೂತಶುದ್ಧಿ ಮಾಡಿಕೊಳ್ಳಲು ಪ್ರಾಣಾಯಾಮ ಮಾಡಿ, ಕುಂಡಲಿನೀಶಕ್ತಿಯನ್ನು ಪ್ರಬೋಧೆಮಾಡಬೇಕೆಂದು,

ಪ್ರಾಣಾಯಾಮಪರೋ ಭೂತ್ವಾ ಭೂತತತ್ತ್ವಕ್ಷಯೈಃ ಕ್ರಮಾತ್ |
ಶ್ರೀಮತ್ಕುಂಡಲಿನೀಶಕ್ತ್ಯಾ ಭೂತಶುದ್ಧಿಂ ಪ್ರಸಾದಯೇತ್ ||

ತಾ|| ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶಗಳೆಂಬ ಪಂಚಭೂತಾತ್ಮಕವಾದ ಈ ದೇಹವನ್ನು ಪ್ರಾಣಾಯಾಮದಿಂದ ಭೂತಗಳ ಕ್ರಮವನ್ನನುಸರಿಸಿಕೊಂಡು ಶುದ್ಧಿ ಮಾಡಿಕೊಳ್ಳಬೇಕು. ಈ ಭೂತಶುದ್ಧಿಯು ಸಿದ್ಧಿಸಬೇಕಾದರೆ, ಕುಂಡಲಿನಿಯನ್ನು ಉತ್ಥಾಪನೆ ಮಾಡಬೇಕು. ಎಂದು ಹೇಳಿದೆ.

**ರಾ||** ಶ್ರೀರಾಮನು ಹನುಮಂತನನ್ನು ಆಲಿಂಗಿಸಿಕೊಂಡನಂತರ ಸುಗ್ರೀವನ ಸಂಗಡ ಲಂಕೆಗೆ ಹೋಗುವ ಕಾರ್ಯದ ವಿಚಾರ ಮಾತಾಡುವ ಸಂದರ್ಭದಲ್ಲಿ ಹನುಮಂತ ನನ್ನು ಕುರಿತು ಲಂಕೆಯ ದುರ್ಗರಹಸ್ಯಾದಿಗಳನ್ನು ಕೇಳಿದನು. ಅದಕ್ಕೆ ಹನುಮಂತನು

ಲಂಕೆಯ ದುರ್ಗರಹಸ್ಯಗಳನ್ನು ತಿಳಿಸುತ್ತಾ ಶ್ರೀರಾಮಾ! ನಾನು ಲಂಕೆಯನ್ನು ಪ್ರವೇಶಿಸಿ ದಾಗಲೇ ಲಂಕೆಯ ಬಾಗಿಲುಗಳನ್ನೂ, ಕಂದಕದ ಸೇತುವೆಗಳನ್ನೂ ಮುರಿದಿರುವೆನಲ್ಲದೆ ಲಂಕೆಯನ್ನು ಸುಟ್ಟು ರಾವಣನ ಸೈನ್ಯದಲ್ಲಿ ಕೆಲವು ಭಾಗವನ್ನು ಕೊಂದು ಬಂದಿರುವುದ ರಿಂದ, ನಿಮಗೆ ಮುಂದೆ ಅಷ್ಟು ಕಷ್ಟವೇನೂ ತೋರದೆಂದು ಹೇಳಿದನು.

**ತತ್ವ||** ಹನುಮಂತನ ಕಾರ್ಯವಾದ ಪ್ರಾಣಾಯಾಮದಿಂದಲೇ ಮೂಲಾಧಾರದ ತತ್ವವಾದ ಬ್ರಹ್ಮಗ್ರಂಥಿಯು ಶೋಧನೆಯಾಗಿ ಶಿಥಿಲವಾಗಿರುವುದರಿಂದ ಬುದ್ಧಿತತ್ವವು ಮುಂದೆ ಮಾಡುವ ಧ್ಯಾನ, ಧಾರಣ, ಸಮಾಧಿ ಕರ್ಮಗಳಿಗೆ ಅಷ್ಟೊಂದು ಕಷ್ಟವಿರುವುದಿಲ್ಲ ವೆಂಬ ತಾತ್ಪರ್ಯವಾಗಿರುವುದು. ಹನುಮಂತನ ಕಾರ್ಯಗಳ ಮಹಿಮೆಯು ಸುಂದರಕಾಂಡದ ತತ್ವದಲ್ಲಿರುವುದಲ್ಲದೆ ಯುದ್ಧಕಾಂಡದಲ್ಲಿಯೂ ಅಮೋಘವಾಗಿದೆ.

ಶ್ರೀರಾಮನು ಪರಮಪ್ರೀತಿಯಿಂದ ಆಲಿಂಗನಮಾಡಿಕೊಂಡು ಪ್ರೀತಿಯ ಸಮುದ್ರ ದಲ್ಲಿ ಮುಳುಗಿದ್ದ ಈ ಪ್ರಕರಣದಲ್ಲಿ ಸುಂದರಕಾಂಡದ ಪ್ರಧಾನಪುರುಷನಾದ ಹನುಮಂತ ನಿಗೆ ನನ್ನ ಪ್ರಥಮ ಪ್ರಣಾಮವನ್ನು ಅರ್ಪಿಸಿ ನನಗೆ ಶಕ್ತಿಚಲನಪ್ರಾಣಾಯಾಮ ಮುಂತಾದ ಅನೇಕ ಯೋಗರಹಸ್ಯಗಳನ್ನು ಉಪದೇಶಮಾಡಿ ನನ್ನನ್ನು ಉದ್ಧಾರಮಾಡಿದ ನನ್ನ ಗುರುವರ್ಯರಾದ ಶ್ರೀಸಾಂಬಸದಾಶಿವಾನಂದತೀರ್ಥಸ್ವಾಮಿಗಳವರ ಪಾದಪದ್ಮ ಗಳಲ್ಲಿ ಭಕ್ತಿ ವಿನಯಪೂರ್ವಕವಾಗಿ ಸಾಷ್ಟಾಂಗ ಪ್ರಣಾಮಗಳನ್ನು ಆಚರಿಸುವೆನು.

## ೨ನೆಯ ಪ್ರಕರಣ.

| | |
|---|---|
| **ಶ್ರೀರಾಮನು ಸುಗ್ರೀವ ಸಮೇತ ನಾಗಿ ಸೈನ್ಯದೊಡನೆ ಸಮುದ್ರತೀರ ವನ್ನು ಸೇರಿದುದು.** | **ಪ್ರತ್ಯಾಹಾರದ ಸ್ವರೂಪ.** |

**ರಾ||** ವಾನರರೊಡನೆ ಲಂಕೆಯನ್ನು ಸೇರುವ ವಿಚಾರದಲ್ಲಿ ಶ್ರೀರಾಮನು ಚಿಂತಿಸುತ್ತಿ ರಲು ಸುಗ್ರೀವನು ಶ್ರೀರಾಮನನ್ನು ಕುರಿತು "ನೀನು ಉತ್ಸಾಹವನ್ನು ಬಿಟ್ಟು ದೀನನಾಗ ಬೇಡ. ನೀನು ಉತ್ಸಾಹದಿಂದ ಇದ್ದು ನಮಗೂ ಉತ್ಸಾಹವನ್ನು ಕೊಡುತ್ತಿದ್ದರೆ ಸಕಲ ಕಾರ್ಯಗಳನ್ನೂ ನಿರ್ವಹಿಸಬಹುದು" ಎಂದು ಹೇಳಿದನು.

**ತತ್ವ||** ಹನುಮಂತನು ನಡೆಸಿದ ಕಾರ್ಯದ ತತ್ವವಾದ ಪ್ರಾಣಾಯಾಮದ ಮುಂದಿನ ಸೋಪಾನವಾದ ಪ್ರತ್ಯಾಹಾರ ಮುಂತಾದ ಅನುಷ್ಠಾನಗಳನ್ನು ಕೂಡ ಉತ್ಸಾಹದಿಂದ ಮಾಡಬೇಕೆಂಬ ತತ್ವವಾಗಿರುವುದು. ಇದೇ ಅರ್ಥಕ್ಕೆ ಶ್ರೀಸ್ವಾತ್ಮಾರಾಮಯೋಗಿಗಳು ಯೋಗಪ್ರದೀಪಿಕೆಯಲ್ಲಿ;

ಉತ್ಸಾಹಾತ್ಸಾಹಸಾದ್ಧೈರ್ಯಾತ್ತತ್ವಜ್ಞಾನಾಚ್ಚ ನಿಶ್ಚಯಾತ್ |
ಜನಸಂಗ ಪರಿತ್ಯಾಗಾತ್ಷಡ್ಭಿರ್ಯೋಗಃ ಪ್ರಸಿಧ್ಯತಿ ||

ತಾ|| ಯೋಗವು ಸಿದ್ಧಿಸಲು ಅನುಷ್ಠಾನದಲ್ಲಿ ಉತ್ಸಾಹವೂ, ಸಾಹಸವೂ, ಧೈರ್ಯವೂ, ದೃಢೀಕರಿಸಲ್ಪಟ್ಟ ಆತ್ಮನೇ ನಾನೆಂಬ ಭಾವನೆಯೂ, ಸಾಕ್ಷಾತ್ಕಾರವನ್ನು ಪಡೆಯಬೇಕೆಂಬ ದೃಢವಾದ ಸಂಕಲ್ಪವೂ, ಏಕಾಂತವಾಸವೂ ಅಧಿಕಾರಿಯಲ್ಲಿರಬೇಕು. ಎಂದು ಹೇಳಿರುವರು.

ಆದುದರಿಂದ ದೀನತನದಲ್ಲಿದ್ದರೆ ಯೋಗವು ಸಿದ್ಧಿಸುವುದಿಲ್ಲವೆಂಬ ತತ್ವವೇ ಸುಗ್ರೀವನು ಶ್ರೀರಾಮನಿಗೆ ಉತ್ಸಾಹದಿಂದ ಇರಬೇಕೆಂದು ಹೇಳಿದುದಾಗಿದೆ.

**ರಾ||** ಶ್ರೀರಾಮನು ಸುಗ್ರೀವನ ಮಾತಿಗೆ ಸಮ್ಮತಿಸಿ ಸೇನೆಯನ್ನು ಸಜ್ಜುಗೊಳಿಸೆಂದು ತಿಳಿಸಿದನು. ಸುಗ್ರೀವನು ಸೇನೆಯನ್ನೆಲ್ಲಾ ಜೊತೆಯಲ್ಲಿ ಹೊರಡುವಂತೆ ಆಜ್ಞೆಮಾಡಿದನು. ಗುಹೆ ಪರ್ವತ ಶಿಖರಗಳು ಮತ್ತು ಇತರ ಎಲ್ಲಾ ಸ್ಥಳಗಳಲ್ಲಿಯೂ ಇದ್ದ ವಾನರರೆಲ್ಲಾ ಸೇರಿ ಮಹೋತ್ಸಾಹದಿಂದ ನೆಗೆಯುತ್ತ ಹಾರುತ್ತ ಕುಣಿಯುತ್ತ ಸಂತೋಷದಿಂದ ಅಲ್ಲಲ್ಲಿ ಸುವಾಸನೆಯುಳ್ಳ ಮಧುವನ್ನು ಪಾನಮಾಡುತ್ತ ಲಂಕಾನಗರಿಗೆ ಪ್ರಯಾಣಮಾಡಿದರು. ಸಮಸ್ತ ವಾನರಸೈನ್ಯಕ್ಕೆ ಮುಖ್ಯಾಧಿಪತಿಯಾಗಿ ನೀಲನು ಮುಂಭಾಗದಲ್ಲಿ ಹೊರಟನು. ಅನಂತರ ಶ್ರೀರಾಮನು ಹನುಮಂತನ ಮೇಲೆಯೂ ಲಕ್ಷ್ಮಣನು ಅಂಗದನ ಮೇಲೆಯೂ ಏರಿ ಸುಗ್ರೀವನೊಡನೆ ಪ್ರಯಾಣಮಾಡಿದರು. ಇವರ ಹಿಂಭಾಗದಲ್ಲಿ ಸಮಸ್ತ ಭಲ್ಲೂಕ ಸೈನ್ಯಗಳಿಗೂ ಮುಖ್ಯಾಧಿಪತಿಯಾದ ಸುಷೇಣನು ಜಾಂಬುವಂತನೊಡಗೂಡಿ ಹೊರಟನು. ಈ ವಿಧವಾಗಿ ಸಕಲರೂ ಶ್ರೀರಾಮನೊಡನೆ ಜಾಗ್ರತೆಯಾಗಿ ದಕ್ಷಿಣಾಭಿಮುಖವಾಗಿ ಹೊರಟು ಸಮುದ್ರತೀರಕ್ಕೆ ಬಂದರು.

**ತತ್ವ||** ಈ ಮೇಲಿನ ಅಂಶಗಳೆಲ್ಲ ಯೋಗವಲ್ಲಿನ ಪ್ರತ್ಯಾಹಾರದ ಲಕ್ಷಣವಾಗಿರುವುದು. ಒಂದು ಕಡೆ ಶೇಖರಿಸಿಕೊಳ್ಳುವುದು ಅಥವಾ ಒಟ್ಟುಗೂಡಿಸಿಕೊಳ್ಳುವುದಕ್ಕೆ ಪ್ರತ್ಯಾಹಾರವೆಂದು ಹೆಸರು. ಹಿಂದಿನ ಪ್ರಕರಣಗಳಲ್ಲಿ ಹೇಳಿರುವಂತೆ ಮೂಲಾಧಾರ ಚಕ್ರದ ಮೂಲಕ ಸುಷುಮ್ನಾನಾಡಿಯಲ್ಲಿ ಸಹಸ್ರಾರಕಮಲವನ್ನು ಬುದ್ಧಿವೃತ್ತಿಯು ವಾಯುಗಳೊಡನೆ ಸೇರಬೇಕಾಗಿರುವುದರಿಂದ ಭೂತತ್ವವಾದ ಮೂಲಾಧಾರಕ್ಕೆ ಅಧಿಷ್ಠಾನವಾಗಿರುವ ಸಮುದ್ರತೀರಕ್ಕೆ ಎಂದರೆ, ಜಲದ ತತ್ವವಾದ ಸ್ವಾಧಿಷ್ಠಾನಚಕ್ರಕ್ಕೆ ಬಂದುದೇ ಶ್ರೀರಾಮಾದಿಗಳು ಸಮುದ್ರತೀರವನ್ನು ಸೇರಿದುದಾಗಿರುತ್ತದೆ.

ನೀಲನಿಗೆ ವಾನರಸೇನಾಧಿಪತ್ಯವನ್ನು ಕೊಟ್ಟ ತತ್ವವೇನೆಂದರೆ—ನೀಲನೇ ಸಮಾನವಾಯುವೆಂದು ಕಿಷ್ಕಿಂಧಾಕಾಂಡದಲ್ಲಿ ತಿಳಿಸಿರುವುದು. ನೀಲನ ತತ್ವದಲ್ಲಿರುವ ಸಮಾನ

ವಾಯುವು ಜಠರಾಗ್ನಿಯೊಡನೆ ಕೂಡಿಕೊಂಡು, ಆಹಾರಗಳನ್ನು ಪಚನಮಾಡಿ ಸಮಸ್ತ ನಾಡಿಗಳಿಗೂ ಹಂಚಿಕೊಟ್ಟು, ಶರೀರಕ್ಕೆ ಪುಷ್ಟಿಯನ್ನುಂಟುಮಾಡುವ ವಾಯುವಾಗಿರುವುದು. ಅಂದರೆ, ದೇಹದಲ್ಲಿರುವ ವಾಯುಗಳಿಗೆ ಪುಷ್ಟಿಯನ್ನು ಕೊಟ್ಟು ಕಾಪಾಡುವ ಯಜಮಾನನಾದುದರಿಂದ ನೀಲನಿಗೆ ವಾನರಸೇನಾಧಿಪತ್ಯವು ಬಂದಿರುವುದು.

ಸುಷೇಣನು ಭಲ್ಲೂಕಸೈನ್ಯಗಳಿಗೆ ಮುಖ್ಯಸ್ಥನಾಗಿ ಶ್ರೀರಾಮನ ಹಿಂದೆ ಹೊರಟ ತತ್ವವೇನೆಂದರೆ—ಸುಷೇಣನೆಂದರೆ ಸಮೀಚೀನವಾದ ಪ್ರಮಥಗಣಗಳ ಸೈನ್ಯವುಳ್ಳವನೆಂದು ಶಿವಸಹಸ್ರನಾಮ ಭಾಷ್ಯದಲ್ಲಿ ಅರ್ಥವಿರುವುದು. ಇವನ ಸೈನ್ಯವಾದ ಕರಡಿಗಳು ಪ್ರಮಥ ಗಣಗಳೆಂದರೆ, ಇಂದ್ರಿಯಗೋಳಕಗಳಲ್ಲಿನ ದೇವತ್ವದ ಶಕ್ತಿಗಳಾಗಿರುವುವು. ಭಲ್ಲೂಕ ವೆಂದರೆ—"ಪರಾ ಭಲ್ಲತಿ ಹಿನಸ್ತೀತಿ ಭಲ್ಲೂಕಃ ಭಲ್ಲ ಹಿಂಸಾಯಾಂ" ಪರರನ್ನು ಹಿಂಸಿಸುವುದು ಎಂದರ್ಥ. ಅಂದರೆ ತನ್ನ ಸಂಬಂಧಿಗಳಾದ ದೇವತೆಗಳನ್ನು ಹಿಂಸಿಸದೆ ವಿರೋಧಿಗಳಾದ ರಾಕ್ಷಸರನ್ನು ಹಿಂಸೆಮಾಡತಕ್ಕವನೆಂದು ಅಭಿಪ್ರಾಯ. ಇಂದ್ರಿಯ ಶಕ್ತಿಗಳೆಲ್ಲ ಸತ್ವಗುಣದಿಂದ ಸೃಷ್ಟಿಸಲ್ಪಟ್ಟಿರುವುದರಿಂದ, ದೇವತೆಗಳ ಸ್ವರೂಪದ ಶಕ್ತಿಗಳಾಗಿರುತ್ತವೆ. ನಮ್ಮ ಇಂದ್ರಿಯಗಳು ಸತ್ವಗುಣದ ಚೈತನ್ಯಗಳಾಗದಿದ್ದಲ್ಲಿ ಒಂದಾವರ್ತಿ ಅಜೀರ್ಣವಾದರೆ ರೋಗದಲ್ಲಿಯೇ ಬಿದ್ದು ಸಾಯಬೇಕಾಗುತ್ತಿತ್ತು. ಆದುದರಿಂದ ಸುಷೇಣನ ಸೈನ್ಯವೆಂದರೆ ಇಂದ್ರಿಯಗಳು.

ಪ್ರತ್ಯಾಹಾರವೆಂದರೆ ಬುದ್ಧಿವೃತ್ತಿಯು ಬಹಿರ್ಜ್ಞಾನದಿಂದ ವಿಮುಖವಾಗಿ ಧ್ಯೇಯಾಕಾರವಾಗಬೇಕಾದ ಸ್ಥಳವನ್ನು ಸೇರಲು ಹೊರಟಾಗ ದೇಹದ ಎಲ್ಲಾ ಕಡೆಯಲ್ಲಿಯೂ ಇರತಕ್ಕ ವಾಯುಗಳು ಹಾರುತ್ತ, ಕುಣಿಯುತ್ತ, ಬುದ್ಧಿವೃತ್ತಿಯೊಡನೆ ಮುಂದಾಳಾಗಿ ಬಂದು ಸೇರಿಕೊಳ್ಳುವುದೇ ವಾನರಸೈನ್ಯಗಳು ಶ್ರೀರಾಮನ ಮುಂಭಾಗದಲ್ಲಿ ಹೊರಟುದಾಗಿದೆ. ಬುದ್ಧಿವೃತ್ತಿಯು ಶ್ವಾಸೋಚ್ಛ್ವಾಸದೊಡನೆಯೂ ಪ್ರಾಣವಾಯುವಿನೊಡನೆಯೂ ಸೇರಿಕೊಂಡು ಪ್ರತ್ಯಾಹಾರದ ಸ್ವರೂಪದಲ್ಲಿ ಬರುವುದೇ ಹನುಮಂತ ಸುಗ್ರೀವರೊಡನೆ ಶ್ರೀರಾಮನು ಹೊರಟುದು. ಪ್ರಾಣವಾಯುವಿನ ಹಿಂಭಾಗದಲ್ಲಿ ಇಂದ್ರಿಯಗಳು ಅನುಸರಿಸಿಕೊಂಡು ಹೋಗುವುದೇ ಭಲ್ಲೂಕಸೈನ್ಯಗಳು ಶ್ರೀರಾಮನ ಹಿಂದುಗಡೆ ಪ್ರಯಾಣ ಬೆಳೆಸಿಕೊಂಡು ಹೋದುದಾಗಿರುವುದು. ಅಂದರೆ ಪ್ರತ್ಯಾಹಾರಮಾಡುವ ಕಾಲದಲ್ಲಿ ವಾಯುವು ಮುಂಭಾಗದಲ್ಲಿಯೂ, ಇಂದ್ರಿಯಶಕ್ತಿಗಳು ಹಿಂಭಾಗದಲ್ಲಿಯೂ, ಶ್ವಾಸೋಚ್ಛ್ವಾಸ, ಪ್ರಾಣವಾಯು, ಬುದ್ಧಿವೃತ್ತಿ ಮುಂತಾದುವುಗಳು ಮಧ್ಯದಲ್ಲಿಯೂ ಇರುವುವು. ಅನುಭವಶಾಲಿಗಳು ಸಾವಧಾನವಾಗಿ ಪರೀಕ್ಷಿಸಿ ನೋಡಿದರೆ ಈ ತತ್ವವನ್ನು ಗೊತ್ತುಮಾಡಿಕೊಳ್ಳುವರು. ಪ್ರತ್ಯಾಹಾರವೆಂದರೆ, ಯೋಗಚೂಡಾಮಣ್ಯುಪನಿಷತ್ತಿನಲ್ಲಿ,

ಚರತಾಂ ಚಕ್ಷುರಾದೀನಾ ವಿಷಯೇಷು ಯಥಾಕ್ರಮಂ |
ತತ್ಪ್ರತ್ಯಾಹರಣಂ ತೇಷಾಂ ಪ್ರತ್ಯಾಹಾರ ಸ್ಸ ಉಚ್ಯತೆ ||

ತಾ|| ಬಾಹ್ಯವಿಷಯಗಳಲ್ಲಿ ಪ್ರಸರಿಸಿರುವ ಇಂದ್ರಿಯಗಳನ್ನು ಬಾಹ್ಯವಿಷಯಗಳಿಂದ ತಪ್ಪಿಸಿ ಅಂತಃಕರಣದೊಡನೆ ಅಂತರ್ಮುಖವಾಗುವಂತೆ ಮಾಡತಕ್ಕದ್ದಕ್ಕೆ ಪ್ರತ್ಯಾಹಾರವೆಂದು ಹೆಸರು. ಎಂದು ಹೇಳಿರುವುದು.

ಇದೇ ತಾತ್ಪರ್ಯಕ್ಕೆ ಮಂಡಲಬ್ರಾಹ್ಮಣೋಪನಿಷತ್ತಿನಲ್ಲಿಯೂ,

"ವಿಷಯೇಭ್ಯ ಇನ್ದ್ರಿಯಾರ್ಥೇಭ್ಯೋ
ಮನೋ ನಿರೋಧನಂ ಪ್ರತ್ಯಾಹಾರಃ"

ಎಂಬದಾಗಿ ಹೇಳಿರುವುದು. ಅಂದರೆ ಬಾಹ್ಯಮುಖವಾಗಿರುವ ಎಲ್ಲವನ್ನೂ ಅಂತರ್ಮುಖವಾಗಿ ಸೆಳೆದುಕೊಳ್ಳುವ ಕಾರ್ಯವು ಪ್ರತ್ಯಾಹಾರದ ಸ್ವರೂಪವಾಗಿರುವುದು.

ಮೂಲಾಧಾರವು ಶೋಧನೆಯಾಗಿ ಕುಂಡಲಿನೀಶಕ್ತಿಯು ಉತ್ಥಾಪನೆಯಾಗದೆ ಅಧಿಕಾರಿಯು ಈ ಪ್ರತ್ಯಾಹಾರದ ಸ್ವರೂಪವನ್ನು ಪಡೆಯಲಾರನು. ಕುಂಡಲಿನೀ ಉತ್ಥಾಪನೆಯಾಗುವ ಪರ್ಯಂತರ ಪ್ರಾಣವಾಯುವು ತನ್ನ ಸ್ಥಳವನ್ನು ಬಿಟ್ಟು ಹೊರಡಲಾರದೆಂದು ಹಿಂದಿನ ಪ್ರಕರಣದಲ್ಲಿಯೇ ತಿಳಿಸಿದೆ. ಪ್ರಾಣವಾಯುವು ಯಾವಾಗ ತನ್ನ ಸ್ಥಳದಿಂದ ಹೊರಡಲಾರದೋ, ಆಗ ಇಂದ್ರಿಯಗಳೂ ಅಂತರ್ಮುಖವಾಗಲಾರವು. ರೇಚಕ ಪೂರಕ ಸಹಿತವಾದ ಕುಂಭಕವಮಾಡುವಾಗ ಪ್ರತ್ಯಾಹಾರದಂತೆ ಮಾಡುತ್ತೇವೆ. ಇದರಲ್ಲಿ ಪ್ರಾಣವಾಯು ಮತ್ತು ಇಂದ್ರಿಯಗಳು ಜೊತೆಗೆ ಬಂದಿರುವುದಿಲ್ಲವಾದುದರಿಂದ ಪ್ರತ್ಯಾಹಾರವೆನಿಸಿಕೊಳ್ಳದೆ ರೇಚಕ ಪೂರಕ ಸಹಿತವಾದ ಕುಂಭಕವೆನಿಸುವುದು. ಈ ತತ್ವಾರ್ಥಕ್ಕೆ ಅನುಸಾರವಾಗಿಯೇ ಸೀತಾನ್ವೇಷಣಕ್ಕೆ ವಾನರರು ಮಾತ್ರ ಹೊರಟರೇ ಹೊರತು ಭಲ್ಲೂಕ ಸೈನ್ಯವು ಹೊರಟರಲಿಲ್ಲ. ಅಲ್ಲದೆ ಪ್ರಾಣಾಯಾಮದ ಅನುಷ್ಠಾನವನ್ನೇ ಮಾಡದೆ ದೇವತೋಪಾಸನೆ ಮಾಡಲು ಭ್ರೂಮಧ್ಯದಲ್ಲಿ ದೃಷ್ಟಿಯನ್ನಿಟ್ಟು ಧ್ಯಾನಾಭ್ಯಾಸಮಾಡುವ ವಿಧವೂ ಪ್ರತ್ಯಾಹಾರವೆನಿಸುವುದಿಲ್ಲ. ಈ ವಿಧದಲ್ಲಿ ಪ್ರತ್ಯಾಹಾರದ ಸ್ವರೂಪವನ್ನು ಪಡೆಯಬೇಕಾದರೆ ಅತ್ಯಂತ ಕಷ್ಟದಿಂದ ಹೊಂದಬೇಕಾಗಿರುವುದು.

ಪ್ರಾಣವಾಯು ಮತ್ತು ಇಂದ್ರಿಯಗಳು ಪ್ರತ್ಯಾಹಾರದ ಸ್ವರೂಪದಲ್ಲಿ ಬುದ್ಧಿವೃತ್ತಿಯೊಡನೆ ಅಂತರ್ಮುಖವಾಗಿ ಬರುವ ಕಾಲವೇ ಸಮಾಧಿಯ ಅನುಷ್ಠಾನಕ್ಕೆ ಪ್ರಾರಂಭವೆಂದು ತಿಳಿದುಕೊಳ್ಳಬೇಕು. ಈ ಸಮಾಧಿಯ ಅನುಷ್ಠಾನವನ್ನೇ ಕೇವಲ ಕುಂಭಕವೆಂದು

ಶಾಸ್ತ್ರವು ತಿಳಿಸುತ್ತದೆ. ಆದುದರಿಂದ ಸುಗ್ರೀವ ಮುಂತಾದವರೊಡನೆ ಶ್ರೀರಾಮನು ಸಮುದ್ರತೀರಕ್ಕೆ ಬಂದನೆಂದರೆ ಸಮಾಧಿಯ ಅನುಷ್ಠಾನಕ್ಕೆ ಪ್ರಥಮ ಕರ್ತವ್ಯವಾದ ಪ್ರತ್ಯಾಹಾರದ ಕಾರ್ಯವು ನಡೆಯುತ್ತಿರುವುದೆಂಬ ತತ್ತ್ವವಾಗಿರುವುದು.

ಈ ತತ್ವಕ್ಕೆ ಸಂಬಂಧಪಟ್ಟ ಇನ್ನೊಂದು ವಿಚಾರವನ್ನು ಇಲ್ಲಿ ತಿಳಿದುಕೊಳ್ಳಬೇಕಾಗಿರುವುದು. ಸೀತಾಪಹರಣವಾಗುವುದೆಂದರೆ, ಬಹಿರ್ವ್ಯಾಪಾರ ಉಂಟಾದಾರಭ್ಯ ಈ ಪರ್ಯಂತರವೂ ಬುದ್ಧಿತತ್ತ್ವಸ್ವರೂಪನಾದ ಶ್ರೀರಾಮನು ನಡೆಸಿದ ಕಾರ್ಯಗಳು ಪರೋಕ್ಷಜ್ಞಾನಕ್ಕೆ ಸಂಬಂಧಪಟ್ಟವುಗಳು. ಈಗ ನಡೆಯುವ ಪ್ರತ್ಯಾಹಾರದಿಂದ ಅಪರೋಕ್ಷಜ್ಞಾನದ ಕಾರ್ಯಕ್ಕೆ ಆರಂಭವಾಗಿರುವುದು. ಕಾರಣವೇನೆಂದರೆ, ಇದುವರೆಗೂ ನಡೆಸಿದ ಕಾರ್ಯಗಳೆಲ್ಲ ಬಾಹ್ಯಕ್ಕೆ ಸಂಬಂಧಿಸಿದುವು. ಈಗ ಬುದ್ಧಿವೃತ್ತಿಯು ಅಂತರ್ಮುಖವಾಗಲು ಪ್ರಾರಂಭವಾಗಿರುವುದರಿಂದ ಅಪರೋಕ್ಷಜ್ಞಾನದ ಕಾರ್ಯಕ್ಕೆ ಪ್ರಾರಂಭವಾಗಿರುವುದು.

ಈ ರೀತಿಯಾಗಿ ಶ್ರೀರಾಮನು ಲಕ್ಷ್ಮಣ ಸುಗ್ರೀವ ಮುಂತಾದವರೊಡನೆ ಸಮುದ್ರತೀರಕ್ಕೆ ಬಂದನು.

## ೩ನೆಯ ಪ್ರಕರಣ.

**ಸಮುದ್ರತೀರವನ್ನು ಸೇರಿದನಂತರ ಶ್ರೀರಾಮನು ಸೀತಾವಿಯೋಗ ದುಃಖದಿಂದ ಅತ್ಯಂತ ಪರಿತಾಪಪಟ್ಟುದು.**

**ಧ್ಯಾನದ ಪ್ರಾರಂಭದಲ್ಲಿ ತೀವ್ರತಮವಾದ ಬ್ರಹ್ಮಭಾವನೆಯು ಇರಬೇಕೆಂಬ ವಿಚಾರ.**

**ರಾ||** ಸಮಸ್ತ ವಾನರಸೈನ್ಯವೂ ಸಮುದ್ರತೀರಕ್ಕೆ ಬಂದನಂತರ ಶ್ರೀರಾಮನು ಸೀತೆಯನ್ನು ನೆನೆದು, ದುಃಖದಿಂದ ಲಕ್ಷ್ಮಣನೊಡನೆ "ವತ್ಸಾ! ಲಕ್ಷ್ಮಣಾ! ಲೋಕದಲ್ಲಿ ಕಾಲವು ಕಳೆಯುತ್ತಾ ಬಂದಹಾಗೆಲ್ಲ ಯಾವ ವ್ಯಸನವೇ ಆಗಲಿ ತಗ್ಗಿಹೋಗುವುದುಂಟು. ನನಗಾದರೋ ನನ್ನ ಪ್ರಿಯಪತ್ನಿಯನ್ನು ಕಾಣದ ದುಃಖವು ದಿನದಿನಕ್ಕೂ ಹೆಚ್ಚುತ್ತಲೇ ಇರುವುದು. ಇದರಿಂದ ಅತ್ಯಂತ ಸಂಕಟವಾಗುತ್ತಿದೆ. ಆಕೆಯ ವಿರಹವೆಂಬ ಕಟ್ಟಿಗೆಯಿಂದಲೂ ಆಕೆಯ ಚಿಂತೆಯೆಂಬ ಜ್ವಾಲೆಯಿಂದಲೂ ಕೂಡಿದ ಕಾಮಾಗ್ನಿಯು ಹಗಲಿರುಳೂ ನನ್ನನ್ನು ದಹಿಸುತ್ತಿರುವುದು. ಈ ತಾಪವನ್ನು ತಪ್ಪಿಸಿಕೊಳ್ಳಲು ಬೇರೆ ಉಪಾಯವೇ ಇಲ್ಲ. ಈ ಸಮುದ್ರದಲ್ಲಿ ಮುಳುಗಿಬಿಡುವೆನು" ಎಂಬದಾಗಿ ಹೇಳಿದುದಲ್ಲದೆ, ಇನ್ನೂ ಅನೇಕ ವಿಧದಲ್ಲಿಯೂ ಪ್ರಲಾಪಿಸುತಿದ್ದನು.

**ತತ್ವ||** ಹಿಂದಿನ ಪ್ರಕರಣದಲ್ಲಿ ಪ್ರತ್ಯಾಹಾರದ ತತ್ವವನ್ನು ವಿವರಿಸಿತು. ಪ್ರತ್ಯಾಹಾರದ ಮುಂದಿನ ಕಾರ್ಯವಾದ ಧ್ಯಾನಕ್ಕೆ ಪ್ರಾರಂಭಮಾಡುವ ಕಾಲದಲ್ಲಿ ಮೋಕ್ಷೇಚ್ಛೆಯು ಸಾಧಾರಣವಾಗಿರದೆ ಅತ್ಯಂತ ಉತ್ಕಟಾವಸ್ಥೆಗೆ ಬರಬೇಕೆಂಬುದನ್ನು ಶ್ರೀರಾಮನು ಸೀತಾದೇವಿಗೋಸ್ಕರ ಮಾಡಿದ ಪ್ರಲಾಪಗಳು ಸೂಚಿಸುತ್ತವೆ. ಶ್ರೀರಾಮನು "ಪ್ರಪಂಚ ವ್ಯಾಪಾರದಲ್ಲಿ ಯಾವುದಾದರೂ ಒಂದು ವ್ಯಸನವು ಬಂದಲ್ಲಿ ಕಾಲಕ್ರಮೇಣ ನಶಿಸಿಹೋಗುವುದು. ನನಗಾದರೋ ಸೀತಾವಿಯೋಗ ದುಃಖವು ದಿನದಿನಕ್ಕೆ ಹೆಚ್ಚುತ್ತಲೇ ಇದೆ" ಎಂಬದಾಗಿ ಹೇಳಿರುವುದರ ತತ್ವವೇನೆಂದರೆ—ಲೋಕವ್ಯವಹಾರದ ವ್ಯಸನವು ಕಾಲಕ್ರಮೇಣ ನಶಿಸಿಹೋಗುವುದು ಸರ್ವರಿಗೂ ತಿಳಿದ ವಿಷಯವಾಗಿದೆಯಷ್ಟೆ! ಇಚ್ಛೆಯು ಮೋಕ್ಷವನ್ನು ಪಡೆಯಬೇಕೆಂಬ ಲೋಕವ್ಯವಹಾರದ ವ್ಯಸನವು ನಶಿಸಿಹೋಗುವಂತೆ ತಗ್ಗದೆ ಮೋಕ್ಷವನ್ನು ಪಡೆಯುವವರೆಗೂ, ಅಧಿಕವಾಗುತ್ತಲೇ ಬರಬೇಕೆಂಬ ತತ್ವವನ್ನು ಸೂಚಿಸುವುದು. ಮೋಕ್ಷೇಚ್ಛೆಯು ಯಾವ ವಿಧವಾಗಿ ಹೆಚ್ಚುತ್ತಾ ಬರಬೇಕೆಂದರೆ—ಪ್ರಥಮದಲ್ಲಿ ಮೋಕ್ಷದಲ್ಲಿ ಕೊಂಚ ಇಚ್ಛೆಯು ಹುಟ್ಟುವುದು. ಅನಂತರ ವೇದಾಂತಶ್ರವಣ ಮನನಗಳಿಂದ ದೇಹಾದಿಗಳೇ ತಾನಲ್ಲವೆಂದು ತಾನು ಸ್ವಪ್ರಕಾಶಕನಾದ ಪರಮಾತ್ಮನೆಂಬ ಭಾವನೆಯು ಅಂಕುರಿಸುವುದು. ಈ ಆತ್ಮಭಾವನೆಯಲ್ಲಿನ ಇಚ್ಛೆಯು ಅತಿಯಾಗಿ, ಅನಂತರ ಅತ್ಯಂತವಾಗಿ, ತದನಂತರ, ತೀವ್ರತಮವಾಗುವುದು. ಹೀಗೆ ಆತ್ಮಭಾವನೆಯಲ್ಲಿ ತೀವ್ರತಮವಾದ ಇಚ್ಛೆಯಿಲ್ಲದಿದ್ದರೆ ಧ್ಯಾನ ಧಾರಣ ಸಮಾಧಿಗಳ ಅನುಷ್ಠಾನವು ಸಿದ್ಧಿಸುವುದಿಲ್ಲ. "ಬ್ರಹ್ಮ ಸತ್ಯಂ ಜಗನ್ಮಿಥ್ಯಾ" ಎಂದರೆ ನಮ್ಮ ದೇಹವೂ ದೇಹಕ್ಕೆ ಸಂಬಂಧಪಟ್ಟ ವ್ಯಾಪಾರವೂ ನಾನಲ್ಲವೆಂದು, ದೇಹ ಮತ್ತು ಇದರ ವ್ಯಾಪಾರಕ್ಕೆ ಅತೀತನಾಗಿರುವವನೆಂದರೆ ಇಂದ್ರಿಯಗಳಿಗೂ ಗ್ರಾಹ್ಯನಲ್ಲದ ಪರಮಾತ್ಮನೇ ನಾನೆಂಬದಾಗಿ ಇಂತಹ ಪರಮಾತ್ಮನಲ್ಲಿ ನಾನು ಅಂತರ್ಮುಖದಿಂದ ಸೇರಿಬಿಡುವೆನೆಂಬ ತೀವ್ರತಮವಾದ ಇಚ್ಛೆಯೊಡನೆ ಧ್ಯಾನಾಭ್ಯಾಸಕ್ಕೆ ಪ್ರಾರಂಭಮಾಡಬೇಕೆಂಬ ತತ್ವವೇ ಶ್ರೀರಾಮನು ಸೀತಾಪರಿತಾಪದೊಡನೆ ಸಮುದ್ರದಲ್ಲಿ ಮುಳುಗಿಬಿಡುವೆನೆಂದು ಹೇಳಿರುವುದರ ತಾತ್ಪರ್ಯವಾಗಿರುವುದು.

ನಾವು "ಬ್ರಹ್ಮಸತ್ಯಂ ಜಗನ್ಮಿಥ್ಯಾ" ಎಂದು ಪಠಿಸಿದಾಕ್ಷಣವೇ ಪ್ರಯೋಜನವಾಗುವುದಿಲ್ಲ. ಪಿಂಡಾಂಡಸ್ವರೂಪವಾದ ನಮ್ಮ ದೇಹವು ಜಗತ್ತಾಗಿರುವುದು, ಮತ್ತು ಬ್ರಹ್ಮಾಂಡಸ್ವರೂಪವೂ ಜಗತ್ತಾಗಿರುವುದು. ಬ್ರಹ್ಮಾಂಡಸ್ವರೂಪದ ಮಿಥ್ಯಾತ್ವವು ಈಶ್ವರಾಧೀನವಾದುದು. ಈಶ್ವರನು ತನಗೆ ಬೇಕಾದಾಗ ಬ್ರಹ್ಮಾಂಡವನ್ನು ಉಪಸಂಹಾರ ಮಾಡಿಕೊಳ್ಳುವನಾದುದರಿಂದ ವ್ಯಷ್ಟಿಜೀವರುಗಳಾದ ನಮಗೆ ಅದರ ಯೋಚನೆ ಅನಾವಶ್ಯಕ. ಈಶ್ವರನ ಕಾರ್ಯದ ಯೋಚನೆಯನ್ನು ಹತ್ತಿಸಿಕೊಂಡು ನಾವು ಒದ್ದಾಡಬಾರದು. ದೇಹವೇ ನಾವೆಂದು ಆರೋಪಣೆಮಾಡಿಕೊಂಡಿರುವುದನ್ನು ತಪ್ಪಿಸಿಕೊಳ್ಳಲು

ಮತ್ತು ನಮ್ಮ ನಿಶ್ಚಯವಾದ ಸ್ವರೂಪವನ್ನು ಹೊಂದಲು ಜಗತ್ತಿನ ಸ್ವರೂಪದಲ್ಲಿರುವ ನಮ್ಮ ದೇಹಭಾವನೆಯನ್ನು ಬಿಟ್ಟು ಅಂತರ್ಮುಖವೃತ್ತಿಯಿಂದ ಆತ್ಮಭಾವನೆಯಲ್ಲಿ ಮುಳುಗಿ ಬಿಡುವೆವೆಂಬ ತೀವ್ರತಮವಾದ ಇಚ್ಛೆಯಿಂದ, ಧ್ಯಾನಾಭ್ಯಾಸಕ್ಕೆ ಪ್ರಾರಂಭಮಾಡ ಬೇಕೆಂಬ ಅಂತರಾರ್ಥದ ಸೂಚನೆಯೇ ಶ್ರೀರಾಮನು ಸೀತಾದೇವಿಗೋಸ್ಕರ ಪರಿತಾಪ ಪಟ್ಟು ಸಮುದ್ರದಲ್ಲಿ ಮುಳುಗಿಬಿಡುವೆನೆಂದು ಹೇಳಿದುದರ ತಾತ್ಪರ್ಯವಾಗಿರುವುದು.

ಸಂಧ್ಯಾವಂದನೆಯಲ್ಲಿಯೂ ಇತರ ಉಪಾಸನೆಗಳಲ್ಲಿಯೂ ಉಪಾಸನೆಗೆ ಮುಂಚೆ ಅಂಗನ್ಯಾಸ ಕರನ್ಯಾಸಗಳನ್ನು ಮಾಡಬೇಕೆಂದು ವಿಧಾಯಕವಿರುವುದಷ್ಟೆ! ಇದರ ತತ್ವಾರ್ಥವು ಕೂಡ ನಮ್ಮ ದೇಹವು ನಾವಲ್ಲವೆಂಬ ಭಾವನೆಯನ್ನು ತಂದುಕೊಂಡು ಉಪಾಸನೆಮಾಡತಕ್ಕ ದೇವತಾಸ್ವರೂಪದ ಪಾದಾರವಿಂದಗಳಲ್ಲಿಯೇ ಸೇರಿಹೋಗುವೆವೆಂಬ ಭಾವನೆಯಿಂದ ಉಪಾಸನೆಮಾಡುವವರೆಗೂ ಎಡೆಬಿಡದೆ ದೇವತಾಸ್ವರೂಪದ ಭಾವನೆ ಯನ್ನು ಇಟ್ಟುಕೊಂಡಿರಬೇಕೆಂಬುದಾಗಿರುವುದು. ಈ ತಾತ್ಪರ್ಯವೇ ಅಂಗನ್ಯಾಸ ಕರ ನ್ಯಾಸಗಳ ತತ್ವವಾಗಿರುವುದು. ಅಂಗ ಮತ್ತು ಕರನ್ಯಾಸಗಳೆಂದರೆ—ದೇಹ ಮತ್ತು ದೇಹ ವ್ಯಾಪಾರದ ಭಾವನೆಯ ತ್ಯಾಗವೆಂದು ಅರ್ಥ.

ಆದುದರಿಂದ ಮೋಕ್ಷವನ್ನು ಪಡೆಯುವ ಸಾಧನೆಗಳಲ್ಲೆಲ್ಲಾ ಮುಮುಕ್ಷುತೆಯಿಂದ ಉತ್ಪನ್ನವಾಗುವ ಬ್ರಹ್ಮಭಾವನೆಯು ದೊರೆಯ ರೂಪದಲ್ಲಿಯೂ, ವೈರಾಗ್ಯವು ಮಂತ್ರಿ ರೂಪದಲ್ಲಿಯೂ, ಪ್ರಾಣಾಯಾಮವು ಸೇನಾಪತಿಯ ರೂಪದಲ್ಲಿಯೂ ಇರುವುವು. ಭಾವ ನೆಯ ಕಾರ್ಯವು ಬುದ್ಧಿತತ್ವಕ್ಕಲ್ಲದೆ ಮತ್ತಾರಿಗೂ ಬರುವುದಿಲ್ಲವಾದುದರಿಂದ ಶ್ರೀರಾಮನೇ ಪ್ರಧಾನಪುರುಷನು. ಈ ಭಾವನೆಗೆ ಸಹಕಾರಿಯಾಗಿ ವೈರಾಗ್ಯವು ಇರಬೇಕಾದುದರಿಂದ ಮಂತ್ರಿಸ್ವರೂಪದಲ್ಲಿ ಲಕ್ಷ್ಮಣನು ಶ್ರೀರಾಮನ ಅನುಯಾಯಿಯಾಗಿರುವನು. ಸುಗ್ರೀವ ಹನುಮಂತರ ಸ್ವರೂಪಗಳಾದ ಪ್ರಾಣಾಯಾಮ ಮತ್ತು ಮುದ್ರೆಗಳೇ ಸೇನಾಪತಿಯ ತತ್ವದಲ್ಲಿರುವುವು. ಅನ್ವಯಮಾಡಿರುವ ಮೇಲಿನ ಹೋಲಿಕೆಯನ್ನು ವಿಮರ್ಶೆಮಾಡಿ ಕೊಂಡರೆ, ಅತಿಶಯವಾದ ತತ್ವಗಳು ದೊರಕುವುದರಲ್ಲಿ ಸಂದೇಹವಿಲ್ಲ.

ಶ್ರೀರಾಮನು ಇಷ್ಟೊಂದು ದುಃಖಪಡುತ್ತಿರುವುದು ಸೀತಾದೇವಿಯ ಮೇಲಿನ ಪ್ರೀತಿ ಗೋಸ್ಕರಲೇ. ಈ ಪ್ರೀತಿಸ್ವರೂಪವೇ ಭಕ್ತಿಯೆಂದು ಅರಣ್ಯಕಾಂಡದಲ್ಲಿ, ಕಾಣದೆಹೋದ ಸೀತಾದೇವಿಯನ್ನು ಶ್ರೀರಾಮನು ಹುಡುಕುತ್ತಿದ್ದ ಸಂದರ್ಭದಲ್ಲಿ ತಿಳಿಸಿರುತ್ತಷ್ಟೆ! ಈ ಪ್ರೀತಿ ಅಥವಾ ಭಕ್ತಿಯನ್ನು ಧ್ಯಾನಾಭ್ಯಾಸಮಾಡುವ ಸಮಯದಲ್ಲಿ ಅಧಿಕಮಾಡಿಕೊಂಡು ಅತ್ಯಂತ ಪ್ರೀತಿ ಅಥವ ಪರಾಭಕ್ತಿಸ್ವರೂಪಕ್ಕೆ ತಂದುಕೊಳ್ಳಬೇಕೆಂಬುದರ ತತ್ವವೇ ಶ್ರೀರಾಮನು ಇತರ ಕಾಲಗಳಿಗಿಂತ ಸಮುದ್ರದ ದಡದಲ್ಲಿ ಅತ್ಯಧಿಕವಾಗಿ ಸೀತೆಗೋಸ್ಕರ ದುಃಖಪಟ್ಟುದಾಗಿದೆ.

ಪ್ರಪಂಚದ ಪದಾರ್ಥಗಳನ್ನು ಅನುಭವಿಸುವ ಸುಖಕ್ಕೋಸ್ಕರ ಮಾಡುವ ಪ್ರೀತಿಯು ಕಾಲಕ್ರಮೇಣ ನಶಿಸಿಹೋಗುವುದಲ್ಲದೆ, ದುಃಖರೂಪವಾಗಿ ಪರಿಣಮಿಸಬಹುದು. ಆತ್ಮಭಾವನೆಯಲ್ಲಿನ ಪ್ರೀತಿಯು ದುಃಖರೂಪವನ್ನು ಕೊಡುವುದಿಲ್ಲವಾದುದರಿಂದ ಇದಕ್ಕೆ ಭಕ್ತಿಯೆಂಬ ಹೆಸರುಬಂದಿರುವುದು. ಭಕ್ತಿಯೆಂದರೆ "ಭಜನಮಂತಃಕರಣಸ್ಯ ಭಗವದಾಕಾರತಾರೂಪಂ ಭಕ್ತಿಃ" ಅಂದರೆ ಅಂತಃಕರಣವು ಭಗವದಾಕಾರವಾಗಲು ಹೋಗುವುದಕ್ಕೆ ಭಕ್ತಿಯೆಂದು ಹೆಸರು. ಭಗವದಾಕಾರವಾಗುವುದೆಂದರೆ ಶ್ರೀರಾಮನು ಸೀತಾಸ್ವರೂಪದಾಕಾರವನ್ನೆಂದರೆ-ಸೀತೆಯೊಡನೆ ತಾನು ಸೇರುವ ತತ್ವವಾದ ಭಾವನೆಯನ್ನೇ ಮನಸ್ಸಿನಲ್ಲಿ ಹೇಗೆ ಸ್ಮರಣೆಮಾಡುತ್ತಿದ್ದನೋ ಹಾಗೆ ಧ್ಯಾನಾಭ್ಯಾಸಕ್ಕೆ ಕುಳಿತುಕೊಂಡಾಗ ನಮಗೆ ಅಂತರ್ಮುಖದಲ್ಲಿ ಕಾಣುವ ತೇಜೋರೂಪದ ಆಕಾರವೇ ಆಗಲು ಹೋಗುವ ಪ್ರೀತಿಯ ಪ್ರವಾಹವೇ ಭಕ್ತಿಯೆನ್ನುವುದರ ಅರ್ಥವಾಗಿರುವುದು. ಭಕ್ತಿಯಲ್ಲಿ ಶ್ರವಣ ಕೀರ್ತನ ಮುಂತಾದ ಒಂಭತ್ತು ವಿಧಗಳೆಂದು ಪುರಾಣಗಳಲ್ಲಿ ಹೇಳಿರುವುದು. ಈ ಒಂಭತ್ತು ವಿಧಗಳಲ್ಲಿ ಕೊನೆಯ ಸೋಪಾನವಾದ ಆತ್ಮನಿವೇದನ, ಅಂದರೆ ಧ್ಯೇಯಾಕಾರಸ್ವರೂಪವನ್ನು ಹೊಂದುವ ಪ್ರೀತಿಯ ಪ್ರವಾಹವು ತ್ರಿಪುಟಿರಾಹಿತ್ಯವಾಗುವುದಕ್ಕೆ ಅನುಕೂಲವಾಗುವಂತೆ ಧ್ಯೇಯಸ್ವರೂಪವೇ ತಾನೆಂದು ಸಮಾಧಿಯ ಅಭ್ಯಾಸಮಾಡುವುದೇ ಭಕ್ತಿಗೆ ಕೊನೆಯ ಸೋಪಾನವಾದ ಆತ್ಮನಿವೇದನವಾಗಿರುವುದು. ಆತ್ಮನಿವೇದನವೆಂದರೆ—"ನಾನು" ಎಂಬ ಜ್ಞಾನವನ್ನು ಲೇಶವೂ ಇಟ್ಟುಕೊಳ್ಳದೆ ನಾನು ಎಂಬುದನ್ನು ಆತ್ಮನಿಗೆ ನಿವೇದನಮಾಡುವುದು. ಈ ವಿಧವಾಗಿ ತನಗೂ ಧ್ಯೇಯಾಕಾರವಸ್ತುವಿಗೂ ಅಭೇದವುಂಟಾಗುವ ರೀತಿಯಾದ ಪ್ರೇಮ ಪ್ರವಾಹವೇ ಪರಾಭಕ್ತಿ ಅಥವಾ ಪ್ರೇಮಭಕ್ತಿಯೋಗವೆಂದು ನಾರಾಯಣತೀರ್ಥರು,

> ಪ್ರೇಮಭಕ್ತಿಯೋಗಸ್ತು, ಈಶ್ವರ ಚರಣಾವಿನ್ದ
> ವಿಷಯೈಕಾಂತಿಕಾತ್ಯಂತಿಕ ಪ್ರೇಮಪ್ರವಾಹೋ ಅನವಚ್ಛಿನ್ನಃ

ಎಂದು ಹೇಳಿರುವರು. ಅಂದರೆ ಧ್ಯೇಯಾಕಾರದಲ್ಲಿ ಉಂಟಾಗುವ ಅವಿಚ್ಛಿನ್ನವಾದ ಪ್ರೇಮಪ್ರವಾಹವೇ ಭಕ್ತಿಯ ಕೊನೆಯಸೋಪಾನವಾಗಿರುವುದು. ಅಂದರೆ ಅಭೇದಚಿಂತನೆಯನ್ನು ಕೊಡುವ ಪ್ರೇಮಪ್ರವಾಹವೇ ಪರಾಭಕ್ತಿಯೆನಿಸಿಕೊಳ್ಳುವುದು. ಇದೇ ಅರ್ಥಕ್ಕೆ ಮಧುಸೂದನಸರಸ್ವತಿಗಳು ಕೂಡ ಭಕ್ತಿಯೆನ್ನುವುದಕ್ಕೆ,

> "ದ್ರವೀಭಾವಪೂರ್ವಿಕಾ ಮನಸೋ ಭಗವ
> ದಾಕಾರತಾರೂಪಾ ಸವಿಕಲ್ಪಕ ವೃತ್ತಿರ್ಭಕ್ತಿಃ"

ಅಂದರೆ ಧ್ಯೇಯಸ್ವರೂಪವನ್ನು ಹೊಂದುವ ಪ್ರೇಮಪ್ರವಾಹವು ಧ್ಯೇಯಸ್ವರೂಪದಲ್ಲಿ ಕರಗಿಹೋಗಬೇಕೆಂದರೆ, ತನಗೂ ಧ್ಯೇಯಸ್ವರೂಪಕ್ಕೂ ಅಭೇದವುಂಟಾಗುವ ರೀತಿಯಲ್ಲಿ

ಇರಬೇಕೆಂಬ ತಾತ್ಪರ್ಯವಾಗಿರುತ್ತದೆ. ಈ ತಾತ್ಪರ್ಯಕ್ಕೆ ಅನುಸಾರವಾಗಿ ಚಂದ್ರನಲ್ಲಿಟ್ಟ ದೃಷ್ಟಿಯು ಹೇಗೆ ಸಮಾಗಮವಾಗುವುದೋ ಹಾಗೆ ನನಗೂ ಸೀತೆಗೂ ಸಮಾಗಮವಾಗಲು ಸಮುದ್ರದಲ್ಲಿ ಮುಳುಗಿಬಿಡುವನೆಂದು ಶ್ರೀರಾಮಚಂದ್ರನು ಹೇಳಿದುದಾಗಿದೆ.

ಆದುದರಿಂದ ಧ್ಯಾನಕ್ಕೆ ಕುಳಿತುಕೊಂಡ ಕಾಲದಲ್ಲಿ ಇಂತಹ ಪ್ರೇಮಪ್ರವಾಹದೊಡನೆ ಕುಳಿತು ಧ್ಯಾನಮಾಡಿದರೆ ಸಮಾಧಿಯು ಸಿದ್ಧಿಸುವುದು. ಈ ವಿಧವಾದ ಪ್ರೇಮಪ್ರವಾಹ ನಿಲ್ಲದಿದ್ದರೆ ಇನ್ನೂ ಚಿತ್ತಶುದ್ಧಿಯೇ ಆಗಿಲ್ಲವೆಂದು ಖಂಡಿತ ತಿಳಿದುಕೊಳ್ಳಬೇಕು. ಆದುದ ರಿಂದ ಪ್ರೇಮಪ್ರವಾಹವಿಲ್ಲದಿದ್ದರೆ ಸಮಾಧಿಯ ಅನುಷ್ಠಾನಕ್ಕೆ ಅಧಿಕಾರವೇ ಬರುವುದಿಲ್ಲ ಮತ್ತು ಅಂತರ್ಮುಖದಲ್ಲಿ ಕಾಣುವ ತೇಜೋರೂಪವೇ ನಾನೆಂಬದಾಗಿ ಧರಿಸಿಕೊಳ್ಳುವುದಕ್ಕೂ ಯೋಗ್ಯತೆಯುಂಟಾಗುವುದಿಲ್ಲ. ಅಲ್ಲದೆ ಈ ಪ್ರೇಮಪ್ರವಾಹವೇ "ಅಹಂ ಬ್ರಹ್ಮಾಸ್ಮಿ" ಯ ಸಾಧನೆಗೆ ಅಂಕುರವಾಗಿರುವುದು. ರಾವಣನನ್ನು ಕೊಲ್ಲಲು ಶ್ರೀರಾಮನು ಪ್ರಯೋಗಮಾಡಿದ ಬ್ರಹ್ಮಾಸ್ತ್ರವೇ ಅಹಂಬ್ರಹ್ಮಾಸ್ಮಿಯ ತತ್ವದಲ್ಲಿರುವುದು. ಆ ಪರ್ಯಂತರ ಪ್ರೇಮಪ್ರವಾಹವು ಇದ್ದೇ ಇರಬೇಕು. ಇಂತಹ ಪ್ರೇಮಪ್ರವಾಹಸ್ವರೂಪವಾದ ಭಕ್ತಿಯೇ ಮೋಕ್ಷವನ್ನು ಪಡೆ ಯಲು ಸಹಕಾರಿಯಾಗಿರುವ ಸಲಕರಣೆಗಳೊಳಗೆ ಬಲು ದೊಡ್ಡ ಸಲಕರಣೆಯಾಗಿರುವು ದೆಂದು ಶ್ರೀಶಂಕರಭಗವತ್ಪಾದರವರು ಹೇಳಿರುವ ಶ್ಲೋಕವನ್ನು ಅರಣ್ಯಕಾಂಡದಲ್ಲಿ ಸೀತಾವಿಯೋಗದಿಂದ ಶ್ರೀರಾಮನು ಪರಿತಾಪಪಟ್ಟ ಸಂದರ್ಭದಲ್ಲಿಯೇ ವಿವರಮಾಡಿದೆ. ಆದುದರಿಂದ ಮೋಕ್ಷಗಾಮಿಗಳು ಮೋಕ್ಷೇಚ್ಛೆಯನ್ನು ಹೆಚ್ಚಿಸಿಕೊಳ್ಳುತ್ತಾ ಅತ್ಯಂತ ತೀವ್ರತಮಕ್ಕೆ ತಂದುಕೊಂಡು ಸೋಹಂಭಾವದೊಡನೆ ಧ್ಯಾನಾಭ್ಯಾಸಮಾಡುತ್ತಾ ಬಂದರೆ ತಕ್ಷಣವೇ ಫಲಕಾರಿಯಾಗುವುದು.

ಶ್ರೀಮದ್ರಾಮಾಯಣದಲ್ಲಿ ಯಾವ ಯಾವ ಕಾಲದಲ್ಲಿ ಶ್ರೀರಾಮನು ಸೀತಾವಿಯೋಗ ದುಃಖದಿಂದ ಪ್ರಲಾಪಿಸಿರುವನೋ ಆಯಾಯ ಕಾಲಗಳಲ್ಲಿ ಮೋಕ್ಷಮಾರ್ಗದಲ್ಲಿರತಕ್ಕವರು ಮೋಕ್ಷೇಚ್ಛೆಯನ್ನು ಉಲ್ಬಣಮಾಡಿಕೊಳ್ಳತಕ್ಕದ್ದು. ಅಂದರೆ ಇತರ ಕಾಲಗಳಲ್ಲಿ ಇರ ಬಾರದೆಂಬ ತಾತ್ಪರ್ಯವಲ್ಲ. ಧ್ಯಾನಕ್ಕೆ ಕುಳಿತುಕೊಂಡ ಕಾಲದಲ್ಲಿ ಸಾಕ್ಷಾತ್ಕಾರಸ್ವರೂಪದ ಪ್ರೀತಿಯನ್ನು ತೀವ್ರತಮವಾಗಿ ಮಾಡಿಕೊಂಡರೆ ಧ್ಯಾನದ ಅನುಷ್ಠಾನವು ಚೆನ್ನಾಗಿ ಸಿದ್ಧಿಸು ವುದು. ಇದರಂತೆ ಎಲ್ಲಾ ಸೋಪಾನಗಳಿಗೂ ಅನ್ವಯಮಾಡಿಕೊಳ್ಳಬೇಕು. ಈ ಮೇಲಿನ ತತ್ವಗಳೇ ಶ್ರೀರಾಮನು ಸಮುದ್ರತೀರದಲ್ಲಿ ಸೀತೆಗೋಸ್ಕರ ಅತ್ಯಂತ ದುಃಖಪಟ್ಟುದಾಗಿರು ವುದು. ಶ್ರೀರಾಮನು ಸಮುದ್ರದಲ್ಲಿ ಮುಳುಗಿಬಿಡುತ್ತೇನೆಂದು ಹೇಳಿರುತ್ತಾನಷ್ಟೆ! ಸಮುದ್ರವೆಂಬುದೇ ನಮ್ಮ ಒಳಗೆಂದರೆ ಅಂತರ್ಮುಖದಲ್ಲಿ ಕಾಣುವ ಸಗುಣಬ್ರಹ್ಮಚೈತನ್ಯದ ಪ್ರಕಾಶವಾಗಿರುವುದು. ಇದರ ವಿಚಾರವು ಮುಂದೆ ಬರುವುದು.

## ೪ನೆಯ ಪ್ರಕರಣ

**ರಾವಣನ ಮಂತ್ರಾಲೋಚನೆಯ ಸಭೆ. ವಿಭೀಷಣನ ಶರಣಾಗತಿ.**

**ಅವಿದ್ಯಾರಾಜನ ಸಭೆ. ಧರ್ಮಮಾರ್ಗದ ಸ್ವರೂಪ ಮತ್ತು ಮೋಕ್ಷಕ್ಕೆ ಧರ್ಮಮಾರ್ಗದ ಸಹಾಯ.**

**ರಾ||** ಹನುಮಂತನು ನಡೆಸಿಹೋದ ಕಾರ್ಯಗಳಿಗೆ ರಾವಣನು ಚಿಂತಿಸುತ್ತ ಶತ್ರುಗಳು ದಂಡೆತ್ತಿ ಬರುವುದಕ್ಕೆ ಮೊದಲು ತಾನು ಮಾಡಬೇಕಾದ ಸನ್ನಾಹಗಳ ವಿಷಯದಲ್ಲಿ ಮಂತ್ರಿಗಳೊಡನೆ ಆಲೋಚಿಸಲು ಸಭೆಯನ್ನು ಸೇರಿಸಿದನು. ಈ ಸಭೆಯಲ್ಲಿ ಅವನ ಅಧಿಕಾರಿಗಳೆಲ್ಲರೂ ಸೇರಿದ್ದರು. ವಿಭೀಷಣನ ಹೊರತು ಮಿಕ್ಕವರೆಲ್ಲರೂ, ರಾವಣನ ಮುಖಸ್ತುತಿಮಾಡಿದುದಲ್ಲದೆ ತಮ್ಮ ತಮ್ಮ ಪರಾಕ್ರಮಗಳನ್ನು ಹೊಗಳಿಕೊಳ್ಳುತ್ತಾ ರಾವಣನನ್ನು ಯುದ್ಧೋನ್ಮುಖನಾಗುವಂತೆ ಪ್ರೋತ್ಸಾಹಿಸಿದರು.

**ತತ್ವ||** "ಯಥಾ ರಾಜಾ ತಥಾ ಪ್ರಜಾಃ" ಎಂಬಂತೆ ಅವಿದ್ಯಾಸ್ವರೂಪದ ದೊರೆಗೆ ತಕ್ಕ ಅಧಿಕಾರಿಗಳು ಮತ್ತು ಪರಿವಾರಗಳು, ಪ್ರಹಸ್ತ, ದುರ್ಮುಖ, ವಜ್ರದಂಷ್ಟ್ರ, ಮಹೋದರ, ಮಹಾಪಾರ್ಶ್ವ, ಧೂಮ್ರಾಕ್ಷ, ಅಕಂಪನ, ಶುಕ, ಸಾರಣ, ನಿಕುಂಭನಂತಹ ಪ್ರಭೃತಿಗಳೆಲ್ಲಾ ರಾವಣನ ಮಂತ್ರಿಗಳು ಮತ್ತು ಸೇನಾಪತಿಗಳು. ಇವರ ಹೆಸರುಗಳ ಶಬ್ದದ ಅರ್ಥವೇ ಅವಿದ್ಯಾಸ್ವರೂಪಕ್ಕೆ ತಕ್ಕಂತೆ ಅನ್ವಯವಾಗುವುದು. ಇವನ ಮಕ್ಕಳಲ್ಲಿ ಅಕ್ಷಕುಮಾರನು ಹನುಮಂತನಿಂದ ಪ್ರಥಮದಲ್ಲಿಯೇ ನಿಗ್ರಹಿಸಲ್ಪಟ್ಟನು. ಇನ್ನು ಉಳಿದಿರುವವರು ಭೋಗಶಕ್ತಿಯ ತತ್ವದಲ್ಲಿರುವ ಇಂದ್ರಜಿತು ಮತ್ತು ಅವಿದ್ಯಾದೃಢಸಂಯೋಗಶಕ್ತಿಯ ತತ್ವದಲ್ಲಿರುವ ಅತಿಕಾಯ, ಕುಂಭಕರ್ಣ, ವಿಭೀಷಣರಿಬ್ಬರು ಸಹೋದರರು. ಇವರ ತತ್ವದ ವಿವರಣೆಯು ಅವರವರ ಯುದ್ಧಪ್ರಕರಣದಲ್ಲಿ ವಿವರಿಸಲ್ಪಟ್ಟಿರುವುದು.

**ರಾ||** ರಾವಣನ ಪರಿವಾರದವರೆಲ್ಲರೂ ರಾವಣನನ್ನು ಯುದ್ಧೋನ್ಮುಖನನ್ನಾಗಿ ಪ್ರೇರಿಸಿದರೇ ಹೊರತು ಯಾರೂ ಬುದ್ಧಿವಾದವನ್ನು ಹೇಳಲಿಲ್ಲ. ಆದರೆ ಧರ್ಮಮಾರ್ಗಸ್ವರೂಪನಾದ ವಿಭೀಷಣನು ಮಾತ್ರ ಯುದ್ಧವು ಉಚಿತವಲ್ಲವೆಂದು ಹೇಳಿ ಸೀತೆಯನ್ನು ತಂದುದು ಮೊದಲುಗೊಂಡು ಲಂಕೆಯಲ್ಲಿ ಕಂಡುಬಂದ ನಾನಾ ದುರ್ನಿಮಿತ್ತಗಳನ್ನು ಸಹ ರಾವಣನಿಗೆ ತಿಳಿಸಿ, ಸೀತೆಯನ್ನು ಶ್ರೀರಾಮನಿಗೆ ಒಪ್ಪಿಸುವಂತೆ ಬುದ್ಧಿವಾದವನ್ನು ಹೇಳಿದನು.

ರಾವಣನು ವಿಭೀಷಣನ ಹಿತೋಪದೇಶಗಳಿಗೆ ಗಮನಕೊಡದೆ ತನ್ನ ಮಂತ್ರಿಗಳೊಡನೆ ಆಲೋಚಿಸಲು ಪುನಃ ಸಭೆಸೇರಿಸಿದನು.

**ತತ್ವ||** ಅಧರ್ಮಸ್ವರೂಪರಾದ ದುಷ್ಟರಿಗೆ ಸಜ್ಜನರು ಎಷ್ಟು ಹಿತೋಪದೇಶಗಳನ್ನು ಮಾಡಿದರೂ ನಿರರ್ಥಕವಾಗುವುದು. ಅಲ್ಲದೆ ದುಷ್ಟರಿಗೆ ದುಸ್ವಭಾವದವರೇ ಸ್ವಾಭಾವಿಕ ವಾಗಿ ಅನುಯಾಯಿಗಳಾಗಿರುವರು. ಇಂತಹ ಸಹವಾಸಬಲದಿಂದ, ಹಿತೋಪದೇಶಗಳು ಪ್ರಯೋಜನವಾಗುವುದಿಲ್ಲವೆಂಬ ತತ್ವವೇ ರಾವಣನು ವಿಭೀಷಣನ ಮಾತಿಗೆ ಸಮ್ಮತಿಸದೆ ಪುನಃ ಮಂತ್ರಾಲೋಚನಾಸಭೆಯನ್ನು ಸೇರಿಸಿದುದು.

**ರಾ||** ರಾವಣನು ಪುನಃ ಮಂತ್ರಾಲೋಚನೆಯನ್ನು ಮಾಡುವಲ್ಲಿ ಶ್ರೀರಾಮಾದಿ ಗಳನ್ನು ಧ್ವಂಸಮಾಡಲು ತನ್ನ ಪರಾಕ್ರಮವೇ ಸಾಕಾಗಿರುವುದೆಂದು ಕುಂಭಕರ್ಣನು ಹೇಳಿಕೊಂಡು, ರಾವಣನನ್ನು ಪ್ರೋತ್ಸಾಹಪಡಿಸಿದನು. ಮಹಾಪಾರ್ಶ್ವನು ಬಲಾತ್ಕಾರ ದಿಂದ ಸೀತೆಯನ್ನು ಎಳೆದುಕೊಂಡು ಕುಕ್ಕುಟವಂತೆ ಭೋಗಿಸೆಂದು ರಾವಣನಿಗೆ ತಿಳಿಸಿ ದನು. ವಿಭೀಷಣನ ಹೊರತು ಉಳಿದವರೆಲ್ಲರೂ ತಮ್ಮ ತಮ್ಮ ಪರಾಕ್ರಮವನ್ನು ಹೊಗಳಿಕೊಳ್ಳುತ್ತ ರಾವಣನನ್ನು ಯುದ್ಧೋನ್ಮುಖನನ್ನಾಗಿಯೇ ಪ್ರೇರಿಸುತ್ತಿದ್ದರು.

**ತತ್ವ||** ಕುಂಭಕರ್ಣನು ತಮೋಗುಣಪ್ರಧಾನಚೈತನ್ಯನಾಗಿರುವನು. ಇವನ ಅನ್ವಯದ ತತ್ವವನ್ನು ಇವನ ಯುದ್ಧದ ಸಂದರ್ಭದಲ್ಲಿ ವಿವರಿಸಿರುವುದು. ತಮಃ ಪ್ರಧಾನಚೈತನ್ಯನು ಶ್ರೀರಾಮಲಕ್ಷ್ಮಣರನ್ನು ಅಂದರೆ ಬುದ್ಧಿಮನಸ್ಸತ್ವಗಳನ್ನು ನಿಗ್ರಹಿ ಸಲು ತನ್ನ ಬಲವೊಂದೇ ಸಾಕಾಗಿರುವುದೆಂದು ವಿಕ್ಷೇಪಚೈತನ್ಯದಲ್ಲಿರುವ ರಾವಣನನ್ನು ಪ್ರೋತ್ಸಾಹಿಸಿದನು, ಮಹಾಪಾರ್ಶ್ವನೆಂದರೆ—ಅತ್ಯಂತ ಮೂಢತನ ಅಥವಾ ಅತಿ ಒರಟು ತನವೆಂದು ಅರ್ಥ. ಹೇಗೆಂದರೆ, ಪಾರ್ಶ್ವವೆಂದರೆ "ಪೂರ್ಯತೆ ಅಸ್ಥಿಭಿರಿತಿ ಪಾರ್ಶ್ವಂ" ಎಲುಬುಗಳಿಂದ ಪೂರ್ಣವಾಗಿರುವ ಕಂಕುಳಿನ ಕೆಳಭಾಗಕ್ಕೆ ಪಾರ್ಶ್ವ ಎಂದು ಹೆಸರು. ಮಹಾಪಾರ್ಶ್ವವೆಂದರೆ, ಮಾಂಸಖಂಡರೂಪವಾದ ಮೃದುತ್ವವು ಲೇಶವಾದರೂ ಇಲ್ಲದೆ ಬರೀ ಅಸ್ತಿಯೋಪಾದಿಯಲ್ಲಿ ಅತ್ಯಂತ ಒರಟುಸ್ವಭಾವವುಳ್ಳವನಿಗೆ ಮಹಾಪಾರ್ಶ್ವನೆಂದು ಹೆಸರು. ಅಂದರೆ ಅತಿ ಒರಟುತನದ ಸ್ವಭಾವದವರು ಮಹಾಪಾರ್ಶ್ವರೆಂಬ ತಾತ್ಪರ್ಯ. ಮಹಾಪಾರ್ಶ್ವನು ಇಂತಹ ಅತಿ ಒರಟುತನದ ತತ್ವದವನಾದುದರಿಂದಲೇ ತನ್ನ ಸ್ವಭಾವ ದಂತೆ ಸೀತೆಯನ್ನು ಬಲಾತ್ಕಾರದಿಂದ ಭೋಗಿಸೆಂದು ರಾವಣನಿಗೆ ಹೇಳಿದನು. ಇಂತಹ ತತ್ವದಲ್ಲಿರುವವರೇ ರಾವಣನ ಮಂತ್ರಿ ಸೇನಾಪತಿಗಳಾಗಿರುವರು. ಇವರ ವಿಚಾರಗಳ ತತ್ವವು ಅವರವರ ಯುದ್ಧಪ್ರಕರಣದಲ್ಲಿ ಬರುವುದರಿಂದ ಇಲ್ಲಿ ವಿವರಿಸಲಿಲ್ಲ.

**ರಾ||** ರಾವಣನ ಮಂತ್ರಿ ಸೇನಾಪತಿಗಳು ರಾವಣನನ್ನು ಯುದ್ಧೋನ್ಮುಖನನ್ನಾಗಿಯೇ ಪ್ರೇರಿಸುತ್ತಿರಲು, ವಿಭೀಷಣನು ಸೀತಾದೇವಿಯನ್ನು ಶ್ರೀರಾಮನಿಗೆ ಒಪ್ಪಿಸುವುದೇ ಧರ್ಮ

ವೇದು ಪುನಃ ಉಪದೇಶಿಸಲು, ಇಂದ್ರಜಿತುವು ವೈರಿಗಳನ್ನು ಕೊಲ್ಲಲು ತನ್ನ ಪರಾಕ್ರಮವೊಂದೇ ಸಾಕಾಗಿರುವುದೆಂದು ವಿಭೀಷಣನ ಮತವನ್ನು ಖಂಡಿಸಿದನು. ಇಂದ್ರಜಿತ್ತಿನ ದುರ್ಬುದ್ಧಿಗಾಗಿ ವಿಭೀಷಣನು ದೂಷಿಸಲು, ರಾವಣನು ವಿಭೀಷಣನನ್ನು ಅವಮಾನಪಡಿಸಿದನು. ಇದಕ್ಕಾಗಿ ವಿಭೀಷಣನು ತನ್ನ ನಾಲ್ಕು ಜನ ಮಂತ್ರಿಗಳೊಡನೆ ಶ್ರೀರಾಮಲಕ್ಷ್ಮಣರಿದ್ದೆಡೆಗೆ ಹೊರಟು ಬಂದನು.

**ತತ್ವ||** "ವಿನಾಶಕಾಲೇ ವಿಪರೀತಬುದ್ಧಿಃ" ಎಂಬಂತೆ ದುಷ್ಟರು ಕೆಡುವ ಕಾಲದಲ್ಲಿ ಹಿತೋಪದೇಶಕ್ಕೆ ಗಮನಕೊಡುವುದಿಲ್ಲವಾದುದರಿಂದ ಸತ್ಪುರುಷರು ದುಷ್ಟರನ್ನು ಅವರ ಕರ್ಮಾನುಸಾರವಾದ ಮಾರ್ಗದಲ್ಲಿ ಬಿಟ್ಟು ಸಮಯ ಕಾದುಕೊಂಡಿದ್ದು ತಾವು ಅವರಿಂದ ದೂರರಾಗುತ್ತಾರೆ. ಇದರಂತೆ ಧರ್ಮಮಾರ್ಗದ ತತ್ವದವನಾದ ವಿಭೀಷಣನು ಅಧರ್ಮದ ತತ್ವದಲ್ಲಿರುವ ರಾವಣನನ್ನು ಬಿಟ್ಟು ಹೊರಟುದಾಗಿದೆ. ಇಂದ್ರಜಿತು ವಿಭೀಷಣನನ್ನು ಧಿಕ್ಕಾರಮಾಡಿದ ತತ್ವವೇನೆಂದರೆ—ಇಂದ್ರಜಿತ್ತಿನ ತತ್ವದಲ್ಲಿರುವ ಭೋಗಶಕ್ತಿಗೂ ವಿಭೀಷಣನ ತತ್ವದಲ್ಲಿರುವ ಧರ್ಮಮಾರ್ಗಕ್ಕೂ ಸ್ವಾಭಾವಿಕವಾಗಿ ವೈಷಮ್ಯವಿರುವುದು. ಭೋಗಶಕ್ತಿಯಿಂದಲೇ ಧರ್ಮವು ಹೋಗಿ ಅಧರ್ಮವುಂಟಾಗುವುದನ್ನು ಸರ್ವರೂ ಯೋಚಿಸಿಕೊಳ್ಳಬಹುದು. ಭೋಗಶಕ್ತಿಗೂ ಧರ್ಮಮಾರ್ಗಕ್ಕೂ ಇರುವ ವೈಷಮ್ಯದ ವಿಚಾರವು ಮುಂದೆ ಇಂದ್ರಜಿತ್ತಿನ ಯುದ್ಧಪ್ರಕರಣದಲ್ಲಿ ಬರುವುದರಿಂದ ಇಲ್ಲಿ ವಿವರಿಸಿರುವುದಿಲ್ಲ.

**ರಾ||** ಲಂಕಾನಗರಿಯಿಂದ ಹೊರಟ ವಿಭೀಷಣನು ಮಂತ್ರಿಗಳೊಡನೆ ಶ್ರೀರಾಮಲಕ್ಷ್ಮಣರಿದ್ದೆಡೆಗೆ ಬರಲು, ಸುಗ್ರೀವ ಮುಂತಾದವರು ಶತ್ರುಪಕ್ಷದವನಾಗಿಯೂ ಸಾಕ್ಷಾತ್ ಶತ್ರುವಿನ ತಮ್ಮನಾಗಿಯೂ ಇರುವ ವಿಭೀಷಣನನ್ನು ಕೊಲ್ಲಬೇಕೆಂದು ಶ್ರೀರಾಮನಿಗೆ ಅರಿಕೆ ಮಾಡಿಕೊಂಡರು. ಅದಕ್ಕೆ ವಿಭೀಷಣನು ಆರ್ತಸ್ವರದಿಂದ "ನಾನು ಶರಣಾಗತನಾಗಿ ತಮ್ಮಲ್ಲಿ ಸೇರಿಕೊಳ್ಳಲು ಬಂದಿರುವೆನು. ನನ್ನನ್ನು ಕಾಪಾಡಬೇಕು" ಎಂದು ವಿನಯದಿಂದ ಶ್ರೀರಾಮನನ್ನು ಪ್ರಾರ್ಥಿಸಿಕೊಂಡನು. ವಿಭೀಷಣನು ಶರಣಾಗತನಾಗಿ ನಿಷ್ಕಾಪಟ್ಯದಿಂದ ಬಂದಿರುವನೆಂದು ಶ್ರೀರಾಮನು ತಿಳಿದುಕೊಂಡದ್ದಲ್ಲದೆ, ಹನುಮಂತನ ಅಭಿಪ್ರಾಯದಂತೆಯೂ ವಿಭೀಷಣನನ್ನು ತನ್ನಲ್ಲಿ ಸೇರಿಸಿಕೊಂಡನು. ಅಲ್ಲದೆ ಶರಣಾಗತನಾಗಿ ಬಂದ ವಿಭೀಷಣನಿಗೆ ಲಂಕಾರಾಜ್ಯದ ಪಟ್ಟವನ್ನು ಸಹ ತಾನಿದ್ದ ಸ್ಥಳದಲ್ಲಿಯೇ ಕಟ್ಟಿದನು.

**ತತ್ವ||** ಈ ವಿಭೀಷಣನ ವಿಚಾರದಲ್ಲಿ ಅನೇಕ ಒಳತತ್ವಗಳಿವೆ. ವಿಭೀಷಣನನ್ನು ಧರ್ಮಮಾರ್ಗಸ್ವರೂಪಕ್ಕೆ ಹೋಲಿಸಿ ಈ ತತ್ವಾರ್ಥರಾಮಾಯಣದ ಹಿಂದಿನ ಪ್ರಕರಣಗಳಿಂದ ತಿಳಿಸಿಕೊಂಡು ಬರುತ್ತಿದೆಯಷ್ಟೆ! ಈ ಅನ್ವಯಕ್ಕೆ ಸರಿಯಾಗಿ ಶ್ರೀಮದ್ರಾಮಾಯಣದಲ್ಲಿಯೂ "ವಿಭೀಷಣಸ್ತು ಧರ್ಮಾತ್ಮಾ ನತು ರಾಕ್ಷಸಚೇಷ್ಟಿತಃ" ಎಂದರೆ ವಿಭೀ

ಷಣನು ಧರ್ಮಾತ್ಮನೇ ಹೊರತು ರಾಕ್ಷಸಚೇಷ್ಟೆಯುಳ್ಳವನಲ್ಲವೆಂದು ಹೇಳಿರುವುದು. ಅಲ್ಲದೆ ಚತುರ್ಮುಖಬ್ರಹ್ಮನು ವಿಭೀಷಣನ ತಪಸ್ಸಿಗೆ ಮೆಚ್ಚಿ ಅವನ ಇಷ್ಟದಂತೆ ಸರ್ವದಾ ಧರ್ಮಮಾರ್ಗದಲ್ಲಿಯೇ ಇರುವಂತೆ ವರವನ್ನು ಕೊಟ್ಟಿರುವನು. ಚತುರ್ಮುಖಬ್ರಹ್ಮನ ವರವೆಂದರೆ ಸೃಷ್ಟಿಕ್ರಮದಲ್ಲಿ ಬಂದ ನಿಯಮವೆಂದು ತಿಳಿಯಬೇಕು. ಆದುದರಿಂದ ವಿಭೀಷಣನೆಂದರೆ ಧರ್ಮಮಾರ್ಗಸ್ವರೂಪ ಅಥವಾ ಪುಣ್ಯಸ್ವರೂಪ. ಧರ್ಮಮಾರ್ಗಸ್ವರೂಪವೇ ಮಲಿನಸತ್ವಗುಣ. ಅಲ್ಲದೆ ವಿಭೀಷಣ ಎಂಬ ಪದದ ಅರ್ಥವು ಕೂಡ ಧರ್ಮಮಾರ್ಗಸ್ವರೂಪದವನೆಂದು ಸೂಚಿಸುವುದು. ಹೇಗೆಂದರೆ "ವಿ-ಹೋದ ಭೀಷಣ ಭಯವುಳ್ಳವನು" ಅಂದರೆ ಭಯವನ್ನು ಕಳೆದುಕೊಂಡು ಇರುವವನು. ಅಧರ್ಮವೇ ಭಯಸ್ವರೂಪವು, ಎಂದರೆ ಪಾಪವೇ ಭಯಸ್ವರೂಪವು. ಇಂತಹ ಅಧರ್ಮ ಅಥವಾ ಪಾಪದಿಂದ ಬಿಡಲ್ಪಟ್ಟವನಾಗಿರುವುದರಿಂದ ಧರ್ಮ ಅಥವಾ ಪುಣ್ಯಸ್ವರೂಪನು. ವಿಭೀಷಣ ಎನ್ನುವುದಕ್ಕೆ "ವಿರೋಧಿ ಭಯಂಕರ" ಎಂಬದಾಗಿಯೂ ಅರ್ಥವಾಗುವುದು. ಅಂದರೆ ಧರ್ಮ ಅಥವಾ ಪುಣ್ಯಸ್ವರೂಪವು ಅಧರ್ಮ ಅಥವಾ ಪಾಪಗಳಿಗೆ ಭಯಂಕರಸ್ವರೂಪವಾದುದು. ಆದುದರಿಂದ ವಿಭೀಷಣನು ಧರ್ಮ ಅಥವಾ ಪುಣ್ಯಸ್ವರೂಪನಾಗಿರುವನು.

ಇಂತಹ ಧರ್ಮಮಾರ್ಗ ಅಥವಾ ಮಲಿನಸತ್ವಗುಣಸ್ವರೂಪನಾದ ವಿಭೀಷಣನು ಅವಿದ್ಯೆಯ ಸಂಗಡದಲ್ಲಿ ಸೇರಲು ಕಾರಣವೇನು? ಅವಿದ್ಯೆಗೆ ಥೊರೆಯಾದ ರಜೋಗುಣದ ತತ್ವದಲ್ಲಿರುವ ರಾವಣ ಮತ್ತು ತಮೋಗುಣದ ತತ್ವದಲ್ಲಿರುವ ಕುಂಭಕರ್ಣರಿಗೆ ಭ್ರಾತೃವಾಗಲು ಕಾರಣವೇನು? ಎಂಬ ಪ್ರಶ್ನೆಗಳಿಗೆ ಉತ್ತರಗಳನ್ನು ತಿಳಿದುಕೊಂಡರೆ, ವಿಭೀಷಣನ ಮೂಲತತ್ವವು ಗೊತ್ತಾಗಿ ಮನಸ್ಸಿಗೆ ಮುಂದಟ್ಟಾಗುವುದು. ಈ ವಿಭೀಷಣನ ಮೂಲತತ್ವವನ್ನು ಅರಿಯಲು ರಾವಣ ಕುಂಭಕರ್ಣರ ಮೂಲವಿಚಾರಗಳ ತತ್ವಗಳು ಅವಶ್ಯಕವಾಗಿರುವುವು. ಈ ರಾವಣ ಕುಂಭಕರ್ಣರು ಶಾಪಗ್ರಸ್ತರಾದ ಜಯ ವಿಜಯರ ಎರಡನೆಯ ಜನ್ಮದವರೆಂದು ಪುರಾಣಪ್ರಸಿದ್ಧವಾಗಿರುವುದಷ್ಟೆ! ಆದುದರಿಂದ ವಿಭೀಷಣನ ಮೂಲ ತತ್ವವು ರಾವಣ ಕುಂಭಕರ್ಣರ ಪ್ರಥಮ ಜನ್ಮವಾದ ಹಿರಣ್ಯಾಕ್ಷ ಹಿರಣ್ಯಕಶಿಪುಗಳ ಜನ್ಮದಿಂದ ಪ್ರಾರಂಭವಾಗಿರುವುದು. ರಾವಣ ವಿಭೀಷಣ ಕುಂಭಕರ್ಣರ ಮೂಲತತ್ವವೇನೆಂದರೆ. ಅನಾದಿಯಾದ ಸೃಷ್ಟಿಯಲ್ಲಿ ಪರಮಾತ್ಮನಿಂದ ಚಿಚ್ಛಕ್ತಿಯು ಉದ್ಭವಿಸಿತೆಂದೂ, ಈ ಚಿಚ್ಛಕ್ತಿಯೇ ಸತ್ವರಜಸ್ತಮೋಗುಣಗಳಾದುವೆಂದೂ, ಬಾಲಕಾಂಡದ ತತ್ವಗಳಲ್ಲಿ ತಿಳಿಸಿರುತ್ತೆಷ್ಟೆ! ಸತ್ವರಜಸ್ತಮೋಗುಣಗಳಲ್ಲಿ ಸತ್ವಗುಣವು ಎರಡುವಿಭಾಗವಾಯಿತು. ರಜಸ್ತಮೋಗುಣಗಳಿಂದ ಮಲಿನವಾಗದಿರುವ ಸತ್ವಗುಣವೇ ಶುದ್ಧಸತ್ವಗುಣವೆನಿಸಿಕೊಳ್ಳುವುದು. ರಜಸ್ತಮೋಗುಣಗಳಿಂದ ಮಲಿನವಾದ ಸತ್ವಗುಣವು ಮಲಿನಸತ್ವವೆಂದೆನಿಸಿಕೊಳ್ಳುವುದು. ಸತ್ವಗುಣವು ಹೀಗೆ ಎರಡುಭಾಗವಾಗಿರುವ ತತ್ವಕ್ಕೆ "ಸತ್ವ ಶುದ್ಧ್ಯವಿಶುದ್ಧಿಭ್ಯಾಂ ಮಾಯಾ

ವಿದ್ಯೇಚ ತೇಮತೇ " ಎಂಬ ಶ್ರೀವಿದ್ಯಾರಣ್ಯರವರ ವಾಕ್ಯವನ್ನು ಬಾಲಕಾಂಡದಲ್ಲಿ ಬರೆದಿರುತ್ತಷ್ಟೆ ! ರಜಸ್ತಮೋಗುಣಗಳಲ್ಲಿ ಕಲೆತ ಮಲಿನಸತ್ವಗುಣದ ಚೈತನ್ಯವೇ ವಿಭೀಷಣನು. ಮಲಿನಸತ್ವಗುಣವೇ ವಿಭೀಷಣನಲ್ಲ. ಈ ಮಲಿನಸತ್ವಗುಣದಲ್ಲಿ ಬಿದ್ದ ಪರಮಾತ್ಮನ ಪ್ರತಿಬಿಂಬಚೈತನ್ಯವೇ ವಿಭೀಷಣನ ತತ್ವವಾಗಿರುವುದು. ಮಂಡೋದರೀಸ್ವರೂಪವಾದ ರಜೋಗುಣದಲ್ಲಿ ಬಿದ್ದ ಆತ್ಮನ ಪ್ರತಿಬಿಂಬಚೈತನ್ಯವೇ ರಾವಣನೆಂದು ಹಿಂದೆ ಬರೆದಿರುವಂತೆ, ವಿಭೀಷಣನ ಹೆಂಡತಿಯಾದ ಸರಮೆಯು ತತ್ವವಾದ ಮಲಿನಸತ್ವಗುಣದಲ್ಲಿ ಬಿದ್ದ ಪರಮಾತ್ಮನ ಪ್ರತಿಬಿಂಬಚೈತನ್ಯವೇ ಮಲಿನಸತ್ವಗುಣಪ್ರಕಾಶಕನಾದ ವಿಭೀಷಣನಾಗಿರುವನು. ಶಕ್ತಿ ಶಕ್ತ ಎಂಬವುಗಳಲ್ಲಿ ಶಕ್ತಿಯನ್ನು ಪ್ರಕಾಶಪಡಿಸತಕ್ಕ ಚೈತನ್ಯವೇ ಶಕ್ತಿ ಎಂದೆನಿಸಿಕೊಳ್ಳುವುದರಿಂದ ಗುಣಗಳಲ್ಲಿ ಬಿದ್ದ ಆತ್ಮಪ್ರಕಾಶವೇ ಚೈತನ್ಯರೂಪವೆನಿಸಿಕೊಳ್ಳುವುದು. ಸಾಧಾರಣವಾಗಿ ರಜೋಗುಣದ ಕಾರ್ಯವೆಂದರೆ ರಜೋಗುಣದಲ್ಲಿ ಬಿದ್ದ ಆತ್ಮಚೈತನ್ಯದ ಕಾರ್ಯವೆಂದು ತಿಳಿದುಕೊಳ್ಳಬೇಕು.

ರಜೋಗುಣ, ತಮೋಗುಣ, ಮಲಿನಸತ್ವಗುಣಗಳ ಚೈತನ್ಯಸ್ವರೂಪರಾದ ರಾವಣ, ಕುಂಭಕರ್ಣ, ವಿಭೀಷಣರ ಮೂಲಸ್ವರೂಪದವರೇ ಹಿರಣ್ಯಾಕ್ಷ, ಹಿರಣ್ಯಕಶಿಪು ಮತ್ತು ಪ್ರಹ್ಲಾದರು. ಶಾಪಗ್ರಸ್ತರಾದ ಜಯವಿಜಯರಿಗೆ ಮೂರುಜನ್ಮಗಳಷ್ಟೆ ! ಈ ಮೂರು ಜನ್ಮಗಳ ಅವಸ್ಥೆಗಳು ಸೃಷ್ಟಿ ಸ್ಥಿತಿ ಲಯಗಳಿಗೋಸ್ಕರ ಉಂಟಾಗಿರುವುವು. ಸೃಷ್ಟಿಕಾರ್ಯಕ್ರಮಗಳು ಒಂದು ವಿಧವಾಗಿರುವುದರಿಂದ ಮೂರು ಗುಣಗಳಿಗೂ ಸೃಷ್ಟಿಯ ಅವಸ್ಥೆಯೇ ಬೇರೆ. ಸ್ಥಿತಿಯ ಕಾರ್ಯಕ್ರಮಗಳು ಸೃಷ್ಟಿಯ ಅವಸ್ಥೆಗೆ ವಿಲಕ್ಷಣವಾಗಿರುವುದರಿಂದ ಸ್ಥಿತಿಯ ಅವಸ್ಥೆಯೇ ಬೇರೆ. ಲಯವೆಂದರೆ ಮೋಕ್ಷಕ್ರಮದ ಕಾರ್ಯಗಳು ಮತ್ತೊಂದು ವಿಧವಾಗಿರುವುದರಿಂದ ಲಯದ ಅವಸ್ಥೆಯೇ ಬೇರೆ. ಆದುದರಿಂದ ಗುಣಗಳಿಗೆ ಸೃಷ್ಟಿ ಸ್ಥಿತಿ ಲಯಗಳೆಂಬ ಅವಸ್ಥಾತ್ರಯಗಳು ಹೇಗೆ ಇವೆಯೋ, ಹಾಗೆಯೇ ಜಯ ವಿಜಯರಿಗೆ ಮೂರು ಜನ್ಮಗಳು. ಈ ಜಯ ವಿಜಯರಲ್ಲಿ ಜಯನು ಹಿರಣ್ಯಕಶಿಪು ವಿಜಯನು ಹಿರಣ್ಯಾಕ್ಷರಾಗಿರುವರು. ಜಯ ವಿಜಯರು ಶ್ರೀಮನ್ನಾರಾಯಣನಿಗೆ ವಿರೋಧಿಗಳಾಗಿ ಮೂರು ಜನ್ಮಗಳನ್ನು ಎತ್ತುವುದೆಂದರೆ ಪರಮಾತ್ಮನನ್ನು ಮರೆಮಾಡಿ ಪ್ರಪಂಚಾಕಾರವಾಗಿ ಪರಿಣಮಿಸುವುದೇ ಜಯ ವಿಜಯರಿಗೆ ಬಂದ ಶಾಪದ ತತ್ವವಾಗಿರುವುದು. ಅಂದರೆ ರಜೋಗುಣ ತಮೋಗುಣಗಳ ಚೈತನ್ಯಗಳು ಪ್ರಪಂಚವನ್ನು ಸೃಷ್ಟಿಮಾಡಿದನಂತರ ಪರಮಾತ್ಮನನ್ನು ಮರೆಸಿ ಪ್ರಪಂಚವೇ ಸತ್ಯವೆಂಬ ಮೋಹವನ್ನು ಹುಟ್ಟಿಸಿ ಜೀವರಾಶಿಗಳನ್ನು ಪ್ರಪಂಚವ್ಯಾಪಾರದಲ್ಲಿಯೇ ಮಗ್ನ ಮಾಡಿಸುತ್ತವೆಂಬ ತಾತ್ಪರ್ಯವಾಗಿರುವುದು.

ಸೃಷ್ಟಿ ಸ್ಥಿತಿ ಕ್ರಮಗಳಲ್ಲಿ ಸತ್ವರಜಸ್ತಮೋಗುಣಗಳು ಸಮ್ಮೇಳನವಾಗದೆ ಯಾವ ಕಾರ್ಯಗಳೂ ನಡೆಯುವುದಿಲ್ಲ. ಆದುದರಿಂದ ಸೃಷ್ಟಿಕ್ರಮದಲ್ಲಿ ಹಿರಣ್ಯಾಕ್ಷ ಹಿರಣ್ಯಕಶಿಪು

ಗಳು ತಮೋಗುಣ ರಜೋಗುಣಚೈತನ್ಯಗಳ ತತ್ವದವರಾಗಿಯೂ, ಪ್ರಹ್ಲಾದನು ಮಲಿನ ಸತ್ವಗುಣಚೈತನ್ಯಸ್ವರೂಪನಾಗಿಯೂ ಇರುತ್ತಾರೆ. ರಜೋಗುಣ ತಮೋಗುಣಚೈತನ್ಯಗಳಲ್ಲಿ ಕಲೆತ ಸತ್ವಗುಣದ ಚೈತನ್ಯಕ್ಕೆ ಮಲಿನಸತ್ವಗುಣಚೈತನ್ಯವೆಂದು ಹೆಸರು. ಸೃಷ್ಟಿಕ್ರಮ ದಲ್ಲಿ ಮಲಿನಸತ್ವಗುಣವ ಚೈತನ್ಯವು ಪ್ರಹ್ಲಾದನಂತೆ ಅತಿಶಯವಾಗಿ ಆಹ್ಲಾದವನ್ನುಂಟು ಮಾಡಿ ಬ್ರಹ್ಮಾಂಡವನ್ನಾಗಲಿ ಪಿಂಡಾಂಡಸ್ವರೂಪವಾದ ನಮ್ಮ ದೇಹಗಳನ್ನಾಗಲಿ ಬೆಳೆವಳಿಕೆಗೆ ತರುವ ಶಕ್ತಿಯಾಗಿರುವುದು. ಸೃಷ್ಟಿಕ್ರಮದಲ್ಲಿ ಆಹ್ಲಾದವನ್ನುಂಟುಮಾಡುವ ವಿಧದಿಂದ ಬ್ರಹ್ಮಾಂಡ ಪಿಂಡಾಂಡಗಳನ್ನು ಬೆಳೆವಳಿಕೆಗೆ ತರುವ ಪ್ರಹ್ಲಾದನ ತತ್ವವಾದ ಮಲಿನಸತ್ವಗುಣದ ಚೈತನ್ಯಕ್ಕೂ, ಹಿರಣ್ಯಕಶಿಪುವಿನ ತತ್ವದಲ್ಲಿರುವ ರಜೋಗುಣದ ಚೈತನ್ಯಕ್ಕೂ ಪರಸ್ಪರ ವೈಷಮ್ಯವಿರುವುದು. ಕಾರಣವೇನೆಂದರೆ, ಮಲಿನಸತ್ವಗುಣದ ಚೈತನ್ಯವು ಗರ್ಭದಲ್ಲಿ ಬೆಳೆಯುವ ಶಿಶುವಿನ ದೇಹಕ್ಕೆ ಕಾಂತಿಯನ್ನೂ ಮೃದುತ್ವವನ್ನೂ ಕೊಟ್ಟು ಅಭಿವೃದ್ಧಿಮಾಡಬೇಕೆಂದು ಇರುವುದನ್ನು ವ್ಯತಿರಿಕ್ತವಾಗಿ ರಜೋಗುಣದ ಕಾರ್ಯವು ಒರಟುತನ ಮತ್ತು ಬೆಳೆವಳಿಕೆಯ ಕುಗ್ಗುವಿಕೆಗಳಿಗೆ ಎಳೆಯುವುದು. ರಜೋಗುಣದ ಒರಟುತನ ಅಧಿಕವಾದರೆ ಜಡಸ್ವರೂಪವೆನಿಸಿಕೊಳ್ಳುವುದಲ್ಲದೆ ಮಲಿನಸತ್ವಗುಣಕ್ಕೆ ಹಿಂಸೆ ಯಾಗುವುದೇ ಹಿರಣ್ಯಕಶಿಪುವು ಪ್ರಹ್ಲಾದನಿಗೆ ತೊಂದರೆಯನ್ನುಂಟುಮಾಡಿದುದಾಗಿರುತ್ತದೆ. ಯಾವಾಗ ಬ್ರಹ್ಮಾಂಡ ಪಿಂಡಾಂಡಗಳ ಬೆಳೆವಳಿಕೆಗಳು ರಜೋಗುಣಾಧಿಕ್ಯದಿಂದ ಕುಂಠಿತ ವಾಗಿ ಚೇತನವುಳ್ಳದ್ದಾಗಲಿಲ್ಲವೋ ಆಗ ಈ ಜಡತ್ವವನ್ನು ನಿವಾರಣೆಮಾಡುವುದಕ್ಕೂ ಮಲಿನ ಸತ್ವಗುಣಕ್ಕೆ ಕಾಂತಿಯನ್ನು ಅಧಿಕಮಾಡುವುದಕ್ಕೂ ಶುದ್ಧಸತ್ವಗುಣದಿಂದೊಡಗೂಡಿದ ಈಶ್ವರನ ಪ್ರಕಾಶವು ಬ್ರಹ್ಮಾಂಡ ಪಿಂಡಾಂಡಗಳಲ್ಲಿ ಪ್ರವೇಶಿಸುವುದೇ ಈಶ್ವರನು ನರಸಿಂಹಾ ವತಾರದಲ್ಲಿ ಹಿರಣ್ಯಕಶಿಪುವನ್ನು ನಿಗ್ರಹಿಸಿ ಪ್ರಹ್ಲಾದನನ್ನು ಉದ್ಧರಿಸಿದ್ದಾಗಿರುತ್ತದೆ.

ಮುಖ್ಯತಾತ್ಪರ್ಯವೇನೆಂದರೆ, "ಈಕ್ಷಣಾದಿ ಪ್ರವೇಶಾಂತಾ ಸೃಷ್ಟಿರೀಶೇನ ಕಲ್ಪಿತಾಂ" ಎಂಬ ಶ್ರುತಿವಾಕ್ಯದಂತೆ ಈಶ್ವರನ ಸೃಷ್ಟಿಯ ಆಜ್ಞೆ ಮತ್ತು ಪ್ರವೇಶ ದಿಂದ ರಜಸ್ತಮೋಗುಣ ಮತ್ತು ಮಲಿನಸತ್ವಗುಣಗಳು ಯಾವ ಯಾವ ಸ್ಥಿತಿಯಲ್ಲಿದ್ದು ಕೊಂಡು ಸೃಷ್ಟಿಕ್ರಮವು ನಡೆಯಬೇಕಾಗಿರುವುದೋ ಆ ವಿಚಾರಗಳ ತತ್ವಗಳೇ ಹಿರಣ್ಯಾಕ್ಷ ಹಿರಣ್ಯಕಶಿಪು ಮತ್ತು ಪ್ರಹ್ಲಾದರ ವಿಚಾರವಾಗಿರುವುದು. ಈ ಮೇಲಿನ ತತ್ವಾರ್ಥಗಳ ನ್ನೆಲ್ಲಾ ಒಳಗೊಂಡಿರುವಂತೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿಯಲ್ಲಿ,

ಸತ್ವಂ ವಿಶುದ್ಧಂ ಜಲವತ್ತಥಾಪಿ |
ತಾಭ್ಯಾಂ ಮಿಲಿತ್ವಾ ಶರಣಾಯ ಕಲ್ಪತೆ ||
ಯತ್ರಾತ್ಮಬಿಂಬಃ ಪ್ರತಿಬಿಂಬಿತಸ್ಸನ್ |
ಪ್ರಕಾಶಯ ತ್ಯರ್ಕ ಇವಾಖಿಲಂ ಜಡಂ ||

**ತಾ||** ಸತ್ವಗುಣವಾದರೋ ನೀರಿನಂತೆ ನಿರ್ಮಲವಾದಾಗ್ಯೂ ರಜಸ್ತಮೋಗುಣಗಳಿಂದ ಆಶ್ರಯವನ್ನು ಕೊಡುವುದಕ್ಕೆ ಸಮರ್ಥವಾಗುವುದು, ರಜಸ್ತಮೋಗುಣಗಳಿಂದ ಮಿಳಿತವಾದ ಸತ್ವಗುಣದಲ್ಲಿ ಪರಮಾತ್ಮಬಿಂಬವು ಪ್ರತಿಫಲಿಸಿ ಸೂರ್ಯನಂತೆ ಸಮಸ್ತವಾದ ಜಡ ಪದಾರ್ಥಗಳನ್ನೂ ಪ್ರಕಾಶಗೊಳಿಸುವುದು, ಎಂದು ಹೇಳಿರುವರು.

ಈ ಮೇಲಿನ ಶ್ಲೋಕದಲ್ಲಿ ಪ್ರಹ್ಲಾದನ ತತ್ವವಾದ ಮಲಿನಸತ್ವಗುಣದ ಚೈತನ್ಯ ಸ್ವರೂಪವೂ ಅಡಗಿರುವುದು. ಇದರಜೊತೆಗೆ ಶುದ್ಧಸತ್ವಗುಣದಿಂದೊಡಗೂಡಿದ ಈಶ್ವರನ ಪ್ರತಿಭೆಯ ತತ್ವವೂ ಇರುತ್ತದೆ. ಸತ್ವರಜಸ್ತಮೋಗುಣಗಳ ಸೃಷ್ಟಿಯ ಅವಸ್ಥೆಯನ್ನು ತಿಳಿದುಕೊಳ್ಳಲು ಹಿರಣ್ಯಾಕ್ಷ ಹಿರಣ್ಯಕಶಿಪು ಮತ್ತು ಪ್ರಹ್ಲಾದರ ವಿಚಾರಗಳನ್ನು ಅತ್ಯಂತ ಸೂಕ್ಷ್ಮವಾಗಿ ತಿಳಿಸಿರುತ್ತದೆ. ಇನ್ನು ಸ್ಥಿತಿಯಲ್ಲಿ ನಡೆಯುವ ವಿಚಾರವನ್ನು ತೆಗೆದುಕೊಳ್ಳೋಣ.

ರಜಸ್ತಮೋಗುಣಗಳ ತತ್ವದವರಾದ ರಾವಣಕುಂಭಕರ್ಣರು ಜಯವಿಜಯರ ಎರಡನೆಯ ಜನ್ಮವಷ್ಟೆ ! ಹಿರಣ್ಯಕಶಿಪುವೇ ರಾವಣನಾಗಿ ಹುಟ್ಟಿರುವನೆಂದು ಶ್ರೀಮದ್ರಾಮಾಯಣದ ಉತ್ತರಕಾಂಡದಲ್ಲಿ ಬರೆದಿರುವುದು. ಆದುದರಿಂದ ರಜಸ್ತಮೋಗುಣಗಳ ಎರಡನೆಯ ಜನ್ಮದ ತತ್ವವು ಪರಮಾತ್ಮನನ್ನು ಮರೆಮಾಡಿ ಪ್ರಪಂಚವೇ ಸತ್ಯವೆಂಬ ಭ್ರಾಂತಿಯನ್ನು ಹುಟ್ಟಿಸಿ ಪ್ರಾಣಿಗಳನ್ನು ಪ್ರಪಂಚವ್ಯಾಪಾರಕ್ಕೆ ಸೆಳೆಯುವ ತತ್ವವಾಗಿರುವುದು. ಅಂದರೆ ಸೃಷ್ಟಿಸಿದ ಪ್ರಾಣಿಗಳನ್ನು ಪ್ರಪಂಚವ್ಯಾಪಾರರೂಪವೆಂಬ ಸ್ಥಿತಿಯ ಬಂಧನದಲ್ಲಿಡುವ ಕಾರ್ಯವೇ ರಜೋಗುಣತಮೋಗುಣಗಳಿಗೆ ಎರಡನೆಯ ಅವಸ್ಥೆಯು. ಈ ರೀತಿಯ ಅಂತರಾರ್ಥವೆಂಬುದನ್ನು ಈ ತತ್ವಾರ್ಥರಾಮಾಯಣವು ವಿಶದಪಡಿಸುತ್ತಿರುವುದಷ್ಟೆ! ಈ ಸ್ಥಿತಿಯ ಕ್ರಮದಲ್ಲಿಯೂ ಮೂರು ಗುಣಗಳು ಇದ್ದೇ ಇರುವುವೆಂಬುದನ್ನು ಸೂಚಿಸುವ ತಾತ್ಪರ್ಯಕ್ಕೆ ರಜಸ್ತಮೋಗುಣಗಳ ಚೈತನ್ಯವವರಾದ ರಾವಣ ಕುಂಭಕರ್ಣರ ಜೊತೆಯಲ್ಲಿ ಮಲಿನಸತ್ವಗುಣದ ಚೈತನ್ಯದ ತತ್ವದವನಾದ ವಿಭೀಷಣನು ಕೂಡ ಸಹೋದರನಾಗಿರುತ್ತಾನೆ. ಸ್ಥಿತಿ ಅಥವಾ ಪ್ರಪಂಚವ್ಯವಹಾರದಲ್ಲಿ ಧರ್ಮಾಧರ್ಮಮಾರ್ಗಗಳೆಂಬ ಎರಡು ಸ್ವರೂಪದ ನಡೆವಳಿಕೆಗಳೂ ಇರುತ್ತವೆ. ಈ ಧರ್ಮಾಧರ್ಮಮಾರ್ಗಗಳಲ್ಲಿ ಧರ್ಮಮಾರ್ಗವು ಶುದ್ಧ ಧರ್ಮಸ್ವರೂಪನಾದ ಈಶ್ವರನನ್ನು ಹೊಂದುವುದಕ್ಕೆ ಸಹಕಾರಿಯಾಗಿಯೂ ಈಶ್ವರನಿಗೆ ಪ್ರಿಯವಾಗಿಯೂ ಇರುವುದು. ಇಂತಹ ಮಲಿನಸತ್ವಗುಣದ ಚೈತನ್ಯದ ತತ್ವದವನೇ ವಿಭೀಷಣನು.

ವಿಭೀಷಣನು ರಾವಣ ಕುಂಭಕರ್ಣರ ಜೊತೆಯಲ್ಲಿ ಬೆಳೆದು ತನಗೆ ಜ್ಯೇಷ್ಠನಾದ ರಾವಣನನ್ನು ಈ ಕಷ್ಟಕಾಲದಲ್ಲಿ ಬಿಟ್ಟು ಬಂದುದೇಕೆ ? ಒಂದುವೇಳೆ ರಾವಣನನ್ನು

ಬಿಟ್ಟರೂ ಶ್ರೀರಾಮನಲ್ಲಿಗೆ ಬಂದು ಶರಣಾಗತನಾಗಿ ಸೇರಲು ಕಾರಣವೇನು ? ಎಂಬುದನ್ನು ತಿಳಿದುಕೊಳ್ಳೋಣ. ಇದರ ತತ್ವಾರ್ಥವೇನೆಂದರೆ-ಮಲಿನಸತ್ವಗುಣವು ಶುದ್ಧಸತ್ವಗುಣದ ಭಾಗವಾಗಿರುವುದು. ಅಂದರೆ ಧರ್ಮಮಾರ್ಗವು ಶುದ್ಧಧರ್ಮಸ್ವರೂಪನಾದ ಈಶ್ವರನ ಅಂಶವಾಗಿರುವುದು. ಮಲಿನಸತ್ವಗುಣವಾದ ಧರ್ಮಮಾರ್ಗ ಮತ್ತು ರಜೋಗುಣ ತಮೋಗುಣಗಳ ಕಾರ್ಯವಾದ ಅಧರ್ಮಮಾರ್ಗಗಳೆರಡು ಪ್ರಪಂಚವ್ಯವಹಾರದಲ್ಲಿ ಸೇರಿಕೊಂಡೇ ಇರುವುವು. ಪ್ರಪಂಚ ವ್ಯವಹಾರದಲ್ಲಿ ಅಧರ್ಮಕ್ಕಿಂತ ಧರ್ಮಮಾರ್ಗವೇ ಮೇಲಾಗಿ ಕೆಲವು ಕಾಲ ಇರುತ್ತದೆ. ಮತ್ತೆ ಕೆಲವು ಕಾಲ ಧರ್ಮಕ್ಕಿಂತ ಅಧರ್ಮವು ಮೇಲಾಗುತ್ತದೆ. ಹೀಗೆ ಧರ್ಮಾಧರ್ಮಗಳು ಜನ್ಮಗಳನ್ನು ಅನುಸರಿಸಿ ಹೆಚ್ಚುತ್ತಾ ತಗ್ಗುತ್ತಾ ಇರುತ್ತವೆಯೇ ಹೊರತು ಶುದ್ಧವಾದ ಧರ್ಮಮಾರ್ಗವು ಪ್ರಪಂಚ ವ್ಯವಹಾರದಲ್ಲಿರುವುದು ದುರ್ಲಭ. ಆದುದರಿಂದ ಪ್ರಪಂಚವ್ಯವಹಾರ ನಡೆಯುವ ಪರ್ಯಂತರ ಧರ್ಮಾಧರ್ಮಗಳು ದ್ವಂದ್ವವಾಗಿಯೇ ಇರುವಂತೆ ರಾವಣ ವಿಭೀಷಣರು ಜೊತೆಯಲ್ಲಿಯೇ ಇದ್ದರು.

ಸೀತಾಪಹರಣದ ತತ್ವವೇ ಬಹಿರ್ವ್ಯಾಪಾರ ಪ್ರಾರಂಭದ ತತ್ವವಾಗಿರುವುದಷ್ಟೆ! ರಾವಣನು ಸೀತಾದೇವಿಯನ್ನು ಅಪಹರಿಸಿಕೊಂಡು ಹೋದಾರಭ್ಯ ರಾವಣ ವಿಭೀಷಣರಿಗೆ ಅಂತರಂಗಶುದ್ಧಿಯಿರಲಿಲ್ಲ. ಅಂದರೆ ಸ್ಥಿತಿಯೆಂದರೆ ವ್ಯಾಪಾರದಲ್ಲಿ ಧರ್ಮಾಧರ್ಮಗಳು ದ್ವಂದ್ವವಾಗಿದ್ದರೂ ಧರ್ಮಾಧರ್ಮಗಳಿಗೆ ಪರಸ್ಪರ ವಿರೋಧವಿರುವ ತತ್ವವೇ ಸೀತಾಪಹರಣವಾದ ಮೇಲೆ ರಾವಣ ವಿಭೀಷಣರಿಗೆ ಅಂತರಂಗಶುದ್ಧಿಯಿಲ್ಲದೆ ಇದ್ದ ತತ್ವವಾಗಿರುವುದು.

ಮೋಕ್ಷವನ್ನು ಪಡೆಯುವ ಕಾಲದಲ್ಲಿ ಮಾತ್ರ ಮಲಿನಸತ್ವಗುಣದ ಚೈತನ್ಯವು ತನ್ನ ಪ್ರಭುವಾದ ಶುದ್ಧಸತ್ವಗುಣದ ಚೈತನ್ಯದೊಡನೆ ಸೇರುವುದು. ಕಾರಣವೇನೆಂದರೆ ಮೋಕ್ಷಕ್ಕೆ ವಿರೋಧಿಗಳು ರಜಸ್ತಮೋಗುಣಗಳು. ಮಲಿನಸತ್ವಗುಣಸ್ವರೂಪವಾದ ಧರ್ಮವು ಮೋಕ್ಷಕ್ಕೆ ಸಹಕಾರಿಯಾಗಿರುವುದು. ಅಂದರೆ ನಾವುಗಳು ಜನ್ಮಜನ್ಮಾಂತರಗಳಿಂದ ಶೇಖರಮಾಡಿಕೊಂಡಿರುವ ಸತ್ಕರ್ಮ ಮತ್ತು ಆತ್ಮವಿಚಾರದ ಧರ್ಮವು ಮೋಕ್ಷಪಡೆಯುವ ಕಾಲದಲ್ಲಿ ಸಹಾಯಮಾಡುವುದು. ಆದುದರಿಂದ ಸತ್ಕರ್ಮ ಮತ್ತು ಆತ್ಮವಿಚಾರದ ಧರ್ಮವನ್ನು ಅಗತ್ಯವಾಗಿ ಸಂಪಾದನೆಮಾಡಬೇಕು. ಧರ್ಮಮಾರ್ಗಸ್ವರೂಪವು ಎಂತಹುದೆಂದರೆ - ಮಲಿನಸತ್ವಗುಣವುಳ್ಳದ್ದಾಗಿಯೂ ಮೋಕ್ಷಮಾರ್ಗಕ್ಕೆ ಸಹಕಾರಿಯಾಗಿಯೂ ಇರುವ ನಡೆವಳಿಕೆಗಳೇ ಧರ್ಮಮಾರ್ಗವೆನಿಸಿಕೊಳ್ಳುವುದು. ಮೋಕ್ಷಕ್ಕೆ ಸಹಕಾರಿಯಾಗದೇ ಇರುವ ನಡೆವಳಿಕೆಗಳು ಎಂದಿಗೂ ಧರ್ಮವೆನಿಸಿಕೊಳ್ಳುವುದಿಲ್ಲ.

ಶ್ರೀರಾಮಾವತಾರದ ಚರಿತ್ರೆಯ ಅಂತರಾರ್ಥವು ಮೋಕ್ಷಮಾರ್ಗದ ಸ್ವರೂಪವೇ ಇಂತಹುದೆಂದು ಹೇಗೆ ನಿರ್ಣಯಮಾಡಿ ತೋರಿಸುವುದೋ, ಹಾಗೆಯೇ ಶ್ರೀಕೃಷ್ಣಾವ

ತಾರದ ಚರಿತ್ರೆಯು ಅಂತರಾರ್ಥವು ಮೋಕ್ಷಮಾರ್ಗಕ್ಕೆ ಸಹಕಾರಿಯಾದ ಧರ್ಮಾರ್ಥಕಾಮು ಗಳ ಸ್ವರೂಪಗಳ ನಿರ್ಣಯವನ್ನು ತೋರಿಸುತ್ತದೆ. ಭಾರತಕಥೆಯು ಅಂತರಾರ್ಥವು ಮೋಕ್ಷದ ಗುರಿಯನ್ನೇ ಪರಿಣಾಮವನ್ನಾಗಿಟ್ಟುಕೊಂಡು ಈ ಕೊನೆಯಸೋಪಾನವನ್ನು ಅನುಸರಿಸಿಕೊಂಡು ಸಹಕಾರಿಯಾಗಿರುವಂತೆ ಧರ್ಮ, ಅರ್ಥ, ಕಾಮುಗಳ ಸೋಪಾನಗಳ ಸ್ವರೂಪವು ಹೀಗೆಯೇ ಇರಬೇಕೆಂದು ಶ್ರೀಕೃಷ್ಣಪರಮಾತ್ಮನು ನಿರ್ಣಯಮಾಡಿರುವ ತತ್ವ ವಾಗಿರುವುದು. ಭಾರತದ ಕೊನೆಯಪರ್ವಗಳು ಮೋಕ್ಷಸ್ವರೂಪದ ತತ್ವವನ್ನು ತಿಳಿಸುತ್ತವೆ. ಈ ಕೊನೆಯ ಸೋಪಾನವಾದ ಮೋಕ್ಷಕ್ಕೆ ಸಹಕರಿಸಿಕೊಂಡಿರುವಂತೆ ಭಾರತದ ಕಥೆಯು ಪ್ರಾರಂಭದಿಂದ ಕುರುಕ್ಷೇತ್ರದ ಯುದ್ಧಪರ್ಯಂತರ ಇರುವ ಕಥಾಸಂದರ್ಭಗಳು ಅಧರ್ಮ ದಿಂದ ಧರ್ಮಮಾರ್ಗಕ್ಕೆ ಉಂಟಾಗುವ ಕಷ್ಟಗಳ ಸ್ವರೂಪಗಳನ್ನೂ ಅಧರ್ಮದಿಂದ ಧರ್ಮಕ್ಕೆ ಎಷ್ಟೇ ಕಷ್ಟಗಳು ಬಂದರೂ ಧರ್ಮವನ್ನು ಬಿಡಕೂಡದೆಂಬ ವಿಚಾರಗಳ ಅಂತ ರಾರ್ಥಗಳನ್ನೂ ಒಳಗೊಂಡಿವೆ. ಧರ್ಮಮಾರ್ಗದ ತತ್ವದಲ್ಲಿರುವ ಪಾಂಡವರು ಅಧರ್ಮ ಸ್ವರೂಪರಾದ ದುರ್ಯೋಧನಾದಿಗಳನ್ನು ಕುರುಕ್ಷೇತ್ರದ ಯುದ್ಧದಲ್ಲಿ ನಿಗ್ರಹಿಸಿ ರಾಜ್ಯ ಲಾಭವನ್ನು ಹೊಂದುವ ಕಥೆಯ ಅಂತರಾರ್ಥಗಳು ಮೋಕ್ಷ ಮತ್ತು ಧರ್ಮಗಳಿಗನು ಸಾರವಾದ ಅರ್ಥವನ್ನು ಸಂಪಾದನೆಮಾಡಿದ ತತ್ವಗಳಾಗಿರುವುವು. ಧರ್ಮರಾಯನು ರಾಜ್ಯಲಕ್ಷ್ಮಿಯನ್ನು ಅನುಭವಿಸುತ್ತಿದ್ದ ಕಥೆಯ ಅಂತರಾರ್ಥವೇ ಮೋಕ್ಷ, ಧರ್ಮ, ಅರ್ಥ ಗಳನ್ನು ಸಹಕರಿಸಿಕೊಂಡಿರುವ ಕಾಮನೆಂದರೆ ಭೋಗಪಡುವುದಾಗಿರುತ್ತದೆ. ಯಾವ ಮೋಕ್ಷದ ಸೋಪಾನವನ್ನು ಹೊಂದಲು ಧರ್ಮ, ಅರ್ಥ, ಕಾಮುಗಳನ್ನು ಅನುಸರಿಸಿದ್ದೆವೋ ಅಂತಹ ಮೋಕ್ಷದ ಸೋಪಾನವನ್ನು ಹೊಂದುವುದಕ್ಕೆ ಪ್ರಯತ್ನಮಾಡಬೇಕಾದ ತತ್ವದ ವಿವರಣೆಯೇ ಭಾರತದ ಕೊನೆಯ ಪರ್ವಗಳ ಅಂತರಾರ್ಥವಾಗಿರುವುದು.

ಮುಖ್ಯವಾಗಿ ರಾಮಾಯಣಕಥೆಯು ಮೋಕ್ಷಪಡೆಯುವ ಕ್ರಮದ ಅಂತರಾರ್ಥ ವನ್ನೂ, ಭಾರತಕಥೆಯು ಪ್ರಪಂಚದ ನಡೆನಳಿಕೆಗಳಲ್ಲಿನ ಧರ್ಮಾಧರ್ಮಗಳಲ್ಲಿ ಧರ್ಮಕ್ಕೆ ಹೆಚ್ಚು ಪ್ರಾಶಸ್ತ್ಯಕೊಡುವ ಅಂತರಾರ್ಥವನ್ನೂ ತಿಳಿಸುತ್ತದೆ. ಶ್ರೀಕೃಷ್ಣಾವತಾರದ ಲೀಲಾವಿಭೂತಿಯ ಅಂತರಾರ್ಥವೂ ಅಮೃತಸ್ವರೂಪವಾಗಿರುವುದು. ಭಾರತ ಭಾಗವತ ಗಳೆರಡನ್ನೂ ಒಟ್ಟಿಗೆ ಮನುಷ್ಯನ ದೇಹಕ್ಕೆ ಅನ್ವಯಮಾಡಿ ತಿಳಿದುಕೊಳ್ಳಬಹುದು. ಶ್ರೀಕೃಷ್ಣಪರಮಾತ್ಮನ ಬಾಲಲೀಲೆ, ಗೋಪಿಕಾಸ್ತ್ರೀಯರಲ್ಲಿ ಕ್ರೀಡೆ, ಪಾಂಡವರಲ್ಲಿ ಪ್ರೀತಿ, ದುರ್ಯೋಧನಾದಿಗಳ ನಿಗ್ರಹ, ಇವುಗಳ ಅಂತರಾರ್ಥವು ಮನುಷ್ಯನ ಉದ್ಧಾರಕ್ಕೆ ಶ್ರೀರಾಮಾ ವತಾರದ ಅಂತರಾರ್ಥದಂತೆಯೇ ಅಮೃತಸ್ವರೂಪವಾಗಿರುವುದು. ಭಾರತಕಥೆಯ ಅಂತ ರಾರ್ಥದಲ್ಲಿ ಪಾಂಡವರೇ ಧರ್ಮಮಾರ್ಗದ ತತ್ವದವರು, ಕೌರವರು, ಶಿಶುಪಾಲ, ದಂತ ವಕ್ತ್ರರುಗಳೇ, ಅಧರ್ಮಸ್ವರೂಪರೆಂದರೆ ರಜಸ್ತಮೋಗುಣಗಳ ತತ್ವದಲ್ಲಿರುವವರು. ಜಯ

ವಿಜಯರ ತತ್ವವಾದ ರಜಸ್ತಮೋಗುಣಗಳ ಚೈತನ್ಯಗಳಿಗೆ ಸ್ಥಿತಿ ಅಥವಾ ಪ್ರಪಂಚದ ನಡೆಯುವಿಕೆಯಲ್ಲಿ ಧರ್ಮಾಧರ್ಮಗಳ ವಿವೇಚನೆಯಾದ ಈ ಅವಸ್ಥೆಯೇ ಮೂರನೆಯ ಅವಸ್ಥೆಯಾಗಿರುವುದು. ಈ ಮೇಲಿನ ತತ್ವಾರ್ಥಗಳನ್ನು ಅನುಸರಿಸಿ ಧರ್ಮಮಾರ್ಗದ ತತ್ವದವರಾದ ಪಾಂಡವರನ್ನು ಶ್ರೀಕೃಷ್ಣಪರಮಾತ್ಮನು ಹೇಗೆ ಅತ್ಯಂತ ವಿಶ್ವಾಸದಿಂದ ನೋಡುತ್ತಿದ್ದನೋ ಹಾಗೆ ಶ್ರೀರಾಮಚಂದ್ರನು ಕೂಡ ಧರ್ಮ ಅಥವಾ ಮಲಿನಸತ್ವಗುಣ ಚೈತನ್ಯದ ತತ್ವದಲ್ಲಿರುವ ವಿಭೀಷಣನನ್ನು ತನ್ನ ಸಂಗಡ ಸೇರಿಸಿಕೊಂಡು ತಾನಿದ್ದ ಸ್ಥಳ ದಲ್ಲಿಯೇ ಲಂಕಾರಾಜ್ಯದ ಪಟ್ಟಾಭಿಷೇಕವನ್ನು ಮಾಡಿದನು.

ಆದುದರಿಂದ ವಿಭೀಷಣನು ಧರ್ಮಮಾರ್ಗ ಅಥವಾ ಪುಣ್ಯಸ್ವರೂಪನಾಗಿರುತ್ತಾನೆ. ಅಧರ್ಮಮಾರ್ಗದಲ್ಲಿದ್ದುಕೊಂಡು ಭೋಗದ ಸಲಕರಣೆಗಳನ್ನು ಸಂಪಾದಿಸಿಕೊಂಡಿರು ವುದಕ್ಕೆ ಪುಣ್ಯವೆಂಬ ಹೆಸರು ಸಲ್ಲುವುದಿಲ್ಲ. ಮೋಕ್ಷಮಾರ್ಗಕ್ಕೆ ಸಹಕಾರಿಯಾಗಿರು ವಂತಹ ಧರ್ಮ, ಅರ್ಥ, ಕಾಮಗಳನ್ನು ಶೇಖರಿಸಿಕೊಳ್ಳುವುದನ್ನೇ ಪುಣ್ಯವೆಂದು ಹೇಳ ಬಹುದು. ಪ್ರಪಂಚದ ನಡೆವಳಿಕೆಗಳಲ್ಲಿರುವವರಲ್ಲಿ ಧರ್ಮಾಧರ್ಮಗಳು ವ್ಯತ್ಯಸ್ತವಾಗುತ್ತಿ ದ್ದರೂ ಅವೆರಡೂ ಜೊತೆಯಲ್ಲಿಯೇ ಇರುವುವು. ದೃಢತರವಾದ ಮೋಕ್ಷಮಾರ್ಗದಲ್ಲಿರ ತಕ್ಕವರು ಅಧರ್ಮವನ್ನು ನಿರ್ವೀರ್ಯಮಾಡಿಕೊಂಡು ಧರ್ಮಮಾರ್ಗದ ಸೋಪಾನದಿಂದ ಆತ್ಮಸಾಕ್ಷಾತ್ಕಾರವನ್ನು ಪಡೆಯುತ್ತಾರೆ. ಇಂತಹ ಧರ್ಮಮಾರ್ಗದಲ್ಲಿರತಕ್ಕವರ ನಡೆ ವಳಿಕೆಗೆ ಶುಭವಾಸನೆಯೆಂತಲೂ, ಅಧರ್ಮಮಾರ್ಗದಲ್ಲಿರತಕ್ಕವರಿಗೆ ಅಶುಭವಾಸನೆ ಯೆಂತಲೂ ಮುಕ್ತಿಕೋಪನಿಷತ್ತಿನಲ್ಲಿ,

"ದ್ವಿವಿಧೋ ವಾಸನಾವ್ಯೂಹ ಶ್ಶುಭಶ್ಚೈವಾಶುಭಶ್ಚತೆ"

ಎಂಬದಾಗಿ ಹೇಳಿರುತ್ತದೆ. ಅಂದರೆ ಈ ಪ್ರಕರಣದ ಆದಿಯಿಂದ ತಿಳಿಸಿಕೊಂಡು ಬಂದಿರುವಂತೆ ಮಲಿನಸತ್ವಗುಣವು ಶುದ್ಧಸತ್ವಗುಣದ ಪ್ರಭೆಯಾಗಿರುವುದರಿಂದ, ಮಲಿನ ಸತ್ವಗುಣದ ಚೈತನ್ಯದ ತತ್ವದವನಾದ ವಿಭೀಷಣನ ಮತ್ತು ಇವನ ಪರಿವಾರದವರು ಶುದ್ಧಸತ್ವಗುಣಸ್ವರೂಪಳಾದ ಸೀತಾದೇವಿಗೆ ಸಹಾಯಕರಾಗಿರುವರು. ಅಂದರೆ ಧರ್ಮ ಮಾರ್ಗವು ಈಶ್ವರನಿಗೆ ಪ್ರಿಯವಾಗಿಯೂ, ಈಶ್ವರತ್ವವನ್ನು ಪಡೆಯುವುದಕ್ಕೆ ಸಹಕಾರಿ ಯಾಗಿಯೂ ಇರುವುದು. ಈ ಧರ್ಮಮಾರ್ಗವನ್ನೇ ಶ್ರೀಕೃಷ್ಣಪರಮಾತ್ಮನು ದೈವೀ ಸಂಪತ್ತೆಂದು ಭಗವದ್ಗೀತೆಯಲ್ಲಿ,

ಅಭಯಂ ಸತ್ವಸಂಶುದ್ಧಿ ರ್ಜ್ಞಾನಯೋಗ ವ್ಯವಸ್ಥಿತಿಃ |
ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಂ ||
ಅಹಿಂಸಾ ಸತ್ಯ ಮಕ್ರೋಧ ಸ್ತ್ಯಾಗ ಶ್ಶಾಂತಿ ರಪೈಶುನಂ |

ದಯಾ ಭೂತೇ ಷ್ವಲೋಲುಪ್ತ್ವಂ ಮಾರ್ದವಂ ಹ್ರೀರಚಾಪಲಂ ||
ತೇಜಃ ಕ್ಷಮಾ ಧೃತಿ ಶೌಚ ಮದ್ರೋಹೋ ನಾತಿಮಾನಿತಾ |
ಭವಂತಿ ಸಂಪದಂ ದೈವೀ ಮಭಿಜಾ ತಸ್ಯಭಾರತ ||

ತಾ|| ಅಭಯ, ಚಿತ್ತಶುದ್ಧಿ, ಜ್ಞಾನಪ್ರಾಪ್ತಿಗೆ ಯತ್ನ, ದಾತೃತ್ವ, ಇಂದ್ರಿಯನಿಗ್ರಹ, ಯಜ್ಞ, ವೇದಾಧ್ಯಯನ, ತಪಸ್ಸು, ಮನೋವಾಕ್ಕಾಯಗಳಲ್ಲಿ ಏಕಪ್ರಕಾರ ಇರುವಿಕೆ, ಅಹಿಂಸೆ, ಸತ್ಯ, ಅಕ್ರೋಧ, ಔದಾರ್ಯ, ಚಿತ್ತಶಾಂತಿ, ಚಾಡಿಹೇಳದಿರುವಿಕೆ, ಸರ್ವಪ್ರಾಣಿಗಳಲ್ಲಿಯೂ ದಯೆ, ವಿಷಯಲಂಪಟತ್ವ ತ್ಯಾಗ, ಅಕಾರ್ಯದಲ್ಲಿ ನಾಚಿಕೆ, ಅಚಾಂಚಲ್ಯ, ಕ್ಷಮೆ, ಉತ್ಸಾಹ, ಆಚಾರ, ಅದ್ರೋಹ, ಗರ್ವವಿಲ್ಲದಿರುವಿಕೆಗಳು ದೇವಸ್ವಭಾವದಿಂದ ಹುಟ್ಟಿದವರಿಗೆ ಇರತಕ್ಕ ಗುಣಗಳು.

ಎಂಬದಾಗಿ ಹೇಳಿರುತ್ತಾನೆ. ಈ ಅರ್ಥಕ್ಕೆ ಶ್ರೀಶಂಕರಭಗವತ್ಪಾದರವರು ಕೂಡ ವಿವೇಕಚೂಡಾಮಣಿಯಲ್ಲಿ,

ಮಿಶ್ರಸ್ಯ ಸತ್ವಸ್ಯ ಭವನ್ತಿ ಧರ್ಮಾಃ |
ಸ್ವಮಾನಿತಾದ್ಯಾ ನಿಯಮಾ ಯಮಾದ್ಯಾಃ |
ಶ್ರದ್ಧಾಚ ಭಕ್ತಿಶ್ಚ ಮುಮುಕ್ಷುತಾಚ |
ದೈವೀಚ ಸಂಪತ್ತಿ ರಸನ್ನಿವೃತ್ತಿಃ ||

ತಾ|| ಮಿಶ್ರಸತ್ವಗುಣವೆಂದರೆ — ಮಲಿನಸತ್ವಗುಣಕ್ಕೆ ಅಹಂಕಾರವಿಲ್ಲದಿರುವಿಕೆ ಮೊದಲಾದ ನಿಯಮಗಳೂ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿಗಳ ಅಭ್ಯಾಸವೂ, ಮೋಕ್ಷವನ್ನು ಪಡೆಯುವುದರಲ್ಲಿ ಆಸ್ತಿಕ್ಯಬುದ್ಧಿಯೂ, ಆತ್ಮನಿಷ್ಠೆಯಲ್ಲಿ ಪರಮಪ್ರೀತಿಯೂ, ದೇವಸಂಬಂಧವಾದ ಐಶ್ವರ್ಯವೆಂದರೆ—ಬ್ರಹ್ಮನಿಷ್ಠೆಯಲ್ಲಿಯೇ ಮಗ್ನವಾಗಿರೋಣವೂ, ದುರ್ಮಾರ್ಗದಿಂದ ಹಿಂದಿರುಗುವಿಕೆ ಎಂದರೆ ಸತ್ಕಹವಾಸವೂ, ಉಂಟಾಗುತ್ತವೆ ಎಂದು ಹೇಳಿರುತ್ತಾರೆ.

ಆದುದರಿಂದ ನಾವುಗಳು ಸಂಗ್ರಹಿಸಿಕೊಂಡಿರುವ ಧರ್ಮ ಅಥವಾ ಪುಣ್ಯವಾಸನೆಗಳು ಮೋಕ್ಷವನ್ನು ಹೊಂದಲು ಜೀವರುಗಳಿಗೆ ಸಹಾಯಮಾಡುವುದು ಈಶ್ವರನ ನಿಯಮವಾಗಿರುವುದರಿಂದ, ವಿಭೀಷಣನು ತಾನಾಗಿಯೇ ಬಂದು ಶ್ರೀರಾಮನನ್ನು ಶರಣುಹೊಕ್ಕನು. ಅಂದರೆ ತಾಯನ್ನು ಅಗಲಿ ದುಃಖಪಡುತ್ತಿದ್ದ ಶಿಶುವು ಪುನಃ ತಾಯನ್ನು ಸೇರಿದರೆ ಸಂತೋಷಪಡುವಂತೆ, ಮಲಿನಸತ್ವಗುಣದ ಚೈತನ್ಯವು ಪ್ರಭುವಾದ ಈಶ್ವರನಲ್ಲಿ ಸೇರಲು ಅತ್ಯಂತ ಸಂತೋಷದಿಂದ ಬಂದಿತೆಂಬ ತಾತ್ಪರ್ಯವಾಗಿರುವುದು. ಅಂದರೆ ಧ್ಯಾನಕ್ಕೆ ಪ್ರಾರಂಭ

ಮಾಡುವ ಕಾಲದಲ್ಲಿ ಅಧಿಕಾರಿಯು ಶೇಖರಿಸಿಕೊಂಡಿದ್ದ ಧರ್ಮ ಅಥವಾ ಪುಣ್ಯವೆಂದರೆ ಆತ್ಮನಿಷ್ಠೆಯ ವಿಚಾರಗಳು ಸಮಾಧಿಯ ಅಭ್ಯಾಸಕ್ಕೆ ಸಹಕಾರಿಗಳಾಗುವುವು. ಅಲ್ಲದೆ ಸಮಾಧಿಯ ಅಭ್ಯಾಸದಿಂದ ಆತ್ಮಸಾಕ್ಷಾತ್ಕಾರಕ್ಕೆ ವಿರೋಧಿಗಳಾಗಿರುವ ಅಧರ್ಮಗಳು ನಾಶವಾಗಿ ಮುಂದೆ ಧರ್ಮದ ಆಡಳಿತಗಳೇ ಅಧಿಕಾರಿಯಲ್ಲಿ ನೆಲಸುವುವೆಂಬ ತತ್ವಾರ್ಥದ ಸೂಚನೆಯೇ ವಿಭೀಷಣನ ಶರಣಾಗತಿಯ ಮತ್ತು ಪಟ್ಟಾಭಿಷೇಕದ ಅಂತರಾರ್ಥವಾಗಿರುವುದು.

ವಿಭೀಷಣನು ಬಂದಾಗ ಶತ್ರುಪಕ್ಷದವನಾದ್ದರಿಂದ ಇವನಿಂದ ನಮಗೆ ಯಾವ ಸಹಾಯವೂ ಬೇಕಾಗಿಲ್ಲ; ಈ ವಿಭೀಷಣನ ಸಹಾಯವಿಲ್ಲದೆ ರಾವಣಾದಿಗಳನ್ನು ನಿಗ್ರಹಿಸ ಬಲ್ಲೆವೆಂದು ಸುಗ್ರೀವಾದಿಗಳು ಹೇಳಲು ಶ್ರೀರಾಮನು ಸಮ್ಮತಿಸದೆ ವಿಭೀಷಣನನ್ನು ತನ್ನೊಡನೆ ಸೇರಿಸಿಕೊಂಡದ್ದರ ತತ್ವವೇನಂದರೆ---ಸುಗ್ರೀವ ಮುಂತಾದ ವಾನರರ ಕಾರ್ಯದ ತತ್ವದಲ್ಲಿರುವ ಯೋಗಮಾತ್ರದಿಂದಲೇ ಅವಿದ್ಯಾಶಕ್ತಿಗಳನ್ನು ನಿಗ್ರಹಿಸಿ ಆತ್ಮಸಾಕ್ಷಾತ್ಕಾರವನ್ನು ಹೊಂದಬಹುದೆಂದು ತಿಳಿದುಕೊಳ್ಳಬಾರದು. ಆತ್ಮಸಾಕ್ಷಾತ್ಕಾರಕ್ಕೆ ಯೋಗವು ಹೇಗೆ ಸಹಾಯಕವಾಗಿದೆಯೋ ಹಾಗೆಯೇ ಬ್ರಹ್ಮವಿದ್ಯಾಧಿಕಾರಿಯು ಗಳಿಸಿಕೊಂಡಿರುವ ವಿವೇಕ ಸ್ವರೂಪವಾದ ಪುಣ್ಯದ ಸಹಾಯವೂ ಸಮಾಧಿಯ ಅನುಷ್ಠಾನಕ್ಕೆ ಅತ್ಯವಶ್ಯಕವಾಗಿ ಬೇಕು. ವಿಭೀಷಣನು ಎಷ್ಟರಮಟ್ಟಿಗೆ ಸಹಾಯಮಾಡುವನೆಂಬ ವಿಚಾರಗಳ ತತ್ವಗಳು ಮುಂದಿನ ಪ್ರಕರಣಗಳಲ್ಲಿ ಬರುವುವು. ಆತ್ಮಸಾಕ್ಷಾತ್ಕಾರಕ್ಕೆ ಯೋಗಾನುಷ್ಠಾನದ ಜೊತೆಗೆ ಧರ್ಮಮಾರ್ಗವಾದ ಪುಣ್ಯವೂ ಸಹಕಾರಿಯಾಗಿರುವುದು.

ವಿಭೀಷಣನು ಬರುವಾಗ ತನ್ನ ನಾಲ್ಕು ಜನ ಮಂತ್ರಿಗಳಾದ ಅನಲ, ಶರಭ, ಸಂಪಾತಿ, ಪ್ರಘಸರನ್ನು ಕರೆದುಕೊಂಡು ಬಂದನು. ಇವರುಗಳ ತತ್ವಾರ್ಥವೇನೆಂದರೆ—ಅಧರ್ಮ ಸ್ವರೂಪದ ದೊರೆಯಾದ ರಾವಣನ ಮಂತ್ರಿಗಳ ನಾಮಧೇಯಗಳು ಅವುಗಳ ಪದದ ಅರ್ಥಗಳಿಂದಲೇ ಅಧರ್ಮದ ಶಕ್ತಿಗಳೆಂದು ಹೇಗೆ ತಿಳಿಯುವುದೋ ಹಾಗೆಯೇ ಧರ್ಮಮಾರ್ಗದ ತತ್ವದಲ್ಲಿರುವ ವಿಭೀಷಣನ ಮಂತ್ರಿಗಳ ನಾಮಧೇಯಗಳು ಕೂಡ ಧರ್ಮಮಾರ್ಗದ ಶಕ್ತಿಗಳೆಂದು ಸೂಚಿತವಾಗುವುದು. ಅನಲನೆಂದರೆ—"ಅನಂತಿ ಜೀವಂತಿ ಅನೇನ ಲೋಕಾಃ ಇತಿ ಅನಲಃ—ಅನ ಪ್ರಾಣನೆ" ಈತನಿಂದ ಲೋಕಗಳು ಜೀವಿಸುವುವು. ಎಂದರೆ ಸಮಸ್ತಕ್ಕೂ ಆಶ್ರಯಕೊಡುವುದು ಸರ್ವಾಶ್ರಯತ್ವ. ಶರಭನೆಂದರೆ—"ಶರಾನ್ ಭಂಜಯತೀತಿ ಶರಭಃ" ಹಿಂಸಾಸ್ವಭಾವವನ್ನು ನಿಗ್ರಹಮಾಡುವುದು. ಅಂದರೆ ಹಿಂಸಾ ಸ್ವಭಾವವನ್ನು ಹೋಗಲಾಡಿಸುವ ಅಹಿಂಸೆಯ ಸ್ವಭಾವವೆಂಬ ತತ್ವವು. ಇದೂ ಧರ್ಮ ಮಾರ್ಗಕ್ಕೇ ಸೇರಿದುದು ಸಂಪಾತಿಯೆಂದರೆ—"ಸಮ್ಯಕ್ ಪತತೀತಿ ಸಂಪಾತಿಃ" ದೂರದೃಷ್ಟಿಯುಳ್ಳವನೆಂಬ ತತ್ವಾರ್ಥವಾಗುವುದು. ಅಲ್ಲದೆ ಯಥಾರ್ಥವನ್ನು ಕುರಿತು ಹೋಗುವವನೆಂದೂ ಹೇಳಬಹುದು. ಪ್ರಘಸನೆಂದರೆ—ಸಹನೆಯುಳ್ಳವನು. ಸಹನೆಯು ಧರ್ಮಮಾರ್ಗಕ್ಕೆ ಸೇರಿರುವುದು.

ಈ ಮೇಲಿನ ತತ್ವಾರ್ಥಗಳಲ್ಲಿರುವ ಮಂತ್ರಿಗಳೊಡನೆ ಮಲಿನಸತ್ವಗುಣದ ಜೈತನ್ಯದ ತತ್ವದವನಾದ ವಿಭೀಷಣನು ಶ್ರೀರಾಮನಲ್ಲಿಗೆ ಬಂದು ಸೇರಿಕೊಂಡನು.

## ೫ನೆಯ ಪ್ರಕರಣ

**ದರ್ಭಶಯನ ಮತ್ತು ಸೇತು ಬಂಧನ.**



**ಧ್ಯಾನ ಮತ್ತು "ಓಂ" ಎಂಬ ಶಬ್ದೋಚ್ಚಾರಣೆಯ ಅನುಸಂಧಾನದ ವಿಚಾರ.**

**ರಾ||** ಶ್ರೀರಾಮನು ವಿಭೀಷಣನನ್ನು ಜೊತೆಯಲ್ಲಿ ಸೇರಿಸಿಕೊಂಡನಂತರ ಸಮುದ್ರವನ್ನು ದಾಟುವ ಸನ್ನಾಹದ ಯೋಚನೆಮಾಡುತ್ತಾ ಸಮುದ್ರರಾಜನನ್ನು ಉಪಾಸನೆ ಮಾಡಲು ದರ್ಭಶಯನದಲ್ಲಿ ಪವಡಿಸುವಾಗ ತನ್ನಲ್ಲಿ ತಾನು "ಈಗ ನನಗೆ ಹೀಗೆಯೇ ಮರಣವಾಗಲಿ, ಇಲ್ಲದಿದ್ದರೆ ಸಮುದ್ರತರಣವಾಗಲಿ ಈ ಎರಡರಲ್ಲಿ ಯಾವುದಾದರೂ ಒಂದು ಸಿದ್ಧಿಸಲಿ" ಎಂದು ದೃಢಬುದ್ಧಿಯಿಂದ ಸಂಕಲ್ಪಿಸಿಕೊಂಡು ಮನೋನಿಯಮಗಳಿಂದ ಸಮುದ್ರಕ್ಕೆ ಕೈಮುಗಿದು ಎದುರಾಗಿ ಮಲಗಿದನು.

**ತತ್ವ||** ನಮ್ಮ ದೇಹದಲ್ಲಿರುವ ಮೂಲಾಧಾರಚಕ್ರವು ಭೂತತ್ವವಾಗಿರುವುದು. ಮೂಲಾಧಾರಚಕ್ರದ ಮೇಲಿರುವ ಸ್ವಾಧಿಷ್ಠಾನಚಕ್ರವು ಜಲದ ತತ್ವವಾಗಿರುವುದೆಂದು ಶ್ರುತಿಪ್ರಮಾಣವಿರುವುದು. ನಮ್ಮ ದೇಹದಲ್ಲಿ ಈ ಜಲದ ತತ್ವವಾದ ಸ್ವಾಧಿಷ್ಠಾನಚಕ್ರವಿರುವ ಪ್ರದೇಶದಲ್ಲಿ ಜಲಕೋಶವೆಂದರೆ ಮೂತ್ರಕೋಶವಿದೆ. ನೀರಿನಲ್ಲಿ ತಾವರೆಗೆಡ್ಡೆಯು ಇರುವಂತೆ ಈ ಜಲಕೋಶದಲ್ಲಿ ಕಂದವು ಶಕ್ತಿರೂಪದಲ್ಲಿರುವುದು. ಈ ಶಕ್ತಿರೂಪದಲ್ಲಿರುವ ಕಂದ ಅಥವಾ ಗೆಡ್ಡೆಯ ಸ್ಥಳದಲ್ಲಿ ಎಪ್ಪತ್ತೆರಡುಸಾವಿರ ಸ್ಥೂಲನಾಡಿಗಳೂ ಅಸಂಖ್ಯಾತವಾದ ಸೂಕ್ಷ್ಮನಾಡಿಗಳೂ ಬಂದು ಸೇರುತ್ತವೆ. ಅಂದರೆ ಅನೇಕಾನೇಕ ಕಡೆಗಳಿಂದ ಅಸಂಖ್ಯಾತವಾದ ನಾಡಿಗಳೆಲ್ಲ ಇಲ್ಲಿ ಒಟ್ಟುಗೂಡಿ ಸೇರಿಕೊಂಡು ಇಲ್ಲಿಂದ ವಿಭಾಗವಾಗಿ ಹೊರಡುತ್ತವೆ. ಈ ನಾಡಿಗಳ ಸಮುದಾಯವೇ ಸಮುದ್ರದ ತತ್ವವಾಗಿರುವುದು. ಸಮುದ್ರವು ಜಲನಿಧಿಯಾಗಿರುವಂತೆ ಜಲದ ತತ್ವವಾದ ಸ್ವಾಧಿಷ್ಠಾನಚಕ್ರವು ನಾಡಿಗಳಿಗೆ ನಿಧಿಯಾಗಿರುವುದು. ಪ್ರವಹಿಸಿಕೊಂಡು ಬರುವ ನದಿಗಳಿಗೆಲ್ಲ ಸಮುದ್ರವು ಆಶ್ರಯವಾಗಿರುವುದರಿಂದ "ಸರಿತ್ಪತಿಃ" ಎಂಬ ಹೆಸರು ಬಂದಿರುವುದು. ಅಂದರೆ ದೇಹದಲ್ಲಿರುವ ನಾಡಿಗಳೆಲ್ಲ ಈ ಸ್ವಾಧಿಷ್ಠಾನಚಕ್ರದ ಆಶ್ರಯವನ್ನು ಹೊಂದಿರುವುವೆಂಬ ತತ್ವವಾಗಿರುವುದು. ಈರೀತಿ ಅಸಂಖ್ಯಾತವಾದ ನಾಡಿಗಳು ಸ್ವಾಧಿಷ್ಠಾನಚಕ್ರದಲ್ಲಿ ಶಕ್ತಿರೂಪದಲ್ಲಿರುವ ಕಂದವನ್ನು ಆಶ್ರಯಿಸಿಕೊಂಡಿರುವ ತಾತ್ಪರ್ಯಕ್ಕೆ ತ್ರಿಶಿಖಿಬ್ರಾಹ್ಮಣೋಪನಿಷತ್ತಿನಲ್ಲಿ,

ದಶಪ್ರಕಾರ ಭೂತಾಸ್ತಾಃ ಕಥಿತಾಃ ಕನ್ದ ಸಮ್ಭವಾಃ ।
ತನ್ಮೂಲಾ ಬಹವೋ ನಾಡ್ಯಃ ಸ್ಥೂಲ ಸೂಕ್ಷ್ಮಾಶ್ಚ ನಾಡಿಕಾಃ ।
ದ್ವಾಸಪ್ತತಿ ಸಹಸ್ರಾಣಿ ಸ್ಥೂಲ ಸ್ಸೂಕ್ಷ್ಮಾಶ್ಚ ನಾಡಯಃ ।
ಸಂಖ್ಯಾತುಂ ನೈವ ಶಕ್ಯಂತೇ ಸ್ಥೂಲಮೂಲಾಃ ಪೃಥಗ್ವಿಧಾಃ ।

ತಾ|| ಕಂದವನ್ನು ಆಶ್ರಯಿಸಿಕೊಂಡಿರುವ ಇಡಾ ಮುಂತಾದ ನಾಡಿಗಳು ಹತ್ತು ಪ್ರಕಾರವಾಗಿ ಹೇಳಲ್ಪಟ್ಟಿವೆ. ಈ ಹತ್ತು ನಾಡಿಗಳಿಂದ ಸ್ಥೂಲ ಸೂಕ್ಷ್ಮಗಳಾದ ಅನೇಕ ನಾಡಿಗಳು ಹೊರಡುತ್ತವೆ. ಸ್ಥೂಲನಾಡಿಗಳೇ ಎಪ್ಪತ್ತೆರಡುಸಾವಿರ. ಸೂಕ್ಷ್ಮನಾಡಿಗಳಾದರೋ ಅಸಂಖ್ಯಾತವಾಗಿವೆ. ಎಂದು ಹೇಳಿರುವುದು.

ಆದುದರಿಂದ ಜಲದ ತತ್ವವಾದ ಸ್ವಾಧಿಷ್ಠಾನಚಕ್ರಪ್ರದೇಶವೇ ಸಮುದ್ರದ ತತ್ವವಾಗಿರುವುದು. ಸಮುದ್ರ ಎಂಬ ಮಾತಿಗೂ "ಸಮ್ಯಗುನಕ್ತಿ ಚಂದ್ರೋದಯಾದಿತಿ ಸಮುದ್ರಃ" ಚಂದ್ರೋದಯದ ದೆಸೆಯಿಂದ ವೃದ್ಧಿಯನ್ನೈದುವುದು ಎಂಬ ವ್ಯುತ್ಪತ್ತಿಯಿರುವುದು. ಸಮುದ್ರವು ಹೇಗೆ ಚಂದ್ರೋದಯದಿಂದ ವೃದ್ಧಿಯನ್ನೈದುವುದೋ ಹಾಗೆಯೇ ನಮ್ಮ ದೇಹದಲ್ಲಿರುವ ಚಂದ್ರನಿಂದ ಉತ್ಪನ್ನವಾಗುವ ಅಮೃತರಸದಿಂದ ಈ ನಾಡಿಗಳ ಸಮುದಾಯವು ಅಭಿವೃದ್ಧಿಯಾಗುವುದು. ಅಮೃತೋತ್ಪತ್ತಿಗೆ ಚಂದ್ರನೇ ಕಾರಣನೆಂದು ಹಿಂದೆ ಸುಂದರಕಾಂಡದಲ್ಲಿ ತಿಳಿಸಿದೆ.

ಭೂಮಂಡಲವು ಹೇಗೆ ನೀರಿನಿಂದ ಆವರಿಸಲ್ಪಟ್ಟಿರುವುದೋ, ಹಾಗೆ ಭೂತತ್ವವಾದ ಮೂಲಾಧಾರಚಕ್ರವು ಸಮುದ್ರದ ತತ್ವವಾದ ನಾಡಿಗಳ ಸಮುದಾಯಗಳಿಂದ ಆವರಿಸಲ್ಪಟ್ಟಿರುವುದು. ಇದನ್ನೇ ತಾವರೆಗಿಡದ ಚಿತ್ರಪಠದಲ್ಲಿ ತಕ್ಕಮಟ್ಟಿಗೆ ಬೇರುಗಳ ರೂಪವಾಗಿ ತೋರಿಸಿದೆ. ಈ ಬೇರುಗಳು ಒಂದಕ್ಕೊಂದು ಹೊಂದಿಕೊಂಡು ಸ್ವಲ್ಪವೂ ಸ್ಥಳವಿಲ್ಲದೆ ತೆಂಗಿನಮರದ ಬೇರುಗಳಂತೆ ಸಮುದಾಯವಾಗಿ ಮೂಲಾಧಾರವನ್ನು ಆವರಿಸಿಕೊಂಡಿವೆ. ಅಂದರೆ ಲಂಕೆಯು ಸಮುದ್ರನಿಂದ ಹೇಗೆ ಆವರಿಸಲ್ಪಟ್ಟಿರುವುದೋ ಹಾಗೆಯೇ ಮೂಲಾಧಾರದಚಕ್ರವು ಸಮುದ್ರರೂಪವಾದ ನಾಡೀ ಸಮುದಾಯಗಳಿಂದ ಆವರಿಸಲ್ಪಟ್ಟಿರುವುದು. ಹನುಮಂತನ ಕಾರ್ಯದ ತತ್ವವಾದ ಪ್ರಾಣಾಯಾಮದಲ್ಲಿ ಬಲವಂತದಿಂದ ಶ್ವಾಸೋಚ್ಛ್ವಾಸವು ಸಮುದ್ರದ ತತ್ವದಲ್ಲಿರುವ ನಾಡಿಗಳ ಸಮುದಾಯದೊಳಗೆ ನುಗ್ಗಿ ಮೂಲಾಧಾರಚಕ್ರವನ್ನು ಪ್ರವೇಶಿಸಿತು. ಈಗ ಬುದ್ಧಿತತ್ವಪ್ರಕಾಶಕನಾದ ಶ್ರೀರಾಮನು ಸಮುದ್ರದ ತತ್ವದಲ್ಲಿರುವ ನಾಡಿಗಳನ್ನು ದಾಟಿ ಮೂಲಾಧಾರಚಕ್ರ ಪ್ರದೇಶವನ್ನು ಸೇರಬೇಕು. ಅಂದರೆ ಬುದ್ಧಿವೃತ್ತಿಯು ಪ್ರಾಣವಾಯು ಮುಂತಾದುವುಗಳೊಡನೆ ಸ್ವಾಧಿಷ್ಠಾನದಲ್ಲಿರುವ ನಾಡಿಗಳ ಸಮುದಾಯದೊಳಗೆ ಪ್ರವೇಶಿಸಿ, ಮೂಲಾಧಾರಚಕ್ರ

ವನ್ನು ಸೇರಬೇಕು. ಆದುದರಿಂದ ಶ್ರೀರಾಮನು ನಾಡಿಗಳ ಸಮುದಾಯರೂಪವಾದ ಸಮುದ್ರವನ್ನು ದಾಟಲು ಸಮುದ್ರರಾಜನ ತತ್ವದಲ್ಲಿರುವ ಸಗುಣಬ್ರಹ್ಮಸ್ವರೂಪವನ್ನು ಪ್ರಾರ್ಥಿಸಿದನು.

ಬುದ್ಧಿತತ್ವದಲ್ಲಿರುವ ಶ್ರೀರಾಮನು ಸಮುದ್ರತೀರದಲ್ಲಿ ದರ್ಭಶಯನದಲ್ಲಿ ಪವಡಿಸಿದ ತತ್ವಾರ್ಥವೇನೆಂದರೆ—ಇಂದ್ರಿಯಗಳ ಮೂಲಕ ವಿಷಯಾಕಾರವಾಗಿ ಹೋಗುವ ಬುದ್ಧಿವೃತ್ತಿಯನ್ನು ಹಿಂದಿರುಗಿಸಿ, ಅಂತರ್ಮುಖಕ್ಕೆ ತಿರುಗಿಸಿಕೊಳ್ಳುವುದೇ ಪ್ರತ್ಯಾಹಾರದ ಸ್ವರೂಪವೆಂದು ಹಿಂದಿನ ಪ್ರಕರಣದಲ್ಲಿ ತಿಳಿಸಿತಷ್ಟೆ! ಈ ರೀತಿ ಪ್ರತ್ಯಾಹಾರಮಾಡಿ ಅಂತರ್ಮುಖವಾದ ಬುದ್ಧಿವೃತ್ತಿಯನ್ನು ಹಿಂದಕ್ಕೆಂದರೆ, ಬಹಿರ್ಮುಖವಾಗುವುದಕ್ಕೆ ಬಿಡದೆಯೂ, ಮುಂದೆ ಧ್ಯೇಯಸ್ವರೂಪವಾದ ವಸ್ತುವನ್ನು ಧಾರಣೆಯಿಂದ ಹಿಡಿದುಕೊಳ್ಳದೆಯೂ, ಇರುವ ಸ್ವರೂಪವು ಎಂತಹುದೋ ಅದೇ ದರ್ಭಶಯನದಲ್ಲಿ ಶ್ರೀರಾಮನು ಪವಡಿಸಿದ ಅಂತರಾರ್ಥವಾದ ಧ್ಯಾನಸ್ವರೂಪವಾಗಿರುವುದು. ಅಂದರೆ ದರ್ಭಶಯನದಲ್ಲಿ ಶ್ರೀರಾಮನು ಪವಡಿಸಿದ ತತ್ವವೇ ಧ್ಯಾನಸ್ವರೂಪವಾಗಿರುವುದು. ದರ್ಭಶಯನವೆಂದರೆ ಬುದ್ಧಿಯಿಂದ ಹೊರಟ ಅಂತರ್ಮುಖವಾದ ವೃತ್ತಿಯು ಧ್ಯೇಯಸ್ವರೂಪದ ಆಕಾರವನ್ನು ಧರಿಸಿಕೊಳ್ಳದೆಯೂ, ಹಿಂದಕ್ಕೆ ಬಹಿರ್ಮುಖವಾಗಲು ಹೋಗದೆಯೂ, ಮಧ್ಯದಲ್ಲಿ ತಟಸ್ಥವಾಗಿ ನಿಲ್ಲುವ ಸ್ವರೂಪವೆಂದು ತಿಳಿದುಕೊಳ್ಳಬೇಕು. ಅಂದರೆ, ಜ್ಞಾತೃ, ಜ್ಞಾನ, ಜ್ಞೇಯಗಳೆಂದರೆ ತಿಳಿಯುವವನು, ತಿಳಿವಳಿಕೆ, ತಿಳಿಯುವ ಪದಾರ್ಥವೆಂಬದಾಗಿ ತ್ರಿಪುಟಿ ಇರುವುದಷ್ಟೆ! ಈ ತ್ರಿಪುಟಿಯಲ್ಲಿ ಜ್ಞಾತೃವು ಜ್ಞೇಯಪದಾರ್ಥವನ್ನು ಹಿಡಿದುಕೊಳ್ಳದೆ ಜ್ಞಾನದಲ್ಲಿ ಕೊಂಚ ನಿಲ್ಲುವಿಕೆಯೇ ದರ್ಭಶಯನದ ತತ್ವವಾದ ಧ್ಯಾನದ ಸ್ವರೂಪವು. ದರ್ಭೆಯೆಂದರೆ, ತ್ರಿಪುಟಿಯಲ್ಲಿನ ಜ್ಞಾನ. ಇದರ ಅರ್ಥದ ವಿವರಣೆಯು ಉತ್ತರಕಾಂಡದಲ್ಲಿ ಲವಕುಶರ ಪ್ರಕರಣದಲ್ಲಿ ಬರುವುದು.

ದರ್ಭೆಯಲ್ಲಿ ಪವಡಿಸುವುದೆಂದರೆ ಜ್ಞಾತೃವು ಜ್ಞೇಯವನ್ನು ಸೇರದೆ ಜ್ಞಾನದಲ್ಲಿ ನಿಲ್ಲುವುದಾಗಿರುವುದು. ಹೇಗೆಂದರೆ—ಅಧಿಕಾರಿಯು ಸಮಾಧಿಯ ಅಭ್ಯಾಸಮಾಡಲು ಪ್ರಾರಂಭಿಸಿದಾಗ ಇಂದ್ರಿಯಗಳ ಮೂಲಕ ವಿಷಯಾಕಾರವಾಗಿ ಹೋಗುವ ಬುದ್ಧಿವೃತ್ತಿಯನ್ನು ಅಂತರ್ಮುಖವಾಗಿ ತಿರುಗಿಸಿಕೊಳ್ಳುವನಷ್ಟೆ! ಹೀಗೆ ದೇಹದೊಳಗೆ ಅಂತರ್ಮುಖವಾಗಿ ತಿರುಗಿಸಿಕೊಂಡನಂತರ ಸಗುಣಬ್ರಹ್ಮದ ಪ್ರಭೆಯು ತೋರಿಕೆಯುಂಟಾಗುವುದು. ಈ ಪ್ರಭೆಯು ಧಾರಣೆಗೆ ದೊರಕದೆ, ನಮ್ಮ ದೃಷ್ಟಿಯಿಂದ ಮಾತ್ರ ಪ್ರಥಮದಲ್ಲಿ ನೋಡಲ್ಪಡುವುದು. ಪ್ರಭೆಯೊಳಗೆ ಸಗುಣಬ್ರಹ್ಮಚೈತನ್ಯವಾದ ನಾದ, ಬಿಂದು, ಕಳೆಗಳಲ್ಲಿ ಬಿಂದುವಿರುವುದು. ಇದನ್ನು ನಾವು ಪ್ರಥಮದಲ್ಲಿ ಧಾರಣೆಮಾಡಿಕೊಳ್ಳಬೇಕಾಗುವುದು. ಬುದ್ಧಿವೃತ್ತಿಗೆ ಈ ಬಿಂದುವು ಧಾರಣೆಗೆ ದೊರೆಕದೆಯೂ ಬುದ್ಧಿವೃತ್ತಿಯು ಬಹಿರ್ಮುಖವಾಗದೆಯೂ ಒಳ

ಗಡೆಯ ಪ್ರಭೆಯಲ್ಲಿ ಕೊಂಚ ತಟಸ್ಥವಾಗುವ ಸ್ಥಿತಿಯೇ ಧ್ಯಾನವೆನಿಸಿಕೊಳ್ಳುವುದು. ಇದೇ ದರ್ಭಶಯನದ ತತ್ವ. ಬುದ್ಧಿವೃತ್ತಿಯು ಅಂತರ್ಮುಖವಾದಾಗ ಒಳಗಡೆ ಕಾಣುವ ತೇಜಸ್ಸು ಸಗುಣಬ್ರಹ್ಮಕ್ಕೆ ಸೇರಿದುದು. ಇಂತಹ ಪ್ರಭೆಯು ಸಗುಣಬ್ರಹ್ಮಕ್ಕೆ ಸೇರಿರುವುದರಿಂದ ನಮಸ್ಕಾರಯೋಗ್ಯವಾದುದು. ಸಗುಣಬ್ರಹ್ಮ ಚೈತನ್ಯದ ಪ್ರಭೆಯು ನಮಸ್ಕಾರಯೋಗ್ಯ ವಾದುದೆಂಬ ತತ್ವಾರ್ಥದ ಸೂಚನೆಯೇ ಶ್ರೀರಾಮನು ಸಮುದ್ರಕ್ಕೆ ಕೈಮುಗಿದುದು. ಸಮುದ್ರಗಳಿಗೆಲ್ಲ ಒಡೆಯನಾಗಿ ಸಮುದ್ರರಾಜನೆಂಬುವನು ಹೇಗಿರುವನೋ ಹಾಗೆಯೇ ನಾಡಿಗಳ ಕಾಂತಿಗೆ ಪ್ರಭುವಾಗಿ ಸಗುಣಬ್ರಹ್ಮಚೈತನ್ಯವೆನಿಸಿದ ಬಿಂದುಸ್ವರೂಪವಿರುವುದು. ಸಮುದ್ರರಾಜನು ಪ್ರತ್ಯಕ್ಷವಾಗಬೇಕೆಂದರೆ ಅಧಿಕಾರಿಗೆ ಅಂತರ್ದೃಷ್ಟಿಯಲ್ಲಿ ಸ್ತಿಮಿತ ಬಂದು ನಂತರ ಬಿಂದುಸ್ವರೂಪವು ಗೋಚರವಾಗುವುದೆಂಬ ತತ್ವವಾಗಿರುವುದು.

**ರಾ||** ಶ್ರೀರಾಮನು ದರ್ಭಶಯನದಲ್ಲಿ ಈರೀತಿಯಾಗಿ ಪವಡಿಸಿ ಸಮುದ್ರರಾಜ ನನ್ನು ಪ್ರಾರ್ಥಿಸಿದರೂ ಸಮುದ್ರರಾಜನು ಪ್ರತ್ಯಕ್ಷನಾಗಲಿಲ್ಲ.

**ತತ್ವ||** ಜ್ಞಾತೃವು ಜ್ಞಾನದಲ್ಲಿಯೇ ನಿಂತರೆ ಜ್ಞೇಯವು ದೊರೆಯುವುದಿಲ್ಲ. ಅಂದರೆ ಒಂದು ನದಿಯ ದಡದಲ್ಲಿರುವ ಮನುಷ್ಯನು ಎದುರು ದಡವನ್ನು ಸೇರಲು ನದೀಮಧ್ಯದಲ್ಲಿ ಹೋಗಿ ನಿಂತಾಕ್ಷಣವೆ ಎದುರು ದಡವನ್ನು ಹೇಗೆ ಸೇರಿದಂತಾಗಲಿಲ್ಲವೋ ಹಾಗೆಯೇ ಅಧಿ ಕಾರಿಯು ಪ್ರತ್ಯಾಹಾರಮಾಡಿಕೊಂಡು ಅಂತರ್ಮುಖದಲ್ಲಿ ಕಾಣುವ ತೇಜಸ್ಸಿನಲ್ಲಿ ಬುದ್ಧಿ ವೃತ್ತಿಯನ್ನು ನಿಲ್ಲಿಸಿದಾಕ್ಷಣವೆ ಧ್ಯೇಯಸ್ವರೂಪವಾದ ಬಿಂದುವನ್ನು ಹೊಂದಲಾರನು. ಇದೇ ಶ್ರೀರಾಮನಿಗೆ ಸಮುದ್ರರಾಜನು ಪ್ರತ್ಯಕ್ಷನಾಗಲಿಲ್ಲವೆಂಬುದರ ತತ್ವಾರ್ಥ.

**ರಾ||** ಸಮುದ್ರರಾಜನು ಪ್ರತ್ಯಕ್ಷನಾಗದೆ ಇರುವುದನ್ನು ನೋಡಿ ಶ್ರೀರಾಮನು ಅತ್ಯಂತ ಕೋಪಗೊಂಡು ಪ್ರಳಯಕಾಲಾಗ್ನಿಯಂತೆ ಜ್ವಲಿಸುತ್ತ ಭಯಂಕರವಾದ ಧನು ಸ್ಸನ್ನು ತೆಗೆದುಕೊಂಡು ಕೆಲವು ಬಾಣಗಳನ್ನು ಸಮುದ್ರದಲ್ಲಿ ಪ್ರಯೋಗಿಸಿದರೂ, ಸಮು ದ್ರವು ಅಲ್ಲೋಲಕಲ್ಲೋಲವಾಗಿ ಜಲಪ್ರವಾಹವು ಉಕ್ಕಿಬರುತ್ತಿದ್ದಿತೇ ವಿನಾ ಸಮುದ್ರ ರಾಜನು ಪ್ರತ್ಯಕ್ಷನಾಗಲಿಲ್ಲ. ಇವನ್ನು ನೋಡಿ ಶ್ರೀರಾಮನು ಅಧಿಕವಾದ ಕೋಪದಿಂದ ಪುನಃ ಧನುಸ್ಸನ್ನು ಎಳೆಯುತ್ತಾ ಕೋಪದಿಂದ ನಿಟ್ಟುಸುರುಬಿಡುವುದನ್ನು ಲಕ್ಷ್ಮಣನು ನೋಡಿ, ಉದಾಸೀನಮಾಡಿದರೆ ಲೋಕವೆಲ್ಲವೂ ದಗ್ಧವಾಗುವುದೆಂದು ತಿಳಿದು, ಥಟ್ಟನೆ ಮುಂದೆ ಬಂದು "ಅಣ್ಣಾ ಬೇಡಬೇಡ" ಎಂದು ಶ್ರೀರಾಮನ ಹಸ್ತದಲ್ಲಿದ್ದ ಧನುಸ್ಸನ್ನು ತನ್ನ ಹಸ್ತಗಳಿಂದ ಹಿಡಿದುಕೊಂಡನು.

**ತತ್ವ||** ಶ್ರೀರಾಮನು ಲೋಕವೆಲ್ಲಾ ಅಲ್ಲೋಲಕಲ್ಲೋಲವಾಗುವಂತಹ ಬಾಣ ಗಳನ್ನು ಪ್ರಯೋಗಮಾಡಲು ಯತ್ನಿಸಿದ ಮತ್ತು ಲಕ್ಷ್ಮಣನು ತಡೆದ ತತ್ವವು ನಮ್ಮಲ್ಲಿ

ಹೇಗೆ ಅನ್ವಯಿಸುವುದೆಂದರೆ— ಅಧಿಕಾರಿಯು ಧ್ಯೇಯಸ್ವರೂಪವಾದ ಬಿಂದುವನ್ನು ನೋಡಲು ತನ್ನ ಬುದ್ಧಿಯಿಂದ ನರಗಳ ಶಕ್ತಿಯನ್ನೆಲ್ಲಾ ಬಿಗಿಹಿಡಿದುಕೊಂಡು, ಅಂದರೆ ದೇಹವನ್ನು ಧರಿಸಿರುವ ಓಜಶ್ಶಕ್ತಿಯಿಂದ ಬಲವಂತವಾಗಿ ಬಿಂದುರೂಪವನ್ನು ನೋಡಲು ಹೋಗುವಿಕೆಯೇ ಶ್ರೀರಾಮನು ಧನುಸ್ಸಿನಿಂದ ಭಯಂಕರವಾದ ಬಾಣಗಳನ್ನು ಸಮುದ್ರದಲ್ಲಿ ಎಸೆದುದಾಗಿದೆ. ಹೀಗೆ ನರಗಳನ್ನು ಬಿಗಿಹಿಡಿದುಕೊಂಡು ಬಲವಂತದಿಂದ ತೇಜೋಬಿಂದುವನ್ನು ನೋಡಲು ಹೋದರೆ ಬ್ರಹ್ಮಾಂಡದ ತತ್ವಸ್ವರೂಪವಾದ ನಮ್ಮ ದೇಹವು ಅಲ್ಲೋಲಕಲ್ಲೋಲವಾಗಿ ದಗ್ಧವಾಗುವುದು. ಅಂದರೆ ನರಗಳನ್ನು ಬಿಗಿಹಿಡಿದುಕೊಂಡು ಬಿಂದುವನ್ನು ಪಡೆಯಬೇಕೆಂದು ಅಭ್ಯಾಸಮಾಡಿದರೆ, ಬುದ್ಧಿಭ್ರಮಣೆ ಮುಂತಾದ ರೋಗಗಳಿಂದ ಪೀಡಿತನಾಗಿ ಮನುಷ್ಯನ ದೇಹವು ಕುಗ್ಗುವುದು. ಈ ತತ್ವಾರ್ಥವನ್ನು ಸೂಚಿಸುವುದೇ ಲಕ್ಷ್ಮಣನು, ಅಣ್ಣಾ! ಬೇಡಬೇಡವೆಂದು ಶ್ರೀರಾಮನ ಹಸ್ತದಲ್ಲಿದ್ದ ಧನುಸ್ಸನ್ನು ತಾನು ಹಿಡಿದುಕೊಂಡುದು.

ಮುಖ್ಯತಾತ್ಪರ್ಯವೇನೆಂದರೆ—ನರಗಳನ್ನು ಬಿಗಿಹಿಡಿದುಕೊಂಡು ಧ್ಯೇಯಾಕಾರವಸ್ತುವಾದ ಮತ್ತು ಸಗುಣಬ್ರಹ್ಮಚೈತನ್ಯಸ್ವರೂಪವಾದ ಬಿಂದುವನ್ನು ನೋಡಿ ಧಾರಣೆ ಮಾಡಿಕೊಳ್ಳಲು ಹೋಗುವುದು ಅಪಾಯಕರವೆಂದು ಸೂಚಿಸುತ್ತದೆ. ಹೇಗೆಂದರೆ, ಉಪಾಸಕರು ಶಾಸ್ತ್ರೋಕ್ತವಾದ ಆಸನವನ್ನು ಹಾಕಿಕೊಂಡು, ಅರೆಗಣ್ಣು ಬಿಟ್ಟುಕೊಂಡು, ದೃಷ್ಟಿಯನ್ನು ಭ್ರೂಮಧ್ಯದಲ್ಲಿಟ್ಟು, ಧ್ಯಾನಾಭ್ಯಾಸವೆಂದರೆ ದೇವತೋಪಾಸನೆಮಾಡಲು ಸಾಧಾರಣವಾಗಿ ಪ್ರಾರಂಭಿಸುವರಷ್ಟೆ! ಈರೀತಿಯಾಗಿ ಅವರವರಿಗೆ ಇಷ್ಟವಾದ ದೇವತಾಮೂರ್ತಿಯ ಆಕಾರವನ್ನು ಭ್ರೂಮಧ್ಯದಲ್ಲಿ ತೇಜೋರೂಪಿನಲ್ಲಿ ಭಾವಿಸಿಕೊಂಡು ಆ ದೇವತಾಭಾವವನ್ನು ಬುದ್ಧಿಯಿಂದ ಧಾರಣೆಮಾಡುವ ಅಭ್ಯಾಸಮಾಡುತ್ತಾರೆ. ಹೀಗೆ ಅನುಷ್ಠಾನಮಾಡುವಾಗ ನರಗಳನ್ನು ಬಿಗಿಹಿಡಿದುಕೊಂಡೇ ದೇವತಾಕಾರದ ಭಾವನೆಯನ್ನು ಧರಿಸಿಕೊಂಡಿರಬೇಕಾಗುವುದು. ಈ ವಿಧವಾದ ಅಭ್ಯಾಸದಿಂದ ಬುದ್ಧಿಯು ಬಳಲುವುದಲ್ಲದೆ, ದೇಹದ ನಾಡಿಗಳೂ ಬಳಲುತ್ತವೆ. ಹೀಗೆ ಬಳಲುವ ಸಂಜ್ಞೆಗಳು ಯಾವುವೆಂದರೆ—ಶಿರಸ್ಸಿನಲ್ಲಿರುವ ನರಗಳಿಗೆಲ್ಲಾ ಯಾತನೆಯುಂಟಾಗುವುದು. ನರಗಳು ಬಳಲುವುದರಿಂದ ಶಿರಸ್ಸಿನಲ್ಲಿ ಬೆಂಕಿಯಂತೆ ಕಾವುವುಂಟಾಗುವುದು. ಈ ವಿಧದ ಅನುಷ್ಠಾನವು ಶಾಸ್ತ್ರಸಮ್ಮತವಲ್ಲವೆನ್ನುವುದನ್ನು ಈ ಪ್ರಕರಣದಲ್ಲಿಯೇ ಮುಂದೆ ತಿಳಿಸಿರುವುದು. ಈ ವಿಧವಾದ ಧಾರಣೆಯು ಅಪಾಯಕರವೂ ಅಶಾಸ್ತ್ರೀಯವೂ ಆದರೆ, ಯಾವ ವಿಧವಾದ ಧಾರಣೆಯಿಂದ ದೇವತೋಪಾಸನೆ ಮತ್ತು ತೇಜೋಬಿಂದುಧಾರಣೆಯನ್ನು ಮಾಡಬೇಕೆಂದರೆ—"ಓಂ"ಕಾರಾನುಸಂಧಾನ ಮಾಡಿಕೊಂಡು ದೇವತೋಪಾಸನೆ ಮತ್ತು ಬಿಂದುಧಾರಣೆಯನ್ನು ಮಾಡಬೇಕು.

**ರಾ||** ಶ್ರೀರಾಮನ ಹಸ್ತದಲ್ಲಿದ್ದ ಧನುಸ್ಸನ್ನು ಲಕ್ಷ್ಮಣನು ಹಿಡಿದುಕೊಳ್ಳಲು ಶ್ರೀರಾಮನು ಬ್ರಹ್ಮದಂಡಕ್ಕೆ ಸಮಾನವಾದ ತನ್ನ ಕೋದಂಡವನ್ನು ಬ್ರಹ್ಮಾಸ್ತ್ರಮಂತ್ರ ೨ಿಂದ ಅಭಿಮಂತ್ರಿಸಿ ನಾಣನ್ನೆಳೆದೊಡನೆಯೇ ಸಮುಧ್ರದ ಜಲಪ್ರವಾಹವು ತನ್ನ ಎಲ್ಲೆ ಯನ್ನು ಮೀರಿ ಒತ್ತಿಕೊಂಡು ಬಂತು. ಸಮಸ್ತ ದಿಕ್ಕುಗಳೂ ಮಲಿನವಾದುವು. ನದಿಗಳೂ ಸರೋವರಗಳೂ ಕಲಕಿಹೋದುವು. ಈ ರೀತಿಯಾಗಿ ಅಭಿಮಂತ್ರಿಸಿದ ಬ್ರಹ್ಮಾಸ್ತ್ರವನ್ನು ಸಮುದ್ರರಾಜನ ಮೇಲೆ ಮರುಕದಿಂದ ಪ್ರಯೋಗಿಸಲಾರದೆ ನಿಂತಿರಲು, ಸಮುದ್ರರಾಜನು ತಕ್ಷಣವೇ ಮೇಲಕ್ಕೆದ್ದು ತಾನಾಗಿಯೇ ಶ್ರೀರಾಮನ ಬಳಿಗೆ ಬಂದು ವಿನಯದಿಂದ ಕೈಮುಗಿದು ನಿಂತುಕೊಂಡನು.

**ತತ್ವ||** ನರಗಳನ್ನು ಬಿಗಿಹಿಡಿದುಕೊಂಡು ಬಿಂದುಧಾರಣೆಯನ್ನು ಮಾಡಬಾರ ದೆಂದು ಮೇಲೆ ತಿಳಿಸಿತಷ್ಟೆ! ಈಗ ಶ್ರೀರಾಮನು ಬ್ರಹ್ಮದಂಡಕ್ಕೆ ಸಮಾನವಾದ ಧನುಸ್ಸಿನಲ್ಲಿ ಬ್ರಹ್ಮಾಸ್ತ್ರವನ್ನು ಅನುಸಂಧಾನಮಾಡಿದನೆಂದರೆ, ಬ್ರಹ್ಮದಂಡವೆಂಬ ಧನುಸ್ಸು ಪ್ರತ್ಯೇಕ ಶಕ್ತಿಗೆ ಸೇರಿದುದಾಗಿರಬೇಕು. ಇದು ಜ್ಞಾನಶಕ್ತಿಯ ತತ್ವಕ್ಕೆ ಸೇರಿರುವುದು. ವಸಿಷ್ಠರು ಇಟ್ಟುಕೊಂಡಿದ್ದ ಆಯುಧಕ್ಕೆ ಬ್ರಹ್ಮದಂಡವೆಂದು ಹೆಸರು. ಸತ್ವಸ್ವರೂಪಪ್ರತಿಪಾದಕರಾದ ವಸಿಷ್ಠರ ಆಯುಧವೆಂದರೆ—ಅತ್ಮಸಾಕ್ಷಾತ್ಕಾರವನ್ನುಂಟುಮಾಡುವ ಓಂಕಾರಸ್ವರೂಪವಾದ ಧನುಸ್ಸಾಗಿರುವುದು. ವಸಿಷ್ಠರಿಗೂ ವಿಶ್ವಾಮಿತ್ರರಿಗೂ ಮನಸ್ತಾಪ ಬಂದು ಯುದ್ಧವಾಗಿ ವಿಶ್ವಾಮಿತ್ರರು ಬಿಟ್ಟ ಸರ್ವಾಸ್ತ್ರಗಳನ್ನೂ ಜ್ಞಾನಶಕ್ತಿಸ್ವರೂಪವಾದ ಬ್ರಹ್ಮದಂಡವೊಂದೇ ನುಂಗಿ ವಿಶ್ವಾಮಿತ್ರರನ್ನು ಪರಾಜಯಮಾಡಿತಷ್ಟೆ! ಅನಂತರ ವಿಶ್ವಾಮಿತ್ರರು ವಸಿಷ್ಠರಿಗೆ ಇದ್ದ ಜ್ಞಾನಶಕ್ತಿಯನ್ನು ನೋಡಿ ತಾವೂ ವಸಿಷ್ಠರಂತೆ ಬ್ರಹ್ಮರ್ಷಿಗಳಾಗಬೇಕೆಂದು ಮಹ ತ್ತಪಸ್ಸನ್ನು ಮಾಡಿದರು. ಇವರ ಘೋರತಪಸ್ಸಿಗೆ ಮೆಚ್ಚಿ ಬ್ರಹ್ಮಾದಿಗಳು ಬಂದು ನೀನು ಬ್ರಹ್ಮರ್ಷಿಯಾದೆಯೆಂದು ಹೇಳಿದರೂ ಒಪ್ಪದೆ ವಸಿಷ್ಠರಿಂದಲೇ ಈ ಮಾತು ಬರಬೇಕೆಂದು ವಿಶ್ವಾಮಿತ್ರರು ಹೇಳಿದರು. ಆಗ ವಸಿಷ್ಠರೇ ಬಂದು ನೀನು ಬ್ರಹ್ಮರ್ಷಿಯಾದೆಯೆಂದು ಹೇಳಿದರು. ಇದರ ತಾತ್ಪರ್ಯವೇನೆಂದರೆ—ಆತ್ಮಜ್ಞಾನವಿಲ್ಲದೆ ಕರ್ಮಾಚರಣೆಯಿಂದಲೇ ಬ್ರಹ್ಮರ್ಷಿತ್ವವು ದೊರೆಯುವುದಿಲ್ಲವೆಂದೂ, ವಸಿಷ್ಠರೇ ಬ್ರಹ್ಮರ್ಷಿಯಾದೆಯೆಂದು ವಿಶ್ವಾ ಮಿತ್ರರಿಗೆ ಹೇಳಿದರೆಂದರೆ—ಎಂತಹ ತಪಸ್ವಿಗಳಾದರೂ ಆತ್ಮಜ್ಞಾನ ಪಡೆದನಂತರದಲ್ಲಿಯೇ ಬ್ರಹ್ಮರ್ಷಿತ್ವವಾದ ಆತ್ಮಸಾಕ್ಷಾತ್ಕಾರವುಂಟಾಗುವುದೆಂದೂ ಈ ವಸಿಷ್ಠ ವಿಶ್ವಾಮಿತ್ರರ ಚರಿತ್ರೆಯ ತತ್ವವಾಗಿರುವುದು.

ಆದುದರಿಂದ ಬ್ರಹ್ಮದಂಡಾಯುಧವೆಂಬುದೇ "ಓಂ"ಕಾರಸ್ವರೂಪವಾದ ಧನುಸ್ಸು. ಈ ಓಂಕಾರೋಪಾಸನೆಯ ಸ್ವರೂಪವಾದ ಬ್ರಹ್ಮದಂಡಾಯುಧವನ್ನು ಮುಮುಕ್ಷುವು ಹೊಂದಿದರೆ ಸಕಲ ಕರ್ಮಗಳನ್ನೂ ಮಾಡಿದ ಫಲದೊರೆಯುವುದು. ಅಲ್ಲದೆ ಈ ಓಂಕಾ

ರೋಪಾಸನೆಯ ಮುಂದೆ ಯಾವ ಕರ್ಮವೂ ನಿಲ್ಲುವುದಿಲ್ಲವೆನ್ನುವ ತತ್ವವೇ ವಿಶ್ವಾಮಿತ್ರರು ಬಿಟ್ಟ ಸಕಲ ಬಾಣಗಳನ್ನೂ ವಸಿಷ್ಠರ ಬ್ರಹ್ಮದಂಡಾಯುಧವು ನುಂಗಿದುದಾಗಿರುವುದು. ಆದುದರಿಂದ ಶ್ರೀರಾಮನು ಬ್ರಹ್ಮದಂಡಸ್ವರೂಪವಾದ ಬಾಣವನ್ನು ಅನುಸಂಧಾನಮಾಡಿದ ನೆಂದರೆ—ಅಧಿಕಾರಿಯು ಓಂಕಾರೋಪಾಸನೆಯ ಅನುಸಂಧಾನಮಾಡಲು ಪ್ರಾರಂಭಿಸಿದ ನೆಂಬ ತತ್ವವಾಗಿರುವುದು. ಈ ಓಂಕಾರರೂಪವಾದ ಬಾಣವನ್ನು ಧರಿಸಿದ್ದರಿಂದ ಶ್ರೀರಾಮ ನಿಗೆ ಕೋದಂಡರಾಮನೆಂದು ಹೆಸರು ಬಂದಿರುವುದು. ಕೋದಂಡವೆಂದರೆ, “ಸಾವಿತ್ರೀ ರೂಪಾ ವರ್ಶ್ಮೀ ಓಂಕಾರರೂಪಂ ಧನುಃ ಅಸ್ಯಾಸ್ತೀತಿ ಕೋದಂಡೀ” ಎಂಬದಾಗಿ ಶಿವ ಸಹಸ್ರನಾಮ ಭಾಷ್ಯದಲ್ಲಿ ವ್ಯುತ್ಪತ್ತಿಯಿರುವುದು. ಆದುದರಿಂದ ಕೋದಂಡರಾಮನೆಂದರೆ, ಸೃಷ್ಟಿಸ್ಥಿತಿಯೆಂಬ ಬಂಧನವನ್ನು ದಾಟಿಸಿ ಮೋಕ್ಷವನ್ನು ಕೊಡುವ ಶಕ್ತಿಯುಳ್ಳವನೆಂಬ ತತ್ವವಾಗಿರುವುದು. ಯತಿಗಳು ಹಿಡಿದುಕೊಳ್ಳುವ ದಂಡದ ತತ್ವವೂ ಓಂಕಾರಸ್ವರೂಪ ವಾದ ಬ್ರಹ್ಮದಂಡಕ್ಕೆ ಅನ್ವಯವಾಗುವುದು. ಈ ಓಂಕಾರೋಪಾಸನೆಯೇ ಧನುಸ್ಸೆಂಬ ದಾಗಿ ಮುಂಡಕೋಪನಿಷತ್ತಿನಲ್ಲಿ,

ಪ್ರಣವೋ ಧನುಶ್ಶರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯ ಮುಚ್ಯತೇ |
ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್ ||

ತಾ|| “ಓಂ” ಕಾರವೇ ಧನುಸ್ಸು, ಆತ್ಮನೇ ಶರ, ಪರಬ್ರಹ್ಮನೇ ಲಕ್ಷ್ಯ. ವಿರಕ್ತನೂ ಏಕಾಗ್ರಚಿತ್ತನೂ ಆಗಿ ಬ್ರಹ್ಮರೂಪಲಕ್ಷ್ಯವನ್ನು ಭೇದಿಸಬೇಕು. ಈರೀತಿ ಮಾಡಿದರೆ ಬಾಣವು ಗುರಿಯಲ್ಲಿ ಸೇರಿ ಬ್ರಹ್ಮತ್ವವನ್ನು ಕೊಡುವುದು. ಎಂದು ಹೇಳಿರುವುದು.

ಇಂತಹ ಓಂಕಾರೋಪಾಸನೆಯ ಸ್ವರೂಪವಾದ ಬ್ರಹ್ಮದಂಡವನ್ನು ಬುದ್ಧಿತತ್ವ ಸ್ವರೂಪನಾದ ಶ್ರೀರಾಮನು ಕೋಪದಿಂದ ಸಿಟ್ಟುಸಿರುಬಿಡುತ್ತಾ ಅನುಸಂಧಾನಮಾಡಿದ ನೆಂದರೆ—ಓಂಕಾರೋಪಾಸನೆಯನ್ನು ಉತ್ಸಾಹದಿಂದಲೂ, ಶ್ರದ್ಧೆಯಿಂದಲೂ, ಭಕ್ತಿ ಯಿಂದಲೂ ಅನುಷ್ಠಿಸಬೇಕೆಂಬ ತಾತ್ಪರ್ಯ. ಕಾರಣವೇನೆಂದರೆ, ಓಂಕಾರಸ್ವರೂಪವೇ ನಿರ್ಗುಣಬ್ರಹ್ಮವಾಗಿಯೂ, ಸಗುಣಬ್ರಹ್ಮವಾಗಿಯೂ ಇರುವುದು. ಸಮುದ್ರರಾಜ ನೆಂದರೆ—ಚೈತನ್ಯಸಮುದಾಯಗಳಿಗೆ ಪ್ರಭುವು. ಚೈತನ್ಯಸಮುದಾಯಗಳಿಗೆ ಪ್ರಭು ವೆಂದರೆ—ಸಗುಣಬ್ರಹ್ಮರೂಪನಾದ ಮಾಯಾವಿಷ್ಣು ಅಥವಾ ಮಾಯಾಶಂಭುವೆಂಬ ತತ್ವಾರ್ಥವಾಗಿರುವುದು. ಅಂದರೆ ಸಮುದ್ರರಾಜನು ಸಗುಣಬ್ರಹ್ಮಚೈತನ್ಯವಾದ ನಾದ ಬಿಂದು ಕಳೆಗಳಲ್ಲಿ ಬಿಂದುತತ್ವಸ್ವರೂಪನಾಗಿರುವನು. ಮೋಕ್ಷಾಧಿಕಾರಿಯು ಪ್ರಥಮದಲ್ಲಿ ಸಗುಣಬ್ರಹ್ಮವನ್ನು ಅನುಸರಿಸಿಕೊಂಡೇ ನಿರ್ಗುಣಬ್ರಹ್ಮನನ್ನು ಹೊಂದಬೇಕು. ಅಂದರೆ ಸಗುಣಬ್ರಹ್ಮಸ್ವರೂಪನಾಗಿಯೂ, ನಾದಲಿಂಗಕ್ಕೆ ಕಾರಣನಾಗಿಯೂ, ಇರುವ ಬಿಂದು

ಸ್ವರೂಪವಾದ ಮಾಯಾಶಿವನನ್ನು ಹೊಂದಬೇಕು. ಅಂದರೆ ಓಂಕಾರವನ್ನು ಅನು ಸಂಧಾನಮಾಡಿ, ಬಿಂದುಸ್ವರೂಪವನ್ನು ಪಡೆಯುವುದೇ ಸಮುದ್ರರಾಜನು ಪ್ರತ್ಯಕ್ಷ ವಾದುದಾಗಿರುವುದು. ಈ ಬಿಂದುವಿನ ಸೋಪಾನವನ್ನು ದಾಟಿ ತೇಜೋಂತರ್ಗತ ವಾದ ನಾದಬ್ರಹ್ಮವನ್ನು ಹೊಂದುವುದೇ ಅಗಸ್ತ್ಯರು ಶ್ರೀರಾಮನಿಗೆ ಆದಿತ್ಯಹೃದಯ ವನ್ನು ಉಪದೇಶಮಾಡಿದ ತತ್ವವು. ನಾದಬ್ರಹ್ಮಸ್ವರೂಪವನ್ನು ದಾಟುವುದೇ ರಾವಣನ ನಿಗ್ರಹದ ತತ್ವವಾಗಿರುವುದು. ಸೀತಾದೇವಿಯು ಶ್ರೀರಾಮನ ಬಳಿಗೆ ಬರುವುದೇ ಬಿಂದು ನಾದಗಳು ಕಳೆಯಲ್ಲಿ ಐಕ್ಯವಾಗುವ ತತ್ವವಾಗಿರುವುದು. ಸೀತಾದೇವಿಯು ಅಗ್ನಿಪ್ರವೇಶಮಾಡುವುದೇ ಕಳೆಯು ಪರಬ್ರಹ್ಮನಲ್ಲಿ ಐಕ್ಯವಾಗುವ ತತ್ವವೆಂದರೆ, ಆತ್ಮ ಸಾಕ್ಷಾತ್ಕಾರದ ಸ್ವರೂಪವಾಗಿರುವುದು. ಆದುದರಿಂದ ಓಂಕಾರೋಪಾಸನೆಯ ತತ್ವವನ್ನು ತೋರಿಸುವ ಮುಂದಿನ ಕಥೆಯ ತತ್ವವನ್ನು ಅನುಸರಿಸೋಣ.

**ರಾ||** ಶ್ರೀರಾಮನು ಈರೀತಿಯಾಗಿ ಬ್ರಹ್ಮದಂಡವನ್ನು ಅನುಸಂಧಾನಮಾಡಲು ಸಮುದ್ರರಾಜನು ಹೊಳೆಯುತ್ತಿರುವ ಮುಖಗಳುಳ್ಳ ಸರ್ಪಗಳೊಡನೆ ಕೆಂಪಾದ ಪೂದಂಡೆ ಗಳನ್ನೂ ವಸ್ತ್ರಗಳನ್ನೂ ಧರಿಸಿ, ವೈಡೂರ್ಯರತ್ನಕಾಂತಿಯಂತೆ ತಾನು ಕಾಂತಿಯುಳ್ಳವನಾಗಿ, ಬಡಬಾಗ್ನಿಜ್ವಾಲೆಯಿಂದ ಬೆಳಗುತ್ತ ಬಂದು, ಬಿಲ್ಲು ಬಾಣಗಳನ್ನು ಧರಿಸಿದ್ದ ಶ್ರೀರಾಮ ನನ್ನು ನೋಡಿ, "ಎಲೈ! ಶ್ರೀರಾಮನೆ! ಪೃಥಿವ್ಯಾದಿ ಪಂಚಭೂತಗಳೂ ತಮ್ಮ ತಮ್ಮ ಸ್ವಭಾವದ ಕಾರ್ಯಮರ್ಯಾದೆಯಲ್ಲಿರುವುವಷ್ಟೆ! ಅದರಂತೆ ನಾನೂ ಕೂಡ ಇತರರಿಗೆ ದಾಟ ಲಸಾಧ್ಯನಾಗಿಯೂ, ಅಗಾಧವಾದ ಆಳವುಳ್ಳವನಾಗಿಯೂ ಇರುವುದು ನನ್ನ ಸ್ವಭಾವವೇ ಹೊರತು ಮತ್ತೆ ಬೇರೆಯಲ್ಲ. ಆಳವಿಲ್ಲದೆ ಇತರರಿಂದ ಸುಲಭವಾಗಿ ದಾಟುವುದಕ್ಕೆ ತಕ್ಕಂತೆ ಇದ್ದರೆ ನನ್ನ ಸ್ವಭಾವಕ್ಕೆ ವಿರುದ್ಧವಲ್ಲವೆ ? ಇದಕ್ಕಾಗಿಯೇ ನಾನು ನಿನಗೆ ಜಾಗ್ರತೆ ಯಾಗಿ ಕಾಣಿಸಿಕೊಳ್ಳದೆ ಇದ್ದೆನು." ಎಂದು ಹೇಳಿದನು.

**ತತ್ವ||** ಪೃಥ್ವಿ, ಅಪ್ಪು, ಮುಂತಾದುವುಗಳು ತಾವು ಹೊಂದಿರುವ ಕಾರ್ಯಗಳ ಮರ್ಯಾದೆಗಳನ್ನು ಬಿಡದೆ ಇರುತ್ತವಷ್ಟೆ! ಇದರಂತೆ ನಾಡಿಗಳ ಸಮುದಾಯಗಳಿಗೆ ಪ್ರಭು ವಾದ ಬಿಂದುವು ತನ್ನ ಮರ್ಯಾದೆಯನ್ನು ಉಳಿಸಿಕೊಂಡಿರುವುದು. ಅಂದರೆ ನಾಡಿಗಳ ಸಮುದಾಯಗಳಿಗೆ ಪ್ರಭುವಾದ ತೇಜೋಬಿಂದುವನ್ನು ಹೊಂದಲು ಅದಕ್ಕೆ ಸರಿಯಾದ ಅನುಷ್ಠಾನಮಾಡಬೇಕು. ಹೀಗೆ ಮಾಡದಿದ್ದರೆ ಧ್ಯಾನ ಧಾರಣೆಗಳಲ್ಲಿ ಅಂತರ್ಮುಖದಲ್ಲಿ ಬಿಂದುಧಾರಣೆಯು ದೊರಕುವುದಿಲ್ಲವೆಂಬ ತತ್ವವೇ ಸಮುದ್ರರಾಜನು ಪ್ರಥಮದಲ್ಲಿ ಪ್ರತ್ಯಕ್ಷನಾಗದೆ ಇದ್ದುದಾಗಿದೆ. ಶ್ರೀರಾಮನು ಬ್ರಹಾಸ್ತ್ರವನ್ನು ಅನುಸಂಧಾನಮಾಡಿದ ತಕ್ಷಣವೇ ಸಮುದ್ರರಾಜನು ಪ್ರತ್ಯಕ್ಷನಾಗಿ ಬಂದ ತತ್ವದಂತೆ ಅಧಿಕಾರಿಯು ಓಂಕಾರೋ ಪಾಸನೆಯ ಅನುಷ್ಠಾನಕ್ಕೆ ಪ್ರಾರಂಭಿಸಿದ ತಕ್ಷಣವೇ ಅಂತರ್ಮುಖದಲ್ಲಿ ಬಿಂದುವನ್ನು

ನೋಡುವನು. ಅಂದರೆ " ಓಂ " ಕಾರೋಪಾಸನೆಯ ಅನುಸಂಧಾನದಿಂದ ಬಿಂದುವನ್ನು ಹೊಂದಬೇಕಲ್ಲದೆ, ನರಗಳನ್ನು ಬಿಗಿಹಿಡಿದುಕೊಂಡು ಉಪಾಸನೆಮಾಡಬಾರದೆಂಬ ತತ್ವ ವಾಗಿರುವುದು. ಸರಿಯಾದ ಅಧಿಕಾರಿಯೂ, ಅನುಷ್ಠಾನವೂ ಇಲ್ಲದಿದ್ದರೆ ಬಿಂದುವನ್ನು ಪಡೆಯದಿರುವುದು ಸ್ವಭಾವವಾಗಿರುತ್ತದೆ. ಸರಿಯಾದ ಅಧಿಕಾರವೆಂದರೆ ಯೋಗ್ಯತೆ ಮತ್ತು ಕಾರ್ಯಸಾಧನೆಗಳಿಲ್ಲದಿದ್ದರೆ ಯಾವ ಕಾರ್ಯದ ಫಲವೂ ದೊರಕುವುದಿಲ್ಲವಷ್ಟೆ! ಇದರಂತೆ ಶ್ರೀರಾಮನು ಬ್ರಹ್ಮಾಸ್ತ್ರವನ್ನು ಅನುಸಂಧಾನಮಾಡಿದ ಹೊರತು ಸಮುದ್ರರಾಜನು ಪ್ರತ್ಯಕ್ಷನಾಗದೆ ಇದ್ದುದು ಸ್ವಭಾವವಾಗಿರುವುದು. ಅಂದರೆ ಶಾಸ್ತ್ರವು ವಿಧಿಸಿರುವಂತೆ " ಓಂ "ಕಾರಾನುಸಂಧಾನದಿಂದ ಸಮಾಧಿಯ ಅನುಷ್ಠಾನಮಾಡಿದರೆ ಬಿಂದುವು ಲಭಿಸು ವುದು. ಈ ಶಾಸ್ತ್ರವಿಧಿಯನ್ನು ಅನುಸರಿಸದೆ ಇದ್ದರೆ ಸಮಾಧಿಯ ಅನುಷ್ಠಾನ ಯಾರಿಗೂ ಸಿದ್ಧಿಸುವುದಿಲ್ಲವೆಂಬ ತಾತ್ಪರ್ಯ.

ಸಮುದ್ರರಾಜನು ಕೆಂಪುವಸ್ತ್ರಗಳನ್ನು ಧರಿಸಿ ವೈಡೂರ್ಯರತ್ನಕಾಂತಿಯಂತೆಯೂ ಅಗ್ನಿಕಾಂತಿಯಂತೆಯೂ ಬೆಳಗುತ್ತಲಿದ್ದನೆಂದರೆ—ಸಮಾಧಿಯಲ್ಲಿ ಪ್ರಥಮದಲ್ಲಿ ಕಾಣುವ ಬಿಂದುವಿನ ತೇಜಸ್ಸು ಸೂರ್ಯೋದಯಕಾಲದ ಬಣ್ಣದ ಸ್ವರೂಪವಾಗಿ, ವೈಡೂರ್ಯದಂತೆ ಹೊಳೆಯುತ್ತಿರುವುದೆಂಬ ತಾತ್ಪರ್ಯ. ಸಮುದ್ರರಾಜನು ಹೊಳೆಯುತ್ತಿರುವ ಮುಖಗಳುಳ್ಳ ಸರ್ಪಗಳೊಡನೆ ಬಂದನೆಂದರೆ —ಭುಜಂಗರೂಪವಾದ ಕುಂಡಲಿನೀಶಕ್ತಿಯೊಡನೆ ಸಗುಣ ಬ್ರಹ್ಮಚೈತನ್ಯನಾದ ಮಹಾದೇವನೆಂದರೆ ಬಿಂದುಸ್ವರೂಪವು ಇರುವುದೆಂಬ ತಾತ್ಪರ್ಯವಾಗಿ ರುವುದು. ಅಂದರೆ "ಓಂ"ಕಾರೋಪಾಸನೆಯ ಅನುಷ್ಠಾನ ಪ್ರಾರಂಭಮಾಡಿದಾಗ ನಾಗ ಮಾತೆಯಾದ ಕುಂಡಲಿನೀಶಕ್ತಿಯು ಸ್ವಸ್ಥಾನದಿಂದ ಚಲಿಸಿ ಚಿತ್ರಪಥದಲ್ಲಿ ತೋರಿಸಿರು ವಂತೆ ಬ್ರಹ್ಮರಂಧ್ರದಲ್ಲಿ ಪ್ರವೇಶಿಸಲು ಪ್ರಾರಂಭವಾಗುವುದು.

ಈ ಓಂಕಾರೋಪಾಸನೆಯ ಅನುಸಂಧಾನದಿಂದ ಸಮಾಧಿಯ ಅಭ್ಯಾಸಮಾಡತಕ್ಕ ವರು ಸಗುಣಬ್ರಹ್ಮರೂಪವಾದ ನಾದಬಿಂದುಕಳೆಗಳನ್ನು ಹೊಂದಿ ಅನಂತರ ಕ್ರಮಕ್ರಮ ವಾಗಿ ಒಂದೊಂದನ್ನೂ ದಾಟಿಕೊಂಡು ಆತ್ಮಸಾಕ್ಷಾತ್ಕಾರವನ್ನು ಸುಲಭವಾಗಿ ಪಡೆಯು ವರು. "ಓಂ"ಕಾರೋಪಾಸನೆಯ ಅನುಸಂಧಾನವಿಲ್ಲದೆ ಸಮಾಧಿಸ್ಥಿತಿಯನ್ನು ಸಿದ್ಧಿಸಿ ಕೊಳ್ಳುವುದು ಅಸಾಧ್ಯವಾಗಿಯೂ, ಅಪಾಯಕರವಾಗಿಯೂ, ಅಶಾಸ್ತ್ರೀಯವಾಗಿಯೂ ಇರು ವುದು. ಆದುದರಿಂದ,

" ಓಮಿತ್ಯನೇನೈ ವಾಕ್ಷರೇಣ ಪರಂಪುರುಷ ಮಭಿಧ್ಯಾಯೀತ "

ಎಂಬ ಮತ್ತು ಇನ್ನೂ ಅನೇಕ ಶ್ರುತಿಪ್ರಮಾಣಗಳಂತೆ "ಓಂ"ಕಾರದ ಅನುಸಂಧಾ ನದಿಂದಲೇ ಪರಮಪುರುಷನನ್ನು ಏಕಾಗ್ರತೆಯಿಂದ ಧ್ಯಾನಿಸಬೇಕೆಂಬ ತತ್ವವೇ

ಶ್ರೀರಾಮನು ಬ್ರಹ್ಮದಂಡಸ್ವರೂಪವಾದ ಬಾಣವನ್ನು ಅನುಸಂಧಾನಮಾಡಿರುವ ಮತ್ತು ಸಮುದ್ರರಾಜನು ಶ್ರೀರಾಮನನ್ನು ಕುರಿತು ಹೇಳಿರುವುದರ ತತ್ವವಾಗಿರುವುದು.

**ರಾ||** ಸಮುದ್ರರಾಜನ ಮಾತನ್ನು ಕೇಳಿದ ನಂತರ ಶ್ರೀರಾಮನು ನಾನು ತೊಟ್ಟಿರುವ ಬಾಣವು ವ್ಯರ್ಥವಾಗಬಾರದು ; ಈ ಬಾಣವನ್ನು ಯಾವ ಪ್ರದೇಶಕ್ಕೆ ಪ್ರಯೋಗಿಸಲೆಂದು ಸಮುದ್ರರಾಜನನ್ನು ಕೇಳಿದನು. ಅದಕ್ಕೆ ಸಮುದ್ರರಾಜನು "ಎಲೈ ಶ್ರೀರಾಮನೆ! ನೀನು ಹೇಗೆ ಪ್ರಸಿದ್ಧನಾಗಿರುವೆಯೋ ಹಾಗೆಯೇ ಉತ್ತರದಿಕ್ಕಿನಲ್ಲಿ ಪ್ರಸಿದ್ಧವಾದ ಪುಣ್ಯಕರವಾದ ಪ್ರದೇಶವಿರುವುದು. ಆ ಪ್ರದೇಶದಲ್ಲಿ ಕ್ರೂರಕರ್ಮಿಗಳಾದ ಬೇಡರಿರುವರು. ಅವರು ಮಹಾಪಾಪಿಗಳಾಗಿ ನನ್ನ ಉದಕವನ್ನು ಪಾನಮಾಡುತ್ತಿದಾರೆ. ಅವರು ಬಂದು ಮುಟ್ಟುವುದನ್ನೂ ನಾನು ಸಹಿಸಲಾರೆನು. ನಿನ್ನ ಬಾಣವು ವ್ಯರ್ಥವಾಗದಂತೆ ಆ ಪ್ರದೇಶಕ್ಕೆ ಗುರಿಮಾಡಿ ಬಿಡು" ಎಂಬದಾಗಿ ಹೇಳಿದನು.

ಶ್ರೀರಾಮನು ಸಮುದ್ರರಾಜನ ಮಾತಿನಂತೆ ತಾನು ಅನುಸಂಧಾನಮಾಡಿದ್ದ ಬ್ರಹ್ಮಾಸ್ತ್ರವನ್ನು ಬಿಟ್ಟನು. ಬಿಟ್ಟಬಾಣದಿಂದ ಬೇಡರೆಲ್ಲರೂ ಯಮಸಟ್ಟಣವನ್ನೈದಿದರು. ಉರಿಯುತ್ತಿರುವ ಸಿಡಿಲಿಗೆ ಸಮಾನವಾದ ಬಾಣವು ಯಾವ ಪ್ರದೇಶದಲ್ಲಿ ಬಿತ್ತೋ ಆ ಸ್ಥಳದಲ್ಲಿ ಭೂಮಿಯು ಗುಡುಗಿ ಶಬ್ದವು ಹುಟ್ಟಿತಲ್ಲದೆ ಪಾತಾಳದಿಂದ ಮೇಲಕ್ಕೆ ನೀರು ಹಾರಿ ಉಕ್ಕಿತು. ಆ ಪ್ರದೇಶವು ವ್ರಣಕೂಪವೆಂದು ಪ್ರಸಿದ್ಧಿಗೊಂಡಿತು. ಈ ಪ್ರದೇಶದಲ್ಲಿ ಶ್ರೀರಾಮನ ಬಾಣದ ಬೀಳುವಿಕೆಯಿಂದ ಕುಕ್ಷಿಸ್ಥಳದಂತೆ ಇರುವ ಸ್ಥಳದ ಉದಕಗಳು ಶೋಷಿಸಲ್ಪಟ್ಟುವು. ಹೀಗೆ ಉದಕಗಳು ಶೋಷಿಸಲ್ಪಟ್ಟದ್ದರಿಂದ ಈ ಕುಕ್ಷಿಸ್ಥಳವು ಮರುಕಾಂತಾರವೆಂಬ ಕಾಡಾಯಿತು. ಈ ಕುಕ್ಷಿಸ್ಥಳವು ಮರುಕಾಂತಾರವಾಗಲು ಶ್ರೀರಾಮನು ನೋಡಿ ಅಲ್ಪರೋಗವುಳ್ಳದಾಗಿ ಅಮೃತಮಯವಾಗಿರುವಂತೆ ವರವನ್ನು ಕೊಡಲು ಅದರಂತೆ ಆ ಮರುಕಾಂತಾರವು ಪ್ರಸಿದ್ಧಿಯಾಯಿತು.

**ತತ್ವ||** ಸಮುದ್ರರಾಜನು ಹೇಳಿರುವ ಮತ್ತು ಶ್ರೀರಾಮನು ನಡೆಸಿರುವ ಕಾರ್ಯಗಳ ತತ್ವಗಳು ಅಧಿಕಾರಿಯು ಅನುಸಂಧಾನಮಾಡಬೇಕೆಂದು ಹೊರಟಿರುವ "ಓಂ"ಕಾರೋಪಾಸನೆಯನ್ನು ಯಾವ ವಿಧದಿಂದ ಮಾಡಬೇಕೆಂಬುದನ್ನು ಸೂಚಿಸುತ್ತದೆ. ಆದುದರಿಂದ ಈ ಕಥೆಯಲ್ಲಿರುವ ತತ್ವಗಳನ್ನು ಒಂದೊಂದಾಗಿ ತೆಗೆದುಕೊಳ್ಳೋಣ.

ಸಮುದ್ರರಾಜನು ಹೇಳಿರುವ ದ್ರುಮಕುಲ್ಯದ ತತ್ವವೇನೆಂದರೆ—ದ್ರುಮವೆಂದರೆ ಶಾಖೆಗಳುಳ್ಳ ಮರಗಳು, ಕುಲ್ಯವೆಂದರೆ,—"ಕೊಲತಿ ಸಂಸ್ತ್ಯಾಯತಿ ಇತಿ ಕುಲ್ಯಂ ಕುಲ ಸಂಸ್ತ್ಯಾನೆ" ಕೂಡಿಕೊಂಡಿರುವುದು ಎಂದರ್ಥ. ಶಾಖೆಗಳುಳ್ಳ ಮರಗಳು ಒಂದಕ್ಕೊಂದು ಕೂಡಿ ಹೆಣೆದುಕೊಂಡಂತೆ ಇರುವ ತತ್ವವು ನಮ್ಮಲ್ಲಿ ಯಾವುವೆಂದರೆ—

ಶಕ್ತಿರೂಪದಲ್ಲಿರುವ ಷಟ್ಚಕ್ರಗಳು ಅಥವಾ ಗ್ರಂಥಿಗಳು. ಅಂದರೆ ಷಟ್ಚಕ್ರಗಳೇ ಮರಗಳ ತತ್ವದಲ್ಲಿರುವುವು. ಷಟ್ಚಕ್ರಗಳಿಂದ ಅನೇಕಾನೇಕ ನಾಡಿಗಳ ವಿಭಾಗಗಳು ಹೊರಡುತ್ತವೆ. ಹೀಗೆ ಷಟ್ಚಕ್ರಗಳಿಂದ ಹೊರಟ ನಾಡಿಗಳ ಶಾಖೋಪಶಾಖೆಗಳು ದೇಹದಲ್ಲೆಲ್ಲಾ ವ್ಯಾಪಿಸಿ ಒಂದಕ್ಕೊಂದು ಹೆಣೆದುಕೊಂಡಿರುವುವು. ಈ ಷಟ್ಚಕ್ರಸ್ವರೂಪವೇ ದ್ರುಮಕುಲ್ಯದ ತತ್ವವಾಗಿರುವುದು. ಈ ಷಟ್ಚಕ್ರಸ್ಥಳಗಳೇ ಮೂರು ಖಂಡಗಳಾಗಿರುವುವು. ಈ ಖಂಡಗಳೇ ಗ್ರಂಥಿಗಳೆನಿಸಿಕೊಳ್ಳುವುವು. ಇವುಗಳೇ ಬ್ರಹ್ಮಗ್ರಂಥಿ ವಿಷ್ಣುಗ್ರಂಥಿ ರುದ್ರಗ್ರಂಥಿಗಳು. ಬ್ರಹ್ಮಗ್ರಂಥಿಯು "ಓಂ"ಕಾರವಲ್ಲಿನ "ಅ"ಕಾರವಾಗಿಯೂ ವಿಷ್ಣುಗ್ರಂಥಿಯು "ಓಂ"ಕಾರವಲ್ಲಿನ "ಉ"ಕಾರವಾಗಿಯೂ, ರುದ್ರಗ್ರಂಥಿಯು "ಓಂ" ಕಾರವಲ್ಲಿನ "ಮ" ಕಾರವಾಗಿಯೂ ಇರುತ್ತವೆ. ಈ ಗ್ರಂಥಿಗಳು ಕ್ರಮವಾಗಿ ಮೂಲಾಧಾರ ಅನಾಹತ ಆಜ್ಞಾ ಚಕ್ರಗಳ ಸ್ವರೂಪವಾಗಿವೆಯೆಂದು ಅರಣ್ಯಕಾಂಡದ ಅಗಸ್ತ್ಯಾಶ್ರಮ ಪ್ರಕರಣದಲ್ಲಿ ಶ್ರುತಿ ಪ್ರಮಾಣದೊಡನೆ ಬರೆದಿರುವುದನ್ನು ಅನ್ವಯಮಾಡಿ ತಿಳಿದುಕೊಳ್ಳಬೇಕು.

ದ್ರುಮಕುಲ್ಯವು ಉತ್ತರದಿಕ್ಕಿನಲ್ಲಿರುವುದೆಂದರೆ--ಉತ್ತರವೆಂದರೆ ದಾಟುವುದೆಂದು ಅರ್ಥ. ಅಂದರೆ ಪ್ರಪಂಚವ್ಯವಹಾರವನ್ನು ದಾಟಿ ಮೋಕ್ಷವನ್ನು ಹೊಂದುವ ದಿಕ್ಕೆಂಬ ತತ್ವವಾಗಿರುವುದು. ನಮ್ಮಲ್ಲಿ ಪ್ರಪಂಚವ್ಯವಹಾರವನ್ನು ದಾಟಿ ಮೋಕ್ಷವನ್ನು ಹೊಂದುವ ದಿಕ್ಕು ಯಾವುದೆಂದರೆ—ಮೂಲಾಧಾರದಿಂದ ಪ್ರಾರಂಭವಾಗಿ ಸಹಸ್ರಾರಕಮಲದವರೆಗೂ ಇರುವ ಬ್ರಹ್ಮರಂಧ್ರದ ಮಾರ್ಗವು. ಈ ಮಾರ್ಗವೇ ಸುಷುಮ್ನಾನಾಡಿಯು. ಈ ನಾಡಿಯೊಳಗಿರುವ ದ್ವಾರವೇ ಬ್ರಹ್ಮರಂಧ್ರದ ಮಾರ್ಗಕ್ಕೆ ಅನ್ವಯವಾಗಿರುವುದು. ಆದುದರಿಂದ ಷಟ್ಚಕ್ರಸ್ವರೂಪವೇ ದ್ರುಮಕುಲ್ಯದ ತತ್ವವಾಗಿರುವುದು. ಶ್ರೀರಾಮನು ಹೇಗೆ ಪ್ರಸಿದ್ಧನಾಗಿರುವನೋ ಹಾಗೆ ಉತ್ತರದಿಕ್ಕಿನಲ್ಲಿರುವ ದ್ರುಮಕುಲ್ಯವು ಪ್ರಸಿದ್ಧಿಯಾಗಿರುವುದೆಂದರೆ –ಶ್ರೀರಾಮನು ಹೇಗೆ ಪರಬ್ರಹ್ಮಸ್ವರೂಪನೆಂದು ಪ್ರಸಿದ್ಧನಾಗಿರುವನೋ ಹಾಗೆ ಅವನನ್ನು ಹೊಂದುವ ದಾರಿಯಾದ ಬ್ರಹ್ಮರಂಧ್ರನಾಡಿ ಮತ್ತು ಸಗುಣಬ್ರಹ್ಮಚೈತನ್ಯದ ವಿಭಾಗಗಳಾದ ಬ್ರಹ್ಮ ವಿಷ್ಣು ರುದ್ರಗ್ರಂಥಿಗಳು ಪ್ರಸಿದ್ಧವಾಗಿರುವುವೆಂಬ ತಾತ್ಪರ್ಯ.

ಈ ದ್ರುಮಕುಲ್ಯದಲ್ಲಿ ಮಹಾ ಕ್ರೂರಕರ್ಮಿಗಳಾದ ಬೇಡರಿರುವರು. ಅವರು ಮಹಾಪಾಪಿಗಳಾಗಿ ನನ್ನ ಉದಕವನ್ನು ಪಾನಮಾಡುತ್ತಿರುವರು. ಅವರನ್ನು ನಿನ್ನ ಬಾಣದಿಂದ ನಿಗ್ರಹಿಸೆಂದು ಶ್ರೀರಾಮನಿಗೆ ಸಮುದ್ರರಾಜನು ಹೇಳಿದುದರ ತತ್ವವೇನೆಂದರೆ--ದ್ರುಮಕುಲ್ಯವೆಂದರೆ ಷಟ್ಚಕ್ರಗಳ ಸ್ವರೂಪವೆಂದು ಮೇಲೆ ತಿಳಿಸಿತಷ್ಟೆ! ಈ ಷಟ್ಚಕ್ರಸ್ವರೂಪದಲ್ಲಿ ಕ್ರೂರಕರ್ಮಿಗಳಾದ ಬೇಡರ ತತ್ವದಲ್ಲಿರುವುದೇ ಮೂಲಾಧಾರಚಕ್ರ ಅಥವಾ ಬ್ರಹ್ಮಗ್ರಂಥಿಯಾಗಿರುವುದು. ಹೇಗೆಂದರೆ, ಬ್ರಹ್ಮಗ್ರಂಥಿಯು "ಓಂ" ಕಾರವಲ್ಲಿನ "ಅ"

ಕಾರ ಅಥವಾ ವಿಶ್ವತ್ವವೆನಿಸಿಕೊಳ್ಳುವುದಷ್ಟೆ! ವಿಶ್ವತ್ವವೆಂದರೆ, ಪ್ರಪಂಚವ್ಯಾಪಾರಕ್ಕೆ ಕಾರಣವಾದ ಜ್ಞಾನವುಂಟಾಗುವುದೆಂಬ ತಾತ್ಪರ್ಯವಾಗಿರುವುದು. ಅಂದರೆ ಪ್ರಪಂಚವ್ಯಾಪಾರಕ್ಕೆ ಕಾರಣವಾದ ಶಕ್ತಿಗಳು ಬ್ರಹ್ಮಗ್ರಂಥಿಯಲ್ಲಿರುವುವೆಂಬ ತಾತ್ಪರ್ಯ. ಈ ಶಕ್ತಿಗಳು ಯಾವಾಗಲೂ ಪ್ರಪಂಚವ್ಯಾಪಾರಸ್ವರೂಪವಾದ ಬೇಟೆಯನ್ನಾಡುತ್ತಿರುವುದರಿಂದಲೂ, ಸಗುಣಬ್ರಹ್ಮಚೈತನ್ಯವನ್ನು ಪ್ರಪಂಚವ್ಯಾಪಾರದ ಕಡೆಗೇ ಎಳೆಯುತ್ತಿರುವುದರಿಂದಲೂ ಕ್ರೂರಕರ್ಮಿಗಳಾದ ಬೇಡರ ತತ್ವದಲ್ಲಿರುವುವು. ಶ್ರೀರಾಮನು ಬ್ರಹ್ಮಾಸ್ತ್ರದಿಂದ ಬಾಣಪ್ರಯೋಗಮಾಡಿ ಇಂತಹ ಬೇಡರನ್ನು ನಿಗ್ರಹಿಸುವುದೆಂದರೆ—"ಓಂ" ಕಾರೋಚ್ಚಾರಣೆಯನ್ನು ಬ್ರಹ್ಮಗ್ರಂಥಿಯಾದ ಮೂಲಾಧಾರದಿಂದ ಎಳೆದುಕೊಂಡರೆ ಪ್ರಪಂಚವ್ಯಾಪಾರಕ್ಕೆ ಉಪಯೋಗವಾಗುತ್ತಿದ್ದ ಬ್ರಹ್ಮಗ್ರಂಥಿಯಲ್ಲಿರುವ ಶಕ್ತಿಗಳು ನಿರ್ವೀರ್ಯವಾಗುತ್ತವೆ. ಈ ತತ್ವಾರ್ಥವೇ ಶ್ರೀರಾಮನು ಕ್ರೂರಕರ್ಮಿಗಳಾದ ಬೇಡರನ್ನು ನಿಗ್ರಹಿಸಿದ್ದಾಗಿದೆ. ಅಂದರೆ "ಓಂ" ಕಾರೋಪಾಸನೆಯನ್ನು ಪ್ರಾರಂಭಮಾಡಿದಾಗ "ಓಂ" ಕಾರೋಚ್ಚಾರಣೆಯನ್ನು ಮೂಲಾಧಾರದಿಂದಲೂ ಅನುಸಂಧಾನಮಾಡಬೇಕೆಂಬ ತತ್ವಾರ್ಥವೇ ದ್ರುಮಕುಲ್ಯ ಮತ್ತು ಬೇಡರ ನಿಗ್ರಹದ ತತ್ವವಾಗಿರುವುದು. ಈ ವಿಧವಾಗಿ "ಓಂ" ಕಾರೋಚ್ಚಾರಣೆಯನ್ನು ಅನುಸಂಧಾನಮಾಡುವುದರಿಂದ ಬಾಹ್ಯವ್ಯವಹಾರಾಭಿಮುಖವಾಗಿರುವ ಶಕ್ತಿಗಳು ಅಂತರ್ಮುಖವಾಗುವವು.

ನಿನ್ನ ಬಾಣವು ವ್ಯರ್ಥವಾಗದಂತೆ ಬಿಡೆಂದು ಸಮುದ್ರರಾಜನು ಶ್ರೀರಾಮನಿಗೆ ಹೇಳಿದುದರ ಅಂತರಾರ್ಥವೇನೆಂದರೆ—ಖಂಡಿತವಾಗಿಯೂ ತಪ್ಪದೆ "ಓಂ" ಕಾರೋಚ್ಚಾರಣೆಯನ್ನು ಮೂಲಾಧಾರವೆಂದರೆ "ಓಂ" ಕಾರದಲ್ಲಿನ "ಅ" ಕಾರದಿಂದಲೂ ಚೆನ್ನಾಗಿ ಅನುಸಂಧಾನಮಾಡಬೇಕೆಂಬ ತತ್ವವಾಗಿರುವುದು.

ಉರಿಯುತ್ತಿರುವ ಸಿಡಿಲಿಗೆ ಸಮಾನವಾದ ಶ್ರೀರಾಮನ ಬಾಣವು ಯಾವ ಸ್ಥಳವಲ್ಲಿ ಬಿದ್ದಿತೋ ಆ ಸ್ಥಳದಲ್ಲಿ ಭೂಮಿಯು ಗುಡುಗಿ ಶಬ್ದವು ಹಟ್ಟಿತಲ್ಲದೆ ಪಾತಾಳದಿಂದ ಮೇಲಕ್ಕೆ ನೀರು ಹಾರಿ ಉಕ್ಕಿತೆಂದು ಹೇಳಿರುವುದರ ಅಂತರಾರ್ಥವೇನೆಂದರೆ--ಮೂಲಬಂಧವನ್ನುಂಟುಮಾಡುವ ಶಕ್ತಿಚಲನಪ್ರಾಣಾಯಾಮದ ಅನುಷ್ಠಾನಕ್ಕೆ ಕುಳಿತುಕೊಳ್ಳುವ ವಿಧಾನದ ಪದ್ಮಾಸನದಲ್ಲಾಗಲಿ ಸಿದ್ಧಾಸನದಲ್ಲಾಗಲಿ ಕುಳಿತು ಮೂಲಾಧಾರದಲ್ಲಿರುವ "ಅ" ಕಾರಸ್ವರೂಪವಾದ ಬ್ರಹ್ಮಗ್ರಂಥಿಯನ್ನು "ಓಂ" ಕಾರೋಚ್ಚಾರಣೆಯಿಂದ ಚೆನ್ನಾಗಿ ಅನುಸಂಧಾನಮಾಡುವುದರಿಂದ ನಮ್ಮ ಪಾದದ ಅಂಗುಷ್ಠದಾರಭ್ಯ ಇರುವ ಬ್ರಹ್ಮಗ್ರಂಥಿಯ ಬೇರುಗಳ ಶಕ್ತಿಗಳು ಮೇಲಕ್ಕೇಳುವುವು. ಅಂದರೆ ಪಾತಾಳಲೋಕದ ತತ್ವವಾದ ಪಾದದ ಅಂಗುಷ್ಠದಾರಭ್ಯ ಇರುವ ನಾಡಿಗಳ ಪ್ರಕಾಶವು ಮೇಲಕ್ಕೆ ಬಂದು

"ಓಂ" ಕಾರೋಚ್ಚಾರಣೆಯ ಶಬ್ದವನ್ನು ಸೇರುವುದೇ ಶ್ರೀರಾಮನ ಬಾಣದ ಹೊಡೆತಕ್ಕೆ ಪಾತಾಳದಿಂದ ನೀರು ಉಕ್ಕಿಬಂದುದರ ಅಂತರಾರ್ಥವಾಗಿರುವುದು.

ಬಾಣವು ಬಿದ್ದ ಸ್ಥಳದಲ್ಲಿ ಭೂಮಿಯು ಗುಡುಗಿ ಶಬ್ದವು ಹುಟ್ಟುವುದೆಂದರೆ— "ಓಂ"ಕಾರದಲ್ಲಿನ "ಅ"ಕಾರವೆಂದರೆ ಬ್ರಹ್ಮಗ್ರಂಥಿಯ ಸ್ಥಳವು ನಾದಬ್ರಹ್ಮ ಅಥವಾ ಓಂಕಾರನಾದಕ್ಕೆ ಪೀಠವಾಗಿರುವುದು. ಅಂದರೆ "ಓಂ"ಕಾರದ ನಾದಕ್ಕೆ ಬ್ರಹ್ಮಗಂಥಿಯು ಮೂಲಸ್ಥಾನವಾಗಿರುವುದು. ಸಾಧಾರಣ ಮನುಷ್ಯರಲ್ಲಿ ಬ್ರಹ್ಮಗಂಥಿಯು ಬಿರಿಯನ್ನು ಬಿಗಿದಂತೆ ಸೆಡೆದುಕೊಂಡಿರುವುದು. ಪ್ರಾಣಾಯಾಮದಿಂದ ಬ್ರಹ್ಮಗಂಥಿಯನ್ನು ಶುದ್ಧಿ ಮಾಡಿ "ಓಂ"ಕಾರೋಚ್ಚಾರಣೆಯ ಅನುಷ್ಠಾನವನ್ನು ಪ್ರಾರಂಭಮಾಡಿದವರಲ್ಲಿ ಬಂಧಿಸಿರುವ ಗ್ರಂಥಿಯ ಬಿಗಿಯೆಲ್ಲಾ ಸಡಲುವುದು. ಈರೀತಿಯಾಗುವುದೇ "ಓಂ"ಕಾರ ನಾದದ ಉತ್ಪತ್ತಿಗೆ ಅಂಕುರ. "ಓಂ"ಕಾರವರ್ಣೋಚ್ಚಾರಣೆಗೂ "ಓಂ"ಕಾರನಾದಕ್ಕೂ ಭೇದವಿದೆ. ಈಗ ಅಧಿಕಾರಿಯು ಮಾಡುತ್ತಿರುವ ಅನುಷ್ಠಾನವು "ಓಂ"ಕಾರವರ್ಣೋಚ್ಚಾರಣೆಗೆ ಸೇರಿದುದು. ಅಧಿಕಾರಿಯು "ಓಂ"ಕಾರನಾದಾನುಸಂಧಾನವನ್ನು ಚೆನ್ನಾಗಿ ಸಡೆಯಲು ಇನ್ನೂ ಅನುಷ್ಠಾನದಲ್ಲಿ ಮುಂದುವರಿಯಬೇಕು. ಆದರೂ "ಓಂ"ಕಾರನಾದಕ್ಕೆ "ಓಂ"ಕಾರವರ್ಣೋಚ್ಚಾರಣೆಯ ಅನುಷ್ಠಾನವೇ ಅಂಕುರ. ಈ ಸೋಪಾನದ ಅನುಷ್ಠಾನದಲ್ಲಿರುವ ಅಧಿಕಾರಿಯು ಕಿವಿಗಳನ್ನು ಮುಚ್ಚಿಕೊಂಡು ಅಂತರ್ದೃಷ್ಟಿಯಿಂದ ಒಳಗಡೆ ಉಂಟಾಗುವ ಗುಡುಗು ಮೊದಲಾದ ಸ್ಥೂಲಶಬ್ದಗಳನ್ನು ಕೇಳಬಹುದು. ಆದುದರಿಂದ "ಓಂ"ಕಾರನಾದದ ಉತ್ಪತ್ತಿಯು ತಲೆದೋರುವುದೇ ಶ್ರೀರಾಮನ ಬಾಣವು ಬಿದ್ದ ಸ್ಥಳದಲ್ಲಿ ಭೂಮಿಯು ಗುಡುಗಿ ಶಬ್ದಹುಟ್ಟಿದ್ದಾಗಿದೆ. "ಓಂ"ಕಾರನಾದಕ್ಕೆ "ಅ"ಕಾರವೆಂದರೆ ಬ್ರಹ್ಮಗ್ರಂಥಿಯೇ ಮೂಲಸ್ಥಾನನೆಂದು ಹೇಳಿರುವ ಶ್ರುತಿಪ್ರಮಾಣವು ಮುಂದಿನ ಪ್ರಕರಣದಲ್ಲಿ ಬಂದಿದೆ.

ಶ್ರೀರಾಮನ ಬಾಣವು ಬಿದ್ದ ಸ್ಥಳದಲ್ಲಿ ಭೂಮಿಯು ಗುಡುಗಿ ಶಬ್ದಹುಟ್ಟಿತಲ್ಲದೆ ಆ ಸ್ಥಳವು ವ್ರಣಕೂಪವಾಯಿತೆಂದರೆ—"ಓಂ" ಎಂಬ ವರ್ಣೋಚ್ಚಾರಣೆಯ ಅನುಸಂಧಾನದ ಹೊಡೆತದಿಂದ "ಅ"ಕಾರಸ್ವರೂಪವಾದ ಬ್ರಹ್ಮಗ್ರಂಥಿಯು ವ್ರಣಕೂಪದಂತಾಗುವುದು. ಅಂದರೆ ಪರಿಪಕ್ವವಾದ ಹುಣ್ಣಿನೋಪಾದಿಯಲ್ಲಿ ಬ್ರಹ್ಮಗ್ರಂಥಿಯ ಬಿಗಿಯೆಲ್ಲಾ ಸಡಲುವುದಲ್ಲದೆ ಕಠಿಣತ್ವ ಹೋಗಿ ಮೃದುತ್ವವುಂಟಾಗುವುದು. ಯಾವಾಗ ಬ್ರಹ್ಮಗ್ರಂಥಿಯು ಬಿಗಿತಪ್ಪಿ ಮೃದುವಾಗುತ್ತಾ ಬರುವುದೋ, ಆಗ ಗ್ರಂಥಿಯಲ್ಲಿರುವ ಪರಾಶಕ್ತಿಸ್ವರೂಪಳಾದ ಕುಂಡಲಿನೀಶಕ್ತಿಯು ಚಿತ್ರಪಠದಲ್ಲಿ ತೋರಿಸಿರುವಂತೆ ವಾಯು ಮತ್ತು ಮನಸ್ಸಿನೊಡಗೂಡಿದ ಬುದ್ಧಿವೃತ್ತಿಯೊಡನೆ ಬ್ರಹ್ಮರಂಧ್ರದೊಳಗೆ ಪ್ರವೇಶಿಸಲು ಪ್ರಾರಂಭಿ

ಸುವಳು. ಈ ಮೇಲಿನ ತತ್ವಾರ್ಥವೇ ಶ್ರೀರಾಮನ ಬಾಣ ಬಿದ್ದ ಸ್ಥಳವು ವ್ರಣಕೂಪವೆಂದು ಪ್ರಸಿದ್ಧಿಯಾದುದಾಗಿರುವುದು.

ಶ್ರೀರಾಮನ ಬಾಣದ ಬೀಳುವಿಕೆಯಿಂದ ಕುಕ್ಷಿಸ್ಥಳದಂತಿರುವ ಸ್ಥಳದ ಉದಕಗಳನ್ನು ಶೋಧಿಸಲು ಈ ಸ್ಥಳವು ಮರುಕಾಂತಾರವೆಂಬ ಕಾಡಾಯಿತೆಂಬುದರ ಅಂತರಾರ್ಥವೇನೆಂದರೆ—ಕುಕ್ಷಿಸ್ಥಳವೆಂದರೆ ಹೊಟ್ಟೆ ಅಥವಾ ಅನ್ನಮಯಕೋಶ. ಅಂದರೆ ಸ್ಥೂಲದೇಹವೆಂಬ ತತ್ವಾರ್ಥ. "ಓಂ" ಎಂಬ ಶಬ್ದೋಚ್ಚಾರಣೆಯ ಅನುಸಂಧಾನದಿಂದ ಈ ದೇಹವನ್ನು ಧರಿಸಿಕೊಂಡು ವ್ಯಾಪಾರಮಾಡುತ್ತಿರುವ ಶಕ್ತಿಗಳು ಅಂತರ್ಮುಖವಾಗುವುವೆಂದರೆ, ತಟಸ್ಥವಾಗಿ "ಓಂ"ಕಾರವರ್ಣೋಚ್ಚಾರಣೆಯ ಜೊತೆಗೆ ಸೇರಿಕೊಳ್ಳುವುವು. ದೇಹದೊಳಗಿನ ವ್ಯಾಪಾರಮಾಡುವ ಸಗುಣಬ್ರಹ್ಮಚೈತನ್ಯಗಳು ಯಾವಾಗ "ಓಂ"ಕಾರವರ್ಣೋಚ್ಚಾರಣೆಯ ಜೊತೆಯಲ್ಲಿ ಸೇರುವುವೋ, ಆಗ ಸ್ಥೂಲದೇಹವು ಮರುಕಾಂತಾರವೆಂದರೆ ನಿರ್ಜಲವಾದ ಮರಳುಕಾಡಿನೋಪಾದಿಯಲ್ಲಾಗುವುದು. ಅಂದರೆ ದೇಹದೊಳಗಿನ ಶಕ್ತಿಗಳು ವ್ಯಾಪಾರಮಾಡದೆ ಅಂತರ್ಮುಖವಾಗುವುದರಿಂದ ಸ್ಥೂಲದೇಹವು ವ್ಯಾಪಾರರಹಿತವಾಗುತ್ತಾ ಬರುವುದು.

ಶ್ರೀರಾಮನ ಬಾಣದ ಹೊಡೆತದಿಂದ ಕುಕ್ಷಿಸ್ಥಳದ ಸಾರವೆಲ್ಲ ಹೋಗಿ ಮರುಕಾಂತಾರದಂತಾಗಲು ಶ್ರೀರಾಮನು ಆ ಸ್ಥಳವು ಅಲ್ಪರೋಗವುಳ್ಳದ್ದಾಗಿಯೂ ಸುವಾಸನೆಯುಳ್ಳದ್ದಾಗಿಯೂ, ಅಮೃತಪ್ರಾಯವಾಗಿಯೂ ಆಗಲೆಂದು ವರವನ್ನು ಕೊಟ್ಟನೆಂದರೆ—ಓಂಕಾರೋಚ್ಚಾರಣೆಯ ಅನುಸಂಧಾನವಮಾಡಲು ಪ್ರಾರಂಭಿಸಿದರೆ ದೇಹದೊಳಗಿರುವ ಶಕ್ತಿಗಳೆಲ್ಲಾ ಅಂತರ್ಮುಖವಾಗಿ "ಓಂ"ಕಾರದೊಡನೆ ಸೇರಿಕೊಳ್ಳುವುದರಿಂದ ದೇಹವು ಮರಳುಕಾಡಿನಂತೆ ಸಾರವಿಲ್ಲದಂತಾಗುವುದೆಂದು ಮೇಲೆ ತಿಳಿಸಿತಷ್ಟೆ! ಹೀಗೆ "ಓಂ"ಕಾರೋಪಾಸನೆಯಿಂದ ದೇಹವ್ಯಾಪಾರದ ಶಕ್ತಿಗಳೆಲ್ಲಾ ಓಂಕಾರದೊಡನೆ ಅಂತರ್ಮುಖವಾದರೆ, ದೇಹಕ್ಕೆ ಅಪಾಯಬರದೆ ಶ್ರೀಸ್ಮೃತಿಯುಂಟಾಗುವುದೆಂಬ ತತ್ವಾರ್ಥವನ್ನು ಸೂಚಿಸುತ್ತದೆ. ಕುಕ್ಷಿಸ್ಥಳವೆಂದರೆ ಸ್ಥೂಲದೇಹವು ಅಲ್ಪರೋಗವುಳ್ಳದ್ದಾಗಲೆಂದರೆ—ದೇಹದಲ್ಲಿನ ರೋಗಗಳು ಪರಿಹಾರವಾಗುತ್ತವೆಂಬ ತಾತ್ಪರ್ಯ. ಸುವಾಸನೆಯುಳ್ಳದ್ದಾಗಲೆಂದರೆ—ದೇಹದಲ್ಲಿನ ದುರ್ಗಂಧಗಳೆಲ್ಲಾ ತೊಲಗಿ "ಓಂ"ಕಾರಾನುಷ್ಠಾನಮಾಡುವವರ ದೇಹವು ನಿರ್ಮಲವಾಗಿಯೂ ಸುವಾಸನೆಯುಳ್ಳದ್ದಾಗಿಯೂ ಇರುವುದೆಂಬ ತಾತ್ಪರ್ಯ. ಅಮೃತಪ್ರಾಯವಾಗಿರಲೆಂದರೆ—"ಓಂ"ಕಾರಾನುಷ್ಠಾನ ಮಾಡುವಾಗ ಅಧಿಕಾರಿಗೆ, ಸುಂದರಕಾಂಡದಲ್ಲಿ ವಾನರರು ಮಧುಪಾನಮಾಡಿದ ತತ್ವದಲ್ಲಿ ಹೇಳಿರುವಂತೆ, ದೇಹದಲ್ಲಿ ಅಮೃತವು ಪ್ರವಹಿಸುವುದರಿಂದ, ವಿಶೇಷ ಆಹಾರಾದಿಗಳು ಬೇಕಾಗಿರುವುದಿಲ್ಲ.

ಶ್ರೀರಾಮಚಂದ್ರನು ಈ ವಿಧವಾಗಿರಲೆಂದು ವರವನ್ನು ಕೊಟ್ಟನೆಂದರೆ—ಸಾಕ್ಷಾತ್ ಆತ್ಮನ ನಿಯಮವೆಂದು ತಿಳಿದುಕೊಳ್ಳಬೇಕು. ಈ ರೀತಿಯಾಗಿ ದೇಹವು ಅಮೃತಪ್ರಾಯ ವಾಗಿರಲು ಪರಮಾತ್ಮನ ನಿಯಮವಿರುವುದರಿಂದಲೇ ಬಹುಕಾಲ ಪ್ರಪಂಚವ್ಯವಹಾರ ವನ್ನು ಮರೆತು ಸಮಾಧಿನಿಷ್ಠೆಯಲ್ಲಿ ಮನುಷ್ಯನಿದ್ದರೂ ದೇಹವು ಕೆಡದೆ ಇರುತ್ತದೆ. ಇವೆಲ್ಲಾ ಸುಧಾ (ಅಮೃತ) ಧಾರೆಯಿಂದುಂಟಾದ ಫಲವು. ಈ ಮೇಲಿನ ಅಂಶಗಳೇ ಶ್ರೀರಾಮನು ಕೊಟ್ಟ ವರಗಳ ತತ್ವವಾಗಿರುವುದು.

ಸಮಾಧಿಕಾಲದಲ್ಲಿ ದೇಹದ ಶಕ್ತಿಗಳು ತಮ್ಮ ನೈಜವಾದ ದೇಹವ್ಯಾಪಾರಮಾಡದೆ ಅಂತರ್ಮುಖದ ಮಾರ್ಗದಲ್ಲಿದ್ದರೂ ದೇಹವು ಅಮೃತಪ್ರಾಯವಾಗಿರಲೆಂದು ಶ್ರೀರಾಮನು ವರವನ್ನು ಕೊಟ್ಟಿರುವನಷ್ಟೆ! ಇದು ಸಾಧಾರಣರಿಂದ ಕೊಡತಕ್ಕ ವರವಾಗಲಾರದು. ಸಾಕ್ಷಾತ್ಪರಮಾತ್ಮನ ಅವತಾರವೇ ಶ್ರೀರಾಮಾವತಾರವಾಗಿರುವುದೆಂದೂ, ಈ ತತ್ವವೆಲ್ಲಾ ಅವನ ಲೀಲಾವಿಭೂತಿಯೆಂದೂ, ಖಂಡಿತವಾಗಿಯೂ ನಿಸ್ಸಂದೇಹವಾಗಿಯೂ ನಂಬತಕ್ಕ ದ್ದಾಗಿರುವುದು.

ಮುಖ್ಯವಾಗಿ ಶ್ರೀರಾಮನು ಬ್ರಹ್ಮಾಸ್ತ್ರಪ್ರಯೋಗಮಾಡಿದ, ಸಮುದ್ರರಾಜನು ಪ್ರತ್ಯಕ್ಷವಾದ ಮತ್ತು ದ್ರುಮಕುಲ್ಯದ ವಿಚಾರಗಳ ತತ್ವಗಳು "ಓಂ"ಕಾರೋಚ್ಚಾರಣೆಯ ಪ್ರಾರಂಭದಲ್ಲಿ ಅನುಷ್ಠಾನಮಾಡುವ ಕ್ರಮವನ್ನೂ, ಅದರ ಫಲವನ್ನೂ, ವಿವರಿಸುತ್ತವೆ. ಈ ವಿಚಾರಗಳ ತತ್ವಗಳಿಗೆ ಅನ್ವಯವಾಗುವ ಶ್ರುತಿವಾಕ್ಯಗಳನ್ನೂ, ಶ್ರೀಶಂಕರಭಗವ ತ್ಪಾದರವರ ವಾಕ್ಯಗಳನ್ನೂ, ಮುಂದಿನ ಪ್ರಕರಣದಲ್ಲಿ ಬರೆದಿರುವುದು. ಕಾರಣವೇನಂದರೆ, "ಓಂ"ಕಾರೋಚ್ಚಾರಣೆಯ ಅನುಷ್ಠಾನಕ್ರಮವು ಈ ಪ್ರಕರಣದಿಂದ ಯುದ್ಧಪ್ರಾರಂಭದ ವರೆಗೂ ಇರುವುದು.

ಓಂಕಾರೋಚ್ಚಾರಣೆಯ ಅನುಷ್ಠಾನದ ವಿಚಾರವೂ ಓಂಕಾರದ ತತ್ವವೂ ತಿಳಿಯ ಬೇಕಾದರೆ, ಈ ಪ್ರಕರಣ ಮತ್ತು ಮುಂದಿನ ಪ್ರಕರಣಗಳೆರಡನ್ನೂ ಸಮನ್ವಯಮಾಡಿ ತಿಳಿದುಕೊಳ್ಳುವುದಲ್ಲದೆ, ಅರಣ್ಯಕಾಂಡದಲ್ಲಿ ಅಗಸ್ತ್ಯಾಶ್ರಮ ಪ್ರಕರಣದಲ್ಲಿನ ತತ್ವಗಳನ್ನೂ ಇಲ್ಲಿಗೆ ಅನ್ವಯಮಾಡಿಕೊಳ್ಳಬೇಕು, ಅನಂತರ ಈ ಎಲ್ಲಾ ಪ್ರಕರಣಗಳ ವಿಚಾರಗಳನ್ನೂ, ಅಗಸ್ತ್ಯರು ಆದಿತ್ಯಹೃದಯವನ್ನು ಉಪದೇಶಮಾಡಿದ ಪ್ರಕರಣದ ತತ್ವವನ್ನು ಸೀತಾಗ್ನಿ ಪ್ರವೇಶವಾದನಂತರವಿರುವ ಶ್ರೀರಾಮನ ತತ್ವಕ್ಕೆ ಸೇರಿಸಿಕೊಂಡು ಸಮನ್ವಯಮಾಡಿ ಕೊಂಡರೆ "ಓಂ"ಕಾರದ ವಿಚಾರವು ಮುಂದಟ್ಟಾಗುವುದು.

ಮುಖ್ಯವಾಗಿ ಈ ಪ್ರಕರಣದಲ್ಲಿನ ಅನುಷ್ಠಾನದಲ್ಲಿ ಮಾಡುವ "ಓಂ"ಕಾರಾನು ಸಂಧಾನವು "ಅ"ಕಾರ "ಉ" ಕಾರ "ಮ"ಕಾರಗಳ ಸೇರುವಿಕೆಯೆಂದರೆ, "ಓಂ"ಕಾರ

ವರ್ಣೋಚ್ಚಾರಣೆಯಿಂದುಂಟಾಗುವ ಶಬ್ದವೇ ಹೊರತು "ಓಂ"ಕಾರನಾದದ ಅನುಷ್ಠಾನ ವಲ್ಲ. "ಓಂ"ಕಾರನಾದವು ಇನ್ನೂ ಮುಂದಿನ ಸೋಪಾನಗಳ ಅಭ್ಯಾಸದಿಂದ ಕ್ರಮೇಣ ಹೊಂದಬೇಕಾಗಿರುವುದು. ಅಂದರೆ "ಓಂ"ಎಂಬ ವರ್ಣೋಚ್ಚಾರಣೆಯು ಅನುಷ್ಠಾನದಿಂದ ಬಿಂದುಧಾರಣೆಯನ್ನು ಮಾಡಿಕೊಂಡು ಸಮಾಧಿಯ ಅಭ್ಯಾಸವನ್ನು ಮಾಡುತ್ತಾ ಬಂದರೆ "ಓಂ"ಕಾರನಾದದ ಅನುಷ್ಠಾನವು ತಾನಾಗಿಯೇ ಉಂಟಾಗುವುದು. ಇದೇ ತತ್ವಾರ್ಥದ ಸೂಚನೆಯನ್ನು ಅನುಸರಿಸಿ ಅರ್ಜುನನು ಶ್ರೀಕೃಷ್ಣಪರಮಾತ್ಮನನ್ನು ಕುರಿತು ಉತ್ತರ ಗೀತೆಯಲ್ಲಿ,

> ಅಕ್ಷರಾಣಿ ಸಮಾತ್ರಾಣಿ ಸರ್ವೇ ಬಿಂದುಸಮಾಶ್ರಿತಾಃ|
> ಬಿಂದುರ್ಭಿದ್ಯತಿ ನಾದೇನ ಸ ನಾದಃ ಕೇನಭಿದ್ಯತೆ||

**ರಾ||** ಎಲೈ! ಶ್ರೀಕೃಷ್ಣನೆ! ಅಕಾರಾದಿ ಕ್ಷಕಾರಾಂತ ವರ್ಣಗಳು ಹ್ರಸ್ವ ದೀರ್ಘಗಳೊಡನೆ ಕೂಡಿಕೊಂಡು ಬಿಂದುವಿನೊಡನೆ ಕೂಡಿರುತ್ತವೆ. ಬಿಂದುವಾದರೋ, ನಾದದಿಂದ ಭೇದಿಸಲ್ಪಡುವುದೆಂದರೆ, ಬಿಂದುವು ಹೋಗಿ ನಾದೋತ್ಪತ್ತಿಯಾಗುವುದು. ನಾದವು ಯಾವುದರಿಂದ ಭೇದಿಸಲ್ಪಡುವುದು? ಎಂದು ಪ್ರಶ್ನೆಮಾಡಿದನು.

ಅಂದರೆ ಅಕಾರದಿಂದ ಕ್ಷಕಾರದವರೆಗಿರುವ ಯಾವ ಅಕ್ಷರಕ್ಕಾಗಲಿ ಅನುಸ್ವಾರವನ್ನು ಸೇರಿಸಿ, ಅದನ್ನು ಮೇಲಕ್ಕೆ ಬೆಳೆಸಿಕೊಂಡು ಹೋದರೆ, "ಓಂ"ಕಾರವಾಗುವುದು. ಹೀಗೆ ಬೆಳೆಸಿಕೊಂಡು ಹೋಗುವಾಗ ಉಸಿರು ಬಂಧಿಸಿದಂತಾಗಿ, ಕೇವಲ ಕುಂಭಕದ ಸ್ವರೂಪಕ್ಕೆ ಬರುವುದು. ಎಲ್ಲಾ ಅಕ್ಷರಗಳಿಗೂ ಮಾಡುವುದಕ್ಕೆ ಬದಲಾಗಿ "ಓ" ಅಕ್ಷರಕ್ಕೆ ಅನುಸ್ವಾರ ವನ್ನು ಸೇರಿಸಿಕೊಂಡು ಬೆಳೆಸಿಕೊಂಡಲ್ಲಿ "ಓಂ"ಕಾರವಾಗಿ, ಸರ್ವ ಅಕ್ಷರಗಳಲ್ಲಿಯೂ ಅನುಸ್ವಾರವನ್ನು ಸೇರಿಸಿದ ಫಲವುಂಟಾಗುವುದು. ಈ ಓಂಕಾರವರ್ಣೋಚ್ಚಾರಣೆಯು ಅನುಷ್ಠಾನವು ಯಾವ ಪರಿಣಾಮವನ್ನು ಹೊಂದುವುದೆಂದು ಅರ್ಜುನನು ಶ್ರೀಕೃಷ್ಣಪರಮಾತ್ಮನನ್ನು ಕೇಳಿಕೊಂಡಿರುವ ಮೇಲಿನ ಶ್ಲೋಕಕ್ಕೆ ಉತ್ತರವನ್ನು ಮುಂದೆ ಆದಿತ್ಯಹೃದಯದ ತತ್ವದಲ್ಲಿ ಬರೆದಿರುವುದು. ಮುಖ್ಯತಾತ್ಪರ್ಯವೇನೆಂದರೆ, ಮೇಲಿನ ಶ್ಲೋಕದಂತೆ ಸಮುದ್ರ ರಾಜನ ತತ್ವದಲ್ಲಿ "ಓಂ"ಕಾರವರ್ಣದ ಉಚ್ಚಾರಣೆಯಿಂದ ಅನುಷ್ಠಾನಮಾಡಿ ಮುಂದಿನ ಸೋಪಾನವನ್ನು ಹತ್ತಬೇಕೆಂಬ ತಾತ್ಪರ್ಯ.

**ರಾ||** ಅನಂತರ ಸಮುದ್ರರಾಜನು ಶ್ರೀರಾಮನನ್ನು ಕುರಿತು ನಿನ್ನ ಕಾರ್ಯಕ್ಕೆ ಕುಂದಕ ವಿಲ್ಲದೆ, ನನಗೂ ತೊಂದರೆಯಾಗದಂತೆ, ಸಹಾಯ ಮಾಡುವೆನು. ಈ ನಳನೆಂಬುವನು ವಿಶ್ವಕರ್ಮನ ಮಗನು. ಶಿಲ್ಪವಿದ್ಯೆಯಲ್ಲಿ ತನ್ನ ತಂದೆಗೆ ಸಮಾನನಾಗಿರುವಂತೆ ವರವಿರುವುದು. ಇವನು ನಿಶ್ಚಿಂತೆಯಿಂದ ಸೇತುವೆಯನ್ನು ಕಟ್ಟಲಿ. ಆ ಸೇತುವೆಯನ್ನು

ಮುಳುಗದಂತೆ ನಾನು ಧರಿಸಿಕೊಳ್ಳುವೆನೆಂದು ಹೇಳಿ ಅಂತರ್ಧಾನನಾದನು. ಅನಂತರ ನಳನು ವಾನರರ ಸಹಾಯದಿಂದ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿದನು.

**ತತ್ವ||** "ಓಂ" ಎಂಬ ವರ್ಣೋಚ್ಚಾರಣೆಯನ್ನು ಅನುಸಂಧಾನಮಾಡುವಾಗ ಬ್ರಹ್ಮಗ್ರಂಥಿಯಲ್ಲಿ ನಡೆಯುವ ಕಾರ್ಯಕ್ರಮದ ತತ್ವಗಳನ್ನು ಇದುವರೆಗೂ ತಿಳಿಸಿಕೊಂಡು ಬಂದಿದೆಯಷ್ಟೆ! ಪ್ರಕೃತದ ಕಥೆಯ ಸಾರಾಂಶವಾದ ಸೇತುಬಂಧನದ ತತ್ವವು, "ಓಂ" ಕಾರೋಚ್ಚಾರಣೆಯ ಅನುಷ್ಠಾನವು ಬ್ರಹ್ಮಗ್ರಂಥಿಯಲ್ಲಿನ ಕಾರ್ಯ ನಡೆಸಿದನಂತರ ಮುಂದೆ ಉಂಟಾಗುವ ಸ್ವರೂಪವನ್ನು ಸೂಚಿಸುವುದು. ಅಂದರೆ, ಪ್ರಾರಂಭಿಸಿದ "ಓಂ" ಕಾರೋಚ್ಚಾರಣೆಯನ್ನು ಮೂಲಾಧಾರದಿಂದಲೂ ಚೆನ್ನಾಗಿ ಅನುಸಂಧಾನಮಾಡಿಕೊಂಡು ಶಿರಸ್ಸಿನವರೆಗೂ ತೆಗೆದುಕೊಂಡು ಹೋಗುತ್ತೇವೆ. ಅನಂತರ ಭ್ರೂಮಧ್ಯದಲ್ಲಿ ದೃಷ್ಟಿಯನ್ನಿಟ್ಟು ಸಮಾಧಿಯ ಅಭ್ಯಾಸಮಾಡಬೇಕು. ಹೀಗೆ ಮೂಲಾಧಾರ ಅಥವಾ ಬ್ರಹ್ಮಗ್ರಂಥಿಯಿಂದ ಎಳೆತಬರುವಂತೆ ನೆತ್ತಿಯವರೆಗೆ ತೆಗೆದುಕೊಂಡುಹೋಗುವ ಕಾಲದಲ್ಲಿ ಮೂಲಾಧಾರದಿಂದಲೂ ಎಳೆದುಕೊಂಡುಹೋದ "ಓಂ" ಕಾರೋಚ್ಚಾರಣೆಯು ಭ್ರೂಮಧ್ಯದಲ್ಲಿ ನಿಲ್ಲಬೇಕಾದರೆ, ಭ್ರೂಮಧ್ಯಕ್ಕೂ ಬ್ರಹ್ಮಗ್ರಂಥಿಗೂ ಮಧ್ಯೆ ಏಕವಾಗಿರುವ ವರ್ಣೋಚ್ಚಾರಣೆಯನ್ನು ಶಿಥಿಲವಾಗದಂತೆ ಧಾರಣೆಮಾಡಿಕೊಳ್ಳಬೇಕು. ಹೀಗೆ ಏಕವಾಗಿರುವ ವರ್ಣೋಚ್ಚಾರಣೆಯನ್ನು ಧರಿಸಿಕೊಂಡರೇನೆ, ಭ್ರೂಮಧ್ಯದಲ್ಲಿರುವ ತೇಜೋಬಿಂದುವನ್ನು ಬುದ್ಧಿವೃತ್ತಿಯು ಧರಿಸಿಕೊಳ್ಳುವುದು.

ಆದುದರಿಂದ ಮೂಲಾಧಾರದಿಂದ ಭ್ರೂಮಧ್ಯದವರೆಗಿರುವ "ಓಂ" ಕಾರೋಚ್ಚಾರಣೆಯನ್ನು ಸ್ತಂಭಿಸುವುದೇ ಸೇತುಬಂಧನದ ತತ್ವವಾಗಿರುವುದು. ಮೂಲಾಧಾರಚಕ್ರದಾರಭ್ಯ ಶಿರಸ್ಸಿನವರೆಗೆ ಹೋಗುವ "ಓಂ" ಕಾರೋಚ್ಚಾರಣೆಯ ಸ್ವರೂಪವು ಎಂಥಾದ್ದೆಂದರೆ—ಅಕಾರದಿಂದ ಕ್ಷಕಾರದವರೆಗಿರುವ ಎಲ್ಲಾ ಅಕ್ಷರಗಳ ಉಚ್ಚಾರಣೆಯ ಶಕ್ತಿಗಳೂ ಸೇರಿಕೊಂಡಿರುವುದು. ಈ ಉಚ್ಚಾರಣೆಯ ಶಕ್ತಿಗಳೆಲ್ಲಾ ಒಟ್ಟುಗೂಡಿ ಭ್ರೂಮಧ್ಯದಲ್ಲಿ ಸೇರಿಕೊಂಡರೆ ಈ ಉಚ್ಚಾರಣೆಯ ಶಕ್ತಿಗಳೆಲ್ಲ ಅನುಸ್ವಾರದೊಡನೆ ಕೂಡಿಕೊಂಡಂತಾಗಿ "ಓಂ" ಕಾರವೆನಿಸುವುದು. ಅನುಸ್ವಾರವೆಂದರೂ ಬಿಂದುವೆಂದರೂ ಒಂದೇ ಆಗಿರುವುದು. ಅನುಸ್ವಾರವೆಂದರೆ, ಸೊನ್ನೆಯನ್ನು ಹೇಗೆ ಬರೆಯುತ್ತೇವೆಯೋ ಹಾಗೆ ಭ್ರೂಮಧ್ಯದಲ್ಲಿ ಸೊನ್ನೆಯಂತೆ ವಜ್ರದ ಹರಳಿನೋಪಾದಿಯಲ್ಲಿ ತೇಜೋರೂಪದಲ್ಲಿ ಮುಂಡಾದ ಬಿಂದುವನ್ನೂ "ಓಂ" ಕಾರೋಪಾಸನೆಯಿಂದ ಅಧಿಕಾರಿಯು ಪಡೆಯುವನು.

ಆದಕಾರಣ ಮೂಲಾಧಾರದಿಂದ ಭ್ರೂಮಧ್ಯದವರೆಗಿರುವ ವರ್ಣೋಚ್ಚಾರಣೆಯನ್ನು ಬಂಧಿಸುವುದೇ ಸೇತುಬಂಧನದ ತತ್ವವಾಗಿರುವುದು. ಓಂಕಾರವರ್ಣೋಚ್ಚಾರಣೆಯನ್ನು ಬಂಧಿಸಬೇಕಾದರೆ, ನಮ್ಮ ದೇಹವನ್ನು ಬಂಧಿಸಿರುವ ವ್ಯಾನವಾಯುವೇ ಬಂಧಿಸ

ಬೇಕೆಂಬ ತತ್ವಾರ್ಥವೇ ನಳನು ಸೇತುವೆಯನ್ನು ಕಟ್ಟಿದ್ದಾಗಿರುವುದು. ಈ ನಳನೇ ಶರೀರವನ್ನು ಬಂಧಿಸಿರುವ ವ್ಯಾನವಾಯುತತ್ವದವನೆಂದು ಹಿಂದೆ ಕಿಷ್ಕಿಂಧಾಕಾಂಡದಲ್ಲಿ ತಿಳಿಸಿದೆ. ಮುಖ್ಯತಾತ್ಪರ್ಯವೇನೆಂದರೆ, ಭ್ರೂಮಧ್ಯದಲ್ಲಿ ತೇಜೋರೂಪದ ಬಿಂದುವನ್ನು ಧಾರಣೆಮಾಡಿಕೊಳ್ಳಲು, "ಓಂ" ಕಾರವರ್ಣೋಚ್ಚಾರಣೆಯು ವ್ಯಾನವಾಯುವಿನಿಂದ ಬಂಧಿಸಲ್ಪಡುವುದೆಂಬ ತತ್ವ. ವರ್ಣೋಚ್ಚಾರಣೆಯ ಸ್ವರೂಪವಾದ "ಓಂ" ಕಾರವೇ ಸೇತುರೂಪವಾಗಿರುವುದು. ಇಂತಹ "ಓಂ" ಕಾರರೂಪವಾದ ಸೇತುವೆಯಿಂದ ಅವಿದ್ಯೆಯೆಂಬ ನದಿಯನ್ನು ದಾಟಿ ಕೃತಕೃತ್ಯರಾಗಬೇಕೆಂದು ಮುಂಡಕೋಪನಿಷತ್ತಿನಲ್ಲಿ,

> ತಮೇವೈಕಂ ಜಾನಥಾತ್ಮಾನ ಮನ್ಯಾ ವಾಚೋ
> ವಿಮುಂಚಥ ಅಮೃತಸ್ಯೈಷ ಸೇತುಃ ।

ಎಂಬದಾಗಿ ಹೇಳಿದೆ. ಮುಖ್ಯತಾತ್ಪರ್ಯವೇನೆಂದರೆ, ಅವಿದ್ಯೆಯೆಂಬ ನದಿಗೆ "ಓಂ" ಕಾರೋಪಾಸನೆಯ ಸ್ವರೂಪವಾದ ಸೇತುವೆಯನ್ನು ಕಟ್ಟಿ, ಆ ನದಿಯನ್ನು ದಾಟಬೇಕು. ಈ ಪ್ರಕರಣದ ಪ್ರಥಮದಾರಭ್ಯ ಓಂಕಾರವರ್ಣೋಚ್ಚಾರಣೆಯ ಅನುಸಂಧಾನದ ವಿಚಾರವನ್ನು ತಿಳಿಸಿತು. ಹೀಗೆ ಅನುಸಂಧಾನಮಾಡಿದ "ಓಂ" ಕಾರವರ್ಣೋಚ್ಚಾರಣೆಯನ್ನು ಅನುಸ್ವಾರ ಅಥವಾ ಬಿಂದುವಿನೊಡನೆ ಸೇರಿಸಿ ಬಿಂದುಸಹಿತವಾದ "ಓಂ" ಕಾರೋಪಾಸನೆಯನ್ನು ಅನುಷ್ಠಿಸುವ ಮುಂದಿನ ಪ್ರಕರಣವನ್ನು ಪ್ರಾರಂಭಿಸೋಣ. ಈ ಪ್ರಕರಣದಲ್ಲಿ ಬರೆದಿರುವುದನ್ನು ಮುಂದಿನ ಪ್ರಕರಣದ ವಿಚಾರಗಳೊಡನೆ ಸಮನ್ವಯಮಾಡಿಕೊಳ್ಳಬೇಕು.

## ೬ನೆಯ ಪ್ರಕರಣ

| | |
|---|---|
| **ಶ್ರೀರಾಮನು ಸರ್ವಸೈನ್ಯದೊಡನೆ ಸೇತುವೆಯ ಮೇಲೆ ಹೊರಟು ಲಂಕಾದ್ವೀಪವನ್ನು ಸೇರಿದುದು.** | **ಬಿಂದುಧಾರಣೆ ಮತ್ತು ಬಿಂದುಸಹಿತವಾದ "ಓಂ" ಕಾರೋಪಾಸನೆಯ ವಿಚಾರ.** |

**ರಾ||** ಅನಂತರ ಶ್ರೀರಾಮನು ಸರ್ವಸೈನ್ಯದೊಡನೆ ನಳನಿರ್ಮಿತವಾದ ಸೇತುವೆಯ ಮೇಲೆ ಸಮುದ್ರವನ್ನು ದಾಟಿ ಲಂಕಾದ್ವೀಪವನ್ನು ಸೇರಿದನು. ಲಂಕೆಯನ್ನು ಮುತ್ತಬೇಕೆಂದು ಯುದ್ಧೋತ್ಸಾಹವುಳ್ಳವರಾದ ಲಕ್ಷ್ಮಣ ಸುಗ್ರೀವ ಆಂಜನೇಯರೊಡನೆ ತಾನೂ ಉತ್ಸಾಹದಿಂದ ಶತ್ರುಗಳನ್ನು ಕೊಲ್ಲಲು ದೃಢನಿಶ್ಚಯವುಳ್ಳವನಾದನು,

**ತತ್ವ||** ಭ್ರೂಮಧ್ಯದಲ್ಲಿ ತೇಜೋಬಿಂದುವನ್ನು ಧಾರಣೆಮಾಡಿಕೊಳ್ಳಲು "ಓಂ" ಕಾರೋಚ್ಚಾರಣೆಯು ವ್ಯಾನವಾಯುವಿನಿಂದ ಬಂಧಿಸಲ್ಪಡುವುದನ್ನು ಹಿಂದಿನ ಪ್ರಕರಣದಲ್ಲಿ

ತಿಳಿಸಿತಷ್ಟೆ! ಅಂದರೆ ಓಂಕಾರೋಚ್ಚಾರಣೆಯ ಅನುಷ್ಠಾನವನ್ನು ಪ್ರಾರಂಭಿಸಿ ಮೂಲಾಧಾರ ಚಕ್ರದಿಂದ ಅನುಸಂಧಾನಮಾಡಿಕೊಂಡು ನೆತ್ತಿಯ ಪರ್ಯಂತರ ತೆಗೆದುಕೊಂಡುಹೋಗಿ ಭ್ರೂಮಧ್ಯದಲ್ಲಿ ನಿಲ್ಲಿಸಿಕೊಳ್ಳುತ್ತೇವೆ. ಹೀಗೆ ನಿಲ್ಲಿಸಿಕೊಂಡಾಗ ಮೂಲಾಧಾರದಿಂದ ಭ್ರೂಮಧ್ಯದವರೆಗೆ ಏಕವಾಗಿರುವ "ಓಂ"ಕಾರವರ್ಣೋಚ್ಚಾರಣೆಯನ್ನು ವ್ಯಾನವಾಯು ಬಂಧಿಸುವುದು. ಇದೇ ಸೇತುವೆಯ ತತ್ವವಾಗಿರುವುದು. ಈ ಸೇತುವೆಯ ಮೇಲೆ ಸಕಲ ವಾಯುಗಳೊಡನೆ ಬುದ್ಧಿವೃತ್ತಿಯು ಮೂಲಾಧಾರಚಕ್ರದ ತತ್ವದಲ್ಲಿರುವ ಲಂಕೆಯನ್ನು ಪ್ರವೇಶಮಾಡಬೇಕು. ಹೀಗೆ ಪ್ರವೇಶಮಾಡುವ ತತ್ವವನ್ನು ವಿವರಿಸೋಣ. "ಓಂ" ಕಾರೋಚ್ಚಾರಣೆಯನ್ನು ಚೆನ್ನಾಗಿ ಅನುಸಂಧಾನಮಾಡಿಕೊಂಡು ಭ್ರೂಮಧ್ಯದಲ್ಲಿ ನಿಲ್ಲಿಸಿ ಅಲ್ಲಿ ದೃಷ್ಟಿಯನ್ನಿಟ್ಟು ಧ್ಯಾನಮಾಡಿದರೆ, ಕೆಂಪು ಮತ್ತು ನೀಲಿಮಿಶ್ರವಾದ ಸಗುಣ ಬ್ರಹ್ಮದ ತೇಜಃಕಿರಣಗಳ ಸೇರುವಿಕೆಯಿಂದ ಪ್ರಾತಃಕಾಲದ ಸೂರ್ಯಬಿಂಬದಂತೆ ದುಂಡಾಗಿ ಸೂಕ್ಷ್ಮವಾದ ತೇಜೋರೂಪವು ನಮಗೆ ಗೋಚರವಾಗುವುದು. ಇದಕ್ಕೆ ಬಿಂದುವೆಂದು ಹೆಸರು. ಈ ಬಿಂದುವಿನ ಆಕಾರವನ್ನು ಧಾರಣೆಮಾಡಿಕೊಳ್ಳಲು ಬುದ್ಧಿವೃತ್ತಿಯು, ಮನಸ್ಸು ಮತ್ತು ವಾಯುಗಳೊಡನೆ ಬಿಂದುವಿನ ಸ್ಥಳವನ್ನು ಸೇರಿಕೊಳ್ಳುವುದು. ಈ ರೀತಿಯಾಗಿ ಬುದ್ಧಿವೃತ್ತಿಯು ಬಿಂದುವಿನಾಕಾರವನ್ನು ಪಡೆದು ಭ್ರೂಮಧ್ಯದಲ್ಲಿ ನಿಂತುಕೊಳ್ಳುವುದೇ ಸೇತುವೆಯ ಮೇಲೆ ಸರ್ವರೂ ಬಂದು ಲಂಕಾಪಟ್ಟಣವನ್ನು ಸೇರುವ ತತ್ವವಾಗಿರುವುದು.

ಭ್ರೂಮಧ್ಯಪ್ರದೇಶದಲ್ಲಿ "ಓಂ"ಕಾರೋಚ್ಚಾರಣೆಯ ಅನುಸಂಧಾನದಿಂದ ಬುದ್ಧಿ ವೃತ್ತಿಯನ್ನು ನಿಲ್ಲಿಸಿ ಅಲ್ಲಿ ಕಾಣುವ ತೇಜೋಬಿಂದುವನ್ನು ಧರಿಸಿಕೊಂಡು ಸಮಾಧಿಯ ಅಭ್ಯಾಸಮಾಡಬೇಕೆಂದು ಮೇಲೆ ತಿಳಿಸಿತಷ್ಟೆ! ಭ್ರೂಮಧ್ಯಪ್ರದೇಶದಲ್ಲಿ ಬಿಂದುಧಾರಣೆ ಯನ್ನು ಮಾಡಿಕೊಂಡಿರುವ ಸಕಲ ವಾಯುಗಳೊಡಗೂಡಿದ ಬುದ್ಧಿವೃತ್ತಿಯು ಸೊಂಟದಲ್ಲಿ ಇರುವ ಲಂಕೆಯ ತತ್ವವಾದ ಮೂಲಾಧಾರಚಕ್ರವನ್ನು ಪ್ರವೇಶಮಾಡುವುದು ಹೇಗೆ? ಅಲ್ಲದೆ ಭ್ರೂಮಧ್ಯದಲ್ಲಿ ಕಾಣುವ ತೇಜೋಬಿಂದುವನ್ನು ಧರಿಸಿಕೊಂಡು ಮೂಲಾಧಾರಚಕ್ರದಲ್ಲಿ ವಾಸವಾಗಿರುವ ಅವಿದ್ಯಾಶಕ್ತಿಗಳನ್ನು ನಿಗ್ರಹಿಸುವುದು ಹೇಗೆಂಬ ಪ್ರಶ್ನೆಗಳನ್ನು ವಿಮರ್ಶೆ ಮಾಡಿದರೆ ಸೇತುವೆಯನ್ನು ದಾಟಿ ಲಂಕೆಯನ್ನು ಸೇರಿದ ತತ್ವವು ಗೊತ್ತಾಗುವುದು.

ಮೂಲಾಧಾರದಿಂದ ಭ್ರೂಮಧ್ಯದವರೆಗೂ "ಓಂ"ಕಾರೋಚ್ಚಾರಣೆಯ ಶಕ್ತಿಯು ಕಂಭದಂತೆ ಏಕಾಕಾರವಾಗಿರುತ್ತಷ್ಟೆ! ಈ ಕಾಲದಲ್ಲಿ ಸಕಲವಾಯುಗಳೊಡನೆ ಬುದ್ಧಿ ವೃತ್ತಿಯು ಭ್ರೂಮಧ್ಯದಲ್ಲಿ ನಿಂತಿದ್ದರೂ ಮೂಲಾಧಾರದಿಂದ ಭ್ರೂಮಧ್ಯದವರೆಗೆ ಏಕಾಕಾರ ವಾಗಿರುವ ವರ್ಣೋಚ್ಚಾರಣೆಯ ಶಕ್ತಿಗಳ ಮೂಲಕ ಬುದ್ಧಿವೃತ್ತಿಗೆ ಮೂಲಾಧಾರಕ್ಕೂ ಭ್ರೂಮಧ್ಯಕ್ಕೂ ಸಂಬಂಧವಿದ್ದೇ ಇರುವುದು. ಹೇಗೆಂದರೆ, ಒಂದು ಕಬ್ಬಿಣದ ಸಲಾಕಿ

ಯಲ್ಲಿ ಪ್ರವೇಶಿಸಿದ ಬೆಂಕಿಯು ಸಂಪೂರ್ಣವಾಗಿ ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿಕೊಳ್ಳು ವಂತೆ ಭ್ರೂಮಧ್ಯದಲ್ಲಿರುವ ಬುದ್ಧಿವೃತ್ತಿಗೂ ಮೂಲಾಧಾರಕ್ಕೂ ಸಂಬಂಧವಿರುವುದು. ಬುದ್ಧಿವೃತ್ತಿಯು ಬಿಂದುಧಾರಣೆಯನ್ನು ಮಾಡಿಕೊಳ್ಳುವಾಗ ಕಂಭದಂತೆ ಏಕಾಕಾರವಾಗಿ ರುವ ವರ್ಣೋಚ್ಚಾರಣೆಯ ಶಕ್ತಿಯ ಮೂಲಕ ಮೂಲಾಧಾರಚಕ್ರದವರೆಗೂ ಪ್ರಸರಿಸಿ ಕೊಳ್ಳುವುದು. ಹೀಗೆ ಮೂಲಾಧಾರದವರೆಗೂ ಬುದ್ಧಿವೃತ್ತಿಯು ಪ್ರಸರಿಸಿಕೊಳ್ಳುವುದೇ ಸೇತುವೆಯನ್ನು ದಾಟಿ ಶ್ರೀರಾಮಾದಿಗಳು ಲಂಕೆಯನ್ನು ಸೇರಿದ ತತ್ವವಾಗಿರುವುದು.

ಏಕಾಕಾರವಾಗಿ ಕಂಭದಂತಿರುವ ವರ್ಣೋಚ್ಚಾರಣೆಯೇ ಸೇತುವೆಯ ತತ್ವದಲ್ಲಿರು ವುದಷ್ಟೆ! ಬಿಂದುವಿನಿಂದ ಮೂಲಾಧಾರದವರೆಗೂ ಪ್ರಸರಿಸಿಕೊಂಡಿರುವ ಮನಸ್ಸು ಮತ್ತು ವಾಯುಗಳೊಡನಿರುವ ಬುದ್ಧಿವೃತ್ತಿಯು ಬಿಂದುವನ್ನು ಚೆನ್ನಾಗಿ ಧರಿಸಿಕೊಂಡು ಸಮಾ ಧಿಯ ಅಭ್ಯಾಸಮಾಡುತ್ತಾ ಬಂದರೆ ಮೂಲಾಧಾರದ ಮೂಲಕ ಬ್ರಹ್ಮರಂಧ್ರನಾಡಿಯೊಳಗೆ ಪ್ರವೇಶಿಸುತ್ತಾ ಬರುವುದು. ಅಂದರೆ ಬಿಂದುಧಾರಣೆಯೊಡನೆ ಸಮಾಧಿಯ ಅನುಷ್ಠಾ ನವು ಅಭಿವೃದ್ಧಿಯಾದಂತೆ ಭ್ರೂಮಧ್ಯದಿಂದ ಮೂಲಾಧಾರದವರೆಗೂ, ಏಕವಾಗಿರುವ ಬುದ್ಧಿವೃತ್ತಿಯು ಮೆಲ್ಲಮೆಲ್ಲಗೆ ಮೂಲಾಧಾರದಿಂದ ಪ್ರಾರಂಭವಾಗಿರುವ ಬ್ರಹ್ಮರಂಧ್ರ ನಾಡಿಯೊಳಕ್ಕೆ ಪ್ರವೇಶಮಾಡುತ್ತಾ ಬರುವುದು. ಬಿಂದುಧಾರಣೆಯೊಡಗೂಡಿದ ಸಮಾ ಧಿಯು ಅಭಿವೃದ್ಧಿಯಾಗುತ್ತಾ ಬಂದಹಾಗೆಲ್ಲಾ ಮೂಲಾಧಾರದಲ್ಲಿರುವ ಕುಂಡಲಿನೀ ಶಕ್ತಿಯು ಸುಷುಮ್ನಾನಾಡಿಯ ಮಾರ್ಗದೊಳಕ್ಕೆ ಚಿತ್ರಪಠದಲ್ಲಿ ತೋರಿಸಿರುವಂತೆ ಮೇಲ್ಮುಖವಾಗಿ ಪ್ರವೇಶಿಸುತ್ತಾ ಬರುತ್ತದೆ. ಈ ಕುಂಡಲಿನೀಶಕ್ತಿಯನ್ನು ಹಿಂಬಾಲಿಸಿ ಕೊಂಡು ಬ್ರಹ್ಮರಂಧ್ರದೊಳಗೆ ಮೇಲ್ಮುಖವಾಗಿ ವಾಯು ಮನಸ್ಸುಗಳೊಡಗೂಡಿ ಬುದ್ಧಿ ವೃತ್ತಿಯು ಕೂಡ ಪ್ರವೇಶಿಸುವುದು.

ಬಿಂದುಧಾರಣೆಯಿಂದ ಸಮಾಧಿಯ ಅಭ್ಯಾಸಕ್ಕೆ ಪ್ರಾರಂಭಿಸಿದಾಕ್ಷಣವೇ ಅವಿದ್ಯಾ ವಾಸನಾವೃತ್ತಿಗಳು ನಿಗ್ರಹವಾಗುವುದಿಲ್ಲ. ಸ್ವಪ್ನದಲ್ಲಿನ ವಾಸನಾವೃತ್ತಿಗಳಂತೆ ಬಿಂದು ಧಾರಣೆಯ ಸಮಾಧಿಯ ಅನುಷ್ಠಾನದಲ್ಲಿಯೂ ಅವಿದ್ಯೆಯ ತೊಂದರೆಯು ಇದ್ದೇ ಇರುತ್ತದೆ. ಇದರ ವಿಚಾರವು ಮುಂದೆ ಯುದ್ಧಸಂದರ್ಭದಲ್ಲಿ ವಿವರಿಸಲ್ಪಡುವುದು. ಹೀಗೆ ಅವಿದ್ಯಾ ವೃತ್ತಿಗಳು ಎಳೆಯುತ್ತಿದ್ದರೂ ವಾಯುವಿನೊಡನಿರುವ ಬುದ್ಧಿವೃತ್ತಿಯು ಬಿಂದುವೇ ತಾನೆಂದು ಸಮಾಧಿಯ ಅಭ್ಯಾಸಮಾಡುತ್ತಾ ಬಂದರೆ, ಈ ಬಿಂದುಧಾರಣೆಯ ಅಭ್ಯಾಸ ಬಲದಿಂದ ಸುಷುಮ್ನೆಯೊಳಗೆ ಸ್ವಲ್ಪಸ್ವಲ್ಪವಾಗಿ ಮನಸ್ಸು ವಾಯುಗಳೊಡಗೂಡಿದ ಬುದ್ಧಿ ವೃತ್ತಿಯು ಪ್ರವೇಶಿಸುತ್ತಾ ಬರುವುದು. ಬುದ್ಧಿವೃತ್ತಿಯು ಬಿಂದುವಿನೊಡಗೂಡಿದ ಸಮಾ ಧಿಯ ಅಭ್ಯಾಸದಿಂದ ಸುಷುಮ್ನೆಯೊಳಗೆ ಪ್ರವೇಶಿಸುತ್ತಾ ಸುಷುಮ್ನೆಯೊಳಗಿರುವ ಷಟ್ಚಕ್ರಗಳನ್ನೂ ಭೇದಿಸಿಕೊಂಡು ಪರಮಾತ್ಮಸಾಕ್ಷಾತ್ಕಾರಸ್ವರೂಪವಾದ ಸಹಸ್ರಾರ

ಕಮಾಲದಲ್ಲಿ ಲೀನವಾಗಬೇಕು. ಆದುದರಿಂದ ಬುದ್ಧಿವೃತ್ತಿಯು ಸುಷುಮ್ನೆಯೊಳಗೆ ಪ್ರವೇಶಮಾಡದೆ ಅವಿದ್ಯಾಶಕ್ತಿಗಳನ್ನು ನಿಗ್ರಹಮಾಡಲು ಸಾಧ್ಯವೇ ಇಲ್ಲ. ಬಿಂದುವಿ ನೊಡಗೂಡಿದ "ಓಂ" ಕಾರೋಪಾಸನೆಯನ್ನು ಹೆಚ್ಚಿಸಿಕೊಳ್ಳುತ್ತ ಬಂದರೆ ಬುದ್ಧಿ ವೃತ್ತಿಯು ಸುಷುಮ್ನೆಯೊಳಗೆ ಸ್ವಲ್ಪಸ್ವಲ್ಪವಾಗಿ ಪ್ರವೇಶಿಸಿ ಉಳಿದದ್ದು ಬಿಂದುಸ್ವರೂಪ ದಲ್ಲಿಯೇ ನಿಲ್ಲುವುದು. ಅಭ್ಯಾಸಬಲದಿಂದ ಕ್ರಮೇಣ ಬಿಂದುವು ಹೋಗಿ, ಬುದ್ಧಿವೃತ್ತಿ ಯೆಲ್ಲವೂ ಸಂಪೂರ್ಣವಾಗಿ ಸುಷುಮ್ನೆಯಲ್ಲಿಯೇ ಪ್ರವೇಶಿಸುವುದು. ಇಂತಹ ಕಾಲವೇ ಬಿಂದು ಹೋಗಿ "ಓಂ" ಕಾರನಾದಾನುಸಂಧಾನ ಬರುವ ಕಾಲ.

ಅಂದರೆ ಮೂಲಾಧಾರದಲ್ಲಿರುವ ಅವಿದ್ಯಾಶಕ್ತಿಗಳು ಬುದ್ಧಿವೃತ್ತಿಯನ್ನು ಮಧ್ಯನಾಡಿ ಯಾದ ಸುಷುಮ್ನೆಯೊಳಕ್ಕೆ ಬಿಡದೆ ಬಾಹ್ಯವ್ಯಾಪಾರಕ್ಕೆ ಆಧಾರವಾದ ಸೂರ್ಯಚಂದ್ರನಾಡಿ ಗಳೆಂದರೆ ಇಡಾ ಪಿಂಗಳ ನಾಡಿಗಳಿಗೆ ಬರುವಂತೆ ಎಳೆಯುತ್ತವೆ. ಸುಷುಮ್ನೆಯೊಳಗೆ ಬಾಹ್ಯವ್ಯಾಪಾರಗಳು ತಟಸ್ಥವಾಗುತ್ತ ಬಂದು ಆತ್ಮಸಾಕ್ಷಾತ್ಕಾರವಾಗುವುದರಿಂದ ಅವಿದ್ಯಾ ಶಕ್ತಿಗಳು ಬುದ್ಧಿವೃತ್ತಿಯನ್ನು ಸುಷುಮ್ನಾನಾಡಿಯಲ್ಲಿ ಬಿಡದೆ ಬಾಹ್ಯಕ್ಕೆಳೆಯುತ್ತವೆ. ಆದುದರಿಂದ ದೃಢವಾಗಿ ಬಿಂದುಧಾರಣೆಯೊಡಗೂಡಿದ ಓಂಕಾರೋಪಾಸನೆಯನ್ನು ಮಾಡ ಬೇಕು. ಮಧ್ಯಮಾರ್ಗವಾದ ಸುಷುಮ್ನೆಯೊಳಗೆ ಮನಸ್ಸು ವಾಯುಗಳೊಡನೆ ಬುದ್ಧಿ ವೃತ್ತಿಯು ಪ್ರವೇಶಮಾಡಬೇಕೆನ್ನುವುದಕ್ಕೂ ಬಿಂದುಧಾರಣೆಯು ದೃಢವಾಗುವಂತೆ ಸಮಾಧಿ ಅನುಷ್ಠಾನ ಮಾಡಬೇಕೆನ್ನುವುದಕ್ಕೂ ಶ್ರೀಸ್ವಾತ್ಮಾರಾಮಯೋಗಿಗಳು ಶ್ರುತಿ ವಾಕ್ಯಕ್ಕೆ ಅನುಸಾರವಾಗಿ ಯೋಗಪ್ರದೀಪಿಕೆಯಲ್ಲಿ,

ಯಾವನ್ನೈವಪ್ರವಿಶತಿ ಚರನ್ಮಾರುತೋ ಮಧ್ಯಮಾರ್ಗೇ |
ಯಾವದ್ಬಿಂದು ರ್ನಭವತಿ ದೃಢಃ ಪ್ರಾಣವಾತಪ್ರಬನ್ಧಾತ್ ||
ಯಾವದ್ಧ್ಯಾನೇ ಸಹಜಸದೃಶಂ ಜಾಯತೇ ನೈವತತ್ವಂ |
ತಾವತ್ ಜ್ಞಾನಂ ವದತಿ ತದಿದಂ ದಂಭಮಿಥ್ಯಾಪ್ರಲಾಪಃ ||

ತಾ|| ಚಂಚಲವಾದ ವಾಯುವು ಮಧ್ಯಮಾರ್ಗವಾದ ಸುಷುಮ್ನೆಯೊಳಗೆ ಎಲ್ಲಿಯ ವರೆಗೆ ಪ್ರವೇಶಿಸುವುದಿಲ್ಲವೋ, ಕೇವಲ ಕುಂಭಕ ಅಥವಾ ಸಮಾಧಿಯ ಅಭ್ಯಾಸದಿಂದ ಎಲ್ಲಿಯವರೆಗೆ ಬಿಂದುವು ದೃಢಪಡುವುದಿಲ್ಲವೋ, ಎಲ್ಲಿಯವರೆಗೆ ಬುದ್ಧಿಗೆ ಧ್ಯೇಯಾಕಾರ ವೃತ್ತಿಯುಂಟಾಗುವುದಿಲ್ಲವೋ, ಅಲ್ಲಿಯವರೆಗೆ ತಿಳಿದುಕೊಂಡಿರುವ ಆತ್ಮಜ್ಞಾನವೆಂಬುದು ಡಂಭವಾದ ಅನೃತಪ್ರಲಾಪವು, ಎಂಬದಾಗಿ ಹೇಳಿರುತ್ತಾರೆ.

ಈ ಮೇಲಿನ ತತ್ವಾರ್ಥಗಳೇ ಸಮುದ್ರವನ್ನು ದಾಟಿ ಲಂಕೆಯನ್ನು ಶ್ರೀರಾಮಾದಿಗಳು ಸೇರಿದ್ದಾಗಿದೆ. ಈ ವಿಚಾರದ ತತ್ವವು ಸ್ವಾನುಭವೈಕವೇದ್ಯವೇ ಹೊರತು ಇತರರಿಗೆ ಈ

ತತ್ವವನ್ನು ಗ್ರಾಹ್ಯಮಾಡಿಕೊಳ್ಳುವುದೂ ಕೊಂಚ ಕಷ್ಟವಾಗಿಯೇ ಇರುವುದು. ಹಿಂದಿನ ಮತ್ತು ಈ ಪ್ರಕರಣದ ತತ್ವಗಳಿಗೆ ಅನುಸಾರವಾಗಿ ಶ್ರೀಶಂಕರಭಗವತ್ಪಾದರವರು ಯೋಗ ತಾರಾವಳಿಯಲ್ಲಿ ಹೇಳಿರುವುದೇನೆಂದರೆ,

ತ್ರಿಕೂಟನಾಮ್ನೀ ಸ್ಥಿಮಿತೇಂತರಂಗೆ |
ಖೇಸ್ತಂಭಿತೆ ಕೇವಲ ಕುಂಭಕೇನ |
ಪ್ರಾಣಾ ನಿಲೋ ಭಾನು ಶಶಾಂಕ ನಾಡ್ಯೌ |
ವಿಹಾಯ ಸದ್ಯೋ ವಿಲಯಂ ಪ್ರಯಾತಿ ||

**ತಾ||** ತ್ರಿಕೂಟವೆಂಬ ಹೆಸರುಳ್ಳ ಸ್ಥಳದ ಅಂತರವಾದ ಸುಷುಮ್ನೆಯ ಬಾಗಿಲೊಳಗೆ ಕೇವಲ ಕುಂಭಕದಿಂದ ವಾಯುವು ಸ್ತಂಭಿತವಾಗುತ್ತಿರಲಾಗಿ ಪ್ರಾಣವಾಯುವು ಸೂರ್ಯ ಚಂದ್ರನಾಡಿಗಳನ್ನು ಬಿಟ್ಟು ಸದ್ಯದಲ್ಲಿಯೇ ಸುಷುಮ್ನೆಯ ಮೂಲಕ ಶೂನ್ಯಪದವಿಯಾದ ಬ್ರಹ್ಮರಂಧ್ರದಲ್ಲಿ ಲೀನವಾಗುವುದು, ಮತ್ತು,

ಪ್ರತ್ಯಾಹೃತಃ ಕೇವಲ ಕುಂಭಕೇನ |
ಪ್ರಬುದ್ಧ ಕುಂಡ ಲ್ಯುಪಭುಕ್ತಶೇಷಃ ||
ಪ್ರಾಣಃ ಪ್ರತೀಚೀನ ಪಥೇನ ಮಂದಂ |
ವಿಲೀಯತೇ ವಿಷ್ಣುಪದಾಂತರಾಲೇ ||

**ತಾ||** ಕೇವಲ ಕುಂಭಕಾಭ್ಯಾಸದಿಂದ ಪ್ರತ್ಯಾಹೃತವಾದ, ಅಂದರೆ ಬಿಂದುಧಾರ ಣೆಯ ಸಹಿತವಾದ "ಓಂ"ಕಾರೋಪಾಸನೆಯ ಸಮಾಧಿಯ ಅಭ್ಯಾಸದಿಂದ, ಪ್ರಬುದ್ಧ ವಾದ ಕುಂಡಲಿನಿಯಿಂದ ಉಪಭುಕ್ತವಾದ ಎಂದರೆ ಕುಂಡಲಿನಿಯು ಸುಷುಮ್ನೆಯೊಳಗೆ ಎಷ್ಟೆಷ್ಟು ಪ್ರವೇಶಮಾಡುವುದೋ ಅದರ ಜೊತೆಯಲ್ಲಿ ಬುದ್ಧಿವೃತ್ತಿಯೊಡನಿರುವ ಪ್ರಾಣ ವಾಯುವು ಪ್ರವೇಶಿಸಿ, ಉಳಿದ ಪ್ರಾಣವಾಯು ಮತ್ತು ಬುದ್ಧಿವೃತ್ತಿಯು ಬಿಂದುಸ್ವರೂಪದ ಧಾರಣೆಯಲ್ಲಿರುತ್ತದೆ. ಸುಷುಮ್ನೆಯಲ್ಲಿ ಪ್ರವೇಶಮಾಡಿ ಶೇಷವಾಗಿ ಬಿಂದುಸ್ವರೂಪ ದಲ್ಲಿರುವ ಪ್ರಾಣವಾಯು ಕೂಡ ಸುಷುಮ್ನೆಯೊಳಗೆ ಕುಂಡಲಿನಿಯ ಜೊತೆಯಲ್ಲಿ ಮೇಲ್ಮುಖವಾಗಿ ನಿಧಾನವಾಗಿ ಹೋಗಿ ಪರಮಾತ್ಮನಲ್ಲಿ ಲೀನವಾಗುವುದು.

ಮೇಲೆ ಬರೆದಿರುವ ಶ್ರೀಶಂಕರಭಗವತ್ಪಾದರವರ ಪ್ರಥಮಶ್ಲೋಕದಲ್ಲಿ ಹೇಳುವ ತ್ರಿಕೂಟವೆಂಬುದು ಲಂಕೆಯಾಗಿರುವುದು. ಲಂಕೆಯು ತ್ರಿಕೂಟಾಚಲದಮೇಲೆ ಇರುವು ದೆಂದು ಶ್ರೀಮದ್ರಾಮಾಯಣದಲ್ಲಿಯೇ ಹೇಳಿದೆ. ಸೂರ್ಯ ಚಂದ್ರ ಮತ್ತು ಅಗ್ನಿಗಳೆಂದರೆ, ಇಡಾ, ಪಿಂಗಳ ಸುಷುಮ್ನಾ, ಎಂಬ ಮೂರು ನಾಡಿಗಳು ಸಂಗಮವಾಗುವ ಸ್ಥಳವಾದುದ

ರಿಂದ ಇದಕ್ಕೆ ತ್ರಿಕೂಟವೆಂಬ ತತ್ವವಾಗಿರುವುದು. ತ್ರಿಕೂಟದ ಅಂತರಂಗದಲ್ಲಿ ವಾಯು ವನ್ನು ಸ್ತಂಭಿಸಬೇಕೆಂದರೆ, ತ್ರಿಕೂಟವೆಂದರೆ ಇಡಾ ಪಿಂಗಳ ಸುಷುಮ್ನಾನಾಡಿಗಳ ಸಂಗಮ ವಷ್ಟೆ! ಈ ಮೂರು ನಾಡಿಗಳಲ್ಲಿ ಸೂರ್ಯಚಂದ್ರನಾಡಿಗಳೆರಡೂ ಬಾಹ್ಯವ್ಯಾಪಾರಕ್ಕೆ ಕಾರಣ ವಾಗಿರುತ್ತವೆ. ಸುಷುಮ್ನೆಯು ಗುಪ್ತವಾಗಿ ಅಂತರಂಗದಲ್ಲಿರುತ್ತದೆ. ಹೇಗೆಂದರೆ. ಎರಡು ನದಿಗಳು ಸೇರುವುದು ನಮಗೆ ಪ್ರತ್ಯಕ್ಷವಾಗಿ ಗೋಚರವಾಗುತ್ತಿದ್ದರೂ, ಇತಿಹಾಸ ಪುರಾಣ ಗಳಲ್ಲಿ ಮೂರು ನದಿಗಳು ಸೇರುವ ಸ್ಥಳವೆಂದೂ, ಮೂರನೆಯ ನದಿಯು ಗುಪ್ತಗಾಮಿನಿ ಯಾಗಿ ಬಂದು ಸೇರಿಕೊಂಡಿರುವುದೆಂದೂ ಹೇಳುವರು. ಇದೇ ತಾತ್ಪರ್ಯಕ್ಕೆ "ಗಂಗಾ ಯಮುನಾ ಸರಸ್ವತೀ ಸಂಗಮೋ, ಕಾವೇರೀ ಕಪಿಲಾ ಸ್ಫಟಿಕಸರೋವರ ಸಂಗಮೋ" ಎಂಬ ದಾಗಿ ಶಾಸ್ತ್ರಗಳು ತಿಳಿಸುತ್ತವೆ. ಗಂಗಾ ಯಮುನಾ ನದಿಗಳನ್ನು ಪ್ರತ್ಯಕ್ಷವಾಗಿ ನೋಡು ತ್ತೇವೆ. ಸರಸ್ವತಿಯು ಗುಪ್ತಗಾಮಿನಿಯು. ಇದರಂತೆ ಸ್ಫಟಿಕಸರೋವರವೂ ಗುಪ್ತವಾಗಿದೆ. ಗುಪ್ತವಾಗಿರುವ ಸುಷುಮ್ನಾನಾಡಿಯನ್ನೇ ಅಂತರಂಗವೆಂಬ ಪದದಿಂದ ಶ್ರೀಶಂಕರಭಗವ ತ್ಪಾದರವರು ಹೇಳಿರುವರು.

ಇಂತಹ ಅಂತರಂಗದ ತತ್ವವಾದ ಸುಷುಮ್ನೆಯೊಳಗೆ ವಾಯುವನ್ನು ಸ್ತಂಭಿಸುವು ದೆಂದರೆ "ಓಂ"ಕಾರೋಚ್ಚಾರಣೆಯೊಡಗೂಡಿದ ಬಿಂದುಧಾರಣೆಯಿಂದ ಸಮಾಧಿಯ ಅಭ್ಯಾಸಮಾಡುವ ಕಾಲದಲ್ಲಿ ಸುಷುಮ್ನೆಯೊಳಗೆ ಪ್ರವೇಶಮಾಡುವ ಕ್ರಮ. ಈ ವಿಚಾರದ ತತ್ವವು ಮೇಲಿನ ಶ್ರೀಶಂಕರಭಗವತ್ಪಾದರವರ ಎರಡನೆಯ ಶ್ಲೋಕದ ತಾತ್ಪರ್ಯದಿಂದ ವ್ಯಕ್ತವಾಗಿಯೇ ಇರುವುದು.

ಪ್ರಥಮಶ್ಲೋಕದಲ್ಲಿ ಪ್ರಾಣವಾಯುವು ಸೂರ್ಯಚಂದ್ರನಾಡಿಗಳನ್ನುಬಿಟ್ಟು ಸುಷುಮ್ನೆ ಯೊಳಗೆ ಲೀನವಾಗುವುದೆಂದು ಹೇಳಿರುವುದರ ತಾತ್ಪರ್ಯವೇನೆಂದರೆ ಗಂಗಾ ಯಮುನಾ ಸರಸ್ವತೀ ನದಿಗಳು ಸೂರ್ಯ ಚಂದ್ರ ಮತ್ತು ಸುಷುಮ್ನಾನಾಡಿಗಳೆಂದು ಶ್ರುತ್ಯಾಧಾರವಿರು ವುದು. ದೇವಸ್ಥಾನದ ಚಿತ್ರಪಟದಲ್ಲಿ ತೋರಿಸಿ, ಅಕ್ಷಕುಮಾರನ ನಿಗ್ರಹದ ಕಥೆಯ ತತ್ವ ದಲ್ಲಿ ವಿವರಿಸಿರುವಂತೆ ಸೂರ್ಯ ಚಂದ್ರನಾಡಿಗಳ ಮೂಲಕವಾಗಿ ಬಹಿರ್ವ್ಯಾಪಾರ ನಡೆಯು ತ್ತದೆ. ಇವುಗಳ ಕಾರ್ಯಗಳನ್ನು ನಿಲ್ಲಿಸಿಕೊಳ್ಳುವುದೆಂದರೆ, ಬಹಿರ್ವ್ಯಾಪಾರವನ್ನು ನಿಲ್ಲಿಸುವು ದೆಂಬ ತಾತ್ಪರ್ಯ. ಅಂದರೆ ಬಹಿರ್ವ್ಯಾಪಾರವು ಎಲ್ಲಿ ಶೂನ್ಯವಾಗುವುದೋ ಆ ಸ್ಥಳವೇ ಸುಷುಮ್ನಾನಾಡಿಯೊಳಗಿರುವ ಬ್ರಹ್ಮರಂಧ್ರವು. ಆದುದರಿಂದ ಬಹಿರ್ವ್ಯಾಪಾರವು ಲಯವಾಗುವಸ್ಥಳವೇ ಸುಷುಮ್ನೆಯಾಗಿರುವುದು.

ಎರಡನೆಯ ಶ್ಲೋಕದಲ್ಲಿ ಶ್ರೀಶಂಕರಭಗವತ್ಪಾದರವರು "ಪ್ರಬುದ್ಧಕುಂಡಲ್ಯುಪ ಭುಕ್ತಶೇಷಃ" ಎಂಬವಾಗಿ ಹೇಳಿರುವುದರ ಅರ್ಥವು ಸೇತುಬಂಧನ ಮತ್ತು ಸೇತುವೆ ಯನ್ನು ದಾಟಿ ಲಂಕೆಯನ್ನು ಸೇರುವ ವಿಚಾರದ ತತ್ವಗಳನ್ನೆಲ್ಲಾ ಒಳಗೊಂಡಿದೆ.

ಪ್ರಬುದ್ಧವಾದ ಕುಂಡಲಿನೀ ಎಂಬದಾಗಿ ಹೇಳಿರುತ್ತಾರೆ. ಕುಂಡಲಿನೀಶಕ್ತಿಯು ಪ್ರಬೋಧ ವಾಗಿರುವ ವಿಚಾರವು ಸುಂದರಕಾಂಡದಲ್ಲಿ ಹನುಮಂತನು ನಡೆಸಿದ ಕಾರ್ಯಗಳ ತತ್ವವಾಗಿ ಇರುವುದಷ್ಟೆ! ಅಂದರೆ ಶಕ್ತಿಚಲನಪ್ರಾಣಾಯಾಮದಿಂದ ಕುಂಡಲಿನೀಶಕ್ತಿಯು ಪ್ರಬುದ್ಧೆ ಯಾಗಿರುವಳು. ಇಂತಹ ಕುಂಡಲಿನೀಶಕ್ತಿಯು ಚಿತ್ರಪಟದಲ್ಲಿ ತೋರಿಸಿರುವಂತೆ ಸುಷುಮ್ನೆ ಯೊಳಗೆ ಮೇಲಕ್ಕೆ ಪ್ರವೇಶಮಾಡುತ್ತಾ ಬಂದಹಾಗೆಲ್ಲಾ ಆ ಕುಂಡಲಿನೀಶಕ್ತಿಯೊಡನೆ ವಾಯುಗಳೊಡನಿರುವ ಬುದ್ಧಿವೃತ್ತಿಯೂ ಮೇಲೆಮೇಲಕ್ಕೆ ಹೋಗುತ್ತಾ ಬರುತ್ತದೆ. ಹೀಗೆ ಕುಂಡಲಿನಿಯೊಡನೆ ಉಪಭುಕ್ತವಾಗಿ ಉಳಿದಿರುವ ಬುದ್ಧಿವೃತ್ತಿಯು ಬಿಂದುಧಾರಣೆ ಯಲ್ಲಿ ಭ್ರೂಮಧ್ಯದಲ್ಲಿರುತ್ತದೆ. ಇದೇ ಮೇಲೆ "ಉಪಭುಕ್ತಶೇಷಃ" ಎಂಬದಾಗಿ ಹೇಳಿರು ವುದರ ತಾತ್ಪರ್ಯ. ಈ ಬಿಂದುಧಾರಣೆಯಲ್ಲಿರುವ ಬುದ್ಧಿವೃತ್ತಿಯೂ ಸುಷುಮ್ನೆಯೊಳಗೆ ಲೀನವಾಗಬೇಕು. ಅಧಿಕಾರಿಗೆ ಬಿಂದುಧಾರಣೆಯು ಯಾವಾಗ ನಶಿಸುವುದೋ, ಆಗ ಒಳಗಡೆ "ಓಂ" ಕಾರನಾದೋತ್ಪತ್ತಿಯಾಗುವುದು. ಆಗ ಅಧಿಕಾರಿಯು ತೇಜೋನಾದ ಧ್ಯಾನವಿದ್ಯೆಯ ಅನುಷ್ಠಾನಕ್ಕೆ ಬಂದನೆಂಬ ತಾತ್ಪರ್ಯ. ಈ ತೇಜೋನಾದಧ್ಯಾನವಿದ್ಯಾ ಸೋಪಾನವು ಶ್ರೀರಾಮನಿಗೆ ಅಗಸ್ತ್ಯರು ಆದಿತ್ಯಹೃದಯವನ್ನು ಉಪದೇಶಮಾಡಿದ ಕಥೆಯ ತತ್ವದಲ್ಲಿ ಬರುವದು. ಅಂದರೆ ಬಿಂದುಸಹಿತವಾದ "ಓಂ" ಕಾರವರ್ಣೋ ಚ್ಚಾರಣೆಯ ಅನುಷ್ಠಾನದ ಮುಂದಿನ ಸೋಪಾನವೇ ತೇಜೋನಾದವಿದ್ಯೆಯ ಅನುಷ್ಠಾ ನದ ಸೋಪಾನವಾಗಿರುವುದು. ಸರ್ವಜ್ಞಮೂರ್ತಿಯಾದ ಶ್ರೀಶಂಕರಭಗವತ್ಪಾದರವರು ಸುಂದರಕಾಂಡದ ತತ್ವವನ್ನೆಲ್ಲಾ ಅಡಕಮಾಡಿ ಹೇಳಿರುವ ಶ್ಲೋಕವನ್ನು ಹಿಂದೆಯೇ ಬರೆ ದಿರುತ್ತದಷ್ಟೆ! ಈಗ ಶ್ರೀರಾಮಾದಿಗಳು ಲಂಕೆಯನ್ನು ಸೇರಿದವರೆಗಿನ ಕಥೆಯ ತತ್ವಗಳು ಮೇಲೆ ಹೇಳಿರುವ ಎರಡು ಶ್ಲೋಕಗಳಲ್ಲಿ ಅಡಗಿರುವುವು.

ಶ್ರೀರಾಮನು ದರ್ಭಶಯನದಲ್ಲಿ ಸಮುದ್ರರಾಜನನ್ನು ಉಪಾಸನೆಮಾಡಿದುದು, ಬ್ರಹ್ಮಾಸ್ತ್ರದ ಅನುಸಂಧಾನ, ಸಮುದ್ರರಾಜನು ಪ್ರತ್ಯಕ್ಷವಾದ ವಿಚಾರ ಮತ್ತು ಸಮುದ್ರ ರಾಜನ ಇಷ್ಟದಂತೆ ಬ್ರಹ್ಮಾಸ್ತ್ರಪ್ರಯೋಗಮಾಡಿದ ವಿಚಾರಗಳ ತತ್ವಗಳಿಗೆ ಶ್ರುತ್ಯಾಧಾರ ಗಳನ್ನು ಬರೆಯಲಿಲ್ಲವಷ್ಟೆ! ಈಗ ಈ ಪ್ರಕರಣ ಮತ್ತು ಹಿಂದಿನ ಪ್ರಕರಣಗಳ ತತ್ವಗಳ ನ್ನೊಳಗೊಂಡಿರುವ ಕೆಲವು ಶ್ರುತಿವಾಕ್ಯಗಳನ್ನು ತಿಳಿಸೋಣ. ವರಾಹೋಪನಿಷತ್ ಪಂಚಮಾಧ್ಯಾಯದಲ್ಲಿ,

ಗುದಮೇಢ್ರಾಂತರಾಳಸ್ಥಂ ಮೂಲಾಧಾರತ್ರಿಕೋಣಕಂ |<br>
ಶಿವಸ್ಯಬಿಂದುರೂಪಸ್ಯ ಸ್ಥಾನಂತದ್ಧಿ ಪ್ರಕಾಶಕಂ |<br>
ಯತ್ರಕುಂಡಲಿನೀನಾಮ ಪರಾಶಕ್ತಿಃಪ್ರತಿಷ್ಠಿತಾ |

ಯಸ್ಮಾದುತ್ಪದ್ಯತೇವಾಯು ರ್ಯಸ್ಮಾದ್ವಹ್ನಿಃ ಪ್ರವರ್ಧತೆ |
ಯಸ್ಮಾದುತ್ಪದ್ಯತೇಬಿಂದು ರ್ಯಸ್ಮಾನ್ನಾದಃ ಪ್ರವರ್ಧತೆ |

ತಾ|| ಗುದಯೋನಿಗಳ ಅಂತರಾಳದಲ್ಲಿರುವ ತ್ರಿಕೋಣಾಕಾರವಾದ ಮೂಲಾಧಾರ ಚಕ್ರವೇ ಬಿಂದುರೂಪಾತ್ಮಕನಾದ ಶಿವನ ಪ್ರಕಾಶಸ್ಥಾನವು. ಮೂಲಾಧಾರದಲ್ಲಿಯೇ ಕುಂಡಲಿನೀ ಎಂಬ ಹೆಸರುಳ್ಳ ಪರಾಶಕ್ತಿಯು ಪ್ರತಿಷ್ಠಿತಳಾಗಿರುವಳು. ಮೂಲಾಧಾರದ ದೆಸೆಯಿಂದ ವಾಯುವು ಉತ್ಪತ್ತಿಯಾಗಿ ಅಗ್ನಿಯು ಪ್ರಜ್ವಲಿಸುವುದು ಮತ್ತು ಬಿಂದು ಉತ್ಪತ್ತಿಯಾಗಿ ಅನಂತರ ನಾದವುಂಟಾಗುತ್ತದೆ. ಎಂದು ಹೇಳಿರುವುದು.

ಈ ಮೇಲಿನ ಶ್ರುತಿವಾಕ್ಯದ ತಾತ್ಪರ್ಯವನ್ನನುಸರಿಸಿ ಸಮುದ್ರರಾಜನೇ ಸಗುಣ ಬ್ರಹ್ಮಚೈತನ್ಯಸ್ವರೂಪನಾದ ಶಿವಸ್ವರೂಪನಾಗಿರುವನು. ಶಿವನೇ ನಾದ, ಬಿಂದು, ಕಳಾ ಸ್ವರೂಪನೂ ಇವುಗಳಿಗೆ ಅತೀತನೂ ಆಗಿರುವನು. ಸಮುದ್ರರಾಜನೇ ಮಾಯಾಶಂಭು ವಿನ ತತ್ವದವನೆಂಬುವುದಕ್ಕೆ ಶ್ರೀರಾಮ ರಾವಣರ ಯುದ್ಧಮುಗಿದು ಸೀತಾದೇವಿಯೊಡನೆ ಪುಷ್ಪಕವಿಮಾನದಲ್ಲಿ ಬರುತ್ತಿರುವಾಗ ಮಹಾದೇವನು ಪ್ರತ್ಯಕ್ಷವಾದ ಸ್ಥಳವೆಂದು ತೋರಿಸಿ ಶ್ರೀರಾಮನು ಹೇಳಿರುವ, ಮಹಾದೇವನೇ ಇವನು. ದೂರ್ವಾಸ, ಅಗಸ್ತ್ಯ, ಪದ್ಮ ಮುಂತಾದ ಪುರಾಣಗಳಲ್ಲಿ ಹೇಳಿರುವ, ಶ್ರೀರಾಮನು ರಾಮೇಶ್ವರದಲ್ಲಿ ಪ್ರತಿಷ್ಠೆಮಾಡಿರುವ ಮಹಾದೇವನೂ, ಈ ತತ್ವಾರ್ಥದವನಾಗಿರುವನು. ಈ ಶ್ರುತಿವಾಕ್ಯದಲ್ಲಿರುವ ಉಳಿದ ತತ್ವ ಗಳು ಸುಂದರಕಾಂಡದಾರಭ್ಯ ಶ್ರೀರಾಮನು ಆದಿತ್ಯಹೃದಯದ ಉಪದೇಶ ತೆಗೆದುಕೊಂಡಿರುವ ವರೆಗಿನ ಕಥೆಯ ಅಂತರಾರ್ಥಗಳನ್ನು ಒಳಗೊಂಡಿರುವುದು. ಇದೇ ಅರ್ಥಕ್ಕೆ ಯೋಗ ಶಿಖೋಪನಿಷತ್ ದ್ವಿತೀಯಾಧ್ಯಾಯದಲ್ಲಿ,

ಶಿವಶಕ್ತಿಮಯಂ ಮಂತ್ರಂ ಮೂಲಾಧಾರಾ ತ್ಸಮುತ್ಥಿತಂ |
ತಸ್ಯ ಮಂತ್ರಸ್ಯ ವೈ ಬ್ರಹ್ಮ‌ ಶ್ರೋತಾ ವಕ್ತಾಚ ದುರ್ಲಭಃ ||
ಏತತ್ಪೀಠಮಿತಿ ಪ್ರೋಕ್ತಂ ನಾದಲಿಂಗಂ ಚಿದಾತ್ಮಕಂ |
ತಸ್ಯ ವಿಜ್ಞಾನಮಾತ್ರೇಣ ಜೀವನ್ಮುಕ್ತೋ ಭವೇಜ್ಜನಃ ||
ಮಹಾಮಾಯಾ ಮಹಾಲಕ್ಷ್ಮೀ ಮಹಾದೇವೀ ಸರಸ್ವತಿ |
ಆಧಾರಶಕ್ತಿ ರವ್ಯಕ್ತಾ ಯಯಾ ವಿಶ್ವಂ ಪ್ರವರ್ತತೇ ||
ಸೂಕ್ಷ್ಮಾಭಾ ಬಿಂದುರೂಪೇಣ ಪೀಠರೂಪೇಣ ವರ್ತತೇ |
ಬಿಂದುಪೀಠಂ ವಿನಿರ್ಭಿದ್ಯ ನಾದಲಿಂಗ ಮುಪಸ್ಥಿತಂ |
ಪ್ರಾಣೇನೋಚ್ಚಾರ್ಯ ತೇ ಬ್ರಹ್ಮ‌ ಷಣ್ಮುಖೀ ಕರಣೇಷುಚ ||

ತಾ|| ಶಿವಶಕ್ತಿಸ್ವರೂಪವಾದ ಪ್ರಣವೋಚ್ಚಾರಣೆಯ ಮಂತ್ರವು ಮೂಲಾಧಾರದಿಂದ ಉತ್ಪನ್ನವಾಗುವುದು. ಈ "ಓಂ"ಕಾರಮಂತ್ರವನ್ನು ಹೇಳತಕ್ಕವರೂ ಕೇಳತಕ್ಕವರೂ ದುರ್ಲಭ. ಈ ಮೂಲಾಧಾರದಲ್ಲಿರುವ ಪೀಠವೇ ಚಿದಾತ್ಮಕವಾದ ನಾದಲಿಂಗಪೀಠವೆನಿಸಿಕೊಳ್ಳುವುದು. ಇದನ್ನು ತಿಳಿದ ಮಾತ್ರಕ್ಕೆ ಮನುಷ್ಯನು ಜೀವನ್ಮುಕ್ತನಾಗುವನು. "ಓಂ"ಕಾರಸ್ವರೂಪವಾದ ಯಾವ ಶಕ್ತಿಯಿಂದ ಈ ಪ್ರಪಂಚಕ್ಕೆ ಪ್ರವೃತ್ತಿಯುಂಟಾಗುವುದೋ ಆ ಶಕ್ತಿಯೇ ಮಹಾಮಾಯಾ, ಮಹಾಲಕ್ಷ್ಮೀ, ಮಹಾದೇವಿ, ಮತ್ತು ಮಹಾ ಸರಸ್ವತೀ ಎನಿಸಿಕೊಳ್ಳುವುದು. ಆ ಅವ್ಯಕ್ತಶಕ್ತಿಯೇ ಸೂಕ್ಷ್ಮಪ್ರಕಾಶವಾಗಿ ಬಿಂದುಪೀಠವೆನಿಸಿಕೊಳ್ಳುವುದು. ಮೂಲಾಧಾರದಲ್ಲಿರುವ ನಾದಲಿಂಗದ ಪೀಠವನ್ನು ಭೇದಿಸಿ ಅನಂತರ ಷಣ್ಮುಖೀಮುದ್ರೆಯಿಂದ ನಾದಾತ್ಮಕವಾದ ಪ್ರಣವದ ಅನುಸಂಧಾನ ಮಾಡಬೇಕು.

ಈ ಮೇಲಿನ ಶ್ರುತಿವಾಕ್ಯದ ತಾತ್ಪರ್ಯವು "ಓಂ"ಕಾರೋಪಾಸನೆಯು ಪರಮ ಶ್ರೇಷ್ಠವೆಂದು ತಿಳಿಸುವುದು. ಬಿಂದುಸಹಿತವಾದ "ಓಂ"ಕಾರೋಪಾಸನೆಯಲ್ಲಿನ ಪ್ರಭೆಯು ಸಮುದ್ರರಾಜನ ಸಂದರ್ಭದಲ್ಲಿ ಹೇಳಿರುವಂತೆ ಸಗುಣಬ್ರಹ್ಮಸ್ವರೂಪವಾಗಿರುವುದು. ಬಿಂದುಪೀಠವೆ ಮೂಲಾಧಾರದಲ್ಲಿ "ಓಂ"ಕಾರದಲ್ಲಿನ, "ಅ"ಕಾರವೆಂದರೆ ಬ್ರಹ್ಮಗ್ರಂಥಿಯಾಗಿರುವುದು. ಅಂದರೆ, ಅಧಿಕಾರಿಯು ಬಿಂದುಸಹಿತವಾದ "ಓಂ"ಕಾರೋಪಾಸನೆಯನ್ನು ಮಾಡುವಾಗ ಭ್ರೂಮಧ್ಯದಲ್ಲಿ ಬಿಂದುಧಾರಣೆಯನ್ನು ಮಾಡಿಕೊಳ್ಳುವನಷ್ಟೆ! ಈ ಬಿಂದುಧಾರಣೆಗೆ ಪೀಠಸ್ವರೂಪವಾಗಿರುವುದೇ "ಓಂ"ಕಾರದಲ್ಲಿನ "ಅ"ಕಾರವಾದ ಬ್ರಹ್ಮಗ್ರಂಥಿಯು. ಅಂದರೆ ಮೂಲಾಧಾರದಿಂದ ಭ್ರೂಮಧ್ಯದವರೆಗೆ ಏಕಾಕಾರವಾಗಿರುವ "ಓಂ"ಕಾರಕ್ಕೆ ಪೀಠವು ಬ್ರಹ್ಮಗ್ರಂಥಿಯು. "ಓಂ"ಕಾರವರ್ಣೋಚ್ಚಾರಣೆಗೂ ಇವರ ಮುಂದಿನ ಸೋಪಾನವಾದ "ಓಂ"ಕಾರನಾದಕ್ಕೂ "ಓಂ"ಕಾರದಲ್ಲಿನ "ಅ"ಕಾರವೆಂದರೆ ಬ್ರಹ್ಮಗ್ರಂಥಿಯು ಪೀಠವಾಗಿರುವುದು. "ಓಂ"ಕಾರ ನಾದೋತ್ಪತ್ತಿಯಾಗಬೇಕಾದರೆ, ಬಂಧಿಸಿರುವ "ಅ"ಕಾರಸ್ವರೂಪವಾದ ಬ್ರಹ್ಮಗ್ರಂಥಿಯು ಭೇದಿಸಲ್ಪಟ್ಟನಂತರ, "ಉ" ಕಾರ ಅಥವಾ ವಿಷ್ಣುಗ್ರಂಥಿಯು ಭೇದನೆಯಾಗಿ, "ಓಂ"ಕಾರನಾದೋತ್ಪತ್ತಿಯಾಗುವುದು. ಬ್ರಹ್ಮಗ್ರಂಥಿ ಅಥವಾ ಬಿಂದುಪೀಠದ ಭೇದನೆಯ ವಿಚಾರವೇ ಹಿಂದಿನ ಪ್ರಕರಣದ ದ್ರುಮಕುಲ್ಯ ಮತ್ತು ವ್ರಣಕೂಪದ ವಿಚಾರಗಳ ತತ್ವವಾಗಿರುವುದು. "ಓಂ"ಕಾರನಾದೋತ್ಪತ್ತಿಯಾಗುವುದಕ್ಕೆ "ಓಂ"ಕಾರದಲ್ಲಿನ "ಅ"ಕಾರ "ಉ"ಕಾರಗಳೆರಡರ ಗ್ರಂಥಿಗಳ ತತ್ವವಾದ ಬ್ರಹ್ಮ ವಿಷ್ಣು ಗ್ರಂಥಿಗಳೆರಡೂ ಭೇದನೆಯಾಗಬೇಕೆಂಬ ತಾತ್ಪರ್ಯಕ್ಕೆ ಯೋಗತತ್ವೋಪನಿಷತ್ತಿನಲ್ಲಿ,

ಅಕಾರೇ ರೇಚಿತಂ ಪದ್ಮ ಮುಕಾರೇಣೈವ ಭಿದ್ಯತೇ |
ಮಕಾರೆ ಲಭತೇ ನಾದ ಮರ್ಧಮಾತ್ರಾತು ನಿಶ್ಚಲಾ ||

**ತಾ||** ಅಕಾರಸ್ವರೂಪವಾದ ಬ್ರಹ್ಮಗ್ರಂಥಿಯು "ಉ"ಕಾರಸ್ವರೂಪವಾದ, ವಿಷ್ಣು ಗ್ರಂಥಿಯೊಡನೆ ಸೇರುವುದು. ಮಕಾರಸಂಬಂಧವಾದಾಗ ನಾದವುಂಟಾಗುವುದು. ಅನಂತರ ನಾದವಡಗಿ ಕಳೆಗೆ ಬರುವುದು. ಕಳೆಯಡಗಿ ನಿಷ್ಕಲವಾದ ಆತ್ಮಸಾಕ್ಷಾತ್ಕಾರವಾಗುವುದು ಎಂದು ಹೇಳಿದೆ.

ಮುಖ್ಯತಾತ್ಪರ್ಯವೇನೆಂದರೆ, ಹೃದಯದಲ್ಲಿರುವ ವಿಷ್ಣುಗ್ರಂಥಿಯನ್ನು ಭೇದಿಸಿದರೆ, ಬ್ರಹ್ಮಗ್ರಂಥಿಯಿಂದುಂಟಾಗುವ ಬಿಂದು ಹೋಗಿ ನಾದೋತ್ಪತ್ತಿಯಾಗುವುದು. ಮಕಾರ ವಾದ ಭ್ರೂಮಧ್ಯದಲ್ಲಿರುವ ರುದ್ರಗ್ರಂಥಿಯನ್ನು ಭೇದಿಸಿದರೆ, "ಓಂ"ಕಾರದ ನಾದವಡಗಿ ಕಳಾರೂಪವಾಗುವುದು. ಕಳೆಯು ಆತ್ಮನಲ್ಲಿ ಲೀನವಾದರೆ, ನಿಷ್ಕಲತೆಯನ್ನು ಪಡೆಯುವು ದೆಂದರೆ ಆತ್ಮಸಾಕ್ಷಾತ್ಕಾರವಾಗುವುದು.

ಈ ಗ್ರಂಥಿಭೇದನೆಯ ತತ್ವವೇ, ವಿಶ್ವ, ತೈಜಸ, ಪ್ರಾಜ್ಞರ ಉಪಾಧಿಗಳನ್ನು ಬುದ್ಧಿ ತತ್ವವು ಉಪಸಂಹಾರಮಾಡಿಕೊಳ್ಳುವ ತಾತ್ಪರ್ಯವೂ ಆಗಿರುವುದು. ವಿಶ್ವತ್ವದ ಉಪಾಧಿ ಯೆಂದರೆ ಬಹಿರ್ವ್ಯಾಪಾರ. ತೇಜಸ್ಸಿನಲ್ಲಿಯೇ ವ್ಯಾಪಾರವುಳ್ಳ ಸ್ವಪ್ನದಂತೆ ಸಮಾಧಿಯ ಅನುಷ್ಠಾನದಲ್ಲಿ ಅಂತರ್ಮುಖದಲ್ಲಿ ಕಾಣುವ ತೇಜಸ್ಸಿನಲ್ಲಿ ಬುದ್ಧಿವೃತ್ತಿಯು ಸ್ಥಿರತ್ವವನ್ನು ಪಡೆದಾಗ ಬಹಿರ್ವ್ಯಾಪಾರದ ಉಪಾಧಿಗಳನ್ನು ಉಪಸಂಹಾರಮಾಡಿಕೊಂಡಂತಾಗಿ ವಿಶ್ವತ್ವ ದಿಂದ ತೈಜಸತ್ವಕ್ಕೆ ಬಂದಂತಾಗುವುದು. ಸ್ವಪ್ನಸದೃಶವಾದ ಸಮಾಧಿಸ್ಥಿತಿಯು ಹೋಗಿ ಉನ್ಮನೀಸ್ಥಿತಿಯಾದ ಕಳಾಸ್ವರೂಪವುಂಟಾದಾಗ, ತೈಜಸತ್ವದ ಉಪಾಧಿಗಳನ್ನು ಉಪ ಸಂಹಾರಮಾಡಿಕೊಂಡಂತಾಗಿ ಪ್ರಾಜ್ಞತ್ವದ ಸೋಪಾನಕ್ಕೆ ಬಂದಂತಾಗುವುದು. ಕಳೆಯು ಪರಬ್ರಹ್ಮನಲ್ಲಿ ಲೀನವಾದರೆ, ಪ್ರಾಜ್ಞತ್ವದ ಸೋಪಾನವೂ ಹೋಗಿ ತುರೀಯಸೋಪಾನ ವನ್ನು ಪಡೆದಂತಾಗುವುದು.

ಮೇಲೆ ತಿಳಿಸಿರುವ ಗ್ರಂಥಿಭೇದನೆಯ, ವಿಶ್ವ ತೈಜಸ ಪ್ರಾಜ್ಞರ ಉಪಾಧಿಗಳು ಪರ ಬ್ರಹ್ಮನಲ್ಲಿ ಲೀನವಾಗುವ ತತ್ವವೇ ಅಕಾರವನ್ನು ಉಕಾರದಲ್ಲಿಯೂ, ಉಕಾರವನ್ನು ಮಕಾರ ದಲ್ಲಿಯೂ, ಮಕಾರವನ್ನು ಪರಬ್ರಹ್ಮನಲ್ಲಿಯೂ ಲೀನಮಾಡುವುದಾಗಿರುವುದು. ಈ ತತ್ವ ಗಳೇ ಮೇಲೆ ಬರೆದಿರುವ ಯೋಗತತ್ತ್ವೋಪನಿಷದ್ವಾಕ್ಯದ ವಿವರವಾಗಿರುವುದು. ಕಠೋಪ ನಿಷತ್ತಿನಲ್ಲಿಯೂ "ಓಂ"ಕಾರವನ್ನು ಪಾದಪಾದವಾಗಿ ತಿಳಿದುಕೊಳ್ಳಬೇಕೆಂದು ಹೇಳಿರುವುದು ಸಮಾಧಿಯಲ್ಲಿ ಈ ಮೇಲಿನ ಸೋಪಾನಗಳನ್ನು ಕ್ರಮವಾಗಿ ಅಧಿಕಾರಿಯು ಅನುಷ್ಠಾನ ಮಾಡಿ ಕೃತಕೃತ್ಯನಾಗಬೇಕೆಂಬ ತಾತ್ಪರ್ಯವಾಗಿರುವುದು. ಈ ಮೂರು ಪಾದಗಳ ತತ್ವದಲ್ಲಿ ಪ್ರಥಮಪಾದದ ವಿಚಾರವೇ ಸಮುದ್ರರಾಜನ ಮತ್ತು ಬ್ರಹ್ಮಾಸ್ತ್ರಪ್ರಯೋಗದ ತತ್ವವಾಗಿದೆ.

ಹಿಂದಿನ ಪ್ರಕರಣದಿಂದಲೂ ತಿಳಿಸಿಕೊಂಡು ಬಂದಿರುವ "ಓಂ"ಎಂಬ ವರ್ಣೋಚ್ಚಾರಣೆಯಿಂದ ಮಾಡುವ ಅನುಷ್ಠಾನದಲ್ಲಿ ಅಕಾರ ಮೊದಲು ಕ್ಷಕಾರಾಂತವಾದ ಅಕ್ಷರಗಳ ಉಚ್ಚಾರಣೆಯು ನಾದವೂ ಶಬ್ದಬ್ರಹ್ಮವೆಂದು ತಿಳಿಸಿರುವುದಷ್ಟೆ! ಇದೇ ಅರ್ಥಕ್ಕೆ ಯೋಗಶಿಖೋಪನಿಷತ್ ತೃತೀಯಾಧ್ಯಾಯದಲ್ಲಿ,

ಅಕ್ಷರಂ ಪರಮೋನಾದ ಶ್ಶಬ್ದಬ್ರಹ್ಮೇತಿ ಕಥ್ಯತೇ |
ಮೂಲಾಧಾರಗತಾ ಶಕ್ತಿಃ ಸ್ವಾಧಾರಾ ಬಿನ್ದುರೂಪಿಣೀ ||
ತಸ್ಯಾಮುತ್ಪದ್ಯತೇ ನಾದ ಸ್ಸೂಕ್ಷ್ಮಬೀಜಾದಿವಾಂಕುರಃ |
ಏಷಾ ಸರಸ್ವತೀದೇವೀ ಸರ್ವಭೂತಗುಹಾಶ್ರಯಾ ||

ತಾ|| ಅಕಾರದಿಂದ ಕ್ಷಕಾರದವರೆಗಿರುವ ಅಕ್ಷರಗಳ ಉಚ್ಚಾರಣೆಯು ಸರ್ವೋತ್ಕೃಷ್ಟವಾದ ನಾದವೇ ಶಬ್ದಬ್ರಹ್ಮವೆಂದು ಹೇಳಲ್ಪಡುವುದು. ಮೂಲಾಧಾರದ ಪೀಠವನ್ನು ಹೊಂದಿದ ಪರಾಶಕ್ತಿಯು ತನಗೆ ಆಧಾರವಾಗಿರುವ ಬಿಂದುರೂಪವಾಗಿಯೂ ಇರುವಳು. ಬೀಜದಲ್ಲಿ ಅಂಕುರವು ಸೂಕ್ಷ್ಮರೂಪದಲ್ಲಿರುವಂತೆ ಅವಳಲ್ಲಿ "ಓಂ"ಕಾರವರ್ಣೋಚ್ಚಾರಣೆಗೆ ಕಾರಣವಾದ "ಓಂ"ಕಾರನಾದೋತ್ಪತ್ತಿಯಾಗುವುದು. ಈ "ಓಂಕಾರನಾದಸ್ವರೂಪಳಾದ ಶಕ್ತಿಯೇ ಸಮಸ್ತ ಪ್ರಾಣಿಗಳ ಅಂತರಾಳವೆಂದರೆ ಸುಷುಮ್ನೆಯಲ್ಲಿ ಆಶ್ರಯಿಸಿಕೊಂಡಿರುವ ಸರಸ್ವತೀದೇವಿಯು.

ಈ ಶ್ರುತಿವಾಕ್ಯದ ಮುಖ್ಯತಾತ್ಪರ್ಯವೇನೆಂದರೆ—ಸುಷುಮ್ನಾನಾಡಿಯ ಹೊರಪ್ರಾಕಾರದಲ್ಲಿ ಚಿತ್ರಪಠದಲ್ಲಿ ತೋರಿಸಿರುವಂತೆ ಶಕ್ತಿರೂಪದಲ್ಲಿ ಚಕ್ರಗಳಿರುತ್ತವೆ. ನಾವು ಮಾತನಾಡುವ ಅಕ್ಷರಗಳ ಉಚ್ಚಾರಣೆಯು ಈ ಚಕ್ರಗಳಿಂದ ಹೊರಡುತ್ತದೆ. ಪ್ರತಿಯೊಂದು ಚಕ್ರದಲ್ಲಿಯೂ ಯಾವ ಯಾವ ಅಕ್ಷರಗಳ ಉಚ್ಚಾರಣೆಯ ಶಕ್ತಿಗಳಿರುವುವೋ ಅವುಗಳ ವಿವರವನ್ನೂ ಶಾಸ್ತ್ರವು ನಿರೂಪಿಸುವುದು. ಅಲ್ಲದೆ ಸಂಗೀತಶಾಸ್ತ್ರವು ಕೂಡ ಈ ಚಕ್ರಗಳಲ್ಲಿರುವ ಶಕ್ತಿಗಳಿಗೆ ಅನ್ವಯವಾಗುವಂತೆ ಇರುವುದು. ಈ ಶಾಸ್ತ್ರಗಳ ಆಧಾರದಿಂದ ವರ್ಣೋಚ್ಚಾರಣೆಯ ವಿಚಾರವನ್ನು ತಿಳಿದುಕೊಳ್ಳಬಹುದು.

ಈ ಮೇಲಿನ ಅಂಶಗಳ ಮುಖ್ಯತಾತ್ಪರ್ಯವೇನೆಂದರೆ—ಅಕಾರದಿಂದ ಕ್ಷಕಾರದವರೆಗಿರುವ ಅಕ್ಷರಗಳಲ್ಲಿ ಯಾವ ಅಕ್ಷರಕ್ಕಾದರೂ ಅನುಸ್ವಾರ ಅಥವಾ ಬಿಂದುವನ್ನು ಸೇರಿಸಿ ಉಚ್ಚಾರಣೆಯನ್ನು ಬೆಳೆಸುತ್ತಾ ಬಂದರೆ, ಅಕ್ಷರದ ಉಚ್ಚಾರಣೆಯು ಕಾಣದೆ ಅನುಸ್ವಾರ ಅಥವಾ ಬಿಂದುಸ್ವರೂಪದಲ್ಲಿ ನಿಂತುಕೊಳ್ಳುವುದು. ಈ ವಿಧವಾಗುವುದೋ ಇಲ್ಲವೋ ಎಂಬುದನ್ನು ಸರ್ವರೂ ಉಚ್ಚರಿಸಿ ತಿಳಿಯಬಹುದು. ಅಲ್ಲದೆ ಇದೇ ಅರ್ಥಕ್ಕೆ ಅರ್ಜುನನ ಪ್ರಶ್ನರೂಪವಾದ ಶ್ಲೋಕವನ್ನು ಹಿಂದಿನ ಪ್ರಕರಣದಲ್ಲಿಯೇ ತಿಳಿಸಿದೆ. "ಓಂ" ಎಂಬ

ವರ್ಣೋಚ್ಚಾರಣೆಯಿಂದ ಉಪಾಸನೆಮಾಡಿದರೆ, "ಓಂ"ಎಂಬ ಶಬ್ದದಲ್ಲಿ ಸರ್ವಾಕ್ಷರಗಳ ಶಕ್ತಿಯೂ ಅಡಗಿರುವುದು. ಸುಷುಮ್ನೆಯ ಹೊರಗಿರುವ ಚಕ್ರಗಳಿಂದ ಉತ್ಪನ್ನವಾಗುವ ಎಲ್ಲಾ ಅಕ್ಷರಗಳ ಶಬ್ದಕ್ಕೂ ಮೂಲಕಾರಣವಾಗಿರುವ "ಓಂ"ಕಾರನಾದಸ್ವರೂಪಳಾದ ಸರಸ್ವತೀದೇವಿಯು ಸುಷುಮ್ನೆಯ ಅಂತರ್ಗತಳಾಗಿದ್ದುಕೊಂಡು ಹೊರಗಿನ ಉಚ್ಚಾರಣಾ ಶಕ್ತಿಯನ್ನು ಪ್ರಕಾಶಪಡಿಸುತ್ತಿರುವಳು. ಸುಷುಮ್ನೆಯ ಒಳಗಿರುವ ನಾದವನ್ನು ಪಡೆಯಲು ಪ್ರಥಮದಲ್ಲಿ ಬಿಂದುಸಹಿತವಾದ "ಓಂ"ಕಾರೋಚ್ಚಾರಣೆಯ ಅನುಷ್ಠಾನಮಾಡಿ, ಈ ಅನುಷ್ಠಾನವು ಸಿದ್ಧಿಸುತ್ತಾ ಬಂದಂತೆ, "ಓಂ"ಕಾರನಾದಾನುಸಂಧಾನದ ಅನುಷ್ಠಾನವು ಪ್ರಾರಂಭವಾಗುವುದು. ಶ್ರೇಷ್ಠವಾದ ಈ "ಓಂ"ಕಾರೋಪಾಸನೆಯನ್ನು ಮಾಡಬೇಕೆನ್ನುವುದಕ್ಕೂ "ಓಂ"ಕಾರೋಪಾಸನೆಯಿಂದ ಕುಂಡಲಿನಿಯು ಮೇಲ್ಮುಖವಾಗುವುದಕ್ಕೂ, ಯೋಗಕುಂಡಲ್ಯುಪನಿಷತ್ ಪ್ರಥಮಾಧ್ಯಾಯದಲ್ಲಿ,

ಅರುಂಧತ್ಯೇವ ಕಥಿತಾ ಪುರಾ ವಿದ್ಧಿ ಸ್ಸರಸ್ವತೀ |
ಯಸ್ಯಾಸ್ಸಂಚಾಲನೇ ನೈವ ಸ್ವಯಂಚಲತಿ ಕುಂಡಲೀ |
ತಸ್ಮಾ ತ್ಸಂಚಾಲಯೇ ನ್ನಿತ್ಯಂ ಶಬ್ದಗರ್ಭಾಂ ಸರಸ್ವತೀಮ್ ||

ತಾ|| ಶಬ್ದಬ್ರಹ್ಮಸ್ವರೂಪಳಾದ ಸರಸ್ವತಿಯು ಜ್ಞಾನಿಯಾದ ಅರುಂಧತಿಯಿಂದಲೇ ಪ್ರಚುರಮಾಡಲ್ಪಟ್ಟಳು. ಶಬ್ದಬ್ರಹ್ಮಸ್ವರೂಪಳಾದ ಸರಸ್ವತೀದೇವಿಯ ಸಂಚಲನೆಯಿಂದ ಅಂದರೆ "ಓಂ"ಕಾರೋಪಾಸನೆಯಿಂದಲೇ ಕುಂಡಲಿನಿಯು ತನ್ನಷ್ಟಕ್ಕೆ ತಾನೇ ಚಲಿಸುವುದು. ಆದುದರಿಂದ ಶಬ್ದಗರ್ಭಿತಳಾದ ಸರಸ್ವತಿಯನ್ನು ಚಲಿಸುವಂತೆ ಮಾಡಬೇಕು ಎಂದು ಹೇಳಿರುವುದು.

ದರ್ಭಶಯನದಾರಭ್ಯ ಲಂಕಾಪ್ರವೇಶದವರೆಗಿನ ಕಥೆಯ ತತ್ವಗಳು "ಓಂ"ಕಾರೋಚ್ಚಾರಣೆಯ ಅನುಷ್ಠಾನವನ್ನು ಪ್ರಥಮದಲ್ಲಿ ಪ್ರಾರಂಭಿಸುವ ಮತ್ತು ಈ ಅನುಷ್ಠಾನದಿಂದ ಬ್ರಹ್ಮಗ್ರಂಥಿ ಅಥವಾ "ಓಂ"ಕಾರದಲ್ಲಿನ ಅಕಾರದಲ್ಲುಂಟಾಗುವ ಪರಿಣಾಮಗಳನ್ನು ತಿಳಿಸಿತಷ್ಟೆ! ಪ್ರಥಮದಲ್ಲಿ ಅಧಿಕಾರಿಯು "ಓಂ"ಕಾರದ ಪಾದಸ್ವರೂಪವಾದ "ಅ"ಕಾರವನ್ನು ಅನುಸರಿಸಿಕೊಂಡು ಆತ್ಮಸಾಕ್ಷಾತ್ಕಾರವನ್ನು ಪಡೆಯುವನು. ಇಂತಹ ಪ್ರಣವೋಪಾಸನೆಯಿಂದ ಪ್ರಪಂಚಸ್ವರೂಪವಾದ ದುಃಖವು ತೊಲಗುವುದು. ಇದೇ ತಾತ್ಪರ್ಯಕ್ಕೆ ಮಾಂಡೂಕ್ಯೋಪನಿಷತ್ಕಾರಿಕೆಯಲ್ಲಿ,

ಪ್ರಣವಂಹೀಶ್ವರಂ ವಿದ್ಯಾ ತ್ಸರ್ವಸ್ಯ ಹೃದಿಸಂಸ್ಥಿತಮ್ |
ಸರ್ವವ್ಯಾಪಿನ ಮೋಂಕಾರಂ ಮತ್ವಾಧೀರೋ ನಶೋಚತಿ ||

ತಾ|| ಪ್ರಣವವನ್ನು ಎಲ್ಲರ ಹೃದಯದಲ್ಲಿಯೂ ಇರುವ ಈಶ್ವರನೆಂದು ಅರಿಯಬೇಕು. ಎಲ್ಲೆಲ್ಲಿಯೂ ಹಬ್ಬಿಕೊಂಡಿರುವ "ಓಂ"ಕಾರವನ್ನು ಅರಿತ ಪಂಡಿತನು ದುಃಖವನ್ನು ಹೊಂದುವುದಿಲ್ಲ. ಎಂದು ಹೇಳಿರುವುದು.

ಆದುದರಿಂದ ನಿಶ್ಚಯವಾಗಿ ಮೋಕ್ಷವನ್ನು ಪಡೆಯಬೇಕೆಂಬ ಇಚ್ಛೆಯುಳ್ಳವರು ಪರಮಪವಿತ್ರವಾದ "ಓಂ"ಕಾರೋಪಾಸನೆಯ ಅಧಿಕಾರವನ್ನು ಪಡೆದು ಅನುಷ್ಠಾನಮಾಡಬೇಕು. ಪ್ರತಿಯೊಂದು ದೇವತೋಪಾಸನೆಯ ಮೂಲಮಂತ್ರದ ಪ್ರಥಮದಲ್ಲಿಯೂ "ಓಂ"ಎಂಬ ಅಕ್ಷರವನ್ನು ಸೇರಿಸಿರುವ ತತ್ವಾರ್ಥವೇನೆಂದರೆ—"ಓಂ"ಕಾರೋಚ್ಚಾರಣೆಯ ಅನುಸಂಧಾನಮಾಡಿಕೊಂಡು ಭ್ರೂಮಧ್ಯದಲ್ಲಿ ಗೋಚರವಾಗುವ ತೇಜೋಬಿಂದುವಿಗೆ ಬದಲಾಗಿ, ತೇಜಸ್ಸಿನಲ್ಲಿಯೇ ತೇಜೋ ಆಕಾರದಲ್ಲಿ ಉಪಾಸನಾದೇವತಾಸ್ವರೂಪವನ್ನು ಭಾವಿಸಿ ಬುದ್ಧಿವೃತ್ತಿಯಿಂದ ಧರಿಸಿಕೊಂಡು ಉಪಾಸಿಸಬೇಕೆಂಬ ತಾತ್ಪರ್ಯದಿಂದಲೇ ಮೂಲಮಂತ್ರಗಳ ಪ್ರಥಮದಲ್ಲಿ "ಓಂ" ಎಂಬುದಿರುವುದು. ಉಪಾಸಕರೇ ಅಲ್ಲದೆ ಮಂತ್ರವನ್ನು ಜಪಮಾಡತಕ್ಕವರೂ, ಸಹಸ್ರನಾಮಾದಿ ಪೂಜೆಮಾಡತಕ್ಕವರೂ, ಮಂತ್ರ ಮತ್ತು ದೇವರ ನಾಮಗಳಿಗೆ ಪ್ರಥಮದಲ್ಲಿ "ಓಂ"ಎಂಬುದನ್ನುಚ್ಚರಿಸಿ, ಅನಂತರ ಜಪದ ಮಂತ್ರ ಮತ್ತು ದೇವರ ನಾಮಗಳ ಮಂತ್ರಗಳನ್ನುಚ್ಚರಿಸಬೇಕೆಂದು ಗೊತ್ತುಮಾಡಿರುವುದರಿಂದಲೂ, "ಓಂ"ಎಂಬುದು ಪರಮಪವಿತ್ರವಾದುದು.

"ಓಂ" ಎಂಬುದೇ ಪರ ಮತ್ತು ಅಪರವೆಂದರೆ—ಸಗುಣ ಮತ್ತು ನಿರ್ಗುಣ ಬ್ರಹ್ಮವಾಗಿರುವುದು. ಆದುದರಿಂದ "ಓಂ" ಎಂಬುದನ್ನು ಉಪಾಸಕರು ವರ್ಣೋಚ್ಚಾರಣೆಯ ಅನುಸಂಧಾನದಿಂದ ಉಪಾಸನೆಮಾಡಬೇಕು. ಜಪ ಮತ್ತು ಕರ್ಮಗಳನ್ನು ಮಾಡತಕ್ಕವರೂ "ಓಂ" ಎಂಬುದನ್ನು ಪಠಿಸಬೇಕು. ಗಾನವಿದ್ಯಾವಂತರು "ಓಂ" ಎಂಬ ಶಬ್ದದಿಂದಲೇ ಯಥೇಚ್ಛವಾಗಿ ರಾಗಾಲಾಪನೆ ಮಾಡಬೇಕು. ಬ್ರಹ್ಮಕಾಮಿಗಳು ದುಷ್ಟವಾಸನೆಗಳು ತಲೆದೋರದಂತಿರುವುದಕ್ಕೂ ಸತ್ಸಹವಾಸದಲ್ಲಿರುವುದಕ್ಕೂ "ಓಂ" ಎಂಬುದನ್ನೇ ಪಠಿಸುತ್ತಾ ಬರಬೇಕು. "ಓಂ" ಕಾರದ ಮಹಿಮೆಗಳನ್ನು ವೇದಗಳು ಉದ್ಘೋಷಿಸುತ್ತಿವೆ. ಇಂತಪ ಪರಮಪವಿತ್ರವಾಗಿಯೂ ಶ್ರೇಷ್ಠವಾಗಿಯೂ ಇರುವ "ಓಂ" ಕಾರೋಪಾಸನೆಯ ಮಹತ್ತನ್ನು ಕಠೋಪನಿಷತ್ತಿನಲ್ಲಿ,

ಏತದ್ಧ್ಯೇವಾಕ್ಷರಂಬ್ರಹ್ಮ ಏತದ್ಧ್ಯೇವಾಕ್ಷರಂಪರಂ |
ಏತದ್ಧ್ಯೇವಾಕ್ಷರಂಜ್ಞಾತ್ವಾ ಯೋಯದಿಚ್ಛತಿತಸ್ಯತತ್ ||
ಏತದಾಲಂಬನಂಶ್ರೇಷ್ಠ ಮೇತದಾಲಂಬನಂಪರಂ |
ಏತದಾಲಂಬನಂಜ್ಞಾತ್ವಾ ಬ್ರಹ್ಮಲೋಕೇಮಹೀಯತೆ ||

ತಾ|| "ಓಂ" ಕಾರಸ್ವರೂಪವೇ ಸಗುಣಬ್ರಹ್ಮ ಅಥವಾ ಶಬ್ದಬ್ರಹ್ಮವಾಗಿಯೂ ನಿರ್ಗುಣಬ್ರಹ್ಮವಾಗಿಯೂ ಇರುವುದು. "ಓಂ" ಕಾರವನ್ನು ತಿಳಿದು ಅನುಷ್ಠಾನ ಮಾಡಿದವನು ಯಾವುದನ್ನು ಇಚ್ಛಿಸಿದರೂ ಅದು ಸಿದ್ಧಿಸುವುದು. "ಓಂ" ಕಾರಾನುಸಂಧಾನವೇ ಬ್ರಹ್ಮಪ್ರಾಪ್ತಿಗೆ ಶ್ರೇಷ್ಠವಾದ ಸಾಧನೆಯು. ಈ ಓಂಕಾರಾನುಸಂಧಾನದ ತುರೀಯಾವಸ್ಥೆಯೇ ಪರಬ್ರಹ್ಮ. ಈ "ಓಂ"ಕಾರಾನುಸಂಧಾನದಲ್ಲಿ ಪರಿಪಕ್ವನಾದವನು ಪರಬ್ರಹ್ಮನಲ್ಲಿ ವಿರಾಜಿಸುವನು, ಎಂದು ಹೇಳಿರುವುದು.

"ಓಂ" ಕಾರೋಪಾಸನೆಯ ಶ್ರೇಷ್ಠತೆಗೆ ಶ್ರೀಕೃಷ್ಣಪರಮಾತ್ಮನು ಕೂಡ ಭಗವದ್ಗೀತೆ ಎಂಟನೆಯ ಅಧ್ಯಾಯ ೧೨, ೧೩ನೆಯ ಶ್ಲೋಕಗಳಲ್ಲಿ,

> ಸರ್ವದ್ವಾರಾಣಿ ಸಂಯಮ್ಯ ಮನೋ ಹೃದಿ ನಿರುಧ್ಯಚ |
> ಮೂರ್ಧ್ನ್ಯಾಧಾಯಾತ್ಮನಃ ಪ್ರಾಣ ಮಾಸ್ಥಿತೋ ಯೋಗಧಾರಣಾಮ್||
> ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರ ನ್ಮಾಮನುಸ್ಮರನ್ |
> ಯಃ ಪ್ರಯಾತಿ ತ್ಯಜನ್ದೇಹಂ ಸ ಯಾತಿ ಪರಮಾಂಗತಿಮ್ ||

ತಾ|| ಎಲ್ಲಾ ಇಂದ್ರಿಯಗಳ ಬಾಗಿಲುಗಳನ್ನೂ ಮುಚ್ಚಿ, ಮನಸ್ಸನ್ನು ಅಂತರ್ಮುಖದಲ್ಲಿ ತಡೆದುಕೊಂಡು, ತನ್ನ ಶ್ವಾಸೋಚ್ಛ್ವಾಸವನ್ನು ಹುಬ್ಬುಗಳ ನಡುವೆ ನಿಲ್ಲಿಸುವ ಓಂಕಾರೋಚ್ಚಾರಣೆಯನ್ನು ಅನುಸಂಧಾನಮಾಡುವ ಯೋಗಧಾರಣೆಯನ್ನು ಮಾಡಿಕೊಂಡು ನನ್ನನ್ನು ಸ್ಮರಿಸುತ್ತಾ ಯಾವನು ದೇಹವನ್ನು ಬಿಡುವನೋ ಅವನು ಪರಮಪದವಿಯನ್ನು ಪಡೆಯುವನು. ಎಂದು ಹೇಳಿರುವನು.

ಶ್ರೀಕೃಷ್ಣಪರಮಾತ್ಮನು ಮೇಲೆ ಹೇಳಿರುವಂತೆ ಪ್ರಾಣೋತ್ಕ್ರಮಣಕಾಲದಲ್ಲಿ ಮಾಡಬೇಕಾಗಿದ್ದರೆ ಜೀವಂತನಾಗಿರುವಾಗಲೇ ಓಂಕಾರೋಚ್ಚಾರಣೆಯ ಅನುಷ್ಠಾನಮಾಡಿ ಪಕ್ವಾವಸ್ಥೆಗೆ ಬಂದಿರಲೇಬೇಕೆಂಬುದನ್ನು ವ್ಯಕ್ತಪಡಿಸುವುದು. ಅಲ್ಲದೆ ಆತ್ಮಸಾಕ್ಷಾತ್ಕಾರವನ್ನು ಪಡೆಯಲು "ಓಂ" ಕಾರೋಪಾಸನೆಯೇ ಸರ್ವಶ್ರೇಷ್ಠವಾದುದೆಂಬ ತಾತ್ಪರ್ಯಕ್ಕೆ ಮುಣ್ಡಕೋಪನಿಷತ್ತಿನಲ್ಲಿ,

> "ಓಮಿತ್ಯೇವಂ ಧ್ಯಾಯಥಾತ್ಮಾನಂ ಸ್ವಸ್ತಿವಃ
> ಪಾರಾಯತಮಸಃಪರಸ್ತಾತ್"

ತಾ|| ಎಲೈ! ಪ್ರಿಯವಿದ್ಯಾರ್ಥಿಗಳಿರಾ! ಆತ್ಮನನ್ನು "ಓಂ" ಕಾರೋಪಾಸನೆಯಿಂದ ಧ್ಯಾನಿಸಿರಿ. ಅವಿದ್ಯೆಯೆಂಬ ಅಂಧಕಾರವು ತೊಲಗಿ ನಿಮಗೆ ಬ್ರಹ್ಮಪ್ರಾಪ್ತಿಯಾಗುವ ವಿಷಯದಲ್ಲಿ ಯಾವುದೊಂದು ವಿಘ್ನವೂ ಉಂಟಾಗಬೇಡ. ಎಂದು ಹೇಳಿರುವುದು.

ಆದುದರಿಂದ ಬುದ್ಧಿತತ್ವಪ್ರಕಾಶಕನಾದ ಶ್ರೀರಾಮಚಂದ್ರನೂ ಈ " ಓಂ " ಕಾರೋಪಾಸನೆಯ ತತ್ವಾರ್ಥವಾದ ಯುದ್ಧದಿಂದಲೇ ಅವಿದ್ಯಾಸ್ವರೂಪರಾದ ರಾವಣಾದಿಗಳನ್ನು ನಿಗ್ರಹಿಸಿರುವನು. ಇದರ ವಿವರಣೆಯು ಮುಂದಿನ ಕಥೆಗಳಲ್ಲಿ ಬರುವುದು. ಆದುದರಿಂದ ಮೋಕ್ಷೇಚ್ಛೆಯಿಂದ ಪರಿತಾಪಪಡುತ್ತಿರುವವರೂ ಕುಂಭಕಾದಿ ಪ್ರಾಣಾಯಾಮಗಳನ್ನು ಮಾಡಲು ಅರ್ಹತೆಯಿಲ್ಲದ ಮತ್ತು ಭಯಪಡುವವರೂ ನಾಡೀಶುದ್ಧಿಗೋಸ್ಕರ, ರೇಚಕ, ಪೂರಕ ಪ್ರಾಣಾಯಾಮವನ್ನಾದರೂ ಮಾಡಿಕೊಂಡು ಗುರುಮುಖೇನ ಉಪದೇಶ ತೆಗೆದುಕೊಂಡು ಸ್ವಲ್ಪ ಸ್ವಲ್ಪವಾಗಿ ಓಂಕಾರೋಚ್ಚಾರಣೆಯಿಂದ ಸಮಾಧಿಯ ಅಭ್ಯಾಸಮಾಡಬಹುದು. ಒಂದು ವೇಳೆ ಈ ಜನ್ಮದಲ್ಲಿಯೇ "ಓಂ"ಕಾರೋಪಾಸನೆಯ ಪರಿಪಕ್ವಾವಸ್ಥೆಯನ್ನು ಹೊಂದಿ ಆತ್ಮಸಾಕ್ಷಾತ್ಕಾರವಾಗದಿದ್ದರೂ, ಈ ಜನ್ಮದ ಅನುಷ್ಠಾನವು ಎಂದಿಗೂ ನಿರರ್ಥಕವಾಗುವುದಿಲ್ಲ. ಈ "ಓಂ"ಕಾರೋಪಾಸನೆಯ ಅನುಷ್ಠಾನಮಾಡುವ ವಿಚಾರದಲ್ಲಿ ಶ್ರೀಶಂಕರಭಗವತ್ಪಾದರವರು ಯೋಗತಾರಾವಳಿಯಲ್ಲಿ ಹೇಳಿರುವ ಎರಡು ಶ್ಲೋಕಗಳನ್ನು ಈ ಪ್ರಕರಣದಲ್ಲಿ ಬರೆದಿರುವುದಷ್ಟೆ! ಶ್ರೀರಾಮನು ಸಮುದ್ರರಾಜನನ್ನು ಉಪಾಸನೆಮಾಡಿದುದು, ಬ್ರಹ್ಮಾಸ್ತ್ರಪ್ರಯೋಗ, ಸೇತುಬಂಧನ, ಮುಂತಾದುವುಗಳ ಅಂತರಾರ್ಥಗಳನ್ನೆಲ್ಲಾ ಒಳಗೊಂಡಿರುವ ಶ್ರೀಶಂಕರಭಗವತ್ಪಾದರವರು ಶಿವಪಂಚಾಕ್ಷರೀ ಸ್ತೋತ್ರದಲ್ಲಿ ಹೇಳಿರುವುದನ್ನು ಬರೆದು ಈ ಪ್ರಕರಣವನ್ನು ಮುಗಿಸೋಣ,

ಓಂಕಾರಂ ಬಿಂದುಸಂಯುಕ್ತಂ ನಿತ್ಯಂ ಧ್ಯಾಯಂತಿ ಯೋಗಿನಃ |
ಕಾಮದಂ ಮೋಕ್ಷದಂ ತಸ್ಮಾ ದೋಂಕಾರಾಯ ನಮೋನಮಃ ||

ತಾ|| ಬಿಂದುಸಹಿತವಾದ "ಓಂ"ಕಾರವನ್ನು ಬ್ರಹ್ಮನಿಷ್ಠನು ಅನವರತವೂ ಧ್ಯಾನಮಾಡಲಿ ಸಕಲೇಷ್ಟವನ್ನೂ ಮೋಕ್ಷವನ್ನೂ ಕೊಡುವುದಾದುದರಿಂದ "ಓಂ" ಕಾರಸ್ವರೂಪಕ್ಕೆ ನಮಸ್ಕಾರವು.

ಎಂಬದಾಗಿ ಸರ್ವಜ್ಞಮೂರ್ತಿಯಾದ ಶ್ರೀಶಂಕರಭಗವತ್ಪಾದರವರು " ಓಂ " ಕಾರೋಪಾಸನೆಯ ಸಕಲತತ್ವಗಳನ್ನೂ ಒಳಗೊಂಡಿರುವಂತೆ ಈ ಶ್ಲೋಕದಿಂದ ಈಶ್ವರನನ್ನು ಪ್ರಾರ್ಥಿಸಿರುವರು. ಇದರಲ್ಲಿ " ಓಂ " ಕಾರೋಪಾಸನೆಯ ಸಕಲ ತತ್ವಗಳೂ ಅಡಗಿರುವುದರಲ್ಲಿ ಸಂದೇಹವೇ ಇಲ್ಲ. ಇದರಲ್ಲಿ " ಓಂ " ಕಾರವೆಂದರೇನು, ಬಿಂದುವೆಂದರೇನು, ಇವುಗಳೆರಡನ್ನೂ ಸಂಯುಕ್ತಮಾಡುವುದೆಂದರೇನೆಂಬ ತತ್ವಗಳನ್ನು ವಿಮರ್ಶೆಮಾಡುತ್ತಾ ಹೋದರೆ ಶ್ರೀರಾಮನು ದರ್ಭಶಯನದಾರಭ್ಯ ಲಂಕೆಯನ್ನು ಸೇರುವಪರ್ಯಂತರದ ಕಥೆಯ ಅಂತರಾರ್ಥಗಳೆಲ್ಲಾ ವಿಶದವಾಗುವುವು. ಆದುದರಿಂದ ಪರಮಪವಿತ್ರವಾದ " ಓಂ " ಕಾರಕ್ಕೆ ನಮಿಸಿ ಮುಂದಿನ ಕಥೆಯನ್ನು ಪ್ರಾರಂಭಿಸುವೆನು.

# ೭ನೆಯ ಪ್ರಕರಣ.

ಶುಕ ಸಾರಣರೆಂಬ ಗೂಢಚಾರರ ವೃತ್ತಾಂತ ಮತ್ತು ವಾನರರು ಲಂಕಾಪಟ್ಟಣವನ್ನು ಮುತ್ತಿದುದು.



ಬಿಂದುಧಾರಣೆಯನ್ನು ತಪ್ಪಿಸಲು ನೋಸ ಮತ್ತು ಕಳ್ಳತನದ ಶಕ್ತಿಗಳ ಪ್ರಯತ್ನ ಮತ್ತು ಅವುಗಳ ಸ್ವರೂಪ.

**ರಾ||** ಶ್ರೀರಾಮನು ಸೈನ್ಯದೊಡನೆ ಲಂಕಾದ್ವೀಪಕ್ಕೆ ಬಂದ ವಿಚಾರವನ್ನು ರಾವಣನು ಕೇಳಿ ಶ್ರೀರಾಮನ ಸೈನ್ಯದ ರಹಸ್ಯಗಳನ್ನು ತಿಳಿದುಕೊಂಡು ಬರಲು ಶುಕಸಾರಣರೆಂಬ ಗೂಢಚಾರರನ್ನು ಕಳುಹಿಸಿಕೊಟ್ಟನು. ಇವರು ವಿಭೀಷಣನಿಂದ ಹಿಡಿಯಲ್ಪಟ್ಟು ಶ್ರೀರಾಮನ ಕರುಣೆಯಿಂದ ಬಿಡುಗಡೆಹೊಂದಿ ಪುನಃ ರಾವಣನ ಬಳಿಗೆ ಹೋಗಿ ಸೀತೆಯನ್ನು ಶ್ರೀರಾಮನಿಗೆ ಒಪ್ಪಿಸುವಂತೆ ಹೇಳಿದರು. ರಾವಣನು ಶುಕಸಾರಣರನ್ನು ಧಿಕ್ಕರಿಸಿ ಶಾರ್ದೂಲನೆಂಬ ಗೂಢಚಾರನನ್ನು ಶತ್ರುಪಕ್ಷದ ರಹಸ್ಯಗಳನ್ನು ತಿಳಿದು ಬರಲು ಕಳುಹಿಸಿದನು. ಶಾರ್ದೂಲನು ಕೂಡ ವಿಮುಖನಾಗಿ ಬಂದನು.

**ತತ್ವ||** ಸರ್ವಸೈನ್ಯದೊಡನೆ ಶ್ರೀರಾಮನು ಲಂಕೆಯನ್ನು ಸೇರಿದನೆಂದು ಹಿಂದಿನ ಪ್ರಕರಣದಲ್ಲಿ ತಿಳಿಸಿದೆ. ಅಂದರೆ ಬಿಂದುಧಾರಣೆಯನ್ನು ಮಾಡಿಕೊಂಡು ಓಂಕಾರೋಪಾಸನೆಯ ಅನುಷ್ಠಾನವು ಪ್ರಾರಂಭಿಸಲ್ಪಟ್ಟಿತೆಂಬ ತತ್ವಾರ್ಥದ ವಿವರಣೆಯಾಗಿರುವುದು. ಹೀಗೆ ಬಿಂದುಸಹಿತವಾದ “ಓಂ” ಕಾರೋಪಾಸನೆಯನ್ನು ಪ್ರಾರಂಭಿಸಿದ ಮಾತ್ರದಿಂದಲೇ ಅವಿದ್ಯಾಶಕ್ತಿಗಳು ನಿಗ್ರಹವಾಗುವುದಿಲ್ಲ. ಹೇಗೆಂದರೆ, ಬಾಹ್ಯವ್ಯಾಪಾರದ ಶಕ್ತಿಗಳನ್ನೆಲ್ಲ ಬಾಹ್ಯವ್ಯಾಪಾರಕ್ಕೆ ಪ್ರಸರಣೆಯಾಗದೆ ಓಂಕಾರೋಪಾಸನೆಯಿಂದ ಅಂತರ್ಮುಖಕ್ಕೆ ತಿರುಗಿಸಿಕೊಂಡರೂ, ಒಳಗಡೆಯೇ ಅವುಗಳ ಕಾರ್ರ್ಯವನ್ನು ಮಾಡಲು ಪ್ರಾರಂಭಿಸುವುವು. ಹೇಗೆಂದರೆ, ಬಿಂದುಧಾರಣೆಯೊಡಗೂಡಿದ “ಓಂ” ಕಾರೋಪಾಸನೆಯನ್ನು ಮಾಡುವಾಗ ನಮ್ಮ ಬುದ್ಧಿವೃತ್ತಿಯು ಒಳಗಡೆ ಕಾಣುವ ತೇಜಸ್ಸಿನಲ್ಲಿರುವುದಷ್ಟೆ! ಸ್ವಪ್ನಾವಸ್ಥೆಯಲ್ಲಿಯೂ ವ್ಯಾಪಾರಗಳು ನಮ್ಮಲ್ಲಿ ಒಳಗಿರುವ ತೇಜಸ್ಸಿನೊಳಗೇ ನಡೆಯುತ್ತವೆಂಬುದು ಸಕಲರಿಗೂ ತಿಳಿದ ವಿಷಯವೇ ಆಗಿರುವುದು.

ಆದುದರಿಂದ ಸಮಾಧಿಯ ಅನುಷ್ಠಾನದ ಪ್ರಥಮಾವಸ್ಥೆಯಾದ ಬಿಂದುವಿನೊಡಗೂಡಿದ ತೇಜಸ್ಸಿನಲ್ಲಿ ಬುದ್ಧಿವೃತ್ತಿಯು ಬಿಂದುವನ್ನು ಧರಿಸಿಕೊಳ್ಳಲು ಪ್ರಾರಂಭಿಸಿದಾಗ

ಒಳಗಿರುವ ಅವಿದ್ಯಾಶಕ್ತಿಗಳು ಬಿಂದುಧಾರಣೆಯನ್ನು ತಪ್ಪಿಸಿ ಅವುಗಳಿಗೆ ಸ್ವಾಭಾವಿಕವಾದ ಬಾಹ್ಯವ್ಯಾಪಾರಕ್ಕೇ ಎಳೆಯುತ್ತವೆ. ಹೀಗೆ ಅವಿದ್ಯಾಶಕ್ತಿಗಳು ಬಾಹ್ಯವ್ಯಾಪಾರಕ್ಕೆ ಎಳೆಯುವುದನ್ನು ತಡೆದು ಅವುಗಳನ್ನು ಒಂದೊಂದನ್ನಾಗಿ ನಿಗ್ರಹಿಸಿಕೊಂಡು ಸಮಾಧಿಸಿದ್ಧಿಯನ್ನು ಪಡೆಯಬೇಕಾಗಿರುವುದು. ಅವಿದ್ಯಾಶಕ್ತಿಗಳು ಬಾಹ್ಯವ್ಯಾಪಾರದ ಪ್ರಸರಣೆಗೆ ಎಳೆಯುವುವಲ್ಲದೆ ಸಮಾಧಿಯಲ್ಲಿನ ತೇಜಸ್ಸಿನಲ್ಲಿಯೇ ಸ್ವಪ್ನವ್ಯಾಪಾರದಂತೆ ಬಾಹ್ಯವ್ಯಾಪಾರದ ಚಿಂತನೆಯನ್ನೂ ತಂದೊಡ್ಡುವುವು. ಆದುದರಿಂದ ಸಮಾಧಿಯಲ್ಲಿ ವಾಯುವಿನೊಡಗೂಡಿದ ಬುದ್ಧಿವೃತ್ತಿಗೂ ಅವಿದ್ಯಾಶಕ್ತಿಗಳಿಗೂ ನಡೆಯುವ ಎಳೆದಾಟದ ಸ್ವರೂಪವೇ ಯುದ್ಧಕಾಂಡದಲ್ಲಿನ ಯುದ್ಧಗಳ ಅಂತರಾರ್ಥವಾಗಿರುವುದು. ಯಾವ ಯಾವ ಸಮಾಧಿಯ ಅಂತಸ್ತಿನ ಅನುಷ್ಠಾನದಲ್ಲಿ ಯಾವ ಯಾವ ಅವಿದ್ಯಾಶಕ್ತಿಗಳು ನಿಗ್ರಹವಾಗುವುವೆಂಬುದರ ವಿವರಣೆಯೂ ಮುಂದೆ ಬರುವುದು. ರಾವಣನ ವಧೆಯ ತತ್ತ್ವದವರೆಗೂ ಯುದ್ಧಸ್ವರೂಪವಾದ ಎಳೆತವು ಅಧಿಕಾರಿಯಲ್ಲಿ ತಪ್ಪುವುದಿಲ್ಲ.

ಪ್ರಕೃತ ಶ್ರೀರಾಮಾದಿಗಳು ಲಂಕೆಯನ್ನು ಸೇರಿದರೆಂದರೆ—ವಾಯುವಿನೊಡಗೂಡಿದ ಬುದ್ಧಿವೃತ್ತಿಯು "ಓಂ"ಕಾರೋಚ್ಚಾರಣೆಯ ಅನುಷ್ಠಾನದ ಮೂಲಕ ಮೂಲಾಧಾರ ಚಕ್ರವನ್ನು ಸೇರುವ ವಿಚಾರವನ್ನು ಹಿಂದಿನ ಪ್ರಕರಣದಲ್ಲಿ ತಿಳಿಸಿದೆ. ಆದುದರಿಂದ ಶತ್ರುರಾಜನು ದಂಡೆತ್ತಿ ಬಂದರೆ ದೊರೆಗೆ ಹೇಗೆ ಭಯಹುಟ್ಟುವುದೋ ಹಾಗೆ, ವಾಯುಗಳೊಡಗೂಡಿದ ಬುದ್ಧಿವೃತ್ತಿಯು ಅವಿದ್ಯೆಗೆ ರಾಜಧಾನಿಯಾದ ಲಂಕೆಗೆಂದರೆ ಮೂಲಾಧಾರ ಚಕ್ರಕ್ಕೆ ಬರಲು ಅವಿದ್ಯಾಪ್ರಧಾನಪುರುಷನಾದ ರಾವಣನಿಗೆ ಭಯವುಂಟಾಯಿತು. ದೊರೆಗಳು ಗೂಢಚಾರರನ್ನು ಕಳುಹಿಸುವಂತೆ ಅವಿದ್ಯಾರಾಜನಾದ ರಾವಣನು ಶುಕಸಾರಣರೆಂಬ ಗೂಢಚಾರರನ್ನು ಕಳುಹಿಸಿದನು.

ಹೀಗೆ ಕಳುಹಿಸಿಕೊಡುವ ಶುಕಸಾರಣರಲ್ಲಿ ಶುಕನ ತತ್ತ್ವವೇನೆಂದರೆ—ಶುಕವು ಮನೋಹರರೂಪದಿಂದ ಸರ್ವರಿಗೂ ಅಪೇಕ್ಷಣೀಯವಾದುದು. ಆದರೆ ಇದು ರಾಕ್ಷಸತ್ತ್ವವನ್ನು ಪಡೆದಿರುವುದರಿಂದ ಹೊರಗೆ ನೋಡುವುದಕ್ಕೆ ಶುಕದಂತೆಯೂ ಅಂತರಂಗದ ಯೋಚನೆ ಮತ್ತು ಕಾರ್ಯವು ರಾಕ್ಷಸಸ್ವರೂಪವಾಗಿಯೂ ಇರುವ ಸ್ವಭಾವವೇ ಶುಕನ ತತ್ತ್ವವಾಗಿರುವುದು. ಹೇಗೆಂದರೆ, ಗಿಣಿಯಂತೆ ಮೃದುವಾಗಿ ಮಾತನಾಡಿಕೊಂಡಿದ್ದು ಒಳಗೆ ದ್ರೋಹವನ್ನೆಣಿಸುವ ಸ್ವಭಾವದವರಿಗೆ ಶುಕರಾಕ್ಷಸನೆಂಬ ತತ್ತ್ವವು. ಇಂತಹ ಕೃತ್ರಿಮ ಸ್ವಭಾವವು ಅವಿದ್ಯೆಯ ಸ್ವರೂಪಕ್ಕೆ ಮಂತ್ರಿಯ ಸ್ಥಾನದಲ್ಲಿರುವುದು. ಶುಕರಾಕ್ಷಸನು ಇಂತಹ ಕೃತ್ರಿಮಸ್ವಭಾವದ ತತ್ತ್ವದವನಾದುದರಿಂದಲೇ ಸುಗ್ರೀವನನ್ನು ಶ್ರೀರಾಮನಿಂದ ಅಗಲಿಸಬೇಕೆಂದು ಪ್ರಯತ್ನಮಾಡಿದನು.

ಸಾರಣನೆಂದರೆ--ವಾಯುವಿನಿಂದ ಸ್ತಂಭಿಸಲ್ಪಟ್ಟಿರುವ ಪ್ರದೇಶದಲ್ಲಿ ನುಗ್ಗಿಹೋಗುವ ಶಕ್ತಿಗೆ ಸಾರಣನೆಂದು ಅನ್ವಯವಾಗುವುದು. ಹೇಗೆಂದರೆ, ಸಾರ್ಯಂತೆ ವಾತ ಸಂಕುಚಿತಾನ್ಯಂಗಾ ನ್ಯನಯೇತಿ ಸಾರಣಿ" ಅಂದರೆ ವಾಯುವಿನಿಂದ ಕಟ್ಟಿರುವ ಅಂಗಗಳು ಈ ಔಷಧದಿಂದ ಬಿಡಿಸಲ್ಪಟ್ಟು ಸರಿಮಾಡಲ್ಪಡುವುವು. ಅಂದರೆ ಕಟ್ಟಿರುವುದನ್ನು ಬಿಡಿಸಲು ಒಳಗಡೆಯೇ ಕೊರೆದುಕೊಂಡು ಹೋಗುವಿಕೆ. ಈ ಸ್ವರೂಪದಂತೆ ಚೋರರು ಕನ್ನ ಕೊರೆದುಕೊಂಡು ಹೋಗಿ ಪರರ ಧನವನ್ನು ಅಪಹರಿಸುವರು. ಈ ಚೋರತನದ ಶಕ್ತಿಯು ಅವಿದ್ಯೆಗೆ ಮಂತ್ರಿಯಾಗಿರುವುದು. ಗೂಢಚಾರರು ಕೃತ್ರಿಮಸ್ವಭಾವದಿಂದ ಚೋರರಂತೆ ವೈರಿಗಳೊಳಹೊಕ್ಕು ವೈರಿಗಳ ಸ್ಥಿತಿಯನ್ನು ತಿಳಿಯುವರು. ಆದುದರಿಂದ ಸಾರಣನೆಂದರೆ ಚೋರಸ್ವಭಾವದವನೆಂಬ ತತ್ವ.

ಈ ಕೃತ್ರಿಮ ಮತ್ತು ಚೋರತನದ ಸ್ವಭಾವಗಳ ವ್ಯಾಪಾರಗಳನ್ನು ಹೊರಗೆ ನಾವು ನೋಡುತ್ತೇವೆ. ಸಮಾಧಿ ಅನುಷ್ಠಾನದಲ್ಲಿ ಈ ಅವಿದ್ಯಾಕಾರ್ಯದ ತತ್ವವೇನೆಂದರೆ— ಅವಿದ್ಯಾವೃತ್ತಿಗಳು ಚೋರತನದಿಂದಾಗಲಿ, ಕೃತ್ರಿಮದಿಂದಾಗಲಿ, ಬಿಂದುವನ್ನು ಧರಿಸಿ ಕೊಂಡು ಸಮಾಧಿಯ ಅನುಷ್ಠಾನಮಾಡುತ್ತಿರುವುದನ್ನು ತಪ್ಪಿಸಬೇಕೆಂದು ಪ್ರಯತ್ನ ಮಾಡುತ್ತವೆಯೆಂಬ ತತ್ವವಾಗಿರುವುದು. ಆದರೆ ಮನಸ್ಸು ಮತ್ತು ವಾಯುಗಳೊಡನೆಂದರೆ, ವೈರಾಗ್ಯ ಮತ್ತು ಯೋಗಸಾಮರ್ಥ್ಯಗಳಿಂದೊಡಗೂಡಿ ತೀವ್ರತಮವಾದ ಬ್ರಹ್ಮಭಾವನೆ ಯಿಂದ, ಬುದ್ಧಿವೃತ್ತಿಯು ತೇಜೋಬಿಂದುಧಾರಣೆಯ ಅಭ್ಯಾಸದಲ್ಲಿ ಮಗ್ನವಾಗಿದ್ದರೆ, ಈ ಅವಿದ್ಯೆಯ ಅಲ್ಪಶಕ್ತಿಗಳು ಏನೂ ಮಾಡಲಾರವು. ಈ ತತ್ವಾರ್ಥವೇ ಶುಕಸಾರಣರು ವಿಮುಖರಾಗಿ ಹೋದುದಾಗಿರುವುದು. ಶುಕಸಾರಣರು ಸೀತಾದೇವಿಯನ್ನು ಶ್ರೀರಾಮನಿಗೆ ಒಪ್ಪಿಸಿಬಿಡುವುದುತ್ತಮವೆಂದು ಹೇಳಿದುದರ ತಾತ್ಪರ್ಯವೇನೆಂದರೆ--ಮೇಲೆ ವಿವರಿಸಿರುವಂತೆ ಜ್ಞಾನಮಾರ್ಗದಲ್ಲಿ ದೃಢನಿಶ್ಚಯದಿಂದ ಸಮಾಧಿಯನ್ನು ಅನುಷ್ಠಾನ ಮಾಡುವವರಿಗೆ ಈ ಅವಿದ್ಯೆಯ ಅಲ್ಪಶಕ್ತಿಗಳಿಂದ ಬಾಧಕವಿಲ್ಲವೆಂಬ ತತ್ವವಾಗಿರುವುದು.

ಟೀ|| ರಾವಣನು ಶುಕಸಾರಣರ ಮಾತನ್ನು ಧಿಕ್ಕರಿಸಿ ಶಾರ್ದೂಲನೆಂಬ ಚಾರನನ್ನು ಶ್ರೀರಾಮನ ಸೈನ್ಯವಿದ್ದೆಡೆಗೆ ಕಳುಹಿಸಿದನು.

ತತ್ವ|| ಅವಿದ್ಯೆಗೆ ಪ್ರಭುವಾದ ರಾವಣನು ಕಳುಹಿಸಿದ ಶಾರ್ದೂಲನ ತತ್ವವೇನೆಂದರೆ ಶಾರ್ದೂಲವೆಂಬ ಪದಕ್ಕೆ "ಶೃಣಾತೀತಿ ಶಾರ್ದೂಲ, ಶೃಹಿಂಸಾಯಾಂ" ಅಂದರೆ ಹಿಂಸಿಸುವ ಅಥವಾ ಹಿಂಸೆಯನ್ನುಂಟುಮಾಡುವುದೆಂದರ್ಥ. ಇಂತಹ ಹಿಂಸೆಮಾಡುವ ಸ್ವಭಾವದ ಶಕ್ತಿಯು ಅವಿದ್ಯೆಯ ಸಂಗಡಕ್ಕೆ ಸೇರಿರುವುದು. ಈ ಹಿಂಸೆಯನ್ನುಂಟುಮಾಡುವ ಶಕ್ತಿಯ ತತ್ವದಲ್ಲಿರುವ ಶಾರ್ದೂಲನು ಶ್ರೀರಾಮನ ಸೈನ್ಯಕ್ಕೆ ಬಂದು ಪ್ರಾಣಸಹಿತ ಹಿಂದಿರುಗಿ ಲಂಕೆಗೆ

ಹೊರಟನೆಂದರೆ---ದೃಢವಾದ ಜ್ಞಾನನಿಷ್ಠೆಯಿಂದ ಬುದ್ಧಿವೃತ್ತಿಯು ಸಮಾಧಿಯನ್ನು ಅಭ್ಯಾಸಮಾಡುತ್ತಿದ್ದರೆ ಅವಿದ್ಯೆಯಲ್ಲಿನ ಅಲ್ಪಶಕ್ತಿಯಾದ ಹಿಂಸಾಸ್ವಭಾವದ ಶಕ್ತಿಯಿಂದ ಸಮಾಧಿಯು ಅನುಷ್ಠಾನಕ್ಕೆ ವಿಘ್ನವಿಲ್ಲವೆಂಬ ತತ್ವವಾಗಿರುವುದು.

## ೮ನೆಯ ಪ್ರಕರಣ.

**ರಾವಣನು ಸೀತಾದೇವಿಗೆ ಶ್ರೀರಾಮನ ಮಾಯಾಶಿರಸ್ಸನ್ನು ತೋರಿಸಿದುದು. ಸರಮೆಯು ಸೀತಾದೇವಿಯನ್ನು ಸಮಾಧಾನಪಡಿಸಿದುದು.**

**ಜಗನ್ಮಿಥ್ಯಾತ್ವದ ಮತ್ತು ಬ್ರಹ್ಮ ಸತ್ಯತ್ವದ ಪ್ರತಿಪಾದನೆಯ ವಿಚಾರ.**

**ರಾ||** ಅನಂತರ ರಾವಣನು ಮಾಯಾವಿಯಾದ ವಿದ್ಯುಜ್ಜಿಹ್ವನಿಂದ ಐಂದ್ರಜಾಲಿಕವಾದ ರಾಮನ ಶಿರಸ್ಸನ್ನೂ ಧನುಸ್ಸನ್ನೂ ಮಾಡಿಸಿ, ತಂದು ಸೀತೆಗೆ ತೋರಿಸಲು, ಸೀತಾದೇವಿಯು ದುಃಖಪಡುತ್ತಿರುವುದನ್ನು ವಿಭೀಷಣನ ಹೆಂಡತಿಯಾದ ಸರಮೆಯು ನೋಡಿ ಇದೆಲ್ಲಾ ಐಂದ್ರಜಾಲಿಕವಾದ ಮಾಯಾಕಾರ್ಯವೆಂದು ಸೀತಾದೇವಿಗೆ ಸಮಾಧಾನ ಮಾಡಿದಳು.

**ತತ್ವ||** ವಿದ್ಯುಜ್ಜಿಹ್ವನೆಂದರೆ--"ವಿದ್ಯುದಿವ ಜಿಹ್ವಾಯಸ್ಯ ಸಃ ವಿದ್ಯುಜ್ಜಿಹ್ವಃ ವಿದ್ಯುತ್-ಎಂದರೆ ಕ್ಷಣಪ್ರಭೆ" ಎಂದರೆ ಕ್ಷಣಮಾತ್ರ ಅಧಿಕವಾಗಿ ಪ್ರಕಾಶಿಸುವುದು. ಜಿಹ್ವಾ ಎಂದರೆ "ಜಿಹ್ವಯತಿ ರಸವದ್ವಸ್ತು ಜಿಹ್ವಾ" ರಸಯುಕ್ತವಾದ ವಸ್ತುಗಳನ್ನು ಅಪೇಕ್ಷಿಸುವುದು ಇದರಂತೆ ಇಂದ್ರಜಾಲವಿದ್ಯೆಯು ಕ್ಷಣಮಾತ್ರ ಪ್ರಕಾಶಿಸುವುದಾಗಿಯೂ, ರಸವುಳ್ಳದ್ದೆಂದರೆ ಸ್ವಾರಸ್ಯವುಳ್ಳದ್ದಾಗಿಯೂ ಇರುವುದು. ಇಂತಹ ಕ್ಷಣಮಾತ್ರ ಪ್ರಕಾಶಸ್ವರೂಪವಾದ ಇಂದ್ರಜಾಲದ ಸ್ವರೂಪವೇನೆಂದರೆ—ಮಿಥ್ಯಾಸ್ವರೂಪವಾದುದನ್ನು ಸತ್ಯವಾಗಿ ತೋರುವಂತೆ ಮಾಡುವುದು. ರಾವಣನು ಸೀತೆಯನ್ನು ತನ್ನಂತೆಮಾಡಿಕೊಳ್ಳಲು ಇಂತಹ ಐಂದ್ರಜಾಲಿಕದಿಂದ ಮಾಡಲ್ಪಟ್ಟ ಶ್ರೀರಾಮನ ಶಿರಸ್ಸನ್ನು ತಂದು ಸೀತೆಗೆ ತೋರಿಸಿದ ತತ್ವವೇನೆಂದರೆ—ಅವಿದ್ಯೆಗೆ ಧೊರೆಯಾಗಿರುವ ವಿಕ್ಷೇಪಶಕ್ತಿಯು ಇಂತಹ ಐಂದ್ರಜಾಲಿಕವಿದ್ಯೆಯ ಸ್ವರೂಪದಲ್ಲಿರುವ ಜಗತ್ತಿನ ವ್ಯಾಪಾರದಲ್ಲಿ ಮಗ್ನಮಾಡಿಸುವುದೆಂಬ ತತ್ವವಾಗಿರುವುದು.

ಶ್ರೀರಾಮನು ಸೈನ್ಯದೊಡನೆ ಲಂಕೆಯನ್ನು ಸೇರಿದನೆಂದರೆ—ಅಧಿಕಾರಿಯು ಬಿಂದುಸಹಿತವಾದ "ಓಂ" ಕಾರೋಪಾಸನೆಯ ಅನುಷ್ಠಾನಪ್ರಾರಂಭಮಾಡಿ, ಅಂತರ್ಮುಖದಲ್ಲಿ ಭ್ರೂಮಧ್ಯದಲ್ಲಿ ಕಾಣುವ ತೇಜಸ್ಸಿನೊಳಗೆ ಬುದ್ಧಿವೃತ್ತಿಯನ್ನಿಟ್ಟುಕೊಂಡು ಇರುವನೆಂಬು

ದನ್ನು ಹಿಂದೆ ತಿಳಿಸಿರುವುದಷ್ಟೆ! ದೃಢವಾಗಿದ್ದ ಬಾಹ್ಯವ್ಯಾಪಾರದ ಅಭ್ಯಾಸದಲ್ಲಿದ್ದು ಅಂತ ರ್ದೃಷ್ಟಿಯಲ್ಲಿ ಪ್ರವೇಶಿಸುವುದರಿಂದ, ಎಲ್ಲಿಯೋ ಮಿಥ್ಯಾಸ್ವರೂಪಕ್ಕೆ ಹೋದಂತೆ ಅವಿದ್ಯಾ ಸ್ವರೂಪದಲ್ಲಿನ ರಾವಣ ಮತ್ತು ವಿದ್ಯುಜ್ಜಿಹ್ವರ ಶಕ್ತಿಗಳಿಂದ ಭ್ರಾಂತಿಯುಂಟಾಗಬಹುದು. ಇದರಿಂದ ಗಾಬರಿಪಟ್ಟು ಭ್ರಾಂತಿಗೊಂಡು ಸಮಾಧಿಯಿಂದ ಬಹಿರ್ಮುಖವಾಗಬಾರದು. ಬಾಹ್ಯವ್ಯಾಪಾರದಲ್ಲಿರುವಪರ್ಯಂತರ ಮಿಥ್ಯವಾದುದನ್ನು ಸತ್ಯವಾಗಿ ಭಾವಿಸಿಕೊಂಡೆವು. ಸಮಾಧಿಯ ಅನುಷ್ಠಾನದಲ್ಲಿ ಸತ್ಯವಾದುದನ್ನೇ ಅನುಸರಿಸಿಕೊಂಡು ಹೋಗುವೆವು. ಐಂದ್ರಜಾಲಿಕಸ್ವರೂಪವು ಹೇಗೆ ಮಿಥ್ಯವೆಂದು ನಮಗೆ ತೋರಿಬರುವುದೋ ಹಾಗೆ ಆತ್ಮ ಹೊರತು ಕಾಣುವ ಪ್ರಪಂಚವೆಲ್ಲಾ ಮಿಥ್ಯವಾದುದೆಂಬ ತತ್ವಾರ್ಥದಿಂದ ವಿಭೀಷಣನ ಹೆಂಡತಿಯಾದ ಸರಮೆಯು ಸೀತಾದೇವಿಯನ್ನು ಸಮಾಧಾನಪಡಿಸಿದ ವಿಚಾರವನ್ನು ತೆಗೆದುಕೊಳ್ಳೋಣ,

**ರಾ||** ವಿಭೀಷಣನ ಹೆಂಡತಿಯಾದ ಸರಮೆಯು ದುಃಖಪಡುತ್ತಿರುವ ಸೀತಾದೇವಿ ಯನ್ನು ಕುರಿತು "ಶ್ರೀರಾಮನು ಸಾಕ್ಷಾತ್ಪರಮಪುರುಷನು, ಅವನಿಗೆ ಮರಣವಿಲ್ಲ. ರಾವಣನಿಂದ ತೋರಿಸಲ್ಪಟ್ಟ ಶಿರಸ್ಸು ವಿದ್ಯುಜ್ಜಿಹ್ವನು ಮಾಡಿರುವ ಮಾಯಾಕೃತ್ರಿಮ" ಎಂದು ಹೇಳಿದಳು.

**ತತ್ವ||** ಸರಮೆಯು ಮಲಿನಸತ್ವಗುಣದ ತತ್ವಗವಳೆಂದೂ, ವಿಭೀಷಣನು ಮಲಿನ ಸತ್ವಗುಣದಲ್ಲಿ ಬಿದ್ದ ಆತ್ಮನ ಪ್ರತಿಬಿಂಬಚೈತನ್ಯವೆಂದೂ, ಹಿಂದೆ ವಿಭೀಷಣನ ಶರಣಾ ಗತಿಯ ಸಂದರ್ಭದಲ್ಲಿ ತಿಳಿಸಿದೆ. ಈ ಅನ್ವಯಕ್ಕೆ ಸರಿಯಾಗಿ ಸರಮಾ ಎಂಬ ಪದಕ್ಕೆ "ಸರತಿ ಪುರುಷಂ ಪ್ರತೀತಿ ಸರಮಾ" ಪುರುಷನ ಅನುವರ್ತಿನಿಯಾಗಿರುವ ಹೆಂಗಸು ಎಂದರೆ ಪತಿವ್ರತೆಯೆಂದು ಸಾಧಾರಣವಾದ ಅರ್ಥ. ಸರಮೆಯು ಪತಿಯಾದ ವಿಭೀಷಣ ನನ್ನು ಧರ್ಮಮಾರ್ಗಕ್ಕೆ ಅನ್ವಯಿಸಿರುವುದರಿಂದ ಸರಮೆಯನ್ನೂ ಧರ್ಮಮಾರ್ಗಾನು ಸಾರಿಣಿಯೆಂದರೆ ಶುದ್ಧಧರ್ಮಸ್ವರೂಪವಾದ ಆತ್ಮನಿಷ್ಠೆಯ ದಾರಿಯಲ್ಲಿರುವವಳೆಂದು ಅರ್ಥ ಮಾಡಬಹುದು, ಮತ್ತು ಪುರುಷಶಬ್ದಾರ್ಥವಾದ ಪರಮಾತ್ಮನ ಅನುವರ್ತಿನಿಯಾಗಿರುವ ಶಕ್ತಿಗೆ ಸರಮೆ ಎಂದೂ ಹೇಳಬಹುದು. ಸರಮೆಯೆನ್ನುವ ಶಬ್ದಕ್ಕೆ ಇನ್ನೊಂದು ವ್ಯುತ್ಪತ್ತಿ ಯೇನೆಂದರೆ—"ಸಮ್ಯಕ್ ಸತ್ಯೇ ರಮತೀತಿ ಸರಮಾ" ಅಂದರೆ ಸತ್ಯದಲ್ಲಿಯೇ ಚೆನ್ನಾಗಿ ರಮಿಸುವವಳು—ಎಂದರೆ ಸತ್ಯವನ್ನು ಪ್ರತಿಪಾದನೆಮಾಡತಕ್ಕವಳು. ಸರಮೆ ಎನ್ನುವ ಪದಕ್ಕೆ ಮತ್ತೊಂದು ವ್ಯುತ್ಪತ್ತಿಯೂ ಆಗುವುದು. "ರಮಯಾಸಹ ವರ್ತತ ಇತಿ ಸರಮಾ" ಅಂದರೆ ರಮಾ ಅಥವಾ ಲಕ್ಷ್ಮಿಯ ಅನುವರ್ತಿನಿಯಾಗಿರುವವಳು ಅಥವಾ ಜೊತೆ ಯಲ್ಲಿರುವವಳಿಗೆ ಸರಮೆ ಎಂದು ಹೆಸರು. ಅಂದರೆ ಸಾಕ್ಷಾತ್ ಆದಿಲಕ್ಷ್ಮೀಸ್ವರೂಪಳಾದ ಸೀತಾದೇವಿಯ ಸಹವರ್ತಿನಿಯಾಗಿಯೇ ಸರಮೆಯಿದ್ದಳು. ಈ ಮೇಲಿನ ವ್ಯುತ್ಪತ್ತಿಗಳ

ಅರ್ಥದಿಂದ "ಬ್ರಹ್ಮಸತ್ಯಂ ಜಗನ್ಮಿಥ್ಯಾ" ಎಂಬ ವಾಕ್ಯಕ್ಕೆ ಅನುಸಾರವಾಗಿಯೂ ಸತ್ಯಂ ಜ್ಞಾನ ಮನಂತಂ ಬ್ರಹ್ಮ" ಎಂಬ ಶ್ರುತಿವಾಕ್ಯಕ್ಕೆ ಅನುಸಾರವಾಗಿಯೂ, ಪರಬ್ರಹ್ಮ ಒಂದೇ ಸತ್ಯವೆಂಬ, ಎರಡನೆಯದಾದ ಇಂದ್ರಜಾಲಿಕಸ್ವರೂಪದಲ್ಲಿರುವ ಜಗತ್ತೆಲ್ಲವೂ ಮಿಥ್ಯವೆಂಬ ತತ್ವಾರ್ಥವನ್ನು ಪ್ರತಿಪಾದನೆಮಾಡಿ ಅದರಂತೆ ಅನುವರ್ತಿಸಿ ಕೊಂಡಿರುವ ತತ್ವದ ಸ್ವರೂಪದವಳೇ ಸರಮೆಯು.

ಆದುದರಿಂದ ಸತ್ಯಪ್ರತಿಪಾದನೆಯ ತತ್ವಸ್ವರೂಪದಲ್ಲಿರುವ ಸರಮೆಯು ದುಃಖಪಡುತ್ತಿರುವ ಸೀತಾದೇವಿಯನ್ನು ನೋಡಿ "ಶ್ರೀರಾಮನು ಸಾಕ್ಷಾತ್ಪರಮಪುರುಷನು. ಅವನಿಗೆ ಮರಣವಿಲ್ಲ." ಎಂಬದಾಗಿ ಹೇಳಿದಳೆಂದರೆ, ಶ್ರೀರಾಮಚಂದ್ರನು ಪರಬ್ರಹ್ಮಸ್ವರೂಪನೆಂಬ ತತ್ವವಾಗಿರುವುದು. ಈ ತತ್ವಕ್ಕೆ ಶ್ರುತಿ, ಸ್ಮೃತಿ, ಪುರಾಣಾದಿಗಳ ಆಧಾರಗಳು ಅನೇಕವಾಗಿರುವುವು. ರಾಮರಹಸ್ಯೋಪನಿಷತ್ ಪ್ರಥಮಾಧ್ಯಾಯದಲ್ಲಿ,

"ರಾಮ ಏವ ಪರಂಬ್ರಹ್ಮ ರಾಮ ಏವ ಪರಂತಪಃ"

ಎಂಬದಾಗಿ ಹೇಳಿರುವುದಲ್ಲದೆ ರಾಮತಾಪಿನ್ಯುಪನಿಷತ್ತಿನಲ್ಲಿಯೂ,

ರಮಂತೆ ಯೋಗಿನೋನಂತೆ ನಿತ್ಯಾನಂದೇ ಚಿದಾತ್ಮನಿ |
ಇತಿ ರಾಮಪದೇನಾಸೌ ಪರಂಬ್ರಹ್ಮಾಭಿಧೀಯತೇ |

ಎಂಬದಾಗಿ ಹೇಳಿರುವುದರಿಂದ ಸತ್ಯಪ್ರತಿಪಾದನೆಯ ತತ್ವದಲ್ಲಿರುವ ಸರಮೆಯು ಶ್ರೀರಾಮಚಂದ್ರನು ಸಾಕ್ಷಾತ್ಪರಮಪುರುಷನೆಂದು ಹೇಳಿರುವ ವಾಕ್ಯವು ಸತ್ಯವಾಗಿಯೇ ಇರುವುದು. ಪರಮಾತ್ಮನು ಪ್ರಕೃತಿಯ ಸಂಬಂಧದಿಂದ ಉಪಾಧಿಗಳುಂಟಾಗಿ ಈಶ್ವರ ಮತ್ತು ಜೀವನೆಂದೆನಿಸಿಕೊಳ್ಳುವನು. ರಾವಣನು ನಿಗ್ರಹವಾದರೆ ಅವಿದ್ಯೋಪಾಧಿಯು ನಿವೃತ್ತಿಯಾಗುವುದು. ಸೀತೆಯು ಅಗ್ನಿಪ್ರವೇಶಮಾಡಿದರೆ ಮಾಯೋಪಾಧಿಯು ಕೂಡ ಹೋಗುವುದು. ಅಂದರೆ ಈಶ್ವರತ್ವವೂ ಹೋಗಿ ಪರಬ್ರಹ್ಮವೇ ಉಳಿಯುವುದು. ಆದುದರಿಂದ ಉಪಾಧಿಗಳುಂಟಾಗುವುದು ಮತ್ತು ನಿವೃತ್ತಿಯಾಗುವುದೇ ಹೊರತು ಪರಮಾತ್ಮನು ಈಶ್ವರ ಜೀವರೆನಿಸಿಕೊಂಡರೂ ನಿತ್ಯನಾಗಿರುವನು. ಆದುದರಿಂದ ಶ್ರೀರಾಮಚಂದ್ರನಿಗೆ ನಾಶವಿಲ್ಲವೆಂದು ಸರಮೆಯು ಹೇಳಿರುವುದರ ತತ್ವವೇ ನಿತ್ಯಸ್ವರೂಪದಲ್ಲಿರುವ ಆತ್ಮನಿಗೆ ನಾಶವಿಲ್ಲವೆಂಬ ತತ್ವವಾಗಿರುವುದು ಈ ತಾತ್ಪರ್ಯಕ್ಕೆ ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆ ಎರಡನೆಯ ಅಧ್ಯಾಯದಲ್ಲಿ,

ನೈನಂ ಛಿಂದಂತಿ ಶಸ್ತ್ರಾಣಿ ನೈನಂದಹತಿ ಪಾವಕಃ |
ನಚೈನಂ ಕ್ಲೇದಯಂತ್ಯಾಪೋ ನಶೋಷಯತಿ ಮಾರುತಃ ||

ಅಚ್ಛೇದ್ಯೋಯಮದಾಹ್ಯೋಯ ಮಕ್ಲೇದ್ಯೋ ಶೋಷ್ಯ ಏವಚ |
ನಿತ್ಯಃ ಸರ್ವಗತಃ ಸ್ಥಾಣು ರಚಲೋಯಂ ಸನಾತನಃ ||

ತಾ|| ಎಲೈ! ಅರ್ಜುನಾ! ಈ ಆತ್ಮನನ್ನು ಖಡ್ಗಾದಿ ಶಸ್ತ್ರಗಳು ಭೇದಿಸಲಾರವು, ಅಗ್ನಿಯು ಕೂಡ ದಹಿಸಲಾರದು. ನೀರೂ ನೆನೆಸಲಾರದು, ವಾಯುವೂ ಒಣಗಿಸಲಾರದು. ಏಕೆಂದರೆ, ಈ ಆತ್ಮನು ಅಚ್ಛೇದ್ಯನಾಗಿಯೂ, ದಹಿಸಲು ಸಾಧ್ಯವಿಲ್ಲದವನಾಗಿಯೂ, ತೋಯಿಸುವುದಕ್ಕೂ ಶೋಷಿಸುವುದಕ್ಕೂ ಸಾಧ್ಯನಲ್ಲದವನಾಗಿಯೂ, ನಿತ್ಯನಾಗಿಯೂ, ಸರ್ವಗತನಾಗಿಯೂ, ಸ್ಥಿರನಾಗಿಯೂ, ಅಚಲನಾಗಿಯೂ ಸನಾತನನಾಗಿಯೂ ಇರುವನು ಎಂಬದಾಗಿ ಹೇಳಿರುವನು.

ಆದುದರಿಂದ ಮೇಲೆ ವಿವರಿಸಿರುವ ತತ್ವದಂತೆ, ಶ್ರೀರಾಮನು ವಧ್ಯನಲ್ಲದವನಾಗಿರುವನು. ಸರಮೆಯು ಮಾಯಾರಾಮನ ಶಿರಸ್ಸಿನ ವಿಚಾರವಾಗಿ ವಿದ್ಯುಜ್ಜಿಹ್ವನು ಮಾಡಿರುವ ಮಾಯಾಕೃತ್ರಿಮವೆಂದು ಸೀತೆಗೆ ಹೇಳಿರುವುದರ ತತ್ವವೇನೆಂದರೆ ವಿದ್ಯುಜ್ಜಿಹ್ವನೆಂದರೆ ಇಂದ್ರಜಾಲ ಅಥವಾ ಮಿಥ್ಯಾಸ್ವರೂಪವನ್ನು ಸತ್ಯವಾಗಿ ತೋರುವಂತೆ ಮಾಡುವುದರ ತತ್ವದವನೆಂದು ಮೇಲೆ ತಿಳಿಸಿತಷ್ಟೆ! ಪರಮಾತ್ಮನು ಉತ್ಪತ್ತಿ ಲಯಗಳಿಲ್ಲದೆ ನಿತ್ಯನಾಗಿರುವುದರಿಂದ ಉತ್ಪತ್ತಿ ಲಯಗಳುಳ್ಳ ಬ್ರಹ್ಮಾಂಡ ಪಿಂಡಾಂಡಗಳು, ಮಿಥ್ಯವಾದ ಇಂದ್ರಜಾಲದ ಸ್ವರೂಪಗಳಾಗಿರುವುವು. ಹೇಗೆಂದರೆ ಯಾವುದಕ್ಕೆ ಉತ್ಪತ್ತಿಯುಂಟೋ ಅದಕ್ಕೆ ನಾಶವುಂಟು. ಸೃಷ್ಟಿಯಾದ ಪ್ರಪಂಚಕ್ಕೆ ನಾಶವುಂಟು. ಇದರಂತೆಯೇ ಉತ್ಪತ್ತಿಯಾಗುವ ದೇಹಕ್ಕೂ ನಾಶವುಂಟು. ಪರಮಾತ್ಮಚೈತನ್ಯನಾದರೋ ಹುಟ್ಟುಸಾವುಗಳಿಲ್ಲದವನು. ಆದುದರಿಂದ ಮಾಯಾಶಿರಸ್ಸಿನಂತೆ ಬ್ರಹ್ಮಾಂಡಪಿಂಡಾಂಡಗಳೂ ಮಿಥ್ಯವಾದುವುಗಳು. ಈ ತಾತ್ಪರ್ಯಕ್ಕೆ "ಬ್ರಹ್ಮಸತ್ಯಂ ಜಗನ್ಮಿಥ್ಯಾ" ಎಂಬ ವಾಕ್ಯವಿರುವುದು. ಅಲ್ಲದೆ ದೇಹ ಕೂಡ ಇಂದ್ರಜಾಲದ ವಿದ್ಯೆಯಂತೆ ಇರುವುದೆಂದು ಶ್ರೀವಿದ್ಯಾರಣ್ಯರವರು ಪಂಚದಶಿ ಚಿತ್ರದೀಪಿಕೆ, ೧೪೭ನೆಯ ಶ್ಲೋಕದಲ್ಲಿ,

ಏತಸ್ಮಾತ್ಕಿಮಿವೇಂದ್ರಜಾಲಮಪರಂ ಯದ್ಗರ್ಭವಾಸೇ ಸ್ಥಿತಂ |
ರೇತಶ್ಚೇತತಿ ಹಸ್ತಮಸ್ತಕಪದ ಪ್ರೋದ್ಭೂತ ನಾನಾಂಕುರಂ ||
ಪರ್ಯಾಯೇಣ ಶಿಶುತ್ವ ಯೌವನ ಜರಾ ವೇಷೈರನೇಕೈರ್ವೃತಂ |
ಪಶ್ಯತ್ಯತ್ತಿ ಶೃಣೋತಿ ಜಿಘ್ರತಿ ತಥಾಗಚ್ಛತ್ಯಥಾಗಚ್ಛತಿ ||

ತಾ|| ಗರ್ಭವಾಸದಲ್ಲಿರುವ ವೀರ್ಯವು ಕೈಕಾಲು ಶಿರಸ್ಸುಗಳಾಗಿ ಹುಟ್ಟಿ ಬಗೆಬಗೆಯಾದ ಪರಿಣಾಮವುಳ್ಳದ್ದಾಗಿ ಕ್ರಮದಿಂದ ಶಿಶುತ್ವ, ಯೌವನ, ಜರಾ ಮುಂತಾದ ವೇಷಗಳೊಡನೆ ಕೂಡಿ ತಿನ್ನುವುದು, ಕೇಳುವುದು, ಆಘ್ರಾಣಿಸುವುದು, ಬರುವುದು, ಹೋಗು

ವುದು, ಮುಂತಾದ ವ್ಯಾಪಾರಗಳುಳ್ಳದ್ದಾಗಿರುವುದು. ಇದಕ್ಕಿಂತಲೂ ಮತ್ತೊಂದು ಇಂದ್ರ ಜಾಲವು ಎಂಥಾದ್ದು? ಎಂದು ಹೇಳಿರುತ್ತಾರೆ. ಅಂದರೆ ಈ ದೇಹವು ಇಂದ್ರಜಾಲಸ್ವರೂಪ ವಾದುದೆಂಬ ತಾತ್ಪರ್ಯ.

ರೇತಸ್ಸಿನಿಂದುಂಟಾಗುವ ಇಂದ್ರಜಾಲಸದೃಶವಾದ ದೇಹ ಮತ್ತು ಅದರ ವ್ಯಾಪಾರ ಗಳು ವೀರ್ಯಕ್ಕೆ ಸ್ವಭಾವವೆಂದು ತಿಳಿದುಕೊಳ್ಳಬಾರದು. ಬಂಜೆಯಲ್ಲಿಯೂ ಸ್ತ್ರೀಪುರು ಷರು ಸಮಾಗಮಮಾಡಿದ ಎಲ್ಲಾ ಕಾಲಗಳಲ್ಲಿಯೂ ಗರ್ಭಧಾರಣೆಯಾಗುವುದಿಲ್ಲವಾದುದ ರಿಂದ ಈ ಕಾರ್‍ಯವು ಇಂದ್ರಜಾಲದಂತೆ ಅನಿರ್ವಚನೀಯವಾದ ಕಾರ್ಯವಾಗಿರು ವುದು. ಆದುದರಿಂದ ಬ್ರಹ್ಮಾಂಡ ಪಿಂಡಾಂಡಗಳು ಇಂದ್ರಜಾಲದಂತೆ ಮಿಥ್ಯಾಸ್ವರೂಪ ವಾಗಿರುವುದು. ಆತ್ಮನು ಮಾತ್ರ ಸತ್ಸ್ವರೂಪನಾಗಿಯೇ ಇರುವನು.

ನಾಮ ರೂಪಗಳುಳ್ಳದ್ದೆಲ್ಲ ಇಂದ್ರಜಾಲದಂತೆ ಮಿಥ್ಯೆಯೆನ್ನುವುದಕ್ಕೆ ಶಿಶುವು ಜನನ ವಾದನಂತರ ಒಂದು ಹೆಸರನ್ನು ಕೊಡುತ್ತಾರೆ. ಶಿಶುವಾಗಿದ್ದಾಗ ಮುದ್ದುಕಂದ ಮುದ್ದು ಬಾಲ ಮುಂತಾದ ವಿಶೇಷಣವಾದ ಹೆಸರನ್ನು ಕೊಡುತ್ತಾರೆ. ಪ್ರಾಪ್ತವಯಸ್ಕನಾದರೆ ನವ ಮನ್ಮಥ ಮುಂತಾದ ವಿಶೇಷಣದ ಹೆಸರೂ, ಅಧಿಕಾರದ ಹೆಸರೂ ಬರುವುದಲ್ಲದೆ ಅನೇಕ ಬಿರುದುಗಳ ಹೆಸರುಗಳೂ ಜೊತೆಗೆ ಬರುವುವು. ವೃದ್ಧಾಪ್ಯಬಂದರೆ ವೃದ್ಧನೆಂಬ ಹೆಸರು ಬರುವುದಲ್ಲದೆ ಅತಿವೃದ್ಧಾಪ್ಯ ಪ್ರಾಪ್ತವಾದಾಗ ಗೂಬೆಯಂತಿರುವನೆಂಬ ಹೆಸರೂ ಪ್ರಾಪ್ತ ವಾಗುವುದು. ಪ್ರಾಣಬಿಟ್ಟನಂತರ ಹೆಣವೆಂದು ಕರೆಯುತ್ತಾರೆ. ಹೊಂದಿದ ಹೆಸರು ಮತ್ತು ಬಿರುದುಗಳು ಕೊನೆಗೆ ಈ ಪರಿಣಾಮದ ಹೆಸರಿಗೆ ನಿಂತಿತು. ಕೊನೆಗೆ ನಾಮವೇ ಅದೃಶ್ಯ ವಾಗುವುದು. ರೂಪದ ವಿಚಾರವಾದರೋ ಶಿಶುವು ಜನನವಾದ ಮೇಲೆ ಬಾಲ್ಯದಲ್ಲಿ ಆಹ್ಲಾದ ಕರವಾದ ರೂಪದಿಂದಿದ್ದು ಚಿನ್ನ, ರತ್ನ ಮುಂತಾದಕ್ಕೆ ಹೋಲಿಸುತ್ತಾರೆ. ಪ್ರಾಪ್ತವಯ ಸ್ಸನ್ನು ಪಡೆದರೆ ಮನ್ಮಥ, ಸುಂದರಿ, ರತಿರೂಪಗಳೆನಿಸಿಕೊಳ್ಳುವುವು. ವೃದ್ಧಾಪ್ಯ ಬಂದರೆ ನೋಡುವುದಕ್ಕಾಗದ ಅಸಹ್ಯರೂಪ ಬಂದು ತಿರಸ್ಕರಿಸಲ್ಪಡುವರು. ಮರಣವನ್ನು ಹೊಂದಿ ದರೆ ಆ ರೂಪವನ್ನು ನೋಡಿ ಹೆದರಿಕೊಳ್ಳುವರು. ಕೊನೆಗೆ ಈ ರೂಪವೂ ಕೂಡ ಅಗ್ನಿಯ ಪಾಲೋ ಮಣ್ಣಿನ ಪಾಲೋ ಆಗುವುದು. ಆದುದರಿಂದ ಸರ್ವ ನಾಮರೂಪಗಳೂ ಇಂದ್ರಜಾಲದಂತೆ ಮಿಥ್ಯೆಯಾದವುಗಳಾಗಿವೆ. ಜಗತ್ತು ಮಿಥ್ಯಾಸ್ವರೂಪವೆನ್ನುವುದಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೨೩೭ನೆಯ ಶ್ಲೋಕದಲ್ಲಿ,

ಯದಿ ಸತ್ಯಂಭವೇ ದ್ವಿಶ್ವಂ ಸುಷುಪ್ತಾ ವುಪಲಭ್ಯತಾಂ |
ಯನ್ನೋಪಲಭ್ಯತೇಕಿಂಚಿ ದತೋ ಸತ್ಸ್ವಪ್ನವನ್ಮೃಷಾ ||

ತಾ|| ಈ ಪ್ರಪಂಚವು ಸತ್ಯವಾದದ್ದೇ ಆದರೆ ಇದು ಸುಷುಪ್ತಿಯಲ್ಲಿ ಕಾಣಿಸಬೇಕು. ಹಾಗೆ "ಸ್ವಲ್ಪವೂ ಕಾಣಿಸುವುದಿಲ್ಲವಾದುದರಿಂದ ಅಸತ್ಯವಾಗಿಯೂ ಸ್ವಪ್ನದಂತೆ ಸುಳ್ಳಾಗಿಯೂ ಇರುವುದು. ಎಂದು ಹೇಳಿರುತ್ತಾರೆ.

ಸ್ವಪ್ನದಲ್ಲಿನ ಪದಾರ್ಥವು ಅಸತ್ಯವೆಂದು ನಾವು ತಿಳಿದುಕೊಳ್ಳಲು ಬಹುಬೇಗ ಜಾಗ್ರತ್ಕಾಲವು ಬರುವುದು. ಸ್ವಪ್ನದಲ್ಲಿ ನೋಡಿದ ಪದಾರ್ಥವು ಅಸತ್ಯವೆಂದು ನಮಗೆ ನಂಬಿಕೆ ಬರುವುದಷ್ಟೆ! ಆದರೆ ಸ್ವಪ್ನಪ್ರಾಯವಲ್ಲಿಯೇ ಇರುವ ಪ್ರಪಂಚರೂಪವಾದ ವ್ಯಾಪಾರಕ್ಕೆ ಬ್ರಹ್ಮಜ್ಞಾನಸ್ವರೂಪವಾದ ಜಾಗ್ರತ್ತು ಅಷ್ಟು ಬೇಗ ಬರುವುದಿಲ್ಲವಾದುದರಿಂದ ಈ ಪ್ರಪಂಚದ ಅಸತ್ಯತೆಯು ಥಟ್ಟನೆ ನಮಗೆ ಅನುಭವಕ್ಕೆ ಬರುವುದಿಲ್ಲ. ಆದುದರಿಂದ ವಿದ್ಯುಜ್ಜಿಹ್ವನ ಮಾಯಾಕಾರ್ಯದಂತೆ ಪ್ರಪಂಚವು ಮಿಥ್ಯೆಯೆಂಬುದನ್ನೂ ಪರಮಾತ್ಮಸ್ವರೂಪನಾದ ಶ್ರೀರಾಮಚಂದ್ರನು ಸತ್ಯಸ್ವರೂಪನೆಂದೂ ಪ್ರತಿಪಾದನೆ ಮಾಡುವ ತತ್ವನಿಃಸರಣೆಯು ಸೀತಾದೇವಿಗೆ ಸಮಾಧಾನ ಹೇಳಿದುದಾಗಿರುವುದು.

ಪ್ರಾಣಿಗಳ ಸ್ಥೂಲದೇಹಗಳು ಹುಟ್ಟು ಸಾವುಗಳನ್ನು ಪಡೆಯುವುವಲ್ಲದೆ ಸೂಕ್ಷ್ಮ ಮತ್ತು ಕಾರಣದೇಹಗಳು ನಾಶವಾಗದೆ ಅನೇಕ ಸ್ಥೂಲದೇಹಗಳನ್ನು ಕೊಡುತ್ತಿರುವುವು. ಈ ಸೂಕ್ಷ್ಮ ಮತ್ತು ಕಾರಣದೇಹಗಳು ಆತ್ಮಸಾಕ್ಷಾತ್ಕಾರವನ್ನು ಪಡೆದಾಗ ನಶಿಸುವುವು. ಆದುದರಿಂದ ಸೂಕ್ಷ್ಮ ಮತ್ತು ಕಾರಣದೇಹಗಳು ಕೂಡ ಇಂದ್ರಜಾಲದಂತೆ ಮಿಥ್ಯವಾದುವು. ಜನನ ಮರಣಸ್ವರೂಪವಾದ ವಿಕಾರಾದಿಗಳು ಪ್ರಾಣಿಗಳಿಗೆ ಮಾತ್ರವೇ ಹೊರತು ಪ್ರಪಂಚಕ್ಕಿಲ್ಲ. ಪ್ರಪಂಚವು ತನ್ನ ಹುಟ್ಟಿಗೆ ತಾನು ಇದ್ದೇ ಇರುವುದು, ಎಂದು ತಿಳಿದುಕೊಂಡು ದ್ವೈತವೇ ನಿಶ್ಚಯವೆಂದು ತಿಳಿದುಕೊಳ್ಳಬಾರದು. ಬ್ರಹ್ಮಾಂಡಸ್ವರೂಪವಾದ ಪ್ರಪಂಚವು ಈಶ್ವರಾಧೀನವಾದುದು. ಈಶ್ವರನು, ತನ್ನಿಂದ ನಿರ್ಣಯಿಸಲ್ಪಟ್ಟ ಕಾಲ ಬಂದಾಗ ಪ್ರಪಂಚವನ್ನು ಆತ್ಯಂತಿಕಪ್ರಳಯ ಅಥವಾ ಉಪಸಂಹಾರಮಾಡಿಕೊಂಡು ತನ್ನ ಸ್ವರೂಪವಾದ ಪರಬ್ರಹ್ಮನೇ ಆಗುವನು. ಆದುದರಿಂದ ಈಶ್ವರನ ಕಾರ್ಯವನ್ನು ಕುರಿತು ನಾವು ಒಪ್ಪಾಡಿ ವ್ಯಥೆಪಡುವುದನ್ನು ಬಿಟ್ಟು ನಮ್ಮಲ್ಲಿರುವ ಮನೋವಿಕಾರವಾದ ದ್ವೈತವನ್ನು ಹೋಗಲಾಡಿಸಿಕೊಂಡು ನಾವು ಕೃತಕೃತ್ಯರಾಗೋಣ.

ಸ್ಥೂಲ ಸೂಕ್ಷ್ಮ ಕಾರಣದೇಹಗಳಿಗೆ ಪೃಥಕ್ಕಾದ ನಮ್ಮ ನಿಶ್ಚಯವಾದ ಆತ್ಮಸ್ವರೂಪರಾಗಿ ನಾವು ನಿಲ್ಲಬೇಕು. ನಮ್ಮಲ್ಲಿರುವ ದ್ವೈತರೂಪವಾದ ಬಂಧನವನ್ನು ಪರಿಹರಿಸಿಕೊಳ್ಳಲು ಹೊರಗಡೆ ಎಲ್ಲಿ ಹುಡುಕಿದರೂ ಪರಿಹಾರವಾಗುವುದಿಲ್ಲ. ನಮ್ಮ ಜೀವಾತ್ಮನ ನೈಜಸ್ವರೂಪವು ನಮ್ಮಲ್ಲಿಯೇ ಇರುವುದೆಂದು ವೇದ ಶಾಸ್ತ್ರ ಪುರಾಣಗಳು ಘೋಷಿಸುತ್ತಿವೆ. ಆದುದರಿಂದ ನಮ್ಮಲ್ಲಿಯೇ ನಮ್ಮ ಸ್ವರೂಪವನ್ನು ಹೊಂದಲು ಸ್ಥೂಲ ಸೂಕ್ಷ್ಮ

ಕಾರಣದೇಹಗಳೆಲ್ಲವೂ ಇಂದ್ರಜಾಲದಂತೆ ಮಿಥ್ಯವೆಂದು ತಿಳಿದುಕೊಂಡು ಅಂತರ್ಮುಖದ ಮಾರ್ಗದಲ್ಲಿ ಪ್ರವೇಶಿಸಬೇಕು. ಔಷಧಿಯ ಹೆಸರನ್ನು ಹೇಳಿದ ಮಾತ್ರದಿಂದ ಹೇಗೆ ರೋಗವು ನಾಶವಾಗುವುದಿಲ್ಲವೊ ಹಾಗೆ ಅಂತರ್ದೃಷ್ಟಿಯ ಮಾರ್ಗದಲ್ಲಿ ಪ್ರವೇಶಿಸಿ ಪರಿಪಕ್ವಾವಸ್ಥೆಯನ್ನುಹೊಂದದೆ"ಬ್ರಹ್ಮಸತ್ಯಂ ಜಗನ್ಮಿಥ್ಯಾ"ಎಂಬದಾಗಿ ನುಡಿದಮಾತ್ರಕ್ಕೆ ಫಲವು ದೊರೆಯಲಾರದು. ಆದುದರಿಂದ ದೇಹವನ್ನು ಮಿಥ್ಯಾಸ್ವರೂಪವೆಂದು ತಿಳಿದು, ಅಂತರ್ದೃಷ್ಟಿಯ ಮಾರ್ಗದಲ್ಲಿ ಪ್ರವೇಶಿಸಿ, ನಮ್ಮ ನಿಜವಾದ ಸ್ವರೂಪವನ್ನುಎಂದರೆ ಆತ್ಮಸಾಕ್ಷಾತ್ಕಾರವನ್ನು ಪಡೆಯಬೇಕು. ಇದೇ ವಿಚಾರದಲ್ಲಿ ಸತ್ಯಪ್ರತಿಪಾದನೆಯ ತತ್ವದಲ್ಲಿರುವ ಸರಮೆಯು ಸೀತಾದೇವಿಗೆ ಸಮಾಧಾನೋಕ್ತಿಗಳನ್ನು ಹೇಳಿರುವ ಶ್ರೀಮದ್ರಾಮಾಯಣದ ಕಥೆಯನ್ನು ಅನುಸರಿಸೋಣ.

**ರಾ||** ಸರಮೆಯು ಸೀತಾದೇವಿಯನ್ನು ಕುರಿತು ಶ್ರೀರಾಮನು ಲಂಕೆಗೆ ಸೈನ್ಯದೊಡನೆ ಬಂದಿರುವನು. ಯುದ್ಧದ ವಾದ್ಯಘೋಷವು ಪ್ರಾರಂಭವಾಗಿದೆ. ಶ್ರೀರಾಮನು ರಾವಣನನ್ನು ಸಂಹರಿಸಿ ನಿಶ್ಚಯವಾಗಿಯೂ ನಿನ್ನನ್ನು ಸೇರುತ್ತಾನೆ. ನೀನು ಸಂತೋಷದಿಂದ ಶ್ರೀರಾಮನ ತೊಡೆಯ ಮೇಲೆ ಕುಳಿತುಕೊಳ್ಳುವುದನ್ನು ಖಂಡಿತವಾಗಿಯೂ ನಾನು ನೋಡುತ್ತೇನೆಂದು ಹೇಳಿದಳು.

**ತತ್ವ||** ಈ ಕಥಾಭಾಗದ ಅಂತರಾರ್ಥವೇನೆಂದರೆ ಶ್ರೀರಾಮನು ಸೈನ್ಯದೊಡನೆ ಬಂದು ಲಂಕೆಯನ್ನು ಸೇರಿದನೆಂದರೆ, ಬಿಂದುಸಹಿತವಾದ "ಓಂ"ಕಾರೋಪಾಸನೆಯ ಅನುಷ್ಠಾನಕ್ಕೆ ಪ್ರಾರಂಭವೆಂದು ಹಿಂದಿನ ಪ್ರಕರಣಗಳಲ್ಲಿ ತಿಳಿಸಿರುತ್ತದಷ್ಟೆ! ಇಂತಹ "ಓಂ"ಕಾರೋಪಾಸನೆಯ ಅನುಷ್ಠಾನದ ಮಾರ್ಗದಿಂದಲೇ ಸೀತಾರಾಮರು ಸೇರುವುದೆಂದರೆ, ಮೋಕ್ಷವು ದೊರಕುವುದೆನ್ನುವುದು ಸಂದೇಹವಿಲ್ಲದೆ ಸತ್ಯವಾಗಿರುತ್ತೆಂದು ಸೂಚಿಸುತ್ತದೆ. ಈ "ಓಂ" ಕಾರೋಪಾಸನೆಯ ಅನುಷ್ಠಾನದಿಂದ ಹೊಂದತಕ್ಕ ಆತ್ಮಸಾಕ್ಷಾತ್ಕಾರದಿಂದ ರಾವಣಾದಿಗಳ ತತ್ವವಾದ ಅವಿದ್ಯೆಯು ನಿಗ್ರಹವಾಗುವುದೆಂಬುದು ಖಂಡಿತವಾಗಿಯೂ ಸತ್ಯವಾಗಿರುವುದೆಂಬುದನ್ನು ಸೂಚಿಸುವುದು. ಈ ತತ್ವಾರ್ಥವೇ ಸತ್ಯಪ್ರತಿಪಾದನೆಯ ತತ್ವದಲ್ಲಿರುವ ಸರಮೆಯು ಯುದ್ಧದಲ್ಲಿ ಶ್ರೀರಾಮನು ರಾವಣನನ್ನು ನಿಗ್ರಹಿಸಿ ನಿನ್ನನ್ನು ಪಡೆಯುತ್ತಾನೆಂದು ಸೀತಾದೇವಿಯೊಡನೆ ಹೇಳಿದುದರ ಅಂತರಾರ್ಥ.

ಆದುದರಿಂದ "ಸತ್ಯಂ ಜ್ಞಾನಮನಂತಂ ಬ್ರಹ್ಮ" ಎಂಬ ಶ್ರುತಿವಾಕ್ಯದಲ್ಲಿ ಹೇಳಿರುವ ಸತ್ಯಸ್ವರೂಪನಾದ ಪರಬ್ರಹ್ಮನನ್ನು ಹೊಂದುವ ಮಾರ್ಗವೇ ಸತ್ಯವಾದ ಮಾರ್ಗವೆನಿಸಿಕೊಳ್ಳುವುದಲ್ಲದೆ ಇತರ ಮಾರ್ಗಗಳೆಂದಿಗೂ ಸತ್ಯಮಾರ್ಗವಲ್ಲ. ಅಂದರೆ ಬ್ರಹ್ಮವಿದ್ಯಾಧಿಕಾರವನ್ನು ಪಡೆದು "ಓಂ"ಕಾರೋಪಾಸನೆಯಿಂದ ಪರಬ್ರಹ್ಮನನ್ನು ಹೊಂದುವ ಮಾರ್ಗವೇ ನಿಶ್ಚಯವಾಗಿಯೂ ಸತ್ಯವನ್ನು ಪ್ರತಿಪಾದನೆಮಾಡುವ ಮಾರ್ಗವಾಗಿರುತ್ತದೆ.

ಜಗತ್ತು ಸತ್ಯನೆಂದು ನಂಬಿಕೆಯಿಂಡಿರುವವನಿಗೆ ಅಂತರ್ದೃಷ್ಟಿಯ ವಿಚಾರವೇ ಗೊತ್ತಿರುವುದಿಲ್ಲನೆಂದು ದೃಢವಾಗಿ ಹೇಳಬಹುದು. ಇಂತಹವರು ರಾವಣ ವಿದ್ಯುಜ್ಜಿಹ್ವರ ಬಲೆಯಲ್ಲಿರುತ್ತಾರೆ.

ಜಗತ್ತು ಸತ್ಯವಾದುದೆಂದು ಯಾರು ನಂಬಿಕೊಂಡಿರುವರೋ ಅವರು ಅನೇಕ ಶ್ರುತಿಗಳಲ್ಲ ಘಂಟಾಘೋಷವಾಗಿ ಹೇಳಿರುವ ಅಂತರ್ಮುಖವಾದ "ಓಂ"ಕಾರೋಪಾಸನೆಯನ್ನು ಅನುಷ್ಠಿಸಿ ಅದರಲ್ಲಿ ಪರಿಪಕ್ವಾವಸ್ಥೆಗೆ ಬರಲಿ. ಆಗ ಅವರ ನಂಬಿಕೆಯು ಹೇಗಾಗುವುದೆಂದು ಅವರುಗಳಿಗೆ ಸ್ವಾನುಭವಕ್ಕೆ ಬರುವುದು. ಅಂದರೆ ಅಜ್ಞಾನಿಗಳಿಗೆ ಜಗತ್ತು ಸತ್ಯವಾಗಿ ತೋರುವುದು. ಅಂತರ್ಮುಖದ ಮಾರ್ಗದಲ್ಲಿ ಸಿದ್ಧಿಪಡೆದವರಿಗೆಂದರೆ, ಜ್ಞಾನಿಗಳಿಗೆ ಸರ್ವವೂ ಬ್ರಹ್ಮಮಯವಾಗಿ ತೋರುವುದರಿಂದ ಮಿಥ್ಯವಾಗಿ ತೋರುವುದು. ಆದುದರಿಂದ ಬಾಹ್ಯಸ್ವರೂಪವಾದವುಗಳನ್ನೆಲ್ಲ ಮಿಥ್ಯಾಸ್ವರೂಪವೆಂದು ಚೆನ್ನಾಗಿ ನ್ಯಾಸವಮಾಡಿ ಅಂತರ್ದೃಷ್ಟಿಯಲ್ಲಿ ಕಾಣುವ ತೇಜೋಬಿಂದುವನ್ನು ಬಿಡದೆ ಧಾರಣೆಮಾಡಿಕೊಳ್ಳುವುದನ್ನು ಅಭ್ಯಾಸಮಾಡುವುದರ ಮೂಲಕ ಅವಿದ್ಯೆಯನ್ನು ನಿಗ್ರಹಿಸಿ ಪರಮಪದವನ್ನು ಹೊಂದಬೇಕು.

**ರಾ||** ಸೀತಾದೇವಿಯು, ಈಗಲಾದರೂ ತನ್ನನ್ನು ಶ್ರೀರಾಮನಿಗೆ ಒಪ್ಪಿಸಲು ರಾವಣನಿಗೆ ಇಷ್ಟವಿರುವುದೋ ಇಲ್ಲವೋ ಎಂಬುದನ್ನು ಗೂಢವಾಗಿ ತಿಳಿದುಕೊಂಡು ಬರುವಂತೆ ಸರಮೆಯನ್ನು ರಾವಣನ ಬಳಿಗೆ ಕಳುಹಿಸಿದಳು. ರಾವಣನು ಯುದ್ಧಸನ್ನದ್ಧನಾಗಿದ್ದನೇ ಹೊರತು ಸೀತೆಯನ್ನು ಬಿಟ್ಟುಕೊಡಲು ಇಷ್ಟಪಡಲಿಲ್ಲ.

**ತತ್ವ||** ತೀವ್ರತಮವಾದ ಬ್ರಹ್ಮನಿಷ್ಠೆಯಿಂದೊಡಗೂಡಿದ "ಓಂ"ಕಾರೋಪಾಸನೆಯಿಂದ ಅವಿದ್ಯೆಯನ್ನು ನಿಗ್ರಹಿಸಬೇಕಲ್ಲದೆ ಇತರ ಯಾವ ವಿಧದಿಂದಲೂ ಸೀತಾದೇವಿಯ ಬಂಧನ ಬಿಡುಗಡೆಯಾಗುವುದಿಲ್ಲವೆಂದರೆ, ಮೋಕ್ಷವು ದೊರಕುವುದಿಲ್ಲವೆಂಬುವರ ಸತ್ಯತ್ವವನ್ನು ಸೂಚಿಸುವುದು. ಈ ತತ್ವಾರ್ಥವನ್ನನುಸರಿಸಿ ಸರಮೆಯು ಸೀತೆಯೊಡನೆ ರಾವಣನು ಯುದ್ಧಸನ್ನದ್ಧನಾಗಿರುವನೇ ಹೊರತು ನಿನ್ನನ್ನು ಬಿಡಲು ಸಮ್ಮತಿಸಲೇ ಇಲ್ಲವೆಂದು ಹೇಳಿರುತ್ತಾಳೆ. ಅಂದರೆ ವಿದ್ಯೆಗೂ ಅವಿದ್ಯೆಗೂ ಬದ್ಧವೈರವಿರುವುದೇ ಸತ್ಯವೆಂದೂ "ಓಂ"ಕಾರೋಪಾಸನೆಯ ಅನುಷ್ಠಾನರೂಪವಾದ ಸಮಾಧಿಯಿಂದಲೇ ಅವಿದ್ಯೆಯನ್ನು ಹೋಗಲಾಡಿಸಿಕೊಳ್ಳಬೇಕೆಂಬುದು ಸತ್ಯವಾಗಿರುವುದೆಂದೂ ಸೂಚಿಸುವುದು. ಆದುದರಿಂದ ಮೋಕ್ಷವನ್ನು ಪಡೆಯಬೇಕೆಂದು ಅಂತರಂಗಶುದ್ಧಿಯಿಂದ ಯಾರು ತಾಪಪಡುತ್ತಿರುವರೋ ಅವರು "ಓಂ"ಕಾರೋಪಾಸನೆಯ ಮಾರ್ಗವೇ ಸತ್ಯವಾದ ಮಾರ್ಗವೆಂದು ತಿಳಿದು ಅನುಷ್ಠಿಸಿ ಕೃತಕೃತ್ಯರಾಗಬೇಕು.

**ರಾ||** ಸರಮೆಯು ಸೀತಾದೇವಿಯನ್ನು ಕುರಿತು " ಉತ್ತಮಾಶ್ವವುಳ್ಳ ರಥದಲ್ಲಿ ಮೇರುಪರ್ವತವನ್ನು ನಿತ್ಯವೂ ಸುತ್ತಿಬರುವ, ಸಮಸ್ತ ಲೋಕಗಳಿಗೂ ರಕ್ಷಕನಾದ ಮತ್ತು ನಿಮ್ಮ ಕುಲದೇವತೆಯಾದ ಸೂರ್ಯನಾರಾಯಣನನ್ನು ಪ್ರಾರ್ಥಿಸು. ಶ್ರೇಯಸ್ಸಾಗಿ ಶ್ರೀರಾಮನು ಸಕಲ ಶತ್ರುಗಳನ್ನೂ ಸಂಹರಿಸಿ ನಿನ್ನನ್ನು ಕೂಡುವ " ನೆಂದು ಹೇಳಿದಳು.

**ತತ್ವ||** ಬುದ್ಧಿತತ್ವಸ್ವರೂಪನಾದ ಶ್ರೀರಾಮನು ಲಂಕೆಗೆ ಬಂದು ಸೇರಿದನೆಂದರೆ— " ಓಂ " ಕಾರೋಪಾಸನೆಯಿಂದ ಅಂತರ್ದೃಷ್ಟಿಯಲ್ಲಿ ಭ್ರೂಮಧ್ಯದಲ್ಲಿ ಗೋಚರವಾಗುವ ತೇಜೋಬಿಂದುವನ್ನು ಧಾರಣೆಮಾಡಿಕೊಳ್ಳುವ ಅಭ್ಯಾಸದ ಸೋಪಾನಕ್ಕೆ ಅಧಿಕಾರಿಯು ಬಂದಿರುವನಷ್ಟೆ! ಈ ಓಂಕಾರೋಪಾಸನೆಯ ಪ್ರಥಮದಲ್ಲಿ ಬಿಂದುವಿನ ಪ್ರಕಾಶವು ಅಷ್ಟು ಥಳಥಳಾಯಮಾನವಾಗಿರುವುದಿಲ್ಲ. ಸೂರ್ಯೋದಯಕಾಲದಲ್ಲಿ ಸೂರ್ಯನು ಹೇಗಿರುವನೋ ಹಾಗೆ ಸಮಾಧಿಯಲ್ಲಿ ಪ್ರಥಮದಲ್ಲಿ ದುಂಡಾಗಿರುವ ಬಿಂದುವು ಉದಯವಾಗುತ್ತಿರುವ ಸೂರ್ಯನಂತೆ ಇರುವುದು. ಅಭ್ಯಾಸದ ಸೋಪಾನಗಳು ಸ್ತಿಮಿತಕ್ಕೆ ಬಂದರೆ ಅರುಣೋದಯ ದಾರಭ್ಯ ಮಧ್ಯಾಹ್ನ ಹನ್ನೆರಡುಘಂಟೆಯ ಕಾಲದವರೆಗೆ ಸೂರ್ಯನ ಪ್ರಕಾಶ ಹೆಚ್ಚಿದಂತೆ ಸಮಾಧಿಯಲ್ಲಿ ಪ್ರಕಾಶವು ಅಧಿಕವಾಗುತ್ತಾ ಬರುವುದು. ಅವಿದ್ಯಾಸ್ವರೂಪವಾಗಿ ಬಾಹ್ಯ ವ್ಯಾಪಾರಸ್ವರೂಪದಲ್ಲಿರುವ ಗಾಢಾಂಧಕಾರವನ್ನು ಹೋಗಲಾಡಿಸಿ ನಮ್ಮಲ್ಲಿಯೇ ಅಂತ ರಂಗದಲ್ಲಿ ಮಧ್ಯಾಹ್ನದ ಸ್ವರೂಪವಾದ ತೇಜಸ್ಸನ್ನು ಸೋಪಾನಕ್ರಮದಿಂದಲ್ಲದೆ ಪಡೆ ಯಲು ಸಾಧ್ಯವಿಲ್ಲ. ಅಧಿಕಾರಿಯು ಗಾಢಾಂಧಕಾರವಾದ ಅವಿದ್ಯೆಯನ್ನು ದಾಟಲು ಅನುಷ್ಠಾನದ ಸೋಪಾನಗಳನ್ನು ಹತ್ತಬೇಕೆಂದು ಹನುಮಂತನು ಋಕ್ಷಬಿಲವನ್ನು ಪ್ರವೇಶಮಾಡಿದ ಸಂದರ್ಭದಿಂದಲೂ ತಿಳಿಸಿಕೊಂಡು ಬಂದಿದೆ

ನಕ್ಷತ್ರ ಮತ್ತು ಚಂದ್ರನ ಪ್ರಕಾಶಕ್ಕಿಂತಲೂ ಶ್ರೇಷ್ಠವಾದ ಸೂರ್ಯನ ಪೂರ್ಣಪ್ರಕಾಶ ವನ್ನು ಹೊಂದುವ ಅನುಷ್ಠಾನದ ವಿಚಾರವೇ ಯುದ್ಧಕಾಂಡದ ಪ್ರಾರಂಭದಿಂದ ಅಗಸ್ತ್ಯರು ಶ್ರೀರಾಮನಿಗೆ ಆದಿತ್ಯಹೃದಯವನ್ನು ಉಪದೇಶಮಾಡಿರುವವರೆಗಿನ ಕಥೆಯ ಅಂತರಾರ್ಥ ವಾಗಿರುವುದು. ಆದುದರಿಂದ " ಓಂ " ಕಾರೋಪಾಸನೆಯ ಅನುಷ್ಠಾನದ ಪ್ರಥಮದಲ್ಲಿ ಉದಯವಾಗುತ್ತಿರುವ ಸೂರ್ಯನಂತೆ ಬಿಂದುವುಂಟಾಗುವುದು. ಸೂರ್ಯನು ಹೀಗೆ ಕುಲ ದೇವತಾ ಸ್ವರೂಪವಾಗಿರುವುದರಿಂದಲೇ ನಿತ್ಯಕರ್ಮವಾದ ಸಂಧ್ಯಾವಂದನೆಯಲ್ಲಿಯೂ ಆದಿತ್ಯನೇ ದೇವರೆಂದು ವಿಧಿಸಲ್ಪಟ್ಟಿರುವುದು. ಅಲ್ಲದೆ ಪ್ರತಿಯೊಬ್ಬ ಭಾರತೀಯನೂ ಸೂರ್ಯನನ್ನು ಆರಾಧಿಸುವುದು. ಸರಮೆಯು ಸೀತಾದೇವಿಯೊಡನೆ ಸೂರ್ಯಪ್ರಾರ್ಥನೆಯ ವಿಚಾರವನ್ನು ಹೇಳಿರುವುದೂ ಈ ಮೇಲಿನ ತತ್ವಾರ್ಥವಾಗಿರುವುದು.

ಆದುದರಿಂದ ಆದಿತ್ಯೋಪಾಸನೆಯ ಮೂಲಕ ಪರಮಾತ್ಮನನ್ನು ಹೊಂದಬೇಕಾಗಿರು ವುದು. ಆದಿತ್ಯಾಂತರ್ಗತನಾಗಿರುವ ನಿರ್ಗುಣನಾದ ಪರಮಾತ್ಮನು ಉಪಾಸನೆಗೆ ಲಭ್ಯ

ನಲ್ಲವಾದುದರಿಂದ ಸಗುಣರೂಪನಾಗಿ ಬಿಂದುರೂಪದಲ್ಲಿರತಕ್ಕ ಆದಿತ್ಯನನ್ನೇ ಅವಲಂಬನೆ ಮಾಡಿಕೊಂಡು ಅವನ ಅಂತರ್ಗತವಾಗಿರುವ ಪರಮಾತ್ಮನನ್ನು ಹೊಂದಬೇಕಾಗಿರುವುದು. ಈ ದಾರಿಯೇ ಸರ್ವಶ್ರೇಷ್ಠವಾಗಿಯೂ ಸತ್ಯವಾದದ್ದಾಗಿಯೂ ಇರುವುದೆಂಬುದನ್ನು ಸೂಚಿಸುವ ತತ್ವವೇ ಸರಮೆಯು ಸೀತಾದೇವಿಗೆ ಸೂರ್ಯೋಪಾಸನೆಯ ವಿಚಾರವನ್ನು ತಿಳಿಸಿದ್ದಾಗಿರುವುದು.

**ರಾ||** ವಾನರಸೈನ್ಯದೊಡನೆ ಶ್ರೀರಾಮನು ಲಂಕೆಗೆ ಬಂದಿರುವನೆಂಬ ವಿಚಾರವನ್ನು ಸರಮೆಯು ಸೀತಾದೇವಿಗೆ ತಿಳಿಸಿದಳು. ಸೀತಾದೇವಿಗೆ ಈ ವಾರ್ತೆಯನ್ನು ಕೇಳಿ ಹರ್ಷವುಂಟಾಯಿತು.

**ತತ್ವ||** ಸೀತಾದೇವಿಗೆ ಹರ್ಷವುಂಟಾದುದರ ತತ್ವಾರ್ಥವೇನೆಂದರೆ —ಬಿಂದುಸಹಿತವಾದ "ಓಂ" ಕಾರೋಪಾಸನೆಯ ಪ್ರಾರಂಭದ ಅವಸ್ಥೆಯೇ ಶ್ರೀರಾಮನು ಲಂಕೆಯನ್ನು ಸೇರಿದುದೆಂದು ಹಿಂದೆ ತಿಳಿಸಿರುತ್ತದಷ್ಟೆ! ಅತಿದೀರ್ಘಕಾಲ ಅಗಲಿ ಪರಸ್ಥಳಹೋಗಿದ್ದ ಕಾಂತನು ಊರಿಗೆ ಬಂದಿರುವನೆಂಬ ವರ್ತಮಾನವು ಕಾಂತೆಗೆ ತಿಳಿದರೆ ಎಷ್ಟು ಸಂತೋಷಪಡುವಳೋ ಅಂದರೆ ಅಧಿಕಾರಿಯಲ್ಲಿರುವ ಶುದ್ಧಸತ್ವಗುಣ ಅಥವಾ ಶುದ್ಧಸತ್ವಪ್ರಧಾನ ಮಾಯೆಗೆ ಬಿಂದುಸಹಿತವಾದ "ಓಂ" ಕಾರೋಪಾಸನೆಯಲ್ಲಿ ಅಷ್ಟು ಪ್ರಫುಲ್ಲತೆಯುಂಟಾಗುವುದು. ಇದೇ ಸೀತಾದೇವಿಗುಂಟಾದ ಹರ್ಷದ ತತ್ವವಾಗಿರುವುದು. ಅತಿದೀರ್ಘಕಾಲ ಅಗಲಿ ತನ್ನ ಗ್ರಾಮದೊಳಗೆ ಬಂದಿರುವ ಕಾಂತನು ಮನೆಗೆ ಬಂದುದನ್ನು ಕಾಂತೆಯು ನೋಡುವುದರಿಂದುಂಟಾಗುವ ಸಂತೋಷದ ತತ್ವವು ಮುಂದೆ ಸೀತಾದೇವಿಯು ಶ್ರೀರಾಮನ ಬಳಿಗೆ ಬಂದು ಸೇರುವ ಸಂದರ್ಭದಲ್ಲಿ ಬರುವುದು. ಅಂದರೆ ಶುದ್ಧಸತ್ವಗುಣದ ಪ್ರಫುಲ್ಲತೆಯು ಅಧಿಕವಾಗುತ್ತ ಬರುವುದು. ಎಂದರೆ ಅಧಿಕಾರಿಯು ಸಮಾಧಿಯಲ್ಲಿ ಆನಂದಾಂಶವನ್ನು ಅನುಭವಿಸುತ್ತ ಬರುವನು. ಸಮಾಧಿಯ ಅನುಷ್ಠಾನವು ಪರಿಪಕ್ವಾವಸ್ಥೆಗೆ ಬಂದಂತೆ ಆನಂದಾಂಶವು ಅಧಿಕವಾಗಿ ಕೊನೆಗೆ ನಿಜಾನಂದಸ್ವರೂಪವಾದ ಆತ್ಮನಲ್ಲಿಯೇ ಐಕ್ಯನಾಗಿಬಿಡುವನು.

ಸೀತಾದೇವಿಯು ರಾವಣನ ಬಂಧನಕ್ಕೊಳಪಟ್ಟಾರಭ್ಯ ಇದುವರೆಗೂ ದುಃಖದಿಂದಲೇ ಇದ್ದು, ಈಗ ಶ್ರೀರಾಮನು ಲಂಕೆಗೆ ಬಂದುದನ್ನು ತಿಳಿದು ಹರ್ಷಪಟ್ಟಳು. ಸೀತಾದೇವಿಯು ರಾವಣನ ಬಂಧನದಲ್ಲಿರುವುದೆಂದರೆ—ಪ್ರಪಂಚವ್ಯವಹಾರಸ್ವರೂಪವೆಂದು ಪ್ರಥಮದಿಂದಲೂ ತಿಳಿಸಿಕೊಂಡು ಬರುತ್ತಿದೆಯಷ್ಟೆ!. ಇಂತಹ ಪ್ರಪಂಚವ್ಯಾಪಾರಕಾಲದಲ್ಲುಂಟಾಗುವ ಪ್ರಿಯ ಮೋದ ಪ್ರಮೋದಗಳೆಂಬ ಹರ್ಷಗಳು ವಾಸನಾನಂದ ಮತ್ತು ವಿಷಯಾನಂದವೆನಿಸಿಕೊಳ್ಳುವುದರಿಂದ ನಿಜಾನಂದದ ಕೋರಿಕೆಯುಂಟಾಗುವುದಿಲ್ಲ. ಅಂತ

ರ್ಮುಖದ ಸ್ವರೂಪದಲ್ಲಿರುವ "ಓಂ"ಕಾರೋಪಾಸನೆಯ ಅನುಷ್ಠಾನವು ಪ್ರಾರಂಭವಾದಾರಭ್ಯ ನಿಜಾನಂದದ ಅಂಕುರವು ತಲೆದೋರುವುದೆಂಬುದರ ತತ್ವಾರ್ಥವೇ ಸೀತಾದೇವಿಯು ಶ್ರೀರಾಮನ ಆಗಮನದ ವಿಚಾರವನ್ನು ಕೇಳಿ ಹರ್ಷಪಟ್ಟದಾಗಿರುವುದು. ಆದುದರಿಂದ ನಿಜಾನಂದಸ್ವರೂಪನಾದ ಆತ್ಮನನ್ನು ಕುರಿತು ಗಮನಮಾಡುವ ಮತ್ತು ಅವಿದ್ಯಾಬಂಧನ ಸ್ವರೂಪವಾದ ಪ್ರಪಂಚವ್ಯವಹಾರಸ್ವರೂಪವೆಂಬ ಭಯವನ್ನು ತೊಲಗಿಸುವ "ಓಂ" ಕಾರೋಪಾಸನೆಯನ್ನು ಅನುಷ್ಠಾನಮಾಡಿದರೆ ಸತ್ಯವಾಗಿಯೂ ಪರಬ್ರಹ್ಮಸಾಕ್ಷಾತ್ಕಾರವಾಗುವುದೆಂಬ ತತ್ವಾರ್ಥಪ್ರತಿಪಾದನೆಯೇ ಸರಮೆಯ ವಿಚಾರದ ಅಂತರಾರ್ಥವಾಗಿರುವುದು. ಸತ್ಯಪ್ರತಿಪಾದನೆಯ ತತ್ವಸ್ವರೂಪಳಾದ ಸರಮೆಯ ವಾಕ್ಯಗಳ ತತ್ವಗಳಿಗೆ ಅನುಸಾರವಾಗಿ ಮಾಂಡೂಕ್ಯೋಪನಿಷತ್ ಕಾರಿಕೆಯಲ್ಲಿ,

ಯುಂಜೀತ ಪ್ರಣವೇ ಚೇತಃ ಪ್ರಣವೋ ಬ್ರಹ್ಮ ನಿರ್ಭಯಂ ।
ಪ್ರಣವೇ ನಿತ್ಯಯುಕ್ತಸ್ಯ ನಭಯಂ ವಿದ್ಯತೇಕ್ವಚಿತ್ ॥

ತಾ॥ ಪ್ರಣವದಲ್ಲಿಯೇ ಮನಸ್ಸನ್ನು ನಿಲ್ಲಿಸಬೇಕು. ಪ್ರಣವವೇ ಭಯವಿಲ್ಲದ ಬ್ರಹ್ಮವು. ಯಾವಾಗಲೂ ಪ್ರಣವದಲ್ಲಿಯೇ ಮನಸ್ಸನ್ನು ನೆಲೆಗೊಳಿಸುವಾತನಿಗೆ ಎತ್ತಲೂ ಭಯವಿಲ್ಲ. ಎಂದು ಹೇಳಿರುವುದು.

ಆದುದರಿಂದ ಇಂಥ ಪ್ರಣವೋಪಾಸನೆಯ ಮೂಲಕ ಅವಿದ್ಯಾತತ್ವದಲ್ಲಿರುವ ರಾಕ್ಷಸರನ್ನು ನಿಗ್ರಹಮಾಡುವ ಮುಂದಿನ ಕಥೆಯನ್ನು ಪ್ರಾರಂಭಿಸುವುದಕ್ಕೆ ಪ್ರಥಮದಲ್ಲಿ ರಾವಣನಿಗೆ ಹಿತೋಕ್ತಿಯನ್ನು ಹೇಳಿದ ಮಾಲ್ಯವಂತನ ವಿಚಾರದ ತತ್ವವನ್ನು ತಿಳಿದುಕೊಳ್ಳೋಣ.

**ರಾ॥** ಮಾಲ್ಯವಂತನು ಸೀತೆಯನ್ನು ಶ್ರೀರಾಮನಿಗೆ ಒಪ್ಪಿಸುವುದು ಆವಶ್ಯಕವೆಂದು ರಾವಣನಿಗೆ ಬೋಧಿಸಲು, ರಾವಣನು ಅವನನ್ನು ನಿಂದಿಸಿ ಪಟ್ಟಣದ ರಕ್ಷಣೆಗಾಗಿ ಸೇನೆಗಳನ್ನು ಸಜ್ಜುಗೊಳಿಸಿದನು.

**ತತ್ವ॥** ಮಾಲ್ಯವಂತನೆಂದರೆ—ಅತ್ಯಂತ ಮೃದುಸ್ವಭಾವ ಮತ್ತು ನೀತಿವಂತನೆಂಬ ತತ್ವವಾಗಿರುವುದು. ಮಾಲ್ಯವೆಂದರೆ ಪುಷ್ಪದ ಮಾಲಿಕೆ. ಪುಷ್ಪವು ಹೇಗೆ ಮೃದುವಾಗಿ ಹಿತವಾಗಿರುವುದೋ ಹಾಗೆ ಮೃದುಸ್ವಭಾವಿಗಳಾದ ನೀತಿವಂತರಿಗೆ ಇದು ಸಹಜವಾಗಿರುವುದು. ಆದುದರಿಂದ ಮಾಲ್ಯವಂತನೆಂದರೆ——ನೀತಿವಂತನು ಮತ್ತು ಮೃದುಸ್ವಭಾವದ ಸ್ವರೂಪದವನೆಂಬ ತತ್ವನಾಗಿರುವುದು. ಮಾಲ್ಯವಂತನು ಸೀತಾದೇವಿಯನ್ನು ಶ್ರೀರಾಮನಿಗೆ ಒಪ್ಪಿಸುವಂತೆ ರಾವಣನಿಗೆ ಹಿತೋಕ್ತಿಗಳನ್ನು ಹೇಳಿದನೆಂದರೆ——ಶ್ರೀರಾಮನ ತತ್ವದಲ್ಲಿರುವ ಆತ್ಮನಿಗೆ ವಿರೋಧಿಯಾಗಿರಬಾರದೆಂದರೆ ಬ್ರಹ್ಮದ್ವೇಷವು ಇರಬಾರದೆಂದೂ,

ಆತ್ಮನಿಗೆ ವಿರೋಧಿಯಾದರೆ ಅನರ್ಥಪರಂಪರೆಗಳುಂಟಾಗುವುವೆಂದೂ ಸೂಚಿಸುವ ತತ್ವವಾಗಿರುವುದು.

ರಾವಣನು ಮಾಲ್ಯವಂತನ ಹಿತೋಕ್ತಿಗೆ ಗಮನಕೊಡದೆ ಅವನನ್ನೇ ನಿಂದಿಸಿದುದರ ತತ್ವಾರ್ಥವೇನೆಂದರೆ ರಜೋಗುಣದ ಚೈತನ್ಯದ ಕಾರ್ಯದ ಸ್ವಭಾವವೇ ಶುದ್ಧ ಒರಟು ಮತ್ತು ಮೂರ್ಖತನ. ಶುದ್ಧಾಂಗವಾಗಿ ಕೆಡುವ ಕಾಲದಲ್ಲಿಯೂ ಹಟವನ್ನು ಬಿಡುವುದಿಲ್ಲ. ಮುಖ್ಯತತ್ವಾರ್ಥವೇನೆಂದರೆ, ರಾವಣನೆಂದರೆ ಪ್ರಪಂಚಾಭಿಮುಖವಾಗಿರುವುದರಲ್ಲಿ ಪ್ರಧಾನಪುರುಷನು. ಮೂರ್ಖರಾಗಿಯೂ ಪ್ರಪಂಚವೇ ಸತ್ಯವೆಂಬ ಹಟವಾದಿಗಳಾಗಿಯೂ ಇರತಕ್ಕವರಿಗೆ ಪ್ರಪಂಚವ್ಯಾಪಾರವು ಸತ್ಯವಾದುದಲ್ಲವೆಂದೂ, ಆತ್ಮನನ್ನು ಆಶ್ರಯಿಸೆಂದೂ ಹಿತೋಕ್ತಿಗಳನ್ನು ಹೇಳಿದರೂ ನಿರರ್ಥಕವೆಂಬ ತಾತ್ಪರ್ಯವಾಗಿರುವುದು. ಈ ತಾತ್ಪರ್ಯಕ್ಕೆ ಅನುಸಾರವಾಗಿ ಶ್ರೀಶಂಕರಭಗವತ್ಪಾದಾಚಾರ್ಯರವರು ವಿವೇಕಚೂಡಾಮಣಿ ೧೧೭ನೆಯ ಶ್ಲೋಕದಲ್ಲಿ,

> ಅಭಾವನಾವಾ ವಿಪರೀತಭಾವನಾ ।
> ಸಂಭಾವನಾ ವಿಪ್ರತಿಪತ್ತಿರಸ್ಯಾಃ ।
> ಸಂಸರ್ಗಯುಕ್ತಂ ನವಿಮುಂಚತಿ ಧ್ರುವಂ ।
> ವಿಕ್ಷೇಪಶಕ್ತಿಃ ಕ್ಷಪಯತ್ಯಜಸ್ರಂ ॥

ತಾ॥ ಲೋಕದಲ್ಲಿ ರಜೋಗುಣದ ಚೈತನ್ಯವಾಗಿರುವ ವಿಕ್ಷೇಪಶಕ್ತಿಯು ಯಾವ ಪುರುಷನನ್ನು ಆಶ್ರಯಿಸಿರುವುದೋ, ಅಂಥವನಿಗೆ ಆತ್ಮವಸ್ತು ಈರೀತಿಯಾಗಿರುವುದೆಂಬ ವಿವೇಕವುಂಟಾಗುವುದಿಲ್ಲ. ಒಂದುವೇಳೆ ಹಿತೋಪದೇಶದಿಂದ ಬೋಧಿಸಿದರೂ, ಆತ್ಮಪದಾರ್ಥವು ಒಂದು ಬಗೆಯಾಗಿದ್ದರೆ ಮತ್ತೊಂದು ವಿಧವಾಗಿರುವುದೆಂಬ ತಿಳಿವಳಿಕೆಯುಂಟಾಗುವುದು. ಈ ಪ್ರಕಾರವಾಗಿ ವಿಕ್ಷೇಪಶಕ್ತಿಯು ಪುರುಷನನ್ನು ಯಾವಾಗಲೂ ಬಾಧಿಸುತ್ತಾ ನಿಪಾತವಮಾಡುವುದು. ಎಂದು ಹೇಳಿರುತ್ತಾರೆ.

ಈ ಮೇಲಿನ ತಾತ್ಪರ್ಯವನ್ನು ಅನುಸರಿಸಿಯೇ ವಿಕ್ಷೇಪಶಕ್ತಿಯ ತತ್ವದಲ್ಲಿರುವ ರಾವಣನು ಹಿತೋಕ್ತಿಗಳಿಗೆ ಒಡಂಬಡದೆ ಇದ್ದುದಾಗಿರುವುದು. ಇದರಂತೆ ವಿಕ್ಷೇಪಶಕ್ತಿಯಿಂದ ಆವೃತರಾಗಿ ಮೂರ್ಖರಾಗಿರುವ ಮನುಷ್ಯರು ಶಾಸ್ತ್ರಾರ್ಥಗಳನ್ನು ಶ್ರುತಿಮತಾನುಸಾರವಾಗಲ್ಲದೆ ಬೇರೆ ವಿಧವಾಗಿ ತಿರುಗಿಸಿ ವಾಕ್ಯಾರ್ಥಗಳನ್ನು ಮಾಡಿಕೊಂಡು ಜನ್ಮಪರಂಪರೆಗಳನ್ನನುಭವಿಸುವರು. ಇದೆಲ್ಲಾ ವಿಕ್ಷೇಪಶಕ್ತಿಯ ಮಹತ್ತಾಗಿರುವುದು. ಇದೇ ತತ್ವಕ್ಕೆ ಶ್ರೀವಿದ್ಯಾರಣ್ಯರವರು ವೇದಾಂತಪಂಚದಶಿ ಚಿತ್ರದೀಪಿಕೆಯಲ್ಲಿ,

ಭ್ರಾಮ್ಯಂತೆ ಪಂಡಿತಂ ಮನ್ಯಾಸ್ಸರ್ವಲೌಕಿಕ ತಾರ್ಕಿಕಾಃ |
ಅನಾದೃತ್ಯ ಶ್ರುತಿಂ ಮೌರ್ಖ್ಯಾ ತ್ಕೇವಲಂ ಯುಕ್ತಿಮಾಶ್ರಿತಾಃ ||

ತಾ|| ಲೌಕಿಕ ತಾರ್ಕಿಕರೆಲ್ಲರೂ ತಾವು ಪಂಡಿತರೆಂದು ತಿಳಿದುಕೊಂಡು, ತಮ್ಮ ಬುದ್ಧಿಗೆ ತೋರಿದ ಕೇವಲ ಯುಕ್ತಿಯನ್ನು ಮಾತ್ರ ಆಶ್ರಯಿಸಿದವರಾಗಿ, ಮೂರ್ಖತನದಿಂದ ಶ್ರುತಿಯ ತಾತ್ಪರ್ಯವನ್ನು ವ್ಯತಿರಿಕ್ತವಾಗಿ ತಿಳಿದುಕೊಂಡು ಭ್ರಾಂತಿಯನ್ನು ಹೊಂದುತ್ತಲಿರುವರು. ಎಂದು ಹೇಳಿರುವರು.

ಆದುದರಿಂದ ರಾವಣನ ತತ್ವವಾದ ವಿಕ್ಷೇಪಶಕ್ತಿಯಿಂದ ಬಂಧಿಸಿರುವವರೆಲ್ಲಾ ಭ್ರಾಂತಿಯಿಂದ ಬಂಧಿತರಾಗಿ ಮೂರ್ಖತನವನ್ನು ಬಿಡುವುದಿಲ್ಲವೆಂಬ ತತ್ವವಾಗಿರುವುದು.

## ೯ನೆಯ ಪ್ರಕರಣ.

**(೧) ಶ್ರೀರಾಮನ ಸೈನ್ಯವು ಲಂಕಾಪಟ್ಟಣವನ್ನು ಮುತ್ತಿದುದು. (೨) ಸುಗ್ರೀವನು ರಾವಣನ ಕಿರೀಟಭಂಗ ಮಾಡಿದುದು.**



**(೧) ಮೂಲಬಂಧದ ಅನುಷ್ಠಾನದ ವಿಚಾರ. (೨) ಸಮಾಧಿಯ ಅನುಷ್ಠಾನಕ್ಕೆ ಪ್ರಾಣವಾಯು ಇರಬೇಕಾದ ಸ್ಥಿತಿ.**

### ಒಂದನೆಯ ಅಂಶದ ವಿಚಾರ.

**ರಾ||** ರಾವಣನು ಲಂಕೆಯ ರಕ್ಷಣೆಗಾಗಿ ಸೈನ್ಯವನ್ನು ನಿಯಮಿಸಿದ್ದನ್ನು ವಿಭೀಷಣನು ಗೂಢಚಾರದಿಂದ ತಿಳಿದು ಶ್ರೀರಾಮನಲ್ಲಿ ಅರಿಕೆಮಾಡಿದುದೇನೆಂದರೆ—ರಾಮಾ! ರಾವಣನ ಸೈನ್ಯವು ಅಪರಿಮಿತವಾಗಿರುವುದು. ನಾನು ಶತ್ರುಬಲವನ್ನು ವರ್ಣಿಸುವುದಕ್ಕಾಗಿ ಕೋಪಿಸಬೇಡ. ಆ ಶತ್ರುಗಳನ್ನು ಅಡಗಿಸುವುದಕ್ಕಾಗಿ ನಿನಗೆ ರೋಷವನ್ನುಂಟುಮಾಡಬೇಕೆಂದು ಹೇಳಿದೆನಲ್ಲದೆ ಅನ್ಯಥಾ ಇಲ್ಲ. ವಾನರಸೈನ್ಯಗಳು ನಾಲ್ಕುದಿಕ್ಕುಗಳಲ್ಲಿಯೂ ಲಂಕಾಪಟ್ಟಣವನ್ನು ಮುತ್ತುವಂತೆ ಏರ್ಪಡಿಸಿ ರಾವಣನನ್ನು ನಿಗ್ರಹಿಸಬೇಕೆಂದು ಹೇಳಿದನು. ಅದೇ ಪ್ರಕಾರವಾಗಿ ಶ್ರೀರಾಮನು ಲಂಕಾಪಟ್ಟಣವನ್ನು ನಾಲ್ಕುಕಡೆಗಳಿಂದಲೂ ಮುತ್ತುವಂತೆ ವಾನರಸೈನ್ಯಕ್ಕೆ ಆಜ್ಞೆಮಾಡಿದನು.

**ತತ್ವ||** ವಿಭೀಷಣನು ಧರ್ಮಮಾರ್ಗದ ತತ್ವದವನು. ಇಂತಹ ಧರ್ಮಮಾರ್ಗ ಅಥವಾ ಪುಣ್ಯದ ತತ್ವದವನಾದ ವಿಭೀಷಣನಿಗೆ ಅಧರ್ಮಸ್ವರೂಪದ ಯೋಗ್ಯತೆಯೆಂದರೆ, ರಾವಣಾದಿಗಳ ಯೋಗ್ಯತೆಯು ತಿಳಿದಿರುವುದರಿಂದ ಮುಂದೆ ಮಾಡಬೇಕಾದ ಅನುಸಂಧಾನ

ಕ್ರಮುವನ್ನು ತಿಳಿಸಿದನು. ಅಂದರೆ ಮೋಕ್ಷವನ್ನು ಪಡೆಯಲು ಇಚ್ಛೆಹುಟ್ಟಿ, ಗುರು ಮುಖೇನ ವೇದಾಂತಶ್ರವಣ ಮಾಡಿ, ಅವಿದ್ಯಾಸ್ವರೂಪದ ಯೋಗ್ಯತೆಗಳನ್ನು ಚೆನ್ನಾಗಿ ತಿಳಿದುಕೊಂಡು, ಅವುಗಳನ್ನೂ ಸಾಧನದಲ್ಲಿನ ಕಷ್ಟ ಮತ್ತು ಅಪಾಯುಗಳನ್ನೂ, ವಿವರ ವಾಗಿ ತಿಳಿದುಕೊಂಡು ಮನನಮಾಡಿ ಶೇಖರಿಸಿಕೊಂಡಿರುವ ವಿಚಾರಗಳೇ ಅಧಿಕಾರಿಯು ಗಳಿಸಿರುವ ಪುಣ್ಯ ಅಥವಾ ಧರ್ಮಸ್ವರೂಪವಾಗಿರುವುದು. ಬಾಹ್ಯದಲ್ಲಿ ಕೆಟ್ಟ ಕೃತ್ಯಗಳಿಗೆ ಹೋಗದಿರಲು ಧರ್ಮಮಾರ್ಗವು ಹೇಗೆ ಸಹಾಯುಮಾಡುವುದೋ ಹಾಗೆ ಸಮಾಧಿಯ ಅಭ್ಯಾಸಕಾಲದಲ್ಲಿ ಅವಿದ್ಯಾಸ್ವರೂಪಗಳ ಎಳೆತದಿಂದ ಬಹಿರ್ಮುಖವಾಗದಂತೆ ಇಂತಹ ಪುಣ್ಯಗಳು ಸಹಾಯುಮಾಡುತ್ತವೆ. ಆದುದರಿಂದ ವಿವೇಕಸ್ವರೂಪವಾದ ಇಂತಹ ಪುಣ್ಯ ವನ್ನು ಅಧಿಕಾರಿಯು ಅಗತ್ಯವಾಗಿ ಸಂಪಾದನೆಮಾಡಬೇಕು.

ವಿಭೀಷಣನು ರಾವಣನ ಅಪರಿಮಿತವಾದ ಬಲವನ್ನು ವರ್ಣಿಸುತ್ತ ಶ್ರೀರಾಮನಿಗೆ ರೋಷದಿಂದ ಯುದ್ಧಮಾಡಬೇಕೆಂದು ಹೇಳಿದುದರ ತಾತ್ಪರ್ಯವೇನೆಂದರೆ—ಸಮಾಧಿಯ ಅನುಷ್ಠಾನವನ್ನು ಉತ್ಸಾಹದಿಂದಲೂ, ಸಮಾಧಿಯಲ್ಲಿ ಕಾಣುವ ತೇಜೋಬಿಂದುವೇ ನಾನೆಂಬ ದೃಢವಾದ ಜ್ಞಾನದಿಂದಲೂ ಅಭ್ಯಾಸಮಾಡಬೇಕೆಂಬ ತತ್ವವಾಗಿರುವುದು.

ವಿಭೀಷಣನು ವಾನರಸೈನ್ಯಗಳಿಂದ ಲಂಕೆಯನ್ನು ಸುತ್ತಲೂ ಮುತ್ತಿಸಿ ರಾವಣನನ್ನು ನಿಗ್ರಹಿಸೆಂದು ಶ್ರೀರಾಮನಿಗೆ ಹೇಳಿದುದರ ತತ್ವವೇನೆಂದರೆ—ಈಗ ಮೋಕ್ಷಾಧಿಕಾರಿಯು "ಓಂ" ಕಾರೋಪಾಸನೆಯಿಂದ ಬಿಂದುಧಾರಣೆಯನ್ನು ಮಾಡಿಕೊಳ್ಳುವ ಅನುಷ್ಠಾನಕ್ಕೆ ಪ್ರಾರಂಭಿಸಿರುವನಷ್ಟೆ! ಲಂಕಾಪಟ್ಟಣವನ್ನು ವಾನರರು ಮುತ್ತುವುದೆಂದರೆ, ವಾಯುಗಳು ಬುದ್ಧಿವೃತ್ತಿಯೊಡನೆ ಅವಿದ್ಯಾಸ್ಥಾನವಾದ ಮೂಲಾಧಾರವನ್ನು ಚೆನ್ನಾಗಿ ಸುತ್ತಿಕೊಂಡು ಬಂಧಿಸಬೇಕೆಂಬ ತಾತ್ಪರ್ಯವಾಗಿರುವುದು. ಅಂದರೆ ಶತ್ರುಪಕ್ಷದವರು ಪಟ್ಟಣವನ್ನು ಚೆನ್ನಾಗಿ ಸುತ್ತಲೂ ಮುತ್ತಿಕೊಂಡರೆ ಪಟ್ಟಣದೊಳಗಿರುವ ದೊರೆಯಾಗಲಿ ಪ್ರಜೆಗಳಾಗಲಿ ಓಡಿಹೋಗಲು ಅವಕಾಶವಿರುವುದಿಲ್ಲ. ಅದರಂತೆ ಅವಿದ್ಯಾಸ್ಥಾನವಾದ ಮೂಲಾಧಾರ ಚಕ್ರವನ್ನು ವಾಯುವಿನಿಂದೊಡಗೂಡಿದ ಬುದ್ಧಿವೃತ್ತಿಯಿಂದ ಬಂಧಿಸಬೇಕು. ಹೀಗೆ ಮೂಲಾಧಾರಚಕ್ರವನ್ನು ಬಂಧಿಸುವ ಅನುಷ್ಠಾನಕ್ಕೆ ಮೂಲಬಂಧವೆಂದು ಹೆಸರು. ವಾನರರು ಲಂಕೆಯನ್ನು ಮುತ್ತಿದಂತೆ ಮೂಲಬಂಧಮುದ್ರೆಯಿಂದ ಅಧಿಕಾರಿಯ ದೇಹ ದಲ್ಲಿ ಅವಿದ್ಯೆಗೆ ರಾಜಧಾನಿಯಾದ ಮೂಲಾಧಾರಚಕ್ರಪ್ರದೇಶವು ವಾಯುಗಳಿಂದ ಬಂಧಿ ಸಲ್ಪಡುವುದು. ಹೀಗೆ ಮೂಲಬಂಧರೂಪವಾದ ಮುದ್ರೆಯಿಂದ ಅವಿದ್ಯಾಸ್ವರೂಪವಾದ ವಾಸನಾವೃತ್ತಿಗಳು ತಲೆದೋರುವ ವೇಗವು ತಗ್ಗುವುದು. ಮೂಲಬಂಧವೆಂಬ ಮುದ್ರೆ ಯಿಂದ ವಾಸನಾವೃತ್ತಿಗಳು ಬಂಧಿಸಿದಂತಾಗುವುದರಿಂದ, ಭ್ರೂಮಧ್ಯವಲ್ಲಿ ಕಾಣುವ ತೇಜಃ ಕಿರಣದ ಬಿಂದುವನ್ನು ದೃಢವಾಗಿ ಧರಿಸಿಕೊಳ್ಳುವ ಅಭ್ಯಾಸಮಾಡಲು ಸಹಕಾರಿಯಾಗು

ವುದು. ಮೂಲಬಂಧದಿಂದ ಬಿಂದುಧಾರಣೆಯು ಸಿದ್ಧಿಸುತ್ತಾ ಬರುವುದರಿಂದ ಬುದ್ಧಿ ವೃತ್ತಿಯು ಬಿಂದುವೇ ತಾನೆಂದು ಬಿಂದುಧಾರಣೆಯ ಅಭ್ಯಾಸದ ಮೂಲಕ ಅವಿದ್ಯಾಶಕ್ತಿ ಗಳನ್ನು ನಿಗ್ರಹಿಸಲು ಅನುಕೂಲಿಸುವುದು. ಈ ತಾತ್ಪರ್ಯವೇ ವಿಭೀಷಣನು ವಾನರರಿಂದ ಲಂಕೆಯನ್ನು ಮುತ್ತಿಸಿ ರಾವಣನನ್ನು ನಿಗ್ರಹಮಾಡೆಂದು ಶ್ರೀರಾಮನಿಗೆ ತಿಳಿಸಿದುದಾಗಿರು ವುದು. ಈ ಮೂಲಬಂಧವನ್ನು ಅನುಷ್ಠಿಸುವ ವಿಧವು ಶ್ರುತಿಯಲ್ಲಿ,

> ಪಾರ್ಷ್ಣಿಭಾಗೇನ ಸಂಪೀಡ್ಯ ಯೋನಿಮಾಕುಂಚಯೇದ್ಗುದಮ್ |
> ಅಪಾನಮೂರ್ಧ್ವಮಾಕೃಷ್ಯ ಮೂಲಬಂಧೋಽಭಿಧೀಯತೇ ||

**ತಾ||** ಗುದಕ್ಕೂ ಉಪಸ್ಥಿಗೂ ಇರುವ ಮಧ್ಯಪ್ರದೇಶದಲ್ಲಿ ಎಡಗಾಲಿನ ಹಿಮ್ಮಡಿ ಯಿಂದ ಅಮುಕಿಕೊಂಡು ಬಲಗಾಲನ್ನು ಎಡದ ತೊಡೆಯ ಮೇಲಿಟ್ಟುಕೊಂಡು ಅಪಾನ ವಾಯುವನ್ನು ಮೇಲಕ್ಕೆಳೆದುಕೊಂಡು ಕುಳಿತುಕೊಳ್ಳುವುದೇ ಮೂಲಬಂಧವು, ಎಂದು ಹೇಳಿರುವುದು.

ಮೇಲೆ ಹೇಳಿರುವ ವಿಧವಾದ ಆಸನದಲ್ಲಿ ಕುಳಿತುಕೊಂಡು "ಓಂ"ಕಾರೋಪಾಸ ನೆಯ ಅನುಷ್ಠಾನಕ್ಕೆ ಪ್ರಾರಂಭಮಾಡಬೇಕು, "ಓಂ"ಕಾರೋಚ್ಚಾರಣೆಯನ್ನು ಅನು ಸಂಧಾನಮಾಡಿ ಭ್ರೂಮಧ್ಯದಲ್ಲಿ ನಿಲ್ಲಿಸಿಕೊಂಡನಂತರ ಗುದಕ್ಕೂ ಯೋನಿಗೂ ಮಧ್ಯ ಪ್ರದೇಶದಲ್ಲಿರುವ ಎಡಗಾಲಿನ ಹಿಮ್ಮಡಿಯನ್ನು ಆ ಮಧ್ಯಪ್ರದೇಶದಲ್ಲಿ ಚೆನ್ನಾಗಿ ಅಮುಕಿ ಕೊಳ್ಳಬೇಕು. ಅಪಾನವನ್ನು ಊರ್ಧ್ವಮುಖವಾಗಿ ಮಾಡಿಕೊಳ್ಳುವುದನ್ನು "ಓಂ"ಕಾ ರೋಚ್ಚಾರಣೆಯ ಅನುಸಂಧಾನಮಾಡುವಾಗ ಮಾಡಿಕೊಂಡರೂ ಮಾಡಿಕೊಳ್ಳಬಹುದು. ಇಲ್ಲವಾದರೆ ಅನುಸಂಧಾನಮಾಡಿ ಎಡಗಾಲಿನ ಹಿಮ್ಮಡಿಯನ್ನು ಗುದಕ್ಕೂ ಉಪಸ್ಥಿಗೂ ಮಧ್ಯೆ ಅಮುಕುವಾಗ ಅಪಾನವಾಯುವನ್ನು ಮೇಲಕ್ಕೆಳೆದುಕೊಳ್ಳಬಹುದು.

" ಓಂ " ಕಾರೋಚ್ಚಾರಣೆಯ ಅನುಷ್ಠಾನಕ್ಕೆ ಶಕ್ತಿಚಲನಪ್ರಾಣಾಯಾಮ ಮಾಡಲು ಕುಳಿತುಕೊಳ್ಳುವ ವಿಧವಾದ ಪದ್ಮಾಸನದಲ್ಲಿ ಕುಳಿತುಕೊಳ್ಳಬಹುದೆಂದು ಹಿಂದೆ ತಿಳಿ ಸಿರುತ್ತೆ. ಈ ಪದ್ಮಾಸನದಲ್ಲಿ " ಓಂ "ಕಾರೋಪಾಸನೆಯ ಅನುಷ್ಠಾನಕ್ಕೆ ಕುಳಿತು ಕೊಂಡರೂ ಮೂಲಬಂಧದ ತತ್ವವುಂಟಾಗುವುದು. ಗುದಕ್ಕೂ ಉಪಸ್ಥಿಗೂ ಮಧ್ಯಪ್ರದೇಶ ದಲ್ಲಿ ಎಡದ ಹಿಮ್ಮಡಿಯಿಂದ ಅಮುಕಿಕೊಂಡು ಕುಳಿತುಕೊಂಡರೆ ಮೂಲಾಧಾರದಿಂದ ಹೊರಡುವ ಅವಿದ್ಯಾವೃತ್ತಿಗಳನ್ನು ಬಹಳ ಮಟ್ಟಿಗೆ ತಡೆಯುವುದರಲ್ಲಿ ಸಂಶಯವಿಲ್ಲ. ಮೂಲಾಧಾರಚಕ್ರವನ್ನು ಬಂಧಿಸುವುದರಿಂದ ಈ ಮುದ್ರೆಗೆ ಮೂಲಬಂಧವೆಂದು ಹೆಸರು ಬಂದಿರುವುದಷ್ಟೆ! ಮುದ್ರೆಯೆಂದರೂ ಬಂಧವೆಂದರೂ ಒಂದೇ. ಸಾಧಾರಣವಾಗಿ ಧನವ ನ್ನಿಟ್ಟಿರುವ ಖಜಾನೆ ಅಥವಾ ಕೋಶಕ್ಕೆ ಬೀಗಮುದ್ರೆಯನ್ನು ಹಾಕುವರಷ್ಟೆ!

ಇದರ ತಾತ್ಪರ್ಯವು ಒಳಗಿರುವ ಧನವನ್ನು ಒಂಧಿಸಲು ಮಾಡಿದ ಕಾರ್ಯವಾಗಿರುತ್ತೆ. ಇದರಂತೆ ಅವಿದ್ಯಾವೃತ್ತಿಗಳನ್ನು ಬಂಧಿಸಲು ಮುದ್ರಿಗಳನ್ನು ಅನುಷ್ಠಾನಮಾಡಬೇಕು.

ಗಾಯತ್ರೀ ಉಪಾಸನಾ ಮುದ್ರೆಗಳಲ್ಲಿ ಈ ಮುದ್ರೆಗಳು ಅಡಕವಾಗಿರುವುವು. "ಓಂ"ಕಾರೋಪಾಸನೆಯ ಅನುಷ್ಠಾನಕ್ಕೆ ಮೂಲಬಂಧವೆಂಬ ಮುದ್ರೆಯಲ್ಲದೆ, ಉಡ್ಯಾಣ, ಜಾಲಂಧರ ಬಂಧಗಳೆಂಬೆರಡು ಮುದ್ರೆಗಳೂ ಅವಶ್ಯಕವಾಗಿವೆ. ಇವುಗಳ ವಿಚಾರದ ತತ್ವವು ಇಂದ್ರಜಿತ್ತಿನ ಯುದ್ಧಪ್ರಕರಣದಲ್ಲಿ ಬರುವುದು. ಆ ಸಂದರ್ಭದಲ್ಲಿಯೂ ಮೂಲ ಬಂಧದ ವಿಚಾರವನ್ನು ಶ್ರೀಶಂಕರಭಗವತ್ಪಾದರವರ ವಾಕ್ಯದೊಡನೆ ವಿವರಿಸಿರುವುದು. ಈ ಮೇಲಿನ ತತ್ವಾರ್ಥವೇ ವಾನರರು ಲಂಕೆಯನ್ನು ಮುತ್ತಿದುದಾಗಿರುವುದು.

## ಎರಡನೆಯ ಅಂಶದ ವಿಚಾರ.

**ರಾ||** ವಾನರಸೈನ್ಯವು ಲಂಕಾಪಟ್ಟಣವನ್ನು ಮುತ್ತಿದನಂತರ ಶ್ರೀರಾಮನು ಸುವೇ ಲಾದ್ರಿಯನ್ನು ಏರಿ ಲಂಕಾಪಟ್ಟಣವನ್ನು ನೋಡುತ್ತಿದ್ದನು. ರಾವಣನು ಎತ್ತರವಾದ ಪಾವಟಿಕೆಯಲ್ಲಿ ರಾಜವೈಭವದ ಅಟ್ಟಹಾಸದಿಂದ ಕುಳಿತಿರುವುದನ್ನು ಸುಗ್ರೀವನು ನೋಡಿ ಸಹಿಸಲಾರದೆ ಹಾರಿಹೋಗಿ ರಾವಣನ ಕಿರೀಟಗಳನ್ನು ಕೆಡವಿ ಅವನೊಡನೆ ದ್ವಂದ್ವಯುದ್ಧ ಮಾಡಿ ಹಿಂದಕ್ಕೆ ಬಂದನು.

**ತತ್ವ||** ಇದರ ತತ್ವಾರ್ಥವೇನೆಂದರೆ ಬುದ್ಧಿವೃತ್ತಿಯು ಧ್ಯೇಯರೂಪವಾದ ಬಿಂದು ಧಾರಣೆಯ ಅಭ್ಯಾಸವನ್ನು ಪ್ರಾರಂಭಮಾಡಿದಾಕ್ಷಣವೇ ಅವಿದ್ಯಾಶಕ್ತಿಗಳು ನಿಗ್ರಹ ವಾಗುವುದಿಲ್ಲ. ಧಾರಣೆಮಾಡಿಕೊಳ್ಳುತ್ತಿರುವ ಬಿಂದುವನ್ನು ಶಿಥಿಲಮಾಡಲು ಅವಿದ್ಯಾವೃತ್ತಿ ಗಳು ನುಗ್ಗುತ್ತವೆ. ಅಲ್ಲದೆ ದಶೇಂದ್ರಿಯ ಗೋಳಕಗಳಲ್ಲಿಯೂ ಆಕ್ರಮಿಸಿಕೊಂಡಿರುವ ವಿಕ್ಷೇಪಶಕ್ತಿಯು ಕುಗ್ಗಿರುವುದಿಲ್ಲ. ಆದುದರಿಂದ ಮನುಷ್ಯನಿಗೆ ವಿಕ್ಷೇಪಶಕ್ತಿಯ ಬಂಧನವು ಹೇಗಿರುವುದೆಂದರೆ ಮೂಲಾಧಾರದಿಂದ ಹೊರಡುವ ವಾಸನಾವೃತ್ತಿ ಮತ್ತು ಇಂದ್ರಿಯ ಗೋಳಕಗಳನ್ನಾಕ್ರಮಿಸಿಕೊಂಡಿರುವ ಬಹಿರಾಕರ್ಷಣೆಗಳು ಸೇರಿಕೊಂಡು ಮನುಷ್ಯನನ್ನು ಬಂಧಿಸಿರುವುವು. ಅಂದರೆ ರಾವಣನ ಹತ್ತು ತಲೆಯ ತತ್ವವೇ ಹತ್ತು ಇಂದ್ರಿಯಗೋಳಕ ಗಳನ್ನು ಆಕ್ರಮಿಸಿಕೊಂಡಿರುವ ಬಹಿರಾಕರ್ಷಣೆಯ ಸ್ವರೂಪವು. ರಾವಣನೆದೆಯ ತತ್ವವೇ ಮೂಲಾಧಾರದಿಂದ ಹೊರಡುವ ವಾಸನಾವೃತ್ತಿಯು. ಮನುಷ್ಯನಿಗೆ ಮೇಧಾಶಕ್ತಿ ಮತ್ತು ಬಾಹುಬಲಗಳೆರಡೂ ಹೇಗೆ ಪ್ರಧಾನವೋ ಹಾಗೆ ಮನುಷ್ಯನನ್ನು ಪ್ರಪಂಚ ವ್ಯಾಪಾರದಲ್ಲಿ ಬಂಧಿಸಿರಲು ವಿಕ್ಷೇಪಚೈತನ್ಯವು ವಾಸನಾವೃತ್ತಿ ಮತ್ತು ಇಂದ್ರಿಯಗಳ ಆಕರ್ಷಣಾಶಕ್ತಿಸ್ವರೂಪಗಳನ್ನೊಳಗೊಂಡಿರುವ ದೇಹವನ್ನು ಪಡೆದಿರುವುದು. ಇದೇ ರಾವಣನ ದೇಹದ ತತ್ವ.

ಆದುದರಿಂದ ಬಿಂದುಧಾರಣೆಯ ಅಭ್ಯಾಸಕ್ಕೆ ಅಧಿಕಾರಿಯು ಬಂದರೂ ವಿಕ್ಷೇಪ ಶಕ್ತಿಯು ಕುಗ್ಗದೆ ಬಲಿಷ್ಠವಾಗಿಯೇ ಇರುತ್ತೆಂಬ ತತ್ವಾರ್ಥವೇ ರಾವಣನು ಉತ್ತಮವಾದ ಪಾವಟಿಕೆಯಲ್ಲಿ ರಾಜವೈಭವದಿಂದ ಕುಳಿತಿದ್ದುದಾಗಿರುವುದು. ಧ್ಯೇಯರೂಪವಾದ ಬಿಂದುವಿನಲ್ಲಿ ಪ್ರಾಣವಾಯುವಿನೊಡನೆ ಬುದ್ಧಿವೃತ್ತಿಯು ಸ್ಥೈರ್ಯವನ್ನು ಯಾವಾಗ ಪಡೆಯುವುದೋ ಆಗ ಪಶೇಂದ್ರಿಯಗೋಳಕಗಳಲ್ಲಿರುವ ವಿಕ್ಷೇಪಕ್ಕೆ ತೊಂದರೆಯಾದಂತಾಗುವುದು. ಇದೇ ಸುಗ್ರೀವನು ರಾವಣನ ಕಿರೀಟಭಂಗಮಾಡಿದ ತತ್ವವಾಗಿರುವುದು. ಅಂದರೆ ಇಂದ್ರಿಯಗಳ ವ್ಯಾಪಾರಕ್ಕೆಂದರೆ ವಿಕ್ಷೇಪಶಕ್ತಿಯ ಜೊತೆಗೆ ಪ್ರಾಣವಾಯುವಿನ ಸಹಾಯವೂಬೇಕು. ಯಾವಾಗ ಪ್ರಾಣವಾಯು ಬಿಂದುಧಾರಣೆಯಲ್ಲಿರುವ ಬುದ್ಧಿವೃತ್ತಿಯೊಡನೆ ಸೇರುವುದೋ ಆಗ ಇಂದ್ರಿಯ ಗೋಳಕಗಳನ್ನು ಆಕ್ರಮಿಸಿಕೊಂಡಿರುವ ವಿಕ್ಷೇಪಕ್ಕೆ ತೊಂದರೆಯಾಗಿ ಇಂದ್ರಿಯಗಳ ವ್ಯಾಪಾರಕ್ಕೆ ತನ್ನೊಡನೆ ಪ್ರಾಣವಾಯುವನ್ನು ಬಹಿರ್ಮುಖವಾಗಲು ಎಳೆಯುವುದೇ ರಾವಣಸುಗ್ರೀವರ ದ್ವಂದ್ವಯುದ್ಧದ ತತ್ವವಾಗಿರುವುದು. ಈ ವಿಕ್ಷೇಪಶಕ್ತಿಯ ಎಳೆತಕ್ಕೆ ಪ್ರಾಣವಾಯುವು ಹೆದರದೆ ಬಲಿಷ್ಠವಾಗಿರಬೇಕೆಂದರೆ, ಪ್ರಾಣಸ್ಥೈರ್ಯವು ಅಧಿಕಾರಿಯಲ್ಲಿ ಚೆನ್ನಾಗಿರಬೇಕೆಂಬ ತತ್ವಾರ್ಥದ ಸೂಚನೆಯೇ ಸುಗ್ರೀವನು ರಾವಣನ ಕಿರೀಟಭಂಗಮಾಡಿ ಹಿಂದಕ್ಕೆ ಬಂದುದಾಗಿರುವುದು.

**ರಾ||** ಸುಗ್ರೀವನು ಹಿಂದಿರುಗಿ ಬಂದನಂತರ ಶ್ರೀರಾಮನು ಸುಗ್ರೀವನ ಯುದ್ಧದ ಗುರುತುಗಳನ್ನು ನೋಡಿ ಅವನನ್ನು ಆಲಿಂಗಿಸಿಕೊಂಡು "ಎಲೈ ಮಿತ್ರನೆ! ಏನು ಕೆಲಸ ಮಾಡಿದೆ? ನನ್ನಲ್ಲಿ ಆಲೋಚಿಸದೆ ಇಷ್ಟು ದೊಡ್ಡ ಕಾರ್ಯಮಾಡಿದೆಯಲ್ಲಾ! ಯಾರ ಸಹಾಯವನ್ನೂ ಕೋರದೆ ಈ ಸಾಹಸಕಾರ್ಯವನ್ನು ನಡೆಸಿಬಿಟ್ಟೆ! ದೈವಿಕವಾಗಿ ಯಾವುದಾದರೂ ಹಾನಿಯುಂಟಾಗಿದ್ದರೆ ನನ್ನ ಗತಿಯೇನು? ನಿನ್ನನ್ನು ಬಿಟ್ಟ ಮೇಲೆ ನನಗೆ ಸೀತೆಯಿಂದಾಗಲಿ, ಭರತನಿಂದಾಗಲಿ, ಪ್ರಿಯಸಹೋದರನಾದ ಲಕ್ಷ್ಮಣನಿಂದಾಗಲಿ, ಕೊನೆಗೆ ಈ ನನ್ನ ದೇಹದಿಂದಾಗಲಿ, ಆಗಬೇಕಾದುದೇನು? ನೀನು ಯಾರಿಗೂ ತಿಳಿಸದೆ ಹೋದ ಮೇಲೆ ನನಗೆ ಪ್ರಾಣದ ಮೇಲೆಯೇ ನಿರಾಶೆಯಾಯಿತು" ಎಂದು ಸುಗ್ರೀವನಿಗೆ ಹೇಳಿದನು.

**ತತ್ವ||** ಮೋಕ್ಷಾಧಿಕಾರಿಗೆ ಪ್ರಾಣವಾಯುವು ಚೆನ್ನಾಗಿರಬೇಕೆಂದು ಶ್ರುತಿಪ್ರಮಾಣಗಳೊಡನೆ ಕಿಷ್ಕಿಂಧಾಕಾಂಡದಲ್ಲಿಯೇ ತಿಳಿಸಿರುತ್ತಷ್ಟೆ! ಪ್ರಾಣವಾಯುವಿಗೆ ಬಲವು ಕುಂದಿದರೆ, ಅದು ಬುದ್ಧಿವೃತ್ತಿಯೊಡನೆ ನಿಂತು ಧ್ಯಾನ ಧಾರಣ ಸಮಾಧಿಗಳ ಅನುಷ್ಠಾನಕ್ಕೆ ಸಹಾಯಮಾಡಲಾರದು. ಯಾವಾಗ ಪ್ರಾಣವಾಯುವಿನ ಸಹಾಯವಿಲ್ಲವೋ ಆಗ ಮೋಕ್ಷವನ್ನು ಪಡೆಯಬೇಕೆಂಬ ಬುದ್ಧಿಯ ಜ್ಞಾನಕ್ಕೆ ವೈರಾಗ್ಯದಿಂದಾಗಲಿ, ನಿರಭಿಮಾನದಿಂದಾಗಲಿ ಏನೂ ಪ್ರಯೋಜನವಾಗಲಾರದು. ಆದುದರಿಂದ ಸುಗ್ರೀವನಿಗೆ ಹಾನಿಯುಂಟಾದರೆ ಸೀತೆಯನ್ನು ಪಡೆಯುವ ಕಾರ್ಯವು ಫಲಿಸುವುದಿಲ್ಲವಾದುದರಿಂಹ ಲಕ್ಷ್ಮಣನ

ತತ್ವದಲ್ಲಿರುವ ವೈರಾಗ್ಯದಿಂದಾಗಲಿ, ಭರತನತತ್ವದಲ್ಲಿರುವ ನಿರಭಿಮಾನದಿಂದಾಗಲಿ, ಪ್ರಯೋಜನವಾಗಲಾರದು. ಯಾವಾಗ ಪ್ರಾಣವಾಯುವಿನ ಸಹಾಯವಿಲ್ಲವೋ ಆಗ ಬುದ್ಧಿವೃತ್ತಿಯು ಕೂಡ ಧ್ಯೇಯಾಕಾರದಲ್ಲಿ ನಿಂತು ಸಮಾಧಿಯನ್ನು ಅಭ್ಯಾಸಮಾಡುವ ಕಾರ್ಯವು ನೆರವೇರದೆ, ಬುದ್ಧಿಯಲ್ಲಿ ಅಂಕುರಿಸಿರುವ ಮೋಕ್ಷೇಚ್ಛೆಯೂ ಸಫಲಕ್ಕೆ ಬರುವು ದಿಲ್ಲವೆಂಬ ತತ್ವವೇ ಶ್ರೀರಾಮನು ಸುಗ್ರೀವನಿಗೆ ಅಪಾಯವಾದರೆ ತನ್ನ ದೇಹದಿಂದಲೂ ಪ್ರಯೋಜನವಿಲ್ಲವೆಂದು ಹೇಳಿದ್ದಾಗಿರುವುದು.

ಅಂದರೆ ದೇಹಕ್ಕೆ ರೋಗಾದಿಗಳಿಂದಾಗಲಿ, ಅಂಗಹೀನತೆಯಿಂದಾಗಲಿ, ಪ್ರಾಣದ ಬಲವು ಕುಂದಿದರೆ ಬಾಹ್ಯವ್ಯಾಪಾರಕ್ಕೂ ತೊಂದರೆಯೆನ್ನುವುದು ಸ್ವತಸ್ಸಿದ್ಧವಾಗಿರುವುದು. ಇದರಂತೆಯೇ ಮೋಕ್ಷದ ಕರ್ಮಸ್ವರೂಪದಲ್ಲಿರುವ ಯೋಗವೆಂದರೆ ನಿದಿಧ್ಯಾಸ ಮತ್ತು ಸಮಾಧಿಗಳ ಅನುಷ್ಠಾನಕ್ಕೂ ತೊಂದರೆಯೆನ್ನುವುದು ಸ್ವತಸ್ಸಿದ್ಧವಾಗಿರುವುದು. ಆದುದ ರಿಂದ ಪ್ರಾಣವಾಯುವನ್ನು ಮೋಕ್ಷಾಧಿಕಾರಿಯು ಚೆನ್ನಾಗಿ ಕಾಪಾಡಿಕೊಳ್ಳಬೇಕು. ಪ್ರಾಣವಾಯುವನ್ನು ಚೆನ್ನಾಗಿ ಕಾಪಾಡಿಕೊಳ್ಳುವುದೆಂದರೆ ದೇಹವನ್ನು ಕಾಪಾಡಿಕೊಳ್ಳ ಬೇಕು. ದೇಹವನ್ನು ಕಾಪಾಡಿಕೊಳ್ಳಬೇಕಾದರೆ ಆಹಾರ ವ್ಯವಹಾರಗಳಲ್ಲಿ ನಿಯಮ ವಾಗಿರಬೇಕು. ಈ ನಿಯಮದ ವಿಚಾರಗಳು ಹಿಂದೆ ಅರಣ್ಯಕಾಂಡ ಕಿಷ್ಕಿಂಧಾಕಾಂಡಗಳ ಲ್ಲಿಯೇ ಬಂದಿರುವುವು. ಈ ದೇಹವು ತೆಪ್ಪದ ಸ್ವರೂಪ. ಈ ದೇಹಸ್ವರೂಪವಾದ ತೆಪ್ಪ ದಿಂದಲೇ ಅವಿದ್ಯಾಸ್ವರೂಪವಾದ ನದಿಯನ್ನು ದಾಟಬೇಕಾಗಿರುವುದರಿಂದ ಆತ್ಮಸಾಕ್ಷಾ ತ್ಕಾರದವರೆಗೆ ದೇಹವನ್ನು ನಿಯಮದಿಂದ ಅಗತ್ಯವಾಗಿ ಕಾಪಾಡಿಕೊಳ್ಳಬೇಕು. ಅಲ್ಲದೆ ಪ್ರಾಣಾಯಾಮ ಮತ್ತು ಸಮಾಧಿಯ ಅಭ್ಯಾಸಕಾಲದಲ್ಲಿ ಪ್ರಾಣಶಕ್ತಿಯನ್ನು ವಿಶೇಷ ಬಳಲಿಸಕೂಡದು. ಶಕ್ತಿಗೆ ತಕ್ಕಂತೆ ಅಭ್ಯಾಸಮಾಡಿಕೊಂಡು ನಿಧಾನವಾಗಿ ಸಮಾಧಿಯ ಪರಿಪಕ್ವಾವಸ್ಥೆಯನ್ನು ಹೊಂದಬೇಕು. ಅಲ್ಲದೆ ಸಮಾಧಿಯನ್ನು ಅಭ್ಯಾಸಮಾಡುವ ಕಾಲದಲ್ಲಿ ಶ್ರೀರಾಮನನ್ನು ಅನುಸರಿಸಿಕೊಂಡು ಸುಗ್ರೀವನಿರುವಂತೆ, ಬುದ್ಧಿಯ ಜ್ಞಾನ ಶಕ್ತಿಯನ್ನು ಅನುಸರಿಸಿಕೊಂಡು ಪ್ರಾಣಶಕ್ತಿಯು ಇರಬೇಕೇ ಹೊರತು ಪ್ರಾಣಶಕ್ತಿಯು ವೇಗವಾಗಕೂಡದು. ಈ ಮೇಲಿನ ತತ್ವಾರ್ಥಗಳೇ ಸುಗ್ರೀವನಿಗೆ ಅಪಾಯವುಂಟಾದರೆ ತನ್ನ ಗತಿಯೇನೆಂದು ಶ್ರೀರಾಮನು ಹೇಳಿರುವುದರ ತಾತ್ಪರ್ಯ.

**ರಾ||** ಸುಗ್ರೀವನು ಶ್ರೀರಾಮನು ಹೇಳಿದುದಕ್ಕೆ ಪ್ರತ್ಯುತ್ತರವಾಗಿ "ಎಲೈ ಶ್ರೀರಾಮ **ಚಂದ್ರನೆ!** ನಿನ್ನಡಿಗಳಲ್ಲಿ ದಾಸ್ಯವನ್ನು ಮಾಡಬೇಕಾದುದೇ ನನಗೆ ಪುರುಷಾರ್ಥವಾಗಿದೆ. ನಿನ್ನ ಶತ್ರುವಾದವನ ವೈಭವವನ್ನು ನೋಡಿ ಸಹಿಸದೆ ಈರೀತಿ ನಡೆಸಿದೆ" ನೆಂದನು.

**ತತ್ವ||** ಮೇಲಿನ ಅಂಶದ ತತ್ವವೇನೆಂದರೆ—ದೇಹಧಾರಣೆಗೆ ಪ್ರಾಣವು ಮುಖ್ಯ ವಾದುದು. ಪ್ರಾಣಶಕ್ತಿಯನ್ನು ಉತ್ತಮಸ್ಥಿತಿಯಲ್ಲಿಟ್ಟಿರಲು ದೇಹವನ್ನು ಕಾಪಾಡಿಕೊಳ್ಳ

ಬೇಕು. ಮನುಷ್ಯಜನ್ಮವು ಈ ದೇಹಧಾರಣೆ ಮಾಡಿಕೊಂಡಿರುವುದು ಮೋಕ್ಷದ ದಾಸ್ಯ ವೃತ್ತಿಗಲ್ಲದೆ, ಪ್ರಪಂಚದ ಭೋಗಕ್ಕಾಗಿಯೇ ಅಲ್ಲ. ಪ್ರಪಂಚದ ಭೋಗಕ್ಕಾಗಿಯೇ ಮನುಷ್ಯಜನ್ಮ ಬಂದಿರುವುದೆಂದು ತಿಳಿದುಕೊಂಡರೆ, ಮೃಗಗಳ ಚೇಷ್ಟೆಗೂ ಮನುಷ್ಯರ ಚೇಷ್ಟೆಗೂ ಭೇದವೇನೂ ಇರುವುದಿಲ್ಲ. ಜ್ಞಾನಮಾರ್ಗಕ್ಕೆ ದೇಹವೆಂದರೆ ದೇಹವನ್ನು ಧರಿಸಿರುವ ಪಂಚಪ್ರಾಣಗಳು ದಾಸರಾಗಿ, ಜ್ಞಾನಮಾರ್ಗವನ್ನು ಸಹಕರಿಸಿಕೊಂಡಿದ್ದರೆ ನರ ಜನ್ಮಕ್ಕೆ ಶ್ರೇಷ್ಠತೆ ಬರುವುದು. ಈ ತಾತ್ಪರ್ಯವನ್ನು ಅನುಸರಿಸಿ, ಶ್ರೀಶಂಕರಭಗವತ್ಪಾದ ರವರು ವಿವೇಕಚೂಡಾಮಣಿ ೫ನೆಯ ಶ್ಲೋಕದಲ್ಲಿ,

ಇತಃ ಕೋನ್ವಸ್ತಿ ಮೂಢಾತ್ಮಾ ಯಸ್ತು ಸ್ವಾರ್ಥೇ ಪ್ರಮಾದ್ಯತಿ |
ದುರ್ಲಭಂ ಮಾನುಷಂ ದೇಹಂ ಪ್ರಾಪ್ಯ ತತ್ರಾಪಿ ಪೌರುಷಂ ||

ತಾ|| ಈ ಲೋಕದಲ್ಲಿ ದುರ್ಲಭವಾದ ಮನುಷ್ಯಜನ್ಮವನ್ನು ಹೊಂದಿ ಅದರಲ್ಲಿಯೂ ಪುರುಷಜನ್ಮವನ್ನು ಪಡೆದಿದ್ದರೂ, ಮೋಕ್ಷಮಾರ್ಗದಲ್ಲಿ ಯಾರು ಇಂತಹ ಜನ್ಮವನ್ನು ವಿನಿಯೋಗಿಸುವುದಿಲ್ಲವೋ ಅವರಿಗಿಂತಲೂ ಮೂಢರು ಯಾರಿರುವರು ? ಎಂದು ಹೇಳಿರುವರು.

ಆದುದರಿಂದ ದೇಹವನ್ನು ಕಾಪಾಡಿಕೊಳ್ಳಲೂ ಬೇಕು. ಹೀಗೆ ಕಾಪಾಡಿದ ದೇಹ ವನ್ನು ಪುರುಷಾರ್ಥಪ್ರತಿಪಾದ್ಯವಾದ ಮೋಕ್ಷಮಾರ್ಗದಲ್ಲಿಯೇ ವಿನಿಯೋಗಿಸಬೇಕೆಂಬ ಸಾರವನ್ನು ಸೂಚಿಸುವ ತತ್ವವೇ ಸುಗ್ರೀವನು ಶ್ರೀರಾಮನಿಗೆ ಅರಿಕೆಮಾಡಿಕೊಂಡದ್ದರ ತಾತ್ಪರ್ಯವಾಗಿರುತ್ತದೆ.

## ೧೦ನೆಯ ಪ್ರಕರಣ.

| ರಾಕ್ಷಸರೊಡಗೂಡಿದ ರಾವಣನಿಗೂ ವಾನರರೊಡಗೂಡಿದ ಶ್ರೀರಾಮನಿಗೂ ಪ್ರಥಮ ಯುದ್ಧ. | ಬಿಂದುಧಾರಣೆಯೊಡನೆ ಮಾಡುವ ಸಮಾಧಿಯ ಅಭ್ಯಾಸದ ಪ್ರಥಮಾವಸ್ಥೆ. |
|---|---|

**ರಾ||** ರಾವಣನು ಅಪರಿಮಿತವಾದ ರಾಕ್ಷಸಬಲವನ್ನು ಕೂಡಿಕೊಂಡು ಪ್ರಥಮ ದಲ್ಲಿ ಯುದ್ಧಕ್ಕೆ ಬಂದನು. ಆ ಕಾಲದಲ್ಲಿ ಸಕಲ ವಾನರರೂ, ಸುಗ್ರೀವ, ಹನುಮಂತ, ಲಕ್ಷ್ಮಣ, ಶ್ರೀರಾಮಚಂದ್ರ ಇವರೆಲ್ಲರೂ ರಾವಣನೊಡನೆ ಯುದ್ಧಮಾಡಿದರು.

**ತತ್ವ||** ಶ್ರೀರಾಮಾದಿಗಳು ಸೇತುವೆಯನ್ನು ದಾಟಿ ಲಂಕೆಯನ್ನು ಮುತ್ತಿದರೆಂದರೆ, “ಓಂ” ಕಾರೋಚ್ಚಾರಣೆಯ ಅನುಸಂಧಾನದಿಂದ ಬಿಂದುಧಾರಣೆಯ ಅಭ್ಯಾಸಮಾಡು

ವುದರ ಮೂಲಕ, ಸಮಾಧಿಯ ಅಭ್ಯಾಸವನ್ನು ಮಾಡುವ ಕ್ರಮದ ತತ್ವವಷ್ಟೆ! ಸಮಾಧಿಯ ಅಭ್ಯಾಸಕಾಲದಲ್ಲಿ ಬುದ್ಧಿಮನೋವೃತ್ತಿಗಳಿಗೆ ಅವಿದ್ಯೆಯಿಂದುಂಟಾಗುವ ತೊಂದರೆಗಳ ಸ್ವರೂಪ, ಈ ತೊಂದರೆಗಳನ್ನು ಪರಿಹರಿಸಿಕೊಳ್ಳಲು ಮಾಡಬೇಕಾಗಿರುವ ಅನುಸಂಧಾನ, ಮತ್ತು ಅವಿದ್ಯೆಯನ್ನು ನಿಗ್ರಹಿಸಿ ಸಾಕ್ಷಾತ್ಕಾರವನ್ನು ಪಡೆಯತಕ್ಕ ಕ್ರಮಗಳನ್ನು ತಿಳಿಸುವುದೇ ಯುದ್ಧಕಾಂಡದ ತತ್ವವಾಗಿರುವುದು. ಸಮಾಧಿಕಾಲದಲ್ಲಿ ಬಾಹ್ಯಕ್ಕೆ ಎಳೆಯುತ್ತಿರುವ ಅವಿದ್ಯಾಶಕ್ತಿಗಳಿಗೂ, ಅಂತರ್ಮುಖವಾಗೆಳೆಯುತ್ತಿರುವ ಮನಸ್ಸು ಮತ್ತು ವಾಯುಗಳೊಡಗೂಡಿದ ಬುದ್ಧಿವೃತ್ತಿಗೂ ಯುದ್ಧವೆಂದರೆ ಎಳೆದಾಟಪ್ರಾರಂಭವಾದುದೇ ಯುದ್ಧಪ್ರಾರಂಭವಾದ ತತ್ವವಾಗಿರುವುದು.

ಈ ಯುದ್ಧಕಾಂಡದ ತತ್ವದಲ್ಲಿ ಎರಡು ಸೋಪಾನಗಳಿವೆ. ಪ್ರಥಮ ಸೋಪಾನದ ಅನುಷ್ಠಾನವು ಬಂಧತ್ರಯಗಳೊಡನೆ ಮಾಡುವ "ಓಂ"ಕಾರೋಚ್ಚಾರಣೆಯ ಅನುಸಂಧಾನದಿಂದ ಬಿಂದುಧಾರಣೆ. ದ್ವಿತೀಯ ಸೋಪಾನದ ಅನುಷ್ಠಾನವು ತೇಜೋನಾದಧ್ಯಾನ ವಿದ್ಯಾನುಷ್ಠಾನವೆಂದರೆ—"ಓಂ"ಕಾರದ ನಾದದೊಡಗೂಡಿದ ಅಂತರ್ಜ್ಯೋತಿಯಲ್ಲಿ ಸಮಾಧಿಯ ಅಭ್ಯಾಸ. ಪ್ರಥಮ ಸೋಪಾನದ ಅನುಷ್ಠಾನಗಳು ಸಮುದ್ರರಾಜನು ಪ್ರತ್ಯಕ್ಷವಾದಾರಭ್ಯ ಇಂದ್ರನ ರಥಾರೋಹಣದ ಕಥೆಯವರೆಗಿನ ತತ್ವಗಳು. ಪ್ರಥಮಸೋಪಾನದಲ್ಲಿ ಬರುವ ಬಂಧತ್ರಯದಲ್ಲಿ ಮೂಲಬಂಧದ ವಿಚಾರವು ಶ್ರೀರಾಮನ ಸೈನ್ಯವು ಲಂಕೆಯನ್ನು ಮುತ್ತಿದ ಸಂದರ್ಭದಲ್ಲಿ ಬಂದಿರುವುದಷ್ಟೆ! ಉಳಿದ ಜಾಲಂಧರ ಮತ್ತು ಉಡ್ಯಾಣಬಂಧಗಳೆಂಬ ಮುದ್ರೆಗಳ ವಿಚಾರವು ಇಂದ್ರಜಿತ್ತಿನ ಯುದ್ಧದ ಸಂದರ್ಭದಲ್ಲಿ ಬರುವುದು. ಈ ಬಂಧತ್ರಯಗಳ ವಿಚಾರಗಳನ್ನು ಒಂದೇ ಸ್ಥಳದಲ್ಲಿ ತಿಳಿಸದೆ ಪ್ರತ್ಯೇಕ ಪ್ರತ್ಯೇಕ ಪ್ರಕರಣಗಳಲ್ಲಿ ತಿಳಿಸಿರಲು ಕಾರಣವೇನೆಂದರೆ, ಯಾವ ಯಾವ ಮುದ್ರೆಯು ಯಾವ ಯಾವ ವಿಧವಾದ ಅವಿದ್ಯಾಶಕ್ತಿಯನ್ನು ನಿಗ್ರಹಿಸಲು ಸಹಕಾರಿಯೋ, ಆಯಾಯಾ ಅವಿದ್ಯಾಶಕ್ತಿಯ ಯುದ್ಧದ ತತ್ವದಲ್ಲಿ ಬರಬೇಕಾಗಿರುವುದು. ಪ್ರತ್ಯೇಕ ಪ್ರತ್ಯೇಕ ಸ್ಥಳಗಳಲ್ಲಿ ಬರೆದಿದ್ದರೂ ಸಮುದ್ರರಾಜನು ಪ್ರತ್ಯಕ್ಷವಾದಾರಭ್ಯ ಇಂದ್ರನ ರಥಾರೋಹಣದವರೆಗಿನ ಕಥೆಯ ತತ್ವದ ಅನುಷ್ಠಾನವು ಒಂದೇ ಸೋಪಾನದ್ದು. ಆದುದರಿಂದ, "ಓಂ"ಕಾರೋಚ್ಚಾರಣೆಯಿಂದ ಸಮಾಧಿಯ ಅಭ್ಯಾಸಮಾಡಲು ಪ್ರಾರಂಭಿಸಿದಾಗ ಬಂಧತ್ರಯಗಳೊಡನೆ ಮಾಡಬೇಕೆಂಬ ತಾತ್ಪರ್ಯವಾಗಿರುವುದು.

ಸಮಾಧಿಯ ಪ್ರಥಮಾಭ್ಯಾಸಕಾಲದಲ್ಲಿ ಅಪರಿಮಿತವಾದ ಅವಿದ್ಯಾಶಕ್ತಿಗಳೊಡನೆ ಪ್ರಧಾನಶಕ್ತಿಸ್ವರೂಪವಾದ ವಾಸನಾವೃತ್ತಿ ಮತ್ತು ಇಂದ್ರಿಯಗಳ ಆಕರ್ಷಣಾಶಕ್ತಿಯು, ಅತ್ಯಂತ ಬಲವುಳ್ಳದ್ದಾಗಿ, ಬುದ್ಧಿವೃತ್ತಿಯು ಅನುಸಂಧಾನಮಾಡುತ್ತಿರುವ ಬಿಂದುಧಾರಣೆ

ಯನ್ನು ಶಿಥಿಲಮಾಡಬೇಕೆಂದು ಪ್ರಯತ್ನಮಾಡುವುದು. ಈ ತತ್ವವೇ ರಾವಣನು ಅಪರಿಮಿತವಾದ ಸೈನ್ಯದೊಡನೆ ಪ್ರಥಮ ಯುದ್ಧಕ್ಕೆ ಬಂದಿರುವುದಾಗಿದೆ.

**ರಾ||** ರಾವಣನು ಯುದ್ಧದಲ್ಲಿ ಸುಗ್ರೀವನನ್ನು ಮೂರ್ಛೆಗೊಳಿಸಿದನು.

**ತತ್ವ||** ಸಮಾಧಿಯ ಪ್ರಥಮಾಭ್ಯಾಸದಲ್ಲಿ ವಾಸನಾವೃತ್ತಿ ಮತ್ತು ಇಂದ್ರಿಯಗೋಳಕಗಳಲ್ಲಿರುವ ಬಹಿರಾಕರ್ಷಣಾಶಕ್ತಿಯ ಹೊಡೆತದಿಂದ ಪ್ರಾಣವಾಯುವು ಬಳಲಿ ದೇಹಕ್ಕೆ ಆಯಾಸವುಂಟಾಗುವುದು. ಈ ತತ್ವಾರ್ಥವೇ ರಾವಣನು ಸುಗ್ರೀವನನ್ನು ಮೂರ್ಛೆಗೊಳಿಸಿದುದು. ಅಂದರೆ ಸಮಾಧಿಯ ಪ್ರಥಮಾಭ್ಯಾಸದಲ್ಲಿ ಜಾಗ್ರತೆಯಾಗಿ ಸಮಾಧಿಸಿದ್ಧಿಯನ್ನು ಪಡೆಯಬೇಕೆಂದು ಆತುರಪಟ್ಟು ಪ್ರಥಮದಲ್ಲಿಯೇ ದೀರ್ಘಕಾಲ ಅಭ್ಯಾಸಮಾಡಬಾರದು. ಶಕ್ತಿಗೆ ತಕ್ಕಂತೆ ಅಲ್ಪವಾಗಿ ಮಾಡಿಕೊಂಡು ದಿನಕ್ರಮೇಣ ಅಧಿಕಮಾಡಿಕೊಳ್ಳಬೇಕು. ಪ್ರತಿದಿನವೂ ಒಂದೇ ಸಲ ಹೆಚ್ಚುಕಾಲ ಅಭ್ಯಾಸಮಾಡುವುದಕ್ಕಿಂತ, ಎರಡು ಮೂರು ಕಾಲಗಳಲ್ಲಿ ಸ್ವಲ್ಪ ಸ್ವಲ್ಪವಾಗಿ ಮಾಡುವುದುತ್ತಮ.

**ರಾ||** ರಾವಣನ ಹೊಡೆತದಿಂದ ವಾನರರೆಲ್ಲ ಕಂಗೆಟ್ಟು ಓಡುತ್ತಿದ್ದರು.

**ತತ್ವ||** ಸಮಾಧಿಯ ಪ್ರಥಮಾಭ್ಯಾಸದಲ್ಲಿ ದೇಹದ ಮುಖ್ಯವಾದ ವಾಯುಗಳಿಗಲ್ಲದೆ ಇತರ ವಾಯುಗಳಿಗೂ ಅಧಿಕವಾಗಿ ಆಯಾಸವುಂಟಾಗುವುದು. ಈ ತತ್ವವೇ ರಾವಣನ ಹೊಡೆತದಿಂದ ವಾನರರು ಕಂಗೆಡುತ್ತಿದ್ದುದಾಗಿದೆ.

**ರಾ||** ರಾವಣನು ಲಕ್ಷ್ಮಣನನ್ನು ಮೂರ್ಛೆಗೊಳಿಸಲು ಹನುಮಂತನು ರಾವಣನನ್ನು ಹೊಡೆದು ಲಕ್ಷ್ಮಣನನ್ನು ಎತ್ತಿಕೊಂಡು ಹೋಗಿ ಶ್ರೀರಾಮನ ಸಮೀಪದಲ್ಲಿಟ್ಟನು. ಅನಂತರ ಲಕ್ಷ್ಮಣನು ಮೂರ್ಛೆಯಿಂದೆದ್ದನು.

**ತತ್ವ||** ಸಮಾಧಿಯ ಅಭ್ಯಾಸದ ಪ್ರಥಮದಲ್ಲಿ ವಾಸನಾವೃತ್ತಿ ಮತ್ತು ಇಂದ್ರಿಯಗಳ ಆಕರ್ಷಣದಿಂದ ಮನೋವೃತ್ತಿಯು ಬಳಲಿ ಬಹಿರ್ಮುಖವಾಗಲು ಇಂದ್ರಿಯಗಳ ಮೂಲಕ ಹೊರಡುವ ಪ್ರಯತ್ನಮಾಡುವುದೇ ಲಕ್ಷ್ಮಣನು ರಾವಣನಿಂದ ಮೂರ್ಛಿತನಾದ ತತ್ವವಾಗಿರುವುದು. ಸಮಾಧಿಯ ಅಭ್ಯಾಸದಲ್ಲಿ ಹನುಮಂತನ ತತ್ವದಲ್ಲಿರುವ ಶ್ವಾಸೋಚ್ಛ್ವಾಸವು ಸ್ತಿಮಿತದಲ್ಲಿದ್ದುದರಿಂದ ಮನೋವೃತ್ತಿಯನ್ನು ಬಹಿರ್ವ್ಯಾಪಾರಕ್ಕೆ ಬಿಡದೆ ಧರಿಸಿಕೊಂಡು ಬಿಂದುಧಾರಣೆಯಲ್ಲಿರುವ ಬುದ್ಧಿವೃತ್ತಿಯೊಡನೆ ಸೇರಿಸುವುದೇ ಹನುಮಂತನು ಲಕ್ಷ್ಮಣನನ್ನುಎತ್ತಿಕೊಂಡು ಹೋಗಿ ಶ್ರೀರಾಮನ ಸಮೀಪದಲ್ಲಿ ಬಿಡುವ ತತ್ವವಾಗಿರುವುದು.

**ರಾ||** ಶ್ರೀರಾಮ ರಾವಣರ ಪ್ರಥಮ ಯುದ್ಧದಲ್ಲಿ ಹನುಮಂತ ರಾವಣರಿಬ್ಬರಿಗೇ ಪ್ರಬಲವಾದ ಯುದ್ಧಗಳಾದುವು. ಹನುಮಂತನಿಗೆ ಕೋಪಬಂದು ರಾವಣನನ್ನು ತನ್ನ

ಹಸ್ತದಿಂದ ಅಪ್ಪಳಿಸಲು, ಭೂಕಂಪವಾದಾಗ ಪರ್ವತವು ಚಲಿಸುವಂತೆ ರಾವಣನು ತತ್ತರಿಸಿ ನಡುಗಿದನು. ಅನಂತರ ರಾವಣನು ಅತ್ಯಂತ ಕೋಪಯುಕ್ತನಾಗಿ, ತನ್ನ ಮುಷ್ಟಿಯಿಂದ ಹನುಮಂತನ ಎದೆಯ ಮೇಲೆ ಹೊಡೆಯಲು, ಹನುಮಂತನು ತತ್ತರಿಸಿ ಬಳಲಿದನು.

**ತತ್ವ||** ಬಿಂದುಧಾರಣೆಯ ಅನುಸಂಧಾನದಲ್ಲಿ ಶ್ವಾಸೋಚ್ಛ್ವಾಸವು ಕೇವಲ ಕುಂಭಕ ದಲ್ಲಿ ಬಿಂದುಧಾರಣೆಯೊಡನಿರುವ ಬುದ್ಧಿವೃತ್ತಿಯೊಡಗೂಡಿರುತ್ತದೆ. ವಾಸನಾವೃತ್ತಿ ಮತ್ತು ಇಂದ್ರಿಯಗಳಲ್ಲಿನ ಬಹಿರಾಕರ್ಷಣೆಯ ವಿಕ್ಷೇಪಶಕ್ತಿಯು ಬಿಂದುಧಾರಣೆಯನ್ನು ಶಿಥಿಲಮಾಡಬೇಕೆಂದು ಎಳೆಯುವಾಗ, ಕೇವಲ ಕುಂಭಕದಲ್ಲಿದ್ದ ಶ್ವಾಸೋಚ್ಛ್ವಾಸದ ಸ್ತಿಮಿ ತವು ತಪ್ಪುವ ಸಂಭವಬರುವುದು. ಈ ತತ್ವವೇ ರಾವಣನ ಹೊಡೆತದಿಂದ ಹನುಮಂತನು ತತ್ತರಿಸಿದುದು. ಅಂದರೆ ವಿಕ್ಷೇಪಶಕ್ತಿಯು ಕೇವಲ ಕುಂಭಕದಲ್ಲಿರುವ ಶ್ವಾಸೋಚ್ಛ್ವಾಸ ವನ್ನು ಶಿಥಿಲಮಾಡುವುದು ಪ್ರಥಮ ಕರ್ತವ್ಯವಾಗಿರುವುದೆಂದು ಸೂಚಿಸುವುದೇ ರಾವಣನು ಶ್ರೀರಾಮನನ್ನು ಹೊತ್ತಿದ್ದ ಹನುಮಂತನೊಡನೆ ವಿಶೇಷವಾಗಿ ಪ್ರಥಮದಲ್ಲಿ ಹೋರಾ ಡಿದುದು. ಸಮಾಧಿಯ ಪ್ರಥಮಾವಸ್ಥೆಯಲ್ಲಿ ರಾವಣ ಹನುಮಂತರ ಪ್ರಬಲವಾದ ಯುದ್ಧವೆಂದರೆ, ವಿಕ್ಷೇಪಶಕ್ತಿ ಮತ್ತು ಶ್ವಾಸೋಚ್ಛ್ವಾಸಗಳ ದ್ವಂದ್ವದ ಎಳೆತಗಳಿಂದ ಬುದ್ಧಿ ವೃತ್ತಿಯು ಧಾರಣೆಮಾಡಿಕೊಳ್ಳಬೇಕೆಂದಿರುವ ತೇಜೋಬಿಂದುವು ಅನೇಕಾವರ್ತಿ ವಿಚ್ಛಿನ್ನ ವಾಗುವುದು. ಬಿಂದುಗಳು ವಿಚ್ಛಿತ್ತಿಯಾದಂತೆ ಬುದ್ಧಿವೃತ್ತಿಯು ಹೊಸಹೊಸ ಬಿಂದು ಗಳನ್ನು ಧಾರಣೆಮಾಡಿಕೊಳ್ಳಲು ಹೋಗುವುದರಿಂದ, ಅನೇಕ ಬಿಂದುಗಳಾಗುತ್ತವೆ. ಈ ತಾತ್ಪರ್ಯವನ್ನೇ ನಾದಬಿಂದೂಪನಿಷತ್ತಿನಲ್ಲಿ "ಬಿಂದುಕೋಟಿ ಶತಾನಿಚ" ಎಂಬದಾಗಿ ಹೇಳಿ ರುವುದು. ಈ ರೀತಿಯಾಗಿ ವಿಕ್ಷೇಪಶಕ್ತಿಯ ಎಳೆತದಿಂದ ಶ್ವಾಸೋಚ್ಛ್ವಾಸವು ಚದರದೆ, ಸಮಾಧಿಯ ಅಭ್ಯಾಸದಲ್ಲಿ ಸ್ತಿಮಿತದಲ್ಲಿರುವ ತತ್ವವೇ ಹನುಮಂತನು ರಾವಣನನ್ನು ಧೈರ್ಯ ವಾಗಿ ಎದುರಿಸಿದ್ದಾಗಿರುವುದು. ಈ ರೀತಿ ಶ್ವಾಸೋಚ್ಛ್ವಾಸವು ಕೇವಲ ಕುಂಭಕದ ರೂಪ ದಲ್ಲಿ ಸ್ಥಿರತ್ವವನ್ನು ಪಡೆಯಬೇಕಾದರೆ, ಪ್ರಾಣಾಯಾಮದ ಅನುಷ್ಠಾನದ ಸಿದ್ಧಿಯು ಅಗತ್ಯ ವೆಂದು ಗೊತ್ತಾಗುವುದು.

**ರಾ||** ರಾವಣನು ನೀಲನೊಡನೆ ಯುದ್ಧಮಾಡಿ ಅವನನ್ನೂ ನೋಯಿಸಿದನು.

**ತತ್ವ||** ನೀಲನೆಂದರೆ ಆಹಾರವನ್ನು ಜೀರ್ಣಮಾಡುವ ಸಮಾನವಾಯುತತ್ವದವ ನೆಂದು ಕಿಷ್ಕಿಂಧಾಕಾಂಡದಲ್ಲಿ ತಿಳಿಸಿದೆ. ಸಮಾಧಿಯ ಅಭ್ಯಾಸದ ಪ್ರಥಮಾವಸ್ಥೆಯಲ್ಲಿ, ವಿಕ್ಷೇಪಶಕ್ತಿಯ ಎಳೆತದಿಂದ ಸಮಾನವಾಯುವು ಬಳಲುವುದೇ ರಾವಣನು ನೀಲನನ್ನು ನೋಯಿಸಿದುದಾಗಿರುವುದು. ಆದುದರಿಂದ ಸಮಾಧಿಯ ಅಭ್ಯಾಸದ ಪ್ರಥಮಾವಸ್ಥೆ ಯಲ್ಲಿ ಮಧುರವಾಗಿಯೂ ಮೃದುವಾಗಿಯೂ ಇರುವ ಆಹಾರವನ್ನು ಖಂಡಿತವಾಗಿಯೂ

ಅತ್ಯಂತ ಮಿತವಾಗಿ ತೆಗೆದುಕೊಳ್ಳಬೇಕು. ಕಠಿಣವಾದ, ಸುಲಭವಾಗಿ ಜೀರ್ಣವಾಗದ, ಆಹಾರವನ್ನು ತೆಗೆದುಕೊಳ್ಳಲೇಬಾರದು. ಸಮಾಧಿಯ ಅನುಷ್ಠಾನವು ಸ್ತಿಮಿತಕ್ಕೆ ಬರುವ ಪರ್ಯಂತರ ಕ್ಷೀರಾಹಾರದಲ್ಲಿಯೇ ಇರುವುದಾದರೆ ಅತ್ಯಂತ ಉತ್ತಮ.

**ರಾ||** ಹನುಮಂತನಿಗೆ ಕೋಪಬಂದು ತನ್ನ ವಜ್ರಮುಷ್ಟಿಯಿಂದ ರಾವಣನ ಎದೆಯ ಮೇಲೆ ಹೊಡೆಯಲು, ಆ ಪೆಟ್ಟಿನಿಂದ ರಾವಣನು ಬಿದ್ದು ಕಣ್ಣುಬಾಯಿಗಳಿಂದ ರಕ್ತವನ್ನು ಕಾರುತ್ತ ಮೂರ್ಛಿತನಾಗಿ, ಅನಂತರ ಚೇತರಿಸಿಕೊಂಡು ಶ್ರೀರಾಮನೊಡನೆ ಯುದ್ಧಮಾಡುವುದಕ್ಕೆ ಹೊರಟನು.

**ತತ್ವ||** ಬಿಂದುಧಾರಣೆಯ ಅನುಷ್ಠಾನದಲ್ಲಿ ಶ್ವಾಸೋಚ್ಛ್ವಾಸವು ಚೆನ್ನಾಗಿ ಸ್ತಿಮಿತಕ್ಕೆ ಬಂದು ಕೇವಲ ಕುಂಭಕರೂಪದಿಂದ ನಿಂತರೆ, ವಿಕ್ಷೇಪಶಕ್ತಿಯು ಶ್ವಾಸೋಚ್ಛ್ವಾಸದ ಕುಂಭಕವನ್ನು ಶಿಥಿಲಪಡಿಸದಿರುವುದೇ ಹನುಮಂತನಿಂದ ರಾವಣನು ಪೆಟ್ಟುತಿಂದ ತತ್ವ.

**ರಾ||** ಶ್ರೀರಾಮನು ಹನುಮಂತನ ಮೇಲೆ ಕುಳಿತು ಯುದ್ಧಮಾಡುತ್ತಿರುವಲ್ಲಿ ರಾವಣನು ಹನುಮಂತನನ್ನು ನೋಯಿಸಿದನು. ಶ್ರೀರಾಮನು ಕೋಪಗೊಂಡು ರಾವಣನ ರಥ ಪತಾಕೆಗಳನ್ನೆಲ್ಲಾ ಮುರಿದು, ಕಿರೀಟವನ್ನು ಕೆಡವಿ, ರಾವಣನನ್ನು ನೋಯಿಸಿದನು. ರಾವಣನು ಪರಾಜಿತನಾಗಿ ಲಂಕೆಗೆ ಹಿಂದಿರುಗಿದನು.

**ತತ್ವ||** ಸಮಾಧಿಯ ಪ್ರಥಮಾಭ್ಯಾಸಕಾಲದಲ್ಲಿ, ಶ್ವಾಸೋಚ್ಛ್ವಾಸವು ಬಿಂದುಧಾರಣೆಯ ಅನುಸಂಧಾನಮಾಡುವ ಬುದ್ಧಿವೃತ್ತಿಗೆ ಆಧಾರವಾಗಿರುವುದೇ ಹನುಮಂತನ ಮೇಲೆ ಶ್ರೀರಾಮನು ಕುಳಿತುಕೊಂಡು ಯುದ್ಧಮಾಡುತ್ತಿರುವ ತತ್ವ. ಅಂದರೆ ಬುದ್ಧಿವೃತ್ತಿಯು, ಶಾಸೋಚ್ಛ್ವಾಸದ ಸ್ತಿಮಿತತ್ವವನ್ನು ಅನುಸರಿಸಿಕೊಂಡು ಬಿಂದುಧಾರಣೆಯನ್ನು ಮಾಡಬೇಕು.

ಶ್ವಾಸೋಚ್ಛ್ವಾಸವು ಕೇವಲ ಕುಂಭಕದಲ್ಲಿ ನಿಲ್ಲದೆ ಹೋದರೂ ಸಮಾಧಿಯು ವಿಚ್ಛಿತ್ತಿಯಾಗುವುದು. ಅಲ್ಲದೆ ಬುದ್ಧಿವೃತ್ತಿಯು ಬಿಂದುವೇ ತಾನೆಂಬ ಭಾವನೆಯಿಂದ ಸಮಾಧಿಯ ಅಭ್ಯಾಸಮಾಡದಿದ್ದರೆ, ಶ್ವಾಸೋಚ್ಛ್ವಾಸಗಳ ಕುಂಭಕವು ಚದರುವುದಲ್ಲದೆ ಬಿಂದುಧಾರಣೆಯೂ ನಿಲ್ಲುವುದಿಲ್ಲ. ಹೀಗೆ ಬಿಂದುವೇ ನಾನೆಂಬ ಜ್ಞಾನದಿಂದ ಬುದ್ಧಿವೃತ್ತಿಯು ಶ್ವಾಸೋಚ್ಛ್ವಾಸದ ಸಹಾಯದೊಡನೆ ಸಮಾಧಿಯ ಅಭ್ಯಾಸಮಾಡುತ್ತಿದ್ದರೂ ಪ್ರಬಲವಾದ ಅವಿದ್ಯಾಪ್ರಧಾನಶಕ್ತಿಯು ಶ್ವಾಸೋಚ್ಛ್ವಾಸವನ್ನು ಚದರಿಸಿ, ಬಿಂದುಧಾರಣೆಯನ್ನು ತಪ್ಪಿಸಲು ಬರುವುದೇ ರಾವಣನು ಹನುಮಂತನನ್ನು ನೋಯಿಸಿ ಶ್ರೀರಾಮನ ಮೇಲೆ ಬಾಣಪ್ರಯೋಗಮಾಡಿದ್ದಾಗಿರುವುದು. ಬುದ್ಧಿವೃತ್ತಿಯು ತೇಜಸ್ಸಿನ ಬಿಂದುವೇ ತಾನೆಂದು ಸ್ಥಿರವಾಗಿ ಧಾರಣೆಮಾಡಿಕೊಳ್ಳುವುದರ ಮೂಲಕ ವಾಸನಾವೃತ್ತಿ

ಮತ್ತು ಇಂದ್ರಿಯಗಳ ಆಕರ್ಷಣಾಶಕ್ತಿಯನ್ನು ಖಂಡಿಸುವ ತತ್ವವೇ ರಾವಣನು ಪರಾಜಿತನಾಗಿ ಲಂಕೆಗೆ ಹಿಂದಿರುಗಿ ಹೋದುದಾಗಿರುವುದು.

ಶ್ರೀರಾಮನ ತತ್ವದಲ್ಲಿರುವ ಬುದ್ಧಿವೃತ್ತಿಯು ಬಿಂದುವೇ ತಾನೆಂಬ ಭಾವನೆಯ ಮೂಲಕ ರಾವಣನ ತತ್ವದಲ್ಲಿರುವ ವಿಕ್ಷೇಪಶಕ್ತಿಯನ್ನು ಹಿಂದಕ್ಕೆ ಓಡಿಸಿತೆಂದು ಮೇಲೆ ತಿಳಿಸಿತಷ್ಟೆ! ಬಿಂದುವೇ ತಾನೆಂಬ ಅಭೇದಚಿಂತನೆಯಿಂದ ಸಮಾಧಿಯ ಅಭ್ಯಾಸಮಾಡದಿದ್ದರೆ, ಬಿಂದುಧಾರಣೆಯು ಸ್ತಿಮಿತಕ್ಕೆ ಖಂಡಿತವಾಗಿಯೂ ಬರುವುದಿಲ್ಲ. ಅಂತರ್ಮುಖದಲ್ಲಿ ಕಾಣುವ ತೇಜೋಬಿಂದುವೇ ತಾನೆಂದುಕೊಂಡು, ಅಭೇದಬುದ್ಧಿಯಿಂದ ಸಮಾಧಿಯನ್ನು ಅಭ್ಯಾಸಮಾಡುತ್ತ ಬಂದರೆ, ಬಿಂದುಹೋಗಿ ಅತ್ಯಂತ ಪ್ರಕಾಶವೂ ಅದರೊಳಗೆ ನಾದವೂ ಉಂಟಾಗುವುದು. ನಾದವೇ ನಾನೆಂದು ಅಭೇದಬುದ್ಧಿಯಿಂದ ಸಮಾಧಿಯ ಅಭ್ಯಾಸಮಾಡುತ್ತ ಬಂದರೆ, ಬುದ್ಧಿವೃತ್ತಿಯು ಆತ್ಮನಲ್ಲಿ ಲೀನವಾಗುವುದು. ಬಿಂದುವಾಗಲಿ ನಾದವಾಗಲಿ ನಾನೇ ಎಂಬ ಭಾವನೆಯಿಂದ ಸಮಾಧಿಯ ಅಭ್ಯಾಸಮಾಡಿಕೊಂಡಿರದಿದ್ದರೆ, ಸಮಾಧಿಯು ಸ್ತಿಮಿತಕ್ಕೆ ನಿಲ್ಲದೆ ಬಹಿರ್ಮುಖವಾಗಬೇಕೆಂಬುದು ಸ್ವಾನುಭವದಿಂದಲೇ ತಿಳಿದುಕೊಳ್ಳಬೇಕಾಗಿರುವುದು. ತನಗೂ ಬಿಂದುನಾದಗಳಿಗೂ ಅಭೇದಭಾವನೆಯಿಂದ ಸಮಾಧಿಯ ಅನುಷ್ಠಾನಮಾಡಬೇಕೆಂಬ ತಾತ್ಪರ್ಯಕ್ಕೆ ಶ್ರೀಕೃಷ್ಣಪರಮಾತ್ಮನು ಉತ್ತರಗೀತೆಯಲ್ಲಿ,

ಆತ್ಮಮಂತ್ರಸ್ಯ ಹಂಸಸ್ಯ ಪರಸ್ಪರ ಸಮನ್ವಯಾತ್ |
ಯೋಗೇನ ಗತಕಾಮಾನಾಂ ಭಾವನಾ ಬ್ರಹ್ಮಚಕ್ಷತೆ ||

ತಾ|| ಆತ್ಮಮಂತ್ರಸ್ವರೂಪವಾದ "ಓಂ"ಕಾರೋಚ್ಚಾರಣೆಯ ಅನುಸಂಧಾನದಿಂದ ಉತ್ಪನ್ನವಾಗುವ ಬಿಂದುನಾದಗಳಿಗೂ, ಹಂಸಸ್ವರೂಪನಾದ ತನಗೂ, ಅನ್ಯೋನ್ಯ ಐಕ್ಯದಿಂದ ಮಾಡುವ ಸಮಾಧಿಯ ಅಭ್ಯಾಸದಿಂದ, ಅವಿದ್ಯಾವೃತ್ತಿಗಳನ್ನು ನಿಗ್ರಹಿಸಿದವರು ಹೊಂದುವ ಸ್ವರೂಪವೇ ಸಾಕ್ಷಾತ್ಕಾರದ ಸ್ವರೂಪ ಎಂದು ಹೇಳಿರುವನು.

ಈ ಮೇಲಿನ ತಾತ್ಪರ್ಯಕ್ಕೆ ಅನುಸಾರವಾಗಿ ಶ್ರೀರಾಮನು ರಾವಣನನ್ನು ಓಡಿಸಿದನೆಂದರೆ, ಬುದ್ಧಿವೃತ್ತಿಯು ಬಿಂದುವೇ ತಾನೆಂಬ ತನಗೂ ಬಿಂದುವಿಗೂ ಅನ್ಯೋನ್ಯ ಐಕ್ಯದಿಂದ ಸಮಾಧಿಯ ಅಭ್ಯಾಸಮಾಡುವುದರ ಮೂಲಕ ವಾಸನಾವೃತ್ತಿಯನ್ನು ದೂರಗೊಳಿಸುವುದೆಂಬ ತತ್ವವಾಗಿರುವುದು.

ಈ ಮೇಲಿನ ಶ್ರೀಕೃಷ್ಣಪರಮಾತ್ಮನ ವಾಕ್ಯಕ್ಕೆ ಅನುಸಾರವಾಗಿ, ಬಿಂದುವೇ ನಾನೆಂಬದಾಗಿ ಅಧಿಕಾರಿಯು ಸಮಾಧಿಯ ಅಭ್ಯಾಸಮಾಡುತ್ತಿದ್ದರೆ, ಸಾಕ್ಷಾತ್ಕಾರವಾಗುವುದರಲ್ಲಿ

ಸಂಶಯವಿಲ್ಲ. ಈ ಅಭೇದಜ್ಞಾನದಿಂದ ಸಮಾಧಿಯ ಅಭ್ಯಾಸಮಾಡಬೇಕೆನ್ನುವ ತತ್ವಕ್ಕೆ ಶ್ರೀವಿದ್ಯಾರಣ್ಯರವರು ಕೂಡ ಸಂಧ್ಯಾಭಾಷ್ಯದಲ್ಲಿ ಗಾಯತ್ರಿಯನ್ನು ಯಾವ ವಿಧದಿಂದ ಉಪಾಸನೆಮಾಡಬೇಕೆಂದು ಹೇಳಿರುವರೆಂದರೆ "ಯೋಽಹಂ-ಸೋಽಸೌ, ಯೋಽಸೌ-ಸೋಽಹಂ, ಇತಿ ವಯಂ ಧ್ಯಾಯೇಮ" ಅಂದರೆ ಧ್ಯಾನಮಾಡತಕ್ಕವನಿಗೂ, ಧ್ಯಾನಮಾಡುವ ವಸ್ತುವಿಗೂ, ಅಭೇದಬುದ್ಧಿಯಿರಬೇಕು. ಎಂಬದಾಗಿ ಹೇಳಿರುವುದರಿಂದ ಧ್ಯೇಯಸ್ವರೂಪವಾದ ಬಿಂದುವೇ ತಾನೆಂಬ ಅಭ್ಯಾಸಮಾಡಬೇಕು.

ಶ್ರೀರಾಮನ ಹೊಡೆತದಿಂದ ರಾವಣನು ಓಡಿಹೋದನೇ ಹೊರತು ನಿಗ್ರಹವಾಗಲಿಲ್ಲ. ಆದುದರಿಂದ ರಾವಣನು ನಿಗ್ರಹವಾಗುವ ಪರ್ಯಂತ ಹೇಗೆ ಯುದ್ಧವು ನಡೆಯುವುದೋ ಹಾಗೆಯೇ ಆತ್ಮಸಾಕ್ಷಾತ್ಕಾರದ ಪರ್ಯಂತ ವಾಸನಾವೃತ್ತಿನಿರೋಧ ಸಮಾಧಿಯನ್ನು ಅಭ್ಯಾಸಮಾಡಲೇಬೇಕು. ಇದೇ ಅರ್ಥಕ್ಕೆ ಶ್ರೀಕೃಷ್ಣಪರಮಾತ್ಮನು ಉತ್ತರಗೀತೆಯಲ್ಲಿ,

> ತಾವದೇವ ನಿರೋಧಸ್ಸ್ಯಾ ದ್ಯಾವತ್ತತ್ವಂ ನವಿಂದತಿ |
> ವಿದಿತೇತು ಪರೇ ತತ್ವೆ ಏಕಮೇವಾನುಪಶ್ಯತಿ ||

ತಾ|| ಎಲ್ಲಿಯವರೆಗೆ ಆತ್ಮಸಾಕ್ಷಾತ್ಕಾರವಾಗುವುದಿಲ್ಲವೋ ಅಲ್ಲಿಯವರೆಗೂ ಅವಿದ್ಯೆಯ ಕಾರ್ಯಗಳನ್ನು ನಿಗ್ರಹಮಾಡಬೇಕು. ಸಾಕ್ಷಾತ್ಕಾರವಾಗುತ್ತಿರಲಾಗಿ ನಿಗ್ರಹರೂಪವಾದ ಸಾಧನೆಯು ಅನಾವಶ್ಯಕವಾಗಿರುವುದು. ಎಂದು ಹೇಳಿರುವನು.

ಇದೇ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ಕೂಡ ವಿವೇಕಚೂಡಾಮಣಿ ೨೭೭ನೆಯ ಶ್ಲೋಕದಲ್ಲಿ,

> ಯಥಾ ಯಥಾ ಪ್ರತ್ಯಗವಸ್ಥಿತಂ ಮನ |
> ಸ್ತಥಾ ತಥಾ ಮುಂಚತಿ ಬಾಹ್ಯವಾಸನಾಂ |
> ನಿಶ್ಶೇಷಮೋಕ್ಷೆ ಸತಿ ವಾಸನಾನಾ |
> ಮಾತ್ಮಾನುಭೂತಿಃ ಪ್ರತಿಬನ್ಧಶೂನ್ಯಾ ||

ತಾ|| ಬುದ್ಧಿಮನಸ್ಸಿನ ವೃತ್ತಿಗಳು ಅಂತರ್ಮುಖದಲ್ಲಿ ಸಮಾಧಿಯಲ್ಲಿ ಆತ್ಮಾಭಿಮುಖವಾಗಿ ನೆಲೆಗೊಳ್ಳುತ್ತ ಬಂದಹಾಗೆಲ್ಲಾ ಬಾಹ್ಯವಾಸನಾವೃತ್ತಿಗಳನ್ನು ತ್ಯಜಿಸುತ್ತವೆ. ವಾಸನಾವೃತ್ತಿಗಳ ನಾಶವುಂಟಾಗುತ್ತಿರಲಾಗಿ ತಡೆಯಿಲ್ಲದಿರುವ ಆತ್ಮಾನುಭವವುಂಟಾಗುವುದು ಎಂದು ಹೇಳಿರುವರು.

ಸಮಾಧಿಯಲ್ಲಿ ಕಾಣುವ ನಾಮರೂಪಾತ್ಮಕವಾದ ತೇಜೋಬಿಂದು ಮತ್ತು ನಾದಗಳನ್ನು ಸೋಽಹಂಭಾವದಿಂದ ಧರಿಸಿಕೊಂಡು ಸಮಾಧಿಯ ಅಭ್ಯಾಸಮಾಡುತ್ತಿದ್ದರೂ,

ನಾಮರೂಪಾತ್ಮಕವಾದ ತೇಜೋನಾದಗಳಿಗೆ ಅತೀತನಾಗಿ ಆತ್ಮನಿರುವನೆಂದೂ, ಅಂತಹ ಆತ್ಮನಲ್ಲಿ ಐಕ್ಯವಾಗಬೇಕೆಂಬ ಜ್ಞಾನದಿಂದಲೂ, ಸಮಾಧಿಯಲ್ಲಿ ಮುಂದುವರಿಯುತ್ತಿರಬೇಕು. ಹೀಗೆ ಹೋಗುವಿಕೆಯೇ ಲಯಯೋಗ, ಪರಾಭಕ್ತಿಯೋಗ, ಜ್ಞಾನಯೋಗ ಮತ್ತು ಹಠಯೋಗಗಳ ಸ್ವರೂಪವಾಗಿರುವುದು. ಹೀಗೆ ಸಮಾಧಿಯನ್ನು ಅಭ್ಯಾಸಮಾಡುತ್ತ ಬಂದರೆ ಬಿಂದುಸೋಪಾನವನ್ನು ದಾಟಿ, ಅನಂತರ ನಾದಕಳೆಗಳ ಸೋಪಾನವನ್ನು ದಾಟಿ ಆತ್ಮ ಸಾಕ್ಷಾತ್ಕಾರವಾಗುವುದು. ಆತ್ಮಸಾಕ್ಷಾತ್ಕಾರವಾಗುವಪರ್ಯಂತ ಅಂತರ್ಮುಖದಲ್ಲಿ ಕಾಣುವ ತೇಜೋಬಿಂದು ಮತ್ತು ನಾದಗಳು ಸಗುಣಬ್ರಹ್ಮಸ್ವರೂಪವಾದುವುಗಳು. ಆದುದರಿಂದ ಪೂಜಾರ್ಹವಾದುವು. ನಿರ್ಗುಣನಾದ ಪರಮಾತ್ಮನು ಬುದ್ಧಿವೃತ್ತಿಗೆ ನಿಲುಕುವುದಿಲ್ಲ ವಾದುದರಿಂದ ಸಗುಣಬ್ರಹ್ಮಸ್ವರೂಪವಾದ ಬಿಂದುನಾದಗಳ ಮೂಲಕ ಆತ್ಮಸಾಕ್ಷಾತ್ಕಾರ ವನ್ನು ಪಡೆಯಬೇಕು.

ಬಾಹ್ಯದಲ್ಲಿ ವೇದಾಂತವಿಚಾರ ಮಾಡಿ ತನ್ನ ನಿಜವಾದ ಸ್ವರೂಪವೇ ಪರಬ್ರಹ್ಮ ಸ್ವರೂಪವೆಂದು ತಿಳಿದುಕೊಳ್ಳುವೆವು. ಸ್ವಾನುಭವಕ್ಕೆ ತಂದುಕೊಳ್ಳಲು ಅಂತರ್ಮುಖದ ಮಾರ್ಗದಲ್ಲಿಯೇ ಪ್ರವೇಶಿಸಬೇಕು. ಬಾಹ್ಯವ್ಯಾಪಾರವೃತ್ತಿಯನ್ನು ಅಂತರ್ಮುಖಕ್ಕೆ ತಿರುಗಿಸಿಕೊಂಡಾಗ ಬುದ್ಧಿಮನಸ್ಸಿನ ವೃತ್ತಿಗಳು ಒಳಗೆ ಕಾಣುವ ತೇಜಸ್ಸಿನಲ್ಲಿರುವುವು. ವಾಸನಾ ವೃತ್ತಿಗಳಿಂದುಂಟಾಗುವ ಸ್ವಪ್ನವ್ಯಾಪಾರವು ಹೇಗೆ ತೇಜಸ್ಸಿನಲ್ಲಿಯೇ ನಡೆಯುವುದೋ ಹಾಗೆ ಸಮಾಧಿಯಲ್ಲಿಯೂ ತೇಜಸ್ಸಿನೊಳಗೆ ಅವಿದ್ಯಾವೃತ್ತಿಗಳು ನುಗ್ಗುತ್ತವೆ. ವಾಸನಾ ವೃತ್ತಿಗಳು ಸಮಾಧಿಯಲ್ಲಿ ನುಗ್ಗಿದರೆ ತೇಜೋಬಿಂದುವು ಶಿಥಿಲವಾಗಿ ಸ್ವಪ್ನವ್ಯಾಪಾರದಂತೆ, ಬುದ್ಧಿಯು ಬಿಂದುವಿನಾಕಾರವನ್ನು ಬಿಟ್ಟು ತೇಜಸ್ಸಿನಲ್ಲಿಯೇ ವಿಷಯಾಕಾರವಾಗಬೇಕಾಗುವುದು, ಅಥವಾ ಬಹಿರ್ಮುಖವಾಗಬೇಕಾಗುವುದು. ಆದುದರಿಂದ, ಅಧಿಕಾರಿಯು ಬ್ರಹ್ಮನೇ ತಾನೆಂಬ ದೃಢವಾದ ಜ್ಞಾನದಿಂದ ತೇಜೋಬಿಂದು ನಾದಗಳನ್ನು ಧರಿಸಿಕೊಳ್ಳುತ್ತ ಸಮಾಧಿಯ ಅಭ್ಯಾಸವನ್ನು ಚೆನ್ನಾಗಿ ಮಾಡಿದರೆ ಆತ್ಮಸಾಕ್ಷಾತ್ಕಾರವಾಗುವುದು.

ಆತ್ಮಸ್ವರೂಪವನ್ನು ವಿಚಾರಮಾತ್ರದಿಂದ ತಿಳಿದುಕೊಂಡಿರುವೆವೇ ಹೊರತು, ಸ್ವಾನುಭವದಿಂದ ತಿಳಿದಿರುವುದಿಲ್ಲ. ಆದುದರಿಂದ ಸ್ವಾನುಭವಕ್ಕೆ ಬರಬೇಕಾದರೆ, ಅಂತರ್ಮುಖದಲ್ಲಿ ನಾನೇ ಬ್ರಹ್ಮನೆಂದು ಪ್ರವೇಶಿಸಬೇಕು. ಈ ತಾತ್ಪರ್ಯಕ್ಕೆ ವರಾಹೋಪನಿಷತ್ತಿನಲ್ಲಿ,

ಅಸ್ತಿಬ್ರಹ್ಮೇತಿ ಚೇದ್ವೇದ ಪರೋಕ್ಷಜ್ಞಾನಮೇವತತ್ |
ಅಹಂಬ್ರಹ್ಮೇತಿ ಚೇದ್ವೇದ ಸಾಕ್ಷಾತ್ಕಾರ ಸ್ಸ ಉಚ್ಯತೆ ||

ತಾ|| ಬ್ರಹ್ಮವಿದ್ಯೆಯೆಂದು ವೇದಾಂತಶ್ರವಣ ಮನನಗಳಿಂದ ತಿಳಿದುಕೊಳ್ಳುವುದು ಪರೋಕ್ಷಜ್ಞಾನವು. ನಾನೇ ಬ್ರಹ್ಮನೆಂದು ಸಮಾಧಿಯ ಅಭ್ಯಾಸದಿಂದ ಆತ್ಮನನು ಸ್ವಾನುಭವಕ್ಕೆ ತಂದುಕೊಳ್ಳುವುದು ಸಾಕ್ಷಾತ್ಕಾರವೆನಿಸಿಕೊಳ್ಳುವುದು ಎಂದು ಹೇಳಿದೆ.

ಈ ಮೇಲಿನ ತತ್ವಾರ್ಥಗಳಿಗೆ ಅನುಸಾರವಾಗಿ ಬಿಂದುವೇ ನಾನೆಂಬ ಧಾರಣೆಯ ಮೂಲಕ ಬುದ್ಧಿತತ್ವಸ್ವರೂಪನಾದ ಶ್ರೀರಾಮನು ವಿಕ್ಷೇಪಶಕ್ತಿಸ್ವರೂಪನಾದ ರಾವಣನನ್ನು ನೋಯಿಸಿ ಹಿಂದಕ್ಕೆ ಓಡಿಸಿದನು. ಬಿಂದುವೇ ನಾನೆಂಬ ಧಾರಣೆಯ ಅಭ್ಯಾಸವೇ ಅಹಂ ಬ್ರಹ್ಮಾಸ್ಮಿಯ ಅನುಸಂಧಾನವಾಗಿರುವುದು. ಈ ಅಹಂ ಬ್ರಹ್ಮಾಸ್ಮಿಯ ಅನುಸಂಧಾನದ ಪರಿಪಕ್ವಾವಸ್ಥೆಯ ಸೋಪಾನವೇ ರಾವಣನ ವಧೆಯಾಗಿರುವುದು. ರಾವಣನ ವಧೆಯ ಕಾಲದಲ್ಲಿ ಈ ಅಹಂ ಬ್ರಹ್ಮಾಸ್ಮಿಯ ವಿಚಾರವು ಇನ್ನೂ ವಿಶೇಷವಾಗಿ ವಿವರಿಸಲ್ಪಟ್ಟಿರುವುದು.

ಸಮಾಧಿಯ ಪ್ರಥಮಾವಸ್ಥೆಯಲ್ಲಿನ ಕಷ್ಟಸುಖಗಳನ್ನು ಚೆನ್ನಾಗಿ ತಿಳಿದುಕೊಳ್ಳಬೇಕಾದುದು ಅವಶ್ಯಕವಾದುದರಿಂದ ವಿವರಿಸಿ ಬರೆಯಬೇಕಾಯಿತು.

## ೧೧ನೆಯ ಪ್ರಕರಣ.

ರಾವಣನ ಮಂತ್ರಿ ಸೇನಾಪತಿಗಳು ನಿಗ್ರಹವಾದುದು.

ಅವಿದ್ಯಾಪರಿವಾರಶಕ್ತಿಗಳು ಸಮಾಧಿಯ ಅನುಷ್ಠಾನದಿಂದ ನಿಗ್ರಹವಾಗುವ ವಿಚಾರ.

### ರಾವಣನ ಮಂತ್ರಿ ಸೇನಾಪತಿಗಳು.

೧. ಧೂಮ್ರಾಕ್ಷ-ಉಗ್ರಸ್ವಭಾವ.
೨. ವಜ್ರದಂಷ್ಟ್ರ-ಆತುರಸ್ವಭಾವ.
೩. ಅಕಂಪನ-ನೀಚಕಾರ್ಯದಲ್ಲಿ ನಿರ್ಭಯ.
೪. ಪ್ರಹಸ್ತ-ಭಯಂಕರತ್ವ.
೫. ಮಹೋದರ-ಉನ್ಮತ್ತತೆ.
೬. ತ್ರಿಶಿರ-ಸರಳತ್ವವಿಲ್ಲದ್ದು.
೭. ಮಹಾಪಾರ್ಶ್ವ-ಕಠಿನಸ್ವಭಾವ.
೮. ಯೂಪಾಕ್ಷ-ನೀಳಗಣ್ಣಿನ ನೋಟ.
೯. ದುರ್ಮುಖ-ಅಪಸ್ಮಾರತನ.
೧೦. ದೇವಾಂತಕ-ತಪೋವಿಘ್ನ.
೧೧. ನರಾಂತಕ-ಮೊದ್ದುಸ್ವಭಾವ.
೧೨. ಪ್ರತಾಪ-ಆತ್ಮಸ್ತುತಿ.
೧೩. ಮತ್ತ-ಮತ್ತತೆ.
೧೪. ವಜ್ರಮುಷ್ಟಿ-ಛಲ.
೧೫. ಅಗ್ನಿಕೇತು-ಸೋಮಾರಿತನ.
ರಶ್ಮಿಕೇತು-ಮಂಕುತನ.
ಯಜ್ಞಕೇತು-ಹಿಂಸೆ.
೧೬. ಮಿತ್ರಘ್ನ-ಚಾಡಿ.
೧೭. ಜಂಬುಮಾಲಿ-ರೌಳಿತ್ವ.
೧೮. ಪ್ರಜಂಘ-ವೀರಾವೇಶ.

ಮೇಲೆ ವಿವರಿಸಿರುವ ಸ್ವಭಾವಗಳು ಅವಿದ್ಯೆಯಿಂದ ಮನುಷ್ಯನಲ್ಲುಂಟಾಗುವುವು. ಇವುಗಳ ಸ್ವರೂಪಗಳ ತತ್ವಗಳನ್ನು ತಕ್ಕಮಟ್ಟಿಗೆ ವಿವರಿಸೋಣ.

ಧೂಮ್ರಾಕ್ಷನೆಂದರೆ ಕಡುಕೋಪ ಅಥವಾ ಉಗ್ರತನದ ಸ್ವಭಾವ. ಹೇಗೆಂದರೆ, ಹೊಗೆಯಿಂದೊಡಗೂಡಿದ ಅಗ್ನಿಜ್ವಾಲೆಯೋಪಾದಿಯಲ್ಲಿ ನೇತ್ರಗಳನ್ನು ಮಾಡುವ ಸ್ವಭಾವದವನೆಂದು ಅರ್ಥವಾಗುವುದು. ಅಂದರೆ ಕಡುಕೋಪ ಅಥವಾ ಅತ್ಯುಗ್ರಸ್ವರೂಪವೆಂಬ

ತಾತ್ಪರ್ಯವು. ಕಣ್ಣುಗಳನ್ನು ಕೆಂಪಗೆಮಾಡಿಕೊಂಡು ಅತ್ಯಂತ ಉಗ್ರವಾಗಿರುವ ಸ್ವಭಾವಕ್ಕೆ ಧೂಮ್ರಾಕ್ಷನೆಂಬ ತತ್ವವಾಗಿರುವುದು. ಇದು ರಜೋಗುಣಕ್ಕೆ ಸೇರಿದುದು. ಈ ಸ್ವಭಾವವು ಹನುಮಂತನಿಂದ ನಿಗ್ರಹವಾಗುವುದೆಂದರೆ, ಶ್ವಾಸೋಚ್ಛ್ವಾಸದ ಕಾರ್ಯವಾದ ಕುಂಭಕದಿಂದ ನಿವೃತ್ತಿಯಾಗುವುದು.

ವಜ್ರದಂಷ್ಟ್ರನೆಂದರೆ ವಜ್ರದೋಪಾದಿಯಲ್ಲಿ ಕಠಿಣವಾದ ಕೋರೆದಾಡೆಗಳುಳ್ಳವನೆಂದು ಅರ್ಥ. ಕೋರೆದಾಡೆಗಳುಳ್ಳ ಪ್ರಾಣಿಗಳು ಹಿಂದೂ ಮುಂದೂ ನೋಡದೆ ವರಾಹದಂತೆ ಶತ್ರುಗಳ ಮೇಲೆ ನುಗ್ಗುವ ಸ್ವಭಾವವುಳ್ಳವು. ಅಂದರೆ ಕಾರ್ಯಾಕಾರ್ಯಗಳ ವಿವೇಚನೆ ಮತ್ತು ಪೂರ್ವಾಪರ ಯೋಚನೆಗಳಿಲ್ಲದೆ ಆತುರದಿಂದ ಥಟ್ಟನೆ ಕಾರ್ಯಗಳಲ್ಲಿ ನುಗ್ಗುವುದೇ ವಜ್ರದಂಷ್ಟ್ರನ ತತ್ವದಲ್ಲಿರುವ ಆತುರಸ್ವಭಾವವು. ಇದೂ ರಜೋಗುಣಕ್ಕೆ ಸಂಬಂಧಪಟ್ಟದ್ದು. ಸಮಾಧಿಯ ಅಭ್ಯಾಸದಿಂದ ಈ ಸ್ವಭಾವವು ಹೋಗುವುದು.

ಅಕಂಪನನೆಂದರೆ ನೀಚಕಾರ್ಯಗಳಲ್ಲಿ ಪ್ರವೇಶಿಸಲು ಕೊಂಚವೂ ಹೆದರದೆ ಇರುವ ಸ್ವಭಾವ. ಇದೂ ರಜೋಗುಣಕ್ಕೇ ಸಂಬಂಧಪಟ್ಟದ್ದು. ಸಮಾಧಿಯ ಅಭ್ಯಾಸದಲ್ಲಿ ನಿಗ್ರಹವಾಗುವುದು.

ಪ್ರಹಸ್ತನೆಂದರೆ ನೀಡಿದ ಬೆರಳುಳ್ಳ ಅಂಗೈಯುಳ್ಳವನೆಂದು ಅರ್ಥವಾಗುವುದು. ನೀಡಿದ ಬೆರಳುಳ್ಳ ಅಂಗೈಯುಳ್ಳದ್ದಾಗಿ ಮಾಡಿಕೊಂಡರೆ ಭಯಂಕರ ಎಂದರೆ ಹೆದರಿಸುವ ಸ್ವಭಾವವು ಮನುಷ್ಯನಲ್ಲುಂಟಾಗುವುದು. ಅದರಲ್ಲಿಯೂ ಕೈಗಳನ್ನು ಮೇಲಕ್ಕೆ ನೀಡಿ ಬೆರಳುಗಳನ್ನು ಚೆನ್ನಾಗಿ ಚಾಚಿಕೊಂಡರೆ ಹೆದರಿಸುವ ಸ್ವಭಾವವುಂಟಾಗುವುದೋ ಇಲ್ಲವೋ ಎಂಬುದನ್ನು ಸರ್ವರೂ ನೋಡಿಕೊಳ್ಳಬಹುದು. ಯೋಗಾಸನಗಳಲ್ಲಿ ಈ ವಿಧವಾಗಿ ಕುಳಿತುಕೊಳ್ಳುವುದನ್ನೇ ಭಯಂಕರಾಸನವೆಂದು ಹೇಳಿರುವುದು. ಅಲ್ಲದೆ ಹುಲಿ ಮುಂತಾದ ಕ್ರೂರಮೃಗಗಳು ಪ್ರಾಣಿಗಳನ್ನು ಹಿಡಿಯುವ ಕಾಲದಲ್ಲಿ ಪಂಜವನ್ನು ಚಾಚಿಕೊಳ್ಳುವ ಸ್ವಭಾವವೂ ಪ್ರಹಸ್ತನ ತತ್ವದ ಸ್ವರೂಪವಾಗಿರುವುದು. ಪ್ರಹಸ್ತನು ರಾವಣನಿಗೆ ಪ್ರಧಾನ ಮಂತ್ರಿಯು. ಅಂದರೆ ಅವಿದ್ಯಾಗುಣಗಳಲ್ಲಿ ಭಯಂಕರಸ್ವಭಾವವು ಪ್ರಮುಖವಾದುದು. ಇದೂ ಸಮಾಧಿಯ ಅನುಷ್ಠಾನದಿಂದ ನಿಗ್ರಹವಾಗುವುದು.

ಮಹೋದರನೆಂದರೆ ದೊಡ್ಡ ಹೊಟ್ಟೆಯುಳ್ಳವನೆಂದೂ ಕೊಬ್ಬಿನಿಂದ ಉಬ್ಬಿರುವವನೆಂದೂ ಅರ್ಥ. ಕೊಬ್ಬಿನಿಂದ ಉಬ್ಬಿ ಲಕ್ಷ್ಯವಿಲ್ಲದ ಸ್ವಭಾವವುಳ್ಳವನು. ಅಂದರೆ ಉನ್ಮತ್ತಸ್ವಭಾವವೆಂಬ ತತ್ವವಾಗಿರುವುದು. ಇದು ತಮೋಗುಣಕ್ಕೆ ಸಂಬಂಧಪಟ್ಟುದು. ಸಮಾಧಿಯ ಅಭ್ಯಾಸದಿಂದ ನಶಿಸುವುದು.

ತ್ರಿಶಿರನೆಂದರೆ-ಮೂರು ತಲೆಯುಳ್ಳವನೆಂದು ಅರ್ಥ. ಒಂದು ತಲೆ ಇರುವುದು ಸ್ವಾಭಾವಿಕ. ಮೂರು ತಲೆಯೆಂದರೆ ನಡೆವಳಿಕೆಯಲ್ಲಿ ಮೂರು ವಿಧವಾಗಿರುವ ಸ್ವಭಾವ.

ಮನಸ್ಯೇಕಂ ವಚಸ್ಯೇಕಂ ಕರ್ಮಣ್ಯೇಕಂ ಮಹಾತ್ಮನಾಂ |
ಮನಸ್ಯನ್ಯ ದ್ವಚಸ್ಯನ್ಯ ತ್ಕರ್ಮಣ್ಯನ್ಯ ದ್ದುರಾತ್ಮನಾಂ ||

ಎಂಬಂತೆ ಮಾತಿನಲ್ಲೊಂದು ಮನಸ್ಸಿನಲ್ಲೊಂದು ಕಾರ್ಯದಲ್ಲೊಂದು ನಡೆವಳಿಕೆಯಿರುವ ಸ್ವಭಾವವೆಂದು ಅರ್ಥ. ಈ ವಿಧವಾಗಿರುವುದು ಅವಿದ್ಯೆಗೆ ಸಂಬಂಧಪಟ್ಟದ್ದು. ಈ ಶಕ್ತಿಯೂ ಸಮಾಧಿಯ ಅನುಷ್ಠಾನದಿಂದ ನಿವೃತ್ತಿಯಾಗುವುದು.

ಮಹಾಪಾರ್ಶ್ವನೆಂದರೆ—ಕಠಿಣಸ್ವಭಾವ ಅಥವಾ ಶತವರಟನ ಸ್ವಭಾವವೆಂದು ಹಿಂದೆ ರಾವಣನ ಮಂತ್ರಾಲೋಚನೆಯ ಸಂದರ್ಭದಲ್ಲಿಯೇ ವಿವರಿಸಿದೆ.

ಯೂಪಾಕ್ಷನೆಂದರೆ—ಕಣ್ಣನ್ನು ಮೇಲಕ್ಕೆ ದರ್ಪದಿಂದ ನಿಡರಿಸಿಕೊಳ್ಳುವ ಸ್ವಭಾವ. ದುರ್ಮುಖನೆಂದರೆ—ಹಸನ್ಮುಖವಿಲ್ಲದೆ ದುರ್ಲಕ್ಷಣವುಳ್ಳ ಮುಖದ ಸ್ವಭಾವವಾದ ಅಪಸ್ಮಾರತನ. ದೇವಾಂತಕನೆಂದರೆ –ದೇವತೆಗಳ ಸ್ವಭಾವವನ್ನುಂಟುಮಾಡುವ ತಪಸ್ಸಿಗೆ ವಿಘ್ನಕಾರಿಯಾಗುವ ಸ್ವಭಾವ. ನರಾಂತಕನೆಂದರೆ –ನರವೆಂದರೆ ತಿಳಿವಳಿಕೆ. ತಿಳಿವಳಿಕೆಯನ್ನು ಹಾಳುಮಾಡುವ ಮೂಢಸ್ವಭಾವ. ಪ್ರತಾಪನೆಂದರೆ—ತನ್ನನ್ನು ತಾನೇ ಹೊಗಳಿಕೊಳ್ಳುವ ಸ್ವಭಾವ. ಮತ್ತತೆಯೆಂದರೆ—ಮಾದಕದ್ರವ್ಯಗಳಿಂದುಂಟಾಗುವ ಮಂಕುತನದ ಸ್ವಭಾವ. ವಜ್ರಮುಷ್ಟಿಯೆಂದರೆ––ವಜ್ರದಂತೆ ಕಠಿಣವಾದ ಮುಷ್ಟಿಯೆಂದರೆ ಹಟ ಅಥವಾ ಛಲದ ಸ್ವಭಾವ. ಅಗ್ನಿಕೇತು, ರಶ್ಮಿಕೇತು, ಯಜ್ಞಕೇತುಗಳೆಂದರೆ—ಪ್ರುಥೆಯನ್ನು ಹಿಂಸೆಮಾಡತಕ್ಕ ಸೋಮಾರಿತನ, ಮಂಕುತನ ಮತ್ತು ಹಿಂಸೆಯ ಸ್ವಭಾವಗಳು. ಮಿತ್ರಘ್ನನೆಂದರೆ ಚಾಡಿಹೇಳಿ ಅಗಲಿಕೆಯನ್ನುಂಟುಮಾಡುವ ಸ್ವಭಾವ. ಜಂಬುಮಾಲಿಯೆಂದರೆ—ಅತ್ಯಂತ ರಕ್ತವರ್ಣ ಅಥವಾ ರಣಗೆಂಪಿನ ಸ್ವಭಾವ. ಅಂದರೆ ರೌಳಿಸ್ವಭಾವವೆಂದು ಹಿಂದೆ ಸುಂದರಕಾಂಡದಲ್ಲಿಯೇ ತಿಳಿಸಿದೆ. ಪ್ರಜಂಘನೆಂದರೆ––ಜಂಘವೆಂದರೆ ಮೊಳಕಾಲು. ಪ್ರಜಂಘನೆಂದರೆ ಮೊಳಕಾಲಿನಲ್ಲಿ ವೀರಾವೇಶದಿಂದ ಕುಳಿತುಕೊಳ್ಳುವವನೆಂಬ ತಾತ್ಪರ್ಯ. ಅಂದರೆ ವೀರಾವೇಶದ ಸ್ವಭಾವ.

ಮೇಲೆ ತಿಳಿಸಿರುವವುಗಳು ಅವಿದ್ಯಾಪ್ರಧಾನಪುರುಷನಿಗೆ ಮಂತ್ರಿ ಸೇನಾಪತಿಗಳ ತತ್ವದಲ್ಲಿರುವಾಗ ಆ ಮಹಾಪುರುಷನು ಎಂತಹ ಚೈತನ್ಯನು ಮತ್ತು ಅವನ ಮಕ್ಕಳು ಎಂತಹವರೆಂಬುದನ್ನು ಸರ್ವರೂ ತಿಳಿದುಕೊಳ್ಳಬಹುದು. ಈ ಅವಿದ್ಯಾಪರಿವಾರಗಳ ಸ್ವಭಾವಗಳೆಲ್ಲಾ ಪ್ರಪಂಚಾನುಭವದಲ್ಲಿ ಗೊತ್ತಾಗುವುವು. ಈ ಅವಿದ್ಯಾಪಂಗಡದಲ್ಲಿ,

ದುಸ್ವಭಾವದ ನೂರೊಂದು ಜನ ಕೌರವರು ಹೇಗಿದ್ದರೋ ಹಾಗೆ, ಇನ್ನೂ ಅನೇಕವಾಗಿವೆ. ಇಂತಹ ಸ್ವಭಾವಗಳೆಲ್ಲಾ ವೇದಾಂತಶ್ರವಣ ಮನನಗಳಿಂದ ಚಿತ್ತಶುದ್ಧಿಮಾಡಿಕೊಂಡು ಅನಂತರ ಬಿಂದುಧಾರಣೆಯನ್ನು ಮಾಡಿಕೊಳ್ಳುತ್ತ ಅನುಷ್ಠಾನಮಾಡುವ "ಓಂ" ಕಾರೋಪಾಸನೆಯಿಂದ ನಿವೃತ್ತಿಯಾಗುವುವೆಂಬ ತಾತ್ಪರ್ಯವು. ಮುಖ್ಯವಾಗಿ ಅವಿದ್ಯಾಪ್ರಧಾನ ಶಕ್ತಿಯ ಕಾರ್ಯವನ್ನು ತಿಳಿದುಕೊಂಡು ಅದನ್ನು ಧ್ವಂಸಮಾಡುತ್ತ ಬಂದರೆ ಈ ಅಲ್ಪ ಶಕ್ತಿಗಳು ಗಣನೆಗೆ ಬರುವುದಿಲ್ಲ.

## ೧೨ನೆಯ ಪ್ರಕರಣ.

**ಶ್ರೀರಾಮಲಕ್ಷ್ಮಣರಾದಿಯಾಗಿ ಸರ್ವರನ್ನೂ ಇಂದ್ರಜಿತ್ತು ತನ್ನ ನಾಗಪಾಶದಿಂದ ಬಂಧಿಸಿದುದು.**

**ಭೋಗಪದಾರ್ಥಗಳನ್ನು ಅನುಭವಿಸಲು ಉಂಟಾಗುವ ಮೋಹಪಾಶವು ಪ್ರಾಣಿಗಳನ್ನು ಬಂಧಿಸುವ ಸ್ವರೂಪದ ವಿಚಾರ.**

**ರಾ||** ರಾವಣನ ಮಗನಾದ ಇಂದ್ರಜಿತ್ತು ಯುದ್ಧಕ್ಕೆ ಬಂದು ಅಂಗದನಿಂದ ನೋಯಿಸಲ್ಪಟ್ಟನು ಅನಂತರ ಕಪಟಯುದ್ಧದಲ್ಲಿ ನಿಪುಣನಾದ ಇಂದ್ರಜಿತ್ತು ಅಂತರ್ಧಾನವಿದ್ಯೆಯಿಂದ ಅದೃಶ್ಯನಾಗಿ, ರಾಮಲಕ್ಷ್ಮಣರಿಗೆ ಗುರಿಹಿಡಿದು, ಚಿತ್ರವಿಚಿತ್ರಗಳಾದ ಸರ್ಪಾಸ್ತ್ರಗಳನ್ನು ಪ್ರಯೋಗಿಸುತ್ತಿದ್ದನು. ಇಂದ್ರಜಿತ್ತು ಇರುವ ಸ್ಥಳವನ್ನು ತಿಳಿಯಬೇಕೆಂದು ಶ್ರೀರಾಮನು ವಾನರರನ್ನು ಕಳುಹಿಸಿದರೂ ಗೋಚರವಾಗಲಿಲ್ಲ. ಇಂದ್ರಜಿತ್ತಾದರೋ ನಾಗಾಸ್ತ್ರವನ್ನು ಬಿಡದೇ ಪ್ರಯೋಗಮಾಡುತ್ತ, ಶ್ರೀರಾಮಲಕ್ಷ್ಮಣರ ಸರ್ವಾಂಗವನ್ನೂ ನಾಗಾಸ್ತ್ರದಿಂದ ಮುಚ್ಚಿದನು. ಶ್ರೀರಾಮಲಕ್ಷ್ಮಣರು ನಾಗಾಸ್ತ್ರದಿಂದ ನೊಂದು ನಿಶ್ಚೇಷ್ಟಿತರಾಗಿ, ವೀರ್ಯಬಲ ಕುಗ್ಗಿದವರಾಗಿ ಮಲಗಿದರು.

**ತತ್ವ||** ಇಂದ್ರಜಿತ್ತು ಯಾರು, ಇವನ ಸ್ವರೂಪದ ಅಂತರಾರ್ಥವೇನೆಂದರೆ –ರಾವಣನ ಮಗನಾದ ಇಂದ್ರಜಿತ್ತು ಭೋಗಶಕ್ತಿಯ ತತ್ವದವನಾಗಿರುವನು. ಹೇಗೆಂದರೆ, ಭೋಗದ ಪರಮೈಶ್ವರ್‍ಯಶಾಲಿಯಾದ ಇಂದ್ರನನ್ನು ಜಯಿಸಿ ಸೆರೆಯಲ್ಲಿಟ್ಟದ್ದವನಾದುದರಿಂದ ಇಂದ್ರಜಿತ್ತೆಂದು ಹೆಸರು ಬಂದಿತು. ವಿಕ್ಷೇಪಶಕ್ತಿಯ ತತ್ವದವನಾದ ರಾವಣನ ಮಗನಾದ ಇಂದ್ರಜಿತ್ತು ಕೂಡ ವಿಕ್ಷೇಪಶಕ್ತಿಗೇ ಸೇರಿದವನು. ರಾವಣನು ವಾಸನಾವೃತ್ತಿ ಮತ್ತು ಇಂದ್ರಿಯಗೋಳಕಗಳಲ್ಲಿ ಬಹಿರಾಕರ್ಷಣೆಯ ಕಾರ್ಯವನ್ನು ಮಾತ್ರ ಉಂಟುಮಾಡುವನು. ವಾಸನಾವೃತ್ತಿಗಳನ್ನು ಕಾರ್ಯರೂಪದಲ್ಲಿ ಹೊರಪಡಿಸುವ ಶಕ್ತಿಯೇ ಇಂದ್ರಜಿತ್ತಿನ ತತ್ವವಾಗಿರುವುದು.

ರಾವಣನ ಎದೆಯ ತತ್ವವೇ ಅಂತಃಕರಣಕ್ಕೆ ಬರುವ ವಾಸನಾವೃತ್ತಿಯೆಂದೂ ಇವನ ಹತ್ತು ತಲೆಗಳೇ ಹತ್ತು ಇಂದ್ರಿಯಗೋಳಕಗಳಲ್ಲಿದ್ದುಕೊಂಡು ಬಹಿರಾಕರ್ಷಣೆಮಾಡುವ ಶಕ್ತಿಗಳೆಂದೂ ಹಿಂದೆ ತಿಳಿಸಿರುತ್ತದಷ್ಟೆ! ಹೀಗೆ ವಾಸನಾವೃತ್ತಿಗಳೊಡನೆ ಬಹಿರಾಕರ್ಷಣೆ ಮಾಡಿದ್ದನ್ನು ಕಾರ್ಯತಃ ಭೋಗಿಸುವ ಅಥವಾ ಅನುಭವಿಸುವುದಕ್ಕೆ ಎಳೆಯುವುದೇ ಇಂದ್ರ ಜಿತ್ತಿನ ತತ್ವದಲ್ಲಿರುವ ಭೋಗಶಕ್ತಿಯ ಕಾರ್ಯವಾಗಿರುವುದು. ರಾವಣನು ತಂದೆಯಾಗಿಯೂ, ಇಂದ್ರಜಿತ್ತು ಮಗನಾಗಿ ಯುವರಾಜನಾಗಿಯೂ ಇರುವ ರೀತಿಯಲ್ಲಿ, ಬಾಹ್ಯ ವ್ಯಾಪಾರಮಾಡುವುದಕ್ಕೆ ವಾಸನಾವೃತ್ತಿ ಮತ್ತು ಇಂದ್ರಿಯಗೋಳಕಗಳಲ್ಲಿರುವ ಬಹಿರಾ ಕರ್ಷಣೆಗಳೇ ಮೂಲಕಾರಣ. ಇಂದ್ರಜಿತ್ತಿನ ತತ್ವದಲ್ಲಿರುವ ಭೋಗಶಕ್ತಿಯೇ ದ್ವಿತೀಯ ಕಾರಣ. ಆದುದರಿಂದ ರಾವಣನಿಂದ ಉತ್ಪನ್ನವಾದ ಇಂದ್ರಜಿತ್ತಿಗೆ ರಾವಣಿ ಎಂದು ಹೆಸರು ಬಂದಿರುವುದು.

ಈ ಇಂದ್ರಜಿತ್ತು ಭೋಗಕ್ಕೆಲ್ಲ ಪ್ರಭುವಾದ ಇಂದ್ರನನ್ನು ಜಯಿಸಿರುವುದರಿಂದ ಅವಿದ್ಯಾಸ್ವರೂಪದಲ್ಲಿ ಈ ಭೋಗಶಕ್ತಿಯು ಅತ್ಯಂತ ಅದ್ಭುತವಾದುದು. ಇವನ ಮುಂದಿನ ಕಥೆಯ ತತ್ವಗಳಿಂದ ಇವನ ಮಹಿಮೆಯು ಗೊತ್ತಾಗುವುದು. ಈ ಇಂದ್ರಜಿತ್ತು ನಾಲ್ಕಾ ವರ್ತಿ ಬಂದು ಯುದ್ಧಮಾಡಿರುವನು. ಇನ್ನು ಇವನ ಪ್ರಥಮ ಯುದ್ಧದ ತತ್ವವನ್ನು ತಿಳಿದುಕೊಳ್ಳಲು ಪ್ರಾರಂಭಿಸೋಣ.

ಇಂದ್ರಜಿತ್ತು ಯುದ್ಧಕ್ಕೆ ಬಂದು ಅಂಗದನಿಂದ ನೋಯಿಸಲ್ಪಟ್ಟನೆಂದರೆ—ಅಪಾನ ವಾಯುವು ಅಧೋಮುಖಕ್ಕೆ ಬೀಸುವುದನ್ನು ಬಿಟ್ಟು ಊರ್ಧ್ವಮುಖಕ್ಕೆ ಬೀಸುವುದೇ ಅಂಗದನ ತತ್ವವಾಗಿರುತ್ತಷ್ಟೆ! ಹೀಗೆ ಊರ್ಧ್ವಮುಖವಾಗಿ ಅಪಾನವಾಯುವು ಇದ್ದಲ್ಲಿ ಭೋಗಶಕ್ತಿಗೆ ಬಲವು ಕಡಿಮೆಯೆಂಬ ತತ್ವಾರ್ಥವಾಗಿರುವುದು.

ಭೋಗಶಕ್ತಿಯ ತತ್ವದಲ್ಲಿರುವ ಇಂದ್ರಜಿತ್ತಿನಿಂದ ಶ್ರೀರಾಮಲಕ್ಷ್ಮಣರ ಮೇಲೆ ಪ್ರಯೋಗಮಾಡಲ್ಪಟ್ಟ ಅಸ್ತ್ರವು ಸರ್ಪಾಸ್ತ್ರವಾದುದರಿಂದ ವಿಷಮಯವಾಗಿರಬೇಕು. ಭೋಗಶಕ್ತಿಯಲ್ಲಿರುವ ವಿಷಮಯವಾದ ಅಸ್ತ್ರವು ಯಾವುದೆಂದರೆ—ಇಂದ್ರಿಯಗಳಿಂದ ಭೋಗಪಡುವ ವಸ್ತುಗಳಲ್ಲಿನ ಆಶೆ ಅಥವಾ ಮೋಹವು. ಕಾರಣವೇನೆಂದರೆ—ಭೋಗ್ಯ ವಸ್ತುವಿನಲ್ಲಿ ಪ್ರಥಮದಲ್ಲಿ ಆಶೆ ಅಥವಾ ಮೋಹವು ಅಂಕುರಿಸುವುದು. ಅನಂತರ ಈ ಮೋಹವು ತಾಪದೊಡಗೂಡಿ ತೃಷ್ಣೆಯೆನಿಸಿಕೊಳ್ಳುವುದು. ತೃಷ್ಣೆಯು ಬಲಿತರೆ ಭೋಗ ಮದವೆನಿಸಿಕೊಳ್ಳುವುದು. ಇವುಗಳಲ್ಲಿ ಇಂದ್ರಜಿತ್ತಿನ ಪ್ರಥಮ ಯುದ್ಧವು ಸರ್ಪಾಸ್ತ್ರ ರೂಪವಾದುದರಿಂದ ಭೋಗಪದಾರ್ಥಗಳಲ್ಲಿ ಉಂಟಾಗುವ ಮೋಹದ ಸ್ವರೂಪವಾಗಿರು ವುದು. ವಿಷಗಳಲ್ಲಿ ನಾಗಸರ್ಪದ ವಿಷವು ಹೇಗೆ ಅತಿಕ್ರೂರವೋ ಹಾಗೆ ಭೋಗ್ಯಪದಾರ್ಥ

ಗಳಲ್ಲಿನ ಮೋಹವು ಪ್ರಾಣಿಗಳಿಗೆ ಅತ್ಯಂತ ಬಂಧಕಸ್ವರೂಪವಾದುದು. ಪ್ರಾಣಿಗಳು ಇಂದ್ರಿಯಭೋಗಗಳ ಪದಾರ್ಥಗಳಲ್ಲಿನ ವಿಷರೂಪವಾದ ಪಾಶದಿಂದ ಕಟ್ಟಲ್ಪಟ್ಟು ಒದ್ದಾಡಿ ಬಳಲುತ್ತಿರುವುವು. ಈ ಇಂದ್ರಜಿತ್ತಿನ ನಾಗಪಾಶದ ತತ್ವಾರ್ಥಕ್ಕೆ ಅನುಸಾರವಾಗಿ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೭೯ನೆಯ ಶ್ಲೋಕದಲ್ಲಿ,

ದೋಷೇಣ ತೀವ್ರೋ ವಿಷಯಃ ಕೃಷ್ಣ ಸರ್ಪ ವಿಷಾದಪಿ |
ವಿಷಂ ನಿಹಂತಿ ಭೋಕ್ತಾರಂ ದ್ರಷ್ಟಾರಂ ಚಕ್ಷುಷಾಪ್ಯಯಂ ||

ತಾ|| ರೂಪ, ರಸ, ಗಂಧ, ಸ್ಪರ್ಶ, ಶಬ್ದ, ಮುಂತಾದ ವಿಷಯಗಳ ದೋಷವು ಕೃಷ್ಣ ಸರ್ಪದ ವಿಷಕ್ಕಿಂತಲೂ ಕ್ರೂರವಾದುದೆಂದು ತಿಳಿ. ವಿಷವಾದರೆ ಭುಜಿಸುವವನನ್ನು ಮಾತ್ರ ಕೊಲ್ಲುವುದು. ವಿಷಯಸ್ವರೂಪದ ವಿಷವಾದರೋ ನೋಡುವವನನ್ನೂ, ಕೇಳುವವನನ್ನೂ, ಅನುಭವಿಸುವವನನ್ನೂ ಕೊಲ್ಲುವುದು, ಎಂದು ಹೇಳಿರುತ್ತಾರೆ.

ಆದುದರಿಂದ ಭೋಗಪಡುವ ವಸ್ತುಗಳಲ್ಲಿ ಉಂಟಾಗುವ ಆಶೆ ಅಥವಾ ಮೋಹವು ವಿಷಸ್ವರೂಪವಾದುದು. ಭೋಗಪಡುವ ವಸ್ತುಗಳು ಮೇಲೆ ಶ್ರೀಶಂಕರಭಗವತ್ಪಾದರವರು ಹೇಳಿರುವ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಮುಂತಾದುವುಗಳ ಸ್ವರೂಪದಲ್ಲಿರುವುವು. ಭೋಗಶಕ್ತಿಯಲ್ಲಿನ ಮೋಹಪಾಶವು ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳ ಸ್ವರೂಪವಾದ ಭೋಗಪದಾರ್ಥಗಳನ್ನು ಅನುಭವಿಸಬೇಕೆಂಬ ಆಶಾರೂಪದಲ್ಲಿರುವುದು. ಈಗ ಭೋಗದ ಆಶೆಗಳು ಜಿಹ್ವೋಪಸ್ಥಗಳೆರಡರಲ್ಲಿ ಅತ್ಯಂತ ಪ್ರಬಲವಾಗಿವೆ. ಈ ಭೋಗಶಕ್ತಿಯು ಪ್ರಥಮದಲ್ಲಿ ಆಶೆ ಅಥವಾ ಭೋಗ್ಯಪದಾರ್ಥಗಳಲ್ಲಿನ ಮೋಹರೂಪವಾಗಿರುವುದು. ಈ ಮೋಹವನ್ನೇ ಪದಾರ್ಥಗಳಲ್ಲಿನ ಹಂಬಲೆಂದು ಹೇಳುವರು. ಪ್ರಾಣಿಗಳಲ್ಲಿ ಈ ಮೋಹಾವೇಶವುಂಟಾದರೆ ಮೋಹದ ತೊಳಲಿನಲ್ಲಿಯೇ ಪರವಶವಾಗಿಬಿಡುವ ತತ್ವವೇ ಶ್ರೀರಾಮಲಕ್ಷ್ಮಣರು ಸರ್ಪಾಸ್ತ್ರದಿಂದ ಮೂರ್ಛಿತರಾಗಿದ್ದುದು.

ಸ್ತ್ರೀಯರನ್ನು ನೋಡುವುದು ಮತ್ತು ಅವರ ಸಂಗದಲ್ಲಿಯೂ ತಿನ್ನುವ ಪದಾರ್ಥಗಳಲ್ಲಿಯೂ, ಮೋಹಪರವಶರಾಗಿ ಅವುಗಳ ಚಪಲದಲ್ಲಿಯೇ ಮುಗ್ನರಾಗಿರುವುದು, ಸಂಗೀತದಲ್ಲಿ ಮೋಹಪರವಶರಾಗಿ ಅದರ ಚಪಲದಲ್ಲಿಯೇ ಇರುವುದು, ಈ ರೀತಿಯಾದ ಇಂದ್ರಿಯ ಸಂಬಂಧವಾದ ಭೋಗ್ಯಪದಾರ್ಥಗಳು ಯಾವುವುಂಟೋ ಅವುಗಳಲ್ಲೆಲ್ಲಾ ಮೋಹಪರವಶರಾಗಿ ಅವರವರ ಯೋಗ್ಯತೆಗೆ ತಕ್ಕಂತೆ ಅವವುಗಳ ಚಪಲದಲ್ಲಿಯೇ ಮುಗ್ನರಾಗುವರು. ಈ ವಿಧವಾಗಿ ಯಾವುದಾದರೂ ಭೋಗವಿಷಯದಲ್ಲಿ ಮೋಹ ಅಥವಾ ಚಪಲವು ಬಲವತ್ತರವಾಗಿ ಅಂಕುರಿಸಿದರೆ ಮನಸ್ಸು ಮತ್ತು ಬುದ್ಧಿವೃತ್ತಿಗಳು ಈ ಮೋಹಪಾಶದಿಂದ ಬಂಧಿಸ

ಲ್ಪಟ್ಟು ಏನೂ ತೋರದೆ ಆ ಭೋಗ್ಯಪದಾರ್ಥಗಳ ಮೋಹಾನುವರ್ತಿಗಳಾಗುವುವು. ಈ ತತ್ವವೇ ಇಂದ್ರಜಿತ್ತಿನ ನಾಗಪಾಶದಿಂದ ರಾಮಲಕ್ಷ್ಮಣರಾದಿಯಾಗಿ ಸರ್ವರೂ ಮೂರ್ಛೆ ಹೋದುದಾಗಿರುವುದು. ಈ ಮೋಹ ಅಥವಾ ಹಂಬಲು ಉಲ್ಬಣಸ್ಥಿತಿಯನ್ನು ಪಡೆದರೆ ಹೇಳಬೇಕಾದುದೇ ಇಲ್ಲ! ಹುಚ್ಚರಂತೆ ಶರೀರದ ಮೇಲೆ ಸ್ಮರಣೆಯಿಲ್ಲದಂತಾಗುವುದು. ಸ್ತ್ರೀಲಂಪಟರಲ್ಲಿಯೂ, ಜಿಹ್ವಾಚಾಪಲ್ಯದವರಲ್ಲಿಯೂ, ಪಾನಾಸಕ್ತರಲ್ಲಿಯೂ, ಇಂತಹ ಮೋಹವು ಅಧಿಕವಾದರೆ ಮೂರ್ಛೆಬಂದಂತಾಗುವುದು. ಇದೇ ತಾತ್ಪರ್ಯಕ್ಕೆ ವಸಿಷ್ಠರು ವಾಸಿಷ್ಠರಾಮಾಯಣದಲ್ಲಿ,

ವರ್ಧಮಾನ ಮಹಾಮೋಹ ದಾಯಿನೀ ಭಯಕಾರಿಣಿ |
ತೃಷ್ಣಾ ವಿಷಲತಾರೂಪಾ ಮೂರ್ಛಾಮೇವ ಪ್ರಯಚ್ಛತಿ ||

ತಾ|| ವಿಷಲತಾಸದೃಶವಾದ ಭೋಗ್ಯಪದಾರ್ಥಗಳಲ್ಲಿನ ಆಶೆಯು ಮೋಹವನ್ನು ಕೊಡುತ್ತಲೂ, ಭಯವನ್ನುಂಟುಮಾಡುತ್ತಲೂ ಕೇವಲ ಮೂರ್ಛೆಯನ್ನೇ ಕೊಡುವುದು. ಎಂದು ಹೇಳಿರುವರು.

ಅಲ್ಲದೆ ಈ ಭೋಗಶಕ್ತಿಯ ಮೋಹಪಾಶದ ಸ್ವರೂಪವನ್ನು ಕುರಿತು ಶ್ರೀಶಂಕರ ಭಗವತ್ಪಾದರವರು ಕೂಡ,

ನಾರೀಸ್ತನಭರ ನಾಭೀದೇಶಂ ದೃಷ್ಟ್ವಾ ಮಾಗಾ ಮೋಹಾವೇಶಂ |
ಏತನ್ಮಾಂಸವಸಾದಿವಿಕಾರಂ ಮನಸಿ ವಿಚಿಂತಯ ವಾರಂ ವಾರಂ ||

ತಾ|| ಎಲೈ ಮನುಜನೆ! ಸ್ತ್ರೀಯರ ಸ್ತನ ಮತ್ತು ನಾಭಿಪ್ರದೇಶಗಳನ್ನು ನೋಡಿ ಮೋಹಾವೇಶವನ್ನು ಹೊಂದಬೇಡ. ಅವೆಲ್ಲವೂ ಮಜ್ಜ ಮಾಂಸಾದಿಗಳ ವಿಕಾರವೆಂದು ಪುನಃಪುನಃ ದೃಢವಾಗಿ ತಿಳಿದುಕೊ ಎಂದು ಹೇಳಿರುವರು.

ಶ್ರೀಶಂಕರಭಗವತ್ಪದರವರು ಮೇಲಿನ ಶ್ಲೋಕದಲ್ಲಿ ಹೇಳಿರುವಂತೆ ಸ್ತ್ರೀಯರ ದೇಹವು ಮಾಂಸಾದಿ ವಿಕಾರಗಳಲ್ಲದೆ ಮತ್ತೆ ಬೇರೆಯಲ್ಲ. ಆದರೂ ಮೋಹಪಾಶವು ಯಾವ ವಿಧವಾಗಿ ಪ್ರಾಣಿಗಳನ್ನು ಬಂಧಿಸಿರುವುದೆಂಬುದನ್ನು ಸರ್ವರೂ ನಿಶ್ಚಲಮನಸ್ಕರಾಗಿ ಯೋಚಿಸಿ ನೋಡಬಹುದು. ಆದಕಾರಣ ಈ ಭೋಗದ ಮೋಹಶಕ್ತಿಯು ಎಷ್ಟು ಕೆಟ್ಟದ್ದು ! ಒಂದಾವರ್ತಿ ಅಂಕುರಿಸಿದ ಭೋಗೇಚ್ಛೆಯನ್ನು ಅನುಭವಿಸಿಬಿಟ್ಟರೆ ಅಲ್ಲಿಗೆ ತೃಪ್ತಿಯಾಗಿ ಭೋಗೇಚ್ಛೆಯು ಪುನಃ ತಲೆದೋರದೆ ಇರುವುದೆ ? ಹೀಗೆಂದಿಗೂ ಆಗುವುದಿಲ್ಲ. ಈ ದುರಾಶೆಯು ಹಿಂದೆಯೇ ನಾನಿರುವೆನೆಂಬದಾಗಿ ತಲೆದೋರಿ ಮೋಹದಲ್ಲಿಯೇ ಒದ್ದಾಡಿಸುವುದು. ಈ ಭೋಗೇಚ್ಛೆಯ ಮೋಹವು ಪಾತ್ರಾಪಾತ್ರಾಗಳನ್ನರಿತು ಭೋಗ

ಪಡಲು ಶಕ್ತಿಯಿದ್ದವರಿಗೆ ಅಂಕುರಿಸಿದರೆ ತಾಪದೊಡಗೂಡಿ ಭೋಗದ ಕಾರ್ಯವನ್ನು ಅನುಭವಿಸುವಂತೆ ಮಾಡುವುದು. ಕಾರ್ಯಾನುಭವಕ್ಕೆ ಶಕ್ತಿಯಿಲ್ಲದಿದ್ದರೂ ಮೋಹದಿಂದುಂಟಾಗುವ ಚಪಲವು ಕೆಲವರಿಗೆ ಹೋಗುವುದಿಲ್ಲ. ಭೋಗಕ್ರಿಯಾಶಕ್ತಿಯಿಲ್ಲದ ಮುದುಕರೂ ಚಪಲಬದ್ಧರಾಗುವುದೇ ಇದಕ್ಕೆ ಸಾಕ್ಷಿ. ಯಾವುದಾದರೂ ರುಚಿಯಾದ ಪದಾರ್ಥ ದೊರೆತರೆ ಮಿತಿಮೀರಿ ತಿನ್ನುವುದೂ ಆ ಪದಾರ್ಥಗಳಲ್ಲಿನ ಮೋಹದಿಂದಲೇ !

ರೋಗದಿಂದ ಮಲಗಿ ನರಳುತ್ತಿದ್ದರೂ, ಭೋಗ್ಯಪದಾರ್ಥಗಳಲ್ಲಿನ ಆಶೆಬಿಡುವುದಿಲ್ಲ. ಭೋಗ್ಯಪದಾರ್ಥಗಳಲ್ಲಿನ ಮೋಹಪಾಶಬದ್ಧರಾಗಿ ದೇಹಧಾರಣೆಗೆ ಬೇಕಾಗಿಲ್ಲದಿದ್ದರೂ, ಮಿತಿಮೀರಿ ತಿಂದು ರೋಗಾದಿಗಳನ್ನು ತಂದುಕೊಳ್ಳುವರು. ಪ್ರಪಂಚವೆಲ್ಲಾ ಈ ಭೋಗಶಕ್ತಿಯ ಮೋಹಪಾಶದಿಂದಲೇ ವೃದ್ಧಿಯನ್ನೈದುತ್ತಿರುವುದು. ಪತಂಜಲಿಮಹರ್ಷಿಗಳು ಯೋಗಸೂತ್ರದಲ್ಲಿ "ಸುಖಾನುಶಯೀ ರಾಗಃ" ಅಂದರೆ ವಿಷಯಗಳಲ್ಲಿ ಆಶೆಯುಂಟಾಗುತ್ತಿರುವುದೇ ಕ್ಲೇಶವೆಂದರೆ ದುಃಖವೆಂದು ಹೇಳಿರುವರು. ವಿಷಯವು ಸುಖವನ್ನುಂಟುಮಾಡುವುದೆಂದು ಹಿಂಬಾಲಿಸಿಕೊಂಡು ಹೋಗುವವರು ಪತಂಗದ ಹುಳುವು ಬೆಂಕಿಯಲ್ಲಿ ಬೀಳುವಂತೆ, ಖಂಡಿತವಾಗಿಯೂ ಜನನ ಮರಣಪ್ರವಾಹದಲ್ಲಿ ಬಿದ್ದು ಒದ್ದಾಡುವರು. ಪ್ರಪಂಚದ ಸಕಲ ಪ್ರಾಣಿಗಳ ವ್ಯಾಪಾರವೂ ಭೋಗಶಕ್ತಿಯ ತೃಪ್ತಿಗೋಸ್ಕರವೇ ಆಗಿರುವುದು. ಆದುದರಿಂದ ಭೋಗಶಕ್ತಿಯಲ್ಲಿನ ಮೋಹವು ವಾಸ್ತವವಾಗಿಯೂ ನಾಗಸರ್ಪದ ವಿಷದಂತೆಯೇ ಇರುವುದು. ಈ ತಾತ್ಪರ್ಯಕ್ಕೆ ಮಹೋಪನಿಷತ್ತಿನಲ್ಲಿ,

ವಿಷಂ ವಿಷಯವೈಷಮ್ಯಂ ನವಿಷಂ ವಿಷಮುಚ್ಯತೇ |

ತಾ|| ಭೋಗ್ಯಸಂಪರ್ಕವು ವಿಷವೇ ಹೊರತು ವಿಷವೆಂದು ಜನರು ಕರೆಯುವುದು ವಿಷವಲ್ಲ. ಎಂದು ಹೇಳಿದೆ.

ಪ್ರಪಂಚದಲ್ಲಿ ಪ್ರತಿಯೊಬ್ಬರೂ, ಅವರ ಯೋಗ್ಯತೆಯಿದ್ದಂತೆ ಈ ಭೋಗಶಕ್ತಿಯ ಮೋಹಪಾಶಕ್ಕೆ ಒಳಗಾಗಿರುವರೇ ಹೊರತು, ಈ ಭೋಗಶಕ್ತಿಯ ಮೋಹದಿಂದ ಬಿಡುಗಡೆಯಾದ ಮಹಾತ್ಮರು ಯಾರಿರುವರೋ ತಿಳಿಯದು. ಆದುದರಿಂದಲೇ ಶ್ರೀಶಂಕರಭಗವತ್ಪಾದರವರು,

ಅಂಗಂಗಳಿತಂ ಫಲಿತಂಮುಣ್ಡಂ ದಶನವಿಹೀನಂ ಜಾತಂತುಣ್ಡಮ್ |
ವೃದ್ಧೋಯಾತಿ ಗೃಹೀತ್ವಾದಣ್ಡಂ ತದಪಿ ನಮುಂಚತ್ಯಾಶಾ ಪಿಣ್ಡಮ್||

ತಾ|| ದೇಹವು ಶಿಥಿಲವಾದರೂ, ತಲೆ ನರೆತರೂ, ಹಲ್ಲುಗಳು ಉದುರಿಹೋದರೂ, ಮುದುಕನು ಕೋಲೂರಿಕೊಂಡು ಅಲೆದರೂ, ದೃಢವಾದ ಆಶೆಯು ಮಾತ್ರ ಬಿಟ್ಟು ಹೋಗುವುದಿಲ್ಲ. ಎಂದು ಹೇಳಿರುವರು.

ಭೋಗಶಕ್ತಿಯು ಇಷ್ಟು ಅದ್ಭುತವಾದುದರಿಂದಲೇ ಬುದ್ಧಿಮನಸ್ತತ್ತ್ವದವರಾದ ಶ್ರೀರಾಮಲಕ್ಷ್ಮಣರು ಇಂದ್ರಜಿತ್ತಿನ ಆಕ್ರಮಣಕ್ಕೆ ಒಳಗಾಗಿ ಮೂರ್ಛೆಹೊಂದಿ ಮೃತರಂತಾದರು. ಇಂತಹ ಭೋಗಶಕ್ತಿಯ ಮೋಹಪಾಶದಿಂದ ಶ್ರೀರಾಮಲಕ್ಷ್ಮಣರ ತತ್ವದಲ್ಲಿರುವ ಬುದ್ಧಿಮನಸ್ಸಿನ ತತ್ವಗಳಿಗೆ ಬಂದಿರುವ ಸ್ವರೂಪವು ಅವಿದ್ಯೆಯಿಂದ ಉಂಟಾಗಿರುತ್ತೆಂಬುದಕ್ಕೆ ಕಠೋಪನಿಷತ್ತಿನಲ್ಲಿ,

ಪರಾಚಃಕಾಮಾ ನನುಯಂತಿಬಾಲಾಃ
ತೇಮೃತ್ಯೋರ್ಯನ್ತಿ ವಿತತಸ್ಯ ಪಾಶಂ ||

ತಾ|| ಅವಿದ್ಯೆಯಿಂದ ತೋರಿಬರತಕ್ಕ, ಎದುರಿಗೆ ಇರುವ ಮತ್ತು ಮರೆಯಾಗಿರುವ ಭೋಗಗಳಲ್ಲಿನ ಆಶೆಯಿಂದ ಕಟ್ಟುಬಿದ್ದ ಮೂಢರು ಅವಿದ್ಯೆಯೆಂಬ ಮೃತ್ಯುವಿನ ಪಾಶದಿಂದ ಬಂಧಿಸಲ್ಪಟ್ಟು, ಜನನ, ಮರಣ, ಜರಾ, ರೋಗ, ಮುಂತಾದ ದುಃಖಪರಂಪರೆಗಳನ್ನು ಅನುಭವಿಸುವರು, ಎಂದು ಹೇಳಿರುವುದು.

ಇಂದ್ರಜಿತ್ತು ಅವಿದ್ಯೆಯಲ್ಲಿನ ಈ ವಿಧವಾದ ಪ್ರಧಾನಶಕ್ತಿಯಾದುದರಿಂದಲೇ ದೇವತೆಗಳನ್ನೆಲ್ಲಾ ಜಯಿಸಿದನು. ಅಂದರೆ ನಮ್ಮಲ್ಲಿರುವ ದೇವತ್ವವನ್ನು ಧ್ವಂಸಮಾಡುವುದರಲ್ಲಿ ಭೋಗಶಕ್ತಿಯು ಅವಿದ್ಯೆಯ ಯುವರಾಜನಂತೆ ಪ್ರಧಾನವಾಗಿರುವುದು. ಶ್ರೀರಾಮನು ಎಷ್ಟು ಹುಡುಕಿದರೂ ಇಂದ್ರಜಿತ್ತು ಯುದ್ಧಕಾಲದಲ್ಲಿ ಗೋಚರನಾಗಲಿಲ್ಲವೇದರೆ ಈ ಮೋಹಪಾಶವು ಎಲ್ಲಿಂದ ಹೇಗೆ ಆವೇಶವಾಗಿ ಬಂದು ಪ್ರಾಣಿಗಳನ್ನು ಬಾಧಿಸುವುದೋ ಹೇಳಲು ಯಾರಿಗೂ ಸಾಧ್ಯವಿಲ್ಲವೆಂಬ ತತ್ವಾರ್ಥವಾಗಿರುವುದು. ಈ ಭೋಗಶಕ್ತಿಯ ಮೋಹಸ್ವರೂಪವು ಅಂಧಕಾರದಂತೆ ಬುದ್ಧಿಮನಸ್ಸುಗಳನ್ನು ಮಂಕಿನಿಂದ ಮುಸುಕುವುದರಿಂದ ಇಂದ್ರಜಿತ್ತಿನ ಪ್ರಥಮಯುದ್ಧವು ರಾತ್ರಿಯಲ್ಲಿ ನಡೆದ ಯುದ್ಧವೆಂದು ಪ್ರಸಿದ್ಧಿಯಾಗಿರುವುದು.

ಪ್ರಪಂಚದ ನಡೆವಳಿಕೆಯಲ್ಲಿ ಈ ಭೋಗಶಕ್ತಿಯ ಮೋಹವ್ಯಾಪ್ತವಾದರೆ ಮೇಲೆ ತಿಳಿಸಿರುವಂತೆ ನಡೆಯುತ್ತದೆ. ಸಮಾಧಿಯ ಅನುಷ್ಠಾನಕಾಲದಲ್ಲಿ ಈ ಭೋಗಶಕ್ತಿಯಲ್ಲಿನ ಮೋಹದಿಂದುಂಟಾಗುವ ತೊಂದರೆಯೇನೆಂದರೆ—ಸಮಾಧಿಯ ಅಭ್ಯಾಸಕಾಲದಲ್ಲಿ ಬುದ್ಧಿಮನಸ್ಸಿನ ವೃತ್ತಿಗಳು ವಾಯುಗಳೊಡನೆ ಧ್ಯೇಯಸ್ವರೂಪವಾದ ಬಿಂದುವನ್ನು ಧಾರಣೆಮಾಡಿಕೊಂಡು ಅದನ್ನು ಬಿಡದಂತೆ ನಿಲ್ಲಿಸುವ ಅಭ್ಯಾಸಮಾಡುತ್ತಿರುವಾಗ ಪ್ರಬಲವಾದ ಭೋಗಶಕ್ತಿಯು ತನ್ನ ಮೋಹಪಾಶವನ್ನು ಬೀರುವುದು. ಆಗ ಬಿಂದುರೂಪವು ಶಿಥಿಲವಾಗಿ ಬುದ್ಧಿಮನಸ್ಸಿನ ವೃತ್ತಿಗಳು ಬಿಂದುಸ್ವರೂಪವನ್ನು ಬಿಟ್ಟು ಅಂತರ್ಮುಖದಲ್ಲಿರುವ ತೇಜಸ್ಸಿನಲ್ಲಿಯೇ ವಿಷಯಪದಾರ್ಥದ ಭಾವನೆಯನ್ನು ಧ್ಯೇಯಸ್ವರೂಪವಾಗಿ ಧಾರಣೆಮಾಡಿಕೊಂಡು ಇರಬೇಕಾಗುವುದು.

ಸಮಾಧಿಯ ಅಭ್ಯಾಸಮಾಡತಕ್ಕವರಿಗೆ ಭೋಗಶಕ್ತಿಯ ಉಲ್ಬಣದಿಂದ ಯಾವುದಾದರೂ ವಿಷಯಚಿಂತನೆಯು ತಲೆದೋರಿದರೆ ಬಿಂದುವಿನ ಆಕಾರ ಹೋಗಿ, ಅಂತರ್ಮುಖದ ತೇಜಸ್ಸಿನಲ್ಲಿಯೇ ಬುದ್ಧಿಮನಸ್ಸಿನ ವೃತ್ತಿಗಳು ವಿಷಯಾಕಾರವಾಗಿ ಕೊನೆಗೆ ಬಹಿರ್ಮುಖವಾಗಲೇ ಬೇಕಾಗುವುದು. ಹೀಗೆ ಬಹಿರ್ಮುಖವಾದನಂತರ ಕೊಂಚಕಾಲವಿದ್ದು ಈ ವಿಷಯವೃತ್ತಿಯ ವೇಗವನ್ನು ವಿರಕ್ತಿಯಿಂದಲೂ, ಬ್ರಹ್ಮಭಾವನೆಯಿಂದಲೂ ತಗ್ಗಿಸಿಕೊಂಡು ಪುನಃ ಸಮಾಧಿಯ ಅಭ್ಯಾಸಕ್ಕೆ ಕುಳಿತುಕೊಳ್ಳಬೇಕಾಗುವುದು. ಸಮಾಧಿಯ ಅನುಷ್ಠಾನಕ್ಕೆ ಕುಳಿತುಕೊಳ್ಳುವ ಕಾಲದಲ್ಲಿ ವಿಷಯವಾಸನೆಗಳ ಉಲ್ಬಣವಿದ್ದರೆ ಸಮಾಧಿಯ ಅನುಷ್ಠಾನಕ್ಕೆ ಅರ್ಹತೆಯು ಖಂಡಿತ ಉಂಟಾಗುವುದಿಲ್ಲ. ಲಕ್ಷ್ಮಣನ ತತ್ವದಂತೆ ತೀವ್ರ ವೈರಾಗ್ಯದಿಂದ ಸಮಾಧಿಯ ಅಭ್ಯಾಸಮಾಡುತ್ತಿದ್ದರೂ, ಅವಿದ್ಯಾಶಕ್ತಿಗಳು ಅಂತರ್ಮುಖದ ಮಾರ್ಗದಲ್ಲಿ ಬಿಡದೆ ಬಹಿರ್ಮುಖಕ್ಕೇ ಎಳೆಯುತ್ತಿರುತ್ತವೆ. ಆದುದರಿಂದ ಸಮಾಧಿಯ ಪ್ರಥಮಾಭ್ಯಾಸದಲ್ಲಿ ಬಿಂದುಸ್ವರೂಪವು ಶಿಥಿಲವಾಗುವುದಲ್ಲದೆ, ಬುದ್ಧಿಮನಸ್ಸಿನ ವೃತ್ತಿಗಳು ಕೂಡ ಬಳಲುವುವು. ವಿಷಯವೃತ್ತಿಯು ಪ್ರಬಲವಾಗಿದ್ದರೆ ಹೇಳಬೇಕಾದುದೇ ಇಲ್ಲ. ಈ ಮೇಲಿನ ತತ್ವಾರ್ಥಗಳೇ ಶ್ರೀರಾಮಲಕ್ಷ್ಮಣರು ಇಂದ್ರಜಿತ್ತಿನ ನಾಗಪಾಶದಿಂದ ಮೂರ್ಛಿತರಾಗಿದ್ದುದು.

**ರಾ||** ಶ್ರೀರಾಮ ಲಕ್ಷ್ಮಣರು ಮೂರ್ಛಿತರಾಗಿ ಬಿದ್ದಿರಲು ಸುಗ್ರೀವಾದಿ ವಾನರರು ಶ್ರೀರಾಮ ಲಕ್ಷ್ಮಣರ ಸುತ್ತಲೂ ನಿಂತು ರೋದನಮಾಡುತ್ತಿದ್ದರು, ಅತಿ ದೈನ್ಯದಿಂದ ದುಃಖಿಸುತ್ತ ನಿಂತಿದ್ದ ಸುಗ್ರೀವನನ್ನು ವಿಭೀಷಣನು ನೋಡಿ ಶ್ರೀರಾಮನ ಮುಖದ ಕಳೆಯು ಸ್ವಲ್ಪವೂ ಕುಂದಿಲ್ಲ. ಮೃತರಾದವರ ಮುಖದಲ್ಲಿ ಎಂದಿಗೂ ಈ ವಿಧವಾದ ಕಳೆಯು ಇರದು. ನೀನು ಧೈರ್ಯವನ್ನು ತಂದುಕೊ ಎಂದು ಸಮಾಧಾನಮಾಡುತ್ತಿದ್ದನು. ಅಲ್ಲದೆ ಇಂದ್ರಜಿತ್ತಿನ ಭಯದಿಂದ ಓಡಿಹೋಗುತ್ತಿದ್ದ ವಾನರರಿಗೆ ಧೈರ್ಯಹೇಳಿ ನಿಲ್ಲಿಸುತ್ತಿದ್ದನು.

**ತತ್ವ||** ಬುದ್ಧಿಮನಸ್ಸಿನ ವೃತ್ತಿಗಳು ಸಮಾಧಿಯ ಅಭ್ಯಾಸದಲ್ಲಿ ತೇಜೋಬಿಂದುವಿನ ಧಾರಣೆಯನ್ನು ಬಿಟ್ಟು ವಿಷಯಾಕಾರವಾದರೆ ಬಹಿರ್ಮುಖವಾಗುವ ಸಂದರ್ಭವುಂಟಾಗುತ್ತಷ್ಟೆ! ಇಂತಹ ಸಂದರ್ಭ ಒದಗಿದಾಗ ಇಂದ್ರಜಿತ್ತಿನ ಭಯದಿಂದ ವಾನರರು ಚದುರಿ ಓಡಿಹೋಗುತ್ತಿದ್ದಂತೆ ದೇಹದಲ್ಲಿರುವ ವಾಯುಗಳೆಲ್ಲ ಬಿಂದುಧಾರಣೆಯು ಸ್ವರೂಪದಿಂದ ಚದುರಿಹೋಗುತ್ತವೆ. ಅಲ್ಲದೆ ಪ್ರಾಣವಾಯುವು ಕೂಡ ಬಿಂದುಧಾರಣೆಯನ್ನು ಬಿಡುವ ಸಂಭವವೇ ಸುಗ್ರೀವನು ಕೂಡ ರೋದನಮಾಡುತ್ತಿದ್ದ ತತ್ವವಾಗಿರುವುದು. ವಿಭೀಷಣನು ಸುಗ್ರೀವನಿಗೆ ಸಮಾಧಾನಹೇಳುತ್ತ ಚದುರಿಹೋಗುತ್ತಿದ್ದ ವಾನರರಿಗೆ ಧೈರ್ಯಹೇಳುತ್ತಿದ್ದನೆಂದರೆ—ವಿಭೀಷಣನು ಧರ್ಮಮಾರ್ಗ ಅಥವಾ ಪುಣ್ಯದ ತತ್ವದವನೆಂದು ತಿಳಿಸಿರುತ್ತಷ್ಟೆ!

ಧರ್ಮ ಅಥವಾ ಪುಣ್ಯಸ್ವರೂಪವೆಂದರೆ ಅಧಿಕಾರಿಯು ಪ್ರಪಂಚದ ನಡೆವಳಿಕೆ ಮತ್ತು ವೇದಾಂತಶ್ರವಣ ಮನನಗಳಿಂದ ಗ್ರಾಹ್ಯಮಾಡಿಕೊಂಡು ಶೇಖರಿಸಿಕೊಂಡಿರುವ ದೈವೀ ಸಂಪತ್ತಿನ ಸ್ವರೂಪವಾದ ಪುಣ್ಯವು ಸಮಾಧಿಯ ಅನುಷ್ಠಾನದಲ್ಲಿ ಬಂದು ಶಿಥಿಲವಾಗುವ ಕಾಲದಲ್ಲಿ ತಕ್ಕಮಟ್ಟಿಗೆ ಸಹಾಯಕರವಾಗಿರುವುದೆಂಬುದೇ ವಿಭೀಷಣನು ಸುಗ್ರೀವ ಮತ್ತು ವಾನರರಿಗೆ ಧೈರ್ಯಹೇಳಿರುವುದರ ತತ್ವವಾಗಿರುವುದು. ಅಂದರೆ ಬ್ರಹ್ಮನಿಷ್ಠೆಗೆ ಅನುಕೂಲ ವಾಗಿರುವಂತೆ ಗಳಿಸಿರುವ ವಿವೇಕಸ್ವರೂಪವಾದ ಪುಣ್ಯವು ಈ ವಿಷಯಬಂಧನಕ್ಕೆ ವ್ಯತಿರಿಕ್ತ ವಾಗಿ ಸಮಾಧಿಯ ಅನುಷ್ಠಾನಕ್ಕೆ ಸಹಾಯಮಾಡುವುದು. ಅವಿವೇಕವೇ ಆಸುರೀ ಸಂಪತ್ತು, ವಿವೇಕವೇ ದೈವೀಸಂಪತ್ತು.

ಸಮಾಧಿಯ ಅನುಷ್ಠಾನಕಾಲದಲ್ಲಾಗುವಂತೆ ಬಹಿರ್ಮುಖವಾಗಿದ್ದ ಕಾಲದಲ್ಲಿಯೂ, ಈ ಭೋಗಶಕ್ತಿಯ ಮೋಹಪಾಶವು ಪ್ರಾಣಿಗಳಲ್ಲಿ ಅಂಕುರಿಸಿದರೆ, ಬುದ್ಧಿಮನಸ್ಸಿನ ವೃತ್ತಿಗಳನ್ನು ಮಂಕುಮಾಡಿ ಮೋಹಪಾಶದಿಂದ ಬಂಧಿಸುವುದಲ್ಲದೆ, ಪ್ರಾಣವಾಯುವನ್ನು ದೀನತ್ವಕ್ಕೆ ಗುರಿಮಾಡುವುದೇ ಸುಗ್ರೀವಾದಿಗಳು ರೋದನಮಾಡುತ್ತಿದ್ದುದಾಗಿರುವುದು. ಅವಿವೇಕಿಗಳು ಭೋಗಶಕ್ತಿಯ ಮೋಹಪಾಶವನ್ನು ಅನುಭವಿಸುವಂತೆ ವಿವೇಕಿಗಳು ಅನು ಭವಿಸುವುದಿಲ್ಲವೆಂಬ ತತ್ವವೇ ವಿಭೀಷಣನ ಸಮಾಧಾನದ ತಾತ್ಪರ್ಯವಾಗಿರುವುದು.

ಈ ಪ್ರಕರಣದ ಪ್ರಥಮದಾರಭ್ಯ ತಿಳಿಸಿರುವ ತತ್ವಗಳೇ ಇಂದ್ರಜಿತ್ತಿನ ಪ್ರಥಮ ಯುದ್ಧದಲ್ಲಿ ಶ್ರೀರಾಮಲಕ್ಷ್ಮಣರು ನಾಗಪಾಶದಿಂದ ಮೂರ್ಛಿತರಾಗಿ ಮಲಗಿದ್ದಾಗಿರು ವುದು. ಈ ಯುದ್ಧದ ಮಹತ್ತಿನಿಂದ ನಡೆದಿರುವ ಮುಂದಿನ ರಾಮಾಯಣಕಥೆಯನ್ನು ತಿಳಿದುಕೊಳ್ಳಲು ಮುಂದುವರಿಯೋಣ.

## ೧೩ನೆಯ ಪ್ರಕರಣ.

ಶ್ರೀರಾಮ ಲಕ್ಷ್ಮಣರು ನಾಗಪಾಶ ದಿಂದ ಬಂಧಿಸಲ್ಪಟ್ಟಿರಲು ಸೀತಾ ದೇವಿಯನ್ನು ತನ್ನವಳನ್ನಾಗಿ ಮಾಡಿಕೊಳ್ಳಲು ರಾವಣನ ಪ್ರಯತ್ನ ಮತ್ತು ತ್ರಿಜಟೆಯ ಸಮಾಧಾನ.

ಜನಗಳು ಭೋಗಶಕ್ತಿಯ ಮೋಹ ಪಾಶದಿಂದ ಬಂಧಿಸಲ್ಪಟ್ಟ ಕಾಲ ದಲ್ಲಿ ಪ್ರಪಂಚವೇ ಸತ್ಯವೆಂದು ತಿಳಿದಿರುವುದು ತಪ್ಪೆಂಬ ಮತ್ತು ತ್ರಿಕಾಲದಲ್ಲಿಯೂ ಆತ್ಮನೊಬ್ಬನೇ ಸತ್ಯನೆಂಬ ವಿಚಾರ.

**ರಾ||** ಈ ರೀತಿಯಾಗಿ ಶ್ರೀರಾಮ ಲಕ್ಷ್ಮಣರು ಇಂದ್ರಜಿತ್ತಿನ ನಾಗಪಾಶದಿಂದ ಬಂಧಿಸಲ್ಪಟ್ಟದ್ದಾಗ ರಾವಣನು ಸೀತೆಯನ್ನು ತನ್ನವಳನ್ನಾಗಿ ಮಾಡಿಕೊಳ್ಳುವುದಕ್ಕೆ ಇದೇ

ಸಮಯವೆಂದು ಯೋಚಿಸಿ, ಸೀತೆಯನ್ನು ಕರೆದುಕೊಂಡು ಹೋಗಿ ರಾಮಲಕ್ಷ್ಮಣರ ಅವಸ್ಥೆಯನ್ನು ತೋರಿಸುವಂತೆ ಆಜ್ಞೆಮಾಡಿದನು. ರಾಕ್ಷಸಸ್ತ್ರೀಯರು ಸೀತೆಯನ್ನು ಕರೆದುಕೊಂಡು ಹೋಗಿ ರಾಮಲಕ್ಷ್ಮಣರನ್ನು ತೋರಿಸಿದರು. ಸೀತಾದೇವಿಯು ರಾಮ ಲಕ್ಷ್ಮಣರ ಅವಸ್ಥೆಯನ್ನು ನೋಡಿ ದುಃಖಾಕ್ರಾಂತಳಾಗಿ ತನಗೆ ವೈಧವ್ಯವಿಲ್ಲವೆಂದು ಮಹ ನೀಯರು ಹೇಳಿದ ವಾಕ್ಯಗಳನ್ನು ಸ್ಮರಿಸಿಕೊಂಡು ದುಃಖಪಡುತ್ತಿರುವಲ್ಲಿ, ವಿಭೀಷಣನ ಮಗಳಾದ ತ್ರಿಜಟೆಯು ರಾಮಲಕ್ಷ್ಮಣರಿಗೆ ಮರಣಚಿಹ್ನೆಗಳಿಲ್ಲವೆಂದೂ, ಅವರು ಸಾಯು ವುದಿಲ್ಲವೆಂದೂ ಹೇಳಿ, ಸೀತೆಯನ್ನು ಸಮಾಧಾನಪಡಿಸಿ ಹಿಂತಿರುಗಿ ಅಶೋಕವನಕ್ಕೆ ಕರೆದುಕೊಂಡು ಹೋಗಿ ಬಿಟ್ಟಳು.

**ತತ್ವ||** ಭೋಗಶಕ್ತಿಯ ಮೋಹಪಾಶವು ಬುದ್ಧಿಮನಸ್ಸಿನ ವೃತ್ತಿಗಳನ್ನು ವಿಷಯಾ ಕಾರವಾಗಿ ಮಾಡಿದ್ದರೂ, ಅಥವಾ ಭೋಗಶಕ್ತಿಯ ಎಳೆತದಿಂದ ಬುದ್ಧಿಮನಸ್ಸಿನ ವೃತ್ತಿಗಳು ಬಳಲಿದ್ದರೂ, ಸಮಾಧಿಯ ಅನುಷ್ಠಾನವೇ ಪ್ರಯೋಜನವಿಲ್ಲವೆಂದು ತಿಳಿದುಕೊಳ್ಳ ಬಾರದು. ಅಲ್ಲದೆ ಅವಿದ್ಯೆಯ ಸೆಳೆತದಿಂದ ಬುದ್ಧಿಮನಸ್ಸಿನ ವೃತ್ತಿಗಳು ಕೊಂಚಕಾಲ ಬಳಲಿದ್ದರೂ, ಮತ್ತು ವಿಷಯಾಕಾರವಾಗಿದ್ದರೂ, ಸೀತಾದೇವಿಗೆ ಹೇಗೆ ವೈಧವ್ಯವಿಲ್ಲವೋ ಹಾಗೆ ಜೀವತ್ವದಿಂದ ಆತ್ಮಸಾಕ್ಷಾತ್ಕಾರವಾಗುವ ಮತ್ತು ಇದನ್ನು ಹೊಂದುವ ಮಾರ್ಗ ವಾದ ಮೋಕ್ಷಮಾರ್ಗವು ಇಲ್ಲವೆಂದೂ, ವಿಷಯರೂಪವಾದ ಪ್ರಪಂಚವ್ಯಾಪಾರವೇ ನಿಶ್ಚಯವೆಂದೂ ತಿಳಿಯಬಾರದು. ಇದನ್ನೇ ಅನುಭವಶಾಲಿಗಳಾದ ಮಹಾತ್ಮರು ಹೇಳು ವರೆಂಬ ತತ್ವಾರ್ಥದ ಸೂಚನೆಯೇ ತ್ರಿಜಟೆಯು ಸೀತಾದೇವಿಗೆ ಸಮಾಧಾನ ಹೇಳಿದ ತತ್ವವಾಗಿರುವುದು.

ಶ್ರೀರಾಮ ಲಕ್ಷ್ಮಣರು ಮೃತರಾಗುವರೋ ಎಂಬ ಶಂಕೆಯಿಂದ ಸೀತಾದೇವಿಯು ತನಗೆ ವೈಧವ್ಯವಿಲ್ಲವೆಂದು ಮಹನೀಯರು ಹೇಳಿದ್ದುದನ್ನು ನೆನೆದು ದುಃಖಪಟ್ಟಳೆಂದರೆ — ಸೀತಾದೇವಿಯು ಸಾಕ್ಷಾತ್ಪರಮಾತ್ಮಶಕ್ತಿ ಎಂದರೆ ಚಿಚ್ಛಕ್ತಿ. ಪ್ರಪಂಚದ ಇರುವಿಕೆಯು ನಡೆಯಲು ಪ್ರಕೃತಿ ಅಥವಾ ಶುದ್ಧಸತ್ವಪ್ರಧಾನಮಾಯೆಯೆನಿಸಿಕೊಂಡಿರುವಳು. ತಮಃ ಪ್ರಧಾನಪ್ರಕೃತಿ ಅಥವಾ ವಿಕೃತಿಗೆ ಇದ್ದಂತೆ ಪರಿಣಾಮಭೇದಗಳು ಶುದ್ಧಸತ್ವಪ್ರಧಾನ ಮಾಯೆಗೆ ಇರುವುದಿಲ್ಲ. ಶುದ್ಧಸತ್ವಪ್ರಧಾನಮಾಯೆಯು ಗುಣಸಾಮ್ಯಾವಸ್ಥೆಯನ್ನು ಮಾಡಿಕೊಂಡು ಆತ್ಮಸ್ವರೂಪವಾಗುವುದು. ಇಂದ್ರಜಿತ್ತಿನ ನಾಗಪಾಶದಿಂದ ಬುದ್ಧಿ ಮನಸ್ಸಿನ ವೃತ್ತಿಗಳು ಯಾವಾಗಲೂ ಬಂಧಿಸಿದ್ದುದನ್ನೇ ಜೀವಾತ್ಮನು ಪ್ರಕಾಶಪಡಿಸು ತ್ತಿದ್ದರೆ ಈಶ್ವರಸೋಪಾನವೇ ಇಲ್ಲದಂತಾಗಬಹುದೆಂಬ ಶಂಕೆಯ ತತ್ವವೇ ಸೀತಾದೇವಿಯು ದುಃಖಪಡುತ್ತಿದ್ದುದಾಗಿದೆ.

ತ್ರಿಜಟೆಯು ಸಮಾಧಾನಮಾಡುವ ತತ್ವವೇನೆಂದರೆ—ತ್ರಿಜಟೆಯು ವಿಭೀಷಣನ ಮಗಳು. ವಿಭೀಷಣನು ಧರ್ಮಮಾರ್ಗ ಅಥವಾ ವಿವೇಕದ ತತ್ವದವನು. ಮೋಕ್ಷಕ್ಕೆ ಅನುಸಾರವಾದ ತಿಳಿವಳಿಕೆ ಮತ್ತು ಕಾರ್ಯಪ್ರವರ್ತನೆಗೆ ಧರ್ಮಮಾರ್ಗದ ಸ್ವರೂಪವೆಂದು ಹಿಂದಿನಿಂದಲೂ ತಿಳಿಸಿರುವುದಷ್ಟೆ! ಮೋಕ್ಷಕ್ಕೆ ಅನುಸಾರವಾದ ಧರ್ಮ ಅಥವಾ ವಿವೇಕದಿಂದ ಉತ್ಪನ್ನವಾಗುವುದೇನೆಂದರೆ, ತ್ರಿಕಾಲದಲ್ಲಿಯೂ ಆತ್ಮನೇ ಸತ್ಯನೆಂಬ ಆತ್ಮತತ್ವಜ್ಞಾನವು, ಮತ್ತು ಪ್ರಪಂಚವೆಲ್ಲಾ ಮೂರುಗುಣಗಳ ಕಾರ್ಯವೆಂಬ ವಸ್ತುತತ್ವಜ್ಞಾನವು. ಈ ತತ್ವಕ್ಕನುಸಾರವಾಗಿ ತ್ರಿಜಟೆಯು ವಿಭೀಷಣನಿಗೆ ಮಗಳಾಗಿರುವಳು. ಆದುದರಿಂದ ತ್ರಿಕಾಲಜ್ಞಾನವನ್ನು ತಿಳಿದಿರುವ ಅಥವಾ ತ್ರಿಗುಣಾತ್ಮಕವಾದ ಪ್ರಪಂಚದ ಯೋಗ್ಯತೆಯನ್ನು ತಿಳಿದುಕೊಂಡಿರುವ ಸ್ವರೂಪವೇ ತ್ರಿಜಟೆಯ ತತ್ವವಾಗಿರುವುದು. ಜಟೆಯೆಂದರೆ "ಜಟತಿ ಸಂಘೀಭವತೀತಿ ಜಟಾ" ಹೆಣೆದುಕೊಂಡು ಕೂಡಿಕೊಂಡಿರುವುದು ಎಂದರ್ಥ. ಅಲ್ಲದೆ "ಜಟಾಯೋಗಸಾಮ್ಯಾತ್ತಪಸ್ವಿನಿ" ತಪಸ್ವಿಗಳೇ ಜಟಾಧಾರಣೆಮಾಡಿಕೊಳ್ಳುವವರು. ಆದುದರಿಂದ ತ್ರಿಗುಣಾತ್ಮಕವಾದ ಪ್ರಪಂಚದ ಯೋಗ್ಯತೆಯನ್ನು ತಿಳಿದಿರುವ ತತ್ವದವಳೇ ತ್ರಿಜಟೆಯು.

ಪ್ರಪಂಚವ್ಯಾಪಾರದ ಜ್ಞಾನವು ವಿಜ್ಞಾನವೆನಿಸಿಕೊಳ್ಳುವುದು. ಈ ವಿಜ್ಞಾನವು ಕೇಶದಂತೆ ಅಸಂಖ್ಯಾತವಾಗಿರುವುದೆಂದೂ, ಇಂತಹ ಅಸಂಖ್ಯಾತವಾಗಿರುವ ತ್ರಿಗುಣಾತ್ಮಕವಾದ ವಿಜ್ಞಾನವನ್ನು ಒಂದಾಗಿರುವ ಪರಮಾತ್ಮನ ಜ್ಞಾನಕ್ಕೆ ಒಟ್ಟುಗೂಡಿಸಿಕೊಳ್ಳುವ ತಾತ್ಪರ್ಯದ ಸೂಚನೆಯೇ ಜಟಾಧಾರಣೆಮಾಡಿಕೊಳ್ಳುವುದರ ತತ್ವವಾಗಿರುವುದು. ಆದುದರಿಂದ ತ್ರಿಗುಣಾತ್ಮಕವಾದ ಪ್ರಪಂಚವ್ಯವಹಾರದ ವಾಸ್ತವ್ಯವನ್ನು ಅರಿತಿರುವ ಮತ್ತು ತ್ರಿಕಾಲದ ಸತ್ಯಾವನ್ನು ಅರಿತಿರುವ ತಿಳಿವಳಿಕೆಯ ತತ್ವದವಳೇ ತ್ರಿಜಟೆಯು.

**ರಾ||** ತ್ರಿಜಟೆಯು "ರಾಮಲಕ್ಷ್ಮಣರು ಮೂರ್ಛೆಬಿದ್ದಿರುವರೇ ಹೊರತು ಮರಣಚಿಹ್ನೆಗಳು ಕೊಂಚವಾದರೂ ಇಲ್ಲ. ರಾಮಲಕ್ಷ್ಮಣರಿಗೆ ಕೇಡೆಂದಿಗೂ ಆಗುವುದಿಲ್ಲ. ನನ್ನ ಮಾತನ್ನು ಸತ್ಯವೆಂದು ತಿಳಿದು ದುಃಖವನ್ನು ಪರಿಹರಿಸಿಕೊ" ಎಂಬದಾಗಿ ಸೀತೆಗೆ ಸಮಾಧಾನಹೇಳಿದಳು.

**ತತ್ವ||** ಭೋಗಶಕ್ತಿಯ ಮೋಹಪಾಶದಿಂದ, ಬುದ್ಧಿಮನಸ್ಸಿನ ವೃತ್ತಿಗಳು ಬಂಧಿಸಲ್ಪಟ್ಟ ಕಾಲದಲ್ಲಿ, ಜೀವನಿಗೆ ತನ್ನ ಸ್ವಾಭಾವಿಕವಾದ ಆತ್ಮಸ್ವರೂಪ ಹೋಗಿ, ವಿಷಯಮೋಹಪಾಶದಿಂದ ಕಟ್ಟಲ್ಪಟ್ಟಿರುವ ಬುದ್ಧಿಮನಸ್ಸಿನ ವೃತ್ತಿಗಳನ್ನು ಅನುವರ್ತಿಸುವುದೇ ಸ್ಥಿರವೆಂದು ತಿಳಿದುಕೊಳ್ಳಬಾರದೆಂಬುದೇ ಶ್ರೀರಾಮಲಕ್ಷ್ಮಣರಿಗೆ ಕೇಡೆಂದಿಗೂ ಆಗುವುದಿಲ್ಲವೆಂದು ತ್ರಿಜಟೆಯು ಹೇಳಿದುದರ ತತ್ವವಾಗಿರುವುದು. ಅಂದರೆ ಭೋಗಶಕ್ತಿಯ ಉಲ್ಬಣವು ತತ್ಕಾಲದಲ್ಲಿ ತೊಂದರೆಯನ್ನು ಮಾಡಬಲ್ಲುದೇ ಹೊರತು, ಮೋಕ್ಷಮಾರ್ಗ

ವನ್ನು ಬಂಧಿಸಿ, ವಿಷಯರೂಪವಾದ ಪ್ರಪಂಚದಲ್ಲಿಯೇ ಮುಳುಗಿಸಿಬಿಡಲಾರದು ಎಂದು ಅನುಭವಶಾಲಿಗಳಾದ ತಪಸ್ವಿಗಳು ತಿಳಿಸುವರು. ತ್ರಿಜಟೆಯು ವಿಭೀಷಣನ ಮಗಳಷ್ಟೆ! ಇದರಂತೆ ವಿಭೀಷಣನ ತತ್ವವಾದ ಧರ್ಮಮಾರ್ಗದಿಂದ ಉತ್ಪನ್ನವಾಗುವ ತಪಸ್ಸಿನ ಸ್ವರೂಪಗಳು ಯಾವುವೆಂದರೆ, ತೈತ್ತಿರೀಯೋಪನಿಷತ್ತಿನಲ್ಲಿ,

ಋತಂತಪ ಸ್ಸತ್ಯಂತಪ ಶ್ಶ್ರುತಂತಪ |
ಶ್ಶಾನ್ತಂ ತಪೋದಮಸ್ತಪ ಶ್ಶಮಸ್ತಪೋ |
ದಾನಂತಪೋ ಯಜ್ಞಂತಪೋ ಭೂರ್ಭುವಸ್ಸುವ |
ರ್ಬ್ರಹ್ಮೈತದುಪಾಸ್ಯೈತ ತ್ತಪಃ ||

ತಾ|| ಮನಸ್ಸಿನಲ್ಲಿ ಧರ್ಮವಿರುದ್ಧವಲ್ಲದ ವಿಷಯವನ್ನು ಯೋಚಿಸುವುದು, ಫಲಾಭಿಸಂಧಿ ಇಲ್ಲದೆ ಮಾಡುವ ಕರ್ಮವು ಸತ್ಯವಾಗಿ ನಡೆಯುವುದು, ವೇದಾಂತಶ್ರವಣ ಮಾಡುವುದು, ಶಮದಮಾದಿ ಗುಣಗಳಿಂದಿರುವುದು, ದಾನಮಾಡುವುದು, ದೇವತಾರಾಧನೆ, ಯಾಗಾದಿ ಕರ್ಮ, ದೇವತೋಪಾಸನೆಗಳನ್ನು ಮಾಡುವುದು, ಇವುಗಳೆಲ್ಲಾ ತಪಸ್ಸೆನಿಸುವುವು. ಅಲ್ಲದೆ ಸ್ವರ್ಗ, ಮರ್ತ್ಯ, ಪಾತಾಳಲೋಕಗಳೆಲ್ಲವೂ ಬ್ರಹ್ಮಸ್ವರೂಪವೆಂದು ಭಾವಿಸುವುದು. ಎಂದರೆ ಅಕಾರ, ಉಕಾರ, ಮಕಾರ ಸ್ವರೂಪವಾದ ಓಂಕಾರದಿಂದ ಸಮಾಧಿಯನ್ನು ಅಭ್ಯಾಸಮಾಡುವುದು ತಪಸ್ಸೆನಿಸುವುದು. ಎಂದು ಹೇಳಿರುವುದು.

ಇಂತಹ ತಪಸ್ಸಿನ ಸ್ವರೂಪದಲ್ಲಿರತಕ್ಕವರು ವಿಷಯರೂಪವಾದ ಪ್ರಪಂಚವು ಅಸತ್ಯವೆಂದೂ, ಪರಮಾತ್ಮನೇ ಸತ್ಯನೆಂದೂ ತಿಳಿದುಕೊಂಡು ಇರುವುದರಿಂದಲೇ ಇವರುಗಳಿಗೆ ತಪಸ್ವಿಗಳೆಂದು ಹೆಸರುಬಂದಿರುವುದು. ಆದುದರಿಂದ ವಿಷಯವ್ಯಾಪಾರದ ಮೋಹದಲ್ಲಿ ಮಗ್ನವಾಗಿರುವಾಗ, ಪ್ರಪಂಚವು ಸತ್ಯವೆಂದು ತಿಳಿದುಕೊಂಡಿರುವುದು ತಪ್ಪೆಂಬುದರ ಪ್ರತಿಪಾದನೆಯೇ ತ್ರಿಜಟೆಯು ಸೀತಾದೇವಿಗೆ ಸಮಾಧಾನಹೇಳಿದುದರ ತತ್ವವಾಗಿರುವುದು. ತ್ರಿಜಟೆಯೆಂದರೆ, ಆತ್ಮತತ್ವವನ್ನೂ ವಸ್ತುವೆಂದರೆ ಪ್ರಪಂಚದ ತತ್ವವನ್ನೂ, ಅರಿತ ಮಹಾನುಭಾವರ ತತ್ವವೆಂದು ಹೇಳಿರುವುದಷ್ಟೆ! ಇಂತಹ ಅನುಭವಶಾಲಿಗಳಾದ ಮಹಾತ್ಮರು ಎದುರಿಗೆ ಕಾಣುವ ವಿಷಯವ್ಯಾಪಾರಸ್ವರೂಪವಾದ ಪ್ರಪಂಚವು ಸತ್ಯವೆಂಬುದನ್ನು ಎಂದಿಗೂ ಒಪ್ಪುವುದಿಲ್ಲವೆಂದು ತಿಳಿಸುವ ತಾತ್ಪರ್ಯವೇ ತ್ರಿಜಟೆಯಿಂದ ಸೀತಾದೇವಿಗೆ ಉಂಟಾದ ಸಮಾಧಾನದ ತತ್ವವಾಗಿರುವುದು. ಈ ಮೇಲಿನ ತಾತ್ಪರ್ಯಕ್ಕೆ ಅನುಸಾರವಾಗಿ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೨೩೫ನೆಯ ಶ್ಲೋಕದಲ್ಲಿ,

ಸತ್ಯಂ ಯದಿಸ್ಯಾ ಜ್ಜಗದೇತದಾತ್ಮನಾ |
ನತತ್ವಹಾನಿ ರ್ನಿಗಮಾಪ್ರಮಾಣತಾ |
ಅಸತ್ಯವಾದಿತ್ವ ಮಪೀಶಿತುಸ್ಸ್ಯಾ |
ನ್ನೈತತ್ತ್ರಯಂ ಸಾಧುಹಿತಂ ಮಹಾತ್ಮನಾಂ ||

ತಾ|| ಈ ಜಗತ್ತು ಬ್ರಹ್ಮರೂಪದಿಂದಲೇ ಸತ್ಯವಾದ ಪಕ್ಷದಲ್ಲಿ, ತತ್ವಕ್ಕೆ ಹಾನಿಯೂ ವೇದಗಳಿಗೆ ಅಪ್ರಾಮಾಣ್ಯವೂ ಇಲ್ಲವು. ಈಶ್ವರನಿಗೆ ಅಸತ್ಯವಾದಿತ್ವದೋಷವೂ ಇಲ್ಲವು. ಈ ಮೂರು ಅಂಶಗಳು ಮಹಾತ್ಮರಿಗೆ ಬಹಳ ಹಿತವಾಗಿರುವುದು ಎಂದು ಹೇಳಿರುವುದು.

ಈ ಮೇಲಿನ ಶ್ಲೋಕದಲ್ಲಿ ಹೇಳಿರುವಂತೆ, ರಾವಣನು ತನ್ನ ಇಷ್ಟಾರ್ಥವನ್ನು ನೆರವೇರಿಸಿಕೊಳ್ಳಲು ಮೂರ್ಛಾಕ್ರಾಂತರಾಗಿರುವ ರಾಮಲಕ್ಷ್ಮಣರನ್ನು ಸೀತಾದೇವಿಗೆ ತೋರಿಸಿದನು. ರಾವಣನ ಇಷ್ಟಾರ್ಥ ನೆರವೇರುವುದೆಂದರೆ--ಪ್ರಪಂಚವೇ ಸತ್ಯವೆಂಬುದನ್ನು ದೃಢೀಕರಿಸುವ ತತ್ವಾರ್ಥವಾಗಿರುವುದು. ತ್ರಿಜಟೆಯ ಸಮಾಧಾನದಿಂದ ಸೀತಾದೇವಿಗೆ ದುಃಖನಿವೃತ್ತಿಯಾಯಿತೆಂದರೆ—ಅನುಭವಶಾಲಿಗಳಾದ ಮಹಾತ್ಮರ ಹಿತೋಪದೇಶಗಳಿಗೆ ಗಮನಕೊಟ್ಟರೆ ಪ್ರಪಂಚವ್ಯವಹಾರಸ್ವರೂಪವಾದ ದುಃಖ ನಿವೃತ್ತಿ ಮತ್ತು ಆತ್ಮಲಾಭಕರವಾದ ಶಾಶ್ವತಸುಖ ಪ್ರಾಪ್ತಿಯಾಗುವುದು. ರಾವಣನು ತಿಳಿದುಕೊಂಡಿದ್ದ ಶ್ರೀರಾಮಲಕ್ಷ್ಮಣರ ಮರಣವು ಸುಳ್ಳಾಯಿತು. ತ್ರಿಜಟೆಯು ಸತ್ಯವಾಗಿ ಹೇಳುತ್ತೇನೆಂದು ಹೇಳಿದ ಮಾತು ನಿಶ್ಚಯವಾಗಿ, ಶ್ರೀರಾಮಲಕ್ಷ್ಮಣರು ಬದುಕಿಕೊಂಡರಲ್ಲದೆ ಸೀತಾದೇವಿಯನ್ನೂ ಪಡೆದರು. ಆದುದರಿಂದ ಮೇಲೆ ಶ್ರೀಶಂಕರಭಗವತ್ಪಾದರವರು ಹೇಳಿರುವಂತೆ ಮಹಾನುಭಾವರು ಹೇಳುವ ವಿಷಯವ್ಯಾಪಾರಸ್ವರೂಪವಾದ ಪ್ರಪಂಚದ ಅಸತ್ಯತೆ ಮತ್ತು ಆತ್ಮಸತ್ಯತ್ವದ ವಾಕ್ಯನ್ನು ನಾವು ನಂಬಿದರೆ, ನಿಶ್ಚಯವಾಗಿಯೂ ಉದ್ಧಾರವಾಗುವೆವು.

ಆದುದರಿಂದ ಪ್ರಪಂಚದ ವಿಷಯುಗಳಲ್ಲಿ ಮಗ್ನರಾಗಿರುವವರಲ್ಲಿ ಕೂಡ, ಮೋಕ್ಷಮಾರ್ಗವೇ ಸ್ತಂಭಿಸಿಬಿಟ್ಟಿರುವುದೆಂದು ತಿಳಿಯಬಾರದು. ಅಂತಹವರೂ ಮೋಕ್ಷೇಚ್ಛೆಯನ್ನು ಹೊಂದಿ ವಿಷಯಚಿಂತನೆಯನ್ನು ಬಿಟ್ಟು ವಿರಕ್ತಿಯಿಂದ ಸರಿಯಾದ ಅನುಷ್ಠಾನ ಮಾಡಿದರೆ, ಧಾರಾಳವಾಗಿ ಆತ್ಮಸಾಕ್ಷಾತ್ಕಾರವನ್ನು ಪಡೆಯಬಹುದು. ಇದೇ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೩೩೬ನೆಯ ಶ್ಲೋಕದಲ್ಲಿ,

ಬಾಹ್ಯೇ ನಿರುದ್ಧೇ ಮನಸಃ ಪ್ರಸನ್ನತಾ |
ಮನಃಪ್ರಸಾದೆ ಪರಮಾತ್ಮದರ್ಶನಂ ||
ತಸ್ಮಿನ್ಸುದೃಷ್ಟೆ ಭವಬಂಧನಾಶೋ |
ಬಹಿರ್ನಿರೋಧಃ ಪದವೀವಿಮುಕ್ತೇಃ ||

ತಾ|| ಪ್ರಪಂಚದ ವಿಷಯಗಳ ಯೋಚನೆಯನ್ನು ಬಿಟ್ಟರೆ, ಮನಸ್ಸಿನ ಎಲ್ಲಾ ಯೋಚನೆಗಳೂ ಅಡಗಿ, ಬುದ್ಧಿಮನಸ್ಸುಗಳಿಗೆ ಸ್ಥೈರ್ಯ್ಯವುಂಟಾಗುವುದು. ಹೀಗೆ ಬುದ್ಧಿ ಮನಸ್ಸುಗಳಿಗೆ ಸ್ಥೈರ್ಯ್ಯಬರುತ್ತಾ ಬಂದರೆ, ಆತ್ಮಸಾಕ್ಷಾತ್ಕಾರವಾಗುವುದು. ಇದರಿಂದ ವಿಷಯಬಂಧನದಿಂದ ಬಿಡುಗಡೆಯೆಂದರೆ—ಜನ್ಮ ಜರಾ ಮರಣರೂಪವಾದ ಸಂಸಾರ ಬಂಧನದ ಬಿಡುಗಡೆಯುಂಟಾಗುವುದು. ಆದುದರಿಂದ, ಪ್ರಥಮದಲ್ಲಿ ವಿಷಯವ್ಯಾಪಾರದ ಯೋಚನೆಯನ್ನು ಪರಿತ್ಯಾಗಮಾಡುವುದು ಮುಕ್ತಿಗೆ ಕಾರಣವೆಂದು ತಿಳಿಯಬೇಕು. ಎಂಬದಾಗಿ ಹೇಳಿರುವರು.

ಈ ಮೇಲಿನ ತತ್ವಾರ್ಥಗಳೇ ತ್ರಿಜಟೆಯು ಸೀತಾದೇವಿಗೆ ಸಮಾಧಾನಮಾಡಿದ ತತ್ವವಾಗಿರುವುದು. ಆದುದರಿಂದ ಸಮಾಧಿಯನ್ನು ಮಾಡುತ್ತಿದ್ದ ಅಧಿಕಾರಿಗೆ ಇಂತಹ ವಿಷಯಮೋಹಸ್ವರೂಪದ ವೃತ್ತಿಯಿಂದ ಬಾಧಕವುಂಟಾದರೂ, ಸಮಾಧಿಯ ಅನುಷ್ಠಾನವೇ ಉಪಯೋಗವಿಲ್ಲವೆಂದೂ, ಕಷ್ಟಸಾಧ್ಯವೆಂದೂ ಬಿಟ್ಟುಬಿಡಬಾರದು. ಇಂತಹ ತೊಂದರೆ ಗಳಿಗೆ ಪರಿಹಾರಗಳೂ ಇವೆ. ಈ ಪರಿಹಾರದ ಸ್ವರೂಪವನ್ನು ತಿಳಿದುಕೊಳ್ಳಲು ಮುಂದುವರಿಯೋಣ.

## ೧೪ನೆಯ ಪ್ರಕರಣ.

**ಇಂದ್ರಜಿತ್ತಿನ ನಾಗಪಾಶದಿಂದ ಬಿಡಿಸಿಕೊಳ್ಳಲು ಮತ್ತಾವ ವಿಧದಿಂದಲೂ ಸಾಧ್ಯವಿಲ್ಲದಿರಲು ಗರುಡನು ಬಂದು ಬಿಡುಗಡೆಮಾಡಿದ ವಿಚಾರ.**

**ಭೋಗಶಕ್ತಿಯ ಮೋಹಪಾಶವನು ನಿವೃತ್ತಿಮಾಡಿಕೊಳ್ಳಲು ಉಡ್ಯಾಣ ಮುದ್ರೆಯ ಸಹಿತವಾದ "ಓಂ" ಕಾರೋಪಾಸನೆಯಿಂದ ಸಮಾಧಿಯ ಅಭ್ಯಾಸಮಾಡಬೇಕೆಂಬ ವಿಚಾರ.**

ರಾ|| ಭಯಂಕರವಾದ ನಾಗಪಾಶಬಂಧನದಿಂದ ಮಲಗಿದ್ದ ಶ್ರೀರಾಮನು ಸ್ವಲ್ಪ ಮೂರ್ಛೆತಿಳಿದು ಚೇತರಿಸಿಕೊಂಡು ಪಕ್ಕದಲ್ಲಿ ಮೂರ್ಛೆಯ ಸಂಕಟದಿಂದ ಮಲಗಿದ್ದ ಲಕ್ಷ್ಮಣನನ್ನು ನೋಡಿ ರೋದನಮಾಡುತ್ತ ಸುಗ್ರೀವನನ್ನುಕುರಿತು "ನಾನು ಈ ಸ್ಥಿತಿ ಯಲ್ಲಿರುವಾಗ ನೀನು ಇಲ್ಲಿದ್ದರೆ ರಾವಣನು ನಿನ್ನನ್ನು ಸಂಹರಿಸಬಹುದಾದುದರಿಂದ ನೀನು ಕಿಷ್ಕಿಂಧೆಗೆ ಹೋಗು" ಎಂದು ಹೇಳಿದನು. ಇಷ್ಟರಲ್ಲಿ ಗರುತ್ಮಂತನು ಬಂದು ಶ್ರೀರಾಮ ಲಕ್ಷ್ಮಣರನ್ನು ನಾಗಪಾಶದಿಂದ ಬಿಡಿಸಿದನು.

ತತ್ವ|| ಭೋಗದ ಮೋಹಶಕ್ತಿಯಿಂದ ಬಂಧಿಸಲ್ಪಟ್ಟ ಬುದ್ಧಿಮನಸ್ಸಿನ ವೃತ್ತಿಗಳಲ್ಲಿ ಜ್ಞಾನಶಕ್ತಿಯ ತತ್ವವಾದ ಬುದ್ಧಿವೃತ್ತಿಯು ಪ್ರಥಮದಲ್ಲಿ ಚೇತರಿಸಿಕೊಳ್ಳುವುದು. ಅಂದರೆ ಬದಿಯಾಗಿದ್ದ ನೀರು ಹೇಗೆ ಕೊಂಚ ಕೊಂಚವಾಗಿ ತಿಳಿಯಾಗುತ್ತಾ ಬರುವುದೋ ಹಾಗೆ

ಭೋಗದ ಮೋಹಪಾಶದಿಂದ ಬುದ್ಧಿವೃತ್ತಿಯು ಪ್ರಥಮದಲ್ಲಿ ಸ್ಫುರಣೆಯಾಗುತ್ತಾ ಬರುವುದು. ಅಂದರೆ ತಾನು ವಿಷಯಮೋಹದಿಂದ ಬಂಧಿಸಲ್ಪಟ್ಟಿದ್ದ ತಿಳಿವಳಿಕೆ ಬುದ್ಧಿಯಲ್ಲಿ ಉದಯವಾಗುತ್ತಾ ಬರುವ ತತ್ವವೇ ನಾಗಪಾಶದಿಂದ ಮೂರ್ಛಿತನಾಗಿ ಮಲಗಿದ್ದ ಶ್ರೀರಾಮನು ಮೂರ್ಛೆ ತಿಳಿದು ಕೊಂಚ ಚೇತರಿಸಿಕೊಂಡದ್ದಾಗಿರುವುದು.

ಶ್ರೀರಾಮನು ಕೊಂಚ ಚೇತರಿಸಿಕೊಂಡರೂ ಲಕ್ಷ್ಮಣನು ಮೂರ್ಛೆಯ ಸಂಕಟದಿಂದ ಮಲಗಿದ್ದನು. ಲಕ್ಷ್ಮಣನಿಗಿಂತ ಪ್ರಥಮದಲ್ಲಿ ಶ್ರೀರಾಮನು ಚೇತರಿಸಿಕೊಳ್ಳಲು ಕಾರಣ ವೇನೆಂದರೆ—ಬುದ್ಧಿವೃತ್ತಿಯು ಜ್ಞಾನಶಕ್ತ್ಯಾತ್ಮಕವಾಗಿಯೂ ಮನಸ್ಸಿನ ವೃತ್ತಿಯು ಇಂದ್ರಿಯಪ್ರೇರಕವಾದ ಕ್ರಿಯಾತ್ಮಕವಾಗಿಯೂ ಇರುತ್ತವೆ. ಕ್ರಿಯಾಶಕ್ತಿಗಿಂತಲೂ ಜ್ಞಾನಶಕ್ತಿಯು ಹೆಚ್ಚಿನದು. ಆದುದರಿಂದ ಶ್ರೀರಾಮನು ಪ್ರಥಮದಲ್ಲಿ ಮೂರ್ಛೆತಿಳಿದೆದ್ದನು. ಹೇಗೆಂದರೆ ಮೂರ್ಛಾಕ್ರಾಂತನಾಗಿರುವ ಮನುಷ್ಯನಲ್ಲಿ ಮೂರ್ಛೆಬಿಡುಗಡೆಯಾಗುವ ಕಾಲದಲ್ಲಿ ಪ್ರಥಮದಲ್ಲಿ ಬಹಿರ್ಜ್ಞಾನ ಉದಯವಾಗುತ್ತ ಬರುತ್ತದೆ. ಕ್ರಿಯಾಪ್ರವರ್ತನೆಯಾಗಲು ಅವನಿಗೆ ಇನ್ನೂ ಅರ್ಹತೆ ಇರುವುದಿಲ್ಲ, ಇದರಂತೆಯೇ ನಿದ್ರೆಯಿಂದ ಎಚ್ಚರಗೊಳ್ಳುವಾಗ ಜ್ಞಾನಶಕ್ತಿಯಾದ ಬುದ್ಧಿವೃತ್ತಿಯು ಪ್ರಥಮದಲ್ಲಿ ಸ್ಫುರಣೆಹೊಂದಿ ಅನಂತರವೇ ಕ್ರಿಯಾಶಕ್ತ್ಯಾತ್ಮಕವಾದ ಮನಸ್ಸಿನ ವೃತ್ತಿಯು ಸ್ಫುರಣೆಹೊಂದುವುದು. ಅಲ್ಲದೆ ಒಂದು ವಸ್ತುವಿನ ಆಕಾರವನ್ನು ಬುದ್ಧಿವೃತ್ತಿಯು ಪಡೆದನಂತರದಲ್ಲಿಯೇ ಆ ವಸ್ತುವನ್ನು ಹೊಂದಲು ಇಂದ್ರಿಯಗಳ ಮೂಲಕ ಕಾರ್ಯಪ್ರವರ್ತನೆಯಾದ ಕ್ರಿಯೆಯುಂಟಾಗುವುದು. ಆದುದರಿಂದ ಶ್ರೀರಾಮನು ಪ್ರಥಮದಲ್ಲಿ ಚೇತರಿಸಿಕೊಂಡನು.

ಜ್ಞಾನಶಕ್ತಿಗೆ ಇರುವಷ್ಟು ಪ್ರಭೆಯು ಕ್ರಿಯಾಶಕ್ತಿಗಿರುವುದಿಲ್ಲ. ಆದುದರಿಂದ ಜ್ಞಾನಶಕ್ತಿಯು ಪ್ರಥಮದಲ್ಲಿ ಸ್ಫುರಣೆಯಾದ ಹೊರತು ಕ್ರಿಯಾಶಕ್ತಿಯು ಸ್ಫುರಣೆಯಾಗುವುದಿಲ್ಲ. ಬುದ್ಧಿವೃತ್ತಿ ಅಥವಾ ಜ್ಞಾನಶಕ್ತಿಗೆ ಕೊಂಚ ಸ್ಫುರಣೆಯಾದರೂ ಮನಸ್ಸಿನ ವೃತ್ತಿ ಅಥವಾ ಕ್ರಿಯಾಶಕ್ತಿಗೆ ಸ್ಫುರಣೆಯಾಗುವಪರ್ಯಂತರ ಬುದ್ಧಿವೃತ್ತಿಗೂ ಕೂಡ ಪ್ರಭೆಯು ಚೆನ್ನಾಗಿ ಬರುವುದಿಲ್ಲ. ಹೇಗೆಂದರೆ, ಮೂರ್ಛಿತನಾದವನಿಗೆ ಪ್ರಥಮದಲ್ಲಿ ಕೊಂಚ ಬಹಿರ್ಜ್ಞಾನೋದಯವಾಗುವುದು. ಆದರೆ ಕ್ರಿಯಾಶಕ್ತಿ ಉದಯವಾಗಿರುವುದಿಲ್ಲವಾದುದರಿಂದ ಜ್ಞಾನಶಕ್ತಿಯೂ ಬಲಹೀನವಾಗಿಯೇ ಇರುತ್ತೆಂಬುದು ಸರ್ವರಿಗೂ ತಿಳಿದ ವಿಚಾರವಾಗಿದೆ. ಕ್ರಿಯಾಶಕ್ತಿಯು ಚೆನ್ನಾಗಿ ಸ್ಫುರಣೆಯಾಗುವುದೆಂದರೆ, ಮೂರ್ಛೆಯಿಂದೆದ್ದು ಕಾರ್ಯಗಳನ್ನು ಮಾಡಲು ಇಂದ್ರಿಯಗಳಿಗೆ ಪ್ರೇರಕವಾಗುವ ಅರ್ಹತೆ ಬಂದರೆ ಆ ಕಾಲದಲ್ಲಿ ಜ್ಞಾನಶಕ್ತಿಗೂ ಚೆನ್ನಾಗಿ ಪ್ರಫುಲ್ಲತೆಯುಂಟಾಗುವುದಷ್ಟೆ! ಈ ತತ್ವಾರ್ಥವನ್ನು ಅನುಸರಿಸಿ ಲಕ್ಷ್ಮಣನು ಮೂರ್ಛಿತನಾಗಿ ಬಿದ್ದಿರುವುದರಿಂದ ಶ್ರೀರಾಮನು ಕೂಡ ಸಂಪೂರ್ಣವಾಗಿ ಚೇತರಿಸಿಕೊಳ್ಳಲಾರದೆ ದುಃಖದಿಂದಿದ್ದನು.

ಮನಸ್ಸಿನ ವೃತ್ತಿಗಿಂತಲೂ ಬುದ್ಧಿವೃತ್ತಿಯು ಶ್ರೇಷ್ಠವೆಂದು ಮೇಲೆ ತಿಳಿಸಿತು. ಅಂದರೆ ಲಕ್ಷ್ಮಣನಿಗಿಂತಲೂ ಶ್ರೀರಾಮನೇ ಶ್ರೇಷ್ಠನೆಂಬ ತತ್ವ. ಇದರ ವಿಚಾರದ ತತ್ವವನ್ನು ಬಾಲ ಕಾಂಡದಲ್ಲಿ ಶ್ರೀರಾಮಾದಿಗಳ ಜನನ ಪ್ರಕರಣದಲ್ಲಿಯೇ ತಿಳಿಸಿದೆ. ಹಾಗಾದರೆ, ಮನಸ್ಸಿನ ಮತ್ತು ಬುದ್ಧಿಯ ವೃತ್ತಿಗಳಿಗೆ ಇರುವ ತಾರತಮ್ಯವೇನೆಂದರೆ—ಬುದ್ಧಿವೃತ್ತಿಗೆ ವಿವೇಚನಾ ಶಕ್ತಿಯಿರುವುದರಿಂದಲೂ ವಸ್ತುಜ್ಞಾನವೆಂದರೆ, ವಸ್ತುಸ್ವರೂಪಾಕಾರವಾಗುವುದರಿಂದಲೂ ನಿಶ್ಚಯಾತ್ಮಕವೆನಿಸಿಕೊಳ್ಳುವುದು. ಮನಸ್ಸಿನ ವೃತ್ತಿಯಾದರೋ ಅತಿ ಚಂಚಲಸ್ವಭಾವ ವೆಂದರೆ, ಅತಿ ಜಾಗ್ರತೆಯಾಗಿ ಇಂದ್ರಿಯಗಳ ಆಕರ್ಷಣಾಶಕ್ತಿಗೆ ಒಳಪಡುವುದರಿಂದ ವಿಕಲ್ಪಾತ್ಮಕವೆನಿಸಿಕೊಳ್ಳುವುದು. ಇದೇ ತಾತ್ಪರ್ಯಕ್ಕೆ ಮಹೋಪನಿಷತ್ತಿನಲ್ಲಿ,

ಮನೋಘನ ವಿಕಲ್ಪಂತು ಗಚ್ಛತೀಂದ್ರಿಯತಾಂಶನೈಃ |

ಎಂಬದಾಗಿ ಹೇಳಿರುವಂತೆ, ಮನಸ್ಸಿನ ವೃತ್ತಿಯು ಇಂದ್ರಿಯಗಳ ಆಕರ್ಷಣಾಶಕ್ತಿಗೆ ಅತಿ ಜಾಗ್ರತೆಯಾಗಿ ಒಳಪಟ್ಟು ವಿಕಲ್ಪವಾಗುವುದು. ಮನಸ್ಸಿನ ವೃತ್ತಿಯು ಚಂಚಲವಾದ ಸ್ವಭಾವವೆನ್ನುವುದಕ್ಕೆ ವರಾಹೋಪನಿಷತ್ತಿನಲ್ಲಿ ಹೇಳಿರುವಂತೆ,

ರಸಸ್ಯ ಮನಸಶ್ಚೈವ ಚಂಚಲತ್ವಂ ಸ್ವಭಾವತಃ |

ಪಾದರಸಕ್ಕೂ ಮನಸ್ಸಿಗೂ ಚಾಂಚಲ್ಯವು ಸ್ವಭಾವವು. ಅಲ್ಲದೆ ಶ್ರೀಶಂಕರ ಭಗವತ್ಪಾದರವರು ಕೂಡ ಮನಸ್ಸಿನ ವೃತ್ತಿಯನ್ನು ಕಪಿಗೆ ಹೋಲಿಸಿ ಕಪಿಯಂತೆ ಚಂಚಲ ವಾದ ಮನಸ್ಸನ್ನು ನಿಸ್ನಧೀನಮಾಡಿಕೊಳ್ಳಬೇಕೆಂದು ಈಶ್ವರನನ್ನು ಶಿವಾನಂದಲಹರಿಯಲ್ಲಿ ಪ್ರಾರ್ಥಿಸಿರುವರು. ಆದುದರಿಂದ, ಈ ಮೇಲಿನ ಪ್ರಮಾಣಗಳಿಗೆ ಅನುಸಾರವಾಗಿ ಮನಸ್ಸತ್ವಸ್ವರೂಪನಾದ ಲಕ್ಷ್ಮಣನು ಮೂರ್ಛಿತನಾಗಿ ಬಿದ್ದಿರುವನು. ಅಂದರೆ ಮನೋವೃತ್ತಿಯು ಭೋಗಮೋಹಶಕ್ತಿಯಿಂದ ಕಟ್ಟಲ್ಪಟ್ಟ ಕಾಲದಲ್ಲಿ ಮನಸ್ಸಿನ ವೃತ್ತಿ ಪ್ರಕಾಶಕವಾದ ಪ್ರತಿಬಿಂಬಚೈತನ್ಯವೂ ಅದನ್ನು ಅನುಸರಿಸಿರುವುದೆಂಬ ತಾತ್ಪರ್ಯ.

ಯಾವಾಗ ಮನಸ್ಸಿನ ವೃತ್ತಿಯು ಇಂದ್ರಿಯಾಧೀನವಾಯಿತೋ ಬುದ್ಧಿವೃತ್ತಿಯು ಕೂಡ ತನಗೆ ಇಷ್ಟವಿಲ್ಲದಿದ್ದರೂ ಮನಸ್ಸನ್ನು ಹಿಂಬಾಲಿಸಿಕೊಂಡು ಮನಸ್ಸಿನ ವೃತ್ತಿಯ ಪರಿಣಾಮವನ್ನು ತಾನೂ ಅನುಭವಿಸಬೇಕಾಗುವುದು. ಈ ರೀತಿಯಾಗುವುದೆಂಬುದಕ್ಕೆ ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆಯಲ್ಲಿ ಹೇಳಿರುವಂತೆ,

ಇನ್ದ್ರಿಯಾಣಾಂಹಿ ಚರತಾಂ ಯನ್ಮನೋನುವಿಧೀಯತೇ |<br>
ತದಸ್ಯಹರತಿಪ್ರಜ್ಞಾಂ ವಾಯುರ್ನಾವ ಮಿವಾಮ್ಭಸಿ ||

ತಾ|| ಮನಸ್ಸಿನ ವೃತ್ತಿಯು ವಿಷಯಗಳಲ್ಲಿ ವ್ಯವಹಾರಮಾಡುವ ಇಂದ್ರಿಯಗಳ ಬಲವನ್ನು ಹಿಂಬಾಲಿಸಿಕೊಂಡು ಹೋದರೆ, ವಾಯುವು ನೀರಿನಲ್ಲಿ ಹಡಗನ್ನು ಹೊಡೆದುಕೊಂಡು ಹೋಗುವಂತೆ ಬುದ್ಧಿಯನ್ನು ಅಪಹರಿಸಿಬಿಡುವುದು.

ಲಕ್ಷ್ಮಣನು ಮೂರ್ಛೆಯಲ್ಲಿರುವಾಗ ಶ್ರೀರಾಮನೂ ದುಃಖವನ್ನು ಅನುಭವಿಸುತ್ತಿರುವನು. ಇದು ಹೇಗೆಂದರೆ, ಕಳ್ಳತನಮಾಡಬೇಕೆಂಬ ಅವಿದ್ಯಾವೃತ್ತಿಯು ಪ್ರಥಮದಲ್ಲಿ ಅಂಕುರಿಸುವುದು. ಆಗ ಬುದ್ಧಿಯು ಕಳ್ಳತನ ಕೆಟ್ಟದ್ದೆಂಬ ಸ್ಫುರಣೆಯನ್ನುಂಟು ಮಾಡುವುದು. ಅವಿದ್ಯಾವೃತ್ತಿಯ ವೇಗದಿಂದ ಯಾವಾಗ ಮನಸ್ಸಿನ ವೃತ್ತಿಯು ಕಳ್ಳತನದ ಕಾರ್ಯದಲ್ಲಿ ಪ್ರವರ್ತಿಸುವುದೋ ಆಗ ಬುದ್ಧಿವೃತ್ತಿಯು ಕೂಡ ಮನಸ್ಸಿನ ವೃತ್ತಿಯ ಪರಿಣಾಮವನ್ನು ಅನುಭವಿಸಬೇಕಾಗುವುದಷ್ಟೆ! ಈ ಮೇಲಿನ ತಾತ್ಪರ್ಯಗಳೇ ಲಕ್ಷ್ಮಣನ ಮೂರ್ಛೆಯಲ್ಲಿ ಶ್ರೀರಾಮನು ಕೂಡ ದುಃಖವನ್ನು ಅನುಭವಿಸುತ್ತಿರುವುದಾಗಿರುವುದು.

ಬಹಿರ್ವ್ಯಾಪಾರದಲ್ಲಿ ಬುದ್ಧಿಮನಸ್ಸಿನ ವೃತ್ತಿಗಳಿಗೆ ವಿಷಯಭೋಗಶಕ್ತಿಯಿಂದುಂಟಾಗುವ ಪ್ರತಿಬಂಧಕವನ್ನುಮೇಲೆ ವಿವರಿಸಿತು. ಈ ಭೋಗಶಕ್ತಿಗೆ ಬಾಹ್ಯವ್ಯಾಪಾರಮಾಡುವುದೇ ಸ್ವಾಭಾವಿಕವಷ್ಟೆ! ಸಮಾಧಿಯಲ್ಲಿ ಅಂತರ್ಮುಖಕ್ಕೆ ಎಳೆಯುತ್ತಿರುವ ಬುದ್ಧಿಮನಸ್ಸಿನ ವೃತ್ತಿಗಳಿಗೂ, ಬಾಹ್ಯವ್ಯಾಪಾರಕ್ಕೆ ಎಳೆಯುತ್ತಿರುವ ಅವಿದ್ಯೆಗೂ, ಸೆಳೆದಾಟ ನಡೆಯುತ್ತಿರುವುದು. ಇಂತಹ ಕಾಲದಲ್ಲಿ ಭೋಗಶಕ್ತಿಯು ಎಳೆತದಿಂದ ಬುದ್ಧಿಮನಸ್ಸಿನ ವೃತ್ತಿಗಳು ಬಳಲುವುವು, ಮತ್ತು ವಿಷಯಾಕಾರವಾಗುವುವು. ಸ್ವಾಭಾವಿಕವಾಗಿ ಬಾಹ್ಯವ್ಯಾಪಾರ ಮಾಡುವ ಮನಸ್ಸಿನ ವೃತ್ತಿಯು ಅಂತರ್ಮುಖದ ಮಾರ್ಗದಲ್ಲಿ ಅವಿದ್ಯಾಪ್ರಧಾನಶಕ್ತಿಗಳ ಸೆಳೆತವನ್ನು ತಡೆದುಕೊಂಡು, ಬುದ್ಧಿವೃತ್ತಿಯೊಡನೆ ಧ್ಯೇಯಾಕಾರವಸ್ತುವನ್ನು ಧರಿಸಿಕೊಳ್ಳಲು ಬಲಿಷ್ಠವಾದುದಲ್ಲ. ಆದುದರಿಂದ ಕ್ರಿಯಾತ್ಮಕವಾದ ಮನಸ್ಸಿನ ವೃತ್ತಿಯು ಅತ್ಯಂತ ಬಳಲುವುದೇ ಲಕ್ಷ್ಮಣನ ಪ್ರಬಲವಾದ ಮೂರ್ಛಾವಸ್ಥೆಯ ತತ್ವವಾಗಿರುವುದು. ಯಾವಾಗ ಕ್ರಿಯಾಶಕ್ತಿಗೆ ಬಲಕುಗ್ಗುವುದೋ ಆಗ ಜ್ಞಾನಾತ್ಮಕವಾದ ಬುದ್ಧಿವೃತ್ತಿಗೂ ನಿರ್ಬಲತ್ವವುಂಟಾಗಿ, ಧ್ಯೇಯಾಕಾರವನ್ನು ಬಿಟ್ಟುಬಿಡುವುದು. ಅಂದರೆ ಬಿಂದುಧಾರಣೆಯು ಶಿಥಿಲವಾಗುವುದು. ಯಾವಾಗ ಕ್ರಿಯಾತ್ಮಕದ ಬಲತಗ್ಗುವುದೋ ಆಗ ಅಧಿಕಾರಿಗೆ ಸಮಾಧಿಯ ಅನುಷ್ಠಾನಮಾಡಲು ಸಾಕಾದಷ್ಟು ಬಲವಿರುವುದಿಲ್ಲವೆಂಬ ತಾತ್ಪರ್ಯ. ಈ ಮೇಲಿನ ತಾತ್ಪರ್ಯಗಳೇ ಲಕ್ಷ್ಮಣನೊಡನೆ ಶ್ರೀರಾಮನೂ ನಾಗಪಾಶದ ಬಂಧನವನ್ನು ಅನುಭವಿಸುತ್ತಿದ್ದ ತತ್ವವಾಗಿರುವುದು.

ಶ್ರೀರಾಮನು ಸುಗ್ರೀವನನ್ನು ಕುರಿತು ನಾನು ಈ ಸ್ಥಿತಿಯಲ್ಲಿದ್ದಾಗ ನೀನು ಇಲ್ಲಿದ್ದರೆ ರಾವಣನು ನಿನ್ನನ್ನು ಸಂಹರಿಸಬಹುದಾದುದರಿಂದ ಕಿಷ್ಕಿಂಧೆಗೆ ಹೋಗೆಂದು ಹೇಳುತ್ತಿದ್ದ

ನೆಂದರೆ—ಯಾವಾಗ ಬುದ್ಧಿಮನಸ್ಸಿನ ವೃತ್ತಿಗಳು ಭೋಗಶಕ್ತಿಯ ಮೋಹಪಾಶದಿಂದ ಅತ್ಯಂತವಾಗಿ ಬೀಳುವುವೋ, ಆಗ ಪ್ರಾಣವಾಯುವಿನ ಬಲವೂ ಕುಂದಿ ಸಮಾಧಿಯ ಅನುಷ್ಠಾನಕ್ಕೆ ಅರ್ಹತೆಯುಂಟಾಗುವುದು ಕಷ್ಟ. ಇಂತಹ ಕಾಲದಲ್ಲಿ ಬಹಿರ್ಮುಖವಾಗಲೇ ಬೇಕಾಗುವ ಸಂಭವವುಂಟಾಗುವುದು. ಅಂದರೆ, ಸಮಾಧಿಯನ್ನು ಅನುಷ್ಠಾನಮಾಡುವ ಅಧಿಕಾರಿಯು ಪ್ರಥಮದಲ್ಲಿ ಒಂದಾವರ್ತಿ "ಓಂ"ಕಾರೋಚ್ಚಾರಣೆಯನ್ನು ಅನುಸಂಧಾನ ಮಾಡಿ ಏಕಪ್ರಕಾರವಾಗಿ ಬಿಂದುಧಾರಣೆಯಲ್ಲಿಯೇ ಕುಳಿತಿರಲು ಖಂಡಿತವಾಗಿಯೂ ಸಾಧ್ಯವಿಲ್ಲ. ಪ್ರಥಮದಲ್ಲಿ ಅತ್ಯಂತ ಅಲ್ಪಕಾಲ ಬಿಂದುಧಾರಣೆಯೊಡನೆ ಇದ್ದು ಬಹಿರ್ಮುಖವಾಗಿ ಪುನಃ "ಓಂ" ಕಾರಾನುಸಂಧಾನಮಾಡಿಕೊಂಡು ಬಿಂದುಧಾರಣೆಯ ಅಭ್ಯಾಸ ಮಾಡಬೇಕು. ಇದೇ ರೀತಿಯಲ್ಲಿ ಪುನಃಪುನಃ ಮಾಡಿ ಬಿಂದುಧಾರಣೆಯ ಕಾಲವನ್ನು ಅಭಿವೃದ್ಧಿಮಾಡಿಕೊಳ್ಳಬೇಕೇ ಹೊರತು ಪ್ರಥಮದಲ್ಲಿ ಮಾಡಿದ ಬಿಂದುಧಾರಣೆಯನ್ನೇ ಏಕಪ್ರಕಾರವಾಗಿ ನಿಲ್ಲಿಸಿಕೊಳ್ಳಲು ಖಂಡಿತವಾಗಿಯೂ ಸಾಧ್ಯವಿಲ್ಲ. ಕಾರಣವೇನೆಂದರೆ, ಅವಿದ್ಯಾಶಕ್ತಿಗಳು ಪ್ರಬಲವಾಗಿ ಬಹಿರ್ಮುಖವಾಗುವಂತೆಯೇ ಸೆಳೆಯುವುದರಿಂದ, ಇಂತಹ ಅವಿದ್ಯಾಶಕ್ತಿಗಳನ್ನು ನಿಗ್ರಹಿಸಿ ಅಂತರ್ಮುಖದಲ್ಲಿ ಸ್ಥಿರಸುತವಾಗಿ ನಿಂತುಕೊಳ್ಳುವುದು ಅತ್ಯಂತ ಕಷ್ಟ. ಈ ಅವಿದ್ಯೆಯ ಪ್ರಬಲವಾದ ಶಕ್ತಿಗಳು, ಕ್ರಿಯಾತ್ಮಕವಾದ ಮನಸ್ಸಿನ ವೃತ್ತಿಗೆ ಅತ್ಯಂತ ಬಳಲಿಕೆಯನ್ನುಂಟುಮಾಡುವುವು. ಈ ತತ್ವಾರ್ಥವನ್ನು ಅನುಸರಿಸಿಯೇ ಲಕ್ಷ್ಮಣನು ಇಂದ್ರಜಿತ್ತಿನಿಂದ ಎರಡಾವರ್ತಿ, ರಾವಣನಿಂದ ಒಂದಾವರ್ತಿ ಪ್ರಬಲವಾದ ಮೂರ್ಛೆಯನ್ನು ಹೊಂದಿದನು.

ಇಂದ್ರಜಿತ್ತಿನ ಪ್ರಥಮಯುದ್ಧದ ತತ್ವವಾದ ಭೋಗಶಕ್ತಿಯ ಮೋಹಪಾಶದ ವಿವರವನ್ನು, ಹಿಂದಿನ ಮೂರು ಪ್ರಕರಣಗಳಿಂದಲೂ ವಿವರಿಸಿದೆ. ಆದುದರಿಂದ, ಈ ಅವಿದ್ಯೆಯ ಭೋಗಶಕ್ತಿಯ ಹೊಡೆತದಿಂದ ನಿರ್ಬಲವನ್ನು ಹೊಂದಿ ಪುನಃಪುನಃ ಬಹಿರ್ಮುಖವಾಗುವ ತಾತ್ಪರ್ಯವೇ ಲಕ್ಷ್ಮಣನ ಪ್ರಬಲವಾದ ಮೂರ್ಛೆ, ಶ್ರೀರಾಮನ ಪ್ರಲಾಪ, ಸುಗ್ರೀವನ ದೈನ್ಯದ ತತ್ವಗಳಾಗಿರುವುವು.

ಇನ್ನು ಇಂದ್ರಜಿತ್ತಿನ ನಾಗಪಾಶದಿಂದ ಬಿಡುಗಡೆಯಾಗುವ ಕಥೆಯ ತತ್ವವನ್ನು ಪ್ರಾರಂಭಿಸೋಣ.

ಅಂತರ್ಮುಖಕ್ಕೆ ಅಡಚಣೆಯಾಗಿ, ಬಾಹ್ಯಕ್ಕೇ ಎಳೆಯುವ ಮತ್ತು ಮನಸ್ಸಿನ ವೃತ್ತಿಯನ್ನೇ ಅತ್ಯಂತ ಬಳಲಿಸುವ, ಪ್ರಬಲವಾದ ಈ ಭೋಗಶಕ್ತಿಯ ಮೋಹಪಾಶದಿಂದ ಬಿಡುಗಡೆಯನ್ನು ಹೊಂದಲು ದಾರಿಯೇ ಇಲ್ಲವೆಂದು ತಿಳಿದುಕೊಳ್ಳಬಾರದು. ಹಿತಚಿಂತಕನಾದ ಮತ್ತು ಯೋಗದ ದಾರಿಗೆಲ್ಲಾ ಆದಿಗುರುವಾದ ಪರಮೇಶ್ವರನೇ ಶ್ರುತಿಗಳಲ್ಲಿ ಅವಿದ್ಯೆಯ ಪ್ರಬಲವಾದ ಪ್ರತಿಬಂಧಕಗಳ ನಿವಾರಣೆಯ ದಾರಿಗಳೆಲ್ಲವನ್ನೂ ಹೇಳಿರುವನು.

ಈ ಅವಿದ್ಯೆಯ ಪ್ರಬಲವಾದ ಭೋಗಶಕ್ತಿಯ ಮೋಹದಿಂದುಂಟಾಗುವ ಅನರ್ಥಗಳನ್ನು ನಿವಾರಣೆಮಾಡಿಕೊಳ್ಳಲು ಅನೇಕ ಶ್ರುತಿಗಳಲ್ಲಿ ಹೇಳಿರುವ, ಶ್ರೀರಾಮನು ಅವತಾರಮಾಡಿದ ಚರಿತ್ರೆಯ ಅಂತರಾರ್ಥರೂಪದಲ್ಲಿಯೂ ಇರುವ, ಮಹರ್ಷಿಗಳ ಪರಂಪರೆಯಿಂದಲೂ ಅನುಷ್ಠಿಸಲ್ಪಟ್ಟಿರುವ, ಸರ್ವಜ್ಞಮೂರ್ತಿಯಾದ ಶ್ರೀಶಂಕರಭಗವತ್ಪಾದರವರಿಂದಲೂ ಶ್ಲಾಘಿಸಲ್ಪಟ್ಟಿರುವ, ಗಾಯತ್ರಿಯ ಇಪ್ಪತ್ತುನಾಲ್ಕು ಮುದ್ರೆಗಳಲ್ಲಿ ಸೇರಿರುವ, ಉಡ್ಯಾಣ, ಜಾಲಂಧರ ಮೂಲ ಷಣ್ಮುಖಿಗಳೆಂಬ ನಾಲ್ಕು ಮುದ್ರೆಗಳನ್ನು ಮೋಕ್ಷದಲ್ಲಿ ಇಚ್ಛೆಯುಳ್ಳವರು, ಗುರುಮುಖೇನ ಉಪದೇಶತೆಗೆದುಕೊಂಡು "ಓಂ" ಕಾರೋಪಾಸನೆಯ ಜೊತೆಯಲ್ಲಿ ಅಗತ್ಯವಾಗಿ ಅಭ್ಯಾಸಮಾಡಬೇಕು.

ಮೇಲೆ ತಿಳಿಸಿರುವ ನಾಲ್ಕು ಮುದ್ರೆಗಳಲ್ಲಿ ಇಂದ್ರಜಿತ್ತಿನ ನಾಗಪಾಶದಿಂದ ಬಿಡುಗಡೆಯನ್ನು ಹೊಂದುವ ಗರುಡನ ತತ್ವವೇ ಉಡ್ಯಾಣಬಂಧದ ಸ್ವರೂಪವಾಗಿರುವುದು. ಇಂದ್ರಜಿತ್ತಿನ ಎರಡನೆಯ ಯುದ್ಧ ಮತ್ತು ರಾವಣನ ಅಷ್ಟಘಂಟಾಶಕ್ತಿಯಿಂದ ಲಕ್ಷ್ಮಣನು ಮೂರ್ಛಿತನಾಗಿ ಬಿಡುಗಡೆಹೊಂದಿದ ಕಥೆಯ ತತ್ವಗಳೇ ಜಾಲಂಧರಬಂಧದ ಸ್ವರೂಪವಾಗಿರುವುದು. ಶ್ರೀರಾಮನು ಸಕಲ ವಾನರಸೈನ್ಯಗಳೊಡನೆ ಲಂಕೆಯನ್ನು ಮುತ್ತಿದ ಕಥೆಯ ತತ್ವವೇ ಮೂಲಬಂಧದ ಸ್ವರೂಪವಾಗಿರುವುದು. ನಾಲ್ಕನೆಯದಾದ ಷಣ್ಮುಖೀಮುದ್ರೆಯ ಸ್ವರೂಪವು ಶ್ರೀರಾಮನು ಇಂದ್ರನ ರಥವನ್ನು ಆರೋಹಣಮಾಡಿದ ಕಥೆಯ ತತ್ವವಾಗಿರುವುದು.

ಈ ನಾಲ್ಕುಮುದ್ರೆಗಳಲ್ಲಿ ಮೂಲಬಂಧವೆಂಬಮುದ್ರೆಯ ವಿಚಾರವನ್ನುವಾನರಸೈನ್ಯವು ಲಂಕೆಯನ್ನು ಮುತ್ತಿದ ಪ್ರಕರಣದಲ್ಲಿ ಹಿಂದೆಯೇ ತಕ್ಕಮಟ್ಟಿಗೆ ವಿವರಿಸಿರುತ್ತಷ್ಟೆ! ಪ್ರಕೃತದಲ್ಲಿ ಗರುಡನು ಬಂದು ಇಂದ್ರಜಿತ್ತಿನ ನಾಗಪಾಶದಿಂದ ಶ್ರೀರಾಮ ಲಕ್ಷ್ಮಣರನ್ನು ಬಿಡಿಸಿದ ತತ್ವವಾದ ಉಡ್ಯಾಣಬಂಧದ ವಿಚಾರವನ್ನುಪ್ರಾರಂಭಿಸೋಣ ಈ ನಾಲ್ಕು ಮುದ್ರೆಗಳನ್ನು ಅಭ್ಯಾಸಮಾಡಲು ಯಾವ ಭಯವೂ ಇರುವುದಿಲ್ಲ. ಆದರೆ ಯಾವ ಯಾವ ಸೋಪಾನಗಳಲ್ಲಿ ಯಾವ ಯಾವ ವಿಧವಾದ ಅನುಷ್ಠಾನಮಾಡಬೇಕೋ, ಅದರಂತೆ ಮಾಡದೆ ಮತ್ತು ಸರಿಯಾದ ಗುರುವಿನಿಂದ ಉಪದೇಶತೆಗೆದುಕೊಳ್ಳದೆ, ಸ್ವಯಮಾಚಾರ್ಯಪುರುಷರೆಂದುಕೊಂಡು, ಗ್ರಂಥಗಳನ್ನೋದಿ ಅನುಷ್ಠಾನಮಾಡಿದರೆ ಅನುಷ್ಠಾನಮಾಡುವವನು ತಾನೊಬ್ಬನು ಕೆಡುವುದಲ್ಲದೆ, ಶ್ರುತಿಪ್ರಮಾಣಗಳಿಗೇ ಅಪಮರ್ಯಾದೆಯನ್ನು ತಂದು ಜನಗಳಿಗೂ ಯೋಗವೆಂದರೆ ಹೆದರಿಕೆ ಹುಟ್ಟುವಂತೆ ಮಾಡುತ್ತಾನೆ. ಹೀಗೆಂದಿಗೂ ಮಾಡಬಾರದು.

ಪ್ರಕೃತ ಇಂದ್ರಜಿತ್ತಿನ ನಾಗಪಾಶದ ವಿಷದಿಂದ ಬಿಡಿಸುವ ಗರುಡನು ಯಾರೆಂದರೆ, ಗರುಡ, ಸಂಪಾತಿ, ಜಟಾಯುಗಳು ಸಹೋದರರೆಂದೂ, ಜಟಾಯುವು ವೇದಾಂತಶ್ರವಣ

ಬೋಧಕ ಗುರುವಿನ ತತ್ತ್ವದವನೆಂದೂ, ಸಂಪಾತಿಯು ಪ್ರಾಣಾಯಾಮದ ಸೂಕ್ಷ್ಮಾರ್ಥ ಬೋಧನೆಯ ಗುರುವಿನತತ್ತ್ವದವನೆಂದೂ, ಗರುಡನು ಸಮಾಧಿಯ ಅನುಷ್ಠಾನದ ಬೋಧಕಗುರುವಿನ ತತ್ತ್ವದವನೆಂದೂ, ಹಿಂದೆ ಜಟಾಯುಸಂಪಾತಿಗಳ ಪ್ರಕರಣಗಳಲ್ಲಿ ಅನ್ವಯ ಮಾಡಿದೆಯಷ್ಟೆ! ಸಮಾಧಿಯ ಅನುಷ್ಠಾನವು ಸ್ತಿಮಿತಕ್ಕೆ ಬರಬೇಕಾದರೆ, ಬುದ್ಧಿಮನಸ್ಸಿನ ವೃತ್ತಿ ಮತ್ತು ವಾಯುಗಳು ಮೂಲಾಧಾರದಲ್ಲಿ ಪ್ರಬೋಧೆಯಾಗಿರುವ ಕುಂಡಲಿನಿಯೊಡನೆ ಸುಷುಮ್ನಾನಾಡಿಯೊಳಗೆ ಊರ್ಧ್ವಮುಖವಾಗಿ ಹೋಗುತ್ತಾ ಬರಬೇಕು. ಹೀಗೆ ಕುಂಡಲಿನಿಯೊಡನೆ ಸುಷುಮ್ನೆಯೊಳಗೆ ಮೇಲಕ್ಕೆ ಹಾರುವಂತೆ ಮಾಡುವ ಅನುಷ್ಠಾನವೇ ಉಡ್ಯಾಣಬಂಧವೆನಿಸಿ ಗರುಡನ ತತ್ತ್ವದಲ್ಲಿರುವುದು.

ಗರುಡನು ನಾಗಪಾಶವನ್ನು ಬಿಡಿಸುವುದೆಂದರೆ—ಉಡ್ಯಾಣಬಂಧದ ಅನುಷ್ಠಾನದ ತತ್ತ್ವವೆಂದು ಮೇಲೆ ತಿಳಿಸಿತಷ್ಟೆ! ಉಡ್ಯಾಣ ಮತ್ತು ಗರುಡನೆಂಬ ಪದಗಳು ಏಕಾರ್ಥಕಗಳು. "ಗುರುದ್ಭ್ಯಾಂ ಪಕ್ಷಾಭ್ಯಾಂ ಡೀಯತೆ ಉಡ್ಡೀಯತೆ ಇತಿ ಗರುಡಃ" ರೆಕ್ಕೆಗಳಿಂದ ಹಾರುವಿಕೆ ಮತ್ತು ಮೇಲಕ್ಕೆ ಹಾರುವಿಕೆ ಎಂದರ್ಥ. ಉಡ್ಡೀನವೆಂದರೆ—"ಉತ್ ಊರ್ಧ್ವಂ ಡಯನಂ ಉಡ್ಡೀನಂ" ಮೇಲಕ್ಕೆ ಹಾರುವಿಕೆಯು ಉಡ್ಡೀನವು. ಉಡ್ಡೀನಬಂಧವನ್ನು ಉಡ್ಯಾಣಬಂಧವೆಂದೂ ಕರೆಯುವರು. ಉಡ್ಯಾಣವೆನ್ನುವುದಕ್ಕೂ "ಉತ್-ಡಿ ಯಾನ-ಉಡ್ಯಾಣ" ಅಂದರೆ ಮೇಲಕ್ಕೆ ಹಾರುವುದು ಎಂದರ್ಥ. ಆದುದರಿಂದ, ಉಡ್ಯಾಣಮುದ್ರೆಯ ತತ್ತ್ವವೂ ಗರುಡನ ತತ್ತ್ವವೂ ಒಂದೇ ಆಗಿರುವುವು. ಉಡ್ಯಾಣವೆಂದರೆ ನಮ್ಮ ಸೊಂಟದ ಪ್ರದೇಶವಾಗಿರುವುದು. ಈ ಉಡ್ಯಾಣಮುದ್ರೆಯ ಅನುಷ್ಠಾನವು ಸೊಂಟದ ಪ್ರದೇಶದಲ್ಲಿ ಮಾಡಬೇಕಾಗಿರುವುದು. ಉಡ್ಯಾಣಮುದ್ರೆಯನ್ನು ಅನುಷ್ಠಾನಮಾಡುವ ವಿಧಾನವನ್ನು ತಕ್ಕಮಟ್ಟಿಗೆ ಇಂದ್ರಜಿತ್ತಿನ ಎರಡನೆಯ ಯುದ್ಧದ ಪ್ರಕರಣದಲ್ಲಿ ವಿವರಿಸಿರುವುದು. ಕಾರಣವೇನೆಂದರೆ, ಇಂದ್ರಜಿತ್ತಿನ ಎರಡನೆಯ ಯುದ್ಧದ ತತ್ತ್ವದಲ್ಲಿ ಜಾಲಂಧರಮುದ್ರೆಯ ತತ್ತ್ವವೂ ಬರಬೇಕಾಗಿರುವುದು. ಈ ಬಂಧತ್ರಯಗಳ ಅನುಷ್ಠಾನದ ವಿಚಾರವನ್ನು ಒಂದೇ ಸ್ಥಳದಲ್ಲಿ ವಿವರಿಸಿದರೆ ಮನಸ್ಸಿಗೆ ಚೆನ್ನಾಗಿ ಮುಂದಟ್ಟಾಗುವುದರಿಂದ ಇಂದ್ರಜಿತ್ತಿನ ಎರಡನೆಯ ಯುದ್ಧದ ತತ್ತ್ವದಲ್ಲಿ ಶ್ರೀಶಂಕರಭಗವತ್ಪಾದರವರ ಶ್ಲೋಕಗಳೊಡನೆ ಬರೆದಿದೆ.

ಈ ಉಡ್ಯಾಣಮುದ್ರೆಯ ಅಭ್ಯಾಸದಿಂದ ಬುದ್ಧಿಮನಸ್ಸಿನ ವೃತ್ತಿಗಳು ಬ್ರಹ್ಮರಂಧ್ರದೊಳಗೆ ಕುಂಡಲಿನೀಶಕ್ತಿಯೊಡನೆ ಮೇಲುಮೇಲಕ್ಕೆ ಪ್ರವೇಶಿಸುವುದರಿಂದ, ಭೋಗಶಕ್ತಿಯ ವಿಷಮಯವಾದ ನಾಗಪಾಶದಿಂದ ಅಧಿಕಾರಿಯು ಬಿಡುಗಡೆಹೊಂದುವನು. ಹೇಗೆಂದರೆ,

ಕುಂಡಲಿನಿಯು ಮೂಲಾಧಾರದಲ್ಲಿರುವ ಪರ್ಯಂತರ ಮಾನವನಿಗೆ ಪ್ರಪಂಚವ್ಯಾಪಾರ ಸ್ವರೂಪವೆಂದು ಹಿಂದೆ ಶ್ರುತಿವಾಕ್ಯಗಳೊಡನೆ ತಿಳಿಸಿರುತ್ತಷ್ಟೆ ! ಪ್ರಪಂಚವ್ಯಾಪಾರವೆಂದರೆ, ವಿಷಯವ್ಯಾಪಾರವಲ್ಲದೆ ಅನ್ಯಥಾ ಅಲ್ಲ. ಭೋಗಕಾರ್ಯವೇ ಪ್ರಧಾನವಾಗಿ ಉಳ್ಳ ವಿಷಯ ವ್ಯಾಪಾರವು ನಾಗಸರ್ಪದ ವಿಷದಂತೆ ಹಾನಿಯನ್ನುಂಟುಮಾಡುವುದು. ಆದುದರಿಂದ ಬಾಹ್ಯವ್ಯಾಪಾರವು ವಿಷರೂಪವಾದುವುಗಳೇ ಹೊರತು ಅಮೃತರೂಪವಲ್ಲ. ಅಮೃತರೂಪ ವಾದುದೇ ಆತ್ಮಸಾಕ್ಷಾತ್ಕಾರ. ಈ ವಿಷರೂಪವಾದ ಭೋಗಶಕ್ತಿಯ ಮೋಹಪಾಶದ ಸೆಳೆತದಿಂದ ತಪ್ಪಿಸಿಕೊಂಡು ಅಮೃತಸ್ವರೂಪವಾದ ಆತ್ಮಸಾಕ್ಷಾತ್ಕಾರವನ್ನು ಪಡೆಯಲು ಗರುಡನ ತತ್ವದಲ್ಲಿರುವ ಉಡ್ಯಾಣಬಂಧವು ಸಹಕಾರಿಯಾಗಿರುವುದು. ಗರುಡನು ನಾಗ ಸರ್ಪವನ್ನು ಕಚ್ಚಿಕೊಂಡು ಅಂತರಿಕ್ಷದಲ್ಲಿ ಹಾರಿಹೋಗುವಂತೆ, ಈ ಉಡ್ಯಾಣಬಂಧವೆಂಬ ಮುದ್ರೆಯು ಸರ್ಪಾಕಾರದಲ್ಲಿರುವ ಕುಂಡಲಿನೀಶಕ್ತಿಯನ್ನು ಬ್ರಹ್ಮರಂಧ್ರದಲ್ಲಿ ಹಾರಿಸಿ ಕೊಂಡು ಮೇಲಕ್ಕೆ ತೆಗೆದುಕೊಂಡು ಹೋಗುವುದು.

ಓಂಕಾರೋಪಾಸನೆಯೊಡಗೂಡಿದ ಉಡ್ಯಾಣಬಂಧದ ಮುದ್ರೆಯಿಂದ ಯಾವಾಗ ಕುಂಡಲಿನೀಶಕ್ತಿಯು ಬ್ರಹ್ಮರಂಧ್ರದೊಳಗೆ ಮೇಲುಮೇಲಕ್ಕೆ ಹೋಗುತ್ತಾ ಬರುವುದೋ ಆಗ ಬುದ್ಧಿಮನಸ್ಸಿನ ವೃತ್ತಿಗಳು ಕೂಡ ಭೋಗಶಕ್ತಿಯ ಮೋಹಪಾಶದಿಂದ ಬಿಡುಗಡೆ ಯನ್ನು ಹೊಂದಿ, ಬ್ರಹ್ಮರಂಧ್ರನಾಡಿಯೊಳಗೆ ಮೇಲ್ಮುಖವಾಗಿ ಹೋಗುತ್ತಾ ಬರುವುವು. ಬ್ರಹ್ಮರಂಧ್ರದಲ್ಲಿ ಮೇಲಕ್ಕೆ ಹೋಗುವುದರಿಂದ ಬುದ್ಧಿಮನಸ್ಸಿನ ವೃತ್ತಿಗಳಿಗೆ ಭೋಗ ಶಕ್ತಿಯ ಮೋಹಪಾಶದಿಂದ ಹೇಗೆ ಬಿಡುಗಡೆಯಾಗುವುದೆಂದರೆ—ಭೋಗಶಕ್ತಿಯ ಮೋಹ ಪಾಶವೆಂದರೆ—ವಿಷಯವ್ಯಾಪಾರ ಅಥವಾ ಬಹಿರ್ವ್ಯಾಪಾರದ ಕಾರ್ಯಗಳು ನಡೆಯುವಿಕೆ. ಅಂದರೆ ಬಹಿರ್ವ್ಯಾಪಾರಗಳೆಲ್ಲವೂ ಭೋಗಶಕ್ತಿಯ ಮೋಹಪಾಶಕ್ಕೇ ಸೇರಿರುವುವು. ಈ ಮೋಹಪಾಶಬದ್ಧರಾಗಿಲ್ಲದಿದ್ದರೆ ಯಾವ ಕಾರ್ಯವೂ ನಡೆಯುವುದಿಲ್ಲ. ಮೋಹ ಪಾಶದ ತಾರತಮ್ಯಾನುಸಾರವಾಗಿ ಕೆಲವರು ಅಧಿಕವಾಗಿ ಕಾರ್ಯಗಳ ಮೋಹದ ಲ್ಲಿರುವರು. ಇನ್ನು ಕೆಲವರು ಅಲ್ಪವಾದ ಮೋಹದಿಂದ ಕಾರ್ಯಪ್ರವರ್ತನೆಯಲ್ಲಿರುವರು. ಮತ್ತೆ ಕೆಲವರು ಅತ್ಯಲ್ಪವಾದ ಮೋಹಪಾಶದಿಂದಲಾದರೂ ಕಾರ್ಯಪ್ರವರ್ತನೆಯಲ್ಲಿರುವರೇ ಹೊರತು ಮೋಹಪಾಶದಿಂದ ನಿಶ್ಶೇಷವಾಗಿ ಬಿಡುಗಡೆ ಹೊಂದಿದವರು ಬಾಹ್ಯವ್ಯಾಪಾರ ದಲ್ಲಿಯೇ ಇರುವುದಿಲ್ಲ. ಆದುದರಿಂದ, ವಿಷಯಪ್ರವರ್ತನೆಗೆ ತಾರತಮ್ಯಾನುಸಾರವಾದ ಭೋಗಶಕ್ತಿಯ ಮೋಹಪಾಶವಿದ್ದೇ ಇರುವುದು. ಅಂದರೆ ನಮ್ಮ ಬುದ್ಧಿಮನಸ್ಸಿನ ವೃತ್ತಿಗಳು ಭೋಗಶಕ್ತಿಯ ಮೋಹಪಾಶದಿಂದ ಬಂಧಿಸಲ್ಪಟ್ಟು, ಬಾಹ್ಯವ್ಯಾಪಾರಮಾಡುತ್ತಿರುವ ಸ್ವರೂಪವೇ ನಮ್ಮ ವಿಶ್ವಸ್ವರೂಪದ ನಡೆವಳಿಕೆಗಳಾಗಿರುತ್ತವೆ. ಈ ವಿಶ್ವಸ್ವರೂಪದ ಸೋಪಾನದಿಂದ ಸ್ವಪ್ನವ್ಯಾಪಾರಸ್ವರೂಪವಾದ ತೈಜಸತ್ವದ ಸೋಪಾನವನ್ನು ಪಡೆಯ

ಬೇಕಾಗಿರುವುದು. ಮುಂದೆ ಸ್ವಪ್ನವ್ಯಾಪಾರವೂ ನಿಂತು ಗಾಢನಿದ್ರೆಗೆ ಹೋಲಿಕೆಯಾದ ಪ್ರಾಜ್ಞತ್ವದ ಸೋಪಾನವನ್ನು ಪಡೆಯಬೇಕಾಗಿರುವುದು.

ಅಂದರೆ ಮೋಕ್ಷಾಧಿಕಾರಿಯು ವೇದಾಂತಶ್ರವಣದ ಸೋಪಾನದಿಂದ ಸಮಾಧಿ ಅನುಷ್ಠಾನ ಪ್ರಾರಂಭದವರೆಗೂ ಬಾಹ್ಯಪ್ರವರ್ತನೆಯಲ್ಲಿದ್ದುಕೊಂಡು ವಿಶ್ವತ್ವದಲ್ಲಿಯೇ ಇದ್ದನು. "ಓಂ" ಕಾರೋಚ್ಚಾರಣೆಯ ಅನುಷ್ಠಾನದಿಂದ ಸಮಾಧಿಯನ್ನು ಅಭ್ಯಾಸಮಾಡಲು ಈಗ ಪ್ರಾರಂಭಿಸಿರುವನು. ಸ್ವಪ್ನದಲ್ಲಿ ತೇಜಸ್ಸಿನೊಳಗೇ ವ್ಯಾಪಾರವು ನಡೆಯುವಂತೆ, ಮೋಕ್ಷಾಧಿಕಾರಿಯ ವ್ಯಾಪಾರವೆಲ್ಲವೂ ಸಮಾಧಿಯಲ್ಲಿ ಕಾಣುವ ತೇಜಸ್ಸಿನಲ್ಲಿಯೇ ನಿಂತುಕೊಂಡು, ಅದರ ಸ್ಥಿರತ್ವವನ್ನು ಪಡೆಯಬೇಕು. ಹೀಗೆ ತೇಜಸ್ಸಿನೊಳಗೇ ನಿಲ್ಲುವ ಸ್ಥಿರತ್ವವನ್ನು ಅಧಿಕಾರಿಯು ಪಡೆದರೆ, ವಿಶ್ವತ್ವದ ಸೋಪಾನದಿಂದ ತೈಜಸತ್ವದ ಸೋಪಾನಕ್ಕೆ ಹಾರಿದನೆಂಬ ತತ್ವವಾಗಿರುವುದು. ಈ ವಿಶ್ವತ್ವದ ಸೋಪಾನದಿಂದ ತೈಜಸತ್ವದ ಸೋಪಾನವನ್ನು ಹತ್ತಲು, ವಿಶ್ವತ್ವಕ್ಕೆ ಕಾರಣವಾದ ಅವಿದ್ಯಾಶಕ್ತಿಗಳು ಅಧಿಕಾರಿಯನ್ನು ಸುಲಭವಾಗಿ ಅಂತರ್ಮುಖಕ್ಕೆ ಬಿಡುವುದಿಲ್ಲ. ಆದುದರಿಂದ, ಮೂಲಾಧಾರದಲ್ಲಿರುವ ವಿಶ್ವತ್ವಕ್ಕೆ ಕಾರಣವಾದ ಭೋಗಶಕ್ತಿಯಲ್ಲಿನ ಮೋಹಪಾಶದ ಎಳೆಯುವಿಕೆಯನ್ನು ತಪ್ಪಿಸಿಕೊಳ್ಳಲು, ಉಡ್ಯಾಣಬಂಧವೆಂಬ ಮುದ್ರೆಯನ್ನು ಅಧಿಕಾರಿಯು ಅಗತ್ಯವಾಗಿ ಅನುಷ್ಠಾನಮಾಡಬೇಕು. ಮುಖ್ಯತಾತ್ಪರ್ಯವೇನೆಂದರೆ, ಉಡ್ಯಾಣಬಂಧದೊಡನೆ ಸಮಾಧಿಯನ್ನು ಅಭ್ಯಾಸಮಾಡುವುದರಿಂದ, ಬಹಿರ್ಮುಖವಾಗಬೇಕೆಂಬ ಆಶೆಯು ತಪ್ಪಿ ಸಮಾಧಿಯು ಸ್ಥಿರವಾಗುತ್ತಾ ಬರುವುದು.

ಈ ಉಡ್ಯಾಣಬಂಧದ ಮಹತ್ವನ್ನು ಯೋಗತತ್ವೋಪನಿಷತ್, ಯೋಗಕುಂಡಲ್ಯುಪನಿಷತ್, ತೇಜೋಬಿಂದೂಪನಿಷತ್, ವರಾಹೋಪನಿಷತ್ ಮುಂತಾದ ಅನೇಕ ಉಪನಿಷತ್ತುಗಳಲ್ಲಿ,

> ಬದ್ಧೋ ಯೇನ ಸುಷುಮ್ನಾಯಾಂ ಪ್ರಾಣಸ್ತೂಡ್ಡೀಯತೇ ಯತಃ |
> ತಸ್ಮಾ ದುಡ್ಡೀಯನಾಖ್ಯೋಯಂ ಯೋಗಿಭಿ ಸ್ಸಮುದಾಹೃತಃ ||

ತಾ|| ಬಾಹ್ಯವ್ಯಾಪಾರದಲ್ಲಿ ಬಂಧಿಸಲ್ಪಟ್ಟಿರುವ ವಾಯು ಮತ್ತು ಮನಸ್ಸಿನೊಡನೆ ಇರುವ ಬುದ್ಧಿವೃತ್ತಿಯು, ಕುಂಡಲಿನೀಶಕ್ತಿಯೊಡನೆ ಮಧ್ಯನಾಡಿಯಾದ ಸುಷುಮ್ನೆಯೊಳಗೆ ಪ್ರವೇಶಿಸಿ, ಮೇಲಕ್ಕೆ ಹೋಗಲು ಯಾವುದು ಕಾರಣವೋ, ಅದನ್ನು ಯೋಗಿಗಳ ಸಮುದಾಯದಲ್ಲಿ ಉಡ್ಯಾಣಬಂಧವೆಂದು ಹೇಳುತ್ತಾರೆ. ಎಂದು ಸಾರಿರುವುದು.

ಈ ಉಡ್ಯಾಣಮುದ್ರೆಯು, ಅವಿದ್ಯಾಸ್ವರೂಪವೆಂಬ ಆನೆಗೆ ಸಿಂಹದೋಪಾದಿಯಲ್ಲಿ ಇರುವುದೆಂದು,

ಉಡ್ಡೀಯಾಣೋಹ್ಯ ಸೌಬನ್ಧೋ ಮೃತ್ಯುಮಾತಂಗಕೇಸರೀ |

ಎಂಬ ವರಾಹೋಪನಿಷದ್ವಾಕ್ಯವಿರುವುದು. ಆದುದರಿಂದ, ಇಂದ್ರಜಿತ್ತಿನ ನಾಗ ಪಾಶದಿಂದ ಶ್ರೀರಾಮಾದಿಗಳನ್ನು ಗರುಡನು ಹೇಗೆ ಬಿಡಿಸಿದನೋ ಹಾಗೆ ಭೋಗಶಕ್ತಿಯ ಮೋಹಸ್ವರೂಪವಾದ ವಿಷಯಪಾಶದಿಂದ ಬಿಡುಗಡೆಯಾಗಿ ಸಮಾಧಿಯಲ್ಲಿ ಸ್ಥಿರತ್ವವನ್ನು ಪಡೆಯಲು ಗಾರುಡಮಂತ್ರಸ್ವರೂಪದಲ್ಲಿರುವ ಉಡ್ಯಾಣಬಂಧವೆಂಬ ಮುದ್ರೆಯನ್ನು ಅಧಿಕಾರಿಯು ಯಾವ ಹೆದರಿಕೆಯೂ ಇಲ್ಲದೆ ಅನುಷ್ಠಾನಮಾಡತಕ್ಕದ್ದು. ಈ ಪ್ರಕರಣದ ತತ್ವವೇ ಗರುಡನು ಬಂದು ನಾಗಪಾಶದಿಂದ ಬಿಡಿಸಿದ್ದಾಗಿರುವುದು. ಈ ಪ್ರಕರಣದಲ್ಲಿ ಬರೆದಿರುವ ತತ್ವಗಳನ್ನು, ಇಂದ್ರಜಿತ್ತಿನ ಎರಡನೆಯ ಯುದ್ಧದ ಕಥೆಯ ತತ್ವದೊಂದಿಗೆ ಅವಶ್ಯಕವಾಗಿ ಅನ್ವಯಮಾಡಿಕೊಳ್ಳತಕ್ಕದ್ದು. ಮುಖ್ಯವಾಗಿ ಗರುಡನ ತತ್ವವಾದ ಉಡ್ಯಾಣಬಂಧದ ಅಭ್ಯಾಸದಿಂದ ಬುದ್ಧಿವೃತ್ತಿಯು ವಾಯುವಿನೊಡನೆ ಮೂಲಾಧಾರದಿಂದ ಸುಷುಮ್ನಾಮಾರ್ಗದಲ್ಲಿ ಹೊರಟು ಸ್ವಾಧಿಷ್ಠಾನಚಕ್ರವನ್ನು ಭೇದಿಸುವ ಸ್ವರೂಪವೆಂದು ತಿಳಿದುಕೊಳ್ಳಬೇಕು. ಈ ಸ್ಥಿತಿಯೇ ಮೂಲಾಧಾರ ಸ್ವಾಧಿಷ್ಠಾನ ಚಕ್ರಗಳನ್ನು ಸೇರಿಸಿ ಕೊಂಡಿರುವ ಬ್ರಹ್ಮಗ್ರಂಥಿಯನ್ನು ವಿಭೇದನೆಮಾಡುವುದಾಗಿರುವುದು.

## ೧೫ನೆಯ ಪ್ರಕರಣ.

**ಕುಂಭಕರ್ಣನು ಯುದ್ಧಕ್ಕೆ ಬಂದು ಶ್ರೀರಾಮನಿಂದ ಹತನಾದುದು.**



**ತಮೋಗುಣದ ಪ್ರಧಾನಶಕ್ತಿಯ ಸ್ವರೂಪ. ಈ ಪ್ರಧಾನಶಕ್ತಿಯು ಸ್ವಾತ್ಮಭಾವದಿಂದ ಬಿಂದು ಸಹಿತ ವಾದ "ಓಂ" ಕಾರೋಪಾಸನೆಯಿಂದ ನಿಗ್ರಹವಾಗುವ ವಿಚಾರ.**

**ರಾ||** ಕುಂಭಕರ್ಣನು ರಾವಣನಿಂದಲೂ ಮಹೋದರನಿಂದಲೂ ಚೆನ್ನಾಗಿ ಪ್ರೇರಿಸ ಲ್ಪಟ್ಟವನಾಗಿ, ಯುದ್ಧಕ್ಕೆ ಬಂದು ಶ್ರೀರಾಮನಿಂದ ಹತನಾದನು.

**ತತ್ವ||** ಕುಂಭಕರ್ಣ ರಾವಣರು ಶಾಪಗ್ರಸ್ತರಾದ ಜಯವಿಜಯರ ಎರಡನೆಯ ಜನ್ಮವೆಂದೂ, ತಮೋಗುಣ ರಜೋಗುಣ ಚೈತನ್ಯಸ್ವರೂಪರೆಂದೂ, ಹಿಂದೆ ವಿಭೀಷಣ ಶರಣಾಗತಿಯ ಪ್ರಕರಣದಲ್ಲಿ ತಿಳಿಸಿರುವುದಷ್ಟೆ! ಅಲ್ಲದೆ, ಜಯವಿಜಯರ ಪ್ರಥಮಜನ್ಮವಾದ ಹಿರಣ್ಯಾಕ್ಷ ಹಿರಣ್ಯಕಶಿಪುಗಳ ತತ್ವವೇ ತಮೋಗುಣ ರಜೋಗುಣಗಳಿಗೆ ಪ್ರಥಮಾವಸ್ಥೆ ಯೆನಿಸುವ ಸೃಷ್ಟಿಕ್ರಮವಾಗಿರುವುದೆಂದೂ ತಿಳಿಸಿತಷ್ಟೆ! ಈ ಕುಂಭಕರ್ಣನ ಜನ್ಮವೇ ತಮೋಗುಣದ ಎರಡನೆಯದೆನಿಸುವ ಸ್ಥಿತಿಕ್ರಮದ ಅವಸ್ಥೆಯು. ತಮೋಗುಣಕ್ಕೆ

ಸ್ಥಿತಿಕ್ರಮದಲ್ಲಿ ಪ್ರಧಾನವಾಗಿರುವ ಸ್ವರೂಪವೇ ಅಂಧಕಾರವಾದ ನಿದ್ರಾವಸ್ಥೆಯು. ನಿದ್ರಾವಸ್ಥೆಯು ತಮೋಗುಣರೂಪವಾದುದೆಂದು ಸರ್ವರಿಗೂ ತಿಳಿದೇ ಇರುವುದು.

ತಮೋಗುಣವು ಶುದ್ಧ ಜಡಸ್ವಭಾವವಾದುದು. ಇದರಲ್ಲಿ ಬಿದ್ದ ಪರಮಾತ್ಮನ ಪ್ರಕಾಶವು ಅಷ್ಟು ಪ್ರತಿಫಲಿಸುವುದಿಲ್ಲ. ಆದುದರಿಂದ, ರಜೋಗುಣಸ್ವರೂಪನಾದ ರಾವಣನೇ ಅವಿದ್ಯೆಗೆ ಧೊರೆಯ ತತ್ವದಲ್ಲಿರುವನು. ಕುಂಭಕರ್ಣನಿಗೆ ಈ ಹೆಸರು ಬರಲು ಕಾರಣವೇನೆಂದರೆ—ಕುಂಭವೆಂದರೆ, ಪೂರ್ಣವಾಗಿರುವುದು. ಸೃಷ್ಟಿಕ್ರಮದಲ್ಲಿ ಪೂರ್ಣವಾಗಿರುವುದೇ ಬ್ರಹ್ಮಾಂಡಸ್ವರೂಪವು. ದೇವತಾವ್ರತಾದಿಗಳಲ್ಲಿ ಬ್ರಹ್ಮಾಂಡದ ತತ್ವಾರ್ಥದ ಸೂಚನೆಯಾಗಿಯೇ ಕಲಶಸ್ಥಾಪನೆ ಮಾಡುವರು. ಮುಖ್ಯತಾತ್ಪರ್ಯವೇನೆಂದರೆ—ಕುಂಭವೆಂದರೆ, ಪೂರ್ಣವಾಗಿರುವ ಬ್ರಹ್ಮಾಂಡವೆಂದು ಅನ್ವಯವಾಗುವುದು. ಇಂತಹ ಪೂರ್ಣವಾದ ಬ್ರಹ್ಮಾಂಡವೇ ಕರ್ಣವಾದರೆ, ಕರ್ಣದ ಕಾರ್ಯವಾದ ವಿಕ್ಷೇಪ ಅಥವಾ ಶಬ್ದಗ್ರಹಣಕ್ಕೆ ಅವಕಾಶವೆಲ್ಲಿರುವುದು? ಅಂದರೆ, ವಿಕ್ಷೇಪಕ್ಕೆ ಅವಕಾಶವಿಲ್ಲವೆಂಬ ತಾತ್ಪರ್ಯ. ವಿಕ್ಷೇಪಕ್ಕೆ ಅವಕಾಶವಿಲ್ಲದಿರುವುದರಿಂದ, ತಮೋಗುಣವು ಜಡಸ್ವರೂಪವಾಗಿರುವುದೆಂಬ ತಾತ್ಪರ್ಯ. ಹೇಗೆಂದರೆ, ನಿದ್ರೆಯಲ್ಲಿ ವಿಕ್ಷೇಪಸ್ವರೂಪವಾದ ಪ್ರಪಂಚವ್ಯಾಪಾರವಿಲ್ಲವಾದುದರಿಂದ ಜಡಸ್ವರೂಪವಾದ ತಮೋಗುಣವೇ ಪೂರ್ಣವಾಗಿರುವುದು. ಆದುದರಿಂದ, ಕುಂಭಕರ್ಣನೆಂದರೆ ಜಡವಾದ ತಮೋಗುಣಸ್ವರೂಪ. ಎಂದರೆ ನಿದ್ರಾ ಮತ್ತು ಅಂಧಕಾರದ ಸ್ವರೂಪ.

ಇಂತಹ ಅಂಧಕಾರಸ್ವರೂಪವಾಗಿ, ಜಡವಾಗಿ ಪ್ರಾಣಿಗಳಲ್ಲಿ ಮುಖ್ಯವಾಗಿರುವ ಅವಸ್ಥೆಯೇ ನಿದ್ರಾಸ್ವರೂಪವು. ಆದುದರಿಂದ, ಕುಂಭಕರ್ಣನು ಪ್ರಾಣಿಗಳಲ್ಲಿ ತಮೋಗುಣ ಪ್ರಧಾನಾವಸ್ಥೆಯಾದ ನಿದ್ರೆಯ ತತ್ವದವನಾಗಿರುವನು. ಅಂದರೆ ಪ್ರಾಣಿಗಳಲ್ಲಿ ಸುಷುಪ್ತ್ಯವಸ್ಥೆಯನ್ನು ಕೊಡಲು ಇವನೇ ಕಾರಣನು. ನಿದ್ರಾವಸ್ಥೆಯೇ ಅಂಧಕಾರಾವಸ್ಥೆಯಾಗಿರುವುದು. ಇದೇ ಕುಂಭಕರ್ಣನ ತತ್ವವಾಗಿದೆ.

ಈ ರಜಸ್ತಮೋಗುಣಗಳ ಅವಸ್ಥೆಯು ಜಗತ್ತಿನ ಕಾಲಚಕ್ರದಲ್ಲಿ ಹೇಗಿರುವುದೆಂದರೆ-ರಾತ್ರಿಯ ಕಾಲವೇ ತಮೋಗುಣವಾಗಿಯೂ, ಹಗಲೇ ರಜೋಗುಣವಾಗಿಯೂ ಇರುತ್ತವೆ. ಈ ಕಾಲಚಕ್ರದಲ್ಲಿ, ರಜೋಗುಣ ತಮೋಗುಣಗಳೊಡನೆ ಬೆರೆತ ಸತ್ವಗುಣದ ಸ್ವಭಾವವೆಂದರೆ ಮಲಿನಸತ್ವಗುಣದ ಕಾಲವೂ ಇರುವುದು. ಈ ಮಿಶ್ರಸತ್ವಗುಣದ ಕಾಲವು ಯಾವುದೆಂದರೆ, ರಜೋಗುಣ, ತಮೋಗುಣಗಳ ಅವಸ್ಥೆಯಾದ ಹಗಲು ಮತ್ತು ರಾತ್ರಿಗಳ ಮಧ್ಯಕಾಲ. ಅಂದರೆ, ಬೆಳಗಿನಝಾವ ಅರುಣೋದಯಕಾಲವಾದ ನಾಲ್ಕು ಘಂಟೆಯಿಂದ ಬೆಳಗಿನ ಎಂಟು ಘಂಟೆಯವರೆಗೂ, ಸಾಯಂಕಾಲ ನಾಲ್ಕು ಘಂಟೆಯಿಂದ ರಾತ್ರಿ ಎಂಟು ಘಂಟೆಯವರೆಗೂ ಸ್ವಾಭಾವಿಕವಾಗಿ ಶಾಂತವಾದ ಕಾಲವಾಗಿರುವುದರಿಂದ, ಈ ಎರಡು

ಕಾಲಗಳೂ ಮಲಿನಸತ್ವಗುಣದ ಕಾಲಗಳಾಗಿರುವುವು. ಕಾಲಚಕ್ರದಲ್ಲಿ ಸ್ವಾಭಾವಿಕವಾಗಿ ಶಾಂತವಾಗಿರುವ ಈ ಕಾಲವೇ ವಿಭೀಷಣನ ತತ್ವದಲ್ಲಿರುವುದು. ಇಂತಹ ಮಲಿನಸತ್ವ ಗುಣದ ಕಾಲವು, ಸ್ವಾಭಾವಿಕವಾಗಿ ಶಾಂತವಾದ ಕಾಲವಾಗಿರುವುದರಿಂದಲೂ, ಈ ಮಲಿನ ಸತ್ವಗುಣದ ಸೋಪಾನದಿಂದಲೇ ಶುದ್ಧಸತ್ವಗುಣಸ್ವರೂಪವಾದ ಈಶ್ವರತ್ವವನ್ನು ಪಡೆಯ ಬೇಕಾಗಿರುವುದರಿಂದಲೂ, ಇಂತಹ ಪ್ರಾತಃ ಮತ್ತು ಸಾಯಂಸಂಧ್ಯಾಕಾಲಗಳು ಪರಮಾತ್ಮನ ಆರಾಧನೆ ಮತ್ತು ಧ್ಯಾನಕ್ಕೆ ಉತ್ತಮವಾದವುಗಳೆಂದು ಶಾಸ್ತ್ರವಿಧಾಯಕ ವಾಗಿರುವುದು.

ಮೇಲೆ ತಿಳಿಸಿರುವ ಜಗತ್ತಿನ ಕಾಲಚಕ್ರಸ್ವರೂಪದಲ್ಲಿರುವ ರಜೋಗುಣ ತಮೋಗುಣ ಮತ್ತು ಮಲಿನಸತ್ವಗುಣಗಳ ಅವಸ್ಥೆಗಳು ನಮ್ಮಲ್ಲಿ ಯಾವ ಕಾಲಗಳಲ್ಲಿರುವುವೆಂದರೆ— ನಿದ್ರಾಕಾಲವೇ ತಮೋಗುಣದ ಅವಸ್ಥೆಯಾಗಿಯೂ, ವಿಕ್ಷೇಪ ಅಥವಾ ಭ್ರಮಣರೂಪವಾದ ಪ್ರಪಂಚವ್ಯಾಪಾರದಲ್ಲಿರುವ ಕಾಲವೇ ರಜೋಗುಣದ ಅವಸ್ಥೆಯಾಗಿಯೂ, ನಿದ್ರಾ ಮತ್ತು ಭ್ರಮಣರೂಪಾವಸ್ಥೆಗಳಿಲ್ಲದೆ ಶಾಂತಸ್ವಭಾವವಾಗಿರುವ ಕಾಲವೇ ಮಲಿನಸತ್ವಗುಣದ ಅವಸ್ಥೆಯಾಗಿಯೂ ಇರುವುವು. ನಮ್ಮಲ್ಲಿ ಶುದ್ಧಸತ್ವಗುಣದ ಅವಸ್ಥೆಯು ಸವಿಕಲ್ಪ ಸಮಾಧಿಯ ಕೊನೆಯ ಭಾಗದಲ್ಲೂ, ಜೀವನ್ಮುಕ್ತರಲ್ಲೂ ಉಂಟಾಗುವ ಉನ್ಮನೀಭಾವದ ಸೋಪಾನಗಳಲ್ಲಿರುವುದು. ನಮ್ಮಲ್ಲಿ ನಿರ್ಗುಣಸೋಪಾನವಾದರೋ ನಿರ್ವಿಕಲ್ಪಸಮಾಧಿಯ ರೂಪವೆಂದರೆ, ಪರಮಾತ್ಮಾನುಭೂತ್ಯವಸ್ಥೆಯು ಸೋಪಾನದಲ್ಲಿರುವುದು. ಇಂತಹ ಪರ ಮಾತ್ಮಾನುಭೂತ್ಯವಸ್ಥೆಯನ್ನು ಹೊಂದಲು, ರಜೋಗುಣ ತಮೋಗುಣಗಳ ಅವಸ್ಥೆಯಿಂದ ಮಲಿನಸತ್ವಗುಣದ ಸೋಪಾನಕ್ಕೆ ಬಂದು, ತದನಂತರ ನಿರ್ಗುಣವಾದ ಪರಮಾತ್ಮಾನು ಭೂತ್ಯವಸ್ಥೆಯನ್ನು ಹೊಂದಬೇಕು.

ರಜೋಗುಣಚೈತನ್ಯಸ್ವರೂಪನಾದ ರಾವಣನಿಗೆ ಭೋಗಶಕ್ತಿ, ಅವಿದ್ಯಾದೃಢತರ ಸಮ್ಮೋಳನಶಕ್ತಿ ಮತ್ತು ಆಗಾಮಿವಾಸನೆಯ ತತ್ವದವರಾದ ಮೂವರು ಮಕ್ಕಳಿರುವಂತೆ, ಕುಂಭಕರ್ಣನಿಗೂ ಇಬ್ಬರು ಪುತ್ರರಿರುವರು. ಇವರಲ್ಲಿ ನಿಕುಂಭನು ತಮೋಗುಣದ ಮೋಹ ಶಕ್ತಿಯ ತತ್ವದವನು. ಕುಂಭನು ದುಃಖಸ್ವರೂಪದ ಶಕ್ತಿಯ ತತ್ವದವನು. ರಜಸ್ತಮೋ ಗುಣಗಳಲ್ಲಿ ಅವುಗಳ ಸರ್ವ ಧರ್ಮಗಳಿದ್ದರೂ ಕಾರ್ಯಭೇದಗಳಿಂದ ಪುತ್ರರ ಸ್ವರೂಪದಲ್ಲಿ ಇರುವರು. "ಆತ್ಮಾವೈಪುತ್ರನಾಮಾಸಿ" ಎಂಬ ವಾಕ್ಯದಂತೆ ರಜಸ್ತಮೋಗುಣಗಳ ಚೈತ ನ್ಯದ ತತ್ವದಲ್ಲಿರುವ ರಾವಣ ಕುಂಭಕರ್ಣರ ಮಕ್ಕಳು ಪ್ರಬಲರಾಗಿಯೇ ಇರುವರು. ಕುಂಭಕರ್ಣನು ತಮೋಗುಣದ ಪ್ರಧಾನಪುರುಷನಾದುದರಿಂದ, ಇವನೇ ತಮೋಗುಣದ ಸರ್ವ ಧರ್ಮಕ್ಕೂ ಮೂಲಕಾರಣನು. ಈ ತಮೋಗುಣದ ಧರ್ಮಗಳು ಯಾವುವೆಂದರೆ, ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೧೧೮ನೆಯ ಶ್ಲೋಕದಲ್ಲಿ ಹೇಳಿರುವಂತೆ,

ಅಜ್ಞಾನಮಾಲಸ್ಯ ಜಡತ್ವ ನಿದ್ರಾ |
ಪ್ರಮಾದ ಮೂಢತ್ವಮುಖಾ ಸ್ತಮೋಗುಣಾಃ ||
ಏತೈಃ ಪ್ರಯುಕ್ತೋ ನಹಿ ವೇತ್ತಿ ಕಿಂಚಿ |
ನ್ನಿದ್ರಾಳುವತ್ ಸ್ತಂಭವದೇವ ತಿಷ್ಠತಿ ||

ತಾ|| ಅಜ್ಞಾನ, ಸೋಮಾರಿತನ, ಮಾನ್ದ್ಯ, ನಿದ್ರಾ, ಮರವು, ಮೂಢತ್ವ ಮೊದಲಾದುವುಗಳೆಲ್ಲವೂ, ತಮೋಗುಣದ ಧರ್ಮಗಳು. ಇವುಗಳಿಂದ ಕೂಡಿದ ಮನುಷ್ಯನು ಯಾವುದನ್ನೂ ತಿಳಿಯದೆ ನಿದ್ರೆಹೋಗುವವನಂತೆಯೂ, ಕಂಭದ ಹಾಗೆ ಜಡನಾಗಿಯೂ ಇರುವನು.

ಅಲ್ಲದೆ, ಈ ತಮೋಗುಣವು ಬೆಳಕಾಗಿರುವ ಹಗಲನ್ನು ತನ್ನ ಗಾಢಾಂಧಕಾರದಿಂದ ಹೇಗೆ ಮುಚ್ಚುವುದೋ ಹಾಗೆ ಪ್ರಾಣಿಗಳಲ್ಲಿರುವ ಆತ್ಮಸ್ವರೂಪಕ್ಕೆ ಆವರಣವನ್ನುಂಟುಮಾಡಿಕೊಂಡು, ತನ್ನ ನಿದ್ರೆಯ ಅವಸ್ಥೆಯಿಂದ ವಿಜೃಂಭಿಸುವುದು. ಈ ತಾತ್ಪರ್ಯಕ್ಕೂ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೧೪೫ನೆಯ ಶ್ಲೋಕದಲ್ಲಿ,

ಕಬಳಿತದಿನನಾಥೇ ದುರ್ದಿನೇ ಸಾಂದ್ರಮೇಘೈ |
ರ್ವ್ಯಥಯತಿ ಹಿಮಝಂಝಾವಾಯು ರುಗ್ರೋ ಯಥೈತಾನ್ ||
ಅವಿರತ ತಮಸಾತ್ಮ ನ್ಯಾವೃತೇ ಮೂಢಬುದ್ಧಿಂ |
ಕ್ಷಪಯತಿ ಬಹುದುಃಖೈ ಸ್ತೀವ್ರವಿಕ್ಷೇಪಶಕ್ತಿಃ ||

ತಾ|| ಒತ್ತಾದ ಮೇಘಗಳಿಂದ ಸೂರ್ಯನು ಆವರಿಸಲ್ಪಡಲು, ಸೂರ್ಯರಶ್ಮಿಯೇ ಕಾಣದೆ ಇರುವ ದುರ್ದಿನದಲ್ಲಿ ಹೇರಳವಾದ ಕಗ್ಗತ್ತಲೆಯಿಂದ ಕೂಡಿದ ಬಿರುಗಾಳಿಯು ಹೇಗೆ ಅತ್ಯಂತವಾಗಿ ಕಳವಳಪಡಿಸುವುದೋ ಹಾಗೆ ಅಜ್ಞಾನಾಂಧಕಾರವು ಪರಮಾತ್ಮನನ್ನು ಮರೆಮಾಡಲು, ವಿಕ್ಷೇಪಶಕ್ತಿಯು ಬಗೆಬಗೆಯಾದ ಪ್ರಪಂಚವ್ಯಾಪಾರಗಳಿಂದ ಮೂಢಬುದ್ಧಿಯುಳ್ಳ ಮನುಷ್ಯನನ್ನು ಬಹುದುಃಖಗಳಿಂದ ಪೀಡಿಸುತ್ತದೆ. ಎಂಬದಾಗಿ ಹೇಳಿರುವರು.

ಅಲ್ಲದೆ ಈ ತಮೋಗುಣವೇ ಆತ್ಮನನ್ನು ಮರೆಮಾಡಿಕೊಂಡಿರುವುದರಿಂದ, ವೃಕ್ಷವಾಗುವುದಕ್ಕೆ ಕಾರಣವಾದ ಬೀಜದಂತಿರುವುದು. ಈ ತಾತ್ಪರ್ಯವೇ ಶ್ರೀರಾಮನು ಅಯೋಧ್ಯೆಯಿಂದ ಹೊರಟು, ಪ್ರಥಮದಲ್ಲಿ ತಮಸಾತೀರಕ್ಕೆ ಬಂದ ಸಂದರ್ಭದಲ್ಲಿ ಬಂದಿರುವುದು. ಈ ತಮೋಗುಣವೇ, ಪ್ರಥಮಕಾರಣವೆನ್ನುವ ತಾತ್ಪರ್ಯಕ್ಕೆ ಶ್ರೀಶಂಕರ ಭಗವತ್ಪಾದರವರು ವಿವೇಕಚೂಡಾಮಣಿ ೧೪೭ನೆಯ ಶ್ಲೋಕದಲ್ಲಿ,

" ಬೀಜಂ ಸಂಸೃತಿಭೂಮಿಜಸ್ಯತು ತಮಃ "

ಸಂಸಾರವೆಂಬ ವೃಕ್ಷಕ್ಕೆ, ತಮೋಗುಣವೇ ಬೀಜದಂತೆ ಹೇಳಿರುವರು. ಇಂತಹ ತಮೋಗುಣದ ಪ್ರಧಾನಶಕ್ತಿಯು ತತ್ವದಲ್ಲಿರುವ ಕುಂಭಕರ್ಣನು ರಾವಣ ಮತ್ತು ಮಹೋದರರಿಂದ ಚೆನ್ನಾಗಿ ಉದ್ಬೋಧಿಸಲ್ಪಟ್ಟವನಾಗಿ ಯುದ್ಧಕ್ಕೆ ಬಂದನಷ್ಟೆ! ರಾವಣ ನಿಂದ ಉದ್ಬೋಧಿಮಾಡಲ್ಪಟ್ಟನೆಂದರೆ—"ರಾವಯತಿ ಭೀಷಯತಿ ಸರ್ವಾ್ ಇತಿ ರಾವಣಃ" ಎಂಬ ವ್ಯುತ್ಪತ್ತಿಯನ್ನನುಸರಿಸಿ ತಮೋಗುಣದಲ್ಲಿರತಕ್ಕ ಭಯಸ್ವರೂಪವು ಚೆನ್ನಾಗಿ ಉದ್ಬೋಧೆಯಾಗುವ ತತ್ವವೇ ರಾವಣನಿಂದ ಕುಂಭಕರ್ಣನು ಪ್ರೋತ್ಸಾಹಿಸಲ್ಪಟ್ಟ ತತ್ವ ವಾಗಿರುವುದು. ಅಂದರೆ, ತಮೋಗುಣವೇ ಭಯಂಕರಸ್ವರೂಪವೆಂಬ ತತ್ವವು. ಮಹೋ ದರನಿಂದ ಕುಂಭಕರ್ಣನು ಉದ್ಬೋಧಿತನಾಗಿ ಬಂದ ತತ್ವವೇನೆಂದರೆ—ಮಹೋದರ ನೆಂದರೆ, ಉನ್ಮತ್ತಸ್ವಭಾವವೆಂದು ಹಿಂದೆ ರಾವಣನ ಪರಿವಾರದ ನಿಗ್ರಹಪ್ರಕರಣದಲ್ಲಿ ತಿಳಿಸಿತಷ್ಟೆ! ಮಹೋದರನಿಂದ ಕುಂಭಕರ್ಣನು ಉದ್ಬೋಧಿತನಾಗಿ ಬಂದನೆಂದರೆ— ತಮೋಗುಣದ ನಿದ್ರಾವಸ್ಥೆ ಅಥವಾ ಅಂಧಕಾರವು ಅತ್ಯಂತ ಆವೇಶದೊಡಗೂಡಿರುವುದೆಂಬ ತತ್ವವಾಗಿರುವುದು.

**ರಾ||** ಕುಂಭಕರ್ಣನು, ರಾವಣನ ಮಂತ್ರಾಲೋಚನೆಯ ಸಭೆಯಲ್ಲಿ ರಾವಣ ನನ್ನು ಯುದ್ಧೋನ್ಮುಖನನ್ನಾಗಿಯೇ ಪ್ರೇರಿಸಿದನು. ಆದರೆ, ಈಗ ಯುದ್ಧಕ್ಕೆ ಹೊರ ಡೆಂದು ರಾವಣನು ಕುಂಭಕರ್ಣನಿಗೆ ಹೇಳಲು, ಅವನು ಹಿಂದೆ ಮಂತ್ರಾಲೋಚನೆಯ ಸಭೆಯಲ್ಲಿ ಸೀತೆಯನ್ನು ಶ್ರೀರಾಮನಿಗೊಪ್ಪಿಸೆಂದು ತಾನು ಹೇಳಿದ ಬುದ್ಧಿವಾದವನ್ನು ಕೇಳ ದ್ದರಿಂದ, ಯುದ್ಧಸ್ವರೂಪವಾದ ಹಾನಿಯುಂಟಾಯಿತೆಂದು ರಾವಣನನ್ನು ನಿಂದಿಸಿದನು.

**ತತ್ವ||** ಮಂತ್ರಾಲೋಚನೆಯ ಸಭೆಯಲ್ಲಿ ಕುಂಭಕರ್ಣನು ಸೀತೆಯನ್ನು ಶ್ರೀರಾಮನಿಗೆ ಒಪ್ಪಿಸಬೇಕೆಂದು ಬುದ್ಧಿವಾದವನ್ನು ಹೇಳಿಯೇ ಇಲ್ಲ. ಈಗ ಹಿಂದೆ ಬುದ್ಧಿವಾದ ವನ್ನು ಹೇಳಿದ್ದೆನೆಂದು ಹೇಳುವುದು ಶುದ್ಧಸುಳ್ಳು. ಆದುದರಿಂದ, ಸುಳ್ಳುಹೇಳುವ ಮತ್ತು ಮರೆಯುವ ಸ್ವಭಾವವು ತಮೋಗುಣಕ್ಕೆ ಸೇರಿದುದೆಂಬ ತತ್ವದ ಸೂಚನೆಯೇ ಮೇಲಿನ ಕಥೆಯ ಅಂತರಾರ್ಥವಾಗಿರುವುದು. ಅಲ್ಲದೆ, ಮಲಗಿದ್ದವರನ್ನು ಯಾವುದಾದರೂ ಕಾರ್ಯ ಮಾಡಲು ಎಬ್ಬಿಸಿದರೆ ನಿದ್ರಾವೇಶದಿಂದ ಏಳಲಾರದೆ ಏನಾದರೂ ಒಂದು ಅಸಮಂಜಸ ವಾದ ಉತ್ತರವನ್ನು ಹೇಳುವ ಸ್ವಭಾವವೂ ಇರುವುದಷ್ಟೆ! ಈ ಸ್ವಭಾವವೂ ತಮೋ ಗುಣಕ್ಕೇ ಸೇರಿದುದು.

**ರಾ||** ಕುಂಭಕರ್ಣನು ಯುದ್ಧಕ್ಕೆ ಬಂದು, ವಾನರಭಲ್ಲೂಕಗಳ ಸೈನ್ಯದಲ್ಲಿ ನುಗ್ಗಿ ಸೈನ್ಯವನ್ನು ಭಕ್ಷಿಸುತ್ತಾ ಬಂದನು.

**ತತ್ವ||** ವಾನರ ಭಲ್ಲೂಕಗಳೆಂದರೆ ಇಂದ್ರಿಯುಗಳ ಮತ್ತು ವಾಯುಗಳ ತತ್ವದವ ರೆಂದು ತಿಳಿಸಿರುವುದಷ್ಟೆ! ತಮೋಗುಣವು,

" ಸುಷುಪ್ತಿಕಾಲೇ ಸಕಲೆ ವಿಲೀನೆ ತಮೋಭಿಭೂತಃ "

ಎಂಬ ಶ್ರುತಿವಾಕ್ಯದಂತೆ ನಿದ್ರಾಸ್ವರೂಪವಾದ ಕಗ್ಗತ್ತಲೆಯಲ್ಲಿ ಪಂಚಪ್ರಾಣಗಳು ಹೊರತು ಉಳಿದ ಇಂದ್ರಿಯ ಮುಂತಾದವುಗಳನ್ನು ಲೀನವಾಡಿಕೊಳ್ಳುವ ತತ್ವವೇ ಕುಂಭಕರ್ಣನು ವಾನರ ಭಲ್ಲೂಕಗಳ ಸೈನ್ಯದಲ್ಲಿ ನುಗ್ಗಿ ಸೈನ್ಯವನ್ನು ಭಕ್ಷಿಸುತ್ತಿದ್ದ ತತ್ವವಾಗಿರುವುದು.

**ರಾ||** ಕುಂಭಕರ್ಣನು ಸುಗ್ರೀವನೊಡನೆ ಯುದ್ಧಕ್ಕೆ ಹೊರಟು ಪ್ರಥಮದಲ್ಲಿ ಅಂಗದ ಹನುಮಂತರನ್ನು ನೋಯಿಸಿ, ಅನಂತರ ಸುಗ್ರೀವನನ್ನೂ ನೋಯಿಸಿ, ಸುಗ್ರೀವನನ್ನು ತನ್ನ ಕಂಕುಳಿನ ಸಂದಿಯಲ್ಲಿ ಸೆರೆಹಿಡಿದು ಸಂತೋಷದಿಂದ ಹಿಂದಿರುಗಿ ಹೋಗುತ್ತಿದ್ದನು. ಇಂತಹ ಕಾಲದಲ್ಲಿ ಹನುಮಂತನು ಸಮೀಪದಲ್ಲಿದ್ದರೂ ಸಹಾಯಕ್ಕೆ ಹೋಗಲಾರದೆ ತಟಸ್ಥ ಭಾವವನ್ನು ಹೊಂದಬೇಕಾಯಿತು.

**ತತ್ವ||** ಸುಗ್ರೀವನು ಪ್ರಾಣವಾಯು ತತ್ವದವನಷ್ಟೆ! ನಿದ್ರಾಕಾಲದಲ್ಲಿ ಪಂಚಪ್ರಾಣಗಳು ತಮೋಗುಣದಲ್ಲಿ ಲೀನವಾಗದೆ ಎಚ್ಚರಿಕೆಯಿಂದಿದ್ದು ತಮ್ಮ ಕಾರ್ಯವನ್ನು ಮಾಡುತ್ತಿರುತ್ತವೆ. ಇದೇ ತಾತ್ಪರ್ಯಕ್ಕೆ ಪ್ರಶ್ನೋಪನಿಷತ್ತಿನಲ್ಲಿ,

" ಪ್ರಾಣಾಗ್ನಯ ಏವೈತಸ್ಮಿನ್ ಪುರೇಜಾಗ್ರತಿ "

ಎಂಬ ವಾಕ್ಯವಿರುವುದು. ಆದುದರಿಂದ, ನಿದ್ರೆಯ ಆವೇಶದ ಬಲೆಗೆ ಪಂಚಪ್ರಾಣಗಳು ಸಿಕ್ಕಿಕೊಳ್ಳುವುದಿಲ್ಲ. ಎಂತಹ ಕಾಲದಲ್ಲಿ ಪ್ರಾಣವಾಯುವು ತಮೋಗುಣದ ಆವೇಶದ ಬಲೆಯಿಂದ ಬಂಧಿಸಲ್ಪಡುವುದೆಂದರೆ—ಅತ್ಯಂತ ಭಯವುಂಟಾದ ಕಾಲದಲ್ಲಿಯೂ ಇದಕ್ಕಿಂತಲೂ ಅಧಿಕವಾಗಿ ಮೂರ್ಛಾವಸ್ಥೆಯ ಕಾಲದಲ್ಲಿಯೂ, ಪ್ರಾಣವಾಯುವು ತಮೋಗುಣದ ಬಲೆಗೆ ಸಿಕ್ಕಿಕೊಳ್ಳುವುದು. ಆದುದರಿಂದ, ಕುಂಭಕರ್ಣನು ಸುಗ್ರೀವನೊಡನೆ ಯುದ್ಧಕ್ಕೆ ಬಂದು ಸುಗ್ರೀವನನ್ನು ನೋಯಿಸಿ, ತನ್ನ ಕಂಕುಳ ಸಂದಿಯಲ್ಲಿ ಸುಗ್ರೀವನನ್ನು ಬಂಧಿಸಿ ತೆಗೆದುಕೊಂಡು ಹೋದನೆಂದರೆ—ಮೂರ್ಛಾವಸ್ಥೆಯ ಸ್ವರೂಪವೆಂದು ತಿಳಿದುಕೊಳ್ಳಬೇಕು. ಅಂದರೆ ಕುಂಭಕರ್ಣನ ತತ್ವದಲ್ಲಿರುವ ತಮೋಗುಣದ ಪ್ರಧಾನಶಕ್ತಿಯು ಮೂರ್ಛಾವಸ್ಥೆಯನ್ನುಂಟುಮಾಡುವ ತನ್ನ ಶಕ್ತಿಯನ್ನು ಪ್ರಯೋಗ ಮಾಡಿತೆಂಬ ತತ್ವವಾಗಿರುವುದು. ಇಂತಹ ಮೂರ್ಛಾವಸ್ಥೆಯಲ್ಲಿ ಪ್ರಾಣವಾಯುವು ತಮೋಗುಣದ ಬಲೆಯಲ್ಲಿ ಬೀಳುವ ತತ್ವವೇ ಸುಗ್ರೀವನನ್ನು ಕುಂಭಕರ್ಣನು ಎತ್ತಿಕೊಂಡು ಹೋದ ತತ್ವವಾಗಿರುವುದು. ಈ ಮೂರ್ಛಾವಸ್ಥೆಯ ಕಾಲದಲ್ಲಿ ಶ್ವಾಸೋ

ಚ್ಛ್ವಾಸವು ತನ್ನ ಕಾರ್ಯವನ್ನು ಮಾಡಲಾರದೆ ನೊಂದು ತಟಸ್ಥಭಾವವನ್ನು ಪಡೆಯುವುದೇ ಹನುಮಂತನು ಕೂಡ ಕುಂಭಕರ್ಣನಿಂದ ನೊಂದು ತಟಸ್ಥನಾಗಿ ನಿಂತುದಾಗಿದೆ.

**ರಾ||** ಕುಂಭಕರ್ಣನು ಸುಗ್ರೀವನನ್ನು ಹಿಡಿದುಕೊಂಡು ಹೋಗುತ್ತಿರುವಾಗ ಸುಗ್ರೀವನು ಚೇತರಿಸಿಕೊಂಡು ಕುಂಭಕರ್ಣನ ಕಿವಿಮೂಗುಗಳನ್ನು ಕಡಿದು ದೇಹವನ್ನು ಪರಚಿ ಹಿಂದಿರುಗಿದನು.

**ತತ್ವ||** ಸುಗ್ರೀವನು ಕುಂಭಕರ್ಣನ ಬಲೆಯಿಂದ ತಪ್ಪಿಸಿಕೊಂಡು ಬಂದನೆಂದರೆ — ಮೂರ್ಛಾವಸ್ಥೆಯಿಂದ ಬಿಡುಗಡೆಯುಂಟಾಗುವ ಸ್ವಭಾವದ ತತ್ವವಾಗಿರುವುದು.

**ರಾ||** ಸುಗ್ರೀವನಿಂದ ಭಂಗವುಂಟಾಗಲು, ಕುಂಭಕರ್ಣನು ಅತ್ಯಂತ ಕೋಪದಿಂದ ಹೊರಟು ಶ್ರೀರಾಮಲಕ್ಷ್ಮಣರನ್ನೆದುರಿಸಿಕೊಂಡು ಬಂದನು. ಲಕ್ಷ್ಮಣನು ಕುಂಭಕರ್ಣನ ಮೇಲೆ ಬಾಣಪ್ರಯೋಗಮಾಡಿದರೂ ಪ್ರಯೋಜನಕ್ಕೆ ಬರಲಿಲ್ಲವಾದ್ದರಿಂದ, ಶ್ರೀರಾಮನೇ ಕುಂಭಕರ್ಣನೊಡನೆ ಯುದ್ಧಮಾಡಲು ಹೊರಟನು. ಲಕ್ಷ್ಮಣನೂ ಜೊತೆಯಲ್ಲಿದ್ದು ಸಹಾಯಮಾಡುತ್ತಿದ್ದನು.

**ತತ್ವ||** ಲಕ್ಷ್ಮಣನು ಮನಸ್ಸತ್ವಪ್ರಕಾಶಕನು. ಮನಸ್ಸಿನ ವೃತ್ತಿಯು ಇಂದ್ರಿಯ ಪ್ರೇರಕ ಕ್ರಿಯಾತ್ಮಕವಾದುದು. ಕುಂಭಕರ್ಣನು ತಮೋಗುಣದ ಪ್ರಧಾನನೆಂದರೆ— ಆವರಣ ಅಥವಾ ಅಂಧಕಾರದ ತತ್ವದವನಷ್ಟೆ! ನಿದ್ರೆಯೂ ತಮೋಗುಣದ ಆವರಣ ವಾಗಿರುವುದು. ಅಂಧಕಾರವನ್ನು ಹಾಳುಮಾಡಲು ಬೆಳಕೇ ಬೇಕಾಗಿರುವಂತೆ, ಅಜ್ಞಾನ ವನ್ನು ಹಾಳುಮಾಡಲು ಜ್ಞಾನಶಕ್ತಿಯೇ ಬೇಕು. ಆದುದರಿಂದ ಕ್ರಿಯಾತ್ಮಕದ ತತ್ವ ದಲ್ಲಿರುವ ಲಕ್ಷ್ಮಣನೇ ಅಂಧಕಾರವನ್ನು ಹಾಳುಮಾಡಲಾರನು. ಈ ಕಾರಣದಿಂದ ಲಕ್ಷ್ಮಣನು ಕುಂಭಕರ್ಣನ ಮೇಲೆ ಬಿಟ್ಟ ಬಾಣಗಳು ವ್ಯರ್ಥವಾದುದರಿಂದ ಬುದ್ಧಿತತ್ವ ಪ್ರಕಾಶಕ ಅಥವಾ ಜ್ಞಾನಶಕ್ತಿತತ್ವಸ್ವರೂಪನಾದ ಶ್ರೀರಾಮನೇ ಕುಂಭಕರ್ಣನೊಡನೆ ಯುದ್ಧಮಾಡಲು ಬಂದನು.

ಹಾಗಾದರೆ, ಅಂಧಕಾರಸ್ವರೂಪವನ್ನು ಹಾಳುಮಾಡಲು ಕ್ರಿಯಾತ್ಮಕವಾದ ಮನೋ ವೃತ್ತಿಯೇ ಪ್ರಯೋಜನವಿಲ್ಲವೆಂದು ಹೇಳಬಾರದು. ಜ್ಞಾನಶಕ್ತಿಗೆ ಸಹಾಯಕವಾಗಿ ಕ್ರಿಯಾಶಕ್ತಿಯೂ ಇದ್ದರೆ ಅತಿ ಜಾಗ್ರತೆಯಾಗಿ ಅಂಧಕಾರ ಅಥವಾ ಆವರಣವು ತೊಲಗು ವುದು. ಈ ತತ್ವವನ್ನು ಅನುಸರಿಸಿಯೇ ಕುಂಭಕರ್ಣನನ್ನು ಕೊಲ್ಲಲು ಶ್ರೀರಾಮನಿಗೆ ಸಹಾಯಕನಾಗಿ ಲಕ್ಷ್ಮಣನು ಜೊತೆಯಲ್ಲಿದ್ದುದು.

ಹೇಗೆಂದರೆ:—ನಿದ್ರೆಯಲ್ಲಿದ್ದವನು ಎಚ್ಚರಗೊಳ್ಳುವಾಗ ಪ್ರಥಮದಲ್ಲಿ ಜ್ಞಾನಶಕ್ತಿ ಸ್ವರೂಪದಲ್ಲಿರುವ ಅವನ ಬುದ್ಧಿವೃತ್ತಿಯು ಪ್ರಸರಣೆಯಾಗುವುದರಿಂದ ನಿದ್ರೆಯಿಂದ

ಎಚ್ಚರಗೊಳ್ಳುವನು. ಆದರೂ ನಿದ್ರೆಯ ಜಡರು ಇನ್ನೂ ಹೋಗಿರುವುದಿಲ್ಲ. ನಿದ್ರೆಯಿಂದ ಕೊಂಚ ಎಚ್ಚರವಾದ ಕೂಡಲೆ ಬುದ್ಧಿವೃತ್ತಿಯ ಜೊತೆಗೆ ಕ್ರಿಯಾತ್ಮಕವಾದ ಮನಸ್ಸಿನ ವೃತ್ತಿಯು ಪ್ರಸರಣೆಯಾಗಲು ಪ್ರಾರಂಭವಾಗುವುದು. ಕ್ರಿಯಾವೃತ್ತಿಪ್ರಸರಣೆಯು ಪ್ರಾರಂಭವಾದಾಗ ಬುದ್ಧಿವೃತ್ತಿಗೆ ಸ್ಫುರಣೆಯು ಅತಿಶಯವಾಗುವುದರಿಂದ ನಿದ್ರೆಯ ಜಡರೆಲ್ಲಾ ಹೋಗುವುದು. ಈ ತತ್ವಕ್ಕೆ ಅನುಸಾರವಾಗಿ ಶ್ರೀರಾಮನೇ ಕುಂಭಕರ್ಣನೊಡನೆ ಯುದ್ಧಕ್ಕೆ ಬಂದುದು ಮತ್ತು ಲಕ್ಷ್ಮಣನು ಜೊತೆಯಲ್ಲಿದ್ದು ಸಹಾಯ ಮಾಡಿದ್ದಾಗಿರುವುದು.

**ರಾ||** ಶ್ರೀರಾಮನು ಅತ್ಯಂತ ತೀಕ್ಷ್ಣವಾದ ಬಾಣಗಳಿಂದ ಕುಂಭಕರ್ಣನ ಕೈಕಾಲುಗಳನ್ನು ಕತ್ತರಿಸಿದರೂ, ಕುಂಭಕರ್ಣನು ಮುಂಡದಲ್ಲಿಯೇ ತೆವಳಿಕೊಂಡು ನುಂಗುವುದಕ್ಕೆ ಬರುತ್ತಿದ್ದನು.

**ತತ್ವ||** ನಿದ್ರೆಯ ಆವೇಶದ ವೇಗವು ಪ್ರಬಲವಾಗಿದ್ದರೆ ಎಬ್ಬಿಸಿದಾಗ್ಯೂ ಎಚ್ಚರವುಂಟಾಗದೆ, ನಿದ್ರೆಯಲ್ಲಿಯೇ ಮಗ್ನತೆಯಿರುವುದು. ನಿದ್ರೆಯ ಆವೇಶವು ನುಂಗುವುದೆಂದರೆ, ಮುಸುಕಲು ಬರುತ್ತೆಂಬ ತಾತ್ಪರ್ಯವಾಗಿರುವುದು. ಇದರಂತೆ ನಮ್ಮಲ್ಲಿರುವ ಪರಮಾತ್ಮನನ್ನು ಮರೆಮಾಡಿಕೊಂಡಿರುವ ಈ ತಮೋಗುಣದ ಆವರಣವು ಆತ್ಮನನ್ನು ಹೊಂದುವುದಕ್ಕೆ ಯಾವ ವಿಧದಿಂದಲಾದರೂ ತನ್ನ ಆವರಣವನ್ನು ಪ್ರಯೋಗಮಾಡುತ್ತಿರುವುದು. ಹೇಗೆಂದರೆ—ನಾವು ಹೊರಗಿನ ಪ್ರಕಾಶವನ್ನು ನೋಡಿ ಅದರಲ್ಲಿ ಓಡಾಡಿಕೊಂಡಿರುತ್ತೇವಲ್ಲದೆ, ನಮ್ಮೊಳಗೇ ಇರುವ ಸೂರ್ಯನ ಪ್ರಕಾಶವನ್ನು ನಾವು ನೋಡುತ್ತಲೇ ಇಲ್ಲ. ನೀರಿನ ಮೇಲಿರುವ ಪಾಚಿಯು ನೀರನ್ನು ಮುಚ್ಚಿಕೊಂಡಿರುವಂತೆ, ಈ ಅಜ್ಞಾನಾವರಣವು ನಮ್ಮಲ್ಲಿರುವ ಸೂರ್ಯನಿಗೆ ಮರೆಯಾಗಿರುವುದು. ನೀರಿನಲ್ಲಿರುವ ಪಾಚಿಯನ್ನು ತಪ್ಪುತ್ತಾ ಹೋದಂತೆ ಪುನಃ ಹೇಗೆ ಮುಚ್ಚಿಕೊಳ್ಳುತ್ತಾ ಬರುವುದೋ ಹಾಗೆ ಈ ಅಜ್ಞಾನಾವರಣವು ಪರಮಾತ್ಮನನ್ನು ಮರೆಮಾಡಿರುವುದನ್ನು ಸುಲಭವಾಗಿ ಬಿಡುವುದಿಲ್ಲ.

ಹೇಗೆಂದರೆ:—ಮೋಕ್ಷಾಪೇಕ್ಷೆಯಿಲ್ಲದವರಲ್ಲಿ ಈ ಆವರಣವು ಸಂಪೂರ್ಣಬಲವುಳ್ಳದ್ದಾಗಿರುವುದು. ಮೋಕ್ಷಾಪೇಕ್ಷೆಯನ್ನು ಹೊಂದಿ ಗುರುವಿನೊಡನೆ ವೇದಾಂತವಿಚಾರ ಮತ್ತು ಮನನಗಳಿಂದ ಅವಿವೇಕಸ್ವರೂಪವಾದ ಅಸತ್ವಾವರಣವು ನಿವಾರಣೆಯಾಗುವುದೇ ಹೊರತು ಅಭಾನಾವರಣವು ನಿವಾರಣೆಯಾಗುವುದಿಲ್ಲ. ಅಂದರೆ, ಕುಂಭಕರ್ಣನ ಕೈಕಾಲುಗಳನ್ನು ಕತ್ತರಿಸಿರುವುದೇ ಹೊರತು ಕುಂಭಕರ್ಣನ ಶಿರಚ್ಛೇದನವಿನ್ನೂ ಆಗಿಲ್ಲ. ಅಂದರೆ, ತೀವ್ರತಮವಾದ ಮೋಕ್ಷೇಚ್ಛೆಯಿಂದ ವೇದಾಂತವಿಚಾರ ಮತ್ತು ಮನನಗಳಿಂದ ಅಜ್ಞಾನಸ್ವರೂಪದ ಯೋಗ್ಯತೆಯು ಗೊತ್ತಾಗುವುದೇ ಹೊರತು ಅಜ್ಞಾನವೇ ನಿವೃತ್ತಿಯಾಗುವುದಿಲ್ಲ. ಹೇಗೆಂದರೆ, ನೀರಿನ ಮಡುವಿನೊಳಗೆ ಒಂದು ರತ್ನ ಬಿದ್ದಿರುವುದು.

ನೀರಿನ ಮೇಲೆ ಪಾಚಿಯು ಅಧಿಕವಾಗಿರುವುದು. ಪಾಚಿಯಿದ್ದಂತೆ ನೀರಿನಲ್ಲಿ ಮುಳುಗಿದರೆ, ಮುಳುಗಿದ ತಕ್ಷಣವೇ ಮೇಲ್ಭಾಗದಲ್ಲಿರುವ ಪಾಚಿಯು ಮುಚ್ಚಿಕೊಳ್ಳುವುದರಿಂದ ಕೆಳಗಿರುವ ರತ್ನವು ಕಾಣದೆ ಹೋಗುವುದು. ರತ್ನವು ಕಾಣದೆ ಹೋದರೆ ನೀರಿನಲ್ಲಿ ಮುಳುಗಿದ್ದೂ ಸಾರ್ಥಕವಿಲ್ಲ. ಆದುದರಿಂದ ಪ್ರಥಮದಲ್ಲಿ ಪಾಚಿಯನ್ನೆಲ್ಲಾ ಚೆನ್ನಾಗಿ ತೆಗೆದರೆ ಕೆಳಗಿರುವ ರತ್ನವು ಕಾಣುವುದು. ಅನಂತರ ನೀರಿನೊಳಗೆ ಮುಳುಗಿದರೆ ರತ್ನವು ಕೈಗೆ ದೊರಕುವುದು. ಇದರಂತೆ ಪಾಚಿಯತತ್ವದಲ್ಲಿರುವ ಆವರಣದ ಪ್ರಥಮಭಾಗವಾದ ಅಸತ್ವಾವರಣವನ್ನು ತೀವ್ರತಮವಾದ ಮೋಕ್ಷೇಚ್ಛೆಯಿಂದ ಮಾಡುವ ವೇದಾಂತವಿಚಾರ ಮನನ ಮತ್ತು ಆತ್ಮಚಿಂತನೆಗಳಿಂದ ನಮ್ಮಲ್ಲಿರುವ ಅವಿವೇಕ ಅಥವಾ ಭ್ರಾಂತಿಯ ಯೋಗ್ಯತೆಯನ್ನು ಮಂದಟ್ಟುಮಾಡಿಕೊಂಡು, ಆತ್ಮಭಾವನೆಯನ್ನು ಪಡೆಯಬೇಕು. ಅನಂತರ ನೀರಿನ ತತ್ವದಲ್ಲಿರುವ ಅಭಾನಾವರಣವನ್ನು ಹಾಳುಮಾಡಿಕೊಳ್ಳಲು, ಅಂತರ್ಮುಖದ ಮಾರ್ಗವಾದ ಸಮಾಧಿಯಲ್ಲಿ ಮುಳುಗಿದರೆ ರತ್ನಪ್ರಾಯವಾದ ಆತ್ಮಸಾಕ್ಷಾತ್ಕಾರವು ದೊರಕುವುದು. ಆದುದರಿಂದ, ಪ್ರಥಮದಲ್ಲಿ ಅಸತ್ವಾವರಣವನ್ನು ಹಾಳುಮಾಡಿಕೊಳ್ಳಬೇಕೆಂಬ ತತ್ವಾರ್ಥವನ್ನು ಸೂಚಿಸುವುದೇ ಶ್ರೀರಾಮನು ಪ್ರಥಮದಲ್ಲಿ ಕುಂಭಕರ್ಣನ ಕೈಕಾಲುಗಳನ್ನು ಕತ್ತರಿಸಿದ್ದಾಗಿರುವುದು. ಇನ್ನು ಕುಂಭಕರ್ಣನ ಶಿರಚ್ಛೇದನರೂಪವಾದ ಅಭಾನಾವರಣದ ನಿವಾರಣೆಯನ್ನು ತಿಳಿದುಕೊಳ್ಳೋಣ.

**ರಾ||** ಕುಂಭಕರ್ಣನು ಕೈಕಾಲುಗಳನ್ನು ಹೋಗಲಾಡಿಸಿಕೊಂಡಿದ್ದರೂ ಮುಂಡದಿಂದಲೇ ಹೊರಳಿಬಂದು ನುಂಗುವುದಕ್ಕೆ ಬರಲು, ಶ್ರೀರಾಮನಿಗೆ ಕೋಪಬಂದು ಸೂರ್ಯನಂತೆ ದೇದೀಪ್ಯಮಾನವಾಗಿ ಬ್ರಹ್ಮದಂಡಕ್ಕೆ ಸಮಾನವಾದ ಅಸ್ತ್ರವನ್ನು ತೆಗೆದು ಕುಂಭಕರ್ಣನ ತಲೆಯನ್ನು ಕತ್ತರಿಸಲು ಕುಂಭಕರ್ಣನು ಮಡಿದನು.

**ತತ್ವ||** ತಮೋಗುಣದ ಅಸತ್ವಾವರಣದ ಪರಿಹಾರದ ತತ್ವವೇ ಕುಂಭಕರ್ಣನ ಕೈಕಾಲುಗಳನ್ನು ಕತ್ತರಿಸಿದುದೆಂದು ಮೇಲೆ ತಿಳಿಸಿತಷ್ಟೆ! ಈಗ ತಮೋಗುಣದ ಅಭಾನಾವರಣವು ಪರಿಹಾರವಾಗುವ ಸ್ವರೂಪವೇ ಕುಂಭಕರ್ಣನ ನಿಗ್ರಹದ ತತ್ವವಾಗಿರುವುದು. ಈ ಅಭಾನಾವರಣವು ಅಂತರ್ಮುಖವಾದ ಸಮಾಧಿಯ ಅನುಷ್ಠಾನದಿಂದ ನಿವೃತ್ತಿಯಾಗಬೇಕಲ್ಲದೆ, ಬಾಹ್ಯವ್ಯಾಪಾರದಲ್ಲಿದ್ದ ಕಾಲದಲ್ಲಿ ಎಂದಿಗೂ ಇದನ್ನು ಹೋಗಲಾಡಿಸಿಕೊಳ್ಳಲು ಸಾಧ್ಯವಿಲ್ಲ. ಕಾರಣವೇನೆಂದರೆ, ಬಾಹ್ಯದಲ್ಲಿ ಕಾಣುವ ಸೂರ್ಯನ ಪ್ರಕಾಶವಿರುವಂತೆ ನಮ್ಮ ದೇಹದೊಳಗೆ ಸೂರ್ಯನ ಪ್ರಕಾಶವಿರುವುದಷ್ಟೆ! ಈ ಒಳಗಿನ ಸೂರ್ಯನ ಪ್ರಕಾಶವನ್ನು ಅಂತರ್ದೃಷ್ಟಿಯಿಂದ ನೋಡಬೇಕಲ್ಲದೆ ಬಾಹ್ಯದೃಷ್ಟಿಯಿಂದ ನೋಡಲು ಸಾಧ್ಯವಿಲ್ಲ. ಬಾಹ್ಯದೃಷ್ಟಿಗೂ ಅಂತರ್ದೃಷ್ಟಿಗೂ ಪೂರ್ವ ಪಶ್ಚಿಮದಿಕ್ಕುಗಳಂತೆ ಶುದ್ಧ ವಿರುದ್ಧಸ್ವಭಾವವಿರುವುದು. ಆದುದರಿಂದ, ಬಾಹ್ಯದೃಷ್ಟಿಯ ವ್ಯಾಪಾರವು ಪ್ರಯೋಜನವಿಲ್ಲವೆಂದು

ನಿಶ್ಚಯಮಾಡಿಕೊಂಡು ಅಂತರ್ದೃಷ್ಟಿಯಲ್ಲಿ ಪ್ರವೇಶಿಸಬೇಕು. ತಮಸ್ಸಿನ ಅಭಾನಾವರಣವು ರಾತ್ರಿಕಾಲದ ಗಾಢಾಂಧಕಾರದ ಸ್ವರೂಪದಲ್ಲಿರುವುದು. ರಾತ್ರಿಕಾಲದ ಗಾಢಾಂಧಕಾರವು ಹೋಗಿ ಮಧ್ಯಾಹ್ನಕಾಲದ ಬೆಳಕನ್ನು ಕಾಲಕ್ರಮವರಿತು ಪಡೆಯುವಂತೆ ಪ್ರಪಂಚವ್ಯಾಪಾರಸ್ವರೂಪವಾದ ಅಜ್ಞಾನಾಂಧಕಾರವನ್ನು ಪರಿಹರಿಸಿಕೊಂಡು ನಮ್ಮಲ್ಲಿರುವ ಮಧ್ಯಾಹ್ನಸೂರ್ಯನ ತೇಜಸ್ಸಿನ ಸೋಪಾನವನ್ನು ಪಡೆಯಬೇಕಾದರೆ, ಅನುಷ್ಠಾನಗಳ ಕ್ರಮಸೋಪಾನಗಳನ್ನು ಹತ್ತಬೇಕು. ಈ ಕ್ರಮಸೋಪಾನಗಳ ತತ್ವಗಳನ್ನು ಹನುಮಂತನು ಋಕ್ಷಬಿಲ ಪ್ರವೇಶಮಾಡಿದ ಸಂದರ್ಭದಿಂದಲೂ ತಿಳಿಸಿಕೊಂಡು ಬಂದಿರುವುದಷ್ಟೆ! ಈಗ ಶ್ರೀರಾಮನು ಕುಂಭಕರ್ಣನ ಶಿರಚ್ಛೇದನ ಮಾಡಿದನೆಂದರೆ:—ಉದಯವಾಗುತ್ತಿದ್ದ ಸೂರ್ಯನ ಬಿಂಬವು ಪ್ರಕಾಶಕ್ಕೆ ಬಂದು ಅಂಧಕಾರದ ಹೆಸರಿಲ್ಲದಂತಾಗುವುದೇ ಅಂಧಕಾರ ಅಥವಾ ಆವರಣದ ತತ್ವದವನಾದ ಕುಂಭಕರ್ಣನ ಶಿರಚ್ಛೇದನ ಮಾಡಿದ ತತ್ವವಾಗಿರುವುದು.

ಅಭಾನಾವರಣವು ನಿವೃತ್ತಿಯಾಗುವುದೇ ಆತ್ಮಸಾಕ್ಷಾತ್ಕಾರವೆಂದು ತಿಳಿಯಬಾರದು. ಕಾರಣವೇನೆಂದರೆ:—ಅಭಾನಾವರಣ ನಿವೃತ್ತಿಯೆಂದರೆ—ನೋಡುವುದಕ್ಕೆ ಅಡ್ಡಲಾಗಿದ್ದ ತೆರೆಯು ಹೋಗುವುದೆಂದರ್ಥ. ಹೇಗೆಂದರೆ, ಮನೆಯ ಒಳಗೆ ಥಳಥಳಾಯಮಾನವಾಗಿ ಪ್ರಕಾಶಿಸುತ್ತಿರುವ ಒಂದು ದಿವ್ಯರತ್ನವಿರುವುದನ್ನು ಮನೆಯ ಬಾಗಿಲು ಹಾಕಿರುವುದರಿಂದ ಹೊರಗಿನಿಂದ ಒಳಗಿರುವ ರತ್ನದ ಪ್ರಕಾಶವನ್ನು ನೋಡಲಾರೆವು. ಮನೆಯ ಬಾಗಿಲು ತೆಗೆಸಿ ಒಳಕ್ಕೆ ಪ್ರವೇಶಿಸಿದರೆ ರತ್ನದ ಬೆಳಕಿಗೆ ಹೋಗಿ ನಿಲ್ಲುತ್ತೇವೆ. ಅನಂತರ ರತ್ನವನ್ನು ತೆಗೆದುಕೊಳ್ಳುವ ಪ್ರಯತ್ನಮಾಡಬೇಕಷ್ಟೆ! ಮನೆಯಬಾಗಿಲನ್ನು ತೆಗೆಸಿ ರತ್ನದ ಬೆಳಕಿನಲ್ಲಿ ನಿಲ್ಲುವುದೇ ನಮ್ಮಲ್ಲಿರುವ ಸೂರ್ಯನ ಪ್ರಕಾಶದಲ್ಲಿ ನಾವು ನಿಲ್ಲುವ ತತ್ವವಾಗಿರುವುದು. ಆದುದರಿಂದ ಮನೆಯ ಬಾಗಿಲು ತೆಗೆಸುವುದೆಂದರೆ, ನಮ್ಮಲ್ಲಿರುವ ಅಂಧಕಾರ ಅಥವಾ ಅವರಣ ಸ್ವರೂಪದಲ್ಲಿರುವ ತಮೋಗುಣದ ನಿಗ್ರಹವೆಂಬ ತತ್ವ. ಮನೆಯ ಬಾಗಿಲನ್ನು ತೆಗೆಸಿ ರತ್ನಪ್ರಭೆಯಲ್ಲಿ ನಿಂತಾಕ್ಷಣವೇ ರತ್ನವು ಕೈಗೆ ದೊರತಂತಾಗಲಿಲ್ಲ. ರತ್ನವನ್ನು ತೆಗೆದುಕೊಳ್ಳಲು ಮನೆಯೊಳಗೂ ಒಂದು ಭೂತವು ಕೂತಿರುವುದು. ರತ್ನವನ್ನು ತೆಗೆದುಕೊಳ್ಳಲು ಈ ಭೂತವು ಬಿಡುವುದಿಲ್ಲ. ಈ ಭೂತವೇ ರಾವಣನ ತತ್ವದಲ್ಲಿರುವುದು. ಅಂದರೆ ನಮ್ಮಲ್ಲಿರುವ ಸೂರ್ಯನ ಪ್ರಕಾಶವನ್ನು ಸಮಾಧಿಯಲ್ಲಿ ಹೊಂದಿದರೂ ಸೂರ್ಯನ ಅಂತರ್ಗತವಾಗಿರುವ ಆತ್ಮಸಾಕ್ಷಾತ್ಕಾರಕ್ಕೆ ರಾವಣನ ತತ್ವದಲ್ಲಿರುವ ವಿಕ್ಷೇಪಶಕ್ತಿಯು ಬಿಡುವುದಿಲ್ಲ. ಭೂತವನ್ನು ನಿಗ್ರಹಿಸಿದರೆ ರತ್ನವು ಹೇಗೆ ಕೈಸೇರುವುದೋ ಹಾಗೆ ರಾವಣನ ತತ್ವವಾದ ವಿಕ್ಷೇಪಶಕ್ತಿಯು ನಿಗ್ರಹವಾದರೇನೇ ಆತ್ಮಸಾಕ್ಷಾತ್ಕಾರವಾಗುವುದು. ಈ ಮೇಲಿನ ತತ್ವವೇ ಅಭಾನಾವರಣನಿವೃತ್ತಿಯಾಗುವ ಕುಂಭಕರ್ಣನ ನಿಗ್ರಹದ ತತ್ವವಾಗಿದೆ.

ಮೇಲೆ ಹೇಳಿದ ನಮ್ಮಲ್ಲಿರುವ ಅಂಧಕಾರವನ್ನು ತೊಲಗಿಸುವಂತಹ, ಸೂರ್ಯನ ತೇಜಸ್ಸು ಬಿಂದುಸಹಿತವಾದ ಓಂಕಾರೋಪಾಸನೆಯ ಅನುಷ್ಠಾನದಿಂದ ಪಡೆಯತಕ್ಕದ್ದಾಗಿರುವುದು. ಸಮಾಧಿಯ ಪ್ರಥಮಾಭ್ಯಾಸದಲ್ಲಿ ತೇಜೋಬಿಂದುವು ಅರುಣೋದಯವಾಗಿ, ಆಗ ತಾನೆ ಉದಯಿಸುತ್ತಿರುವ ಸೂರ್ಯನ ಬಿಂಬದಂತೆ ಇರುವುದೆಂದು ಹಿಂದೆ ತಿಳಿಸಿದೆ. ಉದಯವಾದ ಸೂರ್ಯನ ಪ್ರಕಾಶವು ಅಧಿಕವಾಗುತ್ತ ಬಂದಂತೆ, ಬಿಂದುವಿನ ಪ್ರಕಾಶವು ಅಧಿಕವಾಗುವುದು. ಹೀಗೆ ಅಧಿಕವಾದಲ್ಲಿ ನಮ್ಮಲ್ಲಿರುವ ಆವರಣವು ನಿಗ್ರಹಿಸಲ್ಪಟ್ಟತೆಂಬ ತತ್ವವಾಗಿರುವುದು.

ಈ ರೀತಿಯಾಗಿ ಬಿಂದುವಿನ ಪ್ರಕಾಶವು ಅಧಿಕವಾಗಬೇಕಾದರೆ ಮೂಲಾಧಾರದಲ್ಲಿ ಪ್ರಬುದ್ಧವಾಗಿರುವ ಕುಂಡಲಿನಿಯು ವಾಯು ಮತ್ತು ಬುದ್ಧಿಮನಸ್ಸಿನ ವೃತ್ತಿಗಳೊಡನೆ ಬಂಧತ್ರಯುಗಳೊಡಗೂಡಿದ "ಓಂ"ಕಾರೋಪಾಸನೆಯಿಂದ ಭೂತತ್ವವಾದ ಮೂಲಾಧಾರ ಚಕ್ರ, ಜಲದ ತತ್ವವಾದ ಸ್ವಾಧಿಷ್ಠಾನಚಕ್ರಗಳನ್ನು ಭೇದಿಸಿಕೊಂಡು ತೇಜಸ್ತತ್ವವಾದ ಮಣಿಪೂರಚಕ್ರವನ್ನು ಈಗ ಭೇದಿಸಿರುವುದು. ತೇಜಸ್ತತ್ವವಾದ ಮಣಿಪೂರಚಕ್ರವು ಭೇದನೆಯಾಗಿರುವ ತತ್ವದ ಸೂಚನೆಯೇ ಲಂಕಾದಹನ ಮಾಡಿದ ಕೂಡಲೆ ಕುಂಭಕರ್ಣನ ವಧೆಯು ನಡೆದಿರುವುದು.

ಪ್ರಬುದ್ಧಳಾದ ಕುಂಡಲಿನಿಯು ವಾಯು ಮತ್ತು ಬುದ್ಧಿಮನಸ್ಸಿನ ವೃತ್ತಿಗಳೊಡನೆ ಸುಷುಮ್ನೆಯೊಳಗೆ ಪ್ರವೇಶಿಸುವ ಪರ್ಯಂತರ ರಾತ್ರಿಯೆಂದರೆ ಬಹಿರ್ವ್ಯಾಪಾರಸ್ವರೂಪವಾದ ಗಾಢಾಂಧಕಾರವು. ಕುಂಡಲಿನೀಶಕ್ತಿಯು ಸುಷುಮ್ನೆಯೊಳಗೆ ಪ್ರವೇಶಿಸಲು ಪ್ರಾರಂಭಿಸುವುದೇ ಸೂರ್ಯೋದಯವಾಗಲು ಪ್ರಾರಂಭ. ಅಂದರೆ, ಬಂಧತ್ರಯುಗಳೊಡಗೂಡಿದ "ಓಂ"ಕಾರೋಪಾಸನೆಯಿಂದ ಸಮಾಧಿಯ ಅನುಷ್ಠಾನ ಪ್ರಾರಂಭವಾದರೆ ನಮ್ಮಲ್ಲಿರುವ ಸೂರ್ಯನು ಉದಯವಾಗುತ್ತಾ ಬರುವನೆಂಬ ತತ್ವವೆಂದು ಹಿಂದೆಯೇ ತಿಳಿಸಿರುವುದಷ್ಟೆ! ಆದುದರಿಂದ ಸುಷುಮ್ನಾಂತರ್ಗತವಾದ ಪ್ರಕಾಶವು ನಮ್ಮಲ್ಲಿರುವ ಸೂರ್ಯನು ಪ್ರಕಾಶಿಸುವ ಸ್ಥಳವಾಗಿರುವುದು. ಇದೇ ತಾತ್ಪರ್ಯಕ್ಕೆ ಅದ್ವಯತಾರಕೋಪನಿಷತ್ ಮತ್ತು ಮಣ್ಡಲ ಬ್ರಾಹ್ಮಣೋಪನಿಷತ್ತುಗಳಲ್ಲಿ,

> ಮೂಲಾಧಾರಾದಾರಭ್ಯ ಬ್ರಹ್ಮರಂಧ್ರಪರ್ಯಂತಂ
> ಸುಷುಮ್ನಾ ಸೂರ್ಯಾಭಾ ತನ್ಮಧ್ಯೆ ತಟಿತ್ಕೋಟಿಸಮಾ
> ಮೃಣಾಳಾತನ್ತುಸೂಕ್ಷ್ಮಾ ಕುಂಡಲಿನೀ ತತ್ರತಮೋನಿವೃತ್ತಿಃ
> ತದ್ದರ್ಶನಾತ್ಸರ್ವಪಾಪನಿವೃತ್ತಿಃ ||

ತಾ|| ಮೂಲಾಧಾರಚಕ್ರ ಮೊದಲುಗೊಂಡು ಸಹಸ್ರಾರಕಮಲದವರೆಗೆ ಸೂರ್ಯನಂತೆ ಪ್ರಕಾಶವಾದ ಸುಷುಮ್ನೆಯಿರುವುದು. ಈ ಸುಷುಮ್ನೆಯ ಮಧ್ಯದಲ್ಲಿ ಕೋಟಿಮಿಂಚುಗಳಿಗೆ ಸಮಾನವಾದ, ತಾವರೆದಂಟಿನಲ್ಲಿರುವ ತಂತುವಿನಂತೆ ಸೂಕ್ಷ್ಮವಾಗಿರುವ ಕುಂಡಲಿನಿಯು ಇರುವುದು. ತಮಸ್ಸ್ವರೂಪವಾದ ಗಾಢಾಂಧಕಾರವು ಅದರಲ್ಲಿ ನಿವೃತ್ತಿಯಾಗುವುದು. ಮತ್ತು ಅದರ ದರ್ಶನದಿಂದ ಸಕಲ ಪಾಪವೂ ನಿವೃತ್ತಿಯಾಗುವುದೆಂದು ಹೇಳಿರುವುದು.

ಆದುದರಿಂದ ಮೇಲಿನ ತತ್ವಾರ್ಥಗಳನ್ನನುಸರಿಸಿ ಶ್ರೀರಾಮನು ಕುಂಭಕರ್ಣನನ್ನು ನಿಗ್ರಹಿಸಿದನೆಂದರೆ—ಅಧಿಕಾರಿಯು ತಮೋ ಆವರಣವನ್ನು ಹೋಗಲಾಡಿಸಿಕೊಂಡು ಸಮಾಧಿಯಲ್ಲಿ ತನ್ನ ಸೂರ್ಯತೇಜಸ್ಸಿನಲ್ಲಿಯೇ ನಿಂತನೆಂಬ ತತ್ವವಾಗಿರುವುದು.

ಶ್ರೀರಾಮನು ಬಿಟ್ಟ ಬಾಣವು ಬ್ರಹ್ಮದಂಡಕ್ಕೂ, ಕಾಲಮೃತ್ಯುವಿಗೂ ಸಮಾನವಾಗಿತ್ತೆಂದರೆ—ನಾನೇ ಬ್ರಹ್ಮನೆಂದು ಬಂಧತ್ರಯಗಳೊಡನೆ ಮಾಡುವ "ಓಂ"ಕಾರೋಪಾಸನೆಯ ಅನುಷ್ಠಾನವು ನಮ್ಮಲ್ಲಿರುವ ಪರಮಾತ್ಮನನ್ನು ಮರೆಮಾಡಿಕೊಂಡಿರುವ ತಮಸ್ಸಿನ ಅಭಾನಾವರಣಕ್ಕೆ ಕಾಲಮೃತ್ಯುವಿನೋಪಾದಿಯಲ್ಲಿರುವುದೆಂಬ ತತ್ವ.

ಕುಂಭಕರ್ಣನನ್ನು ಲಕ್ಷ್ಮಣನು ಕೊಲ್ಲದೆ ಶ್ರೀರಾಮನೇ ನಿಗ್ರಹಿಸಿದ ತತ್ವವೇನೆಂದರೆ—ಮನಸ್ಸತ್ವದಲ್ಲಿರುವ ಲಕ್ಷ್ಮಣನ ಕಾರ್ಯಕ್ಕೆ ವಿರಕ್ತಿಯೆಂದು ಪ್ರಥಮದಿಂದಲೂ ತಿಳಿಸಿಕೊಂಡು ಬರುತ್ತಿದೆಯಷ್ಟೆ! ವಿರಕ್ತಿಯಿಂದಲೇ ತಮಸ್ಸಿನ ಆವರಣವು ತೊಲಗಿ ಒಳಗಿರುವ ಸೂರ್ಯನ ತೇಜಸ್ಸನ್ನು ಅಧಿಕಾರಿಯು ಪಡೆಯಲಾರನು. ಕಾರಣವೇನೆಂದರೆ—ವಿರಕ್ತಿಯ ಸ್ವರೂಪವೇ ಕಾರ್ಯಗಳಲ್ಲಿ ತಟಸ್ಥವಾಗಿರುವಿಕೆ. ಕಾರ್ಯಗಳಲ್ಲಿ ತಟಸ್ಥಭಾವವನ್ನು ಹೊಂದಿದಾಕ್ಷಣವೇ ಅಂತರ್ಜ್ಯೋತಿಯು ದೊರಕುವುದಿಲ್ಲ. ಅಜ್ಞಾನಸ್ವರೂಪವಾದ ತಮಸ್ಸಿನ ಆವರಣವು ಆತ್ಮನಿಷ್ಠೆಯ ಜ್ಞಾನವೆಂದರೆ ಸಮಾಧಿಯಲ್ಲಿ ಗೋಚರವಾಗುವ ತೇಜೋಬಿಂದುವೇ ನಾನೆಂದು ಸೋಹಂಭಾವದಿಂದ, ಬುದ್ಧಿವೃತ್ತಿಯು ಮಾಡುವ ಸಮಾಧಿಯ ಅನುಷ್ಠಾನದ ಬಲದಿಂದ ನಿವೃತ್ತಿಯಾಗಬೇಕೇ ಹೊರತು, ವಿರಕ್ತಿಮಾತ್ರದಿಂದ ನಿವೃತ್ತಿಯಾಗುವುದಿಲ್ಲ. ಈ ತತ್ವಾರ್ಥವನ್ನನುಸರಿಸಿಯೇ ಶ್ರೀರಾಮನೇ ಕುಂಭಕರ್ಣನನ್ನು ನಿಗ್ರಹಿಸಿದುದು. ಅಂದರೆ ತಮಸ್ಸಿನ ಆವರಣವನ್ನು ನಿವೃತ್ತಿಮಾಡಿಕೊಳ್ಳಲು ವಿರಕ್ತಿಯು ಪ್ರಯೋಜನವಿಲ್ಲವೆಂದು ತಿಳಿದುಕೊಳ್ಳಬಾರದು. ಲಕ್ಷ್ಮಣನು ಶ್ರೀರಾಮನೊಡನೆ ಸಹಾಯಮಾಡಿಕೊಂಡಿದಂತೆ, ತೇಜೋಬಿಂದುವಿನಲ್ಲಿ ಸೋಹಂಭಾವದಿಂದ ಮಾಡುವ ಬುದ್ಧಿಯ ಜ್ಞಾನವೃತ್ತಿಗೆ ವಿರಕ್ತಿಯೂ ಸಹಾಯಕವಾಗಿರಬೇಕು.

**ರಾ||** ಬ್ರಾಹ್ಮಣರಿಗೂ ದೇವತೆಗಳಿಗೂ ಶತ್ರುವಾಗಿದ್ದ ಕುಂಭಕರ್ಣನು ಮಡಿದನು. ಈ ಕುಂಭಕರ್ಣನು ಮೃತನಾದೊಡನೆ ಭೂಮಿಯು ಕಂಪಿಸಿತು. ಪರ್ವತಗಳೆಲ್ಲವೂ ನಡುಗಿದುವು.

**ತತ್ವ||** ಬ್ರಾಹ್ಮಣರಿಗೂ ದೇವತೆಗಳಿಗೂ ಶತ್ರುವಾಗಿದ್ದ ಕುಂಭಕರ್ಣನೆಂದರೆ— ಜ್ಞಾನನಿಷ್ಠರಿಗೂ, ಕರ್ಮನಿಷ್ಠರಿಗೂ, ಇಂದ್ರಿಯಗಳ ತತ್ವದಲ್ಲಿರುವ ದೇವತೆಗಳಿಗೂ, ಈ ತಮೋಗುಣವು ವೈರಿಯೆಂಬ ತತ್ವವು. ಕುಂಭಕರ್ಣನು ಮರಣವನ್ನೈದಿದೊಡನೆ ಭೂಮಿಯು ಅದುರಿ ಪರ್ವತಗಳೆಲ್ಲ ನಡುಗಿದ ತತ್ವವೇನೆಂದರೆ—ಸಮಾಧಿ ಅನುಷ್ಠಾನ ಕಾಲದಲ್ಲಿ ಮಣಿಪೂರಚಕ್ರಭೇದನೆಯಾಗಿ ಈ ತಮೋಆವರಣವು ನಿವೃತ್ತಿಯಾಗುವ ಕಾಲ ದಲ್ಲಿ ದೇಹದಲ್ಲಿ ನಡುಕಬಂದಂತಾಗುವುದು. ಇದಕ್ಕೆ ಭಯಪಡದೆ ಸಮಾಧಿಯನ್ನು ಬಲ ಪಡಿಸುತ್ತಾ ಬರಬೇಕು. ಹೀಗೆ ಬಲಪಡಿಸುತ್ತಾ ಬಂದಲ್ಲಿ ಕೆಳಗೆ ಬರೆದಿರುವ ರಾಮಾ ಯಣದ ತತ್ವವನ್ನೆಂದರೆ, ಕುಂಭಕರ್ಣನ ವಧೆಯಾದನಂತರ ಶ್ರೀರಾಮನು ಇದ್ದ ಸ್ಥಿತಿ ಯನ್ನು ಅಧಿಕಾರಿಯು ಪಡೆಯುವನು.

**ರಾ||** ಕುಂಭಕರ್ಣನನ್ನು ನಿಗ್ರಹಿಸಿದನಂತರ ಶ್ರೀರಾಮನು ರಾಹುಮುಖದಿಂದ ಮುಕ್ತನಾದ ಸೂರ್ಯನು ಅಂಧಕಾರವನ್ನು ತೊಲಗಿಸಿ ಕಾಂತಿಯಿಂದ ಪ್ರಕಾಶಿಸುವಂತೆ ವಾನರ ಸಮೂಹದ ಮಧ್ಯದಲ್ಲಿ ಅದ್ಭುತವಾದೊಂದು ದಿವ್ಯತೇಜಸ್ಸಿನಿಂದ ಪ್ರಕಾಶಿಸುತ್ತಿದ್ದನು.

**ತತ್ವ||** ಮೇಲಿನ ಅಂಶದ ತತ್ವವೇನೆಂದರೆ—ಈ ಪ್ರಕರಣದಲ್ಲಿ ವಿವರಿಸಿಕೊಂಡು ಬಂದಿರುವಂತೆ ಸಮಾಧಿಯ ಅನುಷ್ಠಾನದಿಂದ ತಮೋಗುಣದ ಆವರಣವನ್ನು ದಾಟಿದವ ರೆಂದರೆ, ಮೋಕ್ಷದ ದಾರಿಯಲ್ಲಿ ಸ್ವಾಧಿಷ್ಠಾನ ಮಣಿಪುರಗಳ ಬಾಗಿಲುಗಳನ್ನು ತೆಗೆಸಿದ ತತ್ವವನ್ನು ಪಡೆದ ಅಧಿಕಾರಿಯು ತನ್ನಲ್ಲಿರುವ ಸೂರ್ಯನ ದಿವ್ಯತೇಜೋರೂಪಕ್ಕೆ ಪ್ರವೇಶಿ ಸುತ್ತಾ ಬರುವನೆಂಬ ತತ್ವವಾಗಿರುವುದು. ಅಂದರೆ ಸೂರ್ಯೋದಯವಾದ ಐದು ಘಳಿಗೆ ಯಲ್ಲಿ ಅಂಧಕಾರವೆಂಬ ಹೆಸರು ಹೋಗಿ ಸೂರ್ಯನು ಹೇಗೆ ಪ್ರಕಾಶಿಸುವನೋ ಹಾಗೆ ಅಧಿಕಾರಿಯು ಬಾಹ್ಯವ್ಯಾಪಾರಸ್ವರೂಪವಾದ ಕತ್ತಲೆಯಿಂದ ಬಿಡಲ್ಪಟ್ಟವನಾಗಿ ತನ್ನೊಳ ಗಿರುವ ಸೂರ್ಯನ ಪ್ರಕಾಶದಲ್ಲಿ ನಿಲ್ಲುತ್ತಾನೆ. ಇಂತಹ ಕಾಲದಲ್ಲಿ ಅಂತರ್ಮುಖದಲ್ಲಿ ಕಾಣುವ ತೇಜಸ್ಸು ಪ್ರಾತಃಕಾಲದ ಐದು ಘಳಿಗೆಯಲ್ಲಿನ ಸೂರ್ಯನ ಪ್ರಕಾಶಕ್ಕೆ ಹೋಲಿಕೆಯಾಗು ವಂತಹ ತನ್ನೊಳಗಿನ ಸೂರ್ಯನ ಪ್ರಕಾಶವನ್ನು ಪಡೆದನೆಂಬ ತತ್ವ. ಮಧ್ಯಾಹ್ನಕಾಲದ ಸೂರ್ಯನ ಪ್ರಕಾಶವನ್ನು ಮುಂದೆ ಆದಿತ್ಯಹೃದಯ ಪ್ರಕರಣದ ತತ್ವದಿಂದ ಪಡೆಯುವನು.

ತಮೋಗುಣದ ಪ್ರಧಾನಸ್ವರೂಪನಾದ ಕುಂಭಕರ್ಣನನ್ನು ನಿಗ್ರಹಮಾಡಿದ ತತ್ವವು ವಿವರಿಸಲ್ಪಟ್ಟಿತು. ಇನ್ನು ಇವನ ಮಕ್ಕಳಾದ ಕುಂಭ, ನಿಕುಂಭರ ವಿಚಾರವನ್ನು ನೋಡೋಣ.

# ೧೬ನೆಯ ಪ್ರಕರಣ.

ರಾವಣನ ಮಗನಾದ ಅತಿಕಾಯನು ಯುದ್ಧಕ್ಕೆ ಬಂದು ಲಕ್ಷ್ಮಣನಿಂದ ಹತನಾದುದು.



ಸಂಸಾರಕಾರಣವಾದ ಅವಿದ್ಯಾಕಾರ್ಯಗಳ ದೃಢತರಸಮ್ಮೇಳನ ಅಥವಾ ದೃಢವಾಗಿ ಸಂಬಂಧಪಡಿಸಿರುವ ಶಕ್ತಿಯ ನಿಗ್ರಹದ ವಿಚಾರ.

**ರಾ||** ರಾವಣನ ಮಗನಾದ ಅತಿಕಾಯನು ಶ್ರೀರಾಮನೊಡನೆ ಯುದ್ಧಮಾಡುವುದಕ್ಕೆ ಬರಲು, ಲಕ್ಷ್ಮಣನು ಇವನನ್ನು ಕೊಂದನು.

**ತತ್ತ್ವ||** ಅವಿದ್ಯಾಪ್ರಧಾನಪುರುಷನಾದ ರಾವಣನಿಗೆ, ಭೋಗಶಕ್ತಿಯ ತತ್ತ್ವದಲ್ಲಿರುವ ಇಂದ್ರಜಿತ್ತು, ಆಗಾಮಿವಾಸನೆಯ ತತ್ತ್ವದಲ್ಲಿರುವ ಅಕ್ಷಕುಮಾರ ಅವಿದ್ಯಾಕಾರ್ಯಗಳ ದೃಢತರಸಮ್ಮೇಳನ ಅಥವಾ ದೃಢವಾಗಿ ಸಂಬಂಧಪಡಿಸುವ ಶಕ್ತಿಯ ತತ್ತ್ವದಲ್ಲಿರುವ ಅತಿಕಾಯರೆಂಬ ಮೂವರು ಮಕ್ಕಳು. ರಾವಣನು ವಿಕ್ಷೇಪಶಕ್ತಿಯ ತತ್ತ್ವದವನಾದುದರಿಂದ ಅವನ ಮಕ್ಕಳೂ ವಿಕ್ಷೇಪಕ್ಕೇ ಸೇರಿದವರು.

ಅತಿಕಾಯನ ತತ್ತ್ವವೇನೆಂದರೆ—ಕಾಯವೆಂದರೆ "ಚೀಯತೆ ಅವಯವೈಸ್ಸತಿ ಕಾಯಃ ಚಿಚ್ ಚಯನೆ" ಎಂಬದಾಗಿ ಅಮರದ ವ್ಯಾಖ್ಯಾನದಲ್ಲಿ ವ್ಯುತ್ಪತ್ತಿ ಇರುವುದು. ಅಂದರೆ, ಅಂಗಗಳನ್ನೆಲ್ಲ ಜೋಡಿಸಿ ದೃಢವಾಗಿ ಸಮ್ಮೇಳನಮಾಡಿರುವ ಅಥವಾ ಒಂದಕ್ಕೊಂದು ಅತಿಶಯವಾಗಿ ಬಂಧಿಸಿರುವ ದೇಹಕ್ಕೆ ಕಾಯವೆಂದು ಹೆಸರು. ಅಂಗಗಳನ್ನು ಬಂಧಿಸಿ ಒಂದಕ್ಕೊಂದು ಸಂಬಂಧಿಸಿರುವುದನ್ನು ಭೇದಿಸಲು ಅಸಾಧ್ಯವಾಗಿರುವಂತಹ ದೃಢತರವಾದ ಬಂಧನವೇ ಅತಿಕಾಯವೆಂಬ ತತ್ತ್ವವು. ರಾವಣನ ಮಗನಾದ ಅತಿಕಾಯನ ತತ್ತ್ವವೇನೆಂದರೆ, ಅವಿದ್ಯೆಯ ಸಕಲ ವ್ಯಾಪಾರಗಳನ್ನೂ ಒಂದಕ್ಕೊಂದು ಸಂಬಂಧಪಡಿಸಿಕೊಂಡು, ಈ ಸಮ್ಮೇಳನವನ್ನು ಭೇದಿಸಲು ಅಸಾಧ್ಯವಾಗಿರುವಂತೆ ಮಾಡಿಸುವ ಅವಿದ್ಯಾಶಕ್ತಿಯು.

ಹೇಗೆಂದರೆ—ನಮ್ಮ ದೇಹವು ಅನೇಕಾನೇಕ ಅಂಗಗಳು ಸೇರಿ ಒಂದಾಗಿ ಬಂಧಿಸಿಕೊಂಡಿರುವಂತೆಯೂ ಸಕಲವಾದ ಅಂಗಗಳ ವ್ಯಾಪಾರಗಳೂ ಒಂದಕ್ಕೊಂದು ಚೆನ್ನಾಗಿ ಸಂಬಂಧಿಸಿಕೊಂಡು ಹೆಣೆದುಕೊಂಡಿರುವಂತೆಯೂ ಈ ಅತಿಕಾಯನ ತತ್ತ್ವದಲ್ಲಿರುವ ಅವಿದ್ಯಾಸಮ್ಮೇಳನಶಕ್ತಿಯು ಸಕಲವಾದ ಅವಿದ್ಯಾಕಾರ್ಯಗಳನ್ನೆಲ್ಲ ಒಂದಕ್ಕೊಂದು ಸಂಬಂಧಿಸಿ ಭದ್ರವಾಗಿ ಹೆಣೆದುಕೊಂಡಿರುವಂತೆ ಮಾಡಿರುವುದು. ಅಂದರೆ, ಪ್ರಾಣಿಗಳು ಈ ಸಮ್ಮೇಳನದಿಂದಲೇ ಪ್ರಪಂಚವ್ಯಾಪಾರರೂಪವಾದ ಬಲೆಯಲ್ಲಿ ಬಂಧಿಸಲ್ಪಟ್ಟಿರುವುವು ಪ್ರ.

ಈ ಸಮ್ಮೇಳನಶಕ್ತಿಯು ಯಾವ ಯಾವ ಸ್ವರೂಪದ ವ್ಯಾಪಾರಗಳನ್ನು ಒಂದಕ್ಕೊಂದು ಹೆಣೆದುಕೊಂಡಂತೆ ಮಾಡಿ ಬಂಧಿಸಿರುವುದೆಂದರೆ—ರಾವಣನ ತತ್ವದಲ್ಲಿರುವ ವಾಸನಾವೃತ್ತಿ ಇಂದ್ರಿಯಗಳಲ್ಲಿನ ಬಹಿರಾಕರ್ಷಣೆ, ಇಂದ್ರಜಿತ್ತಿನ ತತ್ವದಲ್ಲಿರುವ ಭೋಗಶಕ್ತಿಯಲ್ಲಿನ ಮೋಹ, ತೃಷ್ಣೆ, ಮದ, ನಾಸ್ತಿಕತೆ, ಮಿಥ್ಯವಾದದ್ದನ್ನು ಸತ್ಯವೆಂಬ ನಂಬಿಕೆ ಹುಟ್ಟುವಂತೆ ಮಾಡುವುದು, ಅಕ್ಷಕುಮಾರನ ತತ್ವದಲ್ಲಿರುವ ಆಗಾಮಿವಾಸನೆ ಕುಂಭಕರ್ಣನ ತತ್ವದಲ್ಲಿರುವ ನಿದ್ರಾ, ಅಜ್ಞಾನ, ಆಲಸ್ಯ, ಕುಂಭನ ಸ್ವರೂಪದಲ್ಲಿರುವ ದೇಹ ಮತ್ತು ಹೊರಗಿನ ಪದಾರ್ಥಗಳಲ್ಲಿ ನನ್ನದೆಂಬ ಮೋಹ, ಕುಂಭನ ತತ್ವದಲ್ಲಿರುವ ಭಯ, ಶೋಕ ರಾವಣನ ಪರಿವಾರ ಮತ್ತು ಮಂತ್ರಿಸೇನಾಪತಿಗಳ ತತ್ವಗಳಲ್ಲಿರುವ ಸ್ವಭಾವಗಳು, ಮತ್ತು ಇದರ ಜೊತೆಗೆ ವಿಭೀಷಣ ಮತ್ತು ಅವನ ಪರಿವಾರದ ತತ್ವಗಳಲ್ಲಿರುವ ಧರ್ಮಸ್ವಭಾವಗಳು. ಇವುಗಳೆಲ್ಲಾ ಒಂದಕ್ಕೊಂದು ಚೆನ್ನಾಗಿ ಸೇರಿಕೊಂಡು ಬಿಟ್ಟುಹೋಗದಂತೆ ದೃಢವಾಗಿ ಸಮ್ಮೇಳನಮಾಡಿ, ಪ್ರಾಣಿಗಳನ್ನು ಜಗದ್ವ್ಯಾಪಾರದಲ್ಲಿ ಬಂಧಿಸಿರುವುದು. ಈ ತತ್ವವೇ ಅತಿಕಾಯನ ತತ್ವವಾಗಿರುವುದು.

ಈ ಸಮ್ಮೇಳನಶಕ್ತಿಯ ಪ್ರಭಾವದಿಂದಲೇ ಪ್ರಪಂಚವ್ಯಾಪಾರವು ದಾಟಲಶಕ್ಯವಾದ ಮಹಾ ಸಂಸಾರಸಮುದ್ರವಾಗಿರುವುದು. ಈ ಅದ್ಭುತವಾದ ಸಮ್ಮೇಳನಶಕ್ತಿಯು ಪ್ರಪಂಚವ್ಯಾಪಾರದಲ್ಲಿ ರಜೋಗುಣ, ತಮೋಗುಣ ಮತ್ತು ಇವುಗಳ ಪರಿವಾರದ ಶಕ್ತಿಗಳ ಕಾರ್ಯಗಳನ್ನೆಂದರೆ ಅಧರ್ಮವನ್ನೂ, ಮಲಿನಸತ್ವಗುಣವೆಂದರೆ ಧರ್ಮಮಾರ್ಗವನ್ನೂ, ದ್ವಂದ್ವ ಮಾಡಿಕೊಂಡು ಪಾಪಪುಣ್ಯಗಳ ಬೆರಕೆಯಾಗಿರುವ ಪ್ರಪಂಚವ್ಯಾಪಾರದ್ವಂದ್ವಸ್ವರೂಪವಾದ ಸಂಸಾರವೆಂಬ ಕಾಡ್ಗಿಚ್ಚಿನಲ್ಲಿ ದಹಿಸುತ್ತಿರುವುದು. ಅತಿಕಾಯನ ತತ್ವದಲ್ಲಿರುವ ಸಮ್ಮೇಳನದ ಈ ಅದ್ಭುತಶಕ್ತಿಯನ್ನು ಸೂಚಿಸುವ ತಾತ್ಪರ್ಯಕ್ಕೆ ಯುದ್ಧಕ್ಕೆ ಬಂದ ಅತಿಕಾಯನನ್ನು ನೋಡಿ ಶ್ರೀರಾಮನು ಆಶ್ಚರ್ಯಭರಿತನಾಗಿ, ಇವನ ವೃತ್ತಾಂತವನ್ನು ವಿಭೀಷಣನಿಂದ ತಿಳಿಯಲಪೇಕ್ಷೆಪಟ್ಟನು.

**ರಾ||** ವಿಭೀಷಣನು "ಎಲೈ ಶ್ರೀರಾಮನೆ! ರಾವಣನ ಮಗನಾದ ಇವನ ಬಾಹುಬಲವನ್ನು ನಂಬಿಕೊಂಡೇ ಲಂಕೆಯು ಇದುವರೆಗೂ ನಿರ್ಭಯವಾಗಿತ್ತು. ವಜ್ರಕವಚವನ್ನು ತೊಟ್ಟಿರುವ ಅತಿಕಾಯನನ್ನು ನಿಗ್ರಹಿಸುವುದು ಕಷ್ಟ" ಎಂದು ಹೇಳಿದನು.

**ತತ್ವ||** ರಾವಣನ ಮಗನಾದ ಅತಿಕಾಯನ ಬಾಹುಬಲವನ್ನು ನಂಬಿಕೊಂಡೇ ಇದುವರೆಗೂ ಲಂಕೆಯು ನಿರ್ಭಯವಾಗಿತ್ತೆಂದು ಹೇಳಿದುದರ ತತ್ವವೇನೆಂದರೆ—ಲಂಕೆಯ ತತ್ವವೇ ಅವಿದ್ಯಾಸ್ಥಳವು. ಇಲ್ಲಿ ಪ್ರಪಂಚವ್ಯಾಪಾರವು ಈ ದೃಢತರಸಮ್ಮೇಳನದ ಮಹತ್ತಿನಿಂದಲೆ ನಡೆಯುತ್ತಿತ್ತೆಂಬ ತತ್ವವಾಗಿರುವುದು. ಅಂದರೆ ಈ ದೃಢತರವಾದ ಸಮ್ಮೇಳನದ ಮಹತ್ತಿನಿಂದಲೇ ಲಂಕೆಯತತ್ವದಲ್ಲಿರುವ ಅವಿದ್ಯೆಯ ಸ್ಥಳವೆಂದರೆ ಪ್ರಪಂಚವ್ಯಾಪಾರವು

ನಡೆಯುತ್ತಿತ್ತೆಂಬ ತತ್ವವಾಗಿರುವುದು. ಇಂಥ ದೃಢತರಸಮ್ಮೇಳನ ಸ್ವರೂಪವಾದ ಪ್ರಪಂಚವ್ಯಾಪಾರದ ಸ್ವರೂಪಗಳನ್ನು ಗ್ರಂಥಿಯನ್ನು ಬಿಚ್ಚಿದಂತೆ ಪ್ರತ್ಯೇಕಿಸಿ ಪ್ರತಿಯೊಂದರ ನಿಶ್ಚಯಸ್ವರೂಪವನ್ನು ತಿಳಿದುಕೊಂಡು, ಅವುಗಳನ್ನು ದೂರವಾಡಲು ಯೋಗ್ಯತೆ ಇಲ್ಲದೆ, ಜನನ ಮರಣ ಪ್ರವಾಹರೂಪವಾದ ಸಂಸಾರದಲ್ಲಿ ಬಿದ್ದು ಒದ್ದಾಡುತ್ತಿದೇವೆ.

ಸಂಸಾರವೆಂದರೆ "ಸಮ್ಯಕ್ ಸರಣಾ" ಜನನ ಮರಣಗಳೂ, ವ್ಯಾಪಾರಗಳೂ, ಪ್ರವಾಹರೂಪವಾಗಿ ಚೆನ್ನಾಗಿ ನಡೆದುಕೊಂಡು ಹೋಗುತ್ತಿರುವುದೇ ಸಂಸಾರ. ಪತ್ನೀ ಪುತ್ರಾದಿಗಳೇ ಸಂಸಾರಸ್ವರೂಪರೆಂದು ತಿಳಿದುಕೊಳ್ಳಬಾರದು. ಪ್ರಪಂಚವ್ಯಾಪಾರ ಮತ್ತು ಜನನ ಮರಣಗಳೇ ಸಂಸಾರದ ನಿಶ್ಚಯವಾದ ಸ್ವರೂಪ. ಸತ್ತವನು ಹುಟ್ಟುವುದೂ ನಿಶ್ಚಯ, ಹುಟ್ಟಿದವನು ವ್ಯಾಪಾರದ್ವಂದ್ವದಲ್ಲಿರುವುದೂ ನಿಶ್ಚಯ, ವ್ಯಾಪಾರ ಮಾಡುತ್ತಿದ್ದವನು ಪುನಃ ಸಾಯುವುದೂ ಪುನಃ ಹುಟ್ಟುವುದೂ ನಿಶ್ಚಯ, ಇದೇ ರೀತಿಯಾಗಿ ಹಗಲಿರುಳುಗಳಾಗುವಂತೆ ಪುನಃ ಪುನಃ ಚೆನ್ನಾಗಿ ಏಕಸರಣಿಯಾಗಿರುವಂತೆ ಪ್ರಾಪ್ತವಾಗುವ ಜನನ ಮರಣ ಮತ್ತು ಪ್ರಪಂಚವ್ಯಾಪಾರವೇ ಸಂಸಾರದ ನಿಶ್ಚಯವಾದ ಸ್ವರೂಪವು. ಇದೇ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರೂ ಕೂಡ,

> ಪುನರಪಿ ಜನನಂ ಪುನರಪಿ ಮರಣಂ |
> ಪುನರಪಿ ಜನನೀ ಜಠರೇ ಶಯನಂ ||
> ಇಹ ಸಂಸಾರೇ ಬಹು ದುಸ್ತಾರೇ |
> ಕೃಪಯಾ ಪಾರೇ ಪಾಹಿ ಮುರಾರೇ ||

ತಾ|| ಎಲೈ ಶ್ರೀಹರಿಯೆ! ಸಂತತ ಜನನ ಮರಣ ಪ್ರವಾಹರೂಪವಾದ ದಾಟಲಸಾಧ್ಯವಾದ ಈ ಸಂಸಾರವೆಂಬ ಅಪಾರವಾದ ಸಮುದ್ರದಿಂದ ಕೃಪೆಮಾಡಿ ಉದ್ಧರಿಸು.

ಎಂಬವಾಗಿ ಹೇಳಿರುವಂತೆ ಈ ಸಂಸಾರದ ಹೆಣಿಕೆಯ ಶಕ್ತಿಪಾಶದಿಂದ ಬಿಡಿಸಿಕೊಳ್ಳುವುದು ಅತ್ಯಂತಕಷ್ಟ. ಅತಿಕಾಯನೆಂಬ ಪದಕ್ಕೂ ಪಾಶವೆಂಬ ಪದಕ್ಕೂ ಒಂದೇ ಅರ್ಥವಾಗುವುದು. ಪಾಶವೆಂದರೂ "ಬಧ್ಯತೆ ಯೇನ ಸಃ ಪಾಶಃ" ಬಂಧಿಸುವುದು. ಅವಿದ್ಯೆಯಲ್ಲಿನ ಒಂದೊಂದು ಶಕ್ತಿಯೇ ಮನುಷ್ಯನನ್ನು ಹಾಳುಮಾಡಲು ಸಾಕಾಗಿರುವಾಗ, ಸರ್ವಶಕ್ತಿಗಳ ಸಮ್ಮೇಳನವು ಪಾಪ ಪುಣ್ಯ ಅಥವಾ ಸುಖದುಃಖಗಳ ಸಮ್ಮೇಳನದ ಬಲೆಯಂತೆ ಮಾಡಿಕೊಂಡು, ಈ ಬಲೆಯಲ್ಲಿ ಜೀವರನ್ನು ಕಟ್ಟಿಹಾಕಿರುವುದು. ಈ ರೀತಿ ಬಂಧಿಸಿರುವುದು ಅತಿಕಾಯನ ವಜ್ರಕವಚದಂತೆ ಇದೆ. ಅಂದರೆ ಕಟ್ಟಡವು ಅಷ್ಟು ಕಠಿಣವಾಗಿ ಭೇದಿಸಲು ವಜ್ರದಂತೆ ಅಶಕ್ಯವಾಗಿರುವುದು. ಇಂತಹ ಕಠಿಣವಾದ ವಜ್ರಕವಚವನ್ನು ಭೇದಿಸಿ, ಅತಿಕಾಯನನ್ನು ನಿಗ್ರಹಿಸುವುದಕ್ಕೆ ಲಕ್ಷ್ಮಣನಿಗೆ ಅತ್ಯಂತ ಕಷ್ಟವಾಯಿತು.

ಈ ದೃಢತರಸಮ್ಮೇಳನ ತತ್ವವನ್ನು ತಿಳಿದುಕೊಳ್ಳಲು ಜ್ಯೋತಿಶ್ಶಾಸ್ತ್ರವು ಸಹಕಾರಿಯಾಗಿರುವುದು. ಸಂಸಾರವೆಂಬುದು ಸಕಲವನ್ನೂ ಒಳಗೊಂಡಿರುವಂತೆ ಜಾತಕವು ದ್ವಾದಶರಾಶಿ, ನವಾಂಶ, ದ್ವಾದಶಾಂಶ, ತ್ರಿಂಶಾಂಶ, ಷಷ್ಠ್ಯಾಂಶ ಸ್ವರೂಪಗಳ ಭಾವ ಮತ್ತು ದಶ, ಅಂತರ್ದಶ, ಅಂತರಾಂತರ ದಶಗಳೆಂಬ ಅನೇಕ ಭಾಗಗಳನ್ನು ಒಳಗೊಂಡಿರುವುದರಿಂದ ದೃಢತರಸಮ್ಮೇಳನದ ತತ್ವದಲ್ಲಿರುವುದು. ಅಂದರೆ ಸಂಸಾರಸ್ವರೂಪದ ಯೋಗ್ಯತೆಯನ್ನು ವಿಮರ್ಶಿಸಲು ಜ್ಯೋತಿಷ್ಯವು ಸಹಕಾರಿಯು. ಇಂತಹ ಜನನ ಮರಣ ಪ್ರವಾಹರೂಪವಾದ ಸಂಸಾರದ ಯೋಗ್ಯತೆಯನ್ನು ತಿಳಿದು, ಅದನ್ನು ದಾಟಬೇಕಾದರೆ ಮೋಕ್ಷಮಾರ್ಗವಲ್ಲದೆ ಮತ್ತಾವುದರಿಂದಲೂ ಖಂಡಿತವಾಗಿ ಸಾಧ್ಯವೇ ಇಲ್ಲ.

"ಸಂಸಾರ ದಾವಾನಲ ತಾಪತಪ್ತಂ" ಎಂಬಂತೆ ಈ ಸಂಸಾರವೆಂಬ ಕಾಡ್ಗಿಚ್ಚಿನಲ್ಲೇ ಬಿದ್ದು ತಪಿಸುತ್ತಿರುವವರು, ಇದರ ಯೋಗ್ಯತೆಯನ್ನು ತಿಳಿದು ಅದನ್ನು ದಾಟಲು ಕರುಣಾಳುವಾದ ಸದ್ಗುರುವನ್ನು ಮರೆಹೊಕ್ಕು, ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೪೨ನೆಯ ಶ್ಲೋಕದಲ್ಲಿ ಹೇಳಿರುವಂತೆ,

> ಕಥಂತರೇಯಂ ಭವಸಿನ್ಧುಮೇಕಂ |
> ಕಾವಾಗತಿರ್ಮೆ ಕತಮೋಸ್ತ್ಯುಪಾಯಃ |
> ಜಾನೇನ ಕಿಂಚತ್ಕೃಪಯಾವಮಾಂ ಪ್ರಭೋ |
> ಸಂಸಾರದುಃಖಕ್ಷತಿ ಮಾತನುಷ್ವ ||

ತಾ|| ಈ ಭವಸಾಗರವನ್ನು ಹೇಗೆ ದಾಟುವೆನು? ನನಗೆ ಯಾವುದು ದಾರಿ? ನಾನೇನೂ ಅರಿಯೆನು. ಎಲೈ ಪ್ರಭುವೇ! ಸಂಸಾರದುಃಖವನ್ನು ಹೋಗಲಾಡಿಸಿ ನನ್ನನ್ನು ಉದ್ಧಾರ ಮಾಡು.

ಎಂಬದಾಗಿ ಸದ್ಗುರುವನ್ನು ಮರೆಹೊಕ್ಕು, ವೇದಾಂತವಿಚಾರಮಾಡಿ, ಅವಿದ್ಯಾಕಾರ್ಯಗಳ ಸಮ್ಮೇಳನದಿಂದ ಉಂಟಾಗಿರುವ ಪ್ರಪಂಚವ್ಯಾಪಾರದ ಯೋಗ್ಯತೆಯನ್ನು ತಿಳಿದು, ತೀವ್ರವೈರಾಗ್ಯದಿಂದ ಜ್ಞಾನಮಾರ್ಗಾವಲಂಬಿಯಾಗಿ " ಓಂ " ಕಾರೋಪಾಸನೆಯೊಡಗೂಡಿದ ಸಮಾಧಿಯ ಅನುಷ್ಠಾನದಿಂದ ಅವಿದ್ಯೆಯನ್ನು ನಿಗ್ರಹಿಸಿ ಆತ್ಮಸಾಕ್ಷಾತ್ಕಾರ ಮಾಡಿಕೊಳ್ಳುವ ಮಾರ್ಗವಲ್ಲದೆ, ಈ ಭವಸಾಗರವನ್ನು ದಾಟಲು ಮತ್ತಾವ ಮಾರ್ಗದಿಂದಲೂ ಶಕ್ಯವಿಲ್ಲ. ಶಾಸ್ತ್ರೋಕ್ತವಾದ ಅಧಿಕಾರವನ್ನು ಸಂಪಾದನೆಮಾಡಿಕೊಳ್ಳದೆ, ಸರಿಯಾದ ಸದ್ಗುರುವಿನ ಮರೆಹೊಗದೆ, ಆತಿಕಾಯನ ತತ್ವವಾದ ಅವಿದ್ಯಾದೃಢತರಸಮ್ಮೇಳನದಲ್ಲಿ ಬಿದ್ದಿದ್ದರೂ, ಜನಗಳು ಕಠ ಮತ್ತು ಮುಂಡಕೋಪನಿಷತ್ತಿನಲ್ಲಿ ಹೇಳಿರುವಂತೆ,

ಅವಿದ್ಯಾಯಾ ಮನ್ತರೇ ವರ್ತಮಾನಾಃ
ಸ್ವಯಂ ಧೀರಾಃ ಪಂಡಿತಂ ಮನ್ಯಮಾನಾಃ |
ದಂದ್ರಮ್ಯಮಾಣಾಃ ಪರಿಯಂತಿ ಮೂಢಾ
ಅನ್ಧೇನೈವ ನೀಯಮಾನಾ ಯಥಾನ್ಧಾಃ ||

ತಾ|| ಅವಿದ್ಯಾಪಾಶದಲ್ಲಿ ಸಿಕ್ಕಿಕೊಂಡು ಒದ್ದಾಡುತ್ತಿದ್ದರೂ, ಜನರು ತಾವೇ ಪಂಡಿತರು ಪ್ರಜ್ಞಾಶಾಲಿಗಳು, ಧೀರರೆಂದು ತಿಳಿದು ಬಹು ದುಃಖಗಳಿಗೊಳಗಾಗಿ ಹಳ್ಳತಿಟ್ಟಿನ ಮತ್ತು ವಕ್ರವಾಗಿರುವ ದಾರಿಯಲ್ಲಿ ಮುಂದೆ ದಾರಿಯನ್ನು ತೋರಿಸುವ ಹುಟ್ಟುಕುರುಡನನ್ನು ಹಿಂಬಾಲಿಸಿಕೊಂಡು ಹೋಗುವ ಕುರುಡನಂತೆ ಮೂಢರಾಗಿ ಅನರ್ಥಗಳನ್ನು ಪಡೆಯುವರು.

ಅಂದರೆ ಶಾಸ್ತ್ರಾರ್ಥಗಳನ್ನು ಶ್ರುತಿಸಮ್ಮತವಾಗಿ ತಿಳಿದುಕೊಳ್ಳದೆ ಇಷ್ಟಬಂದಂತೆ ಅರ್ಥಮಾಡಿಕೊಂಡು ಹೋಗುವವರೂ, ಅಶಾಸ್ತ್ರೀಯ ಮಾರ್ಗದಲ್ಲಿ ಪ್ರವರ್ತಿಸುವವರೂ ಮೇಲೆ ಹೇಳಿರುವ ಶ್ರುತಿವಾಕ್ಯದಂತೆ ಅತಿಕಾಯನ ತತ್ವದಲ್ಲಿರುವ ಅವಿದ್ಯೆಯ ಪಾಶದಲ್ಲಿ ಬಿದ್ದು ಒದ್ದಾಡುತ್ತಿರುವರು.

ಇಂಥ ಅದ್ಭುತ ಶಕ್ತಿಯ ತತ್ವದವನಾದ ವಜ್ರಕವಚವನ್ನು ತೊಟ್ಟಿದ್ದ ಅತಿಕಾಯನು ಲಕ್ಷ್ಮಣನಿಂದ ನಿಗ್ರಹವಾಗಲು ಕಾರಣವೇನೆಂದರೆ—ಈ ದೃಢತರಸಮ್ಮೇಳನಕ್ಕೆ ಕಾರ್ಯಗಳ ದ್ವಂದ್ವವೇ ಕಾರಣವಾಗಿರುವುದು. ಕಾರಣವೇನೆಂದರೆ, ಸತ್ವರಜಸ್ತಮೋಗುಣಗಳನ್ನು ತಿಳಿಯಬೇಕಾದರೆ, ಕಾರ್ಯದಲ್ಲಿ ತಿಳಿಯಬೇಕಲ್ಲದೆ ಮತ್ತಾವುದರಿಂದಲೂ ಸಾಧ್ಯವಿಲ್ಲ. ಹೇಗೆಂದರೆ, ಒಂದು ಜನ್ಮವೆತ್ತಿದನಂತರ ಶಿಶುತ್ವದಿಂದ ವೃದ್ಧಾಪ್ಯದವರೆಗೂ ನೋಡಿಕೊಳ್ಳಬಹುದು. ಒಂದು ಯೋಚನೆಗೆ ಮತ್ತೊಂದು ಯೋಚನೆ, ಮತ್ತೊಂದು ಯೋಚನೆಗೆ ಇನ್ನೊಂದು ಯೋಚನೆಯೂ, ಪ್ರಥಮದಲ್ಲಿ ತನ್ನಲ್ಲಿ ಮೋಹ, ನಂತರ ಜೊತೆಗೆ ಹೆಂಡತಿಯಲ್ಲಿ ಮೋಹ ಇದರ ಜೊತೆಗೆ ಮಕ್ಕಳ ಮತ್ತು ಇಷ್ಟಮಿತ್ರರಲ್ಲಿನ ಮೋಹವೂ ಇದಕ್ಕೆ ಬೇಕಾದ ಭೋಗ ಪದಾರ್ಥಗಳ ಸಕಲಕರಣೆಗಳಲ್ಲಿನ ಮೋಹರೂಪಗಳಾಗಿಯೂ ಇರುವುವು. ಅಲ್ಲದೆ ಒಂದು ಕಾರ್ಯಕ್ಕೆ ಮತ್ತೊಂದು ಕಾರ್ಯ, ಈ ಕಾರ್ಯಕ್ಕೆ ಇನ್ನೊಂದು, ಇನ್ನೊಂದು ಕಾರ್ಯಕ್ಕೆ ಬೇರೊಂದು ಕಾರ್ಯರೂಪವಾಗಿ ಅನೇಕಾನೇಕ ಶಾಖೆಗಳುಳ್ಳ ಒಂದು ವಟವೃಕ್ಷದಂತೆ ಇರುತ್ತದೆ. ಇದೇ ತಾತ್ಪರ್ಯಕ್ಕೆ ಶ್ರೀವಿದ್ಯಾರಣ್ಯರವರು ವೇದಾಂತಪಂಚದಶಿಯಲ್ಲಿ,

ದೇಹವದ್ವಟಧಾನಾದೌ ಸುವಿಚಾರ್ಯ ವಿಲೋಕ್ಯತಾಂ |
ಕ್ವಧಾನಾ ಕುತ್ರವಾ ವೃಕ್ಷ ಸ್ತಸ್ಮಾನ್ಮಾಯೇತಿ ನಿಶ್ಚಿನು ||

ತಾ|| ದೇಹ ಮತ್ತು ಇದರ ವ್ಯಾಪಾರದ ದ್ವಂದ್ವವನ್ನು ಆಲದ ಬೀಜ ಮತ್ತು ವೃಕ್ಷಗಳಿಗೆ ಹೋಲಿಸಿ ಸಾವಧಾನವಾಗಿ ವಿಚಾರಿಸಿ ನೋಡು. ಆಲದ ಬೀಜವೆಷ್ಟು ಚಿಕ್ಕದೋ ಅದರಲ್ಲಿ ಅಂಕುರಿಸಿ ಸಮೀಚೀನವಾದ ಸಂಬಂಧದಿಂದ ಶಾಖಾಪತ್ರಪುಷ್ಪಫಲಾದಿಗಳುಳ್ಳ ಮರವು ಎಷ್ಟು ದೊಡ್ಡದೋ ಯೋಚಿಸು. ಆದುದರಿಂದ ಪ್ರಪಂಚವೆಲ್ಲವೂ ಅವಿದ್ಯೆಯ ದ್ವಂದ್ವವಾದುದರಿಂದ ದುರ್ನಿರೂಪನೆಂದು ತಿಳಿ. ಎಂದು ಹೇಳಿರುತ್ತಾರೆ.

ಆಲದಬೀಜವು ಚಿಕ್ಕದಾಗಿದ್ದುಕೊಂಡು ಶಾಖಾಪತ್ರಪುಷ್ಪಫಲಗಳಾಗುವ ಕಾರ್ಯಗಳು ಹೇಗೆ ನಡೆಯುವುವೋ ಹಾಗೆ ನಮಗೆ ಒಂದು ಜನ್ಮ ಬಂದನಂತರ ಮೇಲೆ ತಿಳಿಸಿರುವಂತೆ ಕಾರ್ಯಗಳು ಪರಂಪರಾರೂಪವಾಗಿ ಬೆಳೆದು, ಬಾಹ್ಯವ್ಯಾಪಾರ ನಡೆಯುತ್ತಿರುವುದು. ಒಂದು ಆಲದವೃಕ್ಷದಿಂದ ಉತ್ಪನ್ನವಾಗುವ ಬೀಜವು ಪುನಃ ಮೊಳೆತು ವೃಕ್ಷವಾಗುವಂತೆ, ಈ ಜನ್ಮದ ವ್ಯಾಪಾರದಿಂದ ಮತ್ತೊಂದು ಜನ್ಮ, ಹೀಗೆಯೇ ಜನ್ಮಪರಂಪರೆಗಳನ್ನೂ ಬೀಜವೃಕ್ಷದಂತೆ ಅನುಭವಿಸುವೆವು. ಆದುದರಿಂದ, ಕಾರ್ಯಪರಂಪರೆಗಳು ಒಂದಕ್ಕೊಂದು ಸೇರಿಕೊಂಡು ಹೆಚ್ಚಿದ ಹಾಗೆಲ್ಲಾ ಜನ್ಮಪರಂಪರೆಗಳು ಹೆಚ್ಚುವುವು. ಈ ತಾತ್ಪರ್ಯಕ್ಕೆ ಶ್ರುತಿವಾಕ್ಯವನ್ನೇ ತೆಗೆದು ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೩೧೩ನೆಯ ಶ್ಲೋಕದಲ್ಲಿ.

> ಕಾರ್ಯಪ್ರವರ್ಧನಾ ದ್ಬೀಜಪ್ರವೃದ್ಧಿಃ ಪರಿದೃಶ್ಯತೇ |
> ಕಾರ್ಯನಾಶಾ ದ್ಬೀಜನಾಶ ಸ್ತಸ್ಮಾತ್ಕಾರ್ಯಂ ನಿರೋಧಯೇತ್ |

ತಾ|| ಕಾರ್ಯವು ಹೆಚ್ಚುತ್ತಾ ಬಂದಹಾಗೆಲ್ಲಾ ಬೀಜವು ವೃದ್ಧಿಯಾಗುವುದು. ಕಾರ್ಯವು ನಾಶವಾಗಲು ಬೀಜವೂ ನಾಶವಾಗುವುದಾದ್ದರಿಂದ ಕಾರ್ಯವನ್ನು ಹೆಚ್ಚಿಸಿಕೊಳ್ಳದಂತೆ ತಡೆಯಬೇಕು ಎಂದು ಹೇಳಿರುವರು.

ಆದುದರಿಂದ ಪ್ರಪಂಚವ್ಯವಹಾರರೂಪವಾದ ಕಾರ್ಯವನ್ನು ತಗ್ಗಿಸುತ್ತಾ ಬರಬೇಕು. ಕಾರ್ಯವನ್ನು ತಗ್ಗಿಸಿಕೊಳ್ಳುವುದೆಂದರೆ ವ್ಯವಹಾರಗಳಲ್ಲಿ ವಿರಕ್ತಿಯನ್ನು ಹೊಂದಬೇಕು. ಹೊರಗಣ ಕಾರ್ಯಗಳು ನಡೆಯಬೇಕಾದರೆ ಅವಿದ್ಯೆಯು ಮನಸ್ಸಿನ ವೃತ್ತಿಯನ್ನು ಬಾಹ್ಯಕ್ಕೆ ಎಳೆದುಕೊಂಡು ಹೊರಗಣ ಕಾರ್ಯರೂಪವಾಗಿ ಪರಿಣಮಿಸುವುದರಿಂದ ಮನಸ್ಸೇ ಬಾಹ್ಯವ್ಯಾಪಾರಕ್ಕೆ ಮುಖ್ಯನಾಗಿರುವುದು. ಇಂತಹ ಮನಸ್ಸು ವಿರಕ್ತಿಯನ್ನು ಪಡೆಯಬೇಕು. ಎಂದರೆ ಕಾರ್ಯಗಳಲ್ಲಿ ಜಿಹಾಸೆಹುಟ್ಟಿ ಕಾರ್ಯಗಳ ನಡೆಯುವಿಕೆಯು ಬೇಡವೆಂದು ತಟಸ್ಥವಾಗುತ್ತಾ ಬಂದಲ್ಲಿ ಅವಿದ್ಯಾಸಮ್ಮೇಳನಶಕ್ತಿಯು ಕುಗ್ಗುತ್ತಾ ಬರುವುದು. ಮನಸ್ಸಿನ ವೃತ್ತಿಗೆ ಜಾಗ್ರತ್ಕಾಲದಲ್ಲಿ ಯಾವುದಾದರೂ ಒಂದು ಅವಲಂಬನೆ ಇರಬೇಕು. ಬಾಹ್ಯವ್ಯಾಪಾರದ ಅವಲಂಬನೆಯನ್ನು ತಪ್ಪಿಸಬೇಕಾದರೆ ಆತ್ಮಾಕಾರದ ಕಡೆಗೆ ತಿರುಗಿಸಬೇಕು.

ಮನಸ್ಸಿನ ವೃತ್ತಿಯನ್ನು ಆತ್ಮಾಕಾರದ ಕಡೆಗೆ ತಿರುಗಿಸುವುದೆಂದರೆ, ಆತ್ಮಭಾವನೆಯಲ್ಲಿರುವ ಬುದ್ಧಿವೃತ್ತಿಯೊಡನೆ ಸಹಕರಿಸಿಕೊಂಡು ನಿಲ್ಲುವುದೇ ವಿರಕ್ತಿ, ಅಥವಾ ಆತ್ಮಾಕಾರದ ಕಡೆಗೆ ಮನಸ್ಸನ್ನು ತಿರುಗಿಸುವುದೆಂಬ ತಾತ್ಪರ್ಯವು. ಆದುದರಿಂದ ಆತ್ಮಾಕಾರದ ಕಡೆಗೆ ತಿರುಗಿಸುವ ಮನಸ್ಸಿನ ವೃತ್ತಿಯ ಸ್ವರೂಪವು ನಿಜವಾದ ವಿರಕ್ತಿಯೆನಿಸಿಕೊಳ್ಳುವುದೇ ಹೊರತು, ಪ್ರಪಂಚವ್ಯವಹಾರದಲ್ಲಿ ಒಂದು ಪದಾರ್ಥದಲ್ಲಿ ಕೆಲವು ಕಾಲ ಜುಗುಪ್ಸೆ ಯುಂಟಾದರೆ, ಅದನ್ನು ವಿರಕ್ತಿಯೆಂದು ಎಂದಿಗೂ ಹೇಳುವುದಿಲ್ಲ. ಸ್ಮಶಾನವೈರಾಗ್ಯ, ಪ್ರಸೂತಿ ವೈರಾಗ್ಯಗಳೆಂಬುವು ಕಾಲಕ್ರಮೇಣ ನಶಿಸಿಹೋಗುವುವಾದುದರಿಂದ ಪ್ರಯೋಜನ ವಿಲ್ಲ. ಆದುದರಿಂದ, ಆತ್ಮಾಕಾರದ ಕಡೆಗಿರುವ ಮನಸ್ಸಿನ ವೃತ್ತಿಯ ಸ್ವರೂಪವೇ ನಿಜವಾದ ವಿರಕ್ತಿಯೆನಿಸಿಕೊಳ್ಳುವುದು. ಈ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕ ಚೂಡಾಮಣಿ ೩೩೩ನೇ ಶ್ಲೋಕದಲ್ಲಿ,

> ವೈರಾಗ್ಯಾನ್ನಪರಂ ಸುಖಸ್ಯಜನಕಂ |
> ಪಶ್ಯಾಮಿ ವಶ್ಯಾತ್ಮನ ||
> ಸ್ತಾಚ್ಛೇಚ್ಛುದ್ಧತರಾತ್ಮಬೋಧಸಹಿತಂ |
> ಸ್ವಾರಾಜ್ಯ ಸಾಮ್ರಾಜ್ಯಧುಕ್ ||

ತಾ|| ವಿರಕ್ತಿಯೊಂದನ್ನು ಬಿಟ್ಟರೆ, ಶಾಂತಿಸುಖವನ್ನುಂಟುಮಾಡತಕ್ಕ ಸಾಮುಗ್ರಿಯು ಬೇರೊಂದಿಲ್ಲ. ಜಿತೇಂದ್ರಿಯನಾದವನ ವೈರಾಗ್ಯವು ಅತ್ಯಂತ ನಿರ್ಮಲವಾಗಿರುವ ಆತ್ಮ ಭಾವನೆಯಿಂದ ಕೂಡಿರುವುದಾದರೆ, ಸ್ವಾರಾಜ್ಯಸ್ವರೂಪನೆಂದರೆ, ತನ್ನ ನಿಶ್ಚಯವಾದ ಆತ್ಮ ಸ್ವರೂಪವನ್ನು ಹೊಂದಬಹುದು. ಎಂದು ಹೇಳಿರುವರು.

ಆದುದರಿಂದ ಸೀತಾದೇವಿಯನ್ನು ಪಡೆಯಬೇಕೆಂದಿರುವ ಶ್ರೀರಾಮನಿಗೆ ಲಕ್ಷ್ಮಣನು ದಾಸಾನುದಾಸನಾಗಿದ್ದನೆಂದರೆ, ಆತ್ಮಭಾವನೆಯ ಕಡೆಗೆ ಇರುವ ಬುದ್ಧಿವೃತ್ತಿಯನ್ನು ಎಡೆಬಿಡದೆ ಸಹಕರಿಸಿಕೊಂಡು ಮನಸ್ಸಿನ ವೃತ್ತಿಯು ಇತ್ತೆಂಬ ತಾತ್ಪರ್ಯ. ಅಂದರೆ ಆತ್ಮಾಕಾರದ ಕಡೆಗಿರುವ ಮನಸ್ಸಿನ ವೃತ್ತಿಯ ಸ್ವರೂಪವೇ ನಿಶ್ಚಯವಾದ ವಿರಕ್ತಿ ಅಥವಾ ವೈರಾಗ್ಯದ ಸ್ವರೂಪವೆನಿಸಿಕೊಳ್ಳುವುದು. ಹೃದಯಗ್ರಂಥಿಸ್ವರೂಪದಲ್ಲಿರುವ ಈ ಅವಿದ್ಯಾ ಸಮ್ಮೋಹನವನ್ನು ವಿರಕ್ತಿಯೆಂಬ ಕತ್ತಿಯಿಂದ ಛೇದಿಸಬೇಕಲ್ಲದೆ, ಮತ್ತಾವ ವಿಧದಿಂದಲೂ ಸಾಧ್ಯವಿಲ್ಲ. ಕಾರಣವೇನೆಂದರೆ, ಏಕಾಂಗಿಯಾಗಿದ್ದರೂ, ಗುಂಪಿನಲ್ಲಿದ್ದರೂ, ಅಥವಾ ದೇಶಾಂತರಕ್ಕೆ ಓಡಿಹೋದರೂ ಈ ಸಮ್ಮೋಹನಶಕ್ತಿಯಿಂದ ತಪ್ಪಿಸಿಕೊಳ್ಳುವುದು ದುಸ್ತರ. ಆದುದರಿಂದ ಆತ್ಮಾಕಾರದ ಕಡೆಗೆ ಸಹಕರಿಸಿಕೊಂಡು ಇರುವ ಮನಸ್ಸಿನ ವೃತ್ತಿಯು, ಬಾಹ್ಯವ್ಯಾಪಾರದಲ್ಲಿ ಹೆಣೆದುಕೊಂಡಿರುವ ಸ್ವರೂಪಗಳನ್ನೆಲ್ಲ ಗ್ರಂಥಿಯನ್ನು ಬಿಡಿಸಿದಂತೆ ತ್ಯಜಿಸುತ್ತಾ ಬಂದರೆ, ಈ ಅವಿದ್ಯಾಸಮ್ಮೋಹನವು ನಶಿಸುವುದು.

ಈ ಮೇಲಿನ ತಾತ್ಪರ್ಯಗಳನ್ನು ಅನುಸರಿಸಿಯೇ ಲಕ್ಷ್ಮಣನು ಅತಿಕಾಯನನ್ನು ನಿಗ್ರಹಿಸಿದನು. ಅತಿಕಾಯನ ವಜ್ರಕವಚವನ್ನು ಭೇದಿಸಿ, ಅವನನ್ನು ನಿಗ್ರಹಿಸಲು ಲಕ್ಷ್ಮಣನು ಅತ್ಯಂತ ಕಷ್ಟಪಟ್ಟಂತೆ ಹೃದಯಗ್ರಂಥಿಸ್ವರೂಪದಲ್ಲಿರುವ ಈ ಸಮ್ಮೇಳನದಿಂದ ಬಿಡಿಸಿಕೊಳ್ಳುವುದು ಅತ್ಯಂತ ಕಷ್ಟ. ವೈರಾಗ್ಯದ ಸ್ವರೂಪವನ್ನು ಬಾಯಲ್ಲಿ ಹೇಳಬಹುದು. ಅನುಭವಕ್ಕೆ ತರುವುದು ಅತ್ಯಂತ ಕಷ್ಟ. ಬಹಿರ್ಮುಖವಾಗಿದ್ದ ಕಾಲದಲ್ಲಿ ಕಿಂಚಿತ್ತಾದರೂ ಕಾರ್ಯಗಳ ಸಂಬಂಧಗಳು ಒಂದಕ್ಕೊಂದು ಇರುವುದರಿಂದ ಈ ಸಮ್ಮೇಳನಶಕ್ತಿಯನ್ನು ಬಹಿರ್ಮುಖವಾಗಿದ್ದ ಕಾಲದಲ್ಲಿ ನಿಗ್ರಹಿಸಲು ಅಸಾಧ್ಯ. ಆದುದರಿಂದ ವಿರಕ್ತಿಯೊಡನೆ ಅಂತರ್ಮುಖದ ಮಾರ್ಗವಾದ ಬಿಂದುಸಹಿತವಾದ "ಓಂ"ಕಾರೋಪಾಸನೆಯ ಅನುಷ್ಠಾನ ದಿಂದಲೇ ಈ ಸಮ್ಮೇಳನಶಕ್ತಿಯನ್ನು ನಿಗ್ರಹಿಸಬೇಕು. ಈ ತತ್ವವೇ ಯುದ್ಧಕ್ಕೆ ಬಂದ ಅತಿಕಾಯನನ್ನು ಲಕ್ಷ್ಮಣನು ನಿಗ್ರಹಿಸಿದ್ದಾಗಿರುವುದು. ಆದುದರಿಂದ ಜನ್ಮಪರಂಪರೆಗಳನ್ನು ಹೋಗಲಾಡಿಸಿಕೊಳ್ಳಲು ಬಹಿರ್ಮುಖವಾಗಿದ್ದ ಕಾಲದಲ್ಲಿ ಈ ಸಮ್ಮೆಳನಸ್ವರೂಪವಾದ ಗ್ರಂಥಿಯನ್ನು ಭೇದಿಸಲು ಬ್ರಹ್ಮೈಕ್ಯದ ಚಿಂತನೆಯಲ್ಲಿರಬೇಕು. ಇದೇ ತಾತ್ಪರ್ಯಕ್ಕೆ ವರಾಹೋಪನಿಷತ್ತಿನಲ್ಲಿ,

ದೀರ್ಘಂವಾಪಿ ಮನೋರಾಜ್ಯಂ ಸಂಸಾರಂ ದುಃಖಸಾಗರಂ |
ಸುಪ್ತೇರುಥ್ಥಾಯ ಸುಪ್ತಾಂತಂ ಬ್ರಹ್ಮೈಕ್ಯಂ ಪ್ರವಿಚಿಂತ್ಯತಾಂ ||

ತಾ|| ಜನ್ಮಪರಂಪರೆಗಳಿಂದ ಬಂದಿರುವ ಮನೋರಾಜ್ಯಸ್ವರೂಪವಾದ ಸಂಸಾರವು ದುಃಖಸ್ವರೂಪವಾಗಿರುವುದು. ಇದನ್ನು ಹೋಗಲಾಡಿಸಿಕೊಳ್ಳಲು ಸದಾಕಾಲದಲ್ಲಿಯೂ, ಬ್ರಹ್ಮೈಕ್ಯವನ್ನು ಚಿಂತನೆಮಾಡತಕ್ಕದ್ದು. ಎಂದು ಹೇಳಿರುವುದು.

ಪ್ರಕೃತದಲ್ಲಿ ಅಧಿಕಾರಿಯು ಬಂಧತ್ರಯಗಳೊಡಗೂಡಿದ ಓಂಕಾರೋಚ್ಚಾರಣೆಯ ಉಪಾಸನೆಯನ್ನು ಮಾಡಬೇಕೆಂದು ಹಿಂದಿನ ಪ್ರಕರಣಗಳಲ್ಲಿ ತಿಳಿಸಿತಷ್ಟೆ! ಈ ಅಭ್ಯಾಸವು ಅಭಿವೃದ್ಧಿಯಾದಲ್ಲಿ, ಕುಂಡಲಿನೀಶಕ್ತಿಯು ಸುಷುಮ್ನೆಯಲ್ಲಿ ಸ್ವಾಧಿಷ್ಠಾನ ಮಣಿಪೂರ ಚಕ್ರಗಳನ್ನು ಭೇದಿಸುವುದು. ಮಣಿಪೂರಚಕ್ರ ಭೇದನೆಯಾದನಂತರವೇ ಅಂದರೆ ಕುಂಭಕರ್ಣನ ವಧೆಯಾದನಂತರವೇ ಅತಿಕಾಯನ ತತ್ವದಲ್ಲಿರುವ ಸಮ್ಮೇಳನಶಕ್ತಿಯು ನಿಗ್ರಹವಾಗುವುದು. ಕಾರಣವೇನೆಂದರೆ—ಅತಿಕಾಯನ ತತ್ವದಲ್ಲಿರುವ ಅಜ್ಞಾನದ ಕಾರ್ಯಗಳ ದ್ವಂದ್ವರೂಪವು ಕಗ್ಗತ್ತಲೆಯಲ್ಲಿನ ತೊಡಕಿನಂತೆ ಅಜ್ಞಾನಸ್ವರೂಪವಾದ ಬಾಹ್ಯವ್ಯಾಪಾರದಲ್ಲಿಯೆ ನಡೆಯುವುವು. ಕತ್ತಲೆಯಲ್ಲಿ ಒಂದೂ ಕಾಣದೆ ತೊಡಕಿನಲ್ಲಿ ಒದ್ದಾಡುವಂತೆ ಬಹಿರ್ವ್ಯಾಪಾರವು ಕಗ್ಗತ್ತಲೆಯಲ್ಲಿನ ತೊಡಕಿನಂತಿದೆ. ಕತ್ತಲೆಹೋಗಿ ಪ್ರಕಾಶಕ್ಕೆ ಬಂದನಂತರ ಕತ್ತಲೆಯಲ್ಲಿದ್ದ ತೊಡಕಿನ ಬಂಧನವು ಹೋಗುವಂತೆ ಬುದ್ಧಿವೃತ್ತಿಯಿಂದ

ಮಣಿಪುರಚಕ್ರಭೇದನೆಯಾಗಿ ನನ್ನೊಳಗಿರುವ ಪ್ರಕಾಶಕ್ಕೆ ಬಂದುನಿಂತಾಗ ಬಹಿರ್ವ್ಯಾಪಾರದ ತೊಡಕಿನ ಶಕ್ತಿಯು ನಿಗ್ರಹವಾಗುವ ತತ್ವವೇ ಕುಂಭಕರ್ಣನ ವಧೆಯಾದನಂತರ ಅತಿಕಾಯನ ವಧೆಯಾಗಿರುತ್ತಷ್ಟೆ. ಅಂದರೆ ಸಂಪೂರ್ಣ ವಿರಕ್ತಿಯೊಡನೆ ಬಂಧತ್ರಯದೊಡಗೂಡಿದ ಓಂಕಾರೋಪಾಸನೆಮಾಡಿ ಸಂಸಾರದ್ವಂದ್ವಶಕ್ತಿಯನ್ನು ನಿಗ್ರಹಮಾಡಬೇಕೆಂಬ ಮುಖ್ಯ ತಾತ್ಪರ್ಯ.

## ೧೭ನೆಯ ಪ್ರಕರಣ.

**ಇಂದ್ರಜಿತ್ತು ತನ್ನ ಬ್ರಹ್ಮಾಸ್ತ್ರದಿಂದ ರಾಮಲಕ್ಷ್ಮಣ ಮೊದಲಾದ ಸಕಲರನ್ನೂ ಮೂರ್ಛೆಗೊಳಿಸಿದುದು.**

**ಭೋಗಪದಾರ್ಥಗಳನ್ನು ಅನುಭವಿಸಲು ಕಾರಣವಾದ ತೃಷ್ಣೆಯ ಸ್ವರೂಪ ಮತ್ತು ಇದರಿಂದ ಬಂಧನ**

**ರಾ||** ರಾವಣನ ಮಗನಾದ ಇಂದ್ರಜಿತ್ತು ಪುನಃ ಯುದ್ಧಕ್ಕೆ ಬರಲು ಯತ್ನಿಸಿ, ಯಜ್ಞೇಶ್ವರನಲ್ಲಿ ಹೋಮವನ್ನು ಮಾಡಿ, ಅದರಿಂದ ಉತ್ಪನ್ನವಾದ ವಿಜಯರಥವನ್ನೇರಿ ಅಂತರ್ಧಾನಶಕ್ತಿಯನ್ನು ಪಡೆದು, ಅಗ್ನಿಜ್ವಾಲೆಯಂತಿರುವ ತನ್ನ ಬ್ರಹ್ಮಾಸ್ತ್ರದಿಂದ ಸಕಲ ವಾನರ ಸೈನ್ಯಗಳನ್ನೂ ಜಾಂಬುವಂತ, ನೀಲ, ಅಂಗದ, ಸುಗ್ರೀವರನ್ನೂ ಕೆಡವಿ, ರಾಮಲಕ್ಷ್ಮಣರನ್ನು ಕೂಡ ಬ್ರಹ್ಮಾಸ್ತ್ರಕ್ಕೆ ಕಟ್ಟುಬೀಳುವಂತೆ ಮಾಡಿದನು, ರಾಮಲಕ್ಷ್ಮಣರಾದಿಯಾಗಿ ಸಕಲರೂ ಇಂದ್ರಜಿತ್ತಿನ ಬ್ರಹ್ಮಾಸ್ತ್ರದಿಂದ ನಿಶ್ಚೇಷ್ಟಿತರಾಗಿ ಬೀಳಲು, ಇಂದ್ರಜಿತ್ತು ಹರ್ಷಾತಿಶಯದಿಂದ ಬೊಬ್ಬೆಯಿಟ್ಟು ಕೂಗುತ್ತಾ ಲಂಕಾಪಟ್ಟಣಕ್ಕೆ ಹಿಂದಿರುಗಿದನು.

**ತತ್ವ||** ಭೋಗಶಕ್ತಿಯುಮೋಹರೂಪವಾದ ನಾಗಾಸ್ತ್ರದ ಬಂಧನವನ್ನು ಇಂದ್ರಜಿತ್ತಿನ ಪ್ರಥಮಯುದ್ಧದಲ್ಲಿ ವಿವರಿಸಿರುತ್ತಷ್ಟೆ! ಈಗ ಭೋಗಶಕ್ತಿಯಲ್ಲಿನ ತೃಷ್ಣೆಯ ಸ್ವರೂಪದ ವಿಚಾರವೇ ಇಂದ್ರಜಿತ್ತಿನ ಎರಡನೆಯ ಯುದ್ಧದ ತತ್ವವಾಗಿರುವುದು. ಪ್ರಾಣಿಗಳಿಗೆ ಭೋಗತೃಷ್ಣಾಶಕ್ತಿಯು ಆವೃತವಾಗಬೇಕಾದರೆ ಪ್ರಥಮದಲ್ಲಿ ಮೋಹಪಾಶವು ಅಂಕುರಿಸಿ ಈ ಮೋಹಪಾಶವು ಬಲಿತರೆ ತೃಷ್ಣೆಯೆನಿಸಿಕೊಳ್ಳುವುದು. ಈ ಭೋಗತೃಷ್ಣೆಯು ಪ್ರಾಣಿಗಳಿಗೆ ಆವೃತವಾಯಿತೆಂದರೆ, ಭೋಗೇಚ್ಛೆಯು ಜ್ವಾಲೆ ಅಥವಾ ತಾಪದಿಂದೊಡಗೂಡಿರುವುದರಿಂದ ತೃಷ್ಣೆಯೆಂದು ಕರೆಯಲ್ಪಡುವುದು. ಈ ರೀತಿ ಉದಯಿಸುವ ಜ್ವಾಲೆ ಅಥವಾ ತಾಪದ ತತ್ವವೇ ಇಂದ್ರಜಿತ್ತು ಯುದ್ಧಕ್ಕೆ ಬರುವಾಗ ಅಗ್ನಿಯಲ್ಲಿ ಹೋಮಮಾಡಿ ವಿಜಯರಥವನ್ನೇರಿ ಬಂದ ತತ್ವವಾಗಿರುವುದು. ಭೋಗಶಕ್ತಿಯಲ್ಲಿನ ಮೋಹವು ಅಧಿಕವಾಗಿ ಆವರಿಸಿದರೆ, ಅಂತಃಕರಣಕ್ಕೆ ಮಂಕುಬಡಿಯುವುದು. ಮನುಷ್ಯನಿಗೆ ಭೋಗತೃಷ್ಣೆಯು ಆವೃತವಾದರೆ ತಾಪದಿಂದ ಒಡಗೂಡಿರುವನು. ಯಾವ ಇಂದ್ರಿಯಗಳ ಭೋಗದ ತಾಪವಾಗಲಿ ಉತ್ಪನ್ನವಾದರೆ ಸಹಿಸು

ವುದಕ್ಕೆ ಅಸಾಧ್ಯವಾಗಿ ಬಾಯಿ ಬಾಯಿ ಬಿಡಿಸುತ್ತದೆ. ಅದರಲ್ಲೂ ಜಿಹ್ವೋಪಸ್ಥಗಳ ತೃಷ್ಣೆಯ ವಿಚಾರ ಬರೆಯಬೇಕಾದುದೇ ಇಲ್ಲ. ಧನ ಧಾನ್ಯಗಳನ್ನು ಸಂಪಾದನೆಮಾಡುವುದು ಭೋಗತೃಷ್ಣೆಯನ್ನು ತೃಪ್ತಿಪಡಿಸುವುದಕ್ಕೇ ಆಗಿರುವುದು. ಮನುಷ್ಯನಿಗೆ ಬಾಯಾರಿಕೆಯು ಸಾಧಾರಣವಾಗಿದ್ದ ಕಾಲದಲ್ಲಿ ಭೋಗಶಕ್ತಿಯಲ್ಲಿನ ಮೋಹಸ್ವರೂಪಕ್ಕೆ ಅನ್ವಯವಾಗುವುದು. ನೀರಡಿಕೆಯು ಅಧಿಕವಾಗುತ್ತಾ ಬಂದಲ್ಲಿ ಮನುಷ್ಯನು ಹೇಗೆ ತಾಪದಿಂದ ಒಣಗುವನೋ ಹಾಗೆ ಭೋಗತೃಷ್ಣೆಯು ಆವರಿಸಿದರೆ ತಾಪದಿಂದಿರುವನು. ಹೇಳಲಶಕ್ಯವಾದ ಅಕಾರ್ಯಗಳನ್ನೂ ಮಾಡಿಸುವ ಈ ಭೋಗತೃಷ್ಣೆಯ ಮಹತ್ತನ್ನು ಏನೆಂದು ಹೇಳೋಣ? ಪ್ರಾಣಿಗಳನ್ನು ಬಂಧಿಸಿಯೇ ಇರುವುದೆಂದು ವಸಿಷ್ಠರು ವಾಸಿಷ್ಠರಾಮಾಯಣದಲ್ಲಿ,

ಸರ್ವೈವ ಲೋಕಯಾತ್ರೇಯಂ ಪ್ರೋತಾತೃಷ್ಣಾವರತ್ರಯಾ ।
ರಜ್ಜುಬನ್ಧಾ ದ್ವಿಮುಚ್ಯನ್ತೇತೃಷ್ಣಾಬನ್ಧಾನ್ನಕೇಚನ ॥

ತಾ॥ ಈ ಸಮಸ್ತ ಲೋಕಯಾತ್ರೆಯೂ ಭೋಗಶಕ್ತಿಯ ತೃಷ್ಣೆಯ ಹಗ್ಗದಿಂದಲೇ ಬದ್ಧವಾಗಿರುವುದು. ಅಂದರೆ ಸಾಮಾನ್ಯ ರಜ್ಜುವಿನಿಂದ ಬದ್ಧರಾದವರು ಬಿಡುಗಡೆ ಹೊಂದುವರು. ಈ ಭೋಗತೃಷ್ಣೆಯ ಬಂಧನದಿಂದ ಯಾರೂ ಬಿಡಿಸಿಕೊಳ್ಳಲಾರರು.

ಇಂತಹ ಭೋಗತೃಷ್ಣೆಯೇ ಇಂದ್ರಜಿತ್ತಿನ ಬ್ರಹ್ಮಾಸ್ತ್ರವಾದುದರಿಂದ ಶ್ರೀರಾಮಲಕ್ಷ್ಮಣರಾದಿಯಾಗಿ ಸಕಲರೂ ನಿಶ್ಚೇಷ್ಟಿತರಾಗಿ ಮಲಗಿರುವುದು. ಭೋಗತೃಷ್ಣೆಯು ಉಲ್ಬಣಸ್ಥಿತಿಯನ್ನು ಪಡೆದು ಪ್ರಾಣಿಗಳನ್ನು ತಪ್ಪಿಸಿಕೊಳ್ಳದಂತೆ ಬಂಧಿಸುವ ತತ್ವವೇ ಇಂದ್ರಜಿತ್ತಿನ ರಣವಿಜಯಹೋಮದ ತತ್ವವಾಗಿರುವುದು. ಈ ಭೋಗತೃಷ್ಣೆಯನ್ನೇ ರಾಗವೆಂದೂ ಕರೆಯುವರು. ವಿಷಯಾದಿಗಳಲ್ಲಿನ ಭೋಗತೃಷ್ಣೆಯಿಂದಲೇ ಜನ್ಮಪರಂಪರೆಗಳುಂಟಾಗುವುವು. ಇದೇ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೭೭ನೆಯ ಶ್ಲೋಕದಲ್ಲಿ,

ಯಏಷುಮೂಢಾ ವಿಷಯೇಷುಬದ್ಧಾ ।
ರಾಗೋರುಪಾಶೇನ ಸುದುರ್ದಮೇನ ॥
ಆಯಾಂತಿ ನಿರ್ಯಾನ್ತ್ಯಥ ಊರ್ಧ್ವಮುಚ್ಚೈಃ ।
ಸ್ವಕರ್ಮದೂತೇನ ಜವೇನ ನೀತಾಃ ॥

ತಾ॥ ಮೂಢರಾದವರು ವಿಷಯಮೋಹದಲ್ಲಿ ಬಿದ್ದು ಬಿಡಿಸುವದಕ್ಕಾಗದಂತಹ ರಾಗವೆಂಬ ಪಾಶದ ಕಟ್ಟಿಗೆ ಸಿಕ್ಕಿಹೋಗುವರು. ಇಂಥವರನ್ನು ಸ್ವಕರ್ಮವೆಂಬ ದೂತನು ಸ್ವರ್ಗಕ್ಕೂ ನರಕಕ್ಕೂ ಎಳೆಯುತ್ತ ಇರುವನು ಎಂದು ಹೇಳಿರುವರು.

ಹೀಗೆ ಭೋಗತೃಷ್ಣೆಯು ಪ್ರಾಣಿಗಳನ್ನು ಬಂಧಿಸಿರುವುದು. ಈ ಭೋಗತೃಷ್ಣೆಯು ನಮಗೆ ಗೋಚರವಾಗದೆ ಅದೃಶ್ಯವಾಗಿ ಎಲ್ಲಿಯೋ ಇದ್ದುಕೊಂಡು ನಮ್ಮನ್ನು ಕಟ್ಟಿಹಾಕುವುದು. ಇದೇ ಇಂದ್ರಜಿತ್ತಿನ ಅಂತರ್ಧಾನವಿದ್ಯೆಯ ತತ್ವವು. ಅಗೋಚರವಾಗಿಯೇ ಇದ್ದು ಈ ಭೋಗತೃಷ್ಣೆಯು ಎಂತಹವರನ್ನಾದರೂ ಬಂಧಿಸುವುದು. ಈ ತಾತ್ಪರ್ಯಕ್ಕೆ ಮಹೋಪನಿಷತ್ತಿನಲ್ಲಿಯೂ,

ಧೀರೋಪ್ಯತಿಬಹುಜ್ಞೋಽಪಿ ಕುಲಜೋಽಪಿ ಮಹಾನಪಿ |
ತೃಷ್ಣಯಾ ಬಧ್ಯತೆ ಜಂತು ಸ್ಸಿಂಹಶ್ಶೃಂಖಲಯಾ ಯಥಾ ||
ಸರ್ವಸಂಸಾರ ದುಃಖಾನಾಂ ತೃಷ್ಣೈಕಾ ದೀರ್ಘದುಃಖದಾ |

ತಾ|| ಧೀರನಾದರೂ, ಅತ್ಯಂತ ತಿಳಿವಳಿಕೆಯುಳ್ಳವನಾದರೂ, ಸತ್ಕುಲಪ್ರಸೂತನಾದರೂ, ಮಹಾತ್ಮನಾದರೂ, ಸಿಂಹವು ಸರಪಣಿಯಿಂದ ಬಂಧಿಸಲ್ಪಡುವಂತೆ, ಭೋಗತೃಷ್ಣೆಯಿಂದ ಬಂಧಿಸಲ್ಪಡುವನು. ಜಗತ್ತಿನ ವ್ಯಾಪಾರದಲ್ಲಿನ ಸಕಲ ವಿಧವಾದ ದುಃಖಗಳಲ್ಲೆಲ್ಲಾ ಭೋಗತೃಷ್ಣೆಯೊಂದೇ ಅತ್ಯಂತ ಪ್ರಬಲವಾದ ಮತ್ತು ಕೊನೆಗಾಣದ ದುಃಖವಾಗಿರುವುದು. ಎಂದು ಹೇಳಿರುವುದು.

ಇಂತಹ ಭೋಗತೃಷ್ಣೆಯ ಶಕ್ತಿಯೇ ಇಂದ್ರಜಿತ್ತಿನ ಬ್ರಹ್ಮಾಸ್ತ್ರದ ತತ್ವವಾಗಿರುವುದು. ಭೋಗತೃಷ್ಣಾಶಕ್ತಿಯು ಸೃಷ್ಟಿಯ ನಿಯತಿಯಲ್ಲಿ ಭೋಗಪ್ರಧಾನಶಕ್ತಿಯಾಗಿರುವುದರಿಂದ ಇಂದ್ರಜಿತ್ತಿನ ಬ್ರಹ್ಮಾಸ್ತ್ರವೆಂಬ ತಾತ್ಪರ್ಯ. ಇದರಂತೆ ಜ್ಞಾನಶಕ್ತಿಯೇ ಬುದ್ಧಿತತ್ವಪ್ರಕಾಶಕನಾದ ಶ್ರೀರಾಮನಿಗೆ ಸೃಷ್ಟಿಕ್ರಮದಲ್ಲಿ ಬಂದ ಬ್ರಹ್ಮಾಸ್ತ್ರವಾಗಿವೆ. ವೈರಾಗ್ಯವೇ ಲಕ್ಷ್ಮಣನಿಗೆ ಬ್ರಹ್ಮಾಸ್ತ್ರವು. ರಾವಣನಿಗೆ ವಾಸನಾವೃತ್ತಿಯೇ ಸೃಷ್ಟಿಕ್ರಮದಲ್ಲಿ ಬಂದ ಬ್ರಹ್ಮಾಸ್ತ್ರವೆನಿಸಿಕೊಳ್ಳುವುದು. ಆದುದರಿಂದ ಶ್ರೀರಾಮಾದಿಗಳು ಇಂದ್ರಜಿತ್ತಿನ ಬ್ರಹ್ಮಾಸ್ತ್ರಕ್ಕೆ ಕಟ್ಟುಬಿದ್ದಿದ್ದರೆಂದರೆ—ಭೋಗತೃಷ್ಣೆಯ ಹೊಡೆತದಿಂದ ನಮ್ಮ ಬುದ್ಧಿ ಮನಸ್ಸು ಮತ್ತು ಪಂಚಪ್ರಾಣಗಳು ತಮ್ಮ ನೈಜವಾದ ಕಾಂತಿಯನ್ನು ನೀಗಿ, ತೃಷ್ಣೆಯ ಅನುವರ್ತಿಯಾಗುವುದೇ ಶ್ರೀರಾಮಾದಿಗಳು ಇಂದ್ರಜಿತ್ತಿನ ಬ್ರಹ್ಮಾಸ್ತ್ರಕ್ಕೆ ಕಟ್ಟುಬಿದ್ದಿರುವುದು. ಶ್ರೀರಾಮಾದಿಗಳು ಇಂದ್ರಜಿತ್ತಿನ ಬ್ರಹ್ಮಾಸ್ತ್ರದಿಂದ ಶಲ್ಯಬಾಧೆಯನ್ನು ಪಡೆದು ಅನುಭವಿಸುತ್ತಿದಂತೆ, ಈ ತೃಷ್ಣೆಯ ಕುಕ್ಕುವಿಕೆಯಿಂದ ಬುದ್ಧಿ ಮನಸ್ಸು ಮತ್ತು ಪಂಚಪ್ರಾಣಗಳು ಸಹಿಸಲಾಗದ ಬಾಧೆಯನ್ನು ಪಡೆದು ಅದರ ಬಂಧನಕ್ಕೊಳಗಾಗುವುವು. ಈ ತತ್ವವೇ ಶ್ರೀರಾಮಾದಿಗಳು ಶಲ್ಯಬಾಧೆಯಿಂದ ಪರಿತಾಪಪಡುತ್ತಿರುವುದಾಗಿರುವುದು.

ಪ್ರಾಣಿಗಳಲ್ಲಿ ಉದಯಿಸುವ ಭೋಗತೃಷ್ಣೆಯು ಒಂದಾವರ್ತಿ ಅನುಭವಿಸಿದರೆ ಅಲ್ಲಿಗೆ ಎಂದಿಗೂ ಶಾಂತವಾಗುವುದಿಲ್ಲ. ಇಂದ್ರಜಿತ್ತು ವಿಜಯರಥವನ್ನು ಏರಿ ಬಂದು ಅಜೇಯ

ನಾಗಿರುವಂತೆ ಪ್ರಾಣಿಗಳಲ್ಲಿ ತೃಷ್ಣೆಯು ಶಾಂತವಾಗದೆ ವಿಜೃಂಭಿಸುತ್ತಲೇ ಇರುವುದು. ಇದೇ ತಾತ್ಪರ್ಯಕ್ಕೆ ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆಯಲ್ಲಿ,

ನಜಾತುಕಾಮಃ ಕಾಮಾನಾ ಮುಪಭೋಗೇನ ಶಾಮ್ಯತಿ |
ಹವಿಷಾಕೃಷ್ಣವರ್ತ್ಮೇವಾ ಭೂಯಯೇವಾಭಿವರ್ಧತೆ ||

ತಾ|| ಕಾಮವು ಅನುಭವಿಸೋಣಮಾತ್ರದಿಂದ ಎಂದಿಗೂ ಶಾಂತವಾಗಲಾರದು. ಹೇಗೆಂದರೆ ಅಗ್ನಿಯು ಹವಿಸ್ಸಿನಿಂದ ಮತ್ತೂ ಮತ್ತೂ ವೃದ್ಧಿಯಾಗುವಂತೆ ಎಂದು ಹೇಳಿರುವನು.

ಇದರಂತೆ ಭೋಗತೃಷ್ಣೆಯನ್ನು ತೃಪ್ತಿಪಡಿಸುವುದೇ ಸುಖವೆಂದು ಜನಗಳು ಹಿಂಬಾಲಿಸಿಕೊಂಡು ಹೋಗಿ ರೋಗಾದಿ ಕಷ್ಟಪರಂಪರೆಗಳನ್ನು ಈ ಜನ್ಮದಲ್ಲಿ ಅನುಭವಿಸುವುದಲ್ಲದೆ, ಜನ್ಮಪರಂಪರೆಗಳನ್ನೂ ಪಡೆದು ಅನುಭಸುವರು. ಅದರಲ್ಲೂ ದೇಹಧಾರಣೆಗೆಷ್ಟು ಅವಶ್ಯಕವೋ ಅಷ್ಟುಮಾತ್ರ ಭೋಗಪದಾರ್ಥಗಳನ್ನು ಸ್ವೀಕರಿಸದೆ ಭೋಗತೃಷ್ಣೆಯ ಪಾಶಕ್ಕೆ ಒಳಗಾಗಿ " ಭೋಗೇ ರೋಗಭಯಂ " ಎಂಬ ದುಃಖಪರಿಣಾಮವನ್ನು ಈ ಜನ್ಮದಲ್ಲಿ ಅನುಭವಿಸುವುದಲ್ಲದೆ, ಈ ದುಃಖಬೀಜಗಳನ್ನು ಜನ್ಮಜನ್ಮಾಂತರಕ್ಕೂ ಶೇಖರಿಸಿಕೊಳ್ಳುವರು.

ಇಂದ್ರಜಿತ್ತಿನ ಬ್ರಹ್ಮಾಸ್ತ್ರದಿಂದ ವಿಭೀಷಣನು ಕೆಲವು ಕಾಲ ಸ್ತಂಭೀಭೂತನಾಗಿದ್ದನೆಂಬುದರ ತತ್ವವೇನೆಂದರೆ—ಎಂತಹ ವಿವೇಕಶಾಲಿಯಾಗಿ ಧರ್ಮಮಾರ್ಗದಲ್ಲಿದ್ದರೂ, ಈ ಭೋಗತೃಷ್ಣಾಶಕ್ತಿಯು ಆವೃತವಾದರೆ ಧರ್ಮಮಾರ್ಗದಿಂದ ಸಂಪಾದಿಸಲ್ಪಟ್ಟ ವಿವೇಕಸ್ವರೂಪವಾದ ಪುಣ್ಯವು ಕೂಡ ಮರೆಯಾಗುವುದೆಂಬದಾಗಿರುವುದು.

ಬಾಹ್ಯವ್ಯಾಪಾರದಲ್ಲಿ ಭೋಗತೃಷ್ಣೆಯಿಂದುಂಟಾಗುವ ಫಲಿತಾರ್ಥವನ್ನು ಇದುವರೆಗೂ ವಿವರಿಸಿತು. ಅಂತರ್ಮುಖಮಾರ್ಗವಾದ ಬಿಂದುಸಹಿತವಾದ "ಓಂ"ಕಾರೋಪಾಸನೆಯ ಅನುಷ್ಠಾನದ ಕಾಲದಲ್ಲಿ ಈ ಭೋಗತೃಷ್ಣೆಯು ಅಂತರ್ಮುಖದ ದಾರಿಯಲ್ಲಿ ಬಿಡದೆ ಬಹಿರ್ಮುಖವಾಗಿ ಎಳೆಯುವುದರಿಂದ, ಬುದ್ಧಿಮನಸ್ಸಿನ ವೃತ್ತಿ ಮತ್ತು ವಾಯುಗಳು ಕುಕ್ಕಲ್ಪಟ್ಟಂತಾಗಿ ಬಳಲುವುದರಿಂದ ಆಗಾಗ ಬಹಿರ್ಮುಖವಾಗುವಿಕೆಯೂ, ತೇಜೋಬಿಂದು ಶಿಥಿಲವಾಗುವಿಕೆಯೂ ಉಂಟಾಗುವುವು. ಅಲ್ಲದೆ ಈ ಭೋಗತೃಷ್ಣಾಶಕ್ತಿಯು ಹೊಡೆತದಿಂದ ಬಿಂದುಗಳು ಹೋಗಿ ವಿಷಯಾಕಾರವುಂಟಾಗಬಹುದು. ಸಮಾಧಿಯ ಅನುಷ್ಠಾನಕ್ಕೆ ಕುಳಿತುಕೊಂಡ ತಕ್ಷಣವೇ ಸಮಾಧಿಯಲ್ಲಿ ಸ್ಥಿರತ್ವವು ಎಂದಿಗೂ ಉಂಟಾಗುವುದಿಲ್ಲ. ಈ ಭೋಗಶಕ್ತಿಯ ಎಳೆತದಿಂದಲೇ ಮುಕ್ಕಾಲುಪಾಲು ಸಮಾಧಿಯ ಅನುಷ್ಠಾನದಲ್ಲಿ ಆಯಾಸವುಂಟಾಗಿ, ವಿಶ್ರಾಂತಿಗೋಸ್ಕರ ಬಹಿರ್ಮುಖವಾಗಬೇಕಾಗುವುದು. ದಾಹದಿಂದ

ಹೇಗೆ ಬಳಲಿಕೆಯುಂಟಾಗುವುದೋ ಹಾಗೆ ಸಮಾಧಿಯ ಅನುಷ್ಠಾನದಲ್ಲಿ ಅಧಿಕಾರಿಗೆ ಭೋಗತೃಷ್ಣಾಶಕ್ತಿಯಿಂದ ಬಳಲಿಕೆಯುಂಟಾಗುವುದು.

ಈ ಮೇಲಿನ ತತ್ವಾರ್ಥಗಳೇ ಇಂದ್ರಜಿತ್ತು ರಾಮಲಕ್ಷ್ಮಣರಾದಿಯಾಗಿ ಸಕಲರನ್ನೂ ಬ್ರಹ್ಮಾಸ್ತ್ರದಿಂದ ಬಂಧಿಸಿ ನಿಶ್ಚೇಷ್ಟಿತರನ್ನಾಗಿ ಮಾಡಿದ್ದಾಗಿರುವುದು.

## ೧೪ನೆಯ ಪ್ರಕರಣ.

**ಹನುಮಂತನು ಜಾಂಬುವಂತನಿಂದ ಪ್ರೇರಿತನಾಗಿ ಋಷಭಪರ್ವತದಲ್ಲಿದ್ದ ಅಮೃತಸಂಜೀವಿನಿಯೇ ಮೊದಲಾದ ಔಷಧಿಗಳನ್ನು ತಂದು ರಾಮಲಕ್ಷ್ಮಣರಾದಿಯಾಗಿ ಸಕಲರನ್ನೂ ಬದುಕಿಸಿದುದು.**

**ಭೋಗಶಕ್ತಿಯ ಆಶಾಪಾಶದಿಂದ ಮುಕ್ತರಾಗಲು ಜಾಲಂಧರಮುದ್ರಾ ಸಹಿತವಾದ "ಓಂ"ಕಾರೋಪಾಸನೆಯನ್ನು ಮಾಡಬೇಕೆಂಬ ವಿಚಾರ ಮತ್ತು ಬಂಧತ್ರಯದ ಮಹಿಮೆಯ ವಿಚಾರ.**

**ರಾ||** ಇಂದ್ರಜಿತ್ತಿನ ಬ್ರಹ್ಮಾಸ್ತ್ರದಿಂದ ವಿಭೀಷಣನು ಚೇತರಿಸಿಕೊಂಡು ಘಾಯ ಪಟ್ಟು ಬಿದ್ದಿದ್ದ ಜಾಂಬುವಂತನನ್ನು ನೋಡಿದನು. ಜಾಂಬುವಂತನು ರಾಮಲಕ್ಷ್ಮಣರ ಯೋಗಕ್ಷೇಮವನ್ನು ಕೇಳದೆ " ಹನುಮಂತನು ಜೀವಂತನಾಗಿರುವನೇ ? " ಎಂಬದಾಗಿ ವಿಭೀಷಣನನ್ನು ಕೇಳಿದನು. ಅಲ್ಲದೆ ಹನುಮಂತನೊಬ್ಬನು ಜೀವಂತನಾಗಿದ್ದರೆ, ಸಕಲರೂ ಬದುಕಿಕೊಳ್ಳುವರೆಂದು ಜಾಂಬುವಂತನು ಹೇಳುತ್ತಿರುವ ಸಮಯಕ್ಕೆ ಸರಿಯಾಗಿ, ಹನುಮಂತನೇ ಜಾಂಬುವಂತನ ಬಳಿಗೆ ಬಂದನು. ಆಗ ಜಾಂಬುವಂತನು, " ಎಲೈ ಹನುಮಂತನೆ! ನನ್ನ ಸಮೀಪಕ್ಕೆ ಬಾ. ನಮ್ಮೆಲ್ಲರಿಗೂ ನೀನೇ ರಕ್ಷಕನು. ಇಂದ್ರಜಿತ್ತಿನ ಬ್ರಹ್ಮಾಸ್ತ್ರದ ಹೊಡೆತದಿಂದ ಬಿದ್ದಿರುವ ರಾಮಲಕ್ಷ್ಮಣರನ್ನು ಶಲ್ಯಬಾಧೆಯಿಂದ ತಪ್ಪಿಸುವುತ್ತು ಸಕಲವಾನರರನ್ನೂ ಬದುಕಿಸು. ನೀನು ಹಿಮವತ್ಪರ್ವತಕ್ಕೆ ಹೋಗಿ ಅಲ್ಲಿ ಋಷಭಪರ್ವತ ಮತ್ತು ಕೈಲಾಸಪರ್ವತಗಳ ಮಧ್ಯದಲ್ಲಿ ಅತ್ಯಂತ ಕಾಂತಿಮತ್ತಾದ ಔಷಧಪರ್ವತವಿದೆ. ಆ ಪರ್ವತದಲ್ಲಿ, ಅಮೃತಸಂಜೀವಿನಿ, ವಿಶಲ್ಯಕರಣಿ, ಸಂಧಾನಕರಣಿ, ಸೌವರ್ಣಕರಣಿ, ಎಂಬ ನಾಲ್ಕು ದಿವ್ಯೌಷಧಿಗಳನ್ನು ತೆಗೆದುಕೊಂಡು ಬಂದು, ರಾಮಲಕ್ಷ್ಮಣಮುಂತಾದ ಸಕಲ ಸೈನ್ಯಗಳನ್ನೂ ಬದುಕಿಸು " ಎಂದನು. ಅದರಂತೆ ಹನುಮಂತನು ನಾಲ್ಕು ಔಷಧಿಗಳನ್ನು ತಂದು ಸಕಲರನ್ನೂ ಬದುಕಿಸಿದನು.

**ತತ್ವ||** ಇಂದ್ರಜಿತ್ತಿನ ಪ್ರಥಮಯುದ್ಧದ ತತ್ವವಾದ ಭೋಗದಲ್ಲಿನ ಮೋಹಶಕ್ತಿಯನ್ನು ಪರಿಹರಿಸಿಕೊಳ್ಳಲು ಉಡ್ಯಾಣಬಂಧವೆಂಬ ಮುದ್ರೆಯನ್ನು ಅಭ್ಯಾಸಮಾಡಬೇಕೆಂದು

ತಿಳಿಸಿತಷ್ಟೆ! ಇಂದ್ರಜಿತ್ತಿನ ಎರಡನೆಯ ಯುದ್ಧವಾದ ಈಗಿನ ಭೋಗತೃಷ್ಣಾಶಕ್ತಿಯ ಪರಿಹಾರಕ್ಕೆ ಜಾಲಂಧರಬಂಧವೆಂಬ ಮುದ್ರೆಯನ್ನು ಅನುಷ್ಠಾನಮಾಡಬೇಕೆಂಬುದೇ ಹನುಮಂತನು ಔಷಧಪರ್ವತದಿಂದ ನಾಲ್ಕು ದಿವ್ಯೌಷಧಗಳನ್ನು ತಂದು, ರಾಮಲಕ್ಷ್ಮಣರಾದಿಯಾಗಿ ಸಕಲರನ್ನೂ ಬದುಕಿಸಿದುದರ ತತ್ವವಾಗಿರುವುದು.

ಹೇಗೆಂದರೆ—ಈ ಭೋಗತೃಷ್ಣಾಶಕ್ತಿಯು ಬಹಿರ್ಮುಖವಾಗಿಯೇ ಎಳೆಯುವ ಹೊಡೆತದಿಂದ ಬುದ್ಧಿಮನಸ್ಸಿನ ವೃತ್ತಿ ಮತ್ತು ವಾಯುಗಳು ಶಲ್ಯಬಾಧೆಗೆ ಒಳಗಾಗುತ್ತವೆ. ಮುಳ್ಳಿನಿಂದ ಮಾಡಲ್ಪಟ್ಟ ಆಯುಧದಿಂದ ವೇಗವಾಗಿ ಚುಚ್ಚುವುದರಿಂದ ಉಂಟಾಗುವ ಬಾಧೆಗೆ ಶಲ್ಯಬಾಧೆಯೆಂದು ಹೆಸರು. ಮುಳ್ಳುಹಂದಿಯ ಮುಳ್ಳಿಗೂ, ಮುಳ್ಳಿನಿಂದ ಮಾಡಲ್ಪಟ್ಟು ವೇಗವಾಗಿ ಶತ್ರುಗಳಲ್ಲಿ ನಾಟಕೊಳ್ಳುವ ಆಯುಧಕ್ಕೂ ಶಲ್ಯವೆಂದು ಹೆಸರು. ಆದುದರಿಂದ ರಾಮಲಕ್ಷ್ಮಣರು ಶಲ್ಯಬಾಧೆಯಿಂದ ಬಂಧಿಸಲ್ಪಟ್ಟರೆಂದರೆ, ಸಮಾಧಿಯ ಅನುಷ್ಠಾನಕಾಲದಲ್ಲಿ ಭೋಗತೃಷ್ಣಾಶಕ್ತಿಯು ಬುದ್ಧಿಮನಸ್ಸಿನ ವೃತ್ತಿಗಳನ್ನು ಬಹಿರ್ಮುಖವಾಗಿ ಎಳೆಯುವುದರಿಂದ ಅತಿ ವೇಗವಾಗಿ ಚುಚ್ಚುವ ಸ್ವಭಾವದಂತಹ ದುಡುಕು ಹುಟ್ಟಿ ಬಳಲಿಕೆಯುಂಟಾಗುವುದು. ಈ ಬಾಧೆಯಿಂದ ಜ್ಞಾನಶಕ್ತಿಸ್ವರೂಪವಾದ ಬುದ್ಧಿವೃತ್ತಿಯು ಬಳಲಿ, ಧ್ಯೇಯಸ್ವರೂಪವಾದ ಬಿಂದುವೇ ತಾನೆಂದು ಧರಿಸಿಕೊಳ್ಳಲು ಶಕ್ಯವಾಗದೆ ಬಿಂದು ಶಿಥಿಲವಾಗುವುದು. ಕ್ರಿಯಾತ್ಮಕವಾದ ಮನಸ್ಸಿನ ವೃತ್ತಿಯು ಕೂಡ ಬಿಂದುಧಾರಣೆಯನ್ನು ಸಹಕರಿಸಿಕೊಂಡಿರಲು ಸಾಧ್ಯವಿಲ್ಲದೆ ಬಳಲುವುದು. ಯಾವಾಗ ಬುದ್ಧಿಮನಸ್ಸಿನ ವೃತ್ತಿಗಳು, ಬಳಲುವುವೋ ಆಗ, ದೇಹದ ವಾಯುಗಳೂ ಬಳಲುವುವು. ಅತ್ಯಂತ ದಾಹವಾದ ಕಾಲದಲ್ಲಿ ಜ್ಞಾನಕ್ರಿಯಾ ಮತ್ತು ವಾಯುಗಳು ಬಳಲುವುವೆಂದರೆ ದೇಹವೇ ಬಳಲುವಂತೆ, ಸಮಾಧಿಯ ಅನುಷ್ಠಾನಕಾಲದಲ್ಲಿ ಜ್ಞಾನಕ್ರಿಯಾ ಮತ್ತು ವಾಯುಗಳೆಲ್ಲ, ಭೋಗತೃಷ್ಣಾಶಕ್ತಿಯ ಬಹಿರಾಕರ್ಷಣೆಯ ಹೊಡೆತದಿಂದ ಅತ್ಯಂತ ಬಳಲುವುವು. ಈ ಅಂತರಾರ್ಥವೇ, ರಾಮಲಕ್ಷ್ಮಣರಾದಿಯಾಗಿ ಸಕಲರೂ ಶಲ್ಯಬಾಧೆಯಿಂದ ಪೀಡಿತರಾಗಿ ನಿಶ್ಚೇಷ್ಟಿತರಾಗಿದ್ದುದಾಗಿದೆ.

ಶಲ್ಯಬಾಧೆಯಿಂದ ಬಳಲಿ ನಿಶ್ಚೇಷ್ಟಿತರಾಗಿದ್ದ ರಾಮಲಕ್ಷ್ಮಣರಾದಿಯಾಗಿ ಸಕಲರನ್ನೂ ಹನುಮಂತನು ನಾಲ್ಕು ದಿವ್ಯೌಷಧಗಳಿಂದ ಬದುಕಿಸಿದನಷ್ಟೆ! ಇದರಂತೆ ಸಮಾಧಿಯ ಅನುಷ್ಠಾನದಲ್ಲಿ ಹನುಮಂತನ ತತ್ವವಾದ ಶ್ವಾಸೋಚ್ಛ್ವಾಸದ ಕಾರ್ಯದ ಮೂಲಕ ವಿಶಲ್ಯಕರಣಿ, ಸುವರ್ಣಕರಣಿ, ಸಂಧಾನಕರಣಿ, ಅಮೃತಸಂಜೀವಿನಿ ಎಂಬ ದಿವ್ಯೌಷಧಗಳ ಮಹತ್ತಿನ ತತ್ವವಾದ ಜಾಲಂಧರಬಂಧವೆಂಬ ಮುದ್ರೆಯ ಅನುಷ್ಠಾನದ ವಿಚಾರವನ್ನು ತೆಗೆದುಕೊಳ್ಳೋಣ.

ಅಮೃತಸಂಜೀವಿನಿ ಎಂಬ ದಿವ್ಯೌಷಧವೆಂದರೆ ಸಮೀಚೀನವಾಗಿ ಜೀವಿಸುವಿಕೆ ಯನ್ನುಂಟುಮಾಡುವಂತಹ ಅಮೃತವೇ ಅಮೃತಸಂಜೀವಿನಿಯಾಗಿರುವುದು. ಅಮೃತಕ್ಕಿಂತ ಬೇರೆ ದಿವ್ಯವಾದ ಔಷಧವಿಲ್ಲ. ಅಲ್ಲದೆ ನಮ್ಮ ದೇಹದಲ್ಲಿಲ್ಲದ ಅಮೃತವನ್ನು ಹೊರಗಿನಿಂದ ಅನುಷ್ಠಾನದಲ್ಲಿ ಎಲ್ಲಿ ತರುವುದು? ಆದುದರಿಂದ ನಮ್ಮಲ್ಲಿರುವ ಅಮೃತವನ್ನೇ ನಾವು ಪಾನ ಮಾಡಿ ಅವಿದ್ಯೆಯ ಭೋಗತೃಷ್ಣೆಯಿಂದುಂಟಾಗುವ ಬಳಲಿಕೆಯನ್ನು ಪರಿಹರಿಸಿಕೊಂಡು ಸಮಾಧಿಯ ಅನುಷ್ಠಾನವನ್ನು ಸಿದ್ಧಿಸಿಕೊಳ್ಳಬೇಕು. ನಮಗೆ ದಾಹ ಅಥವಾ ನೀರಡಿಕೆ ಯುಂಟಾಗುವುದನ್ನೇ ತೃಷ್ಣೆಯೆಂದು ಕರೆಯುತ್ತೇವಷ್ಟೆ! ಇದನ್ನು ಪರಿಹರಿಸಿಕೊಳ್ಳಲು ಅಮೃತಸ್ವರೂಪದಲ್ಲಿರುವ ಜಲವನ್ನು ಕುಡಿಯುವಂತೆ, ಸಮಾಧಿಯ ಅನುಷ್ಠಾನದಲ್ಲಿ ಭೋಗತೃಷ್ಣಾಶಕ್ತಿಯ ಬಾಧೆಯನ್ನು ಪರಿಹರಿಸಿಕೊಳ್ಳಲು ನಮ್ಮಲ್ಲಿಯೇ ಇರುವ ಅಮೃತ ವನ್ನು ಪಾನಮಾಡಿಸುವಂತಹ ಅನುಷ್ಠಾನವಾದ ಜಾಲಂಧರಬಂಧವೆಂಬ ಮುದ್ರೆಯನ್ನು ಅಭ್ಯಾಸಮಾಡಬೇಕು.

ಜಾಲಂಧರಬಂಧವೆಂಬ ಮುದ್ರೆಯ ಅಭ್ಯಾಸದಿಂದ ಪಾನಮಾಡುವ ಅಮೃತವೇ ಅಮೃತಸಂಜೀವಿನಿ, ವಿಶಲ್ಯಕರಣಿ, ಸಂಧಾನಕರಣಿ, ಸುವರ್ಣಕರಣಿ ಎಂಬ ದಿವ್ಯೌಷಧಿಗಳ ತತ್ವದಲ್ಲಿರುವುದು. ಈ ಅಮೃತವೇ ಸಮೀಚೀನವಾಗಿ ಜೀವಿಸಿಕೊಂಡಿರಬಹುದಾದ ಅಮೃತ ಸಂಜೀವಿನಿಯ ತತ್ವದಲ್ಲಿರುವುದು. ಈ ಅಮೃತವೇ ವಿಶಲ್ಯಕರಣಿಯ ತತ್ವದಲ್ಲಿರುವುದು. ಹೇಗೆಂದರೆ—ಅತಿ ವೇಗವಾಗಿ ಚುಚ್ಚುವ ಬಳಲಿಕೆಯನ್ನು ಹೋಗಲಾಡಿಸುವುದೇ ವಿಶಲ್ಯಕರ ಣಿಯ ತತ್ವವಾಗಿರುವುದು. ಸುವರ್ಣಕರಣಿಯೆಂದರೆ—"ಸುಷ್ಟು ಋಣೋತಿ ದೀಪ್ಯತ ಇತಿ ಸುವರ್ಣಃ (ಋಣ ದೀಪ್ತೌ)" ಚೆನ್ನಾಗಿ ಪ್ರಕಾಶಿಸುವ ಕಾಂತಿಯನ್ನುಂಟುಮಾಡು ವುದು ಎಂದರ್ಥ. ಸಂಧಾನಕರಣಿ ಎಂದರೆ—ಧನತಿ ಪುಷ್ಣಂತೀತಿ ಧಾನಾ (ಧನ—ಧಾನ್ಯೆ)" ಸಮೀಚೀನವಾಗಿ ಪೋಷಿಸುವುದು ಅಮೃತವೇ ಆಗಿರುತ್ತದೆ. ಆದುದರಿಂದ, ಇಂತಹ ದಿವ್ಯೌಷಧಗಳ ತತ್ವದಲ್ಲಿರುವ ಅಮೃತವನ್ನು ನಾವು ಪಾನಮಾಡಲು ಪ್ರಯತ್ನಿಸಬೇಕು.

ಮೇಲೆ ವಿವರಿಸಿರುವ ದಿವ್ಯೌಷಧಗಳ ತತ್ವದಲ್ಲಿರುವ ಅಮೃತವು ನಮ್ಮಲ್ಲಿ ಯಾವ ಸ್ಥಳ ದಲ್ಲಿರುವುದೆಂದರೆ—ನಮ್ಮ ಶಿರಸ್ಸಿನಲ್ಲಿ "ತಾಲಮೂಲೇತು ಚಂದ್ರಮಾಃ" ಎಂಬ ಶ್ರುತಿವಾಕ್ಯ ದಂತೆ ಭ್ರೂಮಧ್ಯಪ್ರದೇಶಕ್ಕೆ ಸೇರಿದ ಅಮೃತಕಲಶವಿರುವುದು. ಈ ಸ್ಥಳವೇ ಅಮೃತ ವನ್ನು ಸ್ರವಿಸುವ ಚಂದ್ರನಿಗೆ ವಾಸಸ್ಥಾನವಾಗಿರುವುದು. ಈ ಸ್ಥಳವೇ ಋಷಭಪರ್ವತದ ತತ್ವದಲ್ಲಿರುವುದು. ಋಷಭವೆಂದರೆ "ಋಷತಿ ಗಾಂಪ್ರತಿಗಚ್ಛತೀತಿ ಋಷಭಃ (ಋ-ಗತೌ)" ದೇಹವನ್ನು ಕುರಿತು ಹೋಗುವುದು. ಅಂದರೆ, ಅಮೃತವು ಸ್ರವಿಸಿಕೊಂಡು ದೇಹಕ್ಕೆ ಪ್ರವೇಶಿಸುವ ಸ್ಥಳವಾದುದರಿಂದ ಈ ಸ್ಥಳದ ತತ್ವವು ಋಷಭಪರ್ವತಸ್ವರೂಪವಾಗಿರುವುದು.

ಹಿಮವತ್ಪರ್ವತವೆಂದರೂ ಅಮೃತದ ಘನಿಯೆಂಬ ತತ್ವವಾಗುವುದು. ಅಮೃತ ಸ್ವರೂಪವಾದ ದಿವ್ಯೌಷಧಿಯು ಕೈಲಾಸಪರ್ವತಕ್ಕೂ ಋಷಭಪರ್ವತಕ್ಕೂ ಮಧ್ಯೆ ಇರುವುದಷ್ಟೆ! ಕೈಲಾಸವೆಂದರೆ—"ಕೇಶಿರಸಿ ಶಿವಯೋರ್ಲಾಸೋ ನೃತ್ಯಮಸ್ಮಿನ್ನಿತಿ॥ವಾ ಕೈಲಾಸಃ" ಶಿಖರದಲ್ಲಿ ಪಾರ್ವತೀಪರಮೇಶ್ವರರು ಆನಂದಸ್ವರೂಪದಲ್ಲಿರುವುದರಿಂದ, ಇದಕ್ಕೆ ಕೈಲಾಸ ಪರ್ವತವೆಂದು ಹೆಸರು ಬಂತು. ಕೈಲಾಸನೆಂಬುದಕ್ಕೆ ಇನ್ನೊಂದು ವ್ಯುತ್ಪತ್ತಿಯೂ ಇರುವುದು. "ಕೇಲಯೋಃ ಜಲಭೂಮ್ಯೋಃ ಆಸನಂ ಸ್ಥಿತಿರ್ಯಸ್ಯ ಕೇಲಾಸಃ ಸ್ಫಟಿಕಂ ತಸ್ಯಾಯಂ ಕೈಲಾಸಃ" ಅಮೃತಸ್ವರೂಪವಾದ ಜಲಭೂಮಿಗಳಲ್ಲಿ ಇರುವುದಾದುದರಿಂದ, ಕೈಲಾಸವೆಂಬ ತತ್ವವು. ಅಂದರೆ, ಅಮೃತವ ತತ್ವದಲ್ಲಿರುವ ಕ್ಷೀರಾಬ್ಧಿಯೆಂದರೂ ಕೈಲಾಸ ವೆಂದರೂ ಒಂದೇ ತತ್ವವಾಗಿರುವುದು.

ಆದುದರಿಂದ ಕ್ಷೀರಾಬ್ಧಿವಾಸಿಯಾದ ಲಕ್ಷ್ಮೀಸಮೇತನಾದ ಶ್ರೀಮನ್ನಾರಾಯಣ ನೆಂದರೂ, ಕೈಲಾಸವಾಸಿಯಾದ ಪಾರ್ವತೀಸಮೇತನಾದ ಪರಮೇಶ್ವರನೆಂದರೂ ಒಂದೇ ತತ್ವವಾಗಿರುವುದು. ಅಂದರೆ—ಪರಮಾತ್ಮನು ಎರಡು ನಾಮಭೇದಗಳನ್ನು ಹೊಂದಿದ್ದರೂ ತತ್ವತಃ ಒಬ್ಬನೇ. ಇಂತಹ ಪರಮಾತ್ಮನ ಸ್ಥಾನವು ನಮ್ಮಲ್ಲಿ ಎಲ್ಲಿರುವುದೆಂಬುದನ್ನೂ, ಅಮೃತೋತ್ಪತ್ತಿಯ ವಿಚಾರವನ್ನೂ ತಿಳಿಯಲು ಮುಂದುವರಿಯೋಣ. ಈ ಪ್ರಕರಣ ದಲ್ಲಿ ಬರೆದಿರುವ ವ್ಯುತ್ಪತ್ತಿಗಳು ಅಮರದ ವ್ಯಾಖ್ಯಾನದಲ್ಲಿರುವುವು.

ಮೇಲೆ ವಿವರಿಸಿರುವ ಆತ್ಮಸ್ವರೂಪವೆನಿಸುವ ಲಕ್ಷ್ಮೀಸಮೇತನಾದ ಶ್ರೀಮನ್ನಾರಾಯಣನೂ, ಪಾರ್ವತೀಸಮೇತನಾದ ಪರಮೇಶ್ವರನೂ, ಅಮೃತಸ್ವರೂಪವಾದ ಕೈಲಾಸ ದಲ್ಲಿರುವಂತೆ, ನಮ್ಮಲ್ಲಿ ಶಿರಸ್ಸಿನಲ್ಲಿ ಕೈಲಾಸಪರ್ವತದ ತತ್ವದಲ್ಲಿರುವ ಸಹಸ್ರಾರಕಮಲದಲ್ಲಿ ಪರಮಾತ್ಮನಿರುವನು. ಇಂತಹ ಸಹಸ್ರಾರಕಮಲದಲ್ಲಿರುವ ಚಂದ್ರಕಳಾಸ್ವರೂಪವಾದ ಪರಾಶಕ್ತಿಯ ಪ್ರಭಾವದಿಂದ ಅಮೃತೋತ್ಪತ್ತಿಯಾಗಿ, ಚಂದ್ರನ ಮೂಲಕ ಅಮೃತಸ್ರಾವ ವಾಗುವುದೆಂದು, ಹಿಂದೆ ಸುಂದರಕಾಂಡದಲ್ಲಿ ಮೋಕ್ಷದ ಬಾಗಿಲನ್ನು ತೆಗೆಸುವ ಪ್ರಕರಣ ದಲ್ಲಿ ಶ್ರೀಶಂಕರಭಗವತ್ಪಾದವರು ಹೇಳಿರುವ, "ಸುಧಾಧಾರಾಸಾರೈಃ" ಎಂಬ ಶ್ಲೋಕವನ್ನು ಬರೆದು ವಿವರಿಸಿರುತ್ತಷ್ಟೆ! ಅಲ್ಲದೆ ಸುಂದರಕಾಂಡದ ಕೊನೆಯ ಭಾಗದಲ್ಲಿ ವಾನರರು ಮಧು ಪಾನಮಾಡಿದ ತತ್ವವೇ ಅಮೃತಸ್ರಾವದ ಪ್ರಭಾವವೆಂದೂ ತಿಳಿಸಿತಷ್ಟೆ! ಅಲ್ಲದೆ ನಾಭೀ ಪ್ರದೇಶದಲ್ಲಿರುವ ಸೂರ್ಯರೂಪವಾದ ಜ್ವಾಲೆಯು ಈ ಅಮೃತಸ್ರಾವವನ್ನೆಲ್ಲಾ ಭಕ್ಷಿಸಿ, ದೇಹವನ್ನು ಕ್ಷೀಣಗತಿಯನ್ನಾಗಿ ಮಾಡುವುದೆಂದೂ ತಿಳಿಸಿತಷ್ಟೆ! ಈ ಅಮೃತವನ್ನು ಸೂರ್ಯನ ಜ್ವಾಲೆಯು ಭಕ್ಷಿಸದಂತೆ ಮಾಡಿ ಬುದ್ಧಿಮನಸ್ಸಿನ ವೃತ್ತಿ ಮತ್ತು ವಾಯುಗಳು ಅಮೃತದಿಂದ ಚೆನ್ನಾಗಿ ತೋಯಿಸಲ್ಪಡಲು, ಜಾಲಂಧರಬಂಧವೆಂಬ ಮುದ್ರೆಯನ್ನು ಅನುಷ್ಠಾನ

ಮಾಡಿದರೆ, ಹನುಮಂತನು ಔಷಧಿಗಳನ್ನು ತಂದು ರಾಮಲಕ್ಷ್ಮಣರಾದಿಯಾಗಿ ಸಕಲರನ್ನೂ ಬದುಕಿಸಿದ ತತ್ವವನ್ನು, ಅಧಿಕಾರಿಯು ಹೊಂದುವನು.

ಆದುದರಿಂದ ಕೈಲಾಸದ ತತ್ವವೇ ನಮ್ಮಲ್ಲಿ ಶಿರಸ್ಸಿನಲ್ಲಿರುವ ಸಹಸ್ರಾರಕಮಲವು. ನಮಲ್ಲಿ, ತಾಲಮೂಲದಲ್ಲಿರುವ ಚಂದ್ರನ ಪ್ರಭಾವದಿಂದ ಅಮೃತಸ್ರಾವವಾಗುವ ತತ್ವವೇ ಋಷಭಪರ್ವತದ ತತ್ವದಲ್ಲಿರುವುದು. ಈ ಋಷಭಪರ್ವತಕ್ಕೆ ಚಂದ್ರದ್ರೋಣಪರ್ವತವೆಂದೂ ನಾಮಾಂತರವಿರುವುದು. ಚಂದ್ರದ್ರೋಣವೆಂದರೂ ಅಮೃತವನ್ನು ಕರೆಯುವ ಪಾತ್ರೆ, ಅಂದರೆ ಅಮೃತವು ಸ್ರವಿಸುವ ಸ್ಥಳವೆಂಬ ತಾತ್ಪರ್ಯ.

ಈ ಮೇಲಿನ ದಿವ್ಯವಾದ ಔಷಧಿಗಳ ಸ್ವರೂಪವಾದ ಅಮೃತಪಾನದ ಮಹಿಮೆಯ ತತ್ವಕ್ಕೆ ಸರಿಯಾಗಿ ಶ್ರೀಶಂಕರಭಗವತ್ಪಾದರವರು,

ಷಡಾಧಾರ ಪಂಕೇರುಹಾಂತರ್ವಿರಾಜ |
ತ್ಸುಷುಮ್ನಾಂತರಾಳೇಷು ತೇಜೋಲ್ಲಸಂತೀಮ್ ||
ಪಿಬಂತೀಂ ಸುಧಾಮಂಡಲೀಂ ದ್ರಾವಯಂತೀಂ |
ಸುಧಾಮೂರ್ತಿಮೀಡೆ ಮಹಾನಂದರೂಪಮ್ ||

ಪಟ್ಚಕ್ರಗಳಿಗೆ ಆಧಾರಭೂತವಾಗಿರುವ ಕಮಲದ ಒಳಭಾಗದಲ್ಲಿ ವಿರಾಜಿಸುತ್ತಿರುವ ಸುಷುಮ್ನಾನಾಡಿಯ ಒಳಗಡೆಯಲ್ಲಿ ತೇಜಸ್ಸಿನಿಂದ ಪ್ರಕಾಶಿಸುತ್ತಿರುವ ಅಮೃತಮಂಡಲವನ್ನು ಪಾನಮಾಡುತ್ತಲೂ ಸ್ರವಿಸುತ್ತಲೂ ಇರುವ ಅತಿಶಯವಾದ ಆನಂದರೂಪವಾದ ಅಮೃತಮಯ (ಮೂರ್ತಿ) ಶರೀರವನ್ನು ನುತಿಸುವೆನು. ಎಂದು ಹೇಳಿರುವರು.

ಹನುಮಂತನು ದಿವ್ಯವಾದ ಔಷಧಿಗಳನ್ನು ತಂದು ಶ್ರೀರಾಮ ಲಕ್ಷ್ಮಣರಾದಿಯಾಗಿ ಸಕಲರನ್ನೂ ಬದುಕಿಸಿದಂತೆ, ತಾಲಮೂಲದಲ್ಲಿರುವ ಚಂದ್ರನಿಂದ ಅಮೃತವು ಸ್ರವಿಸಿ, ಸಮಾಧಿಸ್ಥಿತಿಯಲ್ಲಿದ್ದಾಗ ಬುದ್ಧಿಮನಸ್ಸಿನ ವೃತ್ತಿಗಳಾದಿಯಾಗಿ ಸಕಲ ವಾಯುಗಳನ್ನೂ ತೋಯಿಸುವ ವಿಧಾನವಾದ ಜಾಲಂಧರಮುದ್ರೆಯ ಅನುಷ್ಠಾನದ ಕ್ರಮವು ಹೇಗೆಂದರೆ— "ಓಂ" ಕಾರೋಪಾಸನೆಯಿಂದ ಬಿಂದುಧಾರಣೆಮಾಡಿಕೊಳ್ಳಲು ಶಿರಸ್ಸಿನವರೆಗೂ "ಓಂ" ಕಾರೋಚ್ಚಾರಣೆಯನ್ನು ಎಳೆದುಕೊಂಡು ಹೋದನಂತರ, ಚೆನ್ನಾಗಿ ಬಿಗಿಬರುವಂತೆ ಗಡ್ಡವನ್ನು ಹಿಂದಕ್ಕೆಳೆದುಕೊಂಡು, ಕತ್ತಿನ ಕೆಳಗೆ ಎದೆಯ ಮೇಲ್ಭಾಗದಲ್ಲಿ ಇಟ್ಟುಕೊಳ್ಳಬೇಕು. ಹೀಗೆ ಮಾಡುವುದೇ ಜಾಲಂಧರಬಂಧದ ಲಕ್ಷಣವಾಗಿರುವುದು.

ಬಂಧತ್ರಯಗಳು ಒಂದೇ ಸೋಪಾನದ ಅನುಷ್ಠಾನಕ್ಕೆ ಸೇರಿದುದರಿಂದ ಈ ಮೂರರ ಅನುಷ್ಠಾನದ ಕ್ರಮವನ್ನು ತಕ್ಕಮಟ್ಟಿಗೆ ತಿಳಿಸದೆ ಇದ್ದರೆ ಇದರ ಪ್ರಯೋಜನವೂ, ಕಥೆಯ

ತತ್ವದ ಸಾರವೂ ಗೊತ್ತಾಗುವುದಿಲ್ಲ. ಆದುದರಿಂದ, ಬಂಧತ್ರಯಗಳೆಂಬ ಮುದ್ರೆಗಳ ವಿಚಾರವನ್ನು ತಕ್ಕಮಟ್ಟಿಗೆ ವಿವರಿಸೋಣ. ಜಾಲಂಧರಬಂಧವನ್ನು ಮಾಡುವುದಕ್ಕೆ ಮುಂಚೆ ಮೂಲಬಂಧವನ್ನು ಹಾಕಿಕೊಳ್ಳಬೇಕು. "ಓಂ" ಕಾರೋಚ್ಚಾರಣೆಯನ್ನು ಎಳೆದುಕೊಂಡು ಶಿರಸ್ಸಿಗೆ ಸೇರಿಸಿದ ತಕ್ಷಣವೇ ಮೂಲಬಂಧವನ್ನು ಹಾಕಿಕೊಂಡು, ಅನಂತರ ಜಾಲಂಧರ ಬಂಧವನ್ನ ಮಾಡಬೇಕು. ಮೂಲಬಂಧವನ್ನು ಮಾಡುವ ಕ್ರಮವನ್ನು ಹಿಂದೆ ಲಂಕಾ ಪಟ್ಟಣದ ಮುತ್ತಿಗೆಯ ಸಂದರ್ಭದಲ್ಲಿ ವಿವರಿಸಿರುವುದು. ಆದರೂ ಇಲ್ಲಿಯೂ ತಕ್ಕಮಟ್ಟಿಗೆ ವಿವರಿಸುವುದು ಉತ್ತಮವಾದುದರಿಂದ ಮೂಲಬಂಧದ ಕ್ರಮವನ್ನು ಬರೆದಿರುವುದು. ಮೂಲಬಂಧವನ್ನ ಮಾಡುವ ಕ್ರಮಕ್ಕೆ ಯೋಗಕುಂಡಲ್ಯುಪನಿಷತ್ತಿನಲ್ಲಿ,

ಅಧೋಗತಿ ಮಪಾನಂವೈ ಊರ್ಧ್ವಂಕುರುತೇ ಬಲಾತ್ ।
ಆಕುಂಚನೇನ ತಂಪ್ರಾಹು ರ್ಮೂಲಬಂಧೋಯಮುಚ್ಯತೆ ।

ತಾ|| ಅಧೋಗತಿಯಾದ ಅಪಾನವಾಯುವನ್ನು ಬಲವಂತದಿಂದ ಊರ್ಧ್ವಮುಖ ವಾಗುವಂತೆ ಆಕುಂಚನೆಮಾಡಿಕೊ. ಇದೇ ಮೂಲಬಂಧ, ಎಂದು ಹೇಳಿರುವುದು.

ಹಿಂದೆ ಲಂಕಾಪಟ್ಟಣದ ಮುತ್ತಿಗೆಯ ಸಂದರ್ಭದಲ್ಲಿ, ಗುದಕ್ಕೂ ಯೋನಿಗೂ ಮಧ್ಯ ದಲ್ಲಿ, ಎಡದ ಕಾಲಿನ ಹಿಮ್ಮಡಿಯಿಂದ ಒತ್ತಿಕೊಂಡು, ಬಲದ ಕಾಲನ್ನು ಎಡದ ತೊಡೆಯ ಮೇಲೆ ಹಾಕಿಕೊಂಡು, ಅಪಾನವನ್ನು ಮೇಲಕ್ಕೆ ಆಕುಂಚನೆಮಾಡಿದರೆ ಮೂಲಬಂಧ ವೆಂದು ತಿಳಿಸಿತಷ್ಟೆ! ಈ ವಿಧವಾದ ಮೂಲಬಂಧವು ಸಿದ್ಧಾಸನದಲ್ಲಿ ಕುಳಿತುಕೊಂಡು ಉಂಟಾಗುವ ಮೂಲಬಂಧದ ಸ್ವರೂಪವು. ಗುದಕ್ಕೂ ಯೋನಿಗೂ ಮಧ್ಯೆ, ಎಡದ ಹಿಮ್ಮಡಿ ಯನ್ನು ಇಡುವ ಕಾರ್ಯವಿಲ್ಲದೆ, ಮೂಲಬಂಧವುಂಟಾಗುವ ಮತ್ತು ಮೇಲಿನ ಶ್ರುತಿಯಲ್ಲಿ ಹೇಳಿರುವ, ತಾತ್ಪರ್ಯದ ಮೂಲಬಂಧವು ನಮ್ಮಲ್ಲಿ ಉಂಟಾಗಬೇಕಾದರೆ, ಪದ್ಮಾಸನದಲ್ಲಿ ಕುಳಿತುಕೊಂಡು, ಎದೆಯನ್ನು ಮುಂದಕ್ಕೆ ಚಾಚಿಕೊಂಡು, ಎರಡು ಹಸ್ತಗಳಿಂದಲೂ ಮೊಳಕಾಲಿನಲ್ಲಿ ಬಿಗಿಬರುವಂತೆ ಹಿಡಿದುಕೊಂಡು, ಅಪಾನವನ್ನು ಆಕುಂಚನೆಮಾಡಿದರೆ ಮೂಲಬಂಧದ ತತ್ವವು ಬರುವುದು. ಎರಡು ಆಸನಗಳಲ್ಲಿ ಮಾಡುವುದರ ಫಲವೂ ಒಂದೇ.

ಮೇಲೆ ವಿವರಿಸಿರುವ ಸಿದ್ಧ ಪದ್ಮಾಸನಗಳಲ್ಲಿ ಯಾವುದಾದರೂ ಒಂದು ಆಸನದಲ್ಲಿ ಮೂಲಬಂಧವು ಬರುವಂತೆ, ಅಧಿಕಾರಿಯು ಕುಳಿತುಕೊಂಡು " ಓಂ " ಎಂಬ ಶಬ್ದೋ ಚ್ಚಾರಣೆಯನ್ನು ಬೆಳೆಸಿಕೊಂಡು, ಶಿರಸ್ಸಿನವರೆಗೂ ತೆಗೆದುಕೊಂಡು ಹೋಗಬೇಕು. ಹೀಗೆ ಹೋಗುವ ಕಾಲದಲ್ಲಿ ನಾಸಿಕದಲ್ಲಿ ಶ್ವಾಸೋಚ್ಛ್ವಾಸವಿದ್ದರೆ ಮೆಲ್ಲಗೆ ಶಿರಸ್ಸಿಗೆ ಎಳೆದುಕೊಳ್ಳ ಬೇಕು. ಹೀಗೆ ಬೆಳೆಸಿದ " ಓಂ " ಕಾರೋಚ್ಚಾರಣೆಯನ್ನು ಶಿರಸ್ಸಿಗೆ ತೆಗೆದುಕೊಂಡು ಹೋದಮೇಲೆ, ಕತ್ತನ್ನು ಒಳಕ್ಕೆ ಚೆನ್ನಾಗಿ ಬಿಗಿಬರುವಂತೆ ಮಡಿಸಿಕೊಂಡು, ಗಡ್ಡವನ್ನು

ಎದೆಯ ಮೇಲ್ಭಾಗದಲ್ಲಿ (ಕತ್ತಿನ ಕೆಳಗಿನ ಸ್ಥಳದಲ್ಲಿ) ದೃಢವಾಗಿಟ್ಟುಕೊಂಡು, ಭ್ರೂಮಧ್ಯದಲ್ಲಿ ಆವಿರ್ಭೂತವಾಗುವ ತೇಜೋಬಿಂದುವನ್ನು ಧರಿಸಿಕೊಂಡು ಸಮಾಧಿಯ ಅಭ್ಯಾಸವನ್ನು ಮಾಡಬೇಕು. ವಾಯುಸಹಿತವಾದ "ಓಂ" ಕಾರ ಶಬ್ದವನ್ನು ಶಿರಸ್ಸಿನಲ್ಲಿ ಶೇಖರಿಸಿಕೊಂಡನಂತರ ನಡೆಯುವ ಕಾರ್ಯವಾದ ಕತ್ತನ್ನು ಬಿಗಿಬರುವಂತೆ ಚೆನ್ನಾಗಿ ಮಡಿಸಿ, ಗಡ್ಡವನ್ನು ಎದೆಯ ಮೇಲ್ಭಾಗದಲ್ಲಿ ಕತ್ತಿನ ಕೆಳಗೆ ಇಟ್ಟುಕೊಳ್ಳುವುದೇ ಜಾಲಂಧರಬಂಧವೆನಿಸಿಕೊಳ್ಳುವುದು. ಈ ವಿಧವಾಗಿ ಅನುಷ್ಠಾನಮಾಡುವುದೇ ಜಾಲಂಧರಬಂಧವೆಂಬದಾಗಿ ಶ್ರೀಶಂಕರಭಗವತ್ಪಾದರವರ ವಾಕ್ಯವಿರುವುದಲ್ಲದೆ, ಶ್ರುತಿಗಳಲ್ಲಿಯೂ,

ಜಾಲಂಧರಕೃತೇ ಬನ್ಧೇ ಕಣ್ಠಸಂಕೋಚಲಕ್ಷಣೇ ।
ನ ಪೀಯೂಷಂ ಪತತ್ಯಗ್ನೌ ನಚವಾಯುಃ ಪ್ರಕುಪ್ಯತಿ ॥

ತಾ|| ಕಂಠವನ್ನು ಸಂಕುಚಿತಮಾಡುವುದರಿಂದುಂಟಾಗುವ ಜಾಲಂಧರಬಂಧವನ್ನು ಅಭ್ಯಾಸಮಾಡುವುದರಿಂದ ಒಂದು ತೊಟ್ಟಾದರೂ ಅಮೃತವು ಜಠರಾಗ್ನಿಯಲ್ಲಿ ಬಿದ್ದು ಭಸ್ಮವಾಗುವುದಿಲ್ಲ. ಅಲ್ಲದೆ ಬುದ್ಧಿಮನಸ್ಸಿನ ವ್ಯಕ್ತಿಗಳೊಡಗೂಡಿದ ವಾಯುಗಳು ಬಹಿರ್ವ್ಯಾಪಾರಕ್ಕೆ ಕಾರಣವಾಗಿಯೂ, ಆಯಾಸವನ್ನುಂಟುಮಾಡುವುದಾಗಿಯೂ ಇರುವ ಸೂರ್ಯ ಚಂದ್ರರ ನಾಡಿಗಳೆಂದರೆ ಇಡಾ ಪಿಂಗಳ ನಾಡಿಗಳನ್ನು ಬಿಟ್ಟು, ಸುಷುಮ್ನೆಯಲ್ಲಿ ಶಾಂತತೆಯಿಂದ ಸ್ಥಿರಪಡುವುದು. ಎಂದು ಹೇಳಿದೆ.

ಮೇಲೆ ವಿವರಿಸಿರುವ ವಿಧಾನದಿಂದ ಜಾಲಂಧರಬಂಧವೆಂಬ ಮುದ್ರೆಯನ್ನು ಹಾಕಿಕೊಂಡನಂತರ, ಭ್ರೂಮಧ್ಯಪ್ರದೇಶದಲ್ಲಿ ಆವಿರ್ಭೂತವಾಗುವ ತೇಜೋಬಿಂದುವನ್ನು ಸೋಹಂಭಾವದಿಂದ ಧರಿಸಿಕೊಂಡು ಸಮಾಧಿಯ ಅಭ್ಯಾಸಮಾಡುತ್ತ ಬರಬೇಕು. ಹೀಗೆ ಜಾಲಂಧರಬಂಧವನ್ನು ಹಾಕಿಕೊಂಡು, ಬಿಂದುಧಾರಣೆಯನ್ನು ಮಾಡಿಕೊಂಡು, ಏಕಪ್ರಕಾರವಾಗಿ ಸಮಾಧಿಯಲ್ಲಿ ಕುಳಿತಿರಲು ಆದಿಯಲ್ಲಿ ಸಾಧ್ಯವಿಲ್ಲ. ಅವರವರ ಚೈತನ್ಯವಿದ್ದಷ್ಟುಕಾಲ ಸಮಾಧಿಯಲ್ಲಿ ಕುಳಿತಿದ್ದು ವಿಶ್ರಾಂತಿಗೋಸ್ಕರ ಬಹಿರ್ಮುಖವಾಗಿ ಪುನಃ "ಓಂ"ಕಾರಾನುಸಂಧಾನದಿಂದ ಮೂಲಬಂಧ ಜಾಲಂಧರಬಂಧಗಳನ್ನು ಮಾಡಿಕೊಂಡು ಪುನಃ ಸಮಾಧಿಯ ಅನುಷ್ಠಾನಕ್ಕೆ ಕುಳಿತುಕೊಳ್ಳಬೇಕು. ಹೀಗೆ ಪುನಃ ಪುನಃ ಬಹಿರ್ಮುಖವಾಗುವಿಕೆ ಮತ್ತು ಸಮಾಧಿಅಭ್ಯಾಸಮಾಡುವಿಕೆಯಲ್ಲಿರಬೇಕೇ ಹೊರತು ಏಕಪ್ರಕಾರವಾಗಿ ಪ್ರಥಮದಲ್ಲಿ ಸಮಾಧಿಯಲ್ಲಿ ಹೆಚ್ಚುಕಾಲ ಕೂಡಲು ಆಗುವುದೂ ಇಲ್ಲ. ಅಲ್ಲದೆ ಈ ಪ್ರಕಾರ ಸಾಮರ್ಥ್ಯವಿಲ್ಲದೆ ಹೆಚ್ಚುಕಾಲ ಅಭ್ಯಾಸಮಾಡಲೇ ಬಾರದು. ಅನುಷ್ಠಾನದ ಅಭ್ಯಾಸಬಲವು ವೃದ್ಧಿಹೊಂದಿದಂತೆ ಸಮಾಧಿಯ ಅನುಷ್ಠಾನದ ಕಾಲವೂ ಅಭಿವೃದ್ಧಿಯಾಗುತ್ತ ಬರುವುದು. ಅಲ್ಲದೆ ಪ್ರತಿದಿನವೂ ಪ್ರಾತಃ ಸಾಯಂಸಂಧ್ಯಾಕಾಲಗಳಲ್ಲಿ, ಯಾವ ಕಾಲದಲ್ಲಿಯಾದರೂ

ದಿನಕ್ಕೆ ಒಂದುವೇಳೆ ಮಾಡಬಹುದು. ಕೆಲವುಕಾಲ ಇದು ಸ್ವಾಮಿತಕ್ಕೆ ಬಂದನಂತರ, ದಿನಕ್ಕೆ ಎರಡು ವೇಳೆ ಅಭ್ಯಾಸಮಾಡಬಹುದು. ಕೊನೆಗೆ ರಾತ್ರಿಯಲ್ಲೊಂದಾವರ್ತಿಯೂ ಅಭ್ಯಾಸ ಮಾಡಬಹುದು. ಅವರವರ ಚೈತನ್ಯವನ್ನು ಅರಿತುಕೊಂಡು, ಸಮಾಧಿಯನ್ನು ಅಭ್ಯಾಸ ಮಾಡುತ್ತ ಬರಬೇಕು.

ಹೀಗೆ ಮೂಲಬಂಧ ಮತ್ತು ಜಾಲಂಧರಬಂಧಗಳೊಡನೆ ಸಮಾಧಿಯ ಅನುಷ್ಠಾನ ಮಾಡುವ ಕಾಲದಲ್ಲಿ ಪುನಃ ಪುನಃ ಬಹಿರ್ಮುಖವಾಗಿ, ಪುನಃ ಪುನಃ ಓಂಕಾರೋಪಾಸನೆ ಯಿಂದ ಸಮಾಧಿಯ ಅಭ್ಯಾಸಮಾಡುತ್ತೇವಷ್ಟೆ! ಹೀಗೆ ಮಾಡುವ ಕಾಲದಲ್ಲಿ ಬಿಂದುಧಾರಣೆ ಯನ್ನು ಬಿಟ್ಟು ಬಹಿರ್ಮುಖವಾಗುವಾಗ, ಪ್ರತಿಯೊಂದು ಸಲವೂ ಉಡ್ಯಾಣಬಂಧವನ್ನು ಅಭ್ಯಾಸಮಾಡಬೇಕು. ಅಂದರೆ, ಶ್ವಾಸೋಚ್ಛ್ವಾಸವನ್ನು ಭ್ರೂಮಧ್ಯದಲ್ಲಿ ತಡೆದುಕೊಂಡೇ ಸಮಾಧಿಯ ಅಭ್ಯಾಸಮಾಡುತ್ತಿರುತ್ತೇವೆ. ಕೇವಲ ಕುಂಭಕದಲ್ಲಿರುವ ಶ್ವಾಸೋಚ್ಛ್ವಾಸ ವನ್ನು ಬಿಡುತ್ತಾ ಬರುವುದೇ ಬಹಿರ್ಮುಖಕ್ಕೆ ಬರುವುದಾಗಿದೆ. ಹೀಗೆ ಕೇವಲ ಕುಂಭಕದಲ್ಲಿ ಇರುವ ಶ್ವಾಸೋಚ್ಛ್ವಾಸವನ್ನು ಹೊರಕ್ಕೆ ಬಿಡುವುದಕ್ಕೆ ಪ್ರಥಮದಲ್ಲಿ ಉಡ್ಯಾಣಮುದ್ರೆ ಯನ್ನು ಅಭ್ಯಾಸಮಾಡಬೇಕು. ಉಡ್ಯಾಣಬಂಧದ ಅಭ್ಯಾಸಕ್ರಮಕ್ಕೆ ಶ್ರುತಿಯಲ್ಲಿ,

ನಾಭೇರೂರ್ಧ್ವಮಧಶ್ಚಾಪಿ ತಾನಂಕುರ್ಯಾತ್ಪ್ರಯತ್ನತಃ |

ತಾ|| ನಾಭಿಯ ಮೇಲ್ಭಾಗ ಕೆಳಭಾಗಗಳನ್ನೆಂದರೆ, ಹೊಟ್ಟೆಯನ್ನು ಪ್ರಯತ್ನದಿಂದ ಚೆನ್ನಾಗಿ ಮೇಲಕ್ಕೆ ಆಕಳಿಸಿಕೊಳ್ಳುವಂತೆ ಮಾಡಿಕೊಳ್ಳಬೇಕು, ಎಂಬದಾಗಿ ಹೇಳಿರುತ್ತದೆ.

ಈ ವಿಧವಾಗಿ ಚೆನ್ನಾಗಿ ಮೇಲಕ್ಕೆ ಆಕಳಿಸಿಕೊಳ್ಳಬೇಕಾದರೆ, ಹಸ್ತಗಳಲ್ಲಿ ಮಂಡಿ ಯನ್ನು ಹಿಡಿದುಕೊಂಡು ಕುಳಿತಿದ್ದರೇನೆ ಈ ಬಂಧವನ್ನು ಮಾಡಲು ಬಿಗಿ ಚೆನ್ನಾಗಿ ಬರುವುದು. ಉಡ್ಯಾಣವೆಂದರೆ ಸೊಂಟವೆಂದೂ ಹೆಸರು. ಹೀಗೆ ಮೇಲಕ್ಕೆ ಆಕಳಿಸಿ ಕೊಳ್ಳುವ ಉಡ್ಯಾಣಮುದ್ರೆಯಿಂದ ಸೊಂಟವು ಸಿಂಹದ ಸೊಂಟದಂತೆ ಬಲವಾಗಿಯೂ ಸಣ್ಣಗೂ ಆಗುವುದು. ಭ್ರೂಮಧ್ಯದಲ್ಲಿ ಕೇವಲ ಕುಂಭಕದಲ್ಲಿರುವ ಶ್ವಾಸೋಚ್ಛ್ವಾಸ ವನ್ನು ಬಿಡುವುದಕ್ಕಿಂತ ಮುಂಚೆ, ಉಡ್ಯಾಣಬಂಧವನ್ನು ಮಾಡಲು ಕಾರಣವನ್ನೂ, ಇದರಿಂದ ಉಟಾಗುವ ಪ್ರಯೋಜನವನ್ನು ತಿಳಿದುಕೊಳ್ಳೋಣ.

ಬಂಧತ್ರಯದಲ್ಲಿ ಪ್ರಥಮದಲ್ಲಿ ಮೂಲಬಂಧವನ್ನು ಮಾಡಿಕೊಳ್ಳಬೇಕೆಂದು ತಿಳಿಸಿತಷ್ಟೆ! ಜಾಲಂಧರ ಉಡ್ಯಾಣಬಂಧಗಳೆರಡಕ್ಕೂ ಮೂಲಬಂಧವು ಮುಖ್ಯಸಹಾಯ ವಾಗಿರುವುದು. ಮೂಲಬಂಧದ ತತ್ವವೇ ಲಂಕೆಯನ್ನು ಮುತ್ತುವುದಾಗಿರುವುದಷ್ಟೆ! ರಾವಣನನ್ನು ನಿಗ್ರಹಿಸುವ ಪರ್ಯಂತರ ಶ್ರೀರಾಮನ ಸೇನೆಯು ಲಂಕಾಪಟ್ಟಣದ ಮುತ್ತಿಗೆಯನ್ನು ಹೇಗೆ ಬಿಡಲಿಲ್ಲವೋ ಹಾಗೆ ವಿಕ್ಷೇಪಶಕ್ತಿಯೆಂದರೆ ವಾಸನಾವೃತ್ತಿಯು

ಅಡಗುವಪರ್ಯಂತರ, ಮೂಲಬಂಧವನ್ನು ಬಿಡಬಾರದು. ಈ ಮೂಲಬಂಧದಿಂದ ಕುಂಡಲಿನೀಶಕ್ತಿಯು ಮೇಲ್ಮುಖವಾಗುವುದೆಂಬ ಅಂಶಕ್ಕೆ ಯೋಗಕುಂಡಲ್ಯುಪನಿಷತ್ತಿನಲ್ಲಿ ಹೇಳಿರುವಂತೆ,

ತೇನಕುಂಡಲಿನೀಸುಪ್ತಾ ಸಂತಪ್ತಾಸಂಪ್ರಬುಧ್ಯತೇ |
ದಂಡಾಹತಾಭುಜಂಗೀವ ನಿಶ್ವಸ್ಯಋಜುತಾಂವ್ರಜೇತ್ ||
ಬಿಲಂಪ್ರವಿಷ್ಟೇವತತೋ ಬ್ರಹ್ಮನಾಡ್ಯಂತರಂವ್ರಜೇತ್ |
ತಸ್ಮಾನ್ನಿತ್ಯಂ ಮೂಲಬಂಧಃ ಕರ್ತವ್ಯೋಯೋಗಿಭಿಸ್ಸದಾ ||

ತಾ|| ಮೂಲಬಂಧವನ್ನು ಮಾಡಿದರೆ ಮೂಲಾಧಾರದಲ್ಲಿರುವ ಅಗ್ನಿಪ್ರಜ್ವಲನೆಯಿಂದ ಸರ್ಪರೂಪದಲ್ಲಿರುವ ಕುಂಡಲಿನಿಯು ಕೋಲಿನಿಂದ ಹೊಡೆಯಲ್ಪಟ್ಟ ಸರ್ಪವು ಮೇಲಕ್ಕೇಳುವಂತೆ ನೇರಕ್ಕೆದ್ದು ಸುಷುಮ್ನೆಯೊಳಗೆ ಪ್ರವೇಶವಮಾಡುವುದು. ಆದುದರಿಂದ, ಸಮಾಧಿಯನ್ನು ಅಭ್ಯಾಸಮಾಡತಕ್ಕವರು ಪ್ರತಿನಿತ್ಯವೂ ಮೂಲಬಂಧವನ್ನು ಅಗತ್ಯವಾಗಿ ಅಭ್ಯಾಸಮಾಡಬೇಕು.

ಆದುದರಿಂದ ಮೂಲಬಂಧವು ಅವಿದ್ಯಾವೃತ್ತಿಗಳ ವೇಗವನ್ನು ತಡೆಯುವುದು. ಅಪಾನವಾಯುವು ಮೇಲ್ಮುಖವಾಗಿ ಬೀಸುವುದರಿಂದ ಮೂಲಾಧಾರದಲ್ಲಿರುವ ಅಗ್ನಿ ಪ್ರಜ್ವಲನೆಯನ್ನು ಅಧಿಕಮಾಡುವುದು, ಮತ್ತು ಕುಂಡಲಿನಿಯು ಋಜುವಾಗಿ ಸುಷುಮ್ನೆಯೊಳಗೆ ಪ್ರವೇಶಿಸಲು ಅನುಕೂಲಪಡಿಸುವುದು.

ಕುಂಡಲಿನೀಶಕ್ತಿಯು ಸುಷುಮ್ನೆಯೊಳಗೆ ಎಲ್ಲಿಯವರೆಗೆ ಪ್ರವೇಶಿಸಿರುತ್ತದೋ ಅಲ್ಲಿಯವರೆಗೆ ಮನಸ್ಸು ಮತ್ತು ವಾಯುಗಳೊಡಗೂಡಿದ ಬುದ್ಧಿವೃತ್ತಿಯು ಪ್ರವೇಶಿಸಿ, ಉಳಿದದ್ದು ಭ್ರೂಮಧ್ಯದಲ್ಲಿರುತ್ತೇವು "ಪ್ರತ್ಯಾಹೃತಃ ಕೇವಲ ಕುಂಭಕೇನ" ಎಂಬ ಶ್ರೀಶಂಕರ ಭಗವತ್ಪಾದರವರ ವಾಕ್ಯದೊಡನೆ ಹಿಂದೆ ಸೇತುಬಂಧನದ ತತ್ವದಲ್ಲಿ ವಿವರಿಸಿದೆ. "ಓಂ" ಕಾರೋಚ್ಚಾರಣೆಯ ಅನುಸಂಧಾನದಿಂದ ಮೂಲಾಧಾರದಿಂದಲೂ ದೇಹದ ಶಕ್ತಿಗಳು ಊರ್ಧ್ವಮುಖವಾಗಿ "ಓಂ"ಕಾರವರ್ಣೋಚ್ಚಾರಣೆಯೊಡನೆ ಇದ್ದುಕೊಂಡು ಜಾಲಂಧರ ಬಂಧದಿಂದ ದೇಹವು ಬಿಗಿಯುವೋಲಿರುವುದು. ಭ್ರೂಮಧ್ಯದಲ್ಲಿ ಕೇವಲ ಕುಂಭಕದಲ್ಲಿದ್ದ ಶ್ವಾಸೋಚ್ಛ್ವಾಸವನ್ನುಹೊರಕ್ಕೆ ಬಿಟ್ಟರೆ ದೇಹದ ಬಿಗಿಯು ತಪ್ಪಿ ನಮ್ಮ ಸ್ವಭಾವದಂತೆ ಆಗುವುದು. ಆದುದರಿಂದ, ಮೂಲ, ಜಾಲಂಧರ ಬಂಧಗಳಿಂದ ದೇಹಕ್ಕೆ ಉಂಟಾದ ಬಿಕ್ಕಟ್ಟು ತಪ್ಪುವುದರೊಳಗೆಂದರೆ ಶ್ವಾಸೋಚ್ಛ್ವಾಸವನ್ನೆಲ್ಲಾ ಹೊರಕ್ಕೆ ಬಿಡುವುದರೊಳಗೆ, ಉಡ್ಯಾಣ ಬಂಧವನ್ನು ಅಭ್ಯಾಸಮಾಡಬೇಕು. ಹೀಗೆ ಬಿಕ್ಕಟ್ಟು ತಪ್ಪುವುದರೊಳಗೆ ಉಡ್ಯಾಣಬಂಧವನ್ನು ಮಾಡಿದಲ್ಲಿ ಕುಂಡಲಿನಿಯು ಮೇಲ್ಮುಖವಾಗಿ ಸುಷುಮ್ನೆಯೊಳಗೆ ಕೊಂಚಕೊಂಚ

ವಾಗಿ ಹಾರಿಕೊಂಡು ಹೋಗುತ್ತಾ ಬರುವುದು. ಈ ಮೇಲಿನ ವಿಚಾರಗಳೇ ಬಂಧತ್ರಯು ಗಳ ಅಭ್ಯಾಸದ ಪ್ರಯೋಜನಗಳು.

ಈ ಬಂಧತ್ರಯುಗಳಲ್ಲಿ ಈ ಪ್ರಕರಣದ ತತ್ವವಾದ ಜಾಲಂಧರಬಂಧವೆಂಬ ಮುದ್ರೆಯ ವಿಚಾರವನ್ನು ಈ ಪ್ರಕರಣದ ರಾಮಾಯಣಕಥೆಯ ತತ್ವಕ್ಕೆ ಅನ್ವಯಮಾಡಿ ತಿಳಿದು ಕೊಳ್ಳೋಣ. ಜಾಂಬುವಂತನಿಂದ ಹನುಮಂತನು ಪ್ರೇರಿಸಲ್ಪಟ್ಟು ಔಷಧಿಗಳನ್ನು ತಂದ ನೆಂದರೆ—ಜಾಂಬುವಂತನೇ ಉದಾನವಾಯುತತ್ವದವನೆಂದು ಹಿಂದೆ ಕಿಷ್ಕಿಂಧಾ ಮತ್ತು ಸುಂದರಕಾಂಡಗಳಲ್ಲಿ ತಿಳಿಸಿದೆ. ಇಂಥ ಉದಾನವಾಯುಸ್ವರೂಪದ ಸ್ಥಳವಾದ ಕಂಠವನ್ನು ಸಂಕೋಚನೆಮಾಡುವುದೇ ಹನುಮಂತನು ಜಾಂಬುವಂತನಿಂದ ಪ್ರೇರಿಸಲ್ಪಟ್ಟ ತಾತ್ಪರ್ಯ ವಾಗಿರುವುದು. ಶ್ವಾಸೋಚ್ಛ್ವಾಸವು ಭ್ರೂಮಧ್ಯದಲ್ಲಿ ಕುಂಭಕದಿಂದ ಸಕಲ ವಾಯು ಗಳನ್ನೂ ಬುದ್ಧಿಮನಸ್ಸಿನ ವೃತ್ತಿಗಳನ್ನೂ ನಿಲ್ಲಿಸಿಕೊಂಡು, ಕಂಠಸಂಕೋಚನೆಮಾಡುವ ಕಾರ್ಯವೇ ಹನುಮಂತನು ದಿವ್ಯೌಷಧಿಗಳನ್ನು ತಂದು ಶ್ರೀರಾಮಲಕ್ಷ್ಮಣರಾದಿಯಾಗಿ ಸಕಲ ವಾನರಸೈನ್ಯವನ್ನೂ ಶಲ್ಯಭಾಧೆಯಿಂದ ತಪ್ಪಿಸಿ ಬದುಕಿಸಿದ ತತ್ವವಾಗಿರುವುದು. ಹನು ಮಂತನು ನಡೆಸಿದ ಕಾರ್ಯಗಳ ತತ್ವಕ್ಕೂ ಜಾಲಂಧರವೆಂಬ ಪದದ ಅರ್ಥಕ್ಕೂ ಹೋಲಿಕೆ ಯಾಗುವುದು. ಜಾಲಂಧರವೆಂದರೆ, ಸಮೂಹವನ್ನು ಧರಿಸಿಕೊಂಡು ಕಾಪಾಡುವುದೆಂದು ಅರ್ಥವಾಗುವುದು. ಹನುಮಂತನೊಬ್ಬನು ಸಕಲ ವಾನರಸೈನ್ಯವನ್ನೂ ಶ್ರೀರಾಮಲಕ್ಷ್ಮಣ ರನ್ನೂ ಕಾಪಾಡಿರುವನು. ಆದುದರಿಂದ ಜಾಲಂಧರವೆನ್ನುವುದಕ್ಕೂ ಹನುಮಂತನ ಕಾರ್ಯಕ್ಕೂ ಹೋಲಿಕೆಯಾಗಿರುವುದು.

ಆದಕಾರಣ ಮೋಕ್ಷಮಾರ್ಗಕ್ಕೆ ಹನುಮಂತನ ಕಾರ್ಯವು ಎಷ್ಟು ಸಹಾಯಕರವಾಗಿರು ತ್ತೆಂಬುದನ್ನು ಪ್ರತಿಯೊಬ್ಬರೂ ಯೋಚಿಸಿಕೊಳ್ಳಬಹುದು. ರಾವಣನ ಅಷ್ಟಘಂಟಾಶಕ್ತಿ ಯಿಂದ ಲಕ್ಷ್ಮಣನು ಮೂರ್ಛೆಹೊಂದಿದ ಕಾಲದಲ್ಲಿ ಹನುಮಂತನು ಪುನಃ ಈ ಔಷಧಿ ಗಳನ್ನೇ ತಂದು ಕಾಪಾಡಿರುವನು. ಅಂದರೆ, ಇಲ್ಲಿ ಬರೆದಿರುವ ಜಾಲಂಧರತತ್ವದಿಂದಲೇ ಅಷ್ಟಘಂಟಾಶಕ್ತಿಯ ತತ್ವವು ಪರಿಹಾರವಾಗುವುದರಿಂದ, ಇಲ್ಲಿ ಬರೆದಿರುವ ತತ್ವಗಳನ್ನೆಲ್ಲಾ, ಆ ಸಂದರ್ಭಕ್ಕೆ ಅನ್ವಯಮಾಡಿಕೊಳ್ಳಬೇಕು.

ಈ ಬಂಧತ್ರಯುಗಳೆಂಬ ಮುದ್ರೆಗಳೊಡನೆ "ಓಂ"ಕಾರೋಪಾಸನೆಯನ್ನು ಅನು ಷ್ಠಾನಮಾಡುವುದು ಕಷ್ಟವೆಂದೂ ಅಪಾಯವೆಂದೂ ತಿಳಿದುಕೊಳ್ಳಬಾರದು. ಅಪಾಯ ಕರವಾದ ಮಾರ್ಗಗಳಾಗಿದ್ದಲ್ಲಿ, ಶ್ರೀರಾಮಚಂದ್ರನ ಕಥೆಯ ಅಂತರಾರ್ಥದಲ್ಲಿ ಬರುತ್ತಿರಲಿಲ್ಲ. ಅನೇಕ ಶ್ರುತಿಗಳಲ್ಲಿಯೂ ಶ್ಲಾಘಿಸಲ್ಪಡುತ್ತಿರಲಿಲ್ಲ. ಅಲ್ಲದೆ, ಶ್ರೀಶಂಕರಭಗವತ್ಪಾದರವರೂ ಅನುಮೋದಿಸುತ್ತಿರಲಿಲ್ಲ. ಶ್ರೀಶಂಕರಭಗವತ್ಪಾದರವರು ಯಾವ ಅನುಷ್ಠಾನಗಳನ್ನು ಅನುಮೋದಿಸಿರುವರೋ, ಶ್ರೀಮದ್ರಾಮಾಯಣದ ಅಂತರಾರ್ಥದಲ್ಲಿಯೂ, ಅದೇ ವಿಧವಾದ

ಅನುಷ್ಠಾನಗಳ ತತ್ವವೇ ಬಂದಿರುವುದು. ನಾವು ವೈರಾಗ್ಯವನ್ನು ತೀವ್ರತಮವಾಗುವಂತೆ ಅಭಿವೃದ್ಧಿಪಡಿಸಿಕೊಂಡರೂ, ಸಮಾಧಿಯಲ್ಲಿ ಅವಿದ್ಯಾಶಕ್ತಿಗಳಿಂದ ಬಾಹ್ಯಕ್ಕೆಳೆಯುವ ಹೊಡೆತವನ್ನು ತಡೆದುಕೊಂಡು ಮುಂದಿನ ಸೋಪಾನಗಳನ್ನು ಹತ್ತುವುದು ಕಷ್ಟತಮವಾಗಿರುವುದು. ಈ ಕಷ್ಟಗಳನ್ನು ನಿವಾರಣೆಮಾಡಿಕೊಳ್ಳುವ ಉಪಾಯಗಳೇ, ಪ್ರಾಣಾಯಾಮ ಮತ್ತು ಮುದ್ರೆಸಹಿತವಾದ "ಓಂ"ಕಾರೋಪಾಸನೆಗಳಾಗಿವೆ. ತೀವ್ರತಮವಾದ ಮೋಕ್ಷಾಪೇಕ್ಷೆಯಿಂದಲೂ, ವೈರಾಗ್ಯದಿಂದಲೂ, ಧ್ಯಾನಕ್ಕೆ ಕುಳಿತುಕೊಂಡ ತಕ್ಷಣವೇ ಆತ್ಮಸಾಕ್ಷಾತ್ಕಾರವಾದ ನಿರ್ವಿಕಲ್ಪಸಮಾಧಿಯು ಎಂದಿಗೂ ಬರುವುದಿಲ್ಲ. ಮಾಯಾಬಲೆಯ ಹೆಣಿಕೆಯು ಸಾಧಾರಣವಾದುದೆಂದು ತಿಳಿದುಕೊಳ್ಳಬಾರದು. ನಮ್ಮೊಳಗಿರುವ ಮಾಯಾಬಲೆಯನ್ನು ಛೇದಿಸಬೇಕಾದರೆ, ಈಶ್ವರನಿಂದ ನಿಯಮಿಸಲ್ಪಟ್ಟಿರುವ ಕರ್ತವ್ಯಗಳನ್ನೇ ಮಾಡಿಕೊಂಡು ಹೋಗಬೇಕು. ಆದುದರಿಂದ, ಈ ಬಂಧತ್ರಯಗಳ ವಿಚಾರದಲ್ಲಿ ಈಶ್ವರನಿಂದ ಶ್ರುತಿವಾಕ್ಯಗಳ ಮೂಲಕ ನಿರೂಪಿಸಲ್ಪಟ್ಟಿರುವುದನ್ನೇ ಶ್ರೀಶಂಕರಭಗವತ್ಪಾದರವರು ಯೋಗತಾರಾವಳಿಯಲ್ಲಿ,

> ಜಾಲಂಧರೋಡ್ಯಾಣ ಸಮೂಲಬಂಧಾನ್ ।
> ಜಲ್ಪಂತಿಕಂಠೋದರ ಪಾಯುಮೂಲಾನ್ ।
> ಬಂಧತ್ರಯೇಽಸ್ಮಿ ನ್ಪರಿಚೀಯಮಾನೇ ।
> ಬಂಧಃಕುತೋ ದಾರುಣಕಾಲಪಾಶಾತ್ ॥

ತಾ॥ ಕಂಠ, ಉದರ, ಪಾಯುಸ್ಥಾನಗಳಲ್ಲಿ ಜಾಲಂಧರ, ಉಡ್ಯಾಣ, ಮೂಲಬಂಧಗಳ ಅಭ್ಯಾಸವು ಸ್ಥಿರಿಮಿತಕ್ಕೆ ಬರುತ್ತಿರಲು ಕ್ರೂರವಾದ ಯಮಪಾಶವೆಲ್ಲಿಯದು ? ಎಂದು ಹೇಳಿರುವರು. ಅಂದರೆ, ಯಮಪಾಶದಿಂದ ಬಿಡುಗಡೆಯಾಗುತ್ತೆಂಬ ತಾತ್ಪರ್ಯ.

ಜಾಲಂಧರ, ಉಡ್ಯಾಣ, ಮತ್ತು ಮೂಲಬಂಧಗಳನ್ನು ಅನುಷ್ಠಿಸುವ ವಿಧಾನಗಳನ್ನು, ಶ್ರುತಿಪ್ರಮಾಣಗಳನ್ನು ಅನುಸರಿಸಿ ಇದುವರೆಗೆ ವಿವರಿಸಿರುವುದಕ್ಕೂ ಸರ್ವಜ್ಞಮೂರ್ತಿಯಾದ ಶ್ರೀಶಂಕರಭಗವತ್ಪಾದರವರು ಹೇಳಿರುವುದಕ್ಕೂ ಭೇದವಿಲ್ಲ. ಈ ಬಂಧಗಳು ಎಷ್ಟರಮಟ್ಟಿಗೆ ಮೋಕ್ಷಾಧಿಕಾರಿಗಳಿಗೆ ಪ್ರಯೋಜನವುಳ್ಳವೆಂಬುದಕ್ಕೆ, ಈ ಬಂಧಗಳ ಅಭ್ಯಾಸದ ಪರಿಪಕ್ವಾವಸ್ಥೆಯನ್ನು ಹೊಂದಿದವನಿಗೆ ಮರಣಭಯವಿಲ್ಲವೆಂದು ಒಂದೇ ಮಾತಿನಲ್ಲಿ ಅದರ ಫಲವನ್ನು ಅಡಗಿಸಿರುವರು. ಆದರೆ, ಮೋಕ್ಷಾಧಿಕಾರಿಯು ಜೀವಂತನಾಗಿದ್ದಾಗಲೇ ಆತ್ಮಸಾಕ್ಷಾತ್ಕಾರವನ್ನು ಹೊಂದದೆ ಅನುಷ್ಠಾನದ ಪರಿಪಕ್ವಾವಸ್ಥೆಯ ಸೋಪಾನಕ್ಕೆ ಬಂದಿದ್ದರೆ, ಪ್ರಾಣೋತ್ಕ್ರಮಣಕಾಲದಲ್ಲಿ ಸಾಕ್ಷಾತ್ಕಾರವಾಗಿ, ಪುನರ್ಜನ್ಮವನ್ನು ಪಡೆಯುವುದಿಲ್ಲವೆಂಬುದನ್ನು ಸೂಚಿಸುವುದು. ಇದರ ವಿಚಾರವನ್ನು ಉತ್ತರಕಾಂಡದಲ್ಲಿ ವಿದೇಹಮುಕ್ತಿ ಪ್ರಕರಣದಲ್ಲಿ ತಕ್ಕ ಮಟ್ಟಿಗೆ ವಿವರಿಸಿರುವುದು.

ಈ ಮೇಲಿನ ಶ್ಲೋಕವಲ್ಲದೆ ಬಂಧತ್ರಯಗಳ ವಿಚಾರದಲ್ಲಿ ಶ್ರೀಶಂಕರಭಗವತ್ಪಾದರವರು ಇದೇ ಯೋಗತಾರಾವಳಿಯಲ್ಲಿ,

ಓಡ್ಯಾಣ ಜಾಲಂಧರ ಮೂಲಬಂಧೈ |
ರುನ್ನಿದ್ರಿತಾಯಾ ಮುರಗಾಂಗನಾಯಾಂ |
ಪ್ರತ್ಯಙ್ಮುಖತ್ವಾತ್ ಪ್ರವಿಶ್ಯ ಸುಷುಮ್ನಾಂ
ಗಮಾಗಮೌ ಮುಂಚತಿ ಗಂಧವಾಹಃ ||

ತಾ|| ಉಡ್ಯಾಣ, ಜಾಲಂಧರ, ಮೂಲಬಂಧಗಳಿಂದ ಕುಂಡಲಿನೀಶಕ್ತಿಯು, ನಿದ್ರೆಯಿಂದ ಎದ್ದು ಮೇಲ್ಮುಖವಾಗಿ ಹೋಗುತ್ತಿರಲಾಗಿ, ವಾಯುವು ಕೂಡ ಸುಷುಮ್ನಾನಾಡಿಯೊಳಗೆ ಪ್ರವೇಶಿಸಿ, ಚಾಂಚಲ್ಯರಹಿತವಾಗುವುದು, ಎಂದು ಹೇಳಿರುತ್ತಾರೆ.

ಈ ಶ್ಲೋಕದ ತತ್ವಾರ್ಥಗಳಿಗೂ ಹೊಂದಿಕೆಯಾಗಿರುವಂತೆ, ಬಂಧತ್ರಯಗಳಿಂದ ಕುಂಡಲಿನಿಯು ಮೇಲ್ಮುಖವಾಗಿ ಪ್ರವೇಶಿಸುವ ವಿಚಾರವೂ ವಿವರಿಸಲ್ಪಟ್ಟಿರುವುದು. ಈ ಬಂಧತ್ರಯಗಳೊಡಗೂಡಿದ " ಓಂ " ಕಾರೋಪಾಸನೆಯ ಅನುಷ್ಠಾನವನ್ನು ಎಲ್ಲಿಯವರೆಗೆ ಅನುಷ್ಠಿಸಬೇಕೆಂದರೆ, ಅಗಸ್ತ್ಯರು ಶ್ರೀರಾಮನಿಗೆ ಆದಿತ್ಯಹೃದಯವನ್ನು ಉಪದೇಶ ಮಾಡಿದ ತತ್ವದ ಸೋಪಾನದವರೆಗೆಂದರೆ, ತೇಜೋನಾದಧ್ಯಾನವಿದ್ಯೆಯ ಸೋಪಾನವನ್ನು ಹೊಂದುವ ಪರ್ಯಂತರ ಅನುಷ್ಠಿಸಬೇಕು. ಅಂದರೆ ಅನಾಹತಚಕ್ರ ಭೇದನೆಯಾದರೆ ತೇಜೋನಾದ ಧ್ಯಾನವಿದ್ಯೆಯ ಸೋಪಾನವನ್ನು ಅಧಿಕಾರಿಯು ಪಡೆಯುವನು. ಆಗ್ಯೆ, ಬಂಧತ್ರಯಗಳೊಡಗೂಡಿದ "ಓಂ" ಕಾರೋಪಾಸನೆಯು ಪರಿಪಕ್ವಾವಸ್ಥೆಗೆ ಬಂದಿತೆಂಬ ತಾತ್ಪರ್ಯ. ಇದೇ ಅರ್ಥಕ್ಕೆ, ಶ್ರೀಶಂಕರಭಗವತ್ಪಾದರವರು ಯೋಗತಾರಾವಳಿಯಲ್ಲಿ,

ಬಂಧತ್ರಯಾಭ್ಯಾಸ ವಿಪಾಕಜಾತಾಂ |
ವಿವರ್ಜಿತಾಂ ರೇಚಕ ಪೂರಕಾಭ್ಯಾಂ ||
ವಿಶೋಷಯಂತೀಂ ವಿಷಯಪ್ರವಾಹಂ |
ವಿದ್ಯಾಂ ಭಜೇ ಕೇವಲ ಕುಂಭರೂಪಾಂ ||
ಅನಾಹತೇ ಚೇತಸಿ ಸಾವಧಾನೈ |
ರಭ್ಯಾಸ ಶೂರೈ ರನುಭೂಯಮಾನಾ ||
ಸಂ ಸ್ತಂಭಿತ ಶ್ವಾಸಮನಃಪ್ರಚಾರಾ |
ಸಾ ಜೃಂಭತೇ ಕೇವಲ ಕುಂಭಕಶ್ರೀಃ ||

ತಾ|| ಬಂಧತ್ರಯಗಳ ಅಭ್ಯಾಸಗಳ ಪರಿಪಾಕದಿಂದುಂಟಾದ, ರೇಚಕ ಪೂರಕಗಳಿಂದ ಬಿಡಲ್ಪಟ್ಟ, ವಿಷಯಪ್ರವಾಹವನ್ನು ಅಡಗಿಸುವ, ಕೇವಲ ಕುಂಭಕರೂಪವಾದ ವಿದ್ಯೆಯನ್ನು ಪ್ರಾರ್ಥಿಸುತ್ತೇನೆ. ಅಭ್ಯಾಸಶೂರರಿಂದ ಅನುಭವಿಸಲ್ಪಡುವ, ಚೆನ್ನಾಗಿ ತಡೆಯಲ್ಪಟ್ಟ ಶ್ವಾಸ ಮತ್ತು ಮನಸ್ಸಿನ ವ್ಯಾಪಾರಗಳುಳ್ಳ, ಕೇವಲ ಕುಂಭಕವೆಂಬ ಸಂಪತ್ತು ಅನಾಹತಚಕ್ರದಲ್ಲಿ ವಿಜೃಂಭಿಸುವುದು. ಎಂದು ಹೇಳಿರುವರು.

ಮೇಲಿನ ಶ್ಲೋಕಗಳಲ್ಲಿ, ಪ್ರಾಣಾಯಾಮದಾರಭ್ಯ "ಓಂ"ಕಾರನಾದಾನುಸಂಧಾನ ಮಾಡುವವರೆಗಿನ ಸಕಲ ಅನುಷ್ಠಾನಗಳ ತತ್ವಗಳೂ ಅಡಗಿರುತ್ತವೆ. ಮೂಲಾಧಾರದಲ್ಲಿದ್ದ ಕುಂಡಲಿನೀಶಕ್ತಿಯು ಸುಷುಮ್ನೆಯೊಳಗೆ ಹೊರಟು ಅನಾಹತಚಕ್ರವಾದ ವಿಷ್ಣುಗ್ರಂಥಿಯನ್ನು ಭೇದಿಸಿದರೆ ಬಂಧತ್ರಯಗಳೊಡಗೂಡಿದ "ಓಂ" ಕಾರವರ್ಣೋಚ್ಚಾರಣೆಯ ಅನುಸಂಧಾನದ ಸೋಪಾನವು ಪರಿಪಕ್ವಾವಸ್ಥೆಗೆ ಬರುವುದೆಂಬ ತಾತ್ಪರ್ಯವಾಗಿರುವುದು. ಅಂದರೆ, ಅಗಸ್ತ್ಯರು ಆದಿತ್ಯಹೃದಯವನ್ನು ಉಪದೇಶಮಾಡಿದ ತತ್ವವೇ ಅನಾಹತಚಕ್ರ ಭೇದನೆಯ ತತ್ವವಾಗಿರುವುದು.

ರಾಮಾಯಣಕಥೆಯಲ್ಲಿ, ವೇದಾಂತಶ್ರವಣ, ಮನನ, ಸೋಪಾನದಿಂದಲೂ, ಕ್ರಮಾನುಷ್ಠಾನದ ಸೋಪಾನಗಳು ಬಂದಿರುವುವು. ಈ ಕ್ರಮಾನುಷ್ಠಾನದ ಸೋಪಾನಗಳಲ್ಲಿ ಸೇತುಬಂಧನದಾರಭ್ಯ ಆದಿತ್ಯಹೃದಯದ ಉಪದೇಶದವರೆಗಿನ ಕಥೆಯ ಅಂತರಾರ್ಥವು ಬಂಧತ್ರಯಗಳೊಡಗೂಡಿದ "ಓಂ"ಕಾರೋಚ್ಚಾರಣೆಯ ಅನುಷ್ಠಾನದ ಸೋಪಾನವಾಗಿರುವುದು. ಈ ಅನುಷ್ಠಾನದ ಸೋಪಾನದಿಂದಲೇ ಪ್ರಧಾನಪುರುಷನಾದ ರಾವಣನನ್ನು ಬಿಟ್ಟು, ಉಳಿದ ರಾಕ್ಷಸರ ತತ್ವವಾದ ಅವಿದ್ಯಾಶಕ್ತಿಗಳನ್ನೆಲ್ಲಾ ನಿಗ್ರಹಿಸಬೇಕಾಗಿರುವುದು.

## ೧೯ನೆಯ ಪ್ರಕರಣ.

| ಸುಗ್ರೀವನ ಆಜ್ಞೆಯಂತೆ ವಾನರರು ಲಂಕಾಪಟ್ಟಣವನ್ನು ದಹಿಸಿದುದು. |  | ಮೂಲಾಧಾರದ ಅಗ್ನಿಜ್ವಾಲೆಯು ಅತಿಶಯವಾಗುವ ವಿಚಾರ. |
|---|---|---|

ರಾ|| ಇಂದ್ರಜಿತ್ತಿನ ಬ್ರಹ್ಮಾಸ್ತ್ರದಿಂದ ರಾಮಲಕ್ಷ್ಮಣರಾದಿಯಾಗಿ ಸಕಲರೂ ಬಿಡುಗಡೆಹೊಂದಿದನಂತರ, ಲಂಕೆಯನ್ನು ಅಗ್ನಿಯಿಂದ ದಹಿಸುವಂತೆ ಸುಗ್ರೀವನು ವಾನರರಿಗೆ ಆಜ್ಞೆಮಾಡಿದನು.

**ತತ್ತ್ವ||** ಸುಂದರಕಾಂಡದಲ್ಲಿ, ಹನುಮಂತನು ಲಂಕಾದಹನ ಮಾಡಿದನೆಂದರೆ— ಮೂಲಾಧಾರದಲ್ಲಿರುವ ಅಗ್ನಿಯನ್ನು ಪ್ರಜ್ವಲನೆಮಾಡಿಸುವುದೆಂದು ತಿಳಿಸಿತಷ್ಟೆ! ಬಂಧ ತ್ರಯಗಳೊಡನೆ ಮಾಡುವ "ಓಂ"ಕಾರೋಪಾಸನೆಯಿಂದ ಮೂಲಾಧಾರದಲ್ಲಿರುವ ಅಗ್ನಿ ಜ್ವಾಲೆಯು ಅತಿಶಯವಾಗಿ ಊರ್ಧ್ವಮುಖವಾಗಿ ಪ್ರಸರಣೆಯಾಗುವ ತತ್ವವೇ ಯುದ್ಧ ಕಾಂಡದಲ್ಲಿ ಔಷಧಿಗಳಿಂದ ಸಕಲರೂ ಮೂರ್ಛೆತಿಳಿದನಂತರ, ಸುಗ್ರೀವನ ಅಪ್ಪಣೆಯಂತೆ ವಾನರರು ಲಂಕಾಪಟ್ಟಣವನ್ನು ಪುನಃ ದಹನಮಾಡಿದ ತತ್ತ್ವವಾಗಿರುವುದು.

ಬಂಧತ್ರಯದೊಡನೆ "ಓಂ"ಕಾರೋಪಾಸನೆಯ ಅನುಷ್ಠಾನದ ಅಭ್ಯಾಸಮಾಡುತ್ತ ಬಂದರೆ, ಮೂಲಾಧಾರದಲ್ಲಿರುವ ಅಗ್ನಿಜ್ವಾಲೆಯು ಹೃದಯಸ್ಥಾನದಲ್ಲಿರುವ ಅಗ್ನಿಯೊಡನೆ ಕಲೆಯುವುದು. ಹೀಗೆ ಮೂಲಾಧಾರದಲ್ಲಿರುವ ಅಗ್ನಿಜ್ವಾಲೆಯು ಹೃದಯದಲ್ಲಿರುವ ಅಗ್ನಿ ಯೊಡನೆ ಸೇರುವುದರಿಂದ, ದೇಹದೊಳಗೆ ಅಗ್ನಿಕಾಂತಿಯು ಅತ್ಯಂತ ಪ್ರಕಾಶವಾಗುವುದು. ಅಲ್ಲದೆ, ಈ ಅಗ್ನಿಜ್ವಾಲೆಯು ಅಧಿಕವಾಗುವುದರಿಂದ, ಹಿಂದಿನ ಪ್ರಕರಣದಲ್ಲಿ "ತೇನ ಕುಂಡಲಿನೀ ಸುಪ್ತಾ ಸಂತಪ್ತಾ" ಎಂಬ ಶ್ರುತಿವಾಕ್ಯದಲ್ಲಿ ಹೇಳಿರುವಂತೆ, ಕುಂಡಲಿನಿಯು ಸುಲಲಿತವಾಗಿ ಬ್ರಹ್ಮರಂಧ್ರದೊಳಗೆ ಊರ್ಧ್ವಮುಖವಾಗಿ ಹೋಗಲು ಅನುಕೂಲವಾಗುವುದು. ಮೂಲಾಧಾರದ ಅಗ್ನಿಜ್ವಾಲೆಯು ಹೃದಯದಲ್ಲಿರುವ ಅಗ್ನಿ ಯೊಡನೆ ಕಲೆಯುವ ತತ್ವವೇ ಅಪಾನವಾಯುವು ಪ್ರಾಣವಾಯುವಿನಲ್ಲಿ ಕಲೆಯುವು ದಾಗಿರುವುದು. ಈ ತತ್ವಾರ್ಥಕ್ಕೆ ಯೋಗಕುಂಡಲ್ಯುಪನಿಷತ್ತಿನಲ್ಲಿ,

> ಅಪಾನೇಚೋರ್ಧ್ವಗೇಯಾತೆ ಸಂಪ್ರಾಪ್ತೇವಹ್ನಿಮಂಡಲೇ |
> ತತೋನಲಶಿಖಾದೀರ್ಘಾ ವರ್ಧತೇವಾಯುನಾಹತಾ |
> ತತೋಯಾತೌ ವಹ್ನ್ಯಪಾನೌ ಪ್ರಾಣಮುಷ್ಣಸ್ವರೂಪಕಂ |
> ತೇನಾತ್ಯಂತಪ್ರದೀಪ್ತೇನ ಜ್ವಲನೋದೇಹಜಸ್ತಥಾ ||

**ತಾ||** ಅಪಾನವು, ಊರ್ಧ್ವಾಭಿಮುಖವಾಗಿ ಹೊರಡಲಾಗಿ. ಮೂಲಾಧಾರ ದಲ್ಲಿರುವ ವಹ್ನಿಮಂಡಲವನ್ನು ಹೊಂದುವುದು. ಈ ವಹ್ನಿಮಂಡಲದಿಂದ ಅತ್ಯಂತ ದೀರ್ಘ ವಾದ ಜ್ವಾಲೆಯು ವಾಯುವಿನಿಂದ ಎಬ್ಬಿಸಲ್ಪಟ್ಟು, ಮೇಲಕ್ಕೆ ಅಭಿವೃದ್ಧಿಯಾಗುವುದು. ಅಪಾನ ಮತ್ತು ವಹ್ನಿಜ್ವಾಲೆಗಳೆರಡೂ ಉಷ್ಣಸ್ವರೂಪವಾದ ಪ್ರಾಣವನ್ನು ಸೇರುವುವು. ಹೀಗಾಗುವುದರಿಂದ ಪ್ರಾಣವು ಅತ್ಯಂತ ಪ್ರದೀಪ್ತವಾಗುವುದು. ಇದರಿಂದ ದೇಹದಲ್ಲೆಲ್ಲಾ ಅಗ್ನಿಕಾಂತಿಯು ಅತ್ಯಂತ ಪ್ರಕಾಶವಾಗುವುದೆಂದು ಹೇಳಿರುವುದು.

ಚಿತ್ರಪಟದಲ್ಲಿ ತೋರಿಸಿರುವಂತೆ, ಬ್ರಹ್ಮವಿದ್ಯೋಪನಿಷತ್, ಯೋಗಚೂಡಾಮಣಿ ಮತ್ತು ಯೋಗಕುಂಡಲಿನ್ಯುಪನಿಷತ್ತುಗಳಲ್ಲಿ ಹೇಳಿರುವ "ಅಕಾರೇ ವಹ್ನಿರಿತ್ಯಾಹುಃ" ಎಂಬ

ವಾಕ್ಯವನ್ನು ಅನುಸರಿಸಿ, ಮೂಲಾಧಾರದಲ್ಲಿ ಅಗ್ನಿ ಇರುತ್ತಷ್ಟೆ! ಸುಂದರಕಾಂಡದ ತತ್ವವಾದ ಶಕ್ತಿಚಲನಪ್ರಾಣಾಯಾಮದಿಂದ, ಈ ಅಗ್ನಿಯು ತಕ್ಕಮಟ್ಟಿಗೆ ಪ್ರಜ್ವಲನೆಯಾಗಿರುತ್ತೆ. ಈ ಕಥೆಯ ಸಂದರ್ಭದಲ್ಲಿ, ಸುಗ್ರೀವನ ಆಜ್ಞೆಯಂತೆ ವಾನರರು ಲಂಕೆಯನ್ನು ದಹಿಸಿದರೆಂದರೆ—ಮೂಲಾಧಾರದ ಅಗ್ನಿಜ್ವಾಲೆಯು ಸುಗ್ರೀವನ ತತ್ವವಾದ ಹೃದಯದ ಪರ್ಯಂತರ ಬಂದು, ಹೃದಯದಲ್ಲಿರುವ ಅಗ್ನಿಯೊಡನೆ ಕಲೆಯಿತೆಂಬ ತತ್ವವಾಗಿರುವುದು.

**ರಾ||** ವಾನರರು ಬೆಂಕಿಯಿಂದ ಲಂಕಾಪಟ್ಟಣವನ್ನು ಸುಡುತ್ತಾ ಬಾಗಿಲನ್ನು ಅಡ್ಡಗಟ್ಟಿಕೊಂಡಿರಲು, ರಾವಣನು ಅತ್ಯಂತ ಕೋಪಾಟೋಪದಿಂದ "ಹಾ!" ಎಂದು ಅಬ್ಬರಿಸಿ ಕೂಗುತ್ತಿದ್ದನು. ಆಗ ಆತನ ಬಾಯಿಂದ ಹೊರಟ ಕೋಪದ ಕಿಡಿಗಳು ದಶದಿಕ್ಕುಗಳಿಗೂ ಹಾರುತ್ತಿದ್ದುವು.

**ತತ್ವ||** ಬಂಧತ್ರಯಗಳೊಡಗೂಡಿದ "ಓಂ"ಕಾರೋಪಾಸನೆಯ ಅನುಷ್ಠಾನದಿಂದ ಮೂಲಾಧಾರದಲ್ಲಿರುವ ಅಗ್ನಿಯು ಅಧಿಕವಾಗಿ ಪ್ರಜ್ವಲನೆಯಾಗುವುದು. ಇದರಿಂದ ರಾವಣನ ತತ್ವದಲ್ಲಿರುವ ವಾಸನಾವೃತ್ತಿ ಮತ್ತು ಇಂದ್ರಿಯಗಳಾಕರ್ಷಣಾಶಕ್ತಿಗಳಿಗೆ ಅತ್ಯಂತ ಉಲ್ಬಣವುಂಟಾಗುವ ತತ್ವವೇ ವಾನರರು ಬೆಂಕಿಯಿಂದ ಲಂಕಾಪಟ್ಟಣದ ಬಾಗಿಲನ್ನು ಅಡ್ಡಗಟ್ಟುವುದು, ಮತ್ತು ರಾವಣನ ಕೋಪಾಟೋಪದ ತತ್ವವಾಗಿರುವುದು. ಮುಖ್ಯತಾತ್ಪರ್ಯವೇನೆಂದರೆ, ಬಂಧತ್ರಯಗಳ ಅನುಷ್ಠಾನವು ಸ್ತಿಮಿತಕ್ಕೆ ಬಂದರೆ, ಅಗ್ನಿಪ್ರಜ್ವಲನೆಯುಂಟಾಗಿ ಅವಿದ್ಯಾಶಕ್ತಿಗಳನ್ನು ಕಟ್ಟಿಹಾಕಿದಂತಾಗುವುದು.

**ರಾ||** ವಾನರರಿಂದ ಲಂಕಾದಹನವು ನಡೆಯುತ್ತಿರುವಾಗ ಶ್ರೀರಾಮನು ತನ್ನ ಕೋದಂಡವನ್ನು ತೆಗೆದುಕೊಂಡು ಟಂಕಾರವಮಾಡುತ್ತಿರಲು, ಈ ಟಂಕಾರದ ಧ್ವನಿಯಿಂದ ಲಂಕಾಪಟ್ಟಣದಲ್ಲಿದ್ದ ರಾಕ್ಷಸರೆಲ್ಲರೂ ಕಂಗೆಡುತ್ತಿದ್ದರು. ಶ್ರೀರಾಮನ ಧನುಷ್ಟಂಕಾರ ಶಬ್ದದಿಂದಲೂ, ಕಪಿನಾಯಕರು ಆನಂದದಿಂದ ಬೊಬ್ಬೆಯಿಡುವ ಧ್ವನಿಯಿಂದಲೂ, ಪರಿಪೂರ್ಣವಾಗಿ ಪ್ರತಿಧ್ವನಿಯುಂಟಾಗುತ್ತಿತ್ತು. ಶ್ರೀರಾಮನು ಬಿಟ್ಟ ಬಾಣಗಳಿಂದ ಲಂಕಾಪಟ್ಟಣವು ಉರುಳಿಬೀಳುತ್ತಿತ್ತು.

**ತತ್ವ||** ಬಂಧತ್ರಯಗಳೊಡನೆ ಮಾಡುವ "ಓಂ"ಕಾರೋಪಾಸನೆಯಲ್ಲಿ ಶ್ರೀರಾಮನ ಕೋದಂಡದ ತತ್ವದಲ್ಲಿರುವ "ಓಂ"ಕಾರಸ್ವರೂಪದ ವರ್ಣೋಚ್ಚಾರಣೆಯನ್ನು ಮೂಲಾಧಾರದಿಂದ ಎಳೆಯುವುದರಿಂದ, ಮೂಲಾಧಾರಸ್ವರೂಪವಾದ ಬ್ರಹ್ಮಗ್ರಂಥಿಯ ಸ್ಥಳವು ಮತ್ತು ಬ್ರಹ್ಮಗ್ರಂಥಿಯ ಶಕ್ತಿಯು ಚೆನ್ನಾಗಿ ಭೇದನೆಯಾಗಿ ಶಿಥಿಲವಾಗುವುದೇ ಶ್ರೀರಾಮನ ಬಾಣದಿಂದ ಲಂಕಾಪಟ್ಟಣದ ಶಿಖರಗಳು ಉರುಳಿ, ರಾಕ್ಷಸರೆಲ್ಲಾ ಕಂಗೆಡುತ್ತಿರುವುದರ ತತ್ವವಾಗಿರುವುದು. ಅಲ್ಲದೆ, ಬಂಧತ್ರಯಗಳೊಡನೆ ಮಾಡುವ "ಓಂ"ಕಾರೋಪಾಸನೆಯ

ಎಳೆತದಿಂದ, ಕುಂಡಲಿನಿಯು ಸುಷುಮ್ನೆಯೊಳಗೆ ಮೂಲಾಧಾರ ಸ್ವಾಧಿಷ್ಠಾನಚಕ್ರಗಳನ್ನು ಭೇದಿಸಿಕೊಂಡು ಹೋಗುವ ಕಾಲದಲ್ಲಿ ಉಂಟಾಗುವ ಧ್ವನಿಯೇ ಶ್ರೀರಾಮನ ಧನುಷ್ಟಂಕಾರದ ಧ್ವನಿಯಾಗಿರುವುದು. ಅಂದರೆ "ಓಂ"ಕಾರವರ್ಣೋಚ್ಚಾರಣೆಯು ಹೋಗಿ "ಓಂ"ಕಾರನಾದೋತ್ಪತ್ತಿಯ ಅಂಕುರದ ಸೂಚನೆಯೇ ಶ್ರೀರಾಮನ ಧನುಷ್ಟಂಕಾರದಿಂದುಂಟಾಗುವ ಪ್ರತಿಧ್ವನಿಯು.

"ಬಿಂದುಪೀಠಂ ವಿನಿರ್ಭಿದ್ಯ ನಾದಲಿಂಗಮುಪಸ್ಥಿತಂ" ಎಂಬ ಶ್ರುತಿವಾಕ್ಯವನ್ನು ಹಿಂದಿನ ಪ್ರಕರಣಗಳಲ್ಲಿ ಬರೆದಿರುವುದಷ್ಟೆ! ಬಂಧತ್ರಯದೊಡನೆ ಮಾಡುವ "ಓಂ"ಕಾರೋಪಾಸನೆಯಿಂದ ಬಿಂದುವು ಸ್ತಿಮಿತಕ್ಕೆ ಬರುತ್ತಾ ಬರುತ್ತಾ "ಓಂ"ಕಾರನಾದೋತ್ಪತ್ತಿಯ ಅಂಕುರವೇ ಶ್ರೀರಾಮನ ಧನುಷ್ಟಂಕಾರದಿಂದುಂಟಾಗುವ ಪ್ರತಿಧ್ವನಿಯು. ಬಂಧತ್ರಯಗಳೊಡಗೂಡಿದ "ಓಂ"ಕಾರೋಪಾಸನೆಯು, ಸ್ತಿಮಿತಕ್ಕೆ ಬಂದಂತೆ ಅಗ್ನಿಯು ಅಧಿಕವಾಗಿ ಜ್ವಲಿಸುವುದರಿಂದ ಆನಂದಾವಿರ್ಭಾವದ ಉದಯವಾಗುವ ತತ್ವವೇ ವಾನರರು ಆನಂದದಿಂದ ಬೊಬ್ಬೆಯಿಡುತ್ತಿದ್ದುದು.

ಈ ಮೇಲಿನ ವಿಚಾರದ ತತ್ವಗಳೆಲ್ಲಾ ಅನುಷ್ಠಾನಮಾಡಿದವರಿಗೆ ಸ್ವಾನುಭವದಿಂದ ಇದರ ಮಹಿಮೆಯು ಗೊತ್ತಾಗುವುದು. ಅನುಷ್ಠಾನದ ದಾರಿಯಲ್ಲಿಲ್ಲದವರಿಗೆ ಬಂಧತ್ರಯಗಳೊಡಗೂಡಿದ "ಓಂ"ಕಾರೋಪಾಸನೆಯ ಮಹತ್ತನ್ನು ಗ್ರಹಣ ಮಾಡಿಕೊಳ್ಳುವುದೂ ಕೊಂಚ ಕಷ್ಟವಾಗುವುದು. ಈ ಮೇಲೆ ವಿವರಿಸುವ ಲಂಕಾದಹನ ರೂಪವಾದ ಯೋಗಾಗ್ನಿಯು ನಮ್ಮಲ್ಲುಂಟಾದರೆ, ಎಷ್ಟು ಹಿತವಾಗಿಯೂ ಆನಂದಕರವಾಗಿಯೂ ಇರುತ್ತೆಂಬುದನ್ನು ಬರೆಯಲು ಸಾಧ್ಯವಿಲ್ಲ. ಇಂತಹ ಯೋಗಾಗ್ನಿಯಿಂದಲೇ ಅವಿದ್ಯೆಯು ಹುರಿದ ಬೀಜದಂತಾಗುವುದು.

## ೨೦ನೆಯ ಪ್ರಕರಣ.

**ಕುಂಭಕರ್ಣನ ಮಕ್ಕಳಾದ ನಿಕುಂಭ, ಕುಂಭರು ಯುದ್ಧಕ್ಕೆ ಬಂದು ಹತರಾದುದು.**



**ತಮೋಗುಣದಲ್ಲಿನ ಮೋಹ, ಶೋಕಗಳ ಸ್ವರೂಪ ಮತ್ತು ಅವುಗಳ ನಿಗ್ರಹ.**

ರಾ|| ಕುಂಭಕರ್ಣನ ಮಕ್ಕಳಾದ ನಿಕುಂಭ, ಕುಂಭರು ಯುದ್ಧಕ್ಕೆ ಬಂದು ಹತರಾದರು.

**ತತ್ವ||** ನಿಕುಂಭ, ಕುಂಭರ ತತ್ವವೇನೆಂದರೆ—ಕುಂಭಕರ್ಣನ ತತ್ವದಲ್ಲಿರುವ ತಮೋಗುಣದ ಪ್ರಧಾನಶಕ್ತಿಯಲ್ಲಿಯೇ ತಮೋಗುಣದ ಸಕಲ ಸ್ವಭಾವಗಳಿದ್ದರೂ,

ಕಾರ್ಯಭೇದಗಳಿಗನುಸಾರವಾಗಿ ಪ್ರತ್ಯೇಕ ಪ್ರತ್ಯೇಕವಾದ ಸ್ವರೂಪಗಳನ್ನು ಧರಿಸುತ್ತವೆ. ಅಯೋಧ್ಯಾಕಾಂಡದಲ್ಲಿ ತಮಸಾನದಿಯ ಕಥೆಯ ತತ್ವದಾರಭ್ಯ ಇದುವರೆಗೂ ತಮೋಗುಣ ದಲ್ಲಿನ ಅನೇಕ ವಿಭಾಗಗಳ ತತ್ವಗಳನ್ನು ತಿಳಿಸಿರುತ್ತದೆ. ಖರ, ದೂಷಣ, ತ್ರಿಶಿರ, ಮಾರೀಚ, ವಿದ್ಯುಜ್ಜಿಹ್ವ, ಮುಂತಾದವರೆಲ್ಲರೂ ತಮೋಗುಣದ ಕಾರ್ಯಭೇದಗಳ ತತ್ವಕ್ಕೆ ಸೇರಿದವರಾಗಿರುವರು. ತಮೋಗುಣದ ಪ್ರಧಾನಶಕ್ತಿಯ ತತ್ವದಲ್ಲಿರುವ ಕುಂಭಕರ್ಣನ ಮಕ್ಕಳಾದ ನಿಕುಂಭ, ಕುಂಭರು, ಮೋಹ ಮತ್ತು ಶೋಕದ ತತ್ವದಲ್ಲಿರುವರು. ನಿಕುಂಭ, ಕುಂಭರೆಂದರೆ ಮೋಹ ಮತ್ತು ಶೋಕಗಳು. ಮೋಹವೆಲ್ಲಿರುವುದೋ ಅಲ್ಲಿ ಶೋಕವೂ ಇರುವುದು. ಎಲ್ಲಿ ಶೋಕವಿರುವುದೋ ಅಲ್ಲಿಯೇ ಮೋಹವೂ ಇರುವುದು. ಆದುದರಿಂದ ನಿಕುಂಭ ಕುಂಭರು ಏಕೋದರರಾಗಿರುವರು. ಮೋಹವು ದೇಹದಲ್ಲಿಯೂ, ಪುತ್ರಮಿತ್ರ ಕಳತ್ರಾದಿಗಳಲ್ಲಿಯೂ ವ್ಯಾಪಿಸಿ ಅವುಗಳ ಲೋಲುಪ್ತಿಯಲ್ಲಿಯೇ ಇರುವುದು.

ಮೇಲೆ ವಿವರಿಸಿರುವಂತೆ ದೇಹ, ಪುತ್ರ ಮಿತ್ರ ಕಳತ್ರಾದಿಗಳಲ್ಲಿ ಮೋಹವಂಕುರಿಸ ಬೇಕಾದರೆ ಅಹಂಕಾರ ಅಥವಾ ಅಭಿಮಾನವೇ ಮೂಲಕಾರಣ. ಈ ಅಹಂಕಾರವು ರಜೋ ಗುಣದೊಡನೆ ಕಲೆತರೆ ರಾಜಸಾಹಂಕಾರವೆನಿಸುವುದು. ತಮೋಗುಣದೊಡನೆ ಕಲೆತರೆ ತಾಮಸಾಹಂಕಾರವೆನಿಸುವುದು. ನಮಗೆ ಜನ್ಮಜನ್ಮಾಂತರಗಳಿಂದ ಅಭಿಮಾನವು ತಮೋಗುಣದ ಮೋಹದೊಡನೆ ಕಲೆತು ವ್ಯಾಪಾರಮಾಡುತ್ತಿರುವುದು. ಈ ಮೋಹವು ವ್ಯಾಪಿಸಿರುವುದರಿಂದ ಜೊತೆಯಲ್ಲಿಯೇ ಶೋಕವೂ ಇರುವುದು. ಪ್ರಬಲವಾದ ಮೋಹವೇ ಹೃದಯಗ್ರಂಥಿ ಎನಿಸಿಕೊಳ್ಳುವುದು. ಹೃದಯಗ್ರಂಥಿರೂಪವಾದ ಮೋಹವು ಜನ್ಮ ಜನ್ಮಾಂತರಗಳಿಂದಲೂ ಅನುಸರಿಸಿಕೊಂಡು ಬಂದಿರುವುದು. ಇದೇ ತಾತ್ಪರ್ಯಕ್ಕೆ ಮಹಾನಾರಾಯಣೋಪನಿಷತ್ತಿನಲ್ಲಿ,

> ಕುತ್ಸಿತಾನಂತ ಜನ್ಮಜನ್ಮಾಭ್ಯಸ್ತಾ ತ್ಯಂತೋತ್ಕೃಷ್ಟ
> ವಿವಿಧ ವಿಚಿತ್ರಾ ನಂತ ದುಷ್ಕರ್ಮವಾಸನಾ ಜಾಲ
> ವಿಶೇಷೈ ರ್ದೇಹಾತ್ಮ ವಿವೇಕೋನಜಾಯತೆ
> ತಸ್ಮಾದೇವ ದೃಢತರ ದೇಹಾತ್ಮಭ್ರಮೋಭವತಿ
> ಅಹಮಜ್ಞಃ ಕಿಂಚಿದಜ್ಞೋಹ ಮಹಂಜೀವೋಹ
> ಮತ್ಯಂತದುಃಖಾಕಾರೋಹ ಮನಾದಿಸಂಸಾರೀತಿ
> ಭ್ರಮವಾಸನಾಬಲಾ ತ್ಸಂಸಾರಏವ ಪ್ರವೃತ್ತಿಃ

ತಾ|| ಹೇಯವಾದ ಅನಂತ ಜನ್ಮಜನ್ಮಾಂತರಗಳಿಂದ ಅಭ್ಯಸ್ತವಾದ ಅತಿಶಯ ವಾಗಿಯೂ ಬಗೆಬಗೆಯಾಗಿಯೂ, ವಿಚಿತ್ರವಾಗಿಯೂ, ಇರುವ ಅನಂತ ದುಷ್ಕರ್ಮಗಳ

ವಾಸನಾಜಾಲ ವಿಶೇಷಗಳಿಂದ ದೇಹವೇ ಬೇರೆ, ಆತ್ಮನೇ ಬೇರೆ, ಎಂಬ ವಿವೇಕಹುಟ್ಟು ವುದಿಲ್ಲ. ಈ ಕಾರಣದಿಂದ ದೇಹವೇ ನಾನೆಂಬ ದೃಢತರವಾದ ಮೋಹವುಂಟಾಗುವುದು. ಈ ಮೋಹವ್ಯಾಪ್ತಿಯಾದಾಗ, ನಾನು ಅಜ್ಞನೆಂದೂ, ಅಲ್ಪಜ್ಞನೆಂದೂ, ಜೀವನೆಂದೂ ಅತ್ಯಂತ ದುಃಖಿಯೆಂದೂ ಮತ್ತು ಅನಾದಿಸಂಸಾರಿಯೆಂದೂ ತಿಳಿದುಕೊಳ್ಳುತ್ತಾ, ಈ ಮೋಹದ ವಾಸನಾಬಲದಿಂದಲೇ ಸಂಸಾರದಲ್ಲಿ ಪ್ರವೃತ್ತನಾಗುತ್ತಿರುವನೆಂದು ಹೇಳಿದೆ.

ಆದುದರಿಂದ ಈ ಹೃದಯಗ್ರಂಥಿರೂಪವಾದ ಮೋಹವಿರುವಪರ್ಯಂತರ ಮೋಕ್ಷಕ್ಕೆ ಅಧಿಕಾರವಿಲ್ಲ. ಇದೇ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿಯಲ್ಲಿ,

ದೇಹೇಂದ್ರಿಯಾ ದಾವಸತಿ ಭ್ರಮೋದಿತಾಂ ।
ವಿದ್ವಾನಹಸ್ತಾಂ ನಜಹಾತಿ ಯಾವತ್ ॥
ತಾವನ್ನತಸ್ಯಾಸ್ತಿ ವಿಮುಕ್ತಿವಾರ್ತಾ ।
ಪ್ಯಸ್ತ್ವೇಷವೇದಾಂತ ನಯಾಂತದರ್ಶೀ ॥

ತಾ॥ ವಿದ್ವಾಂಸನಾದವನು ಅಸದ್ರೂಪವಾದ ದೇಹೇಂದ್ರಿಯಾದಿಗಳಲ್ಲಿ ಭ್ರಾಂತಿಯಿಂದ ಉಂಟಾದ ನಾನು ಎಂಬ ಮೋಹವನ್ನು ಬಿಡುವಪರ್ಯಂತರ, ಅವನು ಎಂತಹ ವೇದಾಂತ ಶಾಸ್ತ್ರಪಾರಂಗತನಾದಾಗ್ಯೂ ಮುಕ್ತಿವಿಚಾರವು ದೊರೆಯುವುದಿಲ್ಲ. ಎಂದು ಹೇಳಿರುವರು.

ಆದುದರಿಂದ ಈ ಮೋಹವೇ ಬಂಧಕಸ್ವರೂಪವಾದುದು. ಜ್ಞಾನಿಗಳು ಪ್ರಪಂಚದ ನಡೆವಳಿಕೆಯಲ್ಲಿರುತ್ತಾರೆ. ಅಜ್ಞಾನಿಗಳೂ ಪ್ರಪಂಚದ ನಡೆವಳಿಕೆಯಲ್ಲಿರುತ್ತಾರೆ. ಇವರಿಬ್ಬರಿಗೂ ಭೇದವೇನಿರುವುದೆಂದರೆ, ಅಜ್ಞಾನಿಗೆ ಈ ಮೋಹರೂಪವಾದ ಗ್ರಂಥಿಯು ಇರುವುದು. ಜ್ಞಾನಿಯು ಈ ಮೋಹಗ್ರಂಥಿಗೆ ಒಳಗಾಗಿಲ್ಲವೆಂದರೆ, ಈ ದೇಹ ನಾನಲ್ಲವೆಂದು ಜ್ಞಾನಿಯು ತಿಳಿದುಕೊಂಡು, ಅದರಲ್ಲಿ ಮೋಹಪಡುವುದಿಲ್ಲ. ಇದೇ ತಾತ್ಪರ್ಯಕ್ಕೆ ಶ್ರೀವಿದ್ಯಾರಣ್ಯರವರೂ ಪಂಚದಶಿಯಲ್ಲಿ ಹೇಳಿರುವಂತೆ,

ನೈವಂ ಜಾನಂತಿ ಮೂಢಾಶ್ಚೇತ್ಸೋಯಂ ಗ್ರಂಥಿ ರ್ನಚಾಪರಃ ।
ಗ್ರಂಥಿ ತದ್ಭೇದಮಾತ್ರೇಣ ವೈಷಮ್ಯಂ ಮೂಢಬುದ್ಧಯೋಃ ॥

ತಾ॥ ಪರಮಾತ್ಮನು ಅಸಂಗನೆಂದೂ ಅಂತಹ ಪರಮಾತ್ಮನೇ ನಾನೆಂದೂ ಮೂಢರು ತಿಳಿಯುವುದಿಲ್ಲವೆನ್ನುವುದು ಹೃದಯಗ್ರಂಥಿಯೇ ಹೊರತು ಮತ್ತೊಂದಲ್ಲ. ಜ್ಞಾನಿಗೂ ಅಜ್ಞಾನಿಗೂ ಭೇದವೇನೆಂದರೆ, ಹೃದಯಗ್ರಂಥಿಯ ಭಾವ ಮತ್ತು ಅಭಾವದ ಭೇದವೇ ಹೊರತು ಮತ್ತೊಂದಿಲ್ಲ.

ತನ್ನ ದೇಹದಲ್ಲಿ ಹೇಗೆ ಮೋಹಪಡುತ್ತಾನೋ ಮತ್ತು ಅದಕ್ಕೆ ಅಪಾಯಸಂಭವಿಸಿದರೆ ಹೇಗೆ ದುಃಖಪಡುವನೋ ಹಾಗೆ ಪುತ್ರ ಮಿತ್ರ ಕಳತ್ರಾದಿಗಳಲ್ಲಿಯೂ ಈ ಮೋಹವನ್ನು ವ್ಯಾಪ್ತಿಮಾಡಿಕೊಂಡು, ಅದರಿಂದ ಬಂಧಿಸಲ್ಪಟ್ಟಿರುವನು. ಆದುದರಿಂದ "ನಿತರಾಂ ಕುಂಭಃ ನಿಕುಂಭಃ" ಎಂಬ ವ್ಯುತ್ಪತ್ತಿಯನ್ನು ಅನುಸರಿಸಿ ತುಂಬಿ ತುಳುಕುತ್ತಿರುವ ನಿಕುಂಭನ ತತ್ವದಲ್ಲಿರುವ ಈ ತಮೋಗುಣದ ಮೋಹಪಾಶದಿಂದ ಮನುಷ್ಯನು ಬಂಧಿಸಲ್ಪಟ್ಟಿರುವನು. ತನ್ನ ದೇಹ ಮತ್ತು ಬಂಧುಗಳಲ್ಲಿ ಮೋಹಪಾಶಬದ್ಧನಾಗಿದ್ದ ಅರ್ಜುನನನ್ನು ಕುರಿತು ಶ್ರೀಕೃಷ್ಣಪರಮಾತ್ಮನು ಮೋಹಪಡಬಾರದೆಂಬ ತತ್ವಕ್ಕೆ,

ದೇಹಿನೋಽಸ್ಮಿನ್ ಯಥಾದೇಹೇ ಕೌಮಾರಂ ಯೌವ್ವನಂ ಜರಾ |
ತಥಾದೇಹಾಂತರ ಪ್ರಾಪ್ತಿ ರ್ಧೀರಸ್ತತ್ರನಮುಹ್ಯತಿ ||

ತಾ|| ಈ ದೇಹಕ್ಕೆ ಕೌಮಾರ, ಯೌವನ, ವಾರ್ಧಿಕ್ಯಗಳೆಂಬ ಅವಸ್ಥೆಗಳು ಬರುವಂತೆ ಜೀವನಿಗೆ ಮತ್ತೊಂದು ದೇಹವೂ ಬರುವುದರಿಂದ, ವಿವೇಕಿಯಾದವನು ಈ ದೇಹದ ವಿಷಯದಲ್ಲಿ ಮೋಹಪಡುವುದಿಲ್ಲ ಎಂದು ಹೇಳಿರುವನು.

ಆದುದರಿಂದ "ಭಿದ್ಯತೇ ಹೃದಯ ಗ್ರಂಥಿಃ ಛಿದ್ಯಂತೇ ಸರ್ವ ಸಂಶಯಾಃ" ಎಂಬ ಪ್ರಮಾಣಕ್ಕನುಸಾರವಾಗಿ ಈ ಮೋಹಪಾಶದಿಂದ ಬಿಡುಗಡೆಯಾಗಬೇಕು. ಈ ಹೃದಯ ಗ್ರಂಥಿಸ್ವರೂಪವಾದ ಮೋಹವನ್ನು ತೊಲಗಿಸಿಕೊಳ್ಳಬೇಕಾದರೆ, ಜೀವಂತನಾಗಿರುವಾಗಲೇ ಸಾಯುವುದನ್ನು ಅಭ್ಯಾಸಮಾಡಬೇಕು. ಈ ರೀತಿ ಹೇಳಿದರೆ ಕೆಲವರಿಗೆ ಚೋದ್ಯವಾಗಿ ಕಾಣಬಹುದು. ಇದರಲ್ಲಿ ಉತ್ತಮವಾದ ತತ್ವವಿರುವುದು. ಏನೆಂದರೆ, ದೇಹವೇ ನಾನಲ್ಲವೆಂಬ ಮತ್ತು ದೇಹಕ್ಕಿಂತ ಅತೀತವಾಗಿರುವ ಪರಮಾತ್ಮ ಸ್ವರೂಪವೇ ತನ್ನ ನಿಶ್ಚಯವಾದ ಸ್ವರೂಪವೆಂಬ ಭಾವನೆಯ ಅಭ್ಯಾಸಮಾಡಬೇಕೆಂಬ ತತ್ವವಾಗಿರುವುದು. ಇದೇ ತಾತ್ಪರ್ಯಕ್ಕೆ ಕುಂಡಿನ್ಯೋಪನಿಷತ್ತಿನಲ್ಲಿಯೂ ಶ್ರೀಶಂಕರಭಗವತ್ಪಾದರವರ ವಿವೇಕಚೂಡಾಮಣಿಯಲ್ಲಿಯೂ,

ಜಲೇವಾಪಿ ಸ್ಥಲೇವಾಪಿ ಲುಠತ್ವೇಷ ಜಡಾತ್ಮಕಃ |
ನಾಹಂ ವಿಲಿಪ್ಯೇ ತದ್ಧರ್ಮೈರ್ಘಟಧರ್ಮೈರ್ನಭೋಯಥಾ ||

ತಾ|| ಜಡಸ್ವಭಾವವಾದ ದೇಹವು ನೀರಿನಲ್ಲಾದರೂ, ನೆಲದಲ್ಲಾದರೂ, ಉರುಳಲಿ. ಘಟಧರ್ಮವು ಆಕಾಶವನ್ನು ಅಂಟದಿರುವಂತೆ ಈ ಶರೀರಧರ್ಮಗಳು ನನ್ನನ್ನು ಅಂಟಲಾರವು ಎಂದು ಹೇಳಲ್ಪಟ್ಟಿರುವುದು. ಮತ್ತು ಇದೇ ತಾತ್ಪರ್ಯಕ್ಕೆ ಅಧ್ಯಾತ್ಮೋಪನಿಷತ್ತಿನಲ್ಲಿ.

ಮಾತಾಪಿತ್ರೋ ರ್ಮಲೋದ್ಭೂತಂ ಮಲಮಾಂಸಮಯಂ ವಪುಃ |
ತ್ಯಕ್ತ್ವಾ ಚಂಡಾಲವದ್ದೂರಂ ಬ್ರಹ್ಮೀಭೂಯ ಕೃತೀಭವ ||

ತಾ|| ಮಾತಾಪಿತೃಗಳ ಮಲದಿಂದ ಜನಿಸಿದ ಮಲಮಾಂಸಮಯವಾದ ಶರೀರವನ್ನು ಚಂಡಾಲನಂತೆ ದೂರವಾಗಿ ಬಿಟ್ಟು ಪರಬ್ರಹ್ಮಸ್ವರೂಪನಾಗಿ ಕೃತಾರ್ಥನಾಗು. ಎಂದು ಹೇಳಿರುವುದು.

ಮೇಲಿನ ತತ್ವಾರ್ಥಗಳೇ, ಜೀವಂತನಾಗಿರುವಾಗ ಸಾಯುವ ಭಾವನೆಯನ್ನು ಹೊಂದುವುದರ ತಾತ್ಪರ್ಯವಾಗಿರುವುದು. ಈ ದೃಢಭಾವನೆಯು ತತ್ವದಲ್ಲಿರುವುದರಿಂದಲೇ ಭರತನು ನಿರಭಿಮಾನದಿಂದ ಇರುವುದು, ಮತ್ತು ನಿಕುಂಭನು ಪ್ರಾಣವಾಯುಚೈತನ್ಯದ ತತ್ವದವನಾದ ಸುಗ್ರೀವನಿಂದ ಹತನಾಗಿರುವುದು. ಸಮಾಧಿಯ ಅಭ್ಯಾಸಮಾಡದೆ ಇರ ತಕ್ಕವರು ಕೂಡ ಈ ಭಾವನೆಯನ್ನು ಅಭ್ಯಾಸಮಾಡಿಕೊಂಡು ದೃಢೀಕರಿಸಿಕೊಂಡರೆ, ಪ್ರಾಣೋತ್ಕ್ರಮಣಕಾಲದಲ್ಲಿ ಪರಮಾತ್ಮಭಾವನೆಯಲ್ಲಿ ಪ್ರಾಣಬಿಡಲು ಅನುಕೂಲಿಸಿ ಮುಂದಕ್ಕೆ ಉತ್ತಮ ಜನ್ಮವು ಬರುವುದು.

ಗೋದಾನ ಮಾಡುವರಷ್ಟೆ! ಗೋದಾನ ಮಾಡುವುದು ಸರ್ವಶ್ರೇಷ್ಠವಾದುದು. ಅಧ್ಯಾತ್ಮಪರವಾಗಿಯೂ ಇದರ ತತ್ವವನ್ನು ಅನ್ವಯಮಾಡಬಹುದು. ಗೋ ಎಂದರೆ ಪ್ರಪಂಚ ಅಥವಾ ನಮ್ಮ ದೇಹ. " ಗವಾಮಂಗೇಷು ತಿಷ್ಠಂತಿ ಭುವನಾನಿ ಚತುರ್ದಶ " ಎಂಬಂತೆ ನಮ್ಮ ದೇಹದಲ್ಲಿ ಕೂಡ ಹದಿನಾಲ್ಕು ಲೋಕಗಳ ತತ್ವವಿರುವುದು. ಇಂತಹ ನಮ್ಮ ದೇಹವನ್ನು ದಾನಮಾಡಲೇಬೇಕು. ದಾನವೆಂದರೆ ಸ್ವತ್ವತ್ಯಾಗ. ಯಾವಾಗ ದೇಹ ವನ್ನು ದಾನಮಾಡುತ್ತೇವೋ ಅದು ನಮ್ಮ ಸ್ವತ್ತಲ್ಲ. ಅಂದರೆ ದೇಹ ನಾನಲ್ಲವೆಂದೂ ಪರ ಮಾತ್ಮನೇ ನಾನೆಂದೂ ಭಾವನೆಮಾಡುತ್ತಿರಬೇಕು. ಗೋದಾನದಲ್ಲಿಯೂ ಉತ್ಕ್ರಾಂತಿ ಗೋದಾನ ಮಾಡುವುದು ಪರಮಶ್ರೇಷ್ಠ. ಅಂದರೆ, ಪ್ರಾಣೋತ್ಕ್ರಮಣಕಾಲದಲ್ಲಿ ದೇಹದ ಮೇಲಿನ ಆಶೆಯನ್ನು ಬಿಟ್ಟು ಸ್ವಯಂಪ್ರಕಾಶನಾದ ಸಾಕ್ಷಾತ್ಪರಮಾತ್ಮನೇ ನಾನೆಂದು ಅವ ನನ್ನು ಸ್ಮರಣೆಮಾಡುತ್ತಾ ಪ್ರಾಣಬಿಟ್ಟರೆ, ಆ ಪರಮಾತ್ಮನನ್ನೇ ಹೊಂದುವೆವು. ಇದೇ ತಾತ್ಪರ್ಯಕ್ಕೆ ಭಗವದ್ಗೀತೆಯಲ್ಲಿ " ಯಂ ಯಂ ವಾಪಿ ಸ್ಮರನ್ನಿತ್ಯಂ " ಎಂಬ ಶ್ರೀಕೃಷ್ಣ ಪರಮಾತ್ಮನ ವಾಕ್ಯವೂ ಇರುವುದು.

ಆದುದರಿಂದ ದೇಹದ ಮೇಲಿನ ಮೋಹವನ್ನು ತ್ಯಜಿಸುತ್ತಾ ಬರಬೇಕು. ಈ ತಮೋಗುಣದ ಮೋಹವು ಪ್ರಬಲವಾದುದೆಂದು ಸೂಚಿಸುವ ತತ್ವಾರ್ಥಕ್ಕೆ ನಿಕುಂಭನು ರಾವಣನ ಮಂತ್ರಾಲೋಚನೆಯ ಸಭೆಯಲ್ಲಿ ಶ್ರೀರಾಮಾದಿಗಳನ್ನು ನಿಗ್ರಹಿಸಲು ತನ್ನ ಶಕ್ತಿಯೊಂದೇ ಸಾಕಾಗಿರುವುದೆಂದು ಹೊಗಳಿ ರಾವಣನನ್ನು ಯುದ್ಧೋನ್ಮುಖನ ನ್ನಾಗಿಯೇ ಪ್ರೇರಿಸುತ್ತಿದ್ದನು. ಯಾವಾಗ ಮೋಹವಿರುವುದೋ ಆಗ ಜೊತೆಯಲ್ಲಿ ಶೋಕವೂ ಇರುವುದೆಂದು ತಿಳಿಸಬೇಕಾಗಿಯೇ ಇಲ್ಲ. ನಿಕುಂಭನ ತತ್ವವಾದ ಮೋಹವು ಹೇಗೆ

ನಮ್ಮಲ್ಲಿ ತುಂಬಿತುಳುಕುತ್ತಿರುವುದೋ ಹಾಗೆ ಕುಂಭನ ತತ್ವವಾದ ಶೋಕವು ಕೂಡ ನಮ್ಮಲ್ಲಿ ಪೂರ್ಣವಾಗಿಯೇ ಇರುವುದು. ಇದೇ ಅರ್ಥಕ್ಕೆ ಗರ್ಭೋಪನಿಷತ್ತಿನಲ್ಲಿ,

ದುಃಖಬೀಜ ಮಿದಂಜನ್ಮ ದುಃಖರೂಪಂಚ ದುಸ್ಸಹಂ ||
ನಿವೃತ್ತಿ ಧರ್ಮೋ ನೋಪಾತ್ತೋ ನಯೋಗಜ್ಞಾನಸಾಧನಂ ||

ತಾ|| ಈ ಜನ್ಮವು ದುಃಖಬೀಜವಾಗಿಯೂ, ದುಃಖರೂಪವಾಗಿಯೂ, ಸಹಿಸಲಸಾಧ್ಯವಾಗಿಯೂ ಇರುವುದು. ಈ ದುಃಖಪರಂಪರೆಯಿಂದ ಜನ್ಮಪ್ರಾಪ್ತಿನಿವಾರಕವಾದ ಮೋಕ್ಷಧರ್ಮವನ್ನು ಪಡೆಯಲಿಲ್ಲ. ಯೋಗ ಮತ್ತು ಜ್ಞಾನಸಾಧನೆಯಲ್ಲಿ ಪ್ರವರ್ತಿಸಲಿಲ್ಲ. ಎಂದು ಹೇಳಿರುವುದು.

ಈ ಮೋಹಶೋಕಗಳನ್ನು ತ್ಯಜಿಸದಿದ್ದರೆ, ಸಮಾಧಿಯ ಅನುಷ್ಠಾನಕ್ಕೆ ಅಧಿಕಾರವೇ ಬರುವುದಿಲ್ಲ. ಕಾರಣವೇನೆಂದರೆ:—ಸಮುದ್ರದ ಆಳವು ಗೊತ್ತಿಲ್ಲದಿದ್ದರೂ ಸಮುದ್ರದಲ್ಲಿ ಧೈರ್ಯವಂತನು ಮುಳುಗಿ ಮುತ್ತನ್ನು ತರುವನು. ಮುಳುಗುವುದಕ್ಕೆ ಅಭ್ಯಾಸವಿದ್ದರೂ ಮಧ್ಯದಲ್ಲಿಯೇ ಅಧೈರ್ಯಪಟ್ಟವನಿಗೆ ಮುಳುಗಿದುದೂ ತಪ್ಪಲಿಲ್ಲ, ಮುತ್ತೂ ದೊರೆಯಲಿಲ್ಲ. ಆದುದರಿಂದ, ಮೋಹ ಶೋಕಗಳನ್ನು ತ್ಯಜಿಸುವುದೆಂದರೆ—ದೇಹಾತ್ಮಬುದ್ಧಿಯನ್ನು ತ್ಯಜಿಸಿ ಧೈರ್ಯವಾಗಿ ಸಮಾಧಿಯಲ್ಲಿ ಮುಳುಗುತ್ತಾ ಬಂದರೆ, ಮೋಕ್ಷಸಾಮ್ರಾಜ್ಯವನ್ನು ಹೊಂದುವನು.

ಮೋಹದುಃಖಗಳನ್ನು ತ್ಯಜಿಸಬೇಕಾದರೆ, ಅಹಂಕಾರವೆಂದರೆ ಅಭಿಮಾನವು ತಮೋಗುಣದೊಡನೆ ಕಳೆಯುವಂತೆ ಮಾಡಿಕೊಳ್ಳಬೇಕು. ಅಲ್ಲದೆ ಅಭಿಮಾನವು ಭರತನ ತತ್ವದಂತೆ ನಿರಭಿಮಾನದಿಂದ ವ್ಯಾಪಾರಕ್ಕೆ ಅಂಟದೆ ನಿಸ್ಸಂಗತೆಯಿಂದ ದೇಹವ್ಯಾಪಾರ ಮಾಡುತ್ತಿರಬೇಕು. ಹೀಗೆ ಭರತನ ತತ್ವವಾದ ಅಭಿಮಾನವು ನಿರಭಿಮಾನದಿಂದ ಇರುವುದರಿಂದಲೂ, ಶ್ರೀರಾಮನ ತತ್ವವಾದ ಬುದ್ಧಿಯು ಜ್ಞಾನಶಕ್ತಿಯು ಬಿಂದುಸಹಿತವಾದ "ಓಂ" ಕಾರೋಪಾಸನೆಯಲ್ಲಿ ಬಿಂದುವೇ ತಾನೆಂದು ಸಮಾಧಿಯು ಅಭ್ಯಾಸಮಾಡುತ್ತಿರುವುದರಿಂದಲೂ, ನಿಕುಂಭ ಕುಂಭರ ತತ್ವದಲ್ಲಿರುವ ಶಕ್ತಿಗಳು ಸಮಾಧಿಯ ಅಭ್ಯಾಸಕಾಲದಲ್ಲಿ ಪ್ರಾಣವಾಯು ಮತ್ತು ಶ್ವಾಸೋಚ್ಛ್ವಾಸಗಳಿಂದ ನಿಗ್ರಹವಾಗುತ್ತವೆ. ಮೇಲಿನ ತತ್ವಾರ್ಥಗಳೇ ಕುಂಭ ನಿಕುಂಭರ ನಿಗ್ರಹದ ತತ್ವವಾಗಿರುವುದು.



(೬೦)

## ೨೧ನೆಯ ಪ್ರಕರಣ.

**ಮಕರಾಕ್ಷನು ಯುದ್ಧಕ್ಕೆ ಬಂದು ಹತನಾದುದು.** | **ತಮೋಗುಣದ ಜಾಡ್ಯ ಅಥವಾ ಮಾಂದ್ಯಶಕ್ತಿಯ ನಿಗ್ರಹ.**

**ರಾ||** ಖರನ ಮಗ ಮಕರಾಕ್ಷನು ರಾವಣನಿಂದ ಪ್ರೇರಿತನಾಗಿ ಯುದ್ಧಕ್ಕೆ ಬಂದನು. ಇವನು ಬರುವ ರಭಸಕ್ಕೆ ವಾನರರು ಹೆದರಿಕೊಂಡು ಚದರಿಹೋದರು. ಈ ಮಕರಾಕ್ಷನು ವಾನರಸೈನ್ಯದಲ್ಲಿ ನುಗ್ಗಿ ನೇರವಾಗಿ ಶ್ರೀರಾಮನ ಸಂಗಡಲೇ ಯುದ್ಧಮಾಡಲು ಬಂದು ಹತನಾದನು.

**ತತ್ವ||** ಹಿಂದೆ ಅರಣ್ಯಕಾಂಡದಲ್ಲಿ ಖರನ ವಧೆಯ ತತ್ವದಲ್ಲಿ, ಖರನನ್ನು ಜನನ ವಾದ ಶಿಶುವಿನಲ್ಲಿ ಚಲನಶಕ್ತಿಯುಂಟಾಗುವುದಕ್ಕೆ ಮುಂಚೆ ಇದ್ದ ತಮೋಗುಣದ ಜಡದ ತತ್ವಕ್ಕೆ ಹೋಲಿಸಿರುವುದಷ್ಟೆ! ಇವನ ಮಗನಾದ ಮಕರಾಕ್ಷನು ಕೂಡ ತಮೋಗುಣದ ಜಡರು, ಮಾಂದ್ಯಸ್ವಭಾವಗಳ ತತ್ವದವನಾಗಿರುವನು. ಮಕರವೆಂದರೆ "ಮಕರ ಇವ ಗ್ರಹೀತು ಮಶಕ್ಯತ್ವಾತ್ ಮಕರಃ" ಮೊಸಳೆಯಂತೆ ಗ್ರಹಿಸಲಶಕ್ಯವಾದುದೆಂದರ್ಥ. ಗ್ರಹಿಸಲಶಕ್ಯವಾದ ಸ್ವಭಾವವುಳ್ಳ ಮೊಸಳೆಯಂತೆ ತಮೋಗುಣದ ಜಡರು ಅಥವಾ ಮಾಂದ್ಯವು ಮನುಷ್ಯನಲ್ಲಿ ವ್ಯಾಪ್ತವಾದರೆ ಗ್ರಹಿಸಲಶಕ್ಯವಾಗುವುದು. ಸ್ಥೂಲದೇಹದಲ್ಲಿ ಯಲ್ಲಾದರೂ ಈ ಜಡರುವ್ಯಾಪ್ತವಾದರೆ, ಬುದ್ಧಿಯ ಜ್ಞಾನವಾಹಿನಿಯು ಪ್ರಸರಿಸಲಾರದೆ ಕುಂಠಿತವಾಗುವುದು. ಜ್ಞಾನವಾಹಿನಿಯು ಪ್ರಸರಣೆಯೇ ಇಲ್ಲದಿರುವಾಗ ಕ್ರಿಯಾ ವಾಹಿನಿಯ ಪ್ರಸರಣೆಯೂ ಇಲ್ಲದೆ, ಜಡ್ಡುಕಟ್ಟಿದಂತೆ ಜಡವಾದದ್ದಾಗುವುದು. ಇವುದುಂಟಾದರೆ ಶ್ರೋತ್ರೇಂದ್ರಿಯದಲ್ಲಿ ಈ ಜಡತ್ವವು ಅಧಿಕವಾಗಿ ಜ್ಞಾನಕ್ರಿಯಾ ಶಕ್ತಿಗಳು ಕುಂಠಿತವಾಗಿ ಪ್ರಸರಣೆಗೆ ಅವಕಾಶವಿಲ್ಲದಂತಾಗುವುದು. ಆಗ್ಯೆ ಈ ತಮೋ ಗುಣದ ಜಡರನ್ನು ನಿಗ್ರಹಿಸಲು ಅಶಕ್ಯವಾಗಿರುವುದರಿಂದ, ಇಂತಹ ಜಡತ್ವವೇ ಮಕರಾಕ್ಷನೆಂಬ ತತ್ವವು.

ಇಂತಹ ಮಕರಾಕ್ಷನ ತತ್ವವು ಸೂಕ್ಷ್ಮದೇಹವಾದ ಅಂತಃಕರಣಕ್ಕೆ ವ್ಯಾಪ್ತವಾದವ ನಿಗೆ ಎಷ್ಟು ವಿಧವಾಗಿ ತಿಳಿಯಹೇಳಿದರೂ ತಿಳಿದುಕೊಳ್ಳಲು ಯೋಗ್ಯತೆ ಬರುವುದಿಲ್ಲ. ಆಗ ಅಂತಃಕರಣದಲ್ಲಿರುವ ಮಾಂದ್ಯವನ್ನು ನಿಗ್ರಹಿಸುವುದು ಕಷ್ಟವಾಗುವುದೇ ಮಕರಾ ಕ್ಷನ ತತ್ವ. ಮಕರಾಕ್ಷನು ನೇರವಾಗಿ ಬಂದು ರಾಮನೊಡನೆ ಯುದ್ಧಕ್ಕೆ ನಿಂತನೆಂದರೆ—ಈ ಮಾಂದ್ಯವು ವ್ಯಾಪಿಸಿದರೆ ಬುದ್ಧಿವೃತ್ತಿಯೇ ಕುಂಠಿತವಾಗುವುದು. ಸ್ಥೂಲ, ಸೂಕ್ಷ್ಮ ದೇಹಗಳೆರಡರಲ್ಲಿಯೂ ಈ ತಮೋಗುಣದ ಜಡರು ವ್ಯಾಪಿಸುವುದನ್ನು ಮೇಲೆ ವಿವರಿಸಿರು

ತ್ರಪ್ಟೆ! ಈ ತತ್ವಕ್ಕೆ ಅನುಸಾರವಾಗಿ ಶ್ರೀವಿದ್ಯಾರಣ್ಯರವರು ಪಂಚದಶಿ ಚಿತ್ರದೀಪಿಕೆ ೧೨೫ನೆಯ ಶ್ಲೋಕದಲ್ಲಿ,

ಅಚಿದಾತ್ಮ ಘಟಾದೀನಾಂ ಯತ್ಸ್ವರೂಪಂ ಜಡಂಹಿ ತತ್ |
ಯತ್ರ ಕುಂಠೀಭವೇದ್ಬುದ್ಧಿ ಸ್ಸ ಮೋಹ ಇತಿ ಲೌಕಿಕಾಃ||

ತಾ|| ಅಚೇತನಗಳಾದ ಘಟಾದಿಗಳ ಮೂಕರೂಪವಾದ ಸ್ವರೂಪವೇ ಜಡಶಬ್ದಾರ್ಥವಾಗಿರುವುದು. ಮತ್ತು ಯಾವ ವಿಷಯದಲ್ಲಿ ಬುದ್ಧಿಯು ಕುಂಠಿತವಾಗುವುದೋ ಅದು ಮಾಂದ್ಯಸ್ವರೂಪವೆನಿಸಿಕೊಳ್ಳುವುದು. ಎಂದು ಹೇಳಿರುವರು.

ಈ ಮೇಲಿನ ತತ್ವಗಳು ಬಹಿರ್ವ್ಯಾಪಾರದಲ್ಲುಂಟಾಗುವುವು. ಸಮಾಧಿಯ ಅಭ್ಯಾಸದಲ್ಲಿ ಮಕರಾಕ್ಷನ ತತ್ವಕ್ಕೆ ಅಧಿಕಾರಿಯು ಸಿಕ್ಕಿದರೆ, ಬುದ್ಧಿವೃತ್ತಿಯು ಧ್ಯೇಯಸ್ವರೂಪವಾದ ಬಿಂದುವಿನಾಕಾರವನ್ನು ಧರಿಸಿಕೊಳ್ಳಲಾರದೆ, ಕುಂಠಿತವಾಗುವುದು. ಸ್ಥೂಲ ಸೂಕ್ಷ್ಮದೇಹಗಳಲ್ಲಿ ಮಕರಾಕ್ಷನ ತತ್ವವಾದ ಜಡರು ವ್ಯಾಪ್ತವಾದರೆ, ಬುದ್ಧಿಯ ಜ್ಞಾನ ಶಕ್ತಿಯು ಇದರೊಡನೆ ಹೋರಾಡಿ ಜಡರನ್ನು ಹೋಗಲಾಡಿಸಿಕೊಳ್ಳುವುದೂ ಉಂಟು. ಇದರಂತೆ ಶ್ರೀರಾಮನ ತತ್ವದಲ್ಲಿರುವ ಬುದ್ಧಿವೃತ್ತಿಯು ಸಮಾಧಿಯಲ್ಲಿ ಹೋರಾಡಿ ಬಿಂದು ಧಾರಣೆಯನ್ನು ಬಿಡದೆ ಇರುವುದರಿಂದಲೂ, ಕುಂಭಕರ್ಣನ ವಧೆಯು ತತ್ವವಾದ ಅಂತಃ ಸೂರ್ಯನ ಉದಯದಿಂದ ಒಳಗೆ ಪ್ರಕಾಶವಧಿಕವಾಗಿರುವುದರಿಂದಲೂ, ಇಂತಹ ಮಾಂದ್ಯವು ನಿವಾರಣೆಯಾಗುವ ತತ್ವವೇ ಶ್ರೀರಾಮನು ಮಕರಾಕ್ಷನನ್ನು ನಿಗ್ರಹಿಸಿದ್ದಾಗಿರುವುದು.

## ೨೨ನೆಯ ಪ್ರಕರಣ.

**ಇಂದ್ರಜಿತ್ತಿನ ಮಾಯಾಸ್ವರೂಪವಾದ ಮೂರನೆಯ ಯುದ್ಧ. ಮಾಯಾಸೀತೆಯ ಶಿರಚ್ಛೇದನ.**

**ನಾಸ್ತಿಕ್ಯವಾದಕ್ಕೂ ನಾಸ್ತಿಕತೆಗೂ ಭೋಗಶಕ್ತಿಯೇ ಮೂಲಕಾರಣವೆಂಬ ವಿಚಾರ.**

ರಾ|| ಇಂದ್ರಜಿತ್ತು ಪುನಃ ಯುದ್ಧಕ್ಕೆ ಬಂದು ಅಗೋಚರನಾಗಿ ರಾಮಲಕ್ಷ್ಮಣರನ್ನು ಅತ್ಯಧಿಕವಾಗಿ ಪೀಡಿಸುತ್ತಿದ್ದನು. ಶ್ರೀರಾಮನು ಇಂದ್ರಜಿತ್ತಿನ ಹಾವಳಿಯನ್ನು ತಡೆಯಲಾರದೆ, ಆಗ್ನೇಯಾಸ್ತ್ರದಿಂದ ಸುಡಬೇಕೆಂದು ಪ್ರಯತ್ನಮಾಡುತ್ತಿದ್ದುದನ್ನು ಇಂದ್ರಜಿತ್ತು ನೋಡಿ, ಮಾಯಾಸೀತೆಯನ್ನು ಮಾಡಿಕೊಂಡು ಬಂದು ವಾನರರ ಮುಂದೆ ವಧಿಸಿದನು. ಈ ಸಮಾಚಾರವನ್ನು ಕೇಳಿ ರಾಮನು ಅತ್ಯಂತ ಚಿಂತೆಯಲ್ಲಿ ಮುಳುಗಿರಲು ವಿಭೀಷಣನು ಅದು ಇಂದ್ರಜಿತ್ತಿನ ಮಾಯಾಕಾರ್ಯವೆಂದು ತಿಳಿಸಿ, ಶ್ರೀರಾಮನನ್ನು ಸಮಾಧಾನಪಡಿಸಿದನು.

**ತತ್ವ||** ಇಂದ್ರಜಿತ್ತು ಮಾಯಾಸೀತೆಯನ್ನು ಮಾಡಿಕೊಂಡು ಬಂದು ಶಿರಚ್ಛೇದನ ಮಾಡಿದನೆಂದರೆ—ಸೀತಾದೇವಿಯು ಶುದ್ಧಸತ್ವಪ್ರಧಾನಮಾಯಾತತ್ವದವಳೆಂದು ಪ್ರಥಮದಿಂದಲೂ ತಿಳಿಸಿಕೊಂಡು ಬಂದಿರುವುದಷ್ಟೆ! ಶುದ್ಧಸತ್ವಪ್ರಧಾನಮಾಯೆ ಅಥವಾ ಶುದ್ಧ ಸತ್ವಗುಣವನ್ನು ವಧೆಮಾಡುವುದೆಂದರೆ, ಈಶ್ವರ ಪರಮಾತ್ಮರೇ ಇಲ್ಲವೆಂಬ ನಾಸ್ತಿಕತೆಯನ್ನುಂಟುಮಾಡುವ ತತ್ವವಾಗಿರುವುದು. ಮನುಷ್ಯರಲ್ಲಿ ಭೋಗಶಕ್ತಿಯ ಪಾಶದಿಂದ ನಾಸ್ತಿಕ್ಯದ ಭ್ರಮೆಯುಂಟಾಗುವ ತತ್ವವೇ ಇಂದ್ರಜಿತ್ತು ಮಾಯಾಸೀತೆಯ ಶಿರಚ್ಛೇದನ ಮಾಡಿದುದಾಗಿರುವುದು.

ಹೇಗೆಂದರೆ:—ಪ್ರಬಲವಾದ ಭೋಗಶಕ್ತಿಯಿಂದ ಬಂಧಿಸಲ್ಪಟ್ಟ ಕಾಲದಲ್ಲಿ ಜನಗಳು ಇಂದ್ರಿಯಗಳ ಭೋಗರೂಪವಾದ ಪ್ರಪಂಚವ್ಯಾಪಾರದಲ್ಲಿ ಮಗ್ನರಾಗಿರುವರೇ ಹೊರತು ಪರಮಾತ್ಮ ಮತ್ತು ಈಶ್ವರ ಸ್ಮರಣೆಗೂ ಅವಕಾಶವಾಗುವುದಿಲ್ಲ. ಕಾರಣವೇನೆಂದರೆ—ಮೋಕ್ಷಮಾರ್ಗವು ಶುದ್ಧ ಪೂರ್ವವಾದರೆ ಪ್ರಬಲವಾದ ಭೋಗಶಕ್ತಿಯ ವ್ಯಾಪಾರವು ಪಶ್ಚಿಮವಾದುದು. ಅಂದರೆ, ಮನುಷ್ಯನ ದೇಹದ ಹಿಂಭಾಗ ಮುಂಭಾಗಗಳಂತೆ ಆತ್ಮ ಮತ್ತು ಈಶ್ವರತ್ವಕ್ಕೂ ಪ್ರಬಲವಾದ ಭೋಗವಿಷಯಗಳ ವ್ಯಾಪಾರಕ್ಕೂ ಶುದ್ಧ ವಿಲಕ್ಷಣ ಸ್ವಭಾವವೆಂದು ತಿಳಿದುಕೊಳ್ಳಬೇಕು. ಇದರಂತೆ ಪ್ರಬಲವಾದ ಭೋಗಪಾಶವು ಬಂಧಿಸಿ ಎಳೆದುಕೊಂಡು ಹೋಗುತ್ತಿರುವಾಗ ಮನುಷ್ಯನಿಗೆ ಪರಮಾತ್ಮನ ಕಡೆ ಜ್ಞಾನವೇ ಇರುವುದಿಲ್ಲ. ಆಗ್ಯೆ ಪರಮಾತ್ಮನ ಕಡೆಗೆ ನಾಸ್ತಿಕತೆಯುಂಟಾಗುವುದು. ಇಂಥ ನಾಸ್ತಿಕತೆಗೂ ನಾಸ್ತಿಕವಾದಕ್ಕೂ ಕಾರಣವಾಗಿರುವುದೇ ವಿಷಯಾದಿಗಳನ್ನು ಅನುಭವಿಸಲು ಎಳೆಯುತ್ತಿರುವ ಪ್ರಬಲವಾದ ಭೋಗಶಕ್ತಿಯೆಂಬುದನ್ನು ಸರ್ವರೂ ಸಾವಧಾನದಿಂದ ಯೋಚಿಸಿ ತಿಳಿದುಕೊಳ್ಳಬೇಕು ಕಗ್ಗತ್ತಲೆಯಿರುವಾಗ ಹೇಗೆ ಬೆಳಕಿರುವುದಿಲ್ಲವೋ ಹಾಗೆ ಕಗ್ಗತ್ತಲೆಯ ಸ್ವರೂಪದಲ್ಲಿರುವ ಪ್ರಬಲವಾದ ಭೋಗಶಕ್ತಿಯ ಪಾಶದಿಂದ ಬಂಧಿಸಲ್ಪಟ್ಟಿರುವವರಲ್ಲಿ ಬೆಳಕಿನ ಸ್ವರೂಪದಲ್ಲಿರುವ ಆತ್ಮನ ಕಡೆಗೆ ನಾಸ್ತಿಕತೆಯಿರುವುದು. ಆದುದರಿಂದ, ನಾಸ್ತಿಕತೆಯ ಸ್ವಭಾವವು ಭೋಗಶಕ್ತಿಯಿಂದುಂಟಾಗುವ ತತ್ವವೇ ಇಂದ್ರಜಿತು ಮಾಯಾಸೀತೆಯನ್ನು ಮಾಡಿಕೊಂಡು ಬಂದು ವಧೆಮಾಡಿದ ತತ್ವವಾಗಿರುವುದು. ಈ ನಾಸ್ತಿಕತೆಯು ಆಸುರಸ್ವಭಾವವೆಂದು ಹೇಳಬೇಕಾಗಿಯೇ ಇಲ್ಲ. ಶ್ರೀಕೃಷ್ಣಪರಮಾತ್ಮನೂ ಭಗವದ್ಗೀತೆಯಲ್ಲಿ,

ಅಸತ್ಯ ಮಪ್ರತಿಷ್ಠಂತೇ ಜಗದಾಹುರನೀಶ್ವರಂ ||
ಅಪರಸ್ಪರ ಸಂಭೂತಂ ಕಿಮನ್ಯತ್ಕಾಮಹೇತುಕಂ ||

ನಾಸ್ತಿಕರು ಹೇಳುವುದೇನೆಂದರೆ—ದೇವರಿಲ್ಲ. ಧರ್ಮಾಧರ್ಮಗಳ ವ್ಯವಸ್ಥೆಯಿಲ್ಲ. ಜಗತ್ತು ಪರಸ್ಪರ ವಿರುದ್ಧಗುಣಗಳಿಂದಲೇ ಉತ್ಪನ್ನವಾದುದು. ಸ್ತ್ರೀ ಪುರುಷರ

ಅಪೇಕ್ಷಾನಿಮಿತ್ತದಿಂದಲೇ ಉಂಟಾದುದೇ ಹೊರತು ಬೇರೆ ಏನುಂಟು? ಎಂಬದಾಗಿ ಹೇಳಿರುತ್ತಾನೆ.

ಈ ನಾಸ್ತಿಕಸ್ವಭಾವಕ್ಕೆ ಭೋಗಶಕ್ತಿಯೇ ಕಾರಣವೆನ್ನುವುದಕ್ಕೆ ಕಠೋಪನಿಷತ್ತಿನಲ್ಲಿ,

ನಸಾಂ ಪರಾಯಃ ಪ್ರತಿಭಾತಿ ಬಾಲಂ ।
ಪ್ರಮಾದ್ಯಂತಂ ವಿತ್ತಮೋಹೇನ ಮೂಢಂ ॥
ಅಯಂ ಲೋಕೋ ನಾಸ್ತಿಪರ ಇತಿ ಮಾನೀ ।
ಪುನಃ ಪುನರ್ವಶಮಾಪದ್ಯತೇ ಮೇ ॥

ತಾ॥ ವಿತ್ತಮೋಹದಲ್ಲಿ ಮುಗ್ನನಾದವನೆಂದರೆ, ಭೋಗವಿಷಯಗಳಲ್ಲಿ ಮುಗ್ನನಾದವನು. ಹೀಗೆ ಮುಳುಗಿರುವವನೇ ವಿವೇಕವಿಲ್ಲದ ಬಾಲನಂತೆ ಮೂಢನು. ಇಂತಹ ಮೂಢನಿಗೆ ಪರಲೋಕಪ್ರಾಪ್ತಿಸಾಧನವಾಗಿರುವ ಶಾಸ್ತ್ರೀಯವಾದ ದಾರಿಯು ಹೊಳೆಯುವುದೇ ಇಲ್ಲ. ಭೋಗದ ಸಲಕರಣೆಗಳಿಂದ ಕೂಡಿ, ಎದುರಿಗೆ ಕಂಡುಬರುವ ಪ್ರಪಂಚವೇ ಸತ್ಯವೆಂದು ಭೋಗಪಾಶದಿಂದ ಬದ್ಧನಾಗಿರುವವನು ದೇವರೇ ಇಲ್ಲವೆಂದು ನಾಸ್ತಿಕನಾಗಿ ಜನ್ಮ ಜರಾ ಮರಣಾದಿ ದುಃಖಗಳಿಗೆ ಒಳಗಾಗುತ್ತಲೇ ಇರುವನು. ಎಂದು ಹೇಳಿರುವುದು.

ಆದುದರಿಂದ, ಮೇಲಿನ ವಾಕ್ಯಗಳ ಪ್ರಮಾಣಗಳನ್ನನುಸರಿಸಿ, ಅನ್ವಯಮಾಡಿರುವ ತತ್ವಗಳಂತೆ ನಾಸ್ತಿಕತೆಗೆ ಭೋಗಶಕ್ತಿಯೇ ಕಾರಣವಾಗಿರುವುದು. ಇದೇ ಇಂದ್ರಜಿತ್ತು ಮಾಯಾಸೀತೆಯನ್ನು ವಧಿಸಿದ ತತ್ವವಾಗಿರುವುದು. ಶ್ರೀರಾಮನು ಮಾಯಾಸೀತಾವಧೆಯನ್ನು ಕೇಳಿ ಚಿಂತಾಕ್ರಾಂತನಾದನೆಂದರೆ—ಇಂತಹ ನಾಸ್ತಿಕಸ್ವಭಾವದಲ್ಲಿ ಬುದ್ಧಿವೃತ್ತಿಯು ಕೂಡ, ತನ್ನ ನೈಜವಾದ ಕರ್ತವ್ಯವನ್ನು ಮಾಡಲಾರದೆ, ಭೋಗಶಕ್ತಿಯನ್ನು ಅನುಸರಿಸುವ ತತ್ವವಾಗಿರುವುದು.

ಸೀತೆಯನ್ನು ಖಳನು ವಧಿಸಿದನೆಂದು ದುಃಖಪಡುತ್ತಿದ್ದ ಶ್ರೀರಾಮನಿಗೆ ವಿಭೀಷಣನು ಸಮಾಧಾನ ಹೇಳಿದ ತತ್ವವೇನೆಂದರೆ—ಇಂದ್ರಜಿತ್ತು ಶಿರಚ್ಛೇದನ ಮಾಡಿದುದು ಮಾಯೆಯಿಂದ ಮಾಡಿದ ಸೀತಾಸ್ವರೂಪವು. ನಿಶ್ಚಯವಾದ ಸೀತಾದೇವಿಯನ್ನಲ್ಲ. ಇದು ಇಂದ್ರಜಿತ್ತಿನ ಮಾಯಾಕಾರ್ಯವೆಂದರೆ—ನಾಸ್ತಿಕತೆಯ ಸ್ವಭಾವವುಂಟಾಗುವುದಕ್ಕೆ ಪ್ರಬಲವಾದ ಭೋಗಶಕ್ತಿಯ ಭ್ರಮೆಯೇ ಕಾರಣವೆಂಬ ತತ್ವವನ್ನು ಸೂಚಿಸುವುದಾಗಿರುವುದು. ಅಂದರೆ ಭೋಗಶಕ್ತಿಯ ಭ್ರಮರೂಪವಾದ ಪಾಶದಿಂದ ಸತ್ಯವಾದುದು ಮಿಥ್ಯವಾಗಿಯೂ, ಮಿಥ್ಯವಾದುದು ಸತ್ಯವಾಗಿಯೂ ತೋರುವುದು. ವಿಭೀಷಣನು ಸಮಾಧಾನಪಡಿಸಿದನೆಂದರೆ—ವಿಭೀಷಣನ ತತ್ವವೇ ಧರ್ಮಮಾರ್ಗ ಅಥವಾ ವಿವೇಕದಿಂದ ಗಳಿಸಿಕೊಂಡ ಪುಣ್ಯದ ತತ್ವವಷ್ಟೆ! ವಿವೇಕವೆಂದರೆ—ಮೋಕ್ಷಕ್ಕೆ ಸಹಕಾರಿಯಾಗಿ ಗುರು

ಗಳಿಂದಲೂ, ಆಪ್ತರಿಂದಲೂ ತಿಳಿದು ಮನನಮಾಡಿ ಶೇಖರಮಾಡಿಕೊಂಡಿರುವ ದೈವೀ ಸಂಪತ್ತಿನ ಪುಣ್ಯದ ಆಸ್ತಿಯಾಗಿರುವುದು. ನಮಗೆ ನಾಸ್ತಿಕತೆಯ ಸ್ವರೂಪದ ಭ್ರಾಂತಿಯು ತಲೆದೋರಿದರೆ, ನಾವು ಆರ್ಜನೆಮಾಡಿಟ್ಟುಕೊಂಡಿರುವ ದೈವೀಸಂಪತ್ತಿನ ಪುಣ್ಯಸ್ವರೂಪವು ನಮ್ಮನ್ನು ಎಚ್ಚರಗೊಳಿಸಿ ಭ್ರಾಂತಿಯಿಂದ ಬಿಡುಗಡೆಮಾಡುವ ತತ್ವವೇ ವಿಭೀಷಣನು ಶ್ರೀರಾಮನಿಗೆ ಸಮಾಧಾನ ಹೇಳಿದುದಾಗಿರುವುದು.

ಆದುದರಿಂದ ಗುರುಹಿರಿಯರ ಹಿತೋಪದೇಶಗಳಿಗೆ ಗಮನಕೊಟ್ಟು ಮೋಕ್ಷ ಮಾರ್ಗಕ್ಕೆ ಸಹಕಾರಿಯಾದ ವಿವೇಕಸ್ವರೂಪವಾದ ಧನಾರ್ಜನೆಯನ್ನು ಮಾಡಿ, ಆರ್ಜಿಸಿದ ಈ ಧನವನ್ನು ಮೋಕ್ಷಲಾಭಕ್ಕಾಗಿ ವೆಚ್ಚಮಾಡುತ್ತಾ ಬರಬೇಕು. ಈ ವಿಧವಾಗಿ ಮಾಡ ದಿದ್ದರೆ ಮೃತ್ಯುವು ಹಿಂಬಾಲಿಸಿಕೊಂಡೇ ಇರುವುದು. ಇದೇ ತಾತ್ಪರ್ಯಕ್ಕೆ ಶ್ರೀಶಂಕರಭಗವ ತ್ಪಾದರವರು ವಿವೇಕಚೂಡಾಮಣಿ ೮೩ನೆಯ ಶ್ಲೋಕದಲ್ಲಿ,

ವಿಷಮ ವಿಷಯಮಾರ್ಗೈರ್ಗಚ್ಛತೋಽನಚ್ಛಬುದ್ಧೇಃ ।
ಪ್ರತಿಪದ ಮಭಿಘಾತೋ ಮೃತ್ಯುರಪ್ಯೇಷಸಿದ್ಧಃ ॥
ಹಿತ ಸುಜನ ಗುರೂಕ್ತ್ಯಾ ಗಚ್ಛತಃ ಸ್ವಸ್ಯಯುಕ್ತ್ಯಾ ।
ಪ್ರಭವತಿ ಫಲಸಿದ್ಧಿ ಸ್ಸತ್ಯಮಿತ್ಯೇವ ವಿದ್ಧಿ ॥

ತಾ॥ ವಿಷರೂಪವಾದ ವಿಷಯಗಳನ್ನು ಅನುಸರಿಸಿಕೊಂಡು ಹೋಗುತ್ತಿರುವ ಮಲಿನ ಬುದ್ಧಿಯುಳ್ಳವನನ್ನು ಮೃತ್ಯುವು ಹಿಂಬಾಲಿಸಿಕೊಂಡೇ ಇರುವುದು. ಸಾಧುಗಳ ಮತ್ತು ಗುರುಗಳ ಹಿತೋಪದೇಶಗಳಿಗೆ ಗಮನಕೊಟ್ಟು, ಅವುಗಳನ್ನು ಹಿಂಬಾಲಿಸಿಕೊಂಡು ಹೋಗುವವನಿಗೆ ಮೋಕ್ಷಲಾಭವು ಸಿದ್ಧಿಸುವುದು. ಇದು ಸತ್ಯವಾದುದೆಂದು ಖಂಡಿತವಾಗಿ ತಿಳಿ. ಎಂದು ಹೇಳಿರುತ್ತಾರೆ.

ಈ ಮೇಲಿನ ತತ್ವಗಳು ಬಹಿರ್ವ್ಯಾಪಾರದಲ್ಲಿ ನಡೆಯುವುವು. ಅಂತರ್ಮುಖವಾದ ಸಮಾಧಿಯ ಅನುಷ್ಠಾನದಲ್ಲಿ ನಾಸ್ತಿಕಸ್ವಭಾವವನ್ನುಂಟುಮಾಡುವ ಪ್ರಬಲವಾದ ಭೋಗ ಶಕ್ತಿಯಿಂದೊದಗುವ ತೊಂದರೆಯೇನೆಂದರೆ—ಬಂಧತ್ರಯದೊಡಗೂಡಿದ "ಓಂ" ಕಾರೋಪಾಸನೆಯನ್ನು ಮಾಡುತ್ತಿದ್ದರೂ, ಅಂತರ್ಮುಖದ ಮಾರ್ಗಕ್ಕೆ ಬುದ್ಧಿಮನಸ್ಸಿನ ವೃತ್ತಿಗಳನ್ನು ಬಿಡದೆ ಬಹಿರ್ಮುಖವಾಗಲು ಒಳಗಡೆಯೇ ಈ ಶಕ್ತಿಯು ಎಳೆಯುತ್ತಿರುವುದು. ಈ ವಿಧವಾದ ಭೋಗಶಕ್ತಿಯು ಎಳೆತದಿಂದ ದೇಹದ ಶಕ್ತಿಗಳು ಬಳಲಿ, ಬಂಧತ್ರಯದೊಡನೆ ಸಮಾಧಿಯ ಅಭ್ಯಾಸಮಾಡುತ್ತಿದ್ದರೂ, ಏಕಪ್ರಕಾರವಾಗಿ ಸಮಾಧಿಯಲ್ಲಿ ಕುಳಿತಿರಲು ಸದ್ಯದಲ್ಲಿ ಸಾಧ್ಯವಿಲ್ಲ. ಕ್ರಮೇಣ ಹೆಚ್ಚುತ್ತಾ ಬರಬೇಕಾಗಿದೆ. ಭೋಗಶಕ್ತಿಯು ಎಳೆಯುತ್ತಲಿರುವುದರಿಂದ ಆಯಾಸವುಂಟಾಗಿ ಬಹಿರ್ಮುಖವಾಗುವಿಕೆ, ಪುನಃ ಸಮಾಧಿ

ಯಲ್ಲಿ ನಿಲ್ಲಿಸಲು ಹೋಗುವಿಕೆಯು ಅಭ್ಯಾಸಗಳಾಗಿರುತ್ತವೆ. ಭೋಗಶಕ್ತಿಯು ಎಳೆತದಿಂದ ವಾನರರ ತತ್ವದಲ್ಲಿರುವ ದೇಹದ ವಾಯುಗಳು ಬಳಲುವುವು. ಈ ರೀತಿಯಾದ ಅನುಷ್ಠಾನದಿಂದ ಸಾಕ್ಷಾತ್ಕಾರವನ್ನು ಪಡೆಯುವೆವೋ ಇಲ್ಲವೋ, ಎಂಬ ಭ್ರಾಂತಿಯು ಭೋಗಶಕ್ತಿಯಿಂದುಂಟಾದ ಬಳಲಿಕೆಯಿಂದ ತೋರುವುದು. ಈ ವಿಧವಾಗಿ ಉಂಟಾಗುವ ಭ್ರಾಂತಿಯು ಸತ್ಯವಾದುದಲ್ಲವೆಂದು ತಿಳಿದುಕೊಳ್ಳುವುದೇ ವಿಭೀಷಣನ ಸಮಾಧಾನದ ತತ್ವವಾಗಿರುವುದು. ಆದುದರಿಂದ ಸಮಾಧಿಯ ಅನುಷ್ಠಾನಕಾಲದಲ್ಲಿ ನಾಸ್ತಿಕಸ್ವಭಾವದ ಭ್ರಾಂತಿ ಹುಟ್ಟಿದರೂ, ಅದನ್ನು ತಿರಸ್ಕರಿಸಬೇಕೆಂಬುದೇ ಮುಖ್ಯ ತತ್ವಾರ್ಥವಾಗಿರುವುದು.

## ೨೩ನೆಯ ಪ್ರಕರಣ.

**ಇಂದ್ರಜಿತ್ತು ನಿಂಕುಭಿಳಾ ಯಾಗಕ್ಕೆ ಪ್ರಯತ್ನಮಾಡುತ್ತಿರಲು ವಿಭೀಷಣನು ಲಕ್ಷ್ಮಣ ಹನುಮಂತರನ್ನು ಕರೆದುಕೊಂಡು ಹೋಗಿ ಲಕ್ಷ್ಮಣನಿಂದ ಇಂದ್ರಜಿತ್ತನ್ನು ವಧೆ ಮಾಡಿಸಿದುದು.**

**ಭೋಗಶಕ್ತಿಯಲ್ಲಿನ ಅಷ್ಟಮದಗಳ ವಿಚಾರ. ತೀವ್ರತಮವಾದ ವೈರಾಗ್ಯವುಳ್ಳ ಮನುಷ್ಯನೇ ಯೋಗಾಭ್ಯಾಸದ ಸಹಾಯದಿಂದ ಭೋಗಶಕ್ತಿಯನ್ನು ನಿಗ್ರಹಮಾಡಲು ಶಕ್ತನೆಂಬ ವಿಚಾರ.**

**ರಾ||** ಇಂದ್ರಜಿತ್ತು ಅಗೋಚರನಾಗಿದ್ದುಕೊಂಡೇ ರಾಮಲಕ್ಷ್ಮಣರಾದಿಯಾಗಿ ಸಕಲರನ್ನೂ ಅತ್ಯಂತವಾಗಿ ಪೀಡಿಸುತ್ತಿರುವಲ್ಲಿ, ಶ್ರೀರಾಮನು ಇಂದ್ರಜಿತ್ತನ್ನು ಹೇಗೆ ಕೊಲ್ಲುವುದೆಂದು ಯೋಚಿಸುತ್ತಿದ್ದನು. ಲಕ್ಷ್ಮಣನು ಇಂದ್ರಜಿತ್ತಿನ ಬಾಧೆಯನ್ನು ತಡೆಯಲಾರದೆ, ಸರ್ವರಾಕ್ಷಸರನ್ನೂ ಸಮೂಲವಾಗಿ ನಾಶಮಾಡುವಂತೆ, ಬ್ರಹಾಸ್ತ್ರವನ್ನು ಪ್ರಯೋಗಮಾಡುವೆನೆಂದು ಹೇಳಲು, ಶ್ರೀರಾಮನು " ಇಂದ್ರಜಿತ್ತಿನ ವಧೆಯ ಕಾಲ ಬರುವುದು. ಅಲ್ಲಿಯವರೆಗೆ ಇಂದ್ರಜಿತ್ತಿನ ಹಾವಳಿಯನ್ನು ತಡೆಯಬೇಕಾಗಿದೆ. ಪ್ರಪಂಚವೇ ಅಲ್ಲೋಲಕಲ್ಲೋಲವಾದೀತು. ಬ್ರಹ್ಮಾಸ್ತ್ರವನ್ನು ತೊಡವೆ ಸೈರಿಸು" ಎಂದನು.

**ತತ್ವ||** ಇಂದ್ರಜಿತ್ತು ಅತ್ಯಂತವಾಗಿ ಪೀಡಿಸುತ್ತಿರುವ ತತ್ವವೇ ಬುದ್ಧಿಮನಸ್ಸಿನ ವೃತ್ತಿಗಳನ್ನು ಅಂತರ್ಮುಖದ ಮಾರ್ಗಕ್ಕೆ ಬಿಡದೆ, ಬಹಿರ್ವ್ಯಾಪಾರದ ಕಡೆಗೆ ಎಳೆಯುವುದರಿಂದುಂಟಾಗುವ ಬಳಲಿಕೆಯೆಂದು ತಿಳಿಸಿಕೊಂಡು ಬರುತ್ತಿದೆಯಷ್ಟೆ! ಈ ಬಳಲಿಕೆಯನ್ನು ಹೊಗಲಾಡಿಸಿಕೊಂಡು ಸಮಾಧಿಯು ಯಾವಾಗ ಸ್ವಿಮಿತಕ್ಕೆ ಬರುವುದೋ ಎಂಬ ಯೋಚನೆಯು ಅಂಕುರಿಸುವುದೇ ಶ್ರೀರಾಮನು ಇಂದ್ರಜಿತ್ತನ್ನು ಹೇಗೆ ಕೊಲ್ಲುವುದೆಂದು ಯೋಚಿಸುತ್ತಿದ್ದುದರ ತತ್ವವಾಗಿರುವುದು. ಬಹಿರ್ವ್ಯಾಪಾರಕ್ಕೆ ಎಳೆಯುತ್ತಿರುವ ಈ ಭೋಗಶಕ್ತಿಯಿಂದ ಉಂಟಾಗಿರುವ ತೊಂದರೆಯನ್ನು ಪರಿಹರಿಸಿಕೊಳ್ಳಲು

ವಿರಕ್ತಿಯು ಸಂಪೂರ್ಣಬಲವನ್ನು ಪ್ರಯೋಗಮಾಡುವುದೆಂದರೆ—ಅತ್ಯಂತ ವಿರಕ್ತಿಯಿಂದ ಹೇಗಾದರೂ ಸಮಾಧಿಯಲ್ಲಿಯೇ ನಿಲ್ಲಲು ಮಾಡುವ ಪ್ರಯತ್ನದ ಯೋಚನೆಯೇ ಲಕ್ಷ್ಮಣನು ಬ್ರಹ್ಮಾಸ್ತ್ರಪ್ರಯೋಗಮಾಡುವೆನೆಂಬದಾಗಿ ಹೇಳಿದುದರ ತಾತ್ಪರ್ಯವಾಗಿರುವುದು. ವಿರಕ್ತಿ ಇದ್ದರೂ ಕ್ರಿಯಾಶಕ್ತಿಯನ್ನು ಅತ್ಯಂತವಾಗಿ ಬಳಲಿಸಿ ಒಂದೇ ಸಲಕ್ಕೆ ಸಮಾಧಿಸಿದ್ಧಿಯನ್ನು ಪಡೆಯಲು ಹೋಗಬಾರದು. ಸಮಾಧಿಯ ಅನುಷ್ಠಾನ ಮಾಡುತ್ತ ಮಾಡುತ್ತ ಕ್ರಮೇಣ ಬಹಿರ್ವ್ಯಾಪಾರಕ್ಕೆ ಎಳೆಯುವ ಭೋಗಶಕ್ತಿಯನ್ನು ನಿರ್ವೀರ್ಯಮಾಡಬೇಕೆಂಬುದೇ ಶ್ರೀರಾಮನು ಇಂದ್ರಜಿತ್ತಿನ ವಧೆಯ ಕಾಲ ಬರುವವರೆಗೂ ಸೈರಿಸೆಂದು ಲಕ್ಷ್ಮಣನೊಡನೆ ಹೇಳಿದುದರ ತತ್ತ್ವವಾಗಿರುವುದು.

ಮುಖ್ಯತಾತ್ಪರ್ಯವೇನೆಂದರೆ—ಒಂದೇ ದಿವಸದಲ್ಲಿಯೇ ಮೋಕ್ಷವನ್ನು ಪಡೆಯುವ ಆತುರಪಟ್ಟು ಕ್ರಿಯಾಶಕ್ತಿಯನ್ನು ಅತ್ಯಂತವಾಗಿ ಬಳಲಿಸಿ, ದೇಹಕ್ಕೆ ಅನಾಹುತವನ್ನು ತಂದುಕೊಳ್ಳಬಾರದು. ಮತ್ತು ಶಕ್ತಿಗೆ ತಕ್ಕಂತೆ ಅನುಷ್ಠಾನ ಮಾಡಿಕೊಂಡುಬಂದು ಕ್ರಮೇಣ ಸಮಾಧಿಸಿದ್ಧಿಯನ್ನು ಪಡೆಯಬೇಕೆಂಬುದಾಗಿರುವುದು.

**ರಾ||** ಇಂದ್ರಜಿತ್ತು ರಾಮಲಕ್ಷ್ಮಣರನ್ನು ಹೇಗಾದರೂ ಮಾಡಿ ಧ್ವಂಸಮಾಡಬೇಕೆಂಬ ಕೋಪದಿಂದ ನಿಕುಂಭಿಳಾಯಾಗವನ್ನು ಮಾಡಲು ಹೊರಟನು. ಈ ವರ್ತಮಾನವನ್ನು ವಿಭೀಷಣನು ಕೇಳಿ, ಈಯಾಗವು ಪೂರೈಸುವುದರೊಳಗೆ ಇಂದ್ರಜಿತ್ತನ್ನು ಕೊಲ್ಲದಿದ್ದರೆ ಅನಂತರ ಇವನನ್ನು ಕೊಲ್ಲಲು ಯಾರಿಗೂ ಸಾಧ್ಯವಿಲ್ಲವೆಂದು ಯೋಚಿಸಿ, ನಿಕುಂಭಿಳಾಯಾಗಮಾಡುತ್ತಿದ್ದ ನ್ಯಗ್ರೋಧ (ಆಲದಮರ) ಮೂಲಕ್ಕೆ ಲಕ್ಷ್ಮಣನನ್ನೂ ಅವನ ಸಹಾಯಕ್ಕೆ ಹನುಮಜ್ಜಾಂಬುವಾದಿಗಳನ್ನೂ ಕರೆದುಕೊಂಡು ಹೋದನು. ನಿಕುಂಬಿಳಾಯಾಗವನ್ನು ಪೂರೈಸುವುದರೊಳಗೆ ಲಕ್ಷ್ಮಣನು ಇಂದ್ರಜಿತ್ತನ್ನು ವಧಿಸಿದನು.

**ತತ್ತ್ವ||** ಇಂದ್ರಜಿತ್ತಿನ ಪ್ರಥಮಯುದ್ಧದ ತತ್ತ್ವವಾದ ಭೋಗಶಕ್ತಿಯಲ್ಲಿನ ಮೋಹವೆಂದರೆ—ಭೋಗ್ಯಪದಾರ್ಥಗಳನ್ನು ಅನುಭವಿಸಬೇಕೆಂಬ ಮೋಹಾವೇಶದ ತತ್ತ್ವವಾಗಿರುವುದಷ್ಟೆ! ಇಂದ್ರಜಿತ್ತಿನ ಎರಡನೆಯ ಯುದ್ಧದ ತತ್ತ್ವವಾದ ಭೋಗಶಕ್ತಿಯಲ್ಲಿನ ತೃಷ್ಣೆಯ ಸ್ವರೂಪವನ್ನೂ, ಇಂದ್ರಜಿತ್ತಿನ ಮೂರನೆಯ ಯುದ್ಧದ ತತ್ತ್ವವಾದ ನಾಸ್ತಿಕತೆಯ ಸ್ವರೂಪವನ್ನೂ ತಿಳಿಸಿತಷ್ಟೆ! ಈ ಮೇಲೆ ಹೇಳಿರುವ ಭೋಗದ ಮೋಹ, ತೃಷ್ಣೆ, ನಾಸ್ತಿಕಸ್ವಭಾವಗಳನ್ನೆಲ್ಲಾ ಬುದ್ಧಿಮನಸ್ಸಿನ ವೃತ್ತಿಗಳು ಪರಿಹರಿಸಿಕೊಳ್ಳುತ್ತಾ ಬರಲು, ಭೋಗಶಕ್ತಿಗೆ ಕೋಪೋದ್ರೇಕವಾಗಿ, ತನ್ನ ಎಲ್ಲಾ ಶಕ್ತಿಗಳಿಗಿಂತಲೂ ಅಧಿಕವಾದ ಮತ್ತು ಸಂಪೂರ್ಣಜ್ವಾಲೆಯುಳ್ಳ ಭೋಗಮದದ ಶಕ್ತಿಯನ್ನೇ ಪ್ರಯೋಗಮಾಡೋಣವೆಂದು ಯತ್ನಮಾಡಿದುದೇ ಇಂದ್ರಜಿತ್ತು ನಿಕುಂಭಿಳಾಯಾಗವನ್ನು ಪ್ರಾರಂಭಿಸಿದ ತತ್ತ್ವವಾಗಿರುವುದು.

ನಿಕುಂಭಿಳಾಯಾಗವೆಂದರೆ—ಕುಂಭವೆಂದರೆ ಪೂರ್ಣವಾಗುವುದು. ನಿಕುಂಭವೆಂದರೆ "ನಿತರಾಂ ಕುಂಭಃ ನಿಕುಂಭಃ" ತುಂಬಿ ತುಳುಕುತ್ತಿರುವಂತೆ ಪರಿಪೂರ್ಣವಾಗುವುದು ನಿಕುಂಭಿಳಾಯಾಗವೆಂದರೆ—ಪರಿಪೂರ್ಣವಾಗಿ ಸಹಿಸಲಾರದಷ್ಟು ಜ್ವಾಲೆಯುಳ್ಳ ಶಕ್ತಿಯನ್ನು ಪಡೆಯುವ ತತ್ವ. ಅಂದರೆ, ಭೋಗಶಕ್ತಿಯು ತನ್ನ ಉಜ್ವಲ ಮತ್ತು ಪರಿಪೂರ್ಣವಾದ ಜ್ವಾಲೆಯನ್ನು ಹೊಂದುವುದೇ ಇಂದ್ರಜಿತ್ತು ನಿಕುಂಭಿಳಾಯಾಗಮಾಡುವ ತತ್ವವಾಗಿರುವುದು.

ಇಂದ್ರಜಿತ್ತು ನ್ಯಗ್ರೋಧಮೂಲದಲ್ಲಿ ನಿಕುಂಭಿಳಾಯಾಗಮಾಡುವ ತತ್ವವೇನೆಂದರೆ-ನ್ಯಗ್ರೋಧವೆಂದರೆ ಆಲದಮರ. ಆಲದಬೀಜವು ಗಸಗಸೆ ಕಾಳಿಗಿಂತಲೂ ಸಣ್ಣದಾಗಿದ್ದರೂ ಅದರಲ್ಲಿ ಉತ್ಪನ್ನವಾದ ವೃಕ್ಷವು ಹೇಗೆ ಅತ್ಯದ್ಭುತವಾಗುವುದೋ ಹಾಗೆ ಸಣ್ಣದಾಗಿ ಹುಟ್ಟಿದ ಭೋಗಶಕ್ತಿಯು ಬೆಳೆದು ಜ್ವಲಿಸುತ್ತಾ ಅತ್ಯದ್ಭುತವಾದ ಮದವೆನಿಸಿಕೊಳ್ಳುವುದು. ಈ ಅತ್ಯದ್ಭುತವಾದ ಭೋಗಮದವು ಪದಾರ್ಥಗಳನ್ನು ಅನುಭವಿಸಲುಂಟಾಗುವ ಮೋಹತೃಷ್ಣೆಗಳಿಗಿಂತಲೂ ತೀವ್ರವಾಗಿದ್ದು, ಹೇಳಲಶಕ್ಯವಾದ ಅನಾಹುತಗಳನ್ನು ಮಾಡುವ ಸ್ವಭಾವವುಳ್ಳದ್ದಾಗುವುದು. ವಿದ್ಯಾಮದ, ಯೌವ್ವನಮದ, ಕುಲಮದ, ಶೀಲಮದ, ಸಿರಿಮದ ಮುಂತಾದ ಅಷ್ಟಮದಗಳು ಈ ಭೋಗಕ್ಕೆ ಸೇರಿದುವು. ಆದುದರಿಂದ ಇಂದ್ರಜಿತ್ತು ನ್ಯಗ್ರೋಧಮೂಲದಲ್ಲಿ ನಿಕುಂಭಿಳಾಯಾಗವನ್ನು ಮಾಡಲು ಪ್ರಾರಂಭಿಸುವುದೆಂದರೆ—ಮನುಷ್ಯನಲ್ಲಿ ಭೋಗಮದವು ಅಂಕುರಿಸುವ ತತ್ವವಾಗಿರುವುದು.

ಇಂದ್ರಜಿತ್ತು ನಿಕುಂಭಿಳಾಯಾಗವನ್ನು ಸಂಪೂರ್ಣಮಾಡಿದರೆ, ಇವನನ್ನು ಜಯಿಸಲು ಯಾರಿಂದಲೂ ಸಾಧ್ಯವಿಲ್ಲವೆಂದು ವಿಭೀಷಣನು ಹೇಳಿದುದರ ತತ್ವವೇನೆಂದರೆ—ಈ ಭೋಗಶಕ್ತಿಯ ಮದಗಳಲ್ಲ ಯಾವ ಒಂದನ್ನು ಮನುಷ್ಯನು ಪಡೆದರೂ, ಅವನು ಮೋಕ್ಷ ಮತ್ತು ಧರ್ಮಮಾರ್ಗಗಳಿಗೆ ಕೊಂಚವಾದರೂ ಅರ್ಹತೆ ಇಲ್ಲದವನಾಗುವನೆಂಬುದನ್ನು ಸೂಚಿಸುವುದು. ಪರಿಪೂರ್ಣವಾದ ಭೋಗಮದಕ್ಕೆ ಒಳಗಾದವರು ಭೂಮಿಯ ಮೇಲೆ ತಾವಿರುತ್ತೇವೆಂಬ ಜ್ಞಾನವಿರದೆ, ಮದ್ದಾನೆಯಂತೆ ಯಾವುದನ್ನೂ ಲಕ್ಷ್ಯ ಮಾಡದೆ ಇರುತ್ತಾರೆ. ಈ ಮದಗಳಿಗೆ ಒಳಗಾದವರಲ್ಲಿ ಭೋಗಶಕ್ತಿಯು ವಿಜೃಂಭಿಸಿ, ಧರ್ಮಮಾರ್ಗವನ್ನು ತಿರಸ್ಕರಿಸುವ ನಾಸ್ತಿಕ್ಯವು ಪ್ರಬಲಿಸುವುದು. ಧರ್ಮ ಮತ್ತು ಮೋಕ್ಷ ಮಾರ್ಗಗಳ ಸ್ವರೂಪದ ವಿಚಾರವು ಕಿಂಚಿತ್ತಾದರೂ ನೆತ್ತಿಗೆ ಹತ್ತದೆ ಹೋಗುವುದು.

ಇದರಂತೆ, ಯಾವ ವಿದ್ಯೆಯಲ್ಲಿಯೇ ಆಗಲಿ ಪ್ರೌಢಿಮೆಯನ್ನು ಸಂಪಾದಿಸಿದರೆ ಕೇವರಿಗೆ ತಮ್ಮ ಸಮಾನ ವಿದ್ಯಾವಂತರುಂಟೇ ಎಂಬ ಮದವಂಕುರಿಸುವುದು. ಆತ್ಮವಿದ್ಯೆಯಾದ ವೇದಾಂತವಿದ್ಯೆಯ ಹೊರತು, ಇತರ ಹೊಟ್ಟೇಪಾಡಿನ ವಿದ್ಯೆಗಳ ಪ್ರೌಢಿಮೆ

ಯಿಂದ ಮದವನ್ನು ಪಡೆದವನು ಪ್ರಪಂಚವ್ಯಾಪಾರದಲ್ಲಿಯೇ ಮುಳುಗಿ ಕುರುಡನನ್ನು ಹಿಂಬಾಲಿಸಿದ ಕುರುಡನಂತೆ, ಜನನ ಮರಣಪ್ರವಾಹರೂಪವಾದ ಭವಬಂಧನದಲ್ಲಿ ಮುಳುಗಿ ಹೋಗುವನು.

ವೇದಾಂತದಲ್ಲಿಯೂ ಗ್ರಂಥಪಾಠವನ್ನು ತಿಳಿದುಕೊಂಡು ಪ್ರೌಢಿಮೆಯನ್ನು ಸಂಪಾದಿಸಿ, ತಾವೇ ವಿದ್ಯಾವಂತರೆಂದು ಮದೋನ್ಮತ್ತರಾಗಿ ಸ್ವಾನುಭವವಿಲ್ಲದೆ ವಾಗ್ವೈಖರಿಯಿಂದ ವಾದಿಸುವವರು ಕೂಡ ಇಂದ್ರಜಿತ್ತಿನ ನಿಕುಂಭಿಳಾಯಾಗದ ಪರಿಪೂರ್ಣತೆಯ ತತ್ವದ ಪಾಶದಿಂದ ಬಂಧಿಸಲ್ಪಟ್ಟಿರುವವರೇ ಹೊರತು ನಿಶ್ಚಯವಾಗಿಯೂ ವೇದಾಂತಮಾರ್ಗಿಗಳಲ್ಲ. ಇದೇ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೬೦ನೆಯ ಶ್ಲೋಕದಲ್ಲಿ,

ವಾಗ್ವೈಖರೀ ಶಬ್ದಝುರೀ ಶಾಸ್ತ್ರವ್ಯಾಖ್ಯಾನಕೌಶಲಂ |
ವೈದುಷ್ಯಂ ವಿದುಷಾಂ ತದ್ವದ್ಭುಕ್ತಯೆ ನತುಮುಕ್ತಯೆ ||

ತಾ|| ವಾಕ್ಚತುರತೆ, ಶಬ್ದಪ್ರವಾಹ, ಶಾಸ್ತ್ರಗಳಿಗೆ ವ್ಯಾಖ್ಯಾನಮಾಡುವುದರಲ್ಲಿ ಕುಶಲತೆ, ಅನುಭವವಿಲ್ಲದ ಪಾಂಡಿತ್ಯ, ಇವುಗಳೆಲ್ಲವೂ ಭುಕ್ತಿಗೋಸ್ಕರವಲ್ಲದೆ ಮುಕ್ತಿಗೋಸ್ಕರವಾಗಲಾರವು. ಎಂದು ಹೇಳಿರುವರು.

ಅದರಿಂದ ಕೃತಕೃತ್ಯರಾಗಬೇಕೆಂದು ಮನಃಪೂರ್ವಕವಾಗಿ ವೇದಾಂತವಿಚಾರಮಾಡಿ ಅದರಲ್ಲಿರುವ ತತ್ವಗಳನ್ನು ಮನನಮಾಡಿಕೊಂಡು ಆತ್ಮಭಾವನೆಯ ಸ್ವರೂಪವನ್ನು ಸ್ಮರಣೆ ಮಾಡುತ್ತಿರುವವರು ಮಾತ್ರ, ಭೋಗಶಕ್ತಿಯ ಉಲ್ಬಣಕ್ಕೆ ಒಳಗಾಗದೆ, ಬ್ರಹ್ಮಾನಂದದ ಅಂತರ್ಗತವಾದ ವೇದಾಂತವಿದ್ಯೆಯ ಆನಂದವನ್ನು ಅನುಭವಿಸುವರು. ಈ ವಿಧವಾಗಿರುವುದೇ ವೇದಾಂತವಿದ್ಯೆಯನ್ನು ನಿಶ್ಚಯವಾಗಿಯೂ ತಿಳಿದುಕೊಳ್ಳುವವರ ಸ್ವರೂಪವಾಗಿರುವುದು.

ನ್ಯಗ್ರೋಧಬೀಜವು ಅತ್ಯಂತ ಅಣುಸ್ವರೂಪವಾಗಿದ್ದರೂ ಅದರಿಂದ ಉತ್ಪನ್ನವಾಗುವ ವೃಕ್ಷವು ಅತ್ಯದ್ಭುತವಾಗಿರುವಂತೆ, ಭೋಗಮದವು ಕಿಂಚಿತ್ತಾದರೂ ಮನುಷ್ಯನಿಗೆ ತಗಲಿದರೆ ಉನ್ಮತ್ತನಂತಾಗಿಬಿಡುವನು. ಇಂತಹ ಕಾಲದಲ್ಲಿ ಬುದ್ಧಿಮನಸ್ಸಿನ ವೃತ್ತಿಗಳು ಭೋಗಶಕ್ತಿಯ ಪಾಶದಿಂದ ಬಂಧಿಸಲ್ಪಟ್ಟು ಅದನ್ನು ಅನುವರ್ತಿಸಿಕೊಂಡಿರುವುವು. ಈ ವಿಧವಾದ ಮದವೇರಿದರೆ, ಧರ್ಮಾಧರ್ಮಗಳ ವಿವೇಚನೆಗೆ ಅವಕಾಶವೇ ಇಲ್ಲ. ಅಲ್ಲದೆ ಮೋಕ್ಷಮಾರ್ಗದ ವಾಸನೆಯೂ ಶೂನ್ಯಪದವಿಯಲ್ಲಿರುವುದು. ಆದುದರಿಂದ ಭೋಗಮದದ ಬೀಜವು ನ್ಯಗ್ರೋಧಬೀಜದಂತೆ ಅತ್ಯಂತ ಸೂಕ್ಷ್ಮವಾಗಿದ್ದರೂ, ಅಂತಹ ಬೀಜವನ್ನು ಮೊಳೆಯದಂತೆ ಹುರಿದುಬಿಡಬೇಕೆಂಬ ತತ್ವವನ್ನನುಸರಿಸಿ, ನಿಕುಂಭಿಳಾಯಾಗವು ಆಗುವುದರೊಳಗೆ

ಇಂದ್ರಜಿತ್ತನ್ನು ನಿಗ್ರಹವಾಡಬೇಕೆಂದು ವಿಭೀಷಣನು ಯೋಚಿಸಿ, ಹನುಮಂತ ಮುಂತಾದವರ ಸಹಾಯದೊಡನೆ ಲಕ್ಷ್ಮಣನನ್ನು ಕರೆದುಕೊಂಡು ಹೋದನು.

**ರಾ||** ಹೀಗೆ ವಿಭೀಷಣ, ಹನುಮಂತ, ಜಾಂಬುವಂತರೊಡನೆ ಲಕ್ಷ್ಮಣನು ಹೊರಟು, ಯಾಗವಮಾಡಲು ರಾಕ್ಷಸಪರಿವೃತನಾಗಿ ಕುಳಿತಿದ್ದ ಇಂದ್ರಜಿತ್ತಿನೊಡನೆ ಯುದ್ಧಮಾಡಲು ಪ್ರಾರಂಭಿಸಿದನು. ಇಂದಜಿತ್ತು ಲಕ್ಷ್ಮಣನೊಡನೆ ಯುದ್ಧಮಾಡುತ್ತಾ ವಿಭೀಷಣನ ಮೇಲೂ ಬಾಣಪ್ರಯೋಗವಮಾಡಿದನು. ವಿಭೀಷಣನು ಇಂದ್ರಜಿತ್ತನ್ನು ದೂಷಿಸಿ ತಾನೂ ಯುದ್ಧವಮಾಡುತ್ತಿದ್ದನು.

**ತತ್ವ||** ಇಂದ್ರಜಿತ್ತಿಗೂ ವಿಭೀಷಣನಿಗೂ ನಡೆದ ಯುದ್ಧದ ತತ್ವವೇನೆಂದರೆ— ಇಂದ್ರಜಿತ್ತುತತ್ವದಲ್ಲಿರುವ ಭೋಗಶಕ್ತಿಯು ಧರ್ಮಮಾರ್ಗವನ್ನೂ ಮೀರುವ ಸ್ವಭಾವದ್ದಾಗಿರುವುದು. ವಿಭೀಷಣನು ಧರ್ಮಮಾರ್ಗವೆಂದರೆ—ಆತ್ಮನಿಷ್ಠೆಯ ಕಡೆಗೆ ಸಹಕಾರಿಯಾಗಿರುವ ವಿವೇಕಸ್ವರೂಪವಾದ ಪುಣ್ಯದ ತತ್ವದವನು. ವಿಭೀಷಣನ ಮತಾನುಸಾರವಾಗಿ ರಾವಣ ಇಂದ್ರಜಿತ್ತುಗಳು ನಡೆದುಕೊಂಡರೆ, ಧರ್ಮಮಾರ್ಗಕ್ಕೆ ಅನುಸಾರವಾದ ನಡೆವಳಿಕೆಗಳು ಮನುಷ್ಯನಲ್ಲುಂಟಾಗುವುವು. ವಿಭೀಷಣನ ಮತಾನುಸಾರವಾಗಿ ರಾವಣ ಇಂದ್ರಜಿತ್ತುಗಳು ನಡೆದುಕೊಳ್ಳದೆ, ಸ್ವೇಚ್ಛೆಯಂತೆ ನಡೆದುಕೊಂಡರೆ, ಅಧರ್ಮಮಾರ್ಗಾನುಸಾರವಾದ ನಡೆವಳಿಕೆಗಳುಂಟಾಗುವುವು. ಧರ್ಮಾಧರ್ಮಗಳಿಗೆ ವೈಷಮ್ಯಬರಲು ಭೋಗಶಕ್ತಿಯೇ ಮುಖ್ಯಕಾರಣ. ಧರ್ಮಮಾರ್ಗಾನುಸಾರವಾಗಿ ನಡೆದುಕೊಂಡರೆ, ಭೋಗಶಕ್ತಿಯು ಪ್ರತಾಪಗಳು ನಡೆಯದೆ ಧರ್ಮಕ್ಕೆ ಕಟ್ಟುಬಿದ್ದಿರಬೇಕಾಗುವುದು. ಅಂದರೆ ಧರ್ಮಕ್ಕೆ ಕಟ್ಟುಬಿದ್ದವರು ಭೋಗಪದಾರ್ಥಗಳನ್ನು ಅನುಭವಿಸಲು ಧರ್ಮಮಾರ್ಗದ ಹದ್ದುಮೀರಿ ಹೋಗುವ ಹಾಗಿಲ್ಲ ಪ್ರಬಲವಾದ ಭೋಗಶಕ್ತಿಯೂ ಇದರ ಜೊತೆಗೆ ಅವಿದ್ಯೆಗೆ ಪ್ರಧಾನಪುರುಷನಾದ ರಾವಣನ ತತ್ವದಲ್ಲಿರುವ ವಾಸನಾವೃತ್ತಿ ಮತ್ತು ಇಂದ್ರಿಯಗಳ ಆಕರ್ಷಣಾಶಕ್ತಿಗಳೂ ಧರ್ಮಕ್ಕೆ ಕಟ್ಟುಬಿದ್ದು ಧರ್ಮಮಾರ್ಗದಂತೆ ಇರುವುದು ಅಪರೂಪ. ಹೀಗಿರುವುದಿಲ್ಲವೆನ್ನುವ ತತ್ವವನ್ನು ಅನುಸರಿಸಿಯೇ ರಾವಣನು ಧೊರೆಯಾಗಿಯೂ ಇಂದ್ರಜಿತ್ತು ಯುವರಾಜನಾಗಿಯೂ ಇದ್ದರು. ವಿಭೀಷಣನು ತಮ್ಮನೆಂಬ ನಾಮಮಾತ್ರದವನಾಗಿದ್ದನು.

ಭೋಗದ ಮೋಹ, ತೃಷ್ಣಾ ಮತ್ತು ಮದಗಳಲ್ಲಿ ಯಾವುದಾದರೊಂದರಿಂದ ಪ್ರಬಲವಾಗಿ ಬಂಧಿಸಲ್ಪಟ್ಟ ಕಾಲದಲ್ಲಿ ಕಾಲಾಕಾಲ, ಪಾತ್ರಾಪಾತ್ರ, ಮಿತಾಮಿತಗಳ ವಿವೇಚನೆಯೇ ಇಲ್ಲದವರಿಗೆ ಧರ್ಮಮಾರ್ಗವೆಲ್ಲಿ ಬಂದೀತು ? ಆದುದರಿಂದ, ವಿವೇಕ ಅಥವಾ ಧರ್ಮಕ್ಕೂ ವಿಷಯ ಭೋಗಗಳಲ್ಲಿ ಅಧಿಕವಾಗಿ ಎಳೆಯುತ್ತಿರುವ ಅಧರ್ಮ ಅಥವಾ ಅವಿ

ವೇಕಕ್ಕೂ, ಹೊಡೆದಾಟಗಳು ಬರುವ ತತ್ವವೇ ಇಂದ್ರಜಿತ್ತು ವಿಭೀಷಣನ ಮೇಲೆ ಬಾಣ ಪ್ರಯೋಗವಮಾಡುತ್ತಿದ್ದುದರ ತತ್ವವಾಗಿರುವುದು.

**ರಾ||** ಈ ರೀತಿಯಾಗಿ ಹನುಮಂತನ ಮೇಲೆ ಕುಳಿತುಕೊಂಡಿದ್ದ ಲಕ್ಷ್ಮಣನಿಗೂ ಇಂದ್ರಜಿತ್ತಿಗೂ ಘೋರವಾಗಿ ಯುದ್ಧನಡೆಯುತ್ತಿತ್ತು. ಹೀಗಿರುವಲ್ಲಿ, ಲಕ್ಷ್ಮಣನು ಸರ್ವ ಗುಣಸಂಪತ್ತುಳ್ಳ ಇಂದ್ರದೇವತಾತ್ಮಕವಾದ, ದಿವ್ಯವಾದ ಐಂದ್ರಾಸ್ತ್ರವನ್ನು ಬಿಲ್ಲಿಗೆ ಹೂಡಿ ತನ್ನ ಕಾರ್ಯಸಾಧನೆಗಾಗಿ, ಆ ಅಸ್ತ್ರವನ್ನು ಕುರಿತು "ಎಲೈ! ಮಂತ್ರಾಸ್ತ್ರವೇ! ಶ್ರೀರಾಮನು ಧರ್ಮಾತ್ಮನಾಗಿಯೂ. ಪೌರುಷದಲ್ಲಿ ಅಪ್ರತಿಮನಾಗಿಯೂ, ಸತ್ಯಸಂಧನಾಗಿಯೂ, ದಾಶರಥಿಯಾಗಿಯೂ, ಇದ್ದ ಪಕ್ಷದಲ್ಲಿ, ನೀನು ಇಂದ್ರಜಿತ್ತನ್ನು ಲಯವನ್ನೈದಿಸು" ಎಂದು ನುಡಿಯುತ್ತಾ ಅಸ್ತ್ರವನ್ನು ಅಭಿಮಂತ್ರಿಸಿ ಇಂದ್ರಜಿತ್ತಿನ ಕೊರಳಿಗೆ ಗುರಿಮಾಡಿ ಪ್ರಯೋಗಿಸಲು ಇಂದ್ರಜಿತ್ತು ಹತನಾದನು.

ತತ್ವ|| ಇಂದ್ರಜಿತ್ತನ್ನು ಶ್ರೀರಾಮನು ನಿಗ್ರಹಿಸದೆ ಲಕ್ಷ್ಮಣನೇ ನಿಗ್ರಹಿಸಲು ಕಾರಣವೇನೆಂದರೆ—ಇಂದ್ರಜಿತ್ತು ಭೋಗಶಕ್ತಿಯಷ್ಟೆ! ಭೋಗಿಸುವವನು ಅಥವಾ ಭೋಕ್ತೃವು ಯಾರೆಂದರೆ, ಮನಸ್ಸಿನ ತತ್ವವೇ ಹೊರತು ಬುದ್ಧಿಯ ತತ್ವನಲ್ಲ. ಕಾರಣವೇನೆಂದರೆ, ಬುದ್ಧಿಶಕ್ತಿಯು ಕಾರ್ಯಾಕಾರ್ಯಗಳ ವಿವೇಚನೆಮಾಡುವ ಮತ್ತು ವಸ್ತುವಿನ ಆಕಾರವಾಗುವ ಜ್ಞಾನಸ್ವರೂಪವಾದದ್ದು. ಅಂದರೆ, ಬುದ್ಧಿವೃತ್ತಿಯು ಜ್ಞಾನಶಕ್ತಿಗೆ ಸಂಬಂಧಪಟ್ಟ ಕಾರ್ಯವನ್ನು ಮಾಡುವುದು. ಮನಸ್ತತ್ವವು ಇಂದ್ರಿಯಪ್ರೇರಕವಾದ ಕ್ರಿಯಾಶಕ್ತ್ಯಾತ್ಮಕವಾದುದು. ಬುದ್ಧಿವೃತ್ತಿಯು ಪ್ರಪಂಚವರ್ತನೆಯಲ್ಲಿ ವಿಷಯಾಕಾರವಾದನಂತರ ಮನಸ್ಸು ಇಂದ್ರಿಯಪ್ರೇರಕವಾಗಿ ಕ್ರಿಯಾಸ್ವರೂಪದಿಂದ ಭೋಗಿಸುವುದು. ಆದುದರಿಂದ ಬುದ್ಧಿತತ್ವವು ಕರ್ತೃವಾಗಿಯೂ, ಮನಸ್ತತ್ವವು ಭೋಕ್ತೃವಾಗಿಯೂ ಇರುತ್ತವೆ. ಭೋಗಿಸುವವನೇ ಭೋಗಶಕ್ತಿಯನ್ನು ಹಾಳುಮಾಡಬೇಕಾಗಿರುವುದು.

ಹೇಗೆಂದರೆ---ಜ್ಞಾತೃ, ಜ್ಞಾನ, ಜ್ಞೇಯಗಳೆಂಬ ತ್ರಿಪುಟಿಯು ಬುದ್ಧಿಗೆ ಇರುವಂತೆ, ಮನಸ್ಸಿಗೂ ಭೋಕ್ತೃ, ಭೋಗ್ಯಶಕ್ತಿ ಭೋಗಪದಾರ್ಥಗಳೆಂಬ ತ್ರಿಪುಟಿಯು ಇರುವುದು ಈ ವಿಧವಾಗಿರುವುದರಿಂದ ಭೋಕ್ತೃ ಅಥವಾ ಭೋಗಿಸುವವನೇ ಭೋಗಶಕ್ತಿಯನ್ನು ನಿಗ್ರಹಮಾಡಬೇಕಾಗಿರುವ ತತ್ವವೇ ಲಕ್ಷ್ಮಣನು ಇಂದ್ರಜಿತ್ತನ್ನು ನಿಗ್ರಹಮಾಡಿದ್ದಾಗಿರುವುದು. ಹೇಗೆಂದರೆ ಭೋಕ್ತೃವು ಭೋಗ್ಯಪದಾರ್ಥವನ್ನು ಬೇಡವೆಂದು ತಿರಸ್ಕರಿಸಿದರೆ ಭೋಗಶಕ್ತಿಗೆ ಕೆಲಸವಿರುವುದಿಲ್ಲ. ಈ ತ್ರಿಪುಟಿಯನ್ನು ಅನ್ವಯಮಾಡಿಕೊಳ್ಳೋಣ.

೧. ಭೋಕ್ತೃ=ಭೋಗಿಸುವ ಮನಸ್ತತ್ವ ಅಥವಾ ಲಕ್ಷ್ಮಣ

೨. ಭೋಗಶಕ್ತಿ=ಭೋಗಪದಾರ್ಥಗಳನ್ನು ಅನುಭವಿಸಲು ಮನಸ್ಸನ್ನೆಳೆಯುವ ಭೋಗಶಕ್ತಿಯ ತತ್ವದಲ್ಲಿರುವ ಇಂದ್ರಜಿತ್ತು.

೩. ಭೋಗ್ಯಪದಾರ್ಥ=ಭೋಗಿಸುವ ಪದಾರ್ಥಗಳು.

ಈ ಮೇಲೆ ಹೇಳಿರುವ ತ್ರಿಪುಟಿಯಲ್ಲಿ ಒಂದನೆಯದಾದ ಭೋಕ್ತೃ ಅಥವಾ ಭೋಗಿಸುವವನು ೩ ನೆಯದಾದ ಭೋಗ್ಯಪದಾರ್ಥವನ್ನು ಬೇಡವೆಂದು ತಿರಸ್ಕರಿಸಿದರೆ ೨ ನೆಯದಾದ ಭೋಗಶಕ್ತಿಯು ತಟಸ್ಥವಾಗಬೇಕಾಗುವುದು. ಅಂದರೆ, ಭೋಗ್ಯಪದಾರ್ಥಗಳಲ್ಲಿ ವೈರಾಗ್ಯವುಂಟಾದರೆ, ಭೋಗಶಕ್ತಿಗೆ ಕಾರ್ಯವಿಲ್ಲದೆ ತಟಸ್ಥವಾಗುವುದು. ಭೋಗಶಕ್ತಿಯು ಸಾಧಾರಣವಾದುದಲ್ಲ. ಭೋಕ್ತೃವನ್ನು ಪ್ರಪಂಚವ್ಯಾಪಾರಸ್ವರೂಪವಾದ ಕ್ರಿಯೆಗೆ ಪ್ರಬಲವಾಗಿ ಎಳೆಯುತ್ತಲೇ ಇರುವುದು.

ಹೀಗಿರುವುದರಿಂದ ಭೋಗಶಕ್ತಿಯನ್ನು ನಿಗ್ರಹಿಸುವುದು ಕಷ್ಟವೆಂದೇ ಹೇಳಬೇಕು. ಅಂತರ್ಮುಖದ ಮಾರ್ಗವಾದ ಸಮಾಧಿಯ ಅನುಷ್ಠಾನದಿಂದಲ್ಲದೆ, ಬಾಹ್ಯವ್ಯಾಪಾರದಲ್ಲಿ ಭೋಗಶಕ್ತಿಯನ್ನು ನಿಗ್ರಹಿಸಲು ಖಂಡಿತವಾಗಿಯೂ ಸಾಧ್ಯವಿಲ್ಲ. ಬಾಹ್ಯವ್ಯಾಪಾರದಲ್ಲಿ ಇದ್ದಾಗ ಭೋಗಪದಾರ್ಥಗಳು ಬೇಡವೆಂದು ಕಾರ್ಯಗಳಲ್ಲಿ ವಿರಕ್ತಿಹುಟ್ಟಿದ್ದರೂ ಭೋಗಶಕ್ತಿಯೇ ನಿಗ್ರಹವಾದಂತಾಗಲಿಲ್ಲ. ಕಾಲೋಚಿತವಾಗಿ ತನ್ನ ಅದ್ಭುತಶಕ್ತಿಯ ಕಾರ್ಯಗಳನ್ನು ಮಾಡಲು ಮನಸ್ಸನ್ನೆಳೆಯುವುದು. ಹೀಗೆ ಅದ್ಭುತಶಕ್ತಿಯನ್ನು ಪ್ರಯೋಗಮಾಡದೆ ಇದ್ದರೂ, ಬಾಹ್ಯವ್ಯಾಪಾರಸ್ವರೂಪವೇ ಈ ತ್ರಿಪುಟಿಯ ಸ್ವರೂಪವಾದುದರಿಂದ, ಬಾಹ್ಯವ್ಯಾಪಾರದಲ್ಲಿ ಭೋಗಶಕ್ತಿಯನ್ನು ನಿಗ್ರಹಮಾಡಲು ಸಾಧ್ಯವೇ ಇಲ್ಲ.

ಆದುದರಿಂದ ಭೋಗಶಕ್ತಿಯನ್ನು ನಿಗ್ರಹಿಸಬೇಕಾದರೆ, ಲಕ್ಷ್ಮಣನು ಇಂದ್ರಜಿತ್ತನ್ನು ಹೇಗೆ ಐಂದ್ರಾಸ್ತ್ರದಿಂದ ಸಂಹರಿಸಿದನೋ ಹಾಗೆ, ಅಂತರ್ಮುಖವಾದ ಸಮಾಧಿಯ ಅಭ್ಯಾಸದಿಂದಲೇ ನಮ್ಮಲ್ಲಿರುವ ಭೋಗಶಕ್ತಿಯನ್ನು ನಿಗ್ರಹಿಸಬೇಕಾಗಿರುವುದು. ಹೇಗೆಂದರೆ, ಐಂದ್ರಾಸ್ತ್ರವೆಂದರೆ, ಇಂದ್ರಸಂಬಂಧವಾದುದು. ಭೂತತ್ವಪ್ರಧಾನವಾದ ದೇಹವುಳ್ಳವರಾದ ಮನುಷ್ಯಾದಿ ಪ್ರಾಣಿಗಳು ಭೂಮಿಯಲ್ಲಿ ವ್ಯಾಪಾರಮಾಡಿಕೊಂಡಿರುವಂತೆಯೂ, ಜಲತತ್ವಪ್ರಧಾನದೇಹಿಗಳಾದ ಜಲಚರಾದಿಗಳು ಜಲದಲ್ಲಿಯೇ ವ್ಯಾಪಾರಮಾಡಿಕೊಂಡಿರುವಂತೆಯೂ, ತೇಜಸ್ತತ್ವಪ್ರಧಾನರಾದ ದೇವತೆಗಳು ತೇಜಸ್ಸಿನೊಳಗೇ ವ್ಯಾಪಾರವುಳ್ಳವರಾಗಿರುವರು. ಆದುದರಿಂದ ಪ್ರಪಂಚವ್ಯಾಪಾರದ ಕಾರ್ಯಗಳಲ್ಲಿ ಎಳೆಯುತ್ತಿರುವ ಇಂದ್ರಜಿತ್ತಿನ ತತ್ವದಲ್ಲಿರುವ ಭೋಗಶಕ್ತಿಯನ್ನು ನಿಗ್ರಹಿಸಬೇಕಾದರೆ, ಬಹಿರ್ವ್ಯಾಪಾರದ ಕಾರ್ಯಗಳೆಲ್ಲಾ ತಟಸ್ಥವಾಗಿ ಸ್ವಪ್ನದಲ್ಲಿರುವಂತೆ ಅಂತರ್ಮುಖದ ತೇಜಸ್ಸಿನಲ್ಲಿಯೇ ನಾವು ನಿಂತುಕೊಂಡು ವ್ಯಾಪಾರಮಾಡಿದರೆ, ಬಹಿರ್ವ್ಯಾಪಾರದ ಕಾರ್ಯಗಳೆಲ್ಲಾ ನಿಲ್ಲುವುವು.

ಇದರಂತೆ ಅಧಿಕಾರಿಯು ಬಂಧತ್ರಯಗಳ ಸಹಿತವಾದ "ಓಂ"ಕಾರೋಪಾಸನೆಯಿಂದ ಸಮಾಧಿಯನ್ನು ಅಭ್ಯಾಸಮಾಡುತ್ತಾ ಬಂದು, ಒಳಗಡೆ ಗೋಚರವಾಗುವ ತೇಜಸ್ಸಿನೊಳಗೆ ಸ್ಥಿರತ್ವವನ್ನು ಯಾವಾಗ ಪಡೆಯುವನೋ ಆಗ ಬಹಿರ್ವ್ಯಾಪಾರದ ಕಾರ್ಯಗಳಿಗೆ

ಕಾರಣವಾದ ಭೋಗಶಕ್ತಿಯು ನಿಗ್ರಹವಾಗುವುದೆಂಬ ತತ್ವವೇ ಲಕ್ಷ್ಮಣನು ಇಂದ್ರಜಿತ್ತನ್ನು ನಿಗ್ರಹಿಸಲು ಐಂದ್ರಾಸ್ತ್ರವನ್ನು ಪ್ರಯೋಗಮಾಡಿದ್ದಾಗಿರುವುದು.

ಅಂದರೆ, ವಿಶ್ವ, ತೈಜಸ. ಪ್ರಾಜ್ಞರಲ್ಲಿಪ್ರಪಂಚವ್ಯಾಪಾರಕಾರ್ಯಗಳ ಸ್ವರೂಪವಾದ ವಿಶ್ವತ್ವವನ್ನು ಉಪಸಂಹಾರಮಾಡಿಕೊಂಡು, ತೈಜಸತ್ವವನ್ನು ಅಧಿಕಾರಿಯು ಸವಿಕಲ್ಪ ಸಮಾಧಿಯ ಅನುಷ್ಠಾನದಲ್ಲಿ ಪಡೆಯುವುದೇ ಲಕ್ಷ್ಮಣನು ಇಂದ್ರಜಿತ್ತನ್ನು ಐಂದ್ರಾಸ್ತ್ರದಿಂದ ಸಂಹರಿಸಿದುದಾಗಿರುವುದು. ಅಂದರೆ "ಓಂ"ಕಾರದಲ್ಲಿನ ಅಕಾರದ ತತ್ವವು "ಉ"ಕಾರ ದಲ್ಲಿ ಸೇರಿತೆಂಬ ತತ್ವವಾಗಿರುವುದು. "ಓಂ"ಕಾರದಲ್ಲಿನ "ಅ"ಕಾರವು ಮೂಲಾಧಾರ ದಲ್ಲಿಯೂ "ಉ"ಕಾರವು ಅನಾಹತಚಕ್ರದಲ್ಲಿಯೂ ಇರುವುವೆಂದೂ ಕುಂಡಲಿನೀಶಕ್ತಿಯು ಬುದ್ಧಿಮನಸ್ಸಿನ ವೃತ್ತಿಗಳೊಡನೆ ಮೂಲಾಧಾರದಿಂದ ಮೇಲಕ್ಕೆ ಚಕ್ರಗಳನ್ನು ಭೇದನೆ ಮಾಡಿಕೊಂಡು ಹೋಗುವುದೆಂದೂ, ಕುಂಭಕರ್ಣನ ವಧೆಯ ತತ್ವದಲ್ಲಿ ತೇಜಸ್ತತ್ವವಾದ ಮಣಿಪೂರಚಕ್ರಕ್ಕೆ ಮೂಲಾಧಾರದಿಂದ ಹೊರಟ ಕುಂಡಲಿನಿಯು ಸೇರಿತೆಂದೂ ವಿವರಿಸಿ ತಷ್ಟೆ ! ಈಗ ಕುಂಡಲಿನಿಯು ತೇಜಸ್ತತ್ವವಾದ ಮಣಿಪೂರಚಕ್ರವನ್ನು ಭೇದಿಸಿಕೊಂಡು ಅನಾಹತಚಕ್ರವನ್ನು ಸೇರುವ ತತ್ವವೇ "ಓಂ"ಕಾರದಲ್ಲಿನ "ಅ"ಕಾರವು "ಉ"ಕಾರದಲ್ಲಿ ಸೇರಿದ್ದಾಗಿರುವುದು. ಅನಾಹತಚಕ್ರ ಭೇದನೆಯಾದಾಗ, ಭೋಗಶಕ್ತಿಯೇ ನಿಗ್ರಹ ವಾದಂತಾಗುವುದು. ಅಂದರೆ, ಜಾಗ್ರತ್ಕಾಲದ ವ್ಯಾಪಾರಗಳು ಹೋಗಿ ಸ್ವಪ್ನದಲ್ಲಿ ನಿಂತು ಕೊಳ್ಳುವಂತೆ, ಅಧಿಕಾರಿಯು ಬಹಿರ್ವ್ಯಾಪಾರಕ್ಕೆ ಬಲವಾಗಿ ಎಳೆಯುತ್ತಿದ್ದ ಭೋಗಶಕ್ತಿ ಯನ್ನು ನಿರ್ವೀರ್ಯಮಾಡಿ, ಒಳಗೆ ಸವಿಕಲ್ಪಸಮಾಧಿಯಲ್ಲಿ ಕಾಣುವ ತೇಜಸ್ಸಿನಲ್ಲಿ ಸ್ಥಿರತ್ವ ವನ್ನು ಪಡೆದನೆಂಬ ತತ್ವವಾಗಿರುವುದು. ಈ ಮೇಲಿನ ತತ್ವಾರ್ಥಗಳೇ ಲಕ್ಷ್ಮಣನು ಐಂದ್ರಾಸ್ತ್ರದಿಂದ ಇಂದ್ರಜಿತ್ತನ್ನು ನಿಗ್ರಹಮಾಡಿದುದು.

ಲಕ್ಷ್ಮಣನು " ಎಲೈ ಮಂತ್ರಾಸ್ತ್ರವೇ, ಶ್ರೀರಾಮನು ಧರ್ಮಾತ್ಮನಾಗಿ ಪೌರುಷದಲ್ಲಿ ಅಪ್ರತಿಮನಾದ ಪಕ್ಷದಲ್ಲಿ ನೀನು ಇಂದ್ರಜಿತ್ತನ್ನು ಲಯವನ್ನೈದಿಸು " ಎಂಬದಾಗಿ ಹೇಳಿರುವ ವಾಕ್ಯದ ತತ್ವವೇನೆಂದರೆ—ಶ್ರೀರಾಮನು ಧರ್ಮಾತ್ಮನಾಗಿ ಪೌರುಷದಲ್ಲಿ ಅಪ್ರತಿಮ ನಾದ ಪಕ್ಷದಲ್ಲೆಂದರೆ—ಬುದ್ಧಿತತ್ವವು ವಿಜ್ಞಾನಸ್ವರೂಪವಾದ ದೇಹವ್ಯಾಪಾರದ ಜ್ಞಾನಕ್ಕೆ ಇಷ್ಟಪಡದೆ ನಿವೃತ್ತಿಮಾರ್ಗದಲ್ಲಿರುವುದೇ ಶ್ರೀರಾಮನು ಧರ್ಮಾತ್ಮನಾಗಿಯೂ, ಸತ್ಯಸಂಧ ನಾಗಿಯೂ ಇರುವ ತತ್ವವನ್ನು ಸೂಚಿಸುವುದು. ಪರಮಾತ್ಮನು ಸೃಷ್ಟಿಸಂಕಲ್ಪದಿಂದ ಪ್ರತಿ ಬಿಂಬಚೈತನ್ಯನೆನಿಸಿಕೊಂಡು ದಶೇಂದ್ರಿಯಗಳುಳ್ಳ ಗೋಳಕದಲ್ಲಿ ಅಭಿವ್ಯಕ್ತನಾಗುವುದೇ ದಾಶರಥಿಯೆನಿಸಿಕೊಳ್ಳುವ ತತ್ವವಾಗಿರುವುದು. ಪೌರುಷದಲ್ಲಿ ಅಪ್ರತಿಮನಾದ ಪಕ್ಷದಲ್ಲಿ ಅಂದರೆ—ಪುರುಷಾರ್ಥವಾದ ಆತ್ಮಸಾಕ್ಷಾತ್ಕಾರವನ್ನು ಪಡೆಯುವುದರಲ್ಲಿ ಬುದ್ಧಿತತ್ವವು ದೃಢವಾದ ಸಂಕಲ್ಪದಿಂದಲೂ, ಮತ್ತು ಆತ್ಮಸಾಕ್ಷಾತ್ಕಾರಕ್ಕೆ ಬೇಕಾದ ಕಾರ್ಯಗಳನ್ನು

ಅಸಮಾನವಾದ ಧೈರ್ಯದಿಂದ ನಡೆಸಿಕೊಂಡಿರುವುದೇ ಶ್ರೀರಾಮನು ಅಪ್ರತಿಮನಾಗಿರುವ ತತ್ವವಾಗಿರುವುದು. ಅಂದರೆ ಆತ್ಮಸಾಕ್ಷಾತ್ಕಾರದಲ್ಲಿ ದೃಢವಾಗಿ ಅನುಷ್ಠಾನಗಳನ್ನು ಮಾಡಿಕೊಂಡು ಯಾವುದಕ್ಕೂ ಸಮಾನವಾಗದ ಬ್ರಹ್ಮಭಾವನೆಯಲ್ಲಿಯೇ ಮಗ್ನವಾಗಿರುವ ಬುದ್ಧಿಯು ಅಧಿಕಾರಿಯಲ್ಲಿದ್ದರೆ, ಲಕ್ಷ್ಮಣನು ಇಂದ್ರಜಿತ್ತನ್ನು ವಧೆಮಾಡಿದ ವಿರಕ್ತಿ ಸೋಪಾನವು ದೊರಕುವುದೇ ಹೊರತು, ಇತರರಿಗೆ ಸಾಧ್ಯವೇ ಇಲ್ಲವೆಂಬ ತತ್ವವನ್ನು ಸೂಚಿಸುವುದು. ಅಂದರೆ ತಳೆಪಾಯದಂತಿರುವ ತೀವ್ರತಮವಾದ ಬ್ರಹ್ಮಭಾವನೆಯು ಅಧಿಕಾರಿಯಲ್ಲಿ ಇಲ್ಲದಿದ್ದರೆ ನಿಶ್ಚಯವಾದ ವಿರಕ್ತಿಯನ್ನೂ ಪಡೆಯಲಾರನೆಂಬ ತತ್ವವಾಗಿದೆ.

ಆಂಜನೇಯ, ಜಾಂಬುವಂತ, ವಿಭೀಷಣರ ಸಹಾಯದಿಂದಲೇ ಲಕ್ಷ್ಮಣನು ಇಂದ್ರಜಿತ್ತನ್ನು ಕೊಂದಿರುವನಷ್ಟೆ! ಅಂದರೆ, ಬಾಹ್ಯವ್ಯಾಪಾರಕಾರ್ಯಗಳಲ್ಲಿ ಳಿಯುವ ಭೋಗಶಕ್ತಿಯನ್ನು ನಿಗ್ರಹಿಸುವುದಕ್ಕೆ ಹನುಮಂತನ ತತ್ವದಲ್ಲಿರುವ ಶ್ವಾಸೋಚ್ಛ್ವಾಸವು ಒಂದೇ ಕಡೆ ನಿಲ್ಲುವ ಯೋಗವೂ ಬೇಕು. ಕಾರಣವೇನೆಂದರೆ, ಶ್ವಾಸೋಚ್ಛ್ವಾಸಗಳು ಸ್ವಾಧೀನಕ್ಕೆ ಬರದೆ ಮನಸ್ಸಿನ ವೃತ್ತಿಯು ಒಂದುಕಡೆ ನಿಲ್ಲಲು ಖಂಡಿತವಾಗಿಯೂ ಸಾಧ್ಯವೇ ಇಲ್ಲ. ಇದೇ ತಾತ್ಪರ್ಯಕ್ಕೆ ಶ್ರುತಿವಾಕ್ಯಗಳ ಆಧಾರಗಳನ್ನು ಕೊಟ್ಟು ಕಿಷ್ಕಿಂಧಾಕಾಂಡದಲ್ಲಿಯೇ ವಿವರಿಸಿದೆ. ಆದುದರಿಂದ, ವಿರಕ್ತಿಯು ಸಿದ್ಧಿಸಬೇಕಾದರೆ, ಯೋಗದ ಸಹಾಯವೂ ಬೇಕು. ಲಕ್ಷ್ಮಣನು ಹನುಮಂತನ ಮೇಲೆ ಕುಳಿತುಕೊಂಡು ಇಂದ್ರಜಿತ್ತಿನೊಡನೆ ಯುದ್ಧ ಮಾಡಿರುವನು. ಅಂದರೆ, ಹನುಮಂತನು ಲಕ್ಷ್ಮಣನಿಗೆ ಅಷ್ಟು ಸಹಾಯಕನಾಗಿದ್ದನೆಂದರೆ- ಸಮಾಧಿಯಲ್ಲಿ ಶ್ವಾಸೋಚ್ಛ್ವಾಸವು ಕುಂಭಕರೂಪದಲ್ಲಿದ್ದುಕೊಂಡು ಮನಸ್ಸನ್ನು ಧರಿಸಿ ಕೊಂಡಿರಬೇಕಾಗುವುದು. ಆದುದರಿಂದ ಬಂಧತ್ರಯದೊಡಗೂಡಿದ ಓಂಕಾರೋಪಾಸನೆಯ ಸಹಾಯವು ಮನಸ್ಸಿನ ವೃತ್ತಿಗೆ ಮುಖ್ಯ ಸಹಾಯವಾಗಿರುವ ತತ್ವವೇ ಹನುಮಂತನು ಲಕ್ಷ್ಮಣನಿಗೆ ಸಹಾಯಕನಾಗಿದ್ದುದಾಗಿರುವುದು.

ಅಲ್ಲದೆ ಮನಸ್ಸಿನ ವೃತ್ತಿಗೆ ವಿಭೀಷಣನ ತತ್ವದಲ್ಲಿರುವ ವಿವೇಕದ ಸಹಾಯವೂ ಚೆನ್ನಾಗಿರಬೇಕು. ಅಧಿಕಾರಿಯಲ್ಲಿ ಉತ್ತಮವಾದ ಧರ್ಮಾಚರಣೆಯಿಂದ ಗಳಿಸಲ್ಪಟ್ಟ ಪುಣ್ಯದ ಸಹಾಯವಿಲ್ಲದಿದ್ದರೆ ತನ್ನಲ್ಲಿರುವ ಬಾಹ್ಯವ್ಯಾಪಾರವನ್ನುಂಟುಮಾಡುವ ಭೋಗ ಶಕ್ತಿಯನ್ನು ನಿಗ್ರಹಿಸಲಾರನು. ಕಾರಣವೇನೆಂದರೆ, ಈ ಭೋಗಪಡುವ ವಿಚಾರದಲ್ಲಿ ಎಲ್ಲಾ ಪ್ರಾಣಿಗಳಿಗಿಂತಲೂ ಮನುಷ್ಯಜನ್ಮವೇ ಕೀಳಾಗಿರುವುದು. ಇತರ ಪ್ರಾಣಿಗಳು ಕ್ಲಿಪ್ತಕಾಲಗಳಲ್ಲಿ ಮಿತವಾಗಿ ಭೋಗಪಡುತ್ತವೆ. ಮನುಷ್ಯರು ಮಿತವಾಗಿರದೆ ಭೋಗ ಪಾಶದಿಂದ ಬದ್ಧರಾಗಿ ಪಶುಗಳಿಗಿಂತಲೂ ಕೀಳಾಗಿರುವರು. ಕಾರಣವೇನೆಂದರೆ, ಮನುಷ್ಯ ರಲ್ಲಿ ಸಕಲ ಇಂದ್ರಿಯಗಳೂ ಯೌವ್ವನಾವಸ್ಥೆಯಲ್ಲಿರುವುವೆಂದರೆ, ಚೆನ್ನಾಗಿ ಸ್ಫುರಣೆಯಲ್ಲಿ

ಇರುತ್ತವೆ. ಇದೇ ಅರ್ಥಕ್ಕೆ ಶ್ರೀಶಂಕರಭಗವತ್ಪಾದಾಚಾರ್ಯರವರು ವಿವೇಕಚೂಡಾಮಣಿಯಲ್ಲಿ,

ಶಬ್ದಾದಿಭಿಃ ಪಂಚಭಿ ರೇವಪಂಚ ಪಂಚತ್ವಮಾಪುಃ ಸ್ವಗುಣೇನಬದ್ಧಾಃ।
ಕುರಙ್ಗಮಾತಙ್ಗ ಪತಙ್ಗ ಮೀನಭೃಙ್ಗಾಃ ನರಃ ಪಂಚಭಿರಂಚಿತಃ ಕಿಂ॥

ತಾ॥ ಬೇಟೆಗಾರನ ಗಾನಸ್ವರದಿಂದ ಜಿಂಕೆಯೂ, ಹೆಣ್ಣಾನೆಯ ಸ್ಪರ್ಶದಿಂದ ಮದ್ದಾನೆಯೂ, ದೀಪದ ಬೆಳಕಿನಿಂದ ಮಿಡತೆಯೂ, ಗಾಳದಲ್ಲಿರುವ ಅನ್ನದಿಂದ ಮೀನೂ, ಜೇನಿನ ಆಶೆಯಿಂದ ದುಂಬಿಯೂ ನಾಶವಾಗುವುವು. ಒಂದೊಂದು ಇಂದ್ರಿಯದ ಪೆಟ್ಟಿಗೇ ತಡಯಲಾರದೆ ಈ ಜಂತುಗಳು ಹಾಳಾಗುವಲ್ಲಿ, ಎಲ್ಲಾ ಇಂದ್ರಿಯಗಳ ಹೊಡೆತಕ್ಕೂ ಸಿಕ್ಕಿರುವ ಮನುಷ್ಯನು ಕೆಡುತ್ತಾನೆಂಬುದರಲ್ಲಿ ಆಶ್ಚರ್ಯವೇನು ? ಎಂದು ಹೇಳಿರುವರು.

ಅಂದರೆ, ಮನುಷ್ಯನಿಗೆ ಸಕಲೇಂದ್ರಿಯಗಳ ಹೊಡೆತವೂ ಚೆನ್ನಾಗಿ ಸ್ಫುರಣೆಯಲ್ಲಿ ಇರುವುದೆಂಬ ತತ್ವವಾಗಿರುವುದು. ಈ ರೀತಿಯಾಗಿ ಸಕಲೇಂದ್ರಿಯಗಳ ಹೊಡೆತವೂ ಮನುಷ್ಯನಲ್ಲಿ ಯೌವ್ವನಾವಸ್ಥೆಯಲ್ಲಿದ್ದರೂ, ರತ್ನಪ್ರಾಯವಾದ ಜ್ಞಾನಾಂಕುಶವು ಎಲ್ಲಾ ಪ್ರಾಣಿಗಳಿಗಿಂತಲೂ ಮನುಷ್ಯನಲ್ಲಿ ಅಮೋಘವಾಗಿರುವುದು. ಇಂತಹ ಜ್ಞಾನಾಂಕುಶವನ್ನು ಮನುಷ್ಯನು ಪಡೆದಿರುವುದು ಇಂದ್ರಿಯಗಳ ನಿಗ್ರಹಕ್ಕಲ್ಲದೆ ಇಂದ್ರಿಯಗಳ ಅನುವರ್ತಿಯಾಗಿ ಪ್ರವರ್ತಿಸಿ ಅದರಲ್ಲೇ ಮಗ್ನವಾಗಿರುವುದಕ್ಕೆಂದಿಗೂ ಅಲ್ಲ. ಇಂದ್ರಿಯಗಳಿಗೆ ಅಡಿಯಾಳಾಗಿದ್ದರೆ ಮನುಷ್ಯನೆಂಬ ಹೆಸರೇ ಸಲ್ಲದು.

ಇಂತಹ ಅದ್ಭುತವಾದ ಭೋಗಶಕ್ತಿಯನ್ನು ನಿಗ್ರಹಿಸಬೇಕಾದರೆ ವಿರಕ್ತಿಯೊಡನೆ ಸಮಾಧಿಯ ಅಭ್ಯಾಸದಿಂದಲ್ಲದೆ ಬಹಿರ್ಮುಖವಾಗಿ ಪ್ರಪಂಚವ್ಯಾಪಾರದಲ್ಲಿರುವಾಗ ಖಂಡಿತವಾಗಿಯೂ ಅಸಾಧ್ಯ. ಕಾರಣವೇನೆಂದರೆ ನಮ್ಮಲ್ಲಿರುವ ಅಜ್ಞಾನಸ್ವರೂಪವಾದ ಮಾಯಾಬಲೆಯು ಸಮಾಧಿಯ ಅಭ್ಯಾಸವನ್ನು ಮಾಡಗೊಡಿಸದೆ ಬಹಿರ್ಮುಖಕ್ಕೆ ಬಲವಾಗಿ ಎಳೆಯುತ್ತಿರುವಲ್ಲಿ ಬಹಿರ್ಮುಖದಲ್ಲಿಯೇ ಇದ್ದಾಗ ಭೋಗಶಕ್ತಿಯು ಖಂಡಿತವಾಗಿಯೂ ನಿಗ್ರಹವಾಗುವುದಿಲ್ಲ. ಅಲ್ಲದೆ, ಪ್ರಪಂಚವ್ಯಾಪಾರದಲ್ಲಿ ಧರ್ಮಮಾರ್ಗವನ್ನು ಅನುಸರಿಸಿಕೊಂಡಿರುವಾಗ ಭೋಗಶಕ್ತಿಯ ಉಲ್ಬಣವು ತಗ್ಗಿರುವುದೇ ಹೊರತು ಭೋಗಶಕ್ತಿಯೇ ನಿಗ್ರಹವಾಗುವುದಿಲ್ಲ. ಆದುದರಿಂದ ವಿರಕ್ತಿ, ವಿವೇಕ, ಯೋಗಗಳು ಭೋಗಶಕ್ತಿಯನ್ನು ನಿಗ್ರಹಿಸಲು ಅವಶ್ಯಕವಾಗಿ ಬೇಕು. ಇದೇ ಅರ್ಥಕ್ಕೆ ಶ್ರೀಶಂಕರಭಗವತ್ಪಾದಾಚಾರ್ಯರವರು ವಿವೇಕಚೂಡಾಮಣಿ ೩೭೬ನೆಯ ಶ್ಲೋಕದಲ್ಲಿ,

ಅತ್ಯನ್ತ ವೈರಾಗ್ಯವತಸ್ಸಮಾಧಿಃ ಸಮಾಹಿತಸ್ಯೈವ ದೃಢಪ್ರಬೋಧಃ।
ಪ್ರಬುದ್ಧತತ್ವಸ್ಯ ಹಿ ಬನ್ಧಮುಕ್ತಿ ರ್ಮುಕ್ತಾತ್ಮನೋ।
ನಿತ್ಯಸುಖಾನುಭೂತಿಃ॥

ತಾ|| ಸಂಪೂರ್ಣವಾದ ವೈರಾಗ್ಯವುಳ್ಳ ಮುಮುಕ್ಷುವಿಗೆ ಸಮಾಧಿಯ ಅನುಷ್ಠಾನದ ಯೋಗ್ಯತೆ ಬರುವುದು. ಹಾಗೆ ಸಮಾಧಿಪರನಾದ ಯೋಗಿಗೇ ದೃಢತರಾತ್ಮಜ್ಞಾನವು ಸಿದ್ಧಿಸುವುದು. ದೃಢತರಾತ್ಮಜ್ಞಾನವುಳ್ಳವನಿಗೇ ಸಂಸಾರಬಂಧನದಿಂದ ಬಿಡುಗಡೆ ಯಾಗುವುದು. ಸರ್ವ ಬಂಧವಿಮುಕ್ತನಾದವನಿಗೇ ನಿತ್ಯಸುಖಾನುಭವವು ಸಿದ್ಧಿಸುವುದು ಎಂದು ಹೇಳಿರುವರು.

ಈ ಮೇಲಿನ ಶ್ಲೋಕದಲ್ಲಿ ಹೇಳಿರುವಂತೆ, ಅತ್ಯಂತ ವೈರಾಗ್ಯ ಮತ್ತು ಯೋಗ ಗಳೆರಡೂ ಭೋಗಶಕ್ತಿಯನ್ನು ನಿಗ್ರಹಿಸಲು ಅವಶ್ಯಕವಾಗಿರುವುವು. ಆದುದರಿಂದ, ಲಕ್ಷ್ಮಣನಿಗೆ ವಿಭೀಷಣ, ಹನುಮಂತ, ಮುಂತಾದವರ ಸಹಾಯವು ಆವಶ್ಯಕವಾಗಿ ಬೇಕಾಯಿತು. ಅಲ್ಲದೆ, ತೀವ್ರವೈರಾಗ್ಯದಿಂದ ಸಮಾಧಿಯನ್ನು ಅಭ್ಯಾಸಮಾಡಿ ಭೋಗ ಶಕ್ತಿತತ್ವದವನಾದ ಇಂದ್ರಜಿತ್ತನ್ನು ಲಕ್ಷ್ಮಣನು ಕೊಂದುದರಿಂದ ಶ್ರೀರಾಮನು ರಾವಣ ನನ್ನು ಕೊಲ್ಲಲು ಸುಲಭವಾಯಿತು. ಈ ತತ್ವದ ವಿಚಾರವು ಮುಂದಿನ ಪ್ರಕರಣದಲ್ಲಿ ಬರುವುದು.

ಆದುದರಿಂದ ಬಾಹ್ಯಪ್ರಪಂಚದಲ್ಲಿದ್ದಾಗ ಭೋಗಶಕ್ತಿಯನ್ನು ನಿಗ್ರಹಮಾಡಲು ಸಾಧ್ಯವೇ ಇಲ್ಲ. ನಮಗೆ ಜನ್ಮಜನ್ಮಾಂತರಗಳಿಂದ ಕಾಮಿನೀ ಕಾಂಚನಸ್ವರೂಪವಾದ ಭೋಗವಿಷಯಗಳ ವಾಸನೆಯು ರೂಢಮೂಲವಾಗಿರುವುದು. ಭೋಗಪಡುವುದರಲ್ಲಿ ಮನುಷ್ಯನಿಗೂ ಇತರ ಪ್ರಾಣಿಗಳಿಗೂ ಯಾವ ಭೇದವೂ ಇರುವುದಿಲ್ಲವೆನ್ನುವುದಕ್ಕೆ "ಆಹಾರ ನಿದ್ರಾ ಭಯ ಮೈಥುನಂಚ ಸಾಮಾನ್ಯಮೇತತ್ಪಶುಭಿರ್ನರಾಣಾಂ" ಎಂಬ ಶ್ರೀಕೃಷ್ಣಪರಮಾತ್ಮನ ವಾಕ್ಯವನ್ನು ಅಕ್ಷಕುಮಾರನ ನಿಗ್ರಹದ ಪ್ರಕರಣದಲ್ಲಿ ಒರೆದಿರುವು ದಷ್ಟೆ! ಆದುದರಿಂದ ಮನುಷ್ಯಜನ್ಮವೆತ್ತಿಯೂ ವಿರಕ್ತಿಯನ್ನು ಹೊಂದಿ ಸಮಾಧಿಯ ಅಭ್ಯಾಸಮಾಡಿ, ಜ್ಞಾನವಂತನಾಗದಿದ್ದರೆ ಮರಹುಟ್ಟಿ ಮರವಾಗಿ ನಶಿಸಿದಂತಾಗುವುದು. ಈ ಭೋಗಶಕ್ತಿಯ ಪ್ರಭಾವದ ಬಂಧನದಿಂದಲೇ ಪ್ರಪಂಚವ್ಯವಹಾರರೂಪವಾದ ಜನ್ಮ ಪರಂಪರೆಗಳೂ ಬರುವುವು. ಇಂತಹ ಪ್ರಬಲವಾದ ಭೋಗಶಕ್ತಿಯನ್ನು ಕ್ರಮೇಣ ನಿಗ್ರಹಿಸಿ ಕೊಂಡು ಬರಲು ರಾಜರ ಸಹಾಯದಿಂದ ಧರ್ಮಮಾರ್ಗದ ನಿಬಂಧನೆಯಲ್ಲಿ ಸಕಲರೂ ಇರಬೇಕೆಂದು ಮಹರ್ಷಿಗಳು ವಿಧಾಯಕಮಾಡಿದ್ದ ಧರ್ಮಮಾರ್ಗಗಳು ಕಾಡುಪಾಲಾಗಿವೆ. ದಿವಸವನ್ನು ಪರಮಾತ್ಮನಿಂದ ಪ್ರಾರಂಭಮಾಡಿ, ದಿವಸದ ವ್ಯಾಪಾರಗಳನ್ನು ಪರಮಾತ್ಮ ಸಂಬಂಧದಿಂದಲೇ ಮಾಡಿ, ದಿವಸವನ್ನು ಪರಮಾತ್ಮಸಂಬಂಧದಿಂದಲೇ ಕಳೆಯಬೇಕೆಂಬ ಕಟ್ಟಳೆಗಳು ನಷ್ಟವಾಗುತ್ತ ಜಿಹ್ವೋಪಸ್ಥೆಗಳ ಕಾರ್ಯಕ್ಕಾಗಿಯೇ ದಿನವು ಪ್ರಾರಂಭವಾಗಿ ಆ ಕಾರ್ಯದಲ್ಲಿಯೇ ದಿನವನ್ನು ಕಳೆಯುವ ಕಾಲ ಪ್ರಾಪ್ತಿಯಾಗಿರುವುದು.

ಸ್ವಾಭಾವಿಕವಾಗಿ ಚಂಚಲವಾಗಿರುವ ಕೋತಿಗೆ ಮದ್ಯವನ್ನು ಕುಡಿಸಿ ಅನಂತರ ಚೇಳಿನಿಂದಲೂ ಕಚ್ಚಿಸಿದರೆ ಆ ಕೋತಿಯ ಸ್ವಭಾವವು ಹೇಳುವುಕ್ಕಾಗುವುದಿಲ್ಲವಷ್ಟೆ! ಇದರಂತೆ ನಮ್ಮ ಮನಸ್ಸಿಗೆ ಭೋಗಪದಾರ್ಥಗಳ ಸಲಕರಣೆಗಳನ್ನು ಹೆಚ್ಚಿಸಿಕೊಡುತ್ತ ಬಂದರೆ, ಪರಿಣಾಮದಲ್ಲಿ ದುಃಖರೂಪವಾಗಿರುವ ಪ್ರಪಂಚದ ಬಂಧನವೆಂದಿಗೂ ತಪ್ಪುವುದಿಲ್ಲ. ಈ ಭೋಗದ ಸಲಕರಣೆಗಳನ್ನು ಅಭಿವೃದ್ಧಿಮಾಡಿದರೆ, ಜನಗಳಿಗೆ ಶ್ರೇಯಸ್ಸುಂಟಾಗಲಾರದೆಂದು ಮಹರ್ಷಿಗಳು ಭೋಗೋಪಕರಣಗಳನ್ನು ಅಭಿವೃದ್ಧಿಪಡಿಸಲಿಲ್ಲ. ಈಗಿನ ಕಾಲದಲ್ಲಿ ರಾವಣ, ಇಂದ್ರಜಿತ್ತುಗಳ ತತ್ವಗಳಿಗೆ ಪ್ರಭುತ್ವ ಬಂದು, ವಿಚಿತ್ರವಾದ ಭೋಗೋಪಕರಣಗಳ ಪ್ರದರ್ಶನದಿಂದ ಜನರು ಬಂಧಿಸಲ್ಪಟ್ಟವರಾಗಿ, ಭೋಗ್ಯವಸ್ತುಗಳಿಗೆ ದಾಸಾನುದಾಸರಾಗಿರುವುದು ಅಧಿಕವಾಗಿದೆ. ಪೂರ್ವದ ಮಹನೀಯರು, ಮೋಕ್ಷದ ಗುರಿಯನ್ನು ಅನುಸರಿಸಿ ಧರ್ಮ, ಅರ್ಥ, ಕಾಮಗಳ ತರಗತಿಗಳನ್ನು ಮಾಡಿದ್ದರು. ಈಗ ಧನವೇ ಪ್ರಧಾನವಾಗಿ ಧನವೇ ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು ಕೊಡುವ ಕಾಲಬಂದಿರುವುದು. ಅಂದರೆ ಧರ್ಮಮಾರ್ಗದ ತತ್ವವೇ ನಶಿಸಿಹೋಗಿರುವುದು.

ಪ್ರಪಂಚದ ಅನುವರ್ತಿಗಳೂ, ಅಲ್ಲದೆ ಮೋಕ್ಷಮಾರ್ಗದಲ್ಲಿರುವವರೂ ಭೋಗಲಂಪಟತ್ವವನ್ನು ಅಗತ್ಯವಾಗಿ ಬಿಡಲೇಬೇಕಾದುದು ಮುಖ್ಯ ಕರ್ತವ್ಯವಾಗಿರುವುದು. ಭೋಗಲಂಪಟತ್ವವು ಸಕಲ ವಿಧದಲ್ಲಿಯೂ ಮನುಷ್ಯನನ್ನು ನಾಶಮಾಡುವುದು. ಭೋಗಲಂಪಟಕ್ಕೆ ಒಳಗಾಗದೆ ದೇಹಧಾರಣೆಗೆ ಅತ್ಯವಶ್ಯಕವಾದ ಸಲಕರಣೆಗಳನ್ನು ಮಾಡಿಕೊಳ್ಳುವುದು ಅಗತ್ಯವಾದ ಕರ್ತವ್ಯವಾಗಿದೆ. ಮೋಕ್ಷಮಾರ್ಗದಲ್ಲಿ ಇರುವವರಂತೂ ಪರಲೋಕಗಳ ಭೋಗಸುಖವೆಂದರೆ, ಇಂದ್ರಪದವಿಯೇ ಮುಂತಾದ ಸುಖಗಳಲ್ಲಿಯೂ ಇಹಲೋಕದ ಭೋಗಸುಖವೆಂದರೆ, ಏಕಚ್ಛತ್ರಾಧಿಪತ್ಯದ ರಾಜಾಧಿರಾಜರ ಪದವಿಯಿಂದ ಕೊನೆಯ ಸೋಪಾನದವರೆಗಿರುವ ಸುಖಗಳನ್ನೂ ತುಚ್ಛವೆಂದೂ, ನಶ್ವರವೆಂದೂ, ವಿವೇಕದಿಂದ ದೃಢೀಕರಿಸಿಕೊಳ್ಳುತ್ತಾ ಅದನ್ನು ಸ್ವಾನುಭವದಲ್ಲಿ ಆಚರಣೆಗೆ ತರುತ್ತಾ, ತೀವ್ರವಾದ ವಿರಕ್ತಿಯೊಡನೆ ಸಮಾಧಿಯ ಅಭ್ಯಾಸಮಾಡಿ ತಮ್ಮಲ್ಲಿರುವ ಭೋಗಶಕ್ತಿಯನ್ನು ನಿಗ್ರಹಮಾಡಿಕೊಳ್ಳಬೇಕು. ಇದೇ ತಾತ್ಪರ್ಯಕ್ಕೆ ಮುಕ್ತಿಕೋಪನಿಷತ್ತಿನಲ್ಲಿ ಶ್ರೀರಾಮಚಂದ್ರನೇ ಹನುಮಂತನಿಗೆ ಉಪದೇಶಮಾಡಿರುವುದೇನೆಂದರೆ:—

ಜನ್ಮಾಂತರಶತಾಭ್ಯಸ್ತಾ ಮಿಥ್ಯಾಸಂಸಾರವಾಸನಾ ।
ಸಾ ಚಿರಾಭ್ಯಾಸಯೋಗೇನ ವಿನಾ ನಕ್ಷೀಯತೆ ಕ್ವಚಿತ್ ॥
ತಸ್ಮಾತ್ಸರ್ವಪ್ರಯತ್ನೇನ ಪೌರುಷೇಣ ವಿವೇಕಿನಾ ।
ಭೋಗೇಚ್ಛಾಂ ದೂರತಸ್ತ್ಯಕ್ತ್ವಾ ತ್ರಯಮೇವಸಮಾಶ್ರಯ ॥

ತಾ|| ಮಿಥ್ಯೆಯಾದ ಭೋಗಸ್ವರೂಪವಾದ ಸಂಸಾರವಾಸನೆಯು ಜನ್ಮಾಂತರಗಳಿಂದ ಅನುಸರಿಸಿಬಂದಿರುವುದು. ಚಿರಕಾಲ ಯೋಗಾಭ್ಯಾಸವಿಲ್ಲದೆ ಹೋಗಲಾರದು. ಆದುದರಿಂದ ವಿವೇಕಿಯಾದ ಪುರುಷನು ಭೋಗೇಚ್ಛೆಯನ್ನು ಪರಿತ್ಯಜಿಸುವುದೆಂದರೆ—ವಿರಕ್ತನಾಗಿ ವಾಸನಾಕ್ಷಯ, ಮನೋನಾಶ, ತತ್ವಜ್ಞಾನಗಳನ್ನಾಶ್ರಯಿಸಬೇಕು. ಅಂದರೆ, ಬ್ರಹ್ಮಭಾವನೆಯಿಂದ, ಸಮಾಧಿಯ ಅನುಷ್ಠಾನಮಾಡಿ ಆತ್ಮಸಾಕ್ಷಾತ್ಕಾರವನ್ನು ಪಡೆಯಬೇಕೆಂದು ಹೇಳಿರುವನು. ಈ ಮೇಲಿನ ಶ್ರುತಿವಾಕ್ಯವು ಲಕ್ಷ್ಮಣನಿಗೆ ವಿಭೀಷಣ, ಹನುಮಂತ ಮುಂತಾದವರೆಲ್ಲರೂ ಸಹಾಯಮಾಡಿದ ತತ್ವವನ್ನೂ ಒಳಗೊಂಡಿರುವುದರಿಂದ ಅತ್ಯಂತ ಮುದ್ದಾಗಿ ಹೋಲಿಕೆಯಾಗಿದೆ.

ರಾವಣನಿಗೆ ಮಗನಾಗಿಯೂ, ರಾಕ್ಷಸರಿಗೆ ಯುವರಾಜನಾಗಿಯೂ ಇರುವ ಇಂದ್ರಜಿತ್ತನ್ನು ನಿಗ್ರಹಿಸಲು ಅತ್ಯಂತ ಕಷ್ಟವಾಯಿತು. ಮತ್ತೊಬ್ಬರಿಗೆ ವೈರಾಗ್ಯಸ್ವರೂಪವನ್ನು ಬೋಧೆಮಾಡಬಹುದು. ಬಾಯಲ್ಲಿ ವೈರಾಗ್ಯದ ಮಾತುಗಳಾಡಬಹುದು. ಸ್ವಾನುಭವಕ್ಕೆ ತಂದುಕೊಳ್ಳುವುದು ಕಠಿಣತಮವೆಂದೇ ಹೇಳಬೇಕು. ಯಾವ ಮಹಾನುಭಾವನು ಲಕ್ಷ್ಮಣನ ತತ್ವದಂತೆ ತೀವ್ರತಮವಾದ ವೈರಾಗ್ಯವನ್ನು ಹೊಂದಿ, ಬಂಧತ್ರಯದೊಡಗೂಡಿದ "ಓಂ" ಕಾರೋಪಾಸನೆಯಿಂದ ಸಮಾಧಿಯ ಅಭ್ಯಾಸವನ್ನು ಮಾಡಿ, ತನ್ನಲ್ಲಿರುವ ಭೋಗಶಕ್ತಿಯನ್ನು ನಿಗ್ರಹಮಾಡಿಕೊಳ್ಳುವನೋ, ಅವನೇ ಮೋಕ್ಷಸಾಮ್ರಾಜ್ಯವನ್ನನುಭವಿಸುವ ಧೀರನೆಂದು ಹೇಳಬೇಕು.

ಈ ಭೋಗಶಕ್ತಿಯ ಪಾಶದಿಂದ ಬಿಡಿಸಿಕೊಳ್ಳುವುದೆಂದರೆ, ಬಾಹ್ಯಪ್ರಪಂಚದ ಕಡೆಗೆ ವಿರಕ್ತರಾಗಲು ಸಮಾಧಿಯ ಅಭ್ಯಾಸವನ್ನು ಮಾಡುವವರೇ ಅತ್ಯಂತ ವಿರಳ. ಆದುದರಿಂದ ವೈರಾಗ್ಯವೂ, ತೀವ್ರತಮವಾದ ಮೋಕ್ಷೇಚ್ಛೆಯೂ, ಕ್ರಮಾನುಷ್ಠಾನಗಳೂ ಇದ್ದಲ್ಲಿ ಫಲದೊರೆಯುವುದೇ ಹೊರತು, ಇಲ್ಲದಿದ್ದರೆ ಖಂಡಿತವಾಗಿಯೂ ಲಭಿಸುವುದಿಲ್ಲ. ಶ್ರೀಮದ್ರಾಮಾಯಣದಲ್ಲಿ ಇಂದ್ರಜಿತು ಮತ್ತು ಲಕ್ಷ್ಮಣರ ಯುದ್ಧವನ್ನು ೭-೮ ಅಧ್ಯಾಯಗಳಲ್ಲಿ ವರ್ಣಿಸಿರುವರು. ಅಂದರೆ, ಭೋಗಶಕ್ತಿಯನ್ನು ನಿಗ್ರಹಿಸುವುದು ಅಷ್ಟು ಕಷ್ಟವೆಂದು ತಿಳಿದುಕೊಳ್ಳಬೇಕು. ಇದೇ ಅರ್ಥಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೮೦ನೆಯ ಶ್ಲೋಕದಲ್ಲಿ,

ವಿಷಯಾಶಾ ಮಹಾಪಾಶಾ ದ್ಯೋವಿಮುಕ್ತಃ ಸುದುಸ್ತ್ಯಜಾತ್ |
ಸ ಏವ ಕಲ್ಪತೇ ಮುಕ್ತ್ಯೈ ನಾನ್ಯಃ ಷಟ್ಶಾಸ್ತ್ರವೇದ್ಯಪಿ ||

ತಾ|| ಬಿಡಿಸಿಕೊಳ್ಳುವುದಕ್ಕೆ ಆಗದ, ವಿಷಯಾಶೆ ಎಂಬ ಮಹಾಪಾಶದಿಂದ ಯಾವನು ಬಿಡಲ್ಪಡುತ್ತಾನೋ, ಅವನೇ ಮುಕ್ತಿಗೆ ಅರ್ಹನಲ್ಲದೆ ಮತ್ತೊಬ್ಬನು ಆರು ಶಾಸ್ತ್ರಗಳನ್ನು ಪಠಿಸಿದವನಾದಾಗ್ಯೂ ಮುಕ್ತಿಗೆ ಅರ್ಹನಲ್ಲವು. ಎಂದು ಹೇಳಿರುವರು.

ಆದುದರಿಂದ ಭವಬಂಧನದ ಬಿಡುಗಡೆಯಲ್ಲಿ ನೆಟ್ಟ ಮನಸ್ಸಿನವನು ಬ್ರಹ್ಮಭಾವನೆ ಮತ್ತು ವೈರಾಗ್ಯದೊಡನೆ ಶಾಸ್ತ್ರವಿಧಿಯಂತೆ ಅನುಷ್ಠಾನಮಾಡಿಕೊಂಡು, ಬಂಧತ್ರಯ ದೊಡಗೂಡಿದ "ಓಂ"ಕಾರೋಪಾಸನೆಯಿಂದ ಸಮಾಧಿಯ ಅಭ್ಯಾಸಮಾಡಿ, ಪ್ರಬಲ ವಾದ ಅವಿದ್ಯೆಯ ಭೋಗಶಕ್ತಿಯನ್ನು ನಿಗ್ರಹಿಸಬೇಕೆಂಬುದೇ ಈ ಪ್ರಕರಣದ ಮುಖ್ಯ ತತ್ವವಾಗಿರುವುದು.

## ೨೪ನೆಯ ಪ್ರಕರಣ.

**ಇಂದ್ರಜಿತ್ತನ್ನು ಕೊಂದುದಕ್ಕಾಗಿ ಶ್ರೀರಾಮನು ಲಕ್ಷ್ಮಣನನ್ನು ಆಲಿಂಗನೆ ಮಾಡಿಕೊಂಡುದು.**



**ವೈರಾಗ್ಯದ ಶ್ರೇಷ್ಠತೆಯ ವಿಚಾರ.**

**ರಾ||** ಲಕ್ಷ್ಮಣನು ಇಂದ್ರಜಿತ್ತನ್ನು ಜಯಿಸಿ ಶ್ರೀರಾಮನಿದ್ದೆಡೆಗೆ ಬರಲು, ಶ್ರೀರಾಮನು ಲಕ್ಷ್ಮಣನನ್ನು ತನ್ನ ತೊಡೆಯಮೇಲೆ ಕೂರಿಸಿಕೊಂಡು, ಲಜ್ಜಾಭಾವದಿಂದ ತಲೆಬಾಗಿಸಿ ಕೊಂಡಿದ್ದ ಆತನ ಶಿರಸ್ಸನ್ನು ಮೇಲಕ್ಕೆತ್ತಿ ಬ್ರಹ್ಮರಂಧ್ರಪ್ರದೇಶವನ್ನು ಆಘ್ರಾಣಿಸಿ, ತಕ್ಕೈಸಿ ಕೊಂಡು ಘಾಯಪಡೆದು ನೊಂದು ನಿಟ್ಟುಸುರುಬಿಡುತ್ತಿದ್ದ ಆತನನ್ನು ಕುರಿತು "ಎಲೈ ಲಕ್ಷ್ಮಣನೆ! ಲೋಕದಲ್ಲಿ ಯಾರಿಗೂ ಸಾಧ್ಯವಲ್ಲದ ಸಾಹಸಕೃತ್ಯವನ್ನು ಮಾಡಿ ನೀನು ಇಂದ್ರಜಿತ್ತನ್ನು ಜಯಿಸಿದಮೇಲೆ ನಮ್ಮ ಕಾರ್ಯವು ಜಯಪ್ರದವಾಯಿತೆಂದೇ ತಿಳಿಯಬೇಕು. ವಿಭೀಷಣನೂ ಹನುಮಂತನೂ ಅತಿಸಾಹಸವನ್ನು ಮಾಡಿರುತ್ತಾರೆ. ಇನ್ನು ನಾನೊಬ್ಬನೇ ರಾವಣನನ್ನು ಯಮಲೋಕಕ್ಕೆ ಕಳುಹಿಸುವೆನು" ಎಂದು ಹೇಳಿದನು.

**ತತ್ವ||** ಶ್ರೀರಾಮನು ಲಕ್ಷ್ಮಣನ ಸಾಹಸಕೃತ್ಯಕ್ಕಾಗಿ ಸಂತೋಷಪಟ್ಟು ಅವನನ್ನು ಆಲಿಂಗನಮಾಡಿಕೊಂಡಿರುವ ತತ್ವವು ವೈರಾಗ್ಯದ ಶ್ರೇಷ್ಠತೆಯನ್ನು ಸೂಚಿಸುವುದು. ಹನುಮಂತ ಮುಂತಾದವರು ಅತಿ ಸಾಹಸವನ್ನು ಮಾಡಿದರೆಂದರೆ—ಭೋಗಶಕ್ತಿಯನ್ನು ನಿಗ್ರಹಿಸುವುದಕ್ಕೆ ಯೋಗವು ಅತ್ಯವಶ್ಯಕವೆಂಬುದು ಸೂಚಿತವಾಗುವುದು. ಹನುಮಂತನ ಕಾರ್ಯದ ತತ್ವವಾದ ಪ್ರಾಣಾಯಾಮ ಮತ್ತು ಮುದ್ರೆಗಳ ಶ್ರೇಷ್ಠತೆಯನ್ನು ಸುಂದರಕಾಂಡ ದಿಂದಲೂ ತಿಳಿಸಿಕೊಂಡು ಬರುತ್ತಿದೆ.

ಅಲ್ಲದೆ ಲಕ್ಷ್ಮಣನ ತತ್ವದಲ್ಲಿರುವ ಶ್ರೇಷ್ಠವಾದ ವೈರಾಗ್ಯದ ವಿಚಾರವನ್ನು ಮೋಕ್ಷದ ಅಧಿಕಾರಿಲಕ್ಷಣದ ಪ್ರಕರಣದಿಂದಲೂ ತಿಳಿಸಿಕೊಂಡು ಬಂದಿರುವುದು. ಶ್ರೀರಾಮನಿಗೆ ಲಕ್ಷ್ಮಣನ ಸಹಾಯವು ಪ್ರಧಾನವಾಗಿರುವಂತೆ, ಮೋಕ್ಷವನ್ನು ಪಡೆಯಬೇಕೆಂಬ ಅಧಿ ಕಾರಿಯ ಬುದ್ಧಿಗೆ ವಿರಕ್ತಿಯು ಅಸಮಾನ ಸಹಾಯವಾಗಿರುವುದು. ವಿಷಯಗಳಲ್ಲಿ ವಿರಕ್ತಿ

ಯಿಲ್ಲದಿದ್ದರೆ, ಬುದ್ಧಿವೃತ್ತಿಯು ಧ್ಯೇಯಾಕಾರವನ್ನು ಧರಿಸಿ ಸಮಾಧಿಯ ಅಭ್ಯಾಸಮಾಡಲು ಖಂಡಿತವಾಗಿಯೂ ಸಾಧ್ಯವಿಲ್ಲ ಧ್ಯಾನಮಾಡಲು ಕುಳಿತುಕೊಂಡಾಗ ಮನಸ್ಸಿಗೆ ಯಾವುದಾದರೂ ವಿಷಯಚಿಂತನೆಯಿದ್ದಲ್ಲಿ ಧ್ಯಾನದ ಕಾರ್ಯವು ಸರ್ವಾತ್ಮನಾ ನಡೆಯದೆ ಬಹಿರ್ಮುಖವಾಗಲೇ ಬೆ ಕಾಗುವುದು.

"ಮನಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ"

ಎಂಬ ಶ್ರುತಿವಾಕ್ಯದ ತಾತ್ಪರ್ಯದಂತೆ ವಿಷಯಗಳಲ್ಲಿ ವಿರಕ್ತಿಯಿಂದಿರುವ ಮನಸ್ಸಾದರೆ ಲಕ್ಷ್ಮಣನು ಶ್ರೀರಾಮನ ಅನುವರ್ತಿಯಾಗಿರುವಂತೆ ಮೋಕ್ಷಕ್ಕೆ ಕಾರಣವಾಗುವುದು. ಹಾಗಲ್ಲದೆ ವಿಷಯಗಳ ಕಾರ್ಯಪ್ರವರ್ತನೆಯಲ್ಲಿಯೇ ಇದ್ದರೆ ಬಂಧನಕ್ಕೆ ಕಾರಣವಾಗುವುದು. ಇದರಂತೆ ಬುದ್ಧಿವೃತ್ತಿಯು ವಿಜ್ಞಾನಸ್ವರೂಪವಾದ ಪ್ರಪಂಚಾಕಾರದ ಜ್ಞಾನದಲ್ಲಿದ್ದರೆ ಬಂಧಕವೆನಿಸಿಕೊಳ್ಳುವುದು. ಸಮಾಧಿಯ ಧ್ಯೇಯಸ್ವರೂಪಾಕಾರದಲ್ಲಿಯೇ ಮುಳುಗುತ್ತಾ ಬಂದರೆ ಆತ್ಮಸಾಕ್ಷಾತ್ಕಾರವಾಗುವುದು. ಆದುದರಿಂದ ಆತ್ಮಸಾಕ್ಷಾತ್ಕಾರಕ್ಕೆ ವಿರಕ್ತಿಯೂ ಬೋಧವೆಂದರೆ ಜ್ಞಾನವೂ ಸಮಾನವಾದ ಸಹಾಯಗಳಾಗಿರುತ್ತವೆ. ಈ ತತ್ವಾರ್ಥಕ್ಕೆ ಅನುಸಾರವಾಗಿ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೩೭೫ನೆಯ ಶ್ಲೋಕದಲ್ಲಿ,

ವೈರಾಗ್ಯ ಬೋಧೌ ಪುರುಷಸ್ಯ ಪಕ್ಷವ |
ತ್ಪಕ್ಷೌ ವಿಜಾನೀಹಿ ವಿಚಕ್ಷಣ ತ್ವಂ ||
ವಿಮುಕ್ತಿಸೌಧಾಗ್ರ ಲತಾಧಿರೋಹಣಂ |
ತಾಭ್ಯಾಂವಿನಾ ನಾನ್ಯತರೇಣ ಸಿಧ್ಯತಿ ||

ತಾ|| "ಎಲೈ ಚತುರನಾದ ಶಿಷ್ಯನೆ! ಆಕಾಶದಲ್ಲಿ ಹಾರಾಡುವ ಹಕ್ಕಿಗಳಿಗೆ ಎರಡು ರೆಕ್ಕೆಗಳು ಸಹಾಯವಾಗಿರುವ ಹಾಗೆ, ಮುಮುಕ್ಷುವಾದವನು ಮುಕ್ತಿಮಂದಿರದ ಮಹಡಿಯನ್ನು ಹತ್ತಬೇಕಾದರೆ ವಿಷಯಗಳಲ್ಲಿ ವಿರಕ್ತಿಯೂ, ಜ್ಞಾನವೂ ಸಮಾನ ಸಹಾಯಗಳಾಗಿರುತ್ತವೆ. ಒಂದು ರೆಕ್ಕೆಯಿಂದ ಹಕ್ಕಿಯು ಹೇಗೆ ಹಾರಲಾರದೋ ಹಾಗೆಯೇ ಮುಮುಕ್ಷುವು ಕೇವಲ ಆತ್ಮಜ್ಞಾನದಿಂದಾಗಲಿ, ವಿರಕ್ತಿಯಿಂದಾಗಲಿ ಮುಕ್ತಿಯನ್ನು ಪಡೆಯಲಾರನು. ಎಂದು ಹೇಳಿರುವರು. ಆದುದರಿಂದ ರಾಮಲಕ್ಷ್ಮಣರು ಯಾವ ರೀತಿಯಿದ್ದರೋ ಅದರಂತೆ ಮುಮುಕ್ಷುವಾದ ಯೋಗಿಯು ವಿರಕ್ತಿ ಜ್ಞಾನಗಳೆರಡನ್ನೂ ಸಂಪಾದಿಸಿ ಮೋಕ್ಷವನ್ನು ಪಡೆದು ಕೃತಕೃತ್ಯನಾಗಬೇಕು.

ಇಂದ್ರಜಿತ್ತನ್ನು ಜಯಿಸಿದ ಮೇಲೆ ನಮ್ಮ ಕಾರ್ಯವು ಜಯಪ್ರದವಾಯಿತೆಂದೇ ತಿಳಿಯಬೇಕೆಂದೂ, ಇನ್ನು ರಾವಣನನ್ನು ನಾನೊಬ್ಬನೇ ಯಮಲೋಕಕ್ಕೆ ಕಳುಹಿಸುವೆ

ನೆಂದೂ ಶ್ರೀರಾಮನು ಲಕ್ಷ್ಮಣನೊಡನೆ ಹೇಳಿದುದರ ತಾತ್ಪರ್ಯವೇನೆಂದರೆ—ಇಂದ್ರಜಿತ್ತಿನ ತತ್ವವೇ ಬಾಹ್ಯವ್ಯಾಪಾರಸ್ವರೂಪ. ಇಂದ್ರಜಿತ್ತಿನ ಪ್ರಬಲವಾದ ಯುದ್ಧದ ಶಕ್ತಿಗಳೇ ಬಾಹ್ಯದಲ್ಲಿ ನಡೆಯುವ ಭೋಗಶಕ್ತಿಯ ಉಲ್ಬಣದ ವ್ಯಾಪಾರಗಳು. ಬಹಿರ್ವ್ಯಾಪಾರ ಸ್ವರೂಪವಾಗಿರುವ ಜಾಗ್ರದವಸ್ಥೆಯನ್ನು ಉಪಸಂಹಾರಮಾಡಿಕೊಂಡು, ಸ್ವಪ್ನಾವಸ್ಥೆಯ ಸದೃಶಕ್ಕೆ ಬಂದು ಸವಿಕಲ್ಪಕ ಸಮಾಧಿಯ ತೇಜಸ್ಸಿನಲ್ಲಿ ನಿಲ್ಲುವುದೇ ಇಂದ್ರಜಿತ್ತನ್ನು ನಿಗ್ರಹಮಾಡಿದ ತತ್ವವಾಗಿರುವುದು. ಸಮಾಧಿಯಲ್ಲಿ ಸ್ವಪ್ನಸದೃಶವಾದ ಅವಸ್ಥೆಯನ್ನು ಬಿಟ್ಟು ಸುಷುಪ್ತಿ ಸದೃಶವಾದ ಅವಸ್ಥೆಯನ್ನು ಪಡೆದರೆ ರಾವಣನ ತತ್ವದಲ್ಲಿರುವ ವಾಸನಾ ವೃತ್ತಿಯೂ ನಿಗ್ರಹವಾಗುವುದು.

ಸ್ವಪ್ನಾವಸ್ಥೆಯ ವ್ಯಾಪಾರವು ಜಾಗ್ರದವಸ್ಥೆಯಲ್ಲಿದ್ದ ವ್ಯಾಪಾರದಂತೆ ಇರುವುದಿಲ್ಲ. ಸ್ವಪ್ನಾವಸ್ಥೆಯಲ್ಲಿ ಒಳಗಿರುವ ತೇಜಸ್ಸಿನೊಳಗೆ ಸಂಕಲ್ಪರೂಪದಿಂದ ಬುದ್ಧಿವೃತ್ತಿಯಲ್ಲಿ ಮಾತ್ರ ವ್ಯಾಪಾರ ನಡೆಯುವುದು. ಸ್ವಪ್ನಾವಸ್ಥೆಯಲ್ಲಿ ಬುದ್ಧಿವೃತ್ತಿಯಲ್ಲಿಯೂ ಸಂಕಲ್ಪ ರೂಪದಿಂದ ನಡೆಯುವ ವ್ಯಾಪಾರಕ್ಕೆ ವಾಸನಾವೃತ್ತಿಯು ಕಾರಣ. ಆದುದರಿಂದ ಸ್ವಪ್ನಾವಸ್ಥೆಯಲ್ಲಿ ನಮ್ಮೊಳಗಿರುವ ತೇಜಸ್ಸಿನೊಳಗೆ ಸಂಕಲ್ಪರೂಪದಿಂದ ಬುದ್ಧಿವೃತ್ತಿಯಲ್ಲಿ ಮಾತ್ರ ವ್ಯಾಪಾರ ನಡೆಯುವುದು. ಸ್ವಪ್ನಾವಸ್ಥೆಯಲ್ಲಿ ಬುದ್ಧಿವೃತ್ತಿಯಲ್ಲಿಯೂ ಸಂಕಲ್ಪ ರೂಪದಿಂದ ನಡೆಯುವ ವ್ಯಾಪಾರಕ್ಕೆ ವಾಸನಾವೃತ್ತಿಯು ಕಾರಣ. ಆದುದರಿಂದ, ಸ್ವಪ್ನಾವಸ್ಥೆಯಲ್ಲಿ ವಾಸನಾವೃತ್ತಿ ಮತ್ತು ಬುದ್ಧಿತತ್ವಗಳೆರಡೇ ಇರುವಂತೆ, ಇಂದ್ರಜಿದ್ವಧೆ ಯಾದನಂತರ ರಾಮ ರಾವಣರಿಬ್ಬರೇ ಯುದ್ಧಮಾಡುವರು. ಆದುದರಿಂದ ಸ್ವಪ್ನಸದೃಶ ವಾದ ಸಮಾಧಿಸ್ಥಿತಿಯಲ್ಲಿ ಸ್ಥಿರತ್ವವನ್ನು ಪಡೆಯಬೇಕಾದರೆ, ಬಾಹ್ಯವ್ಯಾಪಾರಕ್ಕೆಳೆಯುವ ಪ್ರಬಲವಾದ ಭೋಗಶಕ್ತಿಯನ್ನು ನಿಗ್ರಹಿಸುವ ಕಾರ್ಯವಾಗಬೇಕು. ಈ ಕಾರ್ಯವನ್ನು ಶ್ರೀರಾಮನಿಗೆ ಸಹಾಯಕನಾಗಿ ಲಕ್ಷ್ಮಣನು ಮಾಡಿಕೊಟ್ಟಿರುವುದರಿಂದ, ಸ್ವಪ್ನಾವಸ್ಥೆಯ ಸದೃಶವನ್ನು ಬುದ್ಧಿವೃತ್ತಿಯೊಂದೇ ಉಪಸಂಹಾರಮಾಡಿಕೊಳ್ಳುವುದು ಮಾತ್ರ ಉಳಿಯು ವುದೇ, ಶ್ರೀರಾಮನು ತಾನೊಬ್ಬನೇ ರಾವಣನನ್ನು ನಿಗ್ರಹಿಸುವೆನೆಂದು ಹೇಳಿದ ತತ್ವವಾಗಿದೆ.

ಈ ಮೇಲಿನ ತಾತ್ಪರ್ಯಗಳಂತೆ, ವೈರಾಗ್ಯವು "ಅತ್ಯಂತ ಸಹಾಯಕವಾದುದರಿಂದಲೇ ಶ್ರೀರಾಮನು ಲಕ್ಷ್ಮಣನ ಬ್ರಹ್ಮರಂಧ್ರವನ್ನಾಘ್ರಾಣಿಸಿ ಆಲಿಂಗನೆಮಾಡಿಕೊಂಡದ್ದಾಗಿದೆ.

## ೨೫ನೆಯ ಪ್ರಕರಣ.

| | |
|---|---|
| **ಯುವರಾಜನಾದ ಇಂದ್ರಜಿತ್ತಿಗಾಗಿ ರಾವಣನು ಪ್ರಲಾಪಿಸಿದುದು.** | **ಅವಿದ್ಯಾಶಕ್ತಿಯ ಮಹಿಮೆಗಳಲ್ಲಿ ಭೋಗಶಕ್ತಿಯು ಪ್ರಧಾನತ್ವ.** |

**ರಾ||** ಇಂದ್ರಜಿತ್ತಿನ ವಧೆಯನ್ನು ಕೇಳಿ ರಾವಣನು ಬಹಳ ಹೊತ್ತು ಮೂರ್ಛೆ ಯಿಂದಿದ್ದು ಸ್ವಲ್ಪ ಚೇತರಿಸಿಕೊಂಡು, "ಹಾ ! ವತ್ಸಾ ! ಹಾ ! ಮಹಾರಥಾ ! ದೇವೇಂದ್ರ

ನನ್ನೇ ಜಯಿಸಿ ಬಂದ ನೀನು ಮನುಷ್ಯನಾದ ಲಕ್ಷ್ಮಣನಿಂದ ಹತನಾದೆಯಲ್ಲಾ ! ಲಂಕೆಗೆ ಯುವರಾಜನಾದ ಇಂದ್ರಜಿತ್ತು ಹತನಾದನೆಂಬ ವಾರ್ತೆಕೇಳಿದೊಡನೆ ದೇವತೆಗಳೂ, ಋಷಿಗಳೂ, ಬ್ರಾಹ್ಮಣರೂ ಅತ್ಯಂತ ಹರ್ಷಪಟ್ಟು ನಿರಾತಂಕದಿಂದ ಸುಖನಿದ್ರೆಹೋಗುವರಲ್ಲವೆ! ಅವರ ಸಂತೋಷವನ್ನು ನೋಡಿ ನಾನು ಹೇಗೆ ಸಹಿಸಲಿ ? ಅಯ್ಯೋ! ನಾನೇನು ಮಾಡಲಿ! ಆ ಇಂದ್ರಜಿತ್ತೊಬ್ಬನು ಇಲ್ಲದಿರುವುದರಿಂದ ಪ್ರಪಂಚವೇ ಶೂನ್ಯವಾಗಿರುತ್ತೆಂದು ಪ್ರಲಾಪಿಸುತ್ತಿದ್ದನು.

**ತತ್ವ||** ಈ ಮೇಲಿನ ರಾವಣನ ಪ್ರಲಾಪದಿಂದ ಮತ್ತು ಇಂದ್ರಜಿತ್ತಿನ ನಾಲ್ಕು ಯುದ್ಧಪ್ರಕರಣಗಳ ತತ್ವಗಳಿಂದ ಭೋಗಶಕ್ತಿಯು ಅದ್ಭುತವಾದುದೆಂದು ನಿಸ್ಸಂದೇಹವಾಗಿ ಸ್ಪಷ್ಟವಾಗುವುದು. ಅವಿದ್ಯೆಯ ರಾಜ್ಯಕ್ಕೆ ಯುವರಾಜನಾಗುವುದು ಸಾಮಾನ್ಯವೇ? ದೇವತೆಗಳಿಗೊಡೆಯನಾದ ಇಂದ್ರನಿಂದಲೇ ಇಂದ್ರಜಿತ್ತನ್ನು ಜಯಿಸಲು ಸಾಧ್ಯವಾಗಲಿಲ್ಲವೆಂದರೆ ದೇವತೆಗಳೂ ಕೂಡ ನಮ್ಮಂತೆಯೇ ಭೋಗಪಡುವವರೇ ವಿನಾ ಭೋಗಪಾಶದಿಂದ ನಿವೃತ್ತರಲ್ಲ. ದೇವೇಂದ್ರನಿಂದಲೇ ಜಯಿಸಲಸಾಧ್ಯನಾದ ಭೋಗಶಕ್ತಿಯ ತತ್ವದವನಾದ ಇಂದ್ರಜಿತ್ತು ಮನುಷ್ಯನಾದ ಲಕ್ಷ್ಮಣನಿಂದ ನಿಗ್ರಹಿಸಲ್ಪಟ್ಟನೆಂದರೆ—ರತ್ನಪ್ರಾಯವಾದ ವಿವೇಕ ಮತ್ತು ಜ್ಞಾನಶಕ್ತಿಗಳ ಹೆಚ್ಚಿಗೆಯಿಂದ ಮನುಷ್ಯನೆಂಬ ನಾಮಧೇಯವನ್ನು ಪಡೆದಿರುವ ಮಾನವನ ವಿರಕ್ತಿ ಮತ್ತು ಆತ್ಮಭಾವನೆಗಳಿಂದಲೇ ಈ ಭೋಗಶಕ್ತಿಯನ್ನು ನಿಗ್ರಹಿಸಲು ಸಾಧ್ಯವೇ ಹೊರತು, ದೇವತೆಗಳಿಂದಾಗಲೀ, ಗಂಧರ್ವರಿಂದಾಗಲೀ, ಯಕ್ಷರಿಂದಾಗಲೀ ಪಶುಪಕ್ಷ್ಯಾದಿ ಚರಾಚರ ಪ್ರಾಣಿಗಳಿಂದಾಗಲೀ, ಸಾಧ್ಯವೇ ಇಲ್ಲ. ಆದುದರಿಂದಲೇ ಬ್ರಹ್ಮಲೋಕಪರ್ಯಂತರವೂ ಭೋಗದ ಪುಣ್ಯವಿದ್ದಷ್ಟು ದಿನ ಅನುಭವಿಸಿ,

"ಕ್ಷೀಣೇಪುಣ್ಯೇ ಮರ್ತ್ಯಲೋಕಂ ವಿಶಂತಿ"

ಮತ್ತು

"ಆಬ್ರಹ್ಮ ಭುವನಾಲ್ಲೋಕಾಃ ಪುನರಾವರ್ತಿ ನೋಽರ್ಜುನ"

ಎಂಬ ಶ್ರುತಿ ಮತ್ತು ಗೀತಾವಾಕ್ಯಗಳಂತೆ ಪುನಃ ಭೂಲೋಕಕ್ಕೆ ಇಳಿಯಲೇ ಬೇಕಾಗುವುದು. ಆದುದರಿಂದ ಅವಿದ್ಯೆಯ ಯುವರಾಜನಾಗಿ ಭೋಗಶಕ್ತಿಯ ತತ್ವದಲ್ಲಿರುವ ಇಂದ್ರಜಿತ್ತನ್ನು ಪ್ರಥಮದಲ್ಲಿ ಜಯಿಸಿ, ಅನಂತರ ವಾಸನಾವೃತ್ತಿಯ ತತ್ವದಲ್ಲಿರುವ ರಾವಣನನ್ನು ಜಯಿಸಬೇಕು. ವಾಸನಾವೃತ್ತಿಯೇ ಮೂಲಕಾರಣವಾಗಿರುವಂತೆ ರಾವಣನೇ ಮೂಲಪುರುಷನು. ವಾಸನಾವೃತ್ತಿಯಿದ್ದರೇನೆ ವಾಸನಾವಿಷಯಗಳ ಕಾರ್ಯನಡೆಯುವುದು. ಅಂದರೆ, ದೇವತೆಗಳೂ ವಾಸನಾಮಯ ದೇಹವುಳ್ಳವರು ಮತ್ತು ಭೋಗಶಕ್ತಿಗೆ ಕಟ್ಟುಬಿದ್ದಿರುವರು. ಆದಕಾರಣ, ಮನುಷ್ಯನು ಪ್ರಥಮದಲ್ಲಿ ಭೋಗಶಕ್ತಿಯನ್ನು ನಿಗ್ರಹಿಸಿ

ಕೊಂಡು ಅನಂತರ ವಾಸನಾವೃತ್ತಿಯನ್ನು ನಿಗ್ರಹಮಾಡಬೇಕಾಗಿರುವ ತತ್ವವನ್ನು ಅನುಸರಿಸಿಯೇ ಶ್ರೀಮದ್ರಾಮಾಯಣದಲ್ಲಿ ಇಂದ್ರಜಿತ್ತಿನ ವಧೆಯಾದನಂತರ ರಾವಣನ ವಧೆ ನಡೆದಿರುವುದು. ಈ ತತ್ವಾರ್ಥಕ್ಕನುಸಾರವಾಗಿ ಶ್ರೀಶಂಕರಭಗವತ್ಪಾದರವರು ಕೂಡ ವಿವೇಕಚೂಡಾಮಣಿ ೩೧೮ನೆಯ ಶ್ಲೋಕದಲ್ಲಿ,

ಕ್ರಿಯಾನಾಶೇ ಭವೇಚ್ಚಿಂತಾನಾಶೋ ಸ್ಮಾ ದ್ವಾಸನಾಕ್ಷಯಃ |
ವಾಸನಾಪ್ರಕ್ಷಯೊ ಮೋಕ್ಷಃ ಸಾ ಜೀವನ್ಮುಕ್ತಿರಿಷ್ಯತೆ ||

ತಾ|| ರೂಪ ರಸಾದಿ ವಿಷಯಗಳನ್ನು ಅನುಭವಿಸುವ ಕ್ರಿಯಾದಿಗಳು ನಾಶವುಂಟಾದರೆ, ವಿಷಯಗಳನ್ನು ಅನುಭವಿಸುವ ಅಥವಾ ಭೋಗಿಸುವ ಚಿಂತೆಯು ನಾಶವಾಗುವುದು. ಹೀಗೆ ಭೋಗಿಸುವ ಚಿಂತೆಯನ್ನುಂಟುಮಾಡುವ ಭೋಗಶಕ್ತಿಯು ನಾಶವಾದರೆ ವಾಸನಾವೃತ್ತಿಯು ನಾಶವಾಗುವುದು. ವಾಸನಾವೃತ್ತಿಯು ನಾಶವಾದರೆ ಬಂಧನಿವೃತ್ತಿಯಾಗುವುದು. ಈ ಬಂಧನಿವೃತ್ತಿಯೇ ಜೀವನ್ಮುಕ್ತಿ ಸ್ವರೂಪವೆಂದು ಹೇಳಲ್ಪಡುವುದು. ಎಂದು ಹೇಳಿರುತ್ತಾರೆ.

ಈ ಮೇಲಿನ ಶ್ಲೋಕದಲ್ಲಿ ವಿಷಯಾದಿಗಳನ್ನು ಅನುಭವಿಸುವ ಕ್ರಿಯೆಯನ್ನುಂಟುಮಾಡುವ ಇಂದ್ರಜಿತ್ತನ್ನು ನಿಗ್ರಹಿಸಿದರೆ, ಇಂದ್ರಜಿತ್ತಿನಿಂದುಂಟಾದ ಚಿಂತೆಯು ನಾಶವಾಗುವುದು. ಅನಂತರ ವಾಸನಾವೃತ್ತಿರೂಪವಾದ ರಾವಣನ ನಿಗ್ರಹವಾಗುವುದು. ರಾವಣನ ನಿಗ್ರಹವಾದರೆ ಬಂಧನಿವೃತ್ತಿಯಾಗುವ ತತ್ವವೂ ಬರುವುದು.

ಮೇಲೆ ವಿವರಿಸಿರುವಂತೆ ವಾಸನಾವೃತ್ತಿಗೆ ಎರಡನೆಯದಾಗಿರುವ ಭೋಗಕ್ರಿಯಾತತ್ವದವನಾಗಿದ್ದ ಇಂದ್ರಜಿತ್ತಿನ ವಧೆಗೆ ರಾವಣನು ಅತ್ಯಂತ ಪ್ರಲಾಪಮಾಡಿದ್ದಾಗಿರುವುದು. ಇಂತಹ ಅವಿದ್ಯಾಪ್ರಧಾನಶಕ್ತಿಗಳನ್ನು ನಿಗ್ರಹಮಾಡಿ ವಿದ್ಯಾಸಾಧ್ಯವಾದ ಮೋಕ್ಷಪದವಿಯನ್ನು ಪಡೆಯಲು ಮನುಷ್ಯನೊಬ್ಬನಿಂದಲ್ಲದೆ ದೇವತೆಗಳು ಮೊದಲಾಗಿ ಇತರರಿಂದ ಸಾಧ್ಯವಿಲ್ಲ. "ಜನ್ತೂನಾಂ ನರಜನ್ಮ ದುರ್ಲಭಂ" ಎಂಬ ಪ್ರಮಾಣದಂತೆ ನರಜನ್ಮಬರುವುದೇ ದುರ್ಲಭವು. ಇಂತಹ ಜನ್ಮವನ್ನು ಪಡೆದಿರುವಾಗ ತಮ್ಮಲ್ಲಿರುವ ಅವಿದ್ಯೆಯನ್ನು ನಿಗ್ರಹಿಸುವುದಕ್ಕೆ ಮನುಷ್ಯರು ಅಗತ್ಯವಾಗಿ ಪ್ರಯತ್ನಮಾಡಬೇಕಾದುದು ಕರ್ತವ್ಯವಾಗಿದೆ.

ಇಂದ್ರಜಿತ್ತು ವಧಿಸಲ್ಪಟ್ಟನೆಂದು ಕೇಳಿದೊಡನೆ ಋಷಿಗಳೂ, ಬ್ರಾಹ್ಮಣರೂ, ಅತ್ಯಂತ ಹರ್ಷದಿಂದ ನಿರಾತಂಕವಾಗಿ ಸುಖನಿದ್ರೆಯನ್ನು ಮಾಡುವರು. ನಾನಿದನ್ನು ಹೇಗೆ ಸೈರಿಸಲಿ? ಎಂಬದಾಗಿ ರಾವಣನು ದುಃಖಪಟ್ಟ ತತ್ವವೇನೆಂದರೆ—ಬ್ರಾಹ್ಮಣ್ಯಕ್ಕೂ ಮುನಿವೃತ್ತಿಗೂ, ಋಷಿತ್ವಕ್ಕೂ ಈ ಭೋಗಶಕ್ತಿಯು ಪರಮಶತ್ರುವು. ದೇವತ್ವ, ಬ್ರಾಹ್ಮಣ್ಯದ ತತ್ವಗಳನ್ನು ನಾಶಮಾಡುವುದೇ ವಿಷಯಲಂಪಟರೂಪವಾದ ಭೋಗಶಕ್ತಿಯಾಗಿರುವುದು.

ವಿಷಯಲಂಪಟತ್ವದಲ್ಲಿ ವಿರಕ್ತಿ ಬಂದವರಿಗೆ ಮಾತ್ರ, ತೃಪ್ತಿಯೆಂಬ ಸುಖವಿರುವುದು. ಇಂತಹವರೇ ನಿರಾತಂಕವಾಗಿ ಆತ್ಮನಿಷ್ಠೆಯಲ್ಲಿ ಸುಖನಿದ್ರೆಗೈಯ್ಯುವರು. ಇದೇ ಅರ್ಥದ ಸೂಚನೆಯ ತತ್ವವೇ ರಾವಣನ ಪ್ರಲಾಪದ ತತ್ವವಾಗಿರುವುದು. ಆದುದರಿಂದ ನಿಶ್ಚಯವಾಗಿಯೂ ಸತ್ಕರ್ಮ ಸದಾಚಾರಗಳಲ್ಲಿರಬೇಕೆಂಬುವವರೂ ಮೋಕ್ಷಕಾಮಿಗಳೂ, ವಿಷಯಲಂಪಟತ್ವವನ್ನು ತ್ಯಜಿಸಬೇಕಾದುದು ಪ್ರಥಮ ಕರ್ತವ್ಯವಾಗಿರುವುದು. ವಿಷಯ ಲಂಪಟತ್ವವನ್ನು ತ್ಯಜಿಸಬೇಕೆಂಬ ತತ್ವಕ್ಕೆ ಶ್ರೀಕೃಷ್ಣಪರಮಾತ್ಮನು ಉತ್ತರಗೀತೆಯಲ್ಲಿ,

ಪೃಥಿವ್ಯಾಂ ಯಾನಿಭೂತಾನಿ ಜಿಹ್ವೋಪಸ್ಥನಿಮಿತ್ತಕಂ ।
ಜಿಹ್ವೋಪಸ್ಥಪರಿತ್ಯಾಗೀ ಪೃಥಿವ್ಯಾಂ ಕಿಂಪ್ರಯೋಜನಂ ॥

ತಾ|| ಪ್ರಪಂಚದಲ್ಲಿರುವ ಎಲ್ಲಾ ಪ್ರಾಣಿಗಳೂ ಜಿಹ್ವೋಪಸ್ಥಗಳ ಪ್ರಯೋಜನದ ಕಾರ್ಯಗಳಲ್ಲಿ ಬಂಧಿಸಲ್ಪಟ್ಟಿರುತ್ತವೆ. ಜಿಹ್ವೋಪಸ್ಥಗಳ ವಿಷಯಲಂಪಟತ್ವವಿಲ್ಲದ ವಿರಕ್ತನಾಗಿರುವವನಿಗೆ ಪ್ರಪಂಚದಿಂದ ಏನೂ ಪ್ರಯೋಜನವಿಲ್ಲ, ಎಂದು ಹೇಳಿರುವನು.

ವಿರಕ್ತಿಯನ್ನು ಸಿದ್ಧಿಸಿಕೊಳ್ಳುವುದು ಕಷ್ಟ. ಇಂದ್ರಜಿತ್ತನ್ನು ನಿಗ್ರಹಿಸಿದ ಲಕ್ಷ್ಮಣನನ್ನು ಶ್ರೀರಾಮನು ಪ್ರೀತಿಯಿಂದ ಆಲಿಂಗನೆಮಾಡಿಕೊಂಡ ಮತ್ತು ರಾವಣನು ಇಂದ್ರಜಿತ್ತಿಗೋಸ್ಕರ ಪ್ರಲಾಪಿಸಿದ ತತ್ವಗಳಿಂದ, ಭೋಗಶಕ್ತಿಯನ್ನು ನಿಗ್ರಹಿಸುವುದು ಕಷ್ಟವೆಂಬುದು ಸ್ಪಷ್ಟವಾಗುವುದು. ಈ ಭೋಗಶಕ್ತಿಯು ಅಸಾಧಾರಣ ಶಕ್ತಿಯುಳ್ಳದ್ದೆಂಬ ತಾತ್ಪರ್ಯಕ್ಕೆ ಅಗಸ್ತ್ಯರು ಉತ್ತರಕಾಂಡದಲ್ಲಿ ಶ್ರೀರಾಮನನ್ನು ಕುರಿತು "ಅಯ್ಯಾ ರಾಮ! ರಾವಣನನ್ನು ಕೊಂದದ್ದು ಮಹತ್ತಿನದಲ್ಲ. ಕುಂಭಕರ್ಣಾದಿ ರಾಕ್ಷಸರೆಲ್ಲರನ್ನೂ ಕೊಂದದ್ದೂ ಹೆಚ್ಚಿನದಲ್ಲ. ಖರದೂಷಣಾದಿಗಳನ್ನು ಕೊಂದದ್ದೂ ದೊಡ್ಡದಲ್ಲ. ಆ ಇಂದ್ರಜಿತ್ತು ಒಬ್ಬನನ್ನು ಧ್ವಂಸಮಾಡಿರುವುದೊಂದೇ ನಿನ್ನ ಚರಿತ್ರೆಯಲ್ಲೆಲ್ಲಾ ಶ್ಲಾಘನೀಯವಾದುದಯ್ಯಾ!" ಎಂಬದಾಗಿ ಹೇಳಿರುವಾಗ, ಭೋಗಶಕ್ತಿಯ ಮಹತ್ತು ಎಂಥಾದ್ದೆಂಬುದನ್ನು ಸರ್ವರೂ ಯೋಚಿಸಿಕೊಳ್ಳಲಿ. ಇಂತಹ ಭೋಗಶಕ್ತಿಯನ್ನು ಕೊಂದ ಮನಸ್ಸತ್ವದಲ್ಲಿರುವ ಲಕ್ಷ್ಮಣನಿಗೆ, ಅಂದರೆ ವಿರಕ್ತಿಗೆ ಸಾಷ್ಟಾಂಗನಮಸ್ಕಾರಮಾಡಿ ಮುಂದಿನ ಕಥೆಯನ್ನು ಪ್ರಾರಂಭಿಸುವೆನು.



## ೨೬ ನೆಯ ಪ್ರಕರಣ.

ರಾವಣನು ತನ್ನ ಅಷ್ಟಘಂಟಾಶಕ್ತಿಯಿಂದ ಲಕ್ಷ್ಮಣನನ್ನು ಮೂರ್ಛೆಗೊಳಿಸಿದುದು. ಹನುಮಂತನು ಅಮೃತಸಂಜೀವಿನಿಯನ್ನು ತಂದು ಲಕ್ಷ್ಮಣನನ್ನು ಎಚ್ಚರಗೊಳಿಸಿದುದು.

ಘೋರವಾದ ವಾಸನಾವೃತ್ತಿಯನ್ನು ಮನಸ್ಸು ತಡೆಯಲಾರದೆಂಬ ವಿಚಾರ. ಸಮಾಧಿಯಲ್ಲಿ ಮನಸ್ಸನ್ನು ಬಳಲಿಸುವುದನ್ನು ಹೋಗಲಾಡಿಸಲು ಜಾಲಂಧರಮುದ್ರೆಯೊಡನೆ "ಓಂ" ಕಾರೋಪಾಸನೆಯನ್ನು ಮಾಡಬೇಕೆಂಬ ವಿಚಾರ.

**ರಾ||** ಯಾವಾಗ ಕುಂಭಕರ್ಣ, ಅತಿಕಾಯ, ಇಂದ್ರಜಿತ್ತು ಮೊದಲಾದ ಪ್ರಮುಖರೆಲ್ಲರೂ ಹತರಾದರೋ, ಆಗ ರಾವಣನಿಗೆ ಅತ್ಯಂತ ದುಃಖವುಂಟಾಯಿತು. ಈ ದುಃಖವು ಕ್ರಮೇಣ ಶತ್ರುಗಳ ಮೇಲೆ ಕೋಪಹುಟ್ಟುವಂತೆ ಮಾಡಿದುದರಿಂದ ಯುದ್ಧಕ್ಕೆ ಹೊರಟನು.

ಹೀಗೆ ಯುದ್ಧಕ್ಕೆ ಬಂದ ರಾವಣನು ತನ್ನೆದುರಿಗೆ ಸಿಕ್ಕಿದ ತನ್ನ ತಮ್ಮನಾದ ವಿಭೀಷಣನನ್ನು ಕೊಲ್ಲಲೇಬೇಕೆಂದು ಅನೇಕ ಕ್ರೂರಬಾಣಗಳನ್ನು ಪ್ರಯೋಗಮಾಡಿದನು. ಹೀಗೆ ರಾವಣನಿಂದ ಬಂದ ಅಸ್ತ್ರಗಳನ್ನೆಲ್ಲಾ ಲಕ್ಷ್ಮಣನು ಖಂಡಿಸುತ್ತಾ ಬಂದನು.

**ತತ್ವ||** ರಾವಣನು ವಿಭೀಷಣನ ಮೇಲೆ ಬಾಣಪ್ರಯೋಗಮಾಡಿದ ತತ್ವವೇನೆಂದರೆ ರಾವಣನು ಅಧರ್ಮದ ತತ್ವದವನು. ವಿಭೀಷಣನು ಧರ್ಮಮಾರ್ಗದ ತತ್ವದವನು. ಪ್ರಪಂಚವ್ಯವಹಾರದಲ್ಲಿ ಜ್ಞಾತಿಗಳಂತೆ ಧರ್ಮಾಧರ್ಮಗಳು ಪ್ರತಿದೆಂದ್ವಗಳಾಗಿರುವುವು. ಕೆಲವು ಕಾಲ ಅಧರ್ಮದ ಮಾರ್ಗವು ಧರ್ಮಮಾರ್ಗಕ್ಕಿಂತ ಮೇಲಾಗಬಹುದು. ಕೆಲವು ಕಾಲ ಧರ್ಮಮಾರ್ಗವು ಅಧರ್ಮಕ್ಕಿಂತ ಮೇಲಾಗಬಹುದು. ಹೀಗಾದರೂ ಗುಣಗಳ ದ್ವಂದ್ವಸ್ವರೂಪವಾದ ಈ ಪ್ರಪಂಚವ್ಯಾಪಾರದಲ್ಲಿ ಧರ್ಮಮಾರ್ಗವೇ ಏಕಪ್ರಕಾರವಾಗಿ ಎಂದಿಗೂ ನಡೆಯುವುದಿಲ್ಲ. ಆದುದರಿಂದ ಮೋಕ್ಷಮಾರ್ಗಕ್ಕೆ ಪ್ರವೇಶಿಸುವ ಪರ್ಯಂತರ ನಡೆವಳಿಕೆಗಳು ಧರ್ಮಾಧರ್ಮಗಳ ಮಿಶ್ರವಾಗಿಯೇ ಇರುವುವು. ಧರ್ಮಾಧರ್ಮಗಳಿಗೆ ವೈಷಮ್ಯವಿರುವುದರಿಂದ, ಅಧರ್ಮದಿಂದ ಧರ್ಮಕ್ಕೆ ತೊಂದರೆಯುಂಟಾಗುವ ಕಾಲದಲ್ಲಿ ಮನಸ್ಸು ಧರ್ಮಮಾರ್ಗಕ್ಕೆ ಸಹಾಯಕವಾಗಿರುವ ತತ್ವವೇ ರಾವಣನು ವಿಭೀಷಣನ ಮೇಲೆ ಬಿಟ್ಟ ಬಾಣಗಳನ್ನು ಲಕ್ಷ್ಮಣನು ಖಂಡಿಸುತ್ತಿದ್ದ ತತ್ವವಾಗಿರುವುದು.

**ರಾ||** ವಿಭೀಷಣನ ಮೇಲೆ ಬಿಟ್ಟ ಬಾಣಗಳನ್ನು ಲಕ್ಷ್ಮಣನು ಖಂಡಿಸುವುದನ್ನು ನೋಡಿ ರಾವಣನಿಗೆ ಕೋಪಬಂದು, ಅಮೋಘವಾದ ತನ್ನ ಅಷ್ಟಘಂಟಾಶಕ್ತಿಯನ್ನು ಅಭಿಮಂತ್ರಿಸಿ ಲಕ್ಷ್ಮಣನ ಮೇಲೆ ಬಿಟ್ಟನು.

**ತತ್ವ||** ರಾವಣನು ವಿಕ್ಷೇಪ ಅಥವಾ ವಾಸನಾವೃತ್ತಿಸ್ವರೂಪನಷ್ಟೆ! ಲಕ್ಷ್ಮಣನು ಮನಸ್ತತ್ವಪ್ರಕಾಶಕನಷ್ಟೆ! ರಾವಣನು ಅಮೋಘವಾದ ಅಷ್ಟಘಂಟಾಶಕ್ತಿಯನ್ನು ಪ್ರಯೋಗಮಾಡಿದನೆಂದರೆ-ಪ್ರಬಲವಾದ ಎಂಟು ಶಕ್ತಿಗಳುಳ್ಳ ವಾಸನಾವೃತ್ತಿಯು ಏಕಕಾಲದಲ್ಲಿ ಮನಸ್ಸನ್ನು ಪ್ರವೇಶಿಸಲು ಹೊರಟಿತೆಂಬ ತತ್ವವಾಗಿರುವುದು. ವಿಕ್ಷೇಪ ಶಕ್ತಿಯಲ್ಲಿನ ಪ್ರಬಲವಾದ ಎಂಟು ಶಕ್ತಿಗಳು ಯಾವುವೆಂದರೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೧೧೪ನೆಯ ಶ್ಲೋಕದಲ್ಲಿ ಹೇಳಿರುವ,

ಕಾಮ ಕ್ರೋಧೋ ಲೋಭ ದಮ್ಭಾದ್ಯಸೂಯಾ
ಹಂಕಾರೇರ್ಷ್ಯಾ ಮತ್ಸರಾದ್ಯಾಸ್ತು ಘೋರಾಃ ||
ಧರ್ಮಾ ಏತೆ ರಾಜಸಾಃ ಪುಂಪ್ರವೃತ್ತಿಃ |
ಯಸ್ಮಾದೇಷಾ ತದ್ರಜೋಬನ್ಧಹೇತುಃ ||

ತಾ|| ಕಾಮ, ಸಿಟ್ಟು, ಲೋಭ, ಡಂಭ, ಅಸೂಯಾ, ಗರ್ವ, ಅಸಹನ, ದ್ವೇಷ ಮುಂತಾದ ಧರ್ಮಗಳು ರಜೋಗುಣಗಳು. ಈ ರಜೋಗುಣಗಳಿಂದಲೇ ಪ್ರಪಂಚ ವ್ಯಾಪಾರವು ನಡೆಯುತ್ತಿರುವುದು. ಆದುದರಿಂದ ರಜೋಗುಣವು ಬಂಧನಕ್ಕೆ ಮೂಲವು.

ಈ ಮೇಲಿನ ಶ್ಲೋಕದಲ್ಲಿ ವಿವರಿಸಿರುವ ಎಂಟು ಸ್ವರೂಪದ ಘೋರವೃತ್ತಿಯು, ಮನಸ್ಸನ್ನಾಕರ್ಷಿಸುವ ತತ್ವವೇ ರಾವಣನು ಲಕ್ಷ್ಮಣನ ಮೇಲೆ ಅಷ್ಟಘಂಟಾಶಕ್ತಿಯನ್ನು ಪ್ರಯೋಗಮಾಡಿದ ತತ್ವವಾಗಿರುವುದು.

**ರಾ||** ರಾವಣನು ಬಿಟ್ಟ ಈ ಘೋರಶಕ್ತಿಯು ಸಿಡಿಲಿನಂತೆ ಮಹಾಧ್ವನಿಯಿಂದ ಮೊಳಗುತ್ತಾ ಭಯಂಕರವಾಗಿ ಲಕ್ಷ್ಮಣನೆದುರಾಗಿ ಬರುವುದನ್ನು ಶ್ರೀರಾಮನು ನೋಡಿ ಶಂಕಿತನಾಗಿ, ತಕ್ಷಣವೇ ಲಕ್ಷ್ಮಣನ ಕಡೆಗೆ ತಿರುಗಿ "ಶುಭವಾಗಲಿ" ಎಂದು ತಮ್ಮನಿಗೆ ಮಂಗಳಾಶಾಸನವನ್ನು ಮಾಡಿದನು. ಅನಂತರ ಬರುತ್ತಿರುವ ಶಕ್ತಿಯನ್ನು ನೋಡಿ "ಲಕ್ಷ್ಮಣನನ್ನು ಕೊಲ್ಲಬೇಕೆಂದು ಬರುತ್ತಿರುವ ನಿನ್ನ ಪ್ರಯತ್ನವು ವಿಫಲವಾಗಲಿ" ಎಂದನು. ಹೀಗೆ ಶ್ರೀರಾಮನು ಮಂಗಳಾಶಾಸನ ಮಾಡುತ್ತಿದ್ದರೂ, ರಾವಣನು ಅತ್ಯಂತ ಕೋಪದಿಂದ ಬಿಟ್ಟ ಪ್ರಬಲವಾದ ಅಷ್ಟಘಂಟಾಶಕ್ತಿಯು ಬಂದು ಲಕ್ಷ್ಮಣನೆದೆಯಲ್ಲಿ ಆಳವಾಗಿ ನಾಟಿತು.

**ತತ್ವ**|| ರಾವಣನಿಂದ ಬಿಡಲ್ಪಟ್ಟ ಘೋರಶಕ್ತಿಯುಳ್ಳ ಅಷ್ಟಘಂಟಾಶಕ್ತಿಯನ್ನು ಶ್ರೀರಾಮನೇ ಪ್ರಥಮದಲ್ಲಿ ನೋಡಿದನೆಂದರೆ—ಬುದ್ಧಿವೃತ್ತಿಯು ಪ್ರಥಮದಲ್ಲಿ ವಾಸನಾ ವೃತ್ತಿಯ ಆಕಾರವಾಗುವ ತತ್ವವೇ ಶ್ರೀರಾಮನು ರಾವಣನಿಂದ ಬಿಡಲ್ಪಟ್ಟ ಶಕ್ತಿಯನ್ನು ನೋಡಿದುದಾಗಿರುವುದು.

ರಾವಣನ ಅಷ್ಟಘಂಟಾಶಕ್ತಿಯನ್ನು ಶ್ರೀರಾಮನು ನೋಡಿದನಂತರ ಶಂಕಿತನಾದ ತತ್ವವೇನೆಂದರೆ—ಕಾಮಾದಿ ವೃತ್ತಿಗಳು ಘೋರವಾಗಿ ಕಾರ್ಯವನ್ನು ನಡೆಸಲು ಪ್ರಾಪ್ತ ವಾದರೆ, ಬುದ್ಧಿಯು ಪರಾಙ್ಮುಖವಾಗುವ ತತ್ವವಾಗಿರುವುದು. ಶ್ರೀರಾಮನು ಶಂಕಿತನಾಗಿ ಲಕ್ಷ್ಮಣನ ಕಡೆಗೆ ತಿರುಗಿ ಲಕ್ಷ್ಮಣನಿಗೆ ಮಂಗಳಾಶಾಸನಮಾಡಿದ ತತ್ವವೇನೆಂದರೆ ಮನಸ್ಸು ಈ ಘೋರವೃತ್ತಿಯಂತೆ ಅನುಸರಿಸಿ ಇಂದ್ರಿಯಗಳ ಮೂಲಕ ಕಾರ್ಯರೂಪದಲ್ಲಿ ಪರಿಣಾಮವನ್ನು ಹೊಂದದಿರಲೆಂದು ಇಂತಹ ಘೋರವೃತ್ತಿಯ ಕಾಲದಲ್ಲೂ ಕೊಂಚ ತಿಳಿವಳಿಕೆಯುಂಟಾಗುವುದೇ ಶ್ರೀರಾಮನು ಲಕ್ಷ್ಮಣನಿಗೆ ಮಂಗಳಾಶಾಸನಮಾಡಿದುದು.

ಹೀಗೆ ಶ್ರೀರಾಮನು ಮಂಗಳಾಶಾಸನಮಾಡುತ್ತಿದ್ದರೂ ರಾವಣನು ಬಿಟ್ಟ ಅಷ್ಟಘಂಟಾ ಶಕ್ತಿಯು, ಅತ್ಯಂತ ಪ್ರಬಲವಾದುದರಿಂದ, ಬಂದು ಲಕ್ಷ್ಮಣನೆದೆಯಲ್ಲಿ ನಾಟಿತೆಂದರೆ— ಘೋರವಾದ ವಿಷಯವೃತ್ತಿಯು ಬುದ್ಧಿಯ ತಿಳಿವಳಿಕೆಯನ್ನೂ ಮೀರಿ, ಇಂದ್ರಿಯಗಳ ಮೂಲಕ ಕಾರ್ಯಪ್ರವರ್ತನೆಗೆ ಮನಸ್ಸಿನ ವೃತ್ತಿಯನ್ನು ಹೊರಡಿಸುವುದೇ ಲಕ್ಷ್ಮಣನೆದೆಯಲ್ಲಿ ಅಷ್ಟಘಂಟಾಶಕ್ತಿಯು ಬಂದು ನಾಟಿದ ತತ್ವವಾಗಿರುವುದು. ಅಂದರೆ, ಅತ್ಯುಲ್ಬಣವಾದ ಕಾಮಕ್ರೋಧಾದಿಸ್ವರೂಪವಾದ ವಾಸನಾವೃತ್ತಿಯು ಬಂದರೆ, ಬುದ್ಧಿಮನಸ್ಸುಗಳು ತಡೆಯಲಾರದೆ ವಾಸನೆಯ ಪರಿಣಾಮವಾದ ಇಂದ್ರಿಯಗಳ ಕಾರ್ಯ ಪ್ರಾರಂಭವಾಗುವು ದೆಂಬ ತತ್ವವಾಗಿರುವುದು.

ಈ ಮೇಲಿನ ತತ್ವಗಳೆನ್ನೆಲ್ಲ ಈ ಕೆಳಗಿನ ಶ್ರುತಿವಾಕ್ಯವು ಒಳಗೊಂಡಿರುವುದು. ಮಹೋಪನಿಷತ್ ಪಂಚಮಾಧ್ಯಾಯದಲ್ಲಿ,

ಬುದ್ಧಿ ಸ್ಸಂಕಲ್ಪಿತಾಕಾರಾ ಪ್ರಯಾತಿ ಮನನಾಸ್ಪದಂ |
ಮನೋ ಘನವಿಕಲ್ಪಂತು ಗಚ್ಛತೀಂದ್ರಿಯ.ತಾಂಶನೈಃ ||

ತಾ|| ಬುದ್ಧಿಯು ಸಂಕಲ್ಪಿತ ವಸ್ತುವಿನಾಕಾರವಾಗಿ ಮನಸ್ಸಿನ ಆಶ್ರಯವನ್ನು ಹೊಂದುವುದು. ಅನಂತರ ಮನಸ್ಸು ಹೆಚ್ಚಾದ ವಿಕಲ್ಪಗಳುಳ್ಳದ್ದಾಗಿ ಇಂದ್ರಿಯಾಧೀನ ವಾಗುವುದು. ಎಂದು ಹೇಳಿರುತ್ತದೆ. ಈ ಮೇಲಿನ ತತ್ವಗಳೇ ರಾವಣನ ಅಷ್ಟಘಂಟಾ ಶಕ್ತಿಯು ಲಕ್ಷ್ಮಣನೆದೆಯಲ್ಲಿ ನಾಟಿ ಲಕ್ಷ್ಮಣನು ಬಿದ್ದಿರುವುದರ ತತ್ವವಾಗಿರುವುದು.

**ರಾ||** ಲಕ್ಷ್ಮಣನೆದೆಯಲ್ಲಿ ನಾಟಿದ್ದ ಈ ಶಕ್ತ್ಯಾಯುಧವನ್ನು ಕೀಳಲು ವಾನರರು ಎಷ್ಟು ಪ್ರಯತ್ನಪಟ್ಟರೂ ಸಾರ್ಥಕವಾಗಲಿಲ್ಲ. ರಾವಣನ ಬಾಣವರ್ಷಗಳಿಂದ ಶ್ರೀರಾಮನು ಮುಚ್ಚಲ್ಪಡುತ್ತಿದ್ದರೂ, ಲಕ್ಷ್ಮಣನೆದೆಯಲ್ಲಿ ನಾಟಿದ್ದ ಶಕ್ತ್ಯಾಯುಧವನ್ನು ಶ್ರೀರಾಮನು ಕಿತ್ತುಹಾಕಿದುದರಿಂದ ಲಕ್ಷ್ಮಣನು ಮೃತನಾಗದೆ ಮೂರ್ಛಿತನಾಗಿದ್ದನು.

**ತತ್ವ||** ಅತ್ಯಂತ ಪ್ರಬಲವಾದ ಕಾಮ ಕ್ರೋಧಾದಿ ವಾಸನೆಯನ್ನು ಬುದ್ಧಿಮನಸ್ಸುಗಳು ತಡೆಯಲಾರದೆ, ಕಾರ್ಯರೂಪವಾಗಿ ಪರಿಣಮಿಸಿರುವುದನ್ನು ದೇಹದಲ್ಲಿರುವ ವಾಯುಗಳು ಕೂಡ ತಡೆಯಲಾರವೆಂಬ ತತ್ವವೇ ಲಕ್ಷ್ಮಣನೆದೆಯಲ್ಲಿ ನಾಟಿದ್ದ ಶಕ್ತ್ಯಾಯುಧವನ್ನು ವಾನರರು ಕೀಳಲಾರದೆ ಹೋದುದಾಗಿರುವುದು.

ಘೋರವೃತ್ತಿಯು ಹಾನಿಯನ್ನುಂಟುಮಾಡುವ ಕಾರ್ಯದ ರೂಪವಾಗಿ ಪರಿಣಮಿಸುವುದರಿಂದ, ಕಾರ್ಯನಡೆಯುತ್ತಿರುವ ಸಂದರ್ಭದಲ್ಲಿ ಬುದ್ಧಿಯ ಜ್ಞಾನವು, ಆ ಕಾರ್ಯವು ಪೂರೈಸದಂತೆ ತಡೆಯುವ ಸಂದರ್ಭವೇ ಶ್ರೀರಾಮನು ಲಕ್ಷ್ಮಣನೆದೆಯಲ್ಲಿದ್ದ ಶಕ್ತ್ಯಾಯುಧವನ್ನು ಕಿತ್ತುಹಾಕಿರುವುದರ ತತ್ವವಾಗಿರುವುದು. ಹೇಗೆಂದರೆ—ಒಬ್ಬನನ್ನು ಕೊಂದುಹಾಕಲೇ ಬೇಕೆಂಬ ಪ್ರಬಲವಾದ ವಾಸನೆಯಂಕುರಿಸಿ ಬುದ್ಧಿಮನಸ್ಸುಗಳು ಈ ವಾಸನಾವೇಗವನ್ನು ತಡೆಯಲಾರದೆ ಕೊಲ್ಲುವ ಕಾರ್ಯಪ್ರವರ್ತನೆಗೆ ಆರಂಭವಾಗುವುದು. ಹೀಗೆ ಕಾರ್ಯಪ್ರಾರಂಭವಾಗುವಾಗ ಬುದ್ಧಿಯ ಜ್ಞಾನವು, ಕೊಲ್ಲುವುದು ಕೆಟ್ಟದ್ದೆಂದು ಕೊಂಚ ತಿಳಿವಳಿಕೆಕೊಟ್ಟು, ಕೊಲ್ಲುವ ಕಾರ್ಯವನ್ನು ನಿಲ್ಲಿಸುವುದೇ ಲಕ್ಷ್ಮಣನೆದೆಯಲ್ಲಿದ್ದ ಶಕ್ತ್ಯಾಯುಧವನ್ನು ಶ್ರೀರಾಮನು ಕಿತ್ತುಹಾಕಿದ ತತ್ವವಾಗಿರುವುದು. ಅಂದರೆ ಘೋರವಾದ ವಾಸನೆಯು ಯಾವ ಉದ್ದೇಶವನ್ನು ಕುರಿತು ಬರುವುದೋ, ಆ ಉದ್ದಿಷ್ಟ ಕಾರ್ಯದ ಪರಿಣಾಮುಹೊಂದದಂತೆ ತಡೆಯುವುದೇ ಲಕ್ಷ್ಮಣನೆದೆಯಲ್ಲಿದ್ದ ಶಕ್ತ್ಯಾಯುಧವನ್ನು ತೆಗೆದ ತತ್ವವಾಗಿರುವುದು.

ಕೊಲ್ಲಬೇಕೆಂದಿದ್ದವನನ್ನು ಕೊಲ್ಲದೆ ಅಧಿಕವಾಗಿ ನಿಂದಿಸಿ ಕಳುಹಿಸುವಂತಹ ಸಂದರ್ಭದ ತತ್ವವೇ ಲಕ್ಷ್ಮಣನು ಸಾಯದೆ ಮೂರ್ಛಿತನಾಗಿದ್ದುದು. ಹೇಗೆಂದರೆ, ಮನಸ್ಸು ಇಂದ್ರಿಯಗಳೊಡನೆ ಉದ್ದಿಷ್ಟ ಪರಿಣಾಮವನ್ನು ನಡೆಸದೇ ಹೋದರೂ, ಉದ್ದಿಷ್ಟ ಕಾರ್ಯಕ್ಕಾದರೂ ಕಾರ್ಯಪ್ರಾರಂಭಮಾಡಲ್ಪಟ್ಟಿರುವುದರಿಂದ ಕಾರ್ಯದಲ್ಲಿಯೇ ಪ್ರವೇಶಿಸಲಿಲ್ಲವೆಂದು ಹೇಳುವುದಕ್ಕಾಗುವುದಿಲ್ಲವಷ್ಟೆ! ಆದುದರಿಂದ ಘೋರವಾದ ವಾಸನೆಯು ಮನಸ್ಸಿಗೆ ಈ ವಿಧವಾದ ತೊಂದರೆಯನ್ನುಂಟುಮಾಡುವುದೆಂಬ ತತ್ವವೇ ರಾವಣನ ಅಷ್ಟಘಂಟಾ ಶಕ್ತಿಯಿಂದ ಲಕ್ಷ್ಮಣನು ಮೂರ್ಛಿತನಾಗಿದ್ದುದು.

ಇಂತಹ ಘೋರರೂಪವಾದ ವಾಸನಾವೃತ್ತಿಯುಂಟಾದಾಗ ಬುದ್ಧಿಯ ವಿವೇಚನೆಯು ಕೊಂಚವಾದರೂ ತಡೆಯದೆ ಹೋದರೆ ಅನಾಹುತವಾಗುವ ಕೊಲೆಯ ಕಾರ್ಯವು

ನಡೆದೇಬಿಡುವುದು. ಇಂತಹ ಕಾಲದಲ್ಲಿ ಬುದ್ಧಿಯು ಕೂಡ ನಾಶವಾಗುವುದೆಂಬ ತತ್ವಕ್ಕೆ ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆಯಲ್ಲಿ ಹೇಳಿರುವ "ಧ್ಯಾಯತೋ ವಿಷಯಾ೯ ಪುಂಸಃ" ಎಂಬ ಶ್ಲೋಕವನ್ನು ಸುಂದರಕಾಂಡದ ತತ್ವದಲ್ಲಿ ಬರೆದಿರುವುದನ್ನು ಇಲ್ಲಿಗೆ ಅನ್ವಯಮಾಡಿ ಕೊಂಡರೆ ಈ ಮೇಲಿನ ವಿಚಾರದ ತತ್ವವು ಇನ್ನೂ ಚೆನ್ನಾಗಿ ಮುಂದಟ್ಟಾಗುವುದು.

ಅಷ್ಟಘಂಟಾಶಕ್ತಿಯ ತತ್ವವಾದ ಘೋರವೃತ್ತಿಯು ವ್ಯಾಪಿಸಿದರೆ, ಬಹಿರ್ವ್ಯಾಪಾರ ದಲ್ಲುಂಟಾಗುವ ಅನರ್ಥಗಳ ತತ್ವಗಳನ್ನು ಇದುವರೆಗೂ ತಿಳಿಸಿಯಾಯಿತು. ಈ ಅಷ್ಟ ಘಂಟಾಶಕ್ತಿಯ ತತ್ವದಿಂದ ಸಮಾಧಿಯಲ್ಲಿ ಯಾವ ವಿಧವಾದ ತೊಂದರೆಯುಂಟಾಗುವು ದೆಂಬುದನ್ನು ತಿಳಿದುಕೊಳ್ಳೋಣ.

ಬುದ್ಧಿವೃತ್ತಿಯು ಬಹಿರ್ವ್ಯಾಪಾರದ ಕಡೆಗೆ ಎಳೆಯುವ ಮನೋವೃತ್ತಿಯನ್ನು ತಡೆದರೂ, ಶಕ್ತ್ಯಾಯುಧರೂಪದ ವೃತ್ತಿಯ ಹೊಡೆತದಿಂದ ಮನಸ್ಸು ಬಳಲುವುದು. ಅಂದರೆ ಅಧಿಕಾರಿಗೆ ಕ್ರಿಯಾತ್ಮಕವಾದ ಮನಸ್ಸಿನ ವೃತ್ತಿಯು ಬಳಲುವುದರಿಂದ ಆಯಾಸ ವುಂಟಾಗಿ, ಸಮಾಧಿಯಿಂದ ಬಹಿರ್ಮುಖನಾಗಿ ಅನೇಕವೇಳೆ ವಿಶ್ರಾಂತಿ ತೆಗೆದುಕೊಳ್ಳಬೇಕಾ ಗುವುದು. ಯಾವಾಗ ಮನಸ್ಸಿನ ವೃತ್ತಿಯು ಬಳಲುವುದೋ ಆಗ ಬುದ್ಧಿವೃತ್ತಿಗೂ ಸಮಾಧಿಯ ಅನುಷ್ಠಾನಮಾಡಲು ಸ್ಫುರಣೆಯಾಗುವುದಿಲ್ಲ. ಈ ಮೇಲಿನ ತತ್ವಾರ್ಥವೇ ರಾವಣನು ಲಕ್ಷ್ಮಣನ ಮೇಲೆ ಮಾಡಿದ ಅಷ್ಟಘಂಟಾಶಕ್ತಿಯ ಪ್ರಯೋಗವಾಗಿರುವುದು.

**ರಾ||** ರಾವಣನ ಶಕ್ತ್ಯಾಯುಧದ ಹೊಡೆತದಿಂದ ಘಾಯಪಟ್ಟು ಬಿದ್ದು ಸಂಕಟ ದಿಂದ ಹೊರಳಾಡುತ್ತಿದ್ದ ಲಕ್ಷ್ಮಣನನ್ನು ನೋಡಿ, ಶ್ರೀರಾಮನು ತನಗೆ ರಾಜ್ಯದಿಂದಾಗಲಿ ಸೀತಾದೇವಿಯಿಂದಾಗಲಿ, ಪ್ರಯೋಜನವಿಲ್ಲವೆಂದು ಲಕ್ಷ್ಮಣನಿಗೋಸ್ಕರ ದುಃಖಿಸುತ್ತಿ ದ್ದನು. ಆಗ ಸುಷೇಣನು ಶ್ರೀರಾಮನನ್ನು ಸಂತವಿಡುತ್ತ ಸಮೀಪದಲ್ಲಿದ್ದ ಹನುಮಂತ ನನ್ನು ಕುರಿತು, ಹಿಂದೆ ರಾಮಲಕ್ಷ್ಮಣರು ಮೂರ್ಛೆಹೊಂದಿದ್ದ ಕಾಲದಲ್ಲಿ ಜಾಂಬುವಂತನು ಹೇಳಿದ್ದ ವಿಶಲ್ಯಕರಣಿ ಮುಂತಾದ ದಿವ್ಯೌಷಧಗಳನ್ನುತೆಗೆದುಕೊಂಡು ಬಂದರೆ ಲಕ್ಷ್ಮಣನು ಬದುಕಿ ಕೊಳ್ಳುವನೆಂದು ಹೇಳಿದನು. ಹನುಮಂತನು ಅತಿ ಜಾಗ್ರತೆಯಿಂದ ದಿವ್ಯವಾದ ಔಷಧಿಗಳನ್ನು ತಂದು ಲಕ್ಷ್ಮಣನಿಗೆ ಸೇವನೆಮಾಡಿಸಲು ಲಕ್ಷ್ಮಣನು ಮೂರ್ಛೆತಿಳಿದೆದ್ದನು.

**ತತ್ವ||** ಮನಸ್ಸಿನ ವೃತ್ತಿಯು ಅತ್ಯಂತ ಚಂಚಲವಾದುದೆಂದು ಹಿಂದಿನ ಅನೇಕ ಪ್ರಕರಣಗಳಲ್ಲಿ ತಿಳಿಸಿದೆ. ವಾಸನಾವೃತ್ತಿ ಮತ್ತು ಇಂದ್ರಿಯಗಳ ಆಕರ್ಷಣೆಗೆ ಸುಲಭ ವಾಗಿ ಮನೋವೃತ್ತಿಯು ವಶವಾಗುವ ಸ್ವಭಾವವುಳ್ಳದ್ದು. ಆದುದರಿಂದಲೇ ಇದಕ್ಕೆ ಶ್ರುತಿ ಯಲ್ಲಿ "ಮನೋಘನವಿಕಲ್ಪಂತು" ಎಂಬ ವಚನವಿರುವುದು. ಈ ಕಾರಣಗಳಿಂದ ಲಕ್ಷ್ಮಣನು ಇಂದ್ರಜಿತ್ತಿನಿಂದ ಎರಡಾವರ್ತಿಯೂ, ರಾವಣನಿಂದ ಎರಡಾವರ್ತಿಯೂ,

ಮೂರ್ಛಿತನಾದನು. ಇಂದ್ರಜಿತ್ತಿನ ಎರಡನೆಯ ಯುದ್ಧಕಾಲದಲ್ಲಿ ಲಕ್ಷ್ಮಣನು ಯಾವ ಔಷಧಿಗಳಿಂದ ಚೇತರಿಸಿಕೊಂಡನೋ, ರಾವಣನಿಂದ ಮೂರ್ಛಿತನಾಗಿರುವ ಈ ಕಾಲದಲ್ಲಿಯೂ ಆ ಔಷಧಿಗಳಿಂದಲೇ ಚೇತರಿಸಿಕೊಂಡಿರುವನು.

ಆದುದರಿಂದ ಇಂದ್ರಜಿತ್ತಿನ ಎರಡನೆಯ ಯುದ್ಧದ ಸಂದರ್ಭದಲ್ಲಿ ಹೇಳಿರುವ ಔಷಧಗಳ ತತ್ವವಾದ ಜಾಲಂಧರವೆಂಬ ಮುದ್ರೆಯನ್ನು ವಿಕ್ಷೇಪಶಕ್ತಿ ಅಥವಾ ವಾಸನಾವೃತ್ತಿಯಿಂದುಂಟಾಗುವ ಬಳಲಿಕೆಗಳ ಪರಿಹಾರಕ್ಕೋಸ್ಕರ ಅಗತ್ಯವಾಗಿ ಅನುಷ್ಠಾನಮಾಡಬೇಕೆಂಬ ತತ್ವವಾಗಿರುವುದು. ಬಂಧತ್ರಯಗಳ ಮಹಿಮೆಯನ್ನು ಮತ್ತು ಅನುಷ್ಠಾನದ ಕ್ರಮವನ್ನು ತಕ್ಕಮಟ್ಟಿಗೆ ಇಂದ್ರಜಿತ್ತಿನ ಯುದ್ಧಪ್ರಕರಣಗಳಲ್ಲಿ ವಿವರಿಸಿರುತ್ತಷ್ಟೆ! ಮನಸ್ಸು ಸ್ವಾಭಾವಿಕವಾಗಿ ನೀರಿನೋಪಾದಿಯಲ್ಲಿ ಚಂಚಲಸ್ವಭಾವವುಳ್ಳದೆಂದು ವರಾಹೋಪನಿಷತ್ತಿನಲ್ಲಿ, "ರಸಸ್ಯ ಮನಸಶ್ಚೈವ ಚಂಚಲತ್ವಂ ಸ್ವಭಾವತಃ" ಎಂಬದಾಗಿ ಹೇಳಿರುವಂತೆ ಪಾದರಸ ಅಥವಾ ನೀರು ಕೊಂಚ ಇಳಿಜಾರು ದೊರೆತರೂ, ಹೇಗೆ ಹರಿದು ಹೋಗುವುದೋ ಹಾಗೆ, ಮನಸ್ಸು ಅಲ್ಪ ಇಂದ್ರಿಯಗಳ ಮತ್ತು ವಾಸನಾವೃತ್ತಿಗಳ ಎಳೆತವನ್ನು ತಡೆಯಲಾರದು. ಇದೇ ತಾತ್ಪರ್ಯಕ್ಕೆ ಪತಂಜಲಿ ಮಹರ್ಷಿಗಳು "ಕ್ಷಿಪ್ತಂ" ಅಂದರೆ ಮನಸ್ಸು ರಜೋಗುಣದ ಉದ್ರೇಕದಿಂದ ಚಂಚಲವಾಗಿ ಸಮಾಧಿಯಿಂದ ಬಹಿರ್ಮುಖವಾಗುವಿಕೆ. ಎಂದು ಹೇಳಿರುತ್ತಾರೆ. ಆದುದರಿಂದ ಬಾಹ್ಯದಲ್ಲಿ ತಿಳಿದುಕೊಂಡಿರುವ ವೈರಾಗ್ಯವು ಸ್ಥಿರಕ್ಕೆ ಬಂದು ಫಲಕಾರಿಯಾಗಬೇಕಾದರೆ, ನಿಸ್ಸಂದೇಹವಾಗಿ ಬಂಧತ್ರಯದೊಡನೆ "ಓಂ"ಕಾರೋಪಾಸನೆಯನ್ನು ಅನುಷ್ಠಿಸಬೇಕು.

ಈ ಮೇಲಿನ ತತ್ವಾರ್ಥಗಳೇ ರಾವಣನು ತನ್ನ ಅಷ್ಟಘಂಟಾಶಕ್ತಿಯನ್ನು ಪ್ರಯೋಗಮಾಡಿ ಲಕ್ಷ್ಮಣನನ್ನುಮೂರ್ಛೆಗೊಳಿಸಿದ ಮತ್ತು ಲಕ್ಷ್ಮಣನು ದಿವ್ಯೌಷಧಿಗಳಿಂದ ಮೂರ್ಛೆ ತಿಳಿದುದಾಗಿರುವುದು. ಈ ಮೇಲಿನ ತತ್ವಗಳಿಂದ ವಾಸನಾವೃತ್ತಿತತ್ವದವನಾದ ರಾವಣನನ್ನು ಲಕ್ಷ್ಮಣನು ಸಂಹರಿಸಲಾರನೆಂಬತತ್ವವು ವ್ಯಕ್ತವಾಗುವುದು.

## ೨೭ನೆಯ ಪ್ರಕರಣ.

**ಶ್ರೀರಾಮನು ಇಂದ್ರನ ರಥಾರೋಹಣಮಾಡಿ ರಾವಣನೊಡನೆ ಯುದ್ಧಮಾಡಿದುದು.**

**ಬಂಧತ್ರಯದೊಡನೆ ಮಾಡುತ್ತಿದ್ದ "ಓಂ"ಕಾರೋಚ್ಚಾರಣೆಯ ಅನುಸಂಧಾನದ ಪರಿಪಕ್ವಾವಸ್ಥೆ. ಒಳಗಡೆ ಕೇಳುವ "ಓಂ"ಕಾರನಾದಾನುಸಂಧಾನ ಮಾಡಲು ಷಣ್ಮುಖೀಕರಣ ಮಾಡಿಕೊಳ್ಳುವ ವಿಚಾರ.**

ರಾ|| ರಾಮ ರಾವಣರು ಪುನಃ ಯುದ್ಧಕ್ಕೆ ಪ್ರಾರಂಭಮಾಡಿದರು. ಹೀಗೆ ಯುದ್ಧಮಾಡುತ್ತಿರುವಾಗ ರಾವಣನು ರಥದೊಳಗೂ ಶ್ರೀರಾಮನು ನೆಲದಮೇಲೂ ನಿಂತು ಯುದ್ಧ

ಮಾಡುತ್ತಿರುವಲ್ಲಿ, ಇಂದ್ರನ ಪ್ರೇರಣೆಯಿಂದ ಸುವರ್ಣದಿಂದ ಚಿತ್ರಿತವಾಗಿಯೂ, ನೂರಾರು ಕಿರುಘಂಟೆಗಳ ಶಬ್ದಗಳಿಂದ ಶೋಭಿತವಾಗಿಯೂ, ಬಾಲಸೂರ್ಯನಂತೆ ಪ್ರಕಾಶಮಾನ ವಾಗಿಯೂ, ವೈಡೂರ್ಯರತ್ನಖಚಿತವಾದದ್ದಾಗಿಯೂ ಇರುವ ಮಹೇಂದ್ರನ ರಥವನ್ನು ತೆಗೆದುಕೊಂಡು ಮಾತಲಿಯು ಬಂದನು.

ಈ ರಥದನಡುವೆ ಸುವರ್ಣಾಲಂಕೃತವಾಗಿ ಪ್ರಕಾಶಮಾನವಾದ ರುಕ್ಮವೇಣುವೆಂಬ ಧ್ವಜವು ಶೋಭಿಸುತ್ತಿತ್ತು. ಸುವರ್ಣಾಭರಣಗಳಿಂದಲೂ, ಬಿಳೀಚಾಮರಗಳಿಂದಲೂ, ಅಲಂಕೃತವಾಗಿ ಸೂರ್ಯಕಾಂತಿಯಂತೆ ಹೊಳೆಯುತ್ತಿದ್ದ ನಾಲ್ಕು ಉತ್ತಮವಾದ ಅಶ್ವಗಳು ಕಟ್ಟಲ್ಪಟ್ಟಿದ್ದುವು. ಇಂತಹ ಕಾಂತಿವಿಶಿಷ್ಟವಾದ ರಥವನ್ನು ಸಾರಥಿಯಾದ ಮಾತಲಿಯು ತಂದು, ಆ ರಥವನ್ನು ಏರಿ ಯುದ್ಧಮಾಡುವಂತೆ ಶ್ರೀರಾಮನನ್ನು ಪ್ರಾರ್ಥಿಸಿದನು. ಶ್ರೀರಾಮನು ಆ ರಥಕ್ಕೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ ಚಂದ್ರಕಾಂತಿಯಿಂದ ಪ್ರಕಾಶಮಾನವಾದಂತೆ ಬೆಳಗುತ್ತಾ ಆ ರಥದಲ್ಲಿ ಕುಳಿತನು. ಅನಂತರ ಇಂದ್ರನಿಂದ ಕಳುಹಿಸಲ್ಪಟ್ಟ, ಅಗ್ನಿಯಂತೆ ಕಾಂತಿಯುಳ್ಳ ಕವಚವನ್ನೂ, ಸೂರ್ಯಸಮಾನವಾದ ಬಾಣ ಗಳನ್ನೂ, ತೀಕ್ಷ್ಣವಾಗಿರುವ ಆಯುಧಗಳನ್ನೂ ಸ್ವೀಕರಿಸಿದನು.

**ತತ್ವ**|| ಮನುಷ್ಯಾದಿ ಪ್ರಾಣಿಗಳೆಲ್ಲ ಹೇಗೆ ಭೂತತ್ವಪ್ರಧಾನ ದೇಹವುಳ್ಳವರೋ ಹಾಗೆ ಇಂದ್ರಾದಿ ದೇವತೆಗಳೆಲ್ಲ ತೇಜಃಪ್ರಧಾನತತ್ವದ ದೇಹವುಳ್ಳವರೆಂದು ಲಕ್ಷ್ಮಣನು ಇಂದ್ರಜಿತ್ತನ್ನು ಕೊಲ್ಲುವಾಗ ಪ್ರಯೋಗಿಸಿದ ಐಂದ್ರಾಸ್ತ್ರದ ತತ್ವದಲ್ಲಿ ವಿವರಿಸಿರುವುದಷ್ಟೆ! ಹೀಗಿರುವಲ್ಲಿ ದೇವತೆಗಳಿಗೊಡೆಯನಾದ ಇಂದ್ರನ ರಥವೆಂದರೆ—ತೇಜಸ್ಸಿನ ಅತ್ಯಂತ ಪ್ರಕಾಶಮಾನ ಸ್ವರೂಪವೆಂದು ತಿಳಿದುಕೊಳ್ಳಬೇಕು.

ದೇವತೆಗಳಿಗೊಡೆಯನಾದ ಇಂದ್ರನ ರಥದ ತತ್ವವು ಸಮಾಧಿಯಲ್ಲಿ ಕಾಣುವ ಪ್ರಕಾಶಮಾನವಾದ ತೇಜಸ್ಸಿನೊಳಗೆ ನಡೆಯಬೇಕಾದ ಯಾವುದೋ ಅನುಷ್ಠಾನದ ಕರ್ತವ್ಯವಾಗಿರಬೇಕು. ಈಗ ಶ್ರೀರಾಮನು ರಾಕ್ಷಸರಿಗೊಡೆಯನಾದ ರಾವಣನ ತತ್ವದಲ್ಲಿ ಇರುವ ಅವಿದ್ಯಾಪ್ರಧಾನಶಕ್ತಿಯನ್ನು ನಿಗ್ರಹಿಸಬೇಕಾದ ಸಂದರ್ಭದಲ್ಲಿರುವನು. ಆದುದ ರಿಂದ ಅವಿದ್ಯಾಪ್ರಧಾನಶಕ್ತಿಯನ್ನು ನಿಗ್ರಹಿಸಲು ಸಹಕಾರಿಯಾಗಿಯೂ, ತೇಜೋಮಯ ವಾಗಿಯೂ, ಇರುವ ಅನುಷ್ಠಾನದ ತತ್ವವೇನೆಂಬುದನ್ನು ತಿಳಿದುಕೊಳ್ಳೋಣ.

ಇಂದ್ರನ ರಥವನ್ನು ದೇವಾಸುರರ ಯುದ್ಧದಲ್ಲಿ ಷಣ್ಮುಖಸ್ವಾಮಿಯು ಹೊಂದಿ ಅಸುರರನ್ನೆಲ್ಲ ನಿಗ್ರಹಿಸಿರುತ್ತಾನೆ. ಆದುದರಿಂದ ಸಮಾಧಿಯನ್ನು ಅಭ್ಯಾಸಮಾಡುತ್ತಿರುವ ಅಧಿಕಾರಿಯು ಇಂದ್ರನ ರಥದ ತತ್ವದ ಅನುಷ್ಠಾನದ ಸಹಾಯದಿಂದ ಷಣ್ಮುಖ ಸ್ವಾಮಿಯು ಅಸುರರನ್ನು ನಿಗ್ರಹಿಸಿದಂತೆ ಷಣ್ಮುಖೀಮುದ್ರೆಯಿಂದ ಅವಿದ್ಯೆಯ ಪ್ರಧಾನ

ಶಕ್ತಿಯನ್ನು ನಿಗ್ರಹವಮಾಡಬೇಕು. ಈ ಷಣ್ಮುಖೀಮುದ್ರೆಯನ್ನು ಅನುಷ್ಠಾನವಮಾಡುವ ಕ್ರಮ ಹೇಗೇಂದರೆ—ಸೌಭಾಗ್ಯಲಕ್ಷ್ಮ್ಯುಪನಿಷತ್ ಮತ್ತು ಇನ್ನು ಕೆಲವು ಉಪನಿಷತ್ತುಗಳಲ್ಲಿ,

ಶ್ರವಣಪುಟನಯನಯುಗಳಘ್ರಾಣಮುಖಾನಾಂ ನಿರೋಧನಂ ಕಾರ್ಯಂ|
ಶುದ್ಧಸುಷುಮ್ನಾಸರಣೌ ಸ್ಫುಟಮಮಲಃ ಶ್ರೂಯತೇ ನಾದಃ||

ತಾ|| ಕಿವಿಗಳನ್ನೂ, ಕಣ್ಣುಗಳನ್ನೂ, ನಾಸಿಕವನ್ನೂ, ಬಾಯನ್ನೂ ಮುಚ್ಚಿಕೊಂಡರೆ ಶುದ್ಧವಾದ ಸುಷುಮ್ನೆಯ ಮಾರ್ಗದಲ್ಲಿ ಉತ್ಪನ್ನವಾಗುವ ಮತ್ತು ಸ್ಫುಟವಾಗಿ ಕೇಳುವ "ಓಂ"ಕಾರನಾದವು ಕೇಳಿಬರುವುದು, ಎಂದು ಹೇಳಿರುವುದು. ಈ ಕಿವಿ ಮುಂತಾದ್ದನ್ನು ಮುಚ್ಚಿಕೊಳ್ಳುವ ಕ್ರಮ ಹೇಗೆಂದರೆ:—

ಅಙ್ಗುಷ್ಠಾಭ್ಯಾ ಮುಭೌಕರ್ಣೌ ತರ್ಜನೀಭ್ಯಾಂಚ ಚಕ್ಷುಷೀಂ |
ನಾಸಾಪುಟೌ ತಥಾನ್ಯಾಭ್ಯಾಂ ಪ್ರಚ್ಛಾದ್ಯ ಕರಣಾನಿಚ ||

ತಾ|| ಎರಡು ಹಸ್ತಗಳ ಹೆಬ್ಬೆರಳುಗಳಿಂದ ಎರಡು ಕಿವಿಗಳನ್ನು ಮುಚ್ಚಿಕೊಂಡು ತರ್ಜನೀಬೆರಳುಗಳಿಂದ ಕಣ್ಣುಗಳನ್ನು ಮುಚ್ಚಿಕೊಂಡು, ಮಧ್ಯದ ಬೆರಳುಗಳಿಂದ ಮೂಗನ್ನು ಮುಚ್ಚಿಕೊಂಡು ಉಳಿದಿರುವ ಬೆರಳುಗಳಿಂದ ಬಾಯನ್ನು ಮುಚ್ಚಿಕೊಂಡು, ಅಂತರ್ಮುಖದಲ್ಲಿ ಗೋಚರವಾಗುವ ಜ್ಯೋತಿಯಲ್ಲಿಯೇ ಲಯವಾಗಬೇಕೆಂಬ ಜ್ಞಾನದಿಂದ ಸಮಾಧಿಯ ಅನುಷ್ಠಾನಮಾಡುವುದೇ ಷಣ್ಮುಖೀಕರಣದ ಅನುಷ್ಠಾನವಾಗಿರುವುದು.

ಈ ಮೇಲಿನ ಶ್ಲೋಕದಲ್ಲಿ ಹೇಳಿರುವಂತೆ ಷಣ್ಮುಖೀಮುದ್ರೆಯ ಕಾರ್ಯವನ್ನು ಮಾಡಿಕೊಂಡರೆ ಒಳಗಡೆ ಇಂದ್ರನ ರಥದ ಬಣ್ಣದಂತೆ ಸೂರ್ಯನ ತೇಜಸ್ಸಿಗೆ ಸಮಾನವಾಗಿಯೂ ಸುವರ್ಣ ವೈಡೂರ್ಯ ಮತ್ತು ರತ್ನಪ್ರಕಾಶಗಳಂತೆ ಥಳಥಳಾಯಮಾನವಾಗಿಯೂ ಇರುವ ಪ್ರಕಾಶವು ಗೋಚರವಾಗುವುದು. ಆದುದರಿಂದ ಈ ಷಣ್ಮುಖೀಮುದ್ರೆಯ ಅನುಸಂಧಾನದ ರೀತಿಗೆ ಇಂದ್ರನ ರಥವೆಂಬ ತತ್ವವಾಗಿರುವುದು.

ಒಂದು ರಾಜ್ಯದ ಅಥವಾ ಒಬ್ಬರಾಜನ ಪ್ರಾಮುಖ್ಯತೆಯು ಆ ರಾಜ್ಯದ ಧ್ವಜದಿಂದ ತಿಳಿಯುತ್ತದೆ. ಇದರಂತೆ ಇಂದ್ರನ ರಥದ ಪ್ರಾಮುಖ್ಯತೆಯು ಇಂದ್ರನ ರಥದಲ್ಲಿರುವ ಧ್ವಜದ ಸ್ವಭಾವದ ಕಾರ್ಯವುಳ್ಳದ್ದಾಗಿರುವುದು. ಇಂದ್ರನ ರಥದ ಧ್ವಜವು ವೇಣುಸ್ವರೂಪವಾದದ್ದು. ಗ್ರಂಥಿಗಳಿಂದ ಕೂಡಿರುವ ಬಿದಿರಿಗೆ ವೇಣುವೆಂದು ಹೆಸರು. ವೇಣುವೆಂದರೆ — ಕೊಳಲು ಅಥವಾ ಪಿಳ್ಳಂಗೋವಿ. ಇಂದ್ರನ ರಥದ ಧ್ವಜವು ರುಕ್ಮವೇಣುವಾಗಿದೆಯೆಂದರೆ, ಚಿನ್ನದ ಕೋಳಲು ಅಥವಾ ಪ್ರಕಾಶಮಾನವಾದ ಕೊಳಲು ಅಥವಾ ಬಿದಿರೆಂಬ ಅರ್ಥ.

ಇಂದ್ರನ ರಥದ ತತ್ವವಾದ ಷಣ್ಮುಖೀಮುದ್ರೆಯಲ್ಲಿ ಪ್ರಕಾಶಮಾನವಾದ ವೇಣು ಧ್ವಜದಂತೆ ಇರುವುದು ಯಾವುದೆಂದರೆ—ಷಟ್ಚಕ್ರಗಳಿಂದ ಕೂಡಿಕೊಂಡು ಪ್ರಕಾಶಮಾನ ವಾಗಿರುವ ಸುಷುಮ್ನಾನಾಡಿಯೇ ರುಕ್ಮವೇಣುಧ್ವಜವಾಗಿರುವುದು. ಬಿದಿರಿನಲ್ಲಿ ಗ್ರಂಥಿ ಸ್ವರೂಪವಾದ ಗಿಣ್ಣುಗಳು ಇರುವಂತೆ ಸುಷುಮ್ನೆಯು ಚಕ್ರ ಅಥವಾ ಗ್ರಂಥಿಗಳುಳ್ಳ ದ್ದಾಗಿರುವುದು. ಅಲ್ಲದೆ ಕೊಳಲಿನಲ್ಲಿ (ವೇಣು) ಯಾವ ವಿಧದಿಂದ ನಾದೋತ್ಪತ್ತಿಯಾಗು ವುದೋ ಅದರಂತೆ ಸುಷುಮ್ನೆಯೊಳಗೆ ನಾದೋತ್ಪತ್ತಿಯಾಗುವ ಶಕ್ತಿಯೂ ಇರುವುದು. ಅಲ್ಲದೆ ಇಂದ್ರನ ರಥದಲ್ಲಿದ್ದ ಧ್ವಜವು ಹೇಗೆ ರುಕ್ಮವೇಣುಧ್ವಜವೆಂದು ಹೆಸರುಗೊಂಡಿರು ವುದೋ ಹಾಗೆ "ಸುಷುಮ್ನಾ ಸೂರ್ಯಾಭಾ" ಎಂಬ ಶ್ರುತಿಪ್ರಮಾಣದಂತೆ ಸುಷುಮ್ನೆಯು ಪ್ರಕಾಶಮಾನವಾದ ತೇಜೋರೂಪಿನದಾಗಿರುವುದು. ಅಲ್ಲದೆ ಇಂದ್ರನ ರಥದಲ್ಲಿ ನೂರಾರು ಕಿರುಘಂಟೆಗಳಿದ್ದುವು. ಅಂದರೆ ಇಂದ್ರನ ರಥದ ಚಲನೆಯಿಂದ ಘಂಟಾನಾದಗಳು ಹೇಗೆ ಉಂಟಾಗುವುವೋ ಹಾಗೆ ಷಣ್ಮುಖೀಮುದ್ರೆಯ ಅನುಷ್ಠಾನದಿಂದ "ಓಂ"ಕಾರನಾದವು ಕೇಳಿಬರುವುದು.

ಈ ಮೇಲಿನ ತತ್ವಗಳ ಸಮನ್ವಯದಿಂದ ಬಂಧತ್ರಯದೊಡನೆ ಮಾಡುತ್ತಿದ್ದ "ಓಂ" ಕಾರೋಚ್ಚಾರಣೆಯ ಅನುಷ್ಠಾನದ ಸೋಪಾನವು ಪರಿಪಕ್ವಾವಸ್ಥೆಗೆ ಬಂದು ಷಣ್ಮುಖೀ ಮುದ್ರೆಯಿಂದ "ಓಂ"ಕಾರನಾದಾನುಸಂಧಾನದ ಅನುಷ್ಠಾನದ ಸೋಪಾನವು ಪ್ರಾರಂಭ ವಾಯಿತೆಂಬ ತತ್ವವಾಗಿರುವುದು.

ಅಂದರೆ ಸೇತುಬಂಧನದಾರಭ್ಯ ಇದುವರೆಗಿನ ಕಥೆಯ ತತ್ವಗಳು ಬಂಧತ್ರಯಸಹಿತ ವಾದ "ಓಂ" ಎಂಬ ಶಬ್ದೋಚ್ಚಾರಣೆಯನ್ನು ಅನುಸಂಧಾನಮಾಡಿಕೊಂಡು ತೇಜೋ ಬಿಂದುಧಾರಣೆಯಿಂದ ಸಮಾಧಿಯ ಅಭ್ಯಾಸಮಾಡುವ ಸೋಪಾನವಾಗಿರುವುದೆಂದು ಹಿಂದಿನಿಂದ ತಿಳಿಸಿಕೊಂಡು ಬಂದಿರುವುದಷ್ಟೆ! ಈಗ ಬಿಂದುಧಾರಣೆಯಿಂದ ಮಾಡುತ್ತಿದ್ದ ಸಮಾಧಿಯ ಸೋಪಾನವು ಪರಿಪಕ್ವಾವಸ್ಥೆಗೆ ಬಂದು ಸುಷುಮ್ನೆಯಲ್ಲಿ ಅನಾಹತಚಕ್ರದಿಂದ "ಓಂ"ಕಾರನಾದೋತ್ಪತ್ತಿಯಾಗುವ ಸೋಪಾನಕ್ಕೆ ಅಧಿಕಾರಿಯು ಬಂದನೆಂಬ ತಾತ್ಪರ್ಯ. ಅಂದರೆ ಉದಯವಾಗುವ ಕಾಲದಲ್ಲಿದ್ದ ದುಂಡಾದ ಸೂರ್ಯಬಿಂಬವು ತನ್ನ ತೇಜಸ್ಸಿನಿಂದ ಚೆನ್ನಾಗಿ ಪ್ರಕಾಶಿಸುವಂತೆ ಸಮಾಧಿಯಲ್ಲಿ ಅತ್ಯಂತ ಪ್ರಕಾಶಮಾನವಾದ ತೇಜಸ್ಸು ಮತ್ತು "ಓಂ"ಕಾರನಾದದ ಸೋಪಾನವನ್ನು ಅಧಿಕಾರಿಯು ಪಡೆಯುವನು. ಷಣ್ಮುಖೀಕರಣ ದಿಂದ ಸಮಾಧಿಯನ್ನು ಅಭ್ಯಾಸಮಾಡುವ ಸೋಪಾನಕ್ಕೆ ಅಧಿಕಾರಿಯು ಬಂದುದರಿಂದ ಬಂಧತ್ರಯದ ಅನುಷ್ಠಾನದ ಸೋಪಾನವನ್ನು ದಾಟಿರುತ್ತಾನೆ. ಅಂದರೆ ಷಣ್ಮುಖೀ ಮುದ್ರೆಯಿಂದ ಸಮಾಧಿಯ ಅಭ್ಯಾಸಮಾಡುವಾಗ ಬಂಧತ್ರಯಗಳ ಅಭ್ಯಾಸವು ಅನಾವಶ್ಯಕ ವಾಗಿರುವುದು. ಶ್ರವಣ ಮನನಗಳ ಸೋಪಾನಕ್ರಮಗಳು ಹೇಗಿವೆಯೋ ಹಾಗೆ ಸಮಾ

ಧಿಯ ಅನುಷ್ಠಾನದಲ್ಲಿ ಬಂಧತ್ರಯದೊಡನೆ ಮಾಡುವ "ಓಂ"ಕಾರೋಚ್ಚಾರಣೆಯು ಒಂದು ಸೋಪಾನವಾಗಿರುವುದು. ಷಣ್ಮುಖೀಕರಣರೂಪವಾದ ಇಂದ್ರನ ರಥಾರೋಹಣ ಮೊದಲುಗೊಂಡು ರಾವಣನನ್ನು ನಿಗ್ರಹಿಸುವ ಪರ್ಯಂತರ "ಓಂ"ಕಾರನಾದಾನುಸಂಧಾನದ ಸೋಪಾನವಾಗಿರುವುದು. "ಓಂ"ಕಾರನಾದೋತ್ಪತ್ತಿಯೂ, ಆದಿತ್ಯಸ್ವರೂಪದ ಜ್ಯೋತಿಯ ಆವಿರ್ಭಾವವೂ ಮುಂದಿನ ಪ್ರಕರಣವಾದ ಅಗಸ್ತ್ಯರು ಶ್ರೀರಾಮನಿಗೆ ಆದಿತ್ಯ ಹೃದಯವನ್ನು ಉಪದೇಶಮಾಡಿದ ಸಂದರ್ಭದಲ್ಲಿ ಚೆನ್ನಾಗಿ ವಿಶದಮಾಡಿರುವುದು.

ಈ ನಾದಾನುಸಂಧಾನವನ್ನು ಅಭ್ಯಾಸಮಾಡಲು ಸಿದ್ಧಾಸನದಲ್ಲಿ ಕುಳಿತು ಮಾಡುವುದು ಸರ್ವೋತ್ತಮವು. ಪದ್ಮಾಸನದಲ್ಲಾದರೂ ಕುಳಿತುಕೊಳ್ಳಬಹುದು. ಆದರೆ ಹಸ್ತಗಳಿಂದ ಮುಂಡಿಯನ್ನು ಹಿಡಿದುಕೊಂಡು ಕುಳಿತುಕೊಳ್ಳುವ ವಿಧಾನದ ಪದ್ಮಾಸನದಲ್ಲಿ ನಾದಾನುಸಂಧಾನದ ಅನುಷ್ಠಾನವನ್ನು ಮಾಡಲು ಸಾಧ್ಯವಿಲ್ಲ. ಕಾರಣವೇನೆಂದರೆ, ಹಸ್ತಗಳ ಬೆರಳುಗಳಿಂದ ಕಣ್ಣು ಕಿವಿ ಮುಂತಾದ್ದನ್ನು ಮುಚ್ಚಿಕೊಳ್ಳುವ ಕಾರ್ಯಮಾಡಬೇಕಾಗಿರುವುದರಿಂದ ಬದ್ಧ ಪದ್ಮಾಸನದಲ್ಲಿ ಸಾಧ್ಯವೇ ಇಲ್ಲ. ನಾದಾನುಸಂಧಾನಕ್ಕೆ ಗುದಕ್ಕೂ ಯೋನಿಗೂ ಮಧ್ಯೆ ಎಡದಹಿಮ್ಮಡಿಯನ್ನಿಟ್ಟು ಬಲದ ಕಾಲನ್ನು ಎಡದ ತೊಡೆಯಮೇಲೆ ಇಟ್ಟುಕೊಳ್ಳುವ ಸಿದ್ಧಾಸನವೇ ಸರ್ವೋತ್ತಮವಾದುದು.

ಇಂದ್ರನ ರಥಸ್ವರೂಪವಾದ ಷಣ್ಮುಖೀಕರಣದ ಅನುಷ್ಠಾನವು ಪೂಜಾರ್ಹವಾದುದು. ಕಾರಣವೇನೆಂದರೆ, ಅವಿದ್ಯಾಪ್ರಧಾನಪುರುಷನಾದ ರಾವಣನ ನಿಗ್ರಹಕ್ಕೆ ಸಹಕಾರಿಯಾಗಿಯೂ, ನಮ್ಮಲ್ಲಿಯೇ ಇರುವ ಆದಿತ್ಯನ ಜ್ಯೋತಿಃ ಸ್ವರೂಪವನ್ನು ಹೊಂದುವುದಕ್ಕೂ ನಾದಬ್ರಹ್ಮರೂಪವಾದ "ಓಂ"ಕಾರನಾದಾನುಸಂಧಾನಕ್ಕೂ ಸಹಕಾರಿಯಾಗಿರುವುದರಿಂದಲೂ, ಮತ್ತು ಈಶ್ವರನೇ ಓಂಕಾರನಾದಸ್ವರೂಪನಾಗಿರುವುದರಿಂದಲೂ, ಪೂಜಾರ್ಹವಾದುದು. ಈ ಅಂತರಾರ್ಥವನ್ನನುಸರಿಸಿಯೇ ಶ್ರೀರಾಮನು ಇಂದ್ರನ ರಥಕ್ಕೆ ಪ್ರದಕ್ಷಿಣ ನಮಸ್ಕಾರ ಮಾಡಿರುತ್ತಾನೆ. ಸಮಾಧಿಯ ಅನುಷ್ಠಾನ ಮಾಡದೆ ಇರತಕ್ಕವರು ಕೂಡ ಷಣ್ಮುಖೀಕರಣದಂತೆ ಕಿವಿ ಕಣ್ಣು ಮೂಗು ಬಾಯಿಗಳನ್ನು ಮುಚ್ಚಿಕೊಂಡು ಭ್ರೂಮಧ್ಯದಲ್ಲಿ ದೃಷ್ಟಿಯನ್ನಿಟ್ಟುಕೊಂಡರೆ ಎಂತಹ ತೇಜಸ್ಸು ಕಾಣುವುದೋ ಸ್ವಾನುಭವದಿಂದ ನೋಡಿ ತಿಳಿದುಕೊಳ್ಳಬಹುದು. ಹೀಗಿರುವಲ್ಲಿ ಯೋಗದ ಕ್ರಮಸೋಪಾನಗಳನ್ನೆಲ್ಲ ಅನುಷ್ಠಾನಮಾಡಿಕೊಂಡು ಬಂದು ನಾದಾನುಸಂಧಾನದ ಸೋಪಾನಕ್ಕೆ ಬಂದಿರುವವರು ಎಂತಹ ತೇಜಸ್ಸಿನೊಳಗೆ ಧ್ಯಾನಮಾಡುತ್ತಿರುವರೆಂದು ಊಹಿಸಿಕೊಳ್ಳಬಹುದು.

ಈ ಷಣ್ಮುಖೀಕರಣದಿಂದ ಅಂತರ್ಮುಖದಲ್ಲಿ ಆವಿರ್ಭೂತವಾಗುವ ತೇಜಸ್ಸಿನಲ್ಲಿ ಸಮಾಧಿಯ ಅಭ್ಯಾಸಮಾಡುವುದೇ ಆತ್ಮಸುಖವನ್ನು ಕೊಡುವ ಶಾಂಭವೀಮುದ್ರೆಯೆನಿಸಿ

ಕೊಳ್ಳುತ್ತದೆ. ಅಲ್ಲದೆ ಸಂಧ್ಯೋಪಾಸನೆಯಲ್ಲಿನ ಗಾಯತ್ರೀದೇವಿಯು ಇಂತಹ ತೇಜಸ್ಸಿನ ಉಪಾಸನೆಯಿಂದ ಲಭ್ಯಳೆನ್ನುವ ತತ್ವಕ್ಕೆ "ಮುಕ್ತಾವಿದ್ರುಮ ಹೇಮ ನೀಲ ಧವಳ ಚ್ಛಾಯೈಃ" ಎಂದು ಹೇಳಿರುವಂತಹ ಕಾಂತಿಯ ಪ್ರಕಾಶದಲ್ಲಿ ಗಾಯತ್ರಿಯನ್ನು ಉಪಾಸನೆ ಮಾಡಬೇಕೆಂಬ ತತ್ವವಾಗಿರುವುದು. ಅಂದರೆ ಈ ಷಣ್ಮುಖೀಕರಣದಿಂದ ಮಾಡುವ ಸಮಾಧಿ ಯಿಂದ ಗಾಯತ್ರಿಯು ಲಭ್ಯಳೆಂಬ ತತ್ವವಾಗಿರುವುದು. ಈ ಸೋಪಾನದ ಸಮಾಧಿಯ ಅಭ್ಯಾಸದಿಂದ ಸಂಧ್ಯಾಸ್ವರೂಪವೆಂದರೆ ಜೀವಾತ್ಮ ಪರಮಾತ್ಮ ಸಾಕ್ಷಾತ್ಕಾರಮಾಡಿಸತಕ್ಕ ಗಾಯತ್ರೀ, ಸಾವಿತ್ರೀ, ಸರಸ್ವತೀ ಸ್ವರೂಪದ ತತ್ವವೆಲ್ಲಾ ಅನುಭವಕ್ಕೆ ಬರುತ್ತವೆ. ಅಂದರೆ ಈ ನಾದಾನುಸಂಧಾನದ ಸೋಪಾನವು ಅನುಷ್ಠಾನಕ್ಕೆಲ್ಲಾ ಕೊನೆಯ ಸೋಪಾನ ವಾಗಿಯೂ, ಆತ್ಮಸಾಕ್ಷಾತ್ಕಾರವನ್ನುಂಟುಮಾಡಿ ಕೊಡುವುದಾಗಿಯೂ ಇರುವುದು. ಗಾಯತ್ರಿಯು ಹೇಗೆ ಆತ್ಮಸಾಕ್ಷಾತ್ಕಾರವನ್ನು ಮಾಡಿಕೊಡುವುದರ ಮೂಲಕ ಉಪಾಸಕ ರನ್ನು ಕಾಪಾಡುತ್ತಾಳೋ ಹಾಗೆ ಈ ನಾದಾನುಸಂಧಾನವು ಆತ್ಮಸಾಕ್ಷಾತ್ಕಾರವನ್ನು ಉಂಟುಮಾಡುವುದಕ್ಕೆ ಸಹಾಯಕವಾಗಿರುವುದು. ಗಾಯತ್ರಿಯೆಂದರೆ "ಗಾಯಂತಂ ತ್ರಾಯತೆ ಇತಿ ಗಾಯತ್ರೀ" ಗಾನಮಾಡುವವರನ್ನು ಕಾಪಾಡುವುದು ಯಾವುದೋ ಅದು ಗಾಯತ್ರೀ. ಅಂದರೆ "ಓಂ"ಕಾರನಾದವನ್ನು ಗಾನಮಾಡುವವರೆಂದರೆ ನಾದೋಪಾಸನೆ ಯನ್ನು ಯಾರುಮಾಡುವರೋ ಅವರಿಗೆ ಗಾಯತ್ರೀಹೃದಯವಾದ ಪರಮಾತ್ಮ ಸಾಕ್ಷಾತ್ಕಾರವಾಗುವುದೆಂಬ ತತ್ವವು.

ಷಣ್ಮುಖೀಮುದ್ರೆಯನ್ನು ಮಾಡಿಕೊಳ್ಳುವುದರಲ್ಲಿ ಜ್ಞಾನೇಂದ್ರಿಯಸ್ವರೂಪವಾದ ಕಿವಿ, ಕಣ್ಣು, ಮೂಗು ಮುಂತಾದುವುಗಳನ್ನು ಮುಚ್ಚಿಕೊಳ್ಳುತ್ತೇವಷ್ಟೆ! ಕರ್ಮೇಂದ್ರಿಯ ಗಳ ಮೂಲಕ ಕಾರ್ಯಮಾಡದೆ ತಟಸ್ಥರಾಗಿ ಕುಳಿತಿದ್ದರೂ ಜ್ಞಾನೇಂದ್ರಿಯಗಳ ಕಾರ್ಯನಡೆ ಯದೆ ನಿಲ್ಲುವುದಿಲ್ಲ. ಮೌನದಿಂದ ಕುಳಿತಿದ್ದರೂ ಶಬ್ದ ಕೇಳಿಯೇ ಕೇಳುವುದು. ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳ ಕಾರ್ಯಗಳು ನಡೆಯುವ ಪರ್ಯಂತರ ವಿಕ್ಷೇಪಶಕ್ತಿಯಾದ ರಾವಣನು ಇದ್ದೇ ಇರುವನು. ಯಾವಾಗ ವಿಕ್ಷೇಪಶಕ್ತಿಗೆ ಪ್ರಬಲವಾಗಿ ಆಶ್ರಯವಾಗಿರ ತಕ್ಕ ಜ್ಞಾನೇಂದ್ರಿಯಗಳನ್ನು ಬಂಧಿಸುವೆವೋ ಆಗ ರಜೋಗುಣ ಅಥವಾ ವಿಕ್ಷೇಪಶಕ್ತಿ ಯನ್ನು ಬಲೆಯಿಂದ ಬಂಧಿಸಿದಂತಾಗುವುದು. ಮುದ್ರೆಯೆಂದರೆ ಬಂಧಿಸುವುದೆಂದು ಹಿಂದೆಯೇ ತಿಳಿಸಿರುತ್ತೆ. ಆದುದರಿಂದ ಷಣ್ಮುಖೀಮುದ್ರೆಯು ಅವಿದ್ಯಾಪ್ರಧಾನಶಕ್ತಿ ಯನ್ನು ನಿಗ್ರಹಿಸುವುದಕ್ಕೂ, ಆತ್ಮಸಾಕ್ಷಾತ್ಕಾರಕ್ಕೂ ಮುಖ್ಯ ಸಹಾಯವಾಗಿರುವುದು.

ಇಂದ್ರನ ರಥವನ್ನು ತಂದ ಮಾತಲಿಯ ಸಹಾಯವೇನೆಂದರೆ—ಮಾತಲಿಯೆಂದರೆ, "ಮತಾನಿ ಸೂತಕರ್ಮಾಣಿ ಲಾತಿ ಗೃಹ್ಣಾತೀತಿ ಮತಲಃ ತಸ್ಯಾಪತ್ಯಂ ಮಾತಲಿಃ" ಸಾರಥಿ ಕರ್ಮಗಳಲ್ಲಿರತಕ್ಕ ವಿಚಾರಗಳನ್ನು ಚೆನ್ನಾಗಿ ಗ್ರಹಿಸಿರುವವನು ಮತಲನು. ಅವನ ಮಗ

ಮಾತಲಿಯು. ಮಾತಲಿಯು ಇಂದ್ರನರಥದ ಸಾರಥ್ಯಕರ್ಮದಲ್ಲಿ ಚೆನ್ನಾಗಿ ಪರಿಶ್ರಮವುಳ್ಳವನು. ಅಂದರೆ ಷಣ್ಮುಖೀಮುದ್ರೆಯ ಅನುಷ್ಠಾನದಲ್ಲಿಯೇ ನಡೆಸಿಕ್ಕೊಂಡು ಹೋಗುವವನೆಂಬ ತತ್ವ. ಅಂದರೆ "ಓಂ"ಕಾರನಾದದಲ್ಲಿಯೇ ಆಸಕ್ತನಾಗಿ ಅಧಿಕಾರಿಯು ನಾದವನ್ನು ಅನುಸರಿಸಿಕೊಂಡೇ ಸಮಾಧಿಯ ಅಭ್ಯಾಸವನ್ನು ಮಾಡಬೇಕೆಂಬ ತತ್ವವೇ ಇಂದ್ರನ ಸಾರಥಿಯಾದ ಮಾತಲಿಯ ತತ್ವವಾಗಿರುವುದು.

ರಾ|| ಶ್ರೀರಾಮನು ಅತಿ ಹರ್ಷದಿಂದ ಇಂದ್ರನ ರಥವನ್ನೇರಿ ಶರೀರದ ಕಾಂತಿಯಿಂದ ಸಮಸ್ತ ದಿಕ್ಕುಗಳನ್ನೂ ಬೆಳಗಿಸುತ್ತ ರಾವಣನೊಡನೆ ಯುದ್ಧಕ್ಕೆ ಪ್ರಾರಂಭಮಾಡಲು ರಾವಣನು ಗಂಧರ್ವಾಸ್ತ್ರವನ್ನು ತೊಟ್ಟನು. ಅದಕ್ಕೆ ಪ್ರತಿಯಾಗಿ ಶ್ರೀರಾಮನೂ ಗಂಧರ್ವಾಸ್ತ್ರವನ್ನು ತೊಟ್ಟನು. ಹೀಗೆ ಪರಸ್ಪರ ಯುದ್ಧಮಾಡುತ್ತ ರಾವಣನು ಪ್ರಯೋಗಮಾಡಿದ ತ್ರಿಶೂಲವನ್ನು ದೇವೇಂದ್ರನು ಕಳುಹಿಸಿದ್ದ ಶಕ್ತ್ಯಾಯುಧದಿಂದ ಕತ್ತರಿಸಿದನು.

ತತ್ವ|| ಷಣ್ಮುಖೀಮುದ್ರೆಯನ್ನು ಮಾಡಿಕೊಂಡು ಸಮಾಧಿಯ ಅಭ್ಯಾಸಮಾಡಲು ಪ್ರಾರಂಭಮಾಡಬೇಕೆಂದು ಮೇಲಿನ ತತ್ವಗಳಲ್ಲಿ ವಿವರಿಸಿರುತ್ತಷ್ಟೆ! ಈ ಷಣ್ಮುಖೀಮುದ್ರೆಯಿಂದ ಸಮಾಧಿಯನ್ನು ಅಭ್ಯಾಸಮಾಡಿದರೆ ಬುದ್ಧಿವೃತ್ತಿಯು ತೇಜೋಮಯವಾಗಿ ತೇಜೋರೂಪದಲ್ಲಿರುವುದೇ ಶ್ರೀರಾಮನು ತನ್ನ ಶರೀರಕಾಂತಿಯಿಂದ ಸಮಸ್ತ ದಿಕ್ಕುಗಳನ್ನೂ ಬೆಳಗಿಸುತ್ತಿದ್ದ ತಾತ್ಪರ್ಯವಾಗಿರುವುದು.

ಷಣ್ಮುಖೀಮುದ್ರೆಯಿಂದ ಸಮಾಧಿಯ ಅಭ್ಯಾಸಮಾಡುತ್ತಿದ್ದರೂ ವಿಕ್ಷೇಪಶಕ್ತಿಯ ಕಾರ್ಯವು ಇದ್ದೇ ಇರುವ ಸೂಚನೆಯೇ ರಾವಣನು ಯುದ್ಧಮಾಡುತ್ತಿರುವುದಾಗಿರುವುದು. ರಾವಣನು ಗಂಧರ್ವಾಸ್ತ್ರವನ್ನು ಪ್ರಯೋಗಮಾಡಿದನೆಂದರೆ—ಗಂಧರ್ವವೆಂಬ ಪದಕ್ಕೆ "ಗಾನಂ ಧರ್ಮಃ ಏಷಾಂ ತೇ ಗಂಧರ್ವಾಃ" ಗಾನವೇ ಧರ್ಮವಾಗಿ ಉಳ್ಳದ್ದಕ್ಕೆ ಗಂಧರ್ವವೆಂಬ ಹೆಸರು ಈ ವ್ಯುತ್ಪತ್ತಿಯು ಅಮರದ ವ್ಯಾಖ್ಯಾನದಲ್ಲಿ ಇರುವುದು. ಆದುದರಿಂದ ರಾವಣನು ಗಂಧರ್ವಾಸ್ತ್ರವನ್ನು ತೊಟ್ಟನೆಂದರೆ—ಒಳಗಡೆ "ಓಂ"ಕಾರದ ನಾದೋತ್ಪತ್ತಿಯೆಂಬ ತತ್ವವಾಗಿರುವುದು. ನಾದೋತ್ಪತ್ತಿಗೂ ವಿಕ್ಷೇಪಶಕ್ತಿಯ ಸಹಾಯ ಬೇಕೆನ್ನುವುದನ್ನು ಸೂಚಿಸುವ ತತ್ವವೇ ರಾವಣನು ಗಂಧರ್ವಾಸ್ತ್ರವನ್ನು ಪ್ರಯೋಗಮಾಡಿದುದಾಗಿದೆ. ಯಾವಾಗ ಒಳಗಡೆ ನಾದವನ್ನು ಕೇಳಲು ಪ್ರಾರಂಭಿಸುತ್ತೇವೆಯೋ ಆಗ ಆ ನಾದವನ್ನೇ ಅನುಸರಿಸಿಕೊಂಡು ಅದರಲ್ಲಿಯೇ ಲಯವನ್ನು ಹೊಂದುವೆವೆಂಬ ಅನುಸಂಧಾನಮಾಡುವುದೇ ಬುದ್ಧಿತತ್ವಸ್ವರೂಪನಾದ ಶ್ರೀರಾಮನು ಕೂಡ ಗಂಧರ್ವಾಸ್ತ್ರವನ್ನು ತೊಟ್ಟದ್ದಾಗಿರುವುದು. ಈ ಮೇಲಿನ ತತ್ವಕ್ಕೆ ಅನುಸಾರವಾಗಿ ನಾದಬಿಂದೂಪನಿಷತ್ತಿನಲ್ಲಿ,

ಯತ್ರ ಕುತ್ರಾಪಿವಾನಾದೆ ಲಗತಿ ಪ್ರಥಮಂ ಮನಃ |
ತತ್ರ ತತ್ರ ಸ್ಥಿರೀಭೂತ್ವಾ ತೇನ ಸಾರ್ಧಂ ವಿಲೀಯತೇ ||

ತಾ|| ಬುದ್ಧಿವೃತ್ತಿಯು ಯಾವಾಗ ನಾದದೊಡನೆ ಕಲೆಯುವುದೋ ಆಗ ಆ ನಾದ ದಲ್ಲಿಯೇ ಸ್ಥಿರತ್ವವನ್ನು ಹೊಂದಿ ಅದರಲ್ಲಿಯೇ ಲಯವಾಗುವುದು, ಎಂದು ಹೇಳಿರುವುದು.

ಈ "ಓಂ"ಕಾರನಾದವೇ ಈಶ್ವರವಾಚಕವಾಗಿರುವುದೆಂದೂ ಇದರ ಅನುಸಂಧಾನ ಮಾಡುವವರು ಪರಬ್ರಹ್ಮನನ್ನು ಹೊಂದುವರೆಂದೂ ಪತಂಜಲಿಮಹರ್ಷಿಗಳು ಯೋಗ ಸೂತ್ರದಲ್ಲಿ,

> ತಸ್ಯ ವಾಚಕಃ ಪ್ರಣವಃ ತಜ್ಜಪ ಸ್ತದರ್ಥಭಾವನಂ |
> ತತಃ ಪ್ರತ್ಯಕ್ಚೇತನಾಧಿಗಮೋ ಪ್ಯಂತರಾಯೋ ಭಾವಶ್ಚ ||

ತಾ|| ಈಶ್ವರನ ಉಚ್ಚಾರಣೆ ಅಥವಾ ವಾಚಕವೇ ಪ್ರಣವವು. ನಾದಬ್ರಹ್ಮರೂಪ ವಾದ "ಓಂ"ಕಾರದ ಉಚ್ಚಾರಣೆಯ ಅನುಸಂಧಾನ ಮತ್ತು ನಾದದಲ್ಲಿ ಲೀನವಾಗೋಣವೆ ಪರಬ್ರಹ್ಮನಿಗೆ ಅಭಿಮುಖವಾಗುವುದಲ್ಲದೆ ಬುದ್ಧಿಯ ಅಂತರಾಯವೆಂದರೆ, ರಜಸ್ತಮೋ ಗುಣಗಳ ಉದ್ರೇಕದಿಂದುಂಟಾಗುವ ವಾಸನಾವೃತ್ತಿಗಳು ನಶಿಸುವುವು.

ಎಂದು ಹೇಳಿರುವುದಕ್ಕೂ ಶ್ರೀರಾಮನು ಇಂದ್ರನ ರಥವನ್ನು ಆರೋಹಣಮಾಡಿ ಗಂಧ ರ್ವಾಸ್ತ್ರವನ್ನು ಅನುಸಂಧಾನಮಾಡಿರುವುದಕ್ಕೂ ಹೋಲಿಕೆಯಾಗಿರುವುದು. ಅಲ್ಲದೆ ನಾದಾನುಸಂಧಾನದ ಶ್ರೇಷ್ಠತೆಯನ್ನೂ ಸಹ ಸೂಚಿಸುವುದು. ಸೇತುಬಂಧನದಾರಭ್ಯದ ಕಥೆಯ ತತ್ವವಾದ "ಓಂ"ಕಾರವರ್ಣೋಚ್ಚಾರಣೆಯ ವಿಚಾರವನ್ನು ಈ ಸೂತ್ರವು ಒಳ ಗೊಂಡಿರುವುದು. ಈ ನಾದಾನುಸಂಧಾನದ ಶ್ರೇಷ್ಠತೆಗೆ ವರಾಹೋಪನಿಷತ್ತಿನಲ್ಲಿ,

> ಸರ್ವಚಿಂತಾಂ ಪರಿತ್ಯಜ್ಯ ಸಾವಧಾನೇನ ಚೇತಸಾ |
> ನಾದಏವಾನುಸಂಧೇಯೋ ಯೋಗಸಾಮ್ರಾಜ್ಯಮಿಚ್ಛತಾ ||

ತಾ|| ಸಮಾಧಾನವಾದ ಬುದ್ಧಿಯಿಂದ ಬಾಹ್ಯವಿಷಯಸ್ವರೂಪವಾದ ಎಲ್ಲಾ ಚಿಂತನೆಯನ್ನೂ ಪರಿತ್ಯಾಗಮಾಡಿ ಸಾಕ್ಷಾತ್ಕಾರವನ್ನು ಅಪೇಕ್ಷಿಸತಕ್ಕವನಿಂದ "ಓಂ"ಕಾರ ನಾದವು ಅನುಸಂಧಾನಮಾಡಲ್ಪಡಲಿ, ಎಂದು ಹೇಳಿರುವುದು.

ಈ ಮೇಲಿನ ಶ್ರುತಿವಾಕ್ಯಕ್ಕೆ ಅನುಸಾರವಾಗಿ ಬಾಹ್ಯವಿಷಯಕ್ಕೆ ಮುಖ್ಯಕಾರಣನಾದ ರಾವಣನನ್ನು ನಿಗ್ರಹಿಸಲು ಶ್ರೀರಾಮನು ಪ್ರಾರಂಭಮಾಡಿರುವನು. ನಾದಾನುಸಂಧಾನ ವನ್ನು ಅನುಸರಿಸಿಕೊಂಡು ಬರುವವನು ಪರಬ್ರಹ್ಮಸಾಕ್ಷಾತ್ಕಾರವನ್ನು ಪಡೆಯುವ ನೆಂಬುದಕ್ಕೆ ತ್ರಿಪುರತಾಪಿನ್ಯುಪನಿಷತ್ತಿನಲ್ಲಿ,

ದ್ವೇ ಬ್ರಹ್ಮಣೀಹಮಂತವ್ಯೇಶಬ್ದ ಬ್ರಹ್ಮಪರಂಚಯತ್ |
ಶಬ್ದಬ್ರಹ್ಮಣಿ ನಿಷ್ಣಾತಃ ಪರಬ್ರಹ್ಮಾಧಿಗಚ್ಛತಿ ||

ತಾ|| ಆತ್ಮಶ್ರೇಯಸ್ಸನ್ನು ಕೋರತಕ್ಕವನು ಪರಾಪರಬ್ರಹ್ಮಸ್ವರೂಪವಾದ ನಾದ ಬ್ರಹ್ಮವನ್ನು ಅನುಸಂಧಾನಮಾಡಬೇಕು. ನಾದಪ್ರತೀತವಾದ ಶಬ್ದಬ್ರಹ್ಮೋಪಾಸನೆಯಲ್ಲಿ ನಿಷ್ಣನಾದವನು ಪರಬ್ರಹ್ಮಪ್ರಾಪ್ತಿಯನ್ನು ಹೊಂದುತ್ತಾನೆ. ಎಂದು ಹೇಳಿರುವುದು. ಇದೇ ಅರ್ಥಕ್ಕೆ ಪಾಶುಪತಬ್ರಹ್ಮೋಪನಿಷತ್ತಿನಲ್ಲಿಯೂ,

ಮಾನಸಂ ಹಂಸಃ ಸೋಹಂ ಹಂಸ ಇತಿ ತನ್ಮಯ ಯಜ್ಞೋ
ನಾದಾನುಸಂಧಾನಂ ತನ್ಮಯ ವಿಕಾರೋ ಜೀವಃ ಪರಮಾತ್ಮ
ಸ್ವರೂಪ್ರೋ ಹಂಸಃ ಹಂಸ ಪ್ರಣವಯೋ ರಭೇದಃ ||

ತಾ|| ತಿಳಿಯತಕ್ಕವನೂ ಪರಬ್ರಹ್ಮನು. ಅಹಂಪ್ರತ್ಯಯಕ್ಕೆ ವಿಷಯನಾಗಿ ಜೀವಸ್ವರೂಪನಾಗಿರುವ ನಾನೂ ಪರಬ್ರಹ್ಮನೇ. ನಾದಾನುಸಂಧಾನವೆಂದರೆ ಈ ರೀತಿಯಾಗಿ ಜೀವಬ್ರಹ್ಮಸಾಕ್ಷಾತ್ಕಾರದ ಅನುಸಂಧಾನವು. ಇದೇ ಯಜ್ಞವು. ಹೀಗೆ ನಾದಾನುಸಂಧಾನದ ಪರಿಪಕ್ವಾವಸ್ಥೆಯನ್ನು ಪಡೆಯದ ಬಹಿರ್ವ್ಯಾಪಾರಪ್ರಕಾಶಕನು ಜೀವನು. ಪರಮಾತ್ಮ ಚೈತನ್ಯನೇ ಜೀವಚೈತನ್ಯನು. ಜೀವ ಬ್ರಹ್ಮರ ಚೈತನ್ಯದಲ್ಲಿ ಭೇದವಿಲ್ಲ. ಅಂದರೆ ಒಂದು ಪರ ಮತ್ತೊಂದು ಅಪರವಾಗಿದ್ದರೂ ಎರಡೂ ಬ್ರಹ್ಮಸ್ವರೂಪವೆಂದು ಹೇಳಲ್ಪಟ್ಟಿರುವುದರಿಂದ ನಾದಾನುಸಂಧಾನದ ಸೋಪಾನವು ಶ್ರೇಷ್ಠವಾದುದು.

ಆದುದರಿಂದ ಮೇಲಿನ ರಾಮಾಯಣಕಥೆಯು ತತ್ವಗಳಿಗೂ ಶ್ರುತಿವಾಕ್ಯಗಳಿಗೂ ಅನುಸಾರವಾಗಿ ಶ್ರೀರಾಮನು ಇಂದ್ರನ ರಥವನ್ನು ಆರೋಹಣಮಾಡಿ ಯುದ್ಧಕ್ಕೆ ಪ್ರಾರಂಭ ಮಾಡಿದನೆಂದರೆ, ನಾದಾನುಸಂಧಾನದ ಅನುಷ್ಠಾನಕ್ಕೆ ಅಧಿಕಾರಿಯು ಪ್ರಾರಂಭಮಾಡಿದನೆಂಬ ತತ್ವವಾಗಿರುವುದು. ಈ ನಾದಾನುಸಂಧಾನದ ವಿಚಾರವನ್ನು ಮುಂದಿನ ಪ್ರಕರಣದಲ್ಲಿ ಇನ್ನೂ ಅತಿಶಯವಾಗಿ ವಿವರಿಸಿರುವುದು.

## ೨೮ನೆಯ ಪ್ರಕರಣ.

| | |
|---|---|
| **ಶ್ರೀರಾಮನಿಗೆ ಅಗಸ್ತ್ಯ ಮಹರ್ಷಿಗಳು ಆದಿತ್ಯಹೃದಯವನ್ನು ಉಪದೇಶಮಾಡಿದುದು.** | **ತೇಜೋನಾದಧ್ಯಾನವಿದ್ಯೆಯ ಸೋಪಾನ. ಅಂದರೆ ಸಮಾಧಿಯಲ್ಲಿ ಕಾಣುವ ಆದಿತ್ಯನ ಪೂರ್ಣ ಜ್ಯೋತಿಯ ಮತ್ತು "ಓಂ"ಕಾರ ನಾದದಸೋಪಾನ.** |

**ರಾ||** ರಾಮ ರಾವಣರು ಘೋರವಾಗಿ ಯುದ್ಧಮಾಡುತ್ತಿದ್ದರು.

**ತತ್ವ**|| ಅಧಿಕಾರಿಯು "ಓಂ"ಕಾರವರ್ಣೋಚ್ಚಾರಣೆಯನ್ನು ಮಾಡಿಕೊಂಡು ಶಿರಸ್ಸಿನವರೆಗೆ ತೆಗೆದುಕೊಂಡುಹೋಗಿ ಷಣ್ಮುಖೀಮುದ್ರೆಯನ್ನು ಮಾಡಿಕೊಂಡು ನಾದಾನುಸಂಧಾನದ ಅನುಷ್ಠಾನಮಾಡುತ್ತಿರುವಾಗ, ವಿಷಯವಾಸನಾವೃತ್ತಿಯು ಇಂದ್ರಿಯಗಳ ದ್ವಾರಾ ಬುದ್ಧಿಯನ್ನು ಬಹಿರಾಕರ್ಷಣೆಮಾಡುತ್ತಿರುವುದೇ ರಾವಣನು ಶ್ರೀರಾಮನೊಡನೆ ಯುದ್ಧಮಾಡುತ್ತಿದ್ದ ತತ್ವವು.

**ರಾ**|| ಘೋರಯುದ್ಧದಿಂದ ಶ್ರೀರಾಮನು ಶ್ರಮಹೊಂದಿ ರಾವಣನನ್ನು ಕೊಲ್ಲುವ ಉಪಾಯವೇನೆಂದು ಚಿಂತಿಸುತ್ತಿರುವುದನ್ನೂ ರಾವಣನು ಯುದ್ಧಾತುರನಾಗಿ ನಿಂತಿರುವುದನ್ನೂ ಅಗಸ್ತ್ಯಮಹಾಮುನಿಯು ನೋಡಿ, ಥಟ್ಟನೆ ಶ್ರೀರಾಮನ ಸಮೀಪಕ್ಕೆ ಬಂದು "ರಾಮಾ! ರಾಮಾ! ಮಹಾಬಾಹೋ! ರಹಸ್ಯವಾಗಿಯೂ, ವೇದಗಳಂತೆ ನಿತ್ಯವಾಗಿಯೂ ಇರುವ ಆದಿತ್ಯಹೃದಯವನ್ನು ಉಪದೇಶಿಸುವುದಕ್ಕೆ ಬಂದಿರುವೆನು. ಈ ಮಂತ್ರೋಪದೇಶಹೊಂದಿ ಅನುಷ್ಠಾನಮಾಡಿದವರು ಶತ್ರುಗಳನ್ನು ನಾಶಗೊಳಿಸಿ ಅಕ್ಷಯವಾದ ಫಲವನ್ನು ಹೊಂದುವರು. ಈ ಆದಿತ್ಯನ ಮಹಿಮೆಯನ್ನು ಹೇಳುವೆನು.

"ಸುವರ್ಣವರ್ಣದಿಂದ ಕೂಡಿದ ಪ್ರಶಸ್ತವಾದ ತೇಜಸ್ಸುಳ್ಳವನಾಗಿಯೂ, ಇತರ ತೇಜಸ್ಸನ್ನು ಅಡಗಿಸತಕ್ಕ ಮಹಾತೇಜಸ್ಸುಳ್ಳವನಾಗಿಯೂ, ದೇವಾಸುರರಿಂದ ಪೂಜಿತನಾಗಿಯೂ, ಸಮಸ್ತ ಪ್ರಪಂಚಕ್ಕೂ ಕಾಂತಿಯನ್ನುಂಟುಮಾಡತಕ್ಕವನಾಗಿಯೂ ಇರುವ ಸೂರ್ಯದೇವನನ್ನು ಪೂಜಿಸು. ಇತರ ದೇವತೆಗಳಿಷ್ಟೋ ಇರುವಾಗ ಇವನನ್ನೇ ಏತಕ್ಕೆ ಪೂಜಿಸಬೇಕೆಂದು ಶಂಕಿಸಬೇಡ. ಇವನೇ ಸಮಸ್ತ ದೇವತೆಗಳಿಗೂ ಆತ್ಮಸ್ವರೂಪನಾಗಿ ಇರುವನು. ಆದಿತ್ಯಮಂಡಲಾಂತವರ್ತಿಯಾಗಿದ್ದು ಸಮಸ್ತ ದೇವತೆಗಳ ಶರೀರಗಳಲ್ಲಿಯೂ ವರ್ತಿಸುವ ಪರಮಾತ್ಮನಾದುದರಿಂದ ಈತನೇ ಚತುರ್ಮುಖಬ್ರಹ್ಮನು, ವಿಷ್ಣುವು, ರುದ್ರನು, ಈತನೇ ಕುಮಾರಸ್ವಾಮಿಯು. ಇವನೇ ದೇವೇಂದ್ರನು. ಇವನೇ ಯಮನಾಗಿಯೂ, ಚಂದ್ರನಾಗಿಯೂ, ವರುಣನಾಗಿಯೂ, ಅಷ್ಟವಸ್ತುಗಳಾಗಿಯೂ ಮೆರೆಯುವನು. ಇವನೇ ಪಂಚಭೂತಗಳ ಸ್ವರೂಪನಾಗಿಯೂ, ಪ್ರಾಣಶಕ್ತಿಯಾಗಿಯೂ ಇರುವನು. ಇಂತಹ ಪ್ರಕಾಶಮಾನನಾದ ಆದಿತ್ಯನನ್ನು ಆರಾಧಿಸು" ಎಂದು ಶ್ರೀರಾಮನಿಗೆ ಉಪದೇಶಮಾಡಿ ಹೊರಟುಹೋದರು.

**ತತ್ವ**|| ರಾಮ ರಾವಣರಿಗೆ ಘೋರಯುದ್ಧ ನಡೆಯುತ್ತಿರುವಾಗ ಅಗಸ್ತ್ಯರು ಬರಲು ಕಾರಣವೇನು? ಆದಿತ್ಯಹೃದಯದ ತತ್ವವೇನು? ಸಮಾಧಿಯ ಅಭ್ಯಾಸಕಾಲದಲ್ಲಿ ಈ ಆದಿತ್ಯಹೃದಯದ ತತ್ವವು ಯಾವ ರೀತಿ ಅನ್ವಯವಾಗುವುದು. ಎಂಬ ವಿಚಾರಗಳನ್ನು ವಿವರಮಾಡೋಣ. ಈ ತತ್ವಾರ್ಥರಾಮಾಯಣದಲ್ಲಿ ಅಗಸ್ತ್ಯರನ್ನು ಅನಾಹತಚಕ್ರಕ್ಕೆ

ಅನ್ವಯವಮಾಡಿ ಅರಣ್ಯಕಾಂಡ ಪ್ರಾಣಮುಯಕೋಶ ಪ್ರಕರಣದಲ್ಲಿ ಬರೆದಿರುತ್ತೆ. ಅಲ್ಲಿ ಬರೆದಿರುವ ವಿಚಾರವನ್ನೂ, ಸಮುದ್ರರಾಜನು ಪ್ರತ್ಯಕ್ಷವಾದ ಮತ್ತು ಸೇತುಬಂಧನ ಪ್ರಕರಣದೊಂದಿಗೆ ಸಮನ್ವಯಮಾಡಿಕೊಂಡರೆ "ಓಂ"ಕಾರದ ಸ್ವರೂಪವು ಮುಂದಟ್ಟಾಗುವುದು.

ನಮ್ಮ ಎದೆಗೆ ಸೇರಿದಹಾಗೆ ಬೆನ್ನಿನ ಹುರಿಯಲ್ಲಿ ಶಕ್ತಿರೂಪದಲ್ಲಿ ಅನಾಹತಚಕ್ರ ವಿರುವುದನ್ನು ಚಿತ್ರಪಠದಲ್ಲಿ ತೋರಿಸಿರುವುದಷ್ಟೆ! ಅನಾಹತಚಕ್ರದ ಒಳಗಡೆ ಮತ್ತು ಹೊರಗಡೆ ಈ ವಿಷ್ಣುಗ್ರಂಥಿಯು ಇರುವುದು. ಇದು ಅಗಸ್ತ್ಯರ ತತ್ವಕ್ಕೆ ಸಂಬಂಧಪಟ್ಟು "ಉ"ಕಾರದಸ್ಥಳವಾಗಿರುವುದು. ಮೂಲಾಧಾರದಿಂದ ಹೊರಡುವ "ಓಂ"ಕಾರದಲ್ಲಿನ "ಅ"ಕಾರನಾದವು "ಉ"ಕಾರಕ್ಕೆ ಬಂದು ಸೇರಿದನಂತರ "ಓ"ಕಾರವಾಗುವುದಷ್ಟೆ! ಈ "ಓ"ಕಾರವು ಮಕಾರದಲ್ಲಿ ಸೇರದಂತೆ ಸ್ತಂಭನೆಮಾಡಿರುವ ತತ್ವವೆ ಅಗಸ್ತ್ಯರು ವಿಂಧ್ಯ ಪರ್ವತವನ್ನು ಮಲಗಿಸಿರುವ ತತ್ವವೆಂದು ಹಿಂದೆ ತಿಳಿಸಿತಷ್ಟೆ! ಈ ಸ್ತಂಭಿಸಿರುವ 'ಓ'ಕಾರವು ಭೇದಿಸಲ್ಪಟ್ಟು ಮಕಾರವನ್ನು ಸೇರಿದ ಅನಂತರದಲ್ಲಿಯೇ "ಓಂ"ಕಾರವಾಗುವುದೆಂದರೆ, ತುರೀಯಾವಸ್ಥೆಯು ದೊರೆಯುವುದು. ಆದುದರಿಂದ ಕುಂಡಲಿನಿಯ ಜ್ಯೋತಿಯಲ್ಲಿ ಬುದ್ಧಿ ವೃತ್ತಿಯು ಸುಷುಮ್ನಾಮಾರ್ಗದಲ್ಲಿ ಅನಾಹತಚಕ್ರಕ್ಕೆ ಬಂದು ಇದರಿಂದ ಮುಂದಕ್ಕೆ ಹೋಗಲು ಸಮಾಧಿಯ ಅಭ್ಯಾಸಮಾಡುತ್ತಿರುವ ತತ್ವವೇ ಇಂದ್ರನ ರಥಾರೋಹಣ ಮತ್ತು ಅಗಸ್ತ್ಯರು ಶ್ರೀರಾಮನ ಬಳಿಗೆ ಬಂದ ತತ್ವವಾಗಿರುವುದು. ಅಂದರೆ ಭೇದನೆಯಾಗುತ್ತಿರುವ "ಓ"ಕಾರವು "ಮ"ಕಾರದಲ್ಲಿ ಸೇರಿಹೋದರೆ ವಿಕ್ಷೇಪಶಕ್ತಿಯು ನಶಿಸುವುದು. ಈ ವಿಕ್ಷೇಪ ಶಕ್ತಿಯು ನಿಗ್ರಹವಾಗಲು ಮಾಡುವ ಸಾಧನೆಯ ತತ್ವದ ಸೂಚನೆಯೇ ಅಗಸ್ತ್ಯರು ಶ್ರೀರಾಮನಿಗೆ ಅನುಷ್ಠಿಸಲು ಆದಿತ್ಯಹೃದಯವನ್ನು ಉಪದೇಶಮಾಡಿದ ತತ್ವವಾಗಿರುವುದು.

ಅಗಸ್ತ್ಯರು ಶ್ರೀರಾಮನಿಗೆ ಸಂದರ್ಶನಕೊಟ್ಟ ತತ್ವವೇನೆಂದರೆ—"ಓಂ"ಕಾರದಲ್ಲಿನ ಅಕಾರ ಉಕಾರಗಳು ಸೇರಿ ಆಗುವ ಓಕಾರನೇ ನಮ್ಮ ಎದೆಯ ಸ್ಥಳದಲ್ಲಿರುವುದೆಂದೂ, ಈ ಓಕಾರವು ಭ್ರೂಮಧ್ಯದಲ್ಲಿರುವ ಮಕಾರವನ್ನು ಸೇರಿ "ಓಂ"ಕಾರವಾಗದೆ ಬಂಧಿಸಲ್ಪಟ್ಟಿರುವುದೆಂದೂ ಅರಣ್ಯಕಾಂಡದಲ್ಲಿ ಅಗಸ್ತ್ಯಾಶ್ರಮ ಪ್ರಕರಣದಲ್ಲಿ ತಿಳಿಸಿತಷ್ಟೆ! "ಓ"ಕಾರ ಅಥವಾ ಅನಾಹತಚಕ್ರವು ಭೇದಿಸಲ್ಪಟ್ಟು "ಮ"ಕಾರಸಂಬಂಧವಾಗುತ್ತ ಬಂದರೆ "ಓಂ"ಕಾರನಾದೋತ್ಪತ್ತಿಯಾಗುವುದು. ಇದೇ ತಾತ್ಪರ್ಯಕ್ಕೆ ಸೇತುಬಂಧನದ ತತ್ವದಲ್ಲಿ,

ಅಕಾರೇರೇಚಿತಂಪದ್ಮ ಮುಕಾರೇಣೈವ ಭಿದ್ಯತೇ ।
ಮಕಾರೇ ಲಭತೇನಾದ ಮರ್ಧಮಾತ್ರಾತುನಿಶ್ಚಲಾ ॥

ಎಂಬ ಶ್ರುತಿಪ್ರಮಾಣವನ್ನು ಬರೆದಿರುತ್ತಷ್ಟೆ! ಆದುದರಿಂದ ಓಕಾರಸ್ವರೂಪವಾದ ಅನಾಹತಚಕ್ರವು ಭೇದಿಸಲ್ಪಟ್ಟು ಮಕಾರಸ್ವರೂಪವಾದ ಆಜ್ಞಾಚಕ್ರವನ್ನು ಸಂಬಂಧಿಸುತ್ತಾ ಬಂದಾಗ ನಾದೋತ್ಪತ್ತಿಯಾಗುತ್ತದೆ. ನಾದಾನುಸಂಧಾನದ ಸೋಪಾನಕ್ಕೆ ಬರುವಪರ್ಯಂತರ ಬಂಧಿಸಲ್ಪಟ್ಟಿದ್ದ ಅನಾಹತಚಕ್ರವು, ನಾದಾನುಸಂಧಾನದ ಸೋಪಾನದ ಪ್ರಾರಂಭವಾದಾಗ, ಭೇದಿಸಲ್ಪಡುವುದೆಂಬುದನ್ನು ಸೂಚಿಸುವ ತತ್ವಗಳಿಗೆ ಅನುಸಾರವಾಗಿಯೇ ಅಗಸ್ತ್ಯರು ಶ್ರೀರಾಮನಲ್ಲಿಗೆ ಬಂದಿರುವುದಾಗಿರುವುದು. ಮುಖ್ಯತಾತ್ಪರ್ಯವೇನೆಂದರೆ, ಈ ನಾದಾನುಸಂಧಾನದ ಅನುಷ್ಠಾನಕ್ಕೆ ಬಂದು ಅದರ ಪರಿಪಕ್ವಾವಸ್ಥೆಯ ಸ್ವರೂಪವಾದ "ಓಂ"ಕಾರಸ್ವರೂಪವನ್ನು ಯಾರು ಹೊಂದುವುದಿಲ್ಲವೋ ಅವರಲ್ಲಿ ಓಕಾರದ ಬಂಧನದಿಂದ ಪ್ರಣವವು ಅಧೋಮುಖವಾಗಿರುವುದೆಂಬ ತತ್ವವನ್ನು ಅಗಸ್ತ್ಯಾಶ್ರಮ ಪ್ರಕರಣದಿಂದಲೂ ವಿವರಿಸಿರುತ್ತಷ್ಟೆ! ಇದೇ ಅರ್ಥಕ್ಕೆ ಯೋಗಚೂಡಾಮಣ್ಯುಪನಿಷತ್ತಿನಲ್ಲಿ,

> ಜ್ಞಾನಿನಾ ಮೂರ್ಧ್ವಭಾಗೋಭೂ ದಜ್ಞಾನೇ ಸ್ಯಾದಧೋಮುಖಃ |
> ಏವಂ ವೈ ಪ್ರಣವಸ್ತಿಷ್ಠೇ ದ್ಯಸ್ತಂ ವೇದಸವೇದವಿತ್ ||
> ಅನಾಹತಸ್ವರೂಪೇಣ ಜ್ಞಾನಿನಾ ಮೂರ್ಧ್ವಗೋ ಭವೇತ್ |

ತಾ|| "ಓಂ"ಕಾರವು ಜ್ಞಾನಿಗಳಿಗೆ ಊರ್ಧ್ವಮುಖವಾಗಿಯೂ ಅಜ್ಞಾನಿಗಳಿಗೆ ಅಧೋಮುಖವಾಗಿಯೂ ಇರುವುದು. ಈ ರೀತಿಯಾಗಿರುವ ಪ್ರಣವಸ್ವರೂಪವನ್ನು ತಿಳಿದವನೇ ಜ್ಞಾನಿಯು. ಅನಾಹತಚಕ್ರಸ್ವರೂಪದಿಂದ ಎಂದರೆ, ಬಂಧಿಸಿರುವ "ಓ" ಕಾರವು ಊರ್ಧ್ವಮುಖವಾಗಿ "ಮ"ಕಾರವನ್ನು ಸೇರುವುದರಿಂದ "ಓಂ"ಕಾರವಾಗಿ ಸಾಕ್ಷಾತ್ಕಾರವಾಗುವುದು ಎಂಬದಾಗಿ ಹೇಳಿರುವುದು.

"ಓ"ಕಾರವು "ಮ"ಕಾರದಲ್ಲಿ ಸೇರದೆ ಇರುವುದರಿಂದ ಮಾನವನ ಎದೆಯಲ್ಲಿರುವ ಅನಾಹತಚಕ್ರವೆಂದರೆ ಹೃದಯಕೋಶದ ಕಮಲವು ಅಧೋಮುಖವಾಗಿರುವುದು.

ಇದೇ ತಾತ್ಪರ್ಯಕ್ಕೆ "ಹೃದಯಂಚಾಪ್ಯಧೋಮುಖಂ" "ಮತ್ತು "ತಸ್ಯಾಶ್ಶಿಖಾಯಾ ಮಧ್ಯೇ ಪರಮಾತ್ಮಾವ್ಯವಸ್ಥಿತಃ" ಎಂಬ ತೈತ್ತಿರೀಯೋಪನಿಷತ್ ಆಧಾರವೂ ಇರುವುದು. ಅಗಸ್ತ್ಯಾಶ್ರಮ ಪ್ರಕರಣದ ತತ್ವದಲ್ಲಿ ಹೃದಯಕೋಶದ ಕಮಲವು ಅಧೋಮುಖವಾಗಿರುವುದೆಂದು ಹೇಳಿರುವ ತತ್ವಕ್ಕೂ ಪ್ರಣವೋಪಾಸನೆಯಿಂದ ಊರ್ಧ್ವಮುಖವಾಗುವ ತತ್ವಕ್ಕೂ ಉತ್ತರಗೀತೆಯಲ್ಲಿ ಅರ್ಜುನನ ಪ್ರಶ್ನೆ ಮತ್ತು ಶ್ರೀಕೃಷ್ಣಪರಮಾತ್ಮನ ಉತ್ತರವು ಅನ್ವಯವಾಗುವುದು. ಅರ್ಜುನನ ಪ್ರಶ್ನೆ:—

> ದುರ್ವಿಜ್ಞೇಯಂ ದುರಾರಾಧ್ಯಂ ದುಷ್ಪ್ರಗಮ್ಯಂ ಜನಾರ್ದನ |
> ಅಧೋಮುಖಂ ಯಥಾಭೂತ್ವಾ ಹೃದಯೇ ಕೇನಗಚ್ಛತಿ ||

ತಾ|| ಎಲೈ ಶ್ರೀಕೃಷ್ಣನೆ! ತಿಳಿದುಕೊಳ್ಳಲು, ಆರಾಧಿಸಲು ಮತ್ತು ಹೊಂದಲು ಸುಲಭಸಾಧ್ಯವಲ್ಲದ್ದಾಗಿ ಅಧೋಮುಖವಾಗಿರುವ ಹೃದಯಪದ್ಮವನ್ನು ಯಾತರಿಂದ ಹೊಂದುತ್ತಾನೆ? ಶ್ರೀಕೃಷ್ಣಪರಮಾತ್ಮನ ಉತ್ತರ,

ಅಧೋಮುಖಂತು ಹೃತ್ಪದ್ಮ ಮುದ್ಧೃತ್ಯ ಪ್ರಣವೇನತು |
ಗತ್ವಾತು ಪದ್ಮಕೋಶಾಂತ ಮೇಕಸ್ಸೇವ್ಯೋ ಪುನಃ ಪುನಃ ||
ತತಃ ಪಶ್ಚಾದ್ಭವೇತ್ಪದ್ಮಂ ಸರ್ವಗಾತ್ರ ಸುಖಾವಹಮ್ |

ತಾ|| ಅಧೋಮುಖವಾಗಿರುವ ಹೃದಯಕಮಲವನ್ನು ಓಂಕಾರೋಪಾಸನೆಯಿಂದ ಮೇಲಕ್ಕೆಬ್ಬಿಸಿ ಇದರ ಶಿಖೆಯೆಂದರೆ ಸಹಸ್ರಾರವನ್ನು ಹೊಂದಿ ಸರ್ವವ್ಯಾಪಿಯೂ, ಆನಂದ ಸ್ವರೂಪಿಯೂ ಆದ ಪರಮಾತ್ಮನನ್ನು ಸೇವಿಸಬೇಕು.

ಆದುದರಿಂದ ಅಗಸ್ತ್ಯರು ಶ್ರೀರಾಮನಿಗೆ ದರ್ಶನಕೊಟ್ಟರೆಂದರೆ—ಇಂದ್ರನ ರಥಾ ರೋಹಣ ಮತ್ತು ರಾಮ ರಾವಣರ ಗಂಧರ್ವಾಸ್ತ್ರಪ್ರಯೋಗದ ತತ್ವಗಳಿಂದ ನಾದಾನು ಸಂಧಾನದ ಅನುಷ್ಠಾನವು ಪ್ರಾರಂಭವಾಗಿ ಅನಾಹತಚಕ್ರವು ಭೇದಿಸಲ್ಪಡುತ್ತ ಬರುವ ತತ್ವವಾಗಿರುವುದು.

ಈ ನಾದಾನುಸಂಧಾನವನ್ನೇತಕ್ಕೆ ಮಾಡಬೇಕೆಂದರೆ—ಬ್ರಹ್ಮಾಂಡದ ಸೃಷ್ಟಿಯು "ಓಂ"ಕಾರನಾದದಿಂದ ಆಗಿರುವುದು. ಹೇಗೆಂದರೆ, ಪರಮಾತ್ಮಸಂಬಂಧಿಯಾದ ಚಿಚ್ಛಕ್ತಿ ಯಿಂದ "ಓಂ"ಕಾರನಾದವೇ ಪ್ರಥಮದಲ್ಲಿ ಉದಯಿಸಿತು. ಹೀಗೆ ಉದಯಿಸಿದ ಈಶ್ವರ ವಾಚಕವಾಗಿರುವ ಈ "ಓಂ"ಕಾರನಾದದಿಂದಲೇ ಸಕಲ ಸೃಷ್ಟಿಗಳೂ ಆಗಿರುತ್ತವೆ. ಈ "ಓಂ"ಕಾರನಾದವನ್ನುಂಟುಮಾಡುವ ಶಕ್ತಿಗೇ ಸರಸ್ವತೀ, ಬ್ರಾಹ್ಮೀ, ವೈಷ್ಣವೀ, ಎಂಬ ಅನೇಕ ನಾಮಗಳಿವೆ. ಈ ನಾದಬ್ರಹ್ಮಸ್ವರೂಪವಾದ "ಓಂ"ಕಾರವು ನಮ್ಮಲ್ಲಿ ಬ್ರಹ್ಮ ನಾಡಿ ಅಥವಾ ಸುಷುಮ್ನೆಯೊಳಗಿರುತ್ತದೆ. ಸುಷುಮ್ನೆಯೊಳಗೆ "ಓಂ"ಕಾರನಾದಶಕ್ತಿ ಯಿದ್ದು ಸುಷುಮ್ನೆಯ ಹೊರಗಡೆ ಇರುವ ನಾವುಗಳು ಉಚ್ಚರಿಸುವ ಐವತ್ತೆರಡು ಅಕ್ಷರ ಗಳ ವರ್ಣಕ್ಕೂ ಪ್ರಕಾಶವನ್ನುಂಟುಮಾಡುತ್ತಿರುವುದು. ಮೇಲೆ ತಿಳಿಸಿರುವ ನಾದಬ್ರಹ್ಮ ಸ್ವರೂಪವಾದ "ಓಂ"ಕಾರವು ನಮ್ಮಲ್ಲಿರುವ ಸುಷುಮ್ನೆಯೊಳಗೆ ಇರುತ್ತೆಂಬುದಕ್ಕೆ ಯೋಗ ಶಿಖೋಪನಿಷತ್ ಮತ್ತು ಶಾಂಡಿಲ್ಯೋಪನಿಷತ್ತುಗಳಲ್ಲಿ,

ಗುದಸ್ಯ ಪೃಷ್ಠಭಾಗೇಸ್ಮಿನ್ ವೀಣಾದಂಡಸ್ಸದೇಹಭೃತ್ |
ದೀರ್ಘಾಸ್ಥಿ ದೇಹಪರ್ಯಂತಂ ಬ್ರಹ್ಮನಾಡೀತಿ ಕಥ್ಯತೇ |
ಉಚ್ಚಾರಯೇ ತ್ಪರಾಶಕ್ತಿಂ ಬ್ರಹ್ಮರಂಧ್ರನಿವಾಸಿನೀಂ ||

ತಾ|| ಗುದದ ಹಿಂದೆ ದೇಹವನ್ನು ಹೊತ್ತಿರುವ ದೀರ್ಘವಾದ ವೀಣಾದಂಡದಂತಿರುವ ಬೆನ್ನಿನ ಮೂಳೆಯು ಶಿರಸ್ಸಿನವರೆಗೂ ಇರುವುದು. ಇದರಲ್ಲಿ ಸುಷುಮ್ನಾ ಅಥವಾ ಬ್ರಹ್ಮನಾಡಿಯು ಶಕ್ತಿರೂಪದಲ್ಲಿರುವುದು. ಈ ನಾಡಿಯೊಳಗಿರುವ ಬ್ರಹ್ಮರಂಧ್ರನಿವಾಸಿನಿಯಾದ ಪರಾಶಕ್ತಿಯನ್ನೇ೦ದರೆ "ಓಂ"ಕಾರವನ್ನು ಉಚ್ಚಾರಮಾಡು. ಎಂದು ಹೇಳಿರುವುದು.

ಈ ಬ್ರಹ್ಮರಂಧ್ರನಾಡಿ ಅಥವಾ ಸುಷುಮ್ನೆಯ ಮಹತ್ತೇನೆಂದರೆ—ಈ ಬ್ರಹ್ಮರಂಧ್ರನಾಡಿ ಅಥವಾ ಸುಷುಮ್ನೆಯ ಸ್ವರೂಪವಾದುದೇ ಸರಸ್ವತೀದೇವಿಯ ಹಸ್ತದಲ್ಲಿರುವ ವೀಣೆಯು. ಈ ಬ್ರಹ್ಮನಾಡಿಯ ತತ್ವದಲ್ಲಿರುವುದೇ ಶ್ರೀರಾಜರಾಜೇಶ್ವರೀ ಹಸ್ತದಲ್ಲಿರುವ ಗಿಣ್ಣುಗಳುಳ್ಳ ಕಬ್ಬಿನ ಜಲ್ಲೆಯು. ಮಹಾಲಕ್ಷ್ಮಿಯು ಇರುವ ಮತ್ತು ಹಿಡಿದುಕೊಂಡಿರುವ ಕಮಲಪುಷ್ಪದ ಗಿಡದತತ್ವವೇ ಈ ಬ್ರಹ್ಮರಂಧ್ರನಾಡಿಯು. ಕುಮಾರಸ್ವಾಮಿಯು ಧರಿಸಿಕೊಂಡಿರುವ ದಂಡಾಯುಧದ ತತ್ವವೇ ಬ್ರಹ್ಮರಂಧ್ರನಾಡಿಯು. ಸದಾಶಿವನೇ ನಿರ್ಗುಣನಾದ ಪರಬ್ರಹ್ಮನು. ಸದಾಶಿವನ ಮಗನಾಗಿಯೂ, ಸಗುಣಬ್ರಹ್ಮನಾಗಿಯೂ, ಬ್ರಹ್ಮಾಂಡವೆಂಬ ಲಂಬೋದರನಾಗಿಯೂ, ಮೂಲಾಧಾರದ ಅವಿದ್ಯಾಶಕ್ತಿಗಳ ಧ್ವಂಸಕನಾಗಿಯೂ ಇರುವ ರತ್ನಗರ್ಭಗಣಾಧಿಪನ ಏಕದಂತವೇ ಬ್ರಹ್ಮರಂಧ್ರನಾಡಿಯು. ಗೋ ಎಂದರೆ ಪ್ರಪಂಚವನ್ನು, ಗೋಪಿಕಾಸ್ತ್ರೀಯರನ್ನೇ೦ದರೆ, ಶಕ್ತಿಸಮುದಾಯಗಳನ್ನು, ವೇಣುನಾದವೆಂದರೆ "ಓಂ"ಕಾರನಾದದ ಆನಂದದ ಆಕರ್ಷಣೆಯಲ್ಲಿ ಮುಗ್ಧಮಾಡುವಂತಹ ಶ್ರೀಕೃಷ್ಣ ಪರಮಾತ್ಮನು ಹಿಡಿದುಕೊಂಡಿರುವ ಕೊಳಲಿನ ತತ್ವದಲ್ಲಿರುವುದೇ ಬ್ರಹ್ಮರಂಧ್ರನಾಡಿಯು. ಶ್ರೀರಾಮನು ಅವಿದ್ಯಾತತ್ವದಲ್ಲಿರುವ ರಾವಣಾದಿಗಳನ್ನು ಧ್ವಂಸಮಾಡಲು ಧರಿಸಿರುವ ಅಹಂಬ್ರಹ್ಮಾಸ್ಮಿ ತತ್ವದ ಬಾಣಗಳುಳ್ಳ ಕೋದಂಡಧನುಸ್ಸೇ ಬ್ರಹ್ಮರಂಧ್ರನಾಡಿಯು ಅಂದರೆ "ಓಂ"ಕಾರಸ್ವರೂಪವು. ಶ್ರೀಮನ್ನಾರಾಯಣನು ಗರುಡಾರೂಢನಾಗಿ ಸಂಚರಿಸುವ ಮಾರ್ಗದ ತತ್ವವೇ ಬ್ರಹ್ಮರಂಧ್ರನಾಡಿಯು. ನರಸಿಂಹಸ್ವಾಮಿಯು ಹಿರಣ್ಯಕಶಿಪುವನ್ನು ಕೊಲ್ಲಲು ಸೀಳಿಕೊಂಡು ಬಂದ ಕಂಭದ ತತ್ವವೇ ಬ್ರಹ್ಮರಂಧ್ರನಾಡಿಯು. ಓಂಕಾರನಾದದ ತತ್ವವಾದ ತಾಳ ಮೇಳ ಮದ್ದಲೆಗಳಿಂದ ತಾಂಡವೇಶ್ವರನು ತಾಂಡವಮಾಡುವ ಸ್ಥಳದ ತತ್ವವೇ ಬ್ರಹ್ಮರಂಧ್ರನಾಡಿಯು. ಅವಿದ್ಯಾಶಕ್ತಿಗಳು ಮತ್ತು ಅವಿದ್ಯೆಯಿಂದುಂಟಾಗಿರುವ ಸರ್ವವಿಧವಾದ ಪಾಪಗಳೂ ಭಸ್ಮೀಕೃತವಾಗುವ, ಶ್ರುತಿಪ್ರತಿಪಾದ್ಯವಾಗಿರುವ ಮಹಾಸ್ಮಶಾನದ ತತ್ವದಲ್ಲಿರುವುದೇ ಬ್ರಹ್ಮರಂಧ್ರನಾಡಿಯು. ಅವಿದ್ಯಾಸ್ವರೂಪಗಳ ತತ್ವದಲ್ಲಿರುವ ಮಹಿಷಾಸುರಾದಿ ರಾಕ್ಷಸರನ್ನು ಶ್ರೀಚಾಮುಂಡೇಶ್ವರಿಯು ಕೊಂದ ಸ್ಥಳದ ತತ್ವವೇ ಬ್ರಹ್ಮರಂಧ್ರನಾಡಿಯು. ಮನುಷ್ಯನು ಜೀವಂತನಾಗಿದ್ದಾಗಲೆ ಆತ್ಮಸಾಕ್ಷಾತ್ಕಾರಮಾಡಿಕೊಳ್ಳುವ ಸ್ಥಳವೂ ಬ್ರಹ್ಮರಂಧ್ರವು. ಮನುಷ್ಯನು ಪ್ರಾಣೋತ್ಕ್ರಮಣಕಾಲದಲ್ಲಿ ವಿದೇಹಮುಕ್ತಿಯನ್ನು ಪಡೆದುಕೊಳ್ಳುವ ಸ್ಥಳವೂ ಬ್ರಹ್ಮರಂಧ್ರವೇ ಆಗಿರುವುದು. ಅಂದರೆ ಮೇಲೆ ಹೇಳಿರುವ ತತ್ವಗಳೆಲ್ಲಾ "ಓಂ"ಕಾರದ ಸ್ಥಳಗಳೆಂಬ ತಾತ್ಪರ್ಯ.

ಸೃಷ್ಟಿಕ್ರಮಕ್ಕೆ ಈ "ಓಂ"ಕಾರನಾದವು ಹೇಗೆ ಪ್ರಥಮವಾದುದೋ ಹಾಗೆಯೇ ಉಪಸಂಹಾರವೆಂದರೆ ಮೋಕ್ಷವನ್ನು ಪಡೆಯುವುದಕ್ಕೂ ಕೊನೆಯ ಸೋಪಾನವಾಗಿರುವುದು. "ಓಂ"ಕಾರನಾದವಡಗಿದರೆ ಕಳಾಸ್ವರೂಪದಲ್ಲಿ ನಿಲ್ಲುತ್ತದೆ. ಕಳೆಯು ಆತ್ಮನಲ್ಲಿ ಲೀನವಾಗುವುದೇ ಸಾಕ್ಷಾತ್ಕಾರವೆನಿಸಿಕೊಳ್ಳುವುದು. ಆದುದರಿಂದ ಅನಾಹತಚಕ್ರದಲ್ಲಿ ನಾದೋತ್ಪತ್ತಿಯಾಗುವ ಸೂಚನೆಯೇ ಇಂದ್ರನ ರಥಾರೋಹಣ ಮತ್ತು ಅಗಸ್ತ್ಯರ ಆಗಮನದ ತತ್ವವಾಗಿರುವುದು.

ಅಗಸ್ತ್ಯರು ಆದಿತ್ಯಹೃದಯವನ್ನು ಶ್ರೀರಾಮನಿಗೆ ಉಪದೇಶಮಾಡಿರುವುದರ ತತ್ವವೇನೆಂದರೆ—ಮಧ್ಯಾಹ್ನಕಾಲದಲ್ಲಿರುವ ಹಂಸಸ್ವರೂಪನಾದ ಆದಿತ್ಯನ ಪ್ರಕಾಶದಂತೆ ಅಧಿಕಾರಿಯು ತನ್ನೊಳಗೆ ಇರುವ ಸೂರ್ಯನ ಪ್ರಕಾಶದಲ್ಲಿ ಬಂದು ನಿಲ್ಲುವುದೇ ಆದಿತ್ಯನ ತತ್ವವಾಗಿರುವುದು. ಆದಿತ್ಯನ ಅಂತರ್ಗತವಾಗಿರುವ ಪರಮಾತ್ಮನನ್ನು ಹೊಂದಬೇಕೆಂಬುದೇ ಆದಿತ್ಯಹೃದಯದ ಉಪದೇಶದ ತತ್ವವಾಗಿರುವುದು.

ಸೂರ್ಯನು ಪರಪ್ರಕಾಶ್ಯನೇ ಹೊರತು ಸ್ವಪ್ರಕಾಶಕನಲ್ಲ. ಅಂದರೆ ಸೂರ್ಯನ ಪ್ರಕಾಶವೂ ಚಿದಾಭಾಸನ ಪ್ರಕಾಶವೂ ಒಂದೇ ಆಗಿರುವುದು. ಹೇಗೆ ಚಿದಾಭಾಸದಲ್ಲಿ ಚಿದಾಭಾಸತ್ವವುಂಟಾಗುವುದಕ್ಕೂ ಕಾರಣನಾದ ಸ್ವಪ್ರಕಾಶಕನಾದ ಪರಮಾತ್ಮನಿರುತ್ತಾನೋ ಹಾಗೆ ಸೂರ್ಯನಿಗೂ ಪ್ರಕಾಶಕೊಡತಕ್ಕ ಪರಮಾತ್ಮನು ಸೂರ್ಯನ ಅಂತರ್ಗತನಾಗಿರುತ್ತಾನೆ. ರಸಕನ್ನಡಿಯಿಂದ ಬೀಳುವ ಪ್ರತಿಫಲನದ ಬೆಳಕು ಸಾಧಾರಣವಾಗಿರುವ ಬಿಂಬದ ಬೆಳಕಿನಿಂದ ತಾನೇ ಉಂಟಾಗುವುದು? ಇದರಂತೆ ಒಂದೇಯಾಗಿರುವ ನಮ್ಮಲ್ಲಿರುವ ಚಿದಾಭಾಸಾದಿತ್ಯರು ಪ್ರತಿಬಿಂಬದ ಬೆಳಕಾಗಿಯೂ, ಆತ್ಮನೇ ಬಿಂಬದ ಬೆಳಕಾಗಿಯೂ ಇರುವರು. ಪ್ರತಿಫಲನದ ಬೆಳಕು ಎಲ್ಲಿರುವುದೋ ಅದರ ಅಂತರ್ಗತವಾಗಿ ಸ್ವಪ್ರಕಾಶದ ಬೆಳಕು ಇದ್ದೇ ಇರುವುದಷ್ಟೆ! ಇದರಂತೆ ಆದಿತ್ಯನ ಅಂತರ್ಗತವಾಗಿ ಪರಮಾತ್ಮನಿರುವನು. ಆದುದರಿಂದ ಅಗಸ್ತ್ಯರು ಶ್ರೀರಾಮನಿಗೆ ಆದಿತ್ಯಹೃದಯವನ್ನು ಉಪದೇಶಮಾಡಿದ ತತ್ವವೇನೆಂದರೆ—ನಮ್ಮಲ್ಲಿ ಸಮಾಧಿಯಲ್ಲಿ ಕಾಣುವ ಸೂರ್ಯತೇಜಸ್ಸಿನ ಅಂತರ್ಗತವಾಗಿರುವ ಪರಮಾತ್ಮನನ್ನು ಸಾಕ್ಷಾತ್ಕಾರಮಾಡಿಕೊಳ್ಳಬೇಕೆಂಬ ತತ್ವವಾಗಿರುವುದು. ಹೀಗೆ ಸೂರ್ಯನ ಅಂತರ್ಗತವಾಗಿ ಪರಮಾತ್ಮನಿರುವನೆಂಬುದಕ್ಕೆ ಮಹಾನಾರಾಯಣೋಪನಿಷತ್ತಿನಲ್ಲಿ,

ಏಷೋಂತರಾದಿತ್ಯೇ ಹಿರಣ್ಮಯಃ ಪುರುಷಃ "

ಎಂಬದಾಗಿ ಹೇಳಿರುವುದರಿಂದ ಆದಿತ್ಯಾಂತರ್ಗತನಾಗಿ ಪರಬ್ರಹ್ಮನಿರುವನು ಇಂತಹ ಆದಿತ್ಯನ ಅಂತರ್ಗತನಾಗಿ ಪರಮಾತ್ಮನಿರುವನೆಂಬುದಕ್ಕೆ ಸಂಧ್ಯಾವಂದನೆಯಲ್ಲಿ ಗಾಯತ್ರೀ ದೇವಿಯನ್ನು ಎಂತಹ ಜ್ಯೋತಿಸ್ವರೂಪದಲ್ಲಿ ಉಪಾಸನೆಮಾಡಬೇಕೆಂಬುದನ್ನು ಹಿಂದೆ

ತಿಳಿಸಿರುತ್ತಷ್ಟೆ! ಇಂತಹ ತೇಜಸ್ಸೇ ಆದಿತ್ಯಸ್ವರೂಪ. ಇಂತಹ ಗಾಯತ್ರಿಯ ಹೃದಯ ವಾಗಿರುವುದೇ "ಓಮಿತ್ಯೇಕಾಕ್ಷರಂ ಬ್ರಹ್ಮ" ಎಂಬದಾಗಿ ಹೇಳಿರುತ್ತದೆ. ಅಲ್ಲದೆ ಕೆಲವರು ಗಾಯತ್ರಿಯ ಧ್ಯಾನಶ್ಲೋಕಕ್ಕೆ,

ಯೋದೇವಸ್ಸವಿತಾಸ್ಮಾಕಂ ಧಿಯೋಧರ್ಮಾದಿ ಗೋಚರಾಃ |
ಪ್ರೇರಯೇತ್ತಸ್ಯ ಯದ್ಭರ್ಗಃ ತದ್ವರೇಣ್ಯಮುಪಾಸ್ಮಹೆ ||

ಎಂಬ ಶ್ಲೋಕವನ್ನು ಹೇಳುತ್ತಾರೆ. ಇದರ ತಾತ್ಪರ್ಯವೂ ಆದಿತ್ಯಾಂತರ್ಗತನಾಗಿ ಪರಮಾತ್ಮನಿರುವನೆಂಬ ತತ್ವವನ್ನೇ ಸೂಚಿಸುವುದು.

ಹೃದಯುವೆಂದರೆ—"ಹೃತ್ ಅಯತ ಇತಿ ಹೃದಯಂ" ಅಂದರೆ ಅಂತರ್ಗತವಾಗಿರು ವುದು ಅಥವಾ ಒಳಗಡೆ ಇರುವುದು ಎಂಬದಾಗಿ ರಾಮಾಯಣದ ವ್ಯಾಖ್ಯಾನದಲ್ಲಿ ವ್ಯುತ್ಪತ್ತಿಯಿರುವುದು. ಈ ತಾತ್ಪರ್ಯಕ್ಕೆ "ಯ ಆದಿತ್ಯೆ ತಿಷ್ಠನ್, ಯ ಆದಿತ್ಯಮಂತರೋ ಯಮಯತಿ, ಅಂತರಾದಿತ್ಯೆ ಮನಸಾ ಚರಂತಿ" ಮುಂತಾದ ಶ್ರುತಿವಾಕ್ಯಗಳಿರುವುವು.

ಅಗಸ್ತ್ಯರು "ಆದಿತ್ಯಸ್ಸವಿತಾ ಸೂರ್ಯಃ" ಮುಂತಾಗಿ ಆದಿತ್ಯನ ಮಹಿಮೆಯನ್ನು ಹೇಳಿರುವುದರ ತತ್ವವೇನೆಂದರೆ—ಆತ್ಮನೇ ಬಿಂಬಸ್ವರೂಪನೆಂದೂ, ಒಂದೇ ಆಗಿರುವ ಜೀವ ಆದಿತ್ಯರು ಪ್ರತಿಬಿಂಬಸ್ವರೂಪರೆಂದೂ ಮೇಲೆ ತಿಳಿಸಿತಷ್ಟೆ! ಪ್ರತಿಬಿಂಬದ ಬೆಳಕು ಬಿಂಬದ ಬೆಳಕಲ್ಲದೆ ಅನ್ಯವಲ್ಲ. ಆದುದರಿಂದ ಬಿಂಬಸ್ವರೂಪನಾದ ಪರಮಾತ್ಮ ಚೈತನ್ಯಕ್ಕೂ, ಪ್ರತಿಬಿಂಬಸ್ವರೂಪನಾದ ಜೀವಚೈತನ್ಯಕ್ಕೂ ಭೇದವಿಲ್ಲ. ಪ್ರತಿಫಲನದ ಬೆಳಕಾಗಬೇಕಾದರೆ ರಸಕನ್ನಡಿಯ ಸ್ವರೂಪವಾದ ಪ್ರಕೃತಿಯೆಂಬ ಉಪಾಧಿ ಬಂದುದರಿಂದ ಪ್ರತಿಬಿಂಬಸ್ವರೂಪವಾಯಿತು. ಆದುದರಿಂದ ರಸಕನ್ನಡಿಯೆಂಬ ಉಪಾಧಿಯಿಂದ ಪ್ರತಿ ಬಿಂಬನಾಗಿರುವವನೇ ಆದಿತ್ಯನು. ಜಗತ್ತಿನ ಉತ್ಪತ್ತಿ, ರಕ್ಷಣೆ ಮತ್ತು ನಾಶಗಳಿಗೆ ಕರ್ತನು. ಚಿದಾಭಾಸಸ್ವರೂಪನಾದ ಆದಿತ್ಯನು ಮಹಾತೇಜೋಯುಕ್ತನು. ಸಮಸ್ತ ದೇವಾಸುರ ರನ್ನೂ, ಸಮಸ್ತ ಲೋಕಗಳನ್ನೂ ತನ್ನ ಕಿರಣಗಳಿಂದ ರಕ್ಷಿಸುವವನು. ಬ್ರಹ್ಮ ವಿಷ್ಣು ರುದ್ರ ರೆಂಬ ತ್ರಿಮೂರ್ತಿಸ್ವರೂಪನು. ಈತನೇ ಇಂದ್ರ, ಯಮ, ವರುಣ, ಕುಬೇರ, ಈಶಾನಾದಿ ದಿಕ್ಪಾಲಕರ ಸ್ವರೂಪನು. ಈ ತತ್ವಾರ್ಥಗಳ ಪ್ರತಿಪಾದನೆಗೆ ಅನೇಕ ಶ್ರುತಿ ಪ್ರಮಾಣಗಳಿವೆ. ಅಲ್ಲದೆ,

ನಮಸ್ತೆ ಆದಿತ್ಯ ತ್ವಮೇವ ಪ್ರತ್ಯಕ್ಷಂ ಕರ್ಮಕರ್ತಾಸಿ |
ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ ತ್ವಮೇವ ಪ್ರತ್ಯಕ್ಷಂ ವಿಷ್ಣುರಸಿ ||
ತ್ವಮೇವ ಪ್ರತ್ಯಕ್ಷಂ ರುದ್ರೋಸಿ |

ಎಂಬ ಸೂರ್ಯೋಪನಿಷತ್ತೇ ಈ ಆದಿತ್ಯಹೃದಯದ ತತ್ವಕ್ಕೆ ಆಧಾರವಾಗಿರುತ್ತದೆ. ಆದುದರಿಂದ ಇಂತಹ ತತ್ವಗಳುಳ್ಳ ಆದಿತ್ಯನು ನಮ್ಮಲ್ಲಿಯೂ ಇರುವನು. ಇವನನ್ನು ಪಡೆದು ಇವನ ಅಂತರ್ಗತನಾಗಿರುವ ಆತ್ಮನನ್ನು ಸಾಕ್ಷಾತ್ಕಾರಮಾಡಿಕೊಳ್ಳಬೇಕೆಂಬ ತತ್ವ ಪ್ರತಿಪಾದನೆಯೇ ಅಗಸ್ತ್ಯರು ಶ್ರೀರಾಮನಿಗೆ ಆದಿತ್ಯಹೃದಯವನ್ನು ಉಪದೇಶಮಾಡಿದುದು.

ಪ್ರಕೃತದಲ್ಲಿ ಇಂದ್ರನರಥಾರೋಹಣ, ಅಗಸ್ತ್ಯರ ಆಗಮನ, ಮತ್ತು ಆದಿತ್ಯ ಹೃದಯದ ಉಪದೇಶಗಳ ತತ್ವಗಳಿಂದ ಒಳಗಡೆ ಕೇಳುವ "ಓಂ"ಕಾರನಾದ ಮತ್ತು ಆದಿತ್ಯ ಸ್ವರೂಪವಾದ ಜ್ಯೋತಿಗಳನ್ನು ಅಧಿಕಾರಿಯು ಹೊಂದಿದನೆಂಬ ತತ್ವವಾಗಿರುವುದು. ಆದುದರಿಂದ ಅಗಸ್ತ್ಯರು ಶ್ರೀರಾಮನಿಗೆ ಆದಿತ್ಯಹೃದಯವನ್ನು ಉಪದೇಶಿಸಿದರೆಂದರೆ ತಾರಕೋಪದೇಶ ಅಥವಾ ಮಹಾವಿದ್ಯಾಸ್ವರೂಪವಾದ ತೇಜೋನಾದಧ್ಯಾನವಿದ್ಯೆಯನ್ನು ಶಿಷ್ಯನಿಗೆ ಗುರುವು ಉಪದೇಶಮಾಡಿದನೆಂಬ ತತ್ವಾರ್ಥವಾಗಿರುವುದು.

ಸಮಾಧಿಯ ಅನುಷ್ಠಾನದ ಸೋಪಾನಕ್ಕೆ ಅಧಿಕಾರಿಯು ಬಂದಾಗ ಪ್ರಥಮದಲ್ಲಿ "ಓಂ"ಕಾರವರ್ಣೋಚ್ಚಾರಣೆಯಿಂದ ಬಿಂದುಧಾರಣೆಮಾಡಿಕೊಂಡು ಸಮಾಧಿಯ ಅನುಷ್ಠಾನಮಾಡಬೇಕೆಂದು ಸಮುದ್ರರಾಜನು ಪ್ರತ್ಯಕ್ಷವಾದ ಮತ್ತು ಸೇತುಬಂಧನದ ಕಥೆಯ ತತ್ವಗಳಲ್ಲಿ ತಿಳಿಸಿತು. ಈಗ ಅಗಸ್ತ್ಯರ ತತ್ವದಲ್ಲಿ "ಓಂ"ಕಾರನಾದ ಮತ್ತು ಜ್ಯೋತಿಗಳಲ್ಲಿ ಸಮಾಧಿಯ ಅನುಷ್ಠಾನಮಾಡಬೇಕೆಂದು ತಿಳಿಸುತ್ತಿರುವುದರಿಂದ ಹಿಂದೆ ಸಮಾಧಿಯಲ್ಲಿ ಗೋಚರವಾಗುತ್ತಿದ್ದ ಬಿಂದುವು ನಶಿಸಿ ನಾದಾನುಸಂಧಾನಕ್ಕೆ ಅಧಿಕಾರಿಯು ಬಂದನು. ಹೀಗೆ ಬಿಂದುವನ್ನು ಧರಿಸಿಕೊಂಡು ಮಾಡುತ್ತಿದ್ದ ಸಮಾಧಿಯ ಪರಿಪಕ್ವಾವಸ್ಥೆಯಿಂದ ನಾದ ಮತ್ತು ಆದಿತ್ಯನ ಪೂರ್ಣಜ್ಯೋತಿಯನ್ನು ಅಧಿಕಾರಿಯು ಪಡೆಯುವನೆಂಬುದಕ್ಕೆ ಶ್ರುತ್ಯಾದಿ ಆಧಾರಗಳನ್ನು ಬರೆದು ವಿಮರ್ಶಿಸಿ ತಿಳಿದುಕೊಳ್ಳೋಣ. ಅರ್ಜುನನು ಶ್ರೀಕೃಷ್ಣ ಪರಮಾತ್ಮನನ್ನು ಕೇಳಿದ ಪ್ರಶ್ನೆ ಮತ್ತು ಶ್ರೀಕೃಷ್ಣಪರಮಾತ್ಮನ ಉತ್ತರವನ್ನು ತಿಳಿಸುವ ಉತ್ತರಗೀತಾವಾಕ್ಯವೇನೆಂದರೆ—ಅರ್ಜುನನ ಪ್ರಶ್ನೆ—

> **ಅಕ್ಷರಾಣಿ ಸಮಾತ್ರಾಣಿ ಸರ್ವೇ ಬಿಂದುಸಮಾಶ್ರಿತಾಃ |**
> **ಬಿಂದುರ್ಭಿದ್ಯತಿ ನಾದೇನ ಸ ನಾದಃ ಕೇನಭಿದ್ಯತಿ ||**

**ತಾ||** ಎಲೈ! ಶ್ರೀಕೃಷ್ಣನೇ, ಅಕಾರಾದಿ ಕ್ಷಕಾರಾಂತ ವರ್ಣಗಳು ಹ್ರಸ್ವ ದೀರ್ಘ ಗಳೊಡನೆ ಕೂಡಿಕೊಂಡು ಬಿಂದುವಿನೊಡನೆ ಕೂಡಿರುತ್ತವೆ. ಬಿಂದುವು ಅಡಗಿದರೆ ನಾದ ವಾಗುವುದು. ನಾದವು ಅಡಗಿದರೆ ಯಾವಸ್ವರೂಪವುಂಟಾಗುವುದು?

> **ಅನಾಹತಸ್ಯ ಶಬ್ದಸ್ಯ ತಸ್ಯ ಶಬ್ದಸ್ಯ ಯೋಧ್ವನಿಃ |**
> **ಧ್ವನೇರಂತರ್ಗತಂ ಜ್ಯೋತಿಃ ಜ್ಯೋತಿರಂತರ್ಗತಂ ಮನಃ ||**

ಯನ್ಮನಸ್ತ್ರಿಜಗತ್ಸೃಷ್ಟಿ ಸ್ಥಿತಿವ್ಯಸನ ಕರ್ಮಕೃತ್ |
ತನ್ಮನೋ ವಿಲಯಂಯಾತಿ ತದ್ವಿಷ್ಣೋಃ ಪರಮಂಪದಂ ||

ತಾ|| ಅನಾಹತಚಕ್ರದಲ್ಲಿ ಉತ್ಪನ್ನವಾಗುವ ನಾದದೊಳಗೆ ಜ್ಯೋತಿಯೂ, ಈ ಜ್ಯೋತಿಯೊಳಗೆ ಬುದ್ಧಿವೃತ್ತಿಯೂ ಇರುವುದು. ಈ ಬುದ್ಧಿಯೇ ದುಃಖರೂಪವಾದ ಜನನ ಮರಣಪ್ರವಾಹಗಳ ಕಾರ್ಯದಲ್ಲಿತ್ತು. ಇಂತಹ ಬುದ್ಧಿಯು ನಾದ ಮತ್ತು ಜ್ಯೋತಿಯ ಅಂತರ್ಗತವಾದರೆ ಅದೇ ಪರಮಪದವಾದ ಸರ್ವವ್ಯಾಪಕವಾದ ವಿಷ್ಣುಪದ ವಾಗಿರುವುದು. ಎಂದು ಶ್ರೀಕೃಷ್ಣಪರಮಾತ್ಮನು ಉತ್ತರವಿತ್ತನು.

ಆದುದರಿಂದ "ಓಂ" ಕಾರವರ್ಣೋಚ್ಚಾರಣೆಯ ಅನುಷ್ಠಾನದಿಂದ "ಓಂ" ಕಾರನಾದದ ಮತ್ತು ಜ್ಯೋತಿಯ ಸೋಪಾನವನ್ನು ಹೊಂದಬೇಕೆಂಬ, ನಾದ ಮತ್ತು ಜ್ಯೋತಿಯು ಅಂತರ್ಗತವಾದರೆ ಆತ್ಮಸಾಕ್ಷಾತ್ಕಾರವಾಗುವುದೆಂಬ ತತ್ವವನ್ನು ಅರ್ಜುನನ ಪ್ರಶ್ನೆ ಮತ್ತು ಶ್ರೀಕೃಷ್ಣಪರಮಾತ್ಮನ ಉತ್ತರವು ಸೂಚಿಸುವುದು. ಶ್ರೀಕೃಷ್ಣಪರಮಾತ್ಮನ ಉತ್ತರರೂಪವಾದ ವಾಕ್ಯವು ಉಪನಿಷದ್ವಾಕ್ಯವಾಗಿರುವುದು. ಮಂಡಲಬ್ರಾಹ್ಮಣೋಪ ನಿಷತ್, ಯೋಗಚೂಡಾಮಣ್ಯುಪನಿಷತ್ತುಗಳೆರಡರಲ್ಲಿಯೂ ಇದೇ ವಾಕ್ಯವಿರುವುದು.

ಈ ಮೇಲಿನ ಶ್ರುತಿವಾಕ್ಯಕ್ಕೆ ಅನುಸಾರವಾಗಿ ಅಗಸ್ತ್ಯರು ಬಂದು ಶ್ರೀರಾಮನಿಗೆ ಆದಿತ್ಯಹೃದಯವನ್ನು ಉಪದೇಶ ಮಾಡಿದರೆಂದರೆ ತೇಜೋನಾದಧ್ಯಾನವಿದ್ಯೆಯ ಅನುಷ್ಠಾನದ ಪ್ರಾರಂಭವೆಂಬ ತತ್ವವಾಗಿರುವುದು. ಹಾಗಾದರೆ ನಾದಾನುಸಂಧಾನದ ಸೋಪಾನಕ್ಕೆ ಬರುವ ಪರ್ಯಂತರ "ಓಂ" ಕಾರವರ್ಣೋಚ್ಚಾರಣೆಯ ಅನುಷ್ಠಾನದಲ್ಲಿ ನಾದವಿರುವುದಿಲ್ಲವೋ ಎಂಬ ಸಂಶಯ ಬರಬಹುದು. ಆಗಲೂ ಒಳಗಡೆ ಶಬ್ದವಿರುವುದು. ಮತ್ತು "ಓಂ" ಕಾರವರ್ಣೋಚ್ಚಾರಣೆಯ ಅನುಷ್ಠಾನವಿಲ್ಲದ ಸಾಧಾರಣರಲ್ಲಿಯೂ ದೇಹದೊಳಗೆ ಶಬ್ದವಿರುವುದು. ಯಾರಾದರೂ ಷಣ್ಮುಖೀಮುದ್ರೆಯನ್ನು ಹಾಕಿಕೊಳ್ಳು ವಂತೆ ಕಿವಿಗಳೆರಡನ್ನೂ ತರ್ಜನಿಯಿಂದ ಭದ್ರವಾಗಿ ಮುಚ್ಚಿಕೊಂಡು ದೇಹದೊಳಗೆ ಆಗುವ ಶಬ್ದವನ್ನು ಕೇಳಬಹುದು. ಈ ಕಾಲದಲ್ಲಿ ಕೇಳಿಬರುವುದು ದೇಹದ ಅಂಗಗಳಿಂದ ಉಂಟಾದ ಶಬ್ದವು. ಇದಕ್ಕೂ "ಓಂ" ಕಾರನಾದಕ್ಕೂ ಸಂಬಂಧವಿಲ್ಲ. "ಓಂ"ಕಾರ ವರ್ಣೋಚ್ಚಾರಣೆಯ ಅನುಷ್ಠಾನದಲ್ಲಿ ಶಬ್ದವು ಗುಡುಗಿನ ಶಬ್ದದಂತೆಯೂ, ಸಮುದ್ರವು ಮೊರೆಯುವ ಶಬ್ದದಂತೆಯೂ ಇರುವುದು.

ಹೀಗೆ "ಓಂ" ಕಾರೋಚ್ಚಾರಣೆಯ ಅನುಷ್ಠಾನದಲ್ಲಿ ಈ ಶಬ್ದಗಳು ಇರುವುವೆಂಬ ತತ್ವವನ್ನು ಸೂಚಿಸುವುದೇ ಸಮುದ್ರರಾಜನ ಇಷ್ಟದಂತೆ ದ್ರುಮಕುಲ್ಯದಲ್ಲಿ ಶ್ರೀರಾಮನ ಬಾಣವು ಬಿದ್ದ ಸ್ಥಳದಲ್ಲಿ ಗುಡುಗುವ ಶಬ್ದವು ಅಂಕುರಿಸಿದುದು ಮತ್ತು ಕುಂಭಕರ್ಣನ

ವಧೆಯ ಕಾಲದಲ್ಲಿ ಭೂಮಿಯು ಗುಡುಗಿದುದು. ಇಂತಹ ಶಬ್ದಗಳು ಪ್ರಥಮದಲ್ಲಿ ಉಂಟಾಗಿ ಅನಂತರ ಝುಂಕಾರಶಬ್ದವು ಹುಟ್ಟುವುದು. ಈ ತತ್ವಕ್ಕೆ ಅನುಸಾರವಾಗಿ ಕುಂಭಕರ್ಣನನ್ನು ಕೊಂದನಂತರ ಲಂಕಾದಹನಮಾಡುವ ಕಾಲದಲ್ಲಿ ಶ್ರೀರಾಮನ ಕೋದಂಡಧನುಸ್ಸಿನಿಂದ ಉಂಟಾಗುತ್ತಿದ್ದ ಝುಂಕಾರಧ್ವನಿಯ ತತ್ವವಾಗಿರುವುದು. ಈ ಧ್ವನಿಗಳೆಲ್ಲಾ ನಶಿಸುತ್ತಾ ಬಂದಮೇಲೆ ರಾಮರಾವಣರ ಗಂಧರ್ವಾಸ್ತ್ರದ ತತ್ವವಾದ ಆನಂದಕರವಾದ ತಾಳ ಮೇಳಗಳೊಡಗೂಡಿದ ಕೊಳಲು, ವೀಣೆ ಮುಂತಾದ ಗಾನನಾದದ ಆನಂದವನ್ನು ಅನುಭವಿಸುವ ಸೋಪಾನಕ್ಕೆ ಅಧಿಕಾರಿಯು ಬರುವನು. ಆದುದರಿಂದ "ಓಂ" ಕಾರವರ್ಣೋಚ್ಚಾರಣೆಯ ಅನುಷ್ಠಾನದಲ್ಲಿ ನಾದವು ಮಂದ್ರಸ್ವರೂಪದಲ್ಲಿರುತ್ತದೆ.

ಅಂದರೆ ಮೂಲಾಧಾರದಲ್ಲಿರುವ ಕುಂಡಲಿನೀಶಕ್ತಿಯು ಪ್ರಬೋಧೆಯಾಗಿ ಬ್ರಹ್ಮ ರಂಧ್ರದೊಳಗೆ ಪ್ರವೇಶಿಸಿ ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರಚಕ್ರಗಳನ್ನು ಭೇದಿಸಿ ಕೊಂಡು ಅನಾಹತಚಕ್ರಕ್ಕೆ ಬರುವಪರ್ಯಂತರ ಮಂದ್ರಸ್ವರೂಪವಾದ ನಾದವಿರುವುದಕ್ಕೆ,

ಯತ್ಕುಮಾರೀ ಮನ್ದ್ರಯತೇ । ಯದ್ಯೋಷಿ ದ್ಯತ್ಪತಿವ್ರತಾ ॥

ಎಂಬ ಶ್ರುತಿಪ್ರಮಾಣವನ್ನು ಸುಂದರಕಾಂಡದಲ್ಲಿ ಬರೆದಿರುತ್ತೆ. ಸಹಸ್ರಾರಕಮಲ ದಲ್ಲಿರುವ ತನ್ನ ವಲ್ಲಭನಾದ ಸದಾಶಿವನೊಡನೆ ಸೇರಲು ಹೋಗುತ್ತಿರುವ ಪರಾಶಕ್ತಿಯಾದ ಕುಂಡಲಿನಿಯು ಅನಾಹತಚಕ್ರಕ್ಕೆ ಬರುವವರೆಗೆ "ಓಂ"ಕಾರನಾದವು ಮಂದ್ರದಲ್ಲಿರುವುದ ರಿಂದ ಕುಮಾರಿಯೆನಿಸಿಕೊಳ್ಳುವಳು. ಅನಾಹತಚಕ್ರಭೇದನೆಯಾಗಿ ನಾದಾನುಸಂಧಾನದ ಸೋಪಾನದಲ್ಲಿ ಪ್ರಾಪ್ತವಯಸ್ಕಳೆನಿಸಿಕೊಳ್ಳುವಳು. ಅನಂತರ ಸೀತೆಯು ಶ್ರೀರಾಮನ ಬಳಿಗೆ ಬಂದ ತತ್ವವಾದ ಆಜ್ಞಾಚಕ್ರಕ್ಕೆ ಪರಾಶಕ್ತಿಯಾದ ಕುಂಡಲಿನಿಯು ಸೇರಿದರೆ ಪತಿಯುಕ್ತ ಳೆನಿಸಿಕೊಳ್ಳುವಳು. ಆದುದರಿಂದ ಕುಂಡಲಿನೀಶಕ್ತಿಯು ಅನಾಹತಚಕ್ರಕ್ಕೆ ಬರುವವರೆಗೆ "ಓಂ"ಕಾರನಾದವು ಮಂದ್ರವಾಗಿರುವುದು.

ಚಿದಾಭಾಸಸ್ವರೂಪನಾದ ಆದಿತ್ಯನು ಪರಮಾತ್ಮಸ್ವರೂಪನೇ ಎನ್ನುವುದಕ್ಕೂ, ಷಣ್ಮುಖೀಮುದ್ರೆಯಿಂದ ನಾದಾನುಸಂಧಾನದ ಸೋಪಾನಕ್ಕೆ ಬಂದಾಗ ಜ್ಯೋತಿಸ್ವರೂಪ ನಾದ ಆದಿತ್ಯನು ಗೋಚರನಾಗುವನೆಂಬ ತತ್ವಕ್ಕೂ ಹಂಸೋಪನಿಷತ್ತಿನಲ್ಲಿ,

ಅಥೋ ನಾದಮಾಧಾರಾ ದ್ಬ್ರಹ್ಮರನ್ಧ್ರಪರ್ಯಂತಂ ।
ಶುದ್ಧಸ್ಫಟಿಕಸಂಕಾಶಂ ಸವೈಬ್ರಹ್ಮ ಪರಮಾತ್ಮೇತ್ಯುಚ್ಯತೆ ॥

ತಾ|| ನಾದೋತ್ಪತ್ತಿಸ್ಥಾನವಾದ ಆಧಾರಚಕ್ರದಿಂದ ಸಹಸ್ರಾರಕಮಲದವರೆಗೂ ಸ್ಫಟಿಕದಂತೆ ಪರಿಶುದ್ಧವಾಗಿ ಪ್ರಕಾಶಿಸುವುದು ಯಾವುದೋ ಅದೇ ಪರಬ್ರಹ್ಮವೆನಿಸಿಕೊಳ್ಳುತ್ತದೆ, ಎಂದು ಹೇಳಿದೆ.

ಈ ಶ್ರುತಿವಾಕ್ಯಕ್ಕೆ ಅನುಸಾರವಾಗಿ ಮೂಲಾಧಾರದಿಂದ ಸುಷುಮ್ನೆಯೊಳಗಿನ ದಾರಿಯನ್ನೆಲ್ಲ ಭೇದಿಸಿಕೊಂಡುಬರುವ ಕುಂಡಲಿನಿಯೊಡನೆ ವಾಯು ಮತ್ತು ಮನಸ್ಸಿನಿಂದೊಡಗೂಡಿದ ಬುದ್ಧಿವೃತ್ತಿಯು ಅನಾಹತಚಕ್ರವನ್ನು ಭೇದಿಸಿಕೊಂಡು ನಾದಾನುಸಂಧಾನದ ಸೋಪಾನಕ್ಕೆ ಬಂತೆಂಬ ತತ್ವವೇ ಶ್ರೀರಾಮನು ಇಂದ್ರನ ರಥಾರೋಹಣಮಾಡಿ ಆದಿತ್ಯಹೃದಯದ ಉಪದೇಶತೆಗೆದುಕೊಂಡ ತತ್ವವಾಗಿರುವುದು. ಇಂತಹ ನಾದ ಮತ್ತು ಜ್ಯೋತಿಯೇ ತಾನೆಂಬದಾಗಿ ಅದರಲ್ಲಿಯೇ ಲೀನವಾದವನು ಪರಮಾತ್ಮಸಾಕ್ಷಾತ್ಕಾರ ಪಡೆಯುತ್ತಾನೆಂಬ ತತ್ವಕ್ಕೆ ಬ್ರಹ್ಮವಿದ್ಯೋಪನಿಷತ್ತಿನಲ್ಲಿ ಈರೀತಿಯಲ್ಲಿ ಹೇಳಿರುವುದು,

ಅನಾಹತಧ್ವನಿಯುತಂ ಹಂಸಂಯೋವೇದಹೃದ್ಗತಂ |
ಸ್ವಪ್ರಕಾಶಚಿದಾನಂದಂ ಸಹಂಸ ಇತಿ ಗೀಯತೆ ||

ತಾ|| ಅನಾಹತಚಕ್ರದಲ್ಲಿ ಉತ್ಪನ್ನವಾಗುವ ನಾದದ ಅಂತರ್ಗತನಾಗಿಯೂ, ಹಂಸಸ್ವರೂಪನಾದ ಆದಿತ್ಯನ ಅಂತರ್ಗತನಾಗಿಯೂ, ಚಿದಾನಂದನಾಗಿಯೂ, ಇರುವ ಪರಬ್ರಹ್ಮನನ್ನು ಯಾವನು ತಿಳಿಯುವನೋ ಅವನೇ ಪರಮಾತ್ಮಸ್ವರೂಪನು.

ಅಗಸ್ತ್ಯರು ಶ್ರೀರಾಮನಿಗೆ ಉಪದೇಶಮಾಡಿದ ತಾರಕಸ್ವರೂಪವಾದ ತೇಜೋನಾದಧ್ಯಾನವಿದ್ಯೆಯು ಆತ್ಮಸಾಕ್ಷಾತ್ಕಾರವನ್ನುಂಟುಮಾಡುವ ತತ್ವಕ್ಕೆ ಮುಕ್ತಿಕೋಪನಿಷತ್ತಿನಲ್ಲಿ,

ತೇಜೋನಾದಧ್ಯಾನವಿದ್ಯಾ ಯೋಗತತ್ವಾತ್ಮಬೋಧಕಂ ||

ಎಂದು ಹೇಳಿರುತ್ತದೆ. ಆದುದರಿಂದ ಅವಿದ್ಯೆಯನ್ನು ನಿಗ್ರಹಿಸಿ ಮೋಕ್ಷಸಾಮ್ರಾಜ್ಯವನ್ನು ಹೊಂದಬೇಕೆಂದು ಅಂತರಂಗಶುದ್ಧಿಯಿಂದ ಇಚ್ಛೆಯುಳ್ಳವರು ಸೀತಾಪಹರಣದಾರಭ್ಯ ಇದುವರೆಗೂ ಇರುವ ಕಥೆಯ ತತ್ವಗಳ ಅನುಷ್ಠಾನದ ಸೋಪಾನಗಳನ್ನು ದಾಟಿಕೊಂಡು ತೇಜೋನಾದಧ್ಯಾನವಿದ್ಯಾ ಸೋಪಾನವನ್ನು ಪಡೆಯಬೇಕು. ಅನುಷ್ಠಾನಕ್ಕೆ ಈ ತೇಜೋನಾದಧ್ಯಾನವಿದ್ಯೆಯೇ ಕೊನೆಯ ಸೋಪಾನ. ಅವಿದ್ಯಾಪ್ರಧಾನಶಕ್ತಿಯ ತತ್ವದಲ್ಲಿರುವ ರಾವಣಾಸುರನನ್ನು ನಿಗ್ರಹಿಸಬೇಕಾಗಿರುವುದೂ ಈ ಸೋಪಾನದಿಂದಲೇ.

ಅವಿದ್ಯಾಸ್ವರೂಪವಾದ ಗಾಢಾಂಧಕಾರವನ್ನು ತೊಲಗಿಸಿಕೊಳ್ಳಲು ನಮ್ಮಲ್ಲಿಯೇ ಇರುವ ನಕ್ಷತ್ರಪ್ರಕಾಶದಿಂದ ಕ್ರಮ ಕ್ರಮವಾಗಿ ಮಧ್ಯಾಹ್ನದ ಸೂರ್ಯನ ಪ್ರಕಾಶಕ್ಕೆ ಬರಬೇಕೆಂಬುದನ್ನು ಉದ್ದಕ್ಕೂ ತಿಳಿಸಿಕೊಂಡು ಬರುತ್ತಿದೆಯಷ್ಟೆ! ಬಾಹ್ಯವ್ಯಾಪಾರಸ್ವರೂಪದಲ್ಲಿ

ನಡೆಯುವ ವೇದಾಂತಶ್ರವಣ, ಮನನ, ನಿಯಮ ಮತ್ತು ಆಸನಾಭ್ಯಾಸಗಳು ಅವಿದ್ಯೆಯ ಗಾಢಾಂಧಕಾರದಲ್ಲಿಯೇ ನಡೆಯುವುವೆಂಬ ತತ್ವವಾಗಿರುವುದು. ಕಾರಣವೇನೆಂದರೆ, ಗಾಢಾಂಧಕಾರವನ್ನು ತೊಲಗಿಸಿಕೊಳ್ಳಲು ನಕ್ಷತ್ರ, ಚಂದ್ರ, ಸೂರ್ಯೋದಯಗಳ ಬೆಳಕುಗಳು ಕ್ರಮವರಿತು ಬರುವಂತೆ ಅಂತರ್ಮುಖದ ದಾರಿಗೆ ಪ್ರವೇಶಿಸಿ ನಕ್ಷತ್ರಪ್ರಕಾಶ ವಾದ ಕುಂಭಕಪ್ರಾಣಾಯಾಮದಿಂದ ಮುಂದುವರಿಯುವವರೆಗೆ ಅವಿದ್ಯಾಗಾಢಾಂಧಕಾರದ ತತ್ವದಲ್ಲಿಯೇ ಇರುವುದಾಗಿರುವುದು. ಈ ತತ್ವಕ್ಕೆ ಅನುಸಾರವಾಗಿಯೇ ವೇದಾಂತ ಶ್ರವಣ, ಮನನ ಮುಂತಾದ ಸೋಪಾನಗಳು ಬಾಹ್ಯವ್ಯಾಪಾರಸ್ವರೂಪದಲ್ಲಿಯೇ ಇರುವ ಅವಿದ್ಯಾ ಗಾಢಾಂಧಕಾರದ ತತ್ವವಾದ ಅರಣ್ಯಕಾಂಡದ ಕಥೆಯಲ್ಲಿಯೇ ಬಂದಿರುವುವು. ಅಂದರೆ ಅರಣ್ಯಕಾಂಡದ ಮುಂದಿನ ಕಾಂಡಗಳ ತತ್ವಗಳನ್ನನುಸರಿಸಿಕೊಂಡು ಬಂದು ನಮ್ಮಲ್ಲಿರುವ ಅವಿದ್ಯೆಯ ಗಾಢಾಂಧಕಾರವನ್ನು ಪೂರ್ಣಸೂರ್ಯೋದಯದ ಬೆಳಕಿನಿಂದ ಪರಿಹರಿಸಿಕೊಳ್ಳಬೇಕು. ಆದುದರಿಂದ ಮೋಕ್ಷವನ್ನು ಬಯಸುವವರು ಶಾಸ್ತ್ರವಾಸನೆ ಯಾದ ಗ್ರಂಥ ವಿಚಾರದಲ್ಲಿಯೇ ಮಗ್ನರಾಗದೆ ಅಂತರ್ಮುಖದ ಅನುಷ್ಠಾನದಲ್ಲಿ ಪ್ರವೇಶಿಸಿ ಈ ಅಂತರ್ಜ್ಯೋತಿಯ ಸೋಪಾನಕ್ಕೆ ಬಂದು ಕೃತಕೃತ್ಯರಾಗಬೇಕು. ಈ ತಾತ್ಪರ್ಯಕ್ಕೆ ಮುಕ್ತಿ ಕೋಪನಿಷತ್ತಿನಲ್ಲಿ ಶ್ರೀರಾಮಚಂದ್ರನೇ ಹನುಮಂತನಿಗೆ ಉಪದೇಶಿಸಿರುವುದೇನೆಂದರೆ—

ಬಹುಶಾಸ್ತ್ರಕಥಾಕಂಥಾ ರೋಮಂಥೇನವೃಥೈವಕಿಂ ।
ಅನ್ವೇಷ್ಟವ್ಯಂ ಪ್ರಯತ್ನೇನ ಮಾರುತೇ ಜ್ಯೋತಿರಾಂತರಂ ॥

ಎಲೈ ಮಾರುತಿಯೇ ಶಾಸ್ತ್ರಗಳ ಕಂತೆಗಳನ್ನು ಎಷ್ಟಾವರ್ತಿ ತಿರುವಿಹಾಕಿದರೂ ಪ್ರಯೋಜನವಿಲ್ಲ. ಪ್ರಯತ್ನದಿಂದ ಅಂತರ್ಜ್ಯೋತಿಯನ್ನು ಹುಡುಕಬೇಕು. ಎಂಬದಾಗಿ ಹೇಳಿರುವನು.

ಈ ತೇಜೋನಾದಧ್ಯಾನವಿದ್ಯೆಯ ಸೋಪಾನವನ್ನು ಹತ್ತಿದರೆ ಧ್ಯಾನ, ಧಾರಣ, ಸಮಾಧಿಗಳನ್ನು ಒಟ್ಟುಗೂಡಿಸುವ ಸಂಯಮ ಉಂಟಾಗುವುದೆಂದರೆ ಸಮಾಧಿಯ ಅಭ್ಯಾಸವು ಅನೇಕಾವರ್ತಿ ವಿಚ್ಛಿನ್ನವಾಗದೆ ನಿಲುಗಡೆಗೆ ಬರುವ ಸ್ವರೂಪವಾಗಿರುವುದು. ಇದನ್ನೇ ಪತಂಜಲಿಮಹರ್ಷಿಗಳು,

"ತ್ರಯಮೇಕತ್ರ ಸಂಯಮಃ ತಜ್ಜಯಾತ್ಪ್ರಜ್ಞಾಲೋಕಃ"

ತಾ॥ ಧ್ಯಾನ, ಧಾರಣ, ಸವಿಕಲ್ಪಸಮಾಧಿಗಳನ್ನು ಒಂದುಕಡೆ ಸೇರಿಸುವುದಕ್ಕೆ ಸಂಯಮವೆಂದು ಹೆಸರು. ಆ ಸಂಯಮದ ಅಭ್ಯಾಸವು ಸ್ಥಿರವಾಗೋಣದರಿಂದ ಪರ ಮಾತ್ಮ ಸ್ವರೂಪದ ಪ್ರಕಾಶಿಸುವಿಕೆಯು ಉಂಟಾಗುವುದು. ಅಂದರೆ ಜ್ಯೋತಿಸ್ವರೂಪ ದಲ್ಲಿ ನಿಲುಗಡೆಯು ಸ್ಥಿರವಾಗುವುದೆಂಬ ತಾತ್ಪರ್ಯ.

ಅಂದರೆ ಬಂಧತ್ರಯಗಳೊಡನೆ ಮಾಡುವ "ಓಂ"ಕಾರೋಪಾಸನೆಯಲ್ಲಿ ಅನೇಕಾವರ್ತಿ ಸಮಾಧಿಯು ಬಹಿರ್ಮುಖವಾಗಿ ವಿಚ್ಛಿನ್ನವಾಗುವುದೆಂದು ಹಿಂದೆಯೆ ತಿಳಿಸಿತಷ್ಟೆ! ಈಗ ಅದು ತಗ್ಗಿ ಸ್ಥಿರತ್ವವು ಬರುವುದೆಂಬ ತಾತ್ಪರ್ಯ.

ಜ್ಯೋತಿಸ್ಸ್ವರೂಪನಾದ ಆದಿತ್ಯನೇ ಸರ್ವರೂಪನಾಗಿಯೂ, ಸರ್ವಪ್ರಾಣಿಗಳ ಅಂತರ್ಯಾಮಿಯಾಗಿಯೂ, ಸರ್ವಪ್ರಾಣಿಗಳಿಗೂ ಪ್ರಕಾಶಕನಾಗಿಯೂ, ಇರುತ್ತಾನೆಂದು ಅಗಸ್ತ್ಯರು ಶ್ರೀರಾಮನಿಗೆ ಉಪದೇಶಮಾಡಿರುತ್ತಾರರಷ್ಟೆ! ಇದೇ ತತ್ವಾರ್ಥಕ್ಕೆ ಪ್ರಶ್ನೋಪನಿಷತ್ತಿನಲ್ಲಿಯೂ,

ವಿಶ್ವರೂಪಂ ಹರಿಣಂ ಜಾತವೇದಸಂ ಪರಾಯಣಂ |
ಜ್ಯೋತಿರೇಕಂ ತಪಂತಂ ಸಹಸ್ರರಶ್ಮಿ ಶ್ಶತಧಾವರ್ತಮಾನಃ |
ಪ್ರಾಣಃ ಪ್ರಜಾನಾಮುದಯತ್ಯೇಷ ಸೂರ್ಯಃ ||

ತಾ|| ಜ್ಯೋತಿಸ್ಸ್ವರೂಪನಾದ ಆದಿತ್ಯನನ್ನು ಸರ್ವರೂಪನನ್ನಾಗಿಯೂ, ಸರ್ವಪ್ರಾಣಿಗಳ ಅಂತರ್ಯಾಮಿಯನ್ನಾಗಿಯೂ, ಸರ್ವಪ್ರಾಣಿಗಳಿಗೂ ಪ್ರಕಾಶಸ್ವರೂಪನನ್ನಾಗಿಯೂ, ಅದ್ವಿತೀಯನನ್ನಾಗಿಯೂ ಬ್ರಹ್ಮವಿದರು ತಿಳಿಯುತ್ತಾರೆ, ಎಂಬದಾಗಿ ಹೇಳಿದೆ.

ಆದುದರಿಂದ ನಮ್ಮಲ್ಲಿರುವ ಇಂತಹ ಆದಿತ್ಯನನ್ನು ಹೊಂದಲು ಮೋಕ್ಷದ್ವಾರವಾದ ಬ್ರಹ್ಮರಂಧ್ರದ ಬಾಗಿಲನ್ನು ತೆಗೆಸಿ, ವೈರಾಗ್ಯದಿಂದಲೂ, ಶ್ರದ್ಧೆಯಿಂದಲೂ, ಸ್ವಾತ್ಮರೂಪದಿಂದಲೂ, ಸಮಾಧಿಯನ್ನು ಅಭ್ಯಾಸಮಾಡುತ್ತ ಬರಬೇಕು. ಈ ಮಾರ್ಗವೇ ಖಂಡಿತವಾಗಿಯೂ ಪುನರ್ಜನ್ಮವನ್ನು ಹೊಂದದೇ ಇರುವಂತಹ ದೇವಯಾನ ಅಥವಾ ಉತ್ತರಾಯಣದ ಮಾರ್ಗವಾಗಿರುವುದು. ಇಂತಹ ಉತ್ತರಾಯಣಮಾರ್ಗವಾದ ಸುಷುಮ್ನೆಯ ಮಾರ್ಗದಲ್ಲಿ ಹೋಗಿ ಜ್ಯೋತಿಸ್ಸ್ವರೂಪನಾದ ಆದಿತ್ಯನಲ್ಲಿ ಲೀನವಾದವರು ಮುಕ್ತರಾಗಿ ಹುಟ್ಟುಸಾವುಗಳಿಂದ ಬಿಡಲ್ಪಟ್ಟವರಾಗುತ್ತಾರೆನ್ನುವ ತಾತ್ಪರ್ಯಕ್ಕೆ ಪ್ರಶ್ನೋಪನಿಷತ್ತಿನಲ್ಲಿ,

ಅಥೋತ್ತರೇಣ ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ |
ವಿದ್ಯಯಾತ್ಮಾನ ಮನ್ವಿಷ್ಯಾದಿತ್ಯ ಮಭಿಜಯಂತೇ ||
ಏತದ್ವೈ ಪ್ರಾಣಾನಾಮಾಯತನ ಮೇತದಮೃತ ಮಭಯ |
ಮೇತತ್ಪರಾಯಣ ಮೇತಸ್ಮಾನ್ನ ಪುನರಾವರ್ತ್ತಂತ ಇತ್ಯೇಷ ನಿರೋಧಃ||

ತಾ|| ಜ್ಞಾನಿಗಳಿಗೆ ಬೇರೆ ಮಾರ್ಗವುಂಟು. ಯಾವುದೆಂದರೆ—ವೈರಾಗ್ಯ ಮತ್ತು ಯೋಗದಿಂದ ಇಂದ್ರಿಯ ನಿಗ್ರಹ. ಮೋಕ್ಷವನ್ನು ಹೊಂದುವುದರಲ್ಲಿ ಶ್ರದ್ಧೆ, ತೀವ್ರತಮ

ವಾದ ಬ್ರಹ್ಮಭಾವನೆಯಿಂದ ಕೂಡಿದ ತಪಸ್ಸಿಂದರೆ ಸಮಾಧಿಯ ಅಭ್ಯಾಸದಿಂದ ಈ ಭವ ಬಂಧನವನ್ನು ದಾಟಿಹೋಗುವ ಮಾರ್ಗವಾದ ಬ್ರಹ್ಮರಂಧ್ರಮಾರ್ಗದಲ್ಲಿ ಪ್ರವೇಶಿಸಿ ಜ್ಯೋತಿಸ್ಸ್ವರೂಪನಾದ ಆದಿತ್ಯನನ್ನು ಸ್ವಾತ್ಮರೂಪದಿಂದ ಅನುಭವಿಸಿ ತಿಳಿದವರು ಆದಿತ್ಯ ಸ್ವರೂಪರೇ ಆಗುವರು. ಈ ಸ್ಥಾನವೇ ಪರಮಸ್ಥಾನ, ಅಮೃತಸ್ವರೂಪವಾದುದು, ನಿರ್ಭಯವಾದುದು. ಈ ಸ್ಥಾನವನ್ನು ಹೊಂದಿದವರಿಗೆ ಪುನರ್ಜನ್ಮವಿಲ್ಲ. ಅವಿದ್ಯಾವಂತರಿಗೆ ಬ್ರಹ್ಮರಂಧ್ರ ಅಥವಾ ಸುಷುಮ್ನೆಯ ಮಾರ್ಗದಲ್ಲಿ ಪ್ರವೇಶವಿಲ್ಲ. ಎಂದು ಹೇಳಿರುವುದು.

ಈ ಮೇಲಿನ ಶ್ರುತಿವಾಕ್ಯವು ವೇದಾಂತವಿಚಾರ ಮತ್ತು ಯೋಗದ ಸಕಲ ರಹಸ್ಯ ಗಳನ್ನೂ ಒಳಗೊಂಡಿರುವುದು. ಮೇಲಿನ ಶ್ರುತಿವಾಕ್ಯದಲ್ಲಿರುವ ಉತ್ತರಾಯಣಮಾರ್ಗವೇ ಬ್ರಹ್ಮರಂಧ್ರ ಅಥವಾ ಸುಷುಮ್ನೆಯ ಮಾರ್ಗವಾಗಿರುವುದು. ಉತ್ತರಾಯಣಮಾರ್ಗ ವೆಂದರೆ ದಾಟುವ ಮಾರ್ಗವೆಂದು ಅರ್ಥವಾಗುವುದು. ದಾಟುವ ಮಾರ್ಗವೆಂದರೆ ಈ ಭವಬಂಧನವನ್ನು ದಾಟಿ ಹೋಗುವ ಮಾರ್ಗ. ಅಂದರೆ ಅವಿದ್ಯೆಯನ್ನು ಉಪಸಂಹಾರ ಮಾಡಿಕೊಂಡು ಹೋಗುವ ಮಾರ್ಗವೇ ಸುಷುಮ್ನೆಯ ಮಾರ್ಗವಾಗಿರುವುದು. ಆದುದ ರಿಂದ ಗಂಗಾ ಯಮುನಾ ಸರಸ್ವತಿಗಳೆಂದರೆ ಶ್ರುತಿಪ್ರತಿಪಾದ್ಯವಾದ ಇಡಾ ಪಿಂಗಳಾ ಸುಷುಮ್ನಾನಾಡಿಗಳಲ್ಲಿ ಬಹಿರ್ವ್ಯಾಪಾರವನ್ನುಂಟುಮಾಡುವ ಇಡಾ ಪಿಂಗಳಾ ನಾಡಿಗಳ ವ್ಯಾಪಾರಗಳನ್ನು ನಿಲ್ಲಿಸಿಕೊಂಡು ಗುಪ್ತಗಾಮಿನಿಯಾದ ಸರಸ್ವತೀನದಿ ಎನಿಸುವ ಮಧ್ಯ ನಾಡಿಯಾದ ಸುಷುಮ್ನೆಯೊಳಗೆ ಪ್ರವೇಶಮಾಡಲು ಅಧಿಕಾರವನ್ನುಂಟುಮಾಡುವ "ಓಂ" ಕಾರೋಪಾಸನೆಯೊಡನೆ ಸಮಾಧಿಯನ್ನು ಅಭ್ಯಾಸಮಾಡಿದರೆ ಅಮೃತಸ್ವರೂಪವಾದ ಮೋಕ್ಷವು ದೊರೆಯುವುದು. ಶ್ರೀಶಂಕರಭಗವತ್ಪಾದರವರು ಯೋಗತಾರಾವಳಿಯಲ್ಲಿ ಹೇಳಿರುವ ಈ ನಾದಾನುಸಂಧಾನಕ್ಕೆ ಅನ್ವಯವಾಗುವ ಮೂರು ಶ್ಲೋಕಗಳನ್ನು ಇಲ್ಲಿ ಬರೆದಿರುವುದು.

> ಸದಾಶಿವೋಕ್ತಾನಿ ಸಪಾದಲಕ್ಷ ಲಯಾವಧಾನಾ ನಿವಸಂತಿಲೋಕೇ |
> ನಾದಾನುಸಂಧಾನ ಸಮಾಧಿಮೇಕಂ |
> ಮನ್ಯಾಮಹೆ ಮಾನ್ಯತಮಂ ಲಯಾನಾಂ ||

ತಾ|| ಬುದ್ಧಿಲಯವಾಗುವುದಕ್ಕೆ ಲಕ್ಷಾಂತರಮಾರ್ಗಗಳು ಪರಮೇಶ್ವರನಿಂದ ಹೇಳಲ್ಪಟ್ಟಿರುವುವು. ಅವುಗಳಲ್ಲಿ ನಾದಾನುಸಂಧಾನಜನ್ಯವಾದ ಸಮಾಧಿಯೊಂದನ್ನೇ ಅತ್ಯುತ್ತಮವಾಗಿ ಎಣಿಸುತ್ತೇವೆ.

> ಸರೇಚಪೂರ್ವೈ ರನಿಲಸ್ಯಕುಂಭೈಃ ಸರ್ವಾಸು ನಾಡೀಷು ವಿಶೋಧಿತಾಸು|
> ಅನಾಹತಾಖ್ಯೋ ಬಹುಭಿಃಪ್ರಕಾರೈ ರಂತಃಪ್ರವರ್ತೇತ ಸದಾನಿನಾದಃ ||

ತಾ|| ರೇಚಕಪೂರಕಸಹಿತವಾದ ಕುಂಭಕಗಳಿಂದ ಸಮಸ್ತನಾಡಿಗಳೂ ಪರಿಶುದ್ಧವಾಗುತ್ತಿರಲು ಒಳಗಡೆ ಅನಾಹತಚಕ್ರದ ನಾದವು ಅನೇಕ ಪ್ರಕಾರಗಳಿಂದ ಸ್ಫುರಿಸುವುದು.

ನಾದಾನುಸಂಧಾನ ನಮೋಸ್ತುತುಭ್ಯಂ ತ್ವಾಂ ಸಾಧನಂ ತತ್ವಪದಸ್ಯ ಜಾನೇ |
ಭವತ್ಪ್ರಸಾದಾ ತ್ಪವನೇನ ಸಾಕಂ ವಿಲೀಯತೇ ವಿಷ್ಣುಪದೇ ಮನೋಮೇ ||

ತಾ|| ಹೇ! ನಾದಾನುಸಂಧಾನವೇ! ನಿನಗೆ ನಮಸ್ಕಾರವು. ನಿನ್ನನ್ನು ಪರಮಾತ್ಮಸಾಕ್ಷಾತ್ಕಾರಕ್ಕೆ ಸಾಧನವನ್ನಾಗಿ ತಿಳಿಯುತ್ತೇನೆ. ನಿನ್ನ ಅನುಗ್ರಹದಿಂದ ವಾಯುಸಹಿತವಾಗಿ ಬುದ್ಧಿವೃತ್ತಿಯು ಪರಮಾತ್ಮನಲ್ಲಿ ಲೀನವಾಗುತ್ತದೆ.

ಆದುದರಿಂದ ಸರ್ವಶ್ರೇಷ್ಠವಾಗಿಯೂ, ಅನುಷ್ಠಾನದಲ್ಲಿ ಕೊನೆಯ ಸೋಪಾನವಾಗಿಯೂ, ಸಾಕ್ಷಾತ್ಕಾರವನ್ನು ಕೊಡತಕ್ಕದ್ದಾಗಿಯೂ, ಶ್ರೀರಾಮನು ಅಗಸ್ತ್ಯರಿಂದ ಉಪದೇಶ ತೆಗೆದುಕೊಂಡ ಆದಿತ್ಯಹೃದಯದ ತತ್ವವಾಗಿಯೂ ಇರುವ ತಾರಕೋಪದೇಶದ ತತ್ವವಾದ ತೇಜೋನಾದಧ್ಯಾನವಿದ್ಯೆಯು ಸೋಪಾನವನ್ನು ಮೋಕ್ಷಾಭಿಲಾಷಿಗಳು ಅಗತ್ಯವಾಗಿ ಪಡೆಯತಕ್ಕದ್ದು.

## ೨೯ನೆಯ ಪ್ರಕರಣ.

ಶ್ರೀರಾಮನಿಗೆ ಸೂರ್ಯನು ಪ್ರತ್ಯಕ್ಷವಾದುದು.



ತನಗೂ ಅಂತರ್ಜ್ಯೋತಿಗೂ ಅಭೇದಜ್ಞಾನದಿಂದ ಅಥವಾ ಸೋಹಂಭಾವದಿಂದ ಸಮಾಧಿಯ ಅಭ್ಯಾಸ ಮಾಡಬೇಕಾದ ವಿಚಾರ.

**ರಾ||** ಅಗಸ್ತ್ಯರು ಆದಿತ್ಯಹೃದಯವನ್ನು ಉಪದೇಶಮಾಡಿಹೋದರು. ಅನಂತರ ಶ್ರೀರಾಮನು ಮೂರಾವರ್ತಿ ಶುದ್ಧಾಚಮನಮಾಡಿ ಸೂರ್ಯನಲ್ಲಿ ದೃಷ್ಟಿಯನ್ನಿಟ್ಟು ಶುದ್ಧಾಂತಃಕರಣನಾಗಿ ಸರ್ವಪ್ರಯತ್ನದಿಂದಲೂ ರಾವಣನನ್ನು ಕೊಲ್ಲಬೇಕೆಂದು ನಿಶ್ಚಯಿಸಿಕೊಂಡು ತನ್ನ ಮನೋವ್ಯಾಪಾರವನ್ನೆಲ್ಲ ಸೂರ್ಯನಾರಾಯಣನಲ್ಲಿಟ್ಟು ಅವನನ್ನು ಧರಿಸಿಕೊಂಡು ಧ್ಯಾನಮಾಡಿಕೊಂಡಿದ್ದನು. ಸೂರ್ಯನಾರಾಯಣನು ಶ್ರೀರಾಮನ ದೃಢಭಕ್ತಿಗೆ ಮೆಚ್ಚಿ ಪ್ರಸನ್ನನಾಗಿ ಶ್ರೀರಾಮನನ್ನು ಕುರಿತು ಜಾಗ್ರತೆಯಾಗಿ ರಾವಣನನ್ನು ಲಯವನ್ನೈದಿಸು, ಭಯಪಡಬೇಡವೆಂದು ಅಭಯವನ್ನು ಕೊಟ್ಟನು.

**ತತ್ವ||** ಹಿಂದಿನ ಪ್ರಕರಣಗಳಲ್ಲಿ ಷಣ್ಮುಖೀಮುದ್ರೆಯಿಂದ ತೇಜೋನಾದಧ್ಯಾನವಿದ್ಯೆಯ ಸಮಾಧಿಯ ಅಭ್ಯಾಸವನ್ನು ಮಾಡಬೇಕಾದ ಕರ್ತವ್ಯವನ್ನು ವಿವರಿಸಿತಷ್ಟೆ!

ಅಂತರ್ಮುಖದಲ್ಲಿ ಕಾಣುವ ಜ್ಯೋತಿಯಲ್ಲಿ ಯಾವ ವಿಧವಾದ ಭಾವನೆಯಿಂದ ಅನುಷ್ಠಾನ ಮಾಡಿದರೆ ಸಮಾಧಿಯು ಸಿದ್ಧಿಸುವುದೆಂಬುದನ್ನು ಈ ಪ್ರಕರಣವು ತಿಳಿಸುವುದು.

ಅಂತರ್ಮುಖದಲ್ಲಿ ನಾದಾನುಸಂಧಾನದ ಸೋಪಾನದಲ್ಲಿ ಗೋಚರವಾಗುವ ಜ್ಯೋತಿ ಸ್ವರೂಪನಾದ ಆದಿತ್ಯನು ಸರ್ವಪ್ರಾಣಿಗಳ ಅಂತರ್ಯಾಮಿಯಾಗಿಯೂ, ಪ್ರಕಾಶಕನಾಗಿಯೂ ಇರುವುದರಿಂದ ದೃಢವಾದ ಭಕ್ತಿಯಿಂದಲೂ, ಶುದ್ಧವಾದ ಬುದ್ಧಿಯಿಂದಲೂ ಮನದಣಿಯ ಪ್ರಥಮದಲ್ಲಿ ನೋಡಬೇಕು. ಇದೇ ತಾತ್ಪರ್ಯವನ್ನು ಅನುಸರಿಸಿ ಶ್ರೀರಾಮನು ಶುದ್ಧಾತ್ಮನಾಗಿ ಸೂರ್ಯನಲ್ಲಿ ಚೆನ್ನಾಗಿ ದೃಷ್ಟಿಯಿಟ್ಟಿರುವುದಾಗಿದೆ.

ಶ್ರೀರಾಮನು ಸೂರ್ಯನಾರಾಯಣನಲ್ಲಿ ಚೆನ್ನಾಗಿ ದೃಷ್ಟಿಯಿಟ್ಟು ತನ್ನ ಮನೋವ್ಯಾಪಾರವನ್ನೆಲ್ಲ ಸೂರ್ಯನಾರಾಯಣನಲ್ಲಿಟ್ಟು ಅವನನ್ನು ಧರಿಸಿಕೊಂಡು ಧ್ಯಾನಾಸಕ್ತನಾದ ತತ್ವವೇನೆಂದರೆ—ಅಧಿಕಾರಿಯು ಸಮಾಧಿಯಲ್ಲಿ ಕಾಣುವ ತೇಜಸ್ಸನ್ನು ಚೆನ್ನಾಗಿ ನೋಡಿ ಅಂದರೆ ಬುದ್ಧಿವೃತ್ತಿಯನ್ನೆಲ್ಲ ತೇಜಸ್ಸಿನಲ್ಲಿ ಪ್ರಸರಣೆಮಾಡಿ, ಅನಂತರ ಆ ತೇಜಸ್ಸೇ ತಾನೆಂಬದಾಗಿ ಬುದ್ಧಿಯಿಂದ ಧಾರಣೆಮಾಡಿಕೊಳ್ಳಬೇಕು. ಅಂದರೆ ಸಮಾಧಿಯ ಅನುಷ್ಠಾನದಲ್ಲಿರತಕ್ಕ ಬುದ್ಧಿವೃತ್ತಿಯು ಜ್ಯೋತಿಸ್ಸ್ವರೂಪವನ್ನು ಧರಿಸಿಕೊಂಡು ಅಭೇದಭಾವದಿಂದ ತನ್ಮಯವಾಗುವ ತತ್ವವೇ ಶ್ರೀರಾಮನು ತನ್ನ ಮನೋವ್ಯಾಪಾರವನ್ನೆಲ್ಲ ಸೂರ್ಯನಾರಾಯಣನಲ್ಲಿಟ್ಟುದಾಗಿರುವುದು. ಅಂದರೆ ತ್ರಿಪುಟಿಸ್ವರೂಪವಾದ ಜ್ಞಾತೃ, ಜ್ಞಾನ, ಜ್ಞೇಯಗಳಲ್ಲಿ ಪ್ರಥಮದಲ್ಲಿ ಜ್ಞಾನವು ಜ್ಞೇಯಸ್ವರೂಪವಾದ ಜ್ಯೋತಿಯನ್ನು ಧರಿಸಿಕೊಳ್ಳುವುದು. ಅನಂತರ ಜ್ಞಾತೃವು ಕೂಡ ಸ್ಥೂಲದೇಹವೇ ಇಲ್ಲವೆಂಬದಾಗಿ ನ್ಯಾಸದ ಭಾವನೆಯಿಂದ ಜ್ಞೇಯಸ್ವರೂಪವೇ ತಾನೆಂದು ನಿಂತುಕೊಳ್ಳುವುದೇ ಶ್ರೀರಾಮನು ಮನೋವ್ಯಾಪಾರವನ್ನೆಲ್ಲ ಸೂರ್ಯನಾರಾಯಣನಲ್ಲಿಟ್ಟು ಅವನನ್ನು ಧರಿಸಿಕೊಂಡದ್ದಾಗಿದೆ. ಈರೀತಿ ಅಭೇದಜ್ಞಾನವೆನಿಸುವ ಸೋಹಂಭಾವದಿಂದ ಸಮಾಧಿಯನ್ನು ಅಭ್ಯಾಸ ಮಾಡದಿದ್ದರೆ ಸಮಾಧಿಯು ಖಂಡಿತ ಸ್ಥಿತಿಮಿತಕ್ಕೆ ಬರುವುದೇ ಇಲ್ಲ.

ನಾವುಗಳು ಬಾಹ್ಯದಲ್ಲಿ ಮಾಡುವ ಭಕ್ತಿಯಲ್ಲೇ ಅಂತಃಕರಣವು ಭಗವದಾಕಾರವಾಗಿ ಮತ್ತಾವುದೂ ತೋರದೇ ಇರುವುದೇ ಭಕ್ತಿಯೆಂದು ಹೇಳುವಾಗ ಸಮಾಧಿಯಲ್ಲಿ ಸೋಹಂಭಾವದಿಂದ ಅಭ್ಯಾಸಮಾಡದಿದ್ದರೆ ರಾವಣನ ಸ್ವರೂಪದಲ್ಲಿರುವ ವಾಸನಾವೃತ್ತಿಯು (ವಿಕ್ಷೇಪಶಕ್ತಿಯು) ಬಾಹ್ಯಕ್ಕೆ ಖಂಡಿತವಾಗಿಯೂ ಎಳೆದೇ ಬಿಡುವುದು. ಈ ಅರ್ಥವನ್ನೇ ಸಮಾಧಿಯ ಅಭ್ಯಾಸದ ಪ್ರಥಮದಿಂದ ತಿಳಿಸಿಕೊಂಡು ಬಂದಿದೆ. ಆದುದರಿಂದ ಶ್ರೀರಾಮನು ಸೂರ್ಯನಾರಾಯಣನನ್ನು ಸ್ಕಂದೋಪನಿಷತ್ತಿನಲ್ಲಿ ಹೇಳಿರುವ ಭಾವನೆಯಂತೆ,

ತ್ಯಜೇದಜ್ಞಾನನಿರ್ಮಾಲ್ಯಂ ಸೋಹಂಭಾವೇನ ಪೂಜಯೇತ್ ।

ಅಜ್ಞಾನರೂಪವಾದ ಅವಿದ್ಯಾವೃತ್ತಿಯೆಂಬ ನಿರ್ಮಾಲ್ಯವನ್ನು ಹೋಗಲಾಡಿಸಿ ಕೊಳ್ಳುತ್ತ ಪರಬ್ರಹ್ಮನೇ ನಾನೆಂಬ ಅಥವಾ ಅಹಂಬ್ರಹ್ಮಾಸ್ಮಿಯೆಂಬ ಭಾವನೆಯಿಂದ ಶ್ರೀರಾಮನು ಸೂರ್ಯನಾರಾಯಣನನ್ನು ಪೂಜೆಮಾಡಿದನು. ಇದೇ ತತ್ವಕ್ಕೆ ಮಣ್ಡಲ ಬ್ರಾಹ್ಮಣೋಪನಿಷತ್ತಿನಲ್ಲಿ '"ಸೋಽಹಂಭಾವೋ ನಮಸ್ಕಾರಃ" ಎಂಬದಾಗಿ ಹೇಳಿರುವುದು. ಅಲ್ಲದೆ ತೈತ್ತಿರೀಯೋಪನಿಷತ್ತಿನಲ್ಲಿ,

"ಸಯಶ್ಚಾಯಂ ಪುರುಷೆ ಯಶ್ಚಾಸಾವಾದಿತ್ಯೇಸ ಏಕಃ |

ಎಂದರೆ ಈ ಶರೀರದಲ್ಲಿರುವವನೂ ಸೂರ್ಯಮಂಡಲದಲ್ಲಿರುವವನೂ ಒಬ್ಬನೇ ಆಗಿರುವ ನೆಂಬದಾಗಿ ಹೇಳಿರುತ್ತದೆ. ಅಲ್ಲದೆ ಗಾಯತ್ರಿಯನ್ನು ಆದಿತ್ಯಸ್ವರೂಪವಾದ ಜ್ಯೋತಿ ಯಲ್ಲಿ ಧ್ಯಾನಮಾಡಬೇಕೆಂದು ಹಿಂದಿನ ಪ್ರಕರಣದಲ್ಲಿ ತಿಳಿಸಿರುತ್ತಷ್ಟೆ! ಆದರೆ ಗಾಯತ್ರೀ ದೇವಿಯನ್ನು ಯಾವ ಭಾವನೆಯಿಂದ ಧ್ಯಾನಮಾಡಬೇಕೆಂದರೆ "ಗಾಯತ್ರೀಮಾವಾಹ ಯಾಮಿ, ಸಾವಿತ್ರೀಮಾವಾಹಯಾಮಿ" ಎಂಬದಾಗಿ ಸಂಧ್ಯೋಪಾಸನೆಯಲ್ಲಿ ಹೇಳಿರುವಂತೆ ನಾನೇ ಅದೆಂಬ ಭಾವನೆಯಿಂದ ಅಂತರ್ಮುಖದಲ್ಲಿ ಕಾಣುವ ಜ್ಯೋತಿಯ ತನ್ಮಯತ್ವವನ್ನು ಅಭ್ಯಾಸಮಾಡುವುದೇ ಗಾಯತ್ರೀ ಆವಾಹನೆಯ ತತ್ವವು. ಇದೇ ಶ್ರೀರಾಮಚಂದ್ರನು ಸೂರ್ಯನಾರಾಯಣನನ್ನು ಧರಿಸಿಕೊಂಡ ತತ್ವವಾಗಿರುವುದು.

ಶ್ರೀರಾಮನು ಮೂರಾವರ್ತಿ ಆಚಮನಮಾಡಿ ಶುದ್ಧಾಂತಃಕರಣನಾಗಿ ಸೂರ್ಯನನ್ನು ಭಜಿಸಿರುವುದು ತ್ರಿಕರಣಶುದ್ಧಿಯ ತತ್ವವನ್ನು ಪ್ರತಿಪಾದನೆಮಾಡುವುದು.

ನಾದವೂ ಜ್ಯೋತಿಸ್ವರೂಪನಾದ ಆದಿತ್ಯನೂ ಜೊತೆಯಲ್ಲಿರುವುದರಿಂದ ನಾದವನ್ನು ಕೇಳುತ್ತಾ ಇದ್ದುಕೊಂಡೇ ಅಂತಜ್ಯೋತಿಸ್ವರೂಪನಾದ ಆದಿತ್ಯನನ್ನು ಸೋಹಂಭಾವದಿಂದ ಧರಿಸಿ ತನ್ಮಯನಾಗಿ ಸಮಾಧಿಯ ಅಭ್ಯಾಸಮಾಡಬೇಕು. ಇದಕ್ಕಿಂತ ಹೆಚ್ಚಿನ ಪೂಜೆಯೇ ಇಲ್ಲವೆಂದು ಯೋಗಶಿಖೋಪನಿಷತ್ತಿನಲ್ಲಿ,

ನಾಸ್ತಿ ನಾದಾತ್ಪರೋ ಮಂತ್ರೋ ನದೇವಸ್ಸ್ವಾತ್ಮನಃ ಪರಃ |
ನಾನುಸಂಧೇಃ ಪರಾಪೂಜಾ ನಹಿತೃಪ್ತೇಃ ಪರಂಸುಖಂ ||

ತಾ|| ನಾದಕ್ಕಿಂತ ಅನ್ಯವಾದ ಮಂತ್ರವಿಲ್ಲ. ತನ್ನ ಆತ್ಮಕ್ಕಿಂತ ಬೇರೆ ದೇವರಿಲ್ಲ. ಸ್ವಾತ್ಮಾನುಸಂಧಾನಕ್ಕಿಂತ ಅನ್ಯಪೂಜೆ ಇಲ್ಲ. ತೃಪ್ತಿಗಿಂತ ಹೆಚ್ಚಿನದಾದ ಸುಖವಿಲ್ಲ. ಎಂದು ಹೇಳಿರುವುದು.

ಶ್ರೀರಾಮನು ಸೂರ್ಯನಾರಾಯಣನನ್ನು ಅತಿಶಯವಾದ ಭಕ್ತಿಯಿಂದ ಪೂಜಿಸಿರುವ ತತ್ವವೇನೆಂದರೆ—ಸಮಾಧಿಯಲ್ಲಿ ಕಾಣುವ ಜ್ಯೋತಿಸ್ವರೂಪವನ್ನು, ಅತಿಶಯವಾದ ಪ್ರೀತಿ

ಅಥವಾ ಭಕ್ತಿಯಿಂದ ಧಾರಣೆಮಾಡಿಕೊಂಡರೆ ತನ್ಮಯನಾಗಿ ಅನಂತರ ಪರಬ್ರಹ್ಮನೇ ಆಗುತ್ತಾನೆ. ಈ ತಾತ್ಪರ್ಯಕ್ಕೆ ಪತಂಜಲಿ ಮಹರ್ಷಿಗಳು.

"ಸಮಾಧಿಸಿದ್ಧಿ ರೀಶ್ವರಪ್ರಣಿಧಾನಾತ್" |

ತಾ|| ಜ್ಯೋತಿರ್ಮಯನಾದ ಪರಮೇಶ್ವರನಲ್ಲಿ ಅತಿಶಯವಾದ ಭಕ್ತಿಯಿಡೋಣದರಿಂದ ಅಂದರೆ ಜ್ಯೋತಿಯೇ ತಾನೆಂದು ತನ್ಮಯನಾಗೋಣದರಿಂದ ನಿರ್ವಿಕಲ್ಪಸಮಾಧಿಯು ಲಭ್ಯವಾಗುವುದು, ಎಂದು ಹೇಳಿರುವರು.

ಶ್ರೀರಾಮನು ತನಗೆ ಕಾಣಿಸುವ ಸೂರ್ಯನನ್ನು "ಅಸಾವಾದಿತ್ಯೋ ಬ್ರಹ್ಮ" ಎಂಬ ಶ್ರುತಿವಚನಾನುಸಾರವಾಗಿ ಸಾಕ್ಷಾತ್ಪರಬ್ರಹ್ಮನೆಂದು, ಅಂತಹ ಸೂರ್ಯನಲ್ಲಿ ಲೀನವಾಗಲು ಸೂರ್ಯನನ್ನು ಧರಿಸಿಕೊಂಡನು. ಆದಿತ್ಯನ ಅಂತರ್ಗತವಾಗಿ ಪರಮಾತ್ಮನಿರುವುದರಿಂದ ಪ್ರಥಮದಲ್ಲಿ ಆದಿತ್ಯನಲ್ಲಿಯೇ ನಿಂತು ಅನಂತರ ಅವನ ಅಂತರ್ಗತವಾದ ಪರಮಾತ್ಮಭೂತ್ಯವಸ್ಥೆಯನ್ನು ಹೊಂದಬೇಕು. ಈ ತಾತ್ಪರ್ಯಕ್ಕೆ "ಯ ಆದಿತ್ಯೆ ತಿಷ್ಠ, ಯ ಆದಿತ್ಯಮಂತರೋಯಮಯತಿ, ಅಂತರಾದಿತ್ಯೆ ಮನಸಾಚರಂತಿ" ಮುಂತಾದ ಶ್ರುತಿವಾಕ್ಯಗಳಿರುವುದಲ್ಲದೆ ಇದೇ ಅರ್ಥಕ್ಕೆ ಕೇನೋಪನಿಷತ್ತಿನಲ್ಲಿ,

ಪೂಷನ್ನೇ ಕರ್ಷೇಯಮಸೂರ್ಯಪ್ರಾಜಾಪತ್ಯ ವ್ಯೂಹರಶ್ಮೀನ್ |
ಸಮೂಹತೇಜಃ ಯತ್ತೇರೂಪಂ ಕಲ್ಯಾಣತಮಂ |
ತತ್ತೇಪಶ್ಯಾಮಿಯೋಸಾವಸೌ ಪುರುಷಸ್ಸೋಹಮಸ್ಮಿ ||

ತಾ|| ಜಗತ್ತನ್ನು ಪೋಷಿಸುವ, ಅದ್ವಿತೀಯನಾಗಿರುವ, ಸರ್ವರನ್ನೂ ನಿಯಮಿಸುವ, ಸರ್ವವನ್ನೂ ಸ್ವೀಕರಿಸುವ ಎಲೈ ಸೂರ್ಯ ಭಗವಂತನೇ! ಮಂಗಳಸ್ವರೂಪವಾದ ನಿನ್ನ ದಿವ್ಯರೂಪವನ್ನು ನಿನ್ನ ಅನುಗ್ರಹದಿಂದ ನೋಡುತ್ತಿದೇನೆ. ಪರಮಾತ್ಮಸ್ವರೂಪವನ್ನು ಹೊಂದಲು ನಿನ್ನ ತೇಜಸ್ಸು ಮರೆಯಾಗಿರುತ್ತದೆ. ನಿನ್ನ ತೇಜಸ್ಸಿನಲ್ಲಿ ಅಂತರ್ಯಾಮಿಯಾಗಿರುವ ಆ ಪರಬ್ರಹ್ಮನೇ ನನ್ನ ನಿಜವಾದ ಸ್ವರೂಪವಾಗಿದೆ. ನನ್ನ ನಿಜವಾದ ಸ್ವರೂಪವನ್ನು ಹೊಂದಲು ಅನುಗ್ರಹಮಾಡು, ಎಂಬದಾಗಿ ಹೇಳಿರುವುದು.

ಈ ಮೇಲಿನ ಶ್ರುತಿವಾಕ್ಯಕ್ಕೆ ಅನುಸಾರವಾಗಿಯೇ ಶ್ರೀರಾಮನು ಆದಿತ್ಯನನ್ನು ಭಕ್ತಿಯಿಂದ ಧಾರಣೆಮಾಡಿಕೊಂಡಿರುತ್ತಾನೆ. ಸಮಾಧಿಯಲ್ಲಿ ಜ್ಯೋತಿಯನ್ನು ಅಭೇದಜ್ಞಾನದಿಂದ ಬುದ್ಧಿವೃತ್ತಿಯು ಧರಿಸಿಕೊಂಡು ತನ್ಮಯವಾಗುವಿಕೆಯೇ ಸೂರ್ಯನಾರಾಯಣನು ಶ್ರೀರಾಮನಿಗೆ ಪ್ರತ್ಯಕ್ಷವಾದ ತತ್ವವಷ್ಟೆ! ಇದೇ ಅರ್ಥಕ್ಕೆ ಮುಂಡಕೋಪನಿಷತ್ತಿನಲ್ಲಿ,

ಅನ್ತಶ್ಶರೀರೇ ಜ್ಯೋತಿರ್ಮಯೋಹಿ ಶುಭ್ರೋಯಂ |
ಪಶ್ಯಂತಿಯತಯಃ ಕ್ಷೀಣದೋಷಾಃ ||

ತಾ|| ಶರೀರದ ಅನ್ತವಾದ ಬ್ರಹ್ಮರಂಧ್ರ ಅಥವಾ ಹೃದಯಾಕಾಶದಲ್ಲಿ ಪರಿಶುದ್ಧ ನಾಗಿಯೂ, ಜ್ಯೋತಿರ್ಮಯನಾಗಿಯೂ ಪರಮಾತ್ಮನು ಬೆಳಗುತಲಿದಾನೆ. ಕ್ಷೀಣದೋಷಿಗಳು ಅಂತಹ ಜ್ಯೋತಿಯನ್ನು ಹೊಂದುತ್ತಾರೆ. ಎಂದು ಹೇಳಿರುತ್ತದೆ. ಇದೇ ಅರ್ಥಕ್ಕೆ ದರ್ಶನೋಪನಿಷತ್ತಿನಲ್ಲಿಯೂ,

ಪ್ರಾಣಾಯಾಮೇನ ಚಿತ್ತಂತು ಶುದ್ಧಂಭವತಿಸುವ್ರತ |
ಚಿತ್ತೇ ಶುದ್ಧೇ ಶುಚಿಸ್ಸಾಕ್ಷಾತ್ಪ್ರತ್ಯಗ್ಜ್ಯೋತಿರ್ವ್ಯವಸ್ಥಿಥಃ ||

ತಾ|| ಪ್ರಾಣಾಯಾಮದಿಂದ ಚಿತ್ತಶುದ್ಧಿಯುಂಟಾಗುವುದು. ಚಿತ್ತಶುದ್ಧಿಯಿಂದ ಪ್ರತ್ಯಗ್ಜ್ಯೋತಿಯನ್ನು ಹೊಂದುತ್ತಾನೆ, ಎಂಬ ವಾಕ್ಯವಿರುವುದು.

ಈ ಮೇಲಿನ ಶ್ರುತಿವಾಕ್ಯಗಳ ತಾತ್ಪರ್ಯಕ್ಕನುಸಾರವಾಗಿ ಸಮಾಧಿಯಲ್ಲಿ ಬುದ್ಧಿ ವೃತ್ತಿಯು ಜ್ಯೋತಿರ್ಮಯವಾಗುವ ತತ್ವವೇ ಶ್ರೀರಾಮನಿಗೆ ಸೂರ್ಯನು ಪ್ರತ್ಯಕ್ಷನಾದುದು. ಸೂರ್ಯನು ಪ್ರತ್ಯಕ್ಷನಾಗಿ ಶ್ರೀರಾಮನನ್ನು ಕುರಿತು ರಾವಣನನ್ನು ಲಯವನ್ನೈದಿಸು, ಭಯಪಡಬೇಡವೆಂದು ಹೇಳಿರುವುದರ ತಾತ್ಪರ್ಯವೇನೆಂದರೆ—ಆದಿತ್ಯಸ್ವರೂಪವಾದ ಅಂತ ರ್ಜ್ಯೋತಿಯಲ್ಲಿ ಸೋಹಂಭಾವದಿಂದ ತನ್ಮಯತ್ವವುಂಟಾದಾಗ ಬುದ್ಧಿವೃತ್ತಿಯು ತನ್ಮಯ ವಾಗುತ್ತಷ್ಟೆ! ಈ ಜ್ಯೋತಿರ್ಮಯತ್ವವನ್ನು ಪಡೆದ ಅಧಿಕಾರಿಗೆ ಬಹಿರ್ಮುಖವಾಗಲು ಮನಸ್ಸೇ ಬರದಿರುವಂತೆ ಆನಂದಜನಕವಾಗಿರುತ್ತದೆ. ಈ ಜ್ಯೋತಿರ್ಮಯತ್ವವು ಆನಂದಾಮೃತದಲ್ಲ ಮುಳುಗುವಂತೆ ಮಾಡುವುದರಿಂದ ತಲೆದೋರುವ ರಾವಣನ ತತ್ವದಲ್ಲಿರುವ ವಾಸನಾವೃತ್ತಿ ಯನ್ನು ಲಯಗೊಳಿಸಲು ಪ್ರೇರಕವಾಗಿರುವ ತತ್ವವೇ ಸೂರ್ಯನು ಶ್ರೀರಾಮನನ್ನು ಕುರಿತು ರಾವಣನನ್ನು ಲಯಗೊಳಿಸು, ಭಯಪಡಬೇಡವೆಂದು ಹೇಳಿದುದರ ತಾತ್ಪರ್ಯವಾಗಿರುವುದು.

ಅಂದರೆ ಭಯವಿಲ್ಲದ ಆನಂದರೂಪವಾದ ಜ್ಯೋತಿಯಲ್ಲಿ ಅವಿದ್ಯಾವಾಸನೆಯನ್ನು ಲಯಗೊಳಿಸುವಂತಹ ಸ್ಥಿರತ್ವವುಂಟಾಗುವುದು. ಈ ರೀತಿಯಾಗಿ ಭಯವಿಲ್ಲದ ಸ್ಥಿರತ್ವ ವುಂಟಾಗುವುದೆಂದು ಪತಂಜಲಿಮಹರ್ಷಿಗಳು, "ವಿಶೋಕಾವಾಜ್ಯೋತಿಷ್ಮತಿ" ಅಂದರೆ ಅವಿದ್ಯಾಸ್ವರೂಪವಾದ ದುಃಖಗಳಿಲ್ಲದ ತೇಜಸ್ಸಿನಲ್ಲಿ ಬುದ್ಧಿಯು ಸ್ಥೈರ್ಯಗೊಳ್ಳುವುದು ಎಂದು ಹೇಳಿರುವರು. ಅವಿದ್ಯಾಸ್ವರೂಪವಾದ ಗಾಢಾಂಧಕಾರವನ್ನು ತೊಲಗಿಸಲು ನಕ್ಷತ್ರ, ಚಂದ್ರ, ಅರುಣೋದಯ, ಸೂರ್ಯೋದಯ ಮತ್ತು ಮಧ್ಯಾಹ್ನದ ಸೂರ್ಯರೂಪಗಳಾದ ತೇಜ ಸ್ಸುಗಳ ಅಂತಸ್ತುಗಳನ್ನು ಅಧಿಕಾರಿಯು ಕ್ರಮಾನುಷ್ಠಾನದಿಂದ ಪಡೆಯುತ್ತಾ ಬರ

ಬೇಕೆಂದು ಪ್ರಥಮದಿಂದಲೂ ತಿಳಿಸಿಕೊಂಡು ಬರುತ್ತಿದೆಯಷ್ಟೆ! ಈ ಸೋಪಾನಗಳ ತಾರ ತಮ್ಯಗಳನ್ನೆಲ್ಲ ಈ ಕೆಳಗಿನ ಶ್ರುತಿಪ್ರಮಾಣವೊಳಗೊಂಡಿರುವುದು. ಮಣ್ಡಲಬ್ರಾಹ್ಮಣೋಪನಿಷತ್ ಅದ್ವಯತಾರಕೋಪನಿಷತ್ತುಗಳೆರಡರಲ್ಲಿಯೂ,

> ಪುರುಷಸ್ಯ ದೃಷ್ಟ್ಯಗ್ರೇ ಜ್ಯೋತಿ[illegible]ಸ್ತನ್ತೌ ತದ್ದೃಷ್ಟಿಃ |
> ಸ್ಥಿರಾಭವತಿ ವಿಸ್ಫುರತ್ತಾರಕಾಕಾರಗಾಢತಮೋಪಮಂ ||
> ಪರಾಕಾಶಂಭವತಿ ಸರ್ವೋತ್ಕೃಷ್ಟಪರಮದ್ಯುತಿಪ್ರದ್ಯೋತಮಾನಂ |
> ತತ್ಸ್ವಾಽಕಾಶಂ ಭವತಿ ಕೋಟಿ ಸೂರ್ಯಪ್ರಕಾಶಂ ಸೂರ್ಯಾಕಾಶಂ ||
> ಭವತಿ ಏವಮಭ್ಯಾಸಾತ್ತನ್ಮಯೋ ಭವತಿ ಅಭ್ಯಾಸಾನ್ನಿರ್ವಿಕಾರಂ |
> ಗುಣರಹಿತಾಕಾಶಂ ಭವತಿ ||

ತಾ|| ಯೋಗಾನುಷ್ಠಾನ ಮಾಡತಕ್ಕವನ ದೃಷ್ಟಿಯು ಕೊನೆಯಲ್ಲಿ ತೇಜಃಕಿರಣಗಳು ಇರುತ್ತವೆ. ಅಂತಹ ದೃಷ್ಟಿಯು ಸ್ಥಿರತ್ವವನ್ನು ಪಡೆಯುತ್ತ ಬರುವುದು. ಮಿನುಗುಟ್ಟುತ್ತಿರುವ ನಕ್ಷತ್ರಗಳ ಆಕಾರವುಳ್ಳ ಗಾಢಾಂಧಕಾರಸದೃಶವಾದುದು ಪರಾಕಾಶವೆಂದೂ, ಪ್ರಳಯಾಗ್ನಿಯಂತೆ ಕೆಂಪಗೆ ಪ್ರಕಾಶಮಾನವಾದುದು ಮಹಾಕಾಶವೆಂದೂ, ಕೋಟಿಸೂರ್ಯರಂತೆ ಪ್ರಕಾಶಿಸುವುದು ಸೂರ್ಯಾಕಾಶವೆಂದೂ ಎನಿಸಿಕೊಳ್ಳುವುವು. ಹೀಗೆ ಅಭ್ಯಾಸಮಾಡುವುದರಿಂದ ತನ್ಮಯನಾಗುತ್ತ ಬರುತ್ತಾನೆ. ಅಭ್ಯಾಸದಿಂದ ನಿರ್ವಿಕಾರ ಮತ್ತು ನಿರ್ಗುಣವಾದ ಆಕಾಶವೆಂದರೆ, ಬ್ರಹ್ಮಸ್ವರೂಪವುಂಟಾಗುವುದು. ಎಂದು ಹೇಳಿರುವುದು.

ಈ ಮೇಲಿನ ಶ್ರುತಿವಾಕ್ಯಗಳ ಮುಖ್ಯತಾತ್ಪರ್ಯವೇನೆಂದರೆ, ಇಂತಹ ಪ್ರಕಾಶವು ಸಮಾಧಿಯಲ್ಲಿ ಬುದ್ಧಿಗೆ ಗೋಚರವಾಗುವುದೆಂದೂ, ಸೂರ್ಯನ ಪ್ರಕಾಶವೇ ಕೊನೆಯಾಗಿ ಅನಂತರ ಆತ್ಮಸಾಕ್ಷಾತ್ಕಾರವಾಗುವುದೆಂದೂ ತಿಳಿಸುತ್ತದೆ. ಅಲ್ಲದೆ ಪ್ರತಿಯೊಂದು ಸೋಪಾನದಲ್ಲಿಯೂ ತನ್ಮಯನಾಗಿ ಸಮಾಧಿಯನ್ನು ಅಭ್ಯಾಸಮಾಡಬೇಕೆಂಬುದನ್ನು ಸೂಚಿಸುವುದು. ಈ ಅಂತರ್ಜ್ಯೋತಿಯ ತನ್ಮಯತ್ವವನ್ನು ಪಡೆದು ಆತ್ಮಸಾಕ್ಷಾತ್ಕಾರ ಮಾಡಿಕೊಳ್ಳಬೇಕೆಂಬ ತತ್ವಕ್ಕೆ ಶ್ರೀಶಂಕರಭಗವತ್ಪಾದರವರು ಆದಿತ್ಯಹೃದಯದ ಸಕಲ ತತ್ವಗಳೂ ಒಳಗೊಂಡಿರುವಂತೆ ಏಕಶ್ಲೋಕಿಯಲ್ಲಿ,

> ಕಿಂಜ್ಯೋತಿಸ್ತವ ಭಾನುಮಾನಹನಿಮೇ ರಾತ್ರೌಪ್ರದೀಪಾದಿಕಂ |
> ಸ್ಯಾದೇವಂ ರವಿದೀಪದರ್ಶನವಿಧೌ ಕಿಂಜ್ಯೋತಿರಾಖ್ಯಾಹಿಮೇ |
> ಚಕ್ಷುಸ್ತಸ್ಯನಿಮೀಲನಾದಿಸಮಯೇ ಕಿಂಧೀರ್ಧಿಯೋದರ್ಶನೇ |
> ಕಿಂತತ್ರಾಹ ಮತೋಭವಾನ್ ಪರಮಂತಂ ಜ್ಯೋತಿಸ್ತದಸ್ಮಿಪ್ರಭೋ ||

ಇದರ ತಾತ್ಪರ್ಯವು ಪ್ರಶ್ನೋತ್ತರರೂಪವಾಗಿ ಕೆಳಗೆ ಬರೆದಿರುವುದು.

| ಪ್ರಶ್ನೆ. | ಉತ್ತರ. |
|---|---|
| (೧) ಹಗಲಿನಲ್ಲಿ ಯಾವುದರ ಪ್ರಕಾಶದಿಂದ ಪದಾರ್ಥಗಳನ್ನು ನೋಡುತ್ತೇವೆ? | (೧) ಸೂರ್ಯನ ಪ್ರಕಾಶದಿಂದ. |
| (೨) ರಾತ್ರಿಯ ಕಾಲದಲ್ಲಿಯೋ? | (೨) ಅಗ್ನಿಯ ಪ್ರಕಾಶದಿಂದ. |
| (೩) ಅಗ್ನಿ ಮತ್ತು ಸೂರ್ಯರ ಪ್ರಕಾಶದಿಂದ ನೋಡುವ ಪದಾರ್ಥಗಳನ್ನು ಯಾತರಿಂದ ನೋಡುತ್ತೇವೆ? | (೩) ನಮ್ಮ ಕಣ್ಣುಗಳಿಂದ ನೋಡುತ್ತೇವೆ. |
| (೪) ಹೊರಗಿನ ಪದಾರ್ಥಗಳನ್ನು ನೋಡುವುದಕ್ಕೆ ಕಣ್ಣುಗಳಿಗಿಂತ ಪ್ರಧಾನವಾದುದು ನಮ್ಮಲ್ಲಿ ಯಾವುದು? | (೪) ನಮ್ಮ ಬುದ್ಧಿಯು. ನಮ್ಮ ಬುದ್ಧಿಯು ಕಣ್ಣುಗಳ ಮೂಲಕ ಪದಾರ್ಥಗಳನ್ನು ನೋಡುವುದು. |
| (೫) ಹೊರಗಿನ ಪದಾರ್ಥಗಳು ಹೇಗೆ ಸೂರ್ಯಾಗ್ನಿಗಳಿಂದ ಪ್ರಕಾಶಿಸುವುವೋ ಹಾಗೆ ನಮ್ಮ ಬುದ್ಧಿಯಿಂದ ನೋಡುವುದಕ್ಕೂ ಜಡವಾದ ಬುದ್ಧಿಗೊಂದು ಪ್ರಕಾಶವು ಅವಶ್ಯಕವಲ್ಲವೇ? | (೫) ಜಡವಾದ ಬುದ್ಧಿಗೂ ಒಂದು ಪ್ರಕಾಶವಿದ್ದಲ್ಲದೆ ಬುದ್ಧಿಯಿಂದ ನೋಡುವುದಕ್ಕಾಗುವುದಿಲ್ಲ. |
| (೬) ಹಾಗಾದರೆ ನೇತ್ರಗಳಿಗೂ ಬುದ್ಧಿಗೂ ಪ್ರಕಾಶಕೊಡತಕ್ಕ ಜ್ಯೋತಿಯು ನಮ್ಮಲ್ಲಿಯೇ ಇರುವುದು. ಕಣ್ಣು ಮುಚ್ಚಿಕೊಂಡು ಒಳಗಡೆಯೇ ನೋಡು. | (೬) ನೇತ್ರಗಳನ್ನು ಮುಚ್ಚಿಕೊಂಡರೆ ಒಳಗಡೆ ಒಂದು ವಿಧವಾದ ತೇಜಸ್ಸು ಕಾಣುವುದು. |
| (೭) ಒಳಗಡೆಯ ಪ್ರಕಾಶವನ್ನು ನೋಡುವವರು ಯಾರು? | (೭) "ನಾನು" ಎಂಬುದು. |
| (೮) "ನಾನು" ಎಂಬುದು ಕೂಡ ಯಾವ ಸ್ವರೂಪದಲ್ಲಿದ್ದು ಒಳಗಡೆ ಜ್ಯೋತಿಯನ್ನು ನೋಡುತ್ತಿರುವೆ? | (೮) ಒಳಗಡೆ ಜ್ಯೋತಿಸ್ವರೂಪ ಹೊರತು ಮತ್ತಾವ ಸ್ವರೂಪವೂ ಇಲ್ಲವಾದುದರಿಂದ "ನಾನು" ಎಂಬುದು ಕೂಡ ಆ ಜ್ಯೋತಿಯ ಒಳಗೇ ಇರಬೇಕೆಂದು ಯೋಚಿಸುತ್ತೇನೆ. |

ಆದುದರಿಂದ ನಿನ್ನ ನಿಶ್ಚಯವಾದ ಸ್ವರೂಪವು ಜ್ಯೋತಿಯ ಒಳಗಡೆಯೇ ಇರುವುದು. ಆ ನಿನ್ನ ನಿಜವಾದ ಸ್ವರೂಪವನ್ನು ಹೊಂದಬೇಕಾದರೆ ಜ್ಯೋತಿಯಲ್ಲಿಯೇ ಮಗ್ನನಾಗು, ಎಂಬುದೇ ಈ ಶ್ಲೋಕದ ತಾತ್ಪರ್ಯವಾಗಿರುವುದು.

ಸರ್ವಜ್ಞಮೂರ್ತಿಯಾದ ಶ್ರೀಶಂಕರಭಗವತ್ಪಾದರವರು ಎಂತಹ ಮೂಢರಿಗಾದರೂ ತಿಳಿಯುವಂತೆ ಆತ್ಮತತ್ವದ ರಹಸ್ಯವನ್ನು ಒಂದೇ ಶ್ಲೋಕದಲ್ಲಿ ಹೇಳಿರುತ್ತಾರೆ. ಆದುದ

ರಿಂದ ಜೀವಂತರಾಗಿರುವಾಗಲೇ ಅಂತರ್ಜ್ಯೋತಿಯ ಸೋಪಾನವನ್ನು ಪಡೆದು ಕೃತಕೃತ್ಯ ರಾಗಬೇಕು. ಈ ಸೋಪಾನವನ್ನು ಪಡೆದ ಅಧಿಕಾರಿಗೆ ಒಂದು ವೇಳೆ ಜೀವಂತನಾಗಿರುವಾಗಲೇ ಆತ್ಮಸಾಕ್ಷಾತ್ಕಾರವಾಗದಿದ್ದರೂ ಪ್ರಾಣೋತ್ಕ್ರಮಣಕಾಲದಲ್ಲಿ ವಿದೇಹ ಮುಕ್ತಿಯು ಸಿದ್ಧಿಸುವುದು. ಈ ತಾತ್ಪರ್ಯಕ್ಕೂ ಅಂತರ್ಜ್ಯೋತಿಯ ತನ್ಮಯವಾಗಬೇಕೆಂಬ ತತ್ವಕ್ಕೂ ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆಯಲ್ಲಿ,

ಕವಿಂ ಪುರಾಣ ಮನುಶಾಸಿತಾರ ಮಣೋರಣೀಯಾಂ ತಮನುಸ್ಮರೇದ್ಯಃ |
ಸರ್ವಸ್ಯಧಾತಾರ ಮಚಿಂತ್ಯರೂಪ ಮಾದಿತ್ಯವರ್ಣಂ ತಮಸಃಪರಸ್ತಾತ್ |
ಪ್ರಯಾಣಕಾಲೇ ಮನಸಾಚಲೇನ ಭಕ್ತ್ಯಾಯುಕ್ತೋ ಯೋಗಬಲೇನಚೈವ |
ಭ್ರುವೋರ್ಮಧ್ಯೆಪ್ರಾಣಮಾವೇಶ್ಯಸಮ್ಯಕ್ಸತಂಪರಂಪುರುಷಮುಪೈತಿದಿವ್ಯಮ್||

ತಾ|| ಪ್ರಾಣಪ್ರಯಾಣಸಮಯದಲ್ಲಿ ನಿಶ್ಚಲಮನಸ್ಸಿನಿಂದ ಭಕ್ತಿಯುಕ್ತರಾಗಿ ಯೋಗ ಬಲದಿಂದ ಹುಬ್ಬುಗಳ ಮಧ್ಯದಲ್ಲಿ ಉತ್ತಮಪ್ರಕಾರದಿಂದ ಪ್ರಾಣವಾಯುವನ್ನು ಧರಿಸಿಕೊಂಡು ಸರ್ವಜ್ಞನಾದ, ಅನಾದಿಯಾದ, ಸರ್ವನಿಯಾಮಕನಾದ ಸೂಕ್ಷ್ಮವಸ್ತುವಿಗಿಂತಲೂ ಸೂಕ್ಷ್ಮನಾದ, ಸರ್ವಕ್ಕೂ ಪೋಷಕನಾದ, ಅಚಿಂತ್ಯರೂಪನಾದ, ಸೂರ್ಯನಂತೆ ಪ್ರಕಾಶಕನಾದ, ತಮೋಗುಣಕ್ಕೆ ದೂರನಾದ, ತೇಜೋರೂಪನಾದ, ಪರಮಪುರುಷನನ್ನು ಯಾರು ಧ್ಯಾನಿಸುವರೋ ಅವರು ಅವನನ್ನೇ ಸೇರುವರು, ಎಂಬದಾಗಿ ಹೇಳಿರುವನು.

ಶ್ರೀಕೃಷ್ಣಪರಮಾತ್ಮನು ಮೇಲೆ ಹೇಳಿರುವ ತತ್ವಾನುಸಂಧಾನಕ್ಕೆ ಅಧಿಕಾರಿಯು ಬರಬೇಕಾದರೆ ಜೀವಂತನಾಗಿದ್ದಾಗಲೆ ಯೋಗಾನುಷ್ಠಾನಮಾಡಿ ಉತ್ತಮಸೋಪಾನವನ್ನು ಹೊಂದಿದ್ದರಲ್ಲದೆ ಪ್ರಾಣೋತ್ಕ್ರಮಣಕಾಲದಲ್ಲಿ ಧ್ಯಾನದ ಬಲವು ಸಿದ್ಧಿಸುವುದು. ಆದುದರಿಂದ ಜೀವಂತನಾಗಿದ್ದಾಗಲೆ ಅಭ್ಯಾಸಮಾಡಿ ಉತ್ತಮ ಸೋಪಾನಕ್ಕೆ ಬಂದಿರಬೇಕೆಂಬ ತಾತ್ಪರ್ಯವಾಗಿರುವುದು.

ಅಂತರ್ಜ್ಯೋತಿಯಲ್ಲಿ ಸೋಹಂಭಾವದಿಂದ ಸಮಾಧಿಯ ಅಭ್ಯಾಸಮಾಡುವ ಅನುಷ್ಠಾನದ ಉಪದೇಶವೇ ತಾರಕ ಅಥವಾ ಮಹಾವಿದ್ಯೆಯ ಉಪದೇಶವೆಂದು ಹಿಂದಿನ ಪ್ರಕರಣದಲ್ಲಿ ತಿಳಿಸಿದ್ದೇವೆ! ಈ ಅಂತರ್ಜ್ಯೋತಿಯ ಸೋಪಾನವೇ ಶ್ರೀರಾಮತಾರಕಮಂತ್ರದ ತತ್ವವಾಗಿರುವುದು. ತಾರಕವೆಂದರೆ "ತಾರಯತೀತಿ ತಮಃ ತಾರಕಾ (ತೃ ಪ್ಲವನ ತರಣಯೋಃ) ಅಂಧಕಾರವನ್ನು ದಾಟುವಹಾಗೆ ಮಾಡುವುದು. ಆದುದರಿಂದ ಶ್ರೀರಾಮತಾರಕಮಂತ್ರ ಅಥವಾ ತಾರಕೋಪದೇಶವೆಂದರೆ "ಓಂ"ಕಾರೋಪಾಸನೆ ಮತ್ತು ತೇಜೋನಾದಧ್ಯಾನ ವಿದ್ಯೆಯ ಉಪದೇಶದ ಸೋಪಾನವೆಂಬ ತತ್ವವಾಗಿರುವುದು. ಇದೇ ತಾತ್ಪರ್ಯಕ್ಕೆ ಅದ್ವಯ ತಾರಕೋಪನಿಷತ್ತಿನಲ್ಲಿ,

ಭ್ರೂಯುಗಮಧ್ಯ ಬಿಲೇದೃಷ್ಟಿಂ ತದ್ವಾರೋರ್ಧ್ವ |
ಸ್ಥಿತತೇಜ ಆವಿರ್ಭೂತಂ ತಾರಕಯೋಗೋಭವತಿ ||

ತಾ|| ಸಮಾಧಿಯ ಅಭ್ಯಾಸಕಾಲದಲ್ಲಿ ಭ್ರೂಯುಗ ಮಧ್ಯಬಿಲದಲ್ಲಿ ಅಂತರ್ದೃಷ್ಟಿಯನ್ನಿಟ್ಟರೆ ಮೇಲುಭಾಗದಲ್ಲಿ ತೇಜಸ್ಸು ಆವಿರ್ಭೂತವಾಗಿ ತಾರಕಯೋಗವೆನಿಸಿಕೊಳ್ಳುತ್ತದೆ. ಎಂಬ ವಾಕ್ಯವಿರುವುದು.

ಓಂಕಾರೋಪಾಸನೆಯಿಂದ ಇಂತಹ ಅಂತರ್ಜ್ಯೋತಿಯಲ್ಲಿ ಸಮಾಧಿಯನ್ನು ಅಭ್ಯಾಸಮಾಡುವುದರಿಂದ ಅಧಿಕಾರಿಯು ಜನ್ಮಗಳನ್ನು ಪಡೆಯುವ ಭಯದಿಂದ ಬಿಡುಗಡೆಯಾಗುವನೆಂದು ಅದ್ವಯತಾರಕೋಪನಿಷತ್ತು, ಅಥರ್ವಶಿಖೋಪನಿಷತ್ತು ಮತ್ತು ರಾಮರಹಸ್ಯೋಪನಿಷತ್ತುಗಳಲ್ಲಿ,

ಗರ್ಭಜನ್ಮಜರಾಮರಣಸಂಸಾರಮಹದ್ಭಯಾತ್ಸಂತಾರಯತಿತಸ್ಮಾತ್ತಾರಕಮಿತಿ

ತಾ|| ಗರ್ಭವಾಸ, ಹುಟ್ಟುವಿಕೆ, ಮುಪ್ಪು, ಸಾವು ಮತ್ತು ಪ್ರಪಂಚವ್ಯಾಪಾರಗಳೆಂಬ ಅವಿದ್ಯಾಕಾರ್ಯಗಳ ಮಹಾಭಯದಿಂದ “ ಓಂ ” ಕಾರೋಪಾಸನೆಯಿಂದ ಲಭಿಸುವ ಅಂತರ್ಜ್ಯೋತಿಯು ಬಿಡಿಸುವುದರಿಂದ ಇದಕ್ಕೆ ತಾರಕಯೋಗ ಅಥವಾ ಶ್ರೀರಾಮತಾರಕ ಮಂತ್ರವೆಂಬದಾಗಿ ಹೇಳಿರುವುದು.

ಆದುದರಿಂದ ಹುಟ್ಟು ಸಾವುಗಳೆಂಬ ಮಹಾಭಯದಿಂದ ತಪ್ಪಿಸಿಕೊಳ್ಳಬೇಕೆಂಬುವವರು ತಾರಕೋಪದೇಶರೂಪವಾದ ಪ್ರಣವೋಪಾಸನೆಯಿಂದ ಅಂತರ್ಜ್ಯೋತಿಯನ್ನು ಧರಿಸಿ ಸೋಹಂಭಾವದಿಂದ ಸಮಾಧಿಯ ಅಭ್ಯಾಸಮಾಡಿದರೆ ಸೂರ್ಯನು ಶ್ರೀರಾಮನಿಗೆ ಪ್ರತ್ಯಕ್ಷನಾಗಿ ಅಭಯವನ್ನು ಕೊಟ್ಟಿರುವಂತೆ ಅಧಿಕಾರಿಯು ಅವಿದ್ಯಾಬಂಧನವನ್ನು ಪರಿಹರಿಸಿಕೊಂಡು ಮುಕ್ತನಾಗುತ್ತಾನೆಂಬುದರಲ್ಲಿ ಕಿಂಚಿತ್ತಾದರೂ ಸಂಶಯವಿಲ್ಲ.

## ೩೦ನೆಯ ಪ್ರಕರಣ.

**ರಾವಣನ ಸ್ವರೂಪ ಮತ್ತು ರಾಮ ರಾವಣರ ಯುದ್ಧದ ವರ್ಣನೆ.**



**ವಾಸನಾವೃತ್ತಿ ಮತ್ತು ಇಂದ್ರಿಯಗಳ ಆಕರ್ಷಣಾಶಕ್ತಿ ವಿಚಾರ. ಸಮಾಧಿಯಲ್ಲಿ ಬುದ್ಧಿವೃತ್ತಿಗೂ ಅವಿದ್ಯಾಪ್ರಧಾನ ಶಕ್ತಿಗೂ ನಡೆಯುವ ಸೆಳೆದಾಟದ ವಿಚಾರ.**

ರಾ|| ಅಗಸ್ತ್ಯರು ಆದಿತ್ಯಹೃದಯವನ್ನು ಅನುಗ್ರಹಮಾಡಿ ಹೊರಟುಹೋದನಂತರ ಶ್ರೀರಾಮನು ರಾವಣನನ್ನು ಕೊಲ್ಲಲು ದೃಢಸಂಕಲ್ಪನಾಗಿ ರಾವಣನೊಡನೆ ಯುದ್ಧಕ್ಕೆನಿಂತು

ಅನೇಕ ಬಾಣಗಳ ವರ್ಷವನ್ನು ಸುರಿಸಿದನು. ರಾವಣನೂ ಬಿಡದೇ ರಾಮನ ಮೇಲೆ ಬಾಣ ಪ್ರಯೋಗ ಮಾಡುತ್ತಿದ್ದನು.

ತತ್ವ|| ಕುಂಭಕರ್ಣ, ವಿಭೀಷಣ, ಇಂದ್ರಜಿತ್ತು ಮೊದಲಾದವರ ಸ್ವರೂಪಗಳ ತತ್ವಗಳು ಅವರವರ ಯುದ್ಧಪ್ರಕರಣಗಳಲ್ಲಿ ವಿವರಿಸಲ್ಪಟ್ಟಿವೆ. ಅವಿದ್ಯಾಪ್ರಧಾನಪುರುಷನಾದ ರಜೋಗುಣಚೈತನ್ಯ ಅಥವಾ ವಿಕ್ಷೇಪಶಕ್ತಿಯ ತತ್ವದವನಾದ ರಾವಣನ ವಿಚಾರವನ್ನು ಅಲ್ಲಲ್ಲಿ ತಿಳಿಸಿಕೊಂಡು ಬಂದಿದೆ. ಇವನ ನಾಮಾಂಕಿತ ಪದದ ವ್ಯುತ್ಪತ್ತಿಗೆ ಇವನ ತತ್ವಗಳನ್ನು ಅನ್ವಯಮಾಡಿ ತಿಳಿದುಕೊಂಡು ಅನಂತರ ಯುದ್ಧ ಪ್ರಕರಣವನ್ನು ತೆಗೆದುಕೊಳ್ಳೋಣ.

ರಾವಣನು ವಿಕ್ಷೇಪಶಕ್ತಿಯಲ್ಲಿ ಪ್ರಧಾನವಾದ ವಾಸನಾವೃತ್ತಿಯ ತತ್ವದವನೆಂದು ಹಿಂದೆಯೇ ತಿಳಿಸಿತಷ್ಟೆ ! ರಾವಣನು ಹೇಗೆ ಪ್ರದಾನನಾಗಿ ಇಂದ್ರಜಿತ್ತು ಮೊದಲಾದ ಸಕಲ ರಾಕ್ಷಸರನ್ನೂ ಪ್ರೇರಣೆಮಾಡಿ ಯುದ್ಧಕ್ಕೆ ಕಳುಹಿಸಿಕೊಡುತ್ತಿದ್ದನೋ ಹಾಗೆ ವಾಸನಾ ವೃತ್ತಿಯೇ ಸಕಲ ಬಹಿರ್ವ್ಯಾಪಾರಗಳಿಗೂ ಮೂಲಕಾರಣವಾಗಿರುತ್ತದೆ. ತನ್ನ ವಾಸನಾ ವೃತ್ತಿಯು ಕಾರ್ಯತಃ ನಡೆಯಲಿ, ನಡೆಯದೆ ಹೋಗಲಿ ನಿರಂತರವೂ ಬುದ್ಧಿಯನ್ನು ತನ್ನ ವಾಸನಾವೃತ್ತಿಯ ಆಕಾರವಾಗುವಂತೆ ಮಾಡುವುದೇ ಇವನ ಸ್ವಾಭಾವಿಕವಾದ ಕಾರ್ಯ. ಹೇಗೆಂದರೆ "ರಾತೀತಿ ರವಣಃ ಸಏವ ರಾವಣಃ" ಸಾಗುವ ಅಥವಾ ಸಾಗದೇ ಇರುವ ಕೆಲಸಗಳಲ್ಲಿ ಕೈಹಾಕಿಕೊಂಡು ಇದ್ದು ಗೋಳಾಡುವ ಸ್ವಭಾವದವನು.

ಹೇಗೆಂದರೆ—ನಿದ್ರೆಯಿಂದ ಎದ್ದು ಪುನಃ ನಿದ್ರೆಗೆಹೋಗುವವರೆಗೂ ಅರ್ಧಕ್ಷಣವೂ ವ್ಯವಧಾನವಿಲ್ಲದೆ ಅವಿಚ್ಛಿನ್ನವಾಗಿ ನಮ್ಮ ಬುದ್ಧಿಗೆ ವಿಷಯಾಕಾರವನ್ನುಂಟುಮಾಡುತ್ತಾ ಇರುವುದೇ ವಾಸನಾವೃತ್ತಿ ಅಥವಾ ವಿಕ್ಷೇಪಶಕ್ತಿ. ನಮ್ಮಲ್ಲಿ ಅರಕ್ಷಣವಾದರೂ ವಾಸನಾ ವೃತ್ತಿ ಮತ್ತು ಇಂದ್ರಿಯಗಳ ಆಕರ್ಷಣೆಯು ತಟಸ್ಥವಾಗಿರುವುದಿಲ್ಲವೆಂಬುದು ಸರ್ವ ರಿಗೂ ತಿಳಿದ ವಿಷಯವೇ ಆಗಿದೆ. ಈ ವಾಸನಾವಿಷಯಗಳಲ್ಲಿ ಕೆಲವು ಇಂದ್ರಿಯಗಳ ಮೂಲಕ ಕಾರ್ಯನಡೆಯುವುದು. ಹೀಗೆ ಕಾರ್ಯತಃ ನಡೆಯದೇ ಇದ್ದರೂ ಸ್ವಪ್ನದಲ್ಲಿರುವಂತೆ ಜಾಗ್ರತ್ಕಾಲದಲ್ಲಿಯೂ ಬುದ್ಧಿಯಲ್ಲಿಯೇ ವಿಷಯವ್ಯಾಪಾರ ನಡೆಯುತ್ತಿರುವುದು. ಯಾವ ಕೆಲಸವನ್ನೂ ಮಾಡುವುದಿಲ್ಲವೆಂದು ಮೌನದಿಂದ ಕುಳಿತಿದ್ದರೂ ಬುದ್ಧಿಯಲ್ಲಿ ಒಳಗಡೆ ನಡೆಯುವ ವ್ಯಾಪಾರವು ನಿಲ್ಲುವುದಿಲ್ಲ.

ಹೀಗೆ ನಿರಂತರವೂ ಬುದ್ಧಿಯನ್ನು ವಿಷಯಾಕಾರದಲ್ಲಿಡುವುದೇ ರಾವಣನ ತತ್ವದಲ್ಲಿ ರುವ ವಾಸನಾವೃತ್ತಿ ಅಥವಾ ವಿಕ್ಷೇಪಶಕ್ತಿಯ ಕಾರ್ಯವಾಗಿರುವುದು. ವಿಕ್ಷೇಪವೆಂಬುದಕೂ ಸೆಳೆಯುವಿಕೆಯೆಂಬರ್ಥವಾಗುವುದರಿಂದ ರಾವಣನ ಪದದ ಅರ್ಥವೂ ವಿಕ್ಷೇಪವೆಂಬ ಪದದ ಅರ್ಥವೂ ಒಂದೇಯಾಗಿರುವುದು. ವೃತ್ತಿಯೆಂದರೆ ಪ್ರವರ್ತನೆ. ಶಬ್ದ, ಸ್ಪರ್ಶ, ರೂಪ, ರಸ,

ಗಂಧಗಳೆಂಬ ವಿಷಯಗಳ ಪ್ರವರ್ತನೆಯಲ್ಲಿಯೇ ರಜೋಗುಣ ಅಥವಾ ವಿಕ್ಷೇಪಶಕ್ತಿಯು ಬುದ್ಧಿಮನಸ್ಸುಗಳನ್ನು ಆಕರ್ಷಿಸಿಕೊಂಡಿರುವುದಾದುದರಿಂಧ ವಾಸನಾವೃತ್ತಿಯ ತತ್ವ ವೆಂದರೂ ವಿಕ್ಷೇಪಶಕ್ತಿಯೆಂದರೂ ಒಂದೇ ಅರ್ಥವಾಗುವುದು.

ಮೇಲೆ ತಿಳಿಸಿರುವ ಜಾಗ್ರತ್ಕಾಲದಲ್ಲಿ ಇರುವ ವಾಸನಾವೃತ್ತಿ ಮತ್ತು ಇಂದ್ರಿಯಗಳ ಆಕರ್ಷಣೆಯು ಮಿಥ್ಯವಾದ ಪ್ರಪಂಚವ್ಯಾಪಾರ ಸ್ವರೂಪವಾದುದು. ಹೇಗೆಂದರೆ "ಅಸತ್ ಪ್ರಲಾಪಾನ್ ರಾವಯತಿ—ಪ್ರಜಲ್ಪತೀತಿ ರಾವಣಃ" ಅಸತ್ತಾದ ಪ್ರಾಪಂಚಿಕ ವಿಷಯಾದಿ ಗಳಲ್ಲಿ ನಿರಂತರವೂ ಪ್ರವರ್ತಿಸುವವನು ಯಾವನೋ ಅವನೇ ರಾವಣನು. ಆದುದರಿಂದ ಮಿಥ್ಯಾಸ್ವರೂಪವಾದ ಪ್ರಪಂಚವ್ಯಾಪಾರವಾನ ಶಬ್ದ, ಸ್ಪರ್ಶ, ರೂಪ ಮುಂತಾದ ವಿಷಯ ವಾಸನೆಯನ್ನು ಸ್ವಪ್ನ ಜಾಗ್ರತ್ಕಾಲಗಳಲ್ಲಿ ಬುದ್ಧಿಗೆ ಉಂಟುಮಾಡತಕ್ಕ ತತ್ವದವನೇ ರಾವಣನು.

ಹೀಗೆ ನಿರಂತರವೂ ಉಂಟಾಗುವ ಪ್ರಾಪಂಚಿಕ ವಿಷಯಸ್ವರೂಪವಾದ ವಾಸನೆಯು ಬುದ್ಧಿಗೆ ಸೌಮ್ಯದಿಂದ ಪ್ರವೇಶಿಸದೆ ಹೆದರಿಸಿಕೊಂಡೇ ಬರುವುದು. ಹೇಗೆಂದರೆ— "ರಾವಯತಿ-ಭೀಷಯತಿ ಸರ್ವಾನ್ ರಾವಣಃ" ಜಗಳಕ್ಕೆ ಬರುವಂತೆ ಹೆದರಿಸಿಕೊಂಡೇ ಬರುವ ಸ್ವಭಾವದವನೇ ರಾವಣನು. ಅಂದರೆ ಕಾಮ ಕ್ರೋಧ ಲೋಭ ಮುಂತಾದ ವಾಸನೆಗಳ ವೃತ್ತಿಯು ಉಲ್ಬಣಸ್ವರೂಪವಾಗಿಯೂ ಘೋರವಾದ ವ್ಯಾಪಾರಮಾಡುವ ಸ್ವಭಾವದಿಂದಲೂ ಬರುವುದೆಂಬ ತಾತ್ಪರ್ಯ.

ಅಲ್ಲದೆ ಮನುಷ್ಯನಿಗೆ ಶಾಂತತೆಯಿಂದ ಇರುವ ಕಾಲದಲ್ಲಿ ರಾವಣನ ಅಧಿಕಾರ ತಗ್ಗಿ ವಿಭೀಷಣನ ಅಧಿಕಾರದ ತತ್ವವೇ ಹೆಚ್ಚಿನ ಸ್ಥಿತಿಯಲ್ಲಿರುವುದು. ಶಾಂತತೆಯ ಕಾಲವಲ್ಲದ ಸಂಭ್ರಮಕಾಲಗಳಲ್ಲಿ ರಾವಣನ ಅಧಿಕಾರವು ಮನುಷ್ಯನಲ್ಲಿ ಪ್ರಬಲಸ್ಥಿತಿಯಲ್ಲಿರುವುದು. ಹೇಗೆಂದರೆ, ಸಂಭ್ರಮದಿಂದ ಕಾರ್ಯವು ನಡೆಯಿತೆಂದರೆ ಸಮೀಚೀನವಾಗಿ ಭ್ರಮಣ ರೂಪವಾದ ಕಾರ್ಯದ ಸಂದರ್ಭವಾಗಿರುವುದು. ಲಗ್ನವು ಸಂಭ್ರಮದಿಂದ ನಡೆಯಿತೆಂದರೆ ನಮ್ಮ ಬುದ್ಧಿಗೆ ಶಾಂತತೆಯಿಲ್ಲದೆ ಪಾದರಸದ ಚಲನೆಯಂತೆ ನಮ್ಮ ಬುದ್ಧಿಯು ಚಲಿಸಿ ಕಾರ್ಯಗಳು ನಡೆಯುತ್ತಿದ್ದುವೆಂಬ ತತ್ವವು. ಇದರಂತೆ ವ್ಯಾಪಾರಸ್ಥರಿಗೂ ವ್ಯಾಪಾರಕಾಲದ ಸಂಭ್ರಮದಲ್ಲಿ ಬುದ್ಧಿಯು ಪಾದರಸದಂತೆ ಚಲಿಸುತ್ತಿರುವುದೇ ಹೊರತು ಉಪಶಾಂತತೆ ಯಿಂದಿರುವುದಿಲ್ಲ. ಈ ಕಾಲದಸ್ಥಿತಿಯೂ ರಾವಣನ ಪೂರ್ಣಾಧಿಕಾರದ ಸ್ಥಿತಿಯಾಗಿರುತ್ತೆ.

**ರಾ||** ರಾವಣನು ಮನುಷ್ಯರು ಹೊರತು ದೇವತೆಗಳೇ ಮೊದಲಾದ ಯಾರಿಂದಲೂ ತನಗೆ ಅಪಜಯವುಂಟಾಗದಂತೆ ಬ್ರಹ್ಮನಿಂದ ವರವನ್ನು ಪಡೆದುಕೊಂಡು ದೇವೇಂದ್ರ ಮುಂತಾದವರೆಲ್ಲರನ್ನೂ ಜಯಿಸಿರುವನು.

**ತತ್ತ್ವ||** ದೇವತೆಗಳು ಮೊದಲುಗೊಂಡು ಸಕಲಪ್ರಾಣಿಗಳೂ ವಾಸನಾವ್ಯಾಪಾರದಿಂದ ಬದ್ಧರಾಗಿರುವರೆಂಬ ಮತ್ತು ಯಾರಿಂದಲೂ ವಾಸನೆಯನ್ನು ನಿಗ್ರಹಿಸುವುದಕ್ಕಾಗುವುದಿಲ್ಲ ವೆಂಬ ತತ್ತ್ವ.

ಹಾಗಾದರೆ ರಾವಣನಿಗೆ ಲಕ್ಷ್ಯವಿಲ್ಲದ ಮನುಷ್ಯನು ಮಾತ್ರ ರಾವಣನ ತತ್ತ್ವವಾದ ವಾಸನಾವೃತ್ತಿಯನ್ನು ಹೇಗೆ ನಿಗ್ರಹ ಮಾಡಬಲ್ಲನೆಂದರೆ—ಮನುಷ್ಯ ಎಂಬ ಪದಕ್ಕೆ ಮನು ಎಂಬ ಧಾತುವಿನ ಮೇಲೆ ಜ್ಞಾನ ಅಥವಾ ತಿಳಿವಳಿಕೆಯೇ ಅಧಿಕವಾಗಿ ಉಳ್ಳವನೆಂದು ಅರ್ಥ. ಪ್ರಪಂಚಜ್ಞಾನವನ್ನು ಜ್ಞಾನವೆಂದು ಎಂದಿಗೂ ಹೇಳಲಾಗುವುದಿಲ್ಲ. ಜ್ಞಾನ ವೆಂದರೆ ಆತ್ಮಸ್ವರೂಪ. ಈ ಆತ್ಮನನ್ನು ಮನುಷ್ಯನು ತಿಳಿಯಬಲ್ಲವನಾದುದರಿಂದ ಇವ ನಿಗೆ ಮನುಷ್ಯನೆಂದು ಹೆಸರುಬಂದಿರುವುದು. ಇದೇ ತಾತ್ಪರ್ಯಕ್ಕೆ "ಆಹಾರ ನಿದ್ರಾ ಭಯ" ಎಂಬ ಶ್ರೀಕೃಷ್ಣಪರಮಾತ್ಮನ ವಾಕ್ಯವನ್ನು ಹಿಂದೆ ಅಕ್ಷಕುಮಾರನ ತತ್ತ್ವದಲ್ಲಿಯೇ ಬರೆದಿರು ವುದು. ಆದುದರಿಂದ ಆತ್ಮತತ್ತ್ವ ಅಥವಾ ಜ್ಞಾನವನ್ನು ಯಾರು ಹೊಂದಬಲ್ಲರೋ ಅವರು ಮಾತ್ರ ವಾಸನಾವೃತ್ತಿಸ್ವರೂಪನಾದ ರಾವಣನನ್ನು ನಿಗ್ರಹಿಸಬಲ್ಲರು.

**ರಾ||** ರಾವಣನು ದೇವತೆಗಳೇ ಮುಂತಾದವರನ್ನೆಲ್ಲಾ ಜಯಿಸಿದ ಮದದಿಂದ ಮನು ಷ್ಯರಿಂದ ತನಗೆ ಆಗುವ ಕೇಡೇನೆಂದು ಅಲಕ್ಷ್ಯದಿಂದಿದ್ದನು.

**ತತ್ತ್ವ||** ಎಲ್ಲಾ ಮನುಷ್ಯರೂ ತಮ್ಮಲ್ಲಿರುವ ರಾವಣನ ತತ್ತ್ವದಲ್ಲಿರುವ ವಿಕ್ಷೇಪಶಕ್ತಿ ಯನ್ನು ನಿಗ್ರಹಿಸಿಕೊಳ್ಳುವುದಿಲ್ಲ. ಯಾರು ಮನುಷ್ಯ ಎಂಬ ನಾಮಾಂಕಿತವನ್ನು ಸಾರ್ಥಕ ಗೊಳಿಸಲು ಜ್ಞಾನಮಾರ್ಗದಲ್ಲಿ ದೃಢವಾಗಿ ಪ್ರವೇಶಿಸಿ ಶ್ರೀರಾಮಚಂದ್ರನಂತೆ ರಣಧೀರರೆನಿಸಿ ಕೊಳ್ಳುವರೋ ಅಂತಹವರು ಮಾತ್ರ ತಮ್ಮಲ್ಲಿರುವ ರಾವಣನನ್ನು ನಿಗ್ರಹಿಸಬಲ್ಲರು. ಅಂದರೆ ತಮ್ಮಲ್ಲಿರುವ ವಾಸನಾವೃತ್ತಿಯನ್ನು ನಿಗ್ರಹಿಸಬಲ್ಲರೆಂಬ ತಾತ್ಪರ್ಯವಾಗಿರುವುದು. ಇದೇ ರಾವಣನಿಗೆ ಬಂದ ಶಾಪದ ತತ್ತ್ವವಾಗಿರುವುದು.

**ರಾ||** ಚತುರ್ಮುಖಬ್ರಹ್ಮನ ವರಬಲದಿಂದ ರಾವಣನು ಯಮನನ್ನು ಕೂಡ ಗೆದ್ದನು.

**ತತ್ತ್ವ||** ಯಮನೆಂದರೆ ಮೃತ್ಯುದೇವತೆಯು. ರಾವಣನು ಯಮನನ್ನು ಜೈಸಿದ್ದ ನೆಂದರೆ—ಯಾವ ಪ್ರಾಣಿಗಳೇ ಆಗಲಿ ಮೃತವಾಗಿ ಒಂದು ಸ್ಥೂಲದೇಹ ಹೋದರೂ ಪ್ರಪಂಚವ್ಯಾಪಾರಸ್ವರೂಪವಾದ ವಾಸನೆಯು ಸಾಯದೆ ಮತ್ತೊಂದು ದೇಹವನ್ನುಂಟು ಮಾಡುವ ತತ್ತ್ವವೇ ಯಮನು ರಾವಣನನ್ನು ನಿಗ್ರಹಿಸಲಾರದೆ ಹೋದುದು.

**ರಾ||** ರಾವಣನು ಅಣ್ಣನಾದ ಕುಬೇರನನ್ನು ಗೆದ್ದು ಪುಷ್ಪಕವಿಮಾನವನ್ನು ಪಡೆದನು.

**ತತ್ತ್ವ||** ಕುಬೇರನೆಂದರೆ ಕುತ್ಸಿತದೇಹವುಳ್ಳವನೆಂದು ಅರ್ಥ. ಪ್ರಾಣಹೋದನಂತರ ಪುನಃ ಸ್ಥೂಲದೇಹವುಂಟಾಗಿ ಅದರಲ್ಲಿ ವಾಸನಾವ್ಯಾಪಾರ ನಡೆಯುವವರೆಗೆ ವಾಸನೆಯು

ಕುತ್ಸಿತದೇಹಸ್ವರೂಪದಲ್ಲಿರುವುದು. ಅಂದರೆ ಪ್ರಾಣಹೋದನಂತರ ತನ್ನ ವ್ಯಾಪಾರವು ನಡೆಯಲು ಪುನಃ ಸಹಕಾರಿಯಾದ ದೇಹವುಂಟಾಗುವವರೆಗೆ ಕುಬೇರನ ತತ್ವವಾದ ಕುತ್ಸಿತ ದೇಹಸ್ವರೂಪವು ವಾಸನೆಗೆ ಇರುವುದೆಂಬ ತತ್ವ.

ರಾವಣನು ಕುಬೇರನನ್ನು ಗೆದ್ದು ಪುಷ್ಪಕವಿಮಾನವನ್ನು ಪಡೆದನೆಂದರೆ, ಪ್ರಾಣ ಹೋದನಂತರ ವಾಸನೆಯು ತನ್ನ ವ್ಯಾಪಾರವನ್ನು ಮಾಡಲು ಪುನಃ ದೇಹಬರುವ ಸಂದರ್ಭವೇ ರಾವಣನು ಕುಬೇರನನ್ನು ಗೆದ್ದುದಾಗಿರುವುದು. ರಾವಣನು ಕುಬೇರ ನನ್ನು ಕೊಲ್ಲದೆ ಅವನನ್ನು ಗೆದ್ದು ಅವನಲ್ಲಿದ್ದ ಪುಷ್ಪಕವಿಮಾನವನ್ನು ತೆಗೆದುಕೊಂಡ ನೆಂದರೆ—ಪುಷ್ಪಕವಿಮಾನವೆಂದರೆ, ಪ್ರಾರಬ್ಧಾನುಭವದ ವ್ಯಾಪಾರ. ಅಂದರೆ ಒಂದು ದೇಹವನ್ನು ಪಡೆದು ಆ ದೇಹವಿರುವ ಪರ್ಯಂತರ ವ್ಯಾಪಾರಕ್ಕೆ ಬೇಕಾದ ವಾಸನೆಗಳ ಸ್ವರೂ ಪವೆ ಪ್ರಾರಬ್ಧ ಅಥವಾ ಪುಷ್ಪಕವಿಮಾನದ ತತ್ವವಾಗಿರುವುದು. ಪುಷ್ಪಕವಿಮಾನದ ತತ್ವ ವನ್ನು ಹಿಂದೆ ಸುಂದರಕಾಂಡದಲ್ಲಿಯೂ ವಿವರಿಸಿದೆ. ಆದುದರಿಂದ ರಾವಣನು ಕುಬೇರನ ತತ್ವದಲ್ಲಿರುವ ಸಂಚಿತವಾಸನೆಯ ಸಮೂಹದಲ್ಲಿ ಇನ್ನೊಂದು ದೇಹ ಬಂದು, ಅದರ ವ್ಯಾಪಾರಕ್ಕೆಂದರೆ ಪ್ರಾರಬ್ಧಾನುಭವಕ್ಕೆ ಬೇಕಾದಷ್ಟು ಮಾತ್ರ ತೆಗೆದುಕೊಂಡ ತತ್ವವೇ ಪುಷ್ಪಕವಿಮಾನವನ್ನು ಹೊಂದಿದ್ದಾಗಿರುವುದು. ಕುಬೇರನು ರಾವಣನಿಂದ ಕೊಲ್ಲಲ್ಪಡದೆ ಇರುವ ತತ್ವವೇ ಪ್ರಾರಬ್ಧಾನುಭವಕ್ಕೆ ಹೋಗಿ ಉಳಿದುಕೊಂಡಿರುವ ಸಂಚಿತವಾಸನೆಯ ಸಮೂಹವು ಕುತ್ಸಿತಸ್ವರೂಪದಲ್ಲಿರುವುದಾಗಿರುವುದು.

**ರಾ||** ರಾವಣನು ಕೈಲಾಸಪರ್ವತವನ್ನು ಎತ್ತಲು ಹೋಗಿ ಸಾಧ್ಯವಿಲ್ಲದೆ ಭಗ್ನ ಮನೋರಥನಾದನು.

**ತತ್ವ||** ನಮ್ಮಲ್ಲಿ ವಿಜ್ಞಾನಮಯಕೋಶಕ್ಕೂ ಒಳಗಿರುವ ಈಶ್ವರಸ್ಥಾನವಾದ ಆನಂದ ಮಯಕೋಶದಲ್ಲಿ ವಿಕ್ಷೇಪದ ಕಾರ್ಯವೆಂದರೆ ವಾಸನಾವೃತ್ತಿಯ ವ್ಯಾಪಾರವಿಲ್ಲವೆಂಬ ತತ್ವ ವಾಗಿರುವುದು.

ಈ ಮೇಲಿನ ತತ್ವಾರ್ಥಗಳೆಲ್ಲಾ ರಾವಣನ ತತ್ವಕ್ಕೆ ಸಂಬಂಧಪಟ್ಟಿರುವುವು. ಉತ್ತರ ಕಾಂಡದಲ್ಲಿನ ರಾವಣನ ದಿಗ್ವಿಜಯಸ್ವರೂಪವಾದ ಕಥೆಯ ತತ್ವಗಳನ್ನು ಅನ್ವಯಿಸಿ ರಾವಣನ ತತ್ವವನ್ನು ಇನ್ನೂ ವಿವರಿಸಬಹುದು. ಇಷ್ಟು ಅನ್ವಯಮಾಡಿರುವುದರಿಂದಲೇ ಇವನ ತತ್ವದ ಸ್ವರೂಪವು ಸಾಕಾದಷ್ಟು ತಿಳಿಯಬರುತ್ತದೆ.

ರಾವಣ, ಕುಂಭಕರ್ಣ, ಮತ್ತು ವಿಭೀಷಣರಲ್ಲಿ ಕುಂಭಕರ್ಣನು ನಿದ್ರೆಯ ತತ್ವದವ ನೆಂದೂ, ವಿಭೀಷಣನು ಧರ್ಮಮಾರ್ಗದ ತತ್ವದವನೆಂದೂ ತಿಳಿಸಿಕೊಂಡು ಬರುತ್ತಿದೆ.

ಅಲ್ಲದೆ ರಾವಣನು ಸೀತಾಪಹರಣಮಾಡುವ ತತ್ವವೇ ಬಾಹ್ಯವ್ಯಾಪಾರಕ್ಕೆ ಪ್ರಾರಂಭವೆಂಬ ತತ್ವವೂ ಆಗಿರುವುದಷ್ಟೆ! ರಾವಣನು ಸೀತಾಪಹರಣಮಾಡಿಕೊಂಡು ಬಂದಾರಭ್ಯ ರಾವಣ ನಿಗೂ ವಿಭೀಷಣನಿಗೂ ಅಂತರಂಗ ಶುದ್ಧಿಯಿಲ್ಲದೆ ತನ್ನ ಯಾಜಮಾನ್ಯಕೆಗಳ ನಡೆವಳಿಕೆ ಗಳನ್ನೇ ಪ್ರಬಲಿಸಿಕೊಂಡಿದ್ದನು. ಇದರಂತೆ ಮನುಷ್ಯನಲ್ಲಿ ಪ್ರಪಂಚವ್ಯವಹಾರದಲ್ಲಿ ಧರ್ಮ ಕ್ಕಿಂತ ಅಧರ್ಮವೇ ಪ್ರಬಲವಾಗಿರುತ್ತದೆ. ಅಂದರೆ ಪುಣ್ಯಕಿಂತ ಪಾಪವೇ ಪ್ರಾಯಶಃ ಅಧಿಕವಾಗಿರುತ್ತದೆ. ಪಾಪಕಾರ್ಯಗಳನ್ನು ಮಾಡುವುದು ಕೆಟ್ಟದ್ದೆಂದು ಮನುಷ್ಯನು ತಿಳಿದಿ ದ್ದರೂ ಪಾಪಕಾರ್ಯದಲ್ಲಿಯೇ ಪ್ರವರ್ತಿಸುತ್ತಿರುವುದು ರಜೋಗುಣಚೈತನ್ಯದ ತತ್ವದವ ನಾದ ರಾವಣನ ಮಹತ್ತಿನಿಂದ. ಈ ತಾತ್ಪರ್ಯಕ್ಕೆ ಭಗವದ್ಗೀತೆಯಲ್ಲಿ ಅರ್ಜುನನ ಪ್ರಶ್ನೆಗೆ ಶ್ರೀಕೃಷ್ಣಪರಮಾತ್ಮನು ಉತ್ತರಹೇಳಿರುವುದನ್ನು ಇಲ್ಲಿ ಬರೆದಿರುವುದು ಅರ್ಜುನನ ಪ್ರಶ್ನೆ:—

ಅಥಕೇನಪ್ರಯುಕ್ತೋಽಯಂ ಪಾಪಂಚರತಿ ಪೂರುಷಃ |
ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ||

ತಾ|| ಎಲೈ ಶ್ರೀಕೃಷ್ಣನೆ! ಸ್ವತಃ ಪಾಪಕಾರ್ಯಮಾಡಲು ಅಪೇಕ್ಷೆಯಿಲ್ಲದವನಾದರೂ ಪುರುಷನು ಯಾವುದರಿಂದ ಬಲಾತ್ಕಾರವಾಗಿ ಪ್ರೇರಿಸಲ್ಪಟ್ಟು ಪಾಪವನ್ನು ಮಾಡುವನು? ಶ್ರೀಕೃಷ್ಣಪರಮಾತ್ಮನ ಉತ್ತರ—

ಕಾಮಏಷ ಕ್ರೋಧಏಷ ರಜೋಗುಣಸಮುದ್ಭವಃ |
ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹವೈರಿಣಂ ||
ರಜೋರಾಗಾತ್ಮಕಂವಿದ್ಧಿ ತೃಷ್ಣಾಸಂಗಸಮುದ್ಭವಂ |
ತನ್ನಿಬಧ್ನಾತಿಕೌಂತೇಯ ಕರ್ಮಸಂಗೇನದೇಹಿನಂ ||

ತಾ|| ಇದೇ ಕಾಮವೆಂಬುದು. ಕೋಪವೆಂಬುದು. ಇದು ರಜೋಗುಣದಿಂದ ಉತ್ಪನ್ನವಾದುದು. ಇದು ಸರ್ವವನ್ನೂ ಭಕ್ಷಿಸುವುದು. ಮಹಾಪಾಪಗಳಿಗೂ ಇದೇ ಕಾರಣವು. ಇದನ್ನೇ ಶತ್ರುವೆಂದು ತಿಳಿ. ರಜೋಗುಣವೆಂಬುದು ರಂಜನರೂಪವೆಂದು ತಿಳಿ. ತೃಷ್ಣೆ, ಆಸಕ್ತಿಗಳು ಇದರಿಂದ ಹುಟ್ಟುವುವು. ಅದುಕಾರಣ ಈ ಗುಣವು ಜೀವ ನನ್ನು ಪ್ರಪಂಚವ್ಯಾಪಾರದಲ್ಲಿನ ಅಭಿಮಾನದಿಂದ ಬಂಧಿಸುವುದು

ಮುಖ್ಯವಾಗಿ ರಜೋಗುಣದ ತತ್ವವೇ ಧೊರೆಯಾಗಿರುವುದರಿಂದ ಮನುಷ್ಯನಲ್ಲಿ ಅಧರ್ಮವೇ ಅಧಿಕವಾಗಿರುವುದು ಸ್ವಾಭಾವಿಕ. ಲಕ್ಷ್ಮಣನನ್ನು, ಅಷ್ಟಘಂಟಾಶಕ್ತಿಯಿಂದ ಮೂರ್ಛೆಗೊಳಿಸಿದ ಕಾಲದಲ್ಲಿ ರಾವಣನು ಮಹೋದರ, ಮಹಾಪಾರ್ಶ್ವ, ವಿರೂಪಾಕ್ಷರೆಂಬ ಮೂವರು ಮಂತ್ರಿಗಳೊಡನೆ ಯುದ್ಧಕ್ಕೆ ಬಂದ ತತ್ವವನ್ನು ಆ ಸ್ಥಳದಲ್ಲಿ ಬರೆದಿಲ್ಲ. ಮಹೋ

ದರ ಮಹಾಪಾರ್ಶ್ವರ ತತ್ವಗಳನ್ನು ಪ್ರತ್ಯೇಕವಾಗಿಯೇ ತಿಳಿಸಿರುತ್ತದೆ. ಆದರೂ ರಾವಣನು ತಾನು ಯುದ್ಧಕ್ಕೆ ಬರುವಾಗ ಇವರುಗಳೊಡನೆ ಬಂದಿರುವನೆಂಬ ತತ್ವವು ರಜೋಗುಣದ ವೃತ್ತಿಯ ಉಲ್ಬಣ ಮತ್ತು ಘೋರಸ್ವರೂಪಗಳನ್ನು ಪ್ರತಿಪಾದನೆಮಾಡುವುದು. ರಜೋಗುಣದಲ್ಲಿನ ಘೋರವೃತ್ತಿಯ ಸ್ವಭಾವವಾದ ಭಯಂಕರಸ್ವಭಾವ, ಉನ್ಮತ್ತಸ್ವಭಾವ, ಉಗ್ರಸ್ವಭಾವಗಳೆಲ್ಲಾ ಸುಗ್ರೀವ ಹನುಮಂತರ ತತ್ವವಾದ ಯೋಗದಿಂದ ಪರಿಹಾರವಾಗುವುದೆಂಬ ತಾತ್ಪರ್ಯವಾಗಿರುವುದು. ರಾವಣನ ಸ್ವರೂಪದ ತತ್ವವನ್ನು ತಕ್ಕಮಟ್ಟಿಗೆ ತಿಳಿಸಿತು. ಇನ್ನು ರಾಮ ರಾವಣರ ಯುದ್ಧವನ್ನು ಪ್ರಾರಂಭಿಸೋಣ.

ಅಗಸ್ತ್ಯಮಹರ್ಷಿಗಳು ಹೊರಟುಹೋದನಂತರ ರಾಮ ರಾವಣರು ಯುದ್ಧಮಾಡಲು ಪ್ರಾರಂಭಮಾಡಿದರು. ಅಂದರೆ ಅಧಿಕಾರಿಯು ಷಣ್ಮುಖೀಮುದ್ರೆಯಿಂದ ಸಮಾಧಿಯಲ್ಲಿ ಕಾಣುವ ಜ್ಯೋತಿಯೇ ತಾನೆಂಬ ಸ್ವಾತ್ಮಭಾವದಿಂದ ಮತ್ತು ಒಳಗಡೆ ಕೇಳುವ ಆನಂದಕರವಾದ ನಾದವನ್ನು ಅನುಸರಿಸಿಕೊಂಡು ಅನುಷ್ಠಾನವನ್ನು ಮಾಡುವ ಸೋಪಾನವೆಂದು ಹಿಂದಿನ ಮೂರು ಪ್ರಕರಣಗಳಿಂದಲೂ ತಿಳಿಸಿಕೊಂಡು ಬಂದಿರುತ್ತಷ್ಟೆ! ಈ ವಿಧವಾಗಿ ಸಮಾಧಿಯ ಅಭ್ಯಾಸಮಾಡುತ್ತಿದ್ದರೂ ವಾಸನಾವೃತ್ತಿಯು ಪ್ರವೇಶಿಸಿ ಬುದ್ಧಿಯನ್ನು ವಿಷಯಾಕಾರವಾಗಿ ಮಾಡಲು ಬರುವುದೇ ರಾಮ ರಾವಣರ ಯುದ್ಧದ ತತ್ವವಾಗಿರುವುದು.

ಷಣ್ಮುಖೀಮುದ್ರೆಯಲ್ಲಿ ಕಣ್ಣು, ಕಿವಿ, ಮೂಗು ಮುಂತಾದುವುಗಳನ್ನು ಮುಚ್ಚಿಕೊಂಡಿರುವುದರಿಂದ ಜ್ಞಾನೇಂದ್ರಿಯಗಳ ವ್ಯಾಪಾರ ನಡೆಯುವುದಕ್ಕೆ ಅವಕಾಶವಿರುವುದಿಲ್ಲ. ಯಾವಾಗ ಜ್ಞಾನೇಂದ್ರಿಯಗಳ ಕಾರ್ಯಗಳನ್ನು ಬಂಧಿಸಿರುವುದೋ ಆಗ ಕರ್ಮೇಂದ್ರಿಯಗಳ ಕಾರ್ಯವೂ ನಡೆಯುವುದೇ ಇಲ್ಲ. ಹೀಗಿರುವಲ್ಲಿ ವಾಸನಾವೃತ್ತಿಯು ಬುದ್ಧಿಯನ್ನಾಕರ್ಷಿಸುವುದರಿಂದ ಯಾವ ಫಲಿತಾಂಶವಾಗುವುದೆಂಬ ವಿಚಾರವನ್ನು ತಿಳಿದುಕೊಳ್ಳೋಣ.

ಸ್ವಪ್ನಕಾಲದಲ್ಲಿ ಇಂದ್ರಿಯಗಳ ವ್ಯಾಪಾರಗಳಿಲ್ಲದಿದ್ದರೂ ಬುದ್ಧಿಯಲ್ಲಿ ಸಂಕಲ್ಪರೂಪದಿಂದ ಸಕಲ ವ್ಯವಹಾರಗಳೂ ನಡೆಯುವಂತೆ ಷಣ್ಮುಖೀಮುದ್ರೆಯಿಂದ ಕಣ್ಣು ಕಿವಿ ಮುಂತಾದವುಗಳನ್ನು ಬಂಧಿಸಿಕೊಂಡಿದ್ದರೂ, ಬುದ್ಧಿಯನ್ನು ವಿಷಯಾಕಾರಮಾಡಿ ಸಂಕಲ್ಪರೂಪದಿಂದಲೇ ವ್ಯವಹಾರಮಾಡಿಸಬೇಕೆಂದು ವಾಸನಾವೃತ್ತಿಯು ಬಂದು ಬುದ್ಧಿಗೆ ಸೇರುವುದು. ಈ ತತ್ವವೇ ರಾಮ ರಾವಣರ ಯುದ್ಧದ ತತ್ವವಾಗಿರುವುದು. ಈಗ ರಾವಣನ ಕಡೆಯವರೆಲ್ಲರೂ ಹತಪಟ್ಟಿರುವುದರಿಂದ ರಾವಣನೊಬ್ಬನೇ ಯುದ್ಧಮಾಡುತ್ತಿರುವನು. ಅಂದರೆ ಅವಿದ್ಯೆಯ ಪ್ರಧಾನಸ್ವರೂಪದಲ್ಲಿರುವ ವಿಷಯವಾಸನೆಯೊಂದರ ವ್ಯಾಪಾರವು ಒಳಗಡೆ ತೇಜಸ್ಸಿನಲ್ಲಿಯೇ ನಡೆಯುವುದು. ಲಕ್ಷ್ಮಣ, ಸುಗ್ರೀವ, ಹನುಮಂತ ಮುಂತಾದವರೆಲ್ಲರೂ ತಟಸ್ಥರಾಗಿ ಶ್ರೀರಾಮನೊಬ್ಬನೇ ರಾವಣನೊಡನೆ ಯುದ್ಧಮಾಡುತ್ತಿರುವನು. ಅಂದರೆ ರಾಮ ರಾವಣರಿಬ್ಬರ ತತ್ವವೆಂದರೆ ಬುದ್ಧಿವೃತ್ತಿ ಮತ್ತು ವಾಸನೆಗಳೆರಡರ ವ್ಯಾಪಾರ

ವಿರುವುದೇ ಸ್ವಪ್ನಾವಸ್ಥೆಗೆ ಹೋಲಿಕೆಯಾಗಿರುವುದು. ಇದೇ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೧೦೦-೧೦೧ನೇ ಶ್ಲೋಕಗಳಲ್ಲಿ,

> ಸ್ವಪ್ನೋಭವತ್ಯಸ್ಯವಿಭಕ್ತ್ಯವಸ್ಥಾ ಸ್ವಮಾತ್ರಶೇಷೇಣ ವಿಭಾತಿಯತ್ರ।
> ಸ್ವಪ್ನೇತುಬುದ್ಧಿಃಸ್ವಯಮೇವಜಾಗ್ರತ್ಕಾಲೀನನಾನಾವಿಧವಾಸನಾಭಿಃ।
> ಕರ್ತ್ರಾದಿ ಭಾವಂ ಪ್ರತಿಪದ್ಯರಾಜತೇ ।

ತಾ|| ಈ ಸೂಕ್ಷ್ಮಶರೀರಕ್ಕೆ ಸ್ವಪ್ನವೇ ಪ್ರತ್ಯೇಕ ಅವಸ್ಥೆಯು. ಈ ಸ್ವಪ್ನಾವಸ್ಥೆಯಲ್ಲಿ ಬುದ್ಧಿವೃತ್ತಿಮಾತ್ರವೇ ಉಳಿದುಕೊಂಡು ಪ್ರಕಾಶಿಸುವುದು. ಹೀಗೆ ಉಳಿದುಕೊಂಡಿರುವ ಬುದ್ಧಿವೃತ್ತಿಯು, ಜಾಗ್ರದವಸ್ಥೆಗೆ ಸಂಬಂಧವಾದ ನಾನಾವಿಧ ವಾಸನಾಕಾರವಾಗಿ ಕರ್ತೃತ್ವ ಭೋಕ್ತೃತ್ವಾದಿ ಭಾವಗಳನ್ನು ತಾಳಿ, ಸಂಕಲ್ಪರೂಪದಿಂದ ವಿಷಯಗಳನ್ನು ಅನುಭವಿಸುತ್ತ ಪ್ರಕಾಶಿಸುವುದು, ಎಂದು ಹೇಳಿರುತ್ತಾರೆ. ಆದುದರಿಂದ ರಾಮ ರಾವಣರಿಬ್ಬರೇ ಮಾಡುವ ಯುದ್ಧದ ತತ್ವವು ಸ್ವಪ್ನಾವಸ್ಥೆಗೆ ಹೋಲಿಕೆಯಾಗಿರುವುದು. ಆದರೆ ಷಣ್ಮುಖೀ ಮುದ್ರೆಯಿಂದ ಮಾಡುವ ಸಮಾಧಿಯ ಅವಸ್ಥೆಗೂ ಸ್ವಪ್ನಾವಸ್ಥೆಗೂ ಭೇದವಿರುವುದು. ಈ ಭೇದವೇನೆಂಬುದನ್ನು ತಿಳಿದುಕೊಳ್ಳೋಣ.

| **ಸ್ವಪ್ನಾವಸ್ಥೆ.** | **ಸ್ವಪ್ನಸದೃಶವಾದ ಸಮಾಧಿ ಅವಸ್ಥೆ.** |
| --- | --- |
| ೧. ಅಂತಃಕರಣದಲ್ಲಿನ ಬುದ್ಧಿಯೊಂದೇ ಸಂಕಲ್ಪರೂಪದಿಂದ ಸಕಲ ವ್ಯವಹಾರ ಮಾಡುವುದು. | ೧. ಬುದ್ಧಿವೃತ್ತಿಯೊಂದೇ ಲಯವಾಗದೆ ನಿಂತಿರುವುದು. |
| ೨. ಶ್ವಾಸೋಚ್ಛ್ವಾಸ ಮತ್ತು ಪಂಚ ಪ್ರಾಣಗಳ ಕಾರ್ಯನಡೆಯುತ್ತಲೇ ಇರುತ್ತದೆ. | ೨. ಶ್ವಾಸೋಚ್ಛ್ವಾಸ ಮತ್ತು ಪಂಚ ಪ್ರಾಣಗಳು ತಮ್ಮ ಸ್ವೈಜವಾದ ಕಾರ್ಯಗಳನ್ನು ಮಾಡದೆ, ಸಮಾಧಿಯಲ್ಲಿ ಸ್ಥಿರತ್ವವನ್ನು ಹೊಂದುತ್ತಿರುವ ಬುದ್ಧಿವೃತ್ತಿಯಲ್ಲಿ ಉಪಶಾಂತತೆಯಿಂದ ಇರುವುವು. |
| ೩. ಇಂದ್ರಿಯಗಳ ಮೂಲಕ ಬಹಿರ್ವ್ಯಾಪಾರಗಳಿಲ್ಲದಿರುವುದರಿಂದ, ಮನಸ್ಸಿನ ವೃತ್ತಿಯು ಬುದ್ಧಿವೃತ್ತಿಯೊಡನೆ ತಟಸ್ಥವಾಗಿರುವುದು. | ೩. ಇಂದ್ರಿಯಗಳ ಕಾರ್ಯಕ್ಕೆ ಅಥವ ಬಹಿರ್ಮುಖವಾಗುವುದಕ್ಕೆ ಎಳೆಯುತ್ತಿದ್ದ ಪ್ರಬಲವಾದ ಭೋಗಶಕ್ತಿಯು, ನಿಗ್ರಹವಾಗಿರುವುದರಿಂದ ಮನೋವೃತ್ತಿಯು ಬುದ್ಧಿವೃತ್ತಿಯಲ್ಲಿ ಉಪಶಾಂತತೆಯಿಂದಿರುವುದು. |
| ೪. ಬುದ್ಧಿಯು ವಿಷಯಾಕಾರವಾಗುವಿಕೆ, ವಿಷಯವಾಸನಾಸ್ವರೂಪಗಳಿಂದ ಜ್ಞಾತೃ, ಜ್ಞಾನ, ಜ್ಞೇಯಗಳೆಂಬ ತ್ರಿಪುಟಿ ಇರುವುದು. | ೪. ಜ್ಞಾತೃ, ಜ್ಞಾನ, ಮತ್ತು ತೇಜೋನಾದಸ್ವರೂಪವಾದ ಜ್ಞೇಯ ಅಥವಾ ವಾಸನಾವಿಷಯಸ್ವರೂಪವಾದ ಜ್ಞೇಯಗಳೆಂಬ ತ್ರಿಪುಟಿಯಿರುವುದು. |

೫. ವಿಷಯಾಕಾರವಾಗುವುದನ್ನು ನಿಗ್ರಹಿಸದೆ ವಾಸನಾವಿಷಯವನ್ನು ಸಂಕಲ್ಪರೂಪದಿಂದ ಬುದ್ಧಿಯು ಅನುಭವಿಸಿಯೇ ಬಿಡುವುದು.

೫. ಸಮಾಧಿಯಲ್ಲಿ ವಿಷಯವಾಸನೆಯು ತಲೆದೋರಿದರೂ ತೇಜೋನಾದವೇ ತಾನೆಂದು ಬುದ್ಧಿವೃತ್ತಿಯು ಧರಿಸಿಕೊಳ್ಳುವುದರ ಮೂಲಕ ವಿಕ್ಷೇಪಶಕ್ತಿಯನ್ನು ಕಟ್ಟಿಹಾಕುತ್ತ ಬರುವುದು.

ಇವೇ ಸ್ವಪ್ನಾವಸ್ಥೆಗೂ, ಸ್ವಪ್ನಸದೃಶವಾದ ಸಮಾಧಿಯ ಅವಸ್ಥೆಗೂ ಇರುವ ಭೇದಗಳು. ಈ ಸ್ವಪ್ನಸದೃಶವಾದ ಸಮಾಧಿಯ ಅವಸ್ಥೆಯು "ಓಂ" ಕಾರದಲ್ಲಿನ "ಅ"ಕಾರವೆಂದರೆ ವಿಶ್ವತ್ವವನ್ನು ಉಪಸಂಹಾರಮಾಡಿಕೊಂಡು "ಉ"ಕಾರಸ್ವರೂಪವಾದ ತೈಜಸತ್ವಕ್ಕೆ ಬಂದು ನಿಂತುಕೊಂಡಿರುವುದಾಗಿರುವುದು. ಅಂದರೆ ವಿಶ್ವತ್ವದ ತತ್ವದಲ್ಲಿರುವ ಬಾಹ್ಯವ್ಯಾಪಾರದ ಕಾರ್ಯಗಳೆಲ್ಲ ತಟಸ್ಥವಾಗಿ, ತೈಜಸತ್ವದಲ್ಲಿರುವ ಸ್ವಪ್ನಸದೃಶವಾದ ಸಮಾಧಿಯ ಸ್ವರೂಪಕ್ಕೆ ಬಂದು ನಿಂತಿರುವುದು. ಇನ್ನುಮುಂದೆ ತೈಜಸತ್ವವನ್ನು ಉಪಸಂಹಾರಮಾಡಿಕೊಳ್ಳಬೇಕಾಗಿರುವುದು.

ರಾವಣನು ಶ್ರೀರಾಮನಮೇಲೆ ಬಾಣಪ್ರಯೋಗಮಾಡುತ್ತಿದ್ದನೆಂದರೆ—ಷಣ್ಮುಖೀಮುದ್ರೆಯಿಂದ ತೇಜೋನಾದವನ್ನು ಧರಿಸಿಕೊಂಡಿರುವ ಬುದ್ಧಿವೃತ್ತಿಗೆ ವಿಷಯಾಕಾರವನ್ನುಂಟುಮಾಡಲು ವಾಸನಾವೃತ್ತಿಯು ನುಗ್ಗುವ ತತ್ವವಾಗಿರುವುದು. ಶ್ರೀರಾಮನು ರಾವಣನ ಬಾಣಗಳನ್ನೆಲ್ಲ ಖಂಡಿಸಿ, ತನ್ನ ಬಾಣಗಳಿಂದ ರಾವಣನ ಬಲವನ್ನು ಹೀರುತ್ತಿದ್ದನೆಂದರೆ—ಆದಿತ್ಯಸ್ವರೂಪವಾದ ಜ್ಯೋತಿಯಲ್ಲಿ ಉದಯಿಸುತ್ತಿರುವ ನಾದದಲ್ಲಿಯೇ ಬುದ್ಧಿವೃತ್ತಿಯು ಮಗ್ನವಾಗಿ, ಅದರಲ್ಲುಂಟಾಗುವ ಮಧುರಾಮೃತವನ್ನು ಪಾನಮಾಡುವುದರಲ್ಲಿ ತನ್ಮಯವಾಗುವುದರ ಮೂಲಕ ವಾಸನಾವೃತ್ತಿಯ ಬಲವನ್ನು ಕುಗ್ಗಿಸುತ್ತಿದ್ದ ತತ್ವವೇ ಶ್ರೀರಾಮನು ತನ್ನ ಬಾಣಗಳಿಂದ ರಾವಣನ ಬಲವನ್ನು ಹೀರುತ್ತಿದ್ದುದಾಗಿದೆ. ಅಂದರೆ ವಿಷಯಾಕಾರವಾಗಿ ಬರುತ್ತಿರುವ ವೃತ್ತಿಯಕಡೆಗೆ ಜ್ಞಾನಕೊಡದೆ ತೇಜೋರೂಪಿನಲ್ಲಿರುವನಾದದ ಆನಂದದಲ್ಲಿ ಬುದ್ಧಿವೃತ್ತಿಯು ಮಗ್ನವಾಗಿರುವುದರಿಂದ, ವಾಸನಾವೃತ್ತಿಯ ವೇಗವು ನಿರ್ವೀರ್ಯವಾಗುತ್ತಬರುವುದು. ಈ ತಾತ್ಪರ್ಯಕ್ಕೆ ನಾದಬಿಂದೂಪನಿಷತ್ತಿನಲ್ಲಿ.

ಮಕರಂದಂ ಪಿಬನ್ ಭೃಂಗೋ ಗಂಧಾನ್ ನಾಪೇಕ್ಷತೇಯಥಾ
ನಾದಾಸಕ್ತಂ ಸದಾಚಿತ್ತಂ ವಿಷಯಂನಹಿಕಾಂಕ್ಷತಿ ||

ತಾ|| ಭ್ರಮರವು ಪುಷ್ಪದಲ್ಲಿರತಕ್ಕ ಮಕರಂದವನ್ನು ಪಾನಮಾಡತಕ್ಕ ಕಾಲದಲ್ಲಿ ಪುಷ್ಪದವಾಸನೆಗೆ ಹೇಗೆ ಲಕ್ಷ್ಯಕೊಡುವುದಿಲ್ಲವೋ ಹಾಗೆ ನಾದಾನುಸಂಧಾನದಲ್ಲಿ ಸದಾ ಆಸಕ್ತವಾದ ಬುದ್ಧಿಯು ಪ್ರಾಪಂಚಿಕವಿಷಯಗಳಿಗೆ ಲಕ್ಷ್ಯಕೊಡುವುದಿಲ್ಲ, ಎಂದುಹೇಳಿದೆ.

ಕಾರಣವೇನೆಂದರೆ, ಭೃಂಗವು ಅಮೃತಪಾನದಿಂದ ಮೈಮರೆತು ಹೊರಗಿನ ವಾಸನೆ ಗಳಿಗೆ ಹೇಗೆ ಲಕ್ಷ್ಯಕೊಡುವುದಿಲ್ಲವೋ, ಹಾಗೆ ಈಶ್ವರವಾಚಕವಾದ ನಾದಾನುಸಂಧಾನ ವೆಂಬ ಅಮೃತದಲ್ಲಿ ಬುದ್ಧಿವೃತ್ತಿಯು ಮಗ್ನವಾಗಿರೋಣದರಿಂದ ವಿಷಯವೃತ್ತಿ ಮತ್ತು ಇಂದ್ರಿಯಗಳ ಆಕರ್ಷಣೆಗೆ ಲಕ್ಷ್ಯಕೊಡುವುದಿಲ್ಲ. ಈ ತತ್ವದಂತೆಯೇ ಶ್ರೀರಾಮ ಚಂದ್ರನು ರಾವಣನನ್ನು ಲಕ್ಷ್ಯಮಾಡದೆ ಅವನ ಬಲವನ್ನು ಕುಗ್ಗಿಸುತ್ತಿದ್ದನು. ಅಂದರೆ ಸಮಾಧಿಯಲ್ಲಿ ನಾದಾನುಸಂಧಾನಮಾಡತಕ್ಕವರು ಸೋಽಹಂಭಾವದೊಡನೆ ನಾದದಲ್ಲಿಯೇ ಮಗ್ನರಾಗಿದ್ದರೆ, ಈಶ್ವರನ ಆಕರ್ಷಣೆಯು ಶಕ್ತಿಯೆಂಬ ಅಮೃತಕ್ಕೆ ಭಾಗಿಗಳಾಗಿ ಮೋಕ್ಷ ಸುಖವನ್ನು ಅನುಭವಿಸುತ್ತಾರೆ.

ಹೇಗೆಂದರೆ—ನಾದಬ್ರಹ್ಮವು ಈಶ್ವರನಲ್ಲಿ ಅಡಗಿರುವುದೆಂಬುದಕ್ಕೂ ಸೂರ್ಯನು ಪ್ರತ್ಯಕ್ಷನಾಗಿ ಶ್ರೀರಾಮನಿಗೆ ಅಭಯಕೊಟ್ಟ ತತ್ವಕ್ಕೂ, ನಾದಾನುಸಂಧಾನದಲ್ಲಿ ಆಸಕ್ತ ರಾದವರನ್ನು ಈಶ್ವರನು ಅನುಗ್ರಹಮಾಡಿ ತನ್ನಲ್ಲಿಗೆ ಬರಮಾಡಿಕೊಳ್ಳುತ್ತಾನೆಂಬ ತತ್ವಕ್ಕೂ, ಈಶ್ವರ ವಿಗ್ರಹದ ಒಂದು ಹಸ್ತದಲ್ಲಿ ಡಮರುಗವೂ, ಇನ್ನೊಂದು ಹಸ್ತದಲ್ಲ ಜಿಂಕೆಯೂ ಇರುವುದು. ಇದರಲ್ಲಿ ಡಮರುಗವೇ ನಾದಸ್ವರೂಪ. ಜಿಂಕೆಯೇ ಬುದ್ಧಿವೃತ್ತಿಸ್ವರೂಪ, ಜಿಂಕೆಯು ನಾದವನ್ನಾಲೈಸಿಕೇಳುತ್ತಾ ಆಹಾರ ಮೆಲುಕುಗಳನ್ನು ನಿಲ್ಲಿಸುವಂತೆ, ನಾದಾನು ಸಂಧಾನದಲ್ಲಿ ಮಗ್ನವಾದ ಬುದ್ಧಿವೃತ್ತಿಯು ವಾಸನಾವಿಷಯಸ್ವರೂಪವಾದ ಆಹಾರವನ್ನು ಬಿಟ್ಟು ನಾದದಲ್ಲಿಯೇ ಆಸಕ್ತವಾಗುವುದು. ಶಬ್ದವನ್ನೇ ಕೇಳುವುದರಲ್ಲಿ ಮಗ್ನವಾದ ಜಿಂಕೆಯು ಆಹಾರ ಮೆಲುಕುಗಳನ್ನು ಬಿಟ್ಟು ಕ್ರಮೇಣ ಹೇಗೆ ಪ್ರಾಣವನ್ನೇ ಬಿಡುವುದೋ ಹಾಗೆ, ನಾದಾನುಸಂಧಾನದಲ್ಲಿಯೇ ಮಗ್ನವಾದ ಬುದ್ಧಿವೃತ್ತಿಯು ಕ್ರಮೇಣ ಪರಮಾತ್ಮ ನಲ್ಲಿಯೇ ಲೀನವಾಗುವುದು.

ನಾಗರಹಾವುಗಳ ಹುತ್ತಗಳ ಸಮೀಪದಲ್ಲಿ ನಾಗಸ್ವರವನ್ನು ಚೆನ್ನಾಗಿ ಆಲಾಪನೆ ಮಾಡಿಕೊಂಡು ಗಾನಮಾಡಿದರೆ, ನಾಗಸರ್ಪಗಳು ಹುತ್ತಗಳಿಂದ ಈಚೆಗೆ ಬಂದು ಹೆಡೆ ಗಳನ್ನು ಬಿಟ್ಟುಕೊಂಡು, ಆನಂದದಿಂದ ಜಾಗರವಾಡಿಕೊಂಡು, ಗಾನದಲ್ಲಿ ಮಗ್ನವಾಗಿ ಎಷ್ಟುಕಾಲವಾದರೂ ಕೇಳುತ್ತಲೇ ಇರುವುವು. ಇದರಂತೆ ಸರ್ಪರೂಪದಲ್ಲಿರುವ ಕುಂಡ ಲಿನೀಶಕ್ತಿಯು ಅನಾಹತಚಕ್ರವನ್ನು ಭೇದಿಸಿ ಸಹಸ್ರಾರಕಮಲದ ಕಡೆಗೆ ಹೋಗುತ್ತಿರು ವುದಷ್ಟೆ! ಅನಾಹತಚಕ್ರಭೇದನೆಯ ಕಾಲಕ್ಕೆ ಆ ಶಕ್ತಿಗೆ ಕುಮಾರಿ ಅಥವಾ ಕನ್ಯೆಯ ಸ್ವರೂ ಪವು ಹೋಗಿ ಯೋಷಿದವಸ್ಥೆಯೆಂದರೆ ವಿವಾಹಕ್ಕೆ ಪ್ರಾಪ್ತವಯಸ್ಕಳ ಸ್ವರೂಪವುಂಟಾಗು ವುದೆಂದು ಶ್ರುತ್ಯಾಧಾರವನ್ನುಕೊಟ್ಟು ಹಿಂದೆ ತಿಳಿಸಿತಷ್ಟೆ! ಪ್ರಾಪ್ತವಯಸ್ಕಳಾದ ಈ ಶಕ್ತಿಯು ತನ್ನ ವಲ್ಲಭನಾದ ಪರಮಾತ್ಮನನ್ನು ಸೇರಲು ಆನಂದದಿಂದ ಸರ್ಪದಂತೆ ನಾದದಲ್ಲಿಯೇ ಮಗ್ನಳಾಗಿ, ನಾದವನ್ನೇ ಅನುಸರಿಸಿಕೊಂಡುಹೋಗಿ ಕೊನೆಗೆ ತನ್ನವಲ್ಲಭನನ್ನುಸೇರುವಳು.

ಅಂದರೆ ಹನುಮಂತನು ಸಂಬೋಧನೆಮಾಡಿರುವಂತೆ ದಕ್ಷಪುತ್ರಿಯಾದ ಈ ಪರಾ ಶಕ್ತಿಯು ಸೃಷ್ಟಿಕ್ರಮವನ್ನು ಪೂರ್ಣಮಾಡಿಕೊಂಡು ಸೃಷ್ಟಿಯಾದುದನ್ನು ಸ್ಥಿತಿಯಲ್ಲಿಟ್ಟರಲು ಮೂಲಾಧಾರಚಕ್ರದಲ್ಲಿ ಬ್ರಹ್ಮರಂಧ್ರವನ್ನು ಮುಚ್ಚಿಕೊಂಡು ಸುಖವಾಗಿ ಮಲಗಿದ್ದಳು. ಈಗ ಸೃಷ್ಟಿಸ್ಥಿತಿಕ್ರಮಗಳೆರಡೂ ಉಪಸಂಹಾರವಾಗುವಕಾಲ ಬಂದದ್ದರಿಂದ, ತನ್ನ ವಲ್ಲಭ ನೊಡನೆ ಸೇರಲು ಸಂತೋಷದಿಂದ ಹೋಗುತ್ತಿರುವಳು.

ಮೇಲಿನ ತತ್ವಗಳೆಲ್ಲ "ಓಂ"ಕಾರನಾದಾನುಸಂಧಾನದ ಮಹತ್ತುಗಳಾಗಿರುವುವು. ಸಮಾಧಿಯಲ್ಲಿ ನಾದಾನುಸಂಧಾನವು ಹೇಗೆ ಬುದ್ಧಿವೃತ್ತಿಗೆ ವಿಷಯಾಕಾರವಾಗುವುದನ್ನು ತಪ್ಪಿಸಿ ತನ್ನ ಆನಂದದಲ್ಲಿ ಮುಳುಗಿಸುವುದೋ ಹಾಗೆ, ಬಹಿರ್ವ್ಯಾಪಾರಕಾಲದಲ್ಲಿ ಇಂಪಾದ ಗಾನವೂ, ವೇದಘೋಷವೂ ಹರಿದಾಡುವ ಬುದ್ಧಿವೃತ್ತಿಯನ್ನು ಆ ಗಾನದ ಶಬ್ದಾನಂದದಲ್ಲಿ ಮಗ್ನವನ್ನಾಗಿ ಮಾಡಿಸುವುದು. ಹೀಗಿರುವುದು ಸಕಲರಿಗೂ ತಿಳಿದ ವಿಚಾರವೇ ಆಗಿರು ತ್ತದೆ. ಸಮಾಧಿಯಲ್ಲಿ "ಓಂ"ಕಾರನಾದವು ಆತ್ಮಸಾಕ್ಷಾತ್ಕಾರ ಪಡೆಯಲು ಹೇಗೆ ಸಾಧನ ಭೂತವಾಗಿರುವುದೋ ಹಾಗೆ, ಆತ್ಮವಿಚಾರದ ಗಾನಗಳು ಪರಮಾತ್ಮನ ಸ್ಮರಣೆಯಲ್ಲಿ ನಿರತವಾಗಿರಲು ಸಹಕಾರಿಗಳಾಗಿರುವುವು

ಈ ತೇಜೋನಾದಾನುಸಂಧಾನದ ತತ್ವವನ್ನು ಅನುಸರಿಸಿಯೇ ಘಂಟೆ, ಜಾಗಟೆ, ಮುಂತಾದ ನಾದಗಳಿಂದಲೂ, ಅಂತರ್ಜ್ಯೋತಿಸ್ವರೂಪವಾದ ದೀಪಗಳಿಂದಲೂ, ದೇವರನ್ನು ಆರಾಧಿಸಬೇಕೆಂದು ಮಹರ್ಷಿಗಳು ಗೊತ್ತುಮಾಡಿರುವರು. ಆರಾಧನೆಗೆ ಉಪಯೋಗಿ ಸುವ ಘಂಟೆ ಮುಂತಾದುವುಗಳು "ಓಂ"ಕಾರನಾದವನ್ನುಂಟುಮಾಡುವವುಗಳೇ ಆಗಿರ ಬೇಕೆಂದು ವಿಧಾಯಕಮಾಡಿರುವರು. ಘಂಟಾನಾದ ಮತ್ತು ಜ್ಯೋತಿಸ್ವರೂಪವಾದ ದೀಪಗಳಿಲ್ಲದೆ ಮಾಡುವ ಕರ್ಮಗಳು ಅಶುಭಗಳೆನಿಸುವುವು.

ಬಹಿರ್ವ್ಯಾಪಾರಕಾಲದಲ್ಲಿ ಇಂಪಾದ ಗಾನದಿಂದಲೇ ಮೈಮರೆಯುವಷ್ಟು ಆನಂಧಾ ವಿರ್ಭಾವವಾಗುತ್ತಿರುವಾಗ, ಇದಕ್ಕೆಲ್ಲಾ ಮೂಲಕಾರಣವಾದ "ಓಂ"ಕಾರನಾದಾನು ಸಂಧಾನದಲ್ಲಾಗತಕ್ಕ ಆನಂದವು ಯಾವ ವಿಧವಾಗಿರುವುದೆಂದು ವರ್ಣಿಸಲು ಅಸಾಧ್ಯವಾಗಿರುವುದು. ಈ ತಾತ್ಪರ್ಯಕ್ಕೆ ಶ್ರೀಸ್ವಾತ್ಮಾರಾಮಯೋಗಿಗಳು ಹಟಯೋಗ ಪ್ರದೀಪಿಕೆಯಲ್ಲಿ,

ನಾದಾನುಸಂಧಾನಸಮಾಧಿಭಾಜಾಂ ಯೋಗೀಶ್ವರಾಣಾಂ ಹೃದಿವರ್ಧಮಾನಂ|
ಆನಂದಮೇಕಂ ವಚಸಾಪ್ಯಗಮ್ಯಂ ಜಾನಾತಿತಂ ಶ್ರೀಗುರುನಾಥ ಏಕಃ ||

ತಾ|| ನಾದಾನುಸಂಧಾನದಲ್ಲಿ ಸಮಾಧಿಯನ್ನು ಅಭ್ಯಾಸಮಾಡತಕ್ಕ ಯೋಗಿಶ್ರೇಷ್ಠರ ಹೃದಯದಲ್ಲಿ ಉದ್ಭವಿಸುವ ಆನಂದವನ್ನು ಈ ವಿಧವಾದುದೆಂದು ಹೇಳುವುದಕ್ಕೂ

ಸಾಧ್ಯವಿಲ್ಲ. ಶ್ರೇಷ್ಠವಾದ ಈ ಆನಂದಸ್ವರೂಪವು ಸಾಕ್ಷಾತ್ ತಾಂಡವೇಶ್ವರನಿಗೇ ಗೊತ್ತು, ಎಂದು ಹೇಳಿರುವರು.

ಆದುದರಿಂದ ಪರಮಾತ್ಮನಲ್ಲಿ ಅತ್ಯಂತ ಪ್ರೀತಿಯನ್ನು ಹೊಂದಿ ಬಹಿರ್ವ್ಯಾಪಾರದಲ್ಲಿ ದ್ದಾಗ ಪರಮಾತ್ಮಮಹಿಮೆಯ ವಿಚಾರಪೂರ್ಣ ಶಬ್ದಾನಂದವನ್ನು ಅನುಭವಿಸಬೇಕು. ಅಂತರ್ಮುಖದಲ್ಲಿ ಸಮಾಧಿಯಲ್ಲಿ ಗೋಚರವಾಗುವ ನಾದಬ್ರಹ್ಮದ ಆನಂದವನ್ನು ಅನುಭವಿಸ ಬೇಕು. ಅಂತರ್ಮುಖ ಮತ್ತು ಬಾಹ್ಯಗಳೆರಡರಲ್ಲಿಯೂ ಆನಂದಪಡುವವನು ಮಹಾ ತ್ಮನು, ಧನ್ಯನು.

**ರಾ||** ಈ ರೀತಿಯಾಗಿ ರಾಮ ರಾವಣರಿಗೆ ಘೋರವಾದ ಯುದ್ಧವು ನಡೆಯುತ್ತಿತ್ತು. ಹೀಗೆ ನಡೆಯುತ್ತಿರುವ ಯುದ್ಧದ ವೇಗದಲ್ಲಿ ಸಮಸ್ತ ಭೂಮಿಯು ನಡುಗುತ್ತಿತ್ತು. ಸೂರ್ಯನಾರಾಯಣನು ಕಾಂತಿಗುಂದಿದನು. ಗಾಳಿಯು ಬೀಸಲಂಜಿತು. ಆಯುಧ ಧ್ವನಿಗಳಿಂದಲೂ, ಬಾಣಪ್ರಯೋಗದಿಂದಲೂ, ಸಪ್ತ ಸಮುದ್ರಗಳು ಕ್ಷೋಭೆಹೊಂದಿ ದಂತಾದುವು. ಇವರಿಬ್ಬರೂ ಒಂದಾವರ್ತಿ ತ್ರಿಕೂಟಪರ್ವತಕ್ಕೆ ಹಾರಿ ಯುದ್ಧಮಾಡುತ್ತಿ ದ್ದರು. ಇನ್ನೊಂದಾವರ್ತಿ ಮೇಲೆ ಹಾರಿ ಅಂತರಿಕ್ಷದಲ್ಲಿಯೇ ಹೋರಾಡುತ್ತಿದ್ದರು. ಮತ್ತೊಂದಾವರ್ತಿ ಭೂಮಿಗಿಳಿದು ಯುದ್ಧಮಾಡುತ್ತಿದ್ದರು.

**ತತ್ವ||** ಯುದ್ಧದ ವೇಗದಿಂದ ಸಮಸ್ತ ಭೂಮಿಯೂ ಚಲನೆಹೊಂದಿದ ಮಹಾ ಧ್ವನಿಯಿಂದ ಸಪ್ತಸಮುದ್ರಗಳೂ ಕ್ಷೋಭೆಹೊಂದಿದ ತತ್ವವೇನೆಂದರೆ—"ಓಂ"ಕಾರನಾದದ ಸೋಪಾನದಲ್ಲಿ ಸತ್ವರಜಸ್ತಮೋಗುಣಗಳು ಒಂದಕ್ಕೊಂದು ಸಮ್ಮೇಳನವಾಗಿ ಸ್ತ್ರೀಯರ ಜಡೆಯಂತೆ ಇರುತ್ತವೆ. ಗುಣಗಳ ಸಮ್ಮೇಳನವಾದ "ಓಂ"ಕಾರನಾದವು ಆಕಾಶತತ್ವದಲ್ಲಿ ಪ್ರಥಮದಲ್ಲಿ ಉದಯಿಸಿ ಅನಂತರ ಸಕಲ ಸೃಷ್ಟಿಗಳೂ ಆಗುತ್ತವೆ. ಉಪಸಂಹಾರವೆಂದರೆ ಮೋಕ್ಷಕ್ರಮದಲ್ಲಿಯೂ ಹೆಣೆದುಕೊಂಡಿರುವ ಜಡೆಯ ಬಿಡಿಸುವಿಕೆಯಿಂದ ನಾದವುಂಟಾ ಗುವುದು. ಮೋಕ್ಷಕ್ರಮದಲ್ಲಿ ಗುಣಗಳ ಸಮ್ಮೇಳನಸ್ವರೂಪವಾದ ನಾದವು ಅಡಗಿ,

"ಸಶಬ್ದ ಶ್ಚಾಕ್ಷರೇ ಲೀನೇ ನಿಶ್ಶಬ್ದಂ ಪರಮಂಪದಂ"

ಎಂಬ ಶ್ರುತಿವಚನಾನುಸಾರವಾಗಿ "ಓಂ" ಕಾರನಾದವಡಗಿದರೆ ಪರಮಪದ ಪ್ರಾಪ್ತಿಯಾಗುವುದು. ಈ ಮೇಲಿನ ತತ್ವಾರ್ಥಗಳೇ ರಾಮ ರಾವಣರ ಯುದ್ಧದ ಮಹಾ ಧ್ವನಿಯಾಗಿರುವುದು.

ಈ ರಾಮ ರಾವಣರ ಯುದ್ಧದಿಂದ ಸಪ್ತಸಮುದ್ರಗಳೂ ಕ್ಷೋಭೆಹೊಂದಿದಂತಾದು ವೆಂದರೆ—ಸಪ್ತಸಮುದ್ರಗಳ ತತ್ವದಲ್ಲಿರುವ ಸಪ್ತಚಕ್ರಗಳ ಚೈತನ್ಯಸಮುದಾಯಗಳೂ

ತಮ್ಮ ನೈಜವಾದ ದೇಹಕಾರ್ಯಗಳನ್ನು ಬಿಟ್ಟು ಆತ್ಮಾಭಿಮುಖವಾಗುವಂತೆ ಶ್ರೀರಾಮಬಾಣ ಗಳಿಂದ ಮಾಡಲ್ಪಟ್ಟವು. ಅಂದರೆ ಬುದ್ಧಿವೃತ್ತಿಯು ದೇಹಧಾರಣೆಮಾಡಿಕೊಂಡಿರುವ ಸಕಲನಾಡಿಗಳ ಸಾರವನ್ನೂ ತನ್ನಲ್ಲಿ ಲೀನಮಾಡಿಕೊಂಡು, ತಾನು ಪರಮಾತ್ಮನಲ್ಲಿ ಲೀನ ವಾಗಲು ಹೋಗುವ ತತ್ವವೇ ಸಪ್ತ ಸಮುದ್ರಗಳೂ ಕ್ಷೋಭೆಹೊಂದಿದಂತಾದುದರ ತತ್ವ ವಾಗಿರುವುದು. ಅಂದರೆ ಕುಂಡಲಿನಿಯನ್ನು ಅನುಸರಿಸಿಕೊಂಡು ಬುದ್ಧಿವೃತ್ತಿಯು ಸಹಸ್ರಾರಕಮಲದಲ್ಲಿ ಲೀನವಾಗುವುದೆಂಬ ತಾತ್ಪರ್ಯ. ಕುಂಡಲಿನಿಯನ್ನನುಸರಿಸಿಕೊಂಡು ಬುದ್ಧಿವೃತ್ತಿಯು ವಾಯು ಮನಸ್ಸಿನ ಶಕ್ತಿಗಳೊಡನೆ ಸಹಸ್ರಾರಕಮಲದಲ್ಲಿ ಲೀನವಾಗುವ ವಿಚಾರಕ್ಕೆ ಹಂಸೋಪನಿಷತ್ತಿನಲ್ಲಿ,

> ಗುದಮವಷ್ಟಭ್ಯ, ಆಧಾರಾದ್ವಾಯು ಮುತ್ಥಾಪ್ಯ,
> ಸ್ವಾಧಿಷ್ಠಾನಂ ತ್ರಿಃಪ್ರದಕ್ಷಿಣೀಕೃತ್ಯ ಮಣಿಪುರಂಗತ್ವಾ
> ಅನಾಹತಮತಿಕ್ರಮ್ಯ ವಿಶುದ್ಧೌ ಪ್ರಾಣಾನ್ನಿರುಧ್ಯ
> ಆಜ್ಞಾಮನುಧ್ಯಾಯನ್ ಬ್ರಹ್ಮರಂಧ್ರಂಧ್ಯಾಯನ್ ತ್ರಿಮಾತ್ರೋ
> ಹಮಿತ್ಯೇವಂ ಸರ್ವದಾಧ್ಯಾಯನ್ ಪಶ್ಯತ್ಯನಾಕಾರಶ್ಚ ಭವತಿ ||

ತಾ|| ಗುದವನ್ನು ಆಶ್ರಯಿಸುವುದೆಂದರೆ, ಶಕ್ತಿಚಲನಪ್ರಾಣಾಯಾಮದ ಸಿದ್ಧಿಯನ್ನು ಪಡೆದು ಸಮಾಧಿಯ ಅನುಷ್ಠಾನದಿಂದ ಮೂಲಾಧಾರದಿಂದ ವಾಯುವನ್ನೆಬ್ಬಿಸಿ, ಸ್ವಾಧಿ ಷ್ಠಾನಚಕ್ರದ ಕೆಳಗೆ ಮೂರುಸುತ್ತಿನಿಂದ ಮಲಗಿರುವ ಕುಂಡಲಿನಿಯನ್ನು ನೇರವಾಗಿ ಏಳುವಂತೆ ಮಾಡಿ, ಮಣಿಪುರವನ್ನು ಹೊಂದಿ, ಅನಾಹತಚಕ್ರವನ್ನು ದಾಟಿ, ವಿಶುದ್ಧ ಚಕ್ರದಲ್ಲಿ ಪ್ರಾಣಚೇಷ್ಟೆಗಳಿಂದ ರಹಿತನಾಗಿ, ಆಜ್ಞಾಚಕ್ರವನ್ನು ಅನುಸರಿಸುತ್ತ, ಸಹಸ್ರಾರ ಕಮಲವನ್ನೇ ಲಕ್ಷ್ಯವಾಗಿಮಾಡಿಕೊಂಡು, ಸರ್ವದಾ ಸೋಹಂಭಾವನೆಯೊಡಗೂಡಿದ ಸಮಾಧಿಯ ಅಭ್ಯಾಸವನ್ನು ಯಾವನು ಮಾಡುತ್ತಾನೋ ಅವನು ಅನಾಕಾರನಾಗುವ ನೆಂದರೆ ಪರಬ್ರಹ್ಮನೇ ಆಗುವನು, ಎಂದು ಹೇಳಿರುವುದು.

ಆದುದರಿಂದ ರಾಮ ರಾವಣರ ಯುದ್ಧದ ಹೊಡೆತದಿಂದ ಸಪ್ತಸಮುದ್ರಗಳೂ ಕ್ಷೋಭೆಹೊಂದಿದಂತಾದುವೆಂದರೆ—ಬುದ್ಧಿವೃತ್ತಿಯು ದೇಹವ್ಯಾಪಾರಕ್ಕೆ ಕಾರಣವಾದ ಸಕಲಶಕ್ತಿಗಳನ್ನೂ ತನ್ನಲ್ಲಿ ಉಪಶಾಂತತೆಯಲ್ಲಿ ನಿಲ್ಲಿಸಿಕೊಂಡಿರುವುದೆಂಬ ತತ್ವ. ಅಂದರೆ ಮೇಲೆ ಹೇಳಿರುವ ಶ್ರುತಿವಾಕ್ಯದಂತೆಯೂ, ಹಿಂದಿನ ಪ್ರಕರಣಗಳಲ್ಲಿ ತಿಳಿಸಿರುವಂತೆಯೂ, ಬುದ್ಧಿವೃತ್ತಿಯು ಸುಷುಮ್ನೆಯೊಳಗೆ ಅನಾಹತಚಕ್ರವನ್ನು ಭೇದಿಸಿಕೊಂಡು ವಿಶುದ್ಧ ಚಕ್ರಕ್ಕೆ ಬಂದಿರುವ ತತ್ವವಾಗಿರುವುದು. ಮುಂದಿನ ಕಥಾಸಂದರ್ಭಗಳಲ್ಲಿ ಆಜ್ಞಾಚಕ್ರ ಭೇದನೆಯಾಗಿ ಸಹಸ್ರಾರಕಮಲದಲ್ಲಿ ಲೀನವಾಗುವ ವಿಚಾರಗಳು ಬರುವುವು.

ರಾಮ ರಾವಣರು ಒಂದೊಂದುವೇಳೆ ಆಕಾಶದಲ್ಲಿ ಹಾರಿ ಯುದ್ಧಮಾಡುತ್ತಿದ್ದುದರ ತತ್ವವೇನೆಂದರೆ—ರಾವಣನು ಶ್ರೀರಾಮನೊಡನೆ ಯುದ್ಧಮಾಡಲು ಲಂಕೆಯ ಉತ್ತರದ ಬಾಗಿಲಿನಲ್ಲಿ ಬಂದನೆಂದು ರಾಮಾಯಣದಲ್ಲಿ ಹೇಳಿದೆಯಷ್ಟೆ! ಉತ್ತರವೆಂದರೆ ಪ್ರಪಂಚ ವ್ಯಾಪಾರವನ್ನು ದಾಟುವ ಸುಷುಮ್ನೆಯ ದ್ವಾರವೆಂದು ಹಿಂದೆಯೇ ತಿಳಿಸಿರುತ್ತೆ. ವಾಸನಾ ವೃತ್ತಿಯು ಬ್ರಹ್ಮರಂಧ್ರದೊಳಗೆ ಪ್ರವೇಶಮಾಡಿ, ತೇಜಸ್ಸಿನಲ್ಲಿಯೇ ಬುದ್ಧಿವೃತ್ತಿಯನ್ನು ವಿಷಯಾಕಾರವಾಗಲಾಕರ್ಷಿಸುವಿಕೆ ಮತ್ತು ಹೀಗೆ ಬರುವ ಆಕರ್ಷಣಾಶಕ್ತಿಯನ್ನು ಸೋಹಂಭಾವದಿಂದ ತೇಜಸ್ಸನ್ನೆ ಧರಿಸಿಕೊಳ್ಳುವುದರ ಮೂಲಕ ಬುದ್ಧಿಯು ನಿರ್ವೀರ್ಯ ಮಾಡುತ್ತ ಬರುವ ತತ್ವವೇ ರಾಮ ರಾವಣರು ಆಕಾಶದಲ್ಲಿ ಹಾರಿ ಯುದ್ಧಮಾಡುತ್ತಿದ್ದ ತತ್ವವಾಗಿರುವುದು.

ಬುದ್ಧಿವೃತ್ತಿಯು ಸುಷುಮ್ನೆಯೊಳಗೆ ವಿಶುದ್ಧಚಕ್ರಕ್ಕೆ ಬಂದಿರುವುದೆಂದು ಮೇಲೆ ತಿಳಿಸಿತಷ್ಟೆ! ಅಂದರೆ ಪೃಥ್ವಿ, ಅಪ್ಪು, ತೇಜಸ್ಸು, ವಾಯು ತತ್ವಗಳ ಚಕ್ರಗಳನ್ನು ಅತಿ ಕ್ರಮಿಸಿ, ನಾದವೇ ಗುಣವಾಗಿರುವ ಆಕಾಶದ ತತ್ವದಲ್ಲಿ ಬುದ್ಧಿವೃತ್ತಿಯು ಬಂದಿರುವುದೆಂಬ ತಾತ್ಪರ್ಯ. ಈ ಆಕಾಶದಲ್ಲಿಯೇ ಆದಿತ್ಯನೆಂದರೆ ಪ್ರತಿಫಲನದ ಪ್ರಭೆಯ ಸ್ವರೂಪವಾದ ಜ್ಯೋತಿಯಿರುವುದು. ಬುದ್ಧಿವೃತ್ತಿಯು ಆಕಾಶಸ್ವರೂಪದಲ್ಲಿರುವ ಜ್ಯೋತಿಯಲ್ಲಿ ಸೋಹಂ ಭಾವನೆಯಿಂದ ಮಾಡುವ ಸಮಾಧಿಯ ಅಭ್ಯಾಸದ ಬಲದಿಂದ ವಾಸನಾವೃತ್ತಿಯು ಖಂಡಿಸಲ್ಪಡುವುದೇ, ಶ್ರೀರಾಮನು ರಾವಣನ ಬಾಣಗಳನ್ನೆಲ್ಲ ಖಂಡಿಸುತ್ತಿದ್ದುದರ ತತ್ವವಾಗಿರುವುದು. ಇದೇ ತಾತ್ಪರ್ಯಕ್ಕೆ ಶ್ಯಾಂಡಿಲ್ಯೋಪನಿಷತ್ತಿನಲ್ಲಿ,

ಖಮಧ್ಯೇ ಕುರುಚಾತ್ಮಾನ ಮಾತ್ಮಮಧ್ಯೇಚ ಖಂಕುರು ।
ಸರ್ವಂಚ ಖಮಯಂಕೃತ್ವಾ ನಕಿಂಚಿದಪಿ ಚಿಂತಯ ॥

ತಾ॥ ಆಕಾಶಮಧ್ಯದಲ್ಲಿ ಪರಮಾತ್ಮನ ಪ್ರಕಾಶವನ್ನು ಭಾವಿಸು. ಪರಮಾತ್ಮನ ಪ್ರಕಾಶದಲ್ಲಿಯೇ ಆಕಾರವನ್ನು ಭಾವಿಸು. ಅಂದರೆ ಪೂರ್ಣಬ್ರಹ್ಮಸ್ವರೂಪದಲ್ಲೇ ನೀನು ಲೀನವಾಗುವುದನ್ನು ಭಾವಿಸು. ಸರ್ವವನ್ನು ಆಕಾಶದಂತೆ ಅಂದರೆ ಪರಬ್ರಹ್ಮ ಸ್ವರೂಪವಾಗಿ ಭಾವಿಸು. ಸಮಸ್ತ ಎಂಬುದರಲ್ಲಿ "ನಾನು" ಎಂಬುದೂ ಸೇರಿಹೋಗುವುದರಿಂದ ಆ ಪರಬ್ರಹ್ಮಸ್ವರೂಪವೇ ನಾನೆಂಬದಾಗಿ ಭಾವಿಸು, ಎಂದು ಹೇಳಿರುವುದು.

ಈ ತತ್ವವನ್ನನುಸರಿಸಿ ಬುದ್ಧಿವೃತ್ತಿಯ "ಅಹಂಬ್ರಹ್ಮೇತ್ಯುಪಾಸೀತಾ" ಎಂಬ ಶ್ರುತಿ ಪ್ರಮಾಣದಂತೆ ಧ್ಯೇಯಸ್ವರೂಪವೇ ಪರಬ್ರಹ್ಮಸ್ವರೂಪವೆಂಬ ಭಾವನೆಯುಳ್ಳಿರುವಾಗ ವಾಸನಾವೃತ್ತಿಯ ಎಳೆಯುವಿಕೆಯೆ ಆಕಾಶದಲ್ಲಿ ನಡೆದ ಯುದ್ಧದ ತತ್ವವಾಗಿರುವುದು. ಬುದ್ಧಿವೃತ್ತಿಯು ಪರಬ್ರಹ್ಮದಲ್ಲಿ ಲೀನವಾಗಿಲ್ಲವಾದುದರಿಂದ ಏಕಾಗ್ರತೆಯು ಇನ್ನೂ ಬಂದಿಲ್ಲ. ಏಕಾಗ್ರತೆಯು ಉದಯವಾಗುವ ಕಾಲದಲ್ಲಿ ಈಶ್ವರನು ಸಹಾಯಕನಾಗಿಯೂ,

ಸುಲಭನಾಗಿಯೂ ಇರುತ್ತಾನೆಂದು, ಸೂರ್ಯನು ಶ್ರೀರಾಮನಿಗೆ ಪ್ರತ್ಯಕ್ಷವಾಗಿ ಬಂದು ಅನುಗ್ರಹಮಾಡಿದ ಕಾಲದಲ್ಲಿ ತಿಳಿಸಿರುತ್ತಷ್ಟೆ! ಈ ತತ್ವಾರ್ಥವನ್ನೇ ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆಯಲ್ಲಿ,

ಅನನ್ಯಚೇತಾಃ ಸತತಂ ಯೋಮಾಂ ಸ್ಮರತಿನಿತ್ಯಶಃ |
ತಸ್ಯಾಹಂ ಸುಲಭಃ ಪಾರ್ಥನಿತ್ಯಯುಕ್ತಸ್ಯಯೋಗಿನಃ ||

ತಾ|| ಎಲೈ ಪಾರ್ಥನೆ! ಮತ್ತಾವುದರಲ್ಲಿಯೂ ಬುದ್ಧಿಯನ್ನಿಡದೆ ಸದಾಕಾಲ ದಲ್ಲಿಯೂ ಅವಿಚ್ಛಿನ್ನವಾಗಿ ಯಾವ ಯೋಗಿಯು ನನ್ನ ಭಾವನೆಯನ್ನು ಮಾಡುವನೋ, ಅಂತಹ ಸಮಾಧಿಯ ಅನುಷ್ಠಾನಪರನಿಗೆ ನಾನು ಸುಲಭನು, ಎಂದು ಹೇಳಿರುವನು.

ಮೇಲಿನ ಶ್ಲೋಕದಲ್ಲಿ ಸದಾಕಾಲದಲ್ಲಿಯೂ, ಅವಿಚ್ಛಿನ್ನವಾಗಿಯೂ ಎಂಬದಾಗಿ ಹೇಳಿರುವ ಶಬ್ದಗಳಿಂದ ಬುದ್ಧಿವೃತ್ತಿಯು ವಿಕ್ಷೇಪಶಕ್ತಿಯ ಎಳೆಯುವಿಕೆಯಿಂದ ಬಿಡ ಲ್ಪಟ್ಟು ತೈಲಧಾರೆಯಂತೆ ಅವಿಚ್ಛಿನ್ನವಾಗಿಲ್ಲದಿದ್ದುದೇ ರಾಮರಾವಣರು ಇನ್ನೂ ಯುದ್ಧ ಮಾಡುತ್ತಿರುವ ತತ್ವವಾಗಿರುವುದು. ಅವಿಚ್ಛಿನ್ನತೆಯು ಯಾವಾಗ ಬರುವುದೋ ಆ ಕಾಲದಲ್ಲಿ ಶ್ರೀಕೃಷ್ಣಪರಮಾತ್ಮನು ಸುಲಭನೆಂದರೆ ಪ್ರತಿಬಂಧಕಗಳಿಲ್ಲದ ಆತ್ಮಸಾಕ್ಷಾತ್ಕಾರ ವಾಗುವುದು.

ಆದುದರಿಂದ ಸಮಾಧಿಯ ಪರಿಪಕ್ವಾವಸ್ಥೆಯಲ್ಲಿ ಅವಿಚ್ಛಿನ್ನವಾದುದೆಂದರೆ ಏಕಾ ಗ್ರತೆಯು ಉಂಟಾಗುವುದು. ಬಾಹ್ಯಾವಸ್ಥೆಯಲ್ಲಿ ಅವಿಚ್ಛಿನ್ನವಾದ ಬುದ್ಧಿವೃತ್ತಿಯು ಉಂಟಾ ಗುವುದೇ ಇಲ್ಲ. ಕಾರಣವೇನೆಂದರೆ ಅವಿದ್ಯಾಪ್ರಬಲಶಕ್ತಿಗಳಾದ ಭೋಗಶಕ್ತಿ, ತಮೋಗುಣ ಗಳ ಶಕ್ತಿಗಳು, ಅವಿದ್ಯಾಸಮ್ಮೇಳನ ಮತ್ತು ಇತರ ಶಕ್ತಿಗಳನ್ನು ನಿಗ್ರಹಿಸಿದ್ದರೂ ಅವಿದ್ಯಾ ಪ್ರಧಾನಶಕ್ತಿಯೊಂದೇ ಸಮಾಧಿಯಲ್ಲಿ ಇಷ್ಟೊಂದು ತೊಂದರೆಯನ್ನುಂಟುಮಾಡುತ್ತಿದೆ. ಹೀಗಿರುವಲ್ಲಿ ಬಾಹ್ಯವ್ಯಾಪಾರಸ್ವರೂಪದಲ್ಲಿ ಅವಿಚ್ಛಿನ್ನವಾದ ಬುದ್ಧಿವೃತ್ತಿಯನ್ನು ಆತ್ಮ ಭಾವನೆಯಲ್ಲಿಡಲು ಖಂಡಿತವಾಗಿಯೂ ಅಸಾಧ್ಯ. ಆದರೆ ಸಮಾಧಿಯ ಅನುಷ್ಠಾನಕ್ಕೆ ತಕ್ಕಪಾಯದಂತಿರುವ ಆತ್ಮಭಾವನೆಯ ಚಿಂತನೆಯನ್ನು ಮಾಡಿಕೊಂಡು ಅದನ್ನು ಅಧಿಕ ಮಾಡಿಕೊಳ್ಳುತ್ತಿರಬೇಕು.

ರಾಮರಾವಣರು, ಭೂಮಿಯ ಮೇಲೂ, ತ್ರಿಕೂಟಶಿಖರದಲ್ಲೂ ನಿಂತು ಯುದ್ಧ ಮಾಡುತ್ತಿದ್ದುದರ ತತ್ವವೇನೆಂದರೆ-ಬುದ್ಧಿವೃತ್ತಿಯು ಮೂಲಾಧಾರದ ಮೂಲಕ ಸುಷುಮ್ನೆ ಯೊಳಗೆ ಪ್ರವೇಶಿಸಿಕೊಂಡು ಬರುತ್ತಿದೆಯೆಂದು ಪ್ರಥಮದಿಂದಲೂ ತಿಳಿಸಿಕೊಂಡು ಬಂದಿರು ತ್ತಷ್ಟೆ. ಹೀಗೆ ಬ್ರಹ್ಮರಂಧ್ರದ ಮಾರ್ಗದಲ್ಲಿ ಹೋಗುತ್ತಿರುವ ಬುದ್ಧಿವೃತ್ತಿಯನ್ನು "ಭೂ" ತತ್ವವಾದ ಮೂಲಾಧಾರದಲ್ಲಿಯೇ ಅವಿದ್ಯಾಪ್ರಧಾನಶಕ್ತಿಯು ಎಳೆಯುವುದೇ, ರಾಮ

ರಾವಣರು ಭೂಮಿಯಮೇಲೆ ಯುದ್ಧವಮಾಡಿದ ತತ್ವವಾಗಿರುವುದು "ಭೂ"ತತ್ವವು ಲಯವಾಗುವ ತ್ರಿಕೂಟಶಿಖರದ ತತ್ವದಲ್ಲಿರುವ ಸುಷುಮ್ನೆಯ ಬಾಗಿಲಲ್ಲಿ ಅವಿದ್ಯಾಪ್ರಧಾನ ಶಕ್ತಿಯು ಬುದ್ಧಿವೃತ್ತಿಯನ್ನು ಎಂದರೆ, ರಾಮರಾವಣರು ತ್ರಿಕೂಟಶಿಖರದ ಮೇಲೆ ಹಾರಿ ಯುದ್ಧವಮಾಡಿದ ತತ್ವವಾಗುವುದು. ಸುಷುಮ್ನೆಯೊಳಗೆ ಪ್ರವೇಶಮಾಡಿ ಬುದ್ಧಿವೃತ್ತಿಯನ್ನು ಎಳೆದರೆ ಆಕಾಶದಲ್ಲಿ ಯುದ್ಧವೆಂಬ ತತ್ವವಾಗಿರುವುದು.

ರಾಮರಾವಣರ ಯುದ್ಧದಿಂದ ಗಾಳಿಯು ಬೀಸಲಂಜಿತು, ಎಂಬುದರ ತತ್ವವೇನೆಂದರೆ--ವಾಯುವಿನ ಕಾರ್ಯವು ಚಲನೆಮಾಡಿಸುವುದು. ಅಥವಾ ಪ್ರಾಣಚೇಷ್ಟೆಯೆನಿಸಿಕೊಳ್ಳುವುದು. ಬುದ್ಧಿವೃತ್ತಿಯು ನಿರುದ್ಧಚಕ್ರಕ್ಕೆ ಬಂದಿರುವುದೆಂದು ಮೇಲೆ ತಿಳಿಸಿತಷ್ಟೆ! "ನಿರುದ್ಧೆ ಪ್ರಾಣಾ ನಿರುಧ್ಯ" ಎಂಬ ಮೇಲಿನ ಶ್ರುತಿವಾಕ್ಯದಂತೆ ದೇಹಧಾರಣೆಯ ಚೈತನ್ಯಗಳು ತಮ್ಮ ಸ್ವೈಜವಾದ ಕರ್ತವ್ಯವನ್ನು ಬಿಟ್ಟು ಬುದ್ಧಿಚೈತನ್ಯದೊಡನೆ ಉಪಶಾಂತಿಗೊಂಡಿರುವ ತತ್ವವೇ ಗಾಳಿಯು ಬೀಸಲಂಜಿದ್ದಾಗಿರುವುದು. ಈ ಮೇಲಿನ ತತ್ವಾರ್ಥಕ್ಕೆ ಅನುಸಾರವಾಗಿ ಸುಗ್ರೀವಾದಿ ಸಮಸ್ತವಾನರರು ಯುದ್ಧವಿಲ್ಲದೆ ತಟಸ್ಥರಾಗಿ ಶ್ರೀರಾಮನೊಬ್ಬನೆ ಯುದ್ಧವಮಾಡುತ್ತಿರುವನು.

ಶ್ರೀರಾಮ ರಾವಣರ ಯುದ್ಧದ ವೇಗದಿಂದ ಸೂರ್ಯನಾರಾಯಣನು ಕಾಂತಿಗುಂದಿದನೆಂಬುದರ ತತ್ವವೇನೆಂದರೆ—ಅಧಿಕಾರಿಯು ಶಿವರಾತ್ರಿಯ ಗಾಢಾಂಧಕಾರದ ತತ್ವದಲ್ಲಿರುವ ಅವಿದ್ಯೆಯನ್ನು ಹೋಗಲಾಡಿಸಿಕೊಳ್ಳಲು ನಕ್ಷತ್ರ, ಚಂದ್ರರ ಬೆಳಕುಗಳ ಸೋಪಾನಗಳಿಂದ ತನ್ನೊಳಗಿರುವ ಮಧ್ಯಾಹ್ನ ಸೂರ್ಯನ ಪ್ರಕಾಶಕ್ಕೆ ಬಂದನಷ್ಟೆ! ಈ ಸೂರ್ಯನ ಪ್ರಕಾಶದ ಕಿರಣಗಳು ಅಧೋಮುಖವಾಗಿರುತ್ತವೆ. ಈ ಅಧೋಮುಖವಾಗಿರುವ ಸೂರ್ಯನ ಕಿರಣಗಳನ್ನು ಊರ್ಧ್ವಮುಖವಾಗಿ ಮಾಡಿಕೊಳ್ಳದೆ, ಸೂರ್ಯನ ಅಂತರ್ಗತನಾಗಿರುವ ಆತ್ಮನಲ್ಲಿ ಬುದ್ಧಿವೃತ್ತಿಯು ಲೀನವಾಗಲು ಸಾಧ್ಯವಿಲ್ಲ. ಅಧೋಮುಖವಾಗಿದ್ದ ಪ್ರಣವವು ಅನಾಹತ ಚಕ್ರಭೇದನೆಯಾಗಿರುವುದರಿಂದ, ಊರ್ಧ್ವಮುಖವಾಗಿ "ಓಂ"ಕಾರಸ್ವರೂಪವನ್ನು ಪಡೆಯುತ್ತ ಬಂದಹಾಗೆಲ್ಲ, ನಮ್ಮಲ್ಲಿರುವ ಅಧೋಮುಖವಾಗಿದ್ದ ಸೂರ್ಯಕಿರಣಗಳು ಊರ್ಧ್ವಮುಖವಾಗುತ್ತಾ ಬರುವುವು. ಹೀಗೆ ಅಧೋಮುಖವಾಗಿರುವವುಗಳೆಲ್ಲಾ ಊರ್ಧ್ವಮುಖವಾಗುವ ತತ್ವಕ್ಕೆ "ಊರ್ಧ್ವರೇತಂ ವಿರೂಪಾಕ್ಷಂ" ಎಂಬ ಶ್ರುತಿವಾಕ್ಯದ ತತ್ವಾರ್ಥವೂ ಅನ್ವಯವಾಗುವುದು.

ಮಧ್ಯಾಹ್ನದ ಸೂರ್ಯನ ತೇಜಸ್ಸು ಪ್ರತಿಫಲನದ ಸ್ವರೂಪವಾದುದರಿಂದ, ಈ ಪ್ರತಿಫಲನದ ತೇಜಸ್ಸು ಪ್ರಣವೋಪಾಸನೆಯಿಂದ ತಗ್ಗುತ್ತಾ ಬಂದು, ಕಿರಣಗಳಿಲ್ಲದ ಸೂರ್ಯಬಿಂಬಸ್ವರೂಪ ಅಂದರೆ ಅಗ್ನಿವತ್ತಾಗುವುದೇ ರಾಮರಾವಣರ ಯುದ್ಧದಿಂದ ಸೂರ್ಯನು ಕಾಂತಿಗುಂದಿದ ತತ್ವವಾಗಿರುವುದು. ಹೇಗೆಂದರೆ, ಮಧ್ಯಾಹ್ನದ ಸೂರ್ಯನ ಪ್ರಕಾಶವು

ಸಾಯಂಕಾಲದವರೆಗೂ ಕ್ರಮೇಣ ತಗ್ಗುತ್ತಾಬರುವಂತೆ, ಸಮಾಧಿಯಲ್ಲಿಯೂ ಪರಪ್ರಕಾಶ ವಾದ ತೇಜಸ್ಸು ತಗ್ಗುತ್ತಾ ಬರುವ ತತ್ವವೇ ರಾಮರಾವಣರ ಯುದ್ಧದಿಂದ ಸೂರ್ಯನಾರಾ ಯಣನು ಕಾಂತಿಗುಂದಿರುವುದರ ತತ್ವವಾಗಿರುವುದು.

ಅಂದರೆ ತಮೋಗುಣಸ್ವರೂಪವಾದ ರಾತ್ರಿಯಕಾಲದ ತತ್ವವೇ ಸೃಷ್ಟಿಗೆ ಪ್ರಾರಂಭ. ಪ್ರಾತಃಕಾಲವಾದನಂತರ ಸೃಷ್ಟಿಯು ಸ್ಥಿತಿ ಅಥವಾ ವ್ಯಾಪಾರಕ್ಕೆ ಬರುತ್ತದೆ. ಸಾಯಂ ಕಾಲಕ್ಕೆ ವ್ಯಾಪಾರಗಳು ತಗ್ಗಿ ಲಯಕಾಲವೆನಿಸಿಕೊಳ್ಳುವುದರಿಂದ ಸಾಯಂಸಂಧ್ಯೆಯ ತತ್ವವೇ ಮೋಕ್ಷಸ್ವರೂಪವು. ಈ ತತ್ವಾರ್ಥಕ್ಕನುಸಾರವಾಗಿ ಸಾಯಂಸಂಧ್ಯಾಕಾಲದಲ್ಲಿ ಅಗತ್ಯವಾಗಿ ಪರಮಮಂಗಳಕರವಾದ ಶಿವದರ್ಶನವಮಾಡಬೇಕೆಂಬ ಸಂಪ್ರದಾಯವು ಈಗಲೂ ಜನಗಳಲ್ಲಿರುವುದು. ಅಲ್ಲದೆ ಉಪನಯನದಲ್ಲೂ ಸಾಯಂಸಂಧ್ಯೆಯಿಂದಲೇ ಕರ್ಮಪ್ರಾರಂಭವಾಗುವುದು. ಈ ಮೇಲಿನ ತತ್ವಾರ್ಥಗಳೇ ರಾಮರಾವಣರ ಯುದ್ಧದ ವೇಗದಿಂದ ಸೂರ್ಯನಾರಾಯಣನು ಕಾಂತಿಗುಂದುತ್ತಿರುವುದಾಗಿದೆ.

**ರಾ**|| ಈ ರೀತಿಯಾಗಿ ರಾಮರಾವಣರು ಯುದ್ಧಮಾಡುತ್ತಿರುವಾಗ, ಶ್ರೀರಾಮನು ರಾವಣನೆದೆಗೆ ಗುರಿಯಿಟ್ಟು ಬಾಣಗಳನ್ನು ಬಿಡುತ್ತಿದ್ದನು. ಅಲ್ಲದೆ ಅವನಿಗಿರುವ ಹತ್ತು ತಲೆಗಳನ್ನು ಒಂದೊಂದಾಗಿ ಕತ್ತರಿಸುತ್ತ ಬಂದನು. ಶ್ರೀರಾಮನು ರಾವಣನ ತಲೆಗಳೊಂದೊಂದನ್ನು ಕಡಿದಂತೆ ಒಂದೊಂದಾಗಿ ಹಿಂದೆಯೇ ಚಿಗುರುತ್ತಾ ಬಂದುವು. ಶ್ರೀರಾಮನು ಈರೀತಿಯಾಗಿ ನೂರೊಂದು ತಲೆಗಳನ್ನು ಕತ್ತರಿಸಿದನು. ತಲೆಗಳು ಕತ್ತರಿಸು ತ್ತಿದ್ದಂತೆ ಚಿಗುರುತ್ತಿರುವುದನ್ನು ಶ್ರೀರಾಮನು ನೋಡಿ ಆಶ್ಚರ್ಯಯುಕ್ತನಾಗಿ ತನ್ನಲ್ಲಿ ತಾನು ಆಹಾ ! ನಾನು ಯಾವ ಬಾಣಗಳಿಂದ ಮಾರೀಚ, ಖರ, ದೂಷಣ, ಕಬಂಧ, ವಿರಾಧ ವಾಲಿ ಮುಂತಾದವರನ್ನು ಕೊಂದೆನೋ, ಆ ಬಾಣಗಳೆಲ್ಲವೂ ಇದುವರೆಗೆ ಯಾವ ಯುದ್ಧ ದಲ್ಲಿಯೂ ವ್ಯರ್ಥವಾಗದೆ ಶತ್ರುಗಳನ್ನು ವಧಿಸುವುವೆಂದು ನನಗೆ ನಂಬಿಕೆಯನ್ನುಂಟು ಮಾಡಿದ್ದುವು. ಅಂತಹ ಬಾಣಗಳೆಲ್ಲವೂ ಈಗ ಈ ರಾವಣನ ವಿಷಯದಲ್ಲಿ ನಿರ್ವೀರ್ಯ ಗಳಾಗಿ ವ್ಯರ್ಥವಾಗುವುದಕ್ಕೆ ಕಾರಣವೇನೋ ತಿಳಿಯಲಿಲ್ಲವೆಂದು ಚಿಂತಾಕುಲನಾಗಿದ್ದನು. ಹೀಗೆ ಚಿಂತಿಸುತ್ತಿದ್ದರೂ ಯುದ್ಧಕಾರ್ಯದಲ್ಲಿ ಮಾತ್ರ ಎಚ್ಚರಿಕೆಯಿಂದಲೇ ಇದ್ದನು.

**ತತ್ವ**|| ಶ್ರೀರಾಮನು ರಾವಣನೆದೆಗೆ ಗುರಿಯಿಟ್ಟು ಹೊಡೆಯುತ್ತಿದ್ದುದರ ತತ್ವವೇ ನೆಂದರೆ ಪ್ರಾಣಿಗಳಿಗೆ ಪ್ರಾಣಶಕ್ತಿಯು ಎದೆಯಲ್ಲಿರುವಂತೆ ರಾವಣನೆದೆಯೇ ವಾಸನಾ ವೃತ್ತಿಯ ತತ್ವವಾಗಿಯೂ, ರಾವಣನ ಹತ್ತುತಲೆಗಳ ತತ್ವವೇ ದಶೇಂದ್ರಿಯಗಳಲ್ಲಿಯೂ ಇರುವ ಬಹಿರಾಕರ್ಷಣೆಯ ಶಕ್ತಿಯಾಗಿಯೂ ಇರುವುವು. ಆತ್ಮಾಕಾರವೃತ್ತಿಯಿಂದಲೇ ಇರ ಬೇಕೆಂಬ ಬುದ್ಧಿವೃತ್ತಿಯು ಪ್ರತಿಬಂಧಕವಾದ ವಾಸನಾವೃತ್ತಿಯನ್ನು ನಿರ್ಮೂಲನಮಾಡಲು ಪ್ರಯತ್ನಮಾಡುವ ತತ್ವವೇ ಶ್ರೀರಾಮನು ರಾವಣನೆದೆಗೆ ಗುರಿಯಿಟ್ಟು ಹೊಡೆದುದು.

ಶ್ರೀರಾಮನು ರಾವಣನ ತಲೆಗಳನ್ನು ಕತ್ತರಿಸುತ್ತ ಬಂದರೂ ತಲೆಗಳು ಚಿಗುರುತ್ತ ಬಂದ ತತ್ವವೇನೆಂದರೆ—ರಾವಣನ ಹತ್ತುತಲೆಗಳ ತತ್ವವೆ ಹತ್ತು ಇಂದ್ರಿಯಗೋಳಕಗಳಲ್ಲಿರುವ ಬಹಿರಾಕರ್ಷಣೆಯ ಶಕ್ತಿಗಳೆಂದು ಪ್ರಥಮದಿಂದಲೂ ತಿಳಿಸಿಕೊಂಡು ಬರುತ್ತಿದೆಯಷ್ಟೆ! ಶ್ರೀರಾಮನು ರಾವಣನ ತಲೆಗಳನ್ನು ಕತ್ತರಿಸುತ್ತಬಂದನೆಂದರೆ, ಬುದ್ಧಿವೃತ್ತಿಯು ದಶೇಂದ್ರಿಯಗಳಲ್ಲಿಯೂ ಇರುವ ಬಹಿರಾಕರ್ಷಣೆಯ ಶಕ್ತಿಗಳನ್ನು ಒಂದೊಂದನ್ನಾಗಿ ಉಪಸಂಹಾರ ಮಾಡಿಕೊಳ್ಳುತ್ತ ಬರುವುದೇ ಶ್ರೀರಾಮನು ರಾವಣನ ತಲೆಗಳನ್ನು ಕತ್ತರಿಸುತ್ತಾ ಬಂದ ತತ್ವವಾಗಿರುವುದು.

ಅಂದರೆ ಬುದ್ಧಿವೃತ್ತಿಯು ಕರ್ಣದಲ್ಲಿರುವ ಶಬ್ದಗ್ರಹಣಶಕ್ತಿಯನ್ನು ಉಪಸಂಹಾರ ಮಾಡಿಕೊಂಡು ನಿಶ್ಶಬ್ದವನ್ನು ಅನುಭವಿಸೋಣವೆಂದು ಎಳೆದು ನಿಲ್ಲಿಸಿಕೊಂಡು, ಅನಂತರ ರಸನೇಂದ್ರಿಯದಲ್ಲಿರುವ ಬಹಿರಾಕರ್ಷಣೆಯ ಶಕ್ತಿಯನ್ನೆಳೆದು ನಿಲ್ಲಿಸಿಕೊಳ್ಳಲು ಹೋಗುವಷ್ಟರಲ್ಲಿ, ಕರ್ಣೇಂದ್ರಿಯದ ಬಹಿರಾಕರ್ಷಣೆಯ ಶಕ್ತಿಯು ಹಿಡಿತದಿಂದ ತಪ್ಪಿಸಿಕೊಳ್ಳುವ ತತ್ವವೇ ಶ್ರೀರಾಮನು ರಾವಣನ ಒಂದು ತಲೆಯನ್ನು ಕತ್ತರಿಸಿ ಇನ್ನೊಂದು ತಲೆಯನ್ನು ಕತ್ತರಿಸುವುದರೊಳಗೆ ಪ್ರಥಮದಲ್ಲಿ ಕತ್ತರಿಸಿದ್ದುದು ಚಿಗುರುವ ತತ್ವವಾಗಿರುವುದು. ಈ ವಿಧವಾಗಿ ಒಂದು ಇಂದ್ರಿಯದ ಬಹಿರಾಕರ್ಷಣೆಯನ್ನು ಬುದ್ಧಿವೃತ್ತಿಯು ಹಿಡಿದೆಳೆದು ನಿಲ್ಲಿಸಿಕೊಂಡು, ಮತ್ತೊಂದು ಇಂದ್ರಿಯದ ಬಹಿರಾಕರ್ಷಣೆಯ ಶಕ್ತಿಯನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವಷ್ಟರಲ್ಲಿ, ಪ್ರಥಮದಲ್ಲಿ ಹಿಡಿದೆಳೆದಿದ್ದ ಇಂದ್ರಿಯದ ಶಕ್ತಿಯು ಹಿಡಿತದಿಂದ ತಪ್ಪಿಸಿಕೊಳ್ಳುವುದೆಂಬ ತತ್ವವಾಗಿರುವುದು.

ಕರ್ಣೇಂದ್ರಿಯದಲ್ಲಿನ ಬಹಿರಾಕರ್ಷಣೆಯ ಶಕ್ತಿಯನ್ನು ನಿಗ್ರಹಿಸುವುದೆಂದರೆ, ಶಬ್ದವನ್ನು ಆಕರ್ಷಣೆಮಾಡುವ ಶಕ್ತಿಯನ್ನೆಳೆದು ಅದರ ಕಾರ್ಯಮಾಡದಂತೆ ಬುದ್ಧಿವೃತ್ತಿಯು ಹಿಡಿದು ನಿಲ್ಲಿಸಿಕೊಳ್ಳುವುದೇ ಶಬ್ದಗ್ರಹಣಶಕ್ತಿಯನ್ನು ನಿಗ್ರಹಿಸುವುದರ ತತ್ವವೆ ಹೊರತು, ಶಬ್ದಗ್ರಹಣದ ಆಕರ್ಷಣಾಶಕ್ತಿಯನ್ನು ನಿಗ್ರಹಿಸುವುದೆಂದರೆ, ಕಿವುಡುತನವನ್ನು ಹೊಂದುವುದಲ್ಲ. ಹೀಗೆಯೇ ಪ್ರತಿ ಇಂದ್ರಿಯಕ್ಕೂ ಅನ್ವಯಮಾಡಿಕೊಳ್ಳಬೇಕು. ಇಂದ್ರಿಯಗೋಳಕಗಳ ಅಭಿಮಾನಶಕ್ತಿಯೇ ಪ್ರತ್ಯೇಕ. ಇವರೇ ದೇವತೆಗಳು. ಇಂಥ ಇಂದ್ರಿಯಗಳ ಗೋಳಕಗಳನ್ನು ಆಕ್ರಮಿಸಿಕೊಂಡಿರುವ ರಜೋಗುಣದ ಶಕ್ತಿಯೇ ಪ್ರತ್ಯೇಕ.

ಹೀಗೆ ಶ್ರೀರಾಮನು ರಾವಣನ ತಲೆಗಳನ್ನು ಕತ್ತರಿಸುತ್ತ ಬಂದರೂ, ಹಿಂದೆಯೇ ಚಿಗುರುತ್ತಾ ಇದ್ದುದನ್ನು ನೋಡಿ ಶ್ರೀರಾಮನು ಆಶ್ಚರ್ಯಪಟ್ಟ ತತ್ವವೇನೆಂದರೆ—ಯಾವ ಪ್ರಾಣಿಗಳ ಶಿರಸ್ಸನ್ನು ಕತ್ತರಿಸಿದರೂ ತಕ್ಷಣವೆ ಮರಣವುಂಟಾಗುವುದು. ಹೀಗಿರುವಲ್ಲಿ ಶಿರಚ್ಛೇದನಮಾಡಿದರೂ ಪುನಃ ತಲೆಯು ಚಿಗುರುವ ಪ್ರಾಣಿಗಳಿರುವುದು ನಿಶ್ಚಯ

ವಾಗಿಯೂ ಆಶ್ಚರ್ಯ. ಅಂದರೆ ಇಂದ್ರಿಯಗಳಲ್ಲಿರುವ ಬಹಿರಾಕರ್ಷಣಾಶಕ್ತಿಯು ಆಶ್ಚರ್ಯ ಕರವಾದುದೆಂಬ ತತ್ವ.

ಶ್ರೀರಾಮನು ರಾವಣನ ಶಿರಸ್ಸುಗಳನ್ನು ಒಂದೊಂದನ್ನಾಗಿ ಕತ್ತರಿಸುತ್ತ ನೂರೊಂದು ತಲೆಗಳನ್ನು ಕತ್ತರಿಸಿದ ತತ್ವವೇನೆಂದರೆ, ಇಂದ್ರಿಯಗಳ ಆಕರ್ಷಣೆಗಳ ಶಕ್ತಿಗಳಲ್ಲಿ ನೂರೊಂದು ದುರ್ಗುಣಗಳಿರುತ್ತವೆಂಬ ತತ್ವವನ್ನು ಸೂಚಿಸುವುದು. ಈ ನೂರೊಂದು ದುರ್ಗುಣಗಳ ಸ್ವರೂಪಗಳೇ ದುಕಾರದಿಂದ ಪ್ರಾರಂಭವಾಗುವ ನೂರೊಂದುಜನ ಕೌರವರ ನಾಮಧೇಯಗಳ ತತ್ವದಲ್ಲಿರುವುದು. ಅಲ್ಲದೆ ನೂರೊಂದು ಜನ ಕೌರವರ ದುಸ್ವಭಾವದ ಶಕ್ತಿಗಳೆಲ್ಲ, ಈ ಪಾಪಿಷ್ಠನಾದ ರಾವಣನೊಬ್ಬನಲ್ಲಿಯೇ ಅಡಗಿರುವುವೆಂಬ ಸೂಚನೆಯು ತತ್ವಕ್ಕೆ, ಶ್ರೀರಾಮನು ರಾವಣನ ನೂರೊಂದು ತಲೆಗಳನ್ನು ಕತ್ತರಿಸಿರುವುದಾಗಿರುವುದು. ಅಲ್ಲದೆ ಶ್ರೀರಾಮನು ಅವತಾರವಮಾಡಿ ಮೋಕ್ಷಮಾರ್ಗದ ತತ್ವವೇ ಹೀಗೆಂದು ನಿರ್ಣಯಿಸಿ ಇರುವಂತೆ, ಶ್ರೀರಾಮನೇ ಕೃಷ್ಣಾವತಾರಮಾಡಿ ಧರ್ಮಾಧರ್ಮಸ್ವರೂಪಗಳ ತತ್ವವನ್ನು ನಿರ್ಣಯಿಸಿರುವುದಲ್ಲದೆ ಧರ್ಮಕ್ಕೆ ್ರಯವಾಗಲೂ ಜಯವಿರಲೆಂಬ ನಿರ್ಣಯವನ್ನು ಮಾಡಿರುವನು. ಶ್ರೀಕೃಷ್ಣಾವತಾರದಲ್ಲಿ ತಾನು ಧರ್ಮಮಾರ್ಗದ ತತ್ವದವರಾದ ಪಾಂಡ ವರಿಗೆ ಪ್ರೇರಕನಾಗಿದ್ದುಕೊಂಡು ಪಾಂಡವರಿಂದಲೆ ಅಧರ್ಮದ ತತ್ವದವರಾದ ಕೌರವ ರನ್ನು ನಿಗ್ರಹಮಾಡಿಸುವ ಸೌಕರ್ಯಕ್ಕೋಸ್ಕರ, ಶ್ರೀರಾಮನು ರಾವಣನ ನೂರೊಂದು ತಲೆ ಗಳನ್ನು ಕತ್ತರಿಸಿದನೆಂಬ ತತ್ವಾರ್ಥವನ್ನೂ ಮಾಡಬಹುದು.

ರಾವಣನ ತಲೆಗಳನ್ನು ಛೇದಿಸಿದರೂ ಚಿಗುರುತ್ತಲೆ ಇರುವುದನ್ನೂ, ಮಾರೀಚ, ಖರಾದಿಗಳನ್ನು ಕೊಂದ ಬಾಣಗಳು ನಿರರ್ಥಕವಾದುದನ್ನೂ ನೋಡಿ ಶ್ರೀರಾಮನು ಚಿಂತಿ ಸುತ್ತಿದ್ದನೆಂದರೆ—ವಾಲಿ, ಮಾರೀಚಾದಿಗಳನ್ನೆಲ್ಲ ಕೊಂದ ಬಾಣವು ಬುದ್ಧಿಯ ವಿವೇಚನೆ ಮತ್ತು ದೇಹದಲ್ಲಿ ಬಾಲ್ಯದಲ್ಲಿದ್ದ ಜಡತ್ವವನ್ನು ನಿವಾರಣೆಮಾಡುವಂತಹ ಬುದ್ಧಿವೃತ್ತಿಯ ಪ್ರಸರಣಾಶಕ್ತಿಯಾಗಿತ್ತೇ ಹೊರತು, ಏಕಾಗ್ರತೆಯನ್ನುಂಟುಮಾಡುವ ಅಥವಾ ಏಕಾಕಾರ ವೃತ್ತಿಯನ್ನುಂಟುಮಾಡುವಂತಹವುಗಳಾಗಿರಲಿಲ್ಲ. ಏಕಾಕಾರವನ್ನುಂಟುಮಾಡಬೇಕಾದರೆ, ಬುದ್ಧಿವೃತ್ತಿಯು ಕುಂತವೆಂಬ ಆಯುಧದ ಅಗ್ರಭಾಗದಲ್ಲಿರುವ ಅಥವಾ ದರ್ಭೆಯ ಅಗ್ರ ಭಾಗದಲ್ಲಿರುವಂತೆ ತೀವ್ರತಮವಾಗಿ ಸೂಕ್ಷ್ಮವಾದ ಮೊನೆಯುಳ್ಳುದ್ದಾಗಬೇಕು. ರಜೋ ಗುಣ ಅಥವಾ ಅವಿದ್ಯಾಪ್ರಧಾನಶಕ್ತಿಯನ್ನು ನಿಗ್ರಹಿಸಬೇಕಾದರೆ ಬುದ್ಧಿವೃತ್ತಿಯು ಸೂಕ್ಷ್ಮ ವಾದ ತುದಿಯುಳ್ಳ ಕುಂತಾಯುಧದ ಅಗ್ರದಂತೆ ಇರಬೇಕು. ಅಂದರೆ ಸೂಕ್ಷ್ಮವಾದ ತುದಿಯುಳ್ಳ ಕುಂತಾಗ್ರವು, ಹೇಗೆ ಶತ್ರುವಿನಲ್ಲಿ ತಡೆಯಿಲ್ಲದೆ ನಾಟಿಕೊಂಡು ಶತ್ರು ವಿನೊಳಗೆ ಪ್ರವೇಶಮಾಡಿ ಹೊರಗಡೆಗೆ ಕಾಣುವುದಿಲ್ಲವೊ, ಹಾಗೆ ಬುದ್ಧಿವೃತ್ತಿಯು ಅತ್ಯಂತ ಸೂಕ್ಷ್ಮವಾಗಿ ಧ್ಯೇಯಸ್ವರೂಪವಾದ ಪರಮಾತ್ಮನಲ್ಲಿ ಲೀನವಾಗಿ ಹೊರಗೆ ಕಾಣದಂತೆ

ಇರುವ ಸ್ವರೂಪವನ್ನು ಪಡೆಯಬೇಕು. ಅಂದರೆ ತ್ರಿಪುಟಿಯಲ್ಲಿ ಜ್ಞಾತೃವು ಜ್ಞೇಯದಲ್ಲಿ ಲೀನವಾಗಿ ಜ್ಞಾತೃವೂ ಇಲ್ಲದಂತಾಗಬೇಕು. ಈ ರೀತಿಯಾಗಲು ಧ್ಯೇಯಸ್ವರೂಪವಾದ ಪರಮಾತ್ಮನೇ ನಾನೆಂಬದಾಗಿ ಪರಮಾತ್ಮನಲ್ಲಿ ಲೀನವಾಗಲು, ಕುಂತಾಗ್ರದಂತೆ ಇರುವ "ಅಹಂ ಬ್ರಹ್ಮಾಸ್ಮಿ" ಎಂಬ ವೃತ್ತಿಯು ಬುದ್ಧಿಗೆ ಇದ್ದರೇನೆ, ಅವಿದ್ಯಾಪ್ರಧಾನಶಕ್ತಿಯ ತತ್ವದಲ್ಲಿರುವ ರಾವಣನನ್ನು ನಿಗ್ರಹಿಸಲು ಸಾಧ್ಯವಾಗುವುದು. ಅಹಂಬ್ರಹ್ಮಾಸ್ಮಿ ಎಂಬ ಅಸ್ತ್ರವು ಬುದ್ಧಿವೃತ್ತಿಗಿಲ್ಲದಿದ್ದರೆ, ಖಂಡಿತವಾಗಿಯೂ ಅವಿದ್ಯಾಪ್ರಧಾನವಾದ ವಿಕ್ಷೇಪಶಕ್ತಿಯನ್ನು ನಿಗ್ರಹಿಸಲು ಸಾಧ್ಯವಿಲ್ಲ.

ಕಾರಣವೇನೆಂದರೆ—ರಜೋಗುಣ ಅಥವಾ ವಿಕ್ಷೇಪಶಕ್ತಿಗೆ ಮೂಲಸ್ಥಾನವು ಆಕಾಶದಲ್ಲಿ ಉದಯಿಸುವ ಶಬ್ದವಾದುದರಿಂದ, ಅಂದರೆ ಶಬ್ದದಲ್ಲಿಯೂ ವಿಕ್ಷೇಪವಿರುವುದರಿಂದ, ಸಮಾಧಿಯ ಅನುಷ್ಠಾನದ ಅಧಿಕಾರಿಯಲ್ಲಿ ಕೇಳಿಬರುವ "ಓಂ"ಕಾರನಾದವು ಅಡಗುವ ಪರ್ಯಂತರ ವಿಕ್ಷೇಪಶಕ್ತಿಯು ನಿಗ್ರಹವಾಗುವುದಿಲ್ಲ. ತಮೋಗುಣದ ಅಂಧಕಾರವು ಹೇಗೆ ಬೆಳಕಿನಿಂದ ನಿವೃತ್ತಿಯಾಗುವುದೋ ಹಾಗೆ "ಓಂ" ಕಾರನಾದವು ಅಡಗುವವರೆಗೆ ವಿಕ್ಷೇಪಶಕ್ತಿಯು ನಿವೃತ್ತಿಯಾಗುವುದಿಲ್ಲ. ಒಳಗಡೆ ಕೇಳುವ ನಾದವಡಗಬೇಕಾದರೆ ಏಕಾಗ್ರತೆ ಬರಬೇಕು. ಏಕಾಗ್ರತೆ ಬರಬೇಕಾದರೆ, ತತ್ವಮಸಿ ಮುಂತಾದ ಮಹಾವಾಕ್ಯಗಳಿಂದ ಜನ್ಯವಾದ ನಾನೇ ಬ್ರಹ್ಮನೆಂಬ ದೃಢವಾದ ಜ್ಞಾನವನ್ನು ಪ್ರಯೋಗಮಾಡಿದರೆ, ವಿಕ್ಷೇಪಶಕ್ತಿಯು ನಶಿಸಿ ಆತ್ಮಸಾಕ್ಷಾತ್ಕಾರವಾಗುವುದು. ಅಂದರೆ ಶ್ರೀರಾಮನು ರಾವಣನನ್ನು ಕೊಲ್ಲಲು ಸರಿಯಾದ ಬಾಣಪ್ರಯೋಗವನ್ನು ಇನ್ನೂ ಮಾಡಿಲ್ಲ. ಅಂದರೆ ಇಂದ್ರಿಯಗಳ ಆಕರ್ಷಣೆ ಮತ್ತು ವಾಸನಾವೃತ್ತಿಗಳನ್ನು ನಿಗ್ರಹಮಾಡಬೇಕಾದರೆ, ಬುದ್ಧಿವೃತ್ತಿಗೆ ಸ್ಥಿರತ್ವ ಅಥವಾ ಏಕಾಗ್ರತೆಯು ಇನ್ನೂ ಉಂಟಾಗಿಲ್ಲ. ಇದನ್ನು ಹೊಂದುವುದೇ ತತ್ವದರ್ಶನಕ್ಕೆ ಪರಮಗತಿಯೆಂದು ಕಠೋಪನಿಷತ್ತಿನಲ್ಲಿ,

ಯದಾಪಂಚಾವತಿಷ್ಠಂತೆ ಜ್ಞಾನಾನಿ ಮನಸಾಸಹ |
ಬುದ್ಧಿಶ್ಚ ನವಿಚೇಷ್ಟೇತ ತಾಮಾಹುಃಪರಮಾಂಗತಿಮ್ ||

ತಾ|| ಯಾವಾಗ ವಿಷಯಭೋಗೇಚ್ಛೆಯಿಲ್ಲದೆ ಮನಸ್ಸು ಪರಮವೈರಾಗ್ಯದಲ್ಲಿ ನಿಲ್ಲುವುದೋ ಸಂಕಲ್ಪಾದಿ ವೃತ್ತಿಗಳಿಂದ ವಿಮುಖವಾಗಿರುವ ಬುದ್ಧಿಯು ಸ್ಥೈರ್ಯವನ್ನು ಯಾವಾಗ ಪಡೆಯುವುದೋ ಆ ಸ್ಥಿತಿಯೇ ಪರಮಾತ್ಮದರ್ಶನಕ್ಕೆ ಪರಮಗತಿಯೆಂದು ಅನುಭವಶಾಲಿಗಳು ಹೇಳುತ್ತಾರೆ, ಎಂದು ಹೇಳಿರುವುದು. ಆದುದರಿಂದ ಬುದ್ಧಿಗೆ ಏಕಾಗ್ರತೆ ಅಥವಾ ಸ್ಥಿರತ್ವವು ಇನ್ನೂ ಬಂದಿಲ್ಲವಾದುದರಿಂದ, ಶ್ರೀರಾಮನು ರಾವಣನ ತಲೆಗಳನ್ನು ಕತ್ತರಿಸುತ್ತಿದ್ದರೂ ಪುನಃ ಚಿಗುರುತ್ತಿದ್ದುದು.

## ೩೧ನೆಯ ಪ್ರಕರಣ.

**ರಾಮರಾವಣರ ಯುದ್ಧವು ಕೊನೆ ಮುಟ್ಟದಿರುವುದನ್ನು ನೋಡಿ ಮಾತಲಿಯು ಶ್ರೀರಾಮನನ್ನು ಕುರಿತು ರಾವಣನ ಸಂಹಾರಕ್ಕಾಗಿ ಬ್ರಹ್ಮಾಸ್ತ್ರ ಪ್ರಯೋಗಮಾಡೆಂದು ಹೇಳಿದುದು.**

**ಸಮಾಧಿಯುಲ್ಲುಂಟಾಗಬೇಕಾಗಿರುವ ಏಕಾಗ್ರತಾ ಪರಿಣಾಮದ ವಿಚಾರ. "ಅಹಂ ಬ್ರಹ್ಮಾಸ್ಮಿ" ಎಂಬ ಜ್ಞಾನಾಸ್ತ್ರದಿಂದಲೇ ವಿಕ್ಷೇಪ ಶಕ್ತಿಯು ನಿಗ್ರಹವಾಗಬೇಕೆಂಬ ವಿಚಾರ.**

**ರಾ||** ಶ್ರೀರಾಮನಿಂದ ಕತ್ತರಿಸಲ್ಪಟ್ಟ ರಾವಣನ ಶಿರಸ್ಸುಗಳು ಚಿಗುರುತ್ತಲೇ ಇದ್ದರೂ ಶ್ರೀರಾಮನು ರಾವಣನೊಡನೆ ಯುದ್ಧಮಾಡುತ್ತಲೇ ಇದ್ದನು. ಹೀಗೆ ಯುದ್ಧಮಾಡುತ್ತಿರುವಾಗ, ಕಾಲೋಚಿತ ಬುದ್ಧಿಯುಳ್ಳವನಾಗಿಯೂ, ಇಂದ್ರನ ಸಾರಥಿಯಾಗಿಯೂ ಇರುವ ಮಾತಲಿಯು ಶ್ರೀರಾಮನನ್ನು ಕುರಿತು "ಎಲೈ ಶೂರನೇ ನೀನು ಅಜ್ಞಾನಿಯಂತೆ ರಾವಣನನ್ನು ಅನುಸರಿಸಿಕೊಂಡು ಅವನಂತೆಯೇ ಅಸ್ತ್ರಕ್ಕೆ ಪ್ರತ್ಯಸ್ತ್ರವನ್ನು ಬಿಡುತ್ತ ವ್ಯರ್ಥವಾಗಿ ಕಾಲಕಳೆಯುತ್ತಿರುವೆ. ಮಹಾಪ್ರಭೋ! ದೇವತೆಗಳು ಹೇಳಿದ್ದ ಈತನ ವಿನಾಶ ಕಾಲವು ಈಗ ಪ್ರಾಪ್ತವಾಗಿರುವುದು. ಆದುದರಿಂದ ಈಗಲೇ ನೀನು ರಾವಣನ ವಧೆಗಾಗಿ ಬ್ರಹ್ಮಾಸ್ತ್ರವನ್ನು ಪ್ರಯೋಗಿಸು" ಎಂಬದಾಗಿ ಜ್ಞಾಪಿಸಿದನು.

**ತತ್ವ||** ಮಾತಲಿಯೆಂದರೆ "ಓಂ" ಕಾರನಾದಾನುಸಂಧಾನದಲ್ಲಿ ಆಸಕ್ತವಾಗಿ ನಾದವನ್ನೇ ಹಿಂಬಾಲಿಸಿಕೊಂಡು ಹೋಗುವ ಕರ್ತವ್ಯಕ್ಕೆ ಮಾತಲಿಯು ತತ್ವವೆಂದು, ಶ್ರೀರಾಮನು ಇಂದ್ರನ ರಥವನ್ನು ಆರೋಹಣಮಾಡಿದ ತತ್ವದಲ್ಲಿ ತಿಳಿಸಿರುತ್ತಷ್ಟೆ! ಈಗ ಮಾತಲಿಯು ಅರಿಕೆಮಾಡಿದ ವಿಚಾರದ ತತ್ವವೇನೆಂದರೆ—ವಿಕ್ಷೇಪಶಕ್ತಿಯಿರುವ ನಾದವನ್ನನುಸರಿಸಿಕೊಂಡಿರುವ ತತ್ವವೇ, ರಾಮರಾವಣರು ಅಸ್ತ್ರಕ್ಕೆ ಪ್ರತ್ಯಸ್ತ್ರವನ್ನು ಅನುಸಂಧಾನಮಾಡಿಕೊಂಡಿರುವ ಕಾಲವಾಗಿರುವುದು.

ದೇವತೆಗಳು [illegible] ರಾವಣನ ವಿನಾಶಕಾಲವು ಈಗ ಪ್ರಾಪ್ತವಾಗಿರುವುದೆಂದು ಮಾತಲಿಯು ಶ್ರೀರಾಮನಿಗೆ ಅರಿಕೆಮಾಡಿಕೊಂಡನೆಂದರೆ—ನಾದವನ್ನೇ ಅನುಸರಿಸಿಕೊಂಡು ಹೋಗುವ ಕರ್ತವ್ಯದ ಅವಧಿಯು ಕೊನೆಮುಟ್ಟುವ ಕಾಲವು ಪ್ರಾಪ್ತವಾಗುತ್ತ ಬಂತೆಂಬ ತತ್ವವಾಗಿರುವುದು. ಅಂದರೆ ಇದುವರೆಗೂ ಒಳಗಡೆ ಕೇಳಿ ಬರುತ್ತಿದ್ದ ನಾದವು ಸೂಕ್ಷ್ಮವಾಗಿ ನಾದವಡಗುವಕಾಲ ಪ್ರಾಪ್ತವಾಗಿರುವುದೆಂಬ ತತ್ವವು. "ಓಂ"ಕಾರನಾದವಡಗಿಕಳೆಗೆ ತಿರುಗುವ ಕಾಲದಲ್ಲಿಯೇ ಅವಿದ್ಯಾಪ್ರಧಾನಚೈತನ್ಯವಾಗಿಯೂ, ವಾಸನಾವೃತ್ತಿ ಮತ್ತು ಇಂದ್ರಿಯಗಳ ಆಕರ್ಷಣಾಶಕ್ತಿಸ್ವರೂಪವಾಗಿಯೂ, ಇರುವ ವಿಕ್ಷೇಪಶಕ್ತಿಯು

ನಿಗ್ರಹಿಸಲ್ಪಡಬೇಕಾಗಿರುವುದೇ, ದೇವತೆಗಳು ಹೇಳಿದ್ದ ರಾವಣನ ವಿನಾಶಕಾಲ ಒದಗಿರುವ ತತ್ವವಾಗಿರುವುದು.

ಮಾತಲಿಯು ರಾವಣನನ್ನು ವಧೆಮಾಡಲು ಬ್ರಹ್ಮಾಸ್ತ್ರವನ್ನು ಪ್ರಯೋಗಮಾಡೆಂದು ಹೇಳಿದುದರ ತತ್ವವೇನೆಂದರೆ—ಬುದ್ಧಿವೃತ್ತಿಯು ಬಾಹ್ಯವ್ಯಾಪಾರದಲ್ಲಿದ್ದಾಗ ಅನೇಕ ವಿಷಯಗಳ ಆಕಾರವಾಗಿ ವಿಶಿಷ್ಟಜ್ಞಾನ ಅಥವಾ ವಿಜ್ಞಾನವೆನಿಸಿಕೊಳ್ಳುವುದು. ಸಮಾಧಿಯ ಅಭ್ಯಾಸಪ್ರಾರಂಭವಾದ ಮೇಲೂ ವಿಜ್ಞಾನ ಹೋಗಿರುವುದಿಲ್ಲ. ಬಾಹ್ಯದಲ್ಲಿನ ವಿಷಯಜ್ಞಾನಗಳಲ್ಲಿ ವಿರಕ್ತಿಯಿಂದ ಸಮಾಧಿಯನ್ನು ಅಭ್ಯಾಸಮಾಡುತ್ತಿದ್ದರೂ, ಸಮಾಧಿಯಲ್ಲಿ ಬಿಂದು ಮತ್ತು ನಾದಗಳ ಸ್ವರೂಪವಾದ ವಿಜ್ಞಾನವಿದ್ದೇ ಇರುವುದು.

"ನಾದಕೋಟಿಸಹಸ್ರಾಣಿ ಬಿಂದುಕೋಟಿಶತಾನಿಚ"

ಎಂಬ ಶ್ರುತಿವಚನಾನುಸಾರವಾಗಿ, ಸಮಾಧಿಯ ಅನು... ದಿಂದ ಬುದ್ಧಿವೃತ್ತಿಯಿಂದ ಧರಿಸಲ್ಪಟ್ಟ ಬಿಂದುನಾದಗಳು ಛಿದ್ರವಾಗಿ, ಅನೇಕಾನೇಕ ಸಂಖ್ಯೆಗಳ ಬಿಂದುನಾದಗಳನ್ನು ಧರಿಸಿಕೊಳ್ಳಬೇಕಾಗುವುದು. ಅಂದರೆ ಅಂತರ್ಮುಖದಲ್ಲಿ ಕಾಣುವ ತೇಜಸ್ಸು ಮತ್ತು ನಾದಗಳ ಜ್ಞಾನವು ವಿಜ್ಞಾನಕ್ಕೆ ಸೇರಿರುವುದು. ಅಂತರ್ಮುಖದಲ್ಲಿ ಕಾಣುವ ತೇಜಸ್ಸು ವಿಜ್ಞಾನವೆನಿಸುವುದರಿಂದಲೇ ಜ್ಞಾತೃ, ಜ್ಞಾನ, ಜ್ಞೇಯಗಳೆಂಬ ತ್ರಿಪುಟಿಯು ಸ್ವರೂಪವೆನಿಸಿಕೊಳ್ಳುವುದು.

ಇಂತಹ ವಿಜ್ಞಾನದಲ್ಲಿರುವ "ಅಹಂ"ಎನ್ನುವುದನ್ನು ತಪ್ಪಿಸಿಕೊಳ್ಳಬೇಕಾದರೆ ಪರಮಾತ್ಮನೇ ನಾನೆಂಬ ಜ್ಞಾನವು ದೃಢವಾಗಿ ಅನುಭವಕ್ಕೆ ಬಂದಲ್ಲಿ, ವಿಜ್ಞಾನವು ಹೋಗಿ ಜ್ಞಾನವಾಗುತ್ತದೆ. ಈ "ಅಹಂ" ಎನ್ನುವುದು ನಾಮರೂಪಾತ್ಮಕವಾದ ವಿಶಿಷ್ಟದೊಡನೆ ಸೇರಿ ವಿಜ್ಞಾನವೆನಿಸಿಕೊಂಡಿರುವುದು. ನಾಮರೂಪಾತ್ಮಕವು ಖಂಡಿತವಾಗಿಯೂ ನಾನಲ್ಲವೆನ್ನುವ, ಪರಬ್ರಹ್ಮನೇನಾನೆಂಬುವ "ಅಹಂಬ್ರಹ್ಮಾಸ್ಮಿ"ಎಂಬ ಜ್ಞಾನಾಸ್ತ್ರವನ್ನು ಪ್ರಯೋಗಮಾಡಬೇಕಾಗಿರುವುದರ ತತ್ವವೇ, ಮಾತಲಿಯು ರಾವಣನ ವಧೆಗಾಗಿ ಬ್ರಹ್ಮಾಸ್ತ್ರವನ್ನು ಪ್ರಯೋಗಮಾಡೆಂದು ಶ್ರೀರಾಮನಿಗೆ ಜ್ಞಾಪಕಕೊಟ್ಟದ್ದರ ತತ್ವವಾಗಿರುವುದು.

ಅಧಿಕಾರಿಯು, ಇದುವರೆಗೆ ವಿಜ್ಞಾನ ಅಥವಾ ಸಗುಣಬ್ರಹ್ಮಸ್ವರೂಪವಾದ ಬಿಂದುನಾದ ಮತ್ತು ಜ್ಯೋತಿಗಳಲ್ಲಿ, ಸೋಹಂಭಾವದಿಂದ ಸಮಾಧಿಯ ಅಭ್ಯಾಸಮಾಡಿಕೊಂಡು, ಬಂದಿರುವನು. ಬಿಂದುನಾದಗಳಲ್ಲಿ ಸೋಹಂಭಾವನೆಯಿಂದ ಸಮಾಧಿಯ ಅಭ್ಯಾಸಮಾಡದಿದ್ದರೆ, ರಾವಣನ ಮೇಲೆ ಬ್ರಹ್ಮಾಸ್ತ್ರಪ್ರಯೋಗಮಾಡುವ ಈ ಸೋಪಾನವನ್ನು ಕೂಡ ಹೊಂದುವುದು ಅಸಾಧ್ಯ. ವಾಸನಾವೃತ್ತಿ ಮತ್ತು ಇಂದ್ರಿಯಗಳ ಆಕರ್ಷಣೆಗಳಿರುವ ಪರ್ಯಂತರ ವಿಜ್ಞಾನವು ನಶಿಸುವುದಿಲ್ಲ. ವಿಕ್ಷೇಪಶಕ್ತಿಯನ್ನು ನಿಗ್ರಹಿಸಲು "ಅಹಂ

ಬ್ರಹ್ಮಾಸ್ಮಿ" ಎಂಬುದನ್ನೇ ತನ್ನವೃತ್ತಿಯ ಅಗ್ರಭಾಗದಲ್ಲಿಟ್ಟುಕೊಂಡು ಏಕಾಗ್ರತೆಯುಂಟಾಗುವಂತೆ ಸಮಾಧಿಯಲ್ಲಿ ಮುಳುಗಿದರೆ, ಅವಿದ್ಯಾಪ್ರಧಾನಶಕ್ತಿಯು ನಿಗ್ರಹವಾಗುವುದು. ಈ ತತ್ವಾರ್ಥವನ್ನನುಸರಿಸಿಯೆ ಮಾತಲಿಯು ಅಸ್ತ್ರಕ್ಕೆ ಪ್ರತ್ಯಸ್ತ್ರವನ್ನು ಅನುಸಂಧಾನ ಮಾಡುವ ಕಾಲವು ಮುಗಿಯುತ್ತಾ ಬಂತೆಂದೂ, ರಾವಣನನ್ನು ವಧೆಮಾಡಲು ಬ್ರಹ್ಮಾಸ್ತ್ರವನ್ನು ಪ್ರಯೋಗಮಾಡೆಂದೂ ಹೇಳಿದುದರ ತತ್ವವಾಗಿರುವುದು. ಇದೇ ಅರ್ಥಕ್ಕೆ ಪತಂಜಲಿಮಹರ್ಷಿಗಳು ಯೋಗಸೂತ್ರದಲ್ಲಿ,

ಸರ್ವಾರ್ಥೈಕಾಗ್ರತಯೋಃ ಕ್ಷಯೋದಯೌ ಚಿತ್ತಸ್ಯ ಸಮಾಧಿಪರಿಣಾಮಃ ||

ತಾ|| ನಾನಾ ವಿಷಯಗಳ ಆಕಾರವಾಗಿ ಪರಿಣಮಿಸುತ್ತಿರುವ ಬುದ್ಧಿವೃತ್ತಿಯು, ಸರ್ವಾರ್ಥತಾ ಎನ್ನಲ್ಪಡುವುದು. ಈ ಸರ್ವಾರ್ಥತಾಪರಿಣಾಮದ ಲಯವಾಗಿ ಏಕಾಗ್ರತಾ ಪರಿಣಾಮದ ಉದಯವಾಗುತ್ತಿರಲು ಸಮಾಧಿಪರಿಣಾಮವೆನಿಸಿಕೊಳ್ಳುವುದು. ಎಂದು ಹೇಳಿರುವರು.

ಮೇಲಿನ ಪತಂಜಲಿಮಹರ್ಷಿಗಳ ವಾಕ್ಯದಂತೆ, ನಾಮರೂಪಾತ್ಮಕವಲ್ಲದ ಜ್ಞಾತೃ, ಜ್ಞಾನ, ಜ್ಞೇಯಗಳೆಂಬ ತ್ರಿಪುಟಿರಾಹಿತ್ಯವಾಗಲು ನಾನೇ ಬ್ರಹ್ಮನೆಂಬದಾಗಿ ಸಮಾಧಿಯಲ್ಲಿ ಮುಳುಗುವುದರ ಮೂಲಕ ವಾಸನಾವೃತ್ತಿಯನ್ನು ಲಯಗೊಳಿಸಿ, ನಿರ್ವಿಕಲ್ಪಸಮಾಧಿಯು ಪರಿಣಾಮವನ್ನು ಹೊಂದಬೇಕು. ಮಾತಲಿಯು ಶ್ರೀರಾಮನಿಗೆ ಅರಿಕೆಮಾಡಿಕೊಂಡ ತತ್ವಾರ್ಥಕ್ಕೆ ಅನುಸಾರವಾಗಿ ಅನ್ನಪೂರ್ಣೋಪನಿಷತ್ತಿನಲ್ಲಿ,

ಹೇ ನಿದಾಘ ಮಹಾಪ್ರಾಜ್ಞ ನಿರ್ವಾಸನಮನಾಭವ |
ಬಲಾಚ್ಛೇತಸ್ಸಮಾದಾಯ ನಿರ್ವಿಕಲ್ಪಮನಾಭವ ||
ಯಾವದ್ವಿಲೀನಂನಮನೋ ನತಾವದ್ವಾಸನಾಕ್ಷಯಃ |
ಮುಕ್ತಾಹಂ ಕೃತಿರಭ್ಯಾಸಾ ಚ್ಛಾಂತಾಭವತಿವಾಸನಾ ||

ತಾ|| ಎಲೈ ಮಹಾಪ್ರಾಜ್ಞನೆ! ಬುದ್ಧಿಯನ್ನು ನಿರ್ವಾಸನೆಯಾದದ್ದನ್ನಾಗಿ ಮಾಡು. ಪ್ರಯತ್ನಪೂರ್ವಕವಾಗಿ ಸಮಾಧಿಯಲ್ಲಿ ಕಾಣುವ ಜ್ಯೋತಿಯು ಕಾಣದಂತೆ ನಿರ್ವಿಕಲ್ಪವಾದದ್ದನ್ನಾಗಿ ಮಾಡು. ಬುದ್ಧಿವೃತ್ತಿಯು ಎಲ್ಲಿಯವರೆಗೆ ಏಕಾಕಾರವಾಗಿ ಪರಮಾತ್ಮನಲ್ಲಿ ಲೀನವಾಗಿ ತ್ರಿಪುಟಿರಾಹಿತ್ಯವಾಗುವುದಿಲ್ಲವೋ ಅಲ್ಲಿಯವರೆಗೆ ವಾಸನಾಕ್ಷಯವಾಗುವುದಿಲ್ಲ. ನಾನೇ ಬ್ರಹ್ಮನೆಂಬ ಅಭ್ಯಾಸದಿಂದ "ಅಹಂ" ಪ್ರತ್ಯಯವು ಆತ್ಮನಲ್ಲಿ ಲೀನವಾಗುವುದಲ್ಲದೆ ವಾಸನೆಯೂ ಶಾಂತವಾಗುವುದು ಎಂಬದಾಗಿ ಹೇಳಿರುವುದು.

ಮಾತಲಿಯು ಶ್ರೀರಾಮನಿಗೆ ಅರಿಕೆಮಾಡಿದ ತತ್ವಕ್ಕೆ, ಈ ಮೇಲಿನ ಶ್ರುತಿವಾಕ್ಯವು ಅತ್ಯಂತ ಮುದ್ದಾಗಿ ಅನ್ವಯವಾಗಿರುವುದು. ಈ ಮೇಲಿನ ಶ್ರುತಿವಾಕ್ಯಕ್ಕೆ ಅನುಸಾರವಾಗಿ

ಸಮಾಧಿಯಲ್ಲಿ ಒಳಗಡೆ ನಾದ ಮತ್ತು ಜ್ಯೋತಿಯು ಕುಂದುತ್ತಾ ಬಂದಂತೆ, ಮುತ್ತು ಗಳನ್ನು ತೆಗೆಯುವವರು ಸಮುದ್ರದ ಆಳವು ಗೊತ್ತಿಲ್ಲದಿದ್ದರೂ ಕಣ್ಣುಮುಚ್ಚಿ ಕೊಂಡು ಹೇಗೆ ಧೈರ್ಯವಾಗಿ ಮುಳುಗಿ ತಳವನ್ನು ಸೇರುವರೋ, ಹಾಗೆ ನಾನೇ ಬ್ರಹ್ಮ ನೆಂದು ಈ ಸೋಪಾನವನ್ನು ಹತ್ತಿದ ಅಧಿಕಾರಿಯು, ಸಮಾಧಿಯಲ್ಲಿ ಮುಳುಗಿದರೆ ಅವಿದ್ಯಾಪ್ರಧಾನವಾದ ವಿಕ್ಷೇಪಶಕ್ತಿಯು ನಿಗ್ರಹವಾಗಿ ಆತ್ಮಸಾಕ್ಷಾತ್ಕಾರವಾಗುವುದು. ಮಾತಲಿಯು ಶ್ರೀರಾಮನಿಗೆ ಅರಿಕೆಮಾಡಿದ ತತ್ವಾರ್ಥಕ್ಕೆ ಅನುಸಾರವಾಗಿ ಶ್ರೀಶಂಕರ ಭಗವತ್ಪಾದಾಚಾರ್ಯರವರು ಯೋಗತಾರಾವಳಿಯಲ್ಲಿ,

ಉನ್ಮನ್ಯವಸ್ಥಾಧಿಗಮಾಯ ವಿದ್ವನ್ ಉಪಾಯಮೇಕಂ ತವನಿರ್ದಿಶಾಮಃ|
ಪಶ್ಯನ್ನುದಾಸೀನತಯಾ ಪ್ರಪಂಚಂ ಸಂಕಲ್ಪಮುನ್ಮೂಲಯಸಾವಧಾನಃ|
ಪ್ರಸಹ್ಯ ಸಂಕಲ್ಪ ಪರಂಪರಾಣಾಂ ಸಂಭೇದನೇ ಸಂತತ ಸಾವಧಾನಂ|
ಆಲಂಬನಾಶಾದಪಚೀಯಮಾನಂ ಶನೈಶ್ಶನೈಶ್ಶಾಂತಿ ಮುಪೈತಿಚೇತಃ|
ವಿಶ್ರಾಂತಿಮಾಸಾದ್ಯ ತುರೀಯತಲ್ಪೇ ವಿಶ್ವಾದ್ಯವಸ್ಥಾ ತ್ರಿತಯೋಪರಿಸ್ಥೇ|
ಸಂವಿನ್ಮಯೀಂಕಾಮಪಿಸರ್ವಕಾಲಂ ನಿದ್ರಾಂಸಖೇನಿರ್ವಿಶನಿರ್ವಿಕಲ್ಪಾಂ|

ತಾ|| ಎಲೈ ವಿದ್ವಾಂಸನೆ! ಉನ್ಮನ್ಯವಸ್ಥೆಗೆ ನಿನಗೊಂದುಪಾಯವನ್ನು ಹೇಳುತ್ತೇನೆ. ಪ್ರಪಂಚದ ಕಡೆಗೆ ಉದಾಸೀನತ್ವವನ್ನು ಹೊಂದಿ ಬುದ್ಧಿವೃತ್ತಿಯನ್ನು ಅಹಂಬ್ರಹ್ಮಾಸ್ಮಿಯ ಮೂಲಕ ಸಂಕಲ್ಪರಹಿತವನ್ನಾಗಿ ಮಾಡಿಕೊ. ಬಲಾತ್ಕಾರವಾಗಿ ಸಂಕಲ್ಪಪರಂಪರೆಗಳ ನಿರೋಧದಿಂದ, ಏಕಾಗ್ರತೆಗೆ ತಿರುಗಿದ ಬುದ್ಧಿವೃತ್ತಿಯು ಆಲಂಬನವಿಲ್ಲದ್ದರಿಂದ ಕ್ರಮಕ್ರಮವಾಗಿ ಶಾಂತಿಯನ್ನು ಪಡೆಯುವುದು. ಅಂದರೆ ಆತ್ಮನಲ್ಲಿ ಲೀನವಾಗಿ ಆತ್ಮಾನುಭವವುಂಟಾಗುವುದು

ವಿಶ್ವ, ತೈಜಸ, ಪ್ರಾಜ್ಞಗಳೆಂಬ ಮೂರು ಅವಸ್ಥೆಗಳಿಗಿಂತ ಮೇಲಿರುವ ತುರೀಯವಾದ ನಿರ್ವಿಕಲ್ಪಸಮಾಧಿಯಲ್ಲಿ ವಿಶ್ರಾಂತಿಯನ್ನು ಹೊಂದಿ, ಅನಿರ್ವಾಚ್ಯವೂ ವಿಕಲ್ಪ ರಹಿತವೂ ಜ್ಞಾನಸ್ವರೂಪವೂ ಆದ ಯೋಗನಿದ್ರೆಯನ್ನು ಸರ್ವಕಾಲದಲ್ಲಿಯೂ ಹೊಂದು ವವನಾಗು, ಎಂಬುದಾಗಿ ಹೇಳಿರುವರು.

ಶ್ರೀಶಂಕಭಗವತ್ಪಾದರವರ ಮೇಲಿನ ಮೂರು ಶ್ಲೋಕಗಳ ತಾತ್ಪರ್ಯವೇ ಅಹಂ ಬ್ರಹ್ಮಾಸ್ಮಿ ಎಂಬದಾಗಿ ಸಮಾಧಿಯಲ್ಲಿ ಮುಳುಗುವುದರ ಮೂಲಕ ಅವಿದ್ಯಾಪ್ರಧಾನಶಕ್ತಿ ಯನ್ನು ನಿಗ್ರಹಮಾಡಬೇಕೆಂಬುದಾಗಿರುವುದು. ಇದೇ ಮಾತಲಿಯು ಶ್ರೀರಾಮನಿಗೆ ಬ್ರಹ್ಮಾಸ್ತ್ರಪ್ರಯೋಗಮಾಡೆಂದು ಹೇಳಿದುದರ ತತ್ವವಾಗಿರುವುದು.

ಅಧಿಕಾರಿಯು ಈಗ "ಓಂ"ಕಾರನಾದಾನುಸಂಧಾನದ ಸೋಪಾನದ ಅನುಷ್ಠಾನದಲ್ಲಿರುವನಷ್ಟೆ! ಒಳಗಡೆ ಕೇಳಿಬರುವ "ಓಂ"ಕಾರನಾದವು ಸೂಕ್ಷ್ಮವಾಗಿ ಅನಂತರ ನಿಶ್ಶಬ್ದವಾಗುವವರೆಗೂ ವಿಕ್ಷೇಪಶಕ್ತಿಯು ನಿಗ್ರಹವಾಗುವುದಿಲ್ಲವೆಂಬ ತಾತ್ಪರ್ಯವನ್ನು ಅನುಸರಿಸಿಯೇ, ಮಾತಲಿಯು ಶ್ರಿರಾಮನೊಡನೆ ದೇವತೆಗಳಿಂದ ಹೇಳಲ್ಪಟ್ಟ ರಾವಣನ ವಿನಾಶಕಾಲವು ಈಗ ಪ್ರಾಪ್ತವಾಗಿರುವುದೆಂಬದಾಗಿ ಹೇಳಿದನು. ಅಂದರೆ ನಾದವು ಆಕಾಶದ ಗುಣವಾಗಿರುವುದು. ಆಕಾಶಾಂತರ್ಗತನಾಗಿ ಪರಮಾತ್ಮನು ಹೇಗೆ ಇರುವನೋ ಹಾಗೆ ನಾದಾಂತರ್ಗತನಾಗಿ ಪರಮಾತ್ಮನಿರುವನು. ಅಂದರೆ ನಾದವಡಗಿದ ಸ್ವರೂಪವೇ ಪರಮಾತ್ಮಸ್ವರೂಪವಾಗಿರುವುದು. "ಓಂ"ಕಾರನಾದವು ಅಡಗಿದ ಸ್ವರೂಪವೆ ಪರಬ್ರಹ್ಮಸ್ವರೂಪವೆಂದು ಶ್ರಿಕೃಷ್ಣಪರಮಾತ್ಮನು ಉತ್ತರಗೀತೆಯಲ್ಲಿ,

ಆಕಾಶೋಹ್ಯವಕಾಶಶ್ಚ ಆಕಾಶವ್ಯಾಪಿತಂ ಜಗತ್ |
ಆಕಾಶಸ್ಯ ಗುಣಶ್ಶಬ್ದೋ ನಿಶ್ಶಬ್ದೋ ಬ್ರಹ್ಮ ಉಚ್ಯತೆ ||

ತಾ|| ಅವಕಾಶವೆ ಆಕಾಶ. ಈ ಆಕಾಶದಲ್ಲಿ ಜಗತ್ತೆಲ್ಲವೂ ಅಡಕವಾಗಿರುವುದು. ಆಕಾಶದ ಗುಣವು ಶಬ್ದವು. ನಿಶ್ಶಬ್ದವೇ ಪರಬ್ರಹ್ಮನು. ಎಂಬದಾಗಿ ಹೇಳಿರುವನು. ಈ ವಾಕ್ಯವು ಶ್ರುತಿಯಲ್ಲಿಯೂ ಇರುವುದು.

ಆದುದರಿಂದ ಅಂತರಂಗದಲ್ಲಿ ಕೇಳಿಬರುವ "ಓಂ"ಕಾರನಾದವು ಶಾಂತವಾಗಬೇಕು. ನಾದವನ್ನು ಅನುಸಂಧಾನಮಾಡುತ್ತಿರುವ ತಿಳಿವಳಿಕೆಗೆ ವಿಜ್ಞಾನವೆಂದು ಮೇಲೆಯೆ ತಿಳಿಸಿರುತ್ತಷ್ಟೆ! ತ್ರಿಪುಟಿಸ್ವರೂಪವಿರುವ ಪರ್ಯಂತರ ವಿಜ್ಞಾನವೆಂದೇ ಎನಿಸಿಕೊಳ್ಳುವುದು. ಈ ತ್ರಿಪುಟಿಸ್ವರೂಪವೆ ದ್ವೈತ. ತ್ರಿಪುಟಿರಹಿತವಾಗಿ ಏಕತ್ವವಾಗುವಿಕೆಯೇ ಅದ್ವೈತ. ತ್ರಿಪುಟಿಸ್ವರೂಪವೇ ವಿಜ್ಞಾನ ಅಥವಾ ವಿಶಿಷ್ಟಜ್ಞಾನ. ತ್ರಿಪುಟಿರಹಿತವಾಗಿ ಒಂದೇ ಉಳಿಯುವುದೇ ಜ್ಞಾನ. ತ್ರಿಪುಟಿರಹಿತವಾಗಿ ವಿಜ್ಞಾನವು ಶುದ್ಧಜ್ಞಾನವಾಗಬೇಕಾದರೆ, ವಿಜ್ಞಾನವು ನಾನಲ್ಲವೆಂದೂ ಸರ್ವವ್ಯಾಪಕನಾಗಿರುವ ಆತ್ಮನೇ ನಾನೆಂದೂ, ಸಮಾಧಿಯಲ್ಲಿ ಮುಳುಗಿದರೆ ವಾಸನಾವೃತ್ತಿಯು ಲಯವಾಗಿ ಆತ್ಮಸಾಕ್ಷಾತ್ಕಾರವಾಗುವುದು. ಈ ತಾತ್ಪರ್ಯವನ್ನು ಅನುಸರಿಸಿಯೇ ಮಾತಲಿಯು ಬ್ರಹ್ಮಾಸ್ತ್ರಪ್ರಯೋಗಮಾಡೆಂದು ಶ್ರಿರಾಮನಿಗೆ ಹೇಳಿದುದು. ಅಹಂಬ್ರಹ್ಮಾಸ್ಮಿಯ ಅನುಸಂಧಾನದ ಮಾರ್ಗವೇ ಜ್ಞಾನಮಾರ್ಗವೆಂದು ಶ್ರುತಿಗಳು ಸಾರುತ್ತವೆ. ಮಂಡಲಬ್ರಾಹ್ಮಣೋಪನಿಷತ್ತಿನಲ್ಲಿ,

ಶುದ್ಧಾದ್ವೈತ ಬ್ರಹ್ಮಾಹಮಿತಿ ಭಿದಾಽಗೆಸ್ಥಂ ನಿರಸ್ಯ |
ಸ್ವಾನ್ತಸ್ಸ್ಫೂರ್ತಿವಿಜೃಮ್ಭಿತ ಭಾನುಮಂಡಲಧ್ಯಾನತದಾ ||

ಕಾರಾಕಾರಿತ ಪರಬ್ರಹ್ಮಾಕಾರ ಮುಕ್ತಿಮಾರ್ಗ |
ಮಾರೂಢಃ ಪರಿಪಕ್ವೋ ಭವತಿ ||

ತಾ|| ಶುದ್ಧವಾದ ಅದ್ವಿತೀಯಬ್ರಹ್ಮನೇ ನಾನೆಂದು ತನ್ನೊಳಗೆ ಪ್ರಕಾಶಿಸುವ ಜ್ಯೋತಿರ್ಮಂಡಲಧ್ಯಾನದಿಂದ, ಜ್ಯೋತಿರ್ಮಂಡಲಾಂತರ್ಗತವಾದ ಪರಬ್ರಹ್ಮಾಕಾರ ರೂಪವಾದ ಮುಕ್ತಿಮಾರ್ಗವನ್ನು ಹತ್ತಿದವನು ಜ್ಞಾನಸ್ವರೂಪನಾದ ಪರಬ್ರಹ್ಮನೇ ಆಗು ತ್ತಾನೆ. ಎಂಬ ವಾಕ್ಯವಿರುವುದು.

ಆದುದರಿಂದ ದ್ವೈತಸ್ವರೂಪವಾದ ತ್ರಿಪುಟಿಯನ್ನು ಹೋಗಲಾಡಿಸಿಕೊಳ್ಳಲು "ಅಹಂಬ್ರಹ್ಮಾಸ್ಮಿ" ಅಥವಾ "ವಿಷ್ಣುರಹಂ" ಅಥವಾ "ಶಿವೋಹಂ" ಎಂಬ ಜ್ಞಾನಾಸ್ತ್ರವೇ ಮುಖ್ಯವಾದುದು. ಇದೇ ಅರ್ಥಕ್ಕೆ ತ್ರಿಪುರತಾಪಿನ್ಯುಪನಿಷತ್ತಿನಲ್ಲಿಯೂ,

ನಿಷ್ಕಳಂ ನಿಶ್ಚಲಂ ಶಾಂತಂ ಬ್ರಹ್ಮಾಹಮಿತಿಸಂಸ್ಮರೇದಿತಿ |
ತುರೀಯಂ ಜಾನೀತೆಽಕ್ಷರೇ ಪರಮೇವ್ಯೋಮನ್ನಧಿವಸತಿ ||

ತಾ|| ನಿಷ್ಕಳನೂ, ನಿಶ್ಚಲನೂ, ಶಾಂತನೂ ಆದ ಪರಬ್ರಹ್ಮನೇ ನಾನೆಂದು ಚೆನ್ನಾಗಿ ಸಮಾಧಿಯಲ್ಲಿ ಅನುಸಂಧಾನಮಾಡುತ್ತ ಯಾರು ಪರಮಾತ್ಮನನ್ನು ತಿಳಿಯುವರೋ ಅವರು ನಾಶರಹಿತವಾದ ಪರಮಾಕಾಶವೆಂದರೆ ಪರಬ್ರಹ್ಮಸ್ವರೂಪರೇ ಆಗುತ್ತಾರೆ. ಎಂಬ ದಾಗಿ ಹೇಳಿರುವುದು.

ಆದುದರಿಂದ ಬುದ್ಧಿವೃತ್ತಿಯು ಪಡೆಯುವ ನಾನೇ ಬ್ರಹ್ಮನೆಂಬ ಜ್ಞಾನಮಾರ್ಗವೇ, ಜನನ ಮರಣ ಪ್ರವಾಹರೂಪವಾದ ಭವಬಂಧನವನ್ನು ದಾಟಿಸುವ ಮಾರ್ಗವಾಗಿರು ವುದು. ಇದೇ ಅರ್ಥಕ್ಕೆ ವರಾಹೋಪನಿಷತ್ತಿನಲ್ಲಿಯೂ, ಶ್ರೀಕೃಷ್ಣನಿಂದ ಅರ್ಜುನನಿಗೆ ಉಪದಿಷ್ಟವಾದ ಉತ್ತರಗೀತೆಯಲ್ಲಿಯೂ,

" ಅಹಂಬ್ರಹ್ಮೇತಿ ನಿಯತಂ ಮೋಕ್ಷಹೇತುರ್ಮಹಾತ್ಮನಾಂ "

ಅಂದರೆ ತನ್ನ ನಿಜವಾದ ಸ್ವರೂಪವೇ ಪರಬ್ರಹ್ಮಸ್ವರೂಪವೆಂಬ ದೃಢವಾದ ಮಾರ್ಗ ದಿಂದ ಮೋಕ್ಷವುಂಟಾಗುವುದು. ಎಂದು ಹೇಳಿರುವುದು. ಮುಮುಕ್ಷುವು ಆತ್ಮಲಾಭ ಕ್ಕೋಸ್ಕರ ಗುರುವಿನಲ್ಲಿ ವೇದಾಂತಶ್ರವಣಮಾಡಿ, ಪ್ರಪಂಚವು ಅಸತ್ಯವೆಂದೂ ತನ್ನ ನಿಜ ವಾದ ಸ್ವರೂಪವೇ ಆತ್ಮಸ್ವರೂಪವೆಂದೂ ತಿಳಿದುಕೊಳ್ಳುತ್ತಾನೆ. ಗುರುಮುಖೇನ ತಿಳಿದು ಕೊಂಡನಂತರ ಈ ದೇಹವೂ, ಈ ದೇಹಕ್ಕೆ ಸಂಬಂಧಪಟ್ಟ ವ್ಯಾಪಾರವೂ, ತಾನಲ್ಲವೆಂದು ದೇಹಾತ್ಮಬುದ್ಧಿಯನ್ನು ತೊರೆಯುತ್ತಾ, ಆತ್ಮಭಾವನೆಯ ಚಿಂತನೆಯನ್ನು ಮನಸ್ಸಿನಲ್ಲಿಯೇ ಮಾಡಿಕೊಳ್ಳುತ್ತಾ ಇರುವನು. ಈ ಚಿಂತನೆಯು ಪರಿಪಕ್ವಾವಸ್ಥೆಗೆ ಬಂದನಂತರ ಸ್ವಾನು

ಭವಕ್ಕೆ ತಂದುಕೊಳ್ಳಲು, ಕ್ರಮಾನುಷ್ಠಾನದಿಂದ ಸಮಾಧಿಯ ಅಭ್ಯಾಸಮಾಡುತ್ತಾನೆ. ಆದುದರಿಂದ ನಶಿಸಿಹೋಗುವ ದೇಹವು ನಾನಲ್ಲವೆಂಬ, ಆತ್ಮನೇನಾನೆಂಬ "ಅಹಂ ಬ್ರಹ್ಮಾಸ್ಮಿ"ಯ ಭಾವನೆಯು ಮೋಕ್ಷಕ್ಕೆ ತಳಪಾಯಸ್ವರೂಪವಾದುದು. ಅನುಷ್ಠಾನದ ಕೊನೆಯನ್ನು ಮುಟ್ಟಿಸಿ ಅಂತ್ಯಭಾಗದಲ್ಲಿ "ಜ್ಞಾನಾನ್ಮೋಕ್ಷಃ" ಎಂಬ ವಚನದಂತೆ ಆತ್ಮ ಸಾಕ್ಷಾತ್ಕಾರವನ್ನು ಕೊಡುವುದೂ ಈ "ಅಹಂಬ್ರಹ್ಮಾಸ್ಮಿ". ಕ್ರಮಾನುಷ್ಠಾನದಲ್ಲಿನ ಮಧ್ಯದ ಸೋಪಾನಗಳಾದ ಆಸನ ಪ್ರಾಣಾಯಾಮ ಮುಂತಾದುವುಗಳ ಅಧಿಕಾರವು ಅತ್ಯಲ್ಪಕಾಲ. ಆದುದರಿಂದ ಪ್ರಥಮದಲ್ಲಿ ವಿಚಾರದಿಂದ ತಿಳಿಯಲ್ಪಟ್ಟು ಅಂತ್ಯದಲ್ಲಿ ಸ್ವಾನುಭವಕ್ಕೆ ಬರುವ "ಅಹಂಬ್ರಹ್ಮಾಸ್ಮಿ"ಯೇ ನಿಶ್ಚಯವಾಗಿಯೂ ದುಃಖಸಮುದ್ರವನ್ನು ದಾಟಿಸಲು ಮುಖ್ಯಕಾರಣವಾಗಿರುವುದು. ಅಲ್ಲದೆ ಈ "ಅಹಂಬ್ರಹ್ಮಾಸ್ಮಿ"ಯ ಭಾವನೆಯ ಚಿಂತನೆಯ ಧನವು ಪ್ರಥಮದಲ್ಲೆಂದರೆ ಪರೋಕ್ಷಜ್ಞಾನದಲ್ಲಿ ಎಷ್ಟು ಗಳಿಸಲ್ಪಡುವುದೋ, ಜೀವನ್ಮುಕ್ತಾವಸ್ಥೆ ಅಥವಾ ಪರಮಹಂಸತ್ವಕ್ಕೆ ಅಷ್ಟು ಸಹಾಯಕರವಾಗಿರುವುದು.

ಈ "ಅಹಂಬ್ರಹ್ಮಾಸ್ಮಿ" ಎಂಬುದರ ಭಾವನೆಯ ಚಿಂತನೆಯೂ ಅದಕ್ಕೆ ಸರಿಯಾದ ಸಮಾಧಿಯ ಅನುಷ್ಠಾನವೂ ಇಲ್ಲದಿದ್ದಲ್ಲಿ ಮುಕ್ತಿ ಎಂಬುದು ಕೋಟಿಜನ್ಮಗಳಾದರೂ ಲಭಿಸದು. ಕಾರಣವೇನೆಂದರೆ "ಅಹಂ" ಎಂಬ ಜ್ಞಾನವು ದೇಹದಲ್ಲಿ ಮಿಳಿತವಾಗಿ ದೇಹವೇ ನಾನೆಂಬ ವಿಜ್ಞಾನದಿಂದ ಮುಸುಕಲ್ಪಟ್ಟಿರುವುದು. ದೇಹವು ನಾನಲ್ಲದಿದ್ದರೂ ಅಜ್ಞಾನದಿಂದ ದೇಹವೇನಾನೆಂದುಕೊಂಡು ವ್ಯವಹಾರಮಾಡುತ್ತೇವೆ. ಆದುದರಿಂದ ದೇಹವ್ಯಾಪಾರದಲ್ಲಿ ನಾನು ಎಂಬುದು ಹೋಗುವುದೇ ಇಲ್ಲ. ನಾನು ಎಂಬುದರಿಂದ ಉತ್ಪನ್ನವಾದ ಅಭಿಮಾನದ ವೇಗವನ್ನು ತಗ್ಗಿಸಿಕೊಂಡರೂ, ನಾನು ಎಂಬ ಜ್ಞಾನವು ಬಹಿಃ ಹೊಗುವುದಿಲ್ಲ. ದೇಹ ಮತ್ತು ಆತ್ಮಗಳೆರಡರಲ್ಲಿ "ನಾನು" ಎಂಬುದನ್ನು ದೇಹದಿಂದ ಬೇರ್ಪಡಿಸಿದರೆ ಪರಮಾತ್ಮನಲ್ಲಿರಲೇಬೇಕು. "ನಾನು" ಎಂಬುದು ಪರಮಾತ್ಮನಲ್ಲಿ ನೆಲೆಗೊಳ್ಳಲು ಬಹಿರ್ವ್ಯಾಪಾರದಿಂದ ವಿಮುಖವಾಗಿ, ಅಂತರ್ಮುಖದ ಮಾರ್ಗವಾದ ಸಮಾಧಿಯ ಅಭ್ಯಾಸದಲ್ಲಿ ಸ್ಥಿರತ್ವವನ್ನು ಪಡೆದು, ಅಹಂಬ್ರಹ್ಮಾಸ್ಮಿ ಎಂದು ಸಮಾಧಿಯಲ್ಲಿ ಮುಳುಗಿದರೆ, ನಿಶ್ಚಯವಾಗಿಯೂ ಸ್ವಸ್ವರೂಪವಾದ ಪರಬ್ರಹ್ಮತ್ವವು ಪ್ರಾಪ್ತಿಯಾಗುವುದು. ತ್ರಿಪುಟಿಯು ಎಲ್ಲಿಯವರೆಗೆ ಇರುವುದೋ, ಅಲ್ಲಿಯವರೆಗೆ ಅವಿದ್ಯೆಯ ಪ್ರಧಾನಶಕ್ತಿಯು ನಿಗ್ರಹವಾಗುವುದಿಲ್ಲ. ಯಾವಾಗ ಅವಿದ್ಯೋಪಾಧಿಯು ನಿವೃತ್ತಿಯಾಗುವುದಿಲ್ಲವೋ, ಅಲ್ಲಿಯವರೆಗೆ ಜೀವತ್ವವೂ ಹೋಗುವುದಿಲ್ಲ. ಇದೇ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ಲಘುವಾಕ್ಯವೃತ್ತಿಯಲ್ಲಿ,

ಸವಿಕಲ್ಪಕಜೀವೋಽಯಂ ಬ್ರಹ್ಮತನ್ನಿರ್ವಿಕಲ್ಪಕಂ ।
ಅಹಂಬ್ರಹ್ಮೇತಿವಾಕ್ಯೇನ ಸೋಽಯಮರ್ಥೋಽಭಿಧೀಯತೇ ॥

ತಾ|| ಉಪಾಧಿಯೊಡಗೂಡಿರುವುದು ಜೀವ. ಉಪಾಧಿರಹಿತವಾದುದು ಪರಬ್ರಹ್ಮ. "ಅಹಂಬ್ರಹ್ಮಾಸ್ಮಿ" ಎಂಬ ಮಹಾವಾಕ್ಯದ ಅನುಭವದಿಂದ ಈ ಜೀವವೇ ಬ್ರಹ್ಮವೆಂದು ತಿಳಿಯುತ್ತದೆ. ಎಂಬದಾಗಿ ಹೇಳಿರುವರು.

ಈ ಮೇಲಿನ ಶ್ಲೋಕದ ತಾತ್ಪರ್ಯವನ್ನನುಸರಿಸಿ, ಯುದ್ಧಕಾಂಡ ಪ್ರಾರಂಭದಾರಭ್ಯ ಇದುವರೆಗಿನ ಕಥೆಯ ಅಂತರಾರ್ಥವಾದ ಸಮಾಧಿಯಲ್ಲಿ ಅನುಷ್ಠಾನವು ಸವಿಕಲ್ಪಸಮಾಧಿ ಯೆನಿಸಿಕೊಳ್ಳುತ್ತದೆ. ಸೀತಾಗ್ನಿಪ್ರವೇಶವೇ ನಿರ್ವಿಕಲ್ಪಸಮಾಧಿಯ ತತ್ವವಾಗಿರುವುದು. ಈ ನಿರ್ವಿಕಲ್ಪಸಮಾಧಿಸ್ವರೂಪವಾದ ಬ್ರಹ್ಮಸಾಕ್ಷಾತ್ಕಾರವು "ಅಹಂಬ್ರಹ್ಮಾಸ್ಮಿ" ಎಂಬೊಂದರಿಂದಲೇ ಪಡೆಯತಕ್ಕದ್ದಾಗಿರುವುದು. ಈ ತಾತ್ಪರ್ಯಕ್ಕೂ ಕೂಡ ಶ್ರೀಶಂಕರ ಭಗವತ್ಪಾದರವರು ಸ್ವರೂಪಾನುಸಂಧಾನಾಷ್ಟಕದಲ್ಲಿ,

ಯದಾನಂದರೂಪಂ ಪ್ರಕಾಶಸ್ವರೂಪಂ |
ನಿರಸ್ತಪ್ರಪಂಚಂ ಪರಿಚ್ಛೇದಹೀನಂ |
ಅಹಂಬ್ರಹ್ಮವೃತ್ತ್ಯೈಕಗಮ್ಯಂ ತುರೀಯಂ |
ಪರಬ್ರಹ್ಮನಿತ್ಯಂ ತದೇವಾಹಮಸ್ಮಿ ||

ತಾ|| ಯಾವುದು ಆನಂದಸ್ವರೂಪವೋ, ಯಾವುದು ಸ್ವಪ್ರಕಾಶಸ್ವರೂಪವೋ, ಯಾವುದು ಪ್ರಪಂಚಕ್ಕೆ ಅತೀತವೋ ಯಾವುದು ವಿಕಾರರಹಿತವೋ ಯಾವುದು "ಅಹಂ ಬ್ರಹ್ಮಾಸ್ಮಿ" ಎಂಬ ಬುದ್ಧಿವೃತ್ತಿಯಿಂದಲೇ ವ್ಯಕ್ತವಾಗುವುದೋ, ಯಾವುದು ತುರೀಯ ಸ್ವರೂಪವಾದುದೋ, ಅಂತಹ ಪರಬ್ರಹ್ಮವೇ ನಿತ್ಯವಾದುದು. ಆ ಬ್ರಹ್ಮವೇ ನಾನು. ಎಂದು ಹೇಳಿರುವರು.

ಆದುದರಿಂದ ಈ ಮೇಲಿನ ಶ್ಲೋಕದ ತಾತ್ಪರ್ಯವನ್ನನುಸರಿಸಿ "ಅಹಂ ಬ್ರಹ್ಮಾಸ್ಮಿ" ಎಂಬ ವೃತ್ತಿಯಿಂದಲೇ ಅವಿದ್ಯೆಯ ಪ್ರಧಾನಶಕ್ತಿಯು ನಿಗ್ರಹವಾಗಬೇಕೆಂಬ ತತ್ವವೇ, ಮಾತಲಿಯು ಶ್ರೀರಾಮನಿಗೆ ಬ್ರಹ್ಮಾಸ್ತ್ರವನ್ನು ಪ್ರಯೋಗಿಸೆಂದು ಹೇಳಿದುದು. ಸಮಾಧಿ ಯಲ್ಲಿ ಕಾಣುವ ಬಿಂದು ನಾದ ಮತ್ತು ಜ್ಯೋತಿಗಳಲ್ಲಿ ಸೋಹಂಭಾವನೆಯಿಂದಲೇ ಸಮಾ ಧಿಯ ಅಭ್ಯಾಸಮಾಡಬೇಕೆಂದೂ, ಹೀಗೆ ಮಾಡದಿದ್ದರೆ ಸಮಾಧಿಯೇ ನಿಲ್ಲುವುದಿಲ್ಲವೆಂದೂ, ಮುಂದಿನ ಸೋಪಾನಗಳನ್ನು ಪಡೆಯಲು ಅಸಾಧ್ಯವೆಂದೂ ಪ್ರಥಮದಿಂದಲೂ ತಿಳಿಸಿ ಕೊಂಡು ಬರುತ್ತಿದೆಯಷ್ಟೆ! ಹೀಗೆ ಸಮಾಧಿಯು ಪರಿಪಕ್ವಾವಸ್ಥೆಗೆ ಬರುತ್ತ ಬರುತ್ತ, ಒಳಗಡೆ ಕೇಳಿಬರುವ ನಾದ ಮತ್ತು ಸೂರ್ಯತೇಜಸ್ಸುಗಳೆರಡೂ ತಗ್ಗುತ್ತಾ ಬರುವುವೆಂದೂ ಹಿಂದಿನ ಪ್ರಕರಣದಲ್ಲಿ ತಿಳಿಸಿದೆ. ಈ ನಾದ ಮತ್ತು ಸೂರ್ಯತೇಜಸ್ಸು ಚೆನ್ನಾಗಿರುವ

ಪರ್ಯಂತರ, ಬುದ್ಧಿವೃತ್ತಿಗೆ ನಾದ ಮತ್ತು ಜ್ಯೋತಿಗಳ ಆಧಾರವಿರುವುದು. ಯಾವಾಗ ಧ್ಯೇಯಸ್ವರೂಪವಾದ ಜ್ಯೋತಿ ಮತ್ತು ನಾದ ತಗ್ಗುವುದೋ ಆಗ ಬುದ್ಧಿವೃತ್ತಿಗೆ ಆಧಾರದ ಬಲವು ಕಮ್ಮಿಯಾಗುವುದು. ಈ ಕಾಲದಲ್ಲಿ "ಅಹಂ ಬ್ರಹ್ಮಾಸ್ಮಿ" ಎಂಬದಾಗಿ ಸಮಾಧಿಯಲ್ಲಿ ಮುಳುಗದೆ ಇದ್ದರೆ, ಇದುವರೆಗೂ ಮಾಡಿದ ಸಮಾಧಿಯ ಅನುಷ್ಠಾನ, ವೇದಾಂತ ಶ್ರವಣ ಮನನಗಳು, ನಿರರ್ಥಕವೇ ಆಗುವುವು. ಇದೇ ಅರ್ಥಕ್ಕೆ ಶ್ರೀಕೃಷ್ಣಪರಮಾತ್ಮನು ಉತ್ತರಗೀತೆಯಲ್ಲಿ,

ನಾದಬಿಂದು ಸಹಸ್ರಾಣಿ ಯೋಗಕೋಟಿಶತಾನಿಚ |
ಸರ್ವಂ ತದ್ಭಸ್ಮನಿ ಹುತಂ ಆತ್ಮಜ್ಞಾನಂ ವಿನಾ ಧ್ರುವಂ ||

ತಾ|| ತತ್ವಮಸಿ ಮುಂತಾದ ಮಹಾವಾಕ್ಯಗಳಿಂದ ಜನ್ಯವಾದ ನಾನೇ ಬ್ರಹ್ಮನೆಂಬ ನಿಶ್ಚಯವನ್ನು ಹೊಂದುವ ಜ್ಞಾನವಿಲ್ಲದಿದ್ದರೆ, ಸಮಾಧಿಯಲ್ಲಿ ಧರಿಸಿದ್ದ ಸಾವಿರಾರು ನಾದ ಬಿಂದುಗಳೂ, ಪ್ರಾಣಾಯಾಮ ಮುಂತಾದ ಯೋಗಗಳ ಕೋಟ್ಯಾಂತರ ಅಭ್ಯಾಸಗಳೂ, ಬೂದಿಯಲ್ಲಿ ಮಾಡಿದ ಹೋಮದಂತೆ ನಿರರ್ಥಕವಾಗುವುದು. ಎಂದು ಹೇಳಿರುವನು.

ಈ ಮೇಲಿನ ಶ್ರೀಕೃಷ್ಣಪರಮಾತ್ಮನ ವಾಕ್ಯಕ್ಕನುಸಾರವಾಗಿ, ಶ್ರೀವಿದ್ಯಾರಣ್ಯಸ್ವಾಮಿಗಳು ಪಂಚದಶಿ ಪಂಚಭೂತವಿವೇಕ ಪ್ರಕರಣದಲ್ಲಿ ನಿರಾಕಾರಬ್ರಹ್ಮತ್ವವನ್ನುಂಟುಮಾಡುವ ನಿರ್ವಿಕಲ್ಪಸಮಾಧಿಯನ್ನು ಹೊಂದಲು ಕೆಲವರು ಹೆದರುವರೆಂದು ಶ್ರೀಗೌಡಪಾದಾಚಾರ್ಯರವರ ವಾಕ್ಯವನ್ನೇ ಹೇಳಿರುತ್ತಾರೆ. ಇದು ಸಾಕಾರಸ್ವರೂಪವಾದ ತೇಜಸ್ಸು ಮತ್ತು ನಾದವನ್ನು ದಾಟಿ, ನಿರಾಕಾರವಾದ ಪರಬ್ರಹ್ಮನೇ ನಾನೆಂಬ ಉತ್ಕಟವಾದ ಇಚ್ಛೆಯಿಂದ ಸಮಾಧಿಯಲ್ಲಿ ಮುಳುಗಲು ಯೋಗ್ಯತೆ ಇಲ್ಲವೆಂಬುದನ್ನೇ ಸೂಚಿಸುತ್ತದೆ.

ಆದುದರಿಂದ ರಾವಣನ ತತ್ವದಲ್ಲಿರುವ ಅವಿದ್ಯಾಬಂಧನವನ್ನು ಪರಿಹರಿಸಿಕೊಳ್ಳಬೇಕೆಂದು ಅಂತರಂಗಶುದ್ಧಿಯಿಂದ ನಿಶ್ಚಯವಾಗಿ ಬಯಸುವವರು ತೇಜಸ್ಸು ಮೊದಲುಗೊಂಡು ಪಂಚಭೂತಗಳಲ್ಲದ ಆ ಸಾಕ್ಷಾತ್ಪರಬ್ರಹ್ಮವೇ ನಾನೆಂಬದಾಗಿ ತತ್ವಮಸಿ ಮೊದಲಾದ ಮಹಾವಾಕ್ಯಗಳಿಂದ ಪರೋಕ್ಷದಲ್ಲಿ ಗುರುಮುಖದಿಂದ ಉಪದಿಷ್ಟರಾಗಬೇಕು. ಅನಂತರ ಪರೋಕ್ಷದಲ್ಲಿ ತಿಳಿದುಕೊಂಡುದನ್ನು ಸ್ವಾನುಭವಕ್ಕೆ ತಂದುಕೊಳ್ಳಲು ಸೋಹಂ ಭಾವದೊಡನೆ "ಓಂ"ಕಾರೋಪಾಸನೆಯಿಂದ ಸಮಾಧಿಯನ್ನು ಅಭ್ಯಾಸಮಾಡಬೇಕು. ಆದುದರಿಂದ ಮೋಕ್ಷಕ್ಕೆ "ಅಹಂ ಬ್ರಹ್ಮಾಸ್ಮಿ"ಯೇ ಅಗ್ರವಾಗುಳ್ಳ ಸಮಾಧಿಯ ಅನುಷ್ಠಾನ ಹೊರತು, ಬ್ರಹ್ಮಾಂಡವನ್ನೆಲ್ಲಾ ತಲೆಕೆಳಗುಮಾಡಿದರೂ ಖಂಡಿತವಾಗಿ ಮತ್ತಾವ ದಾರಿಯೂ ಇರುವುದಿಲ್ಲ. ಇದೇ ತಾತ್ಪರ್ಯಕ್ಕೆ ಪೈಂಗಳೋಪನಿಷತ್ ಮತ್ತು ಮಹೋಪನಿಷತ್ತುಗಳಲ್ಲಿ,

ಅನಂತ ಕರ್ಮ ಶೌಚಂಚ ಜಪೋ ಯಜ್ಞಸ್ತಥೈವಚ |
ತೀರ್ಥಯಾತ್ರಾಭಿಗಮನಂ ಯಾವತ್ತತ್ವಂನವಿಂದತಿ ||
ಅಹಂಬ್ರಹ್ಮೇತಿನಿಯತಂ ಮೋಕ್ಷಹೇತುರ್ಮಹಾತ್ಮನಾಂ |
ನಾಹಂಬ್ರಹ್ಮೇತಿಜಾನಾತಿ ತಸ್ಯಮುಕ್ತಿರ್ನಜಾಯತೆ ||

ತಾ|| ಅಪರಿಮಿತವಾದ ಕರ್ಮವೂ, ಶೌಚವೂ, ಜಪವೂ, ಯಜ್ಞವೂ, ತೀರ್ಥ ಯಾತ್ರಾದಿಗಳೂ ಪರಬ್ರಹ್ಮನನ್ನು ತಿಳಿಯಲಾರವು. ನಾನೇ ಬ್ರಹ್ಮನೆಂಬ ಮಾರ್ಗವೊಂದೇ ಮಹಾತ್ಮರಿಗೆ ಮೋಕ್ಷವನ್ನು ಕೊಡಲು ಖಂಡಿತವಾಗಿಯೂ ಕಾರಣವಾಗಿರುವುದು. ನಾನೇ ಪರಬ್ರಹ್ಮನೆಂದು ಯಾರು ತಿಳಿಯುವುದಿಲ್ಲವೋ, ಎಂದರೆ ಸ್ವಾನುಭವಕ್ಕೆ ತಂದುಕೊಳ್ಳುವು ದಿಲ್ಲವೋ ಅಂತಹವರಿಗೆ ಮುಕ್ತಿಯುಂಟಾಗುವುದಿಲ್ಲ. ಎಂದು ಹೇಳಿರುತ್ತದೆ.

ಆದುದರಿಂದ ಮಾತಲಿಯು ಶ್ರೀರಾಮಚಂದ್ರನಿಗೆ ಬ್ರಹ್ಮಾಸ್ತ್ರವನ್ನು ಪ್ರಯೋಗಮಾಡಿ ರಾವಣನನ್ನು ನಿಗ್ರಹಿಸೆಂದು ಜ್ಞಾಪಕಕೊಟ್ಟದರ ಅಂತರಾರ್ಥವೇ ಸಮಾಧಿಯಲ್ಲಿ ನಾದ ಅಡಗುವ ಕಾಲದಲ್ಲಿ ಬುದ್ಧಿವೃತ್ತಿಯು "ಅಹಂಬ್ರಹ್ಮಾಸ್ಮಿ" ಎಂಬ ಅಗ್ರಭಾಗವನ್ನು ಉತ್ಕಟಾವಸ್ಥೆಗೆ ತಂದುಕೊಂಡು ಸಮಾಧಿಯಲ್ಲಿ ಮುಳುಗಬೇಕೆಂಬ ತತ್ವವಾಗಿರುವುದು.

## ೩೨ನೆಯ ಪ್ರಕರಣ.

| ಶ್ರೀರಾಮನು ರಾವಣನನ್ನು ನಿಗ್ರಹಿಸಲು ತೆಗೆದುಕೊಂಡ ಬ್ರಹ್ಮಾಸ್ತ್ರದ ವರ್ಣನೆ. |  | "ಅಹಂಬ್ರಹ್ಮಾಸ್ಮಿ" ಎಂಬ ಜ್ಞಾನಾಸ್ತ್ರದ ಮಹಿಮೆಯ ವರ್ಣನೆ. |
|---|---|---|

ರಾ|| ರಾವಣನ ಮೇಲೆ ಬ್ರಹ್ಮಾಸ್ತ್ರಪ್ರಯೋಗಮಾಡೆಂದು ಮಾತಲಿಯು ಶ್ರೀರಾಮನಿಗೆ ಅರಿಕೆಮಾಡಿದನಂತರ, ಶ್ರೀರಾಮನು ಸ್ಮರಣೆಗೆ ತಂದುಕೊಂಡು ಅಗಸ್ತ್ಯರು ಅನುಗ್ರಹಿಸಿ ಕೊಟ್ಟಿದ್ದ ಬುಸುಗುಟ್ಟುವ ಸರ್ಪದಂತೆ ಕ್ರೂರವಾಗಿಯೂ, ತೇಜಸ್ಸಿನಿಂದ ದೇದೀಪ್ಯಮಾನ ವಾಗಿಯೂ, ಇದ್ದ ಬ್ರಹ್ಮಾಸ್ತ್ರವನ್ನು ರಾವಣನ ಮೇಲೆ ಪ್ರಯೋಗಮಾಡಲು ತೆಗೆದು ಕೊಂಡನು.

ತತ್ವ|| ಅಗಸ್ತ್ಯರು ಅನುಗ್ರಹಮಾಡಿಕೊಟ್ಟ ಬ್ರಹ್ಮಾಸ್ತ್ರವನ್ನು ಶ್ರೀರಾಮನು ತೆಗೆದು ಕೊಂಡನೆಂದರೆ—ಅಗಸ್ತ್ಯರು "ಓಂ" ಕಾರದಲ್ಲಿನ "ಅ" ಕಾರ "ಉ"ಕಾರ ಸೇರಿ ಉಂಟಾ ಗುವ "ಓ"ಕಾರದ ತತ್ವದವರೆಂದು ಅರಣ್ಯಕಾಂಡದಲ್ಲಿ ಅಗಸ್ತ್ಯಾಶ್ರಮ ಪ್ರಕರಣದಲ್ಲಿ ವಿವರಿಸಿರುತ್ತಷ್ಟೆ! ಅಲ್ಲದೆ ಯುದ್ಧಕಾಂಡದಲ್ಲಿ ಅಗಸ್ತ್ಯರು ಶ್ರೀರಾಮನಿಗೆ ಆದಿತ್ಯಹೃದಯ ವನ್ನು ಉಪದೇಶಮಾಡಲು ಬಂದ ತತ್ವದಲ್ಲಿ ಬಂಧಿಸಿರುವ "ಓ"ಕಾರವು "ಮ"ಕಾರದ

ಸಂಬಂಧವನ್ನು ಪಡೆದು "ಓಂ"ಕಾರ ಅಥವಾ ಪ್ರಣವಸ್ವರೂಪವಾಗಲು ಪ್ರಾರಂಭದ ತತ್ವವೆಂದೂ ತಿಳಿಸಿರುತ್ತಷ್ಟೆ! ಅಲ್ಲದೆ ಅಗಸ್ತ್ಯರು ಶ್ರೀರಾಮನಿಗೆ ಆದಿತ್ಯಹೃದಯವನ್ನು ಉಪದೇಶಮಾಡಿದುದೇ ಆದಿತ್ಯಾಂತರ್ಗತವಾದ ಆತ್ಮತತ್ವವಾದ ತಾರಕೋಪದೇಶದ ತತ್ವ ವೆಂದೂ ತಿಳಿಸಿರುತ್ತಷ್ಟೆ! ಈ ಮೇಲಿನ ತತ್ವಾರ್ಥಗಳನ್ನನುಸರಿಸಿ, ಅಗಸ್ತ್ಯರಿಂದ ಅನು ಗ್ರಹಿಸಲ್ಪಟ್ಟಿರುವ ಬ್ರಹ್ಮಾಸ್ತ್ರವೆಂದರೆ, ಆತ್ಮನೇ ನಾನೆಂಬ ಅಗ್ರವುಳ್ಳ ಪ್ರಣವೋಪಾಸನೆಯ ತತ್ವವಾಗಿರುವುದು.

ಹೇಗೆಂದರೆ—ಸಮಾಧಿಯ ಪ್ರಥಮಾಭ್ಯಾಸದಲ್ಲಿ "ಓಂ" ಕಾರವರ್ಣೋಚ್ಚಾರಣೆ ಯಿಂದ ಬಂಧತ್ರಯದೊಡಗೂಡಿದ ಸಮಾಧಿಯ ಅಭ್ಯಾಸಮಾಡುತ್ತೇವೆ. ಬಂಧತ್ರಯ ದೊಡಗೂಡಿದ ಸಮಾಧಿಯ ಅನುಷ್ಠಾನವು ಪರಿಪಕ್ವಾವಸ್ಥೆಗೆ ಬಂದನಂತರ "ಓಂ"ಕಾರ ನಾದೋಪಾಸನೆಯ ಅನುಷ್ಠಾನಕ್ಕೆ ಬಂದರೂ, ಸಮಾಧಿಯ ಅಭ್ಯಾಸಕ್ಕೆ ಕುಳಿತುಕೊಂಡಾಗ "ಓಂ"ಕಾರವರ್ಣೋಚ್ಚಾರಣೆಯನ್ನು ಅನುಸಂಧಾನಮಾಡಿಕೊಂಡು ಅನಂತರ ನಾದಾನು ಸಂಧಾನಮಾಡಬೇಕಾಗುವುದು. ಹೀಗೆ "ಓಂ"ಕಾರವರ್ಣೋಚ್ಚಾರಣೆಯನ್ನು ಮೇಲಕ್ಕೆ ಎಳೆದುಕೊಂಡು ಹೋಗಿ ಅದರ ಅಗ್ರಭಾಗದಲ್ಲಿ ಧ್ಯೇಯಾಕಾರವಾದ ಬಿಂದು ನಾದಗಳನ್ನು ಸೋಹಂಭಾವದಿಂದ ಧರಿಸಿಕೊಂಡು ಇದುವರೆಗೂ ಸಮಾಧಿಯ ಅಭ್ಯಾಸಮಾಡುತ್ತಿದ್ದೆವು. ನಾದವೂ ಕೂಡ ಸೂಕ್ಷ್ಮವಾಗುವ ಕಾಲ ಬಂದುದರಿಂದ ಮೇಲಕ್ಕೆಳೆದುಕೊಂಡುಹೋಗುವ ಪ್ರಣವ ಅಥವಾ "ಓಂ"ಕಾರೋಚ್ಚಾರಣೆಯ ಅಗ್ರಭಾಗದಲ್ಲಿ ಅಹಂ ಬ್ರಹ್ಮಾಸ್ಮಿ ಎಂಬ ಜ್ಞಾನವನ್ನು ಹೊಂದಿ ಸಮಾಧಿಯಲ್ಲಿ ಮುಳುಗಬೇಕು. ಅಂದರೆ "ಓಂ"ಕಾರೋಚ್ಚಾ ರಣೆಯ ಅಗ್ರಭಾಗದಲ್ಲಿ ಆತ್ಮನನ್ನು "ಅಹಂ ಬ್ರಹ್ಮಾಸ್ಮಿ" ಎಂಬುದರಿಂದ ಉಪಾಸನೆಮಾಡ ಬೇಕು. ಹೀಗೆ ಪ್ರಣವದ ಅಗ್ರಭಾಗದಲ್ಲಿ ಆತ್ಮನನ್ನು ಸೋಹಂಭಾವನೆಯಿಂದ ಉಪಾಸನೆ ಮಾಡಬೇಕೆನ್ನುವ ತಾತ್ಪರ್ಯಕ್ಕೆ ಧ್ಯಾನಬಿಂದೂಪನಿಷತ್ತಿನಲ್ಲಿ,

"ಉಪಾಸ್ಯಂ ಪ್ರಣವಸ್ಯಾಗ್ರಂ ಯಸ್ತಂವೇದಸವೇದವಿತ್"

ತಾ|| ಪ್ರಣವದ ಅಂತ್ಯವನ್ನು ಉಪಾಸನೆಮಾಡಬೇಕು. ಇದನ್ನು ತಿಳಿದವನೇ ಜ್ಞಾನಿ. ಎಂಬದಾಗಿ ಹೇಳಿದೆ.

ಆದುದರಿಂದ, ಅಗಸ್ತ್ಯರು ಅನುಗ್ರಹಮಾಡಿಕೊಟ್ಟ ಬ್ರಹ್ಮಾಸ್ತ್ರವೆಂದರೆ, ಆತ್ಮನೇ ನಾನೆಂಬ ಅಗ್ರವುಳ್ಳ ಪ್ರಣವೋಪಾಸನೆಯ ಸ್ವರೂಪವಾದ ಧನುಸ್ಸಿನಿಂದ ರಾವಣನ ತತ್ವ ದಲ್ಲಿರುವ ಅವಿದ್ಯಾಪ್ರಧಾನವಾದ ವಿಕ್ಷೇಪಶಕ್ತಿಯನ್ನು ನಿಗ್ರಹಿಸಲು ಯತ್ನವೆಂಬ ತತ್ವ ವಾಗಿರುವುದು.

ಶ್ರೀರಾಮನು ಅನುಸಂಧಾನಮಾಡಲು ತೆಗೆದುಕೊಂಡ ದನುಸ್ಸೇ ಪ್ರಣವಸ್ವರೂಪ ವಾಗಿಯೂ, ಧನುಸ್ಸಿನಿಂದ ಗುರಿಯಿಟ್ಟು ಹೊಡೆಯುವ ಬಾಣವೇ "ಅಹಂಬ್ರಹ್ಮಾಸ್ಮಿ"ಯ

ತತ್ವವಾಗಿಯೂ, ಆತ್ಮನಲ್ಲಿಯೇ ಲೀನವಾಗುವ ಗುರಿಯಿಂದ ಅವಿದ್ಯಾಪ್ರಧಾನಶಕ್ತಿಯನ್ನು ನಿಗ್ರಹಿಸುವುದಾಗಿಯೂ ಇರುವುದು. ಹೇಗೆಂದರೆ—"ಓಂ"ಕಾರವನ್ನು ಬೆಳೆಸುವುದೇ ಧನುಸ್ಸಾಗಿಯೂ, ಬೆಳೆಸಿದ "ಓಂ"ಕಾರದ ಅಗ್ರಭಾಗದಲ್ಲಿ ಬುದ್ಧಿವೃತ್ತಿಯಲ್ಲಿರುವ "ಅಹಂ ಬ್ರಹ್ಮಾಸ್ಮಿಯ ಜ್ಞಾನವೇ ಬಾಣದ ಅಲಗಾಗಿಯೂ, ಈ ಅಲಗು ಶತ್ರುವಿನಲ್ಲಿ ಲಯವಾಗುವಂತೆ ಅಹಂಬ್ರಹ್ಮಾಸ್ಮಿಯುಳ್ಳ ಬುದ್ಧಿವೃತ್ತಿಯು ಪರಬ್ರಹ್ಮನಲ್ಲಿ ಲೀನವಾಗುವುದು. ಈ ತತ್ವಾರ್ಥಕ್ಕನುಸಾರವಾಗಿ ಧ್ಯಾನಬಿಂದೂಪನಿಷತ್ತು ಮತ್ತು ಮುಂಡಕೋಪನಿಷತ್ತುಗಳಲ್ಲಿ,

ಪ್ರಣವೋಧನುಶ್ಶರೋಹ್ಯಾತ್ಮಾ ಬ್ರಹ್ಮತಲ್ಲಕ್ಷ್ಯಮುಚ್ಚ್ಯತೆ |
ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋಭವ ||

ತಾ|| ಪ್ರಣವವೇ ಧನುಸ್ಸು, ಜೀವವೇ ಬಾಣ, ಬ್ರಹ್ಮವೇ ಗುರಿಯೆಂದು ಹೇಳುತ್ತಾರೆ. ಅಜಾಗರೂಕನಾಗದೆ ಬಾಣವನ್ನು ಬಿಟ್ಟರೆ ಗುರಿಯಲ್ಲಿ ಸೇರುವಂತೆ ಜೀವನು ಬ್ರಹ್ಮಮಯನಾಗಬೇಕು. ಎಂದು ಹೇಳಿದೆ.

ಈ ಮೇಲಿನ ಶ್ರುತಿವಾಕ್ಯದಲ್ಲಿ ಜೀವವೇ ಬಾಣವೆಂದು ಹೇಳಿರುವುದರ ಅರ್ಥವೇನೆಂದರೆ—ಬುದ್ಧಿವೃತ್ತಿಯನ್ನು ಪ್ರಕಾಶಪಡಿಸಿಕೊಂಡಿರುವ ಪರಮಾತ್ಮಪ್ರತಿಬಿಂಬ ಚೈತನ್ಯವೇ ಜೀವವೆಂದು ಕರೆಯಲ್ಪಡುತ್ತಷ್ಟೆ! ಬುದ್ಧಿವೃತ್ತಿಯು ನಾದವನ್ನು ಧರಿಸಿಕೊಂಡು ಇದ್ದುದರಿಂದ, ಪ್ರತಿಬಿಂಬಚೈತನ್ಯನು ಅದನ್ನು ಪ್ರಕಾಶಪಡಿಸುತ್ತಿದ್ದನು. ಬುದ್ಧಿವೃತ್ತಿಯು ಅಹಂಬ್ರಹ್ಮಾಸ್ಮಿ ಎಂಬ ಜ್ಞಾನದೊಡನೆ ಸಮಾಧಿಯಲ್ಲಿ ಮುಳುಗಿದರೆ, ಪ್ರತಿಬಿಂಬಚೈತನ್ಯವೂ ಪರಬ್ರಹ್ಮಚೈತನ್ಯವೂ ಏಕತ್ವವನ್ನು ಪಡೆಯುವುದು.

ಈತತ್ವಾರ್ಥಗಳಿಂದ ಓಂಕಾರವನ್ನು ಊರ್ಧ್ವಮುಖವಾಗಿ ಎಳೆದುಕೊಂಡುಹೋಗಿ, ಅಂತ್ಯಭಾಗದಲ್ಲಿ "ಅಹಂಬ್ರಹ್ಮಾಸ್ಮಿ" ಅಂದರೆ ನಾನೇ ಬ್ರಹ್ಮನೆಂಬ ಬುದ್ಧಿವೃತ್ತಿಯನ್ನು ಅಜಾಗರೂಕನಾಗದೆ ಪ್ರಯೋಗಮಾಡಿ ಸಮಾಧಿಯಲ್ಲಿ ಮುಳುಗಿದರೆ, ಅವಿದ್ಯಾಬಂಧನ ಪರಿಹಾರವಾಗಿ ಆತ್ಮಲಾಭವಾಗುವುದೆಂಬ ತಾತ್ಪರ್ಯವಾಗಿರುವುದು. ಆದುದರಿಂದ ಶ್ರೀರಾಮನು ತೆಗೆದುಕೊಂಡ ಬ್ರಹ್ಮಾಸ್ತ್ರವು ಹೇಗೆ ಬುಸುಗುಟ್ಟುವ ಸರ್ಪದಂತೆ ಇತ್ತೋ, ಅದರಂತೆ "ಅಹಂಬ್ರಹ್ಮಾಸ್ಮಿ"ಯ ಜ್ಞಾನವು ಉತ್ಕಟಾವಸ್ಥೆಯಲ್ಲಿರಬೇಕೆಂದು ಸೂಚಿಸುವುದು. ಬ್ರಹ್ಮಾಸ್ತ್ರವು ಬೃಹತ್ತಾದ ಅಸ್ತ್ರವಾದುದರಿಂದಲೇ ಬುದ್ಧಿತತ್ವಕ್ಕೆ "ಅಹಂ ಬ್ರಹ್ಮಾಸ್ಮಿ"ಯು ಅಷ್ಟು ಹೆಚ್ಚಿನದಾಗಿರುವುದು. ಮಂತ್ರದಿಂದ ಅಭಿಮಂತ್ರಿಸಿ ಬಿಡತಕ್ಕದ್ದಕ್ಕೆ ಅಸ್ತ್ರವೆಂದು ಹೆಸರು. ಶ್ರೀರಾಮಚಂದ್ರನು ತೆಗೆದುಕೊಂಡ ಬ್ರಹ್ಮಾಸ್ತ್ರವೆಂದರೆ, ಕೋದಂಡ ಅಥವಾ "ಓಂ"ಕಾರಮಂತ್ರಸ್ವರೂಪವಾದ ಧನುಸ್ಸು ಮತ್ತು ಅಹಂಬ್ರಹ್ಮಾಸ್ಮಿಯೆಂಬ ಬಾಣವೆಂಬ ತತ್ವವು. ಬ್ರಹ್ಮಾಸ್ತ್ರದ ತತ್ವದಲ್ಲಿರುವ "ಅಹಂಬ್ರಹ್ಮಾಸ್ಮಿ"ಯ ಪ್ರಭಾವವನ್ನು

ಶ್ರೀರಾಮನು ತೆಗೆದುಕೊಂಡಿರುವ ಬ್ರಹ್ಮಾಸ್ತ್ರದ ಮಹಿಮೆಯ ವರ್ಣನೆಗೆ ಅನ್ವಯಮಾಡಿ ತಕ್ಕಮಟ್ಟಿಗೆ ವಿವರಿಸೋಣ.

| **ಶ್ರೀರಾಮಚಂದ್ರನು ರಾವಣನ ವಧೆಗೆ ತೆಗದುಕೊಂಡ ಬ್ರಹ್ಮಾಸ್ತ್ರದ ಮಹಿಮೆ.** | **ಅವಿದ್ಯಾಪ್ರಧಾನವಾದ ವಿಕ್ಷೇಪ ಶಕ್ತಿಯು ನಿಗ್ರಹವಾಗುವ ಅಹಂ ಬ್ರಹ್ಮಾಸ್ಮಿಯ ಜ್ಞಾನದ ಮಹಿಮೆ.** |
| --- | --- |
| ೧. ಬಾಣದ ಅಲಗಿನಲ್ಲಿ ಸೂರ್ಯಾಗ್ನಿಗಳಿರುವರು. | ೧. ತೇಜಸ್ಸ್ವರೂಪವಾದ ಸೂರ್ಯಾಗ್ನಿಗಳಂತೆ ಅಹಂಬ್ರಹ್ಮಾಸ್ಮಿಯೆಂಬ ಜ್ಞಾನವು ಅಷ್ಟು ಜಾಜ್ವಲ್ಯಮಾನವಾಗಿರುವುದು. |
| ೨. ಬಾಣದ ಅಲಗಿನ ಶರೀರವು, ಆಕಾಶಮಯವಾಗಿ ಸರ್ವತ್ರವ್ಯಾಪಿಸಲು ಸಮರ್ಥವಾದುದು. | ೨. ಅಹಂಬ್ರಹ್ಮಾಸ್ಮಿಯೆಂಬ ಜ್ಞಾನ ಪ್ರಯೋಗವು ಆಕಾಶದಂತೆ ಸರ್ವತ್ರ ವ್ಯಾಪಕವಾದ ಪರಬ್ರಹ್ಮನಲ್ಲಿ ಐಕ್ಯವಾಗುವ ಸಾಮರ್ಥ್ಯವುಳ್ಳದ್ದಾಗುವುದು. |
| ೩. ಬಾಣದ ಲಗು, ಗುರುತ್ವದಲ್ಲಿ ಮೇರು ಮಂದರಪರ್ವತಗಳನ್ನುಹೋಲುತ್ತಿರುವುದು. | ೩. ಅಹಂಬ್ರಹ್ಮಾಸ್ಮಿಯ ಗಾತ್ರವೇನೆಂದರೆ ಸರ್ವಕ್ಕೂ ಆಧಾರಭೂತವಾಗಿರುವ ಪರಬ್ರಹ್ಮಸ್ವರೂಪನ್ನೇ ಹೋಲುವುದು. |
| ೪. ಬಾಣದ ಅಲಗು ತನ್ನ ಸಹಜವಾದ ಆಕಾರದಿಂದಲೇ ಜ್ವಲಿಸುತ್ತಾ ಸುವರ್ಣದಂತೆ ಶೋಭಿಸುತ್ತಿರುವುದು. | ೪. ಅಹಂಬ್ರಹ್ಮಾಸ್ಮಿಯ ತೇಜಸ್ಸು ಮತ್ತೊಂದರಿಂದ ಪ್ರಕಾಶಮಾನವಾಗದೆ ಇರುವ, ಪರಮಾತ್ಮನ ಜ್ಯೋತಿಸ್ವರೂಪದಂತೆಯೇ ಇರುವುದು. |
| ೫. ಬಾಣದ ಅಲಗು ಸಮಸ್ತ ಭೂತಗಳ ಸಾರಾಂಶವನ್ನು ಸೇರಿಸಿ ನಿರ್ಮಿಸಲ್ಪಟ್ಟಿರುವುದು. | ೫. ಅಹಂಬ್ರಹ್ಮಾಸ್ಮಿಯು ದೇಹದಲ್ಲಿರುವ ಸಮಸ್ತ ತತ್ವಗಳನ್ನೂ ಒಳಗೊಂಡಿರುವ "ಓಂ"ಕಾರೋಚ್ಚಾರಣೆಯ ಅಗ್ರಭಾಗದಲ್ಲಿರುವುದರಿಂದ, "ಓಂ"ಕಾರದ ಸಾರಾಂಶವೆಲ್ಲ ಈ ಅಹಂಬ್ರಹ್ಮಾಸ್ಮಿಯಲ್ಲಿ ಇರುವುದು. |
| ೬. ಬಾಣದ ಅಲಗು ಹೊಗೆಯೊಡಗೂಡಿದ ಪ್ರಳಯಾಗ್ನಿಯಂತೆ ಕಾಣುತ್ತಿರುವುದು. | ೬. ಪಸಿಮೆ ಇರುವ ಕಾಷ್ಠವು ದಹಿಸಲ್ಪಡುತ್ತಿದ್ದರೆ ಹೊಗೆಯುಂಟಾಗುವುದಷ್ಟೆ! ಕಾಷ್ಠದಲ್ಲಿರುವ ಪಸಿಮೆಯೆ ಪಾಪಸ್ವರೂಪವಾದುದು. ಇಂತಹ ಪಾಪಸಮೂಹಗಳನ್ನೆಲ್ಲ ದಹಿಸಿಕೊಂಡು, ಸರ್ವವನ್ನೂ ಪರಮಾತ್ಮನಲ್ಲಿ ಲಯಮಾಡುವ ಪ್ರಳಯಾಗ್ನಿಯಂತೆ ಈ "ಅಹಂಬ್ರಹ್ಮಾಸ್ಮಿ"ಯು ಇರುವುದು. |

೭. ಬಾಣದ ಅಲಗು ವಜ್ರದಂತೆ ದೃಢವಾಗಿರುವುದು.

೭. ಆ ಬ್ರಹ್ಮವೇ ನಾನೆಂಬುವುದು ಖಂಡಿತವಾಗಿಯೂ ನಿಸ್ಸಂಶಯವಾಗಿಯೂ ಇರುವುದರಿಂದ "ಅಹಂಬ್ರಹ್ಮಾಸ್ಮಿ"ಯು ವಜ್ರದಂತೆ ದೃಢವಾಗಿರುವುದು.

೮. ಬಾಣದ ಅಲಗು ನೋಡುವಾಗಲೆ ಸಮಸ್ತ ಜಗತ್ತನ್ನೂ ನಡುಗಿಸುವುದು.

೮ ಅಹಂಬ್ರಹ್ಮಾಸ್ಮಿಯೆಂಬ ಉಚ್ಚಾರಣೆಯ ಮಾತ್ರದಿಂದಲೇ, ಮಿಥ್ಯಾಸ್ವರೂಪವಾದ ದೇಹಕ್ಕೆ ನಡುಕ ಬರುವುದು.

೯. ಬಾಣದ ಅಲಗು ನಾನಾ ವಿಧ ಕಪಟ ಯುದ್ಧಗಳನ್ನು ತನ್ನ ಶಕ್ತಿಯಿಂದ ಅಡಗಿಸತಕ್ಕದ್ದಾಗಿರುವುದು.

೯. ಇಂದ್ರಜಾಲ ಮಹೇಂದ್ರಜಾಲವಾದ ಕ್ಷಣಿಕ ವಿದ್ಯೆಗಳನ್ನೆಲ್ಲ ಈ ಅಹಂ ಬ್ರಹ್ಮಾಸ್ಮಿಯು ಧ್ವಂಸಮಾಡುವ ಶಕ್ತಿಯುಳ್ಳದ್ದಾಗಿರುವುದು.

೧೦. ಬಾಣದ ಅಲಗು ಮಹಾಧ್ವನಿಯಿಂದ ಮೊಳಗುತ್ತಿರುವುದು.

೧೦. ಅಹಂಬ್ರಹ್ಮಾಸ್ಮಿಯು ಸೃಷ್ಟಿಗೆ ಕಾರಣವಾದ ಓಂಕಾರದ ಶಬ್ದದಿಂದಲೇ ಮೊಳಗುತ್ತಿರುವುದು.

೧೧. ಬಾಣದ ಅಲಗು ಬುಸುಗುಟ್ಟುವ ಸರ್ಪದಂತೆ ಮಹಾ ಭಯಂಕರವಾಗಿರುವುದು.

೧೧. ಪ್ರಪಂಚವೇ ಸತ್ಯವೆಂದು ನಂಬಿಕೊಂಡಿರುವವರಿಗೆ, ಎಂದರೆ, ದ್ವೈತ ಭಾವಕ್ಕೆ ಅಹಂಬ್ರಹ್ಮಾಸ್ಮಿಯು ಅತ್ಯಂತ ಭಯವನ್ನುಂಟುಮಾಡುವುದು.

೧೨. ಬಾಣದ ಅಲಗು ಎಷ್ಟೋ ಯುದ್ಧಗಳಲ್ಲಿ ಶತ್ರುಗಳ ಭಕ್ಷಣೆಯೆಂಬ ಔತಣವನ್ನು ಹೊಂದಿರುವುದು.

೧೨. (೧) ಅಹಂಬ್ರಹ್ಮಾಸ್ಮಿಯ ಜ್ಞಾನವೆಂಬುದು ಎಂತಹ ಪಾಪಕೃತ್ಯಗಳನ್ನಾಗಲಿ ಔತಣದಂತೆ ಭಕ್ಷಿಸಿಬಿಡುವುದು.

(೨) ಅಲ್ಲದೆ ಎಷ್ಟೋ ಜನಗಳಿಗೆ ಅವರವರಲ್ಲಿರುವ ಅವಿದ್ಯಾರೂಪವಾದ ಶತ್ರುಗಳನ್ನು ಅಹಂಬ್ರಹ್ಮಾಸ್ಮಿಯು ಔತಣದಂತೆ ಭಕ್ಷಿಸಿ ಪರಮಪದವನ್ನು ಕೊಟ್ಟಿರುವುದು.

೧೩. ಬಾಣದ ಅಲಗು ಮೃತ್ಯುದೇವತೆಯಂತೆ ಭಯಂಕರವಾಗಿರುವುದು.

೧೩. ಅಹಂಬ್ರಹ್ಮಾಸ್ಮಿಯು ಪ್ರಪಂಚಸ್ಥಿತಿಗೆ ಅಂದರೆ ದ್ವೈತಭಾವ ಮತ್ತು ದೇಹಾತ್ಮ ಬುದ್ಧಿಗೆ ಯಮಪಾಶದಂತೆ ಭಯಂಕರಸ್ವರೂಪವಾದುದು.

೧೪. ಬಾಣದ ಅಲಗು ರಾಕ್ಷಸರ ವಿನಾಶಕ್ಕೂ ವಾನರರ ಸಂತೋಷಕ್ಕೂ ಕಾರಣವಾಗಿರುವುದು.

೧೪. ಅಧರ್ಮವನ್ನು ಅನುಸರಿಸಿಕೊಂಡು ಪ್ರಾಪಂಚಿಕರೂಪವಾಗಿರುವ ರಾಕ್ಷಸರ ತತ್ವವಾದ ಅವಿದ್ಯಾನಾಶಕ್ಕೂ, ವಾನರರ ತತ್ವದಲ್ಲಿರುವ ದೇವತೆಗಳ ಸಂತೋಷಕ್ಕೂ ಅಹಂಬ್ರಹ್ಮಾಸ್ಮಿಯು ಕಾರಣವಾಗಿದೆ.

೧೫. ಬಾಣದ ಅಲಗು ಗರುತ್ಮಂತನಂತೆ ರೆಕ್ಕೆಗಳೊಡಗೂಡಿ ಶೋಭಿಸುವುದು.

೧೫. ಪರಮಾತ್ಮನ ಕಡೆಗೆ ಕ್ಷಿಪ್ರದಿಂದ ಹಾರಿಹೋಗಿ ಸೇರುವ ಲಕ್ಷ್ಯರೂಪದ ತತ್ವವನ್ನು ಈ ಅಹಂಬ್ರಹ್ಮಾಸ್ಮಿಯು ಒಳಗೊಂಡಿರುವುದರಿಂದ ಶೋಭಾಯಮಾನವಾಗಿರುವುದು.

೧೬. ಬಾಣದ ಅಲಗು ಸಮಸ್ತ ಲೋಕಗಳಲ್ಲಿಯೂ ತಾನೇ ಮೇಲಾದ ಮಹಾಸ್ತ್ರವೆನಿಸಿಕೊಂಡಿರುವುದು.

೧೬. ಬ್ರಹ್ಮಾಂಡದಲ್ಲೆಲ್ಲ ಈ ಅಹಂಬ್ರಹ್ಮಾಸ್ಮಿಗೆ ಸಮವಾದ ಮಂತ್ರ ಮತ್ತು ಭಾವನೆಯು ಮತ್ತಾವುದಕ್ಕೂ ಹೋಲಿಸಲು ಸಾಧ್ಯವಿಲ್ಲವಾದುದರಿಂದ, ಮಹಾವಾಕ್ಯದ ಉಪದೇಶವೆನಿಸಿಕೊಂಡಿರುವುದು.

೧೭. ಬಾಣದ ಅಲಗು ಇಕ್ಷ್ವಾಕುವಂಶದವರೆಲ್ಲರಿಗೂ ಭಯನಿವಾರಕವೆನಿಸಿಕೊಂಡಿರುವುದು.

೧೭. (೧) ಇಕ್ಷ್ವಾಕುವಂಶವೆಂದರೆ ಸೂರ್ಯವಂಶ ಅಥವಾಸವಿತೃಶಕ್ತಿಯಕಾರ್ಯವಾದ ಸೃಷ್ಟಿಸುವಿಕೆ. ಆದುದರಿಂದ ಹುಟ್ಟಿದುದಕ್ಕೆ ಸ್ಥಿತಿಯೆಂಬ ಭಯನಿವಾರಣೆ ಮಾಡಿಕೊಂಡು ಸಾರ್ಥಕಪಡೆಯಬೇಕಾದರೆ, ಅಹಂಬ್ರಹ್ಮಾಸ್ಮಿಯೆಂಬ ಜ್ಞಾನವೇ ಮುಖ್ಯಸಹಾಯವಾಗಿರುವುದು.

(೨) ಇಕ್ಷ್ವಾಕುವಂಶವೆಂದರೆ, ಚಿದಾಭಾಸ ಅಥವಾ ಅಂತಃಕರಣದಲ್ಲಿನ ಪ್ರತಿಬಿಂಬಸ್ವರೂಪ. ಇಂತಹ ಪ್ರತಿಬಿಂಬಸ್ವರೂಪವಿರುವ ಅಂತಃಕರಣಚತುಷ್ಟಯವನ್ನು ಅವಿದ್ಯೆಯು ಬಂಧನದಲ್ಲಿ ಸಿಕ್ಕಿಸಿಕೊಂಡು ಒದ್ದಾಡಿಸುವುದರಿಂದ, ಈ ಅಹಂಬ್ರಹ್ಮಾಸ್ಮಿಯು ಅಂತಃಕರಣದ ಬುದ್ಧಿವೃತ್ತಿಗಲ್ಲದೆ, ಉಳಿದ ಮನಸ್ಸು, ಚಿತ್ತ, ಅಹಂಕಾರಗಳಿಗೂ ನಿರ್ಭಯತ್ವವನ್ನುಂಟುಮಾಡುವುದು.

೧೮. ಬಾಣದ ಅಲಗು ಸಂತೋಷ ವರ್ಧಕವಾದ ಮಹಾಸ್ತ್ರವಾಗಿರುವುದು.

೧೮. ಅಹಂಬ್ರಹ್ಮಾಸ್ಮಿಯು ಆನಂದ ವನ್ನು ಅಧಿಕವಮಾಡುತ್ತಹೋಗಿ, ನಿಜಾ ನಂದವಾದ ಬ್ರಹ್ಮಾನಂದದಲ್ಲಿ ಮುಳುಗಿಸ ತಕ್ಕದ್ದಾಗಿರುವುದು. ಅಲ್ಲದೆ ಅಹಂ ಬ್ರಹ್ಮಾಸ್ಮಿಯೆಂಬ ಜ್ಞಾನದ ಶಕ್ತಿಗಿಂತಲೂ ಅಧಿಕವಾದ ಶಕ್ತಿಯು, ಮತ್ಯಾವ ತತ್ವ ಗಳಿಗೂ ಇಲ್ಲವಾದುದರಿಂದ ಮಹಾಸ್ತ್ರದ ತತ್ವದಲ್ಲಿರುವುದು.

ಮೇಲಿನ ತತ್ವಾರ್ಥಗಳೇ ಶ್ರೀರಾಮಚಂದ್ರನು ರಾವಣನನ್ನು ನಿಗ್ರಹಿಸಲು ತೆಗೆದು ಕೊಂಡ ಬ್ರಹ್ಮಾಸ್ತ್ರದ ತತ್ವವಾಗಿರುವುದು. ಇಂತಹ "ಅಹಂಬ್ರಹ್ಮಾಸ್ಮಿ" ಯೆಂಬ ಮಹಾಸ್ತ್ರವುಳ್ಳ "ಓಂ"ಕಾರಸ್ವರೂಪವಾದ ಧನುಸ್ಸನ್ನು ಧರಿಸಿರುವುದರಿಂದಲೇ, ಶ್ರೀರಾಮನು ಕೋದಂಡರಾಮನೆನಿಸಿಕೊಂಡಿರುವನು. ಇದರ ಅರ್ಥವನ್ನು ಹಿಂದೆಯೇ ತಿಳಿಸಿದೆ. ಮಹಾಸ್ತ್ರಕ್ಕೂ ಅಹಂಬ್ರಹ್ಮಾಸ್ಮಿಗೂ ಹೋಲಿಕೆಮಾಡಿರುವುದರಲ್ಲಿ, ಅಹಂ ಬ್ರಹ್ಮಾಸ್ಮಿಯ ಮಹತ್ತು ಅಮೋಘವಾಗಿರುವುದಷ್ಟೆ! ಈ ಮಹತ್ತಿಗೆ ಅನೇಕ ಉಪನಿಷತ್ತುಗಳ ಆಧಾರ ವಾಕ್ಯಗಳೂ ಇರುವುವು. ತೇಜೋಬಿಂದೂಪನಿಷತ್ತಿನಲ್ಲಿ,

ಅಹಂಬ್ರಹ್ಮಾಸ್ಮಿ ಮಂತ್ರೋಽಯಂ ಮೃತ್ಯುಪಾಶಂ ವಿನಾಶಯೇತ್ |
ಅಹಂಬ್ರಹ್ಮಾಸ್ಮಿ ಮಂತ್ರೋಽಯಂ ಕೋಟಿದೋಷಂ ವಿನಾಶಯೇತ್ |
ಸಪ್ತಕೋಟಿ ಮಹಾಮಂತ್ರಂ ಜನ್ಮಕೋಟಿಶತಪ್ರತಂ |
ಸರ್ವಮಂತ್ರಾನ್ಸಮುತ್ಸೃಜ್ಯ ಏತನ್ಮಂತ್ರಂ ಸದಾಭ್ಯಸೇತ್ |
ಸದ್ಯೋಮೋಕ್ಷ ಮವಾಪ್ನೋತಿ ನಾಸ್ತಿ ಸಂದೇಹಮಣ್ವಪೀ ||

ಎಂಬದಾಗಿ ಹೇಳಿರುವುದು. ಈ ಅಹಂಬ್ರಹ್ಮಾಸ್ಮಿಯ ಮಹತ್ತನ್ನು ಶ್ರೀಕೃಷ್ಣ ಪರಮಾತ್ಮನು ಕೂಡ ಉತ್ತರಗೀತೆಯಲ್ಲಿ,

ಅಹಂಬ್ರಹ್ಮೇತಿ ಮಾಂ ಧ್ಯಾಯೇ ದೇಕಾಗ್ರಮನಸಾಸಕೃತ್ |
ಸರ್ವಂತರತಿಪಾಪ್ಮಾನಂ ಕಲ್ಪಕೋಟಿಶತೈಃಕೃತಮ್ ||

ತಾ|| ನಾನೇ ಬ್ರಹ್ಮನೆಂದು ಏಕಾಗ್ರಚಿತ್ತದಿಂದ ಒಂದಾವರ್ತಿ ನನ್ನನ್ನು (ಶ್ರೀಕೃಷ್ಣ ಪರಮಾತ್ಮನನ್ನು) ಯಾವನು ಧ್ಯಾನಿಸುತ್ತಾನೋ, ಎಂದರೆ ಶ್ರೀಕೃಷ್ಣಪರಮಾತ್ಮನೇ ನಾನೆಂದು ಅನುಸಂಧಾನಮಾಡುವನೋ, ಅವನು ನೂರುಕೋಟಿ ಕಲ್ಪಗಳಿಂದ ಮಾಡಿದ ಪಾಪಗಳನ್ನು ದಾಟುವನು ಎಂದು ಹೇಳಿರುವನು.

"ಜ್ಞಾನಾನ್ಮೋಕ್ಷಃ" ಎಂಬದಾಗಿ ಶಾಸ್ತ್ರಗಳು ಉದ್ಘೋಷಿಸುತ್ತವೆ. ಅಲ್ಲದೆ ಜನಜನಿತವಾಗಿ ಹೇಳುವರು. ಆದರೆ ಜ್ಞಾನಾನ್ಮೋಕ್ಷಃ ಎಂಬದಾಗಿರುವ ಶಾಸ್ತ್ರವಾಕ್ಯದ ನಿಶ್ಚಯವಾದ ತತ್ವವೇನೆಂಬುದನ್ನು ತಿಳಿದಿರುವವರು ಅತಿವಿರಳ. ಬಾಹ್ಯವಸ್ತುಗಳ ಸಕಲ ಜ್ಞಾನಗಳೂ ಪಂಚಭೂತಗಳ ಜ್ಞಾನವಾಗಿವೆಯೇ ಹೊರತು ಅನ್ಯಥಾ ಇಲ್ಲ. ಅಂತರ್ಮುಖ ದಲ್ಲಿನ ತೇಜಸ್ಸು ಮತ್ತು ಓಂಕಾರನಾದಗಳ ಜ್ಞಾನವೂ ಪಂಚಭೂತಗಳಲ್ಲಿನ ಜ್ಞಾನ ವಾಗಿವೆ. ವೇದಾಂತವಿಚಾರಮಾಡಿ ಬುದ್ಧಿಮನಸ್ಸುಗಳನ್ನು ಹೆಚ್ಚಿನ ಉಪಶಾಂತತೆಯಿಂದ ಇಟ್ಟುಕೊಂಡಿದ್ದರೂ ಪಂಚಭೂತಗಳ ಜ್ಞಾನದಲ್ಲಿರುವುದೆನಿಸುವುದು. ನಾವು ಬಾಹ್ಯದಲ್ಲಿ ಮಾಡುವ ದೇವತಾರಾಧನೆ, ನಾಮಸ್ಮರಣೆ ಮುಂತಾದವುಗಳು ಕೂಡ ಸಗುಣವೆನಿಸಿ ಪಂಚಭೂತಗಳ ಜ್ಞಾನದಲ್ಲಿಯೇ ಇರುವುವು. ಈ ಪಂಚಭೂತಗಳ ಜ್ಞಾನದಿಂದ ಮೋಕ್ಷ ದೊರಕುವುದೆಂಬುದು ಅಪ್ರಸಿದ್ಧವಾದುದು. ಈ ಪಂಚಭೂತಗಳ ಜ್ಞಾನವನ್ನು ಹೋಗಲಾಡಿಸಿಕೊಳ್ಳಲು ಅಂತರ್ಮುಖದ ದಾರಿಯಲ್ಲಿ ತೇಜಸ್ಸೂ ನಾದಗಳೂ ತಗ್ಗುವ ಕಾಲದಲ್ಲಿ "ನಾನೇ ಬ್ರಹ್ಮನೆಂಬ" ಜ್ಞಾನದಿಂದ ಮುಳುಗುವುದೇ ಪಂಚಭೂತಗಳ ಜ್ಞಾನ ವನ್ನು ಹೋಗಲಾಡಿಸುವ ಮತ್ತು ಆತ್ಮಸಾಕ್ಷಾತ್ಕಾರವನ್ನುಂಟುಮಾಡುವ "ಜ್ಞಾನಾ ನ್ಮೋಕ್ಷಃ" ಎಂಬುದರ ನಿಶ್ಚಯವಾದ ತತ್ವ. ಹೀಗೆ ಮಾಡದಿದ್ದರೆ ಪಂಚಭೂತಗಳ ಜ್ಞಾನವಾದ ಪ್ರಪಂಚದಲ್ಲಿಯೇ ಬಿದ್ದು ಒದ್ದಾಡಬೇಕಾಗುವುದು. ಆದುದರಿಂದ ಅಹಂಬ್ರಹ್ಮಾಸ್ಮಿ ಎಂಬುದರ ಜ್ಞಾನವು ಅಷ್ಟು ಶ್ರೇಷ್ಠವಾದುದು.

ಸಂಧ್ಯೋಪಾಸನೆಯಲ್ಲಿಯೂ, ಈ ಬ್ರಹ್ಮಾಸ್ತ್ರದ ಮಹತ್ವವಿರುವುದು. ಸೂರ್ಯನನ್ನು ಮುಚ್ಚಿಕೊಳ್ಳಲು ಬರುವ ಮಂದೇಹರೆಂಬ ರಾಕ್ಷಸರೇ ತಮೋಗುಣ ರಜೋಗುಣ ಸ್ವರೂಪರು. ಇಂತಹ ರಾಕ್ಷಸರನ್ನು ನಿಗ್ರಹಿಸಲು ಗಾಯತ್ರೀಮಂತ್ರಾತ್ಮಕವಾದ ಈ ಅಹಂಬ್ರಹ್ಮಾಸ್ಮಿ ಎಂಬ ಜ್ಞಾನಾಸ್ತ್ರದ ಪ್ರಯೋಗವೇ ಅರ್ಘ್ಯಪ್ರದಾನದ ತತ್ವವಾಗಿರುತ್ತದೆ.

## ೩೩ನೆಯ ಪ್ರಕರಣ.

| | |
|---|---|
| ಶ್ರೀರಾಮನು ಬ್ರಹ್ಮಾಸ್ತ್ರದಿಂದ ರಾವಣನನ್ನು ನಿಗ್ರಹಿಸಿದುದು. | ಅವಿದ್ಯಾರಾಜನೆಂದರೆ ವಾಸನಾವೃತ್ತಿ ಮತ್ತು ಇಂದ್ರಿಯಗಳ ಆಕರ್ಷಣಾ ಶಕ್ತಿಯಾಗಿರುವ ವಿಕ್ಷೇಪಶಕ್ತಿ ಅಥವಾ ರಜೋಗುಣದ ತತ್ವವು "ಅಹಂಬ್ರಹ್ಮಾಸ್ಮಿ" ಎಂಬ ಜ್ಞಾನಾ ಸ್ತ್ರದಿಂದ ನಿಗ್ರಹವಾಗುವ ವಿಚಾರ. |

ರಾ|| ಶ್ರೀರಾಮನು ರಾವಣನ ಮೇಲೆ ಪ್ರಯೋಗಮಾಡಲು ತೆಗೆದುಕೊಂಡ ಬ್ರಹ್ಮಾಸ್ತ್ರವನ್ನು ವೇದೋಕ್ತ ವಿಧಿಯಿಂದ ಅಭಿಮಂತ್ರಿಸಿ ಅನುಸಂಧಾನಮಾಡಿದನು.

**ತತ್ವ॥** ಶ್ರೀರಾಮಚಂದ್ರನ ಬ್ರಹ್ಮಾಸ್ತ್ರಪ್ರಯೋಗವೇ "ಓಂ" ಕಾರೋಚ್ಚಾರಣೆಯ ಅಗ್ರಭಾಗದಲ್ಲಿ ಬುದ್ಧಿವೃತ್ತಿಯಲ್ಲಿರುವ "ಅಹಂಬ್ರಹ್ಮಾಸ್ಮಿ" ಎಂಬ ಜ್ಞಾನದ ಸ್ವರೂಪ ವೆಂದು, ಹಿಂದಿನ ಎರಡು ಪ್ರಕರಣಗಳಿಂದಲೂ ತಿಳಿಸಿಕೊಂಡು ಬಂದಿರುವುದಷ್ಟೆ! ಶ್ರೀರಾಮನು ಬ್ರಹ್ಮಾಸ್ತ್ರವನ್ನು ಮತ್ತಾವ ವಿಧಿಪ್ರಕಾರದಿಂದಲೂ ಅಭಿಮಂತ್ರಿಸದೆ, ವೇದೋಕ್ತ ವಿಧಿಯಿಂದಲೇ ಅಭಿಮಂತ್ರಿಸಿರುವ ತತ್ವವೇನೆಂದರೆ—ವೇದೋಕ್ತವಿಧಿಯೆಂದರೆ ವೇದಗಳಿಂದ ಹೇಳಲ್ಪಟ್ಟಿರುವ ವಿಧಾನವೆಂದು ಅರ್ಥವಾಗುವುದು. "ಅಹಂ ಬ್ರಹ್ಮಾಸ್ಮಿ" ಎಂಬ ಜ್ಞಾನದ ಪ್ರಯೋಗವು ವೇದಬಾಹ್ಯವಲ್ಲವೆಂದೂ, ವೇದದ ವಿಧಿಯೇ "ಅಹಂ ಬ್ರಹ್ಮಾಸ್ಮಿ" ಮುಂತಾದ ಮಹಾವಾಕ್ಯಗಳೆಂದೂ, ನಿಸ್ಸಂದೇಹವಾಗಿ ಈ ತತ್ವಾರ್ಥ ರಾಮಾಯಣದಿಂದ ವಿಶದವಾಗುವುದು.

ಅಲ್ಲದೆ ಪ್ರಪಂಚಾನುವರ್ತನೆಗೆ ಮೂಲಕಾರಣವಾದ, ಮತ್ತು ಆಕಾಶದ ಗುಣವಾದ ಶಬ್ದದಲ್ಲಿಯೂ ಅಡಗಿಕೊಂಡಿರುವ, ರಾವಣನ ತತ್ವದಲ್ಲಿರುವ ರಜೋಗುಣದ ತತ್ವ ಅಥವಾ ವಿಕ್ಷೇಪಶಕ್ತಿಯ ನಿಗ್ರಹವೇ ಕೊನೆಯಾಗಿರುವ ಅಹಂಬ್ರಹ್ಮಾಸ್ಮಿಯ ಪ್ರಯೋಗದ ಸ್ಥಿತಿ ಯಿಂದ ಪರಮಪದವನ್ನು ಹೊಂದಬೇಕು. ಅಂದರೆ "ಜ್ಞಾನಾನ್ಮೋಕ್ಷಃ" ಎಂಬ ಶ್ರುತಿ ವಾಕ್ಯಕ್ಕೆ ಸರಿಯಾಗಿ "ಅಹಂಬ್ರಹ್ಮಾಸ್ಮಿ" ಎಂಬ ಜ್ಞಾನದಿಂದ ಪರಮಪದವನ್ನು ಸೇರುವ ತತ್ವಾರ್ಥವೇ ವೇದದ ಸಾರವಾಗಿರುವುದರಿಂದ, ಈ "ಅಹಂಬ್ರಹ್ಮಾಸ್ಮಿ" ಎಂಬ ಮಹಾ ಮಂತ್ರದಲ್ಲಿ ವೇದಗಳ ಸಾರಾಂಶವೆಲ್ಲ ಅಡಗಿರುವುದು. ಅಲ್ಲದೆ ವೇದಗಳ ಸಾರವೇ ಈ "ಅಹಂಬ್ರಹ್ಮಾಸ್ಮಿ" ಎಂಬ ಜ್ಞಾನದ ಅನುಭವವನ್ನು ಹೊಂದುವುದರ ಸಾರವಾಗಿರು ತ್ತೆಂಬುದನ್ನು ನಿಸ್ಸಂದೇಹವಾಗಿ ನಂಬತಕ್ಕದ್ದಾಗಿದೆ. ಅಲ್ಲದೆ ಸೀತಾಪಹರಣದಿಂದ ಇದುವರೆಗೆ ಬಂದಿರುವ ಅನುಷ್ಠಾನ ಅಥವಾ ಸಾಧನೆಯ ತತ್ವಗಳೂ ವೇದೋಕ್ತವಿಧಿ ಯಾಗಿಯೇ ಇರುವುವೆಂದು ನಿಸ್ಸಂದೇಹವಾಗಿ ನಂಬತಕ್ಕದ್ದಾಗಿದೆ. ಕಾರಣವೇನೆಂದರೆ ಅವಿದ್ಯೆಯನ್ನು ನಿಗ್ರಹಿಸುವುದೆಂದರೆ, ಮೋಕ್ಷಸಾಮ್ರಾಜ್ಯವನ್ನು ಹೊಂದಲು "ಅಹಂ ಬ್ರಹ್ಮಾಸ್ಮಿ ಎಂಬ ಜ್ಞಾನಾಸ್ತ್ರವು ಪ್ರಯೋಗಿಸಲ್ಪಟ್ಟಿರುವುದು. ಇಂತಹ ಅಹಂಬ್ರಹ್ಮಾಸ್ಮಿ ಎಂಬ ಬಾಣಪ್ರಯೋಗಕ್ಕೆಂದರೆ ರಾವಣನನ್ನು ಸಂಹರಿಸುವ ಕಾರ್ಯಕ್ಕೆ, ಶ್ರೀರಾಮ ಚಂದ್ರನ ಲೀಲಾವಿಭೂತಿಯ ತತ್ವಗಳೆಲ್ಲಾ ವೇದೋಕ್ತವಾದುವೆಂದು ಸಂಶಯವಿಲ್ಲದೆ ನಂಬತಕ್ಕದ್ದಾಗಿದೆ. ಅಲ್ಲದೆ ರಾವಣನನ್ನು ನಿಗ್ರಹಿಸಲು ಶ್ರೀರಾಮಚಂದ್ರನು ನಡೆಸಿರುವ ಕಾರ್ಯಪರಂಪರೆಗಳ ತತ್ವಗಳನ್ನು ಬಿಟ್ಟು, ಜನರು ಮನಸ್ಸಿವಮಾಡಿರುವ ಸಿದ್ಧಾಂತಗಳೆಲ್ಲ ವೇದಬಾಹ್ಯಗಳಾಗಿರುವುದರಲ್ಲಿ ಸಂದೇಹವಿಲ್ಲವೆಂದೂ, ಪ್ರತಿಯೊಂದು ಪ್ರಕರಣಗಳ ತತ್ವಗಳಿಗೂ ಅನ್ವಯಮಾಡಿರುವ ಶ್ರೀಕೃಷ್ಣಪರಮಾತ್ಮನ, ಶ್ರೀಶಂಕರಭಗವತ್ಪಾದಾಚಾರ್ಯ ರವರ ಮತ್ತು ಶ್ರೀವಿದ್ಯಾರಣ್ಯರವರ ವಾಕ್ಯಗಳು ವೇದಕ್ಕೆ ಅಭಿಮತವಾದವುಗಳೆಂದು ದೃಢವಾಗಿ ನಂಬಬಹುದೆಂದೂ ಸೂಚಿತವಾಗುತ್ತದೆ. ಈ ಮೇಲಿನ ತಾತ್ಪರ್ಯಗಳಿಂದ

ಶ್ರೀರಾಮಚರಿತ್ರೆಯ ಅಂತರಾರ್ಥವು ಶ್ರೀರಾಮಚಂದ್ರನ ಲೀಲಾವಿಭೂತಿಯಾದ ಧರ್ಮಾರ್ಥ ಕಾಮಗಳ ತತ್ವಗಳಲ್ಲದೆ, ಮೋಕ್ಷಮಾರ್ಗದ ತತ್ವವನ್ನೂ ಒಳಗೊಂಡಿರುವುದೆಂಬುದರಲ್ಲಿ ಕೊಂಚವೂ ಸಂಶಯವಿಲ್ಲವೆಂಬುದನ್ನೂ ಸೂಚಿಸುತ್ತದೆ.

**ರಾ||** ಶ್ರೀರಾಮಚಂದ್ರನು ಮಹಾಸ್ತ್ರವನ್ನು ಅನುಸಂಧಾನಮಾಡುವಾಗಲೇ ಭೂಮಿಯು ಕಂಪಾಯಮಾನವಾಗಿ ಸಮಸ್ತ ಭೂತಗಳೂ ನಡುಗಿದವು.

**ತತ್ವ||** ನಾದಾನುಸಂಧಾನದ ಪರಿಪಕ್ವಾವಸ್ಥೆಯ ಕಾಲದಲ್ಲಿ ನಾನೇ ಬ್ರಹ್ಮನೆಂಬ ದೃಢವಾದ ಜ್ಞಾನದಿಂದ ಸಮಾಧಿಯಲ್ಲಿ ಮುಳುಗಲು ಯಾವಾಗ ಪ್ರಾರಂಭವಾಗುವುದೋ, ಆಗ ಭೂತತ್ವವಾದ ಅವಿದ್ಯಾಪ್ರಧಾನಶಕ್ತಿಗೆ ಪ್ರಾಣೋತ್ಕ್ರಮಣ ಕಾಲವೊದಗಿತೆಂಬ ತತ್ವದ ಸೂಚನೆಯಾಗಿರುವುದು.

**ರಾ||** ಶ್ರೀರಾಮನು ಅಭಿಮಂತ್ರಿಸಿದ ಮಹಾಸ್ತ್ರವನ್ನು ಅತ್ಯಂತ ಕೋಪಾವಿಷ್ಟನಾಗಿ ತನ್ನ ಸರ್ವಶಕ್ತಿಯನ್ನೂ ಉಪಯೋಗಿಸಿ, ಬಿಲ್ಲಿನ ನಾಣನ್ನು (ಹಗ್ಗ) ಆಕರ್ಣಾಂತವಾಗಿ ಎಳೆದು ಅತ್ಯಂತ ಜಾಗರೂಕತೆಯಿಂದ ಗುರಿಯಿಟ್ಟು ರಾವಣನೆದೆಗೆ ಪ್ರಯೋಗಮಾಡಿದನು.

**ತತ್ವ||** ಶ್ರೀರಾಮನು ಅಭಿಮಂತ್ರಿಸಿದ ಮಹಾಸ್ತ್ರವನ್ನು ಅತ್ಯಂತ ಕೋಪಾವಿಷ್ಟನಾಗಿ ಬಿಟ್ಟ ತತ್ವವೇನೆಂದರೆ—"ಅಹಂ ಬ್ರಹ್ಮಾಸ್ಮಿ" ಎಂಬುದರ ಪ್ರಯೋಗವು ತೀವ್ರತಮವನ್ನು ಮೀರಿ ಉತ್ಕಟಾವಸ್ಥೆಯಲ್ಲಿರಬೇಕೆಂಬ ತತ್ವವನ್ನು ಸೂಚಿಸುವುದು. ಹೀಗೆ ಅಹಂ ಬ್ರಹ್ಮಾಸ್ಮಿಯ ಜ್ಞಾನದ ಉತ್ಕಟಾವಸ್ಥೆಯು ಇದ್ದರೇನೇ ಸಾಕ್ಷಾತ್ಕಾರವಾಗುವುದೆಂಬ ತತ್ವಕ್ಕೆ ಮುಂಡಕೋಪನಿಷತ್ತಿನಲ್ಲಿ,

> ನಾಯಮಾತ್ಮಾ ಪ್ರವಚನೇ ನಲಭ್ಯೋನಮೇಧಯಾ
> ನಬಹುನಾಶ್ರುತೇನ ಯಮೇವೈಷ ವೃಣುತೇತೇನಲಭ್ಯ
> ಸ್ತಸ್ಯೈಷ ಆತ್ಮಾ ವಿವೃಣುತೇತನೂಂಸ್ವಾಂ |

**ತಾ||** ಶಾಸ್ತ್ರಪಾಠಗಳನ್ನು ಮತ್ತೊಬ್ಬರಿಗೆ ಹೇಳುವುದರಿಂದ ಪರಮಾತ್ಮನು ಲಭಿಸುವುದಿಲ್ಲ. ಗ್ರಂಥಾರ್ಥಗಳನ್ನು ಮನಸ್ಸಿನಲ್ಲಿ ಧಾರಣೆಮಾಡುವ ಶಕ್ತಿಯಿಂದಲೂ ಲಭಿಸುವುದಿಲ್ಲ. ಬಹುಪ್ರಕಾರವಾಗಿ ಶಾಸ್ತ್ರಗಳನ್ನು ಶ್ರವಣಮಾಡುವುದರಿಂದಲೂ ಲಭಿಸನು. ಮತ್ತಾವುದರಿಂದ ಲಭಿಸುವನೆಂದರೆ, ಪರಮಾತ್ಮಸ್ವರೂಪನಾಗಬೇಕೆಂಬ ಉತ್ಕಟವಾದ ಬಯಕೆಯಿಂದಲೇ ಅವಿದ್ಯೆಯಿಂದ ಮರೆಯಾಗಿರುವ ಸ್ವಸ್ವರೂಪವನ್ನು ತೋರ್ಪಡಿಸಿಕೊಳ್ಳುವನು, ಎಂದು ಹೇಳಿರುವುದು.

ಆದುದರಿಂದ ಈ ಸೋಪಾನದ ಸಮಾಧಿಯ ಅನುಷ್ಠಾನದಲ್ಲಿರುವ ಅಧಿಕಾರಿಯು "ಅಹಂ ಬ್ರಹ್ಮಾಸ್ಮಿ" ಎಂಬ ಉತ್ಕಟೇಚ್ಛೆಯಿಂದ ಸಮಾಧಿಯಲ್ಲಿ ಮುಳುಗಬೇಕೆಂಬ ತತ್ವ.

ಶ್ರೀರಾಮನು ತನ್ನ ಸರ್ವಶಕ್ತಿಯನ್ನೂ ಉಪಯೋಗಿಸಿ, ಬಿಲ್ಲಿನ ನಾಣನ್ನು ಆಕರ್ಣಾಂತ ವಾಗಿ ಎಳೆದು, ಅತ್ಯಂತ ಜಾಗರೂಕತೆಯಿಂದ ಗುರಿಯಿಟ್ಟು ರಾವಣನೆದೆಗೆ ಪ್ರಯೋಗ ಮಾಡಿದನೆಂದರೆ—ಈ ಸೋಪಾನದ ಸಮಾಧಿಯ ಅನುಷ್ಠಾನದಲ್ಲಿರುವ ಅಧಿಕಾರಿಯು "ಓಂ"ಕಾರೋಚ್ಚಾರಣೆಯನ್ನು ಚೆನ್ನಾಗಿ ಮೇಲಕ್ಕೆ ಅನುಸಂಧಾನಮಾಡಿ, ಅಗ್ರದಲ್ಲಿರುವ "ಅಹಂ ಬ್ರಹ್ಮಾಸ್ಮಿ" ಎಂಬ ಬುದ್ಧಿವೃತ್ತಿಯನ್ನು ಎಳೆದುಕೊಂಡು ನಾನು ಸರ್ವವ್ಯಾಪಿಯಾದ ಪರಬ್ರಹ್ಮನಲ್ಲದೆ ಅನ್ಯನಲ್ಲವೆಂದು "ಅಹಂ ಬ್ರಹ್ಮಾಸ್ಮಿ, ಅಹಂ ಬ್ರಹ್ಮಾಸ್ಮಿ" ಎನ್ನುವ ಉತ್ಕಟ ವಾದ ಬಯಕೆಯಿಂದ ಸಮಾಧಿಯಲ್ಲಿ ಮುಳುಗುವುದೇ ಶ್ರೀರಾಮಚಂದ್ರನು ರಾವಣನನ್ನು ನಿಗ್ರಹಿಸಲು, ಆಕರ್ಣಾಂತವಾಗಿ ಧನುಸ್ಸಿನ ನಾಣನ್ನೆಳೆದು ರಾವಣನೆದೆಗೆ ಗುರಿಯಿಟ್ಟು ಪ್ರಯೋಗಮಾಡಿದುದರ ತತ್ವವಾಗಿರುವುದು. ಅಂದರೆ ಬುದ್ಧಿವೃತ್ತಿಯು ಆತ್ಮನಲ್ಲಿ ಲೀನ ವಾಗಲು, ಉತ್ಕಟವಾದ ಅಹಂ ಬ್ರಹ್ಮಾಸ್ಮಿಯ ಇಚ್ಛೆಯಿಂದ ಸಮಾಧಿಯಲ್ಲಿ ಮುಳುಗು ವುದರ ಮೂಲಕ ಅವಿದ್ಯಾಪ್ರಧಾನವಾದ ವಿಕ್ಷೇಪಶಕ್ತಿಯನ್ನು ನಿರ್ವೀರ್ಯಮಾಡಲು ಅನುಸಂಧಾನಮಾಡಿತೆಂಬ ತತ್ವವಾಗಿರುವುದು.

ಸಮಾಧಿಯ ಅನುಷ್ಠಾನದ ಪ್ರಥಮಾವಸ್ಥೆಯಾದ ಬಂಧತ್ರಯದಿಂದ ಕೂಡಿದ "ಓಂ" ಕಾರೋಪಾಸನೆಯಲ್ಲಿ ದೇಹದ ಶಕ್ತಿಗಳು ಅತಿಯಾಗಿ ಬಳಲದಂತೆ ಅಲ್ಪಕಾಲ ಸಮಾಧಿಯ ಅಭ್ಯಾಸಮಾಡಿ, ಕ್ರಮೇಣ ಅಧಿಕಮಾಡಿಕೊಂಡು ಬರಬೇಕೆಂದು ಹಿಂದೆ ತಿಳಿಸಿತಷ್ಟೆ! ರಾವಣನ ಸಂಹಾರಕಾಲದ ತತ್ವವಾದ "ಓಂ"ಕಾರನಾದವಡಗುವ ಈ ಪ್ರಕರ ಣದ ಸೋಪಾನದಲ್ಲಿ "ಓಂ" ಕಾರೋಚ್ಚಾರಣೆಯನ್ನು ಚೆನ್ನಾಗಿ ಅನುಸಂಧಾನಮಾಡಿ, ಅಹಂಬ್ರಹ್ಮಾಸ್ಮಿ ಜ್ಞಾನದೊಡನೆ ಧೈರ್ಯದಿಂದ ಸಮಾಧಿಯಲ್ಲಿ ಆತ್ಮಾಭಿಮುಖವಾಗಿ ಮುಳು ಗಬೇಕೆಂಬ ತತ್ವವೇ ಶ್ರೀರಾಮನು ಸರ್ವಶಕ್ತಿಯನ್ನೂ ಉಪಯೋಗಿಸಿ ಬಿಲ್ಲಿನ ನಾಣನ್ನು ಆಕರ್ಣಾಂತವಾಗೆಳೆದು ರಾವಣನ ಮೇಲೆ ಬಾಣಪ್ರಯೋಗ ಮಾಡಿದುದಾಗಿರುವುದು.

**ರಾ||** ಶ್ರೀರಾಮನಿಂದ ಬಿಡಲ್ಪಟ್ಟ ಬಾಣವು ರಾವಣನ ಪ್ರಾಣವನ್ನು ಕೊನೆಮುಟ್ಟಿಸಿ ಪುನಃ ಶ್ರೀರಾಮನಲ್ಲಿಗೆ ಬಂದು ಸೇರಿತು.

**ತತ್ವ||** ಶ್ರೀರಾಮನ ಬಾಣದಿಂದ ರಾವಣನು ಪ್ರಾಣಬಿಟ್ಟನೆಂದರೆ—ಅಧಿಕಾರಿಯು ಉತ್ಕಟವಾದ "ಅಹಂ ಬ್ರಹ್ಮಾಸ್ಮಿ"ಯ ಜ್ಞಾನದಿಂದ ಸಮಾಧಿಯಲ್ಲಿ ಆತ್ಮಾಭಿಮುಖವಾಗಿ ಮುಳುಗುವುದರ ಅಭ್ಯಾಸದಿಂದ ಅವಿದ್ಯಾಪ್ರಧಾನವಾದ ವಿಕ್ಷೇಪಶಕ್ತಿಯು ನಿರ್ವೀರ್ಯ ವಾಗುವುದೇ ಫಲವು. ಅಂದರೆ ಬುದ್ಧಿವೃತ್ತಿಗೆ ವಿಷಯಾಕಾರವನ್ನು ತಂದೊಡ್ಡುತ್ತಿದ್ದ ವಾಸನಾವೃತ್ತಿ ಅಥವಾ ವಿಕ್ಷೇಪಚೈತನ್ಯವನ್ನು ಬುದ್ಧಿತತ್ವಚೈತನ್ಯವು ಉಪಸಂಹಾರಮಾಡಿ ಕೊಂಡಿತೆಂಬ ತತ್ವವಾಗಿರುವುದು.

ಅಂದರೆ ಆಕಾಶದ ಗುಣವಾದ ಶಬ್ದದಲ್ಲಿಯೂ ರಾವಣನತತ್ವವಾದ ವಿಕ್ಷೇಪಶಕ್ತಿಯು ಇರುವುದಷ್ಟೆ! ಒಳಗಡೆ ನಾದ ಮತ್ತು ತೇಜಸ್ಸು ಅಧಿಕಾರಿಗೆ ಸಮಾಧಿಯಲ್ಲಿ ಗೋಚರ ವಾಗುವುದರಿಂದ, ಶಬ್ದ ಮತ್ತು ನಾದಗಳೆಂಬ ವಿಷಯಸ್ವರೂಪವಾದ ಸಗುಣವು ಇದ್ದೇ ಇರುವುದು. ಯಾವ ವಿಷಯವೇ ಆಗಲಿ ಶಬ್ದ ಸ್ಪರ್ಶ ರೂಪ ರಸ ಗಂಧಗಳನ್ನು ಬಿಟ್ಟು ಪ್ರತ್ಯೇಕವಾಗಿಲ್ಲವಷ್ಟೆ! ಆದುದರಿಂದ ಸಮಾಧಿಯಲ್ಲಿ ಒಳಗಡೆ ನೋಡುವ ತೇಜಸ್ಸು ಮತ್ತು ಕೇಳುವ ನಾದಗಳು ವಿಷಯರೂಪವಾಗಿರುವುದರಿಂದ ಜ್ಞಾತೃ, ಜ್ಞಾನ ಜ್ಞೇಯ ಗಳೆಂಬ ತ್ರಿಪುಟಿಯು ಇರುವುದು. ಸಮಾಧಿಯಲ್ಲಿ ಜ್ಯೋತಿ ಮತ್ತು ನಾದಗಳಿರುವುದ ರಿಂದ, ಬುದ್ಧಿಗೆ ನಾದ ಮತ್ತು ಜ್ಯೋತಿಗಳ ಆಕಾರವಾಗುವ ವೃತ್ತಿಯಿರುವುದು. ಅಂದರೆ ಜ್ಞಾತೃವಿಗೆ ಜ್ಞೇಯವಾದ ನಾದ ಮತ್ತು ಜ್ಯೋತಿಸ್ವರೂಪವಾದ ವಿಷಯಗಳ ಆಕಾರ ವಾಗಲು, ವೃತ್ತಿ ಅಥವಾ ತ್ರಿಪುಟಿಯಲ್ಲಿನ ಜ್ಞಾನದ ಅವಶ್ಯಕತೆಯಿತ್ತು.

ಬುದ್ಧಿವೃತ್ತಿ ಅಥವಾ ಜ್ಞಾತೃವು "ಅಹಂಬ್ರಹ್ಮಾಸ್ಮಿ"ಯ ಉತ್ಕಟವಾದ ಜ್ಞಾನದಿಂದ ಸಮಾಧಿಯಲ್ಲಿ ಮುಳುಗುವುದರಿಂದ, ಇದುವರೆಗೂ ಇದ್ದ ಜ್ಞೇಯಸ್ವರೂಪ ಅಥವಾ ವಿಷಯಸ್ವರೂಪವಾದ ನಾದ ಮತ್ತು ಜ್ಯೋತಿಗಳ ತಿಳಿವಳಿಕೆಯು ಜ್ಞಾತೃವಿಗೆ ನಶಿಸುವುದು. ಈ ಜ್ಞೇಯಸ್ವರೂಪ ಅಥವಾ ವಿಷಯಸ್ವರೂಪದ ಆಕಾರವಾಗಲು ಬುದ್ಧಿಗೆ ವೃತ್ತಿಯ ನ್ನುಂಟುಮಾಡಿದ್ದುದೇ, ರಾವಣನ ತತ್ವದಲ್ಲಿರುವ ವಿಕ್ಷೇಪಶಕ್ತಿ. ಅಂದರೆ ಜ್ಞಾತೃವಿಗೆ ಜ್ಞೇಯಸ್ವರೂಪವಾದ ವಿಷಯಾಕಾರವಾಗಲು ಸೂಜಿಗಲ್ಲಿನಂತೆ, ಜ್ಞಾತೃ ಜ್ಞೇಯಗಳನ್ನು ಸಂಬಂಧಿಸುವ ಜ್ಞಾನವೆಂಬುದು ಮಧ್ಯದಲ್ಲಿ ಇದುವರೆಗೂ ಇತ್ತು. ವಿಷಯರೂಪವಾದ ಜ್ಞೇಯಗಳನ್ನು ಜ್ಞಾತೃವಿನೊಡನೆ ಸಂಬಂಧಿಸುವುದರಿಂದ, ಇದಕ್ಕೆ ತ್ರಿಪುಟಿಯಲ್ಲಿನ ಜ್ಞಾನ ಅಥವಾ ವೃತ್ತಿಯೆಂಬ ಹೆಸರು.

ಇಂದ್ರಜಿತ್ತಿನ ವಧೆಯ ತತ್ವದಲ್ಲಿ ಭೋಕ್ತೃ, ಭೋಗಕ್ಕೆಳೆಯುವ ಶಕ್ತಿ, ಭೋಗ್ಯ ವಸ್ತುಗಳೆಂಬದಾಗಿ ತ್ರಿಪುಟಿಯ ಸ್ವರೂಪವನ್ನು ವಿವರಿಸಿದೆ. ಇದರಂತೆಯೇ ರಾವಣನ ವಧೆಯ ತತ್ವವನ್ನೂ ಅನ್ವಯಮಾಡಬಹುದು. ಹೇಗೆಂದರೆ:—

೧. ಜ್ಞಾತೃ=ನೋಡುವವನು.
೨. ಜ್ಞಾನ=ವೃತ್ತಿ ಅಥವಾ ಶಬ್ದ ರೂಪ ಮುಂತಾದುವುಗಳ ಕಡೆಗೆ ಎಳೆಯುವ ರಜೋಗುಣಚೈತನ್ಯ ಅಥವಾ ವಿಕ್ಷೇಪಶಕ್ತಿಅಥವಾ ವಾಸನಾವೃತ್ತಿ.
೩. ಜ್ಞೇಯ=ಶಬ್ದ, ಸ್ಪರ್ಶ, ರೂಪ ಮುಂತಾದುವುಗಳು.

೩ನೆಯದಾದ ಶಬ್ದ, ಸ್ಪರ್ಶ, ರೂಪ ಮುಂತಾದ ಸ್ವರೂಪಗಳು ಬಾಹ್ಯವ್ಯಾಪಾರ ದಲ್ಲಿದ್ದೇ ಇರುವುವು. ಇಂಥ ಶಬ್ದ ರೂಪ ಮುಂತಾದುವುಗಳ ಕಡೆಗೆ ೧ನೆಯದಾದ ಜ್ಞಾತೃ ಅಥವಾ ನಮ್ಮನ್ನು ೨ನೆಯದಾದ ವಿಕ್ಷೇಪಶಕ್ತಿಯು ಎಳೆಯುತ್ತಲೇ ಇರುವುದು. ಹೊರಗಿನ

ಭೋಗಪದಾರ್ಥಗಳಲ್ಲಿ ವಿರಕ್ತಿಯನ್ನು ಪಡೆದು ಮೌನದಿಂದ ಕುಳಿತಿದ್ದರೂ, ನಮಗೆ ಶಬ್ದ ಕೇಳಿಸಿಯೇ ಕೇಳಿಸುತ್ತದೆ. ಪದಾರ್ಥಗಳನ್ನು ನೋಡಿಯೇ ನೋಡುತ್ತೇವೆ. ಅಂದರೆ, ನಮ್ಮ ಬುದ್ಧಿಯನ್ನು ಬಾಹ್ಯದ ಶಬ್ದ ರೂಪ ಮುಂತಾದುವುಗಳಲ್ಲಿ ಸರ್ವದಾ ಎಳೆಯುತ್ತಿರುವುದೇ, ರಜೋಗುಣಚೈತನ್ಯ ಅಥವಾ ವಿಕ್ಷೇಪಶಕ್ತಿ. ಈ ತತ್ವಕ್ಕೆ ಶ್ರೀಶಂಕರಭಗವತ್ಪಾದಾಚಾರ್ಯರವರ ಶ್ಲೋಕವನ್ನು ಹಿಂದೆಯೇ ಬರೆದಿದೆ.

ಇದರಂತೆ ಸಮಾಧಿಯಲ್ಲಿ ಬಾಹ್ಯವಿಷಯಗಳ ಚಿಂತನೆಯು ಬುದ್ಧಿವೃತ್ತಿಗೆ ತಪ್ಪಿದರೂ ಸಮಾಧಿಯಲ್ಲಿ ಕಾಣುವ ಪ್ರತಿಬಿಂಬದ ಬೆಳಕು ಮತ್ತು ನಾದಗಳಿರುವುದರಿಂದ, ಮೇಲೆ ವಿವರಿಸಿರುವ ಜ್ಞಾತೃ, ಜ್ಞಾನ, ಜ್ಞೇಯಗಳ ಸ್ವರೂಪವಾದ ತ್ರಿಪುಟಿಯಿದ್ದೇ ಇರುವುದು. ನಮಗೆ ಗೋಚರವಾಗುವ ಜ್ಯೋತಿ ಮತ್ತು ಕೇಳಿಬರುವ ಓಂಕಾರನಾದಗಳು ಇರುವವರೆಗೂ ಇವುಗಳ ಆಕಾರವಾಗಲು ನಮ್ಮ ಬುದ್ಧಿಗೆ ವೃತ್ತಿಯನ್ನುಂಟುಮಾಡುವುದೇ ವಿಕ್ಷೇಪಶಕ್ತಿ. ಶ್ರೀರಾಮನು ರಾವಣನೊಡನೆ ಅಸ್ತ್ರಕ್ಕೆ ಪ್ರತ್ಯಸ್ತ್ರಗಳನ್ನು ಪ್ರಯೋಗಿಸುತ್ತ ಪ್ರಥಮದಲ್ಲಿ ಹೇಗೆ ಕಾಲಕಳೆಯುತ್ತಿದ್ದನೋ, ಹಾಗೆ ಜ್ಯೋತಿ ಮತ್ತು ನಾದಗಳನ್ನೇ ಅನುಸರಿಸಿಕೊಂಡು ಪ್ರಥಮದಲ್ಲಿ ಸಮಾಧಿಯ ಅನುಷ್ಠಾನಮಾಡಿಕೊಂಡು ಬರಬೇಕು. ಮಾತಲಿಯು ರಾವಣನ ವಧೆಯ ಕಾಲವನ್ನು ಜ್ಞಾಪಿಸಿದ ತತ್ವವಾದ ನಾದ ಮತ್ತು ಜ್ಯೋತಿಗಳು ತಗ್ಗುತ್ತಾ ಬಂದ ಕಾಲದಲ್ಲಿ, ಶಬ್ದ ರೂಪಗಳಿಗೂ ಅಗೋಚರನಾದ ಬುದ್ಧಿವೃತ್ತಿಗೂ, ಗೋಚರನಾಗದ ಆತ್ಮನೇ ನಾನೆಂದು "ಅಹಂಬ್ರಹ್ಮಾಸ್ಮಿ"ಯ ಉತ್ಕಟವಾದ ಜ್ಞಾನದಿಂದ ಸಮಾಧಿಯಲ್ಲಿ ಮುಳುಗಿದರೆ, ತ್ರಿಪುಟಿಯಲ್ಲಿನ ಿನೆಯದಾದ ರೂಪ ಮತ್ತು ಶಬ್ದಗಳ ವಿಷಯಪದಾರ್ಥವಾದ ಜ್ಯೋತಿ ಮತ್ತು ನಾದವು ನಶಿಸುವುದು. ನಮಗೆ ಕಾಣುವ ಪ್ರತಿಫಲನದ ಬೆಳಕು ಮತ್ತು ನಾದವು ಯಾವಾಗ ನಶಿಸುವುದೋ ಆಗ ಜ್ಯೋತಿ ನಾದಗಳ ಕಡೆಗೆ ಬುದ್ಧಿಗೆ ವೃತ್ತಿಯನ್ನುಂಟುಮಾಡಿ ಎಳೆಯುತ್ತಿದ್ದ ವಿಕ್ಷೇಪಶಕ್ತಿ ಅಥವಾ ವಾಸನಾವೃತ್ತಿಯು ನಶಿಸುವುದು. ಇದೇ ರಾವಣನ ವಧೆಯ ತತ್ವವಾಗಿರುವುದು.

ರಾವಣನ ತತ್ವವಾದ ವೃತ್ತಿ ಇರುವವರೆಗೆ, ತ್ರಿಪುಟಿಯಾದ ಜ್ಞಾತೃ, ಜ್ಞಾನ, ಜ್ಞೇಯಗಳೆಂಬ ಮೂರೂ ಇರುವುವು. ಸಮಾಧಿಯಲ್ಲಿ ನೋಡುತ್ತಿದ್ದ ಆದಿತ್ಯನ ಪ್ರಕಾಶ ಮತ್ತು ನಾದಸ್ವರೂಪವಾದ ವಿಷಯಗಳು ನಶಿಸುವುದರಿಂದ, ತ್ರಿಪುಟಿಯಲ್ಲಿ ಿನೆಯದಾದ ವಿಷಯಸ್ವರೂಪವಾದ ಜ್ಞೇಯವು ಹೋಗುವುದು. ಯಾವಾಗ ವಿಷಯಸ್ವರೂಪವಾದ ಜ್ಞೇಯವು ಗೋಚರವಾಗುವುದಿಲ್ಲವೋ ಆಗ ನೋಡುವಿಕೆ ಅಥವಾ ವೃತ್ತಿಯೂ ನಶಿಸಿ ಜ್ಞಾತೃವೆಂದರೆ "ನಾನು" ಎಂಬ ಜ್ಞಾನ ಒಂದೇ ಉಳಿದುಕೊಳ್ಳುವ ಸಮಾಧಿಯ ಸ್ವರೂಪವೇ ರಾವಣನ ವಧೆಯ ತತ್ವವಾಗಿರುವುದು.

ಶ್ರೀರಾಮನು ಬಿಟ್ಟ ಬಾಣವು ರಾವಣನನ್ನು ಸಂಹರಿಸಿ ಪುನಃ ಶ್ರೀರಾಮನಲ್ಲಿಯೇ ಬಂದು ಸೇರಿದ ತತ್ವವೇನೆಂದರೆ—ರಾವಣನ ತತ್ವವಾದ ವಿಕ್ಷೇಪಶಕ್ತಿಯು ಸಮಾಧಿಯಲ್ಲಿ ತೇಜಸ್ಸು ಮತ್ತು ನಾದಗಳ ವಿಷಯಸ್ವರೂಪದ ಜ್ಞೇಯಕ್ಕೆಳೆಯುತ್ತಾ ಇತ್ತಷ್ಟೆ! ಬುದ್ಧಿ ತತ್ವವು ನಾದ ಮತ್ತು ಪ್ರತಿಬಿಂಬದ ಜ್ಯೋತಿಯ ಸ್ವರೂಪವಾದ ಜ್ಞೇಯವು ಬೇಡವೆಂದೂ ಆತ್ಮಸ್ವರೂಪವಾದ ಜ್ಞೇಯವೇ ಬೇಕೆಂದು ಸಮಾಧಿಯಲ್ಲಿ ಮುಳುಗಿತಷ್ಟೆ! ನಾದ ಮತ್ತು ತೇಜಸ್ಸಿನ ಅಂತರ್ಗತವಾದ ಆತ್ಮನು ಜ್ಞೇಯವೇ ಆಗುವುದಿಲ್ಲವಾದುದರಿಂದ, ಅಥವಾ ಜ್ಞೇಯರೂಪವಾಗಿರುವ ಆತ್ಮನನ್ನು ಬುದ್ಧಿವೃತ್ತಿಯು ಧರಿಸಿಕೊಳ್ಳಲಾರದಾದ್ದರಿಂದ, ಬುದ್ಧಿತತ್ವದಿಂದ ಹೊರಟ "ಅಹಂಬ್ರಹ್ಮಾಸ್ಮಿ"ಯ ಜ್ಞಾನವು ಬುದ್ಧಿತತ್ವ ಅಥವಾ ಜ್ಞಾತೃವನ್ನು ಜ್ಞೇಯಸ್ವರೂಪವಾದ ಆತ್ಮನೊಂದಿಗೆ ಕೂಡಿಸಿತು. ಆದುದರಿಂದ ಬುದ್ಧಿಯಿಂದ ಹೊರಟ "ಅಹಂಬ್ರಹ್ಮಾಸ್ಮಿ"ಯ ಜ್ಞಾನವು ವಿಷಯಸ್ವರೂಪವಾದ ಜ್ಞೇಯವನ್ನು ತಪ್ಪಿಸಿ, ಜ್ಞಾತೃವನ್ನು ಆತ್ಮಸ್ವರೂಪದಲ್ಲಿ ನಿಲ್ಲಿಸಿ, ಈ ಜ್ಞಾನವು ಪುನಃ ಜ್ಞಾತೃವಿನಲ್ಲಿಯೇ ಬಂದು ಸೇರಿಕೊಳ್ಳುವ ತತ್ವವೇ ಶ್ರೀರಾಮನು ಬಿಟ್ಟ ಬ್ರಹ್ಮಾಸ್ತ್ರವು ರಾವಣನನ್ನು ವಧಿಸಿ ಪುನಃ ಶ್ರೀರಾಮನಲ್ಲಿಗೆ ಹಿಂತಿರುಗಿ ಬಂದುದಾಗಿರುವುದು.

ರಾವಣನು ಶ್ರೀರಾಮನ ಬಾಣದಿಂದ ನಿಗ್ರಹಿಸಲ್ಪಟ್ಟವನಾಗಿ ಪರಮಾತ್ಮನ ಸ್ವರೂಪನೇ ಆಗಲು ಅಂದರೆ ಕಾರ್ಯವು ತಾನು ನಾಶವಾದನಂತರ ಕಾರಣರೂಪವನ್ನು ಹೋದುವುದೆಂಬ ನ್ಯಾಯದಂತೆ ಸಕಲಜಗತ್ಕಾರಣನಾದ ಶ್ರೀರಾಮನ ಸ್ವರೂಪವನ್ನೇ ಹೊಂದಲು ಶ್ರೀರಾಮಚಂದ್ರನಲ್ಲಿಯೇ ಸೇರಿಕೊಂಡನು. ಹೇಗೆಂದರೆ, ತ್ರಿಪುಟಿಯಲ್ಲಿನ ಜ್ಞಾನಚೈತನ್ಯದ ತತ್ವದವನೇ ರಾವಣನು. ಮೇಲೆ ತ್ರಿಪುಟಿಯ ಸ್ವರೂಪವನ್ನು ವಿಂಗಡಿಸಿ ಬರೆದಿರುವಂತೆ ಜ್ಞಾತೃವನ್ನು ಜ್ಞೇಯಸ್ವರೂಪವಾದ ಶಬ್ದ, ಸ್ಪರ್ಶ, ರೂಪ, ಮುಂತಾದ ವಿಷಯಗಳ ಕಡೆಗೆ ಎಳೆಯುವ ಚೈತನ್ಯವೆ ರಾವಣನು. ಅಂದರೆ ಪ್ರಕೃತಿಸ್ವರೂಪವಾದಬುದ್ಧಿಗೆ ವಿಷಯಸ್ವರೂಪವಾದ ವೃತ್ತಿಯನ್ನುಂಟುಮಾಡಿ, ಆ ಬುದ್ಧಿವೃತ್ತಿಯನ್ನು ವಿಷಯಾಕಾರಕ್ಕೆ ಎಳೆಯುವ ಚೈತನ್ಯವೇ ರಾವಣನ ತತ್ವವಾದ ವಿಕ್ಷೇಪಶಕ್ತಿ. ಯಾವಾಗ ಬುದ್ಧಿಗೆ ವೃತ್ತಿಯುಂಟಾಯಿತೋ ಬುದ್ಧಿಯಲ್ಲಿರುವ ಪ್ರತಿಬಿಂಬಚೈತನ್ಯವು ಕೂಡ ವೃತ್ತಿಪ್ರಕಾಶಕವಾಗುವುದು. ಬುದ್ಧಿವೃತ್ತಿಯಲ್ಲಿರುವ ಪ್ರತಿಬಿಂಬಚೈತನ್ಯವು ತ್ರಿಪುಟಿಯಲ್ಲಿನ ಜ್ಞಾನವನ್ನು ಉಪಸಂಹಾರ ಮಾಡುವುದೆಂದರೆ—ಜ್ಞಾತೃಚೈತನ್ಯವು ಜ್ಞಾನಚೈತನ್ಯವನ್ನು ಎಳೆದು ತನ್ನಲ್ಲಿ ಅಡಗಿಸಿಕೊಳ್ಳುವುದೇ ರಾವಣನು ಶ್ರೀರಾಮಚಂದ್ರನಲ್ಲಿ ಸೇರಿದನೆಂಬ ತತ್ವವಾಗಿರುವುದು. ಆತ್ಮಸಾಕ್ಷಾತ್ಕಾರ ಕಾಲದಲ್ಲಿ ಸತ್ವಗುಣದ ಚೈತನ್ಯಗಳು ಬುದ್ಧಿವೃತ್ತಿಯಲ್ಲಿರುವ ಪ್ರತಿಬಿಂಬಚೈತನ್ಯವನ್ನು ಸಹಕರಿಸಿಕೊಂಡು ಬರುವುವು. ಕಾರ್ಯಸ್ವರೂಪವಾಗಿರುವ ರಜಸ್ತಮೋಗುಣಗಳನ್ನು ಬುದ್ಧಿವೃತ್ತಿಯು ಹುರಿದಬೀಜದಂತೆ ಮಾಡುವುದರಿಂದ, ರಜಸ್ತಮೋಗುಣಗಳಲ್ಲಿನ

ಪ್ರತಿಬಿಂಬಚೈತ್ಯವು ಬುದ್ಧಿಚೈತನ್ಯದೊಡಗೂಡುವುದೆಂದರೆ ಏಕೀಭವಿಸುವುದು. ಇದೇ ರಾವಣನು ಶ್ರೀರಾಮನಲ್ಲಿ ಸೇರಿದ ತತ್ವವಾಗಿರುವುದು,

ವಿಷಯಭೋಗಗಳಲ್ಲಿ ವಿರಕ್ತಿಹುಟ್ಟುವುದೇ ಇಂದ್ರಿಯನಿಗ್ರಹವೆಂದು ತಿಳಿದುಕೊಳ್ಳಬಾರದು. ರಾವಣನು ವಧಿಸಲ್ಪಟ್ಟು ಶ್ರೀರಾಮನಲ್ಲಿಯೇ ಸೇರಿದಂತೆ ಶಬ್ದ ಸ್ಪರ್ಶ ರೂಪ ರಸ ಗಂಧಗಳ ಕಡೆಗೆ ನಮ್ಮ ಬುದ್ಧಿಯನ್ನು ಎಳೆಯುತ್ತಿರುವ ರಾವಣನ ತತ್ವದಲ್ಲಿರುವ ರಜೋಗುಣಚೈತನ್ಯವನ್ನು ರಜೋಗುಣಕ್ಕೆ ಪ್ರಕಾಶಕವಾಗಿರದಂತೆ, ಬಾಹ್ಯವ್ಯಾಪಾರದಲ್ಲಿ ಯಾವ ಧೀರನೂ ಹಿಡಿದುನಿಲ್ಲಿಸಿಕೊಳ್ಳಲಾರನು. ಆದುದರಿಂದ ಇಂದ್ರಿಯ ನಿಗ್ರಹ ವೆಂಬುದು ಈ ಸೋಪಾನದಿಂದಲೇ ಸಿದ್ಧಿಸಬೇಕಾಗಿರುವುದು.

ರಾವಣನ ವಧೆಯ ಮುಖ್ಯತಾತ್ಪರ್ಯವೇನೆಂದರೆ ಸಮಾಧಿಯ ಪ್ರಥಮಾಭ್ಯಾಸದಿಂದ ಸಗುಣಬ್ರಹ್ಮಸ್ವರೂಪವಾದ ಬಿಂದು ನಾದ ಜ್ಯೋತಿಗಳನ್ನೆ ಜ್ಞೇಯವಾಗಿ ಧರಿಸಿಕೊಂಡು, ಅಭ್ಯಾಸವನ್ನು ಅಧಿಕಮಾಡಿಕೊಂಡು ಬಂದು, ನಾದ ಮತ್ತು ಜ್ಯೋತಿಗಳು ಅಡಗುವ ಕಾಲ ದಲ್ಲಿ ಅಹಂ ಬ್ರಹ್ಮಾಸ್ಮಿಯ ಜ್ಞಾನದಿಂದ ಸಮಾಧಿಯಲ್ಲಿ ಮುಳುಗಲು, ಸಗುಣಸ್ವರೂಪ ವಾದ ನಾದ ಜ್ಯೋತಿಗಳು ನಶಿಸಿ, ಜ್ಞಾತೃವು ಆತ್ಮಸ್ವರೂಪದೊಡಗೂಡಿದ ತತ್ವವುಂಟಾ ಯಿತು. ಸಗುಣರೂಪವಾದ ಜ್ಞೇಯುವನ್ನು ನಶಿಸಲು ಪ್ರಯೋಗಿಸಿದ "ಅಹಂ ಬ್ರಹ್ಮಾಸ್ಮಿ" ಜ್ಞಾನವು ಆತ್ಮನನ್ನು ಧರಿಸಲಾರದೆ ತ್ರಿಪುಟಿಯಲ್ಲಿನ ಜ್ಞಾನವನ್ನು ಉಪಸಂಹಾರಮಾಡಿ ಕೊಂಡು, ಹಿಂದಕ್ಕೆ ಜ್ಞಾತೃಚೈತನ್ಯದಲ್ಲಿಯೆ ಸೇರಿಕೊಳ್ಳುವುದೇ ರಾವಣನ ವಧೆ ಮತ್ತು ಶ್ರೀರಾಮನ ಬಾಣವು ಪುನಃ ಅವನಲ್ಲಿಗೇ ಬಂದ ತತ್ವವಾಗಿರುವುದು. ರಾವಣನ ವಧೆಯ ತತ್ವದ ಈ ಪ್ರಕರಣದ ಸಾರಕ್ಕೆ ಅನ್ವಯವಾಗುವಂತೆ, ಉತ್ತರಗೀತೆಯಲ್ಲಿ ಅರ್ಜುನನ ಪ್ರಶ್ನೆ ಮತ್ತು ಶ್ರೀಕೃಷ್ಣಪರಮಾತ್ಮನ ಉತ್ತರವನ್ನು ಇಲ್ಲಿ ತಿಳಿಸಿರುವುದು. ಅರ್ಜುನನ ಪ್ರಶ್ನೆ:—

ಸಾಲಂಬಸ್ಯಾಸ್ಯ ನಿತ್ಯತ್ವಂ ನಿರಾಲಂಬಸ್ಯ ಶೂನ್ಯತಾ |
ಉಭಯೋರಪಿ ದೋಷತ್ವಾತ್ಕಥಂಧ್ಯಾಯಂತಿಯೋಗಿನಃ||

ತಾ|| ಸಗುಣಸ್ವರೂಪದ ಧ್ಯಾನವು ನಾಶವಾಗುವಂಥಾದ್ದು. ಪರಬ್ರಹ್ಮನು ಧ್ಯಾನಕ್ಕೆ ಮೊರಕುವವನಲ್ಲ. ಹೀಗೆ ಎರಡೂ ದೋಷಯುಕ್ತವಾಗಿರುವಾಗ ಆತ್ಮಸಾಕ್ಷಾ ತ್ಕಾರಮಾಡಿಕೊಳ್ಳಬೇಕೆಂದಿರುವ ಅಧಿಕಾರಿಯು ಹೇಗೆ ಧ್ಯಾನಮಾಡಬೇಕು? ಶ್ರೀಕೃಷ್ಣ ಪರಮಾತ್ಮನ ಉತ್ತರ:—

ಹೃದಯಂ ನಿರ್ಮಲಂ ಕೃತ್ವಾ ಚಿಂತಯಿತ್ವಾಪ್ಯನಾಮಯಂ |
ಅಹಮೇವ ಇದಂ ಸರ್ವ ಮಿತಿಪಶ್ಯೇತ್ಪರಂಸುಖಂ ||

ತಾ|| ಬುದ್ಧಿಯನ್ನು ನಿರ್ಮಲವಾದದ್ದನ್ನಾಗಿ ಮಾಡಿಕೊಂಡು, ಈ ಜಗತ್ತನ್ನೆಲ್ಲ ವ್ಯಾಪಿಸಿರುವ ನಾಮರೂಪವಿಲ್ಲದ ಪರಮಾತ್ಮನೇ ನಾನೆಂದು ಧ್ಯಾನಮಾಡುತ್ತ ಬಂದರೆ, ನಾಶವಿಲ್ಲದ ಆತ್ಮಸುಖವನ್ನು ಹೊಂದುವೆ.

ಈ ಅರ್ಜುನನ ಪ್ರಶ್ನೆ ಮತ್ತು ಶ್ರೀಕೃಷ್ಣಪರಮಾತ್ಮನ ಉತ್ತರಗಳ ತತ್ವದಿಂದ, ಸಮಾಧಿಯಲ್ಲಿ ಕಾಣುವ ಸಗುಣರೂಪವಾದ ಜ್ಯೋತಿ ಮತ್ತು ನಾದಗಳು ನಶಿಸುವಂಥವು. ಈ ಸಗುಣದ ಅವಲಂಬನೆಯನ್ನು ತಪ್ಪಿಸಿಕೊಳ್ಳಲು "ಅಹಂಬ್ರಹ್ಮಾಸ್ಮಿ" ಎಂಬ ಜ್ಞಾನದಿಂದ ಸಮಾಧಿಯಲ್ಲಿ ಮುಳುಗಬೇಕೆಂಬ ತತ್ವಕ್ಕೆ ಅನುಸಾರವಾಗಿಯೇ, ಶ್ರೀರಾಮನು ಬ್ರಹ್ಮಾಸ್ತ್ರ ಪ್ರಯೋಗಮಾಡಿ ರಾವಣನನ್ನು ವಧೆಮಾಡಿದುದಾಗಿರುವುದು. ಈ ಮೇಲಿನ ಶ್ರೀಕೃಷ್ಣ ಪರಮಾತ್ಮನ ವಾಕ್ಯಕ್ಕೆ ಅನುಸಾರವಾಗಿ ಶ್ರೀಶಂಕರಭಗವತ್ಪಾದಾಚಾರ್ಯರವರು, ವಿವೇಕ ಚೂಡಾಮಣಿ ೨೭೭ನೆಯ ಶ್ಲೋಕದಲ್ಲಿ,

ಅನಾತ್ಮವಾಸನಾಜಾಲೈಃ ತಿರೋಭೂತಾತ್ಮವಾಸನಾ |
ನಿತ್ಯಾತ್ಮನಿಷ್ಠಯಾತೇಷಾಂ ನಾಶೇಭಾತಿಸ್ವಯಂಸ್ಫುಟಂ ||

ತಾ|| ಅನಾತ್ಮಜ್ಞಾನಗಳಿಂದ ಆಚ್ಛಾದಿಸಲ್ಪಟ್ಟ ಆತ್ಮಜ್ಞಾನವು ನಿತ್ಯನಾದ ಆತ್ಮ ನಲ್ಲಿಯೆ ನೆಲೆಗೊಳ್ಳುವ ಸ್ಥಿತಿಯಿಂದ, ಅನಾತ್ಮಜ್ಞಾನಗಳು ನಾಶವಾಗಲು ಆತ್ಮಪದಾರ್ಥ ವಾದ ತಾನೇ ಸ್ಪಷ್ಟವಾಗಿ ಪ್ರಕಾಶಿಸುವುದು. ಎಂದು ಹೇಳಿರುವರು.

ಮೇಲಿನ ಶ್ರೀಶಂಕರಭಗವತ್ಪಾದಾಚಾರ್ಯರವರ ಶ್ಲೋಕದಿಂದಲೂ, ಅಹಂಬ್ರಹ್ಮಾಸ್ಮಿಯ ಜ್ಞಾನದಿಂದ ಸಮಾಧಿಯಲ್ಲಿ ಮುಳುಗಿದಲ್ಲದೆ, ರಾವಣನ ತತ್ವವಾದ ಅನಾತ್ಮವಾಸನೆಯು ನಾಶವಾಗುವುದಿಲ್ಲ ಎಂದು ಸ್ಪಷ್ಟವಾಗುವುದು. ಈ ತತ್ವಾರ್ಥವೇ ರಾವಣನು ಶ್ರೀರಾಮನ ಬ್ರಹ್ಮಾಸ್ತ್ರದಿಂದ ನಿಗ್ರಹವಾದ ತತ್ವವಾಗಿರುವುದು.

ಶ್ರೀರಾಮನಿಂದ ಬಿಡಲ್ಪಟ್ಟ ಬಾಣವು ರಾವಣನನ್ನು ನಿಗ್ರಹಿಸಿ ಪುನಃ ಶ್ರೀರಾಮನಲ್ಲಿಗೆ ಬಂದ ತತ್ವವೆ ನಾದ ಮತ್ತು ಪ್ರತಿಬಿಂಬದ ಪ್ರಕಾಶಸ್ವರೂಪವಾದ ಜ್ಞೇಯವನ್ನು ತಪ್ಪಿಸಿ ಕೊಳ್ಳಲು, ಆತ್ಮಸ್ವರೂಪವಾದ ಜ್ಞೇಯವು ದೊರಕದೆ ಇದ್ದರೂ "ಅಹಂಬ್ರಹ್ಮಾಸ್ಮಿ" ಯ ಉತ್ಕಟವಾದ ಜ್ಞಾನದಿಂದ ಸಮಾಧಿಯಲ್ಲಿ ಮುಳುಗಬೇಕೆಂದೂ, ಹೀಗೆ ಮುಳುಗುವುದ ರಿಂದ ಸಗುಣರೂಪವಾದ ಜ್ಞೇಯವು ನಶಿಸುವುದಲ್ಲದೆ "ಅಹಂಬ್ರಹ್ಮಾಸ್ಮಿ" ಯ ಪ್ರಯೋಗವು ಪುನಃ ಜ್ಞಾತೃವಿನಲ್ಲಿಯೇ ಸೇರಿಕೊಳ್ಳುವುದೆಂದೂ ಮೇಲೆ ವಿವರಿಸಿರುವುದಷ್ಟೆ! ಈ ರೀತಿಯಾಗುವುದು ಸಮಾಧಿಯ ಲಕ್ಷಣವೆಂದು, ಉತ್ತರಗೀತೆಯಲ್ಲಿ ಅರ್ಜುನನ ಪ್ರಶ್ನೆಗೆ ಶ್ರೀಕೃಷ್ಣಪರಮಾತ್ಮನು ಹೇಳಿರುವುದೇನೆಂದರೆ. ಅರ್ಜುನನ ಪ್ರಶ್ನೆ :—

ಅದೃಶ್ಯಭಾವನಾನಾಸ್ತಿ ದೃಶ್ಯಮೇತದ್ವಿನಶ್ಯತಿ |
ಅವರ್ಣಮಸ್ವರಂಬ್ರಹ್ಮ ಕಥಂಧ್ಯಾಯಂತಿಯೋಗಿನಃ |

ತಾ|| ಎಲೈ ಸ್ವಾಮಿಯೆ! ದೃಶ್ಯವಿಲ್ಲದ ಆತ್ಮನನ್ನು ಧರಿಸಿಕೊಂಡು ಧ್ಯಾನಮಾಡಲು ಆಗುವುದಿಲ್ಲ. ನಾದ ಮತ್ತು ಜ್ಯೋತಿಗಳನ್ನು ಸಮಾಧಿಯಲ್ಲಿ ದೃಶ್ಯವಾಗಿ ಧರಿಸಿಕೊಳ್ಳುವುದು ನಶಿಸಿಹೋಗುವುದು. ಕಣ್ಣಿಗೆ ಗೋಚರವಾಗುವ ಯಾವ ಬಣ್ಣವೂ ಇಲ್ಲದೆ ಇರುವ "ಓಂ"ಕಾರನಾದಕ್ಕೂ ಅತೀತವಾದ ಪರಬ್ರಹ್ಮನನ್ನು ಸಮಾಧಿನಿಷ್ಠರು ಹೇಗೆ ಪಡೆಯುವರು? ಶ್ರೀಕೃಷ್ಣಪರಮಾತ್ಮನ ಉತ್ತರ:—

ಊರ್ಧ್ವಪೂರ್ಣ ಮಧಃಪೂರ್ಣಂ ಮಧ್ಯಪೂರ್ಣಂ ಯದಾತ್ಮಕಂ |
ಸರ್ವಪೂರ್ಣಂ ಸ ಆತ್ಮೇತಿ ಸಮಾಧಿಸ್ಥಸ್ಯಲಕ್ಷಣಂ ||
ಉಲ್ಕಾಹಸ್ತೋಯಥಾಲೋಕೇ ದ್ರವ್ಯಮಾಲೋಕ್ಯತಾಂತ್ಯಜೇತ್ |
ಜ್ಞಾನೇನಜ್ಞೇಯಮಾಲೋಕ್ಯ ಪಶ್ಚಾದ್ಜ್ಞಾನಂಪರಿತ್ಯಜೇತ್ ||

ತಾ|| ಕೆಳಗೂ, ಮೇಲೂ, ಮಧ್ಯದಲ್ಲಿಯೂ ಯಾವ ಆತ್ಮನು ಸರ್ವವ್ಯಾಪಿಯಾಗಿರುವನೋ ಅದೇ ಪರಬ್ರಹ್ಮವೆಂದು ಧ್ಯಾನಮಾಡುವುದೇ ಸಮಾಧಿಲಕ್ಷ್ಮಣವೆನಿಸಿಕೊಳ್ಳುವುದು. ಕತ್ತಲೆಯಲ್ಲಿರುವ ದ್ರವ್ಯವನ್ನು ನೋಡುವ ನಿಮಿತ್ತವಾಗಿ ದೀಪವನ್ನು ತೆಗೆದುಕೊಂಡವನು, ದ್ರವ್ಯವನ್ನು ತೆಗೆದುಕೊಂಡನಂತರ ಕೈಯಲ್ಲಿದ್ದ ದೀಪವನ್ನು ಹೇಗೆ ತ್ಯಜಿಸುತ್ತಾನೋ ಹಾಗೆ ಆತ್ಮನನ್ನು ಪಡೆಯುವ ಸಾಧನೆಗೆ "ಅಹಂಬ್ರಹ್ಮಾಸ್ಮಿ" ಜ್ಞಾನದ ಅವಶ್ಯಕತೆಯು ಇತ್ತು. ಯಾವಾಗ ಜ್ಞಾತೃವು ಜ್ಞೇಯಸ್ವರೂಪವಾದ ಆತ್ಮನೊಡಗೂಡಬಲ್ಲುದೊ ಆಗ, "ಅಹಂ ಬ್ರಹ್ಮಾಸ್ಮಿ"ಯ ಅವಶ್ಯಕತೆಯಿರುವುದಿಲ್ಲ.

ಭಗವಂತನು ಹೇಳಿರುವ ವಾಕ್ಯಗಳೇ ಬ್ರಹ್ಮವಿದ್ಯೋಪನಿಷತ್ ಮುಂತಾದ ಶ್ರುತಿಗಳಲ್ಲಿಯೂ ಇರುವುವು. ಈ ಶ್ಲೋಕಗಳ ತಾತ್ಪರ್ಯಗಳನ್ನು ಸರಿಯಾಗಿ ಅನ್ವಯಮಾಡಿಕೊಂಡರೆ ರಾವಣನ ವಧೆಯ ತತ್ವವೂ, ಶ್ರೀರಾಮನು ಪ್ರಯೋಗಮಾಡಿದ ಬ್ರಹ್ಮಾಸ್ತ್ರವು ಪುನಃ ಶ್ರೀರಾಮನಲ್ಲಿಗೆ ಬಂದು ಸೇರಿದ ತತ್ವವೂ ವಿವರವಾಗಿ ಗೊತ್ತಾಗುವುದು. ಆದುದರಿಂದ ಸರ್ವವ್ಯಾಪಿಯಾದ ಪರಮಾತ್ಮನೇ ನಾನೆಂದು ಸಮಾಧಿಯಲ್ಲಿ ಮುಳುಗುವುದರಿಂದ, ನಾದ ಮತ್ತು ಜ್ಯೋತಿಸ್ವರೂಪವಾದ ಜ್ಞೇಯವು ನಶಿಸುವುದೇ ಲಾಭವಾಗಿಯೂ, ಪ್ರಯೋಗಿಸಲ್ಪಟ್ಟ "ಅಹಂಬ್ರಹ್ಮಾಸ್ಮಿ" ಎಂಬ ಜ್ಞಾನವು "ಅಹಂ"ಜ್ಞಾನವನ್ನೂ "ಬ್ರಹ್ಮ" ಎನ್ನುವುದನ್ನೂ ಒಟ್ಟುಗೂಡಿಸುವ ಕಾರ್ಯಮಾಡಿರುವುದಾಗಿಯೂ ಇರುವುದು.

ರಾವಣನ ವಧೆಯಾಯಿತೆಂದರೆ—ಸೀತೆಯು ಶ್ರೀರಾಮನೊಡನೆ ಸೇರುವುದು ಸ್ವತಸ್ಸಿದ್ಧವಷ್ಟೆ! ರಾವಣನ ವಧೆಯವರೆಗೆ ಸೀತಾದೇವಿಯು ರಾವಣನ ಬಂಧನದಲ್ಲಿದ್ದಂತೆ

ಶುದ್ಧವಾಗಿಯೂ, ಸೂಕ್ಷ್ಮವಾಗಿಯೂ, ಆನಂದಮಯವಾಗಿಯೂ ಇರುವ ಅಹಂಜ್ಞಾನವು ಬಾಹ್ಯವ್ಯಾಪಾರದ ಮುಸುಕಿನಿಂದ ಮುಚ್ಚಲ್ಪಟ್ಟಿತ್ತು. ಆದುದರಿಂದ ಸಮಾಧಿಯ ಅನುಷ್ಠಾನಮಾಡುವ ಅಧಿಕಾರಿಯಲ್ಲಿನ ಅಖಂಡಾಕಾರವಾದ ಅಹಂಜ್ಞಾನವು, ಅವಿದ್ಯೋಪಾಧಿಯಿಂದ ಬಿಡುಗಡೆಯಾಗಿ ಆತ್ಮನೊಡಗೂಡಿ ನಿಲ್ಲಲು ಅರ್ಹತೆಯುಂಟಾದ ತತ್ವವೇ ರಾವಣನ ವಧೆಯ ತತ್ವವಾಗಿರುವುದು. ಅಖಂಡಾಕಾರವಾದ ಅಹಂಜ್ಞಾನವೆನ್ನುವುದು ಕೂಡ ಪರಮಾತ್ಮನಲ್ಲಿ ಲೀನವಾಗುವುದೇ ಸೀತಾಗ್ನಿಪ್ರವೇಶದ ತತ್ವವಾದ ಆತ್ಮಸಾಕ್ಷಾತ್ಕಾರವಾಗಿರುವುದು. ಈ ವಿಚಾರಗಳು ಮುಂದೆ ಸೀತಾದೇವಿಯು ರಾಮನ ಸಮೀಪಕ್ಕೆ ಬರುವ, ಶ್ರೀರಾಮನು ಸೀತಾದೇವಿಯನ್ನು ತಿರಸ್ಕರಿಸುವ, ಮತ್ತು ಸೀತಾದೇವಿಯು ಅಗ್ನಿಪ್ರವೇಶ ಮಾಡುವ ಪ್ರಕರಣಗಳಲ್ಲಿ ಬರುತ್ತವೆ.

## ೩೪ನೆಯ ಪ್ರಕರಣ.

**ರಾವಣನಿಗೆ ಉತ್ತರಕ್ರಿಯೆ. ವಿಭೀಷಣನಿಗೆ ಲಂಕಾ ರಾಜ್ಯಾಭಿಷೇಕ.**

**ಧರ್ಮಸ್ಥಾಪನೆಯ ವಿಚಾರ.**

**ರಾ||** ಅಣ್ಣನಾದ ರಾವಣನಿಗಾಗಿ ವಿಭೀಷಣನು ವ್ಯಸನಪಟ್ಟನು. ಮಂಡೋದರಿಯು ರಾವಣನ ವಿಯೋಗಕ್ಕೋಸ್ಕರ ಅತ್ಯಂತ ದುಃಖಪಟ್ಟಳು. ರಾವಣನಿಗೆ ಅಪರಸಂಸ್ಕಾರಮಾಡಲು ವಿಭೀಷಣನು ಮೊದಲು ಸಮ್ಮತಿಸದೆ, ಶ್ರೀರಾಮನ ಆಜ್ಞೆಯಮೇಲೆ ರಾವಣನಿಗೆ ಅಪರಸಂಸ್ಕಾರಮಾಡಿದನು,

**ತತ್ವ||** ರಾವಣನ ಮರಣಕ್ಕೋಸ್ಕರ ವಿಭೀಷಣ ಮಂಡೋದರಿಯರು ಪ್ರಲಾಪಪಟ್ಟ ತತ್ವವೇನೆಂದರೆ—ರಜೋಗುಣಚೈತನ್ಯವನ್ನು ತುಚ್ಛವೆಂದು ತಿಳಿದುಕೊಳ್ಳಬಾರದು. ಮೋಕ್ಷಮಾರ್ಗದಲ್ಲಿರುವವರಿಗೆ ಇದು ತುಚ್ಛವೇ ಹೊರತು ಪ್ರಪಂಚಾನುವರ್ತನೆಗೆ ಪ್ರಧಾನಚೈತನ್ಯವು ಕ್ರಿಯಾಬಲವನ್ನು ಕೊಡುವುದಾಗಿರುವುದು. ಜ್ಞಾನಮಾರ್ಗಕ್ಕೂ ಈ ರಜೋಗುಣದ ಕಾರ್ಯಕ್ಕೂ ಬದ್ಧದ್ವೇಷ. ರಜೋಗುಣದ ತತ್ವವು ಪ್ರಪಂಚವ್ಯಾಪಾರದಲ್ಲಿಯೇ ಎಳೆಯುವುದು. ಜ್ಞಾನಮಾರ್ಗವು ಸತ್ವಗುಣಕ್ಕೆ ಸೇರಿರುವುದರಿಂದ ಸತ್ವಗುಣವು ಮೋಕ್ಷಮಾರ್ಗಕ್ಕೆಳೆಯುವುದು. ಆದುದರಿಂದ ರಜೋಗುಣಕ್ಕೂ ಸತ್ವಗುಣಕ್ಕೂ ವಿರೋಧ. ರಾವಣನು ಅಗ್ನಿಹೋತ್ರಾದಿಕರ್ಮಗಳನ್ನು ಮಾಡಿಕೊಂಡಿದ್ದನಷ್ಟೆ! ಅಂದರೆ ರಜೋಗುಣಚೈತನ್ಯವು ಕಾಲೋಚಿತವಾಗಿ ನಾಸ್ತಿಕದ ತತ್ವವಾಗಿಯೂ, ಆಸ್ತಿಕದ ತತ್ವವಾಗಿಯೂ ಇರುವುದು. ರಜೋಗುಣವು ಆಸ್ತಿಕವಾಗಿರುವುದೆಂದರೆ, ಕರ್ಮಮಾರ್ಗದಲ್ಲಿ ಪ್ರವೃತ್ತಿಯನ್ನು ಕೊಟ್ಟು ಕರ್ಮಶೌರ್ಯವನ್ನುಂಟುಮಾಡುವುದು. ಬಾಹ್ಯವ್ಯಾಪಾರವನ್ನು ಬಿಟ್ಟು ಅಂತರ್ಮುಖದ ಮಾರ್ಗವಾದ ಜ್ಞಾನಮಾರ್ಗಕ್ಕಿದು ಖಂಡಿತವಾಗಿಯೂ ವಿರೋಧಿ.

ಪ್ರಪಂಚವ್ಯವಹಾರದಲ್ಲಿ ನಮ್ಮಲ್ಲಿ ತೋರುವ ಸಾತ್ವಿಕಸ್ವಭಾವವು ವಿಭೀಷಣನ ತತ್ವವಾದ ಮಿಶ್ರಸತ್ವಗುಣಕ್ಕೆ ಸೇರಿರುವ್ರದಷ್ಟೆ! ಈ ಮಿಶ್ರಸತ್ವಗುಣಸ್ವಭಾವವಾದ ಸಾತ್ವಿಕಸ್ವಭಾವವೂ, ಅದಕ್ಕೆ ಸರಿಯಾದ ಕ್ರಿಯೆಯೂ ನಮ್ಮಲ್ಲಿ ತಲೆದೋರಿದಾಗ, ರಜೋಗುಣವು ಸಾತ್ವಿಕಸ್ವಭಾವವಾದ ಮಿಶ್ರಸತ್ವಗುಣದ ಅನುಯಾಯಿಯಾಗುವುದು. ಅಂದರೆ ವಿಭೀಷಣನ ಇಷ್ಟದಂತೆ ರಾವಣನು ನಡೆದುಕೊಳ್ಳುವ ಕಾಲವೇ ಸಾತ್ವಿಕಸ್ವಭಾವದ ಕಾಲವಾಗಿರುವುದು. ಕುಂಭಕರ್ಣ ಮತ್ತು ಇವನ ಪರಿವಾರದ ಇಷ್ಟದಂತೆ ರಾವಣ ಮತ್ತು ವಿಭೀಷಣರು ನಡೆದುಕೊಂಡಕಾಲದಲ್ಲಿ ತಮೋಗುಣದ ಸ್ವಭಾವವು ನಮ್ಮಲ್ಲಿ ಮೇಲಾಗಿರುವುದು. ರಾವಣನು ಕುಂಭಕರ್ಣ ವಿಭೀಷಣರನ್ನು ಅತಿಕ್ರಮಿಸಿ ನಡೆದುಕೊಂಡ ಕಾಲಗಳೇ, ನಮ್ಮಲ್ಲಿ ರಜೋಗುಣವೇ ಮೇಲಾಗಿರುವ ಕಾಲ. ಹೀಗೆ ಕಾಲಾನುಗುಣ್ಯವಾಗಿ ಒಂದು ಮೇಲೆನಿಸಿ ಮತ್ತೊಂದು ಕೀಳೆನಿಸುವುದು. ಇದೇ ತಾತ್ಪರ್ಯಕ್ಕೆ ಶ್ರೀಕೃಷ್ಣ ಪರಮಾತ್ಮನು ಭಗವದ್ಗೀತೆಯಲ್ಲಿ,

> ರಜಸ್ತಮಶ್ಚಾಭಿಭೂಯ ಸತ್ವಂಭವತಿಭಾರತ |
> ರಜಃಸತ್ವಂ ತಮಶ್ಚೈವ ತಮಃಸತ್ವಂರಜಸ್ತಥಾ ||

ತಾ|| ಎಲೈ ಅರ್ಜುನನೆ! ಕಾಲವಿಶೇಷಗಳಲ್ಲಿ ಸತ್ವಗುಣವು ರಜಸ್ತಮೋಗುಣಗಳನ್ನು ಮೀರಿ ತಾನು ಪ್ರಕಾಶಿಸುವುದು. ಹೀಗೆಯೇ ರಜೋಗುಣವು ಸತ್ವತಮೋಗುಣಗಳನ್ನೂ, ತಮಸ್ಸು ಸತ್ವರಜೋಗುಣಗಳನ್ನೂ, ಮೀರಿ ಪ್ರಕಾಶಿಸುವುದು. ಎಂಬದಾಗಿ ಹೇಳಿರುವನು.

ಹೀಗೆ ಒಂದಕ್ಕಿಂತ ಮತ್ತೊಂದು ಮೇಲೆನಿಸಿ ಪ್ರಕಾಶಿಸಿದರೂ ದ್ವಂದ್ವವಾಗಿ ಸೇರಿರುವುದೇ ಹೊರತು, ನಿಶ್ಶೇಷವಾಗಿ ಒಂದು ಗುಣವು ನಶಿಸಿ ಮತ್ತೊಂದು ಸ್ಥಿರವಾಗಿ ಪ್ರಪಂಚ ವ್ಯಾಪಾರದಲ್ಲಿರುವುದೇ ಇಲ್ಲ. ಅಂದರೆ ಮೋಕ್ಷಮಾರ್ಗದಲ್ಲಿ ರಾವಣನ ಸಂಹಾರವಾಗಿ ಸೀತಾರಾಮರು ಸೇರುವ ತತ್ವದವರೆಗೆ ಗುಣಗಳ ಸಾಮ್ಯಾವಸ್ಥೆಯುಂಟಾಗುವುದಿಲ್ಲ. ಆದ ಕಾರಣ ಪ್ರಪಂಚವ್ಯಾಪಾರದಲ್ಲಿ ಧರ್ಮಾಧರ್ಮಗಳೆಂದರೆ, ಪುಣ್ಯ ಪಾಪಗಳು ದ್ವಂದ್ವವಾಗಿ ಇರುವುವೇ ಹೊರತು ಒಂದೇ ಪ್ರತ್ಯೇಕವಾಗಿರುವುದಿಲ್ಲ.

ಮೋಕ್ಷಮಾರ್ಗಿಯಾಗಿ ಆತ್ಮಸಾಕ್ಷಾತ್ಕಾರಮಾಡಿಕೊಂಡನಂತರ, ಸೀತಾರಾಮರು ಸೇರಿದ ಸ್ವರೂಪವಾದ ಶುದ್ಧಸತ್ವಗುಣದ ಸೋಪಾನವನ್ನು ಅಧಿಕಾರಿಯು ಪಡೆದರೆ, ಶುದ್ಧವಾದ ಧರ್ಮಮಾರ್ಗವು ಇರುವುದು. ಇದೇ ವಿಭೀಷಣನಿಗೆ ರಾವಣನ ವಧೆಯಾದನಂತರ ಲಂಕೆಯು ಪಟ್ಟಬಂದ ತತ್ವವಾಗಿರುವುದು.

ವಿಭೀಷಣನು ರಾವಣನಿಗೋಸ್ಕರ ವ್ಯಥೆಪಟ್ಟ ತತ್ವವೇನೆಂದರೆ ಪ್ರಪಂಚವ್ಯಾಪಾರ ದಲ್ಲಿರುವ ಪರ್ಯಂತರ ಈ ಗುಣಗಳು ಸಹೋದರರಂತೆ ದ್ವಂದ್ವವಾಗಿರುವುದರಿಂದ

ಈ ದ್ವಂದ್ವದ ಮೋಹದಿಂದಲೂ, ರಾವಣನಿಗೆ ಬಂದ ಅಪಕೀರ್ತಿಗೂ, ವಿಭೀಷಣನು ವ್ಯಥೆ ಪಟ್ಟುದಾಗಿರುವುದು.

ರಾವಣನಿಗೆ ಅಪರಸಂಸ್ಕಾರವನ್ನು ಮಾಡಲು ವಿಭೀಷಣನು ಸಮ್ಮತಿಸದೆ ಇರಲು, ಶ್ರೀರಾಮನು ತನ್ನ ಆಜ್ಞೆಯನ್ನು ಮೀರಕೂಡದೆಂದೂ, ರಾವಣನಿಗೆ ಅಪರಸಂಸ್ಕಾರವಾಡ ಬೇಕೆಂದೂ ಹೇಳಿದನಂತರ, ವಿಭೀಷಣನು ರಾವಣನಿಗೆ ಅಪರಸಂಸ್ಕಾರವಾಡಿದ ತತ್ವವೇ ನೆಂದರೆ—ಅಧರ್ಮದಿಂದ ಯಾರು ಹಾಳಾಗುತ್ತಿರುವರೋ ಅಂತಹವರನ್ನು ಹೇಗಾದರೂ ಮಾಡಿ ಧರ್ಮಮಾರ್ಗಸ್ವರೂಪವಾದ ಸಂಸ್ಕಾರದಿಂದ ಪವಿತ್ರರನ್ನಾಗಿ ಮಾಡುವುದು ಧರ್ಮ ಮಾರ್ಗಾವಲಂಬಿಗಳ ಕರ್ತವ್ಯವೆಂದೂ, ಇದು ಈಶ್ವರನ ಆಜ್ಞೆಯೆಂತಲೂ, ಸೂಚಿಸುವ ತತ್ವವೇ ಶ್ರೀರಾಮನು ರಾವಣನಿಗೆ ಸಂಸ್ಕಾರವಾಡಲು ವಿಭೀಷಣನಿಗೆ ಆಜ್ಞೆಮಾಡಿದುದದು.

ರಾವಣನ ಸಂಹಾರದಿಂದ ಮಂಡೋದರಿಗೆ ವೈಧವ್ಯಪ್ರಾಪ್ತಿಯಾಯಿತೆಂದರೆ ಮಂಡೋದರಿಯು ವಿಕೃತಿ ಅಥವ ಮಲಿನವಾಯಾತತ್ವದವಳೆಂದು ಹಿಂದೆ ತಿಳಿಸಿತಷ್ಟೆ! ಅಂದರೆ ಮಂಡೋದರಿಯೇ ರಜೋಗುಣ. ಈ ರಜೋಗುಣದಲ್ಲಿ ಬಿದ್ದ ಆತ್ಮನ ಪ್ರಕಾಶದ ಪ್ರತಿಫಲನದ ಚೈತನ್ಯವೇ ರಾವಣನೆಂದು ಹಿಂದೆ ಸುಂದರಕಾಂಡದಲ್ಲಿ ಹನುಮಂತನು ಮಂಡೋದರಿಯನ್ನು ನೋಡಿದ ಸಂದರ್ಭದಲ್ಲಿ ತಿಳಿಸಿತಷ್ಟೆ! ಶ್ರೀರಾಮನಿಂದ ರಾವಣನು ನಿಗ್ರಹಿಸಲ್ಪಟ್ಟನೆಂದರೆ ಬುದ್ಧಿತತ್ವಪ್ರಕಾಶಕನು ರಜೋಗುಣದಲ್ಲಿದ್ದ ಪ್ರತಿಬಿಂಬಚೈತನ್ಯ ವನ್ನು ಉಪಸಂಹಾರವಾಡಿಕೊಂಡರೆ, ರಜೋಗುಣಕ್ಕೆ ಪ್ರಕಾಶವೇ ಇಲ್ಲದಿರುವುದರಿಂದ ಹುರಿದ ಬೀಜದಂತಾಗಿ ಕಾರ್ಯಕ್ಕೆ ಅನರ್ಹತೆಯುಂಟಾಗಿ ವಿಕಾರವಾಗುವುದೇ ಮಂಡೋ ದರಿಗೆ ವೈಧವ್ಯಪ್ರಾಪ್ತಿಯಾದುದರ ತತ್ವವಾಗಿರುವುದು.

**ರಾ||** ಅನಂತರ ಶ್ರೀರಾಮನು ಲಕ್ಷ್ಮಣನನ್ನು ಕುರಿತು ವಿಭೀಷಣನು ನಮ್ಮಲ್ಲಿ ಅನುರಾಗ ಮತ್ತು ಭಕ್ತಿಯುಳ್ಳವನಾದುದರಿಂದಲೂ, ನಮಗೆ ಅತ್ಯಂತ ಉಪಕಾರವಾಡಿರು ವುದರಿಂದಲೂ, ನೀನು ಈಗಲೇ ಹೋಗಿ ವಿಭೀಷಣನಿಗೆ ಲಂಕಾರಾಜ್ಯದಲ್ಲಿ ಅಭಿಷೇಕ ವನ್ನು ನಡೆಸಿ ಬರಬೇಕೆಂದು ಹೇಳಿದನು. ಲಕ್ಷ್ಮಣನು ಶ್ರೀರಾಮನ ವಾಕ್ಯದಂತೆ ವಿಭೀಷಣನಿಗೆ ಲಂಕಾರಾಜ್ಯಾಭಿಷೇಕವಾಡಿದನು.

**ತತ್ವ||** ವಿಭೀಷಣನು ಮಲಿನಸತ್ವಗುಣ ಅಥವಾ ಧರ್ಮಮಾರ್ಗದ ತತ್ವದವನೆಂದು ವಿಭೀಷಣ ಶರಣಾಗತಿಯ ಪ್ರಕರಣದಿಂದಲೂ ತಿಳಿಸಿಕೊಂಡು ಬಂದಿರುವುದು. ಅಲ್ಲದೆ ಧರ್ಮಮಾರ್ಗವೆಂದರೆ ಮೋಕ್ಷಮಾರ್ಗಕ್ಕೆ ಅನುಸಾರವಾದ ನಡೆವಳಿಕೆಗಳೆಂತಲೂ ಹಿಂದೆ ತಿಳಿಸಿರುತ್ತೆ. ಇಂತಹ ಧರ್ಮಮಾರ್ಗವು ಆತ್ಮನಲ್ಲಿ ಅನುರಾಗ ಮತ್ತು ವಿಶ್ವಾಸವಾಗಿ ಇರುವುದೇ ವಿಭೀಷಣನು ಶ್ರೀರಾಮನಲ್ಲಿ ಅನುರಾಗ ಮತ್ತು ಭಕ್ತಿಯನ್ನಿಟ್ಟಿರುವ ತತ್ವವಾಗಿರು

ವುದು. ಧರ್ಮಮಾರ್ಗವೆಂದರೆ, ಮೋಕ್ಷಮಾರ್ಗಾವಲಂಬಿಗಳಾಗಿ ವಿವೇಕಸ್ವರೂಪವಾದ ಪುಣ್ಯಗಳನ್ನು ಆರ್ಜನೆಮಾಡಿಕೊಂಡಿದ್ದರೆ, ಈ ವಿವೇಕಸ್ವರೂಪವಾದ ಪುಣ್ಯವು ಅಧರ್ಮ ಸ್ವರೂಪಗಳನ್ನು ನಿಗ್ರಹಿಸಿ ಆತ್ಮಸಾಕ್ಷಾತ್ಕಾರಮಾಡಿಕೊಳ್ಳುವುದಕ್ಕೆ ಸಹಾಯಕವಾಗಿರುವುದೆಂದು ಸೂಚಿಸುವಿಕೆಯೇ ವಿಭೀಷಣನು ಉಪಕಾರಮಾಡಿರುವನೆಂದು ಶ್ರೀರಾಮನು ಹೇಳಿದುದರ ತತ್ವವಾಗಿರುವುದು.

ರಾವಣನ ವಧೆಮಾಡಿದನಂತರ ವಿಭೀಷಣನಿಗೆ ಲಂಕಾರಾಜ್ಯದ ಪಟ್ಟಕಟ್ಟಿದ ತತ್ವವೇನೆಂದರೆ ರಾವಣನ ವಧೆಯಾಗಿರುವುದೆ, ಅವಿದ್ಯಾ ಉಪಾಧಿಯ ನಿವೃತ್ತಿಸ್ವರೂಪವಾಗಿರುವುದೆಂದರೆ ಮಾಯೋಪಾಧಿಯು ಉಳಿಯುವ ಈಶ್ವರತ್ವದ ಸೋಪಾನವಾಗಿರುವುದು. ಅಂದರೆ ಕುಂಡಲಿನೀಶಕ್ತಿಯೊಡನೆ ಬುದ್ಧಿವೃತ್ತಿಯು ಸುಷುಮ್ನೆಯೊಳಗೆ ಪ್ರವೇಶಿಸಿ ಮೂಲಾಧಾರ ಮೊದಲಾದ ಚಕ್ರಗಳನ್ನು ಭೇದಿಸಿಕೊಂಡು, ಆಜ್ಞಾ ಚಕ್ರಕ್ಕೆಂದರೆ ಭ್ರೂಮಧ್ಯ ಪ್ರದೇಶಕ್ಕೆ ಸುಷುಮ್ನೆಯೊಳಗೆ ಬಂದಿರುವುದು. ಈ ಸೋಪಾನವನ್ನು ಹತ್ತಿದ ಮೊದಲು ವಿದೇಹಮುಕ್ತಿಯವರೆಗೂ ಅಧಿಕಾರಿಯಲ್ಲಿ ಧರ್ಮಮಾರ್ಗವೇ ನೆಲೆಗೊಳ್ಳುವುದೆಂಬ ತತ್ವದ ಸೂಚನೆಯೇ ವಿಭೀಷಣನಿಗೆ ರಾವಣನ ವಧೆಯಾದನಂತರ ಲಂಕಾರಾಜ್ಯಾಭಿಷೇಕ ಬಂದಿರುವ ತತ್ವವಾಗಿರುವುದು.

ಸೀತಾದೇವಿಯು ಅಗ್ನಿಪ್ರವೇಶಮಾಡುವುದೇ ಆತ್ಮಸಾಕ್ಷಾತ್ಕಾರದ ತತ್ವವಾಗಿ ಇರುವುದು. ಸೀತಾದೇವಿಯನ್ನು ಶ್ರೀರಾಮನು ಪುನಃ ಸ್ವೀಕರಿಸಿ ಮಹಾಪ್ರಸ್ಥಾನಮಾಡುವವರೆಗಿನ ತತ್ವವಾದ, ಜೀವನ್ಮುಕ್ತಾವಸ್ಥೆಯ ತತ್ವದ ಆಡಳಿತಗಳೆಲ್ಲಾ ಧರ್ಮಸ್ವರೂಪವೇ ಆಗಿರುವುದರಿಂದ, ವಿಭೀಷಣನಿಗೆ ರಾವಣನ ವಧೆಯಾದನಂತರ ಲಂಕಾರಾಜ್ಯಾಧಿಪತ್ಯ ಬಂದ ತತ್ವವಾಗಿರುವುದು. ಅಂದರೆ ಧರ್ಮದ ಸ್ಥಾಪನೆಯು ಈ ಸೋಪಾನದಿಂದ ಮುಂದಕ್ಕೆ ನೆಲೆಗೊಂಡಿರುವುದೆಂಬ ತತ್ವವನ್ನು ಸೂಚಿಸುವಿಕೆಯೇ ರಾವಣನ ವಧೆಯಾದನಂತರ ವಿಭೀಷಣನಿಗೆ ಪಟ್ಟಕಟ್ಟಿದ್ದಾಗಿರುವುದು.

**ರಾ||** ಶ್ರೀರಾಮನು ರಾವಣನ ವಧೆಯಾದನಂತರ ಮಾತಲಿಯನ್ನು ಮನ್ನಿಸಿ ದೇವೇಂದ್ರನ ರಥದೊಡನೆ ಹಿಂದಿರುಗಿ ಕಳುಹಿಸಿಕೊಟ್ಟನು.

**ತತ್ವ||** ದೇವೇಂದ್ರನ ರಥದೊಡನೆ ಮಾತಲಿಯನ್ನು ಹಿಂದಿರುಗಿ ಕಳುಹಿಸಿಕೊಟ್ಟ ತತ್ವವೇನೆಂದರೆ ನಾದಬ್ರಹ್ಮದಲ್ಲಿನ ಹೆಣಿಕೆಗಳೆಲ್ಲ ಬಿಚ್ಚಿ ಇನ್ನು ಮುಂದೆ ನಾದಾನುಸಂಧಾನದ ಕರ್ತವ್ಯವಿಲ್ಲವೆಂಬ ತತ್ವದ ಸೂಚನೆಯಾಗಿರುವುದು. ಅಂದರೆ ಷಣ್ಮುಖೀಮುದ್ರೆಯಿಂದ ಮಾಡಬೇಕಾಗಿದ್ದ ಸಮಾಧಿಯು ಅನುಷ್ಠಾನದ ಸೋಪಾನವು ಪೂರ್ಣವಾಯಿತೆಂಬ ತತ್ವವೇ, ಇಂದ್ರನ ರಥದೊಡನೆ ಮಾತಲಿಯು ಹಿಂದಕ್ಕೆ ಹೋದ ತತ್ವವಾಗಿರುವುದು.

ಅಲ್ಲದೆ ಅಧಿಕಾರಿಯು ನಾದಾನುಸಂಧಾನದ ಅನುಷ್ಠಾನಕ್ಕೆ ಬಂದ ತತ್ವದಲ್ಲಿ ಮನುಷ್ಯತ್ವದಿಂದ ದೇವತೆಗಳ ಮತ್ತು ಗಂಧರ್ವರ ಸೋಪಾನದ ತತ್ವವನ್ನು ಪಡೆದಿದ್ದನು. ಈಗ ಅಧಿಕಾರಿಯು ದೇವತೆಗಳ ಸೋಪಾನಕ್ಕಿಂತಲೂ ಶ್ರೇಷ್ಠವಾದ ಈಶ್ವರತ್ವದ ಸೋಪಾನಕ್ಕೆ ಬಂದಿರುತ್ತಾನೆಂಬ ತತ್ವವನ್ನೂ ಸೂಚಿಸುವುದು. ಮುಂದೆ ಈ ಈಶ್ವರತ್ವದ ಸೋಪಾನಕ್ಕಿಂತಲೂ ಶ್ರೇಷ್ಠವಾದ ಆತ್ಮಸೋಪಾನವನ್ನು ಅಧಿಕಾರಿಯು ಸೀತಾದೇವಿಯು ಅಗ್ನಿಪ್ರವೇಶ ಮಾಡಿದ ಕಥೆಯ ತತ್ವದಲ್ಲಿ ಪಡೆಯುವನು.

## ೩೫ನೆಯ ಪ್ರಕರಣ.

**ವಿಭೀಷಣನು ಸೀತಾದೇವಿಯನ್ನು ಶ್ರೀರಾಮನ ಬಳಿಗೆ ಕರೆದುಕೊಂಡು ಬಂದುದು.**

**ಸವಿಕಲ್ಪಸಮಾಧಿಯ ಅಂತ್ಯ ಸೋಪಾನವೆಂದರೆ ಶುದ್ಧಸತ್ವಗುಣ ಸೋಪಾನೋದಯ.**

**ರಾ||** ಅನಂತರ ಶ್ರೀರಾಮನು ಹನುಮಂತನನ್ನು ನೋಡಿ, ನೀನು ಮೊದಲು ಹೋಗಿ ಸೀತೆಗೆ ನಮ್ಮ ವಿಜಯವಾರ್ತೆಯನ್ನು ತಿಳಿಸಿ, ಅವಳ ಸಂದೇಶವನ್ನು ತೆಗೆದುಕೊಂಡು ಬರಬೇಕೆಂದು ಹೇಳಲು, ಹನುಮಂತನು ಸೀತಾದೇವಿಯ ಸಂದರ್ಶನಮಾಡಿ ಬಂದು, ಸೀತಾದೇವಿಯು ನಿನ್ನ ವಿರಹವ್ಯಸನದಿಂದ ಕಾತರಿಸುತ್ತಿರುವಳು. ಕೂಡಲೆ ಅವಳನ್ನು ಕರೆಸಿಕೊಳ್ಳಬೇಕೆಂದು ಹೇಳಿದನು. ಅನಂತರ ಸೀತೆಗೆ ಸ್ನಾನಾಲಂಕಾರಗಳನ್ನು ಮಾಡಿಸಿ ಕರೆತರಬೇಕೆಂದು ವಿಭೀಷಣನಿಗೆ ಹೇಳಲು ವಿಭೀಷಣನು ಸೀತಾದೇವಿಗೆ ಸ್ನಾನಾಲಂಕಾರಗಳನ್ನು ಮಾಡಿಸಿ ಶ್ರೀರಾಮನ ಬಳಿಗೆ ಕರೆತಂದನು.

**ತತ್ವ||** ಸೀತಾದೇವಿಯ ತತ್ವದಲ್ಲಿರುವ ಶುದ್ಧಸತ್ವಪ್ರಧಾನಮಾಯೆಗೆ ಅವಿದ್ಯೆಯ ಬಂಧನ ಬಂದ ವಿಷಯವನ್ನು ಹಿಂದೆಯೇ ವಿವರಿಸಿದೆ ಅಲ್ಲದೆ ಸೀತಾದೇವಿಯ ಬಂಧನದ ಬಿಡುಗಡೆಗೋಸ್ಕರಲೆ ಇಷ್ಟು ಕಾರ್ಯಪರಂಪರೆಗಳೂ ನಡೆದುಕೊಂಡು ಬಂದಿರುವುವು. ಅಂದರೆ ಶುದ್ಧಸತ್ವಗುಣದ ಸೋಪಾನವನ್ನು ಹೊಂದಲು ಪ್ರತಿಬಂಧಕಗಳಾಗಿದ್ದ ರಾವಣಾದಿಗಳ ತತ್ವದಲ್ಲಿರುವ ಅವಿದ್ಯೆಯನ್ನು ನಿಗ್ರಹಿಸಲು ಬ್ರಹ್ಮರಂಧ್ರಮಾರ್ಗದಲ್ಲಿ ಬುದ್ಧಿವೃತ್ತಿಯು ವಾಯುಗಳೊಡನೆ ಪ್ರವೇಶಿಸಿ, ಪಂಚಭೂತಗಳ ತತ್ವಸ್ವರೂಪವಾದ ಚಕ್ರಗಳನ್ನು ಭೇದಿಸಿಕೊಂಡು, ಆಜ್ಞಾಚಕ್ರದಲ್ಲಿ ಬುದ್ಧಿವೃತ್ತಿಯು ನೆಲೆಗೊಂಡಿರುವುದು. ಬ್ರಹ್ಮರಂಧ್ರದ ಮಾರ್ಗದಲ್ಲಿ ಮೂಲಾಧಾರದಿಂದ ಆಜ್ಞಾಚಕ್ರದವರೆಗೆ ತಡೆಯಿಲ್ಲದೆ ವಾಯುವು ಈಗ ಸಂಚಾರಮಾಡಬಹುದು. ಅಧಿಕಾರಿಯಲ್ಲಿ ಸಮಾಧಿಯ ಅನುಷ್ಠಾನದಲ್ಲಿ

ಮೂಲಾಧಾರದಿಂದ ಬ್ರಹ್ಮರಂಧ್ರಮಾರ್ಗದಲ್ಲಿ ಬುದ್ಧಿವೃತ್ತಿಯೊಡನೆ ವಾಯುವು ಆಜ್ಞಾಚಕ್ರವನ್ನು ಸೇರಿದರೆ ಶುದ್ಧಸತ್ವಗುಣದ ಸೋಪಾನೋದಯವಾಗುವುದು. ಅಂದರೆ ಬ್ರಹ್ಮರಂಧ್ರನಾಡಿಯಲ್ಲಿ ಪ್ರವೇಶಿಸುವ ವಾಯುವನ್ನು ಅನುಸರಿಸಿಕೊಂಡು, ಶುದ್ಧಸತ್ವ ಗುಣದ ಸೋಪಾನದ ಉದಯವಾಗುವ ತತ್ವವೇ, ಹನುಮಂತನನ್ನು ಸೀತಾದೇವಿಯ ಸಂದೇಶವನ್ನು ತರಲು ಕಳುಹಿಸಿದ ತತ್ವವಾಗಿರುವುದು. ಈ ತತ್ವಾರ್ಥಕ್ಕನುಸಾರವಾಗಿ ವಾಯುವು ಬ್ರಹ್ಮರಂಧ್ರಮಾರ್ಗದಲ್ಲಿ ಪ್ರವೇಶಿಸಬೇಕೆಂಬ ತಾತ್ಪರ್ಯಕ್ಕೆ "ಪ್ರತ್ಯಾಹೃತಃ ಕೇವಲ ಕುಂಭಕೇನ" ಎಂಬ ಶ್ರೀಶಂಕರಭಗವತ್ಪಾದರವರ ಶ್ಲೋಕವನ್ನು ಹಿಂದೆ ಸೇತು ಬಂಧನದ ಪ್ರಕರಣದಲ್ಲಿ ಬರೆದಿರುವುದು. ಮಧ್ಯನಾಡಿಯಾದ ಸುಷುಮ್ನಾಮಾರ್ಗದಲ್ಲಿ ವಾಯುವು ಮೂಲಾಧಾರದಿಂದ ಪ್ರವೇಶಿಸಿ ಆಜ್ಞಾಚಕ್ರವನ್ನು ಸೇರಿದರೆ ಸೀತಾದೇವಿಯು ಶ್ರೀರಾಮನ ಸಮೀಪಕ್ಕೆ ಬರುವ ಸಂದೇಶಕ್ಕೆ ಹನುಮಂತನನ್ನು ಕಳುಹಿಸಿದ ತತ್ವವಾದ ಶುದ್ಧಸತ್ವಗುಣದ ಸೋಪಾನವೆಂದರೆ ಮನೋನ್ಮನೀಸ್ಥಿತಿಯನ್ನು ಅಧಿಕಾರಿಯು ಪಡೆಯುವ ನೆಂಬ ತತ್ವಕ್ಕೆ ಶ್ರುತಿಯಲ್ಲಿ,

ಮಾರುತೋಮಧ್ಯಸಂಚಾರೇ ಮನಸ್ಸ್ಥೈರ್ಯಂ ಪ್ರಜಾಯತೇ ।
ಯೋಮನಃ ಸುಸ್ಥಿರೀಭಾವಃ ಸೈವಾವಸ್ಥಾ ಮನೋನ್ಮನೀ ॥

ವಾಯುವು ಮಧ್ಯನಾಡಿಯಾದ ಸುಷುಮ್ನೆಯಲ್ಲಿ ನೇರವಾಗಿ ಶಿರಸ್ಸಿನವರೆಗೂ ಯಾವಾಗ ಪ್ರವೇಶಿಸುತ್ತಾ ಬರುವುದೋ ಆಗ ಬುದ್ಧಿಮನಸ್ಸಿನ ವೃತ್ತಿಗಳಿಗೆ ಅಂತರ್ಮುಖದಲ್ಲಿ ಸ್ಥಿರತ್ವವುಂಟಾಗುವುದು. ಬುದ್ಧಿವೃತ್ತಿಗೆ ಯಾವಾಗ ಸಮೀಚೀನವಾದ ಸ್ಥಿರತ್ವವು ಬರು ವುದೋ ಆಗ ಮನೋನ್ಮನಿಯೆಂದರೆ ಶುದ್ಧಸತ್ವಗುಣದ ಸೋಪಾನವು ಅಧಿಕಾರಿಗೆ ಬರು ವುದು ಎಂದು ಹೇಳಿರುವುದು. ಈ ತತ್ವಗಳೇ ಹನುಮಂತನು ಸೀತಾದೇವಿಯ ಸಂದೇಶಕ್ಕೆ ಹೋಗಿ ಬಂದುದಾಗಿರುವುದು.

ಸೀತಾದೇವಿಯನ್ನು ಶ್ರೀರಾಮನ ಇಷ್ಟದಂತೆ ವಿಭೀಷಣನು ಕರೆದುಕೊಂಡು ಬಂದ ತತ್ವಾರ್ಥವೇನೆಂದರೆ—ಬಂಧನದಲ್ಲಿ ಸಿಕ್ಕಿದ್ದ ಸತ್ವಗುಣವು ಪ್ರಪಂಚವ್ಯಾಪಾರದಲ್ಲಿ ರಜೋ ಗುಣಗಳ ಅಧೀನದಲ್ಲಿರುವುದಕ್ಕಿಂತಲೂ, ಮಲಿನಸತ್ವಗುಣದ ಜೊತೆಯಲ್ಲಿರುವುದು ಉತ್ತಮವೆಂದು ಸೂಚಿಸುವ ತಾತ್ಪರ್ಯಕ್ಕೂ, ಶುದ್ಧಸತ್ವಗುಣದ ಸೋಪಾನವನ್ನು ಪಡೆಯಲು ರಜೋಗುಣ ತಮೋಗುಣಗಳ ಸೋಪಾನದಿಂದ ಅಸಾಧ್ಯವೆಂದೂ, ಮಲಿನಸತ್ವಗುಣ ವೆಂದರೆ ಧರ್ಮಮಾರ್ಗ ಅಥವಾ ದೈವೀಸಂಪತ್ತಿನ ಸೋಪಾನವನ್ನನುಸರಿಸಿಕೊಂಡು ಶುದ್ಧಸತ್ವಗುಣದ ಸೋಪಾನವುಂಟಾಗುವುದೆಂಬ ತತ್ವದ ಸೂಚನೆಗೂ, ವಿಭೀಷಣನು ಸೀತಾದೇವಿಯನ್ನು ಜೊತೆಯಲ್ಲಿ ಕರೆದುಕೊಂಡು ಬರುವುದಾಗಿರುವುದು.

**ರಾ||** ಸೀತಾದೇವಿಯನ್ನು ಕರೆತರುವಂತೆ ವಿಭೀಷಣನಿಗೆ ಹೇಳಿದನಂತರ, ಶ್ರೀರಾಮನು ಸೀತೆಯ ದುಃಸ್ಥಿತಿಯನ್ನುನೆನೆದು ತನ್ನಲ್ಲಿ ತಾನು, ಆಹಾ! ಚಿರಕಾಲದಿಂದಲೂ ರಾವಣನ ಗೃಹದಲ್ಲಿದ್ದ ಆ ತರುಣಿಯನ್ನು ಈಗ ನಿರ್ವಿಚಾರವಾಗಿ ಪರಿಗ್ರಹಿಸಿದ ಪಕ್ಷದಲ್ಲಿ ಲೋಕಾಪವಾದಕ್ಕೆ ಗುರಿಯಾಗಬೇಕಾಗುವುದು. ನಿರ್ದೋಷಿಯಾದ ಆಕೆಯನ್ನು ನಿಷ್ಕಾರಣವಾಗಿ ಪರಿತ್ಯಜಿಸುವುದಾದರೂ ಹೇಗೆ? ಈಗ ಹೇಗೆ ನಡೆದುಕೊಳ್ಳಬೇಕೆಂಬ ಚಿಂತೆಯಿಂದ ನಿಟ್ಟುಸಿರುಬಿಡುತ್ತಾ ಇದ್ದನು.

**ತತ್ವ||** ಸೀತಾದೇವಿಯು ನಿರ್ದೋಷಿಯಾಗಿರುವಳೆಂದು ಶ್ರೀರಾಮನು ಹೇಳಿದುದರ ತತ್ವವೇನೆಂದರೆ—ಸೀತಾದೇವಿಯ ತತ್ವವಾದ ಶುದ್ಧಸತ್ವಪ್ರಧಾನವಾಯೆ ಅಥವಾ ಶುದ್ಧಸತ್ವಗುಣವು ಶುದ್ಧಸ್ಫಟಿಕದಂತೆ ಪ್ರಕಾಶವುಳ್ಳದ್ದಾಗಿಯೂ, ಆನಂದಮಯವಾಗಿಯೂ ಅಹಂಜ್ಞಾನವೇ ಶೇಷವಾಗುಳ್ಳ ಸ್ವರೂಪವಾಗಿಯೂ ಇರುವುದು. ಈ ಶುದ್ಧಸತ್ವಗುಣದ ಸೋಪಾನವೇ ಉನ್ಮನೀಸೋಪಾನವೆಂದು ಕರೆಯಲ್ಪಡುವುದು. ಇಂತಹ ಸೋಪಾನದ ಸ್ವರೂಪದಲ್ಲಿರುವವರಿಗೆ ಬಾಹ್ಯವ್ಯಾಪಾರವಿರುವುದಿಲ್ಲ. ಆದುದರಿಂದ ಆನಂದಸ್ವರೂಪವಾಗಿಯೂ ಅಹಂಜ್ಞಾನವೇ ಶೇಷವಾಗಿಯೂ, ಇರುವ ಶುದ್ಧಸತ್ವಗುಣದ ಸೋಪಾನವನ್ನು ಬೂದಿಯು ಕೆಂಡವನ್ನು ಮುಚ್ಚಿಕೊಂಡಂತೆ ಮುಚ್ಚಿಕೊಂಡು ರಜೋಗುಣ ತಮೋಗುಣಗಳು ತಾನೇ ಮೇಲೆನಿಸಿ ಬಾಹ್ಯವ್ಯಾಪಾರಮಾಡುವುದೇ ಸೀತಾದೇವಿಯು ರಾವಣನ ಬಂಧನದಲ್ಲಿದ್ದ ತತ್ವವಾಗಿರುವುದು.

ಅಂದರೆ ಬಾಹ್ಯವ್ಯಾಪಾರದ ಕಾಲದಲ್ಲಿ ಆನಂದವಾಗಿಯೂ, ಅಹಂಜ್ಞಾನವೇ ಶೇಷವಾಗಿಯೂ, ಇರುವ ಶುದ್ಧಸತ್ವಗುಣದ ಸೋಪಾನವು ಬೂದಿಮುಚ್ಚಿದ ಕೆಂಡದಂತೆ ಇರುವುದು. ಇಂತಹ ಶುದ್ಧಸತ್ವಗುಣದ ಸೋಪಾನವನ್ನು ತನ್ನಂತೆ ಮಾಡಿಕೊಳ್ಳಲು ರಜೋಗುಣದ ಚೈತನ್ಯಕ್ಕೆ ಅರ್ಹತೆ ಇರುವುದಿಲ್ಲ. ಅಂದರೆ ನಮ್ಮಲ್ಲಿ ಆನಂದಮಯವಾಗಿ ಅಹಂಜ್ಞಾನವೇ ಶೇಷವಾಗಿರುವ ಸ್ವರೂಪವು ಒಳಗೆ ಇದ್ದು ಪ್ರಕಾಶಿಸುತ್ತಿದ್ದರೂ, ಬಹಿರ್ವ್ಯಾಪಾರದಲ್ಲಿ ಈ ಶುದ್ಧಸತ್ವಗುಣದ ಸೋಪಾನವು ಹೇಗಿರುವುದೆಂಬುದನ್ನು ಕೂಡ ಊಹಿಸಿ ತಿಳಿದುಕೊಳ್ಳಲಾರೆವು. ಈ ತತ್ವಾರ್ಥವನ್ನನುಸರಿಸಿಯೇ ರಾವಣನು ಸೀತಾದೇವಿಯನ್ನು ತನ್ನಂತೆ ಮಾಡಿಕೊಳ್ಳಲಾರದೆ ಇದ್ದುದು ಮತ್ತು ಸೀತಾದೇವಿಯು ನಿರ್ದೋಷಿಯಾಗಿರುವ ತತ್ವವಾಗಿರುವುದು. ಅಂದರೆ ರಜೋಗುಣ ಮತ್ತು ಶುದ್ಧಸತ್ವಗುಣದ ಸೋಪಾನಗಳು ಒಂದನ್ನು ಮೀರಿ ಮತ್ತೊಂದು ಇದ್ದರೂ, ಒಂದಕ್ಕೊಂದು ವಿರೋಧವೇ ಹೊರತು ಹೊಂದುವುದಿಲ್ಲವೆಂಬ ತತ್ವವೇ ಸೀತಾದೇವಿಯು ನಿರ್ದೋಷಿಯಾಗಿರುವುದರ ತತ್ವವಾಗಿದೆ.

ಚಿರಕಾಲ ಸೀತಾದೇವಿಯು ರಾವಣನ ಗೃಹದಲ್ಲಿದ್ದುದರಿಂದ, ಇವಳನ್ನು ನಿರ್ವಿಚಾರವಾಗಿ ಸ್ವೀಕರಿಸಿದರೆ ಲೋಕಾಪವಾದಕ್ಕೆ ಗುರಿಯಾಗಬೇಕೆಂದು ಶ್ರೀರಾಮನು ಯೋಚಿಸು

ತ್ತಿದ್ದನೆಂದರೆ—ಸೀತಾದೇವಿಯು ರಾವಣನ ಬಂಧನದಲ್ಲಿದ್ದಂತೆ ನಮ್ಮಲ್ಲಿರುವ ಶುದ್ಧ ಸತ್ವಗುಣೋಪಾಧಿರೂಪವಾದ ಅಹಂಜ್ಞಾನವೇ ಶೇಷವಾಗಿರುವ ಸ್ವರೂಪವು ಜನ್ಮ ಪರಂಪರೆಯಿಂದಲೂ ಅವಿದ್ಯಾಬಂಧನದಲ್ಲಿರುವುದು. ಈ ಅವಿದ್ಯಾ ಬಂಧನದಲ್ಲಿದ್ದ ಶುದ್ಧಸತ್ವಗುಣದ ಅಪವಾದ ಪರಿಹಾರಾರ್ಥವಾಗಿ, ಏನು ಮಾಡಬೇಕೆಂಬ ಯೋಚನೆಯ ತತ್ವವೇ ಶ್ರೀರಾಮನ ಚಿಂತನೆಯ ಸೂಚನೆಯಾಗಿರುವುದು.

## ೩೬ನೆಯ ಪ್ರಕರಣ.

**ಶ್ರೀರಾಮನು ಸೀತಾದೇವಿಯನ್ನು ತಿರಸ್ಕರಿಸಿದುದು.**

**ಅವಿದ್ಯಾಬಂಧನದಲ್ಲಿ ಸಿಕ್ಕಿದ್ದ ಶುದ್ಧ ಸತ್ವಗುಣವು ಪರಿಶುದ್ಧಿಗೋಸ್ಕರ ಪರಬ್ರಹ್ಮನಲ್ಲಿ ಲೀನವಾಗಬೇಕಾದ ಅಥವಾ ಮಾಯೋಪಾಧಿಯ ಧಿಕ್ಕಾರದ ವಿಚಾರ.**

**ರಾ||** ಸೀತಾದೇವಿಯು ಬಂದು ಲಜ್ಜೆಯಿಂದ ತಲೆಬಾಗಿಸಿಕೊಂಡು ಶ್ರೀರಾಮನ ಸಮೀಪದಲ್ಲಿ ನಿಂತಳು. ಆಗ ಶ್ರೀರಾಮನಿಗೆ ಒಂದು ವಿಧವಾದ ಕೋಪಾವೇಶಹುಟ್ಟಿ, ಸೀತೆಯೊಡನೆ ಇದೋ ! ಯುದ್ಧದಲ್ಲಿ ಶತ್ರುವನ್ನು ಜಯಿಸಿ ನಿನ್ನನ್ನು ಸಾಧಿಸಿದೆನು. ಇವೆಲ್ಲವೂ ವಂಶಗೌರವ ಮತ್ತು ಪೌರುಷವನ್ನುಳಿಸಿಕೊಳ್ಳುವುದಕ್ಕಾಗಿ ಮಾಡಬೇಕಾದ ಕಾರ್ಯವೆಂದು ಮಾಡಿದೆನೇ ಹೊರತು, ನಿನ್ನನ್ನು ಪಡೆಯಬೇಕೆಂಬ ಕೋರಿಕೆಯಿಂದಲೇ ಮಾಡಿದ ಪ್ರಯತ್ನಗಳಲ್ಲ. ನೀನು ಪರಗೃಹವಾಸದಲ್ಲಿದ್ದುದರಿಂದ ನಿನ್ನಲ್ಲಿ ನನಗೆ ಸಂದೇಹಹುಟ್ಟಿರುವುದೆಂದು ಹೇಳುತ್ತಿರುವಾಗ ಶ್ರೀರಾಮನಿಗೆ ಕೋಪವು ಉಕ್ಕಿಬರುತ್ತಿರಲು, ಸೀತೆ! ನೀನು ಇನ್ನೆಲ್ಲಿಯಾದರೂ ನಿನ್ನ ಇಷ್ಟಬಂದಂತೆ ಇರಬಹುದೆಂದು ಹೇಳಿದನು.

**ತತ್ವ||** ಸೀತಾದೇವಿಯು ಶ್ರೀರಾಮನ ಸಮೀಪಕ್ಕೆ ಬಂದು ನಿಂತುಕೊಂಡಳೆಂದರೆ—ಸಮಾಧಿಯನ್ನು ಅಭ್ಯಾಸಮಾಡುತ್ತಿದ್ದ ಅಧಿಕಾರಿಯು ಶುದ್ಧಸತ್ವಗುಣದ ಸೋಪಾನವನ್ನು ಹತ್ತಿದನೆಂಬ ತತ್ವವಾಗಿರುವುದು. ಈ ಶುದ್ಧಸತ್ವಗುಣದ ಸೋಪಾನವನ್ನು ಹೊಂದಿದವರ ಸ್ಥಿತಿಯು ಹೇಗಿರುವುದೆಂದರೆ—ಶ್ರೀಶಂಕರಭಗವತ್ಪಾದಾಚಾರ್ಯರವರು ವಿವೇಕಚೂಡಾಮಣಿ ೧೨ನೆಯ ಶ್ಲೋಕದಲ್ಲಿ ಹೇಳಿರುವಂತೆ,

> ವಿಶುದ್ಧಸತ್ವಸ್ಯ ಗುಣಾಃ ಪ್ರಸಾದಃ ।
> ಸ್ವಾತ್ಮಾನುಭೂತಿಃ ಪರಮಪ್ರಶಾಂತಿಃ ॥
> ತೃಪ್ತಿಃಪ್ರಹರ್ಷಃ ಪರಮಾತ್ಮನಿಷ್ಠಾ ।
> ಯಯಾಸದಾನಂದರಸಂ ಸಮೃಚ್ಛತಿ ॥

ತಾ|| ಅಂತಃಕರಣ ಪರಿಶುದ್ಧವಾಗೋಣವು, ಸ್ವಾತ್ಮಾನುಭವವು, ಅತ್ಯುತ್ತಮವಾದ ಶಾಂತಿಯೆಂದರೆ—ಅಂತರಿಂದ್ರಿಯ ಬಹಿರಿಂದ್ರಿಯಗಳ ವಿಕಾರಗಳು ಲೇಶವೂ ಇಲ್ಲದಿರೋಣವು, ಸರ್ವಸುಖವೂ ದೊರೆತಂತೆ ಇರೋಣವು, ಮನೋಲ್ಲಾಸವು, ಆತ್ಮನಿಷ್ಠೆಯಿಂದ ಆನಂದಮಯವಾಗಿರುವಿಕೆಗಳ ಸ್ಥಿತಿಯೇ ಶುದ್ಧಸತ್ವಗುಣದ ಸೋಪಾನ.

ಆದುದರಿಂದ ಇಂತಹ ಶುದ್ಧಸತ್ವಗುಣದ ಸೋಪಾನವೇ ಉನ್ಮನ್ಯವಸ್ಥೆಯೆಂದು ಕರೆಯಲ್ಪಡುವುದು. ಶುದ್ಧಸತ್ವಗುಣವೆ ಶುದ್ಧಸತ್ವಪ್ರಧಾನಮಾಯೆಯೆಂದು ಕರೆಯಲ್ಪಡುತ್ತವಷ್ಟೆ! ಮಾಯೆಯೆಂದರೆ ಜ್ಞಾನವೆಂದು ವೇದದಲ್ಲಿಯೂ, ಯಾಸ್ಕರನಿರುಕ್ತದಲ್ಲಿಯೂ ಹೇಳಿರುವುದು. ಮಾಯೆಯಲ್ಲಿ ಶುದ್ಧಸತ್ವ ಮಲಿನಸತ್ವಗಳೆಂದು ಎರಡು ಭಾಗವಿರುವುದು. ಮಲಿನಮಾಯೆಯ ವ್ಯಾಪಾರವೆಲ್ಲ ದೇಹ ಮತ್ತು ವಿಷಯಾದಿಗಳ ಸ್ವರೂಪವಾದುದರಿಂದ, ದೇಹವೇ ನಾನೆಂಬ ಮತ್ತು ವಿಷಯವೃತ್ತಿ ಜ್ಞಾನಗಳಾಗಿರುವುದರಿಂದ, ಜೀವತ್ವಕ್ಕೆ ಕಾರಣವಾಗಿರುವುದು. ಶುದ್ಧಸತ್ವಪ್ರಧಾನಮಾಯೆಯು ಸರ್ವವೂ ನಾನೆಂಬವೃತ್ತಿ, ಜ್ಞಾನಸ್ವರೂಪವುಳ್ಳದ್ದಾಗಿಯೂ, ಆನಂದಮಯವಾಗಿಯೂ, ಸ್ಫಟಿಕದಂತೆ ಪ್ರಕಾಶವುಳ್ಳದ್ದಾಗಿಯೂ ಇರುವುದರಿಂದ ಈಶ್ವರನಿಗೆ ಉಪಾಧಿಯಾಯಿತು. ಇಂತಹ ಆನಂದಮಯವಾಗಿ, ಅಹಂ ಜ್ಞಾನವೇ ಶೇಷವಾಗಿರುವ ಶುದ್ಧಸತ್ವಗುಣ ಅಥವಾ ಶುದ್ಧಸತ್ವಪ್ರಧಾನಮಾಯೆಯನ್ನು ಮಲಿನಮಾಯೆಯು ಮರೆಮಾಡಿಕೊಂಡು, ದೇಹವೇ ನಾನೆಂಬ ಮತ್ತು ವಿಷಯಾದಿಗಳ ಜ್ಞಾನದಿಂದ ಮೆರೆಯುತ್ತಿರುವುದು.

ಈ ಮೇಲಿನ ತತ್ವಾರ್ಥಗಳಿಂದ ಶುದ್ಧಸತ್ವಪ್ರಧಾನಮಾಯಾತತ್ವದಲ್ಲಿರುವ ಸೀತಾದೇವಿಯು ಸ್ಫಟಿಕದಂತೆ ಸ್ವಚ್ಛವಾಗಿಯೂ, ಆನಂದಮಯವಾಗಿಯೂ, ಅಖಂಡವಾದ ಅಹಂಜ್ಞಾನವೇ ಶೇಷವಾಗಿಯೂ, ಇರುವ ಸ್ವರೂಪದ ತತ್ವದವಳಾಗಿ ನಮ್ಮಲ್ಲಿ ಪ್ರಕಾಶಮಾನಳಾಗಿರುವಳು. ಇಂತಹ ಅಹಂಜ್ಞಾನವನ್ನು ರಜೋಗುಣ ತಮೋಗುಣಗಳು, ಕೆಂಡವನ್ನು ಬೂದಿಯು ಮರೆಮಾಡಿಕೊಂಡಿರುವಂತೆ ಮರೆಮಾಡಿಕೊಂಡು, ಜಾಗ್ರತ್ಸ್ವಪ್ನ ಸುಷುಪ್ತಿಕಾಲಗಳಾಗಿ ವಿಜೃಂಭಿಸುತ್ತಿರುವುವು. ಈ ಅಹಂಜ್ಞಾನವೇ ಶೇಷವಾಗಿರುವ ಸೋಪಾನವು ಉನ್ಮನೀಸ್ಥಿತಿಯಲ್ಲಿ ಮಾತ್ರ ಬರುವುದು.

ಜಾಗ್ರತ್ಕಾಲದಲ್ಲಿ ನಾನು, ನನ್ನಬುದ್ಧಿ, ನನ್ನದೇಹವೆಂದು ಅಂದುಕೊಳ್ಳುತ್ತೇವಷ್ಟೆ! ಈ ನಾನು ಎಂಬ ಅಖಂಡಜ್ಞಾನವು ಎಲ್ಲಕ್ಕಿಂತಲೂ ಒಳಗೆ ಇದ್ದುಕೊಂಡು, ಪ್ರಕಾಶಮಾಡಿಕೊಂಡಿದೆ. ನಾನು, ನಾನು, ನಾನು ಎಂದುಕೊಳ್ಳುವುದೇನೆಂಬುದನ್ನು ಸಾವಧಾನದಿಂದ ಯೋಚಿಸಿ ನೋಡಿಕೊಂಡರೆ, ನಾನು ಎಂಬುದು ಜ್ಞಾನಮಾತ್ರ ಸ್ವರೂಪವಾದುದೆಂದು ತಿಳಿಯುವುದು.

ಶ್ರೀರಾಮನು ಚಿತ್ರಕೂಟಪರ್ವತಕ್ಕೆ ಬಂದು ಸೀತೆಯನ್ನು ಸಂತೋಷಪಡಿಸಲು ಮಂದಾಕಿನೀ ನದಿಯಲ್ಲಿ ವಿಹರಿಸುತ್ತಿದ್ದ ತತ್ವವೇ ವಿಜ್ಞಾನಮಯಕೋಶದ ಪ್ರಕೃತಿಯು ವಿಕಾರವಾದ ಶರೀರ ನಾನು ಎಂಬ ಜ್ಞಾನಕ್ಕೆ, ಶುದ್ಧಸತ್ವಗುಣವು ಒಳಗಾಗುವಿಕೆಯಾಗಿರುವುದು ಮನೋಮಯ ಪ್ರಾಣಮಯಕೋಶಗಳ ಕಾರ್ಯಗಳು ಸ್ಫುರಣೆಯಾದನಂತರ, ಶುದ್ಧಸತ್ವಗುಣಕ್ಕೆ ಇನ್ನೂ ಮರೆಯಾಗುವುದು. ಈ ತತ್ವಕ್ಕೆ ಅನುಸಾರವಾಗಿಯೇ ಶ್ರೀರಾಮಾದಿಗಳು ಅಗಸ್ತ್ಯಾಶ್ರಮಪ್ರವೇಶಮಾಡಿದ ಕಾಲದಲ್ಲಿ ಸೀತಾದೇವಿಯಲ್ಲಿ ತುಂಬಾ ಬಳಲಿಕೆಯು ತೋರುತ್ತಿರುವುದೆಂದು ಅಗಸ್ತ್ಯರು ಹೇಳಿರುವುದರ ತತ್ವವಾಗಿರುವುದು. ರಾವಣನು ಸೀತಾಪಹರಣಮಾಡಿದ ತತ್ವಗಳಿಂದ ಹೊರಗಿನ ವಿಷಯಾದಿಗಳ ವ್ಯಾಪಾರವೂ ಉಂಟಾಗಿ, ಕೆಂಡದ ಮೇಲೆ ಬೂದಿಯು ಮುಚ್ಚಿದಂತೆ ಅಂಖಂಡವಾದ ಅಹಂಜ್ಞಾನಕ್ಕೆ ಆವರಣ ಬಂದು, ಜಾಗ್ರತ್ಕಾಲದಲ್ಲಿ ಈ ಅಹಂಜ್ಞಾನವೇ ಶೇಷವಾಗಿರುವ ಸ್ಥಿತಿಯನ್ನು ಎಂದಿಗೂ ಪಡೆಯಲಾರೆವು. ಸುಷುಪ್ತಿಕಾಲದಲ್ಲಿಯೂ ತಮೋಗುಣದ ಗಾಢಾಂಧಕಾರವು ಆವೃತವಾಗುವುದರಿಂದ ನಾನು ಎಂಬ ಜ್ಞಾನಕ್ಕೆ ತೋರಿಕೆಯೇ ಇರುವುದಿಲ್ಲ.

ಆದುದರಿಂದ ಸೀತಾದೇವಿಯು ಶ್ರೀರಾಮನ ಸಮೀಪಕ್ಕೆ ಬಂದಳೆಂದರೆ—ಆನಂದ ಮಯವಾಗಿಯೂ, ಸ್ಫಟಿಕದಂತೆ ಸ್ವಚ್ಛವಾಗಿಯೂ, ಅಖಂಡವಾದ ಅಹಂಜ್ಞಾನವೇ ಶೇಷವಾಗಿಯೂ ಇರುವ ಸ್ಥಿತಿಯಾದ ಶುದ್ಧಸತ್ವಗುಣದ ಸೋಪಾನಕ್ಕೆಂದರೆ ಉನ್ಮನೀ ಅವಸ್ಥೆಗೆ ಅಧಿಕಾರಿಯು ಬಂದನೆಂಬ ತತ್ವವಾಗಿರುವುದು.

ಸೀತಾದೇವಿಯು ಶ್ರೀರಾಮನ ಸಮೀಪಕ್ಕೆ ಬಂದಾಗ, ಶ್ರೀರಾಮನಿಗೆ ಕೋಪಾವೇಶ ಹುಟ್ಟಿದ ತತ್ವವೇನೆಂದರೆ—ಅಧಿಕಾರಿಯಲ್ಲಿ ಒಳಗಡೆ "ಓಂ" ಕಾರನಾದವಡಗುವ ಕಾಲ ಪ್ರಾಪ್ತವಾಗಲು, "ಅಹಂ ಬ್ರಹ್ಮಾಸ್ಮಿ" ಎಂಬ ಜ್ಞಾನದಿಂದ ಸಮಾಧಿಯಲ್ಲಿ ಮುಳುಗುತ್ತಾನಷ್ಟೆ! ಹೀಗೆ ಸಮಾಧಿಯಲ್ಲಿ ಮುಳುಗುವ ಕಾಲದಲ್ಲಿ, ನಾದವಡಗಿದನಂತರ ಆತ್ಮಸಾಕ್ಷಾತ್ಕಾರವಾಗುವುದಕ್ಕಿಂತ ಮುಂಚೆ ಜ್ಞಾತೃ ಅಥವಾ ಅಹಂ ಜ್ಞಾನವು ಶೇಷವಾಗಿ ನಿಂತುಕೊಳ್ಳುವ ಸ್ವರೂಪವೇ ಸೀತಾದೇವಿಯು ಶ್ರೀರಾಮನ ಬಳಿಗೆ ಬಂದು ನಿಂತುಕೊಳ್ಳುವುದಾಗಿರುವುದೆಂದು ಮೇಲೆ ತಿಳಿಸಿರುತ್ತದಷ್ಟೆ! ಶೇಷವಾಗಿ ನಿಂತುಕೊಳ್ಳುವ "ಅಹಂ" ಎಂಬ ಜ್ಞಾನವು ಬಹಿರ್ವ್ಯಾಪಾರದ ಬಂಧನದಲ್ಲಿದ್ದುದರಿಂದ, ಈ ಅಹಂಜ್ಞಾನ ಮಾತ್ರ ಅವಿಶೇಷವಾಗಿ ನಿಲ್ಲುವ ಸೋಪಾನದಲ್ಲಿರುವುದು ಶ್ರೇಷ್ಠವಲ್ಲವೆಂಬ ನಿರ್ಧಾರದ ತತ್ವವೇ ಶ್ರೀರಾಮನಿಗೆ ಸೀತಾದೇವಿಯು ತನ್ನ ಸಮೀಪಕ್ಕೆ ಬಂದಾಗಲೆ ಒಂದು ವಿಧವಾದ ಕೋಪಹುಟ್ಟಿದುದು.

ಶ್ರೀರಾಮನು ಸೀತೆಯೊಡನೆ ನನ್ನ ಪೌರುಷವನ್ನುಳಿಸಿಕೊಳ್ಳಲು ಶತ್ರುಗಳನ್ನು ಜಯಿಸಿದೆನೆ ಹೊರತು ನಿನ್ನನ್ನು ಪಡೆಯಬೇಕೆಂಬ ಕೋರಿಕೆ ಮಾತ್ರದಿಂದಲೇ ನಾನು ಕಾರ್ಯಗಳನ್ನು ನಡೆಸಲಿಲ್ಲವೆಂದರೆ—ಪುರುಷನೆಂದರೆ ಜೀವ ಅಥವಾ ಪರಮಾತ್ಮ. ಜೀವನು

ಪೌರುಷವನ್ನುಳಿಸಿಕೊಳ್ಳುವುದೆಂದರೆ, ಪುರುಷತ್ವದ ಕಾರ್ಯವಾದ ಅವಿದ್ಯೆಯನ್ನು ನಿಗ್ರಹಿಸಿ ಸ್ವಸ್ವರೂಪವನ್ನು ಹೊಂದುವುದು ಬಂಧನದಲ್ಲಿದ್ದ ಸೀತಾದೇವಿಯನ್ನು ಪಡೆಯುವ ಕೋರಿಕೆ ಮಾತ್ರದಿಂದಲೆ ಅಲ್ಲವೆಂದರೆ, ಬಹಿರ್ವ್ಯಾಪಾರದ ಆವರಣದಲ್ಲಿದ್ದ "ಅಹಂ" ಎಂಬ ಜ್ಞಾನ ವನ್ನು, ಶೇಷವಾಗಿ ನಿಲ್ಲಿಸಿಕೊಳ್ಳುವ ಸವಿಕಲ್ಪಸಮಾಧಿಯ ಅಂತ್ಯದ ಸೋಪಾನವನ್ನು ಹೊಂದುವ ಉದ್ದೇಶದಿಂದಲೇ ಮೋಕ್ಷಮಾರ್ಗದ ಕಾರ್ಯಗಳನ್ನು ನಡೆಸಲಿಲ್ಲವೆಂಬ ತತ್ವ.

ಶ್ರೀರಾಮನು ಸೀತಾದೇವಿಯನ್ನು ನೋಡಿ ಕೋಪವು ಉಕ್ಕಿಬರುತ್ತಿರಲು ಸೀತೆ ಯೊಡನೆ ನಿನ್ನ ವಿಷಯದಲ್ಲಿ ನನಗೆ ಸಂದೇಹ ಹುಟ್ಟಿರುವುದು. ಸೀತೆ! ಇನ್ನೆಲ್ಲಿಯಾದರೂ ನಿನ್ನ ಇಷ್ಟಬಂದಂತೆ ಇರಬಹುದೆಂದು ಉದ್ರೇಕವಾದ ಕೋಪದಿಂದ ಸೀತಾದೇವಿಯನ್ನು ತಿರಸ್ಕರಿಸಿದನೆಂದರೆ—ಸವಿಕಲ್ಪಸಮಾಧಿಯ ಅಂತ್ಯದ ಸೋಪಾನವನ್ನು ಪಡೆಯುತ್ತಿರುವ ಅಧಿಕಾರಿಯು "ಅಹಂ" ಎಂಬ ಜ್ಞಾನವನ್ನು ಕೂಡ ಹೋಗಲಾಡಿಸಿಕೊಳ್ಳಬೇಕು. ಅಂದರೆ "ಅಹಂ" ಜ್ಞಾನವೇ ಶೇಷವಾಗಿ ನಿಲ್ಲುವ ಶುದ್ಧಸತ್ವಗುಣದ ಸೋಪಾನವನ್ನು ಬಲ ವಂತದಿಂದ ತಿರಸ್ಕರಿಸಿ, ನಿರ್ಗುಣವಾದ ಆತ್ಮಸಾಕ್ಷಾತ್ಕಾರವನ್ನು ಪಡೆಯುವುದೇ ಸೀತಾ ತಿರಸ್ಕಾರದ ತತ್ವ. ಅಥವಾ "ಅಹಂ" ಜ್ಞಾನವೇ ಉಳಿಯುವ ಸ್ವರೂಪವಾದ ಶುದ್ಧಸತ್ವ ಪ್ರಧಾನಮಾಯೆಯ ಉಪಾಧಿಯನ್ನು ತಿರಸ್ಕರಿಸಿ, ಉಪಾಧಿರಹಿತವಾದ ಆತ್ಮಸಾಕ್ಷಾತ್ಕಾರ ಪಡೆಯುವುದೇ ಸೀತಾತಿರಸ್ಕಾರದ ತತ್ವವಾಗಿರುವುದು. ಅಥವಾ ಶುದ್ಧಸತ್ವಗುಣದ ಸ್ವರೂಪವಾದ "ಅಹಂ" ಎಂಬ ಜ್ಞಾನವು ಸೀತಾದೇವಿಯು ರಾವಣನ ಬಂಧನದಲ್ಲಿದ್ದ ತತ್ವವಾದ ಬಹಿರ್ವ್ಯಾಪಾರದ ಬಂಧನವೆಂದರೆ, ಅವಿದ್ಯೆಯ ಬಂಧನದಲ್ಲಿ ಜನ್ಮ ಜನ್ಮಾಂತರ ಗಳಿಂದಲೂ ನಮ್ಮಲ್ಲಿರುವುದಷ್ಟೆ! ಈ "ಅಹಂ" ಜ್ಞಾನವು ಪರಮಾತ್ಮನಲ್ಲಿ ಲೀನವಾಗುವ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವ ತತ್ವದ ಉದ್ದೇಶವೇ ಶ್ರೀರಾಮನು ಸೀತಾದೇವಿಯನ್ನು ತಿರಸ್ಕರಿಸಿದ ತತ್ವವಾಗಿರುವುದು.

ರಾಮಾಯಣದ ಕಥೆಯನ್ನನುಸರಿಸಿ ಶ್ರೀರಾಮನು ಸೀತಾದೇವಿಯನ್ನು ತಿರಸ್ಕರಿಸಿದ ತತ್ವವು ಮೇಲೆ ವಿವರಿಸಲ್ಪಟ್ಟಿತು. ಈ ಮೇಲಿನ ತತ್ವಗಳಿಗೆ ಅನ್ವಯವಾಗುವ ಕೆಲವು ಶ್ರುತಿವಾಕ್ಯಗಳನ್ನು ಬರೆದು ತತ್ವಾರ್ಥಗಳನ್ನು ದೃಢೀಕರಿಸೋಣ. ರಾವಣಾದಿಗಳನ್ನು ನಿಗ್ರಹಿಸುವುದೇ ಅವಿದ್ಯೆಯ ಉಪಾಧಿಯನ್ನು ನಿವೃತ್ತಿಮಾಡಿಕೊಳ್ಳುವ ತತ್ವವೆಂದೂ, ಸೀತಾ ದೇವಿಯನ್ನು ತಿರಸ್ಕರಿಸುವ ತತ್ವವೇ, ಶುದ್ಧಸತ್ವಪ್ರಧಾನಮಾಯೋಪಾಧಿಯ ಸಂಬಂಧ ವನ್ನೂ ಬಿಡುವ ತತ್ವವೆಂದು ತಿಳಿಸಿರುತ್ತೆ. ಈ ತತ್ವಾರ್ಥಗಳಿಗನುಸಾರವಾಗಿ ಯಾಜುಷಿ ಕಠೋಪನಿಷತ್ತಿನಲ್ಲಿ,

ಮಾಯಾಸಂಬಂಧತಶ್ಚೇಶೋ ಜೀವೋ ವಿದ್ಯಾವಶಸ್ತಥಾ |
ಸರ್ವೋಪಾಧಿವಿನಿರ್ಮುಕ್ತಂ ಸ್ವಾತ್ಮಾನಂ ಭಾವಯೇತ್ಸುಧೀಃ ||

ತಾ|| ಆತ್ಮನು ಮಾಯಾಸಂಬಂಧದಿಂದ ಈಶ್ವರನೆನಿಸಿಕೊಳ್ಳುವನು. ಅವಿದ್ಯಾ ಸಂಬಂಧದಿಂದ ಜೀವನೆನಿಸಿಕೊಳ್ಳುವನು. ಸುಜ್ಞಾನಿಯಾದವನು ಯಾವ ಉಪಾಧಿಗಳೂ ಇಲ್ಲದ ಆತ್ಮನನ್ನು ಅನುಸಂಧಾನಮಾಡಬೇಕು, ಎಂದು ಹೇಳಿರುವುದು.

ಈ ಮೇಲಿನ ಶ್ರುತಿಪ್ರಮಾಣವನ್ನನುಸರಿಸಿ, ಉಪಾಧಿಗಳೆಲ್ಲ ಬ್ರಹ್ಮರಂಧ್ರದಲ್ಲೆಂದರೆ ಪರಮಾತ್ಮನಲ್ಲಿ ಲೀನವಾಗತಕ್ಕದ್ದೇ ಪರಮಪದವೆನಿಸುವ ತತ್ವಕ್ಕೆ ಅನುಸಾರವಾಗಿ, ಶ್ರೀರಾಮನು ಸೀತಾದೇವಿಯನ್ನು ತಿರಸ್ಕರಿಸಿದ್ದಾಗಿರುವುದು. ಈ ತಾತ್ಪರ್ಯಕ್ಕೆ ಮಹಾ ನಾರಾಯಣೋಪನಿಷತ್ತಿನಲ್ಲಿ,

ಸರ್ವೇಜೀವಾಶ್ಚ ಸ್ವಸ್ವರೂಪಂ ಭಜಂತೆ | ಯಥಾ ಜಪಾಕುಸುಮ
ಸಾನ್ನಿಧ್ಯಾದ್ರಕ್ತಸ್ಫಟಿಕ ಪ್ರತೀತಿಃ| ತದಭಾವೇ ಶುದ್ಧಸ್ಫಟಿಕಪ್ರತೀತಿಃ |
ಬ್ರಹ್ಮಣೋಪಿ ಮಾಯೋಪಾಧಿವಶಾ ತ್ಸಗುಣಪರಿಚ್ಛಿನ್ನಾದಿಪ್ರತೀತಿಃ |
ಉಪಾಧಿವಿಲಯಾ ನ್ನಿರ್ಗುಣನಿರವಯವಾದಿಪ್ರತೀತಿ ರಿತ್ಯುಪನಿಷತ್ ||

ತಾ|| ಸಮಸ್ತ ಜೀವರೂ ಸ್ವಸ್ವರೂಪವಾದ ಆತ್ಮಸ್ವರೂಪವನ್ನು ಪಡೆಯುವರು. ಕೆಂಪುದಾಸವಾಳದ ಹೂವಿನ ಸಾನ್ನಿಧ್ಯದಿಂದ ಶುದ್ಧಸ್ಫಟಿಕವು ರಕ್ತಸ್ಫಟಿಕವಾಗಿಯೂ, ಕೆಂಪುದಾಸವಾಳದ ಹೂವಿನ ಸಾನ್ನಿಧ್ಯವಿಲ್ಲದಿದ್ದಾಗ ಶುದ್ಧಸ್ಫಟಿಕವು ಯಥಾವತ್ತಾಗಿಯೂ ಹೇಗೆ ಕಾಣುವುದೋ ಹಾಗೆ ಪರಬ್ರಹ್ಮನಿಗೂ ಕೂಡ ಮಾಯೋಪಾಧಿವಶದಿಂದ ಸಗುಣತ್ವವು ಅಳತೆಗೆ ದೊರೆಯುವುದೆಂಬ ಪ್ರತೀತಿಯಾಗಿರುವುದು. ಉಪಾಧಿಗಳ ನಿವೃತ್ತಿಯಿಂದ ನಿರ್ಗುಣ ನಿರವಯವತ್ವಾದಿಗಳು ಪ್ರತೀತಿಯಾಗುವುವು, ಎಂದು ಹೇಳಿರುವುದು.

ಈ ಮೇಲಿನ ಶ್ರುತಿವಾಕ್ಯದಂತೆ ಸ್ಫಟಿಕಸ್ವರೂಪದ ತತ್ವದಲ್ಲಿರುವ ಪರಮಾತ್ಮನಿಗೆ ಕೆಂಪುದಾಸವಾಳದ ಹೂವಿನ ತತ್ವದಲ್ಲಿರುವ ಅಹಂಜ್ಞಾನವೇ ಸ್ವರೂಪವಾಗುಳ್ಳ ಶುದ್ಧ ಸತ್ವಪ್ರಧಾನಮಾಯೆಯಿಂದ ಆತ್ಮಸ್ವರೂಪವು "ಅಹಂ" ಜ್ಞಾನದ ಸ್ವರೂಪವಾಗಿಯೇ ತೋರುವುದು. ಈ ಅಹಂ ಜ್ಞಾನವು ಕೂಡ ಪರಮಾತ್ಮನಲ್ಲಿ ಲೀನವಾದರೆ ಎಲ್ಲಾ ಉಪಾಧಿ ಗಳಿಂದಲೂ ನಿವೃತ್ತನಾದ ಪ್ರತಿಬಿಂಬಚೈತನ್ಯನು ಸ್ವಯಂಪ್ರಕಾಶನಾದ ಪರಬ್ರಹ್ಮಚೈತನ್ಯ ನಲ್ಲಿ ಏಕೀಭೂತನಾಗುವನು. ಈ ತತ್ವಾರ್ಥವನ್ನನುಸರಿಸಿಯೇ ಶ್ರೀರಾಮನು ಸೀತಾ ದೇವಿಯನ್ನು ತಿರಸ್ಕರಿಸಿದ್ದಾಗಿರುವುದು.

ಶ್ರೀರಾಮನು ಸೀತಾದೇವಿಯೊಡನೆ ವನವಾಸಕ್ಕೆ ಬರಲು ರಾವಣನು ಸೀತಾದೇವಿ ಯನ್ನು ಅಪಹರಿಸಿದ ತತ್ವದಂತೆ ಬುದ್ಧಿಯಲ್ಲಿರುವ ಪ್ರತಿಬಿಂಬಚೈತನ್ಯವು ಅಹಂ ಜ್ಞಾನ ದೊಡನೆ ಕೋಶಗಳಲ್ಲಿ ವರ್ತಿಸುವುದರಿಂದ ಈ ಅಹಂ ಜ್ಞಾನವು ಆನಂದ ವಿಜ್ಞಾನ, ಮನೋ, ಪ್ರಾಣ ಮತ್ತು ಅನ್ನಮಯಕೋಶಗಳ ಸ್ವರೂಪದ ಕಾರ್ಯವೆಂದರೆ ಅವಿದ್ಯೆಯ

ಸ್ವರೂಪಗಳಿಂದ ಆವರಿಸಲ್ಪಟ್ಟು ಜಾಗ್ರತ್ಕಾಲವಾದ ಬಹಿರ್ವ್ಯಾಪಾರಸ್ವರೂಪ ಮತ್ತು ಸುಷುಪ್ತ್ಯವಸ್ಥೆಗಳಿಂದ ಬಂಧಿಸಲ್ಪಟ್ಟಿರುವುದು. ಆದುದರಿಂದ ಈ ಖಂಡವಾದ ಅಹಂ ಜ್ಞಾನವನ್ನೇ ಶೇಷವಾಗಿ ನಿಲ್ಲಿಸಿಕೊಳ್ಳುವ ಸ್ವರೂಪವು ಅವಿದ್ಯಾವ್ಯಾಪಾರದ ಬಂಧನದಲ್ಲಿರುವ ಪರ್ಯಂತರ ಖಂಡಿತವಾಗಿಯೂ ಸಾಧ್ಯವಿಲ್ಲ. ಅವಿದ್ಯೆಯ ಬಂಧನವನ್ನು ಪರಿಹಾರ ಮಾಡುವ ಸಮಾಧಿಯ ಅನುಷ್ಠಾನಮಾಡುತ್ತಾ ಸವಿಕಲ್ಪಸಮಾಧಿಯ ಅಂತ್ಯದ ಸೋಪಾನಕ್ಕೆ ಬಂದು ಶೇಷವಾಗಿ ಉಳಿಯುವ ಈ "ಅಹಂ" ಜ್ಞಾನವನ್ನೂ ಧಿಕ್ಕರಿಸಿ ನಿರ್ವಿಕಲ್ಪ ಸಮಾಧಿ ಸ್ವರೂಪವಾದ ಆತ್ಮಸಾಕ್ಷಾತ್ಕಾರವನ್ನು ಪಡೆಯಬೇಕೆಂಬ ತತ್ವವೇ ಶ್ರೀರಾಮನು ಸೀತಾದೇವಿಯನ್ನು ತಿರಸ್ಕರಿಸಿದುದು. ಈ ತತ್ವಾರ್ಥಕ್ಕೆ ಅನುಸಾರವಾಗಿ ಶ್ರೀಶಂಕರ ಭಗವತ್ಪಾದರವರು ವಿವೇಕಚೂಡಾಮಣಿ ೩೪೩ನೆಯ ಶ್ಲೋಕದಲ್ಲಿ,

ಆರೂಢಶಕ್ತೇ ರಹಮೋವಿನಾಶಃ ಕರ್ತುಂ ನಶಕ್ಯಃ ಸಹಸಾಪಿಪಂಡಿತೈಃ |
ಯೇನಿರ್ವಿಕಲ್ಪಾಖ್ಯಸಮಾಧಿನಿಶ್ಚಲಾಸ್ತಾನನ್ತರಾನನ್ತ ಭವಾಹಿವಾಸನಾಃ ||

ತಾ|| ರೂಢಮೂಲವಾದ ಶಕ್ತಿಯುಳ್ಳ "ಅಹಂ" ಜ್ಞಾನವನ್ನು ನಾಶಪಡಿಸಲು ಪಂಡಿತರಿಗೂ ಸಾಧ್ಯವಿಲ್ಲವಾಗಿ, ನಿರ್ವಿಕಲ್ಪಸಮಾಧಿನಿಷ್ಠರಾದವರನ್ನು ಬಿಟ್ಟು ಉಳಿದವರೆಲ್ಲರನ್ನೂ ಅಹಮಾದಿಜ್ಞಾನಗಳು ಬಂಧನಕ್ಕೆ ಗುರಿಮಾಡುವುದರಿಂದ ಅಂತಹ ನಿರ್ವಿಕಲ್ಪ ಸಮಾಧಿನಿಷ್ಠೆಯನ್ನು ಸಮಾಧಿಯ ಅಭ್ಯಾಸಬಲದಿಂದ ಪಡೆದು ಅಹಮಾದಿಜ್ಞಾನಗಳನ್ನು ನಿಗ್ರಹಿಸಬೇಕು, ಎಂದು ಹೇಳಿರುವುದು.

ಈ ಮೇಲಿನ ಶ್ರೀಶಂಕರಭಗವತ್ಪಾದಾಚಾರ್ಯರವರ ವಾಕ್ಯದಂತೆ ಸೃಷ್ಟಿಯಾದ ಪ್ರಪಂಚದ ಸ್ಥಿತಿಗೆ ಅಂದರೆ ಇರುವಿಕೆಗೆ ಮೂಲಕಾರಣವಾಗಿರುವ ಈ "ಅಹಂ" ಎಂಬ ಅಖಂಡಜ್ಞಾನವನ್ನು ಧಿಕ್ಕರಿಸಿ ಆತ್ಮಸ್ವರೂಪವಾದ ನಿರ್ವಿಕಲ್ಪಸಮಾಧಿಯನ್ನು ಹೊಂದಬೇಕು. ಅವಿದ್ಯಾ ಮತ್ತು ಮಾಯೋಪಾಧಿಗಳೆರಡೂ ಹೋದಲ್ಲಿ ಆತ್ಮಸಾಕ್ಷಾತ್ಕಾರವಾಗುವುದೆಂಬುದಕ್ಕೆ ಅಧ್ಯಾತ್ಮೋಪನಿಷತ್ತಿನಲ್ಲಿ,

ಮಾಯಾಽವಿದ್ಯೇವಿಹಾಯೈವಾ ಉಪಾಧೀಪರಜೀವಯೋಃ |
ಅಖಂಡಂಸಚ್ಚಿದಾನಂದಂ ಪರಂಬ್ರಹ್ಮಾವಿಲಕ್ಷ್ಯತೇ ||

ತಾ|| ಜೀವೇಶ್ವರನಿಗೆ ಉಪಾಧಿಯಾದ ಅವಿದ್ಯೆ ಮತ್ತು ಮಾಯೆಗಳನ್ನು ತ್ಯಜಿಸಿ ಅಖಂಡನಾಗಿಯೂ, ಸಚ್ಚಿದಾನಂದನಾಗಿಯೂ ಇರುವ ಪರಬ್ರಹ್ಮನನ್ನೇ ಚೆನ್ನಾಗಿ ಲಕ್ಷಿಸಬೇಕು. ಎಂಬ ವಾಕ್ಯವಿರುವುದು.

ರಾವಣನ ಸಂಹಾರದ ತತ್ವದವರೆಗೂ ಜ್ಞಾತೃ, ಜ್ಞಾನ, ಜ್ಞೇಯಸ್ವರೂಪವಾದ ತ್ರಿಪುಟಿಯು ಇರುತ್ತದಷ್ಟೆ! ರಾವಣನ ಸಂಹಾರವಾಗುವ ತತ್ವವೆ ವಿಷಯಸ್ವರೂಪವಾದ

ಜ್ಞೇಯವು ನಶಿಸಿ ಜ್ಞಾತೃವೆಂದರೆ ಅಹಂಜ್ಞಾನವು ಉಳಿದುಕೊಳ್ಳುವ ಸ್ವರೂಪವೇ ಸೀತಾದೇವಿಯು ಶ್ರೀರಾಮನ ಬಳಿಗೆ ಬಂದುದಾಗಿರುವುದು. ಜ್ಞಾತೃ ಎಂದರೆ ತಿಳಿಯುವವನು, ತಿಳಿಯುವವನೇ ಆತ್ಮನಲ್ಲ. ತಿಳಿಯುವವನು ನಾನು ಎಂಬ ಜ್ಞಾನ. ಈ ನಾನು ಎಂಬ ವೃತ್ತಿಜ್ಞಾನಕ್ಕೆ ಪ್ರಕಾಶಕನಾಗಿರುವವನು ಪರಮಾತ್ಮನು. ಪರಮಾತ್ಮಸಾನ್ನಿಧ್ಯದಿಂದ ಪ್ರಕೃತಿಸ್ವರೂಪವಾಗಿಯೂ, ಆನಂದ ಮತ್ತು ಜ್ಞಾನಮಯವಾಗಿಯೂ ಇರುವ ಅಹಂ ಎನ್ನುವುದು ಆತ್ಮನ ಪ್ರಕಾಶದಿಂದ ಸಕಲವನ್ನೂ ತಿಳಿಯುವಂತೆ ಮಾಡುತ್ತದೆ. ಪ್ರಕೃತಿ ಸ್ವರೂಪವಾಗಿಯೂ, ಸ್ಥಿತಿಯೆಂದರೆ ಇರುವಿಕೆಗೆ ಮೂಲರೂಪವಾಗಿಯೂ, ಇರುವ ಈ "ಅಹಂ"ಜ್ಞಾನವೂ ಕೂಡ ಪರಮಾತ್ಮನಲ್ಲಿ ಲೀನವಾದರೆ ಆತ್ಮಸಾಕ್ಷಾತ್ಕಾರವಾಗುವ ತತ್ತ್ವವನ್ನು ಅನುಸರಿಸಿಯೇ ಶ್ರೀರಾಮನು ಸೀತಾದೇವಿಯನ್ನು ತಿರಸ್ಕರಿಸಿದ್ದಾಗಿರುವುದು.

ನಿರ್ವಿಕಲ್ಪಸಮಾಧಿನಿಷ್ಠರನ್ನು ಬಿಟ್ಟು ಉಳಿದವರಲ್ಲಿ ಈ "ಅಹಂ"ಜ್ಞಾನವು ಇರುವುದೆಂದು ತಿಳಿಸಲು ಮೇಲಿನ ಶ್ರೀಶಂಕರಭಗವತ್ಪಾದಾಚಾರ್ಯರವರ ವಿವೇಕಚೂಡಾಮಣಿಯ ಶ್ಲೋಕವನ್ನು ಬರೆದಿದೆಯಷ್ಟೆ! ಇಂತಹ ಅಹಂ ಜ್ಞಾನವು ಪರಮಾತ್ಮನಲ್ಲಿ ಲೀನವಾಗುವಿಕೆಯನ್ನೇ ರಾಜಯೋಗವೆಂದು ಯೋಗತಾರಾವಳಿಯಲ್ಲಿ,

ಅಹಂಮಮತ್ವಾದಿವಿಹಾಯಸರ್ವಂ । ಶ್ರೀರಾಜಯೋಗೇಸ್ಥಿರಮಾನಸಾನಾಂ ॥
ನದ್ರಷ್ಟೃತಾನಾಸ್ತಿಚದೃಶ್ಯಭಾವೋ । ಸಾಜೃಂಭತೇ ಕೇವಲ ಸಂವಿದೇವ ॥

ತಾ॥ ನಾನು, ನನ್ನದು ಎಂಬಿವೇ ಮೊದಲಾದುವುಗಳನ್ನೆಲ್ಲಾ ಬಿಟ್ಟು ಸಂಪದ್ಯುಕ್ತವಾದ ರಾಜಯೋಗಸ್ವರೂಪವಾದ ನಿರ್ವಿಕಲ್ಪಸಮಾಧಿಯಲ್ಲಿ ಸ್ಥಿರೀಕರಿಸಲ್ಪಟ್ಟ ಮಹಾತ್ಮನಿಗೆ ಅಹಂ ಮಮತ್ವಾದಿಗಳೆಲ್ಲ ಇಲ್ಲವಾಗಿ ಕೇವಲ ಧ್ಯೇಯರೂಪವಾದ ಪರಮಾತ್ಮ ವಸ್ತುವೇ ನಿಲ್ಲುವುದು, ಎಂದು ಹೇಳಿರುವರು.

ಅಲ್ಲದೆ ಮೂಲಾಧಾರದಿಂದ ಸುಷುಮ್ನಾನಾಡಿಯೊಳಗೆ ಪ್ರವೇಶಿಸುತ್ತಿರುವ ಕುಂಡಲಿನೀಶಕ್ತಿಯೊಡನೆ ಬುದ್ಧಿವೃತ್ತಿಯು ಚಕ್ರಗಳನ್ನು ಭೇಧಿಸಿಕೊಂಡು ಆಜ್ಞಾಚಕ್ರಕ್ಕೆ ಬಂದು ನಿಂತಿರುವುದು. ಹೀಗೆ ಆಜ್ಞಾಚಕ್ರದಲ್ಲಿ ನಿಂತಿರುವ ಬುದ್ಧಿವೃತ್ತಿಯಲ್ಲಿ ಅಹಂ ಜ್ಞಾನವುಳಿದಿರುವ ಶುದ್ಧಸತ್ವಗುಣದ ಉಪಾಧಿಯಿರುವುದರಿಂದ ಸಗುಣಸೋಪಾನವೆನಿಸುವುದೇ ಹೊರತು ನಿರ್ಗುಣಸೋಪಾನವೆನಿಸುವುದಿಲ್ಲ. ಭ್ರೂಮಧ್ಯಪ್ರದೇಶವಲ್ಲಿ ಸುಷುಮ್ನಾನಾಡಿಯೊಳಗೆ ಇರುವ ಆಜ್ಞಾಚಕ್ರಪ್ರದೇಶವನ್ನು ದಾಟಿ ಸಹಸ್ರಾರಕಮಲದಲ್ಲಿ ಈ "ಅಹಂ" ಜ್ಞಾನವು ಲೀನವಾದರೆ ನಿರ್ಗುಣಸೋಪಾನವೆಂದರೆ ಅಮೂರ್ತಿತಾರಕವಾಗುವುದು. ಆದುದರಿಂದ ಸುಷುಮ್ನೆಯೊಳಗೆ ಭ್ರೂಮಧ್ಯಪ್ರದೇಶದವರೆಗೂ ಸಗುಣ ಅಥವಾ ಮೂರ್ತಿತಾರಕ

ವೆನಿಸಿರುವುದು. ಭ್ರೂಯುಗವನ್ನು ದಾಟಿರುವುದು ನಿರ್ಗುಣ ಅಥವಾ ಅಮೂರ್ತಿತಾರಕ ವೆನಿಸಿಕೊಳ್ಳುವುದು. ಇದೇ ತಾತ್ಪರ್ಯಕ್ಕೆ ಮಣ್ಡಲಬ್ರಾಹ್ಮಣೋಪನಿಷತ್ತಿನಲ್ಲಿ,

ಯದಿನ್ದ್ರಿಯಾಂತಂ ತನ್ಮೂರ್ತಿತಾರಕಂ ।
ಯದ್ಭ್ರೂಯುಗಾತೀತಂ ತದಮೂರ್ತಿತಾರಕಂ ॥

ತಾ॥ ಬುದ್ಧ್ಯಾದಿ ಇಂದ್ರಿಯಗಳಿಗೆ ಲಕ್ಷ್ಯವಾಗತಕ್ಕದ್ದು ಎಲ್ಲಿಯವರೆಗೆ ಇರುವುದೋ ಅದು ಮೂರ್ತಿತಾರಕವು. ಸುಷುಮ್ನೆಯೊಳಗೆ ಭ್ರೂಯುಗವನ್ನು ದಾಟಿರುವುದು ಅಮೂರ್ತಿತಾರಕವು ಎಂಬದಾಗಿ ಹೇಳಿದೆ.

ಈ ಮೇಲಿನ ತತ್ವಗಳಿಗನುಸಾರವಾಗಿ ಶ್ರೀರಾಮನು ಸೀತಾದೇವಿಯನ್ನು ತಿರಸ್ಕರಿಸಿದನೆಂದರೆ ಶುದ್ಧಸತ್ವಾದಿಗುಣಗಳಲ್ಲಿಯೇ ವಿರಕ್ತಿಬಂದು ನಿರ್ಗುಣವಾದ ಬ್ರಹ್ಮಸಾಕ್ಷಾತ್ಕಾರ ಪಡೆಯುವುದರ ತತ್ವವೆಂದು ಸೂಚಿಸುತ್ತದೆ. ಶುದ್ಧಸತ್ವಾದಿಗುಣಗಳಲ್ಲಿನ ವಿರಕ್ತಿಯು ಪರಮ ಶ್ರೇಷ್ಠವೆನ್ನುವ ತಾತ್ಪರ್ಯಕ್ಕೆ ಪತಂಜಲಿಮಹರ್ಷಿಗಳು ಯೋಗಸೂತ್ರದಲ್ಲಿ,

"ತತ್ಪರಂ ಪುರುಷಖ್ಯಾತೇರ್ಗುಣವೈತೃಷ್ಣ್ಯಂ"

ಇಹಪರಲೋಕಗಳ ಸಂಬಂಧವಾದ ವಿಷಯಗಳಲ್ಲಿ ಉಂಟಾಗುವ ವಿಷಯವೈರಾಗ್ಯಕ್ಕಿಂತಲೂ, ಇವುಗಳಿಗೆ ಕಾರಣವಾದ ಸತ್ವಾದಿಗುಣಗಳಲ್ಲಿಯೇ ಉಂಟಾಗುವ ಗುಣವೈರಾಗ್ಯವು ಆತ್ಮಸಾಕ್ಷಾತ್ಕಾರಸ್ವರೂಪವಾದ ನಿರ್ವಿಕಲ್ಪಸಮಾಧಿಯನ್ನುಂಟುಮಾಡುತ್ತಾಗಿ ಉತ್ಕೃಷ್ಟವಾಗಿರುವುದು, ಎಂಬದಾಗಿ ಹೇಳಿರುವರು.

ಆದುದರಿಂದ ಶ್ರೀರಾಮನು ಸೀತಾದೇವಿಯನ್ನು ತಿರಸ್ಕರಿಸಿದುದೇ ನಿರ್ಗುಣಸೋಪಾನವನ್ನು ಪಡೆಯುವುದರ ತತ್ವವಾಗಿರುವುದು. ಶ್ರೀರಾಮನು ಸೀತಾದೇವಿಯನ್ನು ತಿರಸ್ಕರಿಸಿದುದರ ತತ್ವವನ್ನು ಮತ್ತೊಂದು ವಿಧವಾಗಿಯೂ ವಿವರಿಸಬಹುದು. ಅಧಿಕಾರಿಯು "ಓಂ"ಕಾರೋಪಾಸನೆಯಿಂದ ಸಮಾಧಿಯನ್ನು ಅಭ್ಯಾಸಮಾಡಿಕೊಂಡು ಪ್ರಥಮದಿಂದಲೂ ಬಂದಿರುವನಷ್ಟೆ! ಹೀಗೆ "ಓಂ"ಕಾರೋಚ್ಚಾರಣೆಯಿಂದ ಸಮಾಧಿಯ ಅಭ್ಯಾಸಮಾಡುತ್ತಿದ್ದಾಗ ಪ್ರಥಮದಲ್ಲಿ ಭ್ರೂಮಧ್ಯದಲ್ಲಿ ತೇಜೋಬಿಂದುವನ್ನು ಧರಿಸಿಕೊಂಡಿದ್ದನು. ಅನಂತರ "ಓಂಕಾರನಾದವನ್ನು ಧರಿಸಿಕೊಂಡಿದ್ದನು. ಬಿಂದುನಾದಗಳ ಸೋಪಾನಗಳನ್ನು ದಾಟಿದ ಮೇಲೆ ಕಳಾಸೋಪಾನಕ್ಕೆ ಬರುವುದೇ ಸೀತಾದೇವಿಯು ಶ್ರೀರಾಮನ ಬಳಿಗೆ ಬರುವ ತತ್ವವಾಗಿರುವುದು. ಶ್ರೀರಾಮನು ಸೀತಾದೇವಿಯನ್ನು ತಿರಸ್ಕರಿಸುವುದೆಂದರೆ ಕಳೆಯನ್ನು ತಿರಸ್ಕರಿಸುವುದೆಂಬ ತತ್ವ. ಕಳೆಯೂ ಆತ್ಮನಲ್ಲಿ ಲೀನವಾಗಬೇಕೆಂಬ ತತ್ವಕ್ಕೆ ಧ್ಯಾನಬಿಂದೂಪನಿಷತ್ತಿನಲ್ಲಿ,

"ಬಿಂದುನಾದಕಳಾತೀತಂ ಯಸ್ತಂವೇದಸವೇದವಿತ್" ||

ತಾ|| ಪರಮಾತ್ಮನು ಬಿಂದುನಾದಕಳೆಗಳಿಗೂ ತೀತನು. ಇದನ್ನು ತಿಳಿದವನೇ ಜ್ಞಾನಿಯು, ಎಂಬವಾಕ್ಯವಿರುವುದು.

ಅಲ್ಲದೆ "ಓಂ"ಕಾರದಲ್ಲಿನ ಅಕಾರವು ಉಕಾರದಲ್ಲಿ ಲೀನವಾಗುತ್ತದೆ. ಉಕಾರವು ಮಕಾರದಲ್ಲಿ ಸ್ಥಿರತ್ವವನ್ನು ಪಡೆದರೆ ಅರ್ಧಮಾತ್ರೆಯಾಗುವುದು. ಅರ್ಧಮಾತ್ರೆಯೆಂದರೆ "ಓಂ" ಎಂಬದಾಗಿ ಎಳೆದುಕೊಂಡು ಉಪಾಸನೆಮಾಡುವಾಗ "ಓಂ"ಕಾರವು "ಮ್" ಎಂಬ ಅರ್ಧಾಕ್ಷರದಿಂದ ಕೂಡಿಕೊಳ್ಳುವ ಸೋಪಾನವು ಸ್ತಿಮಿತಕ್ಕೆ ಬರುವುದೇ ನಾದ ವಡಗಿ ಕಳೆಗೆ ಬರುವ ಸ್ವರೂಪವಾಗಿರುವುದು. ಹೀಗೆ ಸ್ತಿಮಿತಕ್ಕೆ ಬರುವ ಅರ್ಧಮಾತ್ರೆ ಯಲ್ಲಿ ಸ್ಥಿರಪಟ್ಟ ಪ್ರಣವವು ಆತ್ಮನಲ್ಲಿ ಲೀನವಾಗಿ ನಿಶ್ಶಬ್ದವನ್ನು ಪಡೆಯುವುದರಿಂದ ಆತ್ಮ ಸಾಕ್ಷಾತ್ಕಾರವಾಗುವುದು. ಹೀಗೆ ಅರ್ಧಾಕ್ಷರದ ಸ್ಥಿರತ್ವವೂ ಹೋಗಿ ಆತ್ಮಸಾಕ್ಷಾತ್ಕಾರ ವಾಗಬೇಕಾದ ತತ್ವಪ್ರತಿಪಾದನೆಯ ಸೂಚನೆಯೇ ಸೀತಾದೇವಿಯನ್ನು ತಿರಸ್ಕರಿಸಿದುದು

ಪ್ರಥಮದಲ್ಲಿ ವಿಶ್ವತ್ವಕ್ಕೆ ಇದ್ದ ಉಪಾಧಿಯನ್ನು ನಿವೃತ್ತಿಮಾಡಿಕೊಂಡು ತೈಜಸತ್ವದ ಸೋಪಾನಕ್ಕೆ ಬಂದುದೆ ರಾಮ ರಾವಣರಿಬ್ಬರೆ ಯುದ್ಧಕ್ಕೆ ನಿಲ್ಲುವ ತತ್ವವಾಗಿರುತ್ತಷ್ಟೆ! ತೈಜ ಸತ್ವವನ್ನು ದಾಟುವುದೆ ರಾವಣನ ವಧೆಯ ತತ್ವವಾಗಿರುವುದು. ಸಮಾಧಿಯ ಅನುಷ್ಠಾನ ದಲ್ಲಿ ತೈಜಸತ್ವನನ್ನು ದಾಟಿ ಪ್ರಾಜ್ಞತ್ವಕ್ಕೆ ಬರುವುದೇ ಸೀತಾದೇವಿಯು ಶ್ರೀರಾಮನ ಬಳಿಗೆ ಬಂದ ಶುದ್ಧಸತ್ವಗಣದ ಸೋಪಾನವಾಗಿರುವುದು. ಈ ಶುದ್ಧಸತ್ವಗುಣಸೋಪಾನವು ಯಾವ ವ್ಯಾಪಾರವೂ ಇಲ್ಲದ, ಪ್ರಾಣಚೇಷ್ಟೆಗಳಿಲ್ಲದ, ಆನಂದಮಯವಾಗಿರುವ, ಶುದ್ಧ ಸ್ಫಟಿಕದಂತೆ ಪ್ರಕಾಶವಾಗಿರುವ ಅಖಂಡವಾದ ಅಹಂಜ್ಞಾನವೇ ಶೇಷವಾಗಿರುವ ಸ್ಥಿತಿ ಯಾಗಿರುತ್ತದೆ. ಈ ಸ್ಥಿತಿಯಲ್ಲಿ ಪ್ರತಿಬಿಂಬಚೈತನ್ಯನು ಆನಂದಮಯದಲ್ಲಿ ಜ್ಞಾನದ ಘಟ್ಟಿಯೋಪಾಧಿಯಲ್ಲಿ ಶುದ್ಧಸತ್ವಗುಣವನ್ನು ಪ್ರಕಾಶಪಡಿಸಿಕೊಂಡಿರುವನು. ಇದೇ ಸೀತಾದೇವಿಯು ಶ್ರೀರಾಮನ ಬಳಿಗೆ ಬಂದ ತತ್ವ. ಆದುದರಿಂದ ಉನ್ಮನೀ ಅಥವಾ ಶುದ್ಧ ಸತ್ವಗುಣಸೋಪಾನದ ತತ್ವವಾದ ಪ್ರಾಜ್ಞತ್ವದ ಸೋಪಾನವನ್ನೂ ದಾಟಿ ತುರೀಯ ತತ್ವ ವಾದ ಆತ್ಮಸಾಕ್ಷಾತ್ಕಾರವನ್ನು ಹೊಂದಬೇಕಾಗಿರುವ ತತ್ವಾರ್ಥವನ್ನನುಸರಿಸಿ ಶ್ರೀರಾಮ ಚಂದ್ರನು ಸೀತಾದೇವಿಯನ್ನು ತಿರಸ್ಕರಿಸಿದ್ದಾಗಿರುವುದು.

ಅಧಿಕಾರಿಯು ಈ ಸಮಾಧಿಯ ಸ್ವರೂಪದಲ್ಲಿ ನಿಲ್ಲಲಾರನು. ಈ ಸ್ಥಿತಿಯ ಸ್ವರೂ ಪವು ಇಂಥಾದ್ದೆಂದು ಹೇಳುವುದೂ ಮತ್ತು ಸ್ವಾನುಭವದಿಂದ ತಿಳಿಯುವುದೂ ಕಷ್ಟತರ ವಾಗಿರುವುದು. ಅತ್ಯಂತ ಸೂಕ್ಷ್ಮವಾದ ಸೋಪಾನ. ಹೇಗೆಂದರೆ ನಿದ್ರಾಕಾಲದಲ್ಲಿ ಪ್ರಥಮ ದಲ್ಲಿ ಕಣ್ಣುಮುಚ್ಚಿಕೊಳ್ಳುತ್ತೇವೆ. ಕಣ್ಣುಮುಚ್ಚಿಕೊಂಡ ಕೂಡಲೆ ಹೊರಗಿನ ಪದಾರ್ಥ ಗಳು ಅದೃಶ್ಯವಾಗುವುವು. ಅನಂತರ ಒಳಗಡೆ ತೇಜಸ್ಸನ್ನು ನೋಡುತ್ತೇವೆ. ಒಳಗಡೆ

ತೇಜಸ್ಸನ್ನು ನೋಡುವಾಗ ತ್ರಿಪುಟಿ ಇರುತ್ತದೆ. ಈ ತ್ರಿಪುಟಿಯಲ್ಲಿ ನೋಡುತ್ತಿರುವ ತೇಜಸ್ಸು ನಮಗೆ ಕಾಣದೆ ಹೋಗುತ್ತಾ ಬಂದು ಅನಂತರ ನಾನು ಎಂಬ ಜ್ಞಾನವೂ ಲೀನವಾಗುವುದು. ಈ ಕಾಲದಲ್ಲಿ ನಾನು ಎಂಬುದು ಹೇಗೆ ಲಯವಾಗುವುದೋ ಅದನ್ನು ತಿಳಿದುಕೊಳ್ಳಲು ಸಾಧ್ಯವಿಲ್ಲ. ಇದನ್ನು ತಿಳಿದುಕೊಳ್ಳಲು ಹೋದರೆ ತೇಜಸ್ಸು ಗೋಚರಕ್ಕೆ ಬರುವುದರಿಂದ ತ್ರಿಪುಟಿಯುಂಟಾಗುವುದು. ಆದುದರಿಂದ ನಾನು ಎಂಬ ಜ್ಞಾನವು ಶೇಷವಾಗಿ ನಿಲ್ಲುವ ಸೋಪಾನವು ಅತ್ಯಂತ ಸೂಕ್ಷ್ಮವಾದುದು. ಸುಷುಪ್ತಿಯಕಾಲದಲ್ಲಿ ಹೇಗೋಹಾಗೆ ಆತ್ಮಸಾಕ್ಷಾತ್ಕಾರಸ್ವರೂಪವಾದ ಸಮಾಧಿಯಲ್ಲಿಯೂ ಈ ಸೋಪಾನವು ಅತ್ಯಂತ ಸೂಕ್ಷ್ಮವಾದುದು.

ಶ್ರೀರಾಮನು ರಾವಣನ ವಧೆಯಾದನಂತರ ಸೀತಾದೇವಿಯು ತನ್ನ ಸಮೀಪಕ್ಕೆ ಬಂದ ಕೂಡಲೆ ತಿರಸ್ಕರಿಸಿದಂತೆ ಅಧಿಕಾರಿಯು ಸಮಾಧಿಯ ಅಭ್ಯಾಸದಲ್ಲಿ ಅಹಂಬ್ರಹ್ಮಾಸ್ಮಿ ಎಂಬದಾಗಿ ಸಮಾಧಿಯಲ್ಲಿ ಮುಳುಗುವ ಕಾಲದಲ್ಲಿ ಪ್ರಥಮದಲ್ಲಿ ಸಗುಣರೂಪವಾದ ಜ್ಞೇಯಜ್ಞಾನಗಳು ನಶಿಸುವುವು. ಅನಂತರ ಸಗುಣವಾದ ಜ್ಞಾತೃವೆಂದರೆ "ಅಹಂ" ಎಂಬ ಜ್ಞಾನವೂ ನಶಿಸಿ ಆತ್ಮಸಾಕ್ಷಾತ್ಕಾರವಾಗುವುದು. ಸಗುಣರೂಪವಾದ ಜ್ಞೇಯಜ್ಞಾನಗಳು ನಶಿಸಿ ಜ್ಞಾತೃವೆಂದರೆ "ಅಹಂ" ಎಂಬ ಜ್ಞಾನವು ಶೇಷವಾಗಿ ನಿಲ್ಲುವ ಈ ಸೂಕ್ಷ್ಮರೂಪಕ್ಕೆ ಶುದ್ಧಸತ್ವಗುಣಸೋಪಾನವೆಂದರೆ ಉನ್ಮನ್ಯವಸ್ಥೆಯೆಂದು ಮೇಲೆ ತಿಳಿಸಿರುತ್ತೆ. ಈ ಉನ್ಮನ್ಯವಸ್ಥೆಯ ಸ್ವಾಧೀನದಿಂದ ಪರಮಾತ್ಮಸಾಕ್ಷಾತ್ಕಾರವಾಗಬೇಕಾದ ತತ್ವವೇ ಸೀತಾದೇವಿಯು ಶ್ರೀರಾಮನ ಸಮೀಪಕ್ಕೆ ಬಂದ ಮತ್ತು ಶ್ರೀರಾಮನು ಸೀತಾದೇವಿಯನ್ನು ತಿರಸ್ಕರಿಸಿದ ತತ್ವವಾಗಿರುವುದು. ಈ ತತ್ವಾರ್ಥಕ್ಕೆ ಅನ್ವಯವಾಗುವಂತೆ ಮಂಡಲಬ್ರಾಹ್ಮಣೋಪನಿಷತ್ತಿನಲ್ಲಿ,

> ಶಬ್ದಕಾಲಲಯೇನದಿವಾರಾತ್ರ್ಯತೀತೋಭೂತ್ವಾಸರ್ವಪರಿಪೂರ್ಣ |
> ಜ್ಞಾನೇ ನೋನ್ಮನ್ಯವಸ್ಥಾವಶೇನ ಬ್ರಹ್ಮೈಕ್ಯಂ ಭವತಿ||

ತಾ|| ಓಂಕಾರನಾದದ ಕಾಲವಡಗುವುದರಿಂದ ರಜೋಗುಣ ತಮೋಗುಣಗಳನ್ನೆಂದರೆ ವಿಕ್ಷೇಪ ಮತ್ತು ಆವರಣಗಳನ್ನು ದಾಟಿದವನಾಗಿ ಸರ್ವಪರಿಪೂರ್ಣಜ್ಞಾನವಾದ ಉನ್ಮನ್ಯವಸ್ಥೆಯು ಸ್ವಾಧೀನದಿಂದ ಜೀವಬ್ರಹ್ಮರ ಏಕತ್ವವುಂಟಾಗುವುದು ಎಂಬುದು

ಆದುದರಿಂದ ಸೀತಾದೇವಿಯು ಶ್ರೀರಾಮನ ಬಳಿಗೆ ಬಂದಿರುವ ಸೋಪಾನವು ಅತ್ಯಂತ ಸೂಕ್ಷ್ಮವಾದುದು. ಅಧಿಕಾರಿಯು "ಅಹಂಬ್ರಹ್ಮಾಸ್ಮಿ" ಎಂಬ ಜ್ಞಾನದಿಂದ ಸಮಾಧಿಯಲ್ಲಿ ಮುಳುಗುವುದನ್ನು ಚೆನ್ನಾಗಿ ಅಭ್ಯಾಸಮಾಡುತ್ತ ಬಂದರೆ ಈ ಉನ್ಮನೀಸೋಪಾನವನ್ನು ಅನುಸರಿಸಿಕೊಂಡು ಅನಂತರ ಆತ್ಮಸಾಕ್ಷಾತ್ಕಾರವಾಗುವುದು. ಈ ತಾತ್ಪರ್ಯಕ್ಕೆ

ಮೇಲಿನ ಮಣ್ಡಲಬ್ರಾಹ್ಮಣೋಪನಿಷತ್ತಿನ ಪ್ರಮಾಣವಲ್ಲದೆ ಹಂಸೋಪನಿಷತ್ತಿನಲ್ಲಿ "ಆಜ್ಞಾಂ ಅನುಯಾರ್ಯ ಬ್ರಹ್ಮರಂಧ್ರಂಧ್ಯಾಯೇತ್" ಎಂಬದಾಗಿ ಹೇಳಿರುತ್ತದೆ. ಆದುದರಿಂದ ಅಹಂಬ್ರಹ್ಮಾಸ್ಮಿ ಎಂಬ ಜ್ಞಾನದಿಂದ ಮುಳುಗುತ್ತಾ ಬಂದರೆ ಉನ್ಮನ್ಯವಸ್ಥೆಯ ವಶದಿಂದ ಆತ್ಮಸಾಕ್ಷಾತ್ಕಾರವಾಗುವುದು.

## ೩೭ನೆಯ ಪ್ರಕರಣ.

**ಸೀತಾದೇವಿಯು ಅಗ್ನಿಪ್ರವೇಶ ಮಾಡಿದುದು.**



**ಸವಿಕಲ್ಪಸಮಾಧಿಯಿಂದ ನಿರ್ವಿಕಲ್ಪಸಮಾಧಿಯನ್ನು ಹೊಂದುವ ವಿಚಾರ ಅಥವಾ ಪ್ರಕೃತಿಯು ಆತ್ಮನಲ್ಲಿ ಲೀನವಾಗುವ ವಿಚಾರ.**

**ರಾ||** ಶ್ರೀರಾಮನು ಸೀತಾದೇವಿಯನ್ನು ಪರಿತ್ಯಜಿಸಲು ಸೀತಾದೇವಿಯು ಅಗ್ನಿಪ್ರವೇಶವೊಂದು ಹೊರತು ಬೇರೆ ಗತಿಯಿಲ್ಲವೆಂದಳು. ಈ ಮಾತನ್ನು ಕೇಳಿ ಲಕ್ಷ್ಮಣನಿಗೆ ಅತ್ಯಂತ ಕೋಪವುಂಟಾಗಿ ಶ್ರೀರಾಮನ ಮುಖವನ್ನು ನೋಡಿದನು. ಶ್ರೀರಾಮನ ಭ್ರೂಸಂಜ್ಞೆ ಮೊದಲಾದ ಗುರುತುಗಳಿಂದ ಶ್ರೀರಾಮನಿಗೂ ಸೀತಾದೇವಿಯ ಅಗ್ನಿಪ್ರವೇಶದ ಕಾರ್ಯವು ಅಭಿಮತವೆಂದೇ ಲಕ್ಷ್ಮಣನಿಗೆ ತೋರಿತು. ಅದರಂತೆ ಲಕ್ಷ್ಮಣನು ಚಿತಿಯನ್ನು ಬೆಳಿಸಿದನು.

ಅನಂತರ ಸೀತೆಯು ಅಗ್ನಿಯನ್ನು ಪ್ರದಕ್ಷಿಣೆಮಾಡಿ ಅಂತಃಕರಣಶುದ್ಧಿಯಿಂದ ದೇಹದ ಮೇಲೆ ಕೊಂಚವೂ ಅಭಿಮಾನವಿಲ್ಲದೆ "ಅನವರತವೂ ನಾನು ಶ್ರೀರಾಮನಲ್ಲಿಯೆ ನೆಟ್ಟ ಮನಸ್ಕಳಾಗಿರುವುದು ಸತ್ಯವಾದರೆ ಸರ್ವಲೋಕಸಾಕ್ಷಿಯಾದ ಯಜ್ಞಪುರುಷನು ನನ್ನನ್ನು ಕಡೆಹಾಯಿಸಲಿ" ಎಂಬದಾಗಿ ನುಡಿಯುತ್ತಾ ಪ್ರಜ್ವಲಿಸುತ್ತಿದ್ದ ಅಗ್ನಿಮಧ್ಯದಲ್ಲಿ ಮಂತ್ರಪೂತವಾದ ಸಂತತವಾದ ಆಜ್ಯಧಾರೆಯಂತೆ ಪ್ರವೇಶಿಸಿದಳು.

**ತತ್ವ||** ಶ್ರೀರಾಮನು ಸೀತಾದೇವಿಯನ್ನು ಪರಿತ್ಯಜಿಸಲು ಸೀತಾದೇವಿಯು ಅಗ್ನಿಪ್ರವೇಶವೊಂದು ಹೊರತು ಬೇರೆ ಗತಿಯಿಲ್ಲವೆಂದು ಹೇಳಿದುದರ ತತ್ವವೇನೆಂದರೆ—ಸೀತಾದೇವಿಯ ತತ್ವವಾದ ಶುದ್ಧಸತ್ವಪ್ರಧಾನಮಾಯೆಯು ಶ್ರೀರಾಮನ ತತ್ವವಾದ ಪ್ರತಿಬಿಂಬಚೈತನ್ಯನಿಗೆ ಉಪಾಧಿಯಷ್ಟೆ! ಪ್ರತಿಬಿಂಬಚೈತನ್ಯನು ಶುದ್ಧಸತ್ವಪ್ರಧಾನಮಾಯೆಯನ್ನು ತಿರಸ್ಕರಿಸಿದರೆ ಶುದ್ಧಸತ್ವಪ್ರಧಾನಮಾಯೆಯು ಹೊಂದಬಹುದಾದ ಇತರ ಸ್ಥಳವಾವುದು? ಪ್ರತಿಬಿಂಬಚೈತನ್ಯನು ಬಿಟ್ಟರೆ ಪರಬ್ರಹ್ಮವೇ! ಪರಬ್ರಹ್ಮವೇ ಅಗ್ನಿನಾಮಕವಾಗಿರುವುದು. ಚಿತ್-ಕೇವಲಂ ಬ್ರಹ್ಮ-ತದೇವ ಅಗ್ನಿಕುಂಡಂ ಎಂಬದಾಗಿ ವೇದದಲ್ಲಿಯೇ ಇದೆ.

ಆದುದರಿಂದ ಶುದ್ಧಸತ್ವಪ್ರಧಾನವಾಯೆಯು ಪರಬ್ರಹ್ಮನಲ್ಲಿ ಪ್ರವೇಶಿಸುವುದೇ ಹೊರತು ಮತ್ತೆಲ್ಲಿಯೂ ಹೋಗುವುದಿಲ್ಲವೆಂಬ ತತ್ವಪ್ರತಿಪಾದನೆಯೇ ಅಗ್ನಿಪ್ರವೇಶ ಹೊರತು ಬೇರೆ ಗತಿಯಿಲ್ಲವೆಂದು ಸೀತಾದೇವಿಯು ಹೇಳಿದುದರ ತಾತ್ಪರ್ಯ.

ಹೇಗೆಂದರೆ, "ಓಂ"ಕಾರನಾದವಡಗಿ ಕಳಿಗೆ ಬರುವ ತತ್ವವೇ ರಾವಣನ ವಧೆಯೆಂಬ ದಾಗಿ ತಿಳಿಸಿದೆಯಷ್ಟೆ! ಆಕಾಶದ ಗುಣವಾದ ಈ "ಓಂ"ಕಾರನಾದವು ಅಡಗಬೇಕಾದರೆ ಸಮಾಧಿಯ ಅಭ್ಯಾಸಮಾಡುತ್ತಿದ್ದ ಅಧಿಕಾರಿಯ ಬುದ್ಧಿವೃತ್ತಿಯು ಸುಷುಮ್ನೆಯೊಳಗೆ ಮೂಲಾಧಾರದಿಂದ ವಿಶುದ್ಧಚಕ್ರಪರ್ಯಂತರವಿರುವ ಚಕ್ರಗಳನ್ನು ಭೇದಿಸಿಕೊಂಡು ಆಜ್ಞಾಚಕ್ರದಲ್ಲಿ ಬಂದು ನಿಂತುಕೊಳ್ಳುವುದೆಂದು ಹಿಂದಿನ ಪ್ರಕರಣಗಳಲ್ಲಿ ತಿಳಿಸಿತು. ಅಲ್ಲದೆ "ಓಂ"ಕಾರನಾದವಡಗಿ ಕಳಿಗೆ ಬಂದು ನಿಂತುಕೊಳ್ಳುವ ಸ್ವರೂಪವೇ ಸೀತಾ ದೇವಿಯು ಶ್ರೀರಾಮನ ಬಳಿಗೆ ಬರುವ ತತ್ವವೆಂದೂ ತಿಳಿಸಿತು. ಸೀತಾದೇವಿಯ ಅಗ್ನಿ ಪ್ರವೇಶವೆಂದರೆ—ಆಜ್ಞಾಚಕ್ರ ಅಥವಾ ರುದ್ರಗ್ರಂಥಿಯ ಭೇದನೆಯಿಂದ ಆತ್ಮಸಾಕ್ಷಾತ್ಕಾರ ವುಂಟಾಗುವ ತತ್ವವಾಗಿರುವುದು.

ಈ ಆಜ್ಞಾಚಕ್ರವು ರುದ್ರಗ್ರಂಥಿಯ ಸ್ವರೂಪವಾಗಿರುವುದು. ಮೂಲಾಧಾರದಲ್ಲಿ ರುವ ಬ್ರಹ್ಮಗ್ರಂಥಿಯು ಸೃಷ್ಟಿಸುವಿಕೆಯ ಶಕ್ತಿಯಾಗಿಯೂ, ಅನಾಹತಚಕ್ರದಲ್ಲಿರುವ ವಿಷ್ಣುಗ್ರಂಥಿಯು ಪಾಲನೆಯ ಶಕ್ತಿಯಾಗಿಯೂ, ಈ ಆಜ್ಞಾಚಕ್ರದಲ್ಲಿರುವ ರುದ್ರ ಗ್ರಂಥಿಯು ಲಯವೆಂದರೆ ಮೋಕ್ಷವನ್ನು ಕೊಡತಕ್ಕ ಶಕ್ತಿಯಾಗಿಯೂ ಇರುತ್ತವೆ. ರುದ್ರನ ಫಾಲನೇತ್ರಾಗ್ನಿಯೇ ಸುಷುಮ್ನೆಯು ಅಂತರ್ಗತವಾಗಿ ಆಜ್ಞಾಚಕ್ರದಲ್ಲಿರುವ ಜ್ಞಾನಾಗ್ನಿ ಯಾಗಿರುವುದು. ಈ ಅಗ್ನಿಯು ಸರ್ವವನ್ನೂ ತೆಗೆದುಕೊಂಡುಹೋಗಿ ಆತ್ಮನಲ್ಲಿ ಸೇರಿಸು ವುದು. ಸೀತಾದೇವಿಯು ಅಗ್ನಿಪ್ರವೇಶಮಾಡುವುದೆಂದರೆ ಶುದ್ಧಸತ್ವಪ್ರಧಾನಮಾಯೆಯು (ಅಹಂಜ್ಞಾನ) ಜ್ಞಾನಾಗ್ನಿಯು ಅಂತರ್ಗತವಾಗಿರುವ ಆತ್ಮನಲ್ಲಿ ಲೀನವಾಗುವುದೆಂಬ ತತ್ವ ವಾಗಿರುವದು. ಭ್ರೂಮಧ್ಯ ಚಕ್ರವಾದ ಆಜ್ಞಾಚಕ್ರದ ಒಳಗಡೆ ಜ್ಞಾನಾಗ್ನಿಯಿರುವುದೆಂಬ ತತ್ವಕ್ಕೆ ಸರಸ್ವತೀರಹಸ್ಯೋಪನಿಷತ್ತಿನಲ್ಲಿ,

> ಭ್ರೂಚಕ್ರಮಂಗುಷ್ಠಮಾತ್ರಂ ತತ್ರಜ್ಞಾನನೇತ್ರಂ ।
> ದೀಪಶಿಖಾಕಾರಂ ಧ್ಯಾಯೇತ್ ॥

ತಾ|| ಭ್ರೂಮಧ್ಯದಲ್ಲಿರುವ ಆಜ್ಞಾಚಕ್ರವು ಸೂಕ್ಷ್ಮವಾದದ್ದು. ಅಂತಹ ಆಜ್ಞಾಚಕ್ರ ದೊಳಗೆ ದೀಪಶಿಖಾಕಾರವಾದ ಜ್ಞಾನನೇತ್ರವನ್ನು ಧ್ಯಾನಿಸಬೇಕು. ಎಂದು ಹೇಳಿರುವುದು.

ಈ ಮೇಲಿನ ಶ್ರುತ್ಯಾಧಾರದಂತೆ ಸೀತಾದೇವಿಯು ಅಗ್ನಿಪ್ರವೇಶಮಾಡಲು ಯತ್ನಿಸಿದ ಳೆಂದರೆ ಶುದ್ಧಸತ್ವಪ್ರಧಾನಮಾಯೆಯು ದೀಪಶಿಖಾಕಾರವಾದ ಜ್ಞಾನಾಗ್ನಿಯು ಅಂತರ್ಗತ ವಾಗಿರುವ ಆತ್ಮನಲ್ಲಿ ಲಯವನ್ನು ಹೊಂದಲು ಪ್ರಯತ್ನಮಾಡಿದಳೆಂಬ ತತ್ವವಾಗಿರುವುದು.

ಶ್ರೀರಾಮನು ಸೀತಾದೇವಿಯನ್ನು ಅತ್ಯಂತಕೋಪದಿಂದ ತಿರಸ್ಕರಿಸಿದನಷ್ಟೆ! ಈ ಕೋಪದ ತತ್ವವೆ ಶ್ರೀರಾಮನಲ್ಲಿ ಪ್ರಳಯಕಾಲದ ರುದ್ರಸ್ವಭಾವವೆನಿಸುವುದು. ಅಂದರೆ ರುದ್ರನೂ ಶ್ರೀರಾಮಚಂದ್ರನೂ ಒಂದೇ. ಕಾರ್ಯಭೇದದಿಂದ ಬ್ರಹ್ಮ, ವಿಷ್ಣು ರುದ್ರರೆಂಬ ನಾಮಾಂಕಿತವಿರುವುದೆ ಹೊರತು ಚೈತನ್ಯವೊಂದೇ. ಸೃಷ್ಟಿವಿಚಾರಗಳೆ ಬಾಲಕಾಂಡದ ತತ್ವವಾಗಿರುವುದರಿಂದ ಬಾಲಕಾಂಡದ ತತ್ವದಲ್ಲಿ ಶ್ರೀರಾಮಚಂದ್ರನು ಚತುರ್ಮುಖಬ್ರಹ್ಮನೆನಿಸುವನು. ಮೋಕ್ಷ ಅಥವಾ ಲಯಮಾಡಿಕೊಳ್ಳುವ ಕಾರ್ಯದ ತತ್ವವೇ ಪ್ರಧಾನವಾಗಿ ರಾಮಾಯಣದಲ್ಲಿರುವುದರಿಂದ ಶ್ರೀರಾಮನೇ ರುದ್ರನು. ಆತ್ಮಸಾಕ್ಷಾತ್ಕಾರವೇ ಲಯವೆಂಬ ಶಬ್ದದ ನಿಶ್ಚಯಾರ್ಥವಾಗಿರುವುದು. ಆದುದರಿಂದ ಪ್ರತಿಬಿಂಬಚೈತನ್ಯನು ನಿರುಪಾಧಿಕನಾಗಲು ಮಾಡಿದ ಪ್ರಯತ್ನದ ತತ್ವವೇ ಶ್ರೀರಾಮಚಂದ್ರನು ಕೋಪದಿಂದ ಸೀತಾದೇವಿಯನ್ನು ತಿರಸ್ಕರಿಸಿದುದು.

ಲಕ್ಷ್ಮಣನು ಚಿತಿಯನ್ನು ಬೆಳೆಸಿದ ತತ್ವವೇನೆಂದರೆ—ಆಜ್ಞಾಚಕ್ರವು ಅಂತಃಕರಣದ ತತ್ವವಾಗಿರುವುದು. ಅಂದರೆ ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶ ತತ್ವಗಳನ್ನು ಅತಿಕ್ರಮಿಸಿ ಅಂತಃಕರಣತತ್ವವು ಆಜ್ಞಾಚಕ್ರದಲ್ಲಿರುವುದು. ಹೀಗಿರುವುದೆಂದು ಶ್ರೀಶಂಕರ ಭಗವತ್ಪಾದಾಚಾರ್ಯರವರು ಹೇಳಿರುವ "ಮಹೀಂ ಮೂಲಾಧಾರೇ" ಎಂಬ ಶ್ಲೋಕವನ್ನು ಸುಂದರಕಾಂಡದಲ್ಲಿ ಮೋಕ್ಷದಬಾಗಿಲನ್ನು ತೆಗೆಸುವ ಪ್ರಕರಣದಲ್ಲಿ ಬರೆದಿರುವುದು. ಆದುದರಿಂದ ಸುಷುಮ್ನೆಯೊಳಗೆ ಅಂತಃಕರಣದ ತತ್ವವಾದ ಆಜ್ಞಾಚಕ್ರದಲ್ಲಿ ಜ್ಞಾನಾಗ್ನಿಯನ್ನು ಪ್ರಜ್ವಲನೆ ಮಾಡುವ ಕಾರ್ಯವು ಮನಸ್ಸಿನ ತತ್ವದಿಂದ ನಡೆಯುವುದೆಂಬ ಸೂಚನೆಯೇ ಲಕ್ಷ್ಮಣನು ಚಿತಿಯನ್ನು ಬೆಳೆಸಿದುದಾಗಿರುವುದು. ಇದೇ ತತ್ವಕ್ಕೆ ಅನುಸಾರವಾಗಿ ಗರ್ಭೋಪನಿಷತ್ತಿನಲ್ಲಿ "ತತ್ರಜ್ಞಾನಾಗ್ನಿರ್ಮಾನಸೋ" ಎಂಬದಾಗಿ ಹೇಳಿರುವುದರಿಂದ ಸುಷುಮ್ನೆಯೊಳಗೆ ಅಂತಃಕರಣದ ತತ್ವವಾದ ಆಜ್ಞಾಚಕ್ರದಲ್ಲಿರುವ ರುದ್ರನ ಫಾಲನೇತ್ರಾಗ್ನಿಯ ತತ್ವವಾದ ಜ್ಞಾನಾಗ್ನಿಯನ್ನು ಲಕ್ಷ್ಮಣನು ಚಿತಿಯನ್ನು ಬೆಳೆಸಿದಂತೆ ಚೆನ್ನಾಗಿ ಪ್ರಜ್ವಲನೆಮಾಡಬೇಕು.

ರಾಮಾಯಣಕಥೆಯಲ್ಲಿ ಹನುಮಂತನು ಲಂಕೆಯನ್ನು ದಹನಮಾಡಿದನು. ಅನಂತರ ಸುಗ್ರೀವನ ಆಜ್ಞೆಯಂತೆ ಮತ್ತೊಂದಾವರ್ತಿ ಲಂಕಾದಹನವಾಗಿ ಅಗ್ನಿಪ್ರಜ್ವಲನೆಯಾಗಿರುವುದು. ಸೀತಾದೇವಿಯು ಅಗ್ನಿಪ್ರವೇಶಮಾಡಲು ಈಗ ಅಗ್ನಿಪ್ರಜ್ವಲನೆಯಾಗಿರುವುದು. ಈ ತತ್ವಗಳನ್ನೆಲ್ಲಾ ಒಟ್ಟಿಗೆ ಸಮನ್ವಯಮಾಡಿದರೆ ನಮ್ಮ ದೇಹದಲ್ಲಿ ಮೋಕ್ಷಮಾರ್ಗದಲ್ಲಿ ಪ್ರಜ್ವಲನೆಯಾಗುವ ಅಗ್ನಿಯ ತತ್ವಗಳ ವಿವರವು ಗೊತ್ತಾಗುವುದು.

ಪ್ರಥಮದಲ್ಲಿ ಹನುಮಂತನು ಲಂಕಾದಹನಮಾಡಿದಾಗ ಉಂಟಾದ ಅಗ್ನಿಪ್ರಜ್ವಲನೆಯು ಮೂಲಾಧಾರ ಅಥವಾ "ಓಂ"ಕಾರದಲ್ಲಿನ ಅಕಾರದ ತತ್ವವಾದ ಗಾರ್ಹ

ಪತ್ಯಾಗ್ನಿಯಾಗಿರುವುದು. ಯುದ್ಧಮಧ್ಯದಲ್ಲಿ ಸುಗ್ರೀವನ ಆಜ್ಞೆಯಂತೆ ಲಂಕೆಯನ್ನು ದಹಿಸಲು ಅಗ್ನಿಪ್ರಜ್ವಲನೆಯಾಗಿರುವುದೇ "ಓಂ"ಕಾರದಲ್ಲಿನ "ಉ"ಕಾರದ ತತ್ವವಾದ ದಕ್ಷಿಣಾಗ್ನಿಯಾಗಿರುವುದು. ಈಗ ಸೀತಾದೇವಿಯು ಅಗ್ನಿಪ್ರವೇಶಮಾಡಲು ಪ್ರಜ್ವಲನೆ ಮಾಡಿರುವ ಅಗ್ನಿಯೇ "ಓಂಕಾರದಲ್ಲಿನ "ಮ"ಕಾರದ ತತ್ವವಾದ ಆಹವನೀಯಾಗ್ನಿ ಯಾಗಿರುವುದು. ಆದುದರಿಂದ ಈ ಅಗ್ನಿಪ್ರಜ್ವಲನೆಗಳ ತತ್ವವೇ ಅಂತರ್ಯಾಗ ಅಥವಾ ನಮ್ಮ ಶರೀರದಲ್ಲಿನ ಯಾಗವೆನಿಸುವುದು. ಈ ತತ್ವಾರ್ಥಕ್ಕೆ ಪಾಶುಪತಬ್ರಹ್ಮೋಪ ನಿಷತ್ತಿನಲ್ಲಿ,

ತ್ರೇತಾಗ್ನ್ಯನುಸಂಧಾನೋ ಯಾಗಃ | ತ್ರೇತಾಗ್ನ್ಯಾತ್ಮಾಕೃತಿ
ವರ್ಣೋಂಕಾರ ಹಂಸಾನುಸಂಧಾನೋಂತರ್ಯಾಗಃ ||

ತಾ|| ಗಾರ್ಹಪತ್ಯ, ದಕ್ಷಿಣಾಗ್ನಿ, ಆಹವನೀಯ ಸ್ವರೂಪವಾದ ಮೂರು ಅಗ್ನಿ ಗಳನ್ನು ಅನುಸಂಧಾನಮಾಡುವುದೆ ಯಾಗವೆನಿಸಿಕೊಳ್ಳುವುದು. ಈ ತ್ರೇತಾಗ್ನಿಸ್ವರೂಪಾ ತ್ಮಕವಾದ ಅ, ಉ, ಮ ಎಂಬ ಮೂರುವರ್ಣಗಳಿಂದ ಕೂಡಿರುವ "ಓಂ" ಕಾರಾನು ಸಂಧಾನದಿಂದ ಹಂಸಸ್ವರೂಪನಾದ ಪರಮಾತ್ಮನನ್ನು ಹೊಂದುವುದೇ ಅಂತರ್ಯಾಗವೆನಿಸು ವುದು. ಎಂದು ಹೇಳಿರುವುದು.

ಆದುದರಿಂದ ರಾಮಾಯಣದ ತತ್ವಾರ್ಥದಲ್ಲಿ ಬರುವ ಅಗ್ನಿಪ್ರಜ್ವಲನೆಯ ತತ್ವವೇ ನಮ್ಮ ದೇಹದಲ್ಲಿನ ಅಂತರ್ಯಾಗದ ತತ್ವವಾಗಿರುವುದು. ನಮ್ಮ ದೇಹದಲ್ಲಿನ ಅಂತರ್ಯಾಗಕ್ಕೆ ಮೇಲಿನ ಶ್ರುತ್ಯಾಧಾರವಲ್ಲದೆ ಪ್ರಾಣಾಗ್ನಿಹೋತ್ರೋಪನಿಷತ್ತಿನಲ್ಲಿ,

ಸ್ವೇ ಶರೀರೆ ಯಜ್ಞಂ ಪರಿವರ್ತಯಾಮೀತಿ ||

ಎಂಬದಾಗಿ ಹೇಳಿರುವುದರಿಂದ "ಓಂ" ಕಾರೋಪಾಸನೆಯಿಂದ ಸಮಾಧಿಯನ್ನು ಅನುಷ್ಠಾನಮಾಡುವ ಕಾಲದಲ್ಲಿ ಉಂಟಾಗುವ ಅಗ್ನಿಪ್ರಜ್ವಲನೆಯು ಆತ್ಮಸಾಕ್ಷಾತ್ಕಾರ ವನ್ನುಂಟುಮಾಡುವ ಯಜ್ಞದ ತತ್ವವಾಗಿರುವುದು. ಶ್ರೌತಾಗ್ನಿಗಳಾದ ಗಾರ್ಹಪತ್ಯ, ದಕ್ಷಿಣಾಗ್ನಿ, ಆಹವನೀಯಗಳು ನಮ್ಮ ದೇಹದಲ್ಲಿರುವುದಕ್ಕೆ ಗರ್ಭೋಪನಿಷತ್ತಿನಲ್ಲಿ,

ಹೃದಯೇದಕ್ಷಿಣಾಗ್ನಿ ರುದರೇಗಾರ್ಹಪತ್ಯಂ ಮುಖೇಚಾಹವನೀಯಂ|

ತಾ|| ಹೃದಯಕೋಶದಲ್ಲಿ ದಕ್ಷಿಣಾಗ್ನಿಯು, ಅನ್ನಮಯಕೋಶದಲ್ಲೆಂದರೆ ಅನ್ನ ಮಯಕೋಶಕ್ಕೆ ಪ್ರಧಾನಸ್ಥಳವಾದ ಮೂಲಾಧಾರದಲ್ಲಿ ಗಾರ್ಹಪತ್ಯವು ಮುಖದಲ್ಲಿ ಆಹವನೀಯವೂ ಇರುವುವೆಂದು ಹೇಳಿರುವುದು.

ಅಲ್ಲದೆ ಭ್ರೂಮಧ್ಯಸ್ಥಾನದಲ್ಲಿರುವ ಆಜ್ಞಾಚಕ್ರವಾದ ರುದ್ರಗ್ರಂಥಿ ಅಥವಾ "ಓಂ" ಕಾರದಲ್ಲಿನ ಮಕಾರವು ಸಾಮವೇದಸ್ವರೂಪವಾಗಿಯೂ, ರುದ್ರನೇ ಅಧಿದೇವತೆಯಾಗಿಯೂ, ಇರುವ ಆಹವನೀಯಸ್ವರೂಪವಾದ ಅಗ್ನಿಯೆನ್ನುವುದಕ್ಕೆ ಅಥರ್ವಶಿಖೋಪನಿಷತ್ತಿನಲ್ಲಿ,

ತೃತೀಯಾದ್ಯೌಸ್ಸಮಕಾರ ಸ್ಸಸಾಮಭಿ |
ಸ್ಸಾಮವೇದೋರುದ್ರಾ ಆದಿತ್ಯಾಹವನೀಯಃ ||

ಎಂಬವಾಗಿ ಹೇಳಿರುವುದರಿಂದ ಸೀತಾದೇವಿಯು ಅಗ್ನಿಪ್ರವೇಶಕ್ಕೆ ಅಂತರ್ಯಾಗವೆಂದು ಹೆಸರು. ಇಂತಹ ಅಂತರ್ಯಾಗಕ್ಕೆ ಯಾರು ಕರ್ತರೆಂದರೆ ಪಾಶುಪತಬ್ರಹ್ಮೋಪನಿಷತ್ತಿನಲ್ಲಿ,

ಸಮಸ್ತಯಾಗಾನಾಂ ರುದ್ರಃ ಪಶುಪತಿಃ ಕರ್ತಾ ರುದ್ರೋ ಯಾಗದೇವಃ |

ತಾ|| ಎಲ್ಲಾ ಯಾಗಗಳಿಗೂ ಪಶುಪತಿಯಾದ ರುದ್ರನೇ ಕರ್ತನು. ರುದ್ರನೇ ಯಾಗಕ್ಕೆ ಒಡೆಯನು. ಎಂದು ಹೇಳಿರುವುದು.

ಸೀತಾದೇವಿಯು ಅಗ್ನಿಪ್ರವೇಶಮಾಡಲು ಶ್ರೀರಾಮನೇ ಕರ್ತನಾದ್ದರಿಂದ ಶ್ರೀರಾಮಚಂದ್ರನೇ ರುದ್ರನು. ಮುಖ್ಯವಾಗಿ ಸರ್ವವನ್ನೂ ಆತ್ಮನಲ್ಲಿ ಲಯಮಾಡಿಸಿ ಆತ್ಮಸಾಕ್ಷಾತ್ಕಾರವನ್ನು ಕೊಡಲು ನಮ್ಮಲ್ಲಿ ಭ್ರೂಮಧ್ಯದಲ್ಲಿ ಸುಷುಮ್ನೆಯೊಳಗಿರುವ ಜ್ಞಾನಾಗ್ನಿಯ ಪ್ರಜ್ವಲನೆಯೇ ಮುಖ್ಯವಾದುದೆಂಬ ತತ್ತ್ವವು. ಸೀತಾದೇವಿಯು ಅಗ್ನಿಪ್ರವೇಶಮಾಡಲು ಅಗ್ನಿಯು ಹೇಗೆ ಪ್ರಜ್ವಲನೆಮಾಡಲ್ಪಟ್ಟಿತೋ ಹಾಗೆ ಜ್ಞಾನದೀಪವನ್ನು ಚೆನ್ನಾಗಿ ಪ್ರಕಾಶಮಾಡಬೇಕು. ಈ ತಾತ್ಪರ್ಯಕ್ಕೆ ಬ್ರಹ್ಮವಿದ್ಯೋಪನಿಷತ್ತಿನಲ್ಲಿ,

ಷಟ್ಚಕ್ರಮಂಡಲೋದ್ಧಾರಂ ಜ್ಞಾನದೀಪಂ ಪ್ರಕಾಶಯೇತ್ |
ಸರ್ವಭೂತಸ್ಥಿತಂ ದೇವಂ ಸರ್ವೇಶಂ ನಿತ್ಯಮರ್ಚಯೇತ್ ||

ತಾ|| ಷಟ್ಚಕ್ರಮಂಡಲವನ್ನು ಸ್ಪಷ್ಟವಾಗಿ ತೋರಿಸುವ ಜ್ಞಾನವೆಂಬ ದೀಪವನ್ನು ಪ್ರಕಾಶಮಾಡಬೇಕು. ಸರ್ವಭೂತಗಳಲ್ಲಿಯೂ ಇರುವ ಸರ್ವಕ್ಕೂ ಈಶ್ವರನಾದ ಆತ್ಮನನ್ನು ಸದಾಕಾಲದಲ್ಲಿಯೂ ಪೂಜಿಸಬೇಕು. ಎಂಬವಾಗಿ ಹೇಳಿರುವುದು. ಇದೇ ತಾತ್ಪರ್ಯಕ್ಕೆ ತ್ರಿಪುರತಾಪಿನ್ಯುಪನಿಷತ್ತಿನಲ್ಲಿಯೂ,

ಜ್ಞಾನನೇತ್ರಂ ಸಮಾಧಾಯ ಸ ಮಹತ್ಪರಮಂಪದಂ |
ತೇಜಃಪೀಠಮಮೃತಪೀಠಂ ರತ್ನಪೀಠಂ ಜಾನೀಯಾ ||
ದ್ಯೋಜಾನೀತೇ ಸೋಮೃತತ್ವಂಚ ಗಚ್ಛತಿ |

ತಾ|| ಯೋಗಿಯಾದವನು ಜ್ಞಾನನೇತ್ರವನ್ನು ಚೆನ್ನಾಗಿ ಅನುಸಂಧಾನಮಾಡಲು ಮಹತ್ತಾದ ಪರಮಪದವು ಲಭಿಸುವುದು. ತೇಜಃ ಪೀಠವಾಗಿಯೂ, ಅಮೃತಪೀಠ ವಾಗಿಯೂ, ರತ್ನಪೀಠವಾಗಿಯೂ ಇರುವುದನ್ನು ತಿಳಿಯಬೇಕು. ಯಾವನು ಇವುಗಳನ್ನು ಅರಿಯುವನೋ ಅವನೇ ಮೋಕ್ಷವನ್ನು ಹೊಂದುತ್ತಾನೆ, ಎಂದು ಹೇಳಿರುವುದು.

ಆದುದರಿಂದ ಸೀತಾದೇವಿಯು ಅಗ್ನಿಪ್ರವೇಶಮಾಡುವುದೆಂದರೆ ಶುದ್ಧಸತ್ವಪ್ರಧಾನ ಮಾಯೆ (ಅಹಂಜ್ಞಾನವು)ಯು ಜ್ಞಾನಾಗ್ನಿಯಲ್ಲಿರುವ ಪರಮಾತ್ಮನಲ್ಲಿ ಲೀನವಾಗುವ ತತ್ವ ವಾಗಿರುವುದು. ಜ್ಞಾನಾಗ್ನಿಯ ಅಂತರ್ಗತವಾಗಿರುವ ಆತ್ಮಸಾಕ್ಷಾತ್ಕಾರದ ತತ್ವವೇನೆಂದರೆ ಜೀವಂತರಾಗಿರುವಾಗ ಸರ್ವವ್ಯಾಪಾರವೂ ಆತ್ಮನಲ್ಲಿ ಲೀನವಾದರೆ ದೇಹದಲ್ಲಿರುವ ಅಗ್ನಿಯೇ ಸಾಕ್ಷಿರೂಪದಲ್ಲಿರುವುದೆಂದರೆ, ದೇಹದಲ್ಲಿನ ಶಾಖ ಹೋಗುವುದಿಲ್ಲ. ದೇಹದಲ್ಲಿನ ಶಾಖ ಹೋದರೆ ಮೃತದೇಹದಂತೆ ತಣ್ಣಗಾಗಿ ಬೆಂಡಾಗುವುದು. ಆದುದರಿಂದ ಆತ್ಮಸಾಕ್ಷಾ ತ್ಕಾರವಾದಾಗ ದೇಹದಲ್ಲಿ ಜ್ಞಾನಾಗ್ನಿಯೆಂಬ ದೀಪವುರಿಯುತ್ತಿರುವುದು. ಈ ಅಗ್ನಿಯ ಅಂತರ್ಗತವಾಗಿರುವ ಪರಬ್ರಹ್ಮನಲ್ಲಿ ಸ್ಥಿತಿ ಅಥವಾ ವ್ಯಾಪಾರದ ತತ್ವವು ಪರಬ್ರಹ್ಮನಲ್ಲಿ ಲೀನ ವಾಗಬೇಕಾದ ತತ್ವವೇ ಸೀತಾದೇವಿಯು ಅಗ್ನಿಪ್ರವೇಶಮಾಡುತ್ತಿರುವ ತತ್ವವಾಗಿರುವುದು. ದೇಹದಲ್ಲಿರುವ ಅಗ್ನಿಯು ಕೂಡ ಜ್ಯೋತಿಸ್ವರೂಪನಾದ ಪರಬ್ರಹ್ಮನಿಂದಲೇ ಬೆಳಗಿಸಿ ಕೊಳ್ಳುವುದರಿಂದ ಜ್ಞಾನಾಗ್ನಿಯೆಂಬ ಹೆಸರು ಬಂದಿರುವುದು. ಆದುದರಿಂದ ಜ್ಞಾನಾಗ್ನಿಯ ಅಂತರ್ಗತನಾಗಿ ಅಥವಾ ಆದಿತ್ಯಾಂತರ್ಗತನಾಗಿ ಪರಮಾತ್ಮನಿರುವನೆಂಬೆರಡರ ತತ್ವವೂ ಒಂದೇಯಾಗಿರುವುದು. ಈ ತಾತ್ಪರ್ಯಕ್ಕೆ ಪಾಶುಪತಬ್ರಹ್ಮೋಪನಿಷತ್ತಿನಲ್ಲಿ,

ಅಂತರಾದಿತ್ಯೇ ಜ್ಯೋತಿಸ್ಸ್ವರೂಪೋ ಹಂಸಃ |

ತಾ|| ಸೂರ್ಯನೊಳಗಡೆ ಜ್ಯೋತಿಸ್ವರೂಪನಾಗಿ ಬೆಳಗುವವನೇ ಪರಮಾತ್ಮನೆಂದೂ,

ಹೃತ್ಪದ್ಮಕರ್ಣಿಕಾಮಧ್ಯೇ ಸ್ಥಿರದೀಪ ನಿಭಾಕೃತಿಮ್ |
ಅಂಗುಷ್ಠಮಾತ್ರಮಚಲಂ ಧ್ಯಾಯೇದೋಂಕಾರಮೀಶ್ವರಂ ||

ತಾ|| ಹೃದಯಕಮಲದ ಪೀಠದ ಮಧ್ಯದಲ್ಲಿ ಚಲಿಸದಿರುವ ದೀಪದಂತೆ ಆಕಾರವುಳ್ಳ, ಸೂಕ್ಷ್ಮರೂಪನಾದ, ಸ್ಥಿರನಾದ, ಪ್ರಣವರೂಪನಾದ, ಪರಮಾತ್ಮನನ್ನು ಧ್ಯಾನಮಾಡು ಎಂಬ ಧ್ಯಾನಬಿಂದೂಪನಿಷತ್ಪ್ರಮಾಣವಿರುವುದು. ಅಲ್ಲದೆ ಜ್ಞಾನಾಗ್ನಿಯ ತತ್ವಕ್ಕೂ ಅಂತರ್ಯಾಗದ ತತ್ವಕ್ಕೂ ಭಗವದ್ಗೀತೆ ನಾಲ್ಕನೆಯ ಅಧ್ಯಾಯದಲ್ಲಿ ಶ್ರೀಕೃಷ್ಣಪರಮಾತ್ಮನು,

ಸರ್ವಾಣೀನ್ದ್ರಿಯ ಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ |
ಆತ್ಮಸಂಯಮಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ ||

ತಾ|| ಎಲ್ಲಾ ಇಂದ್ರಿಯಗಳ ಕೆಲಸಗಳನ್ನೂ ಪ್ರಾಣಿಗಳ ಕೆಲಸಗಳನ್ನೂ ಜ್ಞಾನದಿಂದ ಬೆಳಗುವ ಆತ್ಮಸಂಯಮಯೋಗವೆಂಬ ಅಗ್ನಿಯಲ್ಲಿ ಹೋಮಮಾಡುವರು, ಎಂದು ಹೇಳಿರುವನು. ಆದುದರಿಂದ ಸೀತಾದೇವಿಯು ಪ್ರವೇಶಮಾಡುತ್ತಿರುವ ಅಗ್ನಿಯೇ ಭ್ರೂಮಧ್ಯದಲ್ಲಿ ಸುಷುಮ್ನಾಂತರ್ಗತವಾಗಿರುವ ರುದ್ರಗ್ರಂಥಿಯ ತತ್ವದಲ್ಲಿರುವ ಜ್ಞಾನಾಗ್ನಿಯ ತತ್ವವಾಗಿರುವುದು.

ಸೀತಾದೇವಿಯು ಅಂತಃಕರಣಶುದ್ಧಿಯಿಂದ ದೇಹದ ಮೇಲೆ ಲೇಶವೂ ಅಭಿಮಾನವಿಲ್ಲದೆ ಅಗ್ನಿಯೊಳಗೆ ಪ್ರವೇಶಮಾಡುತ್ತಿದ್ದಳೆಂದರೆ—ಶುದ್ಧಸತ್ವಪ್ರಧಾನಮಾಯೆಯು ತಾನು ಮಾಯೆಯೆಂಬ ಭಾವವನ್ನು ಆತ್ಯಂತಿಕವಾಗಿ ಬಿಟ್ಟು ಅಗ್ನಿಯ ಅಂತರ್ಗತವಾದ ಪರಬ್ರಹ್ಮನಲ್ಲಿ ಅಭೇದವಾಗಿ ಸೇರುವ ತತ್ವವೇ ಸೀತಾದೇವಿಗೆ ದೇಹದ ಮೇಲೆ ಕೊಂಚವೂ ಅಭಿಮಾನವಿಲ್ಲದ್ದಾಗಿರುವುದು. ಅಂದರೆ ತ್ರಿಪುಟಿಯಲ್ಲಿನ ಜ್ಞಾನ ಜ್ಞೇಯಗಳು ನಶಿಸಿ ಜ್ಞಾತೃವೊಂದೇ ಉಳಿದಿರುವ ತತ್ವವೇ ಸೀತಾದೇವಿಯು ಶ್ರೀರಾಮನ ಸಮೀಪಕ್ಕೆ ಬಂದ ತತ್ವವೆಂದು ತಿಳಿಸಿತಷ್ಟೆ! ಜ್ಞಾತೃವೆಂದರೆ ಅಹಂಜ್ಞಾನ ಮತ್ತು ಅಹಂಜ್ಞಾನಕ್ಕೆ ಪ್ರಕಾಶವಾದ ಪ್ರತಿಬಿಂಬಚೈತನ್ಯಗಳೆರಡೂ ಸೇರಿ ಜ್ಞಾತೃವೆನಿಸಿಕೊಳ್ಳುವುದು. ಅಹಂಜ್ಞಾನವು ಅಹಂ ಭಾವವನ್ನು ಬಿಟ್ಟು ಸ್ವಯಂ ಶಬ್ದಾರ್ಥವಾದ ಪರಬ್ರಹ್ಮವಾಗಲು ಹೋಗುತ್ತಿರುವ ತತ್ವದ ಸೂಚನೆಯೇ ಸೀತಾದೇವಿಗೆ ದೇಹದ ಮೇಲೆ ಕೊಂಚವೂ ಅಭಿಮಾನವಿಲ್ಲದ್ದಾಗಿರುವುದು. ಸಾಕ್ಷಾತ್ಕಾರವಾಗುವ ಸಮಾಧಿಯಲ್ಲಿ ಮುಳುಗುವ ಕಾಲದಲ್ಲಿ ಸೀತಾದೇವಿಯು ಅಗ್ನಿಪ್ರವೇಶಮಾಡುತ್ತಿರುವ ಕಾಲದ ತತ್ವದ ಭಾವನೆಯಂತೆ ಅಧಿಕಾರಿಗೆ ಇರಬೇಕೆಂಬ ತತ್ವಕ್ಕೆ ಮೈತ್ರೇಯೋಪನಿಷತ್ತಿನಲ್ಲಿ,

ಸರ್ವಪೂರ್ಣಸ್ವರೂಪೋಸ್ಮಿ ಸಚ್ಚಿದಾನಂದಲಕ್ಷಣಃ |
ಅಖಂಡಾಕಾರರೂಪೋಸ್ಮಿ ಹ್ಯಖಂಡಾಕಾರಮಸ್ಮ್ಯಹಂ ||
ಪ್ರಪಂಚಮುಕ್ತಚಿತ್ತೋಸ್ಮಿ ಪ್ರಪಂಚರಹಿತೋಸ್ಮ್ಯಹಂ |
ಸರ್ವಪ್ರಕಾಶರೂಪೋಸ್ಮಿ ಚಿನ್ಮಾತ್ರಜ್ಯೋತಿರಸ್ಮ್ಯಹಂ ||
ಏವಂ ಸ್ವಾನುಭವೋ ಯಸ್ಯ ಸೋಹಮಸ್ಮಿ ನಸಂಶಯಃ |

ತಾ|| ಸರ್ವಪೂರ್ಣರೂಪನೂ, ಸಚ್ಚಿದಾನಂದನಾಗಿರುವವನೂ ನಾನೇ. ಅಖಂಡರೂಪನೂ ನಾನೇ. ಸಮಷ್ಟಿವ್ಯಷ್ಟಿಸ್ವರೂಪವೂ ನಾನೇ. ಅಜ್ಞಾನವನ್ನು ಬಿಟ್ಟಿರುವವನು ನಾನು. ಅಜ್ಞಾನಕ್ಕೆ ನಾನು ದೂರನು. ಎಲ್ಲವನ್ನೂ ಬೆಳಕುಮಾಡತಕ್ಕ ರೂಪನೂ ನಾನು. ಚಿಜ್ಜ್ಯೋತಿಯೇ ನಾನು. ಈ ರೀತಿಯಾದ ಅನುಭವವು ಯಾವನಿಗೆ ವೇದ್ಯವೋ ಅಂತಹವನೇ ನಾನು. ಇದಕ್ಕೆ ಸಂದೇಹವಿಲ್ಲ ಎಂದು ಹೇಳಿರುವುದು.

ಆದುದರಿಂದ ಜ್ಞಾನಾಗ್ನಿಯಲ್ಲಿ ವ್ಯಾಪ್ತವಾಗಿರುವ ಪರಬ್ರಹ್ಮನಲ್ಲಿ ಅಭೇದದಿಂದ ಅಹಂಜ್ಞಾನವು ಐಕ್ಯವಾಗುವ ತತ್ವದ ಸೂಚನೆಯೇ ಸೀತಾದೇವಿಯು ದೇಹಾಭಿಮಾನ ವನ್ನು ಬಿಟ್ಟು ಅಂತರಂಗಶುದ್ಧಿಯಿಂದ ಅಗ್ನಿಪ್ರವೇಶಮಾಡಿದ ತತ್ವವಾಗಿರುವುದು. ಪರಬ್ರಹ್ಮಸ್ವರೂಪನಾಗಿರುವ ತನ್ನಪತಿಯಾದ ಶ್ರೀರಾಮಚಂದ್ರನಿಗಿಂತಲೂ ಸೀತಾದೇವಿಗೆ ಅಗ್ನಿಯು ಎಂದಿಗೂ ಹೆಚ್ಚಿನದಲ್ಲ. ಲವಣವು ನೀರಿನಿಂದ ಬೇರ್ಪಡಿಸಲ್ಪಟ್ಟಾಗ ಪ್ರತ್ಯೇಕವಾಗಿ ಇರುವಂತೆ ತೋರುವುದು. ನೀರಿನಲ್ಲಿ ಸೇರಿದರೆ ಅಭೇದವಾಗುವಂತೆ ಶುದ್ಧಸತ್ವಪ್ರಧಾನ ಮಾಯೆಯು ಪರಬ್ರಹ್ಮನಲ್ಲಿ ಲೀನವಾದರೆ ಪರಬ್ರಹ್ಮವೇ ಆಗುವುದು. ಆದುದರಿಂದ ಸೀತಾದೇವಿಯು ಆತ್ಮಸ್ವರೂಪನಾಗಿರುವ ಪತಿಯಲ್ಲಿ ಪ್ರವೇಶಿಸಿದಳಲ್ಲದೆ ಅಗ್ನಿಯಲ್ಲಿ ಬಿದ್ದು ಭಸ್ಮೀಕೃತಳಾಗಲಿಲ್ಲ. ಇದೇ ತತ್ವಾರ್ಥಕ್ಕೆ ತೇಜೋಬಿಂದೂಪನಿಷತ್ತಿನಲ್ಲಿ,

ಸದಾನಂದಸ್ವರೂಪೋಽಸ್ಮಿ ನಿರ್ವಿಕಾರೋಹಮವ್ಯಯಃ |
ಆತ್ಮಪ್ರಕಾಶರೂಪೋಽಸ್ಮಿ ಹ್ಯಾತ್ಮಜ್ಯೋತಿರಸೋಽಸ್ಮ್ಯಹಂ ||
ಆತ್ಮಾರಾಮಸ್ವರೂಪೋಽಸ್ಮಿ ಹ್ಯಹಮಾತ್ಮಾ ಸದಾಶಿವಃ |

ತಾ|| ನಾನು ನಿತ್ಯಾನಂದಸ್ವರೂಪನಾಗಿರುವೆನು. ಪರಿಣಾಮರಹಿತನಾಗಿರುವೆನು. ನಾಶರಹಿತನಾಗಿರುವೆನು. ಪ್ರಕಾಶರೂಪನಾಗಿರುವೆನು. ಪ್ರಕಾಶದ ಸಾರವಾಗಿರುವೆನು. ನನ್ನಲ್ಲಿ ನಾನೇ ರಮಿಸುವ ರಸರೂಪನಾಗಿರುವೆನು. ಅಂಥಾ ನಾನೇ ಸದಾಶಿವರೂಪನಾದ ಪರಮಾತ್ಮನಾಗಿರುವೆನು ಎಂದು ಹೇಳಿರುವುದಲ್ಲದೆ,

ಅಹಂ ಬ್ರಹ್ಮಾಸ್ಮ್ಯಹಂ ಬ್ರಹ್ಮಾಸ್ಮ್ಯಹಂ ಬ್ರಹ್ಮೇತಿ ನಿಶ್ಚಯಃ |
ಸ್ವಯಮೇವ ಸ್ವಯಂ ಪಶ್ಯೇ ತ್ಸ್ವಾತ್ಮರಾಜ್ಯೇ ಸುಖೀವಸೇತ್ ||

ತಾ|| ನಾನು ಬ್ರಹ್ಮನಾಗಿರುವೆನೆಂದು ಮೂರಾವರ್ತಿ ಹೇಳಿರುವುದರಿಂದ ದೃಢೀಕರಿಸ ಲ್ಪಟ್ಟುದಾಗಿ ನಾನೇ ಬ್ರಹ್ಮನೆಂಬುದು ನಿಶ್ಚಯವು. ತಾನೇ ತನ್ನನ್ನು ನೋಡಿಕೊಳ್ಳಬೇಕು. ತಾನೆಂಬ ರಾಜ್ಯದಲ್ಲಿ ಸುಖವಾಗಿರಬೇಕು ಎಂದು ಹೇಳಿರುವುದು.

ಆದುದರಿಂದ ಸೀತಾದೇವಿಯು ಅಗ್ನಿಪ್ರವೇಶಮಾಡಲು ಹೇಗೆ ಕೊಂಚವೂ ವ್ಯಥೆಪಡ ಲಿಲ್ಲವೋ ಹಾಗೆ ಅಧಿಕಾರಿಯು ಅಹಂಬ್ರಹ್ಮಾಸ್ಮಿಯ ಜ್ಞಾನದ ತೀವ್ರತಮವಾದ ಇಚ್ಛೆ ಯಿಂದ ಸಮಾಧಿಯಲ್ಲಿ ಮುಳುಗಿಸಿದರೆ ರಾವಣನ ತತ್ವವಾದ ಸಗುಣವಾದ ಜ್ಞಾನಜ್ಞೇಯ ಗಳು ನಶಿಸುವುವಲ್ಲದೆ ಜ್ಞಾತೃಸ್ವರೂಪವಾದ ಅಹಂಜ್ಞಾನವು ಕೂಡ ಸ್ವಯಂಶಬ್ದಾರ್ಥ ಸ್ವರೂಪವಾದ ಪರಬ್ರಹ್ಮನಲ್ಲಿ ಲೀನವಾಗುವುದರಲ್ಲಿ ಸಂಶಯವಿಲ್ಲ. ಈ ತತ್ವಾರ್ಥಕ್ಕನು ಸಾರವಾಗಿ ಶ್ರೀಶಂಕರಭಗವತ್ಪಾದಾಚಾರ್ಯರವರು ಕೂಡ ವಿವೇಕಚೂಡಾಮಣಿಯಲ್ಲಿ,

ಸಮೂಲಮೇತತ್ಪರಿದಹ್ಯವಹ್ನೌ ಸದಾತ್ಮನಿ ಬ್ರಹ್ಮಣಿ ನಿರ್ವಿಕಲ್ಪೇ |
ತತಸ್ಸ್ವಯಂ ನಿತ್ಯವಿಶುದ್ಧಬೋಧಾನಂದಾತ್ಮನಾತಿಷ್ಠತಿವಿದ್ವರಿಷ್ಠಃ||

ತಾ|| ಆತ್ಮಜ್ಞರೊಳಗೆ ಶ್ರೇಷ್ಠನಾದವನು ಸತ್ಸ್ವರೂಪವಾಗಿರುವ, ವಿಕಲ್ಪಶೂನ್ಯವಾದ ಪರಮಾತ್ಮನೆಂಬ ಅಗ್ನಿಯಲ್ಲಿ ಸ್ಥಿತಿ ಅಥವಾ ಇರುವಿಕೆಯನ್ನು ಸಂಪೂರ್ಣವಾಗಿ ಲೀನಗೊಳಿಸಿ, ಅನಂತರ ತಾನು ಶಾಶ್ವತವಾದ ನಿರ್ಮಲಜ್ಞಾನಸ್ವರೂಪವಾಗಿರುವ ಆನಂದಸ್ವರೂಪದಿಂದ ಇರುತ್ತಾನೆ, ಎಂದು ಹೇಳಿರುವರು.

ಆದುದರಿಂದ ಸ್ಥಿತಿ ಅಥವಾ ಇರುವಿಕೆಗೆ ಮೂಲರೂಪವಾಗಿರುವ ಶುದ್ಧಸತ್ವಪ್ರಧಾನಮಾಯೆಯು (ಅಹಂಜ್ಞಾನವು) ಜ್ಞಾನಾಗ್ನಿಮಯವಾಗಿರುವ ಪರಬ್ರಹ್ಮನಲ್ಲಿ ಲೀನವಾಗುವ ತತ್ವವೇ ಸೀತಾದೇವಿಯು ದೇಹದ ಮೇಲೆ ಕೊಂಚವೂ ಅಭಿಮಾನವಿಲ್ಲದೆ ಅಗ್ನಿಯೊಳಗೆ ಪ್ರವೇಶಮಾಡುತ್ತಿರುವ ತತ್ವವಾಗಿರುವುದು.

ಸೀತಾದೇವಿಯು ಅಗ್ನಿಯಲ್ಲಿ ಪ್ರವೇಶಿಸುವಾಗ ಮಂತ್ರಪೂತವಾದ ಸಂತತವಾದ ಆಜ್ಯಧಾರೆಯಂತೆ ಪ್ರವೇಶಿಸಿರುವುದರ ತತ್ವವೇನೆಂದರೆ—ಸೀತಾದೇವಿಯು ಅಗ್ನಿಪ್ರವೇಶಮಾಡುವ ತತ್ವವೆ ನಮ್ಮಲ್ಲಿ ನಡೆಯುವ ಅಂತರ್ಯಾಗದ ತತ್ವವಾಗಿರುವುದೆಂದು ಮೇಲೆ ತಿಳಿಸಿತಷ್ಟೆ! ಯಾಗಮಾಡತಕ್ಕವರು ಗಾರ್ಹಪತ್ಯ ದಕ್ಷಿಣಾಗ್ನಿ ಆಹವನೀಯಗಳೆಂಬ ಅಗ್ನಿಗಳನ್ನು ಇಟ್ಟುಕೊಂಡಿರುವರು. ಈ ತತ್ವಾರ್ಥರಾಮಾಯಣದಲ್ಲಿ ಸೀತಾದೇವಿಯು ಪ್ರವೇಶಮಾಡಿದ ಅಗ್ನಿಯ ತತ್ವವೇ ಆಹವನೀಯವಾಗಿ ಭ್ರೂಮಧ್ಯದಲ್ಲಿರುವುದು. ಉಳಿದ ಗಾರ್ಹಪತ್ಯ ದಕ್ಷಿಣಾಗ್ನಿಗಳ ತತ್ವವನ್ನು ಮೇಲೆಯೇ ತಿಳಿಸಿದೆ. ಅಲ್ಲದೆ ಶರೀರಸಂಬಂಧವಾದ ಕಾಲಾಗ್ನಿ ಬಡಬಾಗ್ನಿ ಮುಂತಾದ ಇನ್ನೂ ಕೆಲವು ಅಗ್ನಿಗಳು ನಮ್ಮ ದೇಹದಲ್ಲಿರುವುವು. ಪಾದದಲ್ಲಿ ಕಾಲಾಗ್ನಿ ಇರುವುದೆಂದು ಶ್ರುತಿವಾಕ್ಯವಿದೆ. ಪಾದದಲ್ಲಿರುವ ಈ ಕಾಲಾಗ್ನಿಯು ಪ್ರಾಣೋತ್ಕ್ರಮಣಕಾಲದಲ್ಲಿ ಪ್ರಥಮದಲ್ಲಿ ಶಾಂತವಾಗುವುದಾದುದರಿಂದ ಇದಕ್ಕೆ ಕಾಲಾಗ್ನಿಯೆಂದು ಹೆಸರು ಬಂದಿರುವುದು.

ಮುಖ್ಯವಾಗಿ ಅಗ್ನಿಯನ್ನು ಪರಬ್ರಹ್ಮತ್ವೇನ ಉಪಾಸನೆಮಾಡಬೇಕು. ನಮ್ಮ ದೇಹದಲ್ಲಿರುವ ಅಗ್ನಿಪ್ರಜ್ವಲನೆಯ ತತ್ವವಂತೂ ಆತ್ಮಯಜ್ಞವೆಂದರೆ ಆತ್ಮಸಾಕ್ಷಾತ್ಕಾರಸ್ವರೂಪವನ್ನು ಪಡೆಯುವ ತತ್ವವೆಂದು ಹಿಂದೆ ಹೇಳಿರುವ ಶ್ರುತ್ಯಾಧಾರದಂತೆ ನಿಸ್ಸಂದೇಹವಾಗಿರುವುದು. ಈ ಜ್ಞಾನಾಗ್ನಿದೀಪವೇ ಕೃತ್ತಿಕೋತ್ಸವದ ತತ್ವವಾಗಿರುವುದು. ಇದೇ ಶಿವದೀಪ, ವಿಷ್ಣುದೀಪ ಮತ್ತು ಲಕ್ಷದೀಪಗಳ ತತ್ವವೂ ಆಗಿರುವುದು. ಮೋಕ್ಷಾಧಿಕಾರಿಯಲ್ಲಿ ಪ್ರಜ್ವಲನೆಯಾಗುವ ಗಾರ್ಹಪತ್ಯ ದಕ್ಷಿಣಾಗ್ನಿಗಳ ಜ್ವಾಲೆಗಳೆಲ್ಲಾ ಊರ್ಧ್ವಮುಖವಾಗಿ "ಓಂ" ಕಾರದ "ಅ" ಕಾರ "ಉ" ಕಾರಗಳು "ಮ" ಕಾರದಲ್ಲಿ ಸೇರುವಂತೆ ಜ್ಞಾನಾಗ್ನಿಸ್ವರೂಪವಾದ ಆಹವನೀಯದ ಜೊತೆಗೆ ಸೇರಿ ತುರೀಯವಾದ ಸಹಸ್ರಾರದಲ್ಲಿ

ಜಲಜ್ಯೋತಿ (ವಿದ್ಯುದ್ದೀಪ) ಎನಿಸುವುದು. ಇಂತಹ ಜಲಜ್ಯೋತಿಸ್ವರೂಪವಾದ ಬ್ರಹ್ಮಾಗ್ನಿಯಲ್ಲಿ ತಮ್ಮ ಇರುವಿಕೆಯನ್ನು ಲೀನಮಾಡಿಕೊಳ್ಳುವುದು ಹೋಮವೆಂದು ಕರೆಯಲ್ಪಡುವ ತತ್ವಕ್ಕೆ ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆ ನಾಲ್ಕನೆಯ ಅಧ್ಯಾಯದಲ್ಲಿ,

ದೈವಮೇವಾಪರೆ ಯಜ್ಞಂ ಯೋಗಿನಃ ಪರ್ಯುಪಾಸತೇ |
ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ ||

ತಾ|| ಕರ್ಮಯೋಗಿಗಳು ದೇವತೆಗಳ ಸಂಬಂಧವಾದ ಯಜ್ಞವನ್ನೇ ಯಾವಾಗಲೂ ಶ್ರದ್ಧೆಯಿಂದ ಮಾಡುವರು. ಜ್ಞಾನಯೋಗಿಗಳು ಬ್ರಹ್ಮವೆಂಬ ಅಗ್ನಿಯಲ್ಲಿ ತಮ್ಮ ವ್ಯಾಪಾರ ವನ್ನೆಲ್ಲ ಯಜ್ಞಹೋಮದಂತೆ ಲೀನಮಾಡುವರು, ಎಂದು ಹೇಳಿರುವರು.

ಆದುದರಿಂದ ಶ್ರೀಕೃಷ್ಣಪರಮಾತ್ಮನ ವಾಕ್ಯದ ತತ್ವವನ್ನು ಅನುಸರಿಸಿ ಸೀತಾ ದೇವಿಯು ಮಂತ್ರಪೂತವಾದ ಸಂತತವಾದ ಆಜ್ಯಧಾರೆಯಂತೆ ಅಗ್ನಿಯೊಳಗೆ ಪ್ರವೇಶಿ ಸುವುದೆಂದರೆ—ಶುದ್ಧಸತ್ವಪ್ರಧಾನಮಾಯೆ (ಅಹಂಜ್ಞಾನವು) ಯು ಸಂತತವಾದ ತೈಲ ಧಾರೆಯಂತೆ ಆತ್ಮನಲ್ಲಿ ಲೀನವಾಗಿ ತದಾಕಾರವನ್ನು ಪಡೆಯುವುದೆಂಬ ತತ್ವವಾಗಿರುವುದು.

ಅಲ್ಲದೆ "ಓಂ" ಎಂಬ ವರ್ಣೋಚ್ಚಾರಣೆಯನ್ನು ಎಳೆದುಕೊಂಡು ಹೋಗಿ ಶಿರಸ್ಸಿನಲ್ಲಿ ನಿಲ್ಲಿಸಿಕೊಂಡು ಸಮಾಧಿಯ ಅಭ್ಯಾಸಮಾಡುತ್ತಿದ್ದೆವಷ್ಟೆ! ರಾವಣನ ವಧೆಯ ತತ್ವದವರೆಗೆ ಧ್ಯಾನದ ವಿಚ್ಛಿನ್ನತ್ವದಿಂದ ಈ ಓಂಕಾರೋಚ್ಚಾರಣೆಯು ವಿಚ್ಛಿನ್ನವಾಗುತ್ತಿತ್ತೇ ಹೊರತು, ತೈಲಧಾರೆಯಂತಾಗಲಿ ಘಂಟೆಯ ದೀರ್ಘವಾದ ನಾದದಂತಾಗಲಿ ಏಕಪ್ರಕಾರವಾಗಿ ಪ್ರವಹಿಸಿಕೊಂಡು ಪರಬ್ರಹ್ಮನಲ್ಲಿ ಲೀನವಾಗುತ್ತಿರಲಿಲ್ಲ. ರಾವಣನ ವಧೆಯಾಗಿ ಸೀತಾ ದೇವಿಯು ಶ್ರೀರಾಮನ ಬಳಿಗೆ ಬಂದ ತತ್ವದಲ್ಲಿ "ಓಂ" ಕಾರವು ಏಕಾಕಾರದ ಸ್ಥಿತಿಗೆ ಬರುವುದರಿಂದ, ಅರ್ಧಾಕ್ಷರವಾದ "ಮ್" ಎಂಬ ಸ್ಥಿತಿಗೆಂದರೆ ಏಕಾಕಾರವಾಗಲು ಪ್ರಾರಂಭವಾಗುವುದು. ಸೀತಾದೇವಿಯು ಅಗ್ನಿಪ್ರವೇಶಮಾಡಿದ ಈ ಸಂದರ್ಭದ ತತ್ವ ದಲ್ಲಿ "ಮ್" ಎಂಬುದು ಏಕಾಕಾರವಾದ ಘಂಟೆಯ ದೀರ್ಘನಾದದಂತೆ ಧೃಡಪಟ್ಟು ಪರ ಬ್ರಹ್ಮನಲ್ಲಿ ಲೀನವಾಗುವ ತತ್ವವೇ ಸೀತಾದೇವಿಯು ಸಂತತವಾದ ಆಜ್ಯಧಾರೆಯಂತೆ ಅಗ್ನಿಯೊಳಗೆ ಪ್ರವೇಶಿಸಿದ ತತ್ವವಾಗಿರುವುದು. ಸೀತಾದೇವಿಯು ಸಂತತವಾದ ತೈಲ ಧಾರೆಯಂತೆ ಅಗ್ನಿಯಲ್ಲಿ ಪ್ರವೇಶಿಸುವ ತತ್ವವೇ ಆತ್ಮಸಾಕ್ಷಾತ್ಕಾರದ ಸ್ವರೂಪವೆನ್ನುವುದಕ್ಕೆ ಧ್ಯಾನಬಿಂದೂಪನಿಷತ್, ಯೋಗಚೂಡಾಮಣ್ಯುಪನಿಷತ್, ವರಾಹೋಪನಿಷತ್ ಮತ್ತು ಉತ್ತರಗೀತೆಗಳಲ್ಲಿ,

ತೈಲಧಾರಾಮಿವಾಚ್ಛಿನ್ನಂ ದೀರ್ಘಘಂಟಾನಿನಾದವತ್ |
ಉಪಾಸ್ಯಂ ಪ್ರಣವಸ್ಯಾಗ್ರಂ ಯಸ್ತಂವೇದ ಸ ವೇದವಿತ್ ||

ಏಕಾಕಾರವಾಗಿ ಪ್ರವಹಿಸುತ್ತಿರುವ ತೈಲಧಾರೆಯಂತೆ ಮತ್ತು ಘಂಟೆಯ ದೀರ್ಘ ನಾದದಂತೆ ಪ್ರಣವಾಗ್ರವು ಉಪಾಸಿಸುವುದಕ್ಕೆ ಅರ್ಹವು. ಯಾವನು ಪ್ರಣವಾಗ್ರವನ್ನು ತಿಳಿಯುವನೋ ಅವನೇ ಆತ್ಮನನ್ನು ತಿಳಿದ ಮಹಾತ್ಮನು, ಎಂದು ಹೇಳಿರುವುದು.

ಮಂತ್ರಪೂತವಾದ ಆಜ್ಯವನ್ನೇ ಹೋಮಮಾಡಲು ಉಪಯೋಗಿಸುತ್ತಾರಷ್ಟೆ! ಇದರಂತೆ ಪ್ರಪಂಚವ್ಯಾಪಾರಬಂಧನದಲ್ಲಿದ್ದ ಶುದ್ಧಸತ್ವಪ್ರಧಾನವಾಯೆ(ಅಹಂಜ್ಞಾನ)ಯು ಶಾಸ್ತ್ರೋಕ್ತವಾದ ಕೆಲವು ಸಂಸ್ಕಾರಗಳಾದ ನಂತರ ಪರಮಾತ್ಮನಲ್ಲಿ ಲೀನವಾಗಲು ಸಿದ್ಧವಾಗುವುದು. ಸಂಸ್ಕಾರವೆಂದರೆ ಶುದ್ಧಸತ್ವಪ್ರಧಾನವಾಯೆ (ಅಹಂಜ್ಞಾನ) ಯು ನಿರ್ವಿಕಲ್ಪಸ್ಥಿತಿಯನ್ನು ಹೊಂದಲು ಮಾಡಿಕೊಡುವ ಸಲಕರಣೆಗಳಿಗೆ ಸಂಸ್ಕಾರವೆಂದು ಹೆಸರು. ಈ ತತ್ವಾರ್ಥವನ್ನು ಹಾಲಿನಿಂದ ತುಪ್ಪವಾಗುವ ಉದಾಹರಣೆಯ ಮೂಲಕ ಸೀತಾದೇವಿಗಿದ್ದ ಬಂಧನದ ಸ್ವರೂಪವನ್ನೂ ಬಂಧನದ ಬಿಡುಗಡೆಯ ಕಾರ್ಯಕ್ರಮಗಳ ತತ್ವ ಗಳನ್ನೂ ಸೀತಾದೇವಿಯು ಮಂತ್ರಪೂತವಾದ ಸಂಸ್ಕೃತವಾದ ಆಜ್ಯಧಾರೆಯಂತೆ ಜ್ಞಾನಾಗ್ನಿ ಯಲ್ಲಿ ಪ್ರವೇಶಮಾಡಿದ ತತ್ವವನ್ನೂ ವಿವರಮಾಡೋಣ. "ಪಯೋಮಧ್ಯೇ ಯಥಾ ಘೃತಂ" ಎಂಬ ಶ್ರುತಿವಚನಾನುಸಾರವಾಗಿ ಕ್ಷೀರದಲ್ಲಿ ತುಪ್ಪವು ಸೇರಿಕೊಂಡು ಇರುವುದು. ಹೀಗೆ ಕ್ಷೀರದಲ್ಲಿರುವ ತುಪ್ಪವನ್ನು ಬೇರ್ಪಡಿಸಲು ಕೆಲವು ಕ್ರಮಗಳನ್ನು ನಡೆಸಬೇಕಾಗು ತ್ತಷ್ಟೆ! ಇದರಂತೆ ಸೀತಾದೇವಿಯ ತತ್ವವಾದ ಆನಂದವಾದ ಅಹಂಜ್ಞಾನವೇ ಶೇಷವಾಗಿ ರುವ ಶುದ್ಧಸತ್ವಗುಣವು ಅವಿದ್ಯೆಯ ಬಂಧನದಲ್ಲಿರುವ ಸ್ವರೂಪವೇ ಕ್ಷೀರದಲ್ಲಿರುವ ತುಪ್ಪದ ಸ್ವರೂಪವಾಗಿರುವುದು. ಅಂದರೆ ಕ್ಷೀರದೊಳಗೆ ಘೃತವು ಹೇಗೆ ಅಭೇದದಲ್ಲಿರು ವಂತೆ ತೋರುವುದೋ ಹಾಗೆ ಬಹಿರ್ವ್ಯಾಪಾರವಾದ ಅವಿದ್ಯೆಯ ಬಂಧನದಲ್ಲಿ ಶುದ್ಧಸತ್ವ ಗುಣವಾದ ಅಖಂಡವಾದ ಅಹಂಜ್ಞಾನವು ಬಹಿರ್ವ್ಯಾಪಾರವಾಗಿರುವಂತೆ ಅಭೇದಸ್ವರೂಪ ವಾಗಿ ತೋರುವುದು. ವಾಸ್ತವವಾಗಿ ಕ್ಷೀರದಲ್ಲಿರುವ ತುಪ್ಪವು ಕ್ಷೀರಕ್ಕೆ ಅಂಟಿಕೊಳ್ಳದೆ, ಕಾಸುವುದು ಹೆಪ್ಪುಹಾಕುವುದು, ಕಡೆಯುವುದು, ಅನಂತರ ಬೆಣ್ಣೆಯನ್ನು ಕಾಸುವುದೆಂಬ ಸಂಸ್ಕಾರಗಳಿಂದ ಹೇಗೆ ಬೇರ್ಪಡುವುದೋ ಹಾಗೆ ವೇದಾಂತಶ್ರವಣ, ಮನನ, ನಿದಿಧ್ಯಾಸ, ಸಮಾಧಿ ಅನುಷ್ಠಾನರೂಪವಾದ ಸಂಸ್ಕಾರಗಳಿಂದ ಶುದ್ಧಸತ್ವಪ್ರಧಾನವಾಯೆ (ಅಹಂ ಜ್ಞಾನ) ಯನ್ನು ಬೇರ್ಪಡಿಸಿಕೊಂಡು ಬರಬೇಕು.

ಹೇಗೆಂದರೆ ಹಾಲನ್ನು ಚೆನ್ನಾಗಿ ಕೆನೆಗಟ್ಟುವಂತೆ ಕಾಯಿಸುವುದರ ತತ್ವವೇ ಶಿಷ್ಯನು ಗುರುಕುಲವಾಸದಲ್ಲಿ ವೇದಾಂತವಿಚಾರ ಮಾಡುವುದರ ಸ್ವರೂಪವಾಗಿರುವುದು. ಹಾಲನ್ನು ಚೆನ್ನಾಗಿ ಕೆನೆಗಟ್ಟುವಂತೆ ಕಾಯಿಸುವುದರಿಂದ ಹಾಲಿನಲ್ಲಿರುವ ತುಪ್ಪವು ಕೆನೆಯಸ್ವರೂಪ ವಾಗಿ ನಿಂತು ಹಾಲಿನ ಸ್ವರೂಪಕ್ಕಿಂತ ಪ್ರತ್ಯೇಕವಾಗಿರುತ್ತದೆ. ಇದರಂತೆ ವೇದಾಂತ ವಿಚಾರದಿಂದ ದೇಹವೇ ನಾನೆಂಬ ತಪ್ಪುತಿಳಿವಳಿಕೆಯು ವಿಚಾರದಿಂದ ಪ್ರತ್ಯೇಕವಾಗುತ್ತದೆ.

ಅಂದರೆ ಕೆನೆಯು ಸ್ವರೂಪವೇ ತುಪ್ಪವಲ್ಲ. ಹಾಗೆಯೇ ವೇದಾಂತವಿಚಾರ ಮಾತ್ರದಿಂದಲೇ ಅಹಂಜ್ಞಾನವೇಶೇಷವಾಗಿರುವ ಶುದ್ಧಸತ್ವಪ್ರಧಾನವಾಯಾಸ್ವರೂಪಾನುಭವವುಂಟಾಗದು.

ಅನಂತರ ಚೆನ್ನಾಗಿ ಕೆನೆಗಟ್ಟುವಂತೆ ಕಾಯಿಸಿದ ಹಾಲನ್ನು ಮೊಸರಾಗಲು ಹೆಪ್ಪು ಹಾಕುತ್ತೇವೆ. ಘನೀಸ್ವರೂಪವಾಗಿ ಮೊಸರಾಗುವ ಸ್ವರೂಪದ ತತ್ವವೇನೆಂದರೆ—ಗುರು ಮುಖೇನ ತಿಳಿದುಕೊಂಡ ಆತ್ಮವಿಚಾರವನ್ನು ಚೆನ್ನಾಗಿ ಮನನಮಾಡಿ ಘನೀಸ್ವರೂಪ ವಾದದ್ದನ್ನಾಗಿ ಮಾಡಿಕೊಂಡು ನಿರ್ಧರಪಡಿಸಿಕೊಳ್ಳುವುದರ ತತ್ವವೇ ಮೊಸರಿನ ಸ್ವರೂಪವು.

ಕಾಯಿಸಿದ ಹಾಲನ್ನು ಮೊಸರುಮಾಡಲು ಹೆಪ್ಪುಹಾಕುವುದಕ್ಕೆ ಮೊಸರು ಬೇಕಾ ಗುವುದು. ಅಂದರೆ ಮೊಸರಿನ ಸಂಗದಿಂದಲೆ ಕಾಯಿಸಿದ ಹಾಲು ಮೊಸರಾಗಬೇಕಷ್ಟೆ! ಇದರಂತೆ ಹೆಪ್ಪಿನ ಮೊಸರಿನ ತತ್ವದಲ್ಲಿರುವ ವೇದಾಂತಶ್ರವಣ ಮನನಗಳಿಂದ ಆತ್ಮನಿಷ್ಠ ರಾಗಿರುವವರ ಸಂಗದಿಂದ ಗುರುಮುಖೇನ ತಿಳಿದುಕೊಂಡ ಆತ್ಮವಿಚಾರವು ಘನೀಭೂತ ವಾದ ಮೊಸರಿನಂತೆ ಆಗುವುದು. ಅಂದರೆ ವಿಚಾರವು ದೃಢವಾಗಿ ನಿಂತುಕೊಳ್ಳಬೇಕಾದರೆ ಸತ್ಸಂಗದ ಅವಶ್ಯಕತೆಯ ಸೂಚನೆಯೇ ಹಾಲು ಮೊಸರಾಗಲು ಬೇಕಾಗಿರುವ ಹೆಪ್ಪಿನ ಅವಶ್ಯಕತೆಯ ತತ್ವವಾಗಿರುವುದು. ಹಾಲಿನ ಸ್ವರೂಪವೆಂಬುದು ಹೋಗಿ ಮೊಸರಿನ ಸ್ವರೂಪಕ್ಕೆ ಬಂದು ನಿಲ್ಲುವುದರಲ್ಲಿ ಮನನ ಮತ್ತು ಸತ್ಸಂಗದ ತತ್ವಗಳಿರುವವು. ಮೊಸರೇ ತುಪ್ಪವಲ್ಲ. ಅಂದರೆ ಶ್ರವಣ ಮನನದಿಂದಲೇ ಶುದ್ಧಸತ್ವಪ್ರಧಾನವಾಯೆ (ಅಹಂ ಜ್ಞಾನ)ಯು ಬೇರ್ಪಡುವುದಿಲ್ಲ.

ಅನಂತರ ಮೊಸರನ್ನು ಬೆಣ್ಣೆಬರುವವರೆಗೂ ಕಡೆಯುತ್ತೇವೆ. ಬೆಣ್ಣೆಯನ್ನು ತೆಗೆ ಯಲು ಮೊಸರನ್ನು ಕಡೆಯುವುದೇ ಆಸನ ಪ್ರಾಣಾಯಾಮಗಳ ತತ್ವವಾಗಿರುವುದು. ಮೊಸರನ್ನು ಬೆಣ್ಣೆಬರುವ ಹದಕ್ಕೆ ಸರಿಯಾಗಿ ಕಡೆಯಬೇಕು. ಹದಮೀರಿ ಕಡೆದರೆ ಬೆಣ್ಣೆಯು ಮಜ್ಜಿಗೆಯಂತಾಗುವುದು. ಆದುದರಿಂದ ಬೆಣ್ಣೆಯನ್ನು ಹದಕ್ಕೆ ಸರಿಯಾಗಿ ಕಡೆಯುವಂತೆ ಪ್ರಾಣಾಯಾಮವನ್ನು ನಿಯಮದಿಂದ ಅನುಷ್ಠಾನಮಾಡಬೇಕು.

ಬೆಣ್ಣೆಯನ್ನು ಹದವರಿತು ಕಡೆದನಂತರ ಬೆಣ್ಣೆಯ ತುಂತುರುಗಳು ಮಜ್ಜಿಗೆಯ ಮೇಲೆ ನಿಂತಿರುತ್ತವಷ್ಟೆ! ಈ ತುಂತುರುಗಳನ್ನೆಲ್ಲಾ ಒಟ್ಟಿಗೆ ಸೇರಿಸಿಕೊಳ್ಳುವ ಕಾರ್ಯವೇ ಪ್ರತ್ಯಾಹಾರದ ತತ್ವವಾಗಿರುವುದು. ಪ್ರತ್ಯಾಹಾರವೆಂದರೆ ಇಂದ್ರಿಯಗಳ ಕಡೆಗೆ ಹರಿದು ಹೋಗಿ ಅನೇಕ ವಿಷಯಾಕಾರವಾಗಿ ಚದರಿದ್ದ ಬುದ್ಧಿವೃತ್ತಿಯನ್ನು ಒಂದುಕಡೆಗೆ ಸೇರಿಸಿ ಕೊಳ್ಳುವುದೇ ಪ್ರತ್ಯಾಹಾರದ ಸ್ವರೂಪವಾಗಿರುವುದು. ಅಂದರೆ ಚದರಿರುವುದನ್ನು ಒಂದು ಕಡೆಗೆ ಗುಂಪಾಗಿ ಸೇರಿಸುವುದೇ ಪ್ರತ್ಯಾಹಾರ. ಆದುದರಿಂದ ಬೆಣ್ಣೆಯ ತುಂತುರುಗಳನ್ನು ಒಂದುಕಡೆಗೆ ಸೇರಿಸಿಕೊಳ್ಳುವುದರ ತತ್ವವೇ ಪ್ರತ್ಯಾಹಾರದ ಸ್ವರೂಪ.

ಬೆಣ್ಣೆಯ ತುಂತುರುಗಳನ್ನೆಲ್ಲಾ ಒಂದುಕಡೆಗೆ ಸೇರಿಸಿ ಅನಂತರ ಅದನ್ನು ಉಂಡೆಯಂತೆ ಮಾಡುತ್ತೇವೆ. ಉಂಡೆಯಂತೆ ಮಾಡುವುದರ ತತ್ವವೇ ಧ್ಯಾನದ ಸ್ವರೂಪವಾಗಿರುವುದು. ಧ್ಯೇಯಾಕಾರವಾದ ವಸ್ತುವನ್ನು ಧಾರಣೆಮಾಡಿಕೊಳ್ಳದೆಯೂ ಇಂದ್ರಿಯಗಳಕಡೆಗೆ ವಿಷಯಾಕಾರವಾಗಲೀ ಬಿಡದೆಯೂ, ತಟಸ್ಥವಾಗಿರುವ ಸ್ವಭಾವವೇ ಧ್ಯಾನವೆನಿಸಿಕೊಳ್ಳುವುದು. ಇದರಂತೆ ಕಾಯಿಸದೆಯೂ ಮಜ್ಜಿಗೆಯೊಡನಿದ್ದರೂ ಬೆರೆಯದಂತೆಯೂ ಇರುವ ಬೆಣ್ಣೆ ಉಂಡೆಯ ಸ್ವರೂಪವೇ ಧ್ಯಾನದ ಸ್ವರೂಪ. ಹಾಲಿನಲ್ಲಿ ಅಭೇದದಂತೆ ಇದ್ದ ತುಪ್ಪವು ಬೆಣ್ಣೆಯ ಸ್ವರೂಪಕ್ಕೆ ಬಂದಮೇಲೆ ಹಾಲಿನಲ್ಲಿಡಲಿ, ಮಜ್ಜಿಗೆಯಲ್ಲಿಡಲಿ, ಅಥವಾ ನೀರಿನಲ್ಲಿಡಲಿ ಬೆರೆಯುವುದಿಲ್ಲ. ಇದರಂತೆ ಪ್ರತ್ಯಾಹಾರಮಾಡಿಕೊಂಡು ಧ್ಯಾನಸ್ವರೂಪಕ್ಕೆ ಬಂದರೆ ಹೊರಗಿನ ವಿಷಯಗಳಲ್ಲಿ ನಿಸ್ಸಂಗತೆ ಬರುವುದು.

ಬೆಣ್ಣೆಯನ್ನು ತುಪ್ಪವನ್ನಾಗಿ ಮಾಡಲು ಅದನ್ನು ಕಾಯಿಸಬೇಕು. ನೇರವಾಗಿ ಬೆಂಕಿಯಲ್ಲಿಯೇ ಇಟ್ಟು ಕಾಯಿಸುವುದಕ್ಕಾಗುವುದಿಲ್ಲ. ಆದುದರಿಂದ ಕಾಯಿಸಬೇಕಾದರೆ ಪಾತ್ರೆಯೊಂದು ಇದ್ದು ಬೆಂಕಿಯ ಶಾಖವು ಪಾತ್ರೆಯ ಮೂಲಕವಾಗಿ ಬೆಣ್ಣೆಗೆ ತಗಲಿ ಅದು ಕಾಯುವುದಷ್ಟೆ! ಪಾತ್ರೆಯ ಮೂಲಕವಾಗಿ ಬರುವ ಬೆಂಕಿಯ ಶಾಖಕ್ಕೂ ಬೆಣ್ಣೆಗೂ ಸಂಬಂಧವಾಗುವ ಸ್ವರೂಪವೇ ಧಾರಣವೆನಿಸಿಕೊಳ್ಳುವುದು. ಇದರಲ್ಲಿ ಅಗ್ನಿತತ್ವವೇ ನಿರ್ಗುಣಬ್ರಹ್ಮ. ಪಾತ್ರೆಯ ಮೂಲಕ ಬರುವ ಶಾಖವೇ ಸಗುಣಬ್ರಹ್ಮ. ಆದುದರಿಂದ ಬೆಣ್ಣೆಯನ್ನು ತುಪ್ಪವನ್ನಾಗಿಮಾಡಲು ಪಾತ್ರೆಯ ಮೂಲಕ ಬರುವ ಶಾಖವು ಹೇಗೆ ಮುಖ್ಯವಾದುದೋ ಹಾಗೆ ಅವಿದ್ಯೆಯನ್ನು ನಿಗ್ರಹಿಸಲು ಸಗುಣಬ್ರಹ್ಮಸ್ವರೂಪನಾದ ಆದಿತ್ಯನ ಅವಲಂಬನವು ಮುಖ್ಯವಾದುದು. ಆದುದರಿಂದ ಪಾತ್ರೆಯ ಮೂಲಕವಾಗಿ ಬರುವ ಶಾಖವು ಬೆಣ್ಣೆಗೆ ಸಂಯೋಗವಾಗುವುದೇ ಧಾರಣೆಯ ತತ್ವ.

ಬೆಣ್ಣೆಯು ಶಾಖದಿಂದ ಕರಗಿ ಕಾಯುತ್ತ ಬರುವುದಷ್ಟೆ! ಹೀಗೆ ಶಾಖದ ಸಂಪರ್ಕದಿಂದ ಬೆಣ್ಣೆಯು ಕಾಯುತ್ತ ಬರುವುದೇ ಸಗುಣಬ್ರಹ್ಮವಾದ ತೇಜಸ್ಸನ್ನು ಧರಿಸಿಕೊಂಡು ನಿಂತುಕೊಳ್ಳುವ ಅಭ್ಯಾಸ ಅಥವಾ ಸವಿಕಲ್ಪಸಮಾಧಿಯ ಅನುಷ್ಠಾನದ ತತ್ವವಾಗಿರುವುದು. ಬೆಣ್ಣೆಗೆ ಶಾಖವು ಅಧಿಕವಾಗುತ್ತಬಂದು ಕುದಿಯುವುದಕ್ಕೆ ಪ್ರಾರಂಭವಾಗುವುದು. ಶಾಖವು ಅಧಿಕವಾಗುತ್ತ ಬರುವುದೇ ಸಮಾಧಿಯ ಅನುಷ್ಠಾನವು ಬಲಿಯುತ್ತಾ ಅಂತರ್ಮುಖದಲ್ಲಿ ಕಾಣುವ ಸಗುಣಬ್ರಹ್ಮನ ತೇಜಸ್ಸೆಂದರೆ—ನಮ್ಮಲ್ಲಿಯೇ ಇರುವ ಸೂರ್ಯೋದಯದ ಬೆಳಕು ಅಧಿಕವಾಗುತ್ತ ಬರುವ ತತ್ವವು.

ಬೆಣ್ಣೆಗೆ ಶಾಖವು ಅಧಿಕವಾಗುತ್ತ ಬಂದು ಕುದಿಯುವುದಲ್ಲದೆ ಉಕ್ಕಿ ಮೇಲಕ್ಕೆ ಬರಲು ಪ್ರಾರಂಭವಾಗುವುದು. ಹೀಗೆ ಕುದಿಯುವ ಮತ್ತು ಮೇಲಕ್ಕೆ ಉಕ್ಕಿಬರುವುದರ

ತತ್ವವೇನೆಂದರೆ—ಕ್ಷೀರದಲ್ಲಿಯೂ ಮೊಸರಿನಲ್ಲಿಯೂ ಶುದ್ಧಸತ್ವಗುಣದ ಸ್ವರೂಪವಾದ ತುಪ್ಪ ಅವಿದ್ಯೆಯುಸ್ವರೂಪವಾದ ನೀರು ಮತ್ತು ಬಿಳುಪಾಗಿರುವ ಇತರ ಪದಾರ್ಥಗಳೂ ಇರುತ್ತವಷ್ಟೆ! ಕಡೆದರೆ ಬೆಣ್ಣೆಯೇ ಪ್ರತ್ಯೇಕವಾಗಿ ಮಜ್ಜಿಗೆಯೇ ಪ್ರತ್ಯೇಕವಾಗುವುದು. ಬೆಣ್ಣೆಯಲ್ಲಿಯೂ ಮೊಸರಿನ ಸ್ವರೂಪ ಕೊಂಚವಿದ್ದೇ ಇರುವುದು. ಬೆಣ್ಣೆಯಲ್ಲಿರುವ ತುಪ್ಪದ ಸ್ವರೂಪವಲ್ಲದ ಮೊಸರಿನ ಸ್ವರೂಪವೇ ಅವಿದ್ಯೆಯಾಗಿರುವುದು. ಅಗ್ನಿಯ ಶಾಖದಿಂದ ಬೆಣ್ಣೆಯು ಯಾವಾಗ ಕರಗುತ್ತ ಬರುವುದೋ ಆಗ ಬೆಣ್ಣೆಯಲ್ಲಿದ್ದ ಮೊಸರಿನ ಸ್ವರೂಪವಾದ ಅವಿದ್ಯಾಶಕ್ತಿಗಳಿಗೆ ವಿನಾಶಕಾಲಬಂದು ಅಧಿಕಾರಿಯನ್ನು ಹೇಗಾದರೂ ಮಾಡಿ ಸಮಾಧಿಯಿಂದ ಹೊರಕ್ಕೆ ಓಡಿಸಬೇಕೆಂದು ತೊಂದರೆಯನ್ನುಕೊಡುವ ತತ್ವವೇ ಕಾಯಿಸುತ್ತಿದ್ದ ಬೆಣ್ಣೆಯು ಕುದಿಯುವ ಮತ್ತು ಉಕ್ಕಿ ಸುರಿಯುವುದರ ತತ್ವವಾಗಿರುವುದು.

ಬೆಣ್ಣೆಯನ್ನು ಕಾಯಿಸುವಾಗ ಜಾಗರೂಕತೆಯಿಂದಿದ್ದುಕೊಂಡು ಉಕ್ಕಿಬರದಂತೆ ತೊಳೆಸುತ್ತಾ ಬರಬೇಕು. ಬೆಣ್ಣೆಯನ್ನು ಕಾಯಿಸುವಾಗ ಜಾಗರೂಕತೆಯಿಂದಿರುವುದೇ ಸಮಾಧಿಯ ಪ್ರಥಮಾಭ್ಯಾಸದಲ್ಲಿ ಜಾಗರೂಕತೆಯಿಂದ ಇರಬೇಕಾದ ತತ್ವ. ಬೆಣ್ಣೆಯು ಉಕ್ಕಿಬರದಂತೆ ತೊಳೆಸುತ್ತ ಇರುವುದೇ ಸಮಾಧಿಯಲ್ಲಿ ಬಹಿರ್ಮುಖವಾಗುವಂತೆ ತೊಂದರೆ ಮಾಡುವ ಅವಿದ್ಯಾಚೈತನ್ಯಗಳನ್ನು ಕಟ್ಟಿಹಾಕಲು ಮುದ್ರೆಗಳನ್ನು ಅಭ್ಯಾಸಮಾಡಿಕೊಂಡು ಸಮಾಧಿಯ ಅಭ್ಯಾಸಮಾಡಬೇಕೆಂಬ ತತ್ವವಾಗಿರುವುದು. ಬೆಣ್ಣೆಯನ್ನು ಕಾಯಿಸುವಾಗ ಹೇಗೆ ಉಕ್ಕಿಬರುವುದೋ ಹಾಗೆ ಹಾಲನ್ನು ಕಾಯಿಸುವಾಗಲೂ ಉಕ್ಕಿಬರುವುದಷ್ಟೆ! ಹಾಲನ್ನು ಕಾಯಿಸುವುದರ ತತ್ವವೇ ಗುರುವಿನಲ್ಲಿ ಆತ್ಮವಿಚಾರಮಾಡುವುದೆಂದು ಮೇಲೆ ಹೇಳಿದೆ. ಹಾಲನ್ನು ಕಾಯಿಸುವಾಗ ಉಕ್ಕಿಬರುವ ಸ್ವಭಾವವೂ ಆತ್ಮವಿಚಾರಮಾಡತಕ್ಕ ಶಿಷ್ಯನಲ್ಲಿ ಮೇಲೆ ಮೇಲೆ ತಲೆದೋರುವ ಅವಿವೇಕಸ್ವರೂಪವಾಗಿರುವುದು. ಉಕ್ಕಿಬರುವ ಹಾಲನ್ನು ತೊಳೆಸುವುದೇ ಗುರುವು ಶಿಷ್ಯನಲ್ಲಿ ತಲೆದೋರತಕ್ಕ ಸಂದೇಹಗಳನ್ನು ನಿವೃತ್ತಿ ಮಾಡುವುದರ ತತ್ವವಾಗಿರುವುದು. ಹಾಲು ಬೆಣ್ಣೆಗಳನ್ನು ಕಾಯಿಸಿದರೆ ಉಕ್ಕಿಬರುವುದೇ ಹೊರತು ಬರೀತುಪ್ಪವನ್ನು ಕಾಯಿಸಿದರೆ ಎಂದಿಗೂ ಉಕ್ಕುವುದಿಲ್ಲ. ಆದುದರಿಂದ ಉಕ್ಕು ಬರಬೇಕಾದರೆ ತುಪ್ಪಸ್ವರೂಪವಲ್ಲದ ಇತರ ಸ್ವರೂಪದ ಪದಾರ್ಥದಿಂದ ಬರುವುದು. ಅಂದರೆ ಅವಿದ್ಯೆಯಿಂದಲೇ ತೊಂದರೆಯೆಂಬ ಭಾವವು.

ಬೆಣ್ಣೆಗೆ ಅಗ್ನಿಯ ಶಾಖವು ಅಧಿಕವಾಗುತ್ತ ಚೆನ್ನಾಗಿ ಕುದಿಯುತ್ತ ಬಂದನಂತರ ಉಕ್ಕಿಬರುವುದು ತಗ್ಗಿ ಶಬ್ದವುಂಟಾಗುವುದಕ್ಕೆ ಪ್ರಾರಂಭವಾಗುವುದು. ಉಕ್ಕುತ್ತಾ ಬರುವುದರ ತಗ್ಗುವಿಕೆಯೇ ಅವಿದ್ಯಾಶಕ್ತಿಗಳು ನಿಗ್ರಹವಾಗುತ್ತ ಬರುವುದರ ತತ್ವವಾಗಿರು ವುದು. ಅಗ್ನಿಯ ಶಾಖವು ಬೆಣ್ಣೆಗೆ ಅತ್ಯಂತ ಅಧಿಕವಾಗುತ್ತ ಬರುವುದರ ತತ್ವವೇ ನಮ್ಮಲ್ಲಿಯೆ ಇರುವ ಆದಿತ್ಯನಸ್ವರೂಪದಲ್ಲಿ ನಾವು ನಿಲ್ಲುವ ತತ್ವವಾಗಿರುವುದು. ಬೆಣ್ಣೆ

ಯನ್ನು ಕಾಯಿಸುವಾಗ ಶಬ್ದ ಉಂಟಾಗುವುದೇ ನಮ್ಮಲ್ಲಿ ಒಳಗಡೆ ಕೇಳುವ "ಓಂ" ಕಾರ ನಾದದ ತತ್ವವಾಗಿರುವುದು. ಆದುದರಿಂದ ತೇಜೋನಾದಧ್ಯಾನವಿದ್ಯೆಯ ಸೋಪಾನವೇ ಬೆಣ್ಣೆಯನ್ನು ಕಾಯಿಸುತ್ತಿರುವಾಗ ಕೇಳಿಬರುವ ಶಬ್ದದ ತತ್ವವಾಗಿರುವುದು.

ಬೆಣ್ಣೆಯನ್ನು ಕಾಯಿಸುವಾಗ ಉಂಟಾಗುತ್ತಿದ್ದ ಶಬ್ದವು ಅಡಗುವ ಸ್ವರೂಪವೇ ಹದವಾಗಿ ತುಪ್ಪವುಂಟಾಗುವಿಕೆಯ ಸ್ವರೂಪವು. ಬೆಣ್ಣೆಯನ್ನು ಕಾಯಿಸುತ್ತಿದ್ದಾಗ ಕೇಳಿ ಬರುವ ಶಬ್ದವು ಅಡಗಿ ಹದವಾಗಿ ತುಪ್ಪವುಂಟಾಗುವಿಕೆಯೇ "ಓಂ" ಕಾರನಾದವಡಗಿ ಕಳಾ ಅಥವಾ ಶುದ್ಧಸತ್ವಗುಣದ ಸೋಪಾನ (ಅಹಂಜ್ಞಾನ) ವೇ ಶೇಷವಾಗಿರುವ ಉನ್ಮನೀ ಸ್ಥಿತಿಯ ಉದಯವು. ಬೆಣ್ಣೆಯು ಚೆನ್ನಾಗಿಕಾದು ಶಬ್ದವಡಗುವಕಾಲದಲ್ಲಿ ಒಳ್ಳೇ ಸುವಾಸನೆಯು ಪ್ರಾರಂಭವಾಗುವುದು. ಈ ತತ್ವವೇ ಸಮಾಧಿಯಲ್ಲಿ ಉಂಟಾಗುವ ಆನಂದಾವಿರ್ಭಾವದ ತತ್ವವು.

ಬೆಣ್ಣೆಯು ಚೆನ್ನಾಗಿಕಾದು ಶಬ್ದವಡಗಿ ಹದವಾದ ತುಪ್ಪವಾದರೂ ತುಪ್ಪದ ಜೊತೆಯಲ್ಲಿ ಗಷ್ಟು ಇರುವುದು. ಈ ಗಷ್ಟನ್ನೂ ತುಪ್ಪವನ್ನೂ ಬೇರ್ಪಡಿಸಲು ಅತ್ಯಂತ ಬಿಸಿಯಾಗಿರುವಾಗ ಆಗುವುದಿಲ್ಲ. ಆದುದರಿಂದ ಉಷ್ಣಾಂಶವು ತಗ್ಗಲು ಬೆಣ್ಣೆಯನ್ನು ಕಾಯಿಸುತ್ತಿದ್ದ ಪಾತ್ರೆಯನ್ನು ಅಗ್ನಿಯ ಸಂಪರ್ಕದಿಂದ ತೆಗೆದು ಹೊರಗೆ ಇಡುತ್ತೇವೆ. ಹಾಗೆ ಇಡುವುದೇ ಸಮಾಧಿಯ ಒಳಗಿದ್ದ ಪ್ರತಿಬಿಂಬಸ್ವರೂಪನಾದ ಆದಿತ್ಯನ ಪ್ರಕಾಶವು ಕುಗ್ಗುತ್ತಾ ಬರುವ ತತ್ವವಾಗಿರುವುದು.

ಗಷ್ಟುಸಹಿತವಾದ ಅತ್ಯಂತ ಬಿಸಿಯಾಗಿರುವ ತುಪ್ಪವು ಆರುತ್ತ ಆರುತ್ತ ಘಮ ಘಮಿಸುವ ವಾಸನೆಯುಂಟಾಗುವಿಕೆಯೇ ಸಮಾಧಿಯಲ್ಲಿ ಆನಂದಾಂಶದ ಅಧಿಕವೆಂದರೆ ಉನ್ಮನೀಭಾವವು ತಲೆದೋರುವುದಾಗಿದೆ.

ಗಷ್ಟುಸಹಿತವಾದ ತುಪ್ಪವನ್ನು ಸೋಸುವುದರಿಂದ ತುಪ್ಪನೇ ಬೇರೆಯಾಗಿ ಗಷ್ಟೇ ಬೇರೆಯಾಗುವುದು. ತುಪ್ಪದ ಜೊತೆಯಿಲ್ಲಿರುವ ಗಷ್ಟೇ ಮೊಸರಿನಲ್ಲಿದ್ದ ತುಪ್ಪದ ಸ್ವರೂಪ ವಲ್ಲದ ಜಡಪದಾರ್ಥದ ಸಾರ. ತುಪ್ಪವಲ್ಲದ ಈ ಪದಾರ್ಥವು ಅಗ್ನಿಯ ಶಾಖದ ಸಂಪರ್ಕ ದಿಂದ ಬೆಂದು ಗಷ್ಟಿನ ರೂಪಕ್ಕೆ ಬಂದು ನಿಂತಿರುವುದು. ಅಂದರೆ ತುಪ್ಪವೇ ಶುದ್ಧಸತ್ವ ಪ್ರಧಾನಮಾಯಾಸ್ವರೂಪವಾಗಿಯೂ, ತುಪ್ಪವಲ್ಲದ ಪದಾರ್ಥವೇ ಮಲಿನಮಾಯೆಯೆಂದರೆ ವಿಕೃತಿಯ ತತ್ವವಾಗಿಯೂ ಇರುವುದು. ತುಪ್ಪವಲ್ಲದ ಮೊಸರಿನ ಪದಾರ್ಥವು ಅಗ್ನಿಯ ಶಾಖದಿಂದ ಹುರಿದಂತಾಗಿ ಗಷ್ಟೆಂಬ ಅರೂಪವಾಗುವಿಕೆಯೇ ವಿಕೃತಿಯು ಹುರಿದ ಬೀಜ ದಂತಾಗಿ ನಿಸ್ಸಾರವಾಗುವಿಕೆಯಾಗಿರುವುದು. ಈ ಗಷ್ಟು ಕಪಿಸ್ವರೂಪವಾಗಿ ಯಾವ ಕೆಲ ಸಕ್ಕೂ ಒದಗದೆ ಇರುವಂತೆ ವಿಕೃತಿಯು ಹುರಿದಂತಾಗಿ ನಿರ್ವೀರ್ಯವಾಗುವುದು.

ಗಸ್ಟಿನಿಂದ ತುಪ್ಪವು ಬೇರ್ಪಟ್ಟು ಪ್ರತ್ಯೇಕವಾಗುವಂತೆ ಅಹಂಜ್ಞಾನವೇ ಶೇಷವಾಗಿರುವ ಶುದ್ಧ ಸತ್ವಗುಣದ ಸೋಪಾನವು ಸವಿಕಲ್ಪಸಮಾಧಿಯ ಅಂತ್ಯದಲ್ಲುಂಟಾಗುವುದು. ಪ್ರತ್ಯೇಕಿಸಲ್ಪಟ್ಟ ತುಪ್ಪವು ಘಮಘಮಿಸುತ್ತಿರುವ ವಾಸನೆಯೊಡಗೂಡಿರುವುದೇ ಸವಿಕಲ್ಪಸಮಾಧಿಯ ಅಂತ್ಯದಲ್ಲಿರುವ ಶುದ್ಧಸತ್ವಗುಣದ ಸೋಪಾನವು ಆನಂದಮಯವಾಗಿರುವುದರಿಂದ ಉನ್ಮನೀಸೋಪಾನವೆನಿಸಿಕೊಳ್ಳುವುದು.

ಹೀಗೆ ಬೇರ್ಪಡಿಸಲ್ಪಟ್ಟ ಘಮಘಮಿಸುತ್ತಿರುವ ತುಪ್ಪವು ಅಗ್ನಿಯೊಳಗೆ ಹೋಮ ಮಾಡಲು ಅರ್ಹವಾದ ಸ್ಥಿತಿಯನ್ನು ಪಡೆಯುವುದು. ಈ ತುಪ್ಪವನ್ನು ಅಗ್ನಿಯೊಳಗೆ ಹೋಮಮಾಡುವುದೇಕೆಂದರೆ—ಹಾಲಿನಸ್ವರೂಪದ ಸಂಪರ್ಕದಲ್ಲಿದ್ದು ಅಶುಚಿಯಾಗಿರುವುದರಿಂದ ಅಗ್ನಿಯಲ್ಲಿ ಹೋಮಮಾಡಬೇಕು. ಹಾಲಿನಲ್ಲಿ ತುಪ್ಪದಸ್ವರೂಪವು ಅಂಟಿಕೊಳ್ಳದೇ ಇದ್ದರೂ ಹಾಲಿನ ಜೊತೆಯಲ್ಲಿದ್ದುದರಿಂದ ಸಂಪರ್ಕದೋಷಕ್ಕಾಗಿ ಅಗ್ನಿಯಲ್ಲಿ ಹೋಮಮಾಡಬೇಕು. ಇದರಂತೆ ತುಪ್ಪದಸ್ವರೂಪದಲ್ಲಿರುವ ಶುದ್ಧಸತ್ವಪ್ರಧಾನಮಾಯೆ (ಅಹಂಜ್ಞಾನ) ಯು ಪ್ರಪಂಚವ್ಯಾಪಾರಕ್ಕೆ ಅಂಟದೆ ಇದ್ದರೂ ಪ್ರಪಂಚವ್ಯಾಪಾರದ ಸಂಪರ್ಕದಲ್ಲಿದ್ದುದರಿಂದ ಜ್ಞಾನಾಗ್ನಿಸ್ವರೂಪವಾದ ಪರಬ್ರಹ್ಮನಲ್ಲಿ ಲೀನವಾಗಲು ತಿರಸ್ಕರಿಸಬೇಕು. ಇದೇ ಮಾಯೋಪಾಧಿಯನ್ನು ತಿರಸ್ಕರಿಸುವುದರ ತತ್ವವಾಗಿರುವುದು.

ಆಜ್ಯವನ್ನು ಮಂತ್ರದಿಂದ ಶುದ್ಧಿಮಾಡದೆ ಅಗ್ನಿಯಲ್ಲಿ ಹಾಕುವುದು ಹೋಮವೆನಿಸಿಕೊಳ್ಳುವುದಿಲ್ಲ. ಆದುದರಿಂದ ಆಜ್ಯಪಾತ್ರೆಯನ್ನೂ, ಆಜ್ಯವನ್ನೂ ಮಂತ್ರದಿಂದ ಶುದ್ಧಿಮಾಡುವುದೇ ಅಹಂಬ್ರಹ್ಮಾಸ್ಮಿ ಎಂಬ ಮಂತ್ರದಿಂದ ಅಹಂ ಎನ್ನುವುದನ್ನು ಮತ್ತು ಅಹಂ ಇರುವ ಬುದ್ಧಿವೃತ್ತಿಯನ್ನು ಚೆನ್ನಾಗಿ ಶುದ್ಧಿಮಾಡಬೇಕಾದ ತತ್ವ.

ಇಂತಹ ಮಂತ್ರಪೂತವಾದ ಆಜ್ಯವು ಸಂತತವಾದ ಧಾರೆಯಂತೆ ಅಗ್ನಿಯಲ್ಲಿ "ಸ್ವಾಹಾ"ಎಂಬ ಮಂತ್ರದಿಂದ ಚೆನ್ನಾಗಿ ಹೋಮಮಾಡಲ್ಪಡುವುದು. "ಬ್ರಹ್ಮಾರ್ಪಣಂ ಬ್ರಹ್ಮಹವಿಃ" ಎಂಬ ಶ್ರುತಿವಚನಾನುಸಾರವಾಗಿ ಜ್ಞಾನಾಗ್ನಿಯು ಅಂತರ್ಗತವಾಗಿ ಪರಬ್ರಹ್ಮನಿರುವನು. ಆದುದರಿಂದ ಜ್ಞಾನಾಗ್ನಿಯಾದ ಚಿಜ್ಜ್ಯೋತಿಯೆ ಪರಬ್ರಹ್ಮನು. ಅಗ್ನಿಯಲ್ಲಿ ಸಂತತವಾಗಿ ಬೀಳುವ ಆಜ್ಯಧಾರೆಯು ಅಗ್ನಿಜ್ವಾಲೆಯೊಳಗೆ ಪ್ರವೇಶಿಸಿದ ಕೂಡಲೆ ಹೇಗೆ ಅಗ್ನಿಜ್ವಾಲೆಯ ಸ್ವರೂಪವಾಗುವುದೋ ಅದರಂತೆ ಶುದ್ಧಸತ್ವಪ್ರಧಾನಮಾಯೆಯು (ಅಹಂ ಜ್ಞಾನವು) ಏಕಾಕಾರವಾಗಿ ಪರಮಾತ್ಮನಲ್ಲಿ ಲೀನವಾಗಿ ಉಪ್ಪು ನೀರಿನಲ್ಲಿ ಕರಗಿದಂತೆ ಆತ್ಮಸ್ವರೂಪವಾಗುವುದು. ಯಾಗಾದಿಗಳಲ್ಲಾಗಲೀ, ಚಂಡೀಹೋಮದಲ್ಲಾಗಲೀ ಪೂರ್ಣಾಹುತಿಯ ಕಾಲದಲ್ಲಿ ಯಜ್ಞೇಶ್ವರನಲ್ಲಿ ಸಂತತವಾದ ಆಜ್ಯಧಾರೆಯಿಂದ ಹೋಮಮಾಡುವುದಲ್ಲದೆ ಸಕಲವಾದ ಫಲಗಳನ್ನೂ, ನವರತ್ನಗಳನ್ನೂ ಹೋಮಮಾಡುತ್ತಾರಷ್ಟೆ! ಇದರಂತೆ ಅಹಂ ಜ್ಞಾನವಾದ ಶುದ್ಧಸತ್ವಪ್ರಧಾನಮಾಯೆಯು ಆತ್ಮನಲ್ಲಿ ಏಕಾಕಾರವಾಗಿ

ಲೀನವಾಗುವ ಕಾಲದಲ್ಲಿ ಗುಣಸಾಮ್ಯಾವಸ್ಥೆಗೆ ಬಂದು ದೇಹವ್ಯಾಪಾರದ ಸಕಲ ತತ್ವಗಳೊಡನೆ ಆತ್ಮನಲ್ಲಿ ಲೀನವಾಗುವುದು. ಇದೇ ಸೀತಾದೇವಿಯು ಸಂತತವಾದ ಆಜ್ಯಧಾರೆಯಂತೆ ಅಗ್ನಿಪ್ರವೇಶಮಾಡಿದ ತತ್ವ. ಈ ಪೂರ್ಣಾಹುತಿಯ ತತ್ವಕ್ಕೆ ರಾಮಾಯಣದಲ್ಲಿ,

ಸೀತಾಂ ಕೃತ್ಸ್ನಾಸ್ತ್ರಯೋ ಲೋಕಾಃ ಪುಣ್ಯಾ ಮಾಜ್ಯಾಹುತೀ ಮಿವ |
ಪತಂತೀಂ ಸಂಸ್ಕೃತಾಂ ಮಂತ್ರೈ ರ್ವಸೋರ್ಧಾರಾಮಿವಾ ಧ್ವರೆ ||

ಎಂಬದಾಗಿ ಹೇಳಿದೆ. ಅಲ್ಲದೆ ಇದೇ ತತ್ವಕ್ಕೆ,

ಪೂರ್ಣಾಹುತಿ ಮುತ್ತಮಾಂ ಜುಹೋತಿ ಸರ್ವಂ ವೈ ಪೂರ್ಣಾಹುತಿಃ
ಸರ್ವಮೇವಾಪ್ನೋತಿ ಅಥೋ ಇಯಂ ವೈ ಪೂರ್ಣಾಹುತಿಃ ಅಸ್ಯಾಮೇವ
ಪ್ರತಿತಿಷ್ಠತಿ ವಸೋರ್ಧಾರಾಂ ಜುಹೋತಿ ವಸೋ ರ್ಮೇ ಧಾರಾ
ಸದಿತಿವ ಏಷಾ ಹೂಯತೇಘೃತಸ್ಯವಾ ಏನಮೇಷಾಧಾರಮುಷ್ಮಿಲ್ಲೋಕೆ
ಪಿನ್ವಮಾನೋ ಪತಿಷ್ಠತ ಆಜ್ಯೇನ ಜುಹೋತಿ ತೇಜೋವಾ ಆಜ್ಯಂ
ತೇಜೋವಸೋರ್ಧಾರಾ ತೇಜಸೈವಾಸ್ಮೈ ತೇಜೋವರುಂಧೇ |

ಎಂಬ ತೈತ್ತಿರೀಯಬ್ರಾಹ್ಮಣದ ಪ್ರಮಾಣವೂ ಅನ್ವಯವಾಗುವುದು.

ಮೇಲೆ ವಿವರಿಸುವ ಕ್ಷೀರದಿಂದ ತುಪ್ಪವನ್ನು ತೆಗೆಯುವ ಮತ್ತು ಅಗ್ನಿಯಲ್ಲಿ ಹೋಮ ಮಾಡುವ ತತ್ವಗಳನ್ನು ಇನ್ನೂ ಲಂಬಿಸಿ ವಿವರಿಸಬಹುದು. ಈ ಉದಾಹರಣೆಯ ತತ್ವದಂತೆಯೂ ಪ್ರಥಮದಿಂದಲೂ ವಿವರಿಸಿಕೊಂಡು ಬಂದಿರುವ ತತ್ವದಂತೆಯೂ ಸೀತಾದೇವಿಯು ಮಂತ್ರಪೂತವಾದ ಸಂತತವಾದ ಆಜ್ಯಧಾರೆಯಂತೆ ಅಗ್ನಿಯೊಳಗೆ ಪ್ರವೇಶಿಸಿದಳೆಂದರೆ—ಬುದ್ಧಿವೃತ್ತಿಯ ಅಗ್ರದಲ್ಲಿರುವ ಅಖಂಡವಾದ ಮತ್ತು ನಿರ್ಮಲವಾದ ಅಹಂಜ್ಞಾನವು ಪರಬ್ರಹ್ಮನಲ್ಲಿ ಲೀನವಾಗಿ ತತ್ಸ್ವರೂಪವಾಗುವುದೆಂಬ ತತ್ವವಾಗಿರುವುದು.

## ೩೮ನೆಯ ಪ್ರಕರಣ.

**ಸೀತಾದೇವಿಯು ಅಗ್ನಿಪ್ರವೇಶ ಮಾಡಿದ ಮೇಲೆ ಶ್ರೀರಾಮನ ಸ್ಥಿತಿ. ಬ್ರಹ್ಮಾದಿಗಳು ಬಂದು ಶ್ರೀರಾಮನನ್ನು ನೀನೇ ಪರಬ್ರಹ್ಮನೆಂದು ಸ್ತುತಿಸಿದುದು.**

**ನಿರ್ವಿಕಲ್ಪಸಮಾಧಿ. ಓಂಕಾರ ಸ್ವರೂಪ, ಪ್ರಕೃತಿಲಯ, ರಾಜಯೋಗ ಮತ್ತು ಅದ್ವೈತಸಿದ್ಧಿಗಳಿಂದ ಪ್ರತಿಪಾದಿಸಲ್ಪಡುವ ಜೀವ ಬ್ರಹ್ಮ ಸಾಕ್ಷಾತ್ಕಾರದ ಸೋಪಾನ.**

**ರಾ||** ಸೀತಾದೇವಿಯು ಅಗ್ನಿಪ್ರವೇಶಮಾಡಿದನಂತರ ಚತುರ್ಮುಖಬ್ರಹ್ಮ, ಶಿವ, ಇಂದ್ರ ಮುಂತಾದವರೆಲ್ಲರೂ ಬಂದು ಶ್ರೀರಾಮನನ್ನು ಸ್ತೋತ್ರಮಾಡುತ್ತ ನಿಂತರು. ಚತುರ್ಮುಖ

ಬ್ರಹ್ಮನು "ಎಲೈ ಶ್ರೀರಾಮನೆ! ಅಗ್ನಿಯಲ್ಲಿ ಸೀತಾದೇವಿಯು ಪ್ರವೇಶಮಾಡುತ್ತಿದ್ದರೂ ಏನೂ ತಿಳಿಯದವನಂತೆ ಹೀಗೇಕೆ ಉಪೇಕ್ಷಿಸುತ್ತಿರುವೆ! ನೀನು ನಿನ್ನನ್ನು ಏತಕ್ಕೆ ತಿಳಿದು ಕೊಳ್ಳಲಿಲ್ಲ! ಪ್ರಥಮ ಸೃಷ್ಟಿಕರ್ತನಾಗಿಯೂ, ಸ್ವತಂತ್ರನಾಗಿಯೂ, ದುಃಖಪರಿಹಾರಕನಾದ ಪರಮೇಶ್ವರನಾಗಿಯೂ, ಜಗತ್ಸೃಷ್ಟಿಯಾದಿಯಲ್ಲಿಯೂ ಪ್ರಳಯದಲ್ಲಿಯೂ ಇರುವವ ನಾಗಿಯೂ, ಸರ್ವಾಂತರ್ಯಾಮಿಯಾಗಿಯೂ, ಅದ್ವಿತೀಯನಾಗಿಯೂ ಇರುವ ನೀನು ಕೇವಲ ಪ್ರಾಕೃತ ಮನುಷ್ಯನಂತೆ ಸೀತೆಯು ಅಗ್ನಿಪ್ರವೇಶಮಾಡುವ ಕಾಲದಲ್ಲಿ ಉಪೇಕ್ಷಿಸುವುದೇ!" ಎಂದು ಹೇಳಿದನು.

**ತತ್ವ||** ಸೀತಾಗ್ನಿಪ್ರವೇಶವಾದ ಮೇಲೆ ಚತುರ್ಮುಖಬ್ರಹ್ಮ ಶಿವ, ಇಂದ್ರ ಮೊದಲಾದ ವರೆಲ್ಲರೂ ಬಂದು ಶ್ರೀರಾಮನನ್ನು ಸ್ತೋತ್ರಮಾಡುತ್ತ ನಿಂತುಕೊಂಡರೆಂದರೆ—ಸೀತಾಗ್ನಿ ಪ್ರವೇಶವಾದನಂತರ ಇರುವ ಸ್ಥಿತಿಯೇ ಸರ್ವೋಪಾಧಿಗಳೂ ಪರಬ್ರಹ್ಮನಲ್ಲಿ ಲೀನವಾಗಿರುವ ಸ್ಥಿತಿಯಾಗಿರುವುದು. ಇಂತಹ ನಿರ್ಗುಣಬ್ರಹ್ಮದ ಸ್ಥಿತಿಯೆ ಸಗುಣರೂಪದಿಂದ ಸೃಷ್ಟಿ, ಸ್ಥಿತಿ, ಲಯ ಕರ್ತರಾದ ಚತುರ್ಮುಖಬ್ರಹ್ಮ, ವಿಷ್ಣು, ಶಿವರೆಂಬ ನಾಮದಿಂದ ಇರುವ ತ್ರಿಮೂರ್ತಿಗಳಿಗೂ ಪೂಜಾರ್ಹವಾಗಿಯೂ, ಸ್ತೋತ್ರಾರ್ಹವಾಗಿಯೂ, ಇರುವ ಪರಮ ಪದಸ್ಥಾನದ ಸೂಚನೆಯ ತತ್ವವೇ ಬ್ರಹ್ಮಾದಿಗಳು ಬಂದು ಶ್ರೀರಾಮನನ್ನು ಸ್ತೋತ್ರ ಮಾಡುತ್ತ ನಿಂತುಕೊಂಡ ತತ್ವವಾಗಿರುವುದು.

ಚತುರ್ಮುಖಬ್ರಹ್ಮನು ಶ್ರೀರಾಮನೊಡನೆ ಹೇಳಿದ ಅದ್ವಿತೀಯನೂ, ಸರ್ವಾಂತರ್ಯಾ ಮಿಯೂ, ನಿರತಿಶಯಾನಂದಸ್ವರೂಪನೂ, ಸೃಷ್ಟಿಸ್ಥಿತಿಲಯಗಳಲ್ಲಿಯೂ ಏಕಪ್ರಕಾರವಾಗಿ ರುವ ಪರಬ್ರಹ್ಮಸ್ವರೂಪನೂ ನೀನೇ ಎಂಬ ಸ್ತುತಿಯು ಜೀವಚೈತನ್ಯವೇ ಪರಬ್ರಹ್ಮಚೈತನ್ಯ ವೆಂಬ ತತ್ವವನ್ನು ಹೊರಪಡಿಸುತ್ತದೆ.

**ರಾ||** ಚತುರ್ಮುಖಬ್ರಹ್ಮನು ಶ್ರೀರಾಮನೊಡನೆ ನೀನೇ ಸರ್ವಾಂತರ್ಯಾಮಿ ಯಾಗಿಯೂ, ಅದ್ವಿತೀಯನಾಗಿಯೂ ಇರುವ ಪರಮಾತ್ಮನೆಂಬದಾಗಿ ಹೇಳಲು, ಶ್ರೀರಾಮನು "ನನ್ನನ್ನು ಮನುಷ್ಯನನ್ನಾಗಿಯೂ, ರಾಮನೆಂಬ ಹೆಸರುಳ್ಳ ದಶರಥರಾಯನ ಮಗನನ್ನಾ ಗಿಯೂ, ತಿಳಿದಿರುವೆನು. ನಾನು ಯಾವನೋ, ಯಾವ ಪ್ರಯೋಜನಕ್ಕಾಗಿ ಹುಟ್ಟಿದೆನೋ ಮಹಾತ್ಮರಾದ ನೀವು ಹೇಳಿ" ಎಂಬದಾಗಿ ಕೇಳಿದನು.

**ತತ್ವ||** ಜೀವ ಪರಬ್ರಹ್ಮರ ಅಭೇದಪ್ರತಿಪಾದನೆಯೇ ಚತುರ್ಮುಖಬ್ರಹ್ಮನು ಶ್ರೀರಾಮ ನೊಡನೆ ಹೇಳಿದ ತತ್ವವಾಗಿರುವುದು. ಶ್ರೀರಾಮನು |ನಾನು ದಶರಥಪುತ್ರನಾದ ರಾಮ ನೆಂಬ ಮನುಷ್ಯನೆಂದೇ ತಿಳಿದಿರುವೆನೆಂದು ಹೇಳಿದುದರ ತತ್ವವೇನೆಂದರೆ—ಮನುಷ್ಯರು ದಶೇಂದ್ರಿಯಗೋಳಕಗಳುಳ್ಳ ಪ್ರಕೃತಿಸಂಬಂಧವಾದ ದೇಹದಲ್ಲಿರುವ ಜೀವರೇ ತಾವೆಂದೂ ತಮಗೂ ಪರಮಾತ್ಮನಿಗೂ ಭೇದವಿದೆಯೆಂದೂ ತಿಳಿದುಕೊಂಡಿರುವರಷ್ಟೆ! ಹೀಗೆ ತಿಳಿದು

ಕೊಂಡಿರುವ ಅಜ್ಞರ ಸಂಶಯನಿವಾರಣೆಗೋಸ್ಕರ ಜೀವಬ್ರಹ್ಮರ ಅಭೇದವನ್ನು ದೃಢೀಕರಿಸುವ ತತ್ವವೇ ಶ್ರೀರಾಮನು ಚತುರ್ಮುಖಬ್ರಹ್ಮನನ್ನು ಕೇಳಿದ ಪ್ರಶ್ನೆಯ ತಾತ್ಪರ್ಯ.

**ರಾ||** ಶ್ರೀರಾಮನ ಪ್ರಶ್ನೆಗೆ ಉತ್ತರವಾಗಿ ಚತುರ್ಮುಖಬ್ರಹ್ಮನು "ಎಲೈ, ಶ್ರೀರಾಮನೆ! ನನ್ನ ಸತ್ಯವಾದ ಮಾತುಗಳನ್ನು ಕೇಳುವವನಾಗು. ನೀನು ಪ್ರಳಯವೇ ಆಶ್ರಯವಾಗುಳ್ಳ ಅಥವಾ ನರಸಂಬಂಧವಾದ ಜ್ಞಾನಕ್ಕೆ ಆಶ್ರಯಭೂತನಾದ ನಾರಾಯಣನು. ನೀನೇ ನಾಶರಹಿತನು. ನಿರ್ಗುಣಬ್ರಹ್ಮಸ್ವರೂಪನೂ, ಓಂಕಾರಸ್ವರೂಪನೂ, ಸದಾಶಿವಸ್ವರೂಪನೂ, ನಿರ್ವಿಕಲ್ಪನೂ, ಸಗುಣನೂ ನೀನೆ. ಜಗತ್ತಿಗೆ ಉತ್ಪತ್ತಿ ಸ್ಥಿತಿಲಯಾಧಿಷ್ಠಾನಭೂತನೂ ನೀನೇ. ನೀನೇ ಸರ್ವವೂ. ನೀನು ಯಾವನೆಂಬುದನ್ನು ಯಾರೂ ತಿಳಿಯಲಾರರು. ಸೀತಾದೇವಿಯೇ ಚಿಚ್ಛಕ್ತಿಸ್ವರೂಪಳು. ರಾವಣನ ಸಂಹಾರಕ್ಕಾಗಿ ಮನುಷ್ಯಸಂಬಂಧವಾದ ದೇಹವನ್ನು ಪ್ರವೇಶಮಾಡಿದವನಾದೆ. ಧರ್ಮಿಷ್ಠರೊಳಗೆ ಶ್ರೇಷ್ಠನಾದವನೇ! ನಿನ್ನಿಂದ ರಾವಣನು ಸಂಹರಿಸಲ್ಪಟ್ಟನು. ನಮ್ಮ ಕಾರ್ಯವು ನೆರವೇರಿತು. ಅತ್ಯಂತ ಸಂತೋಷದಿಂದ ನೀನು ಇನ್ನು ಸ್ವರ್ಗಲೋಕವನ್ನು ಆಶ್ರಯಿಸು" ಎಂಬದಾಗಿ ಹೇಳಿದನು.

**ತತ್ವ||** ಚತುರ್ಮುಖಬ್ರಹ್ಮನು ಶ್ರೀರಾಮನಿಗೆ ಹೇಳಿದುದರ ತತ್ವವೇನೆಂದರೆ, ಜೀವನೇ ಪರಬ್ರಹ್ಮ. ಜೀವಬ್ರಹ್ಮರಿಗೆ ಅಭೇದವು. ಇದು ಸತ್ಯವಾದ ಮಾತೆಂಬ ತತ್ವವೂ ಪರಮಾತ್ಮನೇ ನಿರ್ಗುಣನಾಗಿಯೂ, ಸಗುಣನಾಗಿಯೂ, ಸ್ವಯಂಪ್ರಕಾಶನಾಗಿಯೂ, ಪಂಚಕೋಶಗಳೊಳಗೆ ಗುಹೆಯೆನಿಸುವ ಪೃಥ್ವಿ, ಅಪ್ಪು, ತೇಜಸ್ಸು, ವಾಯು ಆಕಾಶ ಮತ್ತು ಅಂತಃಕರಣತತ್ವಗಳನ್ನು ಅತಿಕ್ರಮಿಸಿ ಬ್ರಹ್ಮರಂಧ್ರ ಮತ್ತು ಬುದ್ಧಿಯಲ್ಲಿ ವಾಸಿಸುವವನಾಗಿಯೂ, ಸಕಲ ಚರಾಚರ ಜಗತ್ಸ್ವರೂಪನಾಗಿಯೂ, ಇಂದ್ರಿಯ ಗ್ರಾಹ್ಯವಲ್ಲದವನಾಗಿಯೂ ಇರುವನೆಂಬ ತತ್ವವಾಗಿರುವುದು.

ಅಲ್ಲದೆ ರಾವಣನ ಸಂಹಾರಕ್ಕಾಗಿ ಮನುಷ್ಯಸಂಬಂಧವಾದ ದೇಹವನ್ನು ಪ್ರವೇಶಮಾಡಿದವನಾದೆ ಎಂದು ಹೇಳಿದುದರ ತತ್ವವೇನೆಂದರೆ—ಪರಮಾತ್ಮನು ಜೀವಸ್ವರೂಪದಿಂದ ಮನುಷ್ಯರ ದೇಹಗಳಲ್ಲಿರುವುದರ ತಾತ್ಪರ್ಯವೇನೆಂದರೆ ರಾವಣನ ತತ್ವವಾದ ಅವಿದ್ಯೆಯನ್ನು ನಿಗ್ರಹಿಸುವ ಮುಖ್ಯಕರ್ತವ್ಯಕ್ಕೋಸ್ಕರವೆಂಬ ತತ್ವವನ್ನು ಸೂಚಿಸುವುದು. ಧರ್ಮಿಷ್ಠರೊಳಗೆ ಶ್ರೇಷ್ಠನಾದ ಶ್ರೀರಾಮನೇ, ನಿನ್ನಿಂದ ರಾವಣನು ಸಂಹರಿಸಲ್ಪಟ್ಟನು. ನಮ್ಮ ಕಾರ್ಯವು ನೆರವೇರಿತೆಂದು ಚತುರ್ಮುಖಬ್ರಹ್ಮನು ಹೇಳಿದುದರ ತತ್ವವೇನೆಂದರೆ. ಅವಿದ್ಯೆಯನ್ನು ನಿಗ್ರಹಮಾಡಿ ಆತ್ಮಸಾಕ್ಷಾತ್ಕಾರಮಾಡಿಕೊಳ್ಳುವುದು ಧರ್ಮಶ್ರೇಷ್ಠರಿಗಲ್ಲದೆ ಎಲ್ಲಾ ಮನುಷ್ಯರಿಗೂ ಲಭಿಸುವುದಿಲ್ಲ. ಇಂತಹ ಆತ್ಮಸಾಕ್ಷಾತ್ಕಾರಸ್ವರೂಪವಾದ ಧರ್ಮವನ್ನು ಹೊಂದುವುದರಲ್ಲಿ ಶ್ರೇಷ್ಠರೆನಿಸಿಕೊಳ್ಳಬೇಕೆಂಬ ತತ್ವವೇ ಧರ್ಮಿಷ್ಠರೊಳಗೆ ಶ್ರೇಷ್ಠನಾದ ಶ್ರೀರಾಮನೇ ಎಂಬದಾಗಿ ಚತುರ್ಮುಖಬ್ರಹ್ಮನು ಸಂಬೋಧನೆಮಾಡಿರು

ವುದರ ತತ್ವವು. ಆತ್ಮಸಾಕ್ಷಾತ್ಕಾರಸ್ವರೂಪವಾದ ಧರ್ಮಾವಲಂಬಿಗಳೇ ತಮ್ಮಲ್ಲಿರುವ ಅವಿದ್ಯೆಯನ್ನು ನಿಗ್ರಹಮಾಡಿ ಜೀವನ್ಮುಕ್ತಾವಸ್ಥೆಯ ಸ್ವರೂಪವನ್ನು ಹೊಂದುವರೆಂಬ ತತ್ವವೂ ಆಗಿರುವುದರಿಂದ ಬ್ರಹ್ಮನಿಷ್ಠನೇ ಧರ್ಮಶ್ರೇಷ್ಠನೆನಿಸಿಕೊಳ್ಳುವನೆಂಬ ತಾತ್ಪರ್ಯ.

ಬ್ರಹ್ಮಾದಿದೇವತೆಗಳು ಪ್ರಾರ್ಥಿಸಿಕೊಂಡ ರಾವಣನ ವಧೆಯ ಕಾರ್ಯವು ನೆರವೇರಿ ತೆಂದು ಹೇಳಿದುದರ ತತ್ವವೇನೆಂದರೆ—ಲೋಕೋದ್ಧಾರಕ್ಕಾಗಿ ಅವತಾರಮಾಡಿದ ಕಾರ್ಯವು ನೆರವೇರಿತೆಂಬ ತತ್ವವೂ ಆಗಿರುವುದು. ಅಲ್ಲದೆ ರಾಕ್ಷಸರ ಬಾಧೆಯಿಂದ ಬಿಡಲ್ಪಟ್ಟ ದೇವತೆ ಗಳು ಹೇಗೆ ಸುಖದಿಂದಿರುವರೋ ಹಾಗೆ ಜೀವಂತನಾಗಿರುವಾಗ ರಾವಣನ ತತ್ವವಾದ ಅವಿದ್ಯೆಯನ್ನು ನಿಗ್ರಹಿಸಿ ಜೀವನ್ಮುಕ್ತಾವಸ್ಥೆಯನ್ನು ಪಡೆದವನು ಜೀವಂತನಾಗಿರುವ ವರೆಗೂ ದೇವತಾಸ್ವರೂಪದವನೆಂಬ ತತ್ವವಾಗಿಯೂ ಇರುವುದು.

ಚತುರ್ಮುಖಬ್ರಹ್ಮನು ರಾವಣನ ವಧೆಯಸ್ವರೂಪವಾದ ಕಾರ್ಯವು ನೆರವೇರಿತು. ಎಲೈ, ಶ್ರೀರಾಮನೆ! ಅತ್ಯಂತ ಸಂತೋಷದಿಂದ ನೀನು ಇನ್ನು ಸ್ವರ್ಗಲೋಕವನ್ನು ಆಶ್ರಯಿ ಸೆಂದು ಹೇಳಿದುದರ ತತ್ವವೇನೆಂದರೆ—ಶ್ರೀಮಹಾವಿಷ್ಣುವು ಮನುಷ್ಯದೇಹವನ್ನು ಪ್ರವೇಶಿಸಿ ಶ್ರೀರಾಮನೆನಿಸಿಕೊಂಡಿರುವನು. ರಾವಣನ ವಧೆಯಕಾರ್ಯವು ಪೂರೈಸಿದುದರಿಂದ ಸ್ವಸ್ಥಾನ ವಾದ ಸ್ವರ್ಗವನ್ನು ಆಶ್ರಯಿಸೆಂಬ ಸೂಚನೆಯಾಗಿರುವುದು. ಇದರಂತೆ ಪರಮಾತ್ಮನು ಮನುಷ್ಯದೇಹದಲ್ಲಿ ಪ್ರತಿಬಿಂಬತ್ವೇನ ಪ್ರವೇಶಿಸಿ ಅವಿದ್ಯೆಯ ಉಪಾಧಿಯಿಂದ ಜೀವನೆನಿಸಿ ಕೊಳ್ಳುವನು. ಜೀವಂತನಾಗಿರುವಾಗಲೇ ಅವಿದ್ಯೆಯನ್ನು ನಿಗ್ರಹಿಸಿ ಜೀವನ್ಮುಕ್ತನೆನಿಸಿ ಕೊಳ್ಳುವನು. ದೇಹಪತನಕಾಲದಲ್ಲಿ ವಿದೇಹಮುಕ್ತಿಯನ್ನು ಪಡೆಯುವನಷ್ಟೆ! ಶ್ರೀರಾಮನು ರಾವಣನನ್ನು ವಧೆಮಾಡಿ ಅವತಾರಪೂರ್ಣವಾದ ಕಾಲದಲ್ಲಿ ತನ್ನ ಸ್ಥಾನವಾದ ಸ್ವರ್ಗವನ್ನು ಹೇಗೆ ಪಡೆದನೋ ಹಾಗೆ ಮನುಷ್ಯದೇಹದಲ್ಲಿದ್ದ ಜೀವನು ವಿದೇಹಕೈವಲ್ಯ ದಲ್ಲಿ ಸ್ವರ್ಗದ ತತ್ವವಾದ ಪುನರಾವರ್ತಿ ಇಲ್ಲದ ಸರ್ವವ್ಯಾಪಕವಾದ ಪರಮಪದದ ಸ್ವರೂಪ ನಾಗುವನು. ಆದುದರಿಂದ ಜೀವನ್ಮುಕ್ತಸ್ವರೂಪ ಬಂದಮೇಲೆ ವಿದೇಹಮುಕ್ತಿಯನ್ನು ನಿರೀಕ್ಷಿಸಬೇಕೆಂಬ ತತ್ವವಾಗಿರುವುದೇ ಚತುರ್ಮುಖಬ್ರಹ್ಮನು ಇನ್ನು ಸ್ವರ್ಗವನ್ನಾಶ್ರಯಿ ಸೆಂದು ಶ್ರೀರಾಮನಿಗೆ ಹೇಳಿದುದರ ತತ್ವವಾಗಿರುವುದು.

ಸೀತಾದೇವಿಯು ಅಗ್ನಿಪ್ರವೇಶಮಾಡಿ ಪುನಃ ಹೊರಕ್ಕೆ ಬರುವವರೆಗಿರುವ ಶ್ರೀರಾಮನ ಸ್ಥಿತಿಯು ಜೀವಬ್ರಹ್ಮಸಾಕ್ಷಾತ್ಕಾರಸ್ವರೂಪವಾಗಿರುವ ತತ್ವವು ಮೇಲಿನ ಚತುರ್ಮುಖ ಬ್ರಹ್ಮನ ವಾಕ್ಯದ ತತ್ವಗಳಿಂದ ದೃಢಪಡುವುದಲ್ಲದೆ ಹಿಂದಿನ ಪ್ರಕರಣಗಳ ತತ್ವಗಳಿಂದಲೂ ನಿರ್ಧರಿಸಲ್ಪಟ್ಟ ವಿಚಾರವಾಗಿರುವುದು. ಸೀತಾದೇವಿಯು ಅಗ್ನಿಪ್ರವೇಶಮಾಡಿರುವ ಸ್ಥಿತಿಯೇ ಜೀವಬ್ರಹ್ಮಸಾಕ್ಷಾತ್ಕಾರವೆಂಬುದನ್ನು ಏಕವಾಚಕವಾಗಿರುವ ನಿರ್ವಿಕಲ್ಪಸಮಾಧಿ,

ಓಂಕಾರಸ್ವರೂಪ, ಪ್ರಕೃತಿಲಯ, ರಾಜಯೋಗ ಅದ್ವೈತಸಿದ್ಧಿಗಳ ಪ್ರಕರಣಗಳಿಂದ ಶ್ರುತ್ಯಾದಿವಾಕ್ಯಗಳ ಆಧಾರವನ್ನು ಕೊಟ್ಟು ನಿರ್ಧರಿಸೋಣ.

ಸೃಷ್ಟಿ ಸ್ಥಿತಿ ಲಯಕರ್ತರಾದ ಸಗುಣಬ್ರಹ್ಮಚೈತನ್ಯರಾದ ಬ್ರಹ್ಮ, ವಿಷ್ಣು, ರುದ್ರಾದಿಗಳಿಗೂ ಸಮಸ್ತದೇವತೆಗಳಿಗೂ ಮತ್ತು ಸಮಸ್ತವಾದ ಚರಾಚರವಸ್ತುಗಳಿಗೂ ಪರಬ್ರಹ್ಮಸ್ಥಾನವು ಜನ್ಮಸ್ಥಾನವೆಂದು ಸೂಚಿಸುವ ತತ್ವವೇ ಸೀತಾದೇವಿಯು ಅಗ್ನಿಪ್ರವೇಶಮಾಡಿದ ನಂತರ ಬ್ರಹ್ಮಾದಿದೇವತೆಗಳು ಶ್ರೀರಾಮನ ಸಮೀಪಕ್ಕೆ ಬಂದ ತತ್ವವಾಗಿರುವುದು. ಇದೇ ತತ್ವಾರ್ಥಕ್ಕೆ ಅಥರ್ವಶಿಖೋಪನಿಷತ್ತಿನಲ್ಲಿ,

ಚತುರ್ಥಾವಸ್ಥಿತ ಇತಿ ಸರ್ವದೇವ ವೇದಯೋನಿ |
ಸರ್ವವಾಚ್ಯವಸ್ತು ಪ್ರಣವಾತ್ಮಕಂ ||

ತಾ|| ನಾಲ್ಕನೆಯ ಅವಸ್ಥೆಯಾದ ತುರೀಯಾವಸ್ಥೆಯಲ್ಲಿರುವುದರಿಂದ ಸರ್ವದೇವತೆಗಳಿಗೂ ಯಾವುದು ಜನ್ಮಸ್ಥಾನವೋ ಸಮಸ್ತವಾದ ವಸ್ತುಗಳೂ ಯಾವುದಕ್ಕೆ ಅನ್ವಯಿಸುವುವೋ ಅದು ಪ್ರಣವಸ್ವರೂಪಾತ್ಮಕವಾದ ಆತ್ಮ. ಎಂಬ ವಾಕ್ಯವಿರುವುದು. ಇದೇ ತಾತ್ಪರ್ಯಕ್ಕೆ ಮಣ್ಡಲಬ್ರಾಹ್ಮಣೋಪನಿಷತ್ತಿನಲ್ಲಿ,

ಸರ್ವೇಶ ಮಪ್ರಮೇಯ ಮಜಂಶಿವಂ ಪರಾಕಾಶಂ ನಿರಾಲಮ್ಬ ಮದ್ವಿತೀಯಂ
ಬ್ರಹ್ಮ ವಿಷ್ಣು ರುದ್ರಾದೀನಾಮೇಕಲಕ್ಷ್ಯಂ ಸರ್ವಕಾರಣಂ ಪರಂ ||

ತಾ|| ಸರ್ವನಿಯಾಮಕನಾಗಿಯೂ, ಪ್ರಮಾಣಕ್ಕೆ ಸಿಕ್ಕದವನಾಗಿಯೂ, ಜನ್ಮರಹಿತನಾಗಿಯೂ, ಪರಮಮಂಗಳಸ್ವರೂಪನಾಗಿಯೂ, ಪರಾಕಾಶನಾಗಿಯೂ, ಆಶ್ರಯರಹಿತನಾಗಿಯೂ, ಅದ್ವಯನಾಗಿಯೂ, ಬ್ರಹ್ಮ ವಿಷ್ಣು ರುದ್ರಾದಿಗಳಿಗೆ ಏಕಲಕ್ಷ್ಯನಾಗಿಯೂ, ಸರ್ವಕಾರಣನಾಗಿಯೂ ಇರುವವನೇ ಪರಬ್ರಹ್ಮನು, ಎಂದಿರುವುದು. ಅಲ್ಲದೆ ಯೋಗಶಿಖೋಪನಿಷತ್ತಿನಲ್ಲಿ,

"ಗುಣತ್ರಯಮತೀತಂಸ್ಯಾ ದ್ಗ್ರನ್ಥಿತ್ರಯ ವಿಭೇದನಾತ್"

ತಾ|| ಬ್ರಹ್ಮ ವಿಷ್ಣು ರುದ್ರಗ್ರಂಥಿಗಳ ಭೇದಿಸುವಿಕೆಯಿಂದ ಸತ್ವರಜಸ್ತಮೋಗುಣಗಳಿಗೆ ಅತೀತವಾದ ಆತ್ಮಸ್ವರೂಪವು ಲಭಿಸುವುದು, ಎಂದು ಹೇಳಿರುವುದು.

ಈ ಮೇಲಿನ ಶ್ರುತಿವಾಕ್ಯಗಳ ತಾತ್ಪರ್ಯದಂತೆ ಬ್ರಹ್ಮಾದಿದೇವತೆಗಳು ಸೀತಾದೇವಿಯ ಅಗ್ನಿಪ್ರವೇಶವಾದ ಮೇಲೆ ಬಂದು ಶ್ರೀರಾಮನನ್ನು ಸ್ತೋತ್ರಮಾಡುತ್ತಾ ನಿಂತ ತತ್ವವೇ ಬ್ರಹ್ಮಾದಿದೇವತೆಗಳಿಗೆಲ್ಲಾ ಮೂಲಸ್ಥಾನವಾಗಿರುವ ಪರಮಾತ್ಮಾನುಭೂತ್ಯವಸ್ಥೆಯ ತತ್ವ.

## ನಿರ್ವಿಕಲ್ಪಸಮಾಧಿಯ ವಿಚಾರ.

ಸೀತಾದೇವಿಯ ಅಗ್ನಿಪ್ರವೇಶವಾದನಂತರವಿರುವ ಶ್ರೀ ಶ್ರೀರಾಮನ ಸ್ಥಿತಿಯೇ ಆತ್ಮ ಸಾಕ್ಷಾತ್ಕಾರದ ತತ್ವವೆಂದು ಮೇಲೆ ತಿಳಿಸಿತು. ಈ ಆತ್ಮಸಾಕ್ಷಾತ್ಕಾರದ ಸ್ಥಿತಿಯೇ ನಿರ್ವಿ ಕಲ್ಪಸಮಾಧಿಯ ಸ್ವರೂಪವೆಂಬುದಾಗಿಯೂ ಹೇಳಲ್ಪಡುತ್ತದೆ. ಆದುದರಿಂದ ನಿರ್ವಿ ಕಲ್ಪಸಮಾಧಿಯ ಸ್ವರೂಪದಿಂದಲೂ ಆತ್ಮಸಾಕ್ಷಾತ್ಕಾರದ ತತ್ವವನ್ನು ವಿವರಿಸೋಣ.

ಅನೇಕ ಸಂದರ್ಭಗಳಲ್ಲಿ ನಮ್ಮ ದೇಹವನ್ನು ದೇವಸ್ಥಾನಕ್ಕೆ ಹೋಲಿಸಿ ತತ್ವಾರ್ಥ ಗಳನ್ನು ವಿವರಿಸಿಕೊಂಡು ಬಂದಿರುತ್ತಷ್ಟೆ! ಅಲ್ಲದೆ ದೇವಸ್ಥಾನದಲ್ಲಿ ಮೂಲವಿಗ್ರಹವಿರುವ ಸ್ಥಾನವೇ ನಮ್ಮಲ್ಲಿರುವ ಬ್ರಹ್ಮರಂಧ್ರವೆಂದರೆ ಸಹಸ್ರಾರಕಮಲದ ತತ್ವವಾಗಿರುವುದೆಂದೂ, ಈ ಮೂಲವಿಗ್ರಹದ ಸ್ಥಳದಲ್ಲಿ ಸರ್ವವ್ಯಾಪಾರವೂ ಲೀನವಾಗುವುದೇ ಆತ್ಮಸಾಕ್ಷಾತ್ಕಾರ ವೇದೂ ತಿಳಿಸಿರುತ್ತಷ್ಟೆ! ಈ ದೇವಸ್ಥಾನದ ಚಿತ್ರಪಠಕ್ಕೆ ಅನುಸರಿಸಿ ಮನುಷ್ಯನ ಚಿತ್ರಪಠ ವೊಂದನ್ನು ಕೊಟ್ಟಿರುವುದು. ದೇವಸ್ಥಾನದಲ್ಲಿ ಮೂಲವಿಗ್ರಹವಿರುವ ಸ್ಥಳದ ತತ್ವವೇ ನಮ್ಮ ಶಿರಸ್ಸಿನಲ್ಲಿರುವ ಸಹಸ್ರಾರಕಮಲವಾಗಿರುವುದು. ಚಿತ್ರಪಠದಲ್ಲಿ ಸಹಸ್ರಾರಕಮಲ ವಿರುವ ಸ್ಥಳವನ್ನು ಎಂಟನೇ ಸಂಖ್ಯೆಯ ಗುರುತುಮಾಡಿ ತೋರಿಸಿರುವುದು.

ಮನುಷ್ಯನ ಭ್ರೂಮಧ್ಯಪ್ರದೇಶದ ಮೇಲೆ ಶಿರಸ್ಸಿನೊಳಗಿರುವ ಪ್ರದೇಶವು ಅಪಂಚೀ ಕೃತಾಕಾಶವೆನಿಸಿಕೊಂಡು ಸರ್ವೋತ್ಕೃಷ್ಟಪ್ರದೇಶವಾಗಿರುವುದು. ಅಪಂಚೀಕೃತವೆಂದರೆ ಪಂಚಭೂತಗಳ ಸಮ್ಮೇಳನವಿಲ್ಲದ ತನ್ಮಾತ್ರಸ್ವರೂಪವಾದ ಅವಕಾಶವೆಂಬ ತತ್ವ. ಹೀಗಿರು ವುದರಿಂದ ಈ ಪ್ರದೇಶಕ್ಕೆ ದಹರಾಕಾಶ, ಗುಹೆಯೆಂಬ ನಾಮುಗಳೂ ಇರುವುವು. ದೇವಸ್ಥಾನದಲ್ಲಿ ಮೂಲವಿಗ್ರಹದ ಸುತ್ತಲು ಗೋಡೆಗಳಿರುವಂತೆ ಶಿರಸ್ಸಿನೊಳಗೆ ಅಪಂಚೀ ಕೃತಾಕಾಶದಲ್ಲಿ ತಮೋಆವರಣವಿರುವುದು. ಈ ಆವರಣದ ಇರುವಿಕೆಯನ್ನು ಸಹ ಸ್ರಾರಕಮಲದ ಸುತ್ತಲು ಗೆರೆಯ ರೂಪದಲ್ಲಿ ಚಿತ್ರಪಠದಲ್ಲಿ ತೋರಿಸಿರುವುದು. ಈ ಆವರಣದ ಬಲವೆಲ್ಲ ಮಣಿಪೂರಚಕ್ರದಲ್ಲಿರುವುದು. ಕುಂಭಕರ್ಣನ ವಧೆಯ ತತ್ವದಂತೆ ಮಣಿಪೂರಚಕ್ರಭೇದನೆಯಾದರೆ ಆವರಣದ ಶಕ್ತಿಯು ನಿಗ್ರಹವಾಯಿತೆಂಬ ತತ್ವ.

ನಮ್ಮ ಭ್ರೂಮಧ್ಯದ ಮೇಲೆ ಶಿರಸ್ಸಿನೊಳಗಿರುವ ಅಪಂಚೀಕೃತಾಕಾಶದಲ್ಲಿಯೇ ಅಂತಃ ಕರಣವಿರುವುದು. ಇರುವೆ ಮೊದಲಾದ ಅಣುರೂಪವಾದ ಜಂತುಗಳಲ್ಲೂ ಅಂತಃಕರಣ ವಿರುವುದರಿಂದ ಇದು ಅತ್ಯಂತಸೂಕ್ಷ್ಮವಾಗಿರುವುದು. ಹೀಗಿರುವುದರಿಂದಲೆ ಇದಕ್ಕೆ ಸೂಕ್ಷ್ಮಶರೀರವೆಂದು ಹೆಸರು ಬಂದಿದೆ. ಮನುಷ್ಯನ ಶಿರಸ್ಸಿನಲ್ಲಿರುವ ಬುದ್ಧಿ ಮನಸ್ಸು ಗಳಿಗೆ ವೃತ್ತಿ (ಪ್ರವಾಹ) ಯುಂಟಾಗಿ ಈ ವೃತ್ತಿಯು ಆನಂದ, ವಿಜ್ಞಾನ, ಮನೋ, ಪ್ರಾಣ, ಅನ್ನಮಯಕೋಶಗಳಲ್ಲಿ ವರ್ತಿಸಿಕೊಂಡು ಜಾಗ್ರತ್ಕಾಲದಲ್ಲಿ ಬಹಿರ್ವ್ಯಾಪಾರ

ಮನುಷ್ಯನ ದೇಹವನ್ನು ದೇವಸ್ಥಾನಕ್ಕೆ ಹೋಲಿಸಿರುವ ಚಿತ್ರ.

ಮಾಡುವುದು. ನಿದ್ರಾಕಾಲದಲ್ಲಿ ಬುದ್ಧಿಮನಸ್ಸಿನ ವೃತ್ತಿಗಳು ಸಹಸ್ರಾರಕಮಲದ ಸುತ್ತಲೂ ಗೀರಿನ ತತ್ವದಲ್ಲಿರುವ ತಮೋಆವರಣದಲ್ಲಿ ಲೀನವಾಗುತ್ತವೆ. ಆದುದರಿಂದ ಬುದ್ಧಿವೃತ್ತಿಯು ಪಂಚಕೋಶಗಳ ಎಳೆತದಿಂದ ಜಾಗ್ರತ್ಕಾಲವನ್ನು ಅನುಭವಿಸುವುದು. ತಮಸ್ಸಿನ ಆವರಣದಿಂದ ನಿದ್ರಾಸ್ವರೂಪದಲ್ಲಿ ಲೀನವಾಗುವುದು. ನಿದ್ರಾ ಮತ್ತು ಜಾಗ್ರದವಸ್ಥೆಗಳ ಬಂಧನವನ್ನು ತಪ್ಪಿಸಿಕೊಳ್ಳಬೇಕಾದರೆ ಬುದ್ಧಿವೃತ್ತಿಯು ಸುಷುಮ್ನಾಮಾರ್ಗದಲ್ಲಿ ಪ್ರವೇಶಿಸಿ ಸಹಸ್ರಾರಕಮಲದಲ್ಲಿ ಲೀನವಾಗಿ ನಿರ್ವಿಕಲ್ಪಸಮಾಧಿಸ್ಥಿತಿಯನ್ನು ಪಡೆಯಬೇಕು. ನಮ್ಮ ಬುದ್ಧಿಯಲ್ಲಿಯೂ' ಪರಮಾತ್ಮನಿರುವನು. ಆದರೆ ಬುದ್ಧಿಗೆ ವೃತ್ತಿಯುಂಟಾಗಿ ಜಾಗ್ರತ್ ಮತ್ತು ಸುಷುಪ್ತ್ಯವಸ್ಥೆಗಳನ್ನು ಅನುಭವಿಸುವುದರಿಂದ ತನ್ನಲ್ಲಿರುವ ಆತ್ಮನನ್ನು ತಾನು ಹೊಂದಲಾರದು. ಇದೇ ತಾತ್ಪರ್ಯಕ್ಕೆ ಶ್ರೀವಿದ್ಯಾರಣ್ಯರವರು ಪಂಚದಶಿಯಲ್ಲಿ,

ಬುದ್ಧೌ ತಿಷ್ಠನ್ನಾಂತರೋಸ್ಯಾ ಧಿಯಾಽನ್ವೀಕ್ಷ್ಯಶ್ಚ ಧೀವಪುಃ ।
ಧಿಯ ಮಂತರ್ಯಮಯತೀ ತ್ಯೇವಂ ವೇದೇನ ಘೋಷಿತಂ ॥

ತಾ|| ಪರಮಾತ್ಮನು ಬುದ್ಧಿಯಲ್ಲಿರುವವನಾಗಿ, ಈ ಬುದ್ಧಿಗಿಂತಲೂ, ಒಳಗಿರುವವನಾಗಿ, ಬುದ್ಧಿಯೇ ದೇಹವಾಗುಳ್ಳವನಾಗಿ, ಬುದ್ಧಿಯಿಂದ ನೋಡಲ್ಪಡದವನಾಗಿ, ಬುದ್ಧಿಯನ್ನು ಒಳಗೆ ಪ್ರೇರಿಸುತಲಿರುವನೆಂದು ವೇದವು ಮೊರೆಯಿಡುತ್ತಿದೆ. ಎಂದು ಹೇಳಿರುವರು. ಇದೇ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೧೩೭ನೇ ಶ್ಲೋಕದಲ್ಲಿ,

ಪ್ರಕೃತಿವಿಕೃತಿಭಿನ್ನಃ ಶುದ್ಧಬೋಧಸ್ವಭಾವಃ ।
ಸದಸದಿದಮಶೇಷಂ ಭಾಸಯನ್ನಿರ್ವಿಶೇಷಃ ॥
ವಿಲಸತಿ ಪರಮಾತ್ಮಾ ಜಾಗ್ರದಾದಿಷ್ವವಸ್ಥಾ ।
ಸ್ವಹಮಹಮಿತಿ ಸಾಕ್ಷಾತ್ಸಾಕ್ಷಿರೂಪೇಣ ಬುದ್ಧೇಃ ॥

ತಾ|| ಪರಮಾತ್ಮನು ಪ್ರಕೃತಿ ವಿಕೃತಿಗಳಿಗಿಂತಲೂ ಜ್ಞಾನಸ್ವರೂಪನು. ಸದ್ರೂಪವಾಗಿಯೂ ಅಸದ್ರೂಪವಾಗಿಯೂ ಕಾಣಬರತಕ್ಕ ಸಮಸ್ತವನ್ನೂ ಪ್ರಕಾಶಪಡಿಸುತ್ತಿರುವವನಾಗಿ ಭೇದರಹಿತನಾಗಿರುವನು. ಜಾಗ್ರದಾದಿ ಅವಸ್ಥೆಗಳಲ್ಲಿ ನಾನು ನಾನು ಎಂದು ಅಂದುಕೊಳ್ಳುವ ಬುದ್ಧಿಗೆ ಪ್ರತ್ಯಕ್ಷಸಾಕ್ಷಿರೂಪದಿಂದ ಬೆಳಗುತ್ತಲಿರುವನು. ಎಂದು ಹೇಳಿರುವರು.

ಈ ಮೇಲಿನ ವಾಕ್ಯಗಳಿಂದ ಬುದ್ಧಿಯಲ್ಲಿ ಪರಮಾತ್ಮನಿದ್ದರೂ ಶ್ರೀರಾಮನಿಗೆ ವನವಾಸ ಪ್ರಾಪ್ತವಾದಂತೆ ಬುದ್ಧಿಗೆ ಕೋಶಾನುವರ್ತಿಯಾಗಿರುವ ವೃತ್ತಿದೋಷದಿಂದ ತನ್ನಲ್ಲಿರುವ ಆತ್ಮನನ್ನು ತಾನು ಅರಿಯಲಾರದು. ಆದುದರಿಂದ ಈ ಬುದ್ಧಿವೃತ್ತಿಯು ಸುಷುಮ್ನಾಂತರದಲ್ಲಿ ಪ್ರವೇಶಿಸಿ ಸಹಸ್ರಾರಕಮಲವೆಂದರೆ ಬ್ರಹ್ಮರಂಧ್ರದಲ್ಲಿ ಲೀನವಾದರೆ ಆಗ ಬುದ್ಧಿಯಲ್ಲಿರುವ ಪ್ರತಿಬಿಂಬಚೈತನ್ಯನಿಗೂ (ಜೀವ) ಸಹಸ್ರಾರಕಮಲದಲ್ಲಿರುವ ಪರಬ್ರಹ್ಮನಿಗೂ

ಮಧ್ಯೆ ಇರುವ ತೆರೆಯು ಹೋಗಿ ಸಾಕ್ಷಾತ್ಕಾರವುಂಟಾಗುವುದು. ಆದುದರಿಂದ ಉಪಾಧಿಗಳು ಬ್ರಹ್ಮರಂಧ್ರದಲ್ಲಿ ಲೀನವಾಗಬೇಕೆಂದರೆ ಬುದ್ಧಿವೃತ್ತಿಯು ಷಟ್ಚಕ್ರಗಳನ್ನು ಭೇದಿಸಿಕೊಂಡು ಸಹಸ್ರಾರಕಮಲದಲ್ಲಿ ಲೀನವಾಗಬೇಕೆಂಬ ತತ್ವವಾಗಿರುವುದು.

ಸಹಸ್ರಾರಕಮಲವೇ ಪರಮಾತ್ಮಸ್ಥಾನವೆಂದು ಈ ಗ್ರಂಥದ ಪ್ರಥಮದಿಂದಲೂ ತಿಳಿಸಿಕೊಂಡು ಬರುತ್ತಿದೆಯಷ್ಟೆ! ಸರ್ವವ್ಯಾಪಕನಾದ ಪರಬ್ರಹ್ಮನಿಗೆ ನಮ್ಮಲ್ಲಿ ಒಂದು ಸ್ಥಳನಿರ್ದೇಶಮಾಡಬಹುದೋ ಎಂಬ ಶಂಕೆ ಬರಬಹುದು. ಇದಕ್ಕೆ ಸಮಾಧಾನವೇನೆಂದರೆ—ಯಾವಾಗ ದೇಹವೆಂಬ ಸ್ಥಳವು ನಿರ್ದೇಶವಾಯಿತೋ ದೇಹದಲ್ಲಿರುವ ತಮೋಆವರಣವು ಬುದ್ಧಿವೃತ್ತಿಯನ್ನು ಪರಮಾತ್ಮನಲ್ಲಿ ಲೀನವಾಗದಂತೆ ಮರೆಮಾಡಿ ತನ್ನ ಗಾಢಾಂಧಕಾರದಲ್ಲಿ ಲೀನಪಡಿಸಿಕೊಳ್ಳುವುದೋ, ವಿಕ್ಷೇಪಶಕ್ತಿಯು ಬುದ್ಧಿವೃತ್ತಿಗೆ ಅಂತರ್ಮುಖದ ಮಾರ್ಗವನ್ನು ಮರೆಸಿ ಬಹಿರ್ಮುಖವಾಗಿ ಪ್ರಸರಣೆಮಾಡಿಸುವುದೋ, ಆಗ ಉಪಾಧಿಗಳಿಲ್ಲದ ಸ್ಥಳವೇ ಪರಮಾತ್ಮಸ್ಥಾನವೆಂದು ನಿರ್ದೇಶಮಾಡಲ್ಪಟ್ಟಿರುವುದು. ಅಂದರೆ ಬುದ್ಧಿವೃತ್ತಿಯು ಆವರಣ ವಿಕ್ಷೇಪಶಕ್ತಿಗಳನ್ನು ಉಪಸಂಹಾರಮಾಡಿಕೊಂಡು ನಮ್ಮಲ್ಲಿ ಯಾವ ಸ್ಥಳದಲ್ಲಿ ಸರ್ವವ್ಯಾಪಕನಾದ ಪರಬ್ರಹ್ಮನಲ್ಲಿ ಲೀನವಾಗಬಲ್ಲುದೋ ಅಂತಹ ಸ್ಥಳಕ್ಕೆ ಪರಮಾತ್ಮಸ್ಥಾನವೆಂದು ನಿರ್ದೇಶಿಸಲ್ಪಟ್ಟಿರುವುದು. ಆದುದರಿಂದ ದೇವಸ್ಥಾನದಲ್ಲಿ ಮೂಲವಿಗ್ರಹವಿರುವಂತೆ ನಮ್ಮಲ್ಲಿ ಸಹಸ್ರಾರಕಮಲವು ಯಾವ ಉಪಾಧಿಗಳೂ ಇಲ್ಲದ ಮತ್ತು ಸರ್ವ ಉಪಾಧಿಗಳೂ ಲೀನವಾಗುವ ಸರ್ವವ್ಯಾಪಕವಾದ ಪರಮಾತ್ಮಸ್ಥಾನವಾಗಿರುವುದು.

ಈ ಸಹಸ್ರಾರಕಮಲಕ್ಕೆ ಬಹ್ಮರಂಧ್ರ, ಬ್ರಹ್ಮಪುರಿ, ದಹರಾಕಾಶ, ಹೃದಯ, ವೈಕುಂಠ, ಕೈಲಾಸ, ಅಂತಃಪುರಿ, ಗುಹೆ, ವಿಷ್ಣುಪದಗಳೆಂಬ ಪರ್ಯಾಯನಾಮಗಳುಂಟು. ಇಂತಹ ನಾಮಗಳನ್ನು ಪಡೆದಿರುವ ಯಾವ ಉಪಾಧಿಗಳೂ ಇಲ್ಲದ ಪರಬ್ರಹ್ಮಸ್ಥಾನವೆ ನಾವು ಹೊಂದುವ ಸ್ಥಾನವಾಗಿರುವುದು. ಈ ತಾತ್ಪರ್ಯಕ್ಕೆ "ಸಹಸ್ರಾರೆ ಜಲಜ್ಯೋತಿರನ್ತರ್ಲಕ್ಷ್ಯಮ್" ಅಂದರೆ ಸಹಸ್ರದಳಕಮಲದಲ್ಲಿ ಪ್ರಕಾಶವಾದ ಜ್ಯೋತಿಯು ಒಳಗಿನ ಗುರಿಯೆಂದರೆ ಪರಮಾತ್ಮನೆಂಬದಾಗಿ ಮಣ್ಡಲಬ್ರಾಹ್ಮಣೋಪನಿಷತ್ತಿನ ವಾಕ್ಯವಲ್ಲದೆ ಇನ್ನೂ ಅನೇಕ ವಾಕ್ಯಪ್ರಮಾಣಗಳನ್ನು ಸುಂದರಕಾಂಡದ ತತ್ವದಿಂದಲೂ ಅನ್ವಯಿಸಿಕೊಂಡು ಬಂದಿರುವುದು. ಈ ಸಹಸ್ರಾರಕಮಲವೇ "ಹೃತ್ ಅಯತ ಇತಿ ಹೃದಯಂ" ಎಂಬ ವ್ಯುತ್ಪತ್ತಿಯನ್ನನುಸರಿಸಿ ಪಂಚಕೋಶಗಳಿಗೂ, ಪಂಚಭೂತಗಳಿಗೂ, ಷಟ್ಚಕ್ರಗಳಿಗೂ, ಸ್ಥೂಲ ಸೂಕ್ಷ್ಮ ಕಾರಣದೇಹಗಳಿಗೂ ಅಂತರಾಳ ಅಥವಾ ಒಳಗಡೆ ಉಪಾಧಿರಹಿತವಾಗಿರುವುದರಿಂದ ಹೃದಯವೆನಿಸುವುದು.

ಹೃದಯಕಮಲದಲ್ಲಿರುವ ಪರಮಾತ್ಮನನ್ನು ಹೊಂದಬೇಕೆಂದರೆ ಸರ್ವವ್ಯಾಪಕತ್ವವನ್ನುಂಟುಮಾಡುವ ಸಹಸ್ರಾರಕಮಲವನ್ನು ಹೊಂದಬೇಕೆಂಬ ತಾತ್ಪರ್ಯವಾಗಿರುವುದು

ಎದೆಯಲ್ಲಿರುವ ಹೃದಯಕೋಶ ಅಥವಾ ಪ್ರಾಣಮಯಕೋಶಕ್ಕೂ ಹೃದಯಕಮಲವೆಂದು ಹೆಸರು. ಎದೆಯಲ್ಲಿರುವ ಹೃದಯಕಮಲವು ಸಗುಣಬ್ರಹ್ಮಸ್ವರೂಪವಾದುದೆಂದು ಹಿಂದೆ ಅಗಸ್ತ್ಯಾಶ್ರಮ ಮತ್ತು ಆದಿತ್ಯಹೃದಯ ಪ್ರಕರಣಗಳಲ್ಲಿ ತಿಳಿಸಿದೆ. ಸಹಸ್ರಾರಕಮಲವೆನಿಸುವ ಹೃದಯವು ನಿರ್ಗುಣಸ್ಥಾನ. ಕಾರಣವೇನೆಂದರೆ—ಓಂಕಾರದಲ್ಲಿನ ಉಕಾರವು ಎದೆಯಲ್ಲಿಯೂ, ಮಕಾರವು ಭ್ರೂಮಧ್ಯದಲ್ಲಿಯೂ ಇರುವುವು. ಆದುದರಿಂದ ಓಂಕಾರ ವಾಚ್ಯವಾದ ಪರಮಾತ್ಮಸ್ಥಾನ (ತುರೀಯಸ್ಥಾನ) ವು ಸಹಸ್ರಾರಕಮಲವಾದ ಹೃದಯ ಕಮಲವಾಗಿರುವುದು. ಈ ತಾತ್ಪರ್ಯಕ್ಕೆ ಸೀತಾದೇವಿಯ ಅಗ್ನಿಪ್ರವೇಶ ಪ್ರಕರಣದಲ್ಲಿ ಬರೆದಿರುವ "ಹೃತ್ಪದ್ಮಕರ್ಣಿಕಾಮಧ್ಯೆ" ಎಂಬ ಶ್ರುತಿವಾಕ್ಯವನ್ನು ಇಲ್ಲಿಗೆ ಅನ್ವಯಮಾಡಿಕೊಳ್ಳಬೇಕು. ಇದೇ ತಾತ್ಪರ್ಯಕ್ಕೆ ತೇಜಬಿಂದೂಪನಿಷತ್ ಪ್ರಥಮಾಧ್ಯಾಯದಲ್ಲಿ,

ನಿಶ್ಚಲಂ ನಿರ್ವಿಕಲ್ಪಂಚ ನಿರಾಕಾರಂ ನಿರಾಶ್ರಯಂ |
ಉಪಾಧಿರಹಿತಂ ಸ್ಥಾನಂ ವಾಙ್ಮನೋತೀತಗೋಚರಂ |
ಅಶೂನ್ಯ ಶೂನ್ಯಭಾವಂತು ಶೂನ್ಯಾತೀತಂ ಹೃದಿಸ್ಥಿತಂ ||

ತಾ|| ಚಲನೆಯಿಲ್ಲದ, ವಿಕಾರಗಳಿಲ್ಲದ, ಆಕಾರವಿಲ್ಲದ, ಆಶ್ರಯವಿಲ್ಲದ, ಉಪಾಧಿಯಿಲ್ಲದ, ವಾಕ್ಕಿಗೂ ಮನಸ್ಸಿಗೂ, ಗೋಚರಿಸದಿರುವ, ಸ್ಥಾನವೂ, ಶೂನ್ಯವಲ್ಲದ, ಇಂದ್ರಿಯ ಗ್ರಾಹ್ಯವಲ್ಲದ, ಇಂದ್ರಿಯಗಳಿಗೂ ನಿಲುಕದವನೇ ಹೃದಯದಲ್ಲಿರುವ ಪರಮಾತ್ಮನು, ಎಂದು ಹೇಳಿರುವುದು.

ಸಾಕ್ಷಾತ್ಪರಮಪದವಾದ ಸಹಸ್ರಾರಕಮಲವೇ ಹೃದಯವೆಂದು ಮೇಲಿನ ವಾಕ್ಯದಿಂದ ತಿಳಿಸಿತು. ಈ ಸಹಸ್ರಾರಕಮಲವೇ ಪಂಚಕೋಶಗಳಿಗೂ, ಪಂಚಭೂತಗಳಿಗೂ ಅಂತರಾಳದಲ್ಲಿ ಉಪಾಧಿರಹಿತವಾದ ಪರಬ್ರಹ್ಮಸ್ಥಾನವಾಗಿರುವುದರಿಂದ ಗುಹೆಯೆಂದು ಕರೆಯಲ್ಪಡುವುದು. ಇದೇ ತಾತ್ಪರ್ಯಕ್ಕೆ "ಯೋವೇದ ನಿಹಿತಂ ಗುಹಾಯಾಂ ಪರಮೇವ್ಯೋಮನ್" ಎಂಬ ಶುತ್ಯಾಧಾರವಿದೆ. ಇದನ್ನೇ ಇನ್ನೂ ಒಂದು ವಿಧವಾಗಿ ಪಂಚಬ್ರಹ್ಮೋಪನಿಷತ್ತಿನಲ್ಲಿ,

ಅಸ್ಮಿನ್ ಬ್ರಹ್ಮಪುರೇ ವೇಶ್ಮ ದಹರಂ ಯದಿದಂ ಮುನೆ |
ಪುಂಡರೀಕಂತು ತನ್ಮಧ್ಯೇ ಆಕಾಶೋ ದಹರೋಸ್ತಿ ತತ್ ||
ಸಶಿವ ಸ್ಸಚ್ಚಿದಾನಂದ ಸ್ಸೋನ್ವೇಷ್ಟವ್ಯೋ ಮುಮುಕ್ಷುಭಿಃ |
ಅಯಂ ಹೃದಿಸ್ಥಿತ ಸ್ಸಾಕ್ಷೀ ಸರ್ವೇಷಾ ಮವಿಶೇಷತಃ |
ತೇನಾ ಯಂ ಹೃದಯಂ ಪ್ರೋಕ್ತ ಶ್ಶಿವ ಸ್ಸಂಸಾರಮೋಚಕಃ ||

ತಾ|| ಈ ಬ್ರಹ್ಮಪುರದಲ್ಲಿರುವ ಮನೆಯೆ ದಹರ. ಆ ಮನೆಯ ಮಧ್ಯದಲ್ಲಿರುವ ಕಮಲದಲ್ಲಿ ದಹರಾಕಾಶವಿರುವುದು. ಆ ದಹರಾಕಾಶದಲ್ಲಿರುವ ಸಚ್ಚಿದಾನಂದರೂಪವು

ಮೋಕ್ಷಾರ್ಥಿಗಳಿಂದ ಹುಡುಕಲ್ಪಡತಕ್ಕದ್ದು. ಎಲ್ಲರ ಹೃದಯಾಕಾಶದಲ್ಲಿಯೂ ಸರ್ವ ಸಾಕ್ಷಿಯಾದ ಪರಮಾತ್ಮನಿರುವನು. ಆದರಿಂದಲೇ ಸಂಸಾರವನ್ನು ಬಿಡಿಸುವ ಹೃದಯವೇ ಶಿವನೆಂದು ಪ್ರೋಕ್ತವಾಗಿರುವುದು.

ಅಂತಃಕರಣ (ಅಯೋಧ್ಯಾ ಪ್ರದೇಶ) ವೂ ಭ್ರೂಮಧ್ಯದ ಮೇಲೆ ಶಿರಸ್ಸಿನೊಳಗೆ ಅಪಂಚೀಕೃತಾಕಾಶ ಅಥವಾ ದಹರಾಕಾಶದಲ್ಲಿರುವುದರಿಂದ ಉತ್ತಮಸ್ಥಾನವೇ ಆಗಿರುವುದು. ಆದರೆ ವೃತ್ತಿದೋಷವನ್ನು ಪರಿಹಾರಮಾಡಿಕೊಳ್ಳಲು ಸಹಸ್ರಾರಕಮಲಕ್ಕೆ ಬರಬೇಕು. ಬುದ್ಧಿಗೆ ವೃತ್ತಿದೋಷನಿವಾರಣೆಯಾಗಿ ವೃತ್ತಿಯೇ ಹುಟ್ಟದಂತೆ ಮೂಕತ್ವವು ಯಾವಾಗ ಬರುವುದೋ ಆ ಕಾಲವೂ ಕೂಡ ಉತ್ತಮಕಾಲವಾಗಿ ಸಹಸ್ರಾರಕಮಲದಂತೆಯೆ ಶ್ರೇಷ್ಠವಾಗುವುದು. ಇದರ ವಿಚಾರವು ಪಟ್ಟಾಭಿಷೇಕ ಪ್ರಕರಣದಲ್ಲಿ ಬರುವುದು.

ಆದುದರಿಂದ ಸೀತಾದೇವಿಯ ಅಗ್ನಿಪ್ರವೇಶದ ತತ್ವವಾದ ಅಹಂಜ್ಞಾನವು ಸಹಸ್ರಾರ ಅಥವಾ ದಹರಾಕಾಶದಲ್ಲಿರುವ ಪರಬ್ರಹ್ಮನಲ್ಲಿ ಲೀನವಾದ ನಂತರ ಪ್ರತಿಬಿಂಬಚೈತನ್ಯನಿಗೆ ಉಪಾಧಿಗಳ ತೊಂದರೆಯು ನಿವೃತ್ತಿಯಾಗುವುದರಿಂದ ಸಹಸ್ರಾರಕಮಲದಲ್ಲಿರುವ ಪರಬ್ರಹ್ಮನಿಗೂ ಪ್ರತಿಬಿಂಬಚೈತನ್ಯನಿಗೂ ಏಕತ್ವ ಅಥವಾ ಸಮತ್ವ ಸಂಭವಿಸುವುದೇ ಜೀವಬ್ರಹ್ಮರ ಸಾಕ್ಷಾತ್ಕಾರದ ನಿಶ್ಚಯವಾದ ತತ್ವವಾಗಿರುವುದು. ಏಕತ್ವ, ಸಮತ್ವ, ಸಾಕ್ಷಾತ್ಕಾರದ ತತ್ವಗಳೇನೆಂದರೆ ಪರಮಾತ್ಮಚೈತನ್ಯವೇ ಪ್ರತಿಬಿಂಬಚೈತನ್ಯ. ಈ ಪ್ರತಿಫಲನ ಚೈತನ್ಯಕ್ಕೆ ಗುಣಗಳನ್ನು ಪ್ರಕಾಶಮಾಡಿಕೊಂಡಿರುವ ವೇಷವೆಂದರೆ ಉಪಾಧಿ ಬಂದುದರಿಂದ ಪರಮಾತ್ಮಚೈತನ್ಯದ ಸಮಾನತ್ವ ಬರದೆ ಜೀವನೆನಿಸಿಕೊಳ್ಳುವನು. ವೇಷವೆಂದರೆ ಉಪಾಧಿಗಳ ಬಿಡುಗಡೆಯಿಂದ ಪರಮಾತ್ಮನಿಗೂ ಜೀವನಿಗೂ ಸಮತೆಯುಂಟಾಗುವುದು. ಇದೇ ಜೀವಂತನಾಗಿರುವಾಗಲೇ ಸಾಕ್ಷಾತ್ಕಾರವನ್ನು ಹೊಂದುವ ತತ್ವವಾಗಿರುವುದು. ಆದುದರಿಂದ ಸಾಕ್ಷಾತ್ಕಾರ, ಏಕತ್ವ ಸಮತ್ವವೆಂದರೆ ಎರಡರ ಸ್ವರೂಪವೂ ಭೇದವಿಲ್ಲದೆ ಒಂದೇ ಆಗಿರುವುದರಿಂದ ಅದೇ ಇದು, ಇದೇ ಅದು ಎಂದರೆ ಚೈತನ್ಯವೊಂದೇ ಎಂಬ ತತ್ವ

ಹೇಗೆಂದರೆ, ಘಟದಲ್ಲಿರುವ ಆಕಾಶವೂ ಮಹಾಕಾಶವೂ ಒಂದೇ. ಆಕಾಶದಲ್ಲಿ ಎಂದಿಗೂ ಭೇದವಿಲ್ಲ. ಇದರಂತೆ ಪರಮಾತ್ಮನೂ ಜೀವನೂ ಒಂದೇ. ಘಟವೂ ಘಟದ ಕಂಠದಲ್ಲಿ ಇರುವ ಮುಚ್ಚಳವೂ ಉಪಾಧಿಸ್ವರೂಪದಲ್ಲಿರುವುದೆಂದು ಉದಾಹರಣೆಗೆ ತೆಗೆದುಕೊಳ್ಳೋಣ. ಘಟದ ಕಂಠದಲ್ಲಿರುವ ಮುಚ್ಚಳವೇ ಸ್ಥಿತಿ ಅಥವಾ ವ್ಯಾಪಾರಸ್ವರೂಪವಾದ ಉಪಾಧಿ. ಘಟದ ಮುಚ್ಚಳವನ್ನು ತೆಗೆದರೆ ಘಟದಲ್ಲಿರುವ ಆಕಾಶ ಮಹಾಕಾಶಗಳ ಮಧ್ಯದಲ್ಲಿದ್ದ ತೆರೆಯು ಹೋಗುವುದೇ ಹೊರತು ಆಕಾಶದಲ್ಲಿ ಯಾವ ಭೇದವೂ ಉಂಟಾಗುವುದಿಲ್ಲ. ಇದರಂತೆ ಬುದ್ಧಿಯಲ್ಲಿರುವ ಜೀವನಿಗೂ ಸಹಸ್ರಾರಕಮಲದಲ್ಲಿರುವ ಪರಬ್ರಹ್ಮನಿಗೂ ಮಧ್ಯದಲ್ಲಿ ತೆರೆಯ ರೂಪದಲ್ಲಿರುವ ಷಟ್ಚಕ್ರಗಳ ಭೇದನೆಯಾಗುವುದೆಂದರೆ ಅವಿದ್ಯಾ ಮತ್ತು

ಮಾಯೋಪಾಧಿಗಳು ಹೋಗುವುದೇ ಹೊರತು ಜೀವಬ್ರಹ್ಮರಿಗೆ ಆಕಾಶದಂತೆ ಯಾವ ಭೇದವೂ ಇಲ್ಲ. ಆದುದರಿಂದ ಜೀವನೇ ಬ್ರಹ್ಮ. ಬ್ರಹ್ಮನೇ ಜೀವ. ಘಟಾಕಾಶ ಮಹಾಕಾಶಗಳೆಂಬ ನಾಮಭೇದವಿರುವಂತೆ ಜೀವ ಬ್ರಹ್ಮರೆಂಬ ನಾಮಮಾತ್ರ ಭೇದವಿರುವುದು. ಆದುದರಿಂದ ವಸ್ತು ಒಂದೇ ಹೊರತು ಎರಡಲ್ಲ. ಘಟಾಕಾಶ ಮಹಾಕಾಶಗಳ ಮಧ್ಯೆ ಇರುವ ಮುಚ್ಚಳಸ್ವರೂಪವಾದ ತೆರೆಯನ್ನು ತೆಗೆಯುವುದೇ ಜೀವಂತನಾಗಿರುವಾಗಲೆ ಮುಕ್ತಿಯನ್ನು ಪಡೆಯುವಿಕೆ, ಆತ್ಮಸಾಕ್ಷಾತ್ಕಾರ, ಜೀವಬ್ರಹ್ಮರ ಏಕತ್ವದ ತತ್ವವಾಗಿರುವುದು. ಘಟವೇ ಒಡೆದು ಹೋಗುವಿಕೆಯು ದೇಹಪತನಕಾಲದಲ್ಲಿ ಉಂಟಾಗುವ ವಿದೇಹ ಕೈವಲ್ಯದ ತತ್ವವಾಗಿರುವುದು.

ಈ ಮೇಲಿನ ತತ್ವವನ್ನು ಚತುರ್ಮುಖಬ್ರಹ್ಮನು ಶ್ರೀರಾಮನಿಗೆ ನೀನೇ ನಾರಾಯಣನು. ನಿನ್ನನ್ನು ನೀನು ಏತಕ್ಕೆ ತಿಳಿದುಕೊಳ್ಳಲಿಲ್ಲವೆಂಬದಾಗಿ ಹೇಳಿರುವುದಕ್ಕೆ ಅನ್ವಯ ಮಾಡೋಣ. ಶ್ರೀಮನ್ನಾರಾಯಣನೇ ಕೌಸಲ್ಯಾಗರ್ಭದಲ್ಲಿ ಅವತರಿಸಿ ಶ್ರೀರಾಮನೆನಿಸಿಕೊಂಡನೆಂದರೆ—ಮಹಾಕಾಶಕ್ಕೆ ಘಟಾಕಾಶವೆಂಬ ಹೆಸರು ಬರಲು ಘಟದ ಸೃಷ್ಟಿಯು ಕಾರಣವಾಯಿತು. ಇದರಂತೆ ಶ್ರೀಮನ್ನಾರಾಯಣಸ್ವರೂಪಿಯಾದ ಪರಬ್ರಹ್ಮನಿಗೆ ಲಿಂಗ ದೇಹಕ್ಕೆ ಪ್ರಧಾನವಾದ ಬುದ್ಧಿಯು ಸೃಷ್ಟಿಯಾಗಿ ಈ ಸೃಷ್ಟಿಯಿಂದ ಪ್ರತಿಬಿಂಬಚೈತನ್ಯನೆಂಬ ನಾಮಧೇಯವು ಬರುವ ತತ್ವವೇ ಕೌಸಲ್ಯಾಗರ್ಭದಲ್ಲಿ ಅವತರಿಸಿದ ತತ್ವವಾಗಿರುವುದು ಬುದ್ಧಿಯಲ್ಲಿರುವ ಪ್ರತಿಬಿಂಬಚೈತನ್ಯನಿಗೆ ಸೃಷ್ಟಿಯಾದನಂತರ ಸ್ಥಿತಿಯಲ್ಲಿರುವ ಉಪಾಧಿಯೂ ಬಂದಿತು. ಹೇಗೆಂದರೆ ಅಹಂ ಜ್ಞಾನವೇ ಶೇಷವಾಗಿರುವುದೆಂದರೆ ಸರ್ವವೂ ತಾನೆಂಬ ಸರ್ವಜ್ಞತ್ವದ ಸ್ವರೂಪವಾಗಿರುವ ಶುದ್ಧಸತ್ವಪ್ರಧಾನಮಾಯೋಪಾಧಿಯು ಬಂದಿತು. ಈ ಸರ್ವಜ್ಞತ್ವದ ಉಪಾಧಿಯನ್ನು ಮೀರಿ ಕಿಂಚಿಜ್ಞತ್ವವಾಗಿರುವ ಮಲಿನ ಮಾಯಾ ಅಥವಾ ಅವಿದ್ಯೋಪಾಧಿಯು ಮೂರನೆ ಉಪಾಧಿಯಾಗಿರುವುದು. ಎರಡು ಮೂರನೆಯ ಉಪಾಧಿಗಳು ಸ್ಥಿತಿ ಅಥವಾ ಇರುವಿಕೆಯ ಉಪಾಧಿಗಳಾಗಿರುವುವು.

ಮೇಲಿನ ತತ್ವದಂತೆ ಪರಮಾತ್ಮನಾದ ಶ್ರೀಮನ್ನಾರಾಯಣನಿಗೆ ಕೌಸಲ್ಯಾಗರ್ಭದಲ್ಲಿ ಅವತರಿಸುವ ಸೃಷ್ಟಿಯ ತತ್ವದ ಉಪಾಧಿ ಬಂದು ಶ್ರೀರಾಮಚಂದ್ರನೆಂಬ ನಾಮಧೇಯ ಬಂತು. ಬುದ್ಧಿಯಲ್ಲಿ ಪ್ರತಿಬಿಂಬಿತನಾದ ಪರಮಾತ್ಮನಿಗೆ ಶುದ್ಧಸತ್ವಗುಣದ ಉಪಾಧಿ ಬರುವುದೇ ಶ್ರೀರಾಮಚಂದ್ರನಿಗೆ ಶುದ್ಧಸತ್ವಪ್ರಧಾನಮಾಯಾಸ್ವರೂಪಳಾದ ಸೀತಾದೇವಿಯು ಪತ್ನಿಯಾದ ತತ್ವ. ಬುದ್ಧಿಯಲ್ಲಿ ಪ್ರತಿಬಿಂಬಿತನಾದ ಪರಮಾತ್ಮನಿಗೆ ಸ್ಥಿತಿಗೆ ಪ್ರಥಮೋಪಾಧಿಯಾದ ಸರ್ವಜ್ಞತ್ವದ ಉಪಾಧಿಯನ್ನು ಮುಚ್ಚಿಕೊಂಡು ಕಿಂಚಿಜ್ಞತ್ವವು ವಿಜೃಂಭಿಸುವುದೇ ಸೀತಾದೇವಿಯನ್ನು ರಾವಣನು ಬಂಧನದಲ್ಲಿಟ್ಟ ತತ್ವವಾದ ಅವಿದ್ಯಾ ಉಪಾಧಿಯಾಗಿರುವುದು.

ಶ್ರೀರಾಮಚಂದ್ರನು ರಾವಣನನ್ನು ವಧೆಮಾಡಿ ಸೀತಾದೇವಿಯನ್ನು ಅಗ್ನಿಪ್ರವೇಶ ಮಾಡಿಸಿರುವುದರಿಂದ ಯಾವ ಉಪಾಧಿಗಳೂ ಇಲ್ಲದೆ ತಾನೇತಾನಾಗಿರುವಂತೆ ಈ ಸೋಪಾನ ವನ್ನು ಹತ್ತಿದ ಅಧಿಕಾರಿಯು ಜೀವಚೈತನ್ಯವು ಪರಬ್ರಹ್ಮಚೈತನ್ಯದ ಸಾಕ್ಷಾತ್ಕಾರ ಅಥವಾ ಸಮತೆಯನ್ನು ಪಡೆಯುವುದು. ಹೀಗೆ ಸಮತೆಯನ್ನು ಪಡೆಯುವಿಕೆಯೇ ಪರಮಾತ್ಮ ಸಾಕ್ಷಾತ್ಕಾರವಾದ ನಿರ್ವಿಕಲ್ಪಸಮಾಧಿಯೆನಿಸಿಕೊಳ್ಳುವುದು. ಮೇಲೆ ವಿವರಿಸಿಕೊಂಡು ಬಂದ ತಾತ್ಪರ್ಯಗಳಿಗೆ ಶ್ರುತ್ಯಾದಿ ಆಧಾರಗಳನ್ನು ಕೊಟ್ಟು ತತ್ವವನ್ನು ದೃಢೀಕರಿಸೋಣ. ಇದೇ ತಾತ್ಪರ್ಯಕ್ಕೆ ಯೋಗತತ್ತ್ವೋಪನಿಷತ್ ಮುಂತಾದ ಅನೇಕ ಶ್ರುತಿಗಳಲ್ಲಿ,

ಸಮಾಧಿ ಸ್ಸಮತಾವಸ್ಥಾ ಜೀವಾತ್ಮ ಪರಮಾತ್ಮನೋಃ |

ತಾ|| ಜೀವಾತ್ಮ ಪರಮಾತ್ಮರುಗಳ ಸಮತೆಯೇ ಸಮಾಧಿಯೆನಿಸುವುದು. ಎಂಬ ವಾಕ್ಯವಿರುವುದು. ಮತ್ತು ಶಾಂಡಿಲ್ಯೋಪನಿಷತ್ತಿನಲ್ಲಿ,

ಜೀವಾತ್ಮ ಪರಮಾತ್ಮೈಕ್ಯಾವಸ್ಥಾ ತ್ರಿಪುಟಿರಹಿತಾ |
ಪರಮಾನಂದಸ್ವರೂಪಾ ಶುದ್ಧ ಚೈತನ್ಯಾತ್ಮಿಕಾ ಭವತಿ ||

ತಾ|| ತ್ರಿಪುಟಿ ಇಲ್ಲದ ಜೀವಾತ್ಮಪರಮಾತ್ಮರ ಸಾಕ್ಷಾತ್ಕಾರವಾಗುವ ನಿಜಾನಂದರೂಪ ವಾಗಿ ಶುದ್ಧ ಚೈತನ್ಯವಾಗಿರುವುದೆ ಸಮಾಧಿ ಎಂದು ಹೇಳಿದೆ. ಅನ್ನಪೂರ್ಣೋಪನಿಷತ್ತಿನಲ್ಲಿ,

ಸಮಾಧಿ ಸ್ಸಂವಿದುತ್ಪತ್ತಿಃ ಪರಜೀವೈಕತಾಂ ಪ್ರತಿ ||

ತಾ|| ಜೀವಾತ್ಮಪರಮಾತ್ಮರ ಏಕತ್ವಜ್ಞಾನವೇ ಸಮಾಧಿಯೆನಿಸುವುದೆಂದು ಹೇಳಿದೆ.

ಸೀತಾದೇವಿಯು ಅಗ್ನಿಪ್ರವೇಶ ಮಾಡಿದಮೇಲೆ ಶ್ರೀರಾಮನೇ ಶ್ರೀಮನ್ನಾರಾಯಣ ಸ್ವರೂಪನೆಂದು ಸೂಚಿಸುವ ತತ್ವವಾದ ಜೀವಬ್ರಹ್ಮರ ಏಕತ್ವದ ತತ್ವಕ್ಕೆ ಕಠೋಪನಿಷತ್ತಿನಲ್ಲಿ,

ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ |
ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮ ||

ತಾ|| ಶುದ್ಧೋದಕದಲ್ಲಿ ಸುರಿದ ಶುದ್ಧೋದಕವು ಯಾವ ರೀತಿ ಭೇದತಿಳಿಯದಂತೆ ಏಕವಾಗುತ್ತದೋ ಅದರಂತೆ ಪರಮಾತ್ಮಸಾಕ್ಷಾತ್ಕಾರವನ್ನು ಹೊಂದಿದ ಮಹಾತ್ಮನ ಜೀವಾತ್ಮನು ಪರಮಾತ್ಮನೇ ಆಗುತ್ತಾನೆ, ಎಂದು ಹೇಳಿರುವುದು.

ಇಂತಹ ಆತ್ಮಸಾಕ್ಷಾತ್ಕಾರದ ಸ್ವರೂಪಕ್ಕೆ ನಿರ್ವಿಕಲ್ಪಸಮಾಧಿಯೆಂದು ಹೆಸರು ಬರಲು ಕಾರಣವೇನೆಂದರೆ, ವಿಕಲ್ಪವೆಂದರೆ "ವಿಕಲ್ಪಯತಿ ನೃಣಾಮುತ್ಪತ್ತಿ ವಿನಾಶಮಿತಿ ವಿಕಲ್ಪಃ (ಕ್ಲೃಪ ಕ್ಲೃಪ್ತೌ)" ನರರಿಗೆ ಜನನ ಮರಣಗಳನ್ನುಂಟುಮಾಡುವುದು ವಿಕಲ್ಪವು.

ಜನನ ಮರಣಗಳನ್ನು ಧ್ವಂಸಮಾಡುವುದು ನಿರ್ವಿಕಲ್ಪವೆನ್ನಲ್ಪಡುವುದು. ಪರಮಾತ್ಮ ಸಾಕ್ಷಾತ್ಕಾರಕ್ಕೆ ಸಮಾಧಿಯೆಂದು ಮೇಲೆಯೇ ತಿಳಿಸಿತಷ್ಟೆ! ಆತ್ಮಸಾಕ್ಷಾತ್ಕಾರವು ಜನನ ಮರಣಗಳನ್ನು ಧ್ವಂಸಮಾಡುವುದಾದುದರಿಂದ ಇದಕ್ಕೆ ನಿರ್ವಿಕಲ್ಪಸಮಾಧಿಯೆಂದು ಹೆಸರು. ಇಂತಹ ನಿರ್ವಿಕಲ್ಪಸಮಾಧಿಸ್ಥಿತಿಯನ್ನು ಪಡೆದ ಮಹಾತ್ಮರಿಗೆ ಪುನರ್ಜನ್ಮವಿಲ್ಲ ವೆನ್ನುವ ತಾತ್ಪರ್ಯಕ್ಕೆ,

" ನಚಪುನರಾವರ್ತತೆ ನಚಪುನರಾವರ್ತತೆ ನಚಪುನರಾವರ್ತತೆ ||

ಪುನರ್ಜನ್ಮವಿಲ್ಲ ಪುನರ್ಜನ್ಮವಿಲ್ಲ ಪುನರ್ಜನ್ಮವಿಲ್ಲವೆಂದು ಶ್ರುತಿಗಳು ಸಾರುತ್ತಲಿವೆ. ಈ ನಿರ್ವಿಕಲ್ಪಸಮಾಧಿಯ ಫಲವನ್ನು ಶ್ರೀವಿದ್ಯಾರಣ್ಯರವರು ಪಂಚದಶಿಯಲ್ಲಿ,

ಅಮುನಾ ವಾಸನಾಜಾಲೇ ನಿಶ್ಶೇಷಂ ಪ್ರವಿಲಾಪಿತೆ |
ಸಮೂಲೋನ್ಮೂಲಿತೇ ಪುಣ್ಯಪಾಪಾಖ್ಯೇ ಕರ್ಮಸಂಚಯೇ ||

ತಾ|| ಸಂಸಾರಕ್ಕೆ ಕಾರಣವಾದ ವಾಸನಾಸಮೂಹವೆಲ್ಲವೂ ಈ ಸಮಾಧಿಯಿಂದ ನಿಶ್ಶೇಷವಾಗಿ ನಾಶಹೊಂದುವುದು. ಪುಣ್ಯಪಾಪಗಳೆಂಬ ಅಪರಿಮಿತ ಕರ್ಮರಾಶಿಯೆಲ್ಲ ಇದಕ್ಕೆ ಬೇರೆನಿಂತಿರುವ ಅಜ್ಞಾನಸಹಿತವಾಗಿ ನಾಶಹೊಂದುವುದು. ಎಂದು ಹೇಳಿರುವರು.

ಮೇಲಿನ ವಿದ್ಯಾರಣ್ಯರವರ ವಾಕ್ಯಕ್ಕೆ ಸರಿಯಾಗಿ "ಕ್ಷೀಯಂತೇ ಚಾಸ್ಯಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ" ಎಂಬ ಶ್ರುತಿಯೂ "ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾ ತ್ಕುರುತೇ ತಥಾ" ಎಂಬ ಶ್ರೀಕೃಷ್ಣಪರಮಾತ್ಮನ ವಚನವೂ ಆಧಾರವಾಗಿರುವುವು. ಅಮೃತ ವೆಂದರೆ ಮೋಕ್ಷವನ್ನು ಅಮೃತ ಶಬ್ದದಿಂದ ಹೇಳುವ ಕಾರಣವೇನೆಂದರೆ—ಪುಷ್ಪದಲ್ಲಿ (ಕಮಲದಲ್ಲಿ) ಅಮೃತವಿರುವುದೇ ಹೊರತು ಕುಸುಮದಲ್ಲಿರುವುದಿಲ್ಲ. ದುಂಬಿಗಳು ಕಮಲ ದಲ್ಲಿರುವ ಅಮೃತ ಪಾನಮಾಡುತ್ತವೆ. ಇದರಂತೆ ನಮ್ಮ ಸಹಸ್ರಾರಕಮಲವು ಅಮೃತಕ್ಕೆ ಮೂಲಸ್ಥಾನವಾಗಿರುವುದರಿಂದ ಬುದ್ಧಿವೃತ್ತಿಯು ಇಲ್ಲಿ ಲಯವನ್ನು ಪಡೆದು ಅಮೃತ ವೆಂದರೆ ಮೋಕ್ಷವನ್ನು ಹೊಂದುವುದು. ಈ ನಿರ್ವಿಕಲ್ಪಸಮಾಧಿಯು ಅಮೃತಧಾರೆಯನ್ನು ಅಪರಿಮಿತವಾಗಿ ವರ್ಷಿಸುವುದರಿಂದ ಇದನ್ನು ಬ್ರಹ್ಮಜ್ಞಾನಿಗಳಾದ ಮಹಾತ್ಮರು ಧರ್ಮ ಮೇಘವೆಂದು ಕರೆಯುವರೆಂದು ಶ್ರೀವಿದ್ಯಾರಣ್ಯರವರು ಪಂಚದಶಿಯಲ್ಲಿ,

ಧರ್ಮಮೇಘಮಿಮಂ ಪ್ರಾಹುಃ ಸಮಾಧಿಂಯೋಗವಿತ್ತಮಾಃ |
ವರ್ಷತ್ಯೇಷ ಯತೋಽಸರ್ಮಾನ್ಮೃತಧಾರಾಸ್ಸಹಸ್ರಶಃ ||

ತಾ|| ಬ್ರಹ್ಮವಿದರು ಈ ನಿರ್ವಿಕಲ್ಪಸಮಾಧಿಯನ್ನು ಧರ್ಮಮೇಘವೆನ್ನುವರು. ಕಾರಣವೇನೆಂದರೆ ಮೇಘವು ವರ್ಷಬಿಂದುಗಳನ್ನು ಸುರಿಯುವಂತೆ, ಈ ನಿರ್ವಿಕಲ್ಪ

ಸಮಾಧಿಯು ಸುಕೃತಲಕ್ಷಣಗಳಾದ ಅಮೃತಧಾರೆಗಳನ್ನು ಅಪರಿಮಿತವಾಗಿ ವರ್ಷಿಸುವುದು. ಎಂದು ಹೇಳಿರುವರು.

ಪರಮಾತ್ಮಸಾಕ್ಷಾತ್ಕಾರಸ್ವರೂಪವಾದ ಈ ನಿರ್ವಿಕಲ್ಪಸಮಾಧಿಗೆ ಅಸಂಪ್ರಜ್ಞಾತ ಸಮಾಧಿಯೆಂಬ ಹೆಸರೂ ಉಂಟು. ಈ ಅರ್ಥಕ್ಕೆ ಪತಂಜಲಿಮಹರ್ಷಿಗಳು ಯೋಗಸೂತ್ರದಲ್ಲಿ,

"ವಿರಾಮಪ್ರತ್ಯಯಾಭ್ಯಾಸ ಪೂರ್ವಸಂಸ್ಕಾರ ಶೇಷೋನ್ಯಃ"

ತಾ|| ತ್ರಿಪುಟಿಯಾದ ಸಂಪ್ರಜ್ಞಾತಸಮಾಧಿಗಳ ವಾಸನೆಯ ಸಂಬಂಧವೇ ಇಲ್ಲ ದೆಯೂ ನಿವೃತ್ತಿಯುಳ್ಳದ್ದಾಗಿಯೂ ಇರುವುದು ಅಸಂಪ್ರಜ್ಞಾತಸಮಾಧಿಯಾಗಿರುತ್ತದೆ. ಈ ಸಮಾಧಿಯಲ್ಲಿ ತಿಳಿಯತಕ್ಕ ಪದಾರ್ಥವೇ ಇರುವುದಿಲ್ಲವಾದುದರಿಂದ ಅಸಂಪ್ರಜ್ಞಾತ ವೆಂದು ಹೆಸರು ಎಂದು ಹೇಳಿರುವರು.

ಸಂಪ್ರಜ್ಞಾತಸಮಾಧಿಯೆಂದರೂ ಸವಿಕಲ್ಪಸಮಾಧಿಯೆಂದರೂ ಒಂದೇ. ಅಸಂ ಪ್ರಜ್ಞಾತಸಮಾಧಿಯೆಂದರೂ ನಿರ್ವಿಕಲ್ಪಸಮಾಧಿಯೆಂದರೂ ಒಂದೇ. ಪರಮಾತ್ಮಸಾಕ್ಷಾ ತ್ಕಾರವಾದ ಈ ನಿರ್ವಿಕಲ್ಪಸಮಾಧಿಯ ಮಹತ್ವನ್ನು ಸೌಭಾಗ್ಯಲಕ್ಷ್ಮ್ಯುಪನಿಷತ್ತು, ಮಹೋಪನಿಷತ್ತು, ಮತ್ತು ಶಾಂಡಿಲ್ಯೋಪನಿಷತ್ತುಗಳಲ್ಲಿ,

ಅಹಂಭಾವಂ ಪರಿತ್ಯಜ್ಯ ಜಗದ್ಭಾವ ಮನೀದೃಶಂ |
ನಿರ್ವಿಕಲ್ಪಸ್ಥಿತೋ ವಿದ್ವಾನ್ ಭೂಯೋ ನಾಪ್ಯನುಶೋಚತಿ ||
ಸಲಿಲೆ ಸೈಂಧವಂ ಯದ್ವತ್ಸಾಮ್ಯಂ ಭವತಿ ಯೋಗತಃ |
ತಥಾತ್ಮಮನಸೋರೈಕ್ಯಂ ಸಮಾಧಿರಭಿಧೀಯತೆ ||

ತಾ|| ಅಹಂಭಾವವನ್ನು ಪರಿತ್ಯಜಿಸಿ ಸಮಾಧಿಯಲ್ಲಿ ನಿಂತ ವಿದ್ವಾಂಸನು ಪುನಃ ಶೋಚಿಸುವುದಿಲ್ಲ. ಎಂದರೆ ಸಂಸಾರಶೋಕವನ್ನು ಹೊಂದುವುದಿಲ್ಲ. ಜಲದಲ್ಲಿ ಕಲೆತ ಉಪ್ಪು ಜಲವೇ ಆಗುವ ಹಾಗೆ ವೃತ್ತಿಯು ಆತ್ಮನಲ್ಲಿ ಏಕತ್ವವನ್ನು ಪಡೆಯುವುದೇ ಸಮಾಧಿ ಎನಿಸಿಕೊಳ್ಳುವುದು, ಎಂದು ಹೇಳಿರುವುದು.

ಈ ಮೇಲಿನ ಶ್ರುತಿವಾಕ್ಯದಲ್ಲಿ ಅಹಂಜ್ಞಾನವೇ ಶೇಷವಾಗಿರುವ ತತ್ವದಮಳಾದ ಸೀತೆಯ ಅಗ್ನಿಪ್ರವೇಶ, ರಾವಣನ ವಧೆ, ಮುಂತಾದ ತತ್ವಗಳೆಲ್ಲಾ ಅಡಕವಾಗಿರುವುವು. ಸೀತಾದೇವಿಯು ಅಗ್ನಿಪ್ರವೇಶಮಾಡಿದ ಮೇಲೆ ಚತುರ್ಮುಖಬ್ರಹ್ಮನು ಶ್ರೀರಾಮನನ್ನು ಕುರಿತು ನೀನೇ ಸಾಕ್ಷಾತ್ ಶ್ರೀಮನ್ನಾರಾಯಣನು. ನಾನು ಹೇಳುವ ಮಾತು ಸತ್ಯ ವಾದುದು. ಎಂಬದಾಗಿ ಹೇಳಿರುವ ತತ್ವಕ್ಕೆ ಸರಿಯಾಗಿ ಶ್ರೀಶಂಕರಭಗವತ್ಪಾದಾಚಾರ್ಯರವರು

ಆತ್ಮಸಾಕ್ಷಾತ್ಕಾರಕ್ಕೆ ನಿರ್ವಿಕಲ್ಪಸಮಾಧಿ ಹೊರತು ಮತ್ತಾವ ದಾರಿಯೂ ಖಂಡಿತವಾಗಿಲ್ಲ ವೆಂದು ವಿವೇಕಚೂಡಾಮಣಿ ೩೬೬ನೆಯ ಶ್ಲೋಕದಲ್ಲಿ,

> ನಿರ್ವಿಕಲ್ಪಕ ಸಮಾಧಿನಾ ಸ್ಫುಟಂ ಬ್ರಹ್ಮತತ್ತ್ವ ಮವಗಮ್ಯತೆ ಧ್ರುವಂ
> ನಾ ನ್ಯಥಾ ಚಲತಯಾ ಮನೋಗತೇಃ ಪ್ರತ್ಯಯಾನ್ತರವಿಮಿಶ್ರಿತಂಭವೇತ್

ತಾ|| ನಿರ್ವಿಕಲ್ಪಸಮಾಧಿಯೊಂದರಿಂದಲೇ ಬ್ರಹ್ಮತತ್ತ್ವವು ನಿಶ್ಚಯವಾಗಿಯೂ, ಸ್ಫುಟವಾಗಿಯೂ ವ್ಯಕ್ತವಾಗುವುದೇ ಹೊರತು, ಮತ್ತಾವ ಮಾರ್ಗದಿಂದಲೂ ಖಂಡಿತ ವಾಗಿಯೂ ಸಿದ್ಧಿಸಲಾರದು, ಕಾರಣವೇನೆಂದರೆ—ಅತ್ಯಂತ ಚಂಚಲವಾದ ಮನಸ್ಸು ನಿಮಿಷಮಾತ್ರದಲ್ಲಿ ವಿಷಯಗಳಾಕಾರವಾಗಿ ಪರಿಣಮಿಸಿ ಭ್ರಷ್ಟವಾಗುವುದು. ಆದುದ ರಿಂದ ನಿರ್ವಿಕಲ್ಪಸಮಾಧಿಯುಂಟಾದ ಹೊರತು ಪರಮಾತ್ಮತತ್ತ್ವವು ಸ್ಫೂರ್ತಿಯಾಗುವುದಿಲ್ಲ, ಎಂದು ಹೇಳಿರುವರು.

ನಿರ್ವಿಕಲ್ಪಸಮಾಧಿಯ ಲಕ್ಷಣದಿಂದ ಸೀತಾಗ್ನಿಪ್ರವೇಶವಾದ ಮೇಲೆ ಇರುವ ಶ್ರೀರಾಮನ ಸ್ಥಿತಿಯೇ ಆತ್ಮಸಾಕ್ಷಾತ್ಕಾರದ ತತ್ತ್ವವೆಂದು ವಿವರಿಸಿತು. ಓಂಕಾರ ವಿಚಾರ ದಿಂದಲೂ ಈ ತತ್ತ್ವವನ್ನು ವಿವರಿಸೋಣ.

## ಓಂಕಾರದ ವಿಚಾರ.

ಚತುರ್ಮುಖಬ್ರಹ್ಮನು ಶ್ರೀರಾಮನನ್ನು ಕುರಿತು ನೀನೇ ಆದಿಪುರುಷನು, ಅದ್ವಯನು ಮಹಾದೇವನು, ಓಂಕಾರರೂಪನೆಂದು ಹೇಳಿರುವನು. ಈ ಸೋಪಾನಕ್ಕೆ ಬಂದಿರುವ ಅಧಿಕಾರಿಯು ಓಂಕಾರರೂಪನೇ ಆಗಿರುವನೆಂಬುದಕ್ಕೂ ಅನುಷ್ಠಾನಕ್ರಮದಿಂದ ತಿಳಿದು ಕೊಳ್ಳೋಣ. ಸಮಾಧಿಯ ಅನುಷ್ಠಾನವನ್ನು ಪ್ರಾರಂಭಿಸಬೇಕಾದರೆ ಓಂಕಾರೋಚ್ಚಾರಣೆ ಯಿಂದ ಪ್ರಾರಂಭಮಾಡಬೇಕಾದ ತತ್ತ್ವವನ್ನು ಸಮುದ್ರರಾಜನ ಮೇಲೆ ಶ್ರೀರಾಮನು ಬ್ರಹ್ಮಾಸ್ತ್ರಪ್ರಯೋಗಮಾಡಿದ ತತ್ತ್ವದಲ್ಲಿ ತಿಳಿಸಿರುವುದಲ್ಲದೆ ಇದುವರೆಗೂ ಅನೇಕ ಸಂದರ್ಭ ಗಳಲ್ಲಿ ತಿಳಿಸಿಕೊಂಡು ಬಂದಿರುತ್ತದೆ. ಸಮಾಧಿಯ ಅನುಷ್ಠಾನದ ಪ್ರಥಮಾವಸ್ಥೆಯಲ್ಲಿ ಉಚ್ಚಾರಣೆಮಾಡಿಕೊಂಡು ಬೆಳೆಸಿದ ಓಂಕಾರದಲ್ಲಿ ಹೆಚ್ಚುಕಾಲ ನಿಂತುಕೊಂಡು ಸಮಾ ಧಿಯ ಅನುಷ್ಠಾನಮಾಡಲು ಸಾಧ್ಯವಿಲ್ಲ. ಅಂದರೆ ಬೆಳೆಸಿದ ಓಂಕಾರೋಚ್ಚಾರಣೆಯು ಬಿಂದುಸ್ವರೂಪದಲ್ಲಿ ಪ್ರಥಮಾವಸ್ಥೆಯಲ್ಲಿ ನಿಂತುಕೊಳ್ಳುವುದು. ಈ ಸ್ವರೂಪದಲ್ಲಿ ಅವಿದ್ಯೆಯ ಸೆಳೆತದಿಂದ ಅನೇಕಾವರ್ತಿ ಬಿಂದುವು ಬಿಡಲ್ಪಡುವುದರಿಂದ ಓಂಕಾರಸ್ವರೂಪವು ನಿಲುಗಡೆಯಾಗುವುದಿಲ್ಲ. ಆದುದರಿಂದ ಇದು ಓಂಕಾರಸ್ವರೂಪವಾದ ಪರಮಾತ್ಮತತ್ತ್ವ ವಾಗಲಾರದು. ಹೇಗೆಂದರೆ—ಓಂಕಾರದ ಪ್ರಥಮಮಾತ್ರೆಯಾದ ಅಕಾರವೇ ವೈಶ್ವಾನರನು. ಜಾಗ್ರತ್ಕಾಲದಲ್ಲಿ ನಡೆಯುವ ಅಂತಃಕರಣದ ವ್ಯಾಪಾರವನ್ನು ಪ್ರಕಾಶಪಡಿಸುತ್ತಾ ಇರುವ

ಬುದ್ಧಿಯಲ್ಲಿರುವ ಪ್ರತಿಬಿಂಬಚೈತನ್ಯಸಿಗೆ ವೈಶ್ವಾನರನೆಂಬ ಹೆಸರು ಸಲ್ಲುವುದು. ಇದೇ ತಾತ್ಪರ್ಯಕ್ಕೆ ಮಾಂಡೂಕ್ಯೋಪನಿಷತ್ತಿನಲ್ಲಿ,

ಜಾಗರಿತಸ್ಥಾನೋ ವೈಶ್ವಾನರೋಽ ಕಾರಃಪ್ರಥಮ ಮಾತ್ರಾ ಆಪ್ತೇ ರಾದಿ |
ಮತ್ತ್ವಾದ್ವಾ ಆಪ್ನೋತಿ ಹವೈಸರ್ವಾ ಕಾಮಾನಾದಿಶ್ಚ ಭವತಿ ಯ ಏವಂವೇದ||

ತಾ|| ಎಚ್ಚರವೆಂಬ ಅವಸ್ಥೆಯಲ್ಲಿರುವ ವೈಶ್ವಾನರನು ಜ್ಞಾನೇಂದ್ರಿಯ ಕರ್ಮೇಂದ್ರಿಯ ಗಳಲ್ಲಿ ಬುದ್ಧಿವೃತ್ತಿಯೊಡನೆ ವ್ಯಾಪಿಸಿಕೊಂಡು ಪ್ರಕಾಶಪಡಿಸುತ್ತಿರುವವನಾಗಿ ಓಂಕಾರದಲ್ಲಿನ ಪ್ರಥಮಾಕ್ಷರವಾದ "ಅ"ಕಾರನು. ಜೀವಾತ್ಮನು ನಿರ್ಲಿಪ್ತನಾಗಿ ಜಾಗ್ರತ್ಕಾಲದ ವ್ಯಾಪಾರ ವನ್ನು ಪ್ರಕಾಶಪಡಿಸುತ್ತಿರುವವನೆಂದೂ ಇವನೇ ಪರಮಾತ್ಮನೆಂದೂ ಯಾವನು ತಿಳಿಯು ವನೋ ಅವನೇ ಆದಿಪುರುಷನಾಗುವನು, ಎಂದು ಹೇಳಿರುವುದು

ಮೇಲಿನ ಶ್ರುತಿವಾಕ್ಯದಲ್ಲಿರುವ ವೈಶ್ವಾನರನೆಂಬ ನಾಮದ ತತ್ವವೂ ಶ್ರೀರಾಮಚಂದ್ರನ ತತ್ವಕ್ಕೆ ಅನ್ವಯವಾಗಿತ್ತು. ಮಾರೀಚನ ಸಹಾಯದಿಂದ ರಾವಣನು ಸೀತಾಪಹರಣ ಮಾಡಿದ ತತ್ವದಾರಭ್ಯ ರಾಮ ರಾವಣರ ಯುದ್ಧಪ್ರಾರಂಭವಾಗುವವರೆಗೆ ಶ್ರೀರಾಮಚಂದ್ರನ ತತ್ವವು ವೈಶ್ವಾನರಾತ್ಮನ ತತ್ವದಲ್ಲಿತ್ತು. ಹೇಗೆಂದರೆ, ಸೀತಾಪಹರಣದ ತತ್ವವೇ ಬಹಿರ್ವ್ಯಾ ಪಾರಕ್ಕೆ ಪ್ರಾರಂಭವೆಂಬ ತತ್ವವಾಗಿರುವುದಷ್ಟೆ! ಬಹಿರ್ವ್ಯಾಪಾರಸ್ವರೂಪವಾದ ಉಪಾಧಿ ಯಿರುವವರೆಗೂ ಪ್ರತಿಬಿಂಬಚೈತನ್ಯನಿಗೆ ವಿಶ್ವನೆಂಬ ನಾಮವು. ಬಹಿರ್ವ್ಯಾಪಾರದ ಉಪಾಧಿನಿಂತು ಸ್ವಪ್ನಾವಸ್ಥೆಯಲ್ಲಿ ಪ್ರತಿಬಿಂಬಚೈತನ್ಯನು ಪ್ರಕಾಶಪಡಿಸುತ್ತಿದ್ದರೆ ತೈಜಸ ನೆಂಬ ನಾಮಬರುವುದು. ಯುದ್ಧದಲ್ಲಿ ಉಳಿದವರೆಲ್ಲರೂ ತಟಸ್ಥರಾಗಿ ರಾಮ ರಾವಣ ರಿಬ್ಬರೇ ಯುದ್ಧಕ್ಕೆ ' ಲ್ಲುವ ತೇಜೋನಾದಧ್ಯಾನವಿದ್ಯೆಯ ಸಮಾಧಿಯ ತತ್ವವೇ ಸ್ವಪ್ನಾ ವಸ್ಥೆಗೆ ಸದೃಶವಾಗಿರುವುದು. ಆದುದರಿಂದ ಸೀತಾಪಹರಣದಾರಭ್ಯ ತೇಜೋನಾದಧ್ಯಾನ ವಿದ್ಯೆಯ ಸೋಪಾನದವರೆಗೆ ಬಹಿರ್ವ್ಯಾಪಾರದ ಉಪಾಧಿಯನ್ನು ಪ್ರಕಾಶಪಡಿಸಿಕೊಂಡಿರುವು ದರಿಂದ ವಿಶ್ವನೆಂಬ ಹೆಸರು. ಅಂದರೆ ಸೀತಾಪಹರಣದಾರಭ್ಯ ಯುದ್ಧಪ್ರಾರಂಭದ ವರೆಗೆ ಬಹಿರ್ವ್ಯಾಪಾರದ ತತ್ವವಾದ್ದರಿಂದ ವಿಶ್ವತ್ವವಾಗಿರುವುದು. ಯುದ್ಧಪ್ರಾರಂಭದ ತತ್ವವೆಂದರೆ ಸಮಾಧಿಯ ಅಭ್ಯಾಸಪ್ರಾರಂಭವಿಂದ ವಿಶ್ವತ್ವಕ್ಕೆ ಇದ್ದ ಉಪಾಧಿಗಳನ್ನು ಉಪ ಸಂಹಾರಮಾಡಿಕೊಳ್ಳುವುದರ ತತ್ವವಾಗಿರುವುದು. ಓಂಕಾರದಲ್ಲಿನ "ಅ" ಕಾರವನ್ನು ರಾಮಾಯಣದ ತತ್ವಕ್ಕೆ ಅನ್ವಯಿಸಿತು. ಇನ್ನು ಓಂಕಾರದಲ್ಲಿನ ಉಕಾರವಾದ ತೈಜ ಸತ್ವದ ವಿಚಾರವನ್ನು ತೆಗೆದುಕೊಳ್ಳೋಣ.

ಓಂಕಾರದ ದ್ವಿತೀಯಮಾತ್ರೆಯಾದ ಉಕಾರವೇ ತೈಜಸನು. ಸ್ವಪ್ನಾವಸ್ಥೆಯಲ್ಲಿ ಬುದ್ಧಿಯೊಂದೇ ಸಂಕಲ್ಪಮಾತ್ರವಾದ ವೃತ್ತಿಗಳಿಂದ ವಿಷಯವ್ಯಾಪಾರಮಾಡುತ್ತಿರುವುದನ್ನು

ಪ್ರತಿಬಿಂಬಚೈತನ್ಯನು ಪ್ರಕಾಶಪಡಿಸುವವನಾದುದರಿಂದ ತೈಜಸನೆಂಬ ಹೆಸರು ಬಂದಿರುವುದು. ಇದೇ ತತ್ವಕ್ಕೆ ಮಾಂಡೂಕ್ಯೋಪನಿಷತ್ತಿನಲ್ಲಿ,

ಸ್ವಪ್ನಸ್ಥಾನ ಸ್ತೈಜಸ ಉಕಾರೋ ದ್ವಿತೀಯಾ ಮಾತ್ರೋತ್ಕರ್ಷಾ
ದುಭಯತ್ವಾ ದ್ವಾ ಉತ್ಕರ್ಷತಿ ಹವೈ ಜ್ಞಾನಸನ್ತತಿಂ ಸಮಾನಶ್ಚ
ಭವತಿ ನಾ ಸ್ಯಾಬ್ರಹ್ಮವಿತ್ಕುಲೇ ಭವತಿ ಯ ಏವಂ ವೇದ ||

ತಾ|| ಸ್ವಪ್ನಾವಸ್ಥೆಯಲ್ಲಿರುವ ತೈಜಸನು ವಿಶ್ವನಿಗಿಂತಲೂ ಉತ್ಕೃಷ್ಟನಾಗಿರುವನು. ಅಕಾರ, ಮಕಾರಗಳಿಗೆ ಮಧ್ಯದಲ್ಲಿರುವುದರಿಂದ ಉಕಾರವು ಎರಡನೆಯ ಮಾತ್ರೆಯು. ಯಾವನು ಹೀಗೆಂದು ತಿಳಿಯುವನೋ ಅವನು ಜ್ಞಾನವನ್ನು ಒಂದೇ ಸಮನಾಗಿ ಹೆಚ್ಚಿಸಿಕೊಳ್ಳುವನು. ಸಮನಾಗಿಯೇ ಇರುವನೆಂದರೆ ಉಪಶಾಂತತೆಯಲ್ಲಿರುವನು. ಇವನ ಕುಲದಲ್ಲಿ ಬ್ರಹ್ಮತತ್ವವನ್ನು ಅರಿಯದವನು ಇರುವುದಿಲ್ಲ. ಎಂದು ಹೇಳಿರುವುದು.

ಮೇಲಿನ ಶ್ರುತಿವಾಕ್ಯದಲ್ಲಿ ವಿಶ್ವನಿಗಿಂತ ತೈಜಸನು ಉತ್ಕೃಷ್ಟನೆಂದರೆ—ಪ್ರತಿಬಿಂಬಚೈತನ್ಯನಲ್ಲಿ ಶ್ರೇಷ್ಠತ್ವ ಕನಿಷ್ಠತ್ವವೆಂಬ ಅರ್ಥವೆಂದಿಗೂ ಅಲ್ಲ. ಅವಸ್ಥಾಸ್ವರೂಪವೆಂದರೆ ಉಪಾಧಿಯ ಸ್ವರೂಪದಲ್ಲಿ ಶ್ರೇಷ್ಠತ್ವ ಕನಿಷ್ಠತ್ವವೆಂಬ ತತ್ವವಾಗಿರುವುದು. ಜಾಗ್ರದವಸ್ಥೆಯಲ್ಲಿ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೊಡನೆ ಬುದ್ಧಿ, ಮನಸ್ಸು, ಚಿತ್ತ, ಅಹಂಕಾರಗಳೆಲ್ಲಾ ಕಾರ್ಯನಡಸುತ್ತಿರುತ್ತವೆ. ಸ್ವಪ್ನಾವಸ್ಥೆಯಲ್ಲಿ ಬುದ್ಧಿವೃತ್ತಿಯೊಂದೇ ಸಂಕಲ್ಪರೂಪದಲ್ಲಿ ಕರ್ತ್ರಾದಿ ಭಾವಗಳನ್ನು ಹೊಂದಿ ವಾಸನಾವಿಷಯವನ್ನು ಅನುಭವಿಸುತ್ತದೆ. ಈ ಸ್ಥಿತಿಯಲ್ಲಿಯೂ ಪ್ರತಿಬಿಂಬಚೈತನ್ಯನು ಪ್ರಕೃತಿಯ ಕಾರ್ಯವನ್ನು ಪ್ರಕಾಶಪಡಿಸಿಕೊಂಡು ಸಾಕ್ಷಿಯಾಗಿರುವನೇ ಹೊರತು ಯಾವ ಸಂಬಂಧವನ್ನೂ ಹೊಂದುವವನಲ್ಲ. ಆದುದರಿಂದ ಜಾಗ್ರದವಸ್ಥೆಗಿಂತಲೂ ಸ್ವಪ್ನಾವಸ್ಥೆಯಲ್ಲಿ ಉಪಾಧಿಗಳು ಕಡಿಮೆಯೆಂಬ ತತ್ವವೇ ಜಾಗ್ರದವಸ್ಥೆಗಿಂತ ಸ್ವಪ್ನಾವಸ್ಥೆಯು ಉತ್ಕೃಷ್ಟವೆನಿಸಿಕೊಳ್ಳುವುದು.

ಸೃಷ್ಟಿಕ್ರಮದಲ್ಲಿ ಪ್ರಥಮದಲ್ಲಿ ಈಶ್ವರನೆಂದೂ ಅನಂತರ ಹಿರಣ್ಯಗರ್ಭನೆಂದೂ, ತದನಂತರ ವಿರಾಟ್ ಎಂದೂ ಎನಿಸಿಕೊಳ್ಳುವಂತೆ ವ್ಯಷ್ಟಿಯಲ್ಲಿಯೂ ಪ್ರತಿಬಿಂಬಚೈತನ್ಯನು ಪ್ರಥಮದಲ್ಲಿ ಪ್ರಾಜ್ಞನೆಂದೂ, ಅನಂತರ ತೈಜಸನೆಂದೂ, ತದನಂತರ ವಿಶ್ವನೆಂದೂ ಉಪಾಧಿಗಳ ಭೇದದಿಂದ ಎನಿಸಿಕೊಳ್ಳುವನು. ಉಪಸಂಹಾರವೆಂದರೆ ಮೋಕ್ಷಕ್ರಮದಲ್ಲಿ ಪ್ರತಿಬಿಂಬಚೈತನ್ಯನು ಪ್ರಥಮದಲ್ಲಿ ವಿಶ್ವನೆಂಬ ನಾಮವನ್ನು ಹೋಗಲಾಡಿಸಿಕೊಂಡು ಅನಂತರ ತೈಜಸನೆಂಬ ನಾಮವನ್ನು ಹೋಗಲಾಡಿಸಿಕೊಂಡು ತದನಂತರ ಪ್ರಾಜ್ಞನೆಂಬ ನಾಮವನ್ನು ಹೋಗಲಾಡಿಸಿಕೊಂಡು ಉಪಾಧಿಗಳಿಲ್ಲದ ತುರೀಯನೆಂದರೆ ತನ್ನ ನಿಜನಾಮವಾದ ಪರಮಾತ್ಮನಾಮವನ್ನು ಪಡೆಯುತ್ತಾನೆ. ಉಪಾಧಿಭೇದದಿಂದ ಪ್ರತ್ಯೇಕವಾದ ಹೆಸರುಗಳು ಬಂದಿರುವುವೇ ಹೊರತು ಚೈತನ್ಯದಲ್ಲಿ ಯಾವ ಭೇದವೂ ಇಲ್ಲ.

ಮೇಲಿನ ತತ್ವದಂತೆ ಶ್ರೀರಾಮಚಂದ್ರನು ಅಯೋಧ್ಯೆಯಿಂದ ವನವಾಸಕ್ಕೆ ಹೊರಟು ತಮಸಾನದಿ ಮತ್ತು ಗುಹನಸ್ಥಳದ ತತ್ವವಾದ ಆನಂದಮಯಕೋಶದಲ್ಲಿದ್ದ ತತ್ವವೇ ಪ್ರಾಜ್ಞನ ತತ್ವವಾಗಿರುವುದು. ತಮಸಾನದಿಯಿಂದ ಹೊರಟು ಅತ್ರಿಮಹರ್ಷಿಗಳಾಶ್ರಮದ ತತ್ವವಾದ ಕಂಠದಲ್ಲಿರುವ ಮನೋಮಯಕೋಶದಲ್ಲಿದ್ದ ತತ್ವವೇ ತೈಜಸನ ತತ್ವವಾಗಿರುವುದು. ಅತ್ರಿಮಹರ್ಷಿಗಳಾಶ್ರಮದಿಂದ ಹೊರಟು ಪಂಚವಟಿಗೆ ಬಂದು ರಾವಣನಿಂದ ಸೀತಾಪಹರಣವಾಗುವ ಕಥೆಯ ತತ್ವವಾದ ಬಹಿರ್ವ್ಯಾಪಾರವೇ ವಿಶ್ವನ ತತ್ವವಾಗಿರುವುದು.

ಉಪಸಂಹಾರವೆಂದರೆ ಮೋಕ್ಷಕ್ರಮದಲ್ಲಿ ಸೀತಾಪಹರಣದಾರಭ್ಯ ರಾಮರಾವಣರಿಬ್ಬರೇ ಯುದ್ಧಮಾಡುವವರೆಗಿನ ಕಥೆಯ ತತ್ವವು ವಿಶ್ವನೆಂಬ ನಾಮವನ್ನು ಹೋಗಲಾಡಿಸಿಕೊಳ್ಳುವ ತತ್ವದ ವಿವರಣೆಯಾಗಿರುವುದು. ಅಂದರೆ ವೇದಾಂತಶ್ರವಣ, ಮನನ, ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣೆಗಳೂ, ಸಮಾಧಿಯ, ಅಭ್ಯಾಸದಲ್ಲಿ ಪ್ರಮುಖವಾದ ಭೋಗಶಕ್ತಿ ಮೊದಲಾದ ಅವಿದ್ಯಾಶಕ್ತಿಗಳ ನಿಗ್ರಹದ ಅನುಷ್ಠಾನಗಳೆಲ್ಲಾ ಪ್ರತಿಬಿಂಬಚೈತನ್ಯನಿಗೆ ವಿಶ್ವನೆಂಬ ನಾಮವನ್ನು ಹೋಗಲಾಡಿಸಲು ಮಾಡಬೇಕಾದ ಕರ್ತವ್ಯವಾಗಿರುವುದು. ಇಂದ್ರಜಿತು ಮೊದಲಾದ ಪ್ರಮುಖರೆಲ್ಲ ನಿಗ್ರಹಿಸಲ್ಪಟ್ಟು ರಾಮರಾವಣರಿಬ್ಬರೇ ಯುದ್ಧಮಾಡುವ ಮತ್ತು ರಾವಣನ ವಧೆಯ ತತ್ವವೇ ಪ್ರತಿಬಿಂಬಚೈತನ್ಯನಿಗೆ ಇರುವ ತೈಜಸನೆಂಬ ಹೆಸರನ್ನು ಹೋಗಲಾಡಿಸಿಕೊಳ್ಳುವುದಾಗಿ ಇರುವುದು. ರಾವಣನ ವಧೆಯಾಗಿ ಸೀತಾದೇವಿಯು ಶ್ರೀರಾಮನ ಸಮೀಪಕ್ಕೆ ಬರುವ, ಶ್ರೀರಾಮನು ಅವಳನ್ನು ತಿರಸ್ಕರಿಸುವ ಮತ್ತು ಅವಳು ಅಗ್ನಿಪ್ರವೇಶಮಾಡುವ ತತ್ವಗಳೇ ಪ್ರತಿಬಿಂಬಚೈತನ್ಯನಿಗೆ ಇದ್ದ ಪ್ರಾಜ್ಞನೆಂಬ ಹೆಸರನ್ನು ಹೋಗಲಾಡಿಸಿಕೊಳ್ಳುವುದರ ತತ್ವವಾಗಿರುವುದು. ಸೀತಾದೇವಿಯು ಅಗ್ನಿಪ್ರವೇಶಮಾಡಿದನಂತರ ಇರುವ ಶ್ರೀರಾಮನ ಸ್ಥಿತಿಯ ತತ್ವವೇ ಪ್ರಾಜ್ಞನೆಂಬ ಹೆಸರು ಹೋಗಿ ತುರೀಯನೆಂಬ ಹೆಸರು ಬರುವುದಾಗಿರುವುದು.

ಪ್ರತಿಬಿಂಬಚೈತನ್ಯನಿಗೆ ವಿಶ್ವ ತೈಜಸ ಪ್ರಾಜ್ಞರೆಂಬ ಹೆಸರುಗಳು ಬಂದಿರುವುದರಿಂದ ನಾಮಮಾತ್ರದಿಂದ ಯಾವ ಬಾಧೆಯೂ ಉಂಟಾಗಲಾರದು. ಪರಮಾತ್ಮನಿಗೆ ಅನಂತ ನಾಮಗಳನ್ನು ಕೊಟ್ಟರೂ ಬಾಧಕವಿರುವುದಿಲ್ಲ. ನಾಟಕದಲ್ಲಿ ಒಬ್ಬ ಪುರುಷನು ಸ್ತ್ರೀರಾಕ್ಷಸ, ಋಷಿ, ರಾಜ ಮೊದಲಾದ ಅನೇಕ ವೇಷಗಳನ್ನು ಹಾಕಿಕೊಳ್ಳುವನು. ಹೀಗೆ ಅನೇಕ ವೇಷಗಳ ಉಪಾಧಿಗಳಲ್ಲಿದ್ದರೂ, ಅವನು ಪುರುಷನೇ ಆಗಿರುವಂತೆ ಶ್ರೀರಾಮನ ತತ್ವಕ್ಕೆ ಬಂದಿದ್ದ ರಾವಣನ ಕಾರ್ಯಮುಂತಾದ ತತ್ವಗಳ ಉಪಾಧಿಗಳು ನಿವಾರಣೆಯಾಗಲು ಸಾಕ್ಷಾತ್ ಪರಮಾತ್ಮಚೈತನ್ಯನೇ ಆಗಿ ನಿಂತನು. ಇದೇ ತಾತ್ಪರ್ಯಕ್ಕೆ ಆತ್ಮೋಪನಿಷತ್ತಿನಲ್ಲಿಯೂ ಶ್ರೀಶಂಕರಭಗವತ್ಪಾದರವರ ವಿವೇಕಚೂಡಾಮಣಿಯಲ್ಲಿಯೂ,

ಉಪಾಧಿನಾಶಾದ್ಬ್ರಹ್ಮೈವಸ್ಸನ್ ಬ್ರಹ್ಮಾಪ್ಯೇತಿ ನಿರ್ದ್ವಯಂ।
ಶೈಲೂಷಾವೇಷ ಸದ್ಭಾವಾಭಾವ ಯೋಶ್ಚ ಯಥಾ ಪುಮಾನ್ ॥

ತಾ॥ ಉಪಾಧಿನಾಶದಿಂದ ದ್ವೈತರಹಿತವಾದ ಪರಬ್ರಹ್ಮನಾಗುತ್ತಾನೆ. ನಟನು ವೇಷ ಧಾರಿಯಾಗಿ ಪ್ರತ್ಯೇಕ ನಾಮ ರೂಪಗಳುಳ್ಳವನಾಗಿ ತೋರುವನು. ವೇಷವನ್ನು ತೆಗೆದ ಮೇಲೆ ಹಿಂದಿನ ಪುರುಷನೇ ಆಗುವನು. ಎಂದು ಹೇಳಿರುವುದು,

ಆದುದರಿಂದ ಪ್ರತಿಬಿಂಬಚೈತನ್ಯನು ಉಪಾಧಿಗಳಿಂದ ಕೂಡಿದ್ದರೂ ಚೈತನ್ಯ ರೂಪದಿಂದ ಪರಮಾತ್ಮನಲ್ಲದೆ ಬೇರೆಯಲ್ಲ.

ಈ ಮೇಲಿನ ವಿವರಣೆಗಳೆಲ್ಲಾ ಮಾಂಡೂಕ್ಯೋಪನಿಷತ್ತಿನಲ್ಲಿ ಸ್ವಪ್ನಾವಸ್ಥೆಯಲ್ಲಿರುವ ತೈಜಸನು ವಿಶ್ವನಿಗಿಂತಲೂ ಉತ್ಕೃಷ್ಟನಾದಂತಿರುವನೆಂದು ಹೇಳಿರುವುದರ ತತ್ವವನ್ನು ತಿಳಿಸುವುವು. ಯಾವನು ತೈಜಸನ ತತ್ವವನ್ನು ತಿಳಿಯುವನೋ ಅವನು ಜ್ಞಾನವನ್ನು ಒಂದೇ ಸಮನಾಗಿ ಹೆಚ್ಚಿಸಿಕೊಳ್ಳುವನೆಂದು ಹೇಳಿರುವ ಮಾಂಡೂಕ್ಯೋಪನಿಷತ್ತಿನ ವಾಕ್ಯದ ತತ್ವವೇನೆಂದರೆ—ಜಾಗ್ರತ್ಸ್ವಪ್ನಸುಷುಪ್ತಿ ಕಾಲಗಳು ಸ್ವಾಭಾವಿಕವಾಗಿ ಬಂಧಕ ವಾಗಿರುವುದರಿಂದ ಓಂಕಾರದಲ್ಲಿನ ಅಕಾರವು ಉಕಾರದಲ್ಲಿಯೂ ಉಕಾರವು ಮಕಾರ ದಲ್ಲಿಯೂ ಲಯಹೊಂದುವ ಕಾರ್ಯವೆಂದರೆ ಪ್ರಣವೋಪಾಸನೆಯು ಧ್ಯಾನ ಧಾರಣ ಸಮಾಧಿ ಗಳಲ್ಲಿ ಉಪಯೋಗಿಸಲ್ಪಡುವುದೇ ಹೊರತು ಇತರ ಕಾಲಗಳಲ್ಲಿ ಸಾಧ್ಯವಿಲ್ಲ.

ಆದುದರಿಂದ ವಿಶ್ವತ್ವದ ಉಪಾಧಿಗಳನ್ನು ನಿಗ್ರಹಿಸಿ ತೈಜಸತ್ವಕ್ಕೆ ಬಂದು ನಿಲ್ಲಬೇಕು. ಸ್ವಪ್ನದಲ್ಲಿ ಹೇಗೆ ತೇಜಸ್ಸಿನಲ್ಲಿ ಬುದ್ಧಿಯೊಂದೇ ವ್ಯಾಪಾರಮಾಡುವುದೋ ಹಾಗೆ ಸಮಾ ಧಿಯ ತೇಜಸ್ಸಿನಲ್ಲಿ ಬುದ್ಧಿವೃತ್ತಿಯು ಸ್ಥಿರತ್ವವನ್ನು ಪಡೆಯುವ ಸೋಪಾನವನ್ನು ಅಧಿಕಾ ರಿಯು ಹೊಂದಬೇಕು. ಅಧಿಕಾರಿಗೆ ಈ ವಿಧವಾದ ಸ್ಥಿರತ್ವವುಂಟಾಗಬೇಕಾದರೆ ರಾಮ ರಾವಣರಿಬ್ಬರೇ ಉಳಿದು ಯುದ್ಧಮಾಡಿದ ತತ್ವವಾದ ತೇಜೋನಾದಧ್ಯಾನವಿದ್ಯೆಯ ಸೋಪಾನವನ್ನು ಅಧಿಕಾರಿಯು ಪಡೆಯಬೇಕು. ಈ ತೇಜೋನಾದಧ್ಯಾನವಿದ್ಯೆಯ ಸೋಪಾ ನಕ್ಕೆ ಬಂದರೆ ಜ್ಞಾನವು ಒಂದೇ ಸಮನಾಗಿ ಹೆಚ್ಚಿ ಸೂರ್ಯನು ಶ್ರೀರಾಮನಿಗೆ ಪ್ರತ್ಯಕ್ಷವಾದ ತತ್ವವನ್ನು ಹೊಂದಿ ತೈಜಸತ್ವದ ಸೋಪಾನವನ್ನು ದಾಟಿ ಕೃತಕೃತ್ಯರಾಗಬಹುದೆಂಬ ತತ್ವದ ಸೂಚನೆಯೇ ಮೇಲಿನ ಮಾಂಡೂಕ್ಯೋಪನಿಷತ್ತಿನಲ್ಲಿ ಯಾವನು ತೈಜಸತ್ವವನ್ನು ತಿಳಿಯು ವನೋ ಅವನು ಜ್ಞಾನವನ್ನು ಒಂದೇ ಸಮನಾಗಿ ಹೆಚ್ಚಿಸಿಕೊಳ್ಳುವನೆಂದು ಹೇಳಿರುವುದರ ತತ್ವವಾಗಿರುವುದು. ಓಂಕಾರದಲ್ಲಿನ ಉಕಾರದ ತತ್ವವು ಮೇಲೆ ತಿಳಿಸಲ್ಪಟ್ಟಿತು. ಇನ್ನು ಓಂಕಾರದಲ್ಲಿನ ಮಕಾರದ ತತ್ವವನ್ನು ತೆಗೆದುಕೊಳ್ಳೋಣ. ಓಂಕಾರದಲ್ಲಿನ ಮಕಾರದ ತತ್ವವನ್ನು ಮಾಂಡೂಕ್ಯೋಪನಿಷತ್ತಿನಲ್ಲಿ,

ಸುಷುಪ್ತಸ್ಥಾನಃ ಪ್ರಾಜ್ಞೋ ಮಕಾರ ಸ್ತೃತೀಯಾಮಾತ್ರಾ ಮಿತೇರಪೀ
ತೇರ್ವಾ ಮಿನೋತಿಹವಾ ಇದಂಸರ್ವಮಪೀತಶ್ಚ ಭವತಿ ಯ ಏವಂ ವೇದ ||

ತಾ|| ಗಾಢನಿದ್ರೆಯೆಂಬ ಅವಸ್ಥೆಯಲ್ಲಿರುವ ಪ್ರಾಜ್ಞನು ಅಳೆಯುವುದರಿಂದಲೂ, ಲಯವಾಗುವುದರಿಂದಲೂ ಮಕಾರವೆಂಬ ಮೂರನೆಯ ಮಾತ್ರೆಯೆನಿಸುವನು. ಯಾವನು ಹೀಗೆಂದು ತಿಳಿಯುವನೋ ಅವನು ಇದೆಲ್ಲವನ್ನೂ ಅಳೆಯುವವನೂ, ಪ್ರಳಯಸ್ಥಾನನೂ ಆಗುವನು. ಎಂಬ ವಾಕ್ಯವಿರುವುದು.

ಪ್ರಾಜ್ಞನ ತತ್ವವೇನೆಂದರೆ--ಬುದ್ಧಿವೃತ್ತಿಯು ಗಾಢನಿದ್ರೆಯಲ್ಲಿ ತಮೋಗುಣದಲ್ಲಿ ಲೀನವಾಗುವುದು. ಬುದ್ಧಿವೃತ್ತಿಯು ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೊಡನೆ ಕಲೆತು ವ್ಯಾಪಾರಮಾಡದೆಯೂ, ಸ್ವಪ್ನದಂತೆ ಸಂಕಲ್ಪರೂಪದಿಂದ ವಿಷಯವಾಸನೆಯಲ್ಲಿಲ್ಲದೆಯೂ ನಿದ್ರಾಕಾಲದಲ್ಲಿ ತಮೋಗುಣದಲ್ಲಿ ಲೀನವಾಗುವುದು. ಹೀಗಿರುವುದರಿಂದ ಪ್ರತಿಬಿಂಬ ಚೈತನ್ಯನು ತಮೋಗುಣದಲ್ಲಿ ಲೀನವಾಗಿರುವ ಬುದ್ಧಿವೃತ್ತಿಯನ್ನು ಪ್ರಕಾಶಪಡಿಸಿ ಕೊಂಡಿರುವನು. ಈ ನಿದ್ರಾಸ್ಥಿತಿಯನ್ನು ಸಕಲರೂ ಅನುಭವಿಸಿಕೊಂಡಿರುವರು.

ಮೋಕ್ಷಕ್ರಮದಲ್ಲಿ ವಿಶ್ವತ್ವದ ಉಪಾಧಿಗಳನ್ನು ನಿಗ್ರಹಿಸಿ ತೈಜಸತ್ವಕ್ಕೆ ಬಂದು ನಿಂತು ಕೊಳ್ಳುವುದೇ ರಾಮರಾವಣರ ಯುದ್ಧದತತ್ವವಾದ ತೇಜೋನಾದಧ್ಯಾನವಿದ್ಯೆಯ ಸೋಪಾನ ವೆಂದು ಮೇಲೆ ತಿಳಿಸಿತಷ್ಟೆ! ತೈಜಸತ್ವಕ್ಕೆ ಇದ್ದ ಉಪಾಧಿಯನ್ನೂ ನಿಗ್ರಹಿಸಿ ಪ್ರಾಜ್ಞನ ಸೋಪಾನವನ್ನು ಸಮಾಧಿಯಲ್ಲಿ ಪಡೆಯಬೇಕು. ಸಮಾಧಿಯಲ್ಲಿ ಪ್ರಾಜ್ಞನ ಸೋಪಾನ ವನ್ನು ಪಡೆಯಬೇಕಾದರೆ ರಾವಣನ ತತ್ವದಲ್ಲಿರುವ ವಿಕ್ಷೇಪಶಕ್ತಿಯನ್ನು ನಿಗ್ರಹಿಸಿ ಸೀತಾ ದೇವಿಯು ಶ್ರೀರಾಮನ ಬಳಿಗೆ ಬಂದ ಶುದ್ಧಸತ್ವಗುಣದ ಸೋಪಾನವನ್ನು ಅಧಿಕಾರಿಯು ಪಡೆಯಬೇಕು. ಸುಷುಪ್ತ್ಯವಸ್ಥೆಯಲ್ಲಿ ಪ್ರಾಜ್ಞನು ತಮೋಗುಣವೇ ಸ್ವರೂಪವಾಗುಳ್ಳ ಬೀಜವಾದ ನಿದ್ರೆಯಿಂದ ಕೂಡಿರುವನು. ಕಾರಣವೇನೆಂದರೆ, ಬುದ್ಧಿವೃತ್ತಿಯು ತಮೋ ಗುಣದಲ್ಲಿ ಲೀನವಾಗುವುದರಿಂದ ಪ್ರಾಜ್ಞನು ಕಾರಣದೇಹ ಅಥವಾ ತಮೋಗುಣವೇ ಸ್ವರೂಪವಾಗುಳ್ಳ ಬೀಜವಾದ ನಿದ್ರೆಯಿಂದ ಕೂಡಿರುವನು. ಸಮಾಧಿಯಲ್ಲಿ ಬುದ್ಧಿ ವೃತ್ತಿಯು ಶುದ್ಧಸತ್ವಗುಣದ ಸೋಪಾನಕ್ಕೆ ಬಂದಾಗ ಆನಂದಮಯವಾಗಿ ಜ್ಞಾನದ ಗಟ್ಟಿಯಾಗಿರುವ ಉನ್ಮನೀಸ್ಥಿತಿಯಲ್ಲಿರುವುದು. ಸುಷುಪ್ತ್ಯವಸ್ಥೆಯಲ್ಲಿ ತ್ರಿಪುಟಿಯಿರುವು ದಿಲ್ಲ. ಶುದ್ಧಸತ್ವಗುಣದ ಸೋಪಾನದಲ್ಲಿ ತ್ರಿಪುಟಿಯಲ್ಲಿನ ಜ್ಞಾನ ಜ್ಞೇಯಗಳು ನಶಿಸಿ ಅತ್ಯಂತ ಸೂಕ್ಷ್ಮವಾದ ಅಖಂಡವಾದ ಅಹಮಾಕಾರಜ್ಞಾನವೇ ಶೇಷವಾಗಿರುವ ಸ್ಥಿತಿ ಯಾಗಿರುವುದು. ಈ ಶುದ್ಧಸತ್ವಗುಣದ ಸೋಪಾನವನ್ನು ಅನುಭವದಿಂದ ತಿಳಿಯ ಬಹುದೇ ಹೊರತು ತಿಳಿಯಹೇಳುವುದು ಕಷ್ಟವೆಂದು ಹಿಂದೆ ಸೀತಾದೇವಿಯ ತಿರಸ್ಕಾರದ ಪ್ರಕರಣದಲ್ಲಿಯೇ ತಿಳಿಸಿರುತ್ತದೆ.

ಅಕಾರ ಉಕಾರಗಳು ಮಕಾರದಲ್ಲಿ ಲೀನವಾಗುವುವೆಂದರೆ, ಜಾಗ್ರತ್ಸ್ವಪ್ನಗಳೆರಡೂ ಸುಷುಪ್ತಿಯಲ್ಲಿ ಲೀನವಾಗಿ ಮತ್ತೆ ಹೊರಕ್ಕೆಬರುವುವಷ್ಟೆ! ಇದರಂತೆ ಸಮಾಧಿಯ ಅಭ್ಯಾಸ ಕಾಲದಲ್ಲೂ ಶುದ್ಧಸತ್ವಗುಣದ ಸೋಪಾನಕ್ಕೆ ಬಂದಾಗ ಸಕಲವ್ಯಾಪಾರಗಳೂ ತಟಸ್ಥ ವಾಗಿರುತ್ತವೆ. ಹೀಗೆ ವ್ಯಾಪಾರಗಳು ತಟಸ್ಥವಾಗಿ ಉಳಿದುಕೊಳ್ಳುವ ಅತ್ಯಂತ ಸೂಕ್ಷ್ಮ ವಾದ ಅಹಂಜ್ಞಾನವೇ ಪರಮಾತ್ಮನಲ್ಲಿ ಲೀನವಾಗುವುದರಿಂದ ಈ ಶುದ್ಧಸತ್ವಗುಣದ ಸೋಪಾನವನ್ನು ಪ್ರಲಯಸ್ಥಾನವೆಂದು ಹೇಳಬಹುದು. ಹೇಗೆಂದರೆ, ಸೀತಾದೇವಿಯು ಶ್ರೀರಾಮನಿಂದ ತಿರಸ್ಕರಿಸಲ್ಪಟ್ಟು ಅಗ್ನಿಪ್ರವೇಶಮಾಡಿದ ಮೇಲೆ ಹೇಗೆ ಶ್ರೀರಾಮನೇ ಶ್ರೀಮನ್ನಾರಾಯಣನೆನಿಸಿಕೊಂಡನೋ ಹಾಗೆ ಶುದ್ಧಸತ್ವಗುಣವನ್ನು ಪ್ರಕಾಶಪಡಿಸುತ್ತಿದ್ದ ಪ್ರಾಜ್ಞನೆನಿಸುವ ಪ್ರತಿಬಿಂಬಚೈತನ್ಯನೇ ಪರಮಾತ್ಮನಾಗುವನು. ಆದುದರಿಂದ ಈ ಪ್ರಾಜ್ಞನು ಮೇಲಿನ ಶ್ರುತಿಯಲ್ಲಿ ಹೇಳಿರುವಂತೆ ಪ್ರಲಯಸ್ಥಾನನೂ ಆಗುವನು. ಅಂದರೆ ಶುದ್ಧಸತ್ವಪ್ರಧಾನವಾಯೆಯು ಈ ಸೋಪಾನದಿಂದಲೇ ಪರಮಾತ್ಮನಲ್ಲಿ ಲಯ ವಾಗುವುದರಿಂದ ಈ ಸ್ಥಾನಕ್ಕೆ ಪ್ರಲಯವನ್ನುಂಟುಮಾಡುವ ಸ್ಥಾನವೆಂದೇ ಹೇಳಬೇಕು. ಈ ಮೇಲಿನ ತತ್ವಾರ್ಥಗಳೇ ಮೇಲಿನ ಶ್ರುತಿಯಲ್ಲಿ ಪ್ರಾಜ್ಞನು ಪ್ರಲಯಸ್ಥಾನನೂ ಆಗುವ ನೆಂದು ಹೇಳಿರುವುದರ ತಾತ್ಪರ್ಯ.

ಈ ಶುದ್ಧಸತ್ವಗುಣದ ಸೋಪಾನವು ಲಯವೆಂದರೆ ಆತ್ಮಸಾಕ್ಷಾತ್ಕಾರ ಕಾಲದಲ್ಲಿ ಸಕಲವ್ಯಾಪಾರವನ್ನೂ ತನ್ನಲ್ಲಿ ಲೀನಗೊಳಿಸಿಕೊಳ್ಳುತ್ತದೆ. ಸಮಾಧಿಯಿಂದ ಬಹಿರ್ಮುಖ ವಾಗುವ ಕಾಲದಲ್ಲಿ ದೇಹವ್ಯಾಪಾರದ ಚೈತನ್ಯಗಳನ್ನು ಹೊರಕ್ಕೆಬಿಡುತ್ತದೆ. ಆದುದರಿಂದ ಪ್ರಾಜ್ಞತ್ವದ ಸೋಪಾನವು ಅಳಿಯುವ ಸ್ವಭಾವವಾಗಿರುವುದೆಂದು ಶ್ರುತಿಯಲ್ಲಿ ಹೇಳಿರು ವುದರ ತಾತ್ಪರ್ಯವಾಗಿರುವುದು.

ಅಕಾರ, ಉಕಾರ, ಮಕಾರಗಳೆಂದರೆ ವಿಶ್ವ, ತೈಜಸ, ಪ್ರಾಜ್ಞರ ವಿಚಾರಗಳನ್ನು ತಿಳಿಸಿಕೊಂಡು ಬಂದಿತು. ಇನ್ನು ತುರೀಯಸ್ವರೂಪದ ವಿಚಾರವನ್ನು ತೆಗೆದುಕೊಳ್ಳೋಣ. ಮಾಂಡೂಕ್ಯೋಪನಿಷತ್ತಿನಲ್ಲಿ,

ಅಮಾತ್ರಶ್ಚತುರ್ಥೋ ವ್ಯವಹಾರಃ ಪ್ರಪಂಚೋಪಶಮಃ |
ಶಿವೋಽದ್ವೈತ ಏವಮೋಂಕಾರ ಆತ್ಮೈವ ಸಂವಿಶತ್ಯಾತ್ಮ |
ನಾತ್ಮಾನಂ ಯ ಏವಂ ವೇದ ಯ ಏವಂವೇದ ||

ತಾ|| ತುರೀಯನು ಅಕಾರ, ಉಕಾರ, ಮಕಾರ ಮಾತ್ರೆಗಳಿಲ್ಲದವನು ; ವ್ಯವಹಾರಕ್ಕೆ ನಿಲುಕದ ಪ್ರಪಂಚವಿಲ್ಲದ ಶಿವನು, ದ್ವೈತವಿಲ್ಲದವನು ಆತ್ಮನೇ ಓಂಕಾರವು. ಯಾವನು ಹೀಗೆಂದು ಅರಿಯುವನೋ ಅವನು ತನ್ನಿಂದ ತನ್ನನ್ನು ಸೇರುವನು, ಎಂದು ಹೇಳಿರುವುದು.

ಈ ಮೇಲಿನ ಶ್ರುತಿವಾಕ್ಯದಲ್ಲಿ ಹೇಳಿರುವಂತೆ ತುರೀಯವು ಜಾಗ್ರತ್ಸ್ವಪ್ನ ಸುಷುಪ್ತ್ಯವಸ್ಥೆಗಳಿಲ್ಲದ ಸ್ವರೂಪವು. ಅಂದರೆ ಎರಡನೆಯದಿಲ್ಲದ, ಮಂಗಳಸ್ವರೂಪನಾದ, ಇಂದ್ರಿಯಗ್ರಾಹ್ಯನಲ್ಲದ ಓಂಕಾರಸ್ವರೂಪನಾಗಿರುವ, ದಹರಾಕಾಶ ಅಥವಾ ಸಹಸ್ರಾರ ಕಮಲಸ್ಥಿತನಾದ ಪರಮಾತ್ಮನೇ ತುರೀಯನು. ಬುದ್ಧಿವೃತ್ತಿಯು ಜಾಗ್ರತ್ಸ್ವರೂಪಾಕಾರವಾಗಿರುವುದನ್ನೂ, ಸ್ವಪ್ನಸದೃಶವ್ಯಾಪಾರವನ್ನೂ, ಸುಷುಪ್ತಿಕಾಲದಲ್ಲಿ ತಮೋಗುಣದಲ್ಲಿ ಲೀನವಾಗಿರುವುದನ್ನೂ ಬಿಟ್ಟು ತುರೀಯಸ್ವರೂಪದಲ್ಲಿ ದಹರಾಕಾಶದಲ್ಲಿರುವ ಪರಮಾತ್ಮನಲ್ಲಿ ಲಯವಾಗುವುದು. ಹೀಗೆ ಲೀನವಾದರೆ ಬುದ್ಧಿವೃತ್ತಿಯನ್ನು ಪ್ರಕಾಶಪಡಿಸಿಕೊಂಡಿರುವ ಪ್ರತಿಬಿಂಬಚೈತನ್ಯನೂ ದಹರಾಕಾಶವೆಂದರೆ ಸಹಸ್ರಾರದಲ್ಲಿರುವ ಪರಮಾತ್ಮನೂ ಏಕತ್ವವನ್ನು ಪಡೆಯುವರು.

ಹೇಗೆಂದರೆ—ಒಂದಕ್ಕೊಂದು ಹತ್ತಿರದಲ್ಲಿ ಎರಡು ಕೊಳಗಳಿರುವುವು. ಮಧ್ಯದಲ್ಲಿ ಭೂಮಿಯಿರುವುದರಿಂದ ಎರಡರ ನೀರಿಗೂ ಏಕತ್ವವುಂಟಾಗಿಲ್ಲ. ಮಧ್ಯದಲ್ಲಿರುವ ಭೂಮಿಯನ್ನು ಅಗೆದು ಕಾಲುವೆಯೊಂದನ್ನು ತೆಗೆದರೆ ಎರಡು ಕೊಳಗಳ ನೀರೂ ಏಕವಾಗುವುದು. ಇದರಂತೆ ಬುದ್ಧಿಯಲ್ಲಿರುವ ಪ್ರತಿಬಿಂಬಚೈತನ್ಯನೂ ಬ್ರಹ್ಮರಂಧ್ರದಲ್ಲಿರುವ ಪರಬ್ರಹ್ಮನೂ ಎರಡು ಕೊಳಗಳ ನೀರಿನ ತತ್ವದಲ್ಲಿರುವರು. ಎರಡು ಕೊಳಗಳ ಮಧ್ಯೆಯಿರುವ ಭೂಮಿಯ ತತ್ವವೇ ಜಾಗ್ರತ್ಸ್ವಪ್ನಸುಷುಪ್ತ್ಯವಸ್ಥೆಗಳಿಗೆ ಕಾರಣವಾದ ಓಂಕಾರದಲ್ಲಿನ ಅಕಾರ, ಉಕಾರ, ಮಕಾರಸ್ವರೂಪವಾಗಿರುವ ಸುಷುಮ್ನಾನಾಡಿಯಲ್ಲಿರುವ ಬ್ರಹ್ಮ ವಿಷ್ಣು ರುದ್ರ ಗ್ರಂಥಿಗಳಾಗಿರುವುವು. ಎರಡು ಕೊಳಗಳ ಮಧ್ಯದಲ್ಲಿರುವ ಭೂಮಿಯನ್ನು ಅಗೆದು ಕಾಲುವೆಯನ್ನು ತೆಗೆಯುವ ತತ್ವವೇ ಸಮಾಧಿಯ ಅಭ್ಯಾಸಮಾಡಿ ಬ್ರಹ್ಮ ವಿಷ್ಣು ರುದ್ರ ಗ್ರಂಥಿಗಳನ್ನು ಭೇದನೆಮಾಡುವ ತತ್ವವಾಗಿರುವುದು. ಅನಂತರ ಎರಡು ಕೊಳಗಳ ನೀರೂ ಏಕವಾಗುವ ತತ್ವವೇ ಬುದ್ಧಿಯಲ್ಲಿರುವ ಜೀವಾತ್ಮನೂ ಸಹಸ್ರಾರಕಮಲದಲ್ಲಿರುವ ಪರಮಾತ್ಮನೂ ಒಂದೇ ಆಗುವ ತತ್ವವಾಗಿರುವುದು. ಎರಡು ಕೊಳಗಳಲ್ಲಿರುವ ಜಲವೂ ಜಲವೇ ಆಗಿರುವಂತೆ ಜೀವಾತ್ಮನೂ ಪರಮಾತ್ಮನೂ ಒಂದೇ. ಮಧ್ಯೆ ಇರುವ ಭೂಮಿಯು ಎರಡು ಕೊಳಗಳ ನೀರೂ ಏಕವಾಗಲು ಹೇಗೆ ಪ್ರತಿಬಂಧಕವಾಗಿರುವುದೋ ಹಾಗೆ ಭೂಮಿಯ ತತ್ವದಲ್ಲಿರುವ ಭಾಗ್ರತ್ಸ್ವಪ್ನ ಸುಷುಪ್ತ್ಯವಸ್ಥೆಗಳೆಂದರೆ ಷಟ್ಚಕ್ರಗಳು ಆತ್ಮಸಾಕ್ಷಾತ್ಕಾರಕ್ಕೆ ಪ್ರತಿಬಂಧಕವಾಗಿರುವುವು. ಎರಡು ಕೊಳದನೀರೂ ಒಂದೇ ಆಗಲು ಭೂಮಿಯನ್ನು ಅಗೆಯುವುದೊಂದೇ ಕಾರ್ಯವು ಹೇಗೋ ಹಾಗೆ ಆತ್ಮಸಾಕ್ಷಾತ್ಕಾರಕ್ಕೆ ಓಂಕಾರೋಪಾಸನೆಯಿಂದ ಪರಬ್ರಹ್ಮನೇ ನಾನೆಂದು ಸಮಾಧಿಯ ಅಭ್ಯಾಸಮಾಡುವುದೊಂದೇ ದಾರಿಯಾಗಿರುವುದು. ಎರಡು ಕೊಳಗಳಲ್ಲಿರುವ ಜಲವೂ ಜಲವೇ ಆಗಿ ಒಂದಕ್ಕೊಂದು ಏಕವಾಗುವಂತೆ ಜೀವಬ್ರಹ್ಮರ ಸಾಕ್ಷಾತ್ಕಾರದ ತತ್ವದ ಸೂಚನೆಯೇ ಮೇಲಿನ ಶ್ರುತಿವಾಕ್ಯದಲ್ಲಿ ತನ್ನಿಂದ ತನ್ನನ್ನು ಸೇರುವನೆಂದು ಹೇಳಿರುವುದರ ತತ್ವವಾಗಿರುವುದು.

ಮುಖ್ಯವಾಗಿ ಓಂಕಾರದಿಂದಲೇ ಸೃಷ್ಟಿ ಸ್ಥಿತಿ ಲಯಗಳಾಗುವುವು. ನಮಗೆ ಸೃಷ್ಟಿ ಮತ್ತು ಸ್ಥಿತಿಕ್ರಮಗಳೆರಡೂ ಬೇಕಾಗಿರುವುದಿಲ್ಲ. ಸೃಷ್ಟಿ ಸ್ಥಿತಿ ಕ್ರಮವೆನಿಸುವ ಮಕಾರವು ಉಕಾರದಲ್ಲಿಯೂ ಉಕಾರವು ಅಕಾರದಲ್ಲಿಯೂ ಉಂಟಾಗುವ, ಶ್ರೀರಾಮನು ಅಯೋಧ್ಯೆ ಯಿಂದ ವನವಾಸಕ್ಕೆ ಹೊರಟು ಪಂಚವಟಿಗೆ ಬಂದು ರಾವಣನ ತೊಂದರೆಗೆ ಒಳಗಾದ ಕಥೆಯ ತತ್ವಗಳನ್ನು ನಾವು ಹೊಂದಿಯೇ ಇರುತ್ತೇವೆ. ನಮಗೆ ಅವಶ್ಯಕವಾಗಿ ಬೇಕಾಗಿರು ವುದು ಸೀತಾಗ್ನಿಪ್ರವೇಶವಾದ ಮೇಲೆ ಇರುವ ಶ್ರೀರಾಮನ ಸ್ಥಿತಿಯ ತತ್ವ. ಇದನ್ನು ಪಡೆಯಲು ಧ್ಯಾನ ಧಾರಣ ಸಮಾಧಿಗಳಲ್ಲಿ ವಿನಿಯೋಗಮಾಡುವ ಓಂಕಾರೋಪಾಸನೆಯ ಮೂಲಕ ಓಂಕಾರಸ್ವರೂಪನಾದ ಪರಮಾತ್ಮನ ಸಾಕ್ಷಾತ್ಕಾರ ಪಡೆದುಕೊಳ್ಳಬೇಕು. ಓಂಕಾ ರೋಪಾಸನೆಯು ಧ್ಯಾನಧಾರಣ ಸಮಾಧಿಗಳಲ್ಲಿಯೇ ವಿನಿಯೋಗಿಸಲ್ಪಟ್ಟಿರುವುದಕ್ಕೂ ಪರ ಮಾತ್ಮನು ಓಂಕಾರಸ್ವರೂಪನೇ ಆಗಿರುತ್ತಾನೆನ್ನುವದಕ್ಕೂ ಅಥರ್ವಶಿಖೋಪನಿಷತ್ತಿನಲ್ಲಿ,

> ಪೂರ್ವಾಸ್ಯಮಾತ್ರಾಜಾಗರ್ತಿ ಜಾಗರಿತಂ ದ್ವಿತಿಯಾ ಸ್ವಪ್ನಂ |
> ತೃತೀಯಾ ಸುಷುಪ್ತಿಶ್ಚತುರ್ಥೀ ತುರೀಯಂ ಮಾತ್ರಾ ಮಾತ್ರಾಃ |
> ಪ್ರತಿಮಾತ್ರಾಗತಾ ಸ್ವಮ್ಯಕ್ಸಮಸ್ತಾನಪಿ ಪಾದಾನ್ ಜಯತೀತಿ |
> ಸ್ವಯಂಪ್ರಕಾಶ ಸ್ವಯಂಬ್ರಹ್ಮಾ ಭವತೀತ್ಯೇಷಸಿದ್ಧಿಕರ |
> ಏತಸ್ಮಾ ದ್ಧ್ಯಾನಾದೌ ಪ್ರಯುಜ್ಯತೆ ||

ತಾ|| ಪ್ರಣವದ ಒಂದನೇ ಮಾತ್ರೆ ಜಾಗ್ರತ್ತು, ಎರಡನೇ ಮಾತ್ರೆ ಸ್ವಪ್ನವು, ಮೂರನೇ ಮಾತ್ರೆ ಸುಷುಪ್ತಿ, ನಾಲ್ಕನೆಯ ಮಾತ್ರೆಯು ತುರೀಯ. ಒಂದೊಂದು ಮಾತ್ರೆಯೂ ಭಿನ್ನಮಾತ್ರೆಗಳಲ್ಲಿ ಲಯಿಸುವುದು. ಅಂದರೆ ಲಯಕ್ರಮದಲ್ಲಿ, ಅಕಾರವು ಉಕಾರದಲ್ಲಿಯೂ, ಉಕಾರವು ಮಕಾರದಲ್ಲಿಯೂ ಲಯಿಸುವುದು. ಸೃಷ್ಟಿಕ್ರಮದಲ್ಲಿ, ಮಕಾರದಲ್ಲಿ ಉಕಾರವೂ ಉಕಾರದಲ್ಲಿ ಅಕಾರವೂ ಉಂಟಾಗುವುದು. ಇದು ಸ್ವಯಂ ಪ್ರಕಾಶವಾದದ್ದು. ಇದನ್ನು ಬೇರೊಂದು ಪ್ರಕಾಶಿಸಲಾರದು. ಇದನ್ನು ಚೆನ್ನಾಗಿ ಧ್ಯಾನಮಾಡಿದರೆ ಪೂರ್ವಪದವೆಂದರೆ ಓಂಕಾರಸ್ವರೂಪವೇ ಆಗುವುದು. ಇದು ಸ್ವಯಂ ಬ್ರಹ್ಮವಾಗಿರುವುದರಿಂದ ಸಿದ್ಧಿಯನ್ನುಂಟುಮಾಡುವುದು. ಆದುದರಿಂದ ಈ ಪ್ರಣವವು ಧ್ಯಾನ ಧಾರಣ ಸಮಾಧಿಗಳಲ್ಲ ವಿನಿಯೋಗಿಸಲ್ಪಟ್ಟಿದೆ ಎಂದು ಹೇಳಿರುವುದು.

ಆದುದರಿಂದ ಸೃಷ್ಟಿ ಸ್ಥಿತಿ ಕ್ರಮದಲ್ಲಿರುವ ಭಿನ್ನಮಾತ್ರೆಗಳಲ್ಲಿ ಲಯಿಸುವ ಓಂಕಾರದ ಸ್ವರೂಪವು ನಮ್ಮಲ್ಲಿದ್ದೇ ಇರುವುದು. ನಾವು ತಿಳಿದು ಅನುಷ್ಠಾನಮಾಡಬೇಕಾಗಿರುವುದು ಲಯ ಅಥವಾ ಮೋಕ್ಷಕ್ರಮದ ಓಂಕಾರದ ವಿಚಾರ. ಮೋಕ್ಷಕ್ರಮದಲ್ಲಿ ಅಕಾರವು ಉಕಾರದಲ್ಲಿಯೂ, ಉಕಾರವು ಮಕಾರದಲ್ಲಿಯೂ, ಮಕಾರವು ಪರಮಾತ್ಮನಲ್ಲಿಯೂ,

ಲೀನ ಮತ್ತು ಲಯವಾಗುವ ಸ್ವರೂಪಗಳನ್ನು ನಾವು ಸಮಾಧಿಯ ಅನುಷ್ಠಾನದ ಮಾರ್ಗ ದಿಂದಲೇ ಹೊಂದಬೇಕಾಗಿರುವುದು. ಸಮಾಧಿಯ ಅನುಷ್ಠಾನಕ್ರಮದಲ್ಲಿ ಹೊಂದುವ ಸ್ಥಿತಿಗಳ ಫಲಿತಾಂಶದ ಸೂಚನೆಯೇ ಮೇಲಿನ ಮಾಂಡೂಕ್ಯೋಪನಿಷತ್ತಿನ ವಿಶ್ವ, ತೈಜಸ ಪ್ರಾಜ್ಞ ಮತ್ತು ತುರೀಯ ವಿಚಾರದ ನಾಲ್ಕುಮಂತ್ರಗಳ ತತ್ವವಾಗಿರುವುದು.

ವಿಶ್ವ, ತೈಜಸ, ಪ್ರಾಜ್ಞನೆಂಬ ಹೆಸರುಳ್ಳ ಜೀವಾತ್ಮನು ಉಪಾಧಿನಾಶವಾದನಂತರ ಪರಮಾತ್ಮನೆನಿಸಿಕೊಳ್ಳುವನೆಂಬುವುದಕ್ಕೆ ಮಾಂಡೂಕ್ಯೋಪನಿಷತ್ತಿನ ಪ್ರಮಾಣವಲ್ಲದೆ ಇನ್ನೂ ಅನೇಕ ಶ್ರುತಿಪ್ರಮಾಣಗಳಿರುವುವು. ಪೈಂಗಲೋಪನಿಷತ್ತಿನಲ್ಲಿ,

ವಿಶ್ವತೈಜಸಪ್ರಾಜ್ಞಾ ಸ್ವಸ್ವೋಪಾಧಿಲಯಾ ತ್ಪ್ರತ್ಯಗಾತ್ಮನಿಲೀಯಂತೆ|

ತಾ|| ವಿಶ್ವ ತೈಜಸ ಪ್ರಾಜ್ಞರೆಂಬ ಹೆಸರುಳ್ಳ ಜೀವನು ಉಪಾಧಿಗಳ ಲಯವಾದ ನಂತರ ಪರಬ್ರಹ್ಮನಾಗುವನು ಎಂಬ ವಾಕ್ಯವಿರುವುದು.

ಓಂಕಾರದ ವಿಚಾರವನ್ನು ಪ್ರಾರಂಭಮಾಡಿ ಮಾತ್ರೆಗಳ ಸ್ವರೂಪವಾದ ವಿಶ್ವ ತೈಜಸ ಪ್ರಾಜ್ಞರ ತತ್ವವನ್ನು ಮತ್ತು ತುರೀಯದ ವಿಚಾರವನ್ನು ತಿಳಿಸಿತು. ಸಮಾಧಿಯ ಅನುಷ್ಠಾನಕ್ಕೆ ಪ್ರಾರಂಭಮಾಡುವಾಗ ಓಂಕಾರವರ್ಣೋಚ್ಚಾರಣೆಯ ಅನುಷ್ಠಾನದಿಂದ ಪ್ರಾರಂಭಮಾಡುತ್ತೆ ವಷ್ಟೆ! ಹೀಗೆ ಸಮಾಧಿಯ ಅನುಷ್ಠಾನಕ್ಕೆ ಪ್ರಾರಂಭಮಾಡುವಾಗ "ಓಂ" ಎಂಬ ಶಬ್ದೋಚ್ಚಾರಣೆಯನ್ನು ಬೆಳೆಸಿಕೊಂಡು ಹೋಗಿ ನೆತ್ತಿಯಲ್ಲಿ ಶೇಖರಿಸಿ ಕೊಂಡು ಭ್ರೂಮಧ್ಯದಲ್ಲಿ ದೃಷ್ಟಿಯನ್ನಿಟ್ಟು ಸಮಾಧಿಯ ಅಭ್ಯಾಸವನ್ನು ಮಾಡುವುದ ರಲ್ಲಿನ "ಓಂ" ಎಂಬ ಶಬ್ದೋಚ್ಚಾರಣೆಯನ್ನು ಬೆಳೆಸುವುದು ಅಪರ ಅಥವಾ ಸ್ಥೂಲವಾದ ಪ್ರಣವವೆನಿಸಿಕೊಳ್ಳುವುದು. "ಓಂ"ಕಾರವು ಅಪರ ಅಥವಾ ಸ್ಥೂಲವೆಂದರೆ ಶಬ್ದಬ್ರಹ್ಮ ವೆಂಬ ತಾತ್ಪರ್ಯ. ಈ ವರ್ಣೋಪಾಸನೆ ಅಥವಾ ಪ್ರಣವದ ಸ್ಥೂಲವು ಅಥರ್ವಶಿಖೋಪ ನಿಷತ್ತಿನಲ್ಲಿ, " ಸ್ಥೂಲಮೇತದ್ಧ್ರಸ್ವದೀರ್ಘಪ್ಲುತ ಇತಿ " ಎಂಬದಾಗಿ ಹೇಳಿರುವಂತೆ ಹ್ರಸ್ವ ದೀರ್ಘ ಪ್ಲುತಗಳೆಂಬ ಮೂರು ವಿಧಗಳಾಗಿರುವುದು. ಹ್ರಸ್ವ ದೀರ್ಘಪ್ಲುತಗಳು ಸಾಧಾರಣವಾಗಿ ಅಕ್ಷರಗಳನ್ನು ಉಚ್ಚಾರಣೆಮಾಡುವ ಶಬ್ದದ ತಗ್ಗಿನ ಮತ್ತು ಅಧಿಕ ಸ್ವರೂಪಗಳಾಗಿರುತ್ತವೆ. ಆದರೆ ಇವು ಓಂಕಾರವಿಚಾರದಲ್ಲಿ ಹೇಗೆ ಅನ್ವಯಿಸುವು ವೆಂದರೆ—ಓಂಕಾರದಲ್ಲಿನ ಅಕಾರವೇ ಹ್ರಸ್ವವಾಗಿಯೂ, ಅಕಾರವು ಉಕಾರದಲ್ಲಿ ಸೇರಿ ಓಕಾರವಾಗುವುದೇ ದೀರ್ಘವಾಗಿಯೂ, ಓಕಾರವು ಮಕಾರದೊಡಗೂಡಿದರೆ ಪ್ಲುತ ವಾಗಿಯೂ ಇರುವುದು. ಅಥರ್ವಶಿಖೋಪನಿಷತ್ತಿನ "ಚತುರ್ಥಶ್ಶಾಂತ ಆತ್ಮಾ" ಎಂಬ ವಾಕ್ಯದಂತೆ ಹಸ್ವದೀರ್ಘ ಪ್ಲುತಗಳಾದ ಮೂರನ್ನೂ ಮೀರಿ ನಾಲ್ಕನೆಯದಾಗಿರುವುದೇ ನಿಶ್ಚಲವಾದ ಆತ್ಮಸ್ವರೂಪವಾಗಿರುವುದು.

ಪ್ರಣವದ ಸ್ಥೂಲಸ್ವರೂಪವಾಗಿರುವ ಓಂಕಾರವರ್ಣೋಚ್ಚಾರಣೆಯನ್ನು ಪ್ರಥಮಾಭ್ಯಾಸದಲ್ಲಿ ಎಷ್ಟೇ ದೀರ್ಘವಾಗಿ ಮೇಲಕ್ಕೆಳೆದುಕೊಂಡು ಹೋದರೂ ಏಕಾಕಾರತ್ವವನ್ನೂ ನಿಶ್ಚಲತ್ವವನ್ನೂ ಪಡೆಯಲಾರದು. ಚೈತನ್ಯವಿರುವಪರ್ಯಂತರ ಓಂಕಾರವರ್ಣೋಚ್ಚಾರಣೆಯನ್ನು ಎಳೆದುಕೊಂಡು ಹೋದರೂ, ಆ ಓಂಕಾರೋಚ್ಚಾರಣೆಯು ತಾನಾಗಿಯೇ ಸ್ಥಾಯಿಯಾಗಿ ನಿಲ್ಲಲಾರದು. ಶಕ್ತಿಮೀರಿ ಎಳೆದುಕೊಂಡು ಹೋಗುವುದರಲ್ಲಿ ಅಪಾಯವು ಸ್ವತಸ್ಸಿದ್ಧವಾಗಿರುವುದು. ಆದುದರಿಂದ ಹ್ರಸ್ವ ದೀರ್ಘ ಪ್ಲುತ ಮತ್ತು ನಿಶ್ಚಲತ್ವಗಳನ್ನು ಪಡೆಯಬೇಕಾದರೆ ಕ್ರಮಾನುಷ್ಠಾನವೇ ಬೇಕು. ಈ ಅನುಷ್ಠಾನಕ್ರಮವೇನೆಂದರೆ ಸಮಾಧಿಯ ಪ್ರಥಮಾಭ್ಯಾಸದಲ್ಲಿ ಓಂಕಾರವರ್ಣೋಚ್ಚಾರಣೆಯನ್ನು ಬೆಳೆಸಿಕೊಂಡು ಹೋಗಿ ಶಿರಸ್ಸಿನಲ್ಲಿ ನಿಲ್ಲಿಸಿಕೊಂಡು ಭ್ರೂಮಧ್ಯದಲ್ಲಿ ದೃಷ್ಟಿಯನಿಟ್ಟು ಧ್ಯಾನಮಾಡುತ್ತಿದ್ದರೆ ತೇಜೋಬಿಂದುಸ್ವರೂಪವು ಆವಿರ್ಭೂತವಾಗುವುದಷ್ಟೆ! ಬಿಂದುವು ಹೋಗಿ ಒಳಗಡೆ ನಾದೋತ್ಪತ್ತಿಯಾಗುವವರೆಗೂ ಅನುಸಂಧಾನಮಾಡುತ್ತಿರುವ ಓಂಕಾರವರ್ಣೋಚ್ಚಾರಣೆಯು ಹ್ರಸ್ವವೆನಿಸಿಕೊಳ್ಳುವುದು. ಸಮಾಧಿಯ ಅನುಷ್ಠಾನವು ವೃದ್ಧಿಯಾಗಿ ಓಂಕಾರನಾದೋತ್ಪತ್ತಿಯಾದಾರಭ್ಯ ನಾದವಡಗಿ ಕಳೆಗೆ ಬರುವವರೆಗೂ ಸ್ಥೂಲವಾದ ಓಂಕಾರವರ್ಣೋಚ್ಚಾರಣೆಯು ದೀರ್ಘವೆನಿಸಿಕೊಳ್ಳುವುದು. ನಾದವಡಗಿ ಕಳೆಗೆ ಬಂದು ಕಳೆಯು ಆತ್ಮನಲ್ಲಿ ಲೀನವಾಗುವವರೆಗೆ ವರ್ಣೋಚ್ಚಾರಣೆಯು ಪ್ಲುತವೆನಿಸಿಕೊಳ್ಳುವುದು. ಕಳೆಯು ಆತ್ಮನಲ್ಲಿ ಲೀನವಾದರೆ ಓಂಕಾರವರ್ಣೋಚ್ಚಾರಣೆಯು ನಿಶ್ಚಲವಾಗಿ ಆತ್ಮಸಾಕ್ಷಾತ್ಕಾರವಾಗುವುದು. ಮೇಲೆ ಬರೆದಿರುವ ಹ್ರಸ್ವ ದೀರ್ಘ, ಪ್ಲುತಗಳ ತತ್ವಕ್ಕೆ ಅನುಸಾರವಾಗಿ ವರಾಹೋಪನಿಷತ್ ಪಂಚಮಾಧ್ಯಾಯದಲ್ಲಿ,

ಹ್ರಸ್ವಬಿಂದು ಗತಂ ದೈರ್ಘ್ಯಂ ಬ್ರಹ್ಮರಂಧ್ರಗತಂ ಪ್ಲುತಂ।

ಎಂಬದಾಗಿ ಹೇಳಿರುತ್ತದೆ. ಅಂದರೆ ತೇಜೋಬಿಂದುಧಾರಣೆಗೆ ಮಾಡುತ್ತಿದ್ದ ಓಂಕಾರವರ್ಣೋಚ್ಚಾರಣೆಗಿಂತಲೂ ನಾದಾನುಸಂಧಾನದ ಸೋಪಾನಕ್ಕೆ ಬಂದ ಅಧಿಕಾರಿಯಲ್ಲಿ "ಓಂ"ಕಾರವರ್ಣೋಚ್ಚಾರಣೆಯು ಶ್ರೇಷ್ಠವಾಗಿ ದೀರ್ಘದ ತತ್ವದಲ್ಲಿರುವುದು. ನಾದವಡಗಿ ಕಳೆಗೆ ಬರುವ ತತ್ವದಲ್ಲಿ ಅತ್ಯಂತ ಶ್ರೇಷ್ಠವಾಗಿ ಘಂಟೆಯ ದೀರ್ಘವಾದ ನಾದದಂತಾಗುವುದು. ಅಂದರೆ ಒಳ್ಳೆಯ ನಾದವಿರುವ ಘಂಟೆಯನ್ನು ಬಾರಿಸಿದರೆ "ಮ್" ಎಂಬ ಅರ್ಧಾಕ್ಷರದ ನಾದವು ಏಕಾಕಾರವಾಗಿ ಹೋಗುತ್ತಾ ಕೊನೆಯಲ್ಲಿ ಹೇಗೆ ನಿಶ್ಚಲತ್ವವನ್ನು ಪಡೆಯುವುದೊ ಹಾಗೆ ನಾದಾನುಸಂಧಾನದ ಪರಿಪಕ್ವಾವಸ್ಥೆಯಲ್ಲಿ ಅಧಿಕಾರಿಯಲ್ಲಿನ ಓಂಕಾರವರ್ಣೋಚ್ಚಾರಣೆಯು "ಮ್" ಎಂಬ ಶಬ್ದದಿಂದ ಏಕಾಕಾರವಾಗಿ ಅನಂತರ ನಿಶ್ಚಲತ್ವವನ್ನು ಪಡೆಯುವುದು. ಈ ನಿಶ್ಚಲವಾಗುವಿಕೆಯೇ ಓಂಕಾರವೆನಿಸುವ ಆತ್ಮಸಾಕ್ಷಾತ್ಕಾರವಾಗಿರುವುದು. ಸಗುಣವಾದ ಬಿಂದು ನಾದ ಕಳೆಗಳೆಲ್ಲಾ ಹೇಗೆ ಪರಮಾತ್ಮನಲ್ಲಿ

ಲಯವಾಗುವುವೋ ಹಾಗೆ ಸಗುಣವಾದ ಓಂಕಾರವರ್ಣೋಚ್ಚಾರಣೆಯೂ ಪರಮಾತ್ಮನಲ್ಲಿ ಲಯವಾಗುವುದು. ಹೀಗೆ ಸಗುಣವೆಲ್ಲಾ ಲಯವಾಗುವುದೇ "ಓಮಿತ್ಯೇಕಾಕ್ಷರಂಬ್ರಹ್ಮ" ಎಂಬ ಶ್ರುತಿವಚನದ ಪರಬ್ರಹ್ಮನಾಗಿರುವುದು. ಸಗುಣಸ್ವರೂಪವಾಗಿರುವ ಬಿಂದು ನಾದ ಕಳೆಗಳೂ ಹ್ರಸ್ವ ದೀರ್ಘ ಪ್ಲುತಗಳೂ ಲಯವಾಗುವ ಸ್ವರೂಪವೇ ಆತ್ಮಸಾಕ್ಷಾತ್ಕಾರದ ಸ್ವರೂಪವೆನ್ನುವುದಕ್ಕೆ ಶ್ರೀಕೃಷ್ಣಪರಮಾತ್ಮನು ಉತ್ತರಗೀತೆಯಲ್ಲಿ,

ಅಮಾತ್ರಂ ಶಬ್ದರಹಿತಂ ಸ್ವರವ್ಯಂಜನವರ್ಜಿತಮ್ ।
ಬಿಂದುನಾದಕಳಾತೀತಂ ಯ ಸ್ತಂ ವೇದಸ ವೇದವಿತ್ ।

ತಾ|| ಹ್ರಸ್ವ, ದೀರ್ಘ, ಪ್ಲುತಗಳ ಉಚ್ಚಾರಣೆಯ ಕಾಲರಹಿತವಾದ, ಶಬ್ದವಿಲ್ಲದ, ಅಕಾರಾದಿ ಸ್ವರಗಳು ಮತ್ತು ಕಕಾರಾದಿ ವ್ಯಂಜನಗಳೆಂದರೆ ಐವತ್ತೆರಡು ಅಕ್ಷರಗಳ ಉಚ್ಚಾರಣೆಯ ಶಬ್ದಗಳಿಲ್ಲದ, ಬಿಂದು ನಾದ ಕಳೆಗಳಿಲ್ಲದ ಪರಬ್ರಹ್ಮನನ್ನು ಸ್ವಾನುಭವ ದಿಂದ ಅರಿತವನೇ ವೇದವಿದನು (ಪಂಡಿತನು) ಎಂದು ಹೇಳಿರುವನು.

ಆದುದರಿಂದ ಓಂಕಾರವರ್ಣೋಚ್ಚಾರಣೆಯ ಅನುಷ್ಠಾನವು ಪ್ಲುತ ಅಥವಾ "ಮ್" ಎಂಬ ಅರ್ಧಾಕ್ಷರದ ತತ್ವವೆಂದರೆ ಶ್ರೇಷ್ಠವಾದ ಏಕಾಕಾರವಾದ ಘಂಟೆಯ ನಾದವು ಪ್ರಸರಿಸಿಕೊಂಡು ಕೊನೆಯಲ್ಲಿ ಶಾಂತತೆಯನ್ನು ಪಡೆಯುವುದೇ ಆತ್ಮಸಾಕ್ಷಾತ್ಕಾರ ವಾಗಿರುವುದು. ಇದರಲ್ಲಿ "ಮ್" ಎಂಬ ಅರ್ಧಾಕ್ಷರದಲ್ಲಿ ಸ್ಥಾಯಿಯಾಗಿ ನಿಂತುಕೊಳ್ಳು ವುದೇ ಶಕ್ತಿ ಅಥವಾ ಕಳೆಯೆನಿಸುವುದು. ಈ ಕಳೆಗೂ ಮೀರಿ ಶಾಂತವಾಗಿರುವುದೇ ಪರಮಾತ್ಮ. ಇದೇ ತಾತ್ಪರ್ಯಕ್ಕೆ ಬ್ರಹ್ಮವಿದ್ಯೋಪನಿಷತ್ತಿನಲ್ಲಿ,

ಅರ್ಧಮಾತ್ರಾ ಪರಾ ಜ್ಞೇಯಾ ತತ ಊರ್ಧ್ವಂ ಪರಾತ್ಪರಂ ।

ತಾ|| ಅರ್ಧಮಾತ್ರೆಯೇ ಪರಾಶಕ್ತಿ. ಇದಕ್ಕೆ ಮೀರಿರುವುದೇ ಪರಬ್ರಹ್ಮ ಎಂಬ ವಾಕ್ಯವಿರುವುದು.

ಈ ಮೇಲಿನ ಶ್ರುತಿವಾಕ್ಯದಂತೆ ಸೀತಾದೇವಿಯೇ ಕಳೆ ಅಥವಾ ಪರಾಶಕ್ತಿ. ಸೀತಾ ದೇವಿಯು ಅಗ್ನಿಪ್ರವೇಶಮಾಡಿದ ಮೇಲೆ ಇರುವ ಶ್ರೀರಾಮನ ಸ್ಥಿತಿಯೇ ಓಂಕಾರ ವಾಚ್ಯನಾದ ಪರಬ್ರಹ್ಮ. ಸಮಾಧಿ ಅನುಷ್ಠಾನದ ಪ್ರಥಮದಲ್ಲಿ ಬುದ್ಧಿವೃತ್ತಿಯು ತೇಜೋಬಿಂದುವನ್ನು ಧರಿಸಿಕೊಳ್ಳುವುದು. ಬುದ್ಧಿವೃತ್ತಿಯು ತೇಜೋಬಿಂದುವಿನ ಆಕಾರ ವಾದಾಗ ಬುದ್ಧಿಯಲ್ಲಿರುವ ಪ್ರತಿಬಿಂಬಚೈತನ್ಯನು ತೇಜೋಬಿಂದುವಿನೊಡಗೂಡಿರುವನು. ಬಿಂದು ಹೋಗಿ ನಾದೋತ್ಪತ್ತಿಯಾದ ಕಾಲದಲ್ಲಿ ಬುದ್ಧಿವೃತ್ತಿಯೂ ನಾದವನ್ನು ಧರಿಸು ವುದು. ಇಂತಹ ಕಾಲದಲ್ಲಿಯೂ ಪ್ರತಿಬಿಂಬಚೈತನ್ಯನು ನಾದದೊಡಗೂಡಿರುವನು.

ನಾದವಡಗಿ ಕಳೆಗೆ ಬಂದಸ್ವರೂಪವೇ ಯಾವ ಅವಲಂಬನವೂ ಇಲ್ಲದ ಬುದ್ಧಿವೃತ್ತಿಯ ಸ್ವಾಭಾವಿಕವಾದ ಸ್ಥಿತಿ. ಇಂತಹ ಕಾಲದಲ್ಲಿ ಪ್ರತಿಬಿಂಬಚೈತನ್ಯನು ಕಳೆಯೊಡಗೂಡಿರುವನು. ಯಾವ ಅವಲಂಬನವೂ ಇಲ್ಲದ ಸೂಕ್ಷ್ಮವಾದ ಕಳೆಯೂ ಸಹಸ್ರಾರಕಮಲದಲ್ಲಿ ಲೀನವಾಗಲು ಸಹಸ್ರಾರಕಮಲಸ್ಥಿತ ಪರಬ್ರಹ್ಮನಿಗೂ ಬುದ್ಧಿಸ್ಥಿತ ಪ್ರತಿಬಿಂಬಚೈತನ್ಯನಿಗೂ ಏಕತ್ವವುಂಟಾಗುವುದೆಂದರೆ ಅವನೇ ಇವನಾಗುವನು. ಈ ಸ್ಥಿತಿಯೇ ಓಂಕಾರವಾಚ್ಯನಾದ ಪರಮಾತ್ಮಸ್ವರೂಪವು. ಈ ಸ್ಥಿತಿಯೇ ಸೀತಾಗ್ನಿಪ್ರವೇಶವಾದ ಮೇಲೆ ಇರುವ ಓಂಕಾರ ವಾಚ್ಯನಾದ ಶ್ರೀರಾಮನ ಸ್ಥಿತಿಯು. ಆದುದರಿಂದ ಸಗುಣ ಅಥವಾ ಅಪರವಾದ ಬಿಂದು ನಾದ ಕಳೆಗಳು ಹೋಗಿ ಪರಮಾತ್ಮಸ್ಥಿತಿಯನ್ನು ಪಡೆಯಬೇಕು. ಇದೇ ತಾತ್ಪರ್ಯಕ್ಕೆ ಯೋಗಶಿಖೋಪನಿಷತ್ತಿನಲ್ಲಿ,

ಬಿನ್ದು ನಾದ ಕಲಾ ಬ್ರಹ್ಮನ್ ವಿಷ್ಣು ಬ್ರಹ್ಮೇಶ ದೇವತಾಃ |
ನಾದೋ ಬಿನ್ದುಶ್ಚ ಚಿತ್ತಞ್ಚ ತ್ರಿಭಿರೈಕ್ಯಂ ಪ್ರಸಾದಯೇತ್ ||

ತಾ|| ಬಿಂದು ನಾದ ಕಳೆಗಳು ಬ್ರಹ್ಮ ವಿಷ್ಣು ಈಶ್ವರರ ಸ್ವರೂಪವು. ನಾದ ಬಿಂದು ಚಿತ್ತಗಳ ಐಕ್ಯದಿಂದ ಆತ್ಮಸಾಕ್ಷಾತ್ಕಾರವನ್ನು ಪಡೆಯಬೇಕು. ಎಂದು ಹೇಳಿರುವುದು.

ಆದುದರಿಂದ ನಾದ ಬಿಂದು ಕಳೆಗಳು ಐಕ್ಯವಾಗಿರುವ ಓಂಕಾರವಾಚ್ಯನಾದ ಪರಮಾತ್ಮಸ್ವರೂಪವೇ ಸೀತಾದೇವಿಯು ಅಗ್ನಿಯಲ್ಲಿ ಲಯವಾದ ಮೇಲೆ ಇರುವ ಶ್ರೀರಾಮನ ಸ್ಥಿತಿಯು. ಹೇಗೆ ಶ್ರೀರಾಮಚಂದ್ರನೇ ಶ್ರೀಮನ್ನಾರಾಯಣನೋ ಶ್ರೀಮನ್ನಾರಾಯಣನೇ ಶ್ರೀರಾಮಚಂದ್ರನೋ ಹಾಗೆ ಓಂಕಾರವಾಚ್ಯನೇ ಶ್ರೀರಾಮಚಂದ್ರನು. ಯಾವ ಅಧಿಕಾರಿಯು ಆತ್ಮಸಾಕ್ಷಾತ್ಕಾರಸ್ವರೂಪದಲ್ಲಿರುವನೋ ಅವನೇ ಶ್ರೀರಾಮಚಂದ್ರನು. ಇದೇ ತತ್ವಕ್ಕೆ ರಾಮರಹಸ್ಯೋಪನಿಷತ್ತಿನಲ್ಲಿ,

ಓಂ ಯೋ ಹವೈ ಶ್ರೀರಾಮಚಂದ್ರಃ ಓಂ ತತ್ಸದ್ಯ ತ್ಪರಂಬ್ರಹ್ಮ ರಾಮಚಂದ್ರ
ಚಿದಾತ್ಮಕ ಸ್ಸೋಹಂ ಓಂ ತದ್ರಾಮಭದ್ರಂ ಪರಂಜ್ಯೋತಿರ ಸೋಹಂ ||

ತಾ|| ಓಂಕಾರಸ್ವರೂಪಿಯೇ ಶ್ರೀರಾಮಚಂದ್ರನು. ಓಂ ಎಂಬುದೇ ಸತ್ಯ. ಚಿದಾತ್ಮಕ ನಾದ ಪರಬ್ರಹ್ಮನೆನಿಸುವ ಶ್ರೀರಾಮಚಂದ್ರನಾದ ಓಂಕಾರ ಅಥವಾ ಪ್ರಣವವೇ ನಾನು. ಪರಂಜ್ಯೋತಿ ತತ್ವವೆನಿಸುವ ಓಂಕಾರವೆನಿಸುವ ಶ್ರೀರಾಮಭದ್ರನೇ ನಾನು. ಎಂದು ಹೇಳಿರುವುದು.

ವಿಶ್ವ, ತೈಜಸ, ಪ್ರಾಜ್ಞ, ತುರೀಯ ತತ್ವಗಳಿಂದಲೂ ಬಿಂದು, ನಾದ, ಕಳಾ ಮತ್ತು ಕಳಾತೀತದ ತತ್ವಗಳಿಂದಲೂ ಸೀತಾಗ್ನಿಪ್ರವೇಶವಾದ ಮೇಲೆ ಇರುವ ಶ್ರೀರಾಮನ ಸ್ಥಿತಿಯ

ತತ್ವವೇ ಓಂಕಾರವಾಚ್ಯನಾದ ಪರಮಾತ್ಮಸಾಕ್ಷಾರದ ತತ್ವವಾಗಿರುವುದು. ನಿರ್ವಿಕಲ್ಪ ಸಮಾಧಿ, ಓಂಕಾರಸ್ವರೂಪ, ಪ್ರಕೃತಿಲಯ, ರಾಜಯೋಗ, ಅದ್ವೈತಸಿದ್ಧಿಗಳ ತತ್ವಗಳೆಲ್ಲಾ ಏಕವಾಚಕವಾದ ಪರಬ್ರಹ್ಮಸಾಕ್ಷಾತ್ಕಾರವನ್ನೇ ಪ್ರತಿಪಾದನೆಮಾಡುವುವೆಂದು ಈ ಪ್ರಕರಣದ ಪ್ರಥಮದಿಂದಲೂ ತಿಳಿಸಿಕೊಂಡು ಬಂದಿರುತ್ತದಷ್ಟೆ! ಪ್ರಕೃತಿಲಯದಿಂದಲೂ ಪರಬ್ರಹ್ಮಸಾಕ್ಷಾತ್ಕಾರವನ್ನು ತಿಳಿದುಕೊಳ್ಳೋಣ.

## ಪ್ರಕೃತಿಲಯ.

ಸೀತಾದೇವಿಯು ಅಗ್ನಿಪ್ರವೇಶಮಾಡುವುದೆಂದರೆ ಶುದ್ಧಸತ್ವಪ್ರಧಾನಮಾಯೆ (ಪ್ರಕೃತಿ) ಯು ಪರಬ್ರಹ್ಮನಲ್ಲಿ ಲೀನವಾಗುವ ತತ್ವವೆಂದು ಹಿಂದಿನ ಪ್ರಕರಣದಲ್ಲಿ ತಿಳಿಸಿ ತಷ್ಟೆ! ಸೀತೆಯು ಅಗ್ನಿಯೊಳಗೆ ಪ್ರವೇಶಿಸಿ ಅಗ್ನಿಸ್ವರೂಪಳಾದಂತೆ ಶುದ್ಧಸತ್ವಪ್ರಧಾನ ಮಾಯೆ (ಪ್ರಕೃತಿ) ಯು ಪರಬ್ರಹ್ಮನಲ್ಲಿ ಲಯವಾಗಿ ಪರಬ್ರಹ್ಮನೇ ಆಗುವುದು. ಆದುದ ರಿಂದ ಪ್ರಕೃತಿಲಯವೇ ಆತ್ಮಸಾಕ್ಷಾತ್ಕಾರವೆಂಬುವನ್ನು ವಿವರಿಸೋಣ. ಸೌಭಾಗ್ಯಲಕ್ಷ್ಮ್ಯುಪ ನಿಷತ್ತು ಮತ್ತು ವರಾಹೋಪನಿಷತ್ತುಗಳಲ್ಲಿ,

ಅಹಂಭಾವಂ ಪರಿತ್ಯಜ್ಯ ಜಗದ್ಭಾವಮನೀದೃಶಂ |
ನಿರ್ವಿಕಲ್ಪಸ್ಥಿತೋ ವಿದ್ವಾನ್ ಭೂಯೋನಾಪ್ಯನುಶೋಚತಿ ||

ತಾ|| ಪ್ರತ್ಯಕ್ಷಾದಿಗಳಿಂದ ಊಹಿಸುವ ಜಗದ್ಭಾವರೂಪವಾದ ಅಹಂಭಾವವನ್ನು ಬಿಟ್ಟು ನಿರ್ವಿಕಲ್ಪಸ್ಥಿತಿಯಲ್ಲಿರುವ ವಿದ್ವಾಂಸನು ಪುನಃ ದುಃಖವನ್ನು ಹೊಂದುವುದಿಲ್ಲ. ಎಂದೂ

ಅಹಂ ಬ್ರಹ್ಮೇತಿ ನಿಶ್ಚಿತ್ಯ ಅಹಂಭಾವಂ ಪರಿತ್ಯಜ |
ಸರ್ವಮೇವ ಲಯಂ ಯಾತಿ ಸುಪ್ತಹಸ್ತಸ್ಥ ಪುಷ್ಪವತ್ ||

ತಾ|| ನಾನೇ ಬ್ರಹ್ಮನೆಂದು ಪರೋಕ್ಷಜ್ಞಾನದಲ್ಲಿ ನಿರ್ಧರಮಾಡಿಕೊಂಡು ಅನಂತರ ನಾನೆಂಬ ಜ್ಞಾನವನ್ನೂ ಬಿಡು. ನಿದ್ರೆಮಾಡುವವನ ಹಸ್ತದಲ್ಲಿದ್ದ ಪುಷ್ಪವು ಕೈಜಾರಿಹೋಗು ವಂತೆ ದೃಶ್ಯವು ಅದೃಶ್ಯವಾಗುವುದೆಂದು ತೇಜೋಬಿಂದೂಪನಿಷತ್ತಿನಲ್ಲಿರುವುದು. ಮತ್ತು

ಯಾವತ್ಸರ್ವಂ ನಸಂತ್ಯಕ್ತಂ ತಾವದಾತ್ಮಾ ನಲಭ್ಯತೆ |
ಸರ್ವವಸ್ತು ಪರಿತ್ಯಾಗೆ ಶೇಷ ಆತ್ಮೇತಿ ಕಥ್ಯತೇ ||

ತಾ|| ಎಲ್ಲಿಯವರೆಗೆ ಸರ್ವ (ವಿದ್ಯಾ ಅವಿದ್ಯಾ) ವೂ ಪರಿತ್ಯಜಿಸಲ್ಪಡುವುದಿಲ್ಲವೋ ಅಲ್ಲಿಯವರೆಗೆ ಆತ್ಮಸಾಕ್ಷಾತ್ಕಾರ ಲಭ್ಯವಾಗುವುದಿಲ್ಲ. ಸಮಸ್ತವನ್ನೂ ಪರಿತ್ಯಾಗಮಾಡಿದ ನಂತರ ಉಳಿಯುವುದೇ ಆತ್ಮವೆನಿಸುವುದು. ಎಂಬದಾಗಿ ಅನ್ನಪೂರ್ಣೋಪನಿಷತ್ತಿನ ವಾಕ್ಯವಿರುವುದು.

ಈ ಮೇಲಿನ ಶ್ರುತಿವಾಕ್ಯಗಳಂತೆ ಸೀತಾದೇವಿಯ ತತ್ವವಾದ ಶುದ್ಧಸತ್ವಪ್ರಧಾನ ಮಾಯೆಯು (ಅಹಂಜ್ಞಾನವು) ಕೂಡ ಜ್ಞಾನಾಗ್ನಿಯ ಅಂತರ್ಗತವಾಗಿ ಸ್ವಯಂಪ್ರಕಾಶ ವಾದ ಪರಬ್ರಹ್ಮನಲ್ಲಿ ಲಯವಾದರೆ ಪರಮಾತ್ಮಸ್ವರೂಪ ಒಂದೇ ಉಳಿಯುವ ತತ್ವವಾಗಿದೆ.

ಸೀತಾದೇವಿಯು ಅಗ್ನಿಪ್ರವೇಶಮಾಡಿದಳೆಂದರೆ—ಓಂಕಾರದಲ್ಲಿನ ಮಕಾರ ಅಥವಾ ಸುಷುಮ್ನಾಂತರ್ಗತವಾಗಿ ಭ್ರೂಮಧ್ಯದಲ್ಲಿರುವ ಆಹವನೀಯಾಗ್ನಿಯು ಪ್ರಜ್ವಲನೆಯಾಗಿ ಸಹಸ್ರಾರಕಮಲದಲ್ಲಿರುವ ಪರಮಾತ್ಮಸ್ವರೂಪವಾದ ಸ್ವಯಂಪ್ರಕಾಶದೊಡನೆ ಸೇರುವುದು. ಸೇರಿದ ಈ ಅಗ್ನಿಗೆ ಸಂವರ್ತಾಗ್ನಿಯೆಂದು ಅಥರ್ವಶಿಖೋಪನಿಷತ್ತಿನಲ್ಲಿ ಹೇಳಿರುವುದು. ಇದಕ್ಕೆ ಜ್ಞಾನಾಗ್ನಿ, ಚಿಜ್ಜ್ಯೋತಿ, ಜಲಜ್ಜ್ಯೋತಿ ಅಥವಾ ಶ್ರೀಕೃಷ್ಣಪರಮಾತ್ಮನು ಭಗವ ದ್ಗೀತೆಯಲ್ಲಿ ಹೇಳಿರುವ ಬ್ರಹ್ಮಾಗ್ನಿ ಎಂಬ ಹೆಸರುಗಳಿರುವುವು. ಸೀತಾದೇವಿಯು ಅಗ್ನಿ ಯಲ್ಲಿ ಲಯವಾಗಿರುವುದೆಂದರೆ—ಶುದ್ಧಸತ್ವಪ್ರಧಾನಮಾಯೆಯು (ಅಹಂಜ್ಞಾನವು) ಸ್ವಾತ್ಮಾರಾಮಸ್ವರೂಪವಾಗಿರುವ ಸ್ವಯಂಪ್ರಕಾಶವೇ ಆಯಿತೆಂಬ ತತ್ವ. ಅಧಿಕಾರಿಗೆ ಜೀವಂತನಾಗಿರುವಾಗಲೇ ಆತ್ಮಸಾಕ್ಷಾತ್ಕಾರವುಂಟಾಗುವ ಸ್ಥಿತಿಯೇ ಸೀತಾದೇವಿಯು ಅಗ್ನಿಯಲ್ಲಿ ಲಯವನ್ನು ಪಡೆದಿರುವ ಸ್ಥಿತಿಯಾಗಿರುವುದು.

ಜೀವಂತನಾಗಿರುವವನ ದೇಹಕ್ಕೂ ಮೃತನದೇಹಕ್ಕೂ ಎಷ್ಟೋ ಭೇದಗಳಿರುವುವು. ಮೃತದೇಹದಲ್ಲಿ ಇಂದ್ರಿಯಗಳೂ ಅಂತಃಕರಣವೂ, ಪಂಚಪ್ರಾಣಗಳೂ, ಅಗ್ನಿಶಾಖಗಳೂ ಇರುವುದಿಲ್ಲ. ಜೀವಂತನಾಗಿ ಆತ್ಮಸಾಕ್ಷಾತ್ಕಾರವನ್ನು ಪಡೆದವನ ದೇಹದಲ್ಲಿ ಪಂಚಪ್ರಾಣ, ಇಂದ್ರಿಯ ಬುದ್ಧಿ ಮನಸ್ಸುಗಳಿದ್ದರೂ ಅವುಗಳ ವ್ಯಾಪಾರಗಳೆಲ್ಲಾ ಸಹಸ್ರಾರದಲ್ಲೆಂದರೆ ಪರಬ್ರಹ್ಮನಲ್ಲಿ ಲಯವಾಗಿರುತ್ತವೆ. ಇಂತಹ ಆತ್ಮಸಾಕ್ಷಾತ್ಕಾರವನ್ನು ಪಡೆದಿರುವವನ ದೇಹದ ಇರುವಿಕೆಯನ್ನು ಪ್ರದರ್ಶಿಸುವುದು ಅಥವಾ ತೋರಿಸುವುದು ಅಗ್ನಿಯ ಶಾಖ ವೊಂದೇ. ಅಗ್ನಿಯ ಶಾಖವು ಹೋದರೆ ಮೃತದೇಹವೇ ಆಗುವುದು. ಆದುದರಿಂದ ಜೀವಂತ ನಾಗಿರುವಾಗ ಸಾಕ್ಷಾತ್ಕಾರವನ್ನು ಪಡೆದಿರುವ ಸ್ವರೂಪದ ದೇಹದ ಇರುವಿಕೆಯನ್ನು ತಿಳಿದುಕೊಳ್ಳಬೇಕಾದರೆ ಬ್ರಹ್ಮಾಗ್ನಿಯ ಪ್ರಕಾಶದಿಂದಲೇ. ಈ ತತ್ವಾರ್ಥಕ್ಕನುಸಾರವಾಗಿ ತೈತ್ತಿರೀಯೋಪನಿಷತ್ತಿನಲ್ಲಿಯೂ ಸಂಧ್ಯಾವಂದನೆಯ ಮಂತ್ರದಲ್ಲಿಯೂ,

ಓಮಿತ್ಯೇಕಾಕ್ಷರಂ ಬ್ರಹ್ಮ ಅಗ್ನಿರ್ದೇವತಾ |

ಎಂಬದಾಗಿ ಹೇಳಿರುವುದು. ಅಂದರೆ ಪರಬ್ರಹ್ಮದ ಇರುವಿಕೆಯನ್ನು ಪ್ರದರ್ಶಿಸು ವುದು ಅಥವಾ ಸೂಚಿಸುವುದು ಅಗ್ನಿಯೆಂಬ ತಾತ್ಪರ್ಯ. ಆತ್ಮಸಾಕ್ಷಾತ್ಕಾರದಲ್ಲಿರುವವರ ದೇಹವನ್ನು ನೋಡುವವರು ದೇಹವ್ಯಾಪಾರವೆಲ್ಲಾ ಎಲ್ಲಿ ಲಯವಾಗಿರುವುದೆಂದು

ಯೋಚಿಸಿಕೊಳ್ಳುತ್ತಾರೆ? ಪರಬ್ರಹ್ಮನಲ್ಲಿ ಲಯವಾಗಿರುವ ವಿಚಾರವು ತಿಳಿಯುವುದಕ್ಕಾಗುವುದಿಲ್ಲ. ಆದುದರಿಂದ ಹೊರಗೆ ನೋಡತಕ್ಕವರಿಗೆ ದೇಹಗತವಾದ ಸಕಲ ಇಂದ್ರಿಯಾದಿ ವಸ್ತುಗಳೂ ಯಾವುದೋ ಒಂದು ಸ್ಥಳದಲ್ಲಿ ಲಯವನ್ನು ಹೊಂದಿರುತ್ತವೆಂಬುದಕ್ಕೆ ದೇಹದ ಅಗ್ನಿಯ ಶಾಖವು ಸಾಕ್ಷಿಯ ಸ್ಥಾನದಲ್ಲಿರುವುದು. ನ್ಯಾಯಾಧಿಪತಿಯು ತಪ್ಪುಮಾಡಿದವನನ್ನು ಸಾಕ್ಷಿಯ ಮೂಲಕ ನಿರ್ಧರಿಸಿಕೊಳ್ಳುವಂತೆ ನೋಡತಕ್ಕವರಿಗೆ ನಮ್ಮಲ್ಲಿರುವ ಅಗ್ನಿಯು ಆತ್ಮಸಾಕ್ಷಾತ್ಕಾರವನ್ನು ಪ್ರದರ್ಶಿಸುವ ಸಾಕ್ಷಿಯ ತತ್ವದಲ್ಲಿರುವುದನ್ನು ಸೂಚಿಸುವುದೇ "ಓಮಿತ್ಯೇಕಾಕ್ಷರಂಬ್ರಹ್ಮ ಅಗ್ನಿರ್ದೇವತಾ" ಎಂಬ ಶ್ರುತಿವಾಕ್ಯದ ತಾತ್ಪರ್ಯ. ಅಂದರೆ ಆತ್ಮಸಾಕ್ಷಾತ್ಕಾರಕ್ಕೆ ಅಗ್ನಿಯು ಸಾಕ್ಷಿಯಾಗಿರುವನು.

ಸೀತಾದೇವಿಯು ರಾವಣನ ವಧೆಯಾದನಂತರ ಅಗ್ನಿಪ್ರವೇಶಮಾಡಿರುವಳು. ಇದೇ ಸೀತಾದೇವಿಯು ಉತ್ತರಕಾಂಡದಲ್ಲಿ ಶ್ರೀರಾಮನು ಅಶ್ವಮೇಧಯಾಗಮಾಡಿದ ಸಂದರ್ಭದಲ್ಲಿ ಭೂಮಿಯಲ್ಲಿ ಪ್ರವೇಶಮಾಡಿರುವಳು. ಅಂದರೆ ಜೀವನ್ಮುಕ್ತಾವಸ್ಥೆಯಲ್ಲಿ ಸ್ಥಿತಿಗೆ ಮೂಲರೂಪವಾದ ಶುದ್ಧಸತ್ವಪ್ರಧಾನಮಾಯೆಯು (ಅಹಂಜ್ಞಾನವು) ಜ್ಞಾನಾಗ್ನಿಯ ಅಂತರ್ಗತವಾಗಿರುವ ಪರಮಾತ್ಮನಲ್ಲಿ ಲಯವಾಗುವುದು. ವಿದೇಹಮುಕ್ತಿಯಲ್ಲಿ ದೇಹವು ಮೃತಿಯನ್ನು ಹೊಂದುವುದರಿಂದ ಅಗ್ನಿಶಾಖವಿಲ್ಲವಾಗಿ ದೇಹದಲ್ಲಿಯೇ ಸಕಲ ವ್ಯಾಪಾರವೂ ಲಯವಾಗುವಂತೆ ತೋರುವುದು. ವಿದೇಹಮುಕ್ತಿಯಲ್ಲಿಯೂ ಆತ್ಮನಲ್ಲಿಯೇ ಲಯವಾಗುವುದು. ಇದರ ವಿಚಾರವು ಉತ್ತರಕಾಂಡದಲ್ಲಿ ಬರುವುದು.

ಆದುದರಿಂದ ಸೀತಾದೇವಿಯು ಅಗ್ನಿಯಲ್ಲಿ ಲಯವಾದಳೆಂದರೆ—ಜ್ಞಾನಾಗ್ನಿಯು ಅಂತರ್ಗತವಾದ ತನ್ನ ಆತ್ಮಸ್ವರೂಪವಾದ ಶ್ರೀರಾಮಚಂದ್ರನೇ ಆಗಿರುವಳು. ಅಂದರೆ ಪ್ರತಿಬಿಂಬಚೈತನ್ಯವೂ ಪರಬ್ರಹ್ಮಚೈತನ್ಯವೂ ಒಂದೇ. ಅಲ್ಲದೆ ಜೀವಬ್ರಹ್ಮಸಾಕ್ಷಾತ್ಕಾರವಾಗಿರುವ ಈ ಸೋಪಾನದಲ್ಲಿ ಭೇದಕ್ಕೆ ಅವಕಾಶವೇ ಇಲ್ಲವಾದುದರಿಂದ ಶ್ರೀರಾಮಚಂದ್ರನೇ ಪರಬ್ರಹ್ಮಸ್ವರೂಪನು. ಆದುದರಿಂದ ಅಗ್ನಿಯಲ್ಲಿ ಲಯವಾಗಿರುವಾಗ ಸೀತಾದೇವಿಯು ಆತ್ಮಾರಾಮಸ್ವರೂಪಳೇ ಆಗಿರುವಳು. ಇದೇ ತಾತ್ಪರ್ಯಕ್ಕೆ ರಾಮರಹಸ್ಯೋಪನಿಷತ್ ಪಂಚಮಾಧ್ಯಾಯದಲ್ಲಿ.

ಬಿಂದು ನಾದಾತ್ಮಕಂ ಬೀಜಂ ವಹ್ನಿಸೋಮ ಕಲಾತ್ಮಕಮ್ |
ಅಗ್ನೀಷೋಮಾತ್ಮಕಂ ರೂಪಂ ರಾಮಬೀಜೇ ಪ್ರತಿಷ್ಠಿತಮ್ |
ಯಥೈವ ವಟಬೀಜಸ್ಥಃ ಪ್ರಾಕೃತಶ್ಚ ಮಹಾದ್ರುಮಃ |
ತಥೈವ ರಾಮಬೀಜಸ್ಥಂ ಜಗದೇತಚ್ಚರಾಚರಂ ||

ತಾ|| ಬಿಂದು ನಾದಗಳಿಂದ ಕೂಡಿದ ಆತ್ಮಬೀಜವು ಅಗ್ನಿ ಚಂದ್ರಕಳೆಗಳುಳ್ಳದ್ದು. ಅಗ್ನೀಷೋಮಾತ್ಮಕಬೀಜವು ರಾಮಬೀಜದಲ್ಲಿಯೇ ಇರುವುದು. ಮುಂದಾಗುವ ಆಲದ

ಮರದ ಅಂಕುರವು ಆಲದ ಬೀಜದಲ್ಲಿ ಹೇಗಿರುವುದೋ ಹಾಗೆಯೇ ಈ ಸಮಸ್ತವಾದ ಪ್ರಪಂಚದ ಅಂಕುರವೂ ಶ್ರೀರಾಮನ ತತ್ವದಲ್ಲಿ ಅಡಗಿರುವುದು ಎಂದು ಹೇಳಿದೆ.

ಈ ಮೇಲಿನ ಶ್ರುತಿವಾಕ್ಯದ ತಾತ್ಪರ್ಯದಂತೆ ಸೀತಾದೇವಿಯು ಅಗ್ನಿಯೊಳಗೆ ಲಯವಾಗಿರುವಳೆಂದರೆ, ಸಮಸ್ತ ಪ್ರಪಂಚದ ಅಂಕುರವೂ ಪರಬ್ರಹ್ಮನಾದ ಶ್ರೀರಾಮನಲ್ಲಿರುವಂತೆಯೂ, ಅಗ್ನೀಷೋಮಾತ್ಮಕಬೀಜವು ರಾಮಬೀಜದಲ್ಲಿಯೇ ಇರುವಂತೆಯೂ, ಶುದ್ಧ ಸತ್ವಪ್ರಧಾನಮಾಯೆಯು (ಅಹಂಜ್ಞಾನವು) ಅಗ್ನಿಗೂ ಪ್ರಕಾಶಕೊಡುತ್ತಿರುವ ಸ್ವಯಂಪ್ರಕಾಶವಾದ ಪರಮಾತ್ಮನೇ ಆಗಿರುವುದೆಂಬ ತತ್ವ. ಆದುದರಿಂದ ಇಂತಹ ಸ್ವಯಂಪ್ರಕಾಶನೇ ಮುಖ್ಯವಾದ ಸ್ಥಿತಿಯುಳ್ಳ ಕಾಲದಲ್ಲಿ ಮಾಯೆಯೆಂಬುದಿಲ್ಲ. ಇದೇ ತತ್ವಕ್ಕೆ ಪಾಶುಪತಬ್ರಹ್ಮೋಪನಿಷತ್ತಿನಲ್ಲಿ,

ಸ್ವಪ್ರಕಾಶೈಕ ಸಂಸಿದ್ಧೇ ರ್ನಾಸ್ತಿ ಮಾಯಾ ಪರಾತ್ಮನಿ ।

ತಾ|| ಸ್ವಪ್ರಕಾಶನೇ ಸ್ಥಿತಿಯುಳ್ಳ ಪರಮಾತ್ಮನಲ್ಲಿ ಮಾಯೆಯಿರುವುದಿಲ್ಲ. ಎಂಬ ವಾಕ್ಯವಿರುವುದು. ಎಂದರೆ ಸೀತೆಯೆಂಬ ಹೆಸರಿಲ್ಲ. ಎಲ್ಲವೂ ಆತ್ಮನೇ ಆಗಿರುವುದು.

ಆತ್ಮಸಾಕ್ಷಾತ್ಕಾರದಲ್ಲಿ ಸುಷುಮ್ನೆಯೊಳಗೆ ಆಜ್ಞಾಚಕ್ರ ಅಥವಾ ಭ್ರೂಮಧ್ಯದಲ್ಲಿರುವ ಆಹವನೀಯಾಗ್ನಿಯು ಸಹಸ್ರಾರದಲ್ಲಿರುವ ಸ್ವಯಂಪ್ರಕಾಶದೊಡನೆ ಕಲೆತು ಜಲಜ್ಯೋತಿಸ್ವರೂಪವೆನಿಸಿಕೊಂಡು ದೇಹದೊಳಗೆ ಪ್ರಕಾಶವಾಗಿರುವುದೆಂದು ಅದ್ವಯ ತಾರಕೋಪನಿಷತ್ತಿನಲ್ಲಿ,

ಅನ್ತರ್ಲಕ್ಷ್ಯ ಜಲಜ್ಯೋತಿಃ ಸ್ವರೂಪಂ ಭವತಿ, ಪರಮ ।
ಗುರೂಪದೇಶೇನ ಸಹಸ್ರಾರೇ ಜಲಜ್ಯೋತಿರ್ವಾ ಬುದ್ಧಿ ।
ಗುಹಾ ನಿಹಿತ ಚಿಜ್ಜ್ಯೋತಿರ್ವಾ ಷೋಡಶಾಂತಸ್ಥ ।
ತುರೀಯ ಚೈತನ್ಯಂವಾ ಅನ್ತರ್ಲಕ್ಷ್ಯಂ ಭವತಿ ॥

ತಾ|| ಅಂತರ್ಮುಖದ ಗುರಿಯೇ ಜಲಜ್ಯೋತಿ (ವಿದ್ಯುದ್ದೀಪ) ಸ್ವರೂಪವಾಗಿರುವುದು. ಪರಮಗುರುವಿನ ಉಪದೇಶದಿಂದ ಸಹಸ್ರಾರದಲ್ಲಿ ಜಲಜ್ಯೋತಿಯಾಗಲಿ, ಬುದ್ಧಿಯೆಂಬ ಗುಹೆಯಲ್ಲಿಡಲ್ಪಟ್ಟ ಸ್ವಯಂಪ್ರಭೆಯಾಗಲಿ, ಹದಿನಾರು ಕಳೆಗಳೊಳಗಿರುವ ತುರೀಯ ಚೈತನ್ಯವಾಗಲಿ ಅಂತರ್ಲಕ್ಷ್ಯವಾಗುವುದು, ಎಂದು ಹೇಳಿರುವುದು.

ಸುಷುಮ್ನೆಯೊಳಗೆ ಆಜ್ಞಾಚಕ್ರ ಅಥವಾ ಭ್ರೂಮಧ್ಯದ ಮೇಲೆ ಸಹಸ್ರಾರಕಮಲ ಪ್ರದೇಶವನ್ನೇ ದಹರಾಕಾಶವೆಂದೂ, ಬ್ರಹ್ಮರಂಧ್ರವೆಂದೂ, ಅಂತಸ್ಥಾನವೆಂದೂ ಶ್ರುತ್ಯಾಧಾರದೊಡನೆ ನಿರ್ವಿಕಲ್ಪಸಮಾಧಿ ವಿಚಾರದಲ್ಲಿ ತಿಳಿಸಿತಷ್ಟೆ! ಪರಮಾತ್ಮನು ಈ ಸಹಸ್ರಾರ ಕಮಲದಲ್ಲಿ ಜ್ಞಾನದೀಪದಂತೆ ಇರುವನೆಂಬುದಕ್ಕೆ ಅಥರ್ವಶಿಖೋಪನಿಷತ್ತಿನಲ್ಲಿ,

ಸರ್ವಸ್ಯಾಂತಸ್ಥಾನೇಭ್ಯೋ ಧ್ಯೇಯೇಭ್ಯೋ |
ಪ್ರದೀಪವ ತ್ಪ್ರಕಾಶಯತೀತಿ ಪ್ರಕಾಶಃ |

ತಾ|| ಧ್ಯಾನಮಾಡತಕ್ಕ ಸಮಸ್ತ ಪ್ರಾಣಿಗಳ ಅಂತಸ್ಥಾನವೆಂದರೆ ಸಹಸ್ರಾರದಲ್ಲಿ ಶ್ರೇಷ್ಠವಾದ ದೀಪದಂತೆ ಪ್ರಕಾಶಪಡಿಸುವುದಾದರಿಂದ ಪ್ರಕಾಶವೆಂಬ ಹೆಸರು ಪ್ರಸಿದ್ಧಿಯಾಗಿರುವುದು ಎಂತಲೂ ಪಂಚಬ್ರಹ್ಮೋಪನಿಷತ್ತಿನಲ್ಲಿ,

ಸ್ವಮಾಯಯಾ ವೈಭವಾ ನ್ಸರ್ವಾ ನ್ ಸಂಹೃತ್ಯ ಸ್ವಾತ್ಮನಿ ಸ್ಥಿತಃ |
ಪಂಚಬ್ರಹ್ಮಾತ್ಮಕಾತೀತೋ ಭಾಸತೇ ಸ್ವಸ್ವತೇಜಸಾ ||

ತಾ|| ತನ್ನ ಅವಿದ್ಯೆಯ ವೈಭವಗಳೆಲ್ಲವನ್ನೂ ನಿಗ್ರಹಿಸಿ ತನ್ನ ನಿಜರೂಪದಲ್ಲಿ ಯಾವಾಗ ನಿಲ್ಲುವನೋ ಆಗಲೇ ಪಂಚಕೋಶಾತೀತನಾಗಿ ತನ್ನ ತೇಜಸ್ಸಿನಿಂದ ತಾನಾಗಿಯೇ ಪ್ರಕಾಶಿಸುವನು, ಎಂದು ಹೇಳಿರುವುದು. ಅಲ್ಲದೆ ಶ್ರೀಕೃಷ್ಣಪರಮಾತ್ಮನು ಉತ್ತರ ಗೀತೆಯಲ್ಲಿ,

ಆಕಾಶವ ತ್ಸೂಕ್ಷ್ಮಶರೀರ ಆತ್ಮಾ ನ ದೃಶ್ಯತೇ ವಾಯುವ ದಂತರಾತ್ಮಾ |
ಸ ಬಾಹ್ಯ ಮಭ್ಯಂತರ ನಿರ್ಮಲಾತ್ಮಾ ಜ್ಞಾನೋಲ್ಕಯಾ ಪಶ್ಯತಿನಿಶ್ಚಲಾತ್ಮಾ||

ತಾ|| ಆಕಾಶದೋಪಾದಿಯಲ್ಲಿ ಪರಬ್ರಹ್ಮನು ಇಂದ್ರಿಯಗಳಿಗೆ ಅವಿಷಯನು, ಪರಮಸೂಕ್ಷ್ಮವಾದ ಸ್ವಯಂಪ್ರಕಾಶರೂಪನು. ವಾಯುವು ಚಕ್ಷುರಾದಿಗಳಿಗೆ ವಿಷಯವಲ್ಲದಿರುವಂತೆ ಪರಮಾತ್ಮನು ಇಂದ್ರಿಯಗಳಿಗೆ ವಿಷಯವಾಗುವುದಿಲ್ಲ. ಹೊರಗಿನ ಮತ್ತು ಒಳಗಿನ ವ್ಯಾಪಾರಗಳಿಲ್ಲದ ಜ್ಞಾನದೀಪದಿಂದ ಅಂತರ್ಮುಖವುಳ್ಳವನಾದ ಅಧಿಕಾರಿಯು ಆತ್ಮಸಾಕ್ಷಾತ್ಕಾರವನ್ನು ಹೊಂದುವನು ಎಂದೂ, ಭಗವದ್ಗೀತೆ ೧೩ನೆಯ ಅಧ್ಯಾಯದಲ್ಲಿ,

ಜ್ಯೋತಿಷಾಮಪಿ ತಜ್ಜ್ಯೋತಿ ಸ್ತಮಸಃ ಪರಮುಚ್ಯತೇ |
ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ವಿಷ್ಠಿತಮ್ ||

ತಾ|| ಬೆಳಗುವ ಪದಾರ್ಥಗಳಿಗೆಲ್ಲಾ ಅದು ಬೆಳಕನ್ನು ಕೊಡುವುದು. ಅದು ವಿಜ್ಞಾನವನ್ನು ದಾಟಿ ಆಚೆ ಇರುವುದು. ಅದೇ ತಿಳಿವು. ಅದೇ ತಿಳಿಯುವ ವಸ್ತು. ಅದು ಎಲ್ಲರ ಹೃದಯದಲ್ಲಿಯೂ ಇರುವುದು. ಎಂದು ಹೇಳಿರುವರು. ಅಲ್ಲದೆ ಮುಂಡಕೋಪನಿಷತ್ ದ್ವಿತೀಯಮುಂಡಕ ದ್ವಿತೀಯಖಂಡದಲ್ಲಿಯೂ ಕಠೋಪನಿಷತ್ತಿನಲ್ಲಿಯೂ,

ಹಿರಣ್ಮಯೇ ಪರೇ ಕೋಶೇ ವಿರಜಂ ಬ್ರಹ್ಮ ನಿಷ್ಕಲಂ ತಚ್ಛುಭ್ರಂ
ಜ್ಯೋತಿಷಾಂ ಜ್ಯೋತಿಸ್ತದ್ಯದಾತ್ಮವಿದೋ ವಿದುಃ ನತತ್ರ ಸೂರ್ಯೋ

ಭಾತಿ ನಚಂದ್ರತಾರಕಂ ನೇಮಾವಿದ್ಯುತೋಭಾನ್ತಿ ಕುತೋಯಮಗ್ನಿಃ
ತಮೇವಭಾನ್ತ ಮನುಭಾತಿಸರ್ವಂ ತಸ್ಯಭಾಸಾ ಸರ್ವಮಿದಂ ವಿಭಾತಿ |

ತಾ|| ಜ್ಯೋತಿರ್ಮಯವೆನಿಸಿ, ಆತ್ಮಸಾಕ್ಷಾತ್ಕಾರಕ್ಕೆ ಸ್ಥಾನವೆನಿಸಿ ಸೂಕ್ಷ್ಮವಾಗಿರುವುದರಿಂದ ಪರವೆನಿಸಿ ಇರತಕ್ಕ ಸರ್ವತತ್ವಗಳಿಗೂ ಅಂತರಾಳ ಅಥವಾ ಹೃದಯವೆನಿಸುವ ಸಹಸ್ರಾರಕಮಲದಲ್ಲಿ ಅವಿದ್ಯೆ ಮೊದಲಾದ ದೋಷಗಳಿಂದ ವರ್ಜಿತವಾಗಿ ಪರಬ್ರಹ್ಮವು ಬೆಳಗುವುದು. ಅದು ಅತ್ಯಂತ ಪರಿಶುದ್ಧವಾದುದು. ಪ್ರಕಾಶಗಳೆನಿಸಿಕೊಂಡಿರುವ ಅಗ್ನಿ ಮೊದಲಾದುವುಗಳಿಗೂ ಪ್ರಕಾಶ್ಯವಾದುದು. ಅದೇ ಪರತರಜ್ಯೋತಿ. ಆತ್ಮವಿದರು ಯಾವುದನ್ನು ಅನುಭವದಿಂದ ತಿಳಿಯುವರೋ ಅದೇ ಆತ್ಮತತ್ವ. ಆ ಆತ್ಮನೇ ಅನಾತ್ಮಪದಾರ್ಥಗಳನೆಲ್ಲಾ ಪ್ರಕಾಶಪಡಿಸತಕ್ಕವನು. ಸೂರ್ಯನಿಗೆ ಸ್ವತಃ ಪ್ರಕಾಶಿಸುವ ಸಾಮರ್ಥ್ಯವಿಲ್ಲ. ಚಂದ್ರ ನಕ್ಷತ್ರ ಮಿಂಚುಗಳೂ ಪ್ರಕಾಶಪಡಿಸಲಾರವು. ನಮಗೆ ಗೋಚರವಾಗುವ ಅಗ್ನಿಯೂ ಎಂದಿಗೂ ಸ್ವತಃ ಪ್ರಕಾಶಪಡಿಸಲಾರನು. ಸ್ವತಃ ಪ್ರಕಾಶಿಸುವ ಆತ್ಮನನ್ನು ಅನುಸರಿಸಿ ಉಳಿದವುಗಳೆಲ್ಲವೂ ಬೆಳಗುತ್ತವೆ. ಆತನ ಬೆಳಕಿನಿಂದಲೇ ಎಲ್ಲಕ್ಕೂ ಬೆಳಕು. ಎಂದು ಹೇಳಿರುವುದು. ಅಲ್ಲದೆ ಪೈಂಗಲೋಪನಿಷತ್ತಿನಲ್ಲಿ,

ವಿಶ್ವತೈಜಸಪ್ರಾಜ್ಞಾಸ್ಸ್ವ ಸ್ವೋಪಾಧಿಲಯಾ ತ್ಪ್ರತ್ಯಗಾತ್ಮನಿ ಲೀಯಂತೇ
ಅಂಡಂ ಜ್ಞಾನಾಗ್ನಿನಾ ದಗ್ಧಂ ಕಾರಣೈಸ್ಸಹ ಪರಮಾತ್ಮನಿ ಲೀನಂ ಭವತಿ |

ತಾ|| ಉಪಾಧಿಗಳು ನಾಶವಾದನಂತರ ವಿಶ್ವ ತೈಜಸ ಪ್ರಾಜ್ಞನೆನಿಸಿಕೊಂಡಿದ್ದ ಜೀವನು ಆತ್ಮಸ್ವರೂಪನೇ ಆಗುವನು. ಉಪಾಧಿಯು ಜ್ಞಾನಾಗ್ನಿಯಿಂದ ದಹಿಸಲ್ಪಟ್ಟರೆ ಜೀವನು ಆತ್ಮನಾಗುವನು. ಎಂದು ಹೇಳಿರುವುದು.

ಈ ಮೇಲಿನ ಏಳು ಎಂಟು ವಾಕ್ಯಗಳ ತಾತ್ಪರ್ಯದಂತೆಯೂ ಸೀತಾದೇವಿಯು ಅಗ್ನಿಯಲ್ಲಿ ಲಯವಾದಳೆಂದರೆ ಶುದ್ಧಸತ್ವಪ್ರಧಾನವಾಯೆಯು (ಅಹಂಜ್ಞಾನ) ಜ್ಞಾನಾಗ್ನಿಯ ಅಂತರ್ಗತವಾಗಿರುವ ಆತ್ಮಾರಾಮಸ್ವರೂಪವಾಗಿಯೇ ಇರುವುದೆಂಬ ತತ್ವವಾಗಿರುವುದು. ಅಲ್ಲದೆ ಸೀತಾದೇವಿಯು ಅಗ್ನಿಯಲ್ಲಿರುವಾಗಿನ ಶ್ರೀರಾಮನ ಸ್ಥಿತಿಯೇ ಆತ್ಮಸಾಕ್ಷಾರದ ಸ್ಥಿತಿಯೆಂಬ ತತ್ವವನ್ನು ಈ ಶ್ರುತಿಪ್ರಮಾಣಗಳು ವ್ಯಕ್ತಪಡಿಸುವುವು. ಅಗಸ್ತ್ಯರು ಶ್ರೀರಾಮನಿಗೆ ಆದಿತ್ಯಹೃದಯವನ್ನು ಉಪದೇಶಮಾಡಿದ ತತ್ವವು ಆದಿತ್ಯಾಂತರ್ಗತವಾಗಿರುವ ಪರಮಾತ್ಮನನ್ನು ಸಾಕ್ಷಾತ್ಕಾರಮಾಡಿಕೊಳ್ಳಬೇಕೆಂಬ ತತ್ವವಾಗಿರುವುದಷ್ಟೆ! ಅಲ್ಲದೆ ಆದಿತ್ಯಾಂತರ್ಗತವಾಗಲು ಅಧೋಮುಖವಾಗಿದ್ದ ಆದಿತ್ಯನಕಿರಣಗಳನ್ನು ಊರ್ಧ್ವಮುಖವಾಗಿ ಮಾಡಿಕೊಳ್ಳುವ ತತ್ವವನ್ನೂ ತಿಳಿಸಿರುವುದಷ್ಟೆ! ಆದಿತ್ಯನ ಕಿರಣಗಳೆಲ್ಲಾ ಊರ್ಧ್ವಮುಖವಾಗಿ ಕಿರಣಪ್ರಸಾರವಿಲ್ಲದೆ ಇರುವ ಸ್ಥಿತಿಯೆ ಅಗ್ನಿಸ್ವರೂಪವಾಗಿರುವುದು. ಈ ಅಗ್ನಿಯು ಜ್ವಾಲೆ

ಯೊಡಗೂಡಿ ಉರಿಯಬೇಕು. ಸೀತಾದೇವಿಯು ಪ್ರವೇಶಮಾಡಿದುದು ಇದೇ ತತ್ವದ ಅಗ್ನಿಯಾಗಿರುವುದು. ಅಂದರೆ ಆದಿತ್ಯಮಂಡಲದಲ್ಲಿರುವ ಅಗ್ನಿಯ ಅಂತರ್ಗತನಾಗಿ ಪರಮಾತ್ಮನಿರುವನೆಂಬ ತತ್ವವೇ ಆದಿತ್ಯಹೃದಯದ ತತ್ವವಾಗಿರುವುದು. ಈ ತತ್ವಾರ್ಥಕ್ಕೆ ಅನುಸಾರವಾಗಿ ಯೋಗಶಿಖೋಪನಿಷತ್ತಿನಲ್ಲಿ,

ಆದಿತ್ಯಮಂಡಲಾಕಾರಂ ರಶ್ಮಿಜ್ವಾಲಾ ಸಮಾಕುಲಂ |
ತಸ್ಯ ಮಧ್ಯಗತಂ ವಹ್ನಿಂ ಜ್ವಾಲಯೇ ದ್ದೀಪವರ್ತಿವತ್ ||

ತಾ|| ಮಂಡಲಾಕಾರವಾಗಿರುವ ಕಿರಣಜ್ವಾಲಾಸಮೂಹದಿಂದ ತುಂಬಿರುವ ಆದಿತ್ಯನ ಮಧ್ಯಗತವಾದ ಅಗ್ನಿಯನ್ನು ದೀಪದ ಬತ್ತಿಯಂತೆ ಪ್ರಜ್ವಲನೆಮಾಡತಕ್ಕದ್ದು. ಎಂದು ಹೇಳಿರುವುದು. ಆದುದರಿಂದ ಸೀತಾಗ್ನಿಪ್ರವೇಶವೇ ಆದಿತ್ಯಾಂತರ್ಗತವಾದ ಪರಮಾತ್ಮ ಸಾಕ್ಷಾತ್ಕಾರದ ತತ್ವವಾಗಿರುವುದು.

ನಾವು ದೇವರ ಪೂಜೆಮಾಡುವಾಗ ದೇವರಿಗೆ ದೀಪದ ಆರತಿಯನ್ನು ಎತ್ತುತ್ತೇವೆ, ನೈವೇದ್ಯವನ್ನು ಮಾಡುತ್ತೇವೆ, ತಾಂಬೂಲವನ್ನು ಅರ್ಪಿಸುತ್ತೇವೆ, ಕರ್ಪೂರವನ್ನು ಹತ್ತಿಸಿ ಉತ್ತರನೀರಾಜನವನ್ನು ಎತ್ತುತ್ತೇವಷ್ಟೆ! ಈಶ್ವರಾರಾಧನಪೂರ್ವಕವಾದ ದೇವರ ಪೂಜಾದಿ ಕರ್ಮಗಳನ್ನು ಅಗತ್ಯವಾಗಿ ಮಾಡಬೇಕು. ಈ ಕರ್ಮಾನುಷ್ಠಾನವು ಚಿತ್ತಶುದ್ಧಿಯನ್ನುಂಟು ಮಾಡುವುದು. ನಮ್ಮಲ್ಲಿಯೇ ನಾವು ನಮ್ಮ ಆತ್ಮಾರಾಧನೆಯನ್ನು ಮಾಡಿಕೊಂಡರೆ ಆತ್ಮ ಸಾಕ್ಷಾತ್ಕಾರವನ್ನೇ ಪಡೆಯುತ್ತೇವೆ. ದೇವರನ್ನು ಪೂಜೆಮಾಡಬೇಕೆಂಬ ಇಚ್ಛೆ ಮತ್ತು ದೇವರಲ್ಲಿನ ಪ್ರಿತಿಯೇ ನಮ್ಮ ಆತ್ಮಸಾಕ್ಷಾತ್ಕಾರವನ್ನು ಪಡೆದುಕೊಳ್ಳಲುಂಟಾಗುವ ಪ್ರಿತಿ ಮತ್ತು ಇಚ್ಛೆಗಳ ತತ್ವಕ್ಕೆ ಅನ್ವಯವಾಗುವುದು. ದೇವರನ್ನು ಆವಾಹನಾದಿ ಮಂತ್ರಗಳಿಂದ ಪೂಜೆಮಾಡುವುದೇ ಸದ್ಗುರುವಿನಲ್ಲಿ ವೇದಾಂತ ವಿಚಾರಮಾಡಿ ನಾನೇ ಬ್ರಹ್ಮನೆಂಬ ತತ್ವದ ತಿಳಿವಳಿಕೆಯನ್ನು ಹೊಂದುವ ತತ್ವವಾಗಿರುವುದು. ದೇವರಿಗೆ ಅಭಿಷೇಕಮಾಡುವುದೇ ಅನಾತ್ಮವಿಚಾರಗಳನ್ನು ತಳ್ಳಿ ಆತ್ಮನೇ ನಾನೆಂಬ ಮನನದಿಂದ ಚಿತ್ತಶುದ್ಧಿಯನ್ನುಂಟು ಮಾಡಿಕೊಳ್ಳುವ ಮತ್ತು ಆಸನ ಪ್ರಾಣಾಯಾಮಗಳಿಂದ ದೇಹವನ್ನು ಶುದ್ಧಿಮಾಡಿ ಕೊಳ್ಳುವ ತತ್ವವಾಗಿಯೂ ಇರುವುದು. ದೇವರನ್ನು ಪುಷ್ಪಾದಿಗಳಿಂದ ಪೂಜೆಮಾಡುವುದೇ ಪ್ರತ್ಯಾಹಾರ, ಧ್ಯಾನ, ಧಾರಣೆ, ಸಮಾಧಿಗಳ ಅಭ್ಯಾಸದ ತತ್ವವಾಗಿರುವುದು. ದೇವರ ನಾಮಗಳಿಂದ ಪೂಜೆಮಾಡುವಾಗ ನಾಮದ ಪ್ರಥಮದಲ್ಲಿ "ಓಂ"ಕಾರವನ್ನು ಸೇರಿಸಿ ಕೊಳ್ಳುವುದೇ ಸಮಾಧಿಯ ಅಭ್ಯಾಸವನ್ನು ಓಂಕಾರೋಪಾಸನೆಯಿಂದ ಮಾಡಬೇಕೆಂಬ ತತ್ವ ವಾಗಿರುವುದು. ಸುವಾಸನೆಯುಳ್ಳ ಪುಷ್ಪಗಳಿಂದಲೇ ದೇವರನ್ನು ಅರ್ಚನೆಮಾಡುವುದೇ ನಾನೇ ಬ್ರಹ್ಮನೆಂಬ ವಾಸನೆಯಿಂದ ಸಮಾಧಿಯ ಅಭ್ಯಾಸಮಾಡಬೇಕೆಂಬ ತತ್ವವಾಗಿರು ವುದು. ಅಷ್ಟೋತ್ತರ, ಸಹಸ್ರನಾಮಾದಿಗಳಿಂದ ಪೂಜೆಮಾಡುವುದೇ ಬುದ್ಧಿವೃತ್ತಿಯು

ಧ್ಯೇಯಾಕಾರವಾದ ತೇಜಸ್ಸನ್ನು ಪ್ರಥಮದಲ್ಲಿ ಅವಿದ್ಯೆಯಿಂದ ಉಂಟಾಗುವ ವಿಚ್ಛಿತ್ತಿಯಿಂದ ಅನೇಕಾವರ್ತಿ ಧರಿಸಿಕೊಳ್ಳಲು ಹೋಗುವ ತತ್ವವಾಗಿರುವುದು. "ದಶಾಂಗಂ ಗುಗ್ಗುಳಂ ಧೂಪಂ" ಎಂಬ ಮಂತ್ರದಿಂದ ಧೂಪವೆತ್ತುವುದೇ ದಶೇಂದ್ರಿಯಗಳಲ್ಲಿಯೂ ಆಕ್ರಮಿಸಿ ಕೊಂಡಿರುವ ಹತ್ತು ತಲೆಗಳುಳ್ಳ ರಾವಣನ ತತ್ವವಾದ ಅವಿದ್ಯೆಯನ್ನು ನಿಗ್ರಹಿಸಿ "ಅಹಂ ಬ್ರಹ್ಮಾಸ್ಮಿ" ಯೆಂಬ ಸುವಾಸನೆಯಲ್ಲಿ ನಿಲ್ಲುವ ತತ್ವವಾಗಿರುವುದು. ದೇವರಿಗೆ,

ಸಾಜ್ಯಂ ತ್ರಿವರ್ತಿಸಂಯುಕ್ತಂ ವಹ್ನಿನಾ ಯೋಜಿತಂ ಮಯಾ |
ಗೃಹಾಣ ಮಂಗಳಂ ದೀಪಂ ತ್ರೈಲೋಕ್ಯ ತಿಮಿರಾಪಹ |

ಎಂಬ ಮಂತ್ರದಿಂದ ದೀಪವೆತ್ತುವುದೇ ತ್ರಿವರ್ತಿಸ್ವರೂಪದಲ್ಲಿರುವ ಅಕಾರ ಉಕಾರ ಮಕಾರಸ್ವರೂಪವಾದ ಗಾರ್ಹಪತ್ಯ, ದಕ್ಷಿಣ, ಆಹವನೀಯಾಗ್ನಿಗಳನ್ನು ಪ್ರಜ್ವಲನೆಮಾಡಿದ ಮಂಗಳವನ್ನುಂಟುಮಾಡುವ ಅಗ್ನಿಸ್ವರೂಪವಾಗಿರುವುದು. ದೇವರಿಗೆ ೩, ೫, ೭, ಅಂತ ಸ್ತುಗಳುಳ್ಳ ರಥಾರ್ತಿಯ ದೀಪವನ್ನು ಎತ್ತುತ್ತೇವೆ. ಇದೇ ಸ್ವರ್ಗ ಮರ್ತ್ಯ ಪಾತಾಳ ಅಥವಾ ಪಂಚಕೋಶಸ್ವರೂಪವಾದ ದೇಹದ ಎಲ್ಲಾ ಅಗ್ನಿಗಳೂ ಪ್ರಜ್ವಲನೆಯಾಗಿರುವುದು. ದೇವರಿಗೆ ನೈವೇದ್ಯವನ್ನು ಮಾಡುವುದೇ "ನಾನು, ನಾನು" ಎಂಬ ಜ್ಞಾನವನ್ನು ಜ್ಞಾನಾ ಗ್ನಿಯ ಅಂತರ್ಗತವಾಗಿರುವ ಪರಮಾತ್ಮನಲ್ಲಿ ಸಮರ್ಪಣೆಮಾಡುವ ತತ್ವವಾಗಿರುವುದು. ದೇವರಿಗೆ ಅರ್ಪಣೆಮಾಡುವ ತಾಂಬೂಲದ ತತ್ವವೇ ಬ್ರಹ್ಮಾನಂದ ಅಥವಾ ನಿಜಾನಂದದಲ್ಲಿ ಮಗ್ನವಾಗುವುದು. ದೇವರಿಗೆ ಕರ್ಪೂರವನ್ನು ಹತ್ತಿಸಿ,

ಹಿರಣ್ಯಪಾತ್ರಂ ಮಧೋಃ ಪೂರ್ಣಂ ದಧಾತಿ |
ಮಧು ವ್ಯೋಸಾನೀತಿ ಏಕಧಾ ಬ್ರಹ್ಮಣ ಉಪಹರತಿ || ಅಥವಾ

ಸಾಮ್ರಾಜ್ಯಂ ಭೋಜ್ಯಂ ಸ್ವಾರಾಜ್ಯಂ ವೈರಾಜ್ಯಂ |

ಮುಂತಾದ ಮಂತ್ರಗಳಿಂದ ಉತ್ತರನೀರಾಜನವನ್ನು ಎತ್ತುವುದೇ ಶುದ್ಧಸತ್ವಪ್ರಧಾನ ಮಾಯೆಯು (ಅಹಂಜ್ಞಾನವು) ಪರಬ್ರಹ್ಮಸ್ವರೂಪವಾಗುವ ತತ್ವವಾಗಿರುವುದು. ಈ ಉತ್ತರನೀರಾಜನಮಂತ್ರದಲ್ಲಿ " ಹಿರಣ್ಯಪಾತ್ರಂ " ಎಂಬ ವಚನವಿದೆ. "ಹಿರಣ್ಮಯೇ ಪರೇಕೋಶೇ" ಎಂಬ ಮುಂಡಕೋಪನಿಷತ್ಪ್ರಮಾಣವನ್ನು ಮೇಲೆಯೇ ತಿಳಿಸಿದೆ. ಅಲ್ಲದೆ ಶ್ರೀಸೂಕ್ತದಲ್ಲಿ "ಹಿರಣ್ಯವರ್ಣಾಂ" ಎಂಬ ವಾಕ್ಯವಿದೆ. ಆದುದರಿಂದ ಸೀತಾದೇವಿಯ ತತ್ವ ವಾದ ಶುದ್ಧಸತ್ವಪ್ರಧಾನಮಾಯೆಯು (ಅಹಂಜ್ಞಾನವು) ಪರಬ್ರಹ್ಮನಲ್ಲಿ ಲಯವಾದರೆ ಹಿರಣ್ಯವರ್ಣಾಂ ಎಂದರೆ ಜ್ಯೋತಿಸ್ವರೂಪವೇ ಆಗುವುದೆಂದರೆ ಪರಬ್ರಹ್ಮವೇ ಆಗುವುದೆಂಬ ತತ್ವವಾಗಿರುವುದು. ಹಿರಣ್ಮಯವೆಂದರೆ ಸ್ವಪ್ರಕಾಶವಾದ ಪರಬ್ರಹ್ಮವೆಂದು ಶ್ರೀಶಂಕರ

ಭಗವತ್ಪಾದರವರೂ ಅರ್ಥ ಬರೆದಿರುವರು. ಇಂತಹ ಉತ್ತರನೀರಾಜನವು ಆತ್ಮಸಾಕ್ಷಾತ್ಕಾರದ ತತ್ವವನ್ನೊಳಗೊಂಡಿರುವುದರಿಂದಲೇ ಸರ್ವರೂ ಇದನ್ನು ಸ್ವೀಕರಿಸುವುದು.

ಸೀತಾದೇವಿಯು ಶುದ್ಧಸತ್ವಪ್ರಧಾನಮಾಯಾತತ್ವದವಳೆಂದು ಪ್ರಥಮದಿಂದಲೂ ತಿಳಿಸಿಕೊಂಡು ಬಂದಿದೆ. ಮಾಯೆಯೆಂದರೆ ಜ್ಞಾನವೆಂದು ವೇದದಲ್ಲಿಯೂ ಯಾಸ್ಕರ ನಿರುಕ್ತದಲ್ಲಿಯೂ ಮಾಂಡೂಕ್ಯೋಪನಿಷತ್ ಶ್ರೀಶಂಕರಭಗವತ್ಪಾದರವರ ಭಾಷ್ಯದಲ್ಲಿಯೂ ಹೇಳಿರುವುದು. ಮಾಯೆಯೆಂದರೆ ವೃತ್ತಿಜ್ಞಾನವೇ ಹೊರತು ಶುದ್ಧಜ್ಞಾನಸ್ವರೂಪವಾದ ಪರಮಾತ್ಮನಲ್ಲ. ಮಾಯೆಯು ಶುದ್ಧ, ಮಲಿನಗಳೆಂದು ಎರಡುಭಾಗವಷ್ಟೆ! ರಜೋಗುಣ ತಮೋಗುಣಗಳು ಮಲಿನಮಾಯಾಸ್ವರೂಪವಾಗಿರುವುದರಿಂದ ಅಜ್ಞಾನವೆನಿಸುವುದು. ಈ ಅಜ್ಞಾನಕ್ಕೆ ಕಿಂಚಿಜ್ಞತ್ವ, ಅವಿದ್ಯೆ, ಇಂದ್ರಿಯಜ್ಞಾನ, ಖಂಡಜ್ಞಾನಗಳೆಂಬ ಹೆಸರುಗಳಿರುವುವು. ರಜೋಗುಣ, ತಮೋಗುಣ, ಮಲಿನಸತ್ವಗುಣಗಳೊಡನೆ ಬೆರೆಯದೆ ಇರುವ ಶುದ್ಧಸತ್ವಗುಣವು ಸರ್ವಜ್ಞತ್ವವೆಂದರೆ ಸರ್ವವೂ ನಾನೆಂಬ ಅಖಂಡಾಕಾರ ವೃತ್ತಿಸ್ವರೂಪವಾಗಿಯೂ, ಶುದ್ಧಸ್ಫಟಿಕದಂತೆ ಸ್ವಚ್ಛವಾಗಿಯೂ ಆನಂದಮಯವಾಗಿಯೂ ಇರುವುದು. ಮಲಿನಮಾಯೆಗೆ ಅವಿದ್ಯೆಯೆಂದು ಹೆಸರು ಬಂದಿರುವುದರಿಂದ ಶುದ್ಧಸತ್ವಪ್ರಧಾನಮಾಯೆಗೆ ವಿದ್ಯವೆಂದು ಹೆಸರು. ಮಲಿನಮಾಯೆಗೆ ವಿಕೃತಿಯೆಂದೂ ಶುದ್ಧಸತ್ವಪ್ರಧಾನಮಾಯೆಗೆ ಪ್ರಕೃತಿಯೆಂದೂ ಮಲಿನಮಾಯೆಗೆ ಕ್ಷರವೆಂದೂ ಶುದ್ಧಸತ್ವಪ್ರಧಾನಮಾಯೆಗೆ ಅಕ್ಷರವೆಂದೂ ಹೆಸರುಗಳಿರುವುವು. ಸೃಷ್ಟಿ ಮತ್ತು ಲಯಕ್ರಮಗಳಲ್ಲಿ ಮಲಿನಮಾಯೆಯು ಪರಿಣಾಮಭೇದವನ್ನು ಹೊಂದುವುದೆಂದರೆ ವಿಕಾರವಾಗುವುದರಿಂದ ಇದಕ್ಕೆ ವಿಕೃತಿಯೆಂಬ ಹೆಸರು ಬಂದಿರುವುದು. ಶುದ್ಧಸತ್ವಪ್ರಧಾನಮಾಯೆ (ಪ್ರಕೃತಿ)ಯು ಸರ್ವಗುಣಗಳಿಗೂ ಪ್ರಕಾಶವಾಗಿದ್ದುಕೊಂಡು ಯಾವ ವಿಕಾರವನ್ನೂ ಹೊಂದದೆ ಜೀವರೂಪವಾಗಿರುವುದು. ಹೀಗೆ ಪ್ರಕೃತಿಯೆನಿಸುವ ಶುದ್ಧಸತ್ವಪ್ರಧಾನಮಾಯೆಯು ವಿಕೃತಿಯಾದ ಮಲಿನಮಾಯೆಗಿಂತಲೂ ಶ್ರೇಷ್ಠವಾಗಿರುವುದೆಂದು ಸೀತಾಕಲ್ಯಾಣ ಪ್ರಕರಣದಲ್ಲಿ ಬರೆದಿರುವ "ಪ್ರಕೃತಿಂ ವಿದ್ಧಿಮೆಪರಾಂ ಜೀವಭೂತಾಂ ಮಹಾಬಾಹೋ" ಎಂಬ ಶ್ರೀಕೃಷ್ಣಪರಮಾತ್ಮನ ವಾಕ್ಯವನ್ನು ಇಲ್ಲಿಗೆ ಅನ್ವಯಮಾಡಿಕೊಳ್ಳಬೇಕು. ಸೃಷ್ಟಿಕ್ರಮದಲ್ಲಿ,

ಆಕಾಶಾದ್ವಾಯುಃ ವಾಯೋರಗ್ನಿಃ ಅಗ್ನೇರಾಪಃ |
ಅದ್ಭ್ಯಃಪೃಥಿವೀ ಪೃಥಿವ್ಯಾ ಓಷಧಯಃ |

ಎಂಬ ತೈತ್ತಿರೀಯ ಶ್ರುತಿವಾಕ್ಯದಂತೆ ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ಜಲವು, ಜಲದಿಂದ ಪೃಥ್ವಿಯು, ಪೃಥ್ವಿಯಿಂದ ವನಸ್ಪತಿಗಳು ಉಂಟಾಗುವ ಪರಿಣಾಮವೂ ಮತ್ತು ಲಯಕ್ರಮದಲ್ಲಿ ಸರ್ವವೂ ಆಕಾಶಪರಿಣಾಮಕ್ಕೆ ಬರುವುದೂ ಮಲಿನಮಾಯೆಯಾಗಿರುವುದು. ಮೋಕ್ಷಕ್ರಮದಲ್ಲಿ ಗುಣಸಾಮ್ಯಾವಸ್ಥೆಗೆ

ಬರುವುದೇ ರಾವಣಾದಿಗಳು ನಿಗ್ರಹವಾಗಿ ವಿಕೃತಿಯ ತತ್ವದವರಾದ ಮಂಡೋದರಿ ಮುಂತಾದ ರಾಕ್ಷಸಸ್ತ್ರೀಯರು ವಿಧವೆಯರಾದ ತತ್ವವಾಗಿರುವುದು. ಶುದ್ಧಸತ್ವಪ್ರಧಾನ ಮಾಯೆಗೆ ಪರಿಣಾಮಭೇದವಿಲ್ಲದಿರುವ ತತ್ವವೇ ಸೀತಾದೇವಿಗೆ ವೈಧವ್ಯವಿಲ್ಲದೆ ನಿತ್ಯವಸ್ತುವಾದ ಪರಬ್ರಹ್ಮಸ್ವರೂಪವೇ ಆಗಿರುವಳು. ಗುಣಸಾಮ್ಯಾವಸ್ಥೆಯೆಂದರೆ ಮಲಿನಸತ್ವಗುಣ ರಜೋಗುಣ ತಮೋಗುಣಗಳ ಕಾರ್ಯವು ನಶಿಸಿ ಶುದ್ಧಸತ್ವಪ್ರಧಾನಮಾಯೆಯೊಂದೇ ಉಳಿದು ಅನಂತರ ಶುದ್ಧಸತ್ವವು ಪರಬ್ರಹ್ಮವೇ ಆಗುವುದು. ಅಂದರೆ ಅಜ್ಞಾನವೆಂದರೆ ಕಿಂಚಿಜ್ಞತ್ವವು ಹೋಗಿ ಸರ್ವಜ್ಞತ್ವವೆಂದರೆ ಅಖಂಡಜ್ಞಾನದ ಸ್ಥಿತಿಗೆ ಬಂದು ಅನಂತರ ಸರ್ವಜ್ಞತ್ವವಾದ ಅಖಂಡಜ್ಞಾನವೂ ಆತ್ಮನಲ್ಲಿ ಲಯವಾಗಿ ಅಭೇದವಾಗುವ ತತ್ವವೇ ಸೀತಾದೇವಿಯು ಅಗ್ನಿಯಲ್ಲಿ ಲಯವಾಗಿರುವ ತತ್ವ. ಅಂದರೆ ಇಂದ್ರಿಯಜ್ಞಾನವೆಂದರೆ ದೇಹಾದಿ ವಿಷಯಜ್ಞಾನವು ಪ್ರಥಮದಲ್ಲಿ ಹೋದರೆ ದೇಹವಲ್ಲದ ನಾನು ಎಂಬ ಶೇಷವಾಗಿರುವ ಜ್ಞಾನವುಳಿಯುವುದು. ಈ ಶೇಷವಾಗಿರುವ ನಾನು ಎಂಬ ಜ್ಞಾನವು ಅಖಂಡ ಸ್ವರೂಪವಾಗುವುದು. ಅ[illegible]ಸ್ವರೂಪವೆಂದರೆ ನಾನು ಎಂಬುದನ್ನು ದೇಹದಿಂದ ಪ್ರತ್ಯೇಕಿಸಲ್ಪಟ್ಟಂತೆ ನಮ್ಮ [illegible] ಮುಟ್ಟಿಗೆ ಸರ್ವತ್ರವ್ಯಾಪಿಸಿಕೊಳ್ಳುವ ಸ್ಥಿತಿಯೇ ಅಖಂಡ ಜ್ಞಾನದ ಸ್ಥಿತಿಯಾಗಿರುವು[illegible] ಇಂತಹ ಅಖಂಡಜ್ಞಾನದ ತತ್ವವನ್ನು ಸ್ಫುಟವಾಗಿ ತೋರಬೇಕಾದರೆ ಸೀತಾದೇ[illegible] ಅಗ್ನಿಪ್ರವೇಶಮಾಡಲು ಯತ್ನಿಸಿದ ಸವಿಕಲ್ಪಸಮಾಧಿಯ ಅಂತ್ಯದಸೋಪಾನಕ್ಕೆ ಬರಬೇಕು. ಆದುದರಿಂದ ನಾನು ಎಂಬ ಅಖಂಡಜ್ಞಾನವು ಪರಮಾತ್ಮನಲ್ಲಿ ಲಯವಾಗಿ ಪರಮಾತ್ಮಾಕಾರವನ್ನು ಹೊಂದುವುದೇ ಸೀತಾದೇವಿಯು ಅಗ್ನಿಯಲ್ಲಿ ಲಯವಾಗಿರುವ ತತ್ವವಾಗಿರುವುದು. ಅಂದರೆ ನಾನು ಎಂಬ ಜ್ಞಾನವು ಆಕಾಶದಲ್ಲಿ ಅಭೇದದಿಂದ ಲಯವಾಗಿರುವ ಸ್ಥಿತಿಯಂತಿರುವಿಕೆ. ಮೇಲೆ ಬರೆದಿರುವ ಮೋಕ್ಷಕ್ರಮದಲ್ಲಿನ ಗುಣಗಳ ಸಾಮ್ಯಾವಸ್ಥೆಯ ಸ್ಥಿತಿಗೆ ಅನುಸಾರವಾಗಿ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೨೭೯ನೆಯ ಶ್ಲೋಕದಲ್ಲಿ,

ತಮೋ ದ್ವಾಭ್ಯಾಂ ರಜಸ್ಸತ್ವಾತ್ಸತ್ವಂ ಶುದ್ಧೇನ ನಶ್ಯತಿ ।
ತಸ್ಮಾತ್ಸತ್ವಮವಷ್ಟಭ್ಯ ಸ್ವಾಧ್ಯಾಸಾಪನಯಂ ಕುರು ॥

ತಾ|| ತಮೋಗುಣವು ಸಾತ್ವಿಕ ರಾಜಸ ಗುಣಗಳಿಂದಲೂ, ರಜೋಗುಣವು ಸತ್ವಗುಣದಿಂದಲೂ, ಸತ್ವಗುಣವು ಶುದ್ಧಸತ್ವದಿಂದಲೂ ನಾಶವಾಗುವುದು. ಆದ್ದರಿಂದ ಶುದ್ಧಸತ್ವವನ್ನಾಶ್ರಯಿಸಿ ನಿನಗೆ ಬಂದಿರುವ ಆರೋಪಣೆಯನ್ನು ಹೋಗಲಾಡಿಸಿಕೊ ಎಂಬದಾಗಿ ಹೇಳಿರುವರು.

ಆದುದರಿಂದ ಪರಮಾತ್ಮನಿಗೂ ಶುದ್ಧಸತ್ವಪ್ರಧಾನಮಾಯೆಗೂ ಪರಿಣಾಮಭೇದಗಳಿರುವುದಿಲ್ಲ. ಶುದ್ಧಸತ್ವಪ್ರಧಾನಮಾಯೆಯು ಅತ್ಯಂತ ಸ್ವಚ್ಛವಾದ ಸ್ಫಟಿಕದಂತೆ ಇದ್ದು ಶುದ್ಧಜ್ಞಾನವೆಂದರೆ ಪರಬ್ರಹ್ಮವೇ ಆಗುವುದು. ಪರಬ್ರಹ್ಮನಿಂದ ಹೊರಗೆ ಬೇರೆಯಾಗಿ ತೋರುವ ಕಾಲದಲ್ಲಿ ಮೂಲಪ್ರಕೃತಿಯೆನಿಸಿಕೊಂಡು ತದನಂತರ ಶುದ್ಧಸತ್ವಪ್ರಧಾನಮಾಯೆಯೆನಿಸಿಕೊಳ್ಳುವುದು. ನಿರ್ಗುಣವಾದ ಪರಬ್ರಹ್ಮದಲ್ಲಿ ಯಾವ ವಿಶೇಷಣಕ್ಕೂ ಅವಕಾಶವಿಲ್ಲ. ಬೇರೆಯಾಗಿ ಮೂಲಪ್ರಕೃತಿಯೆನಿಸಿಕೊಂಡಾರಭ್ಯ ಮುಂದಕ್ಕೆ ನಾಮ, ರೂಪ, ಲಿಂಗ, ಗುಣ, ವಿಶೇಷಣ, ವಿಶೇಷ್ಯಗಳನ್ನು ಅನಂತವಾಗಿ ಕೊಡಬಹುದೇ ಹೊರತು ನಿರ್ಗುಣವಾದ ಪರಬ್ರಹ್ಮದಲ್ಲಿ ಯಾವ ಗುಣವಿಶೇಷಣ ಮುಂತಾದ್ದಕ್ಕೂ ಯತ್ನವಿಲ್ಲ. ಆದುದರಿಂದ ಲಕ್ಷ್ಮೀ, ಸರಸ್ವತೀ, ಪಾರ್ವತೀ, ಗಾಯತ್ರೀ, ಸಾವಿತ್ರೀದೇವಿಯರೆಂಬ ಸಗುಣತ್ವೇನ ನಾಮಗಳಿದ್ದರೂ ಎಲ್ಲರೂ ಪರಬ್ರಹ್ಮರೆ. ಇದೇ ತತ್ವಕ್ಕೆ ದೇವ್ಯುಪನಿಷತ್ತಿನಲ್ಲಿ,

ಅಹಂಬ್ರಹ್ಮಸ್ವರೂಪಿಣಿ ಅಹಂಬ್ರಹ್ಮಾ ಬ್ರಹ್ಮಣಿ ವೇದಿತವ್ಯೇ |

ಎಂದೂ, ಸೀತೋಪನಿಷತ್ತಿನಲ್ಲಿ,

ಮಹಾಲಕ್ಷ್ಮೀ ರ್ದೇವೇಶಸ್ಯ ಭಿನ್ನಾಭಿನ್ನರೂಪಾ ಚೇತನಾ ಚೇತನಾತ್ಮಿಕಾ |

ಎಂದೂ, ಸರಸ್ವತೀರಹಸ್ಯೋಪನಿಷತ್ತಿನಲ್ಲಿ,

ಯಾ ವೇದಾಂತಾರ್ಥತತ್ವೈಕ ಸ್ವರೂಪಾ ಪರಮಾರ್ಥತಃ |
ನಾಮರೂಪಾತ್ಮನಾ ವ್ಯಕ್ತಾ ಸಾ ಮಾಂ ಪಾತು ಸರಸ್ವತೀ ||
ನಿರ್ವಿಕಲ್ಪಾತ್ಮನಾವ್ಯಕ್ತಾ ಸಾ ಮಾಂ ಪಾತು ಸರಸ್ವತೀ |

ಎಂಬದಾಗಿ ಹೇಳಿರುವ ವಾಕ್ಯಗಳ ತತ್ವಗಳೆಲ್ಲಾ ಪರಬ್ರಹ್ಮವನ್ನೆ ಪ್ರತಿಪಾದಿಸುವುವು. ಅಲ್ಲದೆ ಲಲಿತಾ ಮುಂತಾದ ಸಹಸ್ರನಾಮಗಳಲ್ಲಿಯೂ "ಸಚ್ಚಿದಾನಂದಸ್ವರೂಪಿಣ್ಯೈನಮಃ" ಎಂಬ ವಾಕ್ಯವಿರುವುದಲ್ಲದೆ "ಚಿದಗ್ನಿಕುಂಡಸಂಭೂತಾಯ್ಯೆನಮಃ" ಎಂಬ ವಾಕ್ಯವಿರುವುದು. ಚಿದಗ್ನಿಕುಂಡವೆಂದರೆ "ಚಿತ್ ಕೇವಲಂ ಬ್ರಹ್ಮ, ತದೇವ ಅಗ್ನಿಕುಂಡಂ" ಎಂಬದಾಗಿ ಹೇಳಿರುವುದು. ಆದುದರಿಂದ ಸೀತಾದೇವಿಯು ಅಗ್ನಿಯಲ್ಲಿ ಲಯವಾಗಿರುವಳೆಂದರೆ ಸ್ವಾತ್ಮಾರಾಮಸ್ವರೂಪವಾದ ಪರಬ್ರಹ್ಮವೇ ಆಗಿರುವಳು. ಪರಬ್ರಹ್ಮಸ್ವರೂಪನಾದ ಶ್ರೀರಾಮಚಂದ್ರನೇ ಈ ವಿಧದಿಂದ ಬೆಳಗುತ್ತಲಿರುವನೆಂಬುದಕ್ಕೆ ರಾಮತಾಪಿನ್ಯುಪನಿಷತ್ತಿನಲ್ಲಿ,

ಯಾವಿದ್ಯಾ ಯಾಸರಸ್ವತೀ ಯಾಲಕ್ಷ್ಮೀಃ ಯಾಗೌರೀ ಯಾಜಾನಕೀ |

ಎಂಬದಾಗಿ ಹೇಳಿರುವ ಮತ್ತು "ಸರ್ವಂ ಖಲ್ವಿದಂ ಬ್ರಹ್ಮ, ಏಕಮೇವಾದ್ವಿತೀಯಂ ಬ್ರಹ್ಮ" ಎಂಬ ಶ್ರುತಿವಾಕ್ಯಗಳಂತೆ ಸರ್ವವೂ ಪರಬ್ರಹ್ಮಸ್ವರೂಪವೆ ಆಗಿದೆ. ಮಲಿನಮಾಯೆಯೆಂದರೆ ವಿಕೃತಿಯು ಕೂಡ ಕಾರ್ಯವು ಕಾರಣದಲ್ಲಿ ಸೇರುವಂತೆ ಪರಿಣಾಮಭೇದದಿಂದ

ಪರಬ್ರಹ್ಮವೇ ಆಗುವುದು. ಹೇಗೆಂದರೆ ಆತ್ಯಂತಿಕಪ್ರಳಯದಲ್ಲಿ ಭೂಮಿಯು ಜಲವಾಗಿ, ಜಲವು ಅಗ್ನಿಯಾಗಿ, ಅಗ್ನಿಯು ವಾಯುವಾಗಿ, ವಾಯುವಾಕಾಶವಾಗಿ, ಆಕಾಶವು ಪರಬ್ರಹ್ಮವೇ ಆಗುವುದು. ಜೀವಂತರಾಗಿರುವಾಗ ಆತ್ಮಸಾಕ್ಷಾತ್ಕಾರವಾದ ಈ ಸೋಪಾನದಲ್ಲಿ ಬಹಿರ್ವ್ಯಾಪಾರವೆಲ್ಲಾ ಸ್ವಪ್ನಸದೃಶದಲ್ಲಿ ಲಯವಾಗಿ, ಸ್ವಪ್ನಸದೃಶವ್ಯಾಪಾರವು ಸಮಾಧಿಯ ಅನುಷ್ಠಾನದಲ್ಲಿ ಉನ್ಮನೀಸೋಪಾನದಲ್ಲಿ ಲಯವಾಗಿ, ಉನ್ಮನೀಸೋಪಾನದ ಸ್ಥಿತಿಯೂ ಪರಮಾತ್ಮನಲ್ಲಿ ಲಯವಾಗುವುದರಿಂದ ಸರ್ವವೂ ಪರಬ್ರಹ್ಮವೇ.

ಆದುದರಿಂದ ಜಗನ್ಮಾತೆಯಾದ ಸೀತಾದೇವಿಯು ಸಗುಣವಾಗಿಯೂ ಇರುವಳು. ಶ್ರೀವಿದ್ಯೋಪಾಸ್ಯವಾದ ಶ್ರೀಚಕ್ರವನ್ನೇ ನಮ್ಮ ದೇಹಕ್ಕೆ ಅನ್ವಯಮಾಡಿ ಜಗನ್ಮಾತೆಯನ್ನು ಪರಬ್ರಹ್ಮತ್ವೇನ ಉಪಾಸನೆಮಾಡುವುದು ಸರ್ವಶ್ರೇಷ್ಠವಾಗಿಯೂ ಮೋಕ್ಷಸಾಮ್ರಾಜ್ಯವನ್ನು ಕೊಡುವುದಾಗಿಯೂ ಇರುವುದು. ಶ್ರೀಶಂಕರಭಗವತ್ಪಾದರವರು ಕ್ಷುದ್ರದೇವತಾ ಶಕ್ತಿಗಳನ್ನು ಉಪಾಸನೆಮಾಡಬಾರದೆಂದೂ, ಜಗನ್ಮಾತೆಯನ್ನು ಬಾಹ್ಯದಲ್ಲಿ ಮಾಡುವ ಸ್ಥೂಲಪೂಜೆಗಿಂತಲೂ ಉತ್ತಮವಾದ ಆತ್ಮಾನುಸಂಧಾನದಿಂದಲೇ ಪೂಜೆಮಾಡಬೇಕೆಂದೂ, ಹೀಗೆ ಆತ್ಮಾನುಸಂಧಾನದಿಂದ ಅಂದರೆ ತತ್ವಾರ್ಥರಾಮಾಯಣದಲ್ಲಿ ಬಂದಿರುವ ಕ್ರಮದಂತೆಯೇ ಷಟ್ಚಕ್ರಗಳನ್ನು ಭೇದಿಸಿಕೊಂಡು ಸಹಸ್ರಾರಕಮಲದಲ್ಲಿರುವ ದೇವಿಯ ಸಾಯುಜ್ಯಪದವಿಯನ್ನು ಹೊಂದಬೇಕೆಂದೂ, ಇದೇ ಶಕ್ತ್ಯುಪಾಸನೆಯೆಂತಲೂ ನಿರೂಪಿಸಿರುವರು. ಈ ತಾತ್ಪರ್ಯಕ್ಕೆ ಇವರು ಹೇಳಿರುವ ಸೌಂದರ್ಯಲಹರಿಯ ಮೂರು ಶ್ಲೋಕಗಳನ್ನು ಇಲ್ಲಿ ಉದಹರಿಸಿರುವುದು.

ಕ್ಷಿತೌ ಷಟ್ ಪಂಚಾಶ ದ್ವಿಸಮಧಿಕ ಪಂಚಾಶದುದಕೇ |
ಹುತಾಶೇ ದ್ವಾಷಷ್ಟಿ ಶ್ಚತುರಧಿಕಪಂಚಾಶ ದನಿಲೇ ||
ದಿವಿ ದ್ವಿಷ್ಷಟ್ತ್ರಿಂಶ ನ್ಮನಸಿಚ ಚತುಷ್ಷಷ್ಟಿರಿತಿ ಯೇ |
ಮಯೂಖಾ ಸ್ತೇಷಾಮಪ್ಯುಪರಿ ತವ ಪಾದಾಂಬುಜಯುಗಮ್ ||

ತಾ|| ಎಲೈ ಜಗನ್ಮಾತೆಯೆ! ಭೂತತ್ವವಾದ ಮೂಲಾಧಾರಚಕ್ರದಲ್ಲಿ ೫೬, ಜಲತತ್ವವಾದ ಸ್ವಾಧಿಷ್ಠಾನಚಕ್ರದಲ್ಲಿ ೫೨, ತೇಜಸ್ತತ್ವವಾದ ಮಣಿಪೂರಚಕ್ರದಲ್ಲಿ ೬೨, ವಾಯುತತ್ವವಾದ ಅನಾಹತಚಕ್ರದಲ್ಲಿ ೫೪, ಆಕಾಶತತ್ವವಾದ ವಿಶುದ್ಧಚಕ್ರದಲ್ಲಿ ೭೨, ಅಂತಃಕರಣ ತತ್ವವಾದ ಆಜ್ಞಾಚಕ್ರದಲ್ಲಿ ೬೪, ಹೀಗೆ ನಿನ್ನ ಕಲಾಕಿರಣಗಳಿರುತ್ತವೆ. ಇವುಗಳಿಗೆ ಮೇಲ್ಭಾಗವಾದ ಸಹಸ್ರಾರಕಮಲದ ಕರ್ಣಿಕೆಯಲ್ಲಿ ನಿನ್ನ ಪಾದಾಂಬುಜವಿದೆ. ಆ ನಿನ್ನ ಪಾದಾಂಬುಜವನ್ನು ಹೊಂದುವಂತೆ ಅನುಗ್ರಹಮಾಡು.

ತಟಿಲ್ಲೇಖಾತನ್ವೀಂ ತಪನ ಶಶಿ ವೈಶ್ವಾನರಮಯೀಂ|
ನಿಷಣ್ಣಾಂ ಷಣ್ಣಾಮಪ್ಯುಪರಿ ಕಮಲಾನಾಂ ತವ ಕಲಾಮ್ |
ಮಹಾಪದ್ಮಾಟವ್ಯಾಂ ಮೃದಿತಮಲಮಾಯೇನ ಮನಸಾ |
ಮಹಾಂತಃ ಪಶ್ಯಂತೋ ದಧತಿ ಪರಮಾಹ್ಲಾದಲಹರೀಮ್ ||

ತಾ|| ಮಿಂಚಿನ ಲತೆಯಂತೆಯೂ ಅತಿಸೂಕ್ಷ್ಮವಾಗಿಯೂ ಇರುವ ದೇಹವೆಂದರೆ ಸ್ವಯಂಜ್ಯೋತಿಸ್ವರೂಪಳಾಗಿ ಸೂರ್ಯಚಂದ್ರಾಗ್ನಿಗಳ ಸ್ವರೂಪವಾದ ಆರು ಕಮಲಗಳ ಮೇಲ್ಭಾಗವಾದ ಸಹಸ್ರದಳಪದ್ಮಕರ್ಣಿಕೆಯಲ್ಲಿ ಇರುವ ನಿನ್ನ ಸ್ವರೂಪವನ್ನೇ ಅವಿದ್ಯೆಯನ್ನು ಹೋಗಲಾಡಿಸಿಕೊಂಡ ಬುದ್ಧಿವೃತ್ತಿಯಿಂದ ಹೊಂದುವ ಬ್ರಹ್ಮವಿದ್ಯಾಧಿಕಾರಿಯು ನಿಜಾನಂದದ ಪ್ರವಾಹವನ್ನು ಹೊಂದುವನು.

ಭವಾನಿ ತ್ವಂ ದಾಸೇ ಮಯಿ ವಿತರ ದೃಷ್ಟಿಂ ಸಕರುಣಾ |
ಮಿತಿ ಸ್ತೋತುಂ ವಾಂಛ್ನ ಕಥಯತಿ ಭವಾನಿ ತ್ವಮಿತ ಯಃ ||
ತಥೈವ ತ್ವಂ ತಸ್ಮೈ ದಿಶಸಿ ನಿಜಸಾಯುಜ್ಯಪದವೀಂ |
ಮುಕುಂದಬ್ರಹ್ಮೇಂದ್ರಸ್ಫುಟಮಕುಟನೀರಾಜಿತಪದಾಮ್ ||

ತಾ|| "ಜಗನ್ಮಾತೆಯೆ ನಿನ್ನ ದಾಸನಾದ ನನ್ನಲ್ಲಿ ಕರುಣಾದೃಷ್ಟಿಯನ್ನಿಡು." ಎಂದು ಸ್ತೋತ್ರಮಾಡುವ ಇಚ್ಛೆಯಿಂದ ಯಾರು "ಜಗನ್ಮಾತೆ" ಎಂಬ ವಾಕ್ಯವನ್ನು ನುಡಿಯುವರೋ ಅವರಿಗೆ ಆಗಲೇ ಬ್ರಹ್ಮೇಂದ್ರಾದಿಗಳ ಕಿರೀಟಗಳಿಂದ ನೀರಾಜನಬೆಳಗಲ್ಪಡುವ ಪಾದಕಮಲವನ್ನೆಂದರೆ ಆತ್ಮಸಾಯುಜ್ಯಪದವಿಯನ್ನು ಕೊಡುವೆ, ಎಂಬ ವಾಕ್ಯವಿರುವುದು.

ಆದುದರಿಂದ ಜಗನ್ಮಾತೆಯಾದ ಸೀತಾದೇವಿಯು ಅಗ್ನಿಯಲ್ಲಿ ಲಯವಾಗಿರುವಳೆಂದರೆ ಮಾಯೆಯೆಂಬ ಹೆಸರಿಲ್ಲದೆ ಉಪ್ಪು ನೀರಿನಲ್ಲಿ ಸೇರಿದರೆ ಹೇಗೆ ಅಭೇದವಾಗುವುದೊ ಹಾಗೆ ಪರಬ್ರಹ್ಮವೇ ಆಗಿರುವಳು. ಪರಬ್ರಹ್ಮಸ್ವರೂಪಿಣಿಯಾದ ಜಗನ್ಮಾತೆಯೆ! ನನ್ನ ಮಕ್ಕಳು ಗತಿಸಿದ ಕಾಲದಲ್ಲಿ ವಿಚಿತ್ರವ್ಯಾಪಾರನಡೆದನಂತರ ನೀನು ಕ್ರೂರಸ್ವಭಾವದವಳೆಂದು ನಿನ್ನ ವಿಚಾರದಲ್ಲಿ ನನಗೆ ಭಯವೇ ಉಂಟಾಗಿತ್ತು. ಆದರೆ ನೀನು ನನಗೆ ಪ್ರತ್ಯಕ್ಷಳಾಗಿ ನಿನ್ನ ತತ್ವವನ್ನೂ ಶ್ರೀರಾಮೇಶ್ವರನ ತತ್ವವನ್ನೂ ಬರೆದು ತಿಳಿದುಕೊ ಎಂದಪ್ಪಣೆಮಾಡಿದಾರಭ್ಯ ಆ ಭಯವು, ಕೊಂಚ ತಗ್ಗುತ್ತಾ ಬಂತು. ಈ ಪ್ರಕರಣವನ್ನು ಬರೆದನಂತರ ಅದು ನಿಶ್ಶೇಷವಾಗಿ ಹೋಯಿತು. ಮಹಿಷಿ, ಅಜ, ನರದೇಹಗಳನ್ನೂ, ಕೂಷ್ಮಾಂಡವನ್ನೂ ನೀನು ಬಲಿಯಾಗಿ ಅಪೇಕ್ಷಿಸದೆ ಅವುಗಳ ತತ್ವಗಳನ್ನು ಬಲಿಯಾಗಿ ಅಪೇಕ್ಷಿಸುವೆ. ಮಹಿಷವೆಂದರೆ ಅಂಧಕಾರವಾದ ತಮಸ್ಸು ಎಂದರೆ ಅಜ್ಞಾನ. ಈ ಅಜ್ಞಾನವನ್ನು ಬಲಿಕೊಟ್ಟರೆ ಜ್ಞಾನಸ್ವರೂಪಳಾದ ನೀನೇ ಲಭ್ಯಳು. ವ್ಯಾಪಾರಗಳೆಲ್ಲಾ ಪಶುವೃತ್ತಿ ಎನಿಸುವುದು.

ಇಂತಹ ವ್ಯಾಪಾರಗಳನ್ನೆಲ್ಲಾ ಬಲಿಯಾಗಿ ಅರ್ಪಿಸುವುದೆಂದರೆ ವಿರಕ್ತಿಯಿಂದ ನಿನ್ನನ್ನು ಸಾಕ್ಷಾತ್ಕರಿಸಿಕೊಂಡರೆ ಪಶುಪಾಶದಿಂದ ಬಿಡಲ್ಪಟ್ಟು ನಿನ್ನ ಪದವಿಯೇ ಲಭ್ಯವಾಗುವುದು. ಕೂಷ್ಮಾಂಡಬಲಿಯು ತತ್ವವೇನೆಂದರೆ, "ಕುತ್ಸಿತಃ ಊಷ್ಮಾ ಅಂಡೇಷು ಬೀಜೇಷ್ವಸ್ಯೇತಿ ಕೂಷ್ಮಾಂಡಃ" ಎಂದರೆ ಬೀಜಗಳಲ್ಲಿ ಕುತ್ಸಿತವಾದ ಉಷ್ಣವಿರುವುದು. ಇದರಂತೆ ಕುತ್ಸಿತ ವಾದ ವಾಸನಾಸ್ವರೂಪವಾದ ಬೀಜದಿಂದಲೇ ವ್ಯಾಪಾರ. ಇಂತಹ ವಾಸನೆಯನ್ನು ಬಲಿಯಾಗಿ ಅರ್ಪಿಸಿದರೆ ವಾಸನಾರಹಿತವಾದ ನಿನ್ನ ಪದವಿಯು ದೊರಕುವುದು. ನರವೆಂದರೆ ಜ್ಞಾನ. ನರರು ವಿಹರಿಸುತ್ತಿರುವ ವಿಜ್ಞಾನವನ್ನೇ ನೀನು ಬಲಿಯಾಗಿ ಅಪೇಕ್ಷಿಸುತ್ತೀಯೆ. ಇಂತಹ ವಿಜ್ಞಾನವನ್ನು ಬಲಿಯಾಗಿ ಕೊಟ್ಟರೆ ನಾನೆಂಬುದು ನಿನ್ನಲ್ಲಿಯೇ ಲಯಿಸುವುದರಿಂದ ನೀನೇ ನಾನು. ಇದೇ ನಿನ್ನ ಸಾಯುಜ್ಯಪದವಿ. ಇದೇ ಬ್ರಹ್ಮಸಾಕ್ಷಾತ್ಕಾರ. ಎಲೈ ಪರಬ್ರಹ್ಮಸ್ವರೂಪಿಣಿಯಾದ ಜಗನ್ಮಾತೆಯೆ! ನಿನ್ನ ಪರಬ್ರಹ್ಮ ಸ್ವರೂಪವನ್ನು ಪ್ರತಿಪಾದಿಸುವ ಪಠವನ್ನು ಇಲ್ಲಿ ಕೊಟ್ಟು ಪುನಃ ಪುನಃ, ಪುನಃ ಪುನಃ, ನಮಿ ಸುತ್ತಾ ಈ ಉಪಪ್ರಕರಣವನ್ನು ಪೂರ್ಣಮಾಡುತ್ತೇನೆ.

## ಅದ್ವೈತಸಿದ್ಧಿ.

ದ್ವೈತವು ಭ್ರಾಂತಿಸ್ವರೂಪಮಾತ್ರವಾಗಿರುವುದು. ಅದ್ವೈತವು ಪಾರಮಾರ್ಥಿಕ ವಾಗಿರುವುದು. ಅಂದರೆ ನಮ್ಮ ಬುದ್ಧಿಮನಸ್ಸಿಗೆ ಉಂಟಾಗುವ ಭ್ರಾಂತಿಸ್ವರೂಪವಾದ ವಿಕಾರವೇ ದ್ವೈತವೆನಿಸಿಕೊಳ್ಳುವುದು. ಸುಖದುಃಖರೂಪವಾದ ಮತ್ತು ಸತ್ಯತ್ವೇನ ಪ್ರವರ್ತಿಸುವ ಬಹಿರ್ವ್ಯಾಪಾರವೇ ಭ್ರಾಂತಿಸ್ವರೂಪವಾದ ವಿಕಾರವಾಗಿರುವುದು. ಆದುದ ರಿಂದ ದ್ವೈತವೆಂಬುದು ಬುದ್ಧಿಮನಸ್ಸುಗಳಿಗುಂಟಾಗುವ ವಿಕಾರವೇ ಹೊರತು ಅನ್ಯಥಾ ಇಲ್ಲ. ಇದೇ ತಾತ್ಪರ್ಯಕ್ಕೆ ಮಾಂಡೂಕ್ಯೋಪನಿಷತ್ ಗೌಡಪಾದಕಾರಿಕೆ ಅದ್ವೈತಪ್ರಕರಣ ದಲ್ಲಿಯೂ ಮತ್ತು ಇನ್ನು ಕೆಲವು ಉಪನಿಷತ್ತುಗಳಲ್ಲಿಯೂ,

> ಮನೋದೃಶ್ಯಮಿದಂ ದ್ವೈತಂ ಯತ್ಕಿಂಚಿತ್ಸಚರಾಚರಮ್ ।
> ಮನಸೋಹ್ಯಮನೀಭಾವೇ ದ್ವೈತಂ ನೈವೋಪಲಭ್ಯತೇ ॥

ತಾ॥ ಸ್ಥಾವರ ಜಂಗಮಾತ್ಮಕ ಸ್ವರೂಪವಾದ ಈ ದ್ವೈತವೆಲ್ಲವೂ ಮನಸ್ಸಿಗೆ ಕಾಣುವು ದಾಗಿರುವುದು. ಏಕೆಂದರೆ ಮನಸ್ಸು ಮನಸ್ಸಲ್ಲದೆ ಹೋದರೆ ದ್ವೈತವು ಕಾಣುವುದೇ ಇಲ್ಲ. ಎಂದು ಹೇಳಿರುವುದು. ಇದೇ ತಾತ್ಪರ್ಯಕ್ಕೆ ಶ್ರೀವಿದ್ಯಾರಣ್ಯರವರು ಪಂಚದಶಿ ದ್ವೈತವಿವೇಕ ಪ್ರಕರಣದಲ್ಲಿ,

> ಅನ್ವಯವ್ಯತಿರೇಕಾಭ್ಯಾಂ ಧೀಮಯೋಜೀವ ಬಂಧಕೃತ್ ।
> ಸತ್ಯಸ್ಮಿನ್ಸುಖದುಃಖೇಸ್ತೊ ಸ್ತಸ್ಮಿನ್ನಸತಿನದ್ವಯಂ ॥

ತಾ|| ಅನ್ವಯ ವ್ಯತಿರೇಕಗಳ ದೆಸೆಯಿಂದ ಮನೋವಿಕಾರಪ್ರಪಂಚವು ಜೀವನಿಗೆ ಬಂಧನವನ್ನುಂಟುಮಾಡುವುದು. ಈ ಮಾನಸಪ್ರಪಂಚವು ತೋರುತ್ತಿರಲು ಸುಖದುಃಖ ಗಳೆರಡೂ ಇರುವುವು. ಈ ಮಾನಸಪ್ರಪಂಚವು ಇಲ್ಲದಿರಲು ಸುಖದುಃಖಗಳೆರಡೂ ಇರುವುದಿಲ್ಲ. ಅನ್ವಯ ವ್ಯತಿರೇಕಗಳಲ್ಲಿ ಅನ್ವಯವೆಂದರೆ—ಒಂದು ಇದ್ದರೆ ತಾನೂ ಇರು ವುದು. ಅಂದರೆ ಬುದ್ಧಿಮನಸ್ಸುಗಳಿದ್ದರೆ ದ್ವೈತವಿರುವುದು. ವ್ಯತಿರೇಕವೆಂದರೆ, ಬುದ್ಧಿ ಮನಸ್ಸುಗಳಿಲ್ಲದಿದ್ದರೆ ದ್ವೈತವೂ ಇರುವುದಿಲ್ಲ, ಎಂದು ಹೇಳಿರುವರು.

ಆದುದರಿಂದ ಬುದ್ಧಿಮನಸ್ಸುಗಳಿಗುಂಟಾಗುವ ವಿಕಾರವೇ ಭ್ರಾಂತಿ ಅಥವಾ ಅಜ್ಞಾನ. ಇದೇ ದ್ವೈತವೆನಿಸಿಕೊಳ್ಳುವುದು. ಬುದ್ಧಿಮನಸ್ಸುಗಳಿಗುಂಟಾಗುವ ವಿಕಾರ ವೇನೆಂದರೆ—ಬುದ್ಧಿಮನಸ್ಸುಗಳಿಗೆ ಆವರಣ ವಿಕ್ಷೇಪಶಕ್ತಿಗಳಿಂದ ವಾಸನಾವೃತ್ತಿಯುಂಟಾಗಿ ದೇಹವೇ ನಾನು ಎಂಬ ಜ್ಞಾನವು ಮತ್ತು ಅಭಿಮಾನವು ವಿಜ್ಞಾನಮಯಕೋಶದಲ್ಲಿ ಉದಯವಾಗುವುದು. ಅನಂತರ ಮನೋಮಯಕೋಶದಲ್ಲಿ ಬುದ್ಧಿಮನಸ್ಸಿನ ವೃತ್ತಿಗಳಿಗೆ ಇದು ಅಥವಾ ನೀನು ಎಂಬ ಎರಡನೆಯದರ ಜ್ಞಾನೋದಯವಾಗುವುದು. ಅನಂತರ ಬುದ್ಧಿಮನಸ್ಸಿನವೃತ್ತಿಗಳು ಇಂದ್ರಿಯಗಳಲ್ಲಿ ಪ್ರಸರಣೆಯಾಗಿ ಪ್ರಾಣಶಕ್ತಿಗಳೊಡನೆ ಕಲೆಯು ವುವು. ಅನಂತರ ಬುದ್ಧಿಮನಸ್ಸುಗಳಿಗೆ ಅನ್ನಮಯ ಅಥವಾ ಸ್ಥೂಲದೇಹದ ವ್ಯಾಪಾರ ಪ್ರಾರಂಭವಾಗಿ ಬಾಹ್ಯವಿಷಯಗಳೇ ಸತ್ಯವೆಂಬ ಭ್ರಮೆಯು ಬೇರೂರಿ ಬಹಿರ್ವ್ಯಾಪಾರ ಬಂಧನವುಂಟಾಗುವ ಸ್ವರೂಪವೇ ಬುದ್ಧಿಮನಸ್ಸುಗಳಿಗೆ ಉಂಟಾಗಿರುವ ವಿಕಾರಗಳಾಗಿರು ವುವು. ಈ ವಿಕಾರಗಳಿಗೆ ಅಜ್ಞಾನ ಭ್ರಾಂತಿ, ಕಲ್ಪನೆ, ದ್ವೈತಗಳೆಂಬ ನಾಮಗಳಿರುವುವು. ಆದುದರಿಂದ ದ್ವೈತ ಅಥವಾ ಭ್ರಾಂತಿಯೆಂಬುದು ಬುದ್ಧಿಮನಸ್ಸುಗಳಿಗೆ ಪಂಚಕೋಶಗಳ ಕಾರ್ಯಗಳಿಂದುಂಟಾಗುವ ವಿಕಾರವಾಗಿರುವುದು.

ಶ್ರೀರಾಮಚಂದ್ರನು ಅವತಾರಮಾಡಿ ತನ್ನ ಲೀಲಾವಿಭೂತಿಯ ತತ್ವವಾದ ಮೋಕ್ಷ ಮಾರ್ಗದ ಒಳತತ್ವವನ್ನಿಟ್ಟು ನಡೆಸಿರುವ ಚರಿತ್ರೆಯಲ್ಲಿ ಶ್ರೀರಾಮಚಂದ್ರನು ವನವಾಸಕ್ಕೆ ಬಂದು ರಾವಣನ ತೊಂದರೆಗೊಳಗಾದುದೇ ಬುದ್ಧಿಮನಸ್ಸುಗಳಿಗುಂಟಾಗುವ ವಿಕಾರದ ತತ್ವವಾಗಿರುವುದು. ಇದೇ ದ್ವೈತ ಅಥವಾ ಭ್ರಾಂತಿಸ್ವರೂಪವಾಗಿರುವುದು. ಅಂದರೆ ವಿಷಯವ್ಯಾಪಾರವೇ ಭ್ರಾಂತಿಸ್ವರೂಪವಾಗಿರುವುದು. ಬುದ್ಧಿಮನಸ್ಸುಗಳಿಗೆ ವಿಷಯಾದಿ ಗಳನ್ನು ತಂದೊಡ್ಡುತ್ತಿರುವುದೇ ರಾವಣ ಮತ್ತು ಇವನ ಪರಿವಾರದ ತತ್ವವೆಂದರೆ ಅವಿದ್ಯೆಯ ಸ್ವರೂಪವಾಗಿರುವುದು. ಆದುದರಿಂದ ವಿಷಯವಾಸನೆಯೇ ಬುದ್ಧಿಮನಸ್ಸು ಗಳಿಗೆ ದ್ವೈತ ಅಥವಾ ಭ್ರಾಂತಿಸ್ವರೂಪದ ವಿಕಾರಗಳಿಗೆ ಕಾರಣವಾಗಿರುವುದು. ಎಲ್ಲಿಯ ವರೆಗೆ ವಿಷಯವಾಸನೆಗಳು ಬುದ್ಧಿಮನಸ್ಸುಗಳಿಗೆ ವಿಕಾರವನ್ನುಂಟುಮಾಡುವುವೋ ಅಲ್ಲಿಯ ವರೆಗೆ ದ್ವೈತ ಅಥವಾ ಭ್ರಾಂತಿಯು ಇದ್ದೇ ಇರುವುದು. ಆದುದರಿಂದ ದ್ವೈತನಿವಾರಣೆ

ಯಾಗಿ ಅದ್ವೈತಸಿದ್ಧಿಯಾಗಲು ವಾಸನಾಕ್ಷಯ, ಮನೋನಾಶ ತತ್ವಜ್ಞಾನಗಳಿಗೆ ಪ್ರಯತ್ನ ಮಾಡಬೇಕು. ಇವುಗಳಲ್ಲಿ ವಾಸನಾಕ್ಷಯವಾದ ಹೊರತು ಮನೋನಾಶವಾಗುವುದಿಲ್ಲ. ತತ್ವಜ್ಞಾನದಲ್ಲಿ ಪರೋಕ್ಷಜ್ಞಾನ ಅಪರೋಕ್ಷಜ್ಞಾನಗಳೆಂದೆರಡು ವಿಧ. ತತ್ವಜ್ಞಾನವೆಂದರೆ ಪರಮಾತ್ಮನೇ ನಾನೆಂಬ ದೃಢವಾದ ಪರೋಕ್ಷಜ್ಞಾನವನ್ನು ಹೊಂದಿ ಅಪರೋಕ್ಷಜ್ಞಾನ ಕ್ಕಾಗಿ ಸಮಾಧಿಯ ಅನುಷ್ಠಾನಮಾಡದೆ ವಾಸನಾಕ್ಷಯ ಮನೋನಾಶಗಳಾಗುವುದಿಲ್ಲ.

ಆದುದರಿಂದ ವಾಸನಾಕ್ಷಯ ಮನೋನಾಶಗಳಿಗೆ ಪ್ರಥಮ ಕರ್ತವ್ಯವಾದ ಪರೋಕ್ಷ ಜ್ಞಾನಕ್ಕೆ ಸಾಧನವಾದ ಮುಮುಕ್ಷುತೆ ಆತ್ಮವಿಚಾರದ ಶ್ರವಣ ಮನನ ಮತ್ತು ಆತ್ಮಭಾವ ನೆಯ ಚಿಂತನೆಗಳಲ್ಲಿ ಸ್ಥೈರ್ಯವನ್ನು ಹೊಂದಬೇಕು. ಈ ಪರೋಕ್ಷಜ್ಞಾನದ ಅವಶ್ಯ ಕತೆಯ ತತ್ವದ ಸೂಚನೆಯೇ ಶ್ರೀರಾಮಚಂದ್ರನು ಸೀತಾದೇವಿಯನ್ನು ಹೊಂದಲು ಪಡೆಯುತ್ತಿದ್ದ ದುಃಖ, ಜಟಾಯುವಿನ ಮತ್ತು ಶಬರಿಯ ಕಥಾ ತತ್ವಗಳಾಗಿರುವುವು. ಅನಂತರ ವಾಸನಾಕ್ಷಯ ಮನೋನಾಶಗಳಿಗೆ ಎರಡನೆಯ ಕರ್ತವ್ಯವಾದ ಅಪರೋಕ್ಷ ಜ್ಞಾನಕ್ಕೆ ಸಾಧನೆಯಾದ ಆಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರಣ ಸಮಾಧಿಗಳ ಅನುಷ್ಠಾನಗಳನ್ನು ಮಾಡಬೇಕು. ಅಪರೋಕ್ಷಜ್ಞಾನವನ್ನು ಹೊಂದುವ ವಾಸನಾಕ್ಷಯ ಮನೋನಾಶಗಳಲ್ಲಿ ವಾಸನಾಕ್ಷಯವಾಗುವ ತತ್ವವೇ ರಾವಣ ಮತ್ತು ಇವನ ಪರಿವಾರದ ತತ್ವವಾಗಿರುವುದು. ಮನೋನಾಶವಾಗುವುದೆಂದರೆ—ಬುದ್ಧಿವೃತ್ತಿಯು ಪರಮಾತ್ಮನಲ್ಲಿ ಲೀನವಾಗುವ ತತ್ವವೇ ಸೀತಾದೇವಿಯು ಅಗ್ನಿಪ್ರವೇಶಮಾಡಿದುದಾಗಿರುವುದು. ಸೀತಾಗ್ನಿ ಪ್ರವೇಶವಾದ ಮೇಲೆ ಇರುವ ಶ್ರೀರಾಮನ ಸ್ಥಿತಿಯೇ ಜೀವಾತ್ಮನಿಗೆ ಇದ್ದ ಉಪಾಧಿಗಳು ಬ್ರಹ್ಮರಂಧ್ರಸ್ಥಿತ ಪರಮಾತ್ಮನಲ್ಲಿ ಲೀನವಾಗಲು ಜೀವಾತ್ಮನು ಉಪಾಧಿರಹಿತನಾಗುವುದ ರಿಂದ ಬ್ರಹ್ಮರಂಧ್ರಸ್ಥಿತ ಅದ್ವಯಸ್ವರೂಪನಾದ ಪರಬ್ರಹ್ಮನ ಸಮತ್ವವನ್ನು ಪಡೆಯು ವನು. ಅಂದರೆ ಹಿಂದೆ ಹೇಳಿದ ಏಕವಾಚಕವಾದ ನಿರ್ವಿಕಲ್ಪಸಮಾಧಿ, ಓಂಕಾರ ಪ್ರಕೃತಿ ಲಯಗಳ ತತ್ವವೇ ಅದ್ವೈತಸಿದ್ಧಿಯ ತತ್ವವೂ ಆಗಿರುವುದು.

ಸುಷುಪ್ತಿಕಾಲದಲ್ಲಿಯೂ ವಿಷಯವಾಸನೆಗಳಿರುವುದಿಲ್ಲ ಮತ್ತು ಬುದ್ಧಿಮನಸ್ಸಿನ ವೃತ್ತಿ ಗಳಿಲ್ಲದಿರುವುದರಿಂದ ಯಾವ ಉಪಾಧಿಯೂ ಇಲ್ಲದಿರುವಂತೆ ತೋರುವುದಷ್ಟೆ! ಆದುದರಿಂದ ಸುಷುಪ್ತ್ಯವಸ್ಥೆಯಲ್ಲಿಯೂ ದ್ವೈತವು ತೋರುವುದಿಲ್ಲವಾದುದರಿಂದ ಸುಷುಪ್ತ್ಯವಸ್ಥೆ ಯನ್ನೇ ಅದ್ವೈತಸಿದ್ಧಿ ಎಂಬದಾಗಿ ಏತಕ್ಕೆ ಹೇಳಬಾರದೆಂದರೆ—ಸುಷುಪ್ತಿಯಲ್ಲಿ ಬುದ್ಧಿ ಮನಸ್ಸಿನ ಪ್ರಚಾರವೇ ಬೇರೆ. ಸುಷುಪ್ತಿಯಲ್ಲಿ ತಮೋಗುಣದ ಆವರಣವೆಂಬ ಕಗ್ಗತ್ತಲೆ ಯಿಂದ ಬುದ್ಧಿಮನಸ್ಸಿನ ವೃತ್ತಿಗಳು ಹಿಡಿಯಲ್ಪಟ್ಟಿರುವುವು. ಆದುದರಿಂದ ವಿಷಯವಾಸನೆ ಗಳನ್ನು ನಿಗ್ರಹಿಸಿಕೊಂಡು ಬುದ್ಧಿವೃತ್ತಿಯು ಪರಮಾತ್ಮನಲ್ಲಿ ಲೀನವಾಗುವ ಸ್ವಭಾವವೇ ಬೇರೆ. ತಮೋಗುಣದಲ್ಲಿ ಲೀನವಾಗುವ ಸ್ವಭಾವವೇ ಬೇರೆ.

ಹೇಗೆಂದರೆ—ಬುದ್ಧಿಮನಸ್ಸುಗಳಿಗೆ ಪಂಚಕೋಶಗಳಲ್ಲ ಪ್ರಸರಣೆಯಾಗಿ ವಿಷಯ ವ್ಯಾಪಾರ ನಡೆಯುವುದಷ್ಟೆ! ಬುದ್ಧಿಮನಸ್ಸುಗಳು ಜಾಗ್ರತ್ಕಾಲದಲ್ಲಿ ಪಂಚಕೋಶಗಳ ವಿಕಾರಕ್ಕೆ ಒಳಗಾಗಿದ್ದರೂ ಅನ್ನಮಯಕೋಶದ ವೇಗದ ಬಲವೇ ಅಧಿಕವಾಗಿರುವುದು. ಅಂದರೆ ಅನ್ನಮಯಕೋಶದ ವೇಗವೇ ಹೊರಗಿನ ವಿಷಯವ್ಯಾಪಾರವಾಗಿರುವುದರಿಂದ ಈ ವಿಷಯವ್ಯಾಪಾರಕ್ಕೆ ಇತರ ಕೋಶಗಳೂ ಮತ್ತು ಬುದ್ಧಿಮನಸ್ಸುಗಳೂ ಅಧೀನ ವಾಗಿರುವುವು. ಸ್ವಪ್ನಕಾಲದಲ್ಲಿ ಬುದ್ಧಿಮನಸ್ಸಿನ ವೃತ್ತಿಗಳು ಆನಂದ ವಿಜ್ಞಾನ ಮನೋ ಮಯಗಳಾದ ಮೂರು ಕೋಶಗಳ ವಿಕಾರಗಳಿಗೆ ಕಟ್ಟುಬಿದ್ದಿರುವುವು. ಹೀಗೆ ಸ್ವಪ್ನಾವಸ್ಥೆ ಯಲ್ಲಿ ಆನಂದ ವಿಜ್ಞಾನ ಮನೋಮಯಗಳಾದ ಮೂರುಕೋಶಗಳ ವಿಕಾರಗಳಿಗೆ ಬುದ್ಧಿ ಮನಸ್ಸಿನ ವೃತ್ತಿಗಳು ಕಟ್ಟುಬಿದ್ದಿರುವ ತತ್ವಕ್ಕೆ ಆನಂದಮಯಕೋಶದ ವಿಕಾರವಾದ ನಿದ್ರಾ ವಸ್ಥೆಯೂ, ವಿಜ್ಞಾನಮಯಕೋಶದ ವಿಕಾರವಾದ ಸ್ವಪ್ನದಲ್ಲಿ ವಿಷಯಗಳನ್ನು ತಿಳಿದು ಕೊಳ್ಳುವ ಯೋಗ್ಯತೆಯೂ, ಮನೋಮಯಕೋಶದ ವಿಕಾರವಾದ ಸಂಕಲ್ಪರೂಪವಲ್ಲಿರುವ ವಿಷಯಗಳ ಭಾವದಲ್ಲಿರುವಿಕೆಯೂ, ಒಟ್ಟುಗೂಡಿಕೊಂಡಿರುವುವು.

ಸುಷುಪ್ತಿಕಾಲದಲ್ಲಿ ಬುದ್ಧಿಮನಸ್ಸಿನ ವೃತ್ತಿಗಳು "ಆನಂದಮಯಕೋಶಸ್ಯ ಸುಷುಪ್ತೌ ಸ್ಫೂರ್ತಿರುತ್ಕಟಾ" ಎಂಬ ಶ್ರೀಶಂಕರಭಗವತ್ಪಾದಾಚಾರ್ಯರವರ ವಾಕ್ಯದಂತೆ ಆನಂದಮಯ ಕೋಶದ ವಿಕಾರ ಒಂದಕ್ಕೇ ಒಳಗಾಗಿರುವುವು. ಅಂದರೆ ಆನಂದಮಯಕೋಶದಲ್ಲಿರುವ ತಮಸ್ಸಿನ ಮೂಲಾಜ್ಞಾನಾವರಣವು ಬುದ್ಧಿಮನಸ್ಸಿನ ವೃತ್ತಿಗಳನ್ನು ವಿಜ್ಞಾನ, ಮನೋ, ಪ್ರಾಣ ಮತ್ತು ಅನ್ನಮಯಕೋಶಗಳ ಕಡೆಗೆ ಬಿಡದೆ ತನ್ನಲ್ಲಿಯೇ ಲೀನವಾಡಿಕೊಳ್ಳು ವುದು. ಯಾವಾಗ ಬುದ್ಧಿಮನಸ್ಸಿನ ವೃತ್ತಿಗಳು ತಮೋಗುಣದ ಆವರಣದಲ್ಲಿ ಲೀನವಾಗು ವುವೋ ಆಗ ಜೀವಾತ್ಮನೂ ಕೂಡ ತಮೋಗುಣವನ್ನು ಪ್ರಕಾಶಪಡಿಸಿಕೊಂಡಿರುತ್ತಾನೆಯೇ ಹೊರತು ತಮೋಗುಣದ ಉಪಾಧಿಯಿಂದ ಬಿಡಲ್ಪಟ್ಟವನಾಗಲಿಲ್ಲ. ಆದುದರಿಂದ ಸಹ ಸ್ರಾರದಲ್ಲಿರುವ ಯಾವ ಉಪಾಧಿಗಳೂ ಇಲ್ಲದ ಅದ್ವಯಸ್ವರೂಪನಾದ ಪರಮಾತ್ಮನಲ್ಲಿ ಬುದ್ಧಿವೃತ್ತಿಯು ಲೀನವಾದರೆ ಆಗ್ಯೆ ಹಿಂದೆ ವಿವರಿಸಿರುವಂತೆ ಜೀವಾತ್ಮನು (ಪ್ರತಿಬಿಂಬ ಚೈತನ್ಯನು) ಉಪಾಧಿರಹಿತನಾಗುವುದರಿಂದ ಪರಬ್ರಹ್ಮಚೈತನ್ಯದೊಡನೆ ಸಮತೆಯನ್ನು ಪಡೆಯುವುದರಿಂದ ಅದ್ವೈತಸಿದ್ಧಿ ಎನಿಸಿಕೊಳ್ಳುವುದು.

ಮೇಲೆ ತಿಳಿಸಿರುವಂತೆ ಬುದ್ಧಿಮನಸ್ಸಿನ ವೃತ್ತಿಗಳು ಜಾಗ್ರತ್ಸ್ವಪ್ನ ಸುಷುಪ್ತಿಕಾಲ ಗಳಲ್ಲಿ ಯಾವ ಯಾವ ಕೋಶಗಳ ಪ್ರಾಬಲ್ಯದಿಂದ ಬಂಧಿಸಲ್ಪಟ್ಟಿರುತ್ತವೆಯೆಂಬುದನ್ನು ಶ್ರೀರಾಮನು ಅಯೋಧ್ಯೆಯಿಂದ ವನವಾಸಕ್ಕೆ ತೆರಳಿ ತಮಸಾನದಿಯನ್ನು ಸೇರಿದಾರಭ್ಯದಿಂದ ರಾವಣನ ತೊಂದರೆಗೆ ಸಿಕ್ಕಿದ ಪರ್ಯಂತರ ಇರುವ ಕಥೆಯ ತತ್ವಾರ್ಥಗಳನ್ನು ವಿಮರ್ಶೆ ಮಾಡಿ ತಿಳಿದುಕೊಂಡರೆ ಬಂಧಕದ ಸ್ವರೂಪವು ಮನಸ್ಸಿಗೆ ವಿಶದವಾಗುವುದು. ಶ್ರೀರಾಮನು

ಅಯೋಧ್ಯೆಯಿಂದ ವನವಾಸಕ್ಕೆ ಹೊರಟಕೂಡಲೆ ಪ್ರಥಮದಲ್ಲಿ ತಮಸಾನದಿಯ ದಡಕ್ಕೆ ಬಂದು ಸೇರಿದನು. ತಮಸಾನದಿಯ ತತ್ವವೇ ತಮಸ್ಸಿನ ಮೂಲಾಜ್ಞಾನಾವರಣದ ತತ್ವವೆಂದು ಹಿಂದೆ ಅಯೋಧ್ಯಾಕಾಂಡದಲ್ಲಿಯೇ ವಿವರಿಸಿರುವುದು. ಅಂದರೆ ಪ್ರತಿಬಿಂಬ ಚೈತನ್ಯವು ಜೀವಾತ್ಮನೆನಿಸಿಕೊಳ್ಳಲು ಅಜ್ಞಾನಾವರಣವೇ ಪ್ರಥಮಕಾರಣವಾದ್ದರಿಂದ ಈ ಮೂಲಾಜ್ಞಾನಾವರಣವು ಕಾರಣದೇಹವಾಗಿರುವುದು. ಈ ಮೂಲಾಜ್ಞಾನಾವರಣವು ವ್ಯಷ್ಟಿದೇಹಗಳ ಸೃಷ್ಟಿಕ್ರಮಕ್ಕೆ ಸೇರಿದುದು. ಈ ತಮೋಆವರಣದ ಕಾರ್ಯದ ತತ್ವದವನೇ ಕುಂಭಕರ್ಣನು. ಅಂದರೆ ಸ್ಥಿತಿ ಅಥವಾ ಇರುವಿಕೆಯಲ್ಲಿ ತಮೋಆವರಣದ ಕಾರ್ಯವೆಂದರೆ ನಿದ್ರಾಸ್ವರೂಪಕ್ಕೆ ಎಳೆಯುವುದೇ ಕುಂಭಕರ್ಣನ ತತ್ವ. ಕುಂಭಕರ್ಣನು ನಿಗ್ರಹವಾಗುವ ತೇಜಸ್ತತ್ವವಾದ ಮಣಿಪೂರಚಕ್ರವನ್ನು ಭೇದಿಸಿದ ಹೊರತು ತಮೋಆವರಣವು ಆತ್ಮಸಾಕ್ಷಾತ್ಕಾರಕ್ಕೆ ದಾರಿಯನ್ನು ಕೊಡುವುದಿಲ್ಲ. ತೇಜಸ್ತತ್ವವಾದ ಮಣಿಪೂರಚಕ್ರ ಭೇದನೆಯಿಂದ ತಮೋಆವರಣವು ನಿರ್ವೀರ್ಯವಾಗುವುದು.

ಈ ಮೇಲಿನ ತತ್ವಾರ್ಥಗಳಿಂದ ಸುಷುಪ್ತ್ಯವಸ್ಥೆಯು ತಮೋಗುಣದ ಬಂಧಕವೇ ಹೊರತು ಆತ್ಮಸಾಕ್ಷಾತ್ಕಾರಸ್ವರೂಪವಾಗಿರುವ ಅದ್ವೈತಸಿದ್ಧಿ ಎನಿಸಿಕೊಳ್ಳುವುದಿಲ್ಲ. ಸುಷುಪ್ತಿಕಾಲದಲ್ಲಿ ಬುದ್ಧಿಮನಸ್ಸಿನ ವೃತ್ತಿಗಳು ವಿಜ್ಞಾನ, ಪ್ರಾಣ, ಅನ್ನಮಯಕೋಶಗಳಲ್ಲಿ ಪ್ರಸರಣೆ ಇಲ್ಲವಾದುದರಿಂದ ನಿದ್ರೆಯ ಆವೇಶವು ಬಂದಿತೆಂದರೆ ದೇಹವು ಕೆಳಕ್ಕೆ ಉರುಳುವುದು. ಅಂದರೆ ನಿಂತುಕೊಂಡಾಗಲಿ, ಕುಳಿತುಕೊಂಡಾಗಲಿ, ಗಾಢನಿದ್ರೆಯನ್ನು ಮಾಡುವುದಕ್ಕಾಗುವುದಿಲ್ಲ. ಅದ್ವೈತಸಿದ್ಧಿ ಅಥವಾ ಆತ್ಮಸಾಕ್ಷಾತ್ಕಾರದಲ್ಲಿ ಕುಳಿತುಕೊಂಡೇ ಇದ್ದರೂ ಗಾಢನಿದ್ರೆಯೋಪಾದಿಯಲ್ಲಿ ಯಾವ ಇಂದ್ರಿಯಗಳ ವ್ಯಾಪಾರವೂ ಇಲ್ಲದೆಯೂ, ತಾನೆಂಬ ಜ್ಞಾನವೂ ಇಲ್ಲದೆಯೂ, ಇರುವ ಸ್ವಭಾವದಲ್ಲಿರುತ್ತದೆ. ಆದುದರಿಂದ ಅದ್ವಯ ಸ್ವರೂಪನಾದ ಆತ್ಮಸಾಕ್ಷಾತ್ಕಾರದ ಸ್ವರೂಪವು ಜಾಗ್ರತ್, ನಿದ್ರಾ, ಸ್ವಪ್ನ, ಮೂರ್ಛಾವಸ್ಥೆಗಳ ಸ್ವರೂಪವಲ್ಲ ಮತ್ತು ಮೃತಸ್ವರೂಪವೂ ಅಲ್ಲ. ಇದು ಅತ್ಯಂತ ವಿಚಿತ್ರವಾದುದು. ಅದ್ವೈತಸಿದ್ಧಿಯ ಸ್ವರೂಪವಾದ ಸಮಾಧಿಯಲ್ಲಿರತಕ್ಕವರ ಸ್ವಭಾವವು ಹೇಗಿರುವುದೆಂದರೆ ನಾದಬಿಂದು ಮುಂತಾದ ಅನೇಕ ಶ್ರುತಿಗಳಲ್ಲಿ,

ಶಂಖ ದುಂದುಭಿ ನಾದಂಚ ನಶೃಣೋತಿ ಕದಾಚನ |
ಕಾಷ್ಠವಜ್ಜಾಯತೇ ದೇಹ ಉನ್ಮನ್ಯಾವಸ್ಥಯಾ ಧ್ರುವಮ್ ||

ತಾ|| ಆತ್ಮಸಾಕ್ಷಾತ್ಕಾರದಲ್ಲಿರುವವನಿಗೆ ಶಂಖ, ಭೇರೀನಾದಗಳ ಧ್ವನಿಯು ಕೊಂಚವಾದರೂ ಕೇಳಿಸುವುದಿಲ್ಲ. ಆತನ ದೇಹವು ಕಾಷ್ಠದಂತೆ ನಿರ್ವ್ಯಾಪಾರವಾಗಿರುತ್ತದೆ. ಇದೇ ಆತ್ಮಸಾಕ್ಷಾತ್ಕಾರದ ಸ್ಥಿತಿ ಎಂಬುದು ಸತ್ಯ, ಎಂತಲೂ,

ನಗಂಧಂ ನರಸಂ ರೂಪಂ ನಚಸ್ಪರ್ಶಂ ನನಿಸ್ವನಮ್ ।
ನಾತ್ಮಾನಂ ನಪರಂ ವೇತ್ತಿ ಯೋಗೀ ಯುಕ್ತ ಸ್ಸಮಾಧಿನಾ ॥

ತಾ|| ಆತ್ಮಸಾಕ್ಷಾತ್ಕಾರದಲ್ಲಿರುವ ಮಹಾತ್ಮನು ಜ್ಞಾನೇಂದ್ರಿಯಗಳ ಕಾರ್ಯವಾದ ಶಬ್ದ ಸ್ಪರ್ಶ ರೂಪ ರಸ ಗಂಧಗಳನ್ನೂ, ಇದು ತಾನು ಇದು ಬೇರೆ ಎಂಬುದನ್ನೂ ಸಹ ತಿಳಿಯದೆ ತಾನೇ ಪರಮಾತ್ಮಸ್ವರೂಪನಾಗಿರುವನು. ಎಂತಲೂ,

ಸ್ವಸ್ಥೋ ಜಾಗ್ರದವಸ್ಥಾಯಾಂ ಸುಪ್ತವ ದ್ಯೋ ವತಿಷ್ಠತೇ ।
ನಿಶ್ವಾಸೋಚ್ಛ್ವಾಸಹೀನಶ್ಚ ನಿಶ್ಚಿತಂ ಮುಕ್ತಏವ ಸಃ ॥

ತಾ|| ವ್ಯಾಪಾರರಹಿತನಾದ ಯೋಗಿಯು ಜಾಗ್ರದವಸ್ಥೆಯ ರೂಪವಾದ ದೇಹದ ನಿಲುಗಡೆಯಲ್ಲಿ ಉಚ್ಛ್ವಾಸ ನಿಶ್ವಾಸರಹಿತನಾಗಿ ನಿದ್ರೆಯಲ್ಲಿರುವಂತೆ ಇದ್ದರೆ ಸತ್ಯವಾಗಿಯೂ ಜೀವಂತನಾಗಿರುವಾಗಲೇ ಮುಕ್ತನಾಗಿರುವನು, ಎಂಬದಾಗಿಯೂ ಹೇಳಿರುವುದು.

ಈ ಮೇಲಿನ ವಾಕ್ಯಗಳ ಆಧಾರದಿಂದ ಆತ್ಮಸಾಕ್ಷಾತ್ಕಾರದಲ್ಲಿರುವ ಮಹಾತ್ಮನು ನಿದ್ರಾವಸ್ಥೆಯಂತೆ ಮಲಗಿಕೊಂಡಿರುವುದಿಲ್ಲ. ಜ್ಞಾನೇಂದ್ರಿಯಗಳ ವ್ಯಾಪಾರವೇ ಇಲ್ಲದಿರುವಾಗ ಕರ್ಮೇಂದ್ರಿಯವ್ಯಾಪಾರವೆಲ್ಲಿ ಬಂದೀತು? ಅಲ್ಲದೆ ಶ್ವಾಸೋಚ್ಛ್ವಾಸಗಳೂ ಇರುವುದಿಲ್ಲ. ಹೀಗಾದರೂ ಕುಳಿತಿರುವನೇ ಹೊರತು ದೇಹವು ಬೀಳುವುದಿಲ್ಲ. ಇಂತಹ ಆತ್ಮಸಾಕ್ಷಾತ್ಕಾರದ ಸ್ಥಿತಿಯನ್ನೇ ಪರಮಮಂಗಳಕರವಾದ ಯೋಗನಿದ್ರೆಯೆಂದು ಶ್ರೀಶಂಕರ ಭಗವತ್ಪಾದಾಚಾರ್ಯರವರು ಯೋಗತಾರಾವಳಿಯಲ್ಲಿ,

ವಿಚ್ಛಿನ್ನ ಸಂಕಲ್ಪವಿಕಲ್ಪಮೂಲೇ ನಿಶ್ಶೇಷ ನಿರ್ಮೂಲಿತ ಕರ್ಮಜಾಲೇ ।
ನಿರಂತರಾಭ್ಯಾಸನಿತಾಂತಭದ್ರಾಸಾಜೃಂಭತೇಯೋಗಿನಿಯೋಗನಿದ್ರಾ ॥

ತಾ|| ಸಮಸ್ತ ಸಂಕಲ್ಪ ವಿಕಲ್ಪಗಳೂ ನಷ್ಟವಾಗಿ ಕರ್ಮಕಲಾಪಗಳು ನಿಶ್ಶೇಷವಾಗಿ ನಿರ್ಮೂಲವಾಗಲು ಯೋಗಿಗಳಲ್ಲಿ ನಿರಂತರವಾದ ಅಭ್ಯಾಸದಿಂದ ಪರಮಮಂಗಳಕರವಾದ ಯೋಗನಿದ್ರೆಯು ಸ್ಫುರಿಸುವುದು, ಎಂದು ಹೇಳಿರುವರು.

ಜಾಗ್ರತ್ಸ್ವಪ್ನಸುಷುಪ್ತಿಗಳಿಗೂ ಅದ್ವೈತಸಿದ್ಧಿಸ್ವರೂಪವಾದ ಸಮಾಧಿಗೂ ಇರುವ ಭೇದವನ್ನು ಇದುವರೆಗೂ ವಿವರಿಸಿಕೊಂಡು ಬಂದಿರುವುದು. ಆದರೆ ಜಾಗ್ರತ್ಸ್ವಪ್ನ ಸುಷುಪ್ತಿಗಳಲ್ಲಿ ಶ್ವಾಸೋಚ್ಛ್ವಾಸದ ಕಾರ್ಯವು ನಡೆಯುತ್ತಿರುವುದು. ಅದ್ವೈತಸಿದ್ಧಿಯಲ್ಲಿ ಶ್ವಾಸೋಚ್ಛ್ವಾಸಗಳೂ ಇರುವುದಿಲ್ಲ. ಅಂದರೆ ಪ್ರಾಣಚೇಷ್ಟೆ ಯಾವುದೂ ಇರುವುದಿಲ್ಲ. ಶ್ವಾಸೋಚ್ಛ್ವಾಸ ಮತ್ತು ಪಂಚಪ್ರಾಣಗಳ ಕಾರ್ಯವೂ ತಟಸ್ಥವಾಗಬೇಕಾದರೆ ಪ್ರಾಣಶಕ್ತಿಯು ಪರಮಾತ್ಮನಲ್ಲಿ ಲೀನವಾಗಬೇಕು. ಇಲ್ಲಿ ಪ್ರಾಣಶಕ್ತಿಯು ಯಾವುದೆಂದರೆ—

ಪ್ರಾಣಮಯಕೋಶಕ್ಕೆ ಪ್ರಧಾನವಾದ ಎದೆ ಅಥವಾ ಹೃದಯಕೋಶದ ಕಮಲದಲ್ಲಿರುವ ಚೈತನ್ಯವು ಪ್ರಾಣಶಕ್ತಿಯಾಗಿರುವುದು. ಈ ಚೈತನ್ಯವು ಓಂಕಾರದಲ್ಲಿನ ಅಕಾರವು ಉಕಾರದಲ್ಲಿ ಸೇರಿ ಆಗುವ ಓ ಕಾರವು. ಈ ಓಕಾರವು ಮಕಾರಕ್ಕೆ ಸೇರದೆ ಸ್ತಂಭಿಸಲ್ಪಟ್ಟು ಸಗುಣ ಬ್ರಹ್ಮಚೈತನ್ಯವೆನಿಸಿ ಪ್ರಾಣಶಕ್ತಿಯಾಗಿರುವುದೆಂದು ಅಗಸ್ತ್ಯಾಶ್ರಮಪ್ರಕರಣದಲ್ಲಿ ತಿಳಿಸಿರುತ್ತಷ್ಟೆ! ಅಲ್ಲದೆ ಅಧೋಮುಖವಾಗಿರುವ ಹೃದಯಕೋಶದ ಕಮಲದಲ್ಲಿರುವ ಓಕಾರವು ಅಗಸ್ತ್ಯರು ಶ್ರೀರಾಮನಿಗೆ ಆದಿತ್ಯಹೃದಯವನ್ನು ಉಪದೇಶಮಾಡಿದ ತತ್ವದಲ್ಲಿ ಮಕಾರ ಸಂಬಂಧವಾಗಲು ಪ್ರಾರಂಭವಾಗಿ ಓಂಕಾರವಾಗುವುದೆಂಬ ವಿಚಾರವನ್ನೂ ತಿಳಿಸಿರುತ್ತೆ. ಹೀಗೆ ಓಕಾರವು ಮಕಾರ ಸಂಬಂಧದಿಂದ ಓಂಕಾರವಾದಾಗ ಓಕಾರದ ಚೈತನ್ಯವು ಪರಮಾತ್ಮನಲ್ಲಿ ಲೀನವಾಗುವುದು. ಅಂದರೆ ಪ್ರಾಣವು ಪರಮಾತ್ಮನಲ್ಲಿ ಲೀನವಾಗುವುದು. ಹೀಗೆ ಪರಮಾತ್ಮನಲ್ಲಿ ಪ್ರಾಣವು ಲೀನವಾಗುವುದರಿಂದಲೇ ಅದ್ವೈತಸಿದ್ಧಿಸ್ವರೂಪವಾದ ಸಮಾಧಿಯಲ್ಲಿ ಪ್ರಾಣಚೇಷ್ಟೆ ಯಾವುದೂ ಇಲ್ಲದೆ ದೇಹವು ಕಾಷ್ಠದಂತೆ ಇರುವುದೆಂದು ಮೇಲಿನ ಶ್ರುತಿವಾಕ್ಯವು ತಿಳಿಸುತ್ತದೆ. ದೇಹದಲ್ಲಿರುವ ಪ್ರಾಣವು ಪರಮಾತ್ಮನಲ್ಲಿ ಲೀನವಾಗುವುದರಿಂದ ಆತ್ಮಸಾಕ್ಷಾತ್ಕಾರವೆಂದರೆ ಓಂಕಾರವು ಪ್ರಳಯವೆನಿಸಿಕೊಳ್ಳುವುದು. ಅಲ್ಲದೆ ಪ್ರಾಣವು ಪರಮಾತ್ಮನಲ್ಲಿ ಲೀನವಾಗುವುದರಿಂದ ಆತ್ಮಸಾಕ್ಷಾತ್ಕಾರ ಅಥವಾ ಓಂಕಾರಕ್ಕೆ ಪ್ರಣವವೆಂದು ಹೆಸರು. ಈ ತಾತ್ಪರ್ಯಕ್ಕೆ ಅಥರ್ವಶಿಖೋಪನಿಷತ್ತಿನಲ್ಲಿ,

ಪ್ರಾಣಾಂ ತ್ಸರ್ವಾ ನ್ಪ್ರಲೀಯತ ಇತಿ ಪ್ರಳಯಃ।

ಪ್ರಾಣಾಂ ತ್ಸರ್ವಾ ನ್ಪರಮಾತ್ಮನಿ ಪ್ರಣಾಮಯತಿತ್ಯೇತಸ್ಮಾತ್ಪ್ರಣವಃ॥

ತಾ॥ ಪ್ರಾಣಗಳೆಲ್ಲವನ್ನೂ ಲಯಗೊಳಿಸಿಕೊಳ್ಳುವುದರಿಂದ ಓಂಕಾರಕ್ಕೆ ಪ್ರಳಯವೆಂದು ಹೆಸರು. ಸಕಲ ಪ್ರಾಣಗಳನ್ನೂ ಪರಮಾತ್ಮನಲ್ಲಿ ಅರ್ಪಿಸುವುದರಿಂದ ಓಂಕಾರ ಅಥವಾ ಪರಮಾತ್ಮನಿಗೆ ಪ್ರಣವವೆಂದು ಹೆಸರು, ಎಂದು ಹೇಳಿರುವುದು.

ಪ್ರಳಯದಲ್ಲಿ ಭೇದಗಳಿರುವುವು. ಆತ್ಮಸಾಕ್ಷಾತ್ಕಾರವನ್ನೂ, ಪ್ರಳಯವೆಂದೇ ಹೇಳಬೇಕು. ಈ ಮೇಲಿನ ಶ್ರುತಿವಾಕ್ಯದ ಆಧಾರವನ್ನನುಸರಿಸಿ ಅದ್ವೈತಸಿದ್ಧಿಸ್ವರೂಪವಾದ ಸಮಾಧಿಯಲ್ಲಿ ಪ್ರಾಣಚೈತನ್ಯವೆಲ್ಲಾ ಮುಖ್ಯಪ್ರಾಣನೆನಿಸಿರುವ ಪರಮಾತ್ಮವಾಗಿರುತ್ತದೆ. ಇದೇ ತತ್ವಕ್ಕೆ ಹಿಂದೆ ಅನೇಕವಾಕ್ಯಗಳ ಆಧಾರಗಳನ್ನು ಕೊಟ್ಟಿರುವುದು. ಅಲ್ಲದೆ ಶ್ರೀಶಂಕರ ಭಗವತ್ಪಾದಾಚಾರ್ಯರವರ

ಪ್ರಾಣ ಪ್ರತೀಚೀನ ಪಥೇನ ಮಂದಂ ವಿಲೀಯತೇ ವಿಷ್ಣು ಪದಾಂತರಾಳೇ।

ಎಂಬ ವಾಕ್ಯವನ್ನು ಶ್ರೀರಾಮನು ಸೈನ್ಯದೊಡನೆ ಲಂಕೆಯನ್ನು ಸೇರಿದ ಸಂದರ್ಭದಲ್ಲಿ ಬರೆದಿರುವುದರಿಂದಲೂ, ಪ್ರಾಣವು ಸರ್ವವ್ಯಾಪಕವಾದ ಪರಮಾತ್ಮನಲ್ಲಿ ಲೀನವಾಗುವ

ತತ್ವವನ್ನು ಸೂಚಿಸುವುದು. ಪಂಚಪ್ರಾಣಗಳ ಚೈತನ್ಯಗಳ ತತ್ವದವರಾದ ಸುಗ್ರೀವಾದಿಗಳು ರಾಮರಾವಣರಿಬ್ಬರೇ ಯುದ್ಧಮಾಡಲು ಪ್ರಾರಂಭಮಾಡಿದಾರಭ್ಯ ತಟಸ್ಥರಾಗಿರುವರು. ಸುಗ್ರೀವಾದಿಗಳು ತಟಸ್ಥರಾಗಿರುವರೆಂದರೆ-ಸಮಾಧಿಯ ಅನುಷ್ಠಾನದ ಪರಿಪಕ್ವಾವಸ್ಥೆಯಲ್ಲಿ ಪ್ರಾಣವೆಂದರೆ ವಾಯುಗಳಲ್ಲಿರುವ ಚೈತನ್ಯವು ಪ್ರತಿಬಿಂಬಚೈತನ್ಯನಲ್ಲಿ ಉಪಶಾಂತತೆಯಿಂದ ಇರುವ ತತ್ವವಾಗಿರುವುದು. ಯಾವಾಗ ಬುದ್ಧಿವೃತ್ತಿಯು ಪರಮಾತ್ಮನಲ್ಲಿ ಲೀನವಾಗಿ ಬುದ್ಧಿಯಲ್ಲಿರುವ ಪ್ರತಿಬಿಂಬಚೈತನ್ಯನೂ ಪರಬ್ರಹ್ಮನೇ, ಪರಬ್ರಹ್ಮನೇ ಪ್ರತಿಬಿಂಬಚೈತನ್ಯನೆನಿಸಿಕೊಳ್ಳುವರೋ ಆಗ ದೇಹದಲ್ಲಿರುವ ಸಕಲಚೈತನ್ಯವೂ ತಮ್ಮ ನೈಜವಾದ ಪರಮಾತ್ಮನಾಮವನ್ನು ಪಡೆಯುವುದೇ ಪ್ರಾಣವು ಪರಮಾತ್ಮನಲ್ಲಿ ಲೀನವಾಗುವ ತತ್ವವಾಗಿರುವುದು. ಅಂದರೆ ದೇಹವ್ಯಾಪಾರಕ್ಕೆ ಕಾರಣವಾದ ದೇಹದಲ್ಲಿರುವ ಸರ್ವಚೈತನ್ಯವೂ ಆತ್ಮಸಾಕ್ಷಾತ್ಕಾರದಲ್ಲಿ ದೇಹವ್ಯಾಪಾರವನ್ನು ಪ್ರಕಾಶಪಡಿಸದೆ ತಮ್ಮ ನೈಜವಾದ ಆತ್ಮಸ್ವರೂಪದಲ್ಲಿಯೇ ನಿಲುಗಡೆಯಾಗುವ ತತ್ವವೇ ಅದ್ವೈತಸಿದ್ಧಿಯ ತತ್ವವಾದ ಸಮಾಧಿಯಲ್ಲಿ ಪ್ರಾಣವು ಪರಮಾತ್ಮನಲ್ಲಿ ಲೀನವಾಗುವ ತತ್ವವಾಗಿರುವುದು. ಆದುದರಿಂದ ಜಾಗ್ರತ್ಸ್ವಪ್ನಸುಷುಪ್ತಿಕಾಲಗಳಲ್ಲಿ ಮಾಯಾಕಲ್ಪನೆಯು ತೋರುವುದು. ನಿರ್ವಿಕಲ್ಪಸಮಾಧಿಯಲ್ಲಿ ಅದ್ವೈತವೇ ನಿಲ್ಲುವುದು. ಈ ತಾತ್ಪರ್ಯಕ್ಕೆ ಪಾಶುಪತಬ್ರಹ್ಮೋಪನಿಷತ್ತಿನಲ್ಲಿ,

ವ್ಯಾವಹಾರಿಕದೃಷ್ಟಿಸ್ತು ಪ್ರಕಾಶಾವ್ಯಭಿಚಾರತಃ ।
ಪ್ರಕಾಶ ಏವಸತತಂ ತಸ್ಮಾ ದದ್ವೈತ ಏವಹಿ ॥

ತಾ॥ ವ್ಯಾವಹಾರಿಕದೃಷ್ಟಿಯಲ್ಲಿ ಮಾಯೆಯ ಕಲ್ಪನೆಯು ತೋರುವುದು. ತತ್ವದೃಷ್ಟಿಯಲ್ಲಿ ಸ್ವಯಂಪ್ರಕಾಶನಾದ ಆತ್ಮನೇ ಇರುವುದರಿಂದ ಅದ್ವೈತವೇ ನಿಲ್ಲುವುದು-ಎಂಬ ವಾಕ್ಯವಿರುವುದು.

## ರಾಜಯೋಗ.

ಈ ಪರಮಾತ್ಮಸಾಕ್ಷಾತ್ಕಾರವಾದ ಅದ್ವೈತಸಿದ್ಧಿಯೇ ರಾಜಯೋಗವೆನಿಸಿಕೊಳ್ಳುವುದು. ಯೋಗದಲ್ಲಿ ಕರ್ಮಯೋಗ, ಭಕ್ತಿಯೋಗ, ಜ್ಞಾನಯೋಗ, ಲಯಯೋಗ ಹಟಯೋಗಗಳೆಂಬ ಅನೇಕ ಪ್ರಭೇದಗಳಿರುವುವು. ಈ ಯೋಗಗಳೆಲ್ಲವೂ ಆತ್ಮಸಾಕ್ಷಾತ್ಕಾರವನ್ನು ಪಡೆಯುವುದಕ್ಕಾಗಿಯೇ ಇರುವುವು. ಆದುದರಿಂದ ಈ ಎಲ್ಲಾ ವಿಧವಾದ ಯೋಗಗಳಿಗೂ ಅದ್ವೈತಸಿದ್ಧಿ ಅಥವಾ ಆತ್ಮಸಾಕ್ಷಾತ್ಕಾರವು ರಾಜನಂತೆ ಇರುವುದು. ಆದುದರಿಂದ ಆತ್ಮಸಾಕ್ಷಾತ್ಕಾರದ ಸ್ವರೂಪವು ರಾಜಯೋಗವೆನಿಸಿಕೊಳ್ಳುವುದು. ಇದೇ ತಾತ್ಪರ್ಯಕೆ ಶ್ರೀಶಂಕರಭಗವತ್ಪಾದಾಚಾರ್ಯರವರು ಯೋಗತಾರಾವಳಿಯಲ್ಲಿ,

ನ ದೃಷ್ಟಿಲಕ್ಷಾಣಿ ನಚಿತ್ತಬಂಧೋ ನ ದೇಶಕಾಲಾ ನಚ ವಾಯುರೋಧಃ|
ನ ಧಾರಣಾಧ್ಯಾನ ಪರಿಶ್ರಮೋವಾ ಸಮೇಧಮಾನೇಸತಿ ರಾಜಯೋಗೇ ||೧||
ಅಶೇಷ ದೃಶ್ಯೋಜ್ಝಿತ ದೃಙ್ಮಯಾನಾ ಮವಸ್ಥಿತಾನಾಮಿಹ ರಾಜಯೋಗೇ|
ನಜಾಗರೋನಾಪಿ ಸುಷುಪ್ತಿಭಾವೋ ನಜೀವಿತಂ ನೋಮರಣಂ ವಿಚಿತ್ರಂ||೨||

ತಾ|| ರಾಜಯೋಗವು ಸಿದ್ಧಿಸುತ್ತಿರಲಾಗಿ ಲಕ್ಷ್ಯದಲ್ಲಿ ದೃಷ್ಟಿಯೂ, ಚಿತ್ತನಿರೋಧವೂ, ದೇಶ, ಕಾಲ, ನಿಯಮಗಳೂ ಪ್ರಾಣರೋಧವೂ, ಧ್ಯಾನ, ಧಾರಣಾದಿಗಳ ಪರಿಶ್ರಮವೂ, ಇರುವುದಿಲ್ಲ.

ನೋಡಬೇಕಾದುದೇನೂ ಇಲ್ಲದ ನೋಟವೇ ತಾನಾದ ಈ ರಾಜಯೋಗಿಗೆ ಎಚ್ಚರವಿಲ್ಲ, ನಿದ್ರೆಯಿಲ್ಲ, ಜೀವಿತವಿಲ್ಲ, ಮರಣವಿಲ್ಲ. ಇದೇ ಆಶ್ಚರ್ಯ, ಎಂದು ಹೇಳಿರುವರು.

ಆದುದರಿಂದ ಜೀವಬ್ರಹ್ಮಸಾಕ್ಷಾತ್ಕಾರಕ್ಕೆ ರಾಜಯೋಗ, ಅದ್ವೈತಸಿದ್ಧಿ, ಓಂಕಾರ, ನಿರ್ವಿಕಲ್ಪಸಮಾಧಿ, ಪ್ರಕೃತಿಗಳೆಂಬ ಬೇರೆ ಬೇರೆ ಹೆಸರುಗಳಿದ್ದರೂ ಎಲ್ಲವೂ ಒಂದೇ. ಅದ್ವೈತಸಿದ್ಧಿವಿಚಾರ ಪ್ರಾರಂಭದಿಂದ ಇದುವರೆಗೂ ಭ್ರಾಂತಿಯೇ ದ್ವೈತವೆಂಬದಾಗಿಯೂ, ಈ ಭ್ರಾಂತಿಯನ್ನು ಪರಿಹಾರಮಾಡಿಕೊಳ್ಳಲು ರಾಮಾಯಣಕಥೆಯ ತತ್ವಗಳ ವಿವರಣೆಯನ್ನೂ, ಅಧಿಕಾರಿಯು ಯಾವ ಸ್ಥಿತಿಗೆ ಬಂದರೆ ಅದ್ವೈತಸಿದ್ಧಿಯಾಗುವುದೆಂಬ ತತ್ವವನ್ನೂ ವಿವರಣೆಮಾಡಿತು.

ಜೀವನಿಗೂ ಬ್ರಹ್ಮನಿಗೂ ಭೇದವಿರುವುದೆಂದೂ ಇದೇ ದ್ವೈತವೆಂದೂ ತಿಳಿದುಕೊಳ್ಳಬಾರದು. ಮಹಾಕಾಶ ಘಟಾಕಾಶಗಳಿಗೆ ಹೇಗೆ ಭೇದವಿಲ್ಲವೋ, ಪ್ರತಿಫಲನದ ಬೆಳಕು ಬಿಂಬದ ಬೆಳಕಲ್ಲದೆ ಮತ್ತೆ ಬೇರೆಯಲ್ಲವೋ, ಹಾಗೆಯೇ ಚೈತನ್ಯರೂಪದಿಂದ ಜೀವಪರಬ್ರಹ್ಮರು ಒಂದೇ. ಇದರಂತೆ ಶ್ರೀಮನ್ನಾರಾಯಣನೇ ಶ್ರೀರಾಮನು, ಶ್ರೀರಾಮನೇ ಶ್ರೀಮನ್ನಾರಾಯಣನು. ಗಡಿಗೆಯಲ್ಲಿರುವ ಆಕಾಶ ಅಥವಾ ಬಯಲು ಮಹಾಕಾಶದ ವಿಕಾರವೆಂದು ಎಂದಿಗೂ ಹೇಳುವುದಕ್ಕಾಗುವುದಿಲ್ಲ. ಮಹಾಕಾಶವು ಘಟಾಕಾಶವೆಂಬ ನಾಮವನ್ನು ಪಡೆದರೂ ಮಹಾಕಾಶಕ್ಕೆ ಭೇದವಾದ ಯಾವ ವಿಕಾರವೂ ಘಟಾಕಾಶಕ್ಕೆ ಬರುವುದಿಲ್ಲ. ಇದರಂತೆ ಮಹಾಕಾಶಸ್ವರೂಪನಾದ ಪರಬ್ರಹ್ಮಚೈತನ್ಯನು ಘಟಾಕಾಶವಾದ ಜೀವಚೈತನ್ಯನೆಂಬ ನಾಮವನ್ನು ಪಡೆದರೂ ಪರಮಾತ್ಮಭಿನ್ನವಾದ ವಿಕಾರಗಳಿರುವುದಿಲ್ಲ. ಇದರಂತೆ ಶ್ರೀಮನ್ನಾರಾಯಣನು ಶ್ರೀರಾಮನೆನಿಸಿಕೊಂಡರೂ ಶ್ರೀಮನ್ನಾರಾಯಣನಿಗಿಂತ ಭಿನ್ನವಾದ ಯಾವ ವಿಕಾರವೂ ಇರುವುದಿಲ್ಲ.

ಘಟಾಕಾಶವು ಮಹಾಕಾಶದ ಅವಯವವೂ ಅಲ್ಲ. ಹೇಗೆಂದರೆ ಮರಕ್ಕೆ ಕೊಂಬೆಗಳು ಹೇಗೆ ಅವಯವಗಳೋ ಹಾಗೆ ಘಟಾಕಾಶವು ಮಹಾಕಾಶದ ಅಣು ಅಥವಾ ಶಾಖೆಯೆನಿಸಿ

ಕೊಳ್ಳುವುದಿಲ್ಲ. ಇದರಂತೆ ಪ್ರತಿಫಲಿತವಾಗಿರುವ ಬೆಳಕು ಬಿಂಬಭೂತವಾದ ಸರ್ವ ವ್ಯಾಪಕವಾದ ಬೆಳಕಿನ ಅಣು ಅಥವಾ ಶಾಖೆಯೆನಿಸಿಕೊಳ್ಳುವುದಿಲ್ಲ. ಇದರಂತೆ ಜೀವಾತ್ಮನು ಪರಮಾತ್ಮನ ಅಣು ಅಥವಾ ಶಾಖೆಯೆನಿಸುವುದಿಲ್ಲ. ಈ ತತ್ವದಂತೆ ಶ್ರೀರಾಮ ಚಂದ್ರನು ಶ್ರೀಮನ್ನಾರಾಯಣನ ಅಣುಸ್ವರೂಪ, ಶಾಖೆ, ಅಥವಾ ಅವಯವವಾಗಿಲ್ಲ. ಆದುದರಿಂದ ಮಹಾಕಾಶ ಘಟಾಕಾಶ ಸ್ವರೂಪದಲ್ಲಿ ಹೇಗೆ ಭೇದಕ್ಕೆ ಅವಕಾಶವಿಲ್ಲವೋ ಹಾಗೆ ಪರಮಾತ್ಮ ಜೀವಾತ್ಮ ಚೈತನ್ಯಗಳಿಗೆ ಭೇದಕ್ಕೆ ಅವಕಾಶವಿಲ್ಲ. ಹಾಗೆ ತಿಳಿದು ಕೊಳ್ಳುವುದು ತಪ್ಪು. ಇದೇ ತಾತ್ಪರ್ಯವನ್ನೇ ಮಾಂಡೂಕ್ಯೋಪನಿಷತ್ ಅದ್ವೈತಪ್ರಕರಣ ದಲ್ಲಿನ ಮಂತ್ರವೂ ಶ್ರೀಶಂಕರಭಗವತ್ಪಾದಾಚಾರ್ಯರವರ ಭಾಷ್ಯವೂ ಆಧಾರಗಳಾಗಿರುವುವು. ಈ ಆಧಾರದ ಮಂತ್ರವನ್ನು ಕೆಳಗೆ ಬರೆದಿರುವುದು.

ನಾಕಾಶಸ್ಯ ಘಟಾಕಾಶೋ ವಿಕಾರಾವಯವೌ ಯಥಾ ।
ನೈವಾತ್ಮನಃ ಸದಾಜೀವೋ ವಿಕಾರಾವಯವೌ ತಥಾ ॥

ತಾ॥ ಗಡಿಗೆಯ ಬಯಲು ಆಕಾಶದ ವಿಕಾರವೂ ಅಲ್ಲ, ಅವಯವವೂ ಅಲ್ಲವಷ್ಟೆ! ಇದರಂತೆಯೇ ಜೀವನು ಯಾವಾಗಲೂ ಪರಬ್ರಹ್ಮನ ವಿಕಾರವೂ ಅಲ್ಲ, ಅವಯವವೂ ಅಲ್ಲ.

ಈ ಮೇಲಿನ ತತ್ವಗಳಿಂದ ಪರಮಾತ್ಮ ಜೀವಾತ್ಮರ ಸ್ವರೂಪದಲ್ಲಿ ಭೇದವಿಲ್ಲ. ಮಹಾಕಾಶದಲ್ಲಿ ಘಟಗಳೆಂಬ ಉಪಾಧಿಗಳು ಬಂದುದರಿಂದ ಘಟದಲ್ಲಿರುವ ಬಯಲಿಗೆ ಘಟಾಕಾಶವೆಂದು ಹೆಸರು ಬಂದಿತು. ಇದರಂತೆ ಸರ್ವವ್ಯಾಪಕವಾದ ಆಕಾಶದಂತಿರುವ ಪರಬ್ರಹ್ಮನಲ್ಲಿ ಘಟಸ್ವರೂಪವಾದ ಸೂಕ್ಷ್ಮ ಕಾರಣದೇಹಗಳುಂಟಾದುದರಿಂದ ಈ ಸ್ಥೂಲ ದಲ್ಲಿರುವ ಪರಬ್ರಹ್ಮನು ಪ್ರತಿಫಲಿಸಿ ಜೀವನೆಂಬ ಹೆಸರನ್ನು ಪಡೆದನು. ಹಿಂದೆ ತಿಳಿಸಿದು ವಂತೆ ಘಟದ ಮುಚ್ಚಳದ ನಿವೃತ್ತಿಯಿಂದ ಘಟಾಕಾಶ ಮಹಾಕಾಶಗಳು ಏಕವಾಗುವುದೇ ಜೀವನ್ಮುಕ್ತಿ ಅಥವಾ ಅದ್ವೈತಸಿದ್ಧಿ ಎನಿಸಿಕೊಳ್ಳುವುದು. ಘಟವೇ ಒಡೆದುಹೋದನಂತರ ಎಲ್ಲವೂ ಮಹಾಕಾಶವೆಂದೇ ಎನಿಸಿಕೊಳ್ಳುವುದು. ಇದರಂತೆ ವಿದೇಹಮುಕ್ತಿಯಲ್ಲಿ ಜೀವನೆಂಬ ಹೆಸರು ಹೋಗಿ ಅದ್ವಯನಾದ ಪರಬ್ರಹ್ಮನೆಂಬುದೇ ಉಳಿದುಯಾಗುವುದು. ಇದೇ ವಿದೇಹಮುಕ್ತಿ.

ಈ ಉಪಪ್ರಕರಣಕ್ಕೆ ಅದ್ವೈತಸಿದ್ಧಿಯೆಂಬದಾಗಿ ಹೆಸರು ಕೊಡಲು ಕಾರಣ ವೇನೆಂದರೆ, ಶ್ರೀರಾಮಕೃಷ್ಣಾದ್ಯವತಾರಗಳ ಮತ್ತು ಶಿವಾವತಾರಗಳ ಚರಿತ್ರೆಯ ತತ್ವ ಗಳೆಲ್ಲಾ ಎಂದರೆ, ಸಕಲ ಪುರಾಣಗಳೂ ಅದ್ವಯನಾದ ಪರಬ್ರಹ್ಮನಾಗುವ ಶಾಸ್ತ್ರವಾದುದ ರಿಂದ ಅದ್ವೈತಶಾಸ್ತ್ರವೇ ಆಗಿರುವುದು. ಶ್ರೀಮನ್ನಾರಾಯಣನೇ ಶ್ರೀರಾಮನೆನಿಸಿಕೊಂಡಿರು ವಂತೆಯೂ, ಮಹಾಕಾಶವೇ ಘಟಾಕಾಶವೆಂಬ ಹೆಸರು ಪಡೆಯುವಂತೆಯೂ, ಪ್ರತಿಫಲನವು

ಸ್ವಪ್ರಕಾಶದ ಬೆಳಕೇ ಆಗಿರುವಂತೆಯೂ, ಪರಬ್ರಹ್ಮಚೈತನ್ಯವೇ ಪ್ರತಿಬಿಂಬಚೈತನ್ಯವೆನಿಸಿ ಕೊಳ್ಳುವುದು. ಇಂತಹ ಪ್ರತಿಬಿಂಬಚೈತನ್ಯಕ್ಕೆ ವೇಷವೆಂಬ ಉಪಾಧಿ ಬಂದು ವೇಷಧಾರಿಯು ಆಯಾಯ ವೇಷದಂತೆ ಹೇಗೆ ನಟಿಸುವನೋ ಹಾಗೆ ಪ್ರತಿಬಿಂಬಚೈತನ್ಯವು ಉಪಾಧಿಗಳನ್ನು ಪ್ರಕಾಶಪಡಿಸುತ್ತಾ ಉಪಾಧಿಯ ತಾದಾತ್ಮ್ಯವನ್ನು ಪಡೆದಂತೆ ತೋರುವ ಆರೋಪಣೆಗೆ (ಅಧ್ಯಾಸಕ್ಕೆ) ಗುರಿಯಾಗಿರುವನು. ಈ ಉಪಾಧಿಗಳು ಇರುವ ಪರ್ಯಂತರ ಪ್ರತಿಬಿಂಬ ಚೈತನ್ಯನು ಪರಬ್ರಹ್ಮನೊಡನೆ ಸಮತೆ (ಸಾಟಿ)ಯನ್ನು ಪಡೆಯಲಾರನು. ಪ್ರತಿಬಿಂಬ ಚೈತನ್ಯನು ಉಪಾಧಿಗಳಿಂದ ಬಿಡಲ್ಪಟ್ಟಾಗ ಪರಬ್ರಹ್ಮನಿಗೆ ಸಮನಾಗುವುದೆ ಜೀವಂತ ನಾಗಿರುವಾಗಲೇ ಜೀವಬ್ರಹ್ಮರ ಸಮತ್ವ, ಏಕತ್ವ, ಸಾಕ್ಷಾತ್ಕಾರಗಳನ್ನು ಹೊಂದುವುದರ ತತ್ವವಾಗಿರುವುದು.

ಈ ಸಂದರ್ಭದಲ್ಲಿ ಶ್ರೀರಾಮಚಂದ್ರನು ಮನುಷ್ಯರೂಪದಲ್ಲಿರುವನೇ ಹೊರತು ಮಹಾ ವಿಷ್ಣುವಾದ ಶ್ರೀಮನ್ನಾರಾಯಣಸ್ವರೂಪನಾಗಿಲ್ಲ. ಆದರೆ ಸೀತಾಗ್ನಿಪ್ರವೇಶದನಂತರ ಸೀತಾದೇವಿಯು ಅಗ್ನಿಯಿಂದ ಪುನಃ ಉದಯವಾಗಿ ಬರುವ ಪರ್ಯಂತರ 'ನೀನೇ ನಾರಾಯಣ'ನೆಂದು ಕರೆಸಿಕೊಂಡಂತೆ ಶುದ್ಧಸತ್ವಪ್ರಧಾನವಾಯೆಯು (ಅಹಂಜ್ಞಾನವು) ಪರಬ್ರಹ್ಮನಲ್ಲಿ ಲೀನವಾಗಿ ಪರಬ್ರಹ್ಮಾಕಾರವಾಗಿರುವುದರಿಂದ ಪ್ರತಿಬಿಂಬಚೈತನ್ಯನು ಪರಬ್ರಹ್ಮನ ತಾದಾತ್ಮ್ಯವನ್ನು ಪಡೆದು ಅವನೇ ಇವನು, ಇವನೇ ಅವನು ಎನಿಸಿಕೊಳ್ಳು ವನು. ಇದೇ ಏಕತ್ವ, ಸಮತ್ವ, ಸಾಕ್ಷಾತ್ಕಾರಗಳ ತತ್ವವಾಗಿರುವುದು. ಆದಕಾರಣ ಶ್ರೀಮನ್ನಾರಾಯಣನೇ ನೀನೆಂಬದಾಗಿ ಶ್ರೀರಾಮಚಂದ್ರನು ಕರೆಸಿಕೊಂಡ ತತ್ವವಾದ ಜೀವನ್ಮುಕ್ತಾವಸ್ಥೆಯಲ್ಲಿ ಬುದ್ಧಿಯು ನಷ್ಟವಾಗದೆ ನದಿಯು ಸಮುದ್ರವನ್ನು ಸೇರುತ್ತಿರು ವಂತೆ ಬುದ್ಧಿವೃತ್ತಿಪ್ರವಾಹವು ಪರಬ್ರಹ್ಮನಲ್ಲಿ ಲಯವಾಗುತ್ತಿರುವುದರಿಂದಲೂ ಪ್ರತಿಬಿಂಬ ಚೈತನ್ಯನೆನಿಸಿಕೊಂಡಿದ್ದರೂ ಉಪಾಧಿಗಳಿಲ್ಲವಾಗಿ ಪರಬ್ರಹ್ಮನ ಸಮತೆಯನ್ನು ಪಡೆಯು ವುದರಿಂದಲೂ ಅದ್ವೈತಸಿದ್ಧಿಯೆನಿಸಿಕೊಳ್ಳುವುದು.

ಉತ್ತರಕಾಂಡದಲ್ಲಿ ಶ್ರೀರಾಮಚಂದ್ರನು ಅವತಾರಪೂರ್ಣಮಾಡಿಕೊಂಡು ಮಹಾ ವಿಷ್ಣುವಾದ ಶ್ರೀಮನ್ನಾರಾಯಣನೇ ಆಗುವನಷ್ಟೆ! ಘಟವೇ ಒಡೆದುಹೋದರೆ ಮಹಾ ಕಾಶವೆನಿಸಿಕೊಳ್ಳುವಂತೆಯೂ, ಪ್ರತಿಫಲನದ ಬೆಳಕಿಗೆ ಕಾರಣವಾದ ರಸಕನ್ನಡಿಯು ನಾಶ ವಾದರೆ ಪ್ರತಿಫಲನಕ್ಕೆ ಅವಕಾಶವಿಲ್ಲದುದರಿಂದ ಸರ್ವವ್ಯಾಪಕವಾದ ಬೆಳಕೊಂದೇ ಇರು ವಂತೆಯೂ ಶ್ರೀರಾಮನು ಅವತಾರಪೂರ್ಣಮಾಡಿಕೊಳ್ಳುವ ತತ್ವವಾದ ವಿದೇಹಕೈವಲ್ಯದಲ್ಲಿ ಬುದ್ಧಿಯೇ ನಾಶವಾಗಿ ಪ್ರತಿಬಿಂಬಚೈತನ್ಯನೆಂಬ ಹೆಸರೂ ಇಲ್ಲದೆ ಅದ್ವಯನಾದ ಸರ್ವ ವ್ಯಾಪಕನಾದ ಪರಬ್ರಹ್ಮನೆನಿಸಿಕೊಳ್ಳುವುದರಿಂದ ವಿದೇಹಕೈವಲ್ಯದಲ್ಲಿ ನಿರ್ವಿಕಲ್ಪಸಮಾಧಿ, ಓಂಕಾರ, ಅದ್ವೈತಸಿದ್ಧಿಗಳೆಂಬ ಹೆಸರೇ ಇರುವುದಿಲ್ಲ. ಆದುದರಿಂದ ಚತುರ್ಮುಖಬ್ರಹ್ಮನು

ಹೇಳಿದ ವಾಕ್ಯಗಳ ತತ್ವಗಳನ್ನನುಸರಿಸಿ ಸೀತಾಗ್ನಿಪ್ರವೇಶವಾದಮೇಲಿರುವ ಶ್ರೀರಾಮನ ಸ್ಥಿತಿಯೇ ಅದ್ವೈತಸಿದ್ಧಿಯಾಗಿರುವುದು. ಮೇಲಿನ ತತ್ವಗಳಿಗೆ ಅನುಸಾರವಾಗಿ ಶ್ರೀಕೃಷ್ಣ ಪರಮಾತ್ಮನು ಉತ್ತರಗೀತೆಯಲ್ಲಿ,

ತತಃ ಪರಂ ತತ್ಪರ ಮೇಶ್ವರಾಖ್ಯಂ ಅದ್ವೈತರೂಪಂ ವಿಮಲಾಂಬರಾಭಂ |
ಅಥೋದಕೇ ತೋಯಮನುಪ್ರವಿಷ್ಟಂ ತಥಾತ್ಮರೂಪೋನಿರುಪಾಧಿಸಂಸ್ಥಿತಂ||

ತಾ|| ಉಪಾಧಿಗಳು ನಿವೃತ್ತಿಯಾಗಲು ಮಹೋದಕದಲ್ಲಿ ಸ್ವಲ್ಪೋದಕವು ಏಕತ್ವವನ್ನು ಹೊಂದುವಂತೆ ಪರಮೇಶ್ವರಸಂಜ್ಞೆಯುಳ್ಳ ನಿರ್ಮಲಾಕಾಶದೋಪಾದಿಯಲ್ಲಿ ಅಸಂಗನಾದ ಅದ್ವೈತರೂಪನಾದ ಪರಬ್ರಹ್ಮನಲ್ಲಿ ಜೀವನು ಏಕತ್ವವನ್ನು ಹೊಂದುವ ಕಾರಣ ನಿರುಪಾಧಿಕ ನಾಗುವನು, ಎಂದು ಹೇಳಿರುವನು.

ಈ ಅದ್ವೈತಸಿದ್ಧಿಯ ಸ್ಥಿತಿಯೂ ಸಕಲಾರಿಷ್ಟ ನಿವೃತ್ತಿಕಾರಣವಾಗಿಯೂ, ಅಮೃತ ಸ್ವರೂಪವಾಗಿಯೂ ಇರುವುದರಿಂದ ಭೂಮವಾಚ್ಯವಾದ ಬ್ರಹ್ಮಾನಂದವಾಗಿರುವುದು. ಈ ತಾತ್ಪರ್ಯಕ್ಕೆ ಶ್ರುತಿಯಲ್ಲಿ,

ಯತ್ರ ನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ | ನಾನ್ಯದ್ವಿಜಾನಾತಿ ಸಭೂಮಾ ||

ತಾ|| ಯಾವ ಬಳಿಯಲ್ಲಿ ಮತ್ತೊಂದು ಕಾಣುವುದಿಲ್ಲವೊ, ಕೇಳಿಸುವುದಿಲ್ಲವೊ, ಅದು ಭೂಮಶಬ್ದವಾಚ್ಯವಾದ ಬ್ರಹ್ಮಾನಂದವಾಗಿರುವುದು. ಎಂದಿರುವುದು.

ಇಂತಹ ಭೂಮಶಬ್ದಾರ್ಥವಾದ ಆನಂದವು ಕೆಡುವುದಿಲ್ಲವೆಂದೂ ಈ ಭೂಮಶಬ್ದ ವಾಚ್ಯವಲ್ಲದ ಇತರ ಅಲ್ಪಶಬ್ದವಾಚ್ಯಗಳು ನಾಶವಾಗುವುವೆಂದೂ ಛಾನ್ದೋಗ್ಯೋಪ ನಿಷತ್ತಿನಲ್ಲಿ,

‘‘ಯೋವೈಭೂಮಾ ತದಮೃತಮಥ ಯದಲ್ಪಂ ತನ್ಮರ್ತ್ಯಂ |

ಎಂಬದಾಗಿ ಹೇಳಿದೆ. ಇದೇ ತಾತ್ಪರ್ಯಕ್ಕೆ ಶ್ರೀವಿದ್ಯಾರಣ್ಯರವರು ವೇದಾಂತಪಂಚ ದಶಿಯಲ್ಲಿ,

ನಿರುಪಾಧಿಬ್ರಹ್ಮತತ್ವೇ ಭಾಸಮಾನೇ ಸ್ವಯಂಪ್ರಭೆ |
ಅದ್ವೈತೆ ತ್ರಿಪುಟೀ ನಾಸ್ತಿ ಬ್ರಹ್ಮಾನಂದೋಥಉಚ್ಯತೇ ||

ತಾ|| ದ್ವೈತರಹಿತವಾದ ಸ್ವಪ್ರಕಾಶವಾದ ಸರ್ವೋಪಾಧಿನಿರ್ಮುಕ್ತವಾದ ಪರಬ್ರಹ್ಮ ಸ್ವರೂಪವು ಬೆಳಗುತ್ತಿರಲಾಗಿ, ಯಾವ ಕಾರಣದಿಂದ ಆ ಅದ್ವೈತಪಾರಮಾರ್ಥಿಕ ವಸ್ತುವಿ ನಲ್ಲಿಜ್ಞಾತೃ, ಜ್ಞಾನ, ಜ್ಞೇಯರೂಪವಾದ ತ್ರಿಪುಟಿಗೆ ಕೋರಿಕೆ ಇಲ್ಲವೊ ಆ ಕಾರಣದಿಂದ ಸರ್ವೋತ್ಕೃಷ್ಟವಾದ ಭೂಮಾನಂದವೆಂದು ಹೇಳಲ್ಪಡುವುದು ಎಂಬದಾಗಿ ಹೇಳಿರುವರು.

ತೈತ್ತಿರೀಯೋಪನಿಷತ್ತಿನಲ್ಲಿಯೂ ಬ್ರಹ್ಮಾನಂದವು ಮನುಷ್ಯನಿಗೆ ಉಂಟಾಗುವ ಆನಂದಕ್ಕಿಂತಲೂ ೧೦೦, ೦೦೦, ೦೦೦, ೦೦೦, ೦೦೦, ೦೦೦ ೦೦೦, ಇಷ್ಟುಪಾಲು ಹೆಚ್ಚಿನದೆಂದು "ಸ ಏಕೋ ಮಾನುಷ ಆನನ್ದಃ" ಮೊದಲುಗೊಂಡು "ಸ ಏಕೋ ಬ್ರಹ್ಮಣ ಆನನ್ದಃ" ಎಂಬ ತಾರತಮ್ಯವನ್ನು ಹೇಳಿರುತ್ತದೆ. ಅಲ್ಲದೆ,

ಯತೋ ವಾಚೋ ನಿವರ್ತನ್ತೇ ಅಪ್ರಾಪ್ಯ ಮನಸಾಸಹ |
ಆನಂದ್ಗಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನೇತಿ ||

ಎಂಬದಾಗಿ ಹೇಳಿರುತ್ತದೆ.

ಇಂತಹ ಭೂಮಾನಂದಸ್ವರೂಪವಾದ ಪರಬ್ರಹ್ಮಸ್ವರೂಪವನ್ನು ಈ ವಿಧವಾಗಿರುವುದೆಂದು ಹೇಳಲು ಯಾರಿಗೂ ಸಾಧ್ಯವಿಲ್ಲ. ನಿದ್ರೆಯ ಸ್ವರೂಪವನ್ನೇ ತಿಳಿಯಹೇಳಲು ಸಾಧ್ಯವಿಲ್ಲದಿರುವಾಗ ಪರಬ್ರಹ್ಮಸ್ವರೂಪವನ್ನು ತಿಳಿಯಹೇಳಲು ಸಾಧ್ಯವೇ? ಈ ತತ್ವಪ್ರತಿಪಾದನೆಯ ಸೂಚನೆಗೋಸ್ಕರವೇ ಚತುರ್ಮುಖಬ್ರಹ್ಮನು ಶ್ರೀರಾಮನನ್ನು ಕುರಿತು "ಎಲೈ ಶ್ರೀರಾಮನೆ! ನೀನು ಅದ್ವಯನು, ನೀನು ಯಾರೆಂಬುದನ್ನು ಯಾರೂ ತಿಳಿಯಲಾರರು." ಎಂಬದಾಗಿ ಹೇಳಿರುತ್ತಾನೆ. ಚತುರ್ಮುಖಬ್ರಹ್ಮನು ಹೇಳಿದ ವಾಕ್ಯಕ್ಕೆ ಅನುಸಾರವಾಗಿ ಕೇನೋಪನಿಷತ್ತಿನಲ್ಲಿ,

ಯಸ್ಯಾಮತಂ ತಸ್ಯ ಮತಂ ಮತಂ ಯಸ್ಯ ನವೇದ ಸಃ |
ಅವಿಜ್ಞಾತಂ ವಿಜಾನತಾಂ ವಿಜ್ಞಾತಮವಿಜಾನತಾಂ ||

ತಾ|| ಯಾವನು ಬ್ರಹ್ಮಸ್ವರೂಪವು ತಿಳಿಯಲಾರದೆಂದು ಭಾವಿಸುತ್ತಾನೋ ಅವನೇ ಅದನ್ನು ಚೆನ್ನಾಗಿ ತಿಳಿದವನು. ಯಾವನು ತಿಳಿದಂತೆ ಭಾವಿಸುವನೊ ಅವನು ಬ್ರಹ್ಮವನ್ನು ತಿಳಿದವನಲ್ಲ, ಎಂದು ಹೇಳಿರುವುದು.

ಅಂದರೆ ತಿಳಿಯುವುದೆಲ್ಲಾ ಇಂದ್ರಿಯಗೋಚರವು. ಬ್ರಹ್ಮವು ಇಂದ್ರಿಯಗೋಚರವಲ್ಲದ ಸ್ವರೂಪವಾಗಿರುವುದರಿಂದ ಬುದ್ಧಿವೃತ್ತಿಯು ಪರಮಾತ್ಮನನ್ನು ತಿಳಿಯಲುಹೋದಾಗ ನೀರಿನಲ್ಲಿ ಉಪ್ಪುಸೇರಿದಂತೆ ಬುದ್ಧಿವೃತ್ತಿಯು ಆತ್ಮಸ್ವರೂಪವೇ ಆಗುವುದರಿಂದ ಪರಬ್ರಹ್ಮನನ್ನು ತಿಳಿಯಲು ಆಗುವದಿಲ್ಲ. ನಿದ್ರೆಯನ್ನು ತಿಳಿಯಲು ಸಾಧ್ಯವಿಲ್ಲದೆ ನಿದ್ರೆಯಿಂದೆಚ್ಚೆತ್ತ ಮೇಲೆ ಸುಖವಾಗಿ ನಿದ್ರೆಬಂತೆಂದು ಹೇಗೆ ಹೇಳುವೆವೋ ಹಾಗೆ ಆತ್ಮಸಾಕ್ಷಾತ್ಕಾರವೆಂದರೆ ಅದ್ವೈತಸಿದ್ಧಿಸ್ವರೂಪವಾದ ಸಮಾಧಿಯಿಂದ ಬಹಿರ್ಮುಖವಾದನಂತರ ಲಭಿಸುವ ಬ್ರಹ್ಮಾನಂದಾನುಭವವನ್ನು ಶ್ರೀಶಂಕರಭಗವತ್ಪಾದಾಚಾರ್ಯರವರು ಹೇಗೆ ಹೇಳಿರುವರೆಂದರೆ, ವಿವೇಕಚೂಡಾಮಣಿಯಲ್ಲಿ,

ಬುದ್ಧಿ ರ್ವಿನಷ್ಟಾ ಗಳಿತಾ ಪ್ರವೃತ್ತಿ ರ್ಬ್ರಹ್ಮಾತ್ಮನೋರೇಕತಯಾಧಿಗತ್ಯಾ ।
ಇದಂ ನಜಾನೇಪ್ಯನಿದಂ ನಜಾನೆ ಕಿಂವಾ ಕಿಯದ್ವಾ ಸುಖಮಸ್ತ್ಯ ಪಾರಂ ॥

ತಾ|| ಜೀವಬ್ರಹ್ಮರ ಏಕತ್ವದಿಂದ ಬುದ್ಧಿವೃತ್ತಿಯು ವಿಶೇಷವಾಗಿ ನಷ್ಟವಾಯಿತು. ವಿಷಯಗಳಲ್ಲಿ ಪ್ರವೇಶವು ನಷ್ಟವಾಯಿತು. ಇದು ಎಂತಲೂ ತಿಳಿಯದು. ಇದು ಅಲ್ಲ ವೆಂತಲೂ ತಿಳಿಯದು. ಬ್ರಹ್ಮಾನಂದದ ಸುಖವನ್ನು ಏನೆಂದು ಹೇಳಲಿ? ಇದರ ಸುಖವು ಅಪಾರವಾದದು, ಎಂತಲೂ,

ವಾಚಾ ವಕ್ತು ಮಶಕ್ಯಮೇವ ಮನಸಾ ಮನ್ತುಂ ನವಾಶಕ್ಯತೆ ।
ಸ್ವಾನನ್ದಾಮೃತಪೂರಪೂರಿತಪರಬ್ರಹ್ಮಾಂಬುಧೇ ರ್ವೈಭವಂ ॥
ಅಂಭೋರಾಶಿವಿಶೀರ್ಣವಾರ್ಷಿಕಶಿಲಾಭಾವಂ ಭಜ ನ್ಮೇ ಮನೋ
ಯಸ್ಯಾಂಶಾಂಶಲವೆ ವಿಲೀನಮಧುನಾ ನನ್ದಾತ್ಮನಾ ನಿರ್ವೃತಿಂ ॥

ತಾ|| ಸ್ವಕೀಯವಾದ ಆನಂದವೆಂಬ ಅಮೃತಪ್ರವಾಹದಿಂದ ಪರಿಪೂರ್ಣವಾದ ಪರ ಬ್ರಹ್ಮವೆಂಬ ಸಮುದ್ರದ ವೈಭವವು ವಾಕ್ಕಿನಿಂದ ಹೇಳಲು ಅಶಕ್ಯವಾದದ್ದು. ಮನಸ್ಸಿನಿಂದ ಊಹಿಸಲೂ ಅಸಾಧ್ಯವಾದದ್ದು. ಮಳೆಗಾಲದಲ್ಲಿ ಬೀಳುವ ಆನೆಕಲ್ಲು ಸಮುದ್ರದಲ್ಲಿ ಬಿದ್ದು ಕರಗಿಹೋಗುವಂತೆ ಆ ಬ್ರಹ್ಮಾನಂದಸಮುದ್ರದ ಅಂಶಾಂಶದಲ್ಲಿ ನನ್ನ ಬುದ್ಧಿವೃತ್ತಿಯು ಲೀನವಾಗಿ ಆನಂದಸ್ವರೂಪದಿಂದ ಸುಖಪಟ್ಟಿತು. ಎಂತಲೂ,

ಕ್ವಗತಂ ಕೇನವಾ ನೀತಂ ಕುತ್ರ ಲೀನಮಿದಂ ಜಗತ್ ।
ಅಧುನೈವ ಮಯಾ ದೃಷ್ಟಂ ನಾಸ್ತಿ ಕಿಂ ಮಹದದ್ಭುತಂ ॥

ತಾ|| ಈ ಜಗತ್ತು ಎಲ್ಲಿಹೋಯಿತು ? ಯಾರು ತೆಗೆದುಕೊಂಡು ಹೋದರು ? ಎಲ್ಲಿ ಅಣಗಿಹೋಯಿತು? ಈಗತಾನೇ ನೋಡಲ್ಪಟ್ಟದ್ದು ಇಲ್ಲವಾಗಿದೆ? ಮಹದಾಶ್ಚರ್ಯವಾಗಿದೆ ಎಂಬದಾಗಿಯೂ ಹೇಳಿರುವರು.

ಶ್ರೀಶಂಕರಭಗವತ್ಪಾದಾಚಾರ್ಯರವರು, ನಾನು ಗುರುವಲ್ಲ, ಶಿಷ್ಯನಲ್ಲ, ತಂದೆಯಲ್ಲ, ತಾಯಲ್ಲ. ಕೇವಲ ಚಿದ್ರೂಪನಾದ ಪರಮಾತ್ಮ ನಾನು ಎಂಬದಾಗಿ "ಶಿವೋಹಂ ಶಿವೋಹಂ" ಎಂಬದಾಗಿ ಪ್ರಾರ್ಥನಾ ಶ್ಲೋಕಗಳನ್ನು ಮಾಡಿರುವುದು ಈ ಸೋಪಾನಕ್ಕೆ ಬಂದವರ ಸ್ಥಿತಿ ಯಾಗಿರುವುದೇ ಹೊರತು ಬಹಿರ್ಮುಖವಾಗಿದ್ದಾಗ ನಾಸ್ತಿಕರಾಗಿರಬೇಕೆಂಬ ತಾತ್ಪರ್ಯದಿಂದ ಎಂದಿಗೂ ಅಲ್ಲ. ಈ ಸೋಪಾನಕ್ಕೆ ಬಂದವರೇ ಜ್ಞಾನಿಗಳು. ಈ ಸೋಪಾನಕ್ಕೆ ಬಂದ ವರೇ ಪರಮಾತ್ಮಸ್ವರೂಪರಾದ ಶ್ರೀರಾಮ, ಶ್ರೀಕೃಷ್ಣ, ಶ್ರೀಶಂಕರರಾಗಿರುವರು. ಶ್ರೀಕೃಷ್ಣ ಪರಮಾತ್ಮನು ಜ್ಞಾನಿಯು ನಾನೇ ಎಂಬದಾಗಿ ಭಗವದ್ಗೀತೆ ೭ನೆಯ ಅಧ್ಯಾಯದಲ್ಲಿ,

ಉದಾರಾಃ ಸರ್ವಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಮ್ ।
ಆಸ್ಥಿತಃ ಸಹಿ ಯುಕ್ತಾತ್ಮಾ ಮಾಮೇವಾ ನುತ್ತಮಾಂ ಗತಿಮ್ ॥

ತಾ॥ ವ್ಯಾಧಿಗ್ರಸ್ತರೂ, ವಿಚಾರಪರರೂ, ಕಾಮ್ಯಾರಾಧಕರೂ ಎಲ್ಲರೂ ಪ್ರಿಯರೆ. ಅವರೆಲ್ಲರಿಗಿಂತಲೂ ಜ್ಞಾನಿಯು ಸರ್ವಶ್ರೇಷ್ಠನು. ಜ್ಞಾನಿಯು ನಾನೇ. ಕಾರಣ ವೇನೆಂದರೆ ನನ್ನನ್ನು ಸಾಕ್ಷಾತ್ಕರಿಸಿಕೊಂಡಿರುವನು.

ಎಂದು ಹೇಳಿರುವುದರಿಂದ ಈ ಸೋಪಾನದಲ್ಲಿರುವವನೇ ಶ್ರೀಕೃಷ್ಣಪರಮಾತ್ಮನು. ಅಲ್ಲದೆ ಈ ಸೋಪಾನದಲ್ಲಿರುವವನೇ ಶ್ರೀಶಂಕರನು. ಈ ಅದ್ವೈತಸಿದ್ಧಿಸ್ವರೂಪವಾದ ಸಮಾಧಿಸ್ಥಿತಿಗೆ ಚಿನ್ಮುದ್ರೆಯೆಂಬ ಹೆಸರು. ಈ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ದಕ್ಷಿಣಾಮೂರ್ತಿ ಪ್ರಾರ್ಥನೆಯಲ್ಲಿ,

ಚಿತ್ರಂ ವಟತರೋರ್ಮೂಲೇ ವೃದ್ಧಾ ಶ್ಶಿಷ್ಯಾ ಗುರು ರ್ಯುವಾ ।
ಗುರೋಸ್ತು ಮೌನಂ ವ್ಯಾಖ್ಯಾನಂ ಶಿಷ್ಯಾಸ್ತು ಚ್ಛಿನ್ನಸಂಶಯಾಃ ॥

ತಾ॥ ಆಲದಮರದ ಬುಡದಲ್ಲಿ ಗುರುಶಿಷ್ಯರು ಸೇರಿದಾರೆ. ಗುರುವು ತರುಣನು ಶಿಷ್ಯರೆಲ್ಲರೂ ವಯಸ್ಸಾದವರು. ಗುರುವಿನ ಮೌನವೇ ವ್ಯಾಖ್ಯಾನವಾಗಿರುವುದು. ಅದ ರಿಂದಲೇ ಶಿಷ್ಯರ ಸಂಶಯಗಳೆಲ್ಲವೂ ನಿವೃತ್ತಿಯಾಗಿರುವುವು! ಆಶ್ಚರ್ಯವು. ಎಂದೂ,

ಮೌನಂ ವ್ಯಾಖ್ಯಾ ಪ್ರಕಟಿತಪರಬ್ರಹ್ಮತತ್ತ್ವಂ ಯುವಾನಂ ।
ವರ್ಷಿಷ್ಠಾಂತೇವಸದೃಷಿಗಣೈ ರಾವೃತಂ ಬ್ರಹ್ಮನಿಷ್ಠೈಃ ॥
ಆಚಾರ್ಯೇಂದ್ರಂ ಕರಕಲಿತಚಿನ್ಮುದ್ರಮಾನಂದರೂಪಂ ।
ಸ್ವಾತ್ಮಾರಾಮಂ ಮುದಿತವದನಂ ದಕ್ಷಿಣಾಮೂರ್ತಿಮೀಳೇ ॥

ತಾ॥ ಪರಬ್ರಹ್ಮತತ್ವವನ್ನು ಮೌನವ್ಯಾಖ್ಯಾನದಿಂದ ಪ್ರಕಟಿಸುವವನಾಗಿ, ತರುಣ ನಾಗಿ, ಬ್ರಹ್ಮನಿಷ್ಠರೂ ವೃದ್ಧರೂ ಆದ ಋಷಿಗಣಗಳಿಂದ ಸೇವಿತನಾಗಿ, ತನ್ನ (ಪರಬ್ರಹ್ಮ) ಸ್ಥಿತಿಯನ್ನು ಹೊಂದಿದವನಾದ, ಆನಂದಮೂರ್ತಿಯಾದ, ತಾನೇ ತಾನಾದ, ಪ್ರಸನ್ನ ವದನನಾದ, ಆಚಾರ್ಯೇಂದ್ರನಾದ ಶ್ರೀದಕ್ಷಿಣಾಮೂರ್ತಿಯನ್ನು ನಾನು ಸ್ತುತಿಸುತ್ತೇನೆ.

ಎಂಬದಾಗಿ ಹೇಳಿರುವುದರಿಂದ ಈ ಸೋಪಾನದಲ್ಲಿರುವವನೇ ಪರಬ್ರಹ್ಮಸ್ವರೂಪ ನಾದ ಶಂಕರನು. ಶಂಕರನು ದಕ್ಷಿಣಾಮೂರ್ತ್ಯವತಾರಮಾಡಿ ಹೇಗೆ ಸ್ವಸ್ವರೂಪವಾದ ಸಮಾಧಿಯಲ್ಲಿದ್ದನೋ ಹಾಗೆ, ಶ್ರೀರಾಮಚಂದ್ರನು ಕೂಡ ಸಮಾಧಿಸ್ಥಿತಿಯಲ್ಲಿದ್ದು ಬಹಿ ರ್ಮುಖನಾಗಿ ಹನುಮಂತನಿಗೆ ಆತ್ಮೋಪದೇಶಮಾಡಿದನೆಂದು ಮುಕ್ತಿಕೋಪನಿಷತ್ತಿನಲ್ಲಿ,

ಅಯೋಧ್ಯಾನಗರೇ ರಮ್ಯೇ ರತ್ನಮಂಟಪಮಧ್ಯಮೇ |
ಧೀವಿಕ್ರಿಯಾಸಹಸ್ರಾಣಾಂ ಸಾಕ್ಷಿಣಂ ನಿರ್ವಿಕಾರಿಣಂ |
ಸ್ವರೂಪಧ್ಯಾನ ನಿರತಂ ಸಮಾಧಿವಿರಮೇ ಹರಿಂ ||

ತಾ|| ರಮ್ಯವಾದ ಅಯ್ಯೋಧ್ಯಾನಗರದಲ್ಲಿ ರತ್ನಮಂಟಪಮಧ್ಯದಲ್ಲಿ, ಅಸಂಖ್ಯಾತವಾದ ಬುದ್ಧಿಯವ್ಯಾಪಾರಗಳಿಗೆ ಸಾಕ್ಷಿಯಾಗಿ ನಿರ್ವಿಕಾರನಾಗಿ ಪರಬ್ರಹ್ಮಸ್ಥಿಯಲ್ಲಿ ನಿರತನಾಗಿದ್ದು ಸಮಾಧಿಯಿಂದ ಬಹಿರ್ಮುಖನಾದ ಶ್ರೀರಾಮನನ್ನು ಹನುಮಂತನು ಕೇಳಿಕೊಂಡನು. ಆದುದರಿಂದ ಈ ಸೋಪಾನದಲ್ಲಿರುವ ಅಧಿಕಾರಿಯು ಶ್ರೀಕೃಷ್ಣ, ಶ್ರೀರಾಮ, ಶ್ರೀಶಂಕರರ ತತ್ವವಾದ ಪರಬ್ರಹ್ಮನ ಸ್ಥಿತಿಯಲ್ಲಿಯೇ ಇರುವುದರಿಂದ ಅವನೇ ಇವನಾಗಿರುವನು. ಈತತ್ವಕ್ಕೆ ರಾಮರಹಸ್ಯೋಪನಿಷತ್ತಿನಲ್ಲಿ,

ಓಂ ತತ್ಸ ದ್ಯತ್ಪರಂ ಬ್ರಹ್ಮ ರಾಮಚಂದ್ರ ಶ್ಚಿದಾತ್ಮಕ ಸ್ಸೋಽಹಂ |

ತಾ|| ಓಂ ಎಂಬುದೇ ಸತ್ಯ. ಚಿದಾತ್ಮಕನಾದ ಪರಬ್ರಹ್ಮನೆನಿಸುವ ಶ್ರೀರಾಮಚಂದ್ರನೇ ನಾನು. ಎಂಬದಾಗಿ ಹೇಳಿರುವುದು. ಈ ಮೇಲಿನ ತತ್ವಾರ್ಥಗಳಿಂದ ಸೀತಾಗ್ನಿ ಪ್ರವೇಶವಾದಮೇಲೆ ಇರುವ ಶ್ರೀರಾಮನ ಸ್ಥಿತಿಯ ತತ್ವವೇ ಅದ್ವೈತಸಿದ್ಧಿಯಾಗಿರುವುದು. ಶ್ರೀರಾಮಚಂದ್ರನು, ಶ್ರೀರಾಮಚಂದ್ರನೆಂಬ ಹೆಸರಿನಿಂದಿದ್ದರೂ ಶ್ರೀಮನ್ನಾರಾಯಣನೆಂಬ ಹೆಸರಿನಿಂದಿದ್ದರೂ ಅದ್ವಯಸ್ವರೂಪನೇ ಆಗಿರುವಂತೆ ಪರಬ್ರಹ್ಮಚೈತನ್ಯವೇ ಜೀವಚೈತನ್ಯವಾಗಿ ಚೈತನ್ಯದಲ್ಲಿ ಭೇದವಿಲ್ಲದಿರುವುದರಿಂದ ಅದ್ವೈತವೇ ಸತ್ಯವಾದುದು. ಹೀಗೆ ಶ್ರೀರಾಮಚಂದ್ರನು ಅದ್ವಿತೀಯನೆನ್ನುವುದಕ್ಕೆ ರಾಮತಾಪಿನ್ಯುಪನಿಷತ್ತಿನಲ್ಲಿ,

ಓಂ ಯೋಽಹವೈ ಶ್ರೀರಾಮಚಂದ್ರ ಸ್ಸಭಗವಾನ ದ್ವೈತಪರಮಾನಂದಆತ್ಮಾಯ
ಸ್ಸಚ್ಚಿದಾನಂದಾದ್ವೈತೈಕಚಿದಾತ್ಮಾ ಭೂರ್ಭುವಸ್ಸುವಸ್ತಸ್ಮೈವೈನಮೋನಮಃ

ತಾ|| ಓಂಕಾರವೇ ಶ್ರೀರಾಮಚಂದ್ರನು, ಭಗವಂತನು, ಅದ್ವಿತೀಯನು, ಪರಮಾನಂದಸ್ವರೂಪಿಯಾದ ಆತ್ಮನು, ಸಚ್ಚಿದಾನಂದರೂಪನು, ಸಮವಿಲ್ಲದ ಒಬ್ಬನಾದ ಚಿದಾತ್ಮನು ತ್ರಿಲೋಕ ಅಥವಾ ತ್ರಿಮಾತ್ರಾಸ್ವರೂಪನು ಅಂತಹ ಪರಬ್ರಹ್ಮನಿಗೆ ದೀರ್ಘದಂಡಪ್ರಣಾಮಗಳು, ಎಂದು ಹೇಳಿರುವುದು.

ಆದುದರಿಂದ ಶ್ರೀರಾಮಚಂದ್ರಸ್ವಾಮಿಯು ಇಂತಹ ಅದ್ವಿತೀಯನಾಗಿ ಪರಮಾನಂದಸ್ವರೂಪನಾಗಿ ಇರುವುದರಿಂದಲೇ ಸಗುಣಮೂರ್ತಿಯಾಗಿ ಇವನನ್ನು ಪೂಜಿಸಬೇಕು ನಿರ್ಗುಣನಾಗಿರುವುದರಿಂದ ಇವನನ್ನು ಹೊಂದಬೇಕು. ಹೀಗೆ ಶ್ರೀರಾಮಚಂದ್ರನು ಅದ್ವಿತೀಯನಾಗಿರುವುದರಿಂದಲೇ ಇವನ ವಾಕ್ಕು, ಇವನ ನಡೆವಳಿಕೆ ಮತ್ತು ಇವನ ಚರಿತ್ರೆಯೆಲ್ಲಾ ಅದ್ವೈತಶಾಸ್ತ್ರವೇ ಆಗಿರುವುದು. ಅದ್ವೈತಸಿದ್ಧಿಯನ್ನು ಪಡೆಯಲು

ಮಾಡುವ ಕಾರ್ಯಕ್ರಮಗಳೆಲ್ಲಾ ಅದ್ವೈತಶಾಸ್ತ್ರವಾಗಿರುವುದು. ಜೀವಬ್ರಹ್ಮಸಾಕ್ಷಾತ್ಕಾರವುಂಟಾಗುವ ಈ ಪ್ರಕರಣದ ಶಾಸ್ತ್ರಮಟ್ಟಿಗೆ ಅದ್ವೈತಶಾಸ್ತ್ರವೆಂದು ತಿಳಿದುಕೊಳ್ಳಬಾರದು. ಶ್ರೀರಾಮನು ಅವತಾರವಮಾಡಿ ರಾವಣಾದಿಗಳನ್ನು ನಿಗ್ರಹಿಸಲು ಮಾಡಿರುವ ಪ್ರತಿಯೊಂದು ಕಾರ್ಯಕ್ರಮಗಳ ತತ್ವಗಳೆಲ್ಲಾ ಅದ್ವೈತಶಾಸ್ತ್ರವಾಗಿರುವುದು. ಅದ್ವೈತಸಿದ್ಧಿಯನ್ನು ಕ್ರಮಸೋಪಾನದಿಂದಲೇ ಪಡೆಯಬೇಕು. ಶ್ರೀರಾಮಚಂದ್ರನ ಚರಿತ್ರೆಯ ತತ್ವದಲ್ಲಿ ಪರೋಕ್ಷಜ್ಞಾನ ಅಪರೋಕ್ಷಜ್ಞಾನಗಳೆರಡರ ವಿಚಾರವೂ ಬರುವಂತೆ ಅದ್ವೈತಶಾಸ್ತ್ರದಲ್ಲಿಯೂ ಇವೆರಡರ ವಿಚಾರವೂ ಬರುವುದು. ಪರೋಕ್ಷಜ್ಞಾನದ ಸಾಧನೆಗಳಲ್ಲಿ ಪೂಜ್ಯ ಪೂಜಕ ಭಾವವಾದ ಈಶ್ವರಾರಾಧನ ಮತ್ತು ಸದಾಚಾರಗಳನ್ನೆಲ್ಲಾ ಒಳಗೊಂಡಿರುವುದರ ತತ್ವವೂ ಶ್ರೀರಾಮಚರಿತ್ರೆಯ ತತ್ವದಲ್ಲಿರುವುದರಿಂದ ಅದ್ವೈತಶಾಸ್ತ್ರವು ಇದನ್ನೆಲ್ಲಾ ಒಳಗೊಂಡಿರುವುದು. ಶ್ರೀರಾಮಚರಿತ್ರೆಯು ಶ್ರವಣ, ಮನನ, ನಿದಿಧ್ಯಾಸ, ಸಮಾಧಿಗಳ ತತ್ವಗಳನ್ನೆಲ್ಲ ಹೇಗೆ ಒಳಗೊಂಡಿರುವುದೋ ಹಾಗೆ ಅದ್ವೈತಶಾಸ್ತ್ರದಲ್ಲ ಬಾಹ್ಯದಲ್ಲಿ ಮಾಡಬೇಕಾದ ಕರ್ತವ್ಯಗಳೂ ಅಂತರ್ಮುಖದ ಮಾರ್ಗದ ಅನುಷ್ಠಾನಕ್ರಮಗಳೂ ಇರುವುವು. ಶ್ರೀರಾಮಚಂದ್ರನು ಯುದ್ಧಮಾಡಿಯೇ ರಾವಣಾದಿಗಳನ್ನು ಹೇಗೆ ನಿಗ್ರಹವಮಾಡಿದನೋ ಹಾಗೆ ಅಹಂಬ್ರಹ್ಮಾಸ್ಮಿ ಎಂಬ ಜ್ಞಾನದೊಡನೆ ಸಮಾಧಿಯ ಅನುಷ್ಠಾನದಿಂದಲೇ ಭ್ರಾಂತಿ ಅಥವಾ ದ್ವೈತವು ನಿವಾರಣೆಯಾಗಬೇಕು. ಶ್ರವಣ ಮನನ ಸೋಪಾನಗಳಲ್ಲಿಂಯೇ ಕೊನೆಗಾಣುವುದಿಲ್ಲ. ಶ್ರವಣ ಮನನ ಸೋಪಾನಗಳೊಡನೆ ನಿದಿಧ್ಯಾಸ ಸಮಾಧಿಗಳ ವಿಚಾರಗಳ ವಿವರಣೆಯನ್ನು ಉಪನಿಷತ್ತುಗಳ ಸಾರಕ್ಕೆ ಅನುಸಾರವಾಗಿಯೂ ಈ ತತ್ವಾರ್ಥರಾಮಾಯಣದಲ್ಲಿ ಅನ್ವಯಿಸಿರುವ ಶ್ರೀಕೃಷ್ಣಪರಮಾತ್ಮನ ಮತ್ತು ಶ್ರೀಶಂಕರಭಗವತ್ಪಾದರವರ ವಾಕ್ಯಗಳಿಗೆ ಅನುಸಾರವಾಗಿಯೂ ಇರುವ ಸಿದ್ಧಾಂತಗಳನ್ನೇ ಪರಿಗಣನೆಮಾಡಬೇಕು. ಸಮಾಧಿತತ್ವವು ತರ್ಕದಿಂದಾಗಲಿ, ವಾಗಾಡಂಬರದಿಂದಾಗಲಿ, ಮನಸ್ಸು ಬಂದಂತೆ ಸಿದ್ಧಾಂತವಮಾಡುವುದರಿಂದಾಗಲಿ ದೊರೆಯುವುದಿಲ್ಲ. ರಾವಣನು ಸಾಧಾರಣನಲ್ಲದಿರುವಂತೆ ಭ್ರಾಂತಿ ಅಥವಾ ಅಜ್ಞಾನವು ಸಾಧಾರಣವಾದುದಲ್ಲ. ಶ್ರೀರಾಮನು ರಣಧೀರನೆನಿಸಿಕೊಂಡಂತೆ ಅವಿದ್ಯೆಯನ್ನು ನಿಗ್ರಹಿಸುವ ರಣಧೀರತೆಯನ್ನುಂಟುಮಾಡುವುದೇ ಅದ್ವೈತಶಾಸ್ತ್ರವು.

ಮುಖ್ಯವಾಗಿ ಚತುರ್ಮುಖಬ್ರಹ್ಮನು ಎಲೈ ಶ್ರೀರಾಮನೆ! ನೀನೇ ಶ್ರೀಮನ್ನಾರಾಯಣನು, ನಿರ್ಗುಣನು, ಓಂಕಾರನು, ಇದು ನನ್ನ ಸತ್ಯವಾದ ನುಡಿ ಎಂಬದಾಗಿ ಹೇಳಿರುವುದಕ್ಕೆ ಸರಿಯಾಗಿ ದೃಢವಾಗಿ ಹೇಳುವ ಅನೇಕ ಶ್ರುತಿಗಳ ಶ್ರೀಶಂಕರಭಗವತ್ಪಾದರವರ ಮತ್ತು ಶ್ರೀಕೃಷ್ಣಪರಮಾತ್ಮನ ವಾಕ್ಯಗಳೊಡನೆ ಏಕವಾಚಕವಾಗಿರುವ ನಿರ್ವಿಕಲ್ಪಸಮಾಧಿ, ಓಂಕಾರ, ಪ್ರಕೃತಿಲಯ, ರಾಜಯೋಗ, ಅದ್ವೈತಸಿದ್ಧಿಗಳ ವಿಚಾರಗಳಿಂದ ಆತ್ಮಸಾಕ್ಷಾತ್ಕಾರದ ತತ್ವವನ್ನು ವಿವರಣೆಮಾಡಿತು. ಚತುರ್ಮುಖಬ್ರಹ್ಮನ ಸತ್ಯವಾದ ನುಡಿಯೆಂದರೆ—ಪುನರುಕ್ತಿ

ಯಿಂದಲೂ ಜೀವನೇ ಬ್ರಹ್ಮನೆನ್ನುವುದು ಅನೃತವಲ್ಲ. ನಿಶ್ಚಯ, ನಿಶ್ಚಯ, ನಿಶ್ಚಯ ವೆಂಬ ತತ್ವವನ್ನು ಖಂಡಿತವಾಗಿಯೂ ಸೂಚಿಸುವುದು. ಬ್ರಹ್ಮನ ಸತ್ಯವಾದ ನುಡಿಗನು ಸಾರವಾಗಿ ಅಮೃತಬಿಂದೂಪನಿಷತ್ತಿನಲ್ಲಿಯೂ,

ತದೇವಂ ನಿಷ್ಕಳಂ ಬ್ರಹ್ಮ ನಿರ್ವಿಕಲ್ಪಂ ನಿರಂಜನಂ |
ತದ್ಬ್ರಹ್ಮಾಹಮಿತಿ ಜ್ಞಾತ್ವಾ ಬ್ರಹ್ಮ ಸಂಪದ್ಯತೆ ಧ್ರುವಂ ||

**ತಾ||** ಪರಬ್ರಹ್ಮವು ಕಳಾರಹಿತವಾದದ್ದು, ವಿಕಲ್ಪರಹಿತವಾದದ್ದು, ಆವರಣ ರಹಿತ ವಾದದ್ದು, ಆ ಬ್ರಹ್ಮವೇ ನಾನೆಂಬದಾಗಿ ತಿಳಿದವನಾದರೆ ಬ್ರಹ್ಮನೇ ಆಗುವುದು ನಿಶ್ಚಯವು, ಎಂದೂ, ತೇಜೋಬಿಂದೂಪನಿಷತ್ತಿನಲ್ಲಿ,

ತ್ವಮೇವ ಸರ್ವಭಾವೋಸಿ ತ್ವಂ ಬ್ರಹ್ಮಾಸಿ ನ ಸಂಶಯಃ |

ಎಂಬದಾಗಿ ಹೇಳಿರುವುದರಿಂದ ಬ್ರಹ್ಮನ ಸತ್ಯವಾದ ವಾಕ್ಕಿನ ತತ್ವಕ್ಕೆ ಅನುಸಾರವಾಗಿ ಸೀತಾಗ್ನಿಪ್ರವೇಶವಾದಮೇಲಿನ ಶ್ರೀರಾಮನಸ್ಥಿತಿಯೇ ಆತ್ಮಸಾಕ್ಷಾತ್ಕಾರದ ತತ್ವವಾಗಿದೆ.

**ರಾ||** ಚತುರ್ಮುಖಬ್ರಹ್ಮನು ಶ್ರೀರಾಮನೊಡನೆ ಎಲೈ! ಶ್ರೀರಾಮನೆ! ಪರಮಪುರುಷ ನಾದ ನಿನ್ನಲ್ಲಿ ಯಾರು ಭಕ್ತಿಯುಳ್ಳವರಾಗುವರೋ ಮತ್ತು ಸೀತಾಗ್ನಿಪ್ರವೇಶವಾದಮೇಲೆ ನಾನು ಮಾಡಿರುವ ಈ ಪುರಾತನ ಸ್ತೋತ್ರವನ್ನು ಯಾರು ನಿರಂತರವೂ ಪಠಿಸುವರೋ ಅವರ ಪ್ರಯತ್ನವು ನಿಷ್ಫಲವಾಗುವುದಿಲ್ಲವೆಂದು ಹೇಳಿದನು.

**ತತ್ವ||** ಶ್ರೀರಾಮನೇ ಪರಬ್ರಹ್ಮಸ್ವರೂಪನೆಂದು ಯಾರು ಭಕ್ತಿಯಿಂದ ಪೂಜಿಸುವರೋ, ಅವನನ್ನು ಯಾರು ಧ್ಯಾನಮಾಡುವರೋ, ಈ ತತ್ವಾರ್ಥರಾಮಾಯಣವು ಪರಮಪುರುಷ ನಾದ ಶ್ರೀರಾಮಚಂದ್ರನ ಲೀಲಾವತಾರದ ವಿಭೂತಿಯು ತತ್ವವೆಂದು ಪರಿಗಣಿಸಿ ಭಕ್ತಿಯಿಂದ ಈ ತತ್ವಗಳಲ್ಲಿ ಯಾರು ಮಗ್ನರಾಗುವರೋ, ಸೀತಾಗ್ನಿಪ್ರವೇಶದ ತತ್ವವಾದ ಆತ್ಮಸಾಕ್ಷಾತ್ಕಾರದ ಭಾವವನ್ನು ಕೃತಕೃತ್ಯರಾಗಲು ಅನವರತವೂ ಯಾರು ಮನನಮಾಡುವರೋ ಅವರಿಗೆ ಆತ್ಮಲಾಭವಾಗುವುದೆಂಬುದನ್ನು ಪ್ರತಿಪಾದಿಸುವುದು. ಪರಮಾತ್ಮನಲ್ಲಿ ಭಕ್ತಿಯಿಟ್ಟು ನಿರಂತರವೂ ಧ್ಯಾನಮಾಡಬೇಕಾದುದೇನೊ ವೇದ್ಯವಾದ ವಿಚಾರವಾಗಿದೆ. ಆದರೆ ಆತ್ಮಸಾಕ್ಷಾತ್ಕಾರವನ್ನು ಪಡೆದಿರುವ ಮಹಾತ್ಮನನ್ನು ಉಪಾಸನೆಮಾಡಿದರೆ ಮಾನವರು ಜನ್ಮಗಳಿಂದ ಬಿಡುಗಡೆಹೊಂದುತ್ತಾರೆ. ಇದೇ ತಾತ್ಪರ್ಯಕ್ಕೆ ಮುಣ್ಡಕೋಪನಿಷತ್ ತೃತೀಯ ಮುಣ್ಡಕ ದ್ವಿತೀಯಖಣ್ಡದಲ್ಲಿ,

ಸ ವೇದೈತ ತ್ಪರಮಂ ಬ್ರಹ್ಮಧಾಮ ಯತ್ರ ವಿಶ್ವಂ ನಿಹಿತಂ ಭಾತಿ ಶುಭ್ರಂ |
ಉಪಾಸತೇ ಪುರುಷಂ ಯೇಹ್ಯಕಾಮಾ ಸ್ತೇ ಶುಕ್ರಮೇತದತಿ ವರ್ತನ್ತಿ ಧೀರಾಃ||

ತಾ|| ಬ್ರಹ್ಮವಿದನು ಪೂಜ್ಯನೆನಿಸುವನು. ಏಕೆಂದರೆ ಸ್ವಯಂಪ್ರಕಾಶನಾದ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡಿರುವನು. ಈ ಸಮಸ್ತಪ್ರಪಂಚವೂ ಆ ಪರಂಧಾಮನಲ್ಲಿ ನೆಲೆಗೊಂಡು ಬೆಳಗುತ್ತಲಿದೆ. ತನ್ನ ತೇಜಸ್ಸಿನಿಂದ ಶುದ್ಧನಾದ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡಿರುವ ಮಹಾತ್ಮನನ್ನು ಯಾರು ಮುಮುಕ್ಷುಗಳಾಗಿ ಉಪಾಸನೆ ಮಾಡುತ್ತಾರೋ ಅವರು ಜನ್ಮಗಳಿಂದ ಮುಕ್ತರಾಗುವರು. ಆದುದರಿಂದಲೇ ಆತ್ಮವಿದರನ್ನು ಸೇವಿಸಬೇಕು, ಎಂದು ಹೇಳಿರುವುದು.

ಈ ಆತ್ಮಸಾಕ್ಷಾತ್ಕಾರದ ಪ್ರಕರಣದಲ್ಲಿ ಪರಮಾತ್ಮನಾದ ಶ್ರೀರಾಮಚಂದ್ರಮೂರ್ತಿಗೆ ಸಾಷ್ಟಾಂಗ ನಮಸ್ಕಾರಮಾಡಿ ಮುಂದಿನ ಪ್ರಕರಣವನ್ನು ಪ್ರಾರಂಭಿಸುತ್ತೇನೆ.

## ೩೯ನೆಯ ಪ್ರಕರಣ.

**ಯಜ್ಞೇಶ್ವರನು ಸೀತಾದೇವಿಯನ್ನು ಕರೆದುಕೊಂಡು ಬಂದು ಶ್ರೀರಾಮನಿಗೊಪ್ಪಿಸಿದುದು. ಶ್ರೀರಾಮನು ಸೀತಾದೇವಿಯನ್ನು ಸ್ವೀಕರಿಸಿದುದು.**

**ಚಿಚ್ಛಕ್ತಿಯು ಆತ್ಮಾಕಾರದಿಂದ ಬೇರ್ಪಡುವ ವಿಚಾರ.**

ರಾ|| ಚತುರ್ಮುಖಬ್ರಹ್ಮನು ಶ್ರೀರಾಮನಿಗೆ ನಿರೂಪಿಸಿದ ಶುಭವಾಕ್ಯವನ್ನು ಕೇಳಿದ ನಂತರ ಅಗ್ನಿಪುರುಷನು ಮನುಷ್ಯರೂಪದಿಂದ ಸೀತಾದೇವಿಯನ್ನು ತನ್ನ ಕಂಕುಳಲ್ಲಿ ಎತ್ತಿಕೊಂಡು ಮೇಲಕ್ಕೆ ಬಂದು ಶ್ರೀರಾಮನನ್ನು ಕುರಿತು "ಎಲೈ ಶ್ರೀರಾಮನೆ! ಸೀತಾದೇವಿಯು ಶುದ್ಧಸ್ವಭಾವವುಳ್ಳವಳಾಗಿ ಪಾಪವೆಂಬುದನ್ನೇ ಕಾಣದವಳಾಗಿರುವಳು. ಈ ಸಾಧ್ವೀಮಣಿಯನ್ನು ಪರಿಗ್ರಹಿಸು. ನನ್ನಮಾತಿಗೆ ಎದುರಾಡಬೇಡ. ಇದನ್ನು ನನ್ನ ಆಜ್ಞೆಯೆಂದು ತಿಳಿ." ಎಂಬದಾಗಿ ಹೇಳಿದನು.

ಶ್ರೀರಾಮನು ಅಗ್ನಿಪುರುಷನನ್ನು ಕುರಿತು "ಎಲೈ ಅಗ್ನಿಯೆ! ಸೀತೆಯು ಪಾಪವನ್ನು ಗೈಯ್ಯುವುದಕ್ಕೆ ಅರಿತವಳೇ ಅಲ್ಲ. ಆದರೆ ನಾನು ಸೀತೆಯನ್ನು ಅಗ್ನಿಶುದ್ಧಿಯಿಲ್ಲದೆ ಪರಿಗ್ರಹಿಸಿದರೆ ಜನರು ಮೂರ್ಖನಾದ ದಶರಥಪುತ್ರನು ಮಹಾಕಾಮುಕನು. ರಾವಣನ ಗೃಹದಲ್ಲಿ ಬಹುಕಾಲವಿದ್ದ ಸೀತೆಯನ್ನು ಪರಿಗ್ರಹಿಸಿದನೆಂದು ನುಡಿಯುವರು. ಈ ಸೀತಾದೇವಿಯು ಪರಪುರುಷರಲ್ಲಿ ಅಭಿಲಾಷಾರಹಿತಳೆಂದೂ, ನನ್ನ ಮನವನ್ನೇ ಅನುಸರಿಸುವವಳೆಂದೂ, ನಾನು ತಿಳಿದಿರುವೆನು. ಆದರೆ ಸತ್ಯವನ್ನು ಆಶ್ರಯಿಸಿ ಮೂರುಲೋಕಗಳಲ್ಲಿಯೂ ಇರುವ ಜನಗಳಿಗೆ ನಂಬಿಕೆಯನ್ನುಂಟುಮಾಡಲು ಸಮ್ಮತಿಸಿದೆನು. ಅಗ್ನಿಜ್ವಾಲೆಯಂತೆ

ಹೊಂದಲಸಾಧ್ಯಳಾದ ಈ ಸೀತಾದೇವಿಯನ್ನು ರಾವಣನು ಮನದಿಂದಲೂ ಸ್ಪರ್ಶಿಸುವುದಕ್ಕೆ ಶಕ್ತನಲ್ಲ. ಸೂರ್ಯನಿಗೆ ತನ್ನ ಬೆಳಕು ಹೇಗೆ ಭೇದವಿಲ್ಲದುದೋ ಹಾಗೆ ಸೀತಾದೇವಿಯು ನನ್ನಿಂದ ಬೇರೆಯಾದವಳಲ್ಲ'' ಎಂದು ನುಡಿದು ಬ್ರಹ್ಮಾದಿಗಳಿಂದ ಸ್ತೋತ್ರಮಾಡಿಸಿ ಕೊಳ್ಳುತ್ತ ಪತ್ನಿಯೊಡನೆ ಸೇರಿ ಸುಖವನ್ನು ಅನುಭವಿಸುವುದಕ್ಕೆ ಯೋಗ್ಯನಾದನು.

**ತತ್ವ||** ಸೀತಾದೇವಿಯು ಅಗ್ನಿಪ್ರವೇಶಮಾಡಿದಳೆಂದರೆ—ಸ್ಥಿತಿ ಅಥವಾ ಇರುವಿಕೆಗೆ ಮೂಲರೂಪವಾದ ಶುದ್ಧಸತ್ವಪ್ರಧಾನಮಾಯೆಯು (ಅಖಂಡವಾದ ಅಹಂಜ್ಞಾನವು) ಸಹಸ್ರಾರಕಮಲವೆನಿಸುವ ಬ್ರಹ್ಮನಲ್ಲಿ ಲಯವಾಯಿತೆಂದು ಹಿಂದಿನ ಪ್ರಕರಣಗಳಲ್ಲಿ ತಿಳಿಸಿ ತಷ್ಟೆ! ಹೀಗೆ ಪರಬ್ರಹ್ಮನಲ್ಲಿ ಲಯವಾಗಿದ್ದ ಶುದ್ಧಸತ್ವಪ್ರಧಾನಮಾಯೆಯು (ಅಹಂ ಜ್ಞಾನವು) ಪರಬ್ರಹ್ಮದಿಂದ ಪ್ರತ್ಯೇಕಿಸಲ್ಪಟ್ಟು ಪುನಃ ಉದಯವಾಗುವ ತತ್ವವೇ ಅಗ್ನಿ ಪುರುಷನು ಸೀತಾದೇವಿಯನ್ನು ಹೊರಕ್ಕೆ ತಂದುದರ ತತ್ವವಾಗಿರುವುದು. ಅಂದರೆ ನಿರ್ವಿ ಕಲ್ಪಸಮಾಧಿಯಿಂದ ಬಹಿರ್ಮುಖವಾಗಲು ಪ್ರಾರಂಭದ ತತ್ವವಾಗಿರುವುದು. ಸೀತಾ ದೇವಿಯು ಅಗ್ನಿಪ್ರವೇಶಮಾಡಿದ ಮೇಲೆ ಇರುವ ಶ್ರೀರಾಮನ ಸ್ಥಿತಿಯೇ ಆತ್ಮಸಾಕ್ಷಾತ್ಕಾರದ ತತ್ವವೆಂದು ಹಿಂದಿನ ಪ್ರಕರಣದಲ್ಲಿ ತಿಳಿಸಿ ಈಗ ಬಹಿರ್ಮುಖವಾಗಲು ಪ್ರಾರಂಭಿಸಿದ ಕಾರಣವೇನೆಂದರೆ—ಜೀವಂತನಾಗಿರುವಾಗಲೇ ಸೃಷ್ಟಿಸ್ಥಿತಿಗಳಲ್ಲಿ ಸ್ಥಿತಿಯೆಂದರೆ ದೇಹದ ಸಕಲ ವ್ಯಾಪಾರಗಳೂ ಬುದ್ಧಿವೃತ್ತಿಯೊಡನೆ ಆತ್ಮನಲ್ಲಿ ಲಯವಾಗಿ ಆತ್ಮಸಾಕ್ಷಾತ್ಕಾರವೆನಿಸಿ ಕೊಳ್ಳುವುದು. ಅಂದರೆ ನದಿಯು ಹರಿದುಕೊಂಡುಹೋಗಿ ಸಮುದ್ರವನ್ನು ಸೇರುವಂತೆ ಸಕಲ ವ್ಯಾಪಾರಗಳ ಶಕ್ತಿಯೊಡನೆ ಬುದ್ಧಿವೃತ್ತಿಯು ಜೀವನ್ಮುಕ್ತಿಯಲ್ಲಿ ಏಕಾಕಾರವಾಗಿ ಪ್ರವಹಿಸಿಕೊಂಡು ಪರಮಾತ್ಮನಲ್ಲಿ ಲಯವಾಗಿ ಪರಮಾತ್ಮಾಕಾರವಾಗುವುದೇ ಹೊರತು ಬುದ್ಧಿಯೇ ನಾಶವಾಗುವುದಿಲ್ಲ. ಸುಷುಪ್ತಿಯಲ್ಲಿ ಬುದ್ಧಿವೃತ್ತಿಯು ತಮೋಗುಣದಲ್ಲಿ ಲೀನವಾಗುವುದೇ ಹೊರತು ಬುದ್ಧಿಯೇ ನಾಶವಾಗುವುದಿಲ್ಲವಷ್ಟೆ! ಸುಷುಪ್ತಿಯಲ್ಲಿ ಘಟವು ಒಡೆದುಹೋಗುವಂತೆ ಬುದ್ಧಿಯು ನಾಶವೇ ಆದರೆ ಪುನಃ ಎಚ್ಚರಿಕೆಯಾಗಲು ಸಾಧ್ಯವೇ ಇಲ್ಲ. ವಿದೇಹಕೈವಲ್ಯವೊಂದರಲ್ಲಿಯೇ ಬುದ್ಧಿನಾಶವುಂಟಾಗುವುದು. ಆದುದರಿಂದ ಜೀವಂತನಾಗಿದ್ದಾಗ ಆತ್ಮಸಾಕ್ಷಾತ್ಕಾರಪಡೆದರೆ ಬುದ್ಧಿವೃತ್ತಿಯು ಆತ್ಮನಲ್ಲಿ ಲೀನವಾಗಿ ಆತ್ಮಾಕಾರವಾಗಿರುವುದು. ಆದಕಾರಣ ಬುದ್ಧಿವೃತ್ತಿಯು ಜೀವನ್ಮುಕ್ತಾವಸ್ಥೆಯಲ್ಲಿ ಸರೂಪವಾಗಿಯೂ, ವಿದೇಹಮುಕ್ತಿಯಲ್ಲಿ ರೂಪರಹಿತವಾಗಿಯೂ ಆತ್ಮಾಕಾರವಾಗುವುದು. ಇದೇ ತಾತ್ಪರ್ಯಕ್ಕೆ ಅನ್ನಪೂರ್ಣೋಪನಿಷತ್ತು ಮತ್ತು ಮುಕ್ತಿಕೋಪನಿಷತುಗಳಲ್ಲಿ,

ದ್ವಿವಿಧ ಶ್ಚಿತ್ತನಾಶೋಽಸ್ತಿ ಸರೂಪೋಽರೂಪ ಏವಚ |
ಜೀವನ್ಮುಕ್ತೌ ಸರೂಪಸ್ಸ್ಯಾ ದರೂಪಾ ದೇಹಮುಕ್ತಿಗಃ ||

ತಾ|| ಬುದ್ಧಿಯ ನಾಶವು ಸರೂಪ ಮತ್ತು ಅರೂಪವೆಂದು ಎರಡು ವಿಧ. ಜೀವನ್ಮುಕ್ತಿಯಲ್ಲಿ ರೂಪಸಹಿತವಾಗಿ ಆತ್ಮಾಕಾರವಾಗುವುದು. ವಿದೇಹಮುಕ್ತಿಯಲ್ಲಿ ರೂಪರಹಿತವಾಗುವುದು, ಎಂದು ಹೇಳಿರುವುದು.

ಆದುದರಿಂದ ಸೀತಾದೇವಿಯ ಅಗ್ನಿಪ್ರವೇಶದ ತತ್ವವೇ ಸರೂಪಮುಕ್ತಿಯಾಗಿಯೂ, ಸೀತಾದೇವಿಯು ಉತ್ತರಕಾಂಡದಲ್ಲಿ ಭೂಪ್ರವೇಶಮಾಡುವ ತತ್ವವೇ ಅರೂಪಮುಕ್ತಿಯ ತತ್ವವಾಗಿಯೂ ಇರುವುದು. ಅಂದರೆ ಜೀವನ್ಮುಕ್ತಿಯಲ್ಲಿ ಪ್ರಕೃತಿಯು ಆತ್ಮನಲ್ಲಿ ಲೀನವಾಗಿ ಆತ್ಮಾಕಾರವಾಗಿರುವುದು. ವಿದೇಹಮುಕ್ತಿಯಲ್ಲಿ ಪ್ರಕೃತಿಯೆಂಬ ಹೆಸರೇ ಇಲ್ಲದೆ ಅಖಂಡವಾದ ಪರಮಾತ್ಮನೇ ಆಗುವುದು. ಸೀತಾಗ್ನಿಪ್ರವೇಶದ ತತ್ವವೆಂದರೆ—ಸ್ಥಿತಿ ಅಥವಾ ವ್ಯಾಪಾರಸ್ವರೂಪವೆನಿಸಿಕೊಳ್ಳುವ ಪ್ರಕೃತಿಯು ಪರಮಾತ್ಮಾಕಾರವಾಗುವುದು. ಪುನಃ ಪರಮಾತ್ಮನಿಂದ ಬೇರ್ಪಟ್ಟು ಉದಯವಾಗುವುದು. ಅಂದರೆ ಜೀವನ್ಮುಕ್ತಿಯಲ್ಲಿ ವ್ಯಾಪಾರ ಅಥವಾ ಸ್ಥಿತಿಯ ಸ್ವರೂಪವು ಪರಮಾತ್ಮಾಕಾರವಾಗುವುದು. ವಿದೇಹಮುಕ್ತಿಯಲ್ಲಿ ಸೃಷ್ಟಿ ಸ್ಥಿತಿಗಳೆರಡರ ಸ್ವರೂಪವೂ ಇಲ್ಲವಂತೆ ಪರಮಾತ್ಮನೇ ಆಗುವುದು.

ಸೀತಾದೇವಿಯು ಅಗ್ನಿಪ್ರವೇಶಮಾಡಿ ಪುನಃ ಅಗ್ನಿಯಿಂದ ಉದಯವಾಗಿ ಬಂದ ತತ್ವದಂತೆ ಜೀವನ್ಮುಕ್ತಿಯಲ್ಲಿ ಸ್ಥಿತಿ ಅಥವಾ ಇರುವಿಕೆಯ ಸ್ವರೂಪವು ಆತ್ಮಾಕಾರವಾಗಿ ಪುನಃ ಉದಯವಾಗುವುದು ಚೋದ್ಯವಲ್ಲವೇ ? ಎಂದರೆ ಹೀಗಾಗುವುದು ಚೋದ್ಯವಲ್ಲ. ಸಕಲವ್ಯಾಪಾರವೂ ನಿದ್ರೆಯಕಾಲದಲ್ಲಿ ಇಲ್ಲದಂತೆ ಇದ್ದು ಪುನಃ ಎಚ್ಚರವಾಗಲು ಉದಯವಾಗುವಂತೆಯೂ, ನೀರಿನಲ್ಲಿ ಸೇರಿಸಲ್ಪಟ್ಟ ಉಪ್ಪು ನೀರಿನಿಂದ ಪ್ರತ್ಯೇಕಿಸಲ್ಪಡುವಂತೆಯೂ, ಜೀವನ್ಮುಕ್ತಿಯಲ್ಲಿ ಸ್ಥಿತಿಯು ಆತ್ಮಾಕಾರವಾಗಿ ಪುನಃ ಉದಯವಾಗುವುದು. ಈ ರೀತಿ ಆಗದಿದ್ದರೆ ಜೀವಂತರಾಗಿರುವಾಗಲೇ ಮೋಕ್ಷವುಂಟಾಗುವುದೆಂಬ ವೇದ ಮತ್ತು ಸ್ಮೃತಿ ಪ್ರಮಾಣಗಳೂ, ಸ್ವಾನುಭವದಿಂದ ತಿಳಿದುಕೊಂಡು ಸಿದ್ಧಾಂತಮಾಡಿರುವ ಮಹಾತ್ಮರುಗಳ ವಾಕ್ಯಗಳೂ ವ್ಯರ್ಥವಾಗುವುವು. ಅಲ್ಲದೆ ಮೋಕ್ಷಸುಖವೆಂಬುದು ಜೀವಂತರಾಗಿರುವಾಗಲೇ ಪಡೆಯಬೇಕಾಗಿರುವುದಾದುದರಿಂದಲೇ ಈಶ್ವರನು ಉಪನಿಷದ್ವಾಕ್ಯಗಳನ್ನು ಮನುಷ್ಯರಿಗೆ ಅನುಗ್ರಹಮಾಡಿಕೊಟ್ಟಿರುವನು. ಉತ್ತಮವಾದ ಲೋಕಗಳನ್ನು ಹೊಂದುವುದು ಎಂದಿಗೂ ಮೋಕ್ಷವೆನಿಸಿಕೊಳ್ಳುವುದಿಲ್ಲವೆಂಬುದನ್ನು ಹಿಂದೆಯೆ ಅಕ್ಷಕುಮಾರನ ಪ್ರಕರಣದಲ್ಲಿ ತಿಳಿಸಿತಷ್ಟೆ! ಭವಬಂಧನದಿಂದ ಉತ್ತೀರ್ಣನಾಗುವುದನ್ನು ಇಲ್ಲಿಯೇ ಪ್ರತ್ಯಕ್ಷವಾಗಿ ಹೊಂದಬಹುದಾದುದರಿಂದಲೇ ವೇದಕ್ಕೆ ಪ್ರಾಶಸ್ತ್ಯಬಂದಿರುತ್ತದೆ. ಆದುದರಿಂದ ಮೋಕ್ಷಸುಖವೆಂಬುದು ಶ್ರುತಿಪ್ರಮಾಣದಂತೆ ಅನುಷ್ಠಿಸಿಕೊಂಡು ಬಂದಲ್ಲಿ ಸ್ವಾನುಭವಕ್ಕೆ ಬಂದು ಖಂಡಿತವಾಗಿಯೂ ಪ್ರತ್ಯಕ್ಷಪ್ರಮಾಣವಾಗುವುದು. ಸಕ್ಕರೆಯಲ್ಲಿರುವ ಮಾಧುರ್ಯ

ವನ್ನು ಮತ್ತೊಬ್ಬರು ಎಷ್ಟೇ ಹೊಗಳಿದರೂ ತಾನು ಸೇವಿಸಿದರೇನೆ ಅದರ ಮಾಧುರ್ಯವು ಗೊತ್ತಾಗುವಂತೆ ಶ್ರುತಿ, ಸ್ಮೃತಿ ಮತ್ತು ಮಹಾತ್ಮರ ವಾಕ್ಯಗಳ ತತ್ವದಂತೆ ತಾನು ಅನುಷ್ಠಿಸಿ ಸ್ವಾನುಭವಕ್ಕೆ ತಂದುಕೊಳ್ಳುವುದೇ ಪ್ರತ್ಯಕ್ಷಪ್ರಮಾಣವಾಗಿರುವುದು. ಅಲ್ಲದೆ ಹಿಂದಿನ ಪ್ರಕರಣದಲ್ಲಿ ವಿವರಿಸಿರುವ ಸ್ಥಿತಿಯಲ್ಲಿರುವ ಮಹಾತ್ಮನನ್ನು ನೋಡುವುದ ರಿಂದಲೂ ಪ್ರತ್ಯಕ್ಷಪ್ರಮಾಣವಾಗಿಯೇ ಕಾಣುವುದು. ಸೀತಾದೇವಿಯು ಅಗ್ನಿಯೊಳಗಿದ್ದ ತತ್ವವೇ ಪ್ರಕೃತಿಯು ದಹರಾಕಾಶದ ತತ್ವವಾದ ಪರಬ್ರಹ್ಮನಲ್ಲಿ ಲಯವಾಗಿ ಬ್ರಹ್ಮ ತುರೀಯವೆನಿಸಿಕೊಳ್ಳುವುದಷ್ಟೆ! ಈ ಬ್ರಹ್ಮತುರೀಯ ಸ್ಥಿತಿಯು ಸೃಷ್ಟಿಯನ್ನು ಧರಿಸಿ ಕೊಂಡೂ ಸ್ಥಿತಿ ಅಥವಾ ಸಕಲ ವ್ಯಾಪಾರದ ತತ್ವವನ್ನೂ ತನ್ನಲ್ಲಿ ಲಯಗೊಳಿಸಿಕೊಂಡೂ ಇರುವ ಸೋಪಾನವಾಗಿರುವುದು. ಇದೇ ತಾತ್ಪರ್ಯಕ್ಕೆ ಅಥರ್ವಶಿಖೋಪನಿಷತ್ತಿನಲ್ಲಿ,

"ಸರ್ವಕರಣೋಪಸಂಹಾರತ್ವಾ ದ್ಧಾರಣಾ ದ್ಬ್ರಹ್ಮತುರೀಯಂ"

ತಾ|| ಸಕಲೇಂದ್ರಿಯಗಳ ಕಾರ್ಯಗಳನ್ನು ಉಪಸಂಹರಿಸುವುದರಿಂದಲೂ, ಧರಿಸುವಂಥಾದ್ದನ್ನು ಧರಿಸುವಂತೆಮಾಡುವುದರಿಂದಲೂ ಬ್ರಹ್ಮತುರೀಯವೆನ್ನಲ್ಪಡುವುದು, ಎಂದು ಹೇಳಿರುವುದು.

ಈ ಮೇಲಿನ ಶ್ರುತಿವಾಕ್ಯದತತ್ವದಂತೆ ಸ್ಥಿತಿ (ವ್ಯಾಪಾರ) ಯನ್ನು ತನ್ನಲ್ಲಿ ಉಪ ಸಂಹರಿಸಿಕೊಂಡು ಸೃಷ್ಟಿಯನ್ನು ಧರಿಸಿಕೊಂಡು ಜೀವಂತನಾಗಿರುವಾಗಲೇ ಆತ್ಮಸಾಕ್ಷಾತ್ಕಾರವಾಗುವ ಸ್ಥಿತಿಯೇ ಬ್ರಹ್ಮತುರೀಯದ ತತ್ವ. ಜೀವಂತನಾಗಿರುವಾಗಲೇ ಸ್ಥಿತಿ ಅಥವಾ ಇರುವಿಕೆಯುಸ್ವರೂಪವಾದ ಪ್ರಕೃತಿಯು ಪರಮಾತ್ಮನಲ್ಲಿ ಲಯವಾದಾಗ ಪರಮಾತ್ಮ ಸ್ವರೂಪವಲ್ಲದ ಇತರ ಅರಿಷ್ಟಗಳು ಯಾವುದೂ ಪ್ರಕೃತಿಗೆ ಇರುವುದಿಲ್ಲ. ಇದೇ ತಾತ್ಪರ್ಯಕ್ಕೆ ಸುಂದರಕಾಂಡದ ಸುರಸೆಯಪ್ರಕರಣದಲ್ಲಿ ತಿಳಿಸಿರುವ "ಅರಿಷ್ಟಂ ಯತ್ಕಿಂಚ ಕ್ರಿಯತೇ ಅಗ್ನಿ ಸ್ತದ್ದನುವೇಧತಿ" ಎಂಬ ಮತ್ತು "ಉತ್ತಿಷ್ಠದೇವಿಗಂತವ್ಯಂ" ಎಂಬ ಶ್ರುತಿವಾಕ್ಯದ ತಾತ್ಪರ್ಯವನ್ನು ಇಲ್ಲಿಗೆ ಅನ್ವಯಮಾಡಿಕೊಳ್ಳಬೇಕು.

ಆದುದರಿಂದ ಜೀವಂತನಾಗಿರುವಾಗಲೇ ತನ್ನ ಸ್ಥಿತಿ ಅಥವಾ ಇರುವಿಕೆಯನ್ನು ಆತ್ಮಾಕಾರವಾಗಿಮಾಡಿ ಅನಂತರ ಬಹಿರ್ಮುಖವಾಗಬಹುದು. ಈ ತತ್ವಕ್ಕೆ ಶ್ರೀಶಂಕರಭಗವತ್ಪಾದಾಚಾರ್ಯರವರು ವಿವೇಕಚೂಡಾಮಣಿಯಲ್ಲಿ,

ಕಿಂಚಿತ್ಕಾಲಂ ಸಮಾಧಾಯ ಪರೇ ಬ್ರಹ್ಮಣಿ ಮಾನಸಂ |
ಉತ್ಥಾಯ ಪರಮಾನನ್ದಾ ದಿದಂ ವಚನ ಮಬ್ರವೀತ್ ||

ತಾ|| ಪರಬ್ರಹ್ಮನಲ್ಲಿ ಬುದ್ಧಿವೃತ್ತಿಯನ್ನು ಲಯಗೊಳಿಸಿ ಪರಮಾನಂದಾನುಭವದ ಸ್ಥಿತಿಯಲ್ಲಿ ಪ್ರಪಂಚವನ್ನು ಮರೆತು ಸ್ವಲ್ಪ ಕಾಲದವರೆಗೆ ಹಾಗೆಯೇ ಇದ್ದು ತರುವಾಯ

ಸಮಾಧಿಯಿಂದ ಬಹಿರ್ಮುಖನಾಗಿ ಈ ಮಾತನ್ನು ಹೇಳಿದನು. ಅಂದರೆ ಹಿಂದಿನ ಪ್ರಕರಣ ದಲ್ಲಿ ತಿಳಿಸಿದ "ಬುದ್ಧಿರ್ವಿನಷ್ಟಾ" ಮುಂತಾದ ಶ್ಲೋಕಗಳನ್ನು ಹೇಳಿದನು.

ಆದುದರಿಂದ ಸಮಾಧಿಸ್ಥಿತಿಯಲ್ಲಿ ತನ್ನ ಇರುವಿಕೆಯನ್ನೇ ಮರೆತು ಪುನಃ ಸಮಾಧಿ ಯಿಂದ ಬಹಿರ್ಮುಖವಾಗಬಹುದು. ಏಕವಾಚಕವಾಗಿರುವ ಪ್ರಕೃತಿಲಯ, ಓಂಕಾರ, ಅದ್ವೈತಸಿದ್ಧಿ ಮತ್ತು ನಿರ್ವಿಕಲ್ಪಸಮಾಧಿ ಸ್ಥಿತಿಯಲ್ಲಿ ಅವರವರ ಪುಣ್ಯಪರಿಪಾಕಾನುಸಾರ ವಾಗಿ ಸಮಾಧಿಸ್ಥಿತಿಯನ್ನು ಅನುಭವಿಸುವರು. ಕೆಲವರು ಸ್ವಲ್ಪಕಾಲ ಅನುಭವಿಸುವರು ಮತ್ತೆ ಕೆಲವರು ದೀರ್ಘಕಾಲ ಅನುಭವಿಸುವರು. ವ್ಯಾಸಪುತ್ರರಾದ ಶುಕಮಹರ್ಷಿಗಳು.

ಜಗಾಮ ಶಿಖರಂ ಮೇರೋಃ ಸಮಾಧ್ಯರ್ಥ ಮಖಂಡಿತಮ್ ।
ತತ್ರ ವರ್ಷಸಹಸ್ರಾಣಿ ನಿರ್ವಿಕಲ್ಪಸಮಾಧಿನಾ ॥

ತಾ॥ ಅಖಂಡವಾದ ನಿರ್ವಿಕಲ್ಪಸಮಾಧಿಗೋಸ್ಕರ ಮೇರುಪರ್ವತದ ಶಿಖರವನ್ನೈದಿ ಸಹಸ್ರವರ್ಷಕಾಲ ನಿರ್ವಿಕಲ್ಪಸಮಾಧಿಯಲ್ಲಿ ನಿಂತರೆಂದು ಮಹೋಪನಿಷತ್ತಿನಲ್ಲಿ ಹೇಳಿದೆ.

ಹೀಗೆ ನಿರ್ವಿಕಲ್ಪಸಮಾಧಿಯು ಬಹುಕಾಲ ಲಭ್ಯವಾಗದೇ ಇದ್ದರೂ ಅತ್ಯಲ್ಪಕಾಲ ಲಭಿಸಿದರೂ ಸ್ವರೂಪಭೂತವಾದ ಬ್ರಹ್ಮಾನಂದವು ನಿಶ್ಚಯಿಸಲ್ಪಡುವುದರಲ್ಲಿ ಲೇಶವೂ ಸಂಶಯವಿಲ್ಲವೆಂಬದಾಗಿ ಶ್ರೀವಿದ್ಯಾರಣ್ಯರವರು ಪಂಚದಶಿಯಲ್ಲಿ,

ಯದ್ಯಪ್ಯಸೌ ಚಿರಕಾಲಂ ಸಮಾಧಿ ರ್ದುರ್ಲಭೋ ನೃಣಾಂ ।
ತಥಾಪಿ ಕ್ಷಣಿಕೋ ಬ್ರಹ್ಮಾನಂದೋ ನಿಶ್ಚಾಯಯತ್ಯಸೌ ॥

ತಾ॥ ಆತ್ಮಸಾಕ್ಷಾತ್ಕಾರ ಅಥವಾ ನಿರ್ವಿಕಲ್ಪಸಮಾಧಿಯ ಅನುಭವವು ಮನುಷ್ಯನಿಗೆ ಬಹುಕಾಲ ದುರ್ಲಭವಾಗಿರುತ್ತದೆ. ಕ್ಷಣಕಾಲವಾದರೂ ನಿರ್ವಿಕಲ್ಪಸಮಾಧಿಯ ಅನು ಭವಿಸುವಿಕೆಯಿಂದ ಸ್ವರೂಪಭೂತ ಬ್ರಹ್ಮಾನಂದವು ನಿಶ್ಚಯಿಸಲ್ಪಡುವುದರಲ್ಲಿ ಸಂಶಯವಿಲ್ಲ. ಎಂದು ಹೇಳಿರುವರು.

ಆದುದರಿಂದ ನಿರ್ವಿಕಲ್ಪಸಮಾಧಿ ಸ್ಥಿತಿಯನ್ನು ಅತ್ಯಲ್ಪಕಾಲ ಪಡೆದರೂ ಅದರ ಫಲ ವೆಂದಿಗೂ ತಪ್ಪುವುದಿಲ್ಲ. ಈ ಮೇಲಿನ ತತ್ವಗಳಿಂದ ದಹರಾಕಾಶ ಅಥವಾ ಸಹಸ್ರಾರ ಕಮಲದ ತತ್ವವಾದ ಪರಬ್ರಹ್ಮನಲ್ಲಿ ಸೂಕ್ಷ್ಮವಾದ ಅಹಂಜ್ಞಾನವೇ ತುದಿಯಾಗುಳ್ಳ ಬುದ್ಧಿ ವೃತ್ತಿಯು ಲಯವನ್ನು ಹೊಂದಿ ಪುನಃ ಆತ್ಮಾಕಾರದಿಂದ ಬೇರ್ಪಡುವ ತತ್ವದ ಸೂಚ ನೆಯೇ ಸೀತಾದೇವಿಯನ್ನು ಅಗ್ನಿಪುರುಷನು ಮೇಲಕ್ಕೆ ತಂದ ತತ್ವವಾಗಿರುವುದು.

ಅಗ್ನಿಯು ಮನುಷ್ಯರೂಪದಿಂದ ಸೀತಾದೇವಿಯನ್ನು ಎತ್ತಿಕೊಂಡು ಬಂದ ತತ್ವವೇ ನೆಂದರೆ—ಮನುಷ್ಯ ಎಂಬ ಪದವು ಮನು ಧಾತುವನ್ನನುಸರಿಸಿ ಸಕಲವನ್ನೂ ತಿಳಿಯುವ

ಜ್ಞಾನಸ್ವರೂಪವೆಂದು ಅರ್ಥವು. ಸೀತಾದೇವಿಯು ಮನುಷ್ಯರೂಪಿಯಾದ ಅಗ್ನಿಯಿಂದ ತರಲ್ಪಟ್ಟಳೆಂದರೆ—ಪರಮಾತ್ಮಾಕಾರವಾಗಿದ್ದ ಶುದ್ಧಸತ್ವಪ್ರಧಾನಮಾಯೆಯು ಜ್ಞಾನ ಪ್ರಭೆಯೇ ಸ್ವರೂಪವುಳ್ಳದುದಾಗಿ ಪರಮಾತ್ಮನಿಂದ ಬೇರ್ಪಟ್ಟ ತತ್ವವಾಗಿರುವುದು. ಮಾಯೆಯೆಂದರೆ ಜ್ಞಾನವೆಂಬದಾಗಿ ವೇದದಲ್ಲಿಯೂ ಯಾಸ್ಕರನಿರುಕ್ತದಲ್ಲಿಯೂ, ಮಾಂಡೂಕ್ಯೋಪನಿಷತ್ ಅದ್ವೈತಪ್ರಕರಣದ ಶ್ರೀಶಂಕರಭಗವತ್ಪಾದರವರ ಭಾಷ್ಯದಲ್ಲಿಯೂ ಹೇಳಿರುವುದೆಂದು ಹಿಂದೆಯೇ ತಿಳಿಸಿದೆ. ಸೀತಾದೇವಿಯು ಶುದ್ಧಸತ್ವಪ್ರಧಾನಮಾಯೆ ಯಾದುದರಿಂದ ಪರಮಾತ್ಮನಲ್ಲಿ ಉದಯವಾದ ಮಾಯೆಯು ಸರ್ವವೂ ನಾನೆಂಬ ಅಖಂಡ ಜ್ಞಾನಸ್ವರೂಪವಾಗಿಯೂ, ಆನಂದಸ್ವರೂಪವಾಗಿಯೂ ಇರುವುದೆಂಬ ತಾತ್ಪರ್ಯ. ಅಗ್ನಿ ಪುರುಷನು ಸೀತಾದೇವಿಯನ್ನು ತನ್ನ ಕಂಕುಳಲ್ಲಿ ಎತ್ತಿಕೊಂಡು ಬಂದು ಹೊರಕ್ಕೆ ಬಿಟ್ಟುದು ಪರಮಾತ್ಮನಿಂದ ಪ್ರಕೃತಿಯು ಉದಯವಾಗುವ ಸ್ವರೂಪದ ಸ್ಥಿತಿಯನ್ನು ಸೂಚಿಸುವ ತತ್ವವಾಗಿರುವುದು.

ಅಗ್ನಿಪುರುಷನು ತಂದೊಪ್ಪಿಸಿದ ಸೀತಾದೇವಿಯನ್ನು ಒಡಗೂಡಿ ಸುಖವನ್ನು ಅನುಭವಿಸುವುದಕ್ಕೆ ಶ್ರೀರಾಮನು ಅರ್ಹನಾದನೆಂದರೆ—ಪ್ರತಿಬಿಂಬಚೈತನ್ಯನು ಶುದ್ಧಸತ್ವ ಪ್ರಧಾನಮಾಯೆಯೊಡಗೂಡಿ ಈಶ್ವರಸೋಪಾನದಲ್ಲಿರಲು ಅರ್ಹತೆ ಬರುವುದೆಂಬ ತತ್ವ ವಾಗಿರುವುದು. ಅಂದರೆ ಸಹಸ್ರಾರಕಮಲದ ತತ್ವವಾದ ಪರಮಾತ್ಮನಲ್ಲಿ ಲಯವಾಗಿದ್ದ ಶುದ್ಧಸತ್ವಪ್ರಧಾನಮಾಯೆಯು ಉದಯವಾಗಿ ಸುಷುಮ್ನಾಂತರ್ಗತವಾದ ಆಜ್ಞಾಚಕ್ರ ಪ್ರದೇಶಕ್ಕೆ ಬರುವುದೆಂಬ ತಾತ್ಪರ್ಯ. ಈ ತತ್ವವೇ ಸೀತಾದೇವಿಯು ಶ್ರೀರಾಮನೊಡನೆ ಸೇರಿದ ತತ್ವವಾಗಿರುವುದು.

ಸೀತಾದೇವಿಯು ಪಾಪವೆಂಬುದನ್ನೇ ಕಾಣದವಳಾಗಿ ಪರಿಶುದ್ಧಸ್ವಭಾವವುಳ್ಳವಳಾಗಿ ಇರುವಳು. ಅಗ್ನಿಜ್ವಾಲೆಯಂತೆ ಇರುವ ಇವಳನ್ನು ರಾವಣನು ಮನದಿಂದಲೂ ಸ್ಪರ್ಶಿಸಲು ಯೋಗ್ಯತೆಯಿಲ್ಲವೆಂಬದಾಗಿ ಅಗ್ನಿಪುರುಷ ಶ್ರೀರಾಮರಿಬ್ಬರೂ ಹೇಳಿದ ವಾಕ್ಯಗಳ ತತ್ವ ವೇನೆಂದರೆ—ಸೀತಾದೇವಿಯ ತತ್ವವಾದ ಮೇಲೆ ತಿಳಿಸಿರುವ ಸರ್ವಜ್ಞತ್ವಾದಿಗುಣಗಳುಳ್ಳ ಶುದ್ಧಸತ್ವಪ್ರಧಾನಮಾಯೆ (ಅಖಂಡವಾದ ಅಹಂಜ್ಞಾನ) ಯು ಸ್ವಾಭಾವಿಕವಾಗಿಯೇ ಅತ್ಯಂತ ಪರಿಶುದ್ಧವಾಗಿರುವುದು. ಇಂತಹ ಸರ್ವಜ್ಞತ್ವಾದಿಗುಣಗಳುಳ್ಳ ಅಖಂಡಾಕಾರ ವಾದ ನಾನು ಎಂಬ ಜ್ಞಾನವನ್ನು ರಾವಣನ ತತ್ವವಾದ ವಿಕ್ಷೇಪಶಕ್ತಿಯು ತನ್ನಂತೆ ಎಂದಿಗೂ ಮಾಡಿಕೊಳ್ಳಲಾರದೆಂಬ ತತ್ವವೇ ರಾವಣನು ಸೀತಾದೇವಿಯನ್ನು ಮನದಿಂದಲೂ ಸ್ಪರ್ಶಿಸಲು ಯೋಗ್ಯತೆ ಇಲ್ಲದವನೆಂಬ ತತ್ವವಾಗಿರುವುದು.

ಚಿರಕಾಲ ರಾವಣನ ಗೃಹದಲ್ಲಿದ್ದ ಸೀತೆಯನ್ನು ಅಗ್ನಿಶುದ್ಧಿಯಿಲ್ಲದೆ ಪರಿಗ್ರಹಿಸಿದರೆ ಮೂರ್ಖನಾದ ದಶರಥಪುತ್ರನು ಕಾಮುಕನೆಂದು ಜನರು ನುಡಿಯುವರೆಂದು ಶ್ರೀರಾಮನು



ಶ್ರೀಕೋದಂಡರಾಮಚಂದ್ರಸ್ವಾಮಿ.

ಹೇಳಿದ ತತ್ವವೇನೆಂದರೆ-ತಮ್ಮಲ್ಲಿರುವ ಶುದ್ಧಸತ್ವಗುಣವನ್ನು ರಜೋಗುಣ ತಮೋಗುಣಗಳು ಮುಚ್ಚಿಕೊಂಡು ತಾವೇ ಮೇಲೆನಿಸಿಕೊಂಡು ಬಹುಜನ್ಮಗಳಿಂದಲೂ ಇರುವ ತತ್ವವೇ ಸೀತಾದೇವಿಯು ಚಿರಕಾಲ ರಾವಣನ ಗೃಹದಲ್ಲಿದ್ದುದರ ತತ್ವವಾಗಿರುವುದು. ರಜೋಗುಣ ತಮೋಗುಣಗಳನ್ನು ಹುರಿದಬೀಜದಂತೆ ಮಾಡಿದನಂತರ ಉಳಿಯುವ ಶುದ್ಧ ಸತ್ವಗುಣದ ಸೋಪಾನದಲ್ಲಿರುವುದೆಂದರೆ—ರಾವಣನ ವಧೆಯಾದನಂತರ ಸೀತಾದೇವಿಯು ಶ್ರೀರಾಮನ ಸಮೀಪಕ್ಕೆ ಬಂದ ತತ್ವವಾದ ಉನ್ಮನೀಸೋಪಾನವನ್ನು ಹೊಂದುವುದೇ ಈಶ್ವರಸೋಪಾನವಲ್ಲ. ಸೀತಾದೇವಿಯು ಅಗ್ನಿಪ್ರವೇಶಮಾಡಿದ ತತ್ವವಾದ ಉನ್ಮನೀ ಸೋಪಾನವನ್ನು ಹೊಂದುವುದೇ ಈಶ್ವರಸೋಪಾನವಲ್ಲ. ಸೀತಾದೇವಿಯು ಅಗ್ನಿಪ್ರವೇಶ ಮಾಡಿದ ತತ್ವವಾದ ನಿರ್ವಿಕಲ್ಪಸಮಾಧಿಯ ಸೋಪಾನವನ್ನು ಹೊಂದಿ, ಅನಂತರ ಬಹಿರ್ಮುಖವಾಗಿ ಶುದ್ಧಸತ್ವಗುಣದ ಸೋಪಾನದಲ್ಲಿ ನಿಲ್ಲುವುದು ಉತ್ತಮವೆಂಬ ತತ್ವವನ್ನು ಪ್ರತಿಪಾದನೆಮಾಡುವುದೇ ಸೀತಾದೇವಿಯನ್ನು ಅಗ್ನಿಪ್ರವೇಶಮಾಡಿಸದೆ ಪರಿಗ್ರಹಿಸಿದರೆ ದಶರಥಪುತ್ರನು ಕಾಮುಕನೆಂದು ನುಡಿಯುವರೆಂದು ಶ್ರೀರಾಮನು ಹೇಳಿದುದರ ತತ್ವವಾಗಿರುವುದು. ಅಂದರೆ ನಿರ್ವಿಕಲ್ಪಸಮಾಧಿಯನ್ನು ಪಡೆಯುವುದೇ ಮನುಷ್ಯನಿಗೆ ಪುರುಷಾರ್ಥವೆಂಬುದನ್ನು ಮೇಲಿನ ಕಥೆಯ ತತ್ವವು ಸೂಚಿಸುವುದು.

ಈ ಮೇಲಿನ ತತ್ವಾರ್ಥವನ್ನು ದೃಢೀಕರಿಸುವ ತಾತ್ಪರ್ಯದ ಸೂಚನೆಯೇ ಶ್ರೀರಾಮನು ಸತ್ಯವೇ ಆಶ್ರಯವುಳ್ಳವನಾಗಿ ಮೂರು ಲೋಕಗಳಲ್ಲಿಯೂ ಇರುವ ಜನಗಳಿಗೆ ನಂಬಿಕೆಯನ್ನುಂಟುಮಾಡಲು ಸೀತೆಯನ್ನು ಅಗ್ನಿಪ್ರವೇಶಮಾಡಿಸಿದೆನೆಂದು ಹೇಳಿದುದರ ತಾತ್ಪರ್ಯವಾಗಿರುವುದು. ಅಂದರೆ ಯಾವ ಲೋಕದವರಿಗಾದರೂ ಏಕವಾಚಕವಾಗಿರುವ ಪ್ರಕೃತಿಲಯ, ಓಂಕಾರ, ಅದ್ವೈತಸಿದ್ಧಿ, ನಿರ್ವಿಕಲ್ಪಸಮಾಧಿ ಸ್ವರೂಪವಾದ ಬ್ರಹ್ಮಸಾಕ್ಷಾತ್ಕಾರ ಪಡೆಯುವುದೇ ಮೋಕ್ಷವೆಂತಲೂ, ಇದೇ ಪುರುಷಾರ್ಥವೆಂತಲೂ, ಇದನ್ನೇ ಸರ್ವರೂ ನಂಬಬೇಕೆಂಬುದೇ ಶ್ರೀರಾಮನು ಸತ್ಯವೇ ಆಶ್ರಯವುಳ್ಳವನೆಂಬ ತತ್ವಪ್ರತಿಪಾದನೆಯಾಗಿರುವುದು. ಸೀತಾದೇವಿಯು ಅಗ್ನಿಕುಂಡದಿಂದ ಬಂದು ಶ್ರೀರಾಮನೊಡಗೂಡಿದ ಚಿತ್ರವನ್ನು ಪ್ರತ್ಯೇಕವಾಗಿ ಕೊಟ್ಟಿವೆ.

## ೪೦ ನೆಯ ಪ್ರಕರಣ.

**ಪರಮೇಶ್ವರನು ಶ್ರೀರಾಮನಿಗೆ ಅಯೋಧ್ಯೆಗೆಹೋಗಿ ಪಟ್ಟಾಭಿಷಿಕ್ತನಾಗೆಂದು ಹೇಳಿದುದು.** **ಪ್ರಾರಬ್ಧರೂಪವಾದ ಕರ್ಮವನ್ನನುಭವಿಸಲು ನಿರ್ವಿಕಲ್ಪಸಮಾಧಿಯಿಂದ ಬಹಿರ್ಮುಖವಾಗುವ ವಿಚಾರ.**

**ರಾ||** ಶ್ರೀರಾಮನು ಸೀತಾದೇವಿಯನ್ನು ಸ್ವೀಕರಿಸಿದಮೇಲೆ ಪರಮೇಶ್ವರನು ಶ್ರೀರಾಮನನ್ನು ಕುರಿತು, ದೈವಾಧೀನದಿಂದ ದಶಕಂಠನ ವಧೆಯು ನಿನ್ನಿಂದ ಮಾಡಲ್ಪಟ್ಟಿತು. ಇನ್ನು

ನೀನು ಅಯೋಧ್ಯಾಪಟ್ಟಣಕ್ಕೆ ತೆರಳಿ ಪಟ್ಟಾಭಿಷಿಕ್ತನಾಗಿ ಪ್ರಖ್ಯಾತಿಯನ್ನು ಪಡೆದು ನಂತರ ಸ್ವರ್ಗವನ್ನು ಹೊಂದುವವನಾಗೆಂದು ಹೇಳಿದನು.

**ತತ್ವ||** ಪರಮೇಶ್ವರನು ಶ್ರೀರಾಮನಿಗೆ ಹೇಳಿದವಾಕ್ಯದ ತತ್ವವೇನೆಂದರೆ-ಈಶ್ವರನೆಂದರೆ ನಿಯಾಮಕನೆಂಬ ಅರ್ಥವು. ಮನುಷ್ಯನು ಯಾವ ಯಾವ ಕಾರ್ಯಗಳನ್ನು ಹೇಗೆ ಹೇಗೆ ಮಾಡುವನೋ ಹಾಗೆ ಹಾಗೆ ಫಲವನ್ನನುಭವಿಸಬೇಕೆಂಬುದರ ನಿಯಾಮಕನೇ ಈಶ್ವರನು. ಅಧಿಕಾರಿಯು ದೃಢತರವಾದ ಸಂಕಲ್ಪದೊಡನೆ ಎಷ್ಟೇಕಷ್ಟಬಂದರೂ ತನ್ನವಿವೇಕಬಲದಿಂದ ಮೋಕ್ಷಮಾರ್ಗದ ಸೋಪಾನಗಳನ್ನು ಹತ್ತಿಕೊಂಡುಬಂದರೆ ಆತ್ಮಸಾಕ್ಷಾತ್ಕಾರವಾಗಲೇ ಬೇಕೆಂಬ ನಿಯಮವನ್ನು ನಿರ್ಣಯಮಾಡಿರುವವನೇ ಈಶ್ವರನು. ಇದರಂತೆ ಪ್ರಪಂಚ ವ್ಯಾಪಾರದ ಅಭಿವೃದ್ಧಿಯಲ್ಲಿಯೂ ಅವರವರ ಕರ್ಮಗಳಿಗೆ ತಕ್ಕಫಲವನ್ನು ಅನುಭವಿಸ ಬೇಕೆಂದು ನಿರ್ಣಯ ಮಾಡಿರುವವನೇ ಈಶ್ವರನು.

ಪರಮೇಶ್ವರನು ಶ್ರೀರಾಮನೊಡನೆ ದೈವಾಧೀನದಿಂದ ದಶಕಂಠನ ವಧೆಯು ನಿನ್ನಿಂದ ಮಾಡಲ್ಪಟ್ಟಿತೆಂದು ಹೇಳಿದುದರ ತತ್ವವೇನೆಂದರೆ—ಮೋಕ್ಷವು ಸಾಧಾರಣವಾಗಿ ಎಲ್ಲರಿಗೂ ದೊರೆಯುವುದು ದುರ್ಲಭ. ಕಾರಣವೇನೆಂದರೆ ರಾವಣಾದಿಗಳ ತತ್ವದಲ್ಲಿರುವ ಅವಿದ್ಯೆಯು ನಮ್ಮನ್ನು ಬಾಹ್ಯವ್ಯಾಪಾರದಲ್ಲಿಯೇ ಬಂಧಿಸಿರುವುವು. ಮೋಕ್ಷಮಾರ್ಗಕ್ಕೆ ಈ ಅವಿದ್ಯೆಯು ಬದ್ಧವೈರಿಯಾಗಿರುವುದರಿಂದ ಬುದ್ಧಿಮನಸ್ಸುಗಳನ್ನು ಮೋಕ್ಷಮಾರ್ಗದ ಕಡೆಗೆ ಬಿಡು ವುದೇ ಇಲ್ಲ. ಒಂದುವೇಳೆ ಮೋಕ್ಷವನ್ನು ಪಡೆಯಬೇಕೆಂಬ ಇಚ್ಛೆ ಹುಟ್ಟಿದರೂ ಕಾಲ ಚಕ್ರವನ್ನು ಅನುಸರಿಸಿ ಬಂದಿರುವ ನಮ್ಮ ಪ್ರಾರಬ್ಧರೂಪವಾದ ಕರ್ಮಗಳನ್ನು ಅನುಭವಿಸುತ್ತ ವೇದಾಂತವಿಚಾರ, ಮನನ, ನಿದಿಧ್ಯಾಸ, ಸಮಾಧಿಸೋಪಾನಗಳಲ್ಲಿ ಉತ್ತೀರ್ಣತೆಯನ್ನು ಪಡೆಯುವುದು ಇನ್ನೂ ಕಷ್ಟ. ಕಾರಣವೇನೆಂದರೆ, ಹಿಂದಿನಜನ್ಮದ ಕರ್ಮ ಫಲಗಳನ್ನು ಈ ಜನ್ಮದಲ್ಲಿ ಅನುಭವಿಸಲೇಬೇಕಾಗಿದೆ. ಈಗ ಅನುಭವಿಸುವ ಪ್ರಾಪಂಚಿಕ ವ್ಯವಹಾರರೂಪವಾದ ಕರ್ಮವು ಕಾಲಚಕ್ರವನ್ನನುಸರಿಸಿ ನಮ್ಮನ್ನು ಎಳೆಯುವುದರಿಂದ ಪ್ರಾರಬ್ಧದೊಡನೆ ಹೋರಾಡಿಕೊಂಡು ಆತ್ಮವಿಚಾರ, ಮನನ, ನಿದಿಧ್ಯಾಸ, ಸಮಾಧಿಗಳ ಕ್ರಿಯೆಯಲ್ಲಿ ಉತ್ತೀರ್ಣತೆಯನ್ನು ಪಡೆಯುವುದು ಒಂದೇ ಸಮನಾಗಿ ನಡೆಯಲು ಸಾಧ್ಯ ವಿಲ್ಲ. ಆದುದರಿಂದ ಮೋಕ್ಷವನ್ನು ಪಡೆಯಲು ಕಾಲಚಕ್ರದ ಪರಿಪಕ್ವಾವಸ್ಥೆಯೂ ಬೇಕು. ಈ ಕಾಲಚಕ್ರದ ಪರಿಪಕ್ವಾವಸ್ಥೆಯು ಬರಬೇಕಾದ ತತ್ವವನ್ನು ಅನುಸರಿಸಿ ಶ್ರೀಕೃಷ್ಣ ಪರಮಾತ್ಮನು ಭಗವದ್ಗೀತೆಯಲ್ಲಿ "ಬಹೂನಾಂ ಜನ್ಮನಾಮನ್ತೇ ಜ್ಞಾನವಾನ್ಮಾಂ ಪ್ರಪದ್ಯತೆ" ಎಂಬದಾಗಿ ಹೇಳಿರುವನು. ಮನುಷ್ಯನು ತನ್ನ ವಿವೇಚನಾಶಕ್ತಿಯಿಂದ ಕಾಲಚಕ್ರದೊಡನೆ ಹೋರಾಡುತ್ತಾ "ಪ್ರಾರಬ್ಧಂತ್ವಿಹ ಭುಜ್ಯತಾಂ ಅಥಪರಬ್ರಹ್ಮಾತ್ಮನಾ ಸ್ಥೀಯತಾಂ" ಎಂಬ ಶ್ರೀಶಂಕರಭಗವತ್ಪಾದಾಚಾರ್ಯರವರ ವಾಕ್ಯದಂತೆ ಪ್ರಾರಬ್ಧಸ್ವರೂಪವಾದ ಕರ್ಮವನ್ನು

ಅನುಭವಿಸುತ್ತ ಪರಮಾತ್ಮಚಿಂತನೆಯಲ್ಲಿ ಮನಸ್ಸನ್ನು ಪ್ರಥಮದಲ್ಲಿ ಇಡುತ್ತಾ ಬರಬೇಕು. ಪರಮಾತ್ಮಸಾಕ್ಷಾತ್ಕಾರವನ್ನು ಹೊಂದಲು ಮಾಡಬೇಕಾದ ಸಾಧನೆಗಳು ಪ್ರಾರಬ್ಧಕರ್ಮಗಳ ಹೊಡೆತದಿಂದ ನಡೆಯದೇ ಇದ್ದರೂ ಈ ಸಾಧನೆಗಳನ್ನು ಮಾಡಬೇಕೆಂಬ ಬಲವತ್ತರವಾದ ಆಶೆಯು ಬೇರೂರುತ್ತಾ ಬಂದಲ್ಲಿ ಕ್ರಮೇಣ ಮುಂದಿನ ಜನ್ಮಗಳಲ್ಲಾದರೂ ಸಾಧನೆಗಳ ಕ್ರಿಯಾರೂಪವು ನಡೆದು ಉತ್ತೀರ್ಣರಾಗಬಹುದು. ಆದುದರಿಂದ ಈ ಭವಬಂಧನದಿಂದ ಬಿಡುಗಡೆಯಾಗಬೇಕಾದರೂ ಕಾಲಚಕ್ರದ ಪರಿಪಕ್ವಾವಸ್ಥೆಯೂ ಬರಲೇಕೆಂಬ ತತ್ವವೇ ಪರಮೇಶ್ವರನು ಶ್ರೀರಾಮನೊಡನೆ ದೈವಾಧೀನದಿಂದ ದಶಕಂಠನ ವಧೆಯು ನಿನ್ನಿಂದ ಮಾಡಲ್ಪಟ್ಟಿತೆಂದು ಹೇಳಿದುದರ ತತ್ವವಾಗಿರುವುದು. ಕಾಲಚಕ್ರವು ದೈವಾಧೀನವಾಗಿರುವುದೆಂದರೆ—ನಿಯಾಮಕಸ್ವರೂಪವಾಗಿರುವುದು. ದೈವಾಧೀನದಿಂದ ದಶಕಂಠನ ವಧೆಯಾಯಿತೆಂದರೆ—ಕಾಲಚಕ್ರದ ಪರಿಪಕ್ವಾವಸ್ಥೆಯು ಬಂದಿತೆಂಬ ತತ್ವವಾಗಿರುವುದು. ನಮ್ಮ ಕರ್ಮಸಮುದು ಕಾಲಚಕ್ರದ ಪರಿಪಕ್ವಾವಸ್ಥೆಯು ತಾನಾಗಿಯೇ ಬರುವುದೆಂದು ಸೋಮಾರಿತನವನ್ನು ಹೊಂದಿದರೆ ಸೋಮಾರಿತನವನ್ನು ಅನುಭವಿಸುವ ಕಾಲಚಕ್ರದ ಅವಸ್ಥೆಯೇ ಬರುವುದು. ಆದುದರಿಂದ ನಮ್ಮ ವಿವೇಕಬಲದಿಂದ ಕಾಲಚಕ್ರದ ಪರಿಪಕ್ವಾವಸ್ಥೆಯನ್ನು ಜಾಗ್ರತೆಯಾಗಿ ಹೊಂದಿ ಉತ್ತೀರ್ಣರಾಗಬಹುದು.

ನಿರ್ವಿಕಲ್ಪಸಮಾಧಿಯ ಸ್ಥಿತಿಯಲ್ಲಿರುವಿಕೆಯು ಕೆಲವರಿಗೆ ಕ್ಷಣಕಾಲ ದೊರೆತು ಮತ್ತೆ ಕೆಲವರಿಗೆ ದೀರ್ಘಕಾಲ ದೊರೆಯಲು ಕಾರಣವೇನೆಂದರೆ, ಕಾಲಚಕ್ರಸ್ವರೂಪದಲ್ಲಿರುವ ನಮ್ಮ ಪ್ರಾರಬ್ಧರೂಪವಾದ ಕರ್ಮದ ವೇಗವು ಅಧಿಕವಾಗಿದ್ದರೆ ನಿರ್ವಿಕಲ್ಪಸಮಾಧಿಯಿಂದ ಬಹಿರ್ಮುಖವಾಗುವಂತೆ ಮಾಡಿಸುವುದು. ಪ್ರಬಲವಾದ ಈ ಪ್ರಾರಬ್ಧರೂಪವಾದ ಕರ್ಮವು ಈ ಜನ್ಮ ಉತ್ಪತ್ತಿಯಾದಾಗಲೇ ಜೊತೆಯಲ್ಲಿ ಬಂದಿರುವುದರಿಂದ ಅನುಭವಿಸಲೇಬೇಕಾಗುವುದು. ಈ ಪ್ರಾರಬ್ಧಕರ್ಮದ ಸ್ವರೂಪವಾದುದೇ ರಾವಣನಲ್ಲಿದ್ದ ಪುಷ್ಪಕವಿಮಾನದ ತತ್ವವೆಂದು ಹಿಂದೆಯೇ ತಿಳಿಸಿರುತ್ತೆ. ಮುಂದೆ ಶ್ರೀರಾಮನು ಪುಷ್ಪಕವಿಮಾನವನ್ನೇರಿ ಅಯೋಧ್ಯೆಗೆ ಹೋಗುವುದೆಂದರೆ—ಪ್ರಾರಬ್ಧವೇಗವನ್ನನುಸರಿಸಿ ಬಹಿರ್ಮುಖವಾಗುವ ತತ್ವವಾಗಿರುವುದು. ಈ ಪ್ರಾರಬ್ಧದ ವೇಗವೇ ಕಾಲಚಕ್ರದ ತತ್ವವಾಗಿರುವುದರಿಂದ ಬಹಿರ್ಮುಖವಾಗಬೇಕೆಂಬ ನಿಯಾಮಕವಾಗಿರುವುದು. ಈ ತತ್ವವೇ ಪರಮೇಶ್ವರನು ಶ್ರೀರಾಮನಿಗೆ ಅಯೋಧ್ಯೆಗೆ ತೆರಳಿ ಪಟ್ಟಾಭಿಷಿಕ್ತನಾಗೆಂದು ಹೇಳಿದುದರ ತತ್ವವಾಗಿರುವುದು.

ಪರಮೇಶ್ವರನು ಶ್ರೀರಾಮನಿಗೆ ಪಟ್ಟಾಭಿಷಿಕ್ತನಾಗಿ ಪ್ರಖ್ಯಾತಿಯನ್ನು ಹೊಂದಿ ಅನಂತರ ಸ್ವರ್ಗವನ್ನು ಹೊಂದೆಂಬದಾಗಿ ಹೇಳಿದುದರ ತತ್ವವೇನೆಂದರೆ—ಆತ್ಮಸಾಕ್ಷಾತ್ಕಾರವಾದಮೇಲೆ ದೇಹವಿರುವತನಕ ಜೀವನ್ಮುಕ್ತಾವಸ್ಥೆ ಅಥವಾ ಪರಮಹಂಸತ್ವದ ತತ್ವದಲ್ಲಿ

ಪ್ರಖ್ಯಾತಿಗೊಂಡು ದೇಹಪತನವಾಗುವುದನ್ನು ನಿರೀಕ್ಷಿಸಿಕೊಂಡಿದ್ದು ಮಹಾಕಾಶದಂತೆ ಸರ್ವವ್ಯಾಪಕವಾದ ಪುನರಾವರ್ತಿಯಿಲ್ಲದ ಪರಬ್ರಹ್ಮನಾಗುವ ತತ್ವವಾಗಿರುವುದು.

**ರಾ||** ವಿಮಾನಾರೂಢನಾಗಿ ಬಂದ ದಶರಥನು ಶ್ರೀರಾಮನನ್ನು ಆಲಿಂಗಿಸಿಕೊಂಡು ತೊಡೆಯಮೇಲೆ ಕೂರಿಸಿಕೊಂಡು, ಎಲೈ ಪುತ್ರನೆ! ಸೀತಾಲಕ್ಷ್ಮಣರೊಡನೆ ಹದಿನಾಲ್ಕು ಸಂವತ್ಸರಗಳು ವನವಾಸ ಮಾಡಿದೆ. ನೀನು ಮಾಡಿದ ಪ್ರತಿಜ್ಞೆಯು ಸಫಲವಾಯಿತು. ರಾವಣನ ವಧೆಯಿಂದ ದೇವತೆಗಳು ಸಂತುಷ್ಟರಾದರು. ಈ ವ್ಯಾಪಾರವು ಬಹು ಶ್ಲಾಘ್ಯವಾದುದು. ಭರತನೊಡನೆ ಸೇರಿ ಪಟ್ಟಾಭಿಷಿಕ್ತನಾಗೆಂದು ಹೇಳಿದನು.

**ತತ್ವ||** ದಶರಥನು ಶ್ರೀರಾಮನಿಗೆ ಸ್ಥೂಲದೇಹವನ್ನು ಕೊಟ್ಟ ಪಿತೃವೆಂದು ಒಂದೆ ತಿಳಿಸಿತಷ್ಟೆ! ಅಂದರೆ ಪಿತೃದೇವತಾಸ್ವರೂಪದವನು. ಪಿತೃದೇವತೆಗಳು ಸ್ಥೂಲದೇಹವನ್ನು ಕೊಟ್ಟದ್ದಕ್ಕೆ ಆತ್ಮಸಾಕ್ಷಾತ್ಕಾರಪಡೆದುಕೊಳ್ಳುವುದೇ ಸಾರ್ಥಕವೆಂಬ ತತ್ವದ ಸೂಚನೆಯೇ ದರಶಥನು ಶ್ರೀರಾಮನಿಗೆ ದರ್ಶನಕೊಟ್ಟ ತತ್ವವಾಗಿರುವುದು. ಯಾವಾಗ ಆತ್ಮಸಾಕ್ಷಾತ್ಕಾರವುಂಟಾಯಿತೋ ದೇಹವಾಸಗಳಲ್ಲಿರುವ ಜನನಮರಣದ ಪ್ರವಾಹರೂಪದ ಬಂಧನಪರಿಹಾರವಾಯಿತೆಂಬ ತತ್ವವೇ ದಶರಥನು ಹದಿನಾಲ್ಕುಸಂವತ್ಸರದ ವನವಾಸ ಪೂರ್ಣವಾಯಿತೆಂದು ಹೇಳಿದುದರ ತತ್ವವಾಗಿರುವುದು. ಹದಿನಾಲ್ಕು ಲೋಕಗಳ ತತ್ವದಲ್ಲಿರುವ ಉಪಾಧಿಸ್ವರೂಪದ ದೇಹಗಳಿಂದ ಬಿಡುಗಡೆಯಾಯಿತೆಂಬ ತತ್ವವಾಗಿರುವುದು. ರಾವಣನ ವಧೆಯಿಂದ ದೇವತೆಗಳು ಸಂತುಷ್ಟರಾದರೆಂದರೆ—ಅವಿದ್ಯೆಯನ್ನು ನಿವೃತ್ತಿಮಾಡಿಕೊಂಡ ಮಹಾತ್ಮನು ದೇವತಾಸ್ವರೂಪನೆಂಬ ತತ್ವವಾಗಿರುವುದು. ಮುಖ್ಯವಾಗಿ ಆತ್ಮಸಾಕ್ಷಾತ್ಕಾರವನ್ನು ಪಡೆಯುವುದರಿಂದ ಪಿತೃಋಣ, ದೇವಋಣ, ಮುಂತಾದ ಸಕಲ ಋಣಗಳೂ ಪರಿಹಾರವಾಗುವ ತತ್ವವೇ ದಶರಥನು ಶ್ರೀರಾಮನಿಗೆ ದರ್ಶನ ಕೊಟ್ಟದ್ದಾಗಿರುವುದು. ಈ ವಿಚಾರದಲ್ಲಿ ಶ್ರೀಶಂಕರಭಗವತ್ಪಾದರವರು ಸರ್ವವೇದಾಂತ ಸಿದ್ಧಾಂತಸಾರ ಸಂಗ್ರಹದಲ್ಲಿ,

> ದೇವ ರ್ಷಿ ಪಿತೃ ಮರ್ತ್ಯರ್ಣಬಂಧ ಮುಕ್ತಾಸು ಕೋಟಿಶಃ |
> ಭವಬಂಧವಿಮುಕ್ತಸ್ತು ಯಃ ಕಶ್ಚಿ ದ್ಬ್ರಹ್ಮವಿತ್ತಮಃ |
> ಅಂತರ್ಬಂಧೇನ ಬದ್ಧಸ್ಯ ಕಿಂ ಬಹಿರ್ಬಂಧಮೋಚನೈಃ |
> ತದಂತರ್ಬಂಧಮುಕ್ತ್ಯರ್ಥಂ ಕ್ರಿಯತಾಂ ಕೃತಿಭಿಃ ಕೃತಿಃ ||

**ತಾ||** ದೇವ, ಋಷಿ, ಪಿತೃ ಮಾನವರ ಋಣಬಂಧನದಿಂದ ಬಿಡುಗಡೆಹೊಂದಿದವರು ಕೋಟ್ಯಾಂತರ ಜನಗಳು ಸಿಕ್ಕುವರು. ಭವಬಂಧನದಿಂದ ಬಿಡುಗಡೆ ಹೊಂದಿದ ಬ್ರಹ್ಮವಿತ್ತಮನು ಎಲ್ಲಿಯೋ ಒಬ್ಬನಿರುವನು. ಯಾಕೆಂದರೆ ಒಳಗಡೆ ಬಂಧನವಿರುವಾಗ ಹೊರಗಡೆ ಬಂಧನಗಳ ವಿಮೋಚನದಿಂದೇನಾಗುವುದು? ಆದುದರಿಂದ ಅಂತಹ ಅಂತರ್ಬಂಧನದಿಂದ ಮುಕ್ತನಾಗುವ ಕಾರ್ಯವನ್ನು ಮಾಡುತ್ತಿರಬೇಕು. ಎಂದು ಹೇಳಿರುವರು.

ಆದುದರಿಂದ ಅಂತರ್ಬಂಧನದ ಬಿಡುಗಡೆಯಾದ ಆತ್ಮಸಾಕ್ಷಾತ್ಕಾರವನ್ನು ಹೊಂದು ವುದೇ ಪುರುಷಾರ್ಥವಾಗಿಯೂ ಸರ್ವಋಣ ಬಂಧನದಿಂದ ಬಿಡುಗಡೆ ಹೊಂದು ವುದಾಗಿಯೂ ಇರುವುದು. ಅಲ್ಲದೆ ಬ್ರಹ್ಮಜ್ಞಾನವನ್ನು ಪಡೆದ ಮಹಾತ್ಮನಿಂದ ಅವನ ತಂದೆ, ತಾಯಿ, ಭಾರ್ಯೆ, ಪುತ್ರರು ಕೂಡ ಕ್ರಮೇಣ ಮುಕ್ತರಾಗುತ್ತಾರೆ. ಇದೇ ತಾತ್ಪರ್ಯಕ್ಕೆ ಮಣ್ಡಲಬ್ರಾಹ್ಮಣೋಪನಿಷತ್ತಿನಲ್ಲಿ,

"ತನ್ಮಾತೃ ಪಿತೃ ಜಾಯಾ ಪತ್ಯವರ್ಗಂಚ ಮುಕ್ತಂ ಭವತಿ"

ಎಂಬದಾಗಿ ಹೇಳಿರುತ್ತದೆ. ಆದುದರಿಂದ ಸ್ಥೂಲದೇಹ ಬಂದುದಕ್ಕೆ ಆತ್ಮಸಾಕ್ಷಾ ತ್ಕಾರಮಾಡಿಕೊಳ್ಳುವುದೇ ಸಾರ್ಥಕವೆಂಬ ತತ್ವವೇ ದಶರಥನು ಶ್ರೀರಾಮನಿಗೆ "ರಾವಣನ ವಧೆಯು ಶ್ಲಾಘ್ಯವಾದದ್ದಯ್ಯಾ" ಎಂಬದಾಗಿ ಹೇಳಿರುವುದರ ತತ್ವವಾಗಿರುವುದು.

**ರಾ||** ಅನಂತರ ದಶರಥನು ಲಕ್ಷ್ಮಣನನ್ನು ಆಲಿಂಗಿಸಿಕೊಂಡು "ಸೀತಾದೇವಿ ಯೊಡಗೂಡಿದ ಶ್ರೀರಾಮಚಂದ್ರನನ್ನು ನೀನು ಭಕ್ತಿಯಿಂದ ಸೇವಿಸಿಕೊಂಡಿದ್ದುದಕ್ಕೆ ಸಂತುಷ್ಟನಾದೆನು. ಎಲೈ ಸೌಮ್ಯನೇ! ವೇದಗಳ ಹೃದಯಸ್ವರೂಪನಾದ, ಉಪನಿಷ ದ್ವಾಕ್ಯಗಳಿಂದ ಪ್ರತಿಪಾದಿಸಲ್ಪಟ್ಟ, ಸಿದ್ಧಪುರುಷರಿಂದ ಹೊಂದಲ್ಪಡುವ ಯಾವ ಪರಬ್ರಹ್ಮ ವುಂಟೋ, ಅವನೇ ಶ್ರೀರಾಮಚಂದ್ರನು" ಎಂದು ಹೇಳಿದನು.

**ತತ್ವ||** ಲಕ್ಷ್ಮಣನು ಮನಸ್ತತ್ವದಲ್ಲಿರುವುದರಿಂದ ಮನಸ್ಸಿನ ವೃತ್ತಿಯು ಪಾದರಸ ದಂತೆ ಅತ್ಯಂತ ಚಂಚಲವಾಗಿ ಇಂದ್ರಿಯಗಳ ಮೂಲಕ ಹೋಗಿ ವಿಕಲ್ಪವಾಗುವ ಸ್ವಭಾವ ವುಳ್ಳದ್ದು. ಹೀಗೆ ವಿಕಲ್ಪವಾಗದೆ ವೈರಾಗ್ಯಸ್ವರೂಪದಿಂದ ತತ್ವಜ್ಞಾನವನ್ನು ಹೊಂದುವ ಬುದ್ಧಿವೃತ್ತಿಗೆ ಅನುವರ್ತಿಯಾಗಿರಬೇಕೆಂಬುದೇ ದಶರಥನು ಲಕ್ಷ್ಮಣನಿಗೆ ಶ್ರೀರಾಮನನ್ನು ಭಕ್ತಿಯಿಂದ ಸೇವಿಸಿಕೊಂಡಿದ್ದುದಕ್ಕೆ ಸಂತೋಷವಾಯಿತೆಂದು ಹೇಳಿದುದರ ತತ್ವ.

ಶ್ರೀರಾಮಚಂದ್ರನೇ ಪರಬ್ರಹ್ಮನೆಂದು ದಶರಥನು ಲಕ್ಷ್ಮಣನಿಗೆ ಹೇಳಿರುವ ವಾಕ್ಯದ ತತ್ವದಿಂದಲೂ, ಶ್ರೀರಾಮನೇ ಪರಬ್ರಹ್ಮನಾಗಿಯೂ, ಸರ್ವರ ಹೃದಯದಲ್ಲಿಯೂ ಅಂತ ರ್ಯಾಮಿಸ್ವರೂಪದಿಂದ ಪ್ರೇರಕನಾಗಿಯೂ, ಸರ್ವಜೀವರೂಪನಾಗಿಯೂ ಇರುತ್ತಾನೆಂಬ ಪ್ರತಿಪಾದನೆಯಾಗಿಯೂ, ಲೋಕೋದ್ಧಾರಕ್ಕಾಗಿ ಧರ್ಮಾರ್ಥಕಾಮಮೋಕ್ಷಗಳ ಮಹಿಮೆ ಗಳೇ ತನ್ನ ಅವತಾರದ ಮಹಿಮೆಯಲ್ಲಿ ತುಂಬಿತುಳುಕುವಂತೆ ಲೀಲಾವತಾರಮಾಡಿರುವ ನೆಂಬ ತತ್ವವೂ ವ್ಯಕ್ತಪಡುವುದು.

**ರಾ||** ಅನಂತರ ದಶರಥನು ಸೀತಾದೇವಿಯನ್ನು ಕುರಿತು "ಎಲೌ, ಜನಕ ನಂದಿನಿಯೇ! ಈ ಪರಿತ್ಯಾಗಬುದ್ಧಿಯನ್ನು ಕುರಿತು ನೀನು ಕೋಪಮಾಡಬೇಡ. ನಿನ್ನ

ಯಶಸ್ಸನ್ನು ಅಪೇಕ್ಷಿಸುವ ಶ್ರೀರಾಮಚಂದ್ರನು, ನಿನ್ನ ಪರಿಶುದ್ಧತೆಯ ನಿಮಿತ್ತವಾಗಿ ಹೀಗೆ ಮಾಡಿದನೇ ಹೊರತು ಮತ್ತಾವುದಕ್ಕೂ ಅಲ್ಲ" ವೆಂದು ಹೇಳಿದನು.

**ತತ್ವ||** ಸೀತಾಗ್ನಿಪ್ರವೇಶದ ತತ್ವವನ್ನು ಹಿಂದೆಯೇ ವಿವರಮಾಡಿರುವುದು. ಮುಖ್ಯವಾಗಿ ಶುದ್ಧಸತ್ವಪ್ರಧಾನವಾಯೆ ಅಥವಾ ಶುದ್ಧಸತ್ವಗುಣವು ನಿರ್ದೋಷವಾದುದಾದರೂ ಪರಮಾತ್ಮನಲ್ಲಿ ಪ್ರಕೃತಿಯು ಲೀನವಾಗುವ ಪಾರಿಶುದ್ಧ್ಯತೆಯನ್ನು ಪಡೆಯಬೇಕೆಂಬ ತತ್ವವಾಗಿರುವುದು.

**ರಾ||** ರಾವಣನ ವಧೆಯಿಂದ ಪರಮಾನಂದಭರಿತನಾದ ದೇವೇಂದ್ರನು ನಿನಗೆ ಇಷ್ಟವಾದುದನ್ನು ಅಪೇಕ್ಷಿಸೆಂದು ಶ್ರೀರಾಮನಿಗೆ ಹೇಳಿದನು. ಅದಕ್ಕೆ ಶ್ರೀರಾಮನು ಯುದ್ಧದಲ್ಲಿ ಮಡಿದ ವಾನರರೆಲ್ಲರೂ ಬದುಕುವಂತೆ ಅನುಗ್ರಹಮಾಡೆಂದು ಕೇಳಲು ಸಕಲ ವಾನರರೂ ಮಲಗಿ ಎದ್ದವರಂತೆ ಎದ್ದರು.

**ತತ್ವ||** ನಿರ್ವಿಕಲ್ಪಸಮಾಧಿಯನ್ನು ಹೊಂದಿದ ಮಹಾತ್ಮನಿಗೆ ಸಹಸ್ರಾರಕಮಲದಲ್ಲಿ ಉತ್ಪನ್ನವಾಗುವ ಅಮೃತಧಾರೆಗಳಿಂದ ಬಳಲಿಹೋಗಿದ್ದ ನಾಡಿಗಳೆಲ್ಲಾ ಪುನರ್ಜೀವಿತವಾಗುವುವೆಂಬ ತತ್ವವಾಗಿರುವುದು.

ಇನ್ನು ಶ್ರೀರಾಮನ ಪಟ್ಟಾಭಿಷೇಕ ಪ್ರಕರಣವನ್ನು ಪ್ರಾರಂಭಿಸೋಣ.

## ೪೧ನೆಯ ಪ್ರಕರಣ.

**ಶ್ರೀರಾಮನು ಅಯೋಧ್ಯೆಗೆ ಹಿಂದಿರುಗಿಬಂದು ಪಟ್ಟಾಭಿಷಿಕ್ತನಾದುದು.**



**ತತ್ವಜ್ಞಾನಸಿಂಹಾಸನಾರೋಹಣ ಅಥವಾ ಈಶ್ವರಸೋಪಾನ.**

**ರಾ||** ಚತುರ್ಮುಖಬ್ರಹ್ಮ ಮೊದಲಾದ ಸಕಲ ದೇವತೆಗಳೂ ತಮ್ಮ ತಮ್ಮ ಸ್ಥಾನಕ್ಕೆ ತೆರಳಿದರು. ಶ್ರೀರಾಮನು ಅಯೋಧ್ಯೆಗೆ ಹೊರಡಲುದ್ಯುಕ್ತನಾಗಲು ವಿಭೀಷಣನು ಕುಬೇರನ ಪುಷ್ಪಕವಿಮಾನವನ್ನು ಶ್ರೀರಾಮನಿಗೆ ಒಪ್ಪಿಸಿದನು. ಶ್ರೀರಾಮನು ಸೀತಾಲಕ್ಷ್ಮಣರೊಡನೆಯೂ, ವಿಭೀಷಣ ಸುಗ್ರೀವಾದಿ ವಾನರರೊಡನೆಯೂ ಪುಷ್ಪಕವಿಮಾನವನ್ನೇರಿ ಸೀತಾದೇವಿಗೆ ಸಕಲ ಸ್ಥಳಗಳನ್ನೂ ತೋರಿಸುತ್ತಾ ಹೊರಟನು.

**ತತ್ವ||** ಪುಷ್ಪಕವಿಮಾನವೆಂದರೆ—ಈ ದೇಹವಿರುವವರೆಗೆ ಅನುಭವಿಸಬೇಕಾಗಿರುವ ಕಾಲಚಕ್ರವನ್ನನುಸರಿಸಿ ಈ ಜನ್ಮವನ್ನು ನಾವು ಹೊಂದಿದಾಗ ಸಂಪಾದಿಸಿಕೊಂಡು ಬಂದ ಪ್ರಾರಬ್ಧಕರ್ಮವಷ್ಟೆ! ಈ ಜನ್ಮದೊಡನೆ ಬಂದಿರುವ ಜನ್ಮಾಂತರದ ಪ್ರಬಲವಾದ ಪ್ರಾರಬ್ಧಕರ್ಮದ ಅನುಭವದ ವೇಗಕ್ಕೋಸ್ಕರ ಸಮಾಧಿಯಿಂದ ಬಹಿರ್ಮುಖವಾಗಬೇಕೆಂಬ

ತತ್ತ್ವವನ್ನು ಹಿಂದಿನ ಪ್ರಕರಣದಲ್ಲಿ ತಿಳಿಸಿತು. ಇಂತಹ ಪ್ರಾರಬ್ಧಕರ್ಮದ ಆಡಳಿತಗಳ ಯಾಜಮಾನ್ಯವು ಇದುವರೆಗೂ ಅವಿದ್ಯೆಯ ಅಧೀನದಲ್ಲಿದ್ದಿತೆಂದರೆ, ಪುಷ್ಪಕವಿಮಾನವು ರಾವಣನ ಅಧೀನದಲ್ಲಿತ್ತು. ಆತ್ಮಸಾಕ್ಷಾತ್ಕಾರವಾದನಂತರ ಶ್ರೀರಾಮನ ಅಧೀನವಾಯಿತು. ಅಂದರೆ ಆತ್ಮಸಾಕ್ಷಾತ್ಕಾರದಿಂದ ಅವಿದ್ಯೆಯು ನಿಗ್ರಹವಾದುದರಿಂದ ಪ್ರಾರಬ್ಧಕರ್ಮಕ್ಕೆ ಅವಿದ್ಯೆಯ ಯಾಜಮಾನ್ಯತೆಯು ಹೋಗಿ ಬುದ್ಧಿಚೈತನ್ಯವೆ ಯಜಮಾನನಾಗುವ ತತ್ತ್ವವೇ ಶ್ರೀರಾಮನು ಪುಷ್ಪಕವಿಮಾನವನ್ನು ಹೊಂದಿರುವುದಾಗಿರುವುದು.

ಬುದ್ಧಿವೃತ್ತಿಯು ವಿಷಯವ್ಯಾಪಾರಕ್ಕೆ ಕಾರಣಗಳಾಗಿದ್ದ ಶಕ್ತಿಗಳಲ್ಲಿ ಕೆಲವನ್ನು ಉಪಸಂಹರಿಸಿಕೊಂಡು ಮತ್ತೆ ಕೆಲವನ್ನು ತನ್ನೊಡನೆ ಉಪಶಾಂತತೆಯಿಂದ ಧರಿಸಿಕೊಂಡು ಸುಷುಮ್ನಾಮಾರ್ಗದಲ್ಲಿ ಪ್ರವೇಶಿಸಿ ಬ್ರಹ್ಮರಂಧ್ರದ ತತ್ತ್ವವಾದ ಪರಮಾತ್ಮನಲ್ಲಿ ಏಕಾಕಾರವಾದ ತೈಲಧಾರೆಯಂತೆ ಲೀನವಾಗಿದ್ದುದೇ ಆತ್ಮಸಾಕ್ಷಾತ್ಕಾರದ ತತ್ತ್ವವಷ್ಟೆ! ಆತ್ಮಾಕಾರವಾಗಿದ್ದ ಬುದ್ಧಿವೃತ್ತಿಯು ಆತ್ಮಾಕಾರದಿಂದ ಬಹಿರ್ಮುಖವಾಗಿ ಸುಷುಮ್ನಾನಾಡಿಯ ಬಾಗಿಲಿಂದ ಮೂಲಾಧಾರಚಕ್ರಕ್ಕೆ ಬರುವುದು. ಅನಂತರ ಸೂರ್ಯನಾಡಿಯ ಮೂಲಕ ತನ್ನ ಸ್ವಸ್ಥಾನವಾದ ಅಂತಃಕರಣದಲ್ಲಿ ನಿಲ್ಲುವುದೇ ಶ್ರೀರಾಮನು ಪುಷ್ಪಕವಿಮಾನವನ್ನೇರಿ ಅಯೋಧ್ಯೆಗೆ ಬಂದು ಸೇರುವ ತತ್ತ್ವವು.

ಶ್ರೀರಾಮನು ಪುಷ್ಪಕವಿಮಾನವನ್ನೇರಿ ಅಯೋಧ್ಯೆಗೆ ಸೇರಿದ ತತ್ತ್ವವನ್ನು ದೇವಸ್ಥಾನದ ಚಿತ್ರಪಟಕ್ಕೂ ಹೋಲಿಸಿ ತಿಳಿದುಕೊಳ್ಳೋಣ. ದೇವಸ್ಥಾನದ ಚಿತ್ರಪಟದಲ್ಲಿ ಗರ್ಭಗುಡಿಯ ಹಿಂದಿರುವ ಅಂತಃಕರಣದ ವೃತ್ತಿಯು ಗರ್ಭಗುಡಿಗೆ ಹೋಗುವ ಬಾಗಿಲನ್ನು ತೆಗೆಸಿ ಮೂಲವಿಗ್ರಹವಿರುವ ಸ್ಥಳಕ್ಕೆ ಪ್ರವೇಶಮಾಡುವ ತತ್ತ್ವವೇ ಸೀತಾದೇವಿಯು ಅಗ್ನಿಪ್ರವೇಶಮಾಡಿದ ತತ್ತ್ವವಾದ ಆತ್ಮಸಾಕ್ಷಾತ್ಕಾರವಾಗಿರುವುದು. ಮೂಲವಿಗ್ರಹವಿರುವ ಸ್ಥಳದಿಂದ ಪುನಃ ಹಿಂದಕ್ಕೆ ಬಂದು ಒಳಪ್ರಾಕಾರದಲ್ಲಿ ತನ್ನ ಬಲಗಡೆ ಹೊರಟು ಸ್ವಸ್ಥಾನವಾದ ಗರ್ಭಗುಡಿಯ ಹಿಂದಕ್ಕೆ ಬಂದುನಿಲ್ಲುವ ತತ್ತ್ವವೇ ಶ್ರೀರಾಮನು ಪುಷ್ಪಕವಿಮಾನವನ್ನೇರಿ ಅಯೋಧ್ಯೆಗೆ ಬಂದು ಸೇರುವುದಾಗಿದೆ. ಅಂದರೆ ಗರ್ಭಗುಡಿಗೆ ಹೋಗುವ ದಾರಿಯು ತತ್ತ್ವದಲ್ಲಿರುವ ಸುಷುಮ್ನಾನಾಡಿಯಲ್ಲಿ ಬುದ್ಧಿವೃತ್ತಿಯು ಸಕಲವ್ಯಾಪಾರದೊಡನೆ ಪ್ರವೇಶಿಸಿ ಮೂಲವಿಗ್ರಹದ ತತ್ತ್ವವಾದ ಸಹಸ್ರಾರಕಮಲದಲ್ಲಿ ಲೀನವಾಗುವುದೇ ಆತ್ಮಸಾಕ್ಷಾತ್ಕಾರವೆನಿಸಿಕೊಳ್ಳುವುದಷ್ಟೆ! ಸಹಸ್ರಾರಕಮಲದಿಂದ ಹಿಂದಿರುಗಿ ಸುಷುಮ್ನೆಯಿಂದ ಕೆಳಕ್ಕೆ ಮೂಲಾಧಾರಚಕ್ರಕ್ಕೆ ಇಳಿದು ಸೂರ್ಯನಾಡಿಯ ಮೂಲಕ ಸಕಲ ವ್ಯಾಪಾರಶಕ್ತಿಗಳೊಡನೆ ಬುದ್ಧಿವೃತ್ತಿಯು ಸ್ವಸ್ಥಾನವನ್ನು ಸೇರುವುದೇ ಶ್ರೀರಾಮಚಂದ್ರನು ಸರ್ವರೊಡನೆ ಪುಷ್ಪಕವಿಮಾನವನ್ನೇರಿ ಅಯೋಧ್ಯೆಯನ್ನು ಸೇರುವುದಾಗಿರುವುದು.

ಶ್ರೀರಾಮನು ಪುಷ್ಪಕವಿಮಾನದಲ್ಲಿ ಬರುತ್ತಿರುವಾಗ ಲಂಕಾಪಟ್ಟಣ ಮೊದಲುಗೊಂಡು ಅಯೋಧ್ಯೆಯವರೆಗಿನ ಸಕಲ ಸ್ಥಳಗಳನ್ನೂ ಸೀತಾದೇವಿಗೆ ತೋರಿಸಿಕೊಂಡು ಬಂದಿರುವನಷ್ಟೆ! ಇವುಗಳ ತತ್ವವೇನೆಂದರೆ—ಸಮಾಧಿಸ್ಥಿತಿಯಲ್ಲಿದ್ದ ಬುದ್ಧಿವೃತ್ತಿಯು ಸುಷುಮ್ನೆಯಲ್ಲಿ ಆಜ್ಞಾಚಕ್ರದಿಂದ ಇಳಿದು ಮೂಲಾಧಾರಕ್ಕೆ ಬರುವ ತತ್ವವೇ ಶ್ರೀರಾಮಚಂದ್ರನು ರಾವಣ ಕುಂಭಕರ್ಣರು ನಿಗ್ರಹವಾದ ರಣರಂಗಪ್ರದೇಶವನ್ನು ಸೀತಾದೇವಿಗೆ ತೋರಿಸುತ್ತಾ ಬಂದುದಾಗಿರುವುದು. ಹೀಗೆ ಸುಷುಮ್ನೆಯಿಂದ ಮೂಲಾಧಾರಚಕ್ರಕ್ಕೆ ಬಂದನಂತರ ಮೂಲಾಧಾರದಿಂದ ಮೇಲಕ್ಕೆ ಸುಷುಮ್ನೆಯ ಹೊರಪ್ರಾಕಾರದಲ್ಲಿರುವ ಸ್ವಾಧಿಷ್ಠಾನ ಮಣಿಪೂರ, ಅನಾಹತ, ವಿಶುದ್ಧ, ಆಜ್ಞಾಚಕ್ರಗಳೊಂದೊಂದನ್ನೂ ದಾಟಿಕೊಂಡು ಬರುವುದೇ ಲಂಕಾನಗರ, ಸಮುದ್ರ, ಪಂಚವಟಿ, ಅಗಸ್ತ್ಯಾಶ್ರಮ ಮುಂತಾದ ಪ್ರದೇಶಗಳನ್ನು ಸೀತಾದೇವಿಗೆ ತೋರಿಸಿಕೊಂಡು ಬಂದುದಾಗಿರುವುದು. ಹೀಗಾಗಬೇಕಾದರೆ ಭೂತತ್ವವಾದ ಮೂಲಾಧಾರದಿಂದ ಅಂದರೆ ಅನ್ನಮಯಕೋಶವನ್ನು ಅನಂತರ ಪ್ರಾಣ, ಮನೋ ವಿಜ್ಞಾನ ಆನಂದಮಯಕೋಶಗಳನ್ನು ದಾಟಿ ಈ ಕೋಶಗಳ ಅಂತರಾಳ ಅಥವಾ ದಹರಾಕಾಶವೆನಿಸುವ ಶಿರಸ್ಸಿನಲ್ಲಿ ತನ್ನ ಸ್ಥಾನದಲ್ಲಿ ನಿಲ್ಲಲು ಹೋಗುವ ಸೂಚನೆಯಾಗಿರುವುದು. ಈ ಸೂಚನೆಯ ತತ್ವವೇ ಶ್ರೀರಾಮನು ಲಂಕಾನಗರಿ, ಸಮುದ್ರ, ಕಿಷ್ಕಿಂಧ, ಪಂಚವಟಿ, ಅಗಸ್ತ್ಯಾಶ್ರಮ, ಅತ್ರಿಮಹರ್ಷಿಗಳಾಶ್ರಮ, ಚಿತ್ರಕೂಟ, ಭರದ್ವಾಜಾಶ್ರಮ, ಗುಹನಸ್ಥಳ ಮುಂತಾದ ಪ್ರದೇಶಗಳನ್ನು ಸೀತೆಗೆ ತೋರಿಸುತ್ತಾ ಬಂದುದಾಗಿರುವುದು. ಈ ಸ್ಥಳಗಳ ತತ್ವಗಳೆಲ್ಲಾ ಸುಷುಮ್ನೆಯ ಹೊರಪ್ರಾಕಾರದಲ್ಲಿರುವ ಷಟ್ಚಕ್ರಗಳ ತತ್ವವಾದ ಪಂಚಕೋಶಗಳ ಸ್ಥಾನಗಳ ವಿವರಣೆಯೆಂಬುದನ್ನು ಹಿಂದೆಯೇ ತಿಳಿಸಿದೆ.

ಬುದ್ಧಿವೃತ್ತಿಯು ದೇಹವ್ಯಾಪಾರದ ಸಕಲ ಶಕ್ತಿಗಳೊಡಗೂಡಿ ಅನ್ನಮಯಾದಿ ಕೋಶಗಳನ್ನು ದಾಟಿ ಆನಂದ ವಿಜ್ಞಾನಮಯಕೋಶಗಳಿಗೆ ಮಧ್ಯೆ ಇರುವ ಬಿಂದು ಅಥವಾ ಬೈಂದವಸ್ಥಾನವನ್ನು ಸೇರುವ ತತ್ವವೇ ಶ್ರೀರಾಮಾದಿಗಳು ಭರದ್ವಾಜಾಶ್ರಮವನ್ನು ಸೇರಿದುದಾಗಿರುವುದು.

**ರಾ||** ಶ್ರೀರಾಮನು ಭರದ್ವಾಜಾಶ್ರಮದಿಂದ ಭರತನ ಸಂದರ್ಶನಕ್ಕಾಗಿ ಹನುಮಂತನನ್ನು ಮುಂದಾಗಿ ಕಳುಹಿಸಿದನು.

**ತತ್ವ||** ನಿರ್ವಿಕಲ್ಪಸಮಾಧಿಯಲ್ಲಿ ಶ್ವಾಸೋಚ್ಛ್ವಾಸವು ಸುಷುಮ್ನಾಂತರ್ಗತವಾಗಿ ಬ್ರಹ್ಮರಂಧ್ರದಲ್ಲಿ ಲೀನವಾಗುವುದು. ನಿರ್ವಿಕಲ್ಪಸಮಾಧಿಯಿಂದ ಇಳಿದು ಉಚ್ಛ್ವಾಸ ನಿಶ್ವಾಸರೂಪದ ಕಾರ್ಯಕ್ಕೆ ಬರದೆ ಶಿರಸ್ಸಿನಲ್ಲಿ ಅಂತಃಕರಣದ ಸ್ಥಳಕ್ಕೆ ಪ್ರಥಮದಲ್ಲಿ ನಿಂತುಕೊಂಡಲ್ಲದೆ ಬುದ್ಧಿವೃತ್ತಿಯು ತನ್ನ ಸ್ಥಾನಕ್ಕೆ ಹೋಗಿ ನೆಲೆಯಾಗಿ ನಿಲ್ಲಲು ಸಾಧ್ಯವಿಲ್ಲ. ಕಾರಣವೇನೆಂದರೆ ಶ್ವಾಸೋಚ್ಛ್ವಾಸದ ಕಾರ್ಯಪ್ರಾರಂಭವಾದರೆ ಬಹಿರ್ವ್ಯಾಪಾರವುಂಟಾ

ಗುವುದು. ಹೀಗಾದರೆ ಬುದ್ಧಿವೃತ್ತಿಯು ತನ್ನ ಸ್ಥಾನವಾದ ಬುದ್ಧಿಯಲ್ಲಿ ವೃತ್ತಿರಾಹಿತ್ಯದಿಂದ ನೆಲೆಯಾಗಿ ನಿಲ್ಲಲು ಸಾಧ್ಯವಾಗುವುದಿಲ್ಲ. ಆದುದರಿಂದ ಜೀವನ್ಮುಕ್ತಾವಸ್ಥೆ ಅಥವಾ ಉನ್ಮನೀಭಾವದಲ್ಲಿ ವಾಯುವು ಶಿರಸ್ಸಿನಲ್ಲಿ ಅಂತಃಕರಣದ ಸ್ಥಾನದಲ್ಲಿ ಪ್ರಥಮದಲ್ಲಿ ನಿಂತರೇನೇ ಉನ್ಮನೀಭಾವವುಂಟಾಗುವುದು. ಈ ತತ್ವಾರ್ಥದ ಸೂಚನೆಯೇ ಶ್ರೀರಾಮಚಂದ್ರನು ಮುಂದಾಗಿ ಹನುಮಂತನನ್ನು ಭರತನ ಸಂದರ್ಶನಕ್ಕೆ ಕಳುಹಿಸಿದ ತತ್ವವಾಗಿರುವುದು. ವಾಯುವು ತನ್ನ ಶ್ವಾಸೋಚ್ಛ್ವಾಸದ ಕಾರ್ಯವಿಲ್ಲದೆ ಶಿರಸ್ಸಿನಲ್ಲಿ ತಟಸ್ಥವಾಗಿ ನಿಲ್ಲಬೇಕೆಂಬ ತತ್ವಕ್ಕೆ ಶ್ರೀಕೃಷ್ಣಪರಮಾತ್ಮನು ಉತ್ತರಗೀತೆಯಲ್ಲಿ,

ಗಚ್ಛನ್ ತಿಷ್ಠನ್ ಸದಾಕಾಲಂ ವಾಯುಸ್ವೀಕರಣಂ ಪರಂ।
ಸರ್ವಕಾಲಪ್ರಯೋಗೇನ ಸಹಸ್ರಾಯುರ್ಭವೇ ನ್ನರಃ ॥

ತಾ॥ ತಿರುಗಾಡುವ ಕಾಲದಲ್ಲಿಯೂ, ಕುಳಿತಿರುವ ಕಾಲದಲ್ಲಿಯೂ, ಸದಾಕಾಲದಲ್ಲಿಯೂ ಚೆನ್ನಾಗಿ ವಾಯುವನ್ನು ತನ್ನ ಅಧೀನದಲ್ಲಿಟ್ಟುಕೊಳ್ಳಬೇಕು. ವಾಯುವು ಸರ್ವದಾ ತನ್ನ ಶಿರಸ್ಸಿನಲ್ಲಿ ನೆಲೆಗೊಂಡಿದ್ದರೆ ಮನುಷ್ಯನು ಸಾವಿರಾರು ವರ್ಷಗಳು ಬದುಕಿರಬಹುದು, ಎಂದು ಹೇಳಿರುವನು.

ಮೇಲಿನ ಶ್ರೀಕೃಷ್ಣಪರಮಾತ್ಮನ ವಾಕ್ಯದಂತೆ ಸಾಧಾರಣ ಮನುಷ್ಯರು ಸಂಚಾರ ಮುಂತಾದ ಕಾಲಗಳಲ್ಲಿ ವಾಯುವನ್ನು ನಿಲ್ಲಿಸಿಕೊಳ್ಳಲು ಆಗುವುದೇ ಇಲ್ಲ. ವಾಯುನಿರೋಧಕ್ಕೂ ವಾಯುಸ್ವೀಕಾರಕ್ಕೂ ಭೇದವಿರುವುದು. ಕ್ರಮವಾದ ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ ಧಾರಣ ಸಮಾಧಿಗಳ ಅನುಷ್ಠಾನಗಳಲ್ಲಿ ಯಾರು ಸಿದ್ಧಿಯನ್ನು ಪಡೆದಿರುವರೋ ಅವರು ಸುಲಭವಾಗಿ ವಾಯುವನ್ನು ಸ್ವೀಕಾರಮಾಡುವರು. ಅಂದರೆ ವಾಯುವನ್ನು ತಮ್ಮ ಶಿರಸ್ಸಿನಲ್ಲಿ ಅಂತಃಕರಣದಲ್ಲಿ ನಿಲ್ಲುವಂತೆ ಸುಲಭವಾಗಿ ಸ್ವೀಕಾರಮಾಡಿಕೊಳ್ಳುವರು. ಸಮಾಧಿಯ ಅನುಷ್ಠಾನದಲ್ಲಿ ಸಿದ್ಧಿಯನ್ನು ಪಡೆಯದೆ ಇರತಕ್ಕವರು ಪ್ರಾಣಾಯಾಮದ ಅನುಷ್ಠಾನದಿಂದ ವಾಯುನಿರೋಧವನ್ನು ಅಭ್ಯಾಸಮಾಡಬೇಕಾಗಿರುವುದು. ಪ್ರಾಣಾಯಾಮದ ಅನುಷ್ಠಾನವೇ ತಿಳಿಯದ ಸಾಧಾರಣ ಜನರು ಯಾವಕಾಲದಲ್ಲಿಯೂ ಚೆನ್ನಾಗಿ ವಾಯುವನ್ನು ನಿರೋಧಮಾಡಲು ಮತ್ತು ಸ್ವಿಕಾರಮಾಡಲು ಶಕ್ತರಲ್ಲ.

ಆದುದರಿಂದ ಹನುಮಂತನು ಪ್ರಥಮದಲ್ಲಿ ಭರದ್ವಾಜಾಶ್ರಮದಿಂದ ಅಯೋಧ್ಯೆಗೆ ಬಂದ ತತ್ವಾರ್ಥವೇ ಶ್ವಾಸೋಚ್ಛ್ವಾಸದ ವಾಯುವು ತನ್ನ ಕಾರ್ಯವನ್ನು ಮಾಡದೆ ಅಂತಃಕರಣದಲ್ಲಿ ಹೋಗಿ ನಿಲ್ಲುವ ತತ್ವವಾಗಿರುವುದು. ಈ ವಿಧವಾಗಿ ವಾಯುವು ಅಂತಃಕರಣದಲ್ಲಿ ಹೋಗಿ ನಿಲ್ಲುವಿಕೆಯು ಜೀವನ್ಮುಕ್ತ ಅಥವಾ ಪರಮಹಂಸರಿಗಲ್ಲದೆ ಅನ್ಯರಿಗೆ ಸಾಧ್ಯವಿಲ್ಲ.

**ರಾ||** ಹನುಮಂತನು ಭರದ್ವಾಜಾಶ್ರಮದಿಂದ ಅಯೋಧ್ಯೆಗೆ ಹೋದಾಗ ಮನುಷ್ಯ ರೂಪದಲ್ಲಿ ಹೋದನು. ಅಲ್ಲದೆ ಸಕಲ ವಾನರರೂ ಶ್ರೀರಾಮನೊಡನೆ ಭರದ್ವಾಜಾಶ್ರಮ ದಿಂದ ಹೊರಟಾಗ ಮನುಷ್ಯರೂಪದಲ್ಲಿಯೇ ಹೊರಟರು.

**ತತ್ವ||** ಆತ್ಮಸಾಕ್ಷಾತ್ಕಾರಮಾಡಿಕೊಂಡವರಿಗೆ ಜೀವನ್ಮುಕ್ತ ಅಥವಾ ಪರಮಹಂಸ ರೆಂಬ ನಾಮಧೇಯವು ಶ್ರುತಿಸ್ಮೃತಿಪಾದ್ಯವಾಗಿರುವುದು. ಆದುದರಿಂದ ಇನ್ನು ಮುಂದೆ ಶ್ರೀರಾಮಚಂದ್ರನ ತತ್ವವು ಜೀವನ್ಮುಕ್ತ ಅಥವಾ ಪರಮಹಂಸನ ಸ್ಥಿತಿಯಾಗಿರುವುದು.

ಈ ಜೀವನ್ಮುಕ್ತರಲ್ಲಿ ಶ್ವಾಸೋಚ್ಛ್ವಾಸ ಮುಂತಾದ ವಾಯುಗಳು ದೇಹವ್ಯಾಪಾರ ಮಾಡದೆ ಭ್ರೂಮಧ್ಯದಿಂದ ಮೇಲಕ್ಕೆ ಹೋಗಿ ಅಂತಃಕರಣದಲ್ಲಿ ನಿಲ್ಲುವಾಗ ಜ್ಞಾನಮಯ ವಾಗುವ ತತ್ವವೇ ಹನುಮಂತ ಮುಂತಾದ ವಾನರರೆಲ್ಲ ಭರದ್ವಾಜಾಶ್ರಮವನ್ನು ಬಿಟ್ಟಮೇಲೆ ಮನುಷ್ಯರೂಪವನ್ನು ತಾಳಿದುದರ ತತ್ವವಾಗಿರುವುದು. ಮನು ಎಂಬ ಧಾತುವಿನ ಮೇಲೆ ಸಕಲವನ್ನೂ ತಿಳಿಯುವುದು ಜ್ಞಾನ. ಆದುದರಿಂದ ಜೀವನ್ಮುಕ್ತರು ವಾಯುಗಳನ್ನು ಭ್ರೂಮಧ್ಯದಿಂದ ಮೇಲಕ್ಕೆ ಅಂತಃಕರಣಕ್ಕೆ ಸ್ವೀಕರಿಸಿಕೊಂಡಾಗ ವಾಯುಗಳೂ ಆನಂದ ಮತ್ತು ಜ್ಞಾನಮಯವಾಗುವುವೆಂಬ ತತ್ವವೇ ಹನುಮಂತನೇ ಮೊದಲಾದ ವಾನರರು ಮನುಷ್ಯರೂಪವನ್ನು ತಾಳಿದ ತತ್ವವಾಗಿರುವುದು. ಈ ತತ್ವವು ಸ್ವಾನುಭವವೊಂದರಿಂದಲೇ ತಿಳಿಯತಕ್ಕದ್ದಾಗಿ ಪರಮಹಂಸರ ಲಕ್ಷಣವಾಗಿರುವುದು.

**ರಾ||** ಭರದ್ವಾಜಾಶ್ರಮದಿಂದ ಅಯೋಧ್ಯೆಯವರೆಗೆ ಅಮೃತಸದೃಶವಾಗಿಯೂ, ಮಧುವನ್ನು ಸ್ರವಿಸುವುದಾಗಿಯೂ ಇರುವ ಫಲಗಳಿಂದ ಸರ್ವಕಾಲದಲ್ಲಿಯೂ ನಿಬಿಡ ವಾಗಿರುವ ವೃಕ್ಷಗಳಾಗಲೆಂದು ಭರದ್ವಾಜಮುನಿಯು ಶ್ರೀರಾಮನಿಗೆ ವರವನ್ನು ಕೊಟ್ಟನು.

**ತತ್ವ||** ಭ್ರೂಮಧ್ಯದಮೇಲೆ ಅಂತಃಕರಣವಿರುವ ಪ್ರದೇಶವೆಲ್ಲ ಅಮೃತಸ್ವರೂಪ ವಾಗಿರುವುದೆಂಬ ತತ್ವವಾಗಿರುವುದು. ಭ್ರೂಮಧ್ಯದಮೇಲೆ ಇರುವ ಸ್ಥಾನವೆಲ್ಲಾ ದಹರಾಕಾಶವೆನಿಸಿ ಅಲ್ಲಿಂದ ಅಮೃತಸ್ರಾವವಾಗುವುದರಿಂದ ಈ ಪ್ರದೇಶವು ಅಮೃತಮಯ ವಾಗಿರುವುದು.

**ರಾ||** ಶ್ರೀರಾಮನು ಹಿಂದಿರುಗಿ ಬರುವುದನ್ನೇ ನಿರೀಕ್ಷಿಸಿಕೊಂಡಿದ್ದ ಭರತನು ಸರ್ವ ರಾಜ್ಯಭಾರವನ್ನೂ ಶ್ರೀರಾಮಚಂದ್ರನಿಗೆ ವಹಿಸಿ ಪಟ್ಟಾಭಿಷಿಕ್ತನಾಗುವಂತೆ ಕೇಳಿಕೊಂಡನು.

**ತತ್ವ||** ಶ್ರೀರಾಮಚಂದ್ರನು ಹದಿನಾಲ್ಕು ವರ್ಷ ವನವಾಸ ಮಾಡುವುದೆಂದರೆ— ಹದಿನಾಲ್ಕು ಲೋಕಗಳ ತತ್ವದಲ್ಲಿರುವ ಈ ದೇಹದಲ್ಲಿ ಪ್ರತಿಬಿಂಬಚೈತನ್ಯವು ಬುದ್ಧಿವೃತ್ತಿ ಯೊಡನೆ ವ್ಯಾಪಿಸಿ ಅವಿದ್ಯಾ ಉಪಾಧಿಯೊಡಗೂಡಿತ್ತೆಂದು ಹಿಂದೆಯೇ ತಿಳಿಸಿತಷ್ಟೆ! ಅವಿದ್ಯಾ ಉಪಾಧಿಯನ್ನು ನಿವೃತ್ತಿಮಾಡಿಕೊಂಡು ಪುನಃ ಸ್ವಸ್ಥಾನವಾದ ಬುದ್ಧಿಯಲ್ಲಿ ನಿಲ್ಲುವುದೇ ಶ್ರೀರಾಮಚಂದ್ರನು ವನವಾಸ ಪೂರ್ತಿಮಾಡಿಕೊಂಡು ಬಂದ ತತ್ವ.

ಶ್ರೀರಾಮನ ವನವಾಸದ ತತ್ವವಾದ ಬಾಹ್ಯವ್ಯಾಪಾರದಲ್ಲಿ ರಾಜ್ಯಭಾರವೆಂದರೆ ದೇಹ ವ್ಯಾಪಾರವು ಭರತನ ಆಳ್ವಿಕೆಯ ತತ್ವದಲ್ಲಿತ್ತು. ಅಂದರೆ ನಿಸ್ಸಂಗತ್ವದಿಂದಲೂ, ಸಕಲ ವ್ಯಾಪಾರದ ಫಲವನ್ನು ಪರಮಾತ್ಮನಲ್ಲಿ ಅರ್ಪಣೆಮಾಡುವ ವಿಧವಾದ ಕರ್ಮಮಾರ್ಗದ ತತ್ವದಲ್ಲಿಯೂ ಅಭಿಮಾನವಿತ್ತೆಂಬ ತತ್ವವಷ್ಟೆ! ಈಗ ಶ್ರೀರಾಮಚಂದ್ರನು ವನವಾಸ ಪೂರ್ತಿ ಮಾಡಿಕೊಂಡು ಬಂದುದೆಂದರೆ—ಅವಿದ್ಯೆಯ ಉಪಾಧಿಯನ್ನು ನಿವೃತ್ತಿಮಾಡಿಕೊಂಡು ಪ್ರತಿಬಿಂಬಚೈತನ್ಯವು ತನ್ನ ಸ್ಥಾನವಾದ ಬುದ್ಧಿಯಲ್ಲಿ ವೃತ್ತಿರಾಹಿತ್ಯದಿಂದ ನಿಲುಗಡೆ ಯಾಗುವ ಜೀವನ್ಮುಕ್ತ ಅಥವಾ ಪರಮಹಸಂತ್ವದ ಲಕ್ಷಣವಾಗಿರುವುದು. ಈ ಸೋಪಾನ ವನ್ನು ಹೊಂದಿದಮೇಲೆ ಅಭಿಮಾನಕ್ಕೆ ಆಳ್ವಿಕೆಯೇ ಇರುವುದಿಲ್ಲವೆಂಬ ತತ್ವದ ಸೂಚ ನೆಯೇ ಭರತನು ಶ್ರೀರಾಮನಿಗೆ ಪಟ್ಟಕಟ್ಟಿಕೊಳ್ಳಲು ಹೇಳಿದ ಮತ್ತು ಶ್ರೀರಾಮನು ಪಟ್ಟ ಕಟ್ಟಿಕೊಂಡುದರ ತತ್ವವಾಗಿರುವುದು.

**ರಾ||** ಶ್ರೀರಾಮನು ಅಯೋಧ್ಯೆಗೆ ಬಂದು ಇಳಿದು ಪುಷ್ಪಕವಿಮಾನವನ್ನು ಕುರಿತು ನೀನು ಕುಬೇರನ ಸಮೀಪಕ್ಕೆ ಹೋಗಿ ಆತನನ್ನು ಹೊಂದಿರೆಂದು ಹೇಳಿ ಕಳುಹಿಸಿದನು.

**ತತ್ವ||** ನಮ್ಮಲ್ಲಿ ಪುಷ್ಪಕವಿಮಾನವೆಂದರೆ-ಈ ಜನ್ಮದಲ್ಲಿ ಅನುಭವಿಸುವುದಕ್ಕೋಸ್ಕರ ಬಂದಿರುವ ಪ್ರಾರಬ್ಧಕರ್ಮಸ್ವರೂಪದ ವಾಸನೆಯೆಂಬ ತತ್ವಾರ್ಥವೆಂದು ಹಿಂದಿನಿಂದಲೂ ತಿಳಿಸಿಕೊಂಡು ಬಂದಿದೆ. ಈ ಪುಷ್ಪಕವಿಮಾನವು ಕುಬೇರನ ಸಂಬಂಧವಾದುದೆಂದರೆ— ಪ್ರಾರಬ್ಧಕರ್ಮಸ್ವರೂಪವು ವಾಸನೆಯ ರೂಪದಲ್ಲಿದ್ದುಕೊಂಡು ವಿಕಸಿತವಾಗುವುದರಿಂದ ವಾಸನೆಯು ಕುತ್ಸಿತದೇಹಸ್ವರೂಪವಾದುದು. ಆದುದರಿಂದ ಪ್ರಾರಬ್ಧಕರ್ಮಸ್ವರೂಪ ವನ್ನುಂಟುಮಾಡುವ ವಾಸನೆಯು ಕಾರ್ಯಕ್ಕೋಸ್ಕರ ವಿಕಸಿತವಾಗದೆ ಕುತ್ಸಿತವಾದ ವಾಸನಾಮಯದೇಹದಲ್ಲಿಯೇ ನೆಲೆಗೊಂಡಿರಲೆಂಬ ತತ್ವವೇ ಪುಷ್ಪಕವಿಮಾನವು ಕುಬೇರ ನನ್ನು ವಹಿಸಿದ ತತ್ವವಾಗಿರುವುದು. ಅಂದರೆ ಬುದ್ಧಿಗೆ ವೃತ್ತಿಯಿಲ್ಲದೆ ಸ್ವಸ್ಥಾನದಲ್ಲಿ ನಿಲ್ಲುವ ಸ್ವರೂಪದಲ್ಲಿ ಪ್ರಾರಬ್ಧಕರ್ಮದ ವಾಸನೆಗೆ ಕಾರ್ಯವಿಲ್ಲದೆ ಕುತ್ಸಿತದೇಹಸ್ವರೂಪ ದಲ್ಲಿರುವುದೆಂಬ ತತ್ವವು.

**ರಾ||** ಜ್ಞಾನವಯೋವೃದ್ಧರಾದ ವಸಿಷ್ಠಮಹರ್ಷಿಗಳು ಸೀತಾಸಮೇತನಾದ ಶ್ರೀರಾಮಚಂದ್ರಸ್ವಾಮಿಯನ್ನು ರತ್ನಮಯವಾದ ಸಿಂಹಾಸನದಲ್ಲಿ ಕುಳ್ಳಿರಿಸಿ, ಸಪ್ತ ಸಮುದ್ರಗಳಿಂದಲೂ ಅನೇಕ ನದಿಗಳಿಂದಲೂ ತರಿಸಲ್ಪಟ್ಟ ಉದಕಗಳಿಂದ ದೇವತೆ ಗಳೊಡನೆಯೂ, ಋತ್ವಿಜರೊಡನೆಯೂ ಕೂಡಿ ಅಭಿಷೇಕಮಾಡಿ, ಪುರಾತನವಾಗಿಯೂ, ಚತುರ್ಮುಖಬ್ರಹ್ಮ ನಿರ್ಮಿತವಾಗಿಯೂ, ಮನುಚಕ್ರವರ್ತಿಯಿಂದ ಬಂದುದಾಗಿಯೂ ಇರುವ ರತ್ನಗಳಿಂದ ಹೊಳೆಯುತ್ತಿರುವ ಕಿರೀಟವನ್ನು ಧರಿಸಿ ಪಟ್ಟಾಭಿಷೇಕ ಮಹೋತ್ಸವ ವನ್ನು ನೆರವೇರಿಸಿದರು.

ತತ್ವ|| ಶ್ರೀರಾಮಚಂದ್ರನ ಪಟ್ಟಾಭಿಷೇಕದ ತತ್ವವೇನೆಂದರೆ—ಪಂಚಕೋಶಗಳ ಉಪಾಧಿಗಳನ್ನು ಪರಿಹರಿಸಿಕೊಳ್ಳಲು ಬುದ್ಧಿವೃತ್ತಿಯು ಬ್ರಹ್ಮರಂಧ್ರದ ಮಾರ್ಗದಲ್ಲಿ ಹೊರಟು ಸಹಸ್ರಾರ ಅಥವಾ ಬ್ರಹ್ಮರಂಧ್ರದ ತತ್ವವಾದ ಪರಬ್ರಹ್ಮನಲ್ಲಿ ಲೀನವಾದರೆ ಬುದ್ಧಿವೃತ್ತಿಯೊಡನಿರುವ ಪ್ರತಿಬಿಂಬಚೈತನ್ಯಕ್ಕೂ ಬ್ರಹ್ಮರಂಧ್ರಸ್ಥಿತ ಪರಬ್ರಹ್ಮನಿಗೂ ಏಕತ್ವವೆಂದರೆ ಸಾಕ್ಷಾತ್ಕಾರವುಂಟಾಗುವುದೆಂದು ಹಿಂದಿನ ಪ್ರಕರಣಗಳಲ್ಲಿ ತಿಳಿಸಿದೆ. ಹೀಗೆ ಆತ್ಮಸಾಕ್ಷಾತ್ಕಾರವಾಗುವ ಕಾಲದಲ್ಲಿ ಪಂಚಕೋಶಗಳ ಉಪಾಧಿಗಳನ್ನು ದಾಟಿರುವಂತೆ ಆತ್ಮಸಾಕ್ಷಾತ್ಕಾರದ ಸಮಾಧಿಯಿಂದ ಹಿಂದಕ್ಕೆ ಬಂದು ವೃತ್ತಿರಾಹಿತ್ಯದಿಂದ ಬುದ್ಧಿಯಲ್ಲಿ ನಿಲುಗಡೆಯಾಗುವ ತತ್ವದಲ್ಲಿಯೂ ಪಂಚಕೋಶಗಳ ಉಪಾಧಿಗಳಿಂದ ಬಿಡಲ್ಪಟ್ಟ ಸ್ವರೂಪ ವಾಗಿರುವುದು.

ಹೀಗೆ ಸಹಸ್ರಾರಕಮಲದಲ್ಲಿ ಬುದ್ಧಿವೃತ್ತಿಯು ಏಕಾಕಾರವಾಗಿ ಲಯವಾಗಬೇಕಾ ದರೂ ಪಂಚಕೋಶಗಳ ಉಪಾಧಿಗಳನ್ನು ಮೀರಿಹೋಗಬೇಕೆಂಬ ವಿಚಾರವು ಯುದ್ಧ ಕಾಂಡದಲ್ಲಿಯೇ ಬಂದಿರುವುದು. ಬುದ್ಧಿವೃತ್ತಿಯು ವೃತ್ತಿರಾಹಿತ್ಯದಿಂದ ಬುದ್ಧಿಯಲ್ಲಿಯೇ ನಿಲುಗಡೆಯಾಗುವುದಕ್ಕೆ ಶ್ರೀರಾಮನು ಅಯೋಧ್ಯೆಗೆ ಬಂದು ಪುಷ್ಪಕವಿಮಾನವನ್ನು ಕುಬೇರನಲ್ಲಿಗೆ ಕಳುಹಿಸಿದ ವಿಚಾರಗಳ ತತ್ವಗಳು ಅನ್ವಯವಾಗುವುವು. ಆದುದರಿಂದ ಬುದ್ಧಿವೃತ್ತಿಯು ಸಹಸ್ರಾರಕಮಲದಲ್ಲಿ ಲೀನವಾಗುವ ತತ್ವಕ್ಕೂ, ವೃತ್ತಿರಾಹಿತ್ಯದಿಂದ ಮೂಕನಂತೆ ಬುದ್ಧಿಯಲ್ಲಿ ನಿಂತುಕೊಳ್ಳುವುದಕ್ಕೂ, ಪಂಚಕೋಶಗಳ ಉಪಾಧಿಗಳನ್ನು ಮೀರಿರುವ ಸ್ವರೂಪವಾಗಿರಬೇಕು.

ಆದುದರಿಂದ ಶ್ರೀರಾಮಚಂದ್ರನು ಅಯೋಧ್ಯೆಯಲ್ಲಿ ರತ್ನಸಿಹ್ಮಾಸನದಲ್ಲಿ ಪಟ್ಟಾ ಭಿಷಿಕ್ತನಾದನೆಂದರೆ—ಅಧಿಕಾರಿಯ ಪ್ರತಿಬಿಂಬಚೈತನ್ಯವು ಬುದ್ಧಿಗೆ ವೃತ್ತಿರಹಿತವಾಗು ವುದರಿಂದ ಜೀವಸೋಪಾನವನ್ನು ದಾಟಿ ತನ್ನಲ್ಲಿಯೇ ಇರುವ ಈಶ್ವರಸೋಪಾನದಲ್ಲಿ ನಿಂತು ತನ್ನ ತೇಜಸ್ಸಿನಿಂದ ಸಾಕ್ಷಿಮಾತ್ರವಾಗಿ ಬೆಳಗುತ್ತಿರುವ ತತ್ವವಾಗಿರುವುದು. ಆದುದರಿಂದ ವೃತ್ತಿರಹಿತವಾದ ಬುದ್ಧಿಯಲ್ಲಿ ಪ್ರಕಾಶಿಸಿಕೊಂಡು ಇರುವಿಕೆಯ ಸೋಪಾನವು ಬುದ್ಧಿ ವೃತ್ತಿಯನ್ನು ಪ್ರಕಾಶಪಡಿಸಿಕೊಂಡಿರುವ ಸೋಪಾನಕ್ಕಿಂತಲೂ ಉತ್ತಮ ಸೋಪಾನ ವಾಗಿರುವುದರಿಂದ ಮುಕ್ತಸೋಪಾನವೆಂದೇ ಹೇಳಬೇಕು. ಕಾರಣವೇನೆಂದರೆ—ಸಹಸ್ರಾರ ವೆಂದರೆ ಬ್ರಹ್ಮರಂಧ್ರದಲ್ಲಿ ಬುದ್ಧಿವೃತ್ತಿಯು ಏಕಾಕಾರವಾಗಿ ಲೀನವಾಗುವ ಲಕ್ಷ್ಯವು ಹೇಗೆ ಶ್ರೇಷ್ಠವೋ ಹಾಗೆ ವೃತ್ತಿರಾಹಿತ್ಯದಿಂದ ನಿಲುಗಡೆಯಾಗುವ ಬುದ್ಧಿಸ್ಥಿತಿಯನ್ನು ಪಡೆಯು ವುದೂ ಮುಕ್ತಸೋಪಾನವೆನ್ನುವ ತಾತ್ಪರ್ಯಕ್ಕೆ ಮಣ್ಡಲಬ್ರಾಹ್ಮಣೋಪನಿಷತ್ತಿನಲ್ಲಿ,

ಅನ್ತರ್ಲಕ್ಷ್ಯಂ ಜಲಜ್ಯೋತಿಸ್ಸ್ವರೂಪಂ ಭವತಿ |
ಮಹರ್ಷಿವೇದ್ಯಮನ್ತರ್ಬಾಹ್ಯೇನ್ದ್ರಿಯೈ ರದೃಶ್ಯಂ ||

ಸಹಸ್ರಾರೆ ಜಲಜ್ಯೋತಿ ರನ್ತರ್ಲಕ್ಷ್ಯಂ ಬುದ್ಧಿಗುಹಾಯಾಂ |
ಸರ್ವಾಙ್ಗಸುನ್ದರಂ ಪುರುಷರೂಪ ಮನ್ತರ್ಲಕ್ಷ್ಯಂ ಮಿತ್ಯಪರೇ ||

ತಾ|| ಅನ್ತರ್ಲಕ್ಷ್ಯವು ಅಮೃತಸ್ವರೂಪವಾಗಿಯೂ ಸ್ವಯಂಪ್ರಕಾಶ ಸ್ವರೂಪವಾಗಿಯೂ ಇರುವುದು. ಇದನ್ನು ಮಹರ್ಷಿಗಳು ಸ್ವಾನುಭವದಿಂದ ತಿಳಿದಿರುವರು. ಈ ಅನ್ತರ್ಲಕ್ಷ್ಯದ ಸ್ಥಿತಿಯು ಬಾಹ್ಯೇಂದ್ರಿಯ ಅಂತರೇಂದ್ರಿಯಗಳಿಂದ ತಿಳಿಯಲು ಸಾಧ್ಯವಿಲ್ಲ. ಸಹಸ್ರಾರಕಮಲವೇ ಜಲಜ್ಯೋತಿಸ್ವರೂಪವಾದ ಅಂತರ್ಲಕ್ಷ್ಯವೆನಿಸುವುದು. ಬುದ್ಧಿಯ ಗುಹೆಯಲ್ಲಿನ ಸರ್ವಾಂಗಸುಂದರನಾದ ಪರಮಪುರುಷನ ಸ್ವರೂಪವೂ ಅಂತರ್ಲಕ್ಷ್ಯವೆಂದು ಕೆಲವರು ಹೇಳುವರು-ಎಂದು ಹೇಳಿರುವುದು.

ಆದುದರಿಂದ ಶ್ರೀರಾಮಚಂದ್ರನ ಪಟ್ಟಾಭಿಷೇಕದ ತತ್ವವಾದ ವೃತ್ತಿರಾಹಿತ್ಯದಿಂದ ನಿಲುಗಡೆಯಾಗುವ ಬುದ್ಧಿಸ್ಥಿತಿಯನ್ನು ಪಡೆಯುವುದು ಈಶ್ವರಸೋಪಾನವಾಗಿ ಮುಕ್ತಿ ಸೋಪಾನವಾಗಿಯೇ ಇರುವುದು. ಕಾರಣವೇನೆಂದರೆ, ಭ್ರೂಮಧ್ಯದ ಮೇಲ್ಭಾಗದ ಶಿರಸ್ಸಿನ ಪ್ರದೇಶವೆಲ್ಲ ಪರಮಾತ್ಮಸ್ಥಾನವಾಗಿ ಸರ್ವಶ್ರೇಷ್ಠವಾದ ದಹರಾಕಾಶವೆನಿಸಿಕೊಳ್ಳುವುದು. ಅಪಂಚೀಕೃತವಾದ ಅಂತಃಕರಣವು ಈ ಸ್ಥಳದಲ್ಲಿಯೇ ಇರುವುದೆಂದು ಮನುಷ್ಯನ, ದೇವಸ್ಥಾನದ ಚಿತ್ರಪಟಗಳ ಮೂಲಕ ವಿವರಿಸಿದೆ. ಬುದ್ಧಿಗೆ ಉಂಟಾಗುವ ವೃತ್ತಿಯು ಶ್ರೀರಾಮನು ವನವಾಸಕ್ಕೆ ಹೊರಟ ತತ್ವದಂತೆ ಆನಂದ ವಿಜ್ಞಾನಮಯಕೋಶಗಳಲ್ಲಿ ಪ್ರಸರಿಸಿಕೊಂಡು ಕೊನೆಗೆ ಅನ್ನಮಯಕೋಶದ ವ್ಯಾಪಾರದಲ್ಲಿ ನಿಲ್ಲುವುದು. ಮೋಕ್ಷಕ್ರಮದಲ್ಲಿ ಅನ್ನಮಯಕೋಶಕ್ಕೆ ಪ್ರಧಾನವಾದ ಭೂತತ್ವವಾದ ಮೂಲಾಧಾರದಿಂದಲೇ ಸುಷುಮ್ನಾಮಾರ್ಗದಲ್ಲಿ ಪ್ರವೇಶಿಸಿ ಚಕ್ರಗಳು ಅಥವಾ ಗ್ರಂಥಿಗಳನ್ನು ಛೇದಿಸಿಕೊಂಡು ಬುದ್ಧಿವೃತ್ತಿಯು ಸಹಸ್ರಾರದಲ್ಲಿ ಲೀನವಾಗುವುದರಿಂದ ಬುದ್ಧಿಯಲ್ಲಿರುವ ಪ್ರತಿಬಿಂಬ ಚೈತನ್ಯವು ಉಪಾಧಿರಹಿತವಾಗುವುದರಿಂದ ಸಹಸ್ರಾರದಲ್ಲಿರುವ ಪರಬ್ರಹ್ಮನ ಸಮತ್ವವನ್ನು ಪಡೆಯುವುದು. ಇದರ ತತ್ವವನ್ನು ಹಿಂದಿನ ಆತ್ಮಸಾಕ್ಷಾತ್ಕಾರ ಪ್ರಕರಣದಲ್ಲಿಯೇ ವಿವರಿಸಿದೆ. ಸಹಸ್ರಾರಕಮಲದಲ್ಲಿ ಲೀನವಾಗಿದ್ದ ಬುದ್ಧಿವೃತ್ತಿಯು ಹಿಂದಿರುಗಿ ತನ್ನ ಸ್ಥಾನಕ್ಕೆ ಬಂದು ನಿಲುಗಡೆಯಾಗಬೇಕಾದರೆ ಪಂಚಕೋಶಗಳನ್ನೂ ವಿಚಾರಿಸಿ ಬರಬೇಕಾಗುವುದು. ಆದುದರಿಂದ ಸಹಸ್ರಾರಕಮಲಕ್ಕೆ ಹೋಗಬೇಕಾದರೂ, ವೃತ್ತಿಯಿಲ್ಲದ ಶುದ್ಧವಾದ ಬುದ್ಧಿಯ ಸ್ವರೂಪವು ನಿಲುಗಡೆಯಾಗಬೇಕಾದರೂ ಪಂಚಕೋಶಗಳನ್ನತಿಕ್ರಮಿಸಿದ ಪ್ರದೇಶವಾಗಿರಬೇಕು.

ಈ ತತ್ವಕ್ಕೆ ಅನುಸಾರವಾಗಿಯೇ ಶ್ರೀರಾಮಚಂದ್ರನು ಲಂಕೆಯಿಂದ ಸೀತಾದೇವಿಯೊಡನೆ ಅಯೋಧ್ಯೆಗೆ ಬರುವಾಗ ಮಾರ್ಗದಲ್ಲಿರುವ ಪುಣ್ಯಸ್ಥಳಗಳನ್ನು ತೋರಿಸುತ್ತಾ

ಚಿತ್ರಕೂಟ ಗುಹನಸ್ಥಳಗಳನ್ನೂ ತೋರಿಸಿಕೊಂಡು ಅಯೋಧ್ಯೆಗೆ ಬಂದು ಸೇರಿರುವನು. ಅಂದರೆ ಪಂಚಕೋಶಗಳನ್ನು ದಾಟಿ ಬುದ್ಧಿವೃತ್ತಿಯು ತನ್ನ ಸ್ಥಾನದಲ್ಲಿ ನಿಲುಗಡೆಯಾಗಿ ನಿಂತ ತತ್ವವಾಗಿರುವುದು. ಈ ತತ್ವಾರ್ಥಕ್ಕೆ ತೈತ್ತಿರೀಯೋಪನಿಷತ್ತಿನ ಪ್ರಮಾಣವನ್ನು ಅನ್ವಯಮಾಡಬಹುದು.

ಏತಮನ್ನಮಯ ಮಾತ್ಮಾನ ಮುಪಸಂಕ್ರಾಮತಿ |
ಏತಂ ಪ್ರಾಣಮಯ ಮಾತ್ಮಾನ ಮುಪಸಂಕ್ರಾಮತಿ |
ಏತಂ ಮನೋಮಯ ಮಾತ್ಮಾನ ಮುಪಸಂಕ್ರಾಮತಿ |
ಏತಂ ವಿಜ್ಞಾನಮಯ ಮಾತ್ಮಾನ ಮುಪಸಂಕ್ರಾಮತಿ |
ಏತ ಮಾನಂದಮಯ ಮಾತ್ಮಾನ ಮುಪಸಂಕ್ರಾಮತಿ |

ಈ ಮೇಲಿನ ಶ್ರುತಿಪ್ರಮಾಣವನ್ನು ಯುದ್ಧಪ್ರಾರಂಭದಿಂದ ಸೀತಾದೇವಿಯ ಅಗ್ನಿ ಪ್ರವೇಶದ ತತ್ವದವರೆಗೂ ಅನ್ವಯಮಾಡಬಹುದು. ಅಲ್ಲದೆ ಶ್ರೀರಾಮಚಂದ್ರನು ಲಂಕೆ ಯಿಂದ ಅಯೋಧ್ಯೆಗೆ ಬಂದು ಪಟ್ಟಾಭಿಷಿಕ್ತನಾದ ತತ್ವಕ್ಕೂ ಅನ್ವಯಮಾಡಬಹುದು.

ಆದುದರಿಂದ ಬುದ್ಧಿವೃತ್ತಿಯನ್ನು ಲಯಮಾಡಿಕೊಳ್ಳುವುದಕ್ಕೂ ಬುದ್ಧಿಗೆ ವೃತ್ತಿಯೇ ಇಲ್ಲದಂತೆ ಮಾಡಿಕೊಳ್ಳುವುದಕ್ಕೂ ಭ್ರೂಮಧ್ಯದ ಮೇಲಿನ ಶಿರಸ್ಸಿನ ಪ್ರದೇಶವೇ ಪರಬ್ರಹ್ಮ ಮತ್ತು ಈಶ್ವರರ ಸ್ಥಾನವಾದುದರಿಂದ ಸರ್ವಶ್ರೇಷ್ಠವಾದ ಸ್ಥಾನವಾಗಿರುವುದೆಂದು ಹಿಂದೆಯೇ ತಿಳಿಸಿದೆ. ಈ ಪ್ರದೇಶವು ಸರ್ವಶ್ರೇಷ್ಠವೆನ್ನುವುದಕ್ಕೆ ಐತರೇಯೋಪನಿಷತ್ತಿನಲ್ಲಿ,

"ಸ ಏತಮೇವ ಸೀಮಾನಂ ವಿದಾರ್ಯೈತಯಾ ದ್ವಾರಾ
ಪ್ರಾಪದ್ಯತ ಸೈಷಾ ವಿದೃತಿರ್ನಾಮ ದ್ವಾಸ್ತದೇತ ನ್ನಾನ್ದನಂ"

ತಾ|| ಈಶ್ವರನೇ ಶಿರೋಗ್ರಭಾಗವನ್ನು ಭೇದಿಸಿಕೊಂಡು ತನ್ಮೂಲಕ ದೇಹವನ್ನು ಪ್ರವೇಶಿಸುವನು. ಈ ಭೇದಿಸಿದ ದ್ವಾರವನ್ನು ವಿದೃತಿ, ನಾನ್ದನವೆಂದೂ ಕರೆಯುವರು.

ಆದುದರಿಂದ ಭ್ರೂಮಧ್ಯದ ಮೇಲಿನ ಶಿರಸ್ಸಿನ ಪ್ರದೇಶವು ಸರ್ವಶ್ರೇಷ್ಠವಾದುದು. ಸಕಲ ದುಃಖಗಳನ್ನೂ ಪರಿಹರಿಸಿ ಶಾಶ್ವತವಾದ ಸುಖವನ್ನುಂಟುಮಾಡುವ ಸ್ಥಾನವಾಗಿರು ವುದು. ಸಹಸ್ರಾರಕಮಲದಲ್ಲಿ ಬುದ್ಧಿವೃತ್ತಿಯನ್ನು ತೈಲಧಾರೆಯಂತೆ ಲಯಗೊಳಿಸು ವುದು ಎಷ್ಟು ಶ್ರೇಷ್ಠವಾದುದೋ, ಬುದ್ಧಿಗೆ ವೃತ್ತಿಯೇ ಇಲ್ಲದ ಸ್ವರೂಪವೆಂದರೆ ಬುದ್ಧಿಯ ಉನ್ಮನೀಭಾವಕ್ಕೆ ತರುವುದೂ ಕೂಡ ಅಷ್ಟೇ ಶ್ರೇಷ್ಠವಾದುದು. ಇದೇ ತಾತ್ಪರ್ಯಕ್ಕೆ ಶ್ರೀವಿದ್ಯಾರಣ್ಯರವರು ವೇದಾಂತಪಂಚದಶಿ ದ್ವೈತವಿವೇಕ ಪ್ರಕರಣದಲ್ಲಿ,

ಜಿತೇ ತಸ್ಮಿನ್ವೃತ್ತಿಶೂನ್ಯಂ ಮನ ಸ್ತಿಷ್ಠತಿ ಮೂಕವತ್ |
ಏತತ್ಪದಂ ವಶಿಷ್ಠೇನ ರಾಮಾಯ ಬಹುಧೇರಿತಂ ||

ತಾ|| ಬುದ್ಧಿಯ ವ್ಯಾಪಾರವು ಜಯಿಸಲ್ಪಡುತ್ತಿರಲಾಗಿ ಮೂಗನು ಸಕಲ ವಾಗ್ವ್ಯವಹಾರಗಳನ್ನೂ ಬಿಟ್ಟಿದ್ದಂತೆ ಬುದ್ಧಿಯು ವೃತ್ತಿರೂಪವಾದ ಸಕಲ ವ್ಯಾಪಾರಗಳನ್ನೂ ಬಿಟ್ಟು ಸುಖವಾಗಿರುವುದು. ಹೀಗೆ ವೃತ್ತಿಶೂನ್ಯವಾದ ಬುದ್ಧಿಗೆ ಮೋಕ್ಷಸುಖವುಂಟಾಗಿರುವುದೆಂದು ವಸಿಷ್ಠಋಷಿಗಳಿಂದ ಶ್ರೀರಾಮನಿಗೋಸ್ಕರ ಅನೇಕ ಪ್ರಕಾರಗಳಾಗಿ ಶ್ರೀಮದ್ವಾಸಿಷ್ಠದಲ್ಲಿ [illegible]ಪ್ಪಟ್ಟಿದೆಯೆಂದೂ,

ದೃಶ್ಯಂ ನಾಸ್ತೀತಿ ಬೋಧೇನ ಮನಸೋ ದೃಶ್ಯ ಮಾರ್ಜನಂ |
ಸಂಪನ್ನಂ ಚಿತ್ತ ಮುತ್ಪನ್ನಾ ಪರಾ ನಿರ್ವಾಣ ನಿರ್ವೃತಿಃ ||

ತಾ|| ತೋರುತ್ತಿರುವ ನಾಮರೂಪಾತ್ಮಕವಾದ ಜಗತ್ತು ಇಲ್ಲವೆಂಬ ಜ್ಞಾನವುಂಟಾದ ಪಕ್ಷದಲ್ಲಿ ಆಗ ಶ್ರೇಷ್ಠವಾದ ವೃತ್ತಿಗಳಿಲ್ಲದ ಮೋಕ್ಷಸುಖವುಂಟಾಯಿತೆಂದು ತಿಳಿಯತಕ್ಕದ್ದು. ಎಂದೂ ಹೇಳಿರುವರು.

ಆತ್ಮಸಾಕ್ಷಾತ್ಕಾರವಾದನಂತರ ವೃತ್ತಿರಾಹಿತ್ಯವಾದ ಬುದ್ಧಿಯಸ್ಥಿತಿಯೇ ಪರಮಹಂಸ ಅಥವಾ ಜೀವನ್ಮುಕ್ತರ ಸ್ವಭಾವದ ಸ್ಥಿತಿಯಾಗಿರುವುದರಿಂದ ಮುಕ್ತಸ್ವಭಾವವಾಗಿರುವುದು. ಸೀತಾದೇವಿಯೊಡಗೂಡಿದ ಶ್ರೀರಾಮಚಂದ್ರಸ್ವಾಮಿಯನ್ನು ಕುಲಗುರುಗಳಾದ ವಸಿಷ್ಠರು ರತ್ನಸಿಂಹಾಸನದಲ್ಲಿ ಕೂರಿಸಿ ಪಟ್ಟಾಭಿಷೇಕ ಮಹೋತ್ಸವವನ್ನು ನೆರವೇರಿಸಿದರಷ್ಟೆ! ಇದು ನಮ್ಮಲ್ಲಿ ಹೇಗೆ ಅನ್ವಯವಾಗುವುದೆಂದರೆ—ಸದ್ವದಲ್ಲಿ ಶ್ರೀರಾಮಚಂದ್ರನ ತತ್ವವು ಪ್ರತಿಬಿಂಬಚೈತನ್ಯವಷ್ಟೆ! ಈ ಪ್ರತಿಬಿಂಬಚೈತನ್ಯಕ್ಕೆ ಕುಲಗುರುವಿನ ತತ್ವದಲ್ಲಿ ನಮ್ಮಲ್ಲಿರುವುದೇ ಕೂಟಸ್ಥಾತ್ಮನು. ಪ್ರತಿಬಿಂಬಚೈತನ್ಯವು ಅವಿದ್ಯಾ ಉಪಾಧಿಗಳನ್ನು ನಿಗ್ರಹಿಸಿಕೊಂಡು ಸ್ವಸ್ಥಾನದಲ್ಲಿ ವೃತ್ತಿರಾಹಿತ್ಯದಿಂದ ಬಂದುನಿಂತಾಗ ಕೂಟಸ್ಥಾತ್ಮನಿಂದಲೇ (ಬುದ್ಧಿಯಲ್ಲಿರುವ ಪರಬ್ರಹ್ಮನಿಂದಲೇ) ಧನ್ಯವಾದಗಳನ್ನುಂಟುಮಾಡುವಂತಹ ಸ್ಥಿತಿಯಾಗಿರುವುದೆಂಬ ತತ್ವವಾಗಿರುವುದು.

ವಸಿಷ್ಠರು ಶ್ರೀರಾಮಚಂದ್ರಮೂರ್ತಿಗೆ ಪುರಾತನವಾದ ಮನುಚಕ್ರವರ್ತಿಯಿಂದ ಬಂದ, ರತ್ನಗಳಿಂದ ಹೊಳೆಯುತ್ತಿರುವ ಕಿರೀಟವನ್ನು ದರಿಸಿದರಷ್ಟೆ. ಇದರ ತತ್ವವೇ ಜ್ಞಾನದ ಕಿರೀಟವೆಂದರೆ ತತ್ವಜ್ಞಾನಸ್ವರೂಪವಾದ ಕಿರೀಟವಾಗಿರುವುದು. ಅಂದರೆ ಅಧಿಕಾರಿಯು ಈ ಸೋಪಾನಕ್ಕೆ ಬಂದರೆ ತನ್ನಲ್ಲಿರುವ ಕೂಟಸ್ಥಾತ್ಮನಿಂದಲೇ ತತ್ವಜ್ಞ ಎಂಬ ಕಿರೀಟಧಾರಣೆಯ ಫಲವನ್ನು ಹೊಂದುವನೆಂಬ ತತ್ವವಾಗಿರುವುದು. ಆದುದರಿಂದ ತತ್ವಜ್ಞ ಎಂಬ ಹೆಸರು ಬರಬೇಕಾದರೆ ಅಧಿಕಾರಿಯು ಈ ಸೋಪಾನಕ್ಕೆ ಬರಬೇಕೆಂಬ

ಮುಖ್ಯ ತತ್ವವಾಗಿರುವುದು. ಮೇಲಿನ ಪಟ್ಟಾಭಿಷೇಕದ ತತ್ವವೆಲ್ಲಾ ಒಳಗೊಂಡಿರುವಂತೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೨೬೭ನೆಯ ಶ್ಲೋಕದಲ್ಲಿ,

ಬುದ್ಧೌ ಗುಹಾಯಾಂ ಸದಸದ್ವಿಲಕ್ಷಣಂ ಬ್ರಹ್ಮಾಸ್ತಿ ಸತ್ಯಂ ಪರಮದ್ವಿತೀಯಂ।
ತದಾತ್ಮನಾಯೋತ್ರವಸೇ ದ್ಗುಹಾಯಾಂ ಪುನರ್ನತಸ್ಯಾಂಗ ಗುಹಾಪ್ರವೇಶಃ॥

ತಾ॥ ಸತ್ಸ್ವರೂಪವಾದ, ಉತ್ಕೃಷ್ಟವಾದ ಅದ್ವಿತೀಯವಾದ ಸದಸದ್ವಿಲಕ್ಷಣವಾದ ಪರಬ್ರಹ್ಮವು ಬುದ್ಧಿಯೆಂಬ ಗುಹೆಯಲ್ಲಿ ಗುಟ್ಟಾಗಿರುವುದು. ತದ್ರೂಪವಾಗಿಯೇ ಯಾವನು ಆ ಗುಹೆಯಲ್ಲಿ ವಾಸಮಾಡುವನೋ ಅವನಿಗೆ ತಿರುಗಿ ಗುಹಾ ಪ್ರವೇಶವಿಲ್ಲ. ಎಂದು ಹೇಳಿರು ವರು. ಆದುದರಿಂದ ಅಧಿಕಾರಿಯು ತನ್ನಲ್ಲಿಯೇ ಪಟ್ಟಾಭಿಷೇಕದ ಸೋಪಾನವನ್ನು ಹೊಂದಿ ಗುಹೆಯನ್ನು ಪ್ರವೇಶಮಾಡುವ ತತ್ವವಾದ ಸಾಧನೆಗಳಿಂದ ಬಿಡಲ್ಪಟ್ಟು ಧನ್ಯನಾಗಬೇಕು.

ರಾ॥ ಉದ್ಯಾನವನದಿಂದ ಕೂಡಿ ಉತ್ತಮವಾದ ವೈಡೂರ್ಯಮಣಿಗಳಿಂದ ಖಚಿತ ವಾದ ತಾನು ಹಿಂದೆ ಅಯೋಧ್ಯೆಯಲ್ಲಿದ್ದಾಗ ವಾಸವಾಗಿದ್ದ ತನ್ನ ಸ್ವಂತ ಮನೆಯನ್ನೇ ಸುಗ್ರೀವನ ವಾಸಕ್ಕೆ ಕೊಡುವಂತೆ ಶ್ರೀರಾಮಚಂದ್ರನು ಭರತನಿಗೆ ಹೇಳಿದನು. ಭರತನು ಅದರಂತೆ ನಡೆಸಿದನು.

ತತ್ವ॥ ಶ್ರೀರಾಮನು ತನ್ನ ಸ್ವಂತಮನೆಯನ್ನೇ ಸುಗ್ರೀವನ ವಾಸಕ್ಕೆ ಕೊಟ್ಟ ತತ್ವ ವೇನೆಂದರೆ—ಪ್ರಾಣಚೈತನ್ಯವು ಪರಮಾತ್ಮ ಮತ್ತು ಈಶ್ವರಸ್ವರೂಪವೇ ಆಗಿರುವುದು. ಈಶ್ವರಸ್ವರೂಪವಾದ ಮುಖ್ಯಪ್ರಾಣವು ತನ್ನ ಭೇದಗಳಾದ ಪ್ರಾಣಾಪಾನಾದಿಗಳನ್ನೂ ಚಕ್ಷುರಾದಿಗಳನ್ನೂ ಗೋಳಕವೇ ಮೊದಲಾದ ಸ್ಥಾನಗಳಲ್ಲಿ ಕಾರ್ಯಭೇದಗಳಿಂದ ಪ್ರತ್ಯೇಕ ಪ್ರತ್ಯೇಕವಾಗಿ ವಿನಿಯೋಗಿಸುತ್ತದೆ. ಆದುದರಿಂದ ಪ್ರಾಣವಾಯುಚೈತನ್ಯವೂ ಈಶ್ವರ ಸ್ವರೂಪವೆಂಬ ತತ್ವದ ಪ್ರತಿಪಾದನೆಯ ಸೂಚನೆಯಾಗಿರುವುದು. ಇದಕ್ಕೆ ಅನುಸಾರವಾಗಿ ಪ್ರಶ್ನೋಪನಿಷತ್ ತೃತೀಯ ಪ್ರಶ್ನೆಯಲ್ಲಿ,

ಉತ್ಪತ್ತಿ ಮಾಯತಿಂ ಸ್ಥಾನಂ ವಿಭುತ್ವಂ ಚೈವ ಪಂಚಧಾ ।
ಅಧ್ಯಾತ್ಮಂ ಚೈವ ಪ್ರಾಣಸ್ಯ ವಿಜ್ಞಾಯಾ ಮೃತ ಮಶ್ನುತೆ ॥

ತಾ॥ ಪರಮಾತ್ಮನಿಂದ ಪ್ರಾಣೋತ್ಪತ್ತಿ, ಮನಸ್ಸಿಗೆ ಉಂಟಾಗುವ ಸಂಬಂಧ, ಈ ಶರೀರದಲ್ಲಿ ಸ್ಥಿತಿ, ಪಾಯೂಪಸ್ಥಾನದಲ್ಲಿ ಸ್ವಾಮಿತ್ವ, ಐದು ಬಗೆಯಾದ ವಿಭಾಗದಿಂದ ಸ್ಥಿತಿ, ಆದಿತ್ಯಾದಿರೂಪದಿಂದ ಬಾಹ್ಯತ್ವ, ಈ ವಿಚಾರಗಳ ತತ್ವವನ್ನು ಅರಿತವನು ಅಮೃತ ಸ್ವರೂಪನಾಗುವನು. ಎಂದು ಹೇಳಿರುವುದು.

ಆದುದರಿಂದ ವಾಯುಗಳಲ್ಲಿರುವ ಆತ್ಮಚೈತನ್ಯವಾದ ಪ್ರಾಣವೂ ಈಶ್ವರಸ್ವರೂಪದ ತತ್ವವಾದುದರಿಂದಲೇ ಶ್ರೀರಾಮನು ತನ್ನ ಸ್ವಂತಮನೆಯನ್ನೇ ಸುಗ್ರೀವನಿಗೆ ಕೊಟ್ಟ ತತ್ವವಾಗಿರುವುದು.

ರಾ|| ಸೀತಾದೇವಿಯನ್ನು ತನ್ನ ಎಡಭಾಗದಲ್ಲಿ ಕೂರಿಸಿಕೊಂಡು ಸಿಹ್ಮಾಸನದಲ್ಲಿರುವ ಶ್ರೀರಾಮಚಂದ್ರಸ್ವಾಮಿಗೆ ಶತ್ರುಘ್ನನು ಶ್ವೇತ ಛತ್ರಿಯನ್ನು ಹಿಡಿದನು. ಸುಗ್ರೀವ ವಿಭೀಷಣರು ಚಾಮರಗಳನ್ನು ಬೀಸುತ್ತಿದ್ದರು. ಪಟ್ಟಾಭಿಷಿಕ್ತನಾದ ಶ್ರೀರಾಮಚಂದ್ರನನ್ನು ಸರ್ವರೂ ನೋಡಿ ಸಂತೋಷಪಡುತ್ತಿದ್ದರು.

ತತ್ವ|| ಸೀತಾದೇವಿಯು ಶುದ್ಧಸತ್ವಪ್ರಧಾನಮಾಯೆ ಅಥವಾ ಶುದ್ಧಸತ್ವಗುಣದ ತತ್ವದವಳೆಂದು ಪ್ರಥಮದಿಂದಲೂ ತಿಳಿಸಿಕೊಂಡು ಬಂದಿದೆ. ಶುದ್ಧಸತ್ವಗುಣವು ಪರಿಶುದ್ಧವಾದ ಸ್ಫಟಿಕದಂತೆ ಅತ್ಯಂತ ಸ್ವಚ್ಛವಾಗಿಯೂ, ಆನಂದಮಯವಾಗಿಯೂ ಸರ್ವಜ್ಞತ್ವಾದಿ ಗುಣಗಳೆಂದರೆ ಸರ್ವವೂ ನಾನೆಂಬ ಅಖಂಡಜ್ಞಾನಸ್ವರೂಪದ ತತ್ವವಾಗಿಯೂ ಇರುವುದು. ಆದುದರಿಂದ ಶ್ರೀರಾಮಚಂದ್ರನು ವಾಮಾಂಗಿಯಾದ ಸೀತಾದೇವಿಯೊಡನೆ ಸಿಹ್ಮಾಸನದಲ್ಲಿ ಪಟ್ಟಾಭಿಷಿಕ್ತನಾದನೆಂದರೆ—ನಮ್ಮಲ್ಲಿರುವ ಈಶ್ವರಸೋಪಾನವಾಗಿರುವುದು. ಸೀತಾದೇವಿಯ ಅಗ್ನಿಪ್ರವೇಶದ ತತ್ವವು ಹೇಗೆ ಪರಬ್ರಹ್ಮಸೋಪಾನವಾಗಿರುವುದೋ ಹಾಗೆ ಪಟ್ಟಾಭಿಷೇಕದ ತತ್ವವು ಶುದ್ಧಸತ್ವಪ್ರಧಾನಮಾಯೋಪಾಧಿಯೊಡಗೂಡಿದ ಈಶ್ವರಸೋಪಾನವಾಗಿರುವುದು.

ಮನುಷ್ಯನು ತನ್ನಲ್ಲಿಯೇ ಇರುವ ಈ ಈಶ್ವರಸೋಪಾನವನ್ನು ಹೊಂದುವುದು ಕಷ್ಟ. ಆತ್ಮಸಾಕ್ಷಾತ್ಕಾರವಾದ ಹೊರತು ಈ ಸೋಪಾನವು ದೊರಕುವುದಿಲ್ಲ. ಭೂಮಂಡಲದಲ್ಲಿರತಕ್ಕ ಸಕಲರಾಜರನ್ನೂ ಗೆಲ್ಲದೆ ಏಕಚ್ಛತ್ರಾಧಿಪತ್ಯವು ಹೇಗೆಬರಲಾರದೋ ಹಾಗೆ ಅವಿದ್ಯೆಯ ಶಕ್ತಿಗಳನ್ನೆಲ್ಲಾ ನಿಗ್ರಹಿಸುವ ಸಮಾಧಿಯಲ್ಲಿ ಉತ್ತೀರ್ಣರಾಗಿ ಆತ್ಮಸಾಕ್ಷಾತ್ಕಾರವನ್ನು ಪಡೆದ ಹೊರತು ಈಶ್ವರಸೋಪಾನವು ಲಭಿಸಲಾರದು. ಕಾರಣವೇನೆಂದರೆ-ಬುದ್ಧಿಗೆ ವೃತ್ತಿರಹಿತವಾಗುವುದು ಸುಲಭಸಾಧ್ಯವಲ್ಲ. ಆದುದರಿಂದಲೇ ಶ್ರೀರಾಮನು ಪಟ್ಟಾಭಿಷಿಕ್ತನಾಗಿ ವಾಸವಾಗಿರುವ ಸ್ಥಳಕ್ಕೆ ಅಯೋಧ್ಯೆಯೆಂಬ ಹೆಸರು ಬಂದಿರುವುದು. ಅಂದರೆ "ಯೋದ್ಧುಂ ಅಶಕ್ಯಾ" ಸುಲಭವಾಗಿ ಹೊಂದಲು ಸಾಧ್ಯವಲ್ಲದ ಸ್ಥಳ. ಆದುದರಿಂದ ಈಶ್ವರಸೋಪಾನವನ್ನು ನಮ್ಮಲ್ಲಿಯೇ ನಾವು ಹೊಂದಬೇಕಾದರೆ ಶ್ರೀರಾಮಚಂದ್ರಮೂರ್ತಿಯು ರಾವಣಾದಿ ರಾಕ್ಷಸರನ್ನು ನಿಗ್ರಹಿಸಿ ಹೇಗೆ ರಣಧೀರನೆನಿಸಿಕೊಂಡನೋ ಹಾಗೆ ಆತ್ಮಸಾಕ್ಷಾತ್ಕಾರ ಪಡೆದ ಜ್ಞಾನಧೀರರಿಗಲ್ಲದೆ ಇತರರಿಗೆ ಈಶ್ವರಸೋಪಾನವು ದೊರೆಯದು.

ಶ್ರೀರಾಮನು ವನವಾಸದಲ್ಲಿದ್ದಾಗ ಸೀತಾವಿಯೋಗದಿಂದ ದುಃಖಪಟ್ಟ ತತ್ವವೇ ಮೋಕ್ಷಾಭಿಲಾಷೆಯ ತತ್ವವೆಂದು ಹಿಂದೆ ತಿಳಿಸಿದೆ.' ಈಗ ಸೀತಾದೇವಿಯನ್ನು ವಾಮ

ಭಾಗದಲ್ಲಿ ಕೂರಿಸಿಕೊಂಡು ಸಿಹ್ಮಾಸನದಲ್ಲಿ ಕುಳಿತಿರುವ ಶ್ರೀರಾಮಚಂದ್ರನ ತತ್ವವಾದ ಈಶ್ವರತ್ವವನ್ನು ನಮ್ಮಲ್ಲಿ ಪಡೆಯುವ ತತ್ವವೇ ಮೋಕ್ಷಾಭಿಲಾಷೆಯೆಂದು ಧಾರಾಳವಾಗಿ ಹೇಳಬಹುದು. ಆದರೆ ಶ್ರೀರಾಮಚಂದ್ರನು ರಾವಣನನ್ನು ನಿಗ್ರಹಿಸಿದಮೇಲೆ ಸೀತೆಯನ್ನು ಅಗ್ನಿಪ್ರವೇಶಮಾಡಿಸದೆ ಸ್ವೀಕರಿಸಲಿಲ್ಲವೆಂಬುದನ್ನೂ ನಾವು ಮನಸ್ಸಿನಲ್ಲಿ ಚೆನ್ನಾಗಿಟ್ಟು ಕೊಂಡಿರಬೇಕು. ಆದುದರಿಂದ ಪರಮಾತ್ಮಸಾಕ್ಷಾತ್ಕಾರವೆಂದರೆ ನಿರ್ವಿಕಲ್ಪಸಮಾಧಿ ಯನ್ನು ಪಡೆದನಂತರದಲ್ಲಿಯೇ ಈಶ್ವರಸೋಪಾನವನ್ನು ಹೊಂದಬೇಕಾಗಿರುವುದೆನ್ನುವು ದರಲ್ಲಿ ಲೇಶವೂ ಸಂಶಯವಿರುವುದಿಲ್ಲ.

ಶ್ರೀರಾಮಚಂದ್ರನು ಪಟ್ಟಾಭಿಷಿಕ್ತನಾಗಿರುವ ತತ್ವದ ಈ ಸ್ಥಿತಿಯೇ ಜೀವನ್ಮುಕ್ತ ಅಥವಾ ಪರಮಹಂಸರು ತಮ್ಮ ಜೀವಮಾನವಿರುವವರೆಗೂ ವಿಹರಿಸಿಕೊಂಡಿರುವ ಸ್ಥಳ ಮತ್ತು ಸ್ಥಿತಿಯಾಗಿರುವುದು. ಪ್ರಾಪಂಚಿಕರು ವಿಷಯಾದಿಗಳಲ್ಲಿ ಹೇಗೆ ವಿಹರಿಸಿಕೊಂಡಿರು ವರೋ ಹಾಗೆ ಪರಮಹಂಸರು ಈಶ್ವರಸ್ಥಿತಿಯಲ್ಲಿಯೇ ವಿಹರಿಸಿಕೊಂಡಿರುತ್ತಾರೆ. ಈ ಈಶ್ವರಸೋಪಾನದಲ್ಲಿರುವ ಸ್ಥಿತಿಗೆ ಮನೋನ್ಮನೀಭಾವವೆಂದು ಹೆಸರು. ಕಾರಣ ವೇನೆಂದರೆ, ಬುದ್ಧಿಗೆ ವೃತ್ತಿಯಿಲ್ಲದೆ ಆನಂದಸ್ವರೂಪದಲ್ಲಿಯೇ ನಿಲುಗಡೆಯಾಗಿ ಆನಂದ ಮಗ್ನವಾಗಿರುವ ಸ್ವಭಾವವಾದುದರಿಂದ ಉನ್ಮತ್ತಸ್ವಭಾವವೆಂಬ ಹೆಸರು ಬಂದಿರುವುದು. ಯಾವಾಗ ಬುದ್ಧಿಯು ಈ ಸ್ಥಿತಿಯಲ್ಲಿರುವುದೋ ಅಂತಃಕರಣದ ಇತರ ಭಾಗಗಳಾದ ಮನಸ್ಸು, ಅಹಂಕಾರ, ಚಿತ್ತಗಳಿಗೂ ವೃತ್ತಿಯಿರುವುದಿಲ್ಲ. ಈ ಸ್ಥಿತಿಯೇ ಪಟ್ಟಾಭಿಷಿಕ್ತ ನಾದ ಶ್ರೀರಾಮಚಂದ್ರನನ್ನು ಸಹಕರಿಸಿಕೊಂಡು ಲಕ್ಷ್ಮಣ, ಭರತ, ಶತ್ರುಘ್ನರು, ಇರುವು ದಾಗಿದೆ. ಶತ್ರುಘ್ನನು ಶ್ವೇತಛತ್ರಿಯನ್ನು ಹಿಡಿದುಕೊಂಡಿರುವ ತತ್ವವೇನೆಂದರೆ--ಶತ್ರುಘ್ನ ನೆಂದರೆ, ಸ್ವಾರ್ಥವಿರೋಧಿಯಾದ ಶತ್ರುವನ್ನು ಗೆಲ್ಲುವ ಚಿತ್ತದ ತತ್ವವೆಂದು ಹಿಂದೆ ಬಾಲ ಕಾಂಡದಲ್ಲಿ ತಿಳಿಸಿದೆ. ಏಕಚ್ಛತ್ರಾಧಿಪತ್ಯನಾಗಿ ಶುದ್ಧಸತ್ವಾಂಶನಾದ ಅಖಂಡಜ್ಞಾನ ಸ್ವರೂಪವಾಗಿರುವ ಸ್ವಾರ್ಥತೆಯೊಂದೇ ಇರುವ ಸ್ಥಿತಿಯ ಪ್ರತಿಪಾದನೆಯೇ ಶತ್ರುಘ್ನನು ಶ್ವೇತಛತ್ರಿಯನ್ನು ಹಿಡಿದಿದ್ದ ತತ್ವವಾಗಿರುವುದು.

ಈಶ್ವರಸೋಪಾನವಾದ ಮನೋನ್ಮನ್ಯವಸ್ಥೆಯು ಶ್ರೇಷ್ಠವೆಂಬ ತಾತ್ಪರ್ಯಕ್ಕೆ ಶ್ರೀಶಂಕರ ಭಗವತ್ಪಾದರವರು ಯೋಗತಾರಾವಳಿಯಲ್ಲಿ,

ನೇತ್ರೇಯಯೋರ್ನ್ಮೇಷನಿಮೇಷಶೂನ್ಯೇ ವಾಯುರ್ಯಯಾವರ್ಜಿತರೇಚಪೂರಃ|
ಮನಶ್ಚ ಸಂಕಲ್ಪ ವಿಕಲ್ಪ ಶೂನ್ಯಂ ಮನೋನ್ಮನೀ ಸಾ ಮಯಿ ಸನ್ನಿಧತ್ತಾಂ||

ತಾ|| ಉನ್ಮೇಷನಿಮೇಷ ರಹಿತವಾದ ನೇತ್ರಗಳುಳ್ಳ ಶ್ವಾಸೋಚ್ಛ್ವಾಸವರ್ಜಿತವಾದ ವಾಯುವುಳ್ಳ, ಸಂಕಲ್ಪ, ವಿಕಲ್ಪಶೂನ್ಯವಾದ ಮನೋನ್ಮನೀ ಅವಸ್ಥೆಯು ನನ್ನಲ್ಲಿ ಉಂಟಾಗಲಿ. ಎಂದು ಪ್ರಾರ್ಥಿಸಿರುವರು.

ಆದುದರಿಂದ ಈಶ್ವರಸೋಪಾನವು ಬಾಹ್ಯವ್ಯಾಪಾರವಿಲ್ಲದ ಆನಂದಸ್ವರೂಪವಾಗಿಯೂ, ಅಖಂಡಜ್ಞಾನವಾಗಿ ಸಾಕ್ಷಿಮಾತ್ರಸ್ವರೂಪವಾಗಿಯೂ ಇರುವ ಸ್ಥಿತಿಯಾಗಿರುವುದು.

ಈ ಈಶ್ವರಸೋಪಾನವು ಕೂಡ ಯಾವ ಕೋಶಗಳ ವ್ಯಾಪಾರವೂ ಇಲ್ಲದ ಅಖಂಡ ಜ್ಞಾನಸ್ವರೂಪವಾದುದರಿಂದ ಬುದ್ಧಿಯು ಲಕ್ಷ್ಯಸ್ಥಿತ ಸಮಾಧಿಸ್ಥಿತಿಯೇ ಆಗಿರುವುದು. ಈ ಸ್ವರೂಪವು ಜೀವನ್ಮುಕ್ತಸ್ವರೂಪ ಅಥವಾ ಮನೋನ್ಮನೀ ಎಂಬ ಹೆಸರನ್ನು ಪಡೆದಿರುವುದು. ಜೀವನ್ಮುಕ್ತಸೋಪಾನದಲ್ಲಿಯೂ ಪಂಚಕೋಶಗಳ ಕಾರ್ಯಗಳು ಇಲ್ಲವೆನ್ನುವುದಕ್ಕೆ ಮಣ್ಡಲಬ್ರಾಹ್ಮಣೋಪನಿಷತ್ತಿನಲ್ಲಿ,

> ಪುನಃಪುನ ಸ್ಸರ್ವಾವಸ್ಥಾಸು ಜ್ಞಾನಜ್ಞೇಯೌ ಧ್ಯಾನಧ್ಯೇಯೌ ಲಕ್ಷ್ಯಾ ಲಕ್ಷ್ಯೇ ದೃಶ್ಯಾದೃಶ್ಯೇಚೋಹಪೋಹಾದಿ ಪರಿತ್ಯಜ್ಯ ಜೀವನ್ಮುಕ್ತೋಭವತಿ||

ತಾ|| ಸರ್ವಾವಸ್ಥೆಗಳಲ್ಲಿಯೂ, ಪುನಃ ಪುನಃ ನೋಡುವುದು, ಧ್ಯಾನಮಾಡುವುದು, ಧ್ಯಾನಮಾಡುವ ವಸ್ತುವಿನಲ್ಲಿ ಗುರಿಯಿಡುವುದು, ಊಹಾಪೋಹಾದಿಗಳನ್ನು ಬಿಟ್ಟು ಜೀವನ್ಮುಕ್ತನಾಗುವನು, ಎಂದು ಹೇಳಿರುವುದು.

**ರಾ||** ಪಟ್ಟಾಭಿಷೇಕಮಹೋತ್ಸವದಲ್ಲಿ ಶ್ರೀರಾಮನು ಸಕಲರಿಗೂ ಬಹುಮಾನಮಾಡಿ ಹನುಮಂತನಿಗೂ ಬಹುಮಾನ ಕೊಡುವ ಕಾಲದಲ್ಲಿ ಸೀತಾದೇವಿಯು ತನ್ನ ಕಂಠದಲ್ಲಿರುವ ಮುಕ್ತಾಹಾರವನ್ನು ತೆಗೆದು ವಾನರರನ್ನೂ ಶ್ರೀರಾಮಚಂದ್ರನನ್ನೂ ಬಾರಿಬಾರಿಗೂ ನೋಡುತ್ತಿರಲಾಗಿ ಶ್ರೀರಾಮಚಂದ್ರನು ಸೀತಾದೇವಿಯ ಇಂಗಿತವನ್ನು ತಿಳಿದು ಸೀತಾದೇವಿಯನ್ನು ಕುರಿತು " ನೀನು ಯಾರಿಂದ ಸಂತೋಷಗೊಂಡವಳಾದೆಯೋ ಮತ್ತು ಯಾವನಲ್ಲಿ ಸರ್ವಪ್ರಕಾರವಾಗಿಯೂ ಪರಾಕ್ರಮಪೌರುಷಗಳಿರುವುವೋ ಅವನಿಗೆ ಈ ಮುತ್ತಿನ ಹಾರವನ್ನು ಕೊಡು" ಎಂದು ಹೇಳಿದನು. ಸೀತಾದೇವಿಯು ತನ್ನ ಕೊರಳಲ್ಲಿದ್ದ ಹಾರವನ್ನು ಹನುಮಂತನಿಗೆ ಕೊಟ್ಟಳು.

**ತತ್ವ||** ಪಟ್ಟಾಭಿಷೇಕಮಹೋತ್ಸವದಲ್ಲಿ ಸೀತಾದೇವಿಯು ಹನುಮಂತನಿಗೆ ಅತಿಶಯವಾಗಿ ಬಹುಮಾನ ಮಾಡಿರುವುದರ ತತ್ವವು, ಹಿಂದೆ ಹನುಮಂತನು ಮಾಡಿದ ಕಾರ್ಯಗಳ ತತ್ವಗಳಿಂದಲೇ ಗೊತ್ತಾಗುವುದು. ಮುಖ್ಯವಾಗಿ ಶುದ್ಧಸತ್ವಗುಣದ ಸೋಪಾನಕ್ಕೆ ಶ್ವಾಸೋಚ್ಛ್ವಾಸದ ಸಹಾಯವು ಅತ್ಯವಶ್ಯಕವಾಗಿ ಬೇಕೆಂಬುದನ್ನು ನಿಸ್ಸಂದೇಹವಾಗಿ ಸಕಲರೂ ಅನುಮೋದಿಸಬೇಕಾದ ತತ್ವದ ಸೂಚನೆಯೇ ಹನುಮಂತನಿಗೆ ಸೀತಾದೇವಿಯು ಅತಿಶಯವಾದ ವಿಶ್ವಾಸದಿಂದ ಮುತ್ತಿನ ಸರವನ್ನು ಕೊಟ್ಟುದಾಗಿದೆ.

ಶ್ರೀರಾಮಚಂದ್ರಸ್ವಾಮಿಯ ಪಟ್ಟಾಭಿಷೇಕದ ತತ್ವವನ್ನು ಇದುವರೆಗೂ ವಿವರಿಸಲಾಯಿತು. ಶ್ರೀರಾಮಚಂದ್ರಸ್ವಾಮಿಯನ್ನು ಸಗುಣರೂಪನನ್ನಾಗಿ ಪೂಜಿಸಿ ಅವನ ಚರಿತ್ರೆಯಾದ ಶ್ರೀಮದ್ರಾಮಾಯಣವನ್ನು ಪಾರಾಯಣಮಾಡಿ ಜನಗಳು ಪಟ್ಟಾಬಿಷೇಕ

ಮಹೋತ್ಸವವನ್ನು ಮಾಡಿ ಧನ್ಯರಾಗುವರಷ್ಟೆ! ಬಾಹ್ಯದಲ್ಲಿ ಶ್ರೀರಾಮಚಂದ್ರಸ್ವಾಮಿಯ ಪಟ್ಟಾಭಿಷೇಕಮಹೋತ್ಸವವನ್ನು ಸರ್ವರೂ ಮಾಡಿ ಕೃತಕೃತ್ಯರಾಗಬೇಕು. ಶ್ರೀರಾಮಚಂದ್ರಮೂರ್ತಿಯ ಲೀಲಾವಿಭೂತಿಯಲ್ಲಿ ಅವನ ಪಟ್ಟಾಭಿಷೇಕದ ತತ್ವವು ಯಾವ ಸೋಪಾನದ್ದೆಂದು ಗೊತ್ತಾಗುವುದಷ್ಟೆ! ಇಂದ್ರಿಯಗ್ರಾಹ್ಯವಲ್ಲದ ಈ ಪಟ್ಟಾಭಿಷೇಕದ ತತ್ವವನ್ನು ಪುರುಷಪ್ರಯತ್ನದಿಂದ ಸಾಧಿಸಬೇಕು. ಅಲ್ಲದೆ ಈ ಸೋಪಾನವನ್ನು ಅನುಗ್ರಹಿಸುವಂತೆ ಭಕ್ತಪರಾಧೀನನಾದ ಶ್ರೀರಾಮಚಂದ್ರಸ್ವಾಮಿಯನ್ನು ಸಕಲರೂ ಪ್ರಾರ್ಥನೆ ಮಾಡುತ್ತಿರಬೇಕು.

ಇಂತಹ ಶ್ರೀರಾಮಚಂದ್ರಮೂರ್ತಿಯ ಪಟ್ಟಾಭಿಷೇಕದ ತತ್ವವನ್ನೊಳಗೊಂಡಿರುವ ಮಾನವನ ಚಿತ್ರಪಠವನ್ನು ಈ ಗ್ರಂಥದ ಪ್ರಥಮದಲ್ಲಿಯೆ ಕೊಟ್ಟಿರುವುದು. ಈ ಪಟ್ಟಾಭಿಷೇಕದ ತತ್ವವನ್ನು ಹೊಂದಿದವರು ಶ್ರೀರಾಮಸ್ವರೂಪವೇ ಆಗುವರು. ಇಂತಹವರೇ ಪರಮಹಂಸರು. ಇಂತಹ ಜೀವನ್ಮುಕ್ತ ಅಥವಾ ಪರಮಹಂಸರನ್ನು ಸೇವಿಸಿ ಅವರ ಅನುಗ್ರಹಕ್ಕೂ ಪಾತ್ರರಾಗಬೇಕು. ಇಂತಹವರ ಅನುಗ್ರಹಕ್ಕೆ ಪಾತ್ರರಾಗುವುದೆಂದರೆ ಈಶ್ವರನ ಅನುಗ್ರಹಕ್ಕೆ ಪಾತ್ರರಾಗುವುದೆಂಬ ತತ್ವವಾಗಿರುವುದು. ಈ ತತ್ವಸಮರ್ಥನೆಗೆ ಮಣ್ಡಲ ಬ್ರಾಹ್ಮಣೋಪನಿಷತ್ತಿನಲ್ಲಿ,

> ಚಿರಸಮಾಧಿಜನಿತ ಬ್ರಹ್ಮಾಮೃತ ಪಾನಪರಾಯಣೋ ऽಸೌ ।
> ಸನ್ಯಾಸೀ ಪರಮಹಂಸ ಅವಧೂತೋ ಭವತಿ ತದ್ದರ್ಶನೇನ ।
> ಸಕಲಂ ಜಗತ್ಪವಿತ್ರಂ ಭವತಿ ತತ್ಸೇವಾಪರೋ ಜ್ಞೋऽಪಿ ।
> ಮುಕ್ತೋ ಭವತಿತತ್ಕುಲ ಮೇಕೋತ್ತರಶತಂ ತಾರಯತಿ ॥

ತಾ॥ ಸಮಾಧಿಸಿದ್ಧಿಯಿಂದ ಉತ್ಪನ್ನನಾಗುವ ಬ್ರಹ್ಮವೆಂಬ ಅಮೃತವನ್ನು ಪಾನ ಮಾಡುವುದರಲ್ಲಿ ಯಾವನು ನಿಸ್ಸೀಮನೋ ಅವನೇ ಸನ್ಯಾಸಿ, ಪರಮಹಂಸ, ಅವಧೂತನಾಗುತ್ತಾನೆ. ಆತನ ದರ್ಶನದಿಂದ ಸಮಸ್ತ ಪ್ರಪಂಚವೂ ಪವಿತ್ರವಾಗುವುದು. ಅವನ ಸೇವೆಯನ್ನು ಮಾಡಿದರೆ ಮೂಢನೂ ಸಂಸಾರಶೃಂಖಲೆಯಿಂದ ಬಿಡಲ್ಪಡುವನು. ಆತನ ನೂರೊಂದು ಕುಲವೂ ಉದ್ಧಾರವಾಗುವುದು, ಎಂದು ಹೇಳಿರುವುದು.

ಆದುದರಿಂದ ಇಂತಹ ಆತ್ಮಸಾಕ್ಷಾತ್ಕಾರವನ್ನೂ ಈಶ್ವರಸೋಪಾನವನ್ನೂ ಒಳಗೊಂಡಿರುವ ಶ್ರೀರಾಮಚಂದ್ರಸ್ವಾಮಿಯ ಪಟ್ಟಾಭಿಷೇಕದ ತತ್ವವನ್ನು ಮಾನವರು ತಮ್ಮಲ್ಲಿಯೇ ತಾವು ಹೊಂದುವುದೇ ಪುರುಷಾರ್ಥವಲ್ಲದೆ ಇತರ ಯಾವ ಸಂಪಾದನೆಯಿಂದಲೂ ಪ್ರಯೋಜನವಿಲ್ಲ. ಇದೇ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ಅನಾತ್ಮಶ್ರೀವಿಗರ್ಹಣ ಪ್ರಕರಣದಲ್ಲಿ ಈ ರೀತಿ ಹೇಳಿರುವರು:—

ಲಬ್ಧ್ವಾ ವಿದ್ಯಾ ರಾಜಮಾನ್ಯಾ ತತಃಕಿಂ |
ಪ್ರಾಪ್ತಾ ಸಂಪತ್ ಪ್ರಾಭವಾಢ್ಯಾ ತತಃಕಿಂ ||
ಭುಕ್ತ್ವಾ ನಾರೀ ಸುಂದರಾಂಗೀ ತತಃಕಿಂ |
ಯೇನ ಸ್ವಾತ್ಮಾ ನೈವ ಸಾಕ್ಷಾತ್ಕೃತೋಽಭೂತ್ || ೧ ||

ಕೇಯೂರಾದ್ಯೈ ರ್ಭೂಷಿತೋ ವಾ ತತಃಕಿಂ |
ಕೌಶೇಯಾದ್ಯೈ ರಾವೃತೋ ವಾ ತತಃಕಿಂ ||
ತೃಪ್ತೋ ಮೃಷ್ಟಾನ್ನಾದಿನಾ ವಾ ತತಃಕಿಂ |
ಯೇನ ಸ್ವಾತ್ಮಾ ನೈವ ಸಾಕ್ಷಾತ್ಕೃತೋಽಭೂತ್ || ೨ ||

ದೃಷ್ಟ್ವಾ ನಾನಾಚಾರುದೇಶಾ ಸ್ತತಃಕಿಂ |
ಪುಷ್ಟಾ ಶ್ಶ್ಲಿಷ್ಟಾ ಬಂಧುವರ್ಗಾ ಸ್ತತಃಕಿಂ ||
ನಷ್ಟಂ ದಾರಿದ್ರ್ಯಾದಿದುಃಖಂ ತತಃಕಿಂ |
ಯೇನ ಸ್ವಾತ್ಮಾ ನೈವ ಸಾಕ್ಷಾತ್ಕೃತೋಽಭೂತ್ || ೩ ||

ಭೂಪೇಂದ್ರತ್ವಂ ಪ್ರಾಪ್ತಮುರ್ವ್ಯಾಂ ತತಃಕಿಂ |
ದೇವೇಂದ್ರತ್ವಂ ಸಂಭೃತಂ ವಾ ತತಃಕಿಂ ||
ಮುಂಡೀಂದ್ರತ್ವಂ ಚೋಪಲಬ್ಧಂ ತತಃಕಿಂ |
ಯೇನ ಸ್ವಾತ್ಮಾ ನೈವ ಸಾಕ್ಷಾತ್ಕೃತೋಽಭೂತ್ || ೪ ||

ಮಂತ್ರೈಃ ಸರ್ವಃ ಸ್ತಂಭಿತೋ ವಾ ತತಃಕಿಂ |
ಬಾಣೈ ರ್ಲಕ್ಷ್ಯೋ ಭೇದಿತೋ ವಾ ತತಃಕಿಂ ||
ಕಾಲಜ್ಞಾನಂ ಚಾಪಿ ಲಬ್ಧ್ವಾ ತತಃಕಿಂ |
ಯೇನ ಸ್ವಾತ್ಮಾ ನೈವ ಸಾಕ್ಷಾತ್ಕೃತೋಽಭೂತ್ || ೫ ||

ಕಾಮಾತಂಕಃ ಖಂಡಿತೋವಾ ತತಃಕಿಂ |
ಕೋಪಾವೇಶಃ ಕುಂಠಿತೋವಾ ತತಃಕಿಂ ||
ಲೋಭಾಶ್ಲೇಷೋ ವರ್ಜಿತೋವಾ ತತಃಕಿಂ |
ಯೇನ ಸ್ವಾತ್ಮಾ ನೈವ ಸಾಕ್ಷಾತ್ಕೃತೋಽಭೂತ್ || ೬ ||

ಮೋಹಧ್ವಾಂತಃ ಪೇಷಿತೋವಾ ತತಃಕಿಂ |
ಜಾತೋ ಭೂಮೌ ನಿರ್ಮದೋವಾ ತತಃಕಿಂ ||

ಮಾತ್ಸರ್ಯಾರ್ತಿ ವಿರ್ಗಲಿತೋವಾ ತತಃಕಿಂ |
ಯೇನ ಸ್ವಾತ್ಮಾ ನ್ಯೈವ ಸಾಕ್ಷಾತ್ಕೃತೋ ಽಭೂತ್ || ೭ ||
ಧಾತುರ್ಲೋಕಃ ಸಾಧಿತೋ ವಾ ತತಃಕಿಂ |
ವಿಷ್ಣೋರ್ಲೋಕೋ ವೀಕ್ಷಿತೋ ವಾ ತತಃಕಿಂ ||
ಶಂಭೋರ್ಲೋಕಃ ಶಾಸಿತೋ ವಾ ತತಃಕಿಂ |
ಯೇನ ಸ್ವಾತ್ಮಾ ನ್ಯೈವ ಸಾಕ್ಷಾತ್ಕೃತೋ ಽಭೂತ್ || ೮ ||
ಯಸ್ಯೇದಂ ಹೃದಯೇ ಸಮ್ಯಗನಾತ್ಮಶ್ರೀವಿಗರ್ಹಣಂ |
ಸದೋದೇತಿ ಸ ಏವಾತ್ಮಸಾಕ್ಷಾತ್ಕಾರಸ್ಯ ಭಾಜನಂ || || ೯ ||
ಅನ್ಯೇತು ಮಾಯಿಕಜಗದ್ಭ್ರಾಂತಿ ವ್ಯಾಮೋಹ ಮೋಹಿತಾಃ |
ನ ತೇಷಾಂ ಜಾಯತೇ ಕ್ವಾಪಿ ಸ್ವಾತ್ಮಸಾಕ್ಷಾತ್ಕೃತಿ ರ್ಭುವಿ|| ೧೦ ||

ತಾ|| ವಿದ್ಯಾರಾಜಪೂಜ್ಯತೆಗಳನ್ನು ಸಂಪಾದಿಸಿದೆ. ಐಶ್ವರ್ಯ ಕೀರ್ತ್ಯಾದಿಗಳನ್ನು ಸಂಪಾದಿಸಿದೆ. ರೂಪವತಿಯಾದ ಸ್ತ್ರೀಯನ್ನು ಭೋಗಿಸಿದೆ. ಆದರೇನು? ಆತ್ಮಸಾಕ್ಷಾತ್ಕಾರವೇನೋ ಲಭಿಸಲಿಲ್ಲ. ||೧|| ಕೇಯೂರಾದಿ ಆಭರಣಗಳಿಂದ ಭೂಷಿತನಾದೆ. ಪೀತಾಂಬರಾದಿಗಳನ್ನು ಧರಿಸಿದೆ. ಮೃಷ್ಟಾನ್ನಾದಿಗಳಿಂದ ತೃಪ್ತನಾದೆ. ಆದರೇನು? ಆತ್ಮಸಾಕ್ಷಾತ್ಕಾರವೇನೋ ಲಭಿಸಲಿಲ್ಲ. ||೨|| ನಾನಾಪ್ರದೇಶಗಳನ್ನು ನೋಡಿದೆ. ಅನುಕೂಲಸ್ಥರೂ, ಆಪ್ತರೂ ಆದ ಬಂಧುವರ್ಗವಿದೆ. ದಾರಿದ್ರ್ಯದುಃಖವಿಲ್ಲದಿರುವೆ. ಆದರೇನು? ಆತ್ಮಸಾಕ್ಷಾತ್ಕಾರವೇನೋ ಲಭಿಸಲಿಲ್ಲ. ||೩|| ಭೂಮಿಯಲ್ಲಿ ಭೂಪೇಂದ್ರಪದವಿ ಪ್ರಾಪ್ತವಾಯಿತು. ದೇವೇಂದ್ರಪದವಿಯೇ ಪ್ರಾಪ್ತವಾಯಿತು. ಯತೀಂದ್ರಪದವಿಯೇ ಪ್ರಾಪ್ತವಾಯಿತು. ಆದರೇನು? ಆತ್ಮಸಾಕ್ಷಾತ್ಕಾರವೇನೋ ಲಭಿಸಲಿಲ್ಲ. ||೪|| ಮಂತ್ರಗಳಿಂದೆಲ್ಲವನ್ನೂ ಸ್ತಂಭಿಸಿದೆ. ಬಾಣಗಳಿಂದ ಲಕ್ಷ್ಯವನ್ನು ಭೇದಿಸಿದೆ. ತ್ರಿಕಾಲಜ್ಞಾನವನ್ನು ಹೊಂದಿದೆ. ಆದರೇನು? ಆತ್ಮಸಾಕ್ಷಾತ್ಕಾರವೇನೋ ಲಭಿಸಲಿಲ್ಲ. ||೫|| ಕಾಮವಾಸನೆಯನ್ನು ಖಂಡಿಸಿದೆ. ಕೋಪಾವೇಶವನ್ನು ಕುಗ್ಗಿಸಿದೆ. ಲೋಭಗುಣವನ್ನು ವಿಸರ್ಜಿಸಿದೆ. ಆದರೇನು? ಆತ್ಮಸಾಕ್ಷಾತ್ಕಾರವೇನೋ ಲಭಿಸಲಿಲ್ಲ. ||೬|| ಮೋಹಾಂಧಕಾರವನ್ನು ನಿವಾರಿಸಿದೆ. ಭೂಮಿಯಲ್ಲಿ ಮದರಹಿತನಾಗಿ ಜನಿಸಿದೆ. ಅಸೂಯಾದಿ ಗುಣಗಳನ್ನು ತ್ಯಜಿಸಿದೆ. ಆದರೇನು? ಆತ್ಮಸಾಕ್ಷಾತ್ಕಾರವೇನೋ ಲಭಿಸಲಿಲ್ಲ. ||೭|| ಬ್ರಹ್ಮಲೋಕವನ್ನು ಸಾಧಿಸಿದೆ. ವಿಷ್ಣುಲೋಕವನ್ನು ಕಂಡೆ. ಶಂಭುಲೋಕವನ್ನು ಸೇರಿದೆ. ಆದರೇನು? ಆತ್ಮಸಾಕ್ಷಾತ್ಕಾರವೇನೋ ಲಭಿಸಲಿಲ್ಲ. ||೮|| ಈ ಅನಾತ್ಮನಿರಸನವು ಯಾರ ಹೃದಯದಲ್ಲಿ ನಿವಾರಣೆಯಾಗುವುದೋ ಅವರೇ ಆತ್ಮಸಾಕ್ಷಾತ್ಕಾರಕ್ಕೆ ಭಾಗಿಗಳು ||೯|| ಇತರರು ಮಾಯಾಸ್ವರೂಪವಾದ ಜಗದ್ಭ್ರಾಂತಿಯಿಂದ ಮೋಹಿತರಾಗಿರುವರು, ಅವರು ಆತ್ಮಸಾಕ್ಷಾತ್ಕಾರಕ್ಕೆ

ಎಂದಿಗೂ ಭಾಗಿಗಳಾಗುವುದಿಲ್ಲ. ||೧೦|| ಆದುದರಿಂದ ಶ್ರೀರಾಮಚಂದ್ರಸ್ವಾಮಿಯ ಪಟ್ಟಾಭಿಷೇಕದ ತತ್ವವಾದ ತತ್ವಜ್ಞಾನವಲ್ಲದ ಇತರ ಯಾವುದನ್ನು ಹೊಂದಿದರೂ ಸ್ಥಿರವಾದುದಲ್ಲ ಮತ್ತು ಪ್ರಯೋಜನಕಾರಿಯಾದುದಲ್ಲ. ಶ್ರೀರಾಮಚಂದ್ರನು ತನ್ನ ರಾಜ್ಯದಲ್ಲಿ ಪಟ್ಟಾಭಿಷಿಕ್ತನಾದಂತೆ ಈಶ್ವರಸೋಪಾನವೂ ನಾವು ಸ್ವರಾಜ್ಯವನ್ನು ಹೊಂದುವ ತತ್ವವಾಗಿರುವುದು.

**ರಾ||** ಶ್ರೀರಾಮಚಂದ್ರನು ಸುಗ್ರೀವಾದಿ ವಾನರರಿಗೆ ಬಹುಮಾನ ಮಾಡಿ ತಮ್ಮ ತಮ್ಮ ಸ್ಥಾನಗಳಿಗೆ ಹೋಗಲು ಅನುಜ್ಞೆಯನ್ನಿತ್ತು ವಿಭೀಷಣನಿಗೆ ಕುಲಧನವನ್ನು ಕೊಟ್ಟು ಲಂಕಾಪಟ್ಟಣಕ್ಕೆ ಕಳುಹಿಸಿಕೊಟ್ಟನು. ಅನಂತರ ಲಕ್ಷ್ಮಣನನ್ನು ಯುವರಾಜನಾಗಿರೆಂದು ಹೇಳಲು ಅವನು ಸಮ್ಮತಿಪಡದಿರಲು ಭರತನಿಗೆ ಯುವರಾಜಪದವಿಯನ್ನು ಕೊಟ್ಟನು.

**ತತ್ವ||** ಸುಗ್ರೀವಾದಿ ವಾನರರು ತಮ್ಮ ತಮ್ಮ ಸ್ಥಾನಗಳಿಗೆ ಹೋಗುವುದೆಂದರೆ ಪಂಚಪ್ರಾಣಾದಿ ವಾಯುಚೈತನ್ಯಗಳು ದೇಹದಲ್ಲಿರುವ ತಮ್ಮ ತಮ್ಮ ಗೋಳಕಸ್ಥಾನಗಳಿಗೆ ಹೋಗಿ ನಿಂತ ತಾತ್ಪರ್ಯವಾಗಿರುವುದು. ವಿಭೀಷಣನು ತನ್ನ ಕುಲಧನದೊಡನೆ ಹೊರಟನೆಂದರೆ—ವಿಭೀಷಣನು ರಾಕ್ಷಸಚೇಷ್ಟೆ ಇಲ್ಲದವನೆಂದೂ ಧರ್ಮಮಾರ್ಗದ ತತ್ವದವನೆಂದೂ ಹಿಂದೆ ತಿಳಿಸಿದೆ. ಆದರೆ ಇವನ ಕುಲವು ರಾಕ್ಷಸಕುಲವು. ಆದುದರಿಂದ ಕುಲಧನವೆಂದರೆ ರಾಕ್ಷಸ ತತ್ವವಾದ ಬಹಿರ್ವ್ಯಾಪಾರವನ್ನುಂಟುಮಾಡುವ ಶಕ್ತಿಯೇ ಕುಲಧನವಾಗಿ ಇರುವುದು. ಶ್ರೀರಾಮಚಂದ್ರನು ವಿಭೀಷಣನಿಗೆ ಕುಲಧನವನ್ನು ಕೊಡಲು ಕಾರಣವೇನೆಂದರೆ ಆತ್ಮಸಾಕ್ಷಾತ್ಕಾರವನ್ನು ಹೊಂದಿ ಬ್ರಹ್ಮಜ್ಞಾನಿ ಅಥವಾ ಪರಮಹಂಸನೆನಿಸಿಕೊಂಡರೂ ದೇಹವಿರುವವರೆಗೆ ಪ್ರಾರಬ್ಧಕರ್ಮಮಾತ್ರವಿರುವುದರಿಂದ ಈ ಪ್ರಾರಬ್ಧದ ಕಾರ್ಯ ನಡೆಯಬೇಕಾದಲ್ಲಿ ರಾಕ್ಷಸಕುಲದ ತತ್ವವೂ ಬೇಕಾದುದರಿಂದ ವಿಭೀಷಣನು ಕುಲಧನದೊಡನೆ ಹೊರಟನು. ರಾವಣನ ವಧೆಯಾಗಿ ವಿಭೀಷಣನಿಗೆ ಲಂಕಾರಾಜ್ಯಾಭಿಷೇಕವಾದ ಅನಂತರ ವಿಭೀಷಣನು ಕುಲಧನದೊಡನೆ ಹೊರಟಿರುವುದರಿಂದ ಜೀವನ್ಮುಕ್ತನಲ್ಲಿ ವ್ಯಾಪಾರ ನಡೆಯುವುದೆಲ್ಲಾ ಶುದ್ಧವಾದ ಧರ್ಮಮಾರ್ಗದ ಸ್ವರೂಪವಾದ್ದಾಗಿರುತ್ತೆಂದು ಸೂಚಿಸುತ್ತದೆ. ಲಕ್ಷ್ಮಣನು ಯುವರಾಜಪದವಿಯನ್ನು ಒಪ್ಪದೇ ಇರುವ ತತ್ವವೇನೆಂದರೆ—ಮನಸ್ಸು ವಿರಕ್ತಿಯನ್ನು ಬಿಟ್ಟು ಹೊರಗಿನ ವ್ಯಾಪಾರದಲ್ಲಿ ಸಾಧಾರಣರಂತೆ ಜೀವನ್ಮುಕ್ತರಲ್ಲಿ ಸೇರುವದಿಲ್ಲವೆಂಬ ತತ್ವವಾಗಿರುವುದು. ಭರತನಿಗೆ ಯುವರಾಜ್ಯಾಭಿಷೇಕಮಾಡಿದ ತತ್ವವೇನೆಂದರೆ ಜೀವನ್ಮುಕ್ತನಲ್ಲಿ ಅಭಿಮಾನವು ಕೂಡ ತೋರ್ಕೆಗೆ ಮಾತ್ರ ಕಾಣುವಂತಿರುವುದೆಂಬ ತತ್ವವಾಗಿರುವುದು.



ಶ್ರೀ

# ಉತ್ತರಕಾಂಡ.



## ಜೀವನ್ಮುಕ್ತಿ ಅಥವಾ ಪರಮಹಂಸತ್ವ ಮತ್ತು ವಿದೇಹಕೈವಲ್ಯದ ತತ್ವಗಳು.

## ೧ನೆಯ ಪ್ರಕರಣ.

**ಶ್ರೀರಾಮನು ಒಡ್ಡೋಲಗದಲ್ಲಿ ಇದ್ದುದು. ಸೀತಾದೇವಿಯನ್ನು ಅರಣ್ಯಕ್ಕೆ ಕಳುಹಿಸಿದುದು. ಲವಕುಶರ ಜನನ.**



**ಜೀವನ್ಮುಕ್ತನ ಮತ್ತು ಲೋಕಾನುಗ್ರಹದ ವಿಚಾರ.**

**ರಾ||** ಶ್ರೀರಾಮಚಂದ್ರನು ಸಿಂಹಾಸನದಲ್ಲಿ ಕುಳಿತಿರಲು ಅಗಸ್ತ್ಯ ವಸಿಷ್ಠಾದಿ ಅನೇಕ ಋಷಿಗಳು ಸಮೀಪದಲ್ಲಿ ಕುಳಿತಿದ್ದರು. ಭರತ, ಲಕ್ಷ್ಮಣ, ಶತ್ರುಘ್ನ, ವಿಭೀಷಣ ಸುಗ್ರೀವಾದಿಗಳು ಸಮೀಪದಲ್ಲಿದ್ದುಕೊಂಡು ಶ್ರೀರಾಮನನ್ನು ಸೇವಿಸುತ್ತಿದ್ದರು. ಶ್ರೀರಾಮನ ಅಪೇಕ್ಷೆಯಂತೆ ಅಗಸ್ತ್ಯಮುನಿಯು ಸುಗ್ರೀವ ರಾವಣಾದಿಗಳ ಜನನ ಮತ್ತು ರಾವಣನ ದಿಗ್ವಿಜಯದ ವೃತ್ತಾಂತವನ್ನು ತಿಳಿಸಿದನು. ಹೀಗೆ ತಿಳಿಸುವಾಗ ರಾವಣನನ್ನು ಕೊಂದದ್ದು ಆಶ್ಚರ್ಯಕರವಲ್ಲ. ಇಂದ್ರಜಿತ್ತೊಬ್ಬನನ್ನು ನಿಗ್ರಹಮಾಡಿದ್ದು ನಿನ್ನ ಚರಿತ್ರೆಯಲ್ಲೆಲ್ಲಾ ಶ್ಲಾಘನೀಯವಾದುದೆಂದು ಅಗಸ್ತ್ಯಮುನಿಯು ಶ್ರೀರಾಮನಿಗೆ ತಿಳಿಸಿದನು.

**ತತ್ವ||** ರಾವಣಾದಿಗಳ ಜನನ ಮತ್ತು ರಾವಣನ ದಿಗ್ವಿಜಯದ ತತ್ವಗಳ ವಿಚಾರಗಳನ್ನು ಯುದ್ಧಕಾಂಡದಲ್ಲಿಯೇ ವಿವರಿಸಿರುವುದು. ಇಂದ್ರಜಿತ್ತನ್ನು ನಿಗ್ರಹಮಾಡಿದ ವಿರಕ್ತಿಯ ಶ್ರೇಷ್ಠತೆಯ ತತ್ವವೂ ಯುದ್ಧಕಾಂಡದಲ್ಲಿಯೇ ಬಂದಿರುವುದು. ಪ್ರಕೃತದಲ್ಲಿ ಶ್ರೀರಾಮಚಂದ್ರನು ಸಮಸ್ತ ಋಷಿಗಳೊಡನೆಯೂ ಭರತ ಲಕ್ಷ್ಮಣ ಮುಂತಾದವರಿಂದಲೂ ಪರಿವೃತನಾಗಿ ಸಿಂಹಾಸನದಲ್ಲಿ ಕುಳಿತಿರುವ ತತ್ವವೇನೆಂದರೆ—ಪಟ್ಟಾಭಿಷೇಕ ಪ್ರಕರಣದಲ್ಲಿ ವಿವರಿಸಿರುವಂತೆ ಬುದ್ಧಿಗೆ ವೃತ್ತಿರಾಹಿತ್ಯವಾಗಿ ಮೂಕನಂತೆ ಇರುವ ಅಖಂಡಜ್ಞಾನ ಸ್ವರೂಪವಾದ ಈಶ್ವರಸೋಪಾನವಾಗಿರುವುದು. ಪರಮಹಂಸರು ವಿಹರಿಸಿಕೊಂಡಿರುವ

ಸ್ಥಿತಿಯಾಗಿರುವುದು. ಈ ಸ್ಥಿತಿಯೇ ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆಯಲ್ಲಿ ಹೇಳಿರುವ ಬ್ರಾಹ್ಮೀಸ್ಥಿತಿಯಾಗಿರುವುದು. ಶ್ರೀರಾಮಚಂದ್ರಮೂರ್ತಿಯು ಒಡ್ಡೋಲಗದಲ್ಲಿರುವ ಸ್ಥಿತಿಯು ತತ್ವವು ಜೀವನ್ಮುಕ್ತ ಅಥವಾ ಪರಮಹಂಸನ ಸ್ಥಿತಿಯಾಗಿರುತ್ತೆಂಬ ತತ್ವಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೫೨೭ನೆಯ ಶ್ಲೋಕದಲ್ಲಿ,

ತೂಷ್ಣೀಮವಸ್ಥಾ ಪರಮೋಪಶಾನ್ತಿ ರ್ಬುದ್ಧೇರಸತ್ಕಲ್ಪ ವಿಕಲ್ಪಹೇತೋಃ ।
ಬ್ರಹ್ಮಾತ್ಮನಾ ಬ್ರಹ್ಮವಿದೋ ಮಹಾತ್ಮನೋ ಯತ್ರಾದ್ವಯಾನನ್ದ
ಸುಖಂನಿರಂತರಂ ॥

ತಾ॥ ಬುದ್ಧಿಗೆ ಅಸತ್ಪದಾರ್ಥದ ಕಲ್ಪನೆಗಳಿಂದ ವಿಕಲ್ಪವನ್ನುಂಟುಮಾಡುವುದಕ್ಕಿಂತಲೂ ಸುಮ್ಮನಿರುವಿಕೆಯೇ ಪರಮೋಪಶಾನ್ತಿಯಾಗಿರುವುದು. ಅಂಥಾ ಉಪಶಾನ್ತಿಯಿಂದಲೇ ಬ್ರಹ್ಮಜ್ಞಾನಿಯಾದ ಮಹಾತ್ಮನಿಗೆ ಬ್ರಹ್ಮಭಾವದಿಂದ ಅದ್ವಯಾನಂದಸುಖವು ನಿರನ್ತರವಾದದ್ದಾಗುವುದು. ಎಂದೂ,

ದೇಹೇನ್ದ್ರಿಯೇ ಷ್ವಹಂಭಾವಃ ಇದಂ ಭಾವಸ್ತದನ್ಯಕೆ ।
ಯಸ್ಯ ನೋಭವತಃ ಕ್ವಾಪಿ ಸಜೀವನ್ಮುಕ್ತ ಇಷ್ಯತೆ ॥

ತಾ॥ ದೇಹೇಂದ್ರಿಯಾದಿಗಳಲ್ಲಿ ನಾನೆಂಬ ಭಾವವು, ತದ್ವ್ಯತಿರಿಕ್ತನಾದ ಇತರ ಪದಾರ್ಥಗಳಲ್ಲಿ ಇದು ಎಂಬ ಭಾವವು ಹುಟ್ಟದೆ ಅಖಂಡಜ್ಞಾನದ ಸ್ಥಿತಿಯಲ್ಲಿ ಯಾವನಿರುವನೋ ಅವನು ಜೀವನ್ಮುಕ್ತನೆನಿಸುವನು. ಎಂಬದಾಗಿ ಹೇಳಿರುತ್ತಾರೆ.

ಶ್ರೀರಾಮಚಂದ್ರನು ಸಭಾಮಂಟಪದಲ್ಲಿ ಸಿಂಹಾಸನದಲ್ಲಿ ಕುಳಿತಿರುವ ತತ್ವವೇ ಪರಮಹಂಸನಲ್ಲಿರುವ ಅದ್ವಯಾನಂದವಾದ ಅಖಂಡಜ್ಞಾನದ ಸ್ಥಿತಿಯೆಂಬದಾಗಿ ನೋಡಿ ತಿಳಿಸಿತಷ್ಟೆ! ಶ್ರೀರಾಮಚಂದ್ರಮೂರ್ತಿಯು ಕೂಡ ರತ್ನಸಿಂಹಾಸನದಲ್ಲಿ ತನ್ನ ಸ್ವರೂಪ ಧ್ಯಾನಪರನಾಗಿದ್ದು ಸಮಾಧಿಯಿಂದ ಬಹಿರ್ಮುಖನಾಗಿ ಹನುಮಂತನಿಗೆ ಉಪದೇಶಮಾಡಿರುವನೆಂದು ಮುಕ್ತಿಕೋಪನಿಷತ್ತಿನಲ್ಲಿ,

ಅಯೋಧ್ಯಾ ನಗರೇ ರಮ್ಯೇ ರತ್ನಮಂಟಪಮಧ್ಯಮೆ । ಸೀತಾ ಭರತ ಸೌಮಿತ್ರಿ ಶತ್ರುಘ್ನಾದ್ಯೈಸ್ಸಮನ್ವಿತಂ । ಸನಕಾದ್ಯೈರ್ಮುನಿಗಣೈಃ ರ್ವಸಿಷ್ಠಾದ್ಯೈಶ್ಶುಕಾದಿಭಿಃ । ಅನ್ಯೈರ್ಭಾಗವತೈಶ್ಚಾಪಿ ಸ್ತೂಯಮಾನಮಹರ್ನಿಶಂ । ಧೀವಿಕ್ರಿಯಾಸಹಸ್ರಾಣಾಂಸಾಕ್ಷಿಣಂನಿರ್ವಿಕಾರಿಣಂ। ಸ್ವರೂಪಧ್ಯಾನನಿರತಂಸಮಾಧಿವಿರಮೆಹರಿಂ॥

ತಾ॥ ರಮ್ಯವಾದ ಅಯೋಧ್ಯಾನಗರದಲ್ಲಿ ರತ್ನಮಂಟಪ ಮಧ್ಯದಲ್ಲಿ ಕುಳಿತುಕೊಂಡು ಸೀತಾ ಲಕ್ಷ್ಮಣ ಭರತ ಶತ್ರುಘ್ನರಿಂದ ಕೂಡಿ ಸನಕ ವಸಿಷ್ಠಾದಿ ಮುನಿಗಳಿಂದ

ಪರಿವೃತನಾಗಿ ಅಹೋರಾತ್ರಿಯಲ್ಲಿಯೂ ಸ್ತುತಿಸಲ್ಪಡುತ್ತಿರುವವನಾಗಿ ಅಪಾರವಾದ ಮನೋವಿಕಾರಗಳಿಗೆ ಸಾಕ್ಷಿಯಾಗಿಯೂ ನಿರ್ವಿಕಾರನಾಗಿಯೂ ಇರುವ ಪರಬ್ರಹ್ಮಧ್ಯಾನ ದಲ್ಲಿ ಮುಳುಗಿದ್ದ ಶ್ರೀರಾಮನನ್ನು ಸಮಾಧಿಯಿಂದ ಬಹಿರ್ಮುಖವಾದ ಕಾಲದಲ್ಲಿ ಎಂದು ಹೇಳಿದೆ.

ಆದುದರಿಂದ ಶ್ರೀರಾಮಚಂದ್ರಮೂರ್ತಿಯು ಸಭಾಮಧ್ಯದಲ್ಲಿ ಸಿಂಹಾಸನದಲ್ಲಿರುವ ತತ್ವವೇ ಪರಮಹಂಸನಲ್ಲಿರುವ ಅದ್ವಯಾನಂದವಾದ ಅಖಂಡಜ್ಞಾನದ ಸ್ಥಿತಿಯಾಗಿ ಈಶ್ವರಸೋಪಾನವಾಗಿರುವುದು.

**ರಾ||** ಶ್ರೀರಾಮಚಂದ್ರನು ಸುಗ್ರೀವ ವಿಭೀಷಣರಾದಿಯಾಗಿ ಸಕಲರೊಡನೆ ಒಡ್ಡೋ ಲಗದಲ್ಲಿ ಕೆಲವು ಕಾಲವಿದ್ದನಂತರ ವಾನರರುಗಳೊಡನೆ ಸುಗ್ರೀವನನ್ನು ಕಿಷ್ಕಿಂಧೆಗೂ ವಿಭೀಷಣನನ್ನು ಲಂಕೆಗೂ ಕಳುಹಿಸಿದನು. ಶ್ರೀರಾಮಚಂದ್ರನು ಲಂಕೆಯಿಂದ ಅಯೋ ಧ್ಯೆಗೆ ಬಂದಾಗ ಪುಷ್ಪಕವಿಮಾನವನ್ನು ಕುಬೇರನಲ್ಲಿಗೆ ಕಳುಹಿಸಿದ್ದನಷ್ಟೆ ! ಕುಬೇರನು ಪುಷ್ಪಕವಿಮಾನವನ್ನು ಕುರಿತು ಶ್ರೀರಾಮಚಂದ್ರನು ರಾವಣನನ್ನು ನಿಗ್ರಹಿಸಿದುದರಿಂದ ನಿನ್ನನ್ನು ಜಯಿಸಿದಂತಾಯಿತು. ನೀನು ಆ ಶ್ರೀರಾಮನನ್ನೇ ಹೊಂದೆಂದು ಆಜ್ಞೆಮಾಡಿ ಕಳುಹಿಸಿದನು. ಪುಷ್ಪಕವಿಮಾನವು ಶ್ರೀರಾಮನಲ್ಲಿಗೆ ಬಂದು ನನ್ನನ್ನು ಪರಿಗ್ರಹಿಸೆಂದು ಕೇಳಿಕೊಳ್ಳಲು, ಗಂಧ ಪುಷ್ಪಾಕ್ಷತೆಗಳಿಂದ ಆ ಪುಷ್ಪಕವಿಮಾನವನ್ನು ಅರ್ಚಿಸಿ ಸ್ವೇಚ್ಛೆ ಯಾಗಿರಲು ಬಿಟ್ಟನು.

**ತತ್ವ||** ಶ್ರೀರಾಮಚಂದ್ರನು ಸಿಂಹಾಸನಾರೋಹಣನಾಗಿದ್ದನೆಂದರೆ—ಅದ್ವಯಾ ನಂದವಾದ ಅಖಂಡಜ್ಞಾನದ ಸ್ಥಿತಿಯಾಗಿ ದೇಹದ ಯಾವ ವ್ಯಾಪಾರವೂ ಇಲ್ಲದ ಸ್ಥಿತಿ ಯಾಗಿರುತ್ತೆಂದು ತಿಳಿಸಿತಷ್ಟೆ! ಶ್ರೀರಾಮನು ವಾನರರೊಡನೆ ಸುಗ್ರೀವನನ್ನು ಕಿಷ್ಕಿಂಧೆಗೆ ಕಳುಹಿಸಿದನೆಂದರೆ—ದೇಹದ ವ್ಯಾಪಾರ ಪ್ರಾರಂಭವಾಗಲು ಪಂಚಪ್ರಾಣಗಳ ಮತ್ತು ಶ್ವಾಸೋಚ್ಛ್ವಾಸದ ಕಾರ್ಯ ಪ್ರಾರಂಭವಾಗುವುದೆಂಬ ತತ್ವವಾಗಿರುವುದು ವಿಭೀಷಣ ನನ್ನು ಕುಲಧನದೊಡನೆ ಲಂಕೆಗೆ ಕಳುಹಿಸಿದನೆಂದರೆ—ದೇಹವ್ಯಾಪಾರಕ್ಕೆ ಬೇಕಾಗುವ ಮೂಲಾಧಾರದಲ್ಲಿನ ಪಿಕೃತ್ವದ ಶಕ್ತಿಗಳು ಮಲಿನಸತ್ವಗುಣಚೈತನ್ಯವನ್ನು ಅನುಸರಿಸಿ ಕೊಂಡು ಕಾರ್ಯಮಾಡಲು ಪ್ರಾರಂಭವೆಂಬ ತತ್ವವಾಗಿರುವುದು.

ಪುಷ್ಪಕವಿಮಾನವೆಂದರೆ – ಈ ಜನ್ಮದಲ್ಲಿ ಅನುಭವಿಸಬೇಕಾಗಿರುವ ಪ್ರಾರಬ್ಧ ಕರ್ಮದ ವಾಸನೆಯ ಸ್ವರೂಪದ ತತ್ವವೆಂದು ಸುಂದರಕಾಂಡದಿಂದಲೂ ತಿಳಿಸಿಕೊಂಡು ಬಂದಿರುತ್ತನಷ್ಟೆ ! ಪುಷ್ಪಕವಿಮಾನವನ್ನು ಶ್ರೀರಾಮಚಂದ್ರನು ಲಂಕೆಯಿಂದ ಅಯೋಧ್ಯೆಗೆ ಬಂದಾಗ ಕುಬೇರನಲ್ಲಿಗೆ ಕಳುಹಿಸಿದ್ದನೆಂದರೆ, ಈಶ್ವರಸೋಪಾನವಾದ ಅಂಖಡಜ್ಞಾನವಾದ

ಮನೋನ್ಮನೀಸೋಪಾನದಲ್ಲಿ ವಾಸನೆಯು ಕಾರ್ಯಕ್ಕೋಸ್ಕರ ವಿಕಸಿತವಾಗದೆ ಕುತ್ಸಿತವಾದ ವಾಸನಾಮಯವಾಗಿತ್ತೆಂಬ ತತ್ವ. ಪುಷ್ಪಕವಿಮಾನವು ಶ್ರೀರಾಮನಲ್ಲಿಗೆ ಪುನಃ ಬಂದಿತೆಂದರೆ—ಪ್ರಾರಬ್ಧಕರ್ಮವು ಕಾಲವಶದಿಂದ ತನ್ನ ಕಾರ್ಯಮಾಡಲು ಪ್ರಾರಂಭವೆಂಬ ತತ್ವವು. ಶ್ರೀರಾಮಚಂದ್ರನು ಪುಷ್ಪಕವಿಮಾನಕ್ಕೆ ಪೂಜೆಮಾಡಿ ಸ್ವೇಚ್ಛೆಯಿಂದಿರಲು ಬಿಟ್ಟನೆಂದರೆ – ಬ್ರಹ್ಮನಿಷ್ಠರು ಕೂಡ ದೇಹವಿರುವುದಕ್ಕೆ ಕಾರಣವಾದ ಪ್ರಾರಬ್ಧಕರ್ಮವನ್ನು ನಿಸ್ಸಂಗರಾಗಿದ್ದುಕೊಂಡೇ ಸಂತೋಷದಿಂದ ಅನುಭವಿಸುವರೆಂಬ ತತ್ವವಾಗಿರುವುದು.

**ರಾ||** ಶ್ರೀರಾಮಚಂದ್ರನು ಸೀತಾದೇವಿಯನ್ನು ಕುರಿತು ನನಗೆ ಸಂತಾನಪ್ರಾಪ್ತಿಯು ಸವಿಾಪವರ್ತಿಯಾಗಿದೆ. ನಿನಗೆ ಪ್ರಿಯವಾಗಿರುವುದನ್ನು ಹೇಳೆಂದು ಕೇಳಲು "ಗಂಗಾತೀರದಲ್ಲಿ ಋಷ್ಯಾಶ್ರಮವನ್ನು ನೋಡಲಿಚ್ಛಿಸುವೆ" ಎಂದು ಸೀತಾದೇವಿಯು ಹೇಳಿದಳು. ಅದಕ್ಕೆ ಸರಿಯಾಗಿ ಸೀತಾದೇವಿಯಮೇಲೆ ನಿಷ್ಕಾರಣವಾದ ಅಪವಾದವೂ ಒದಗಲು ಶ್ರೀರಾಮಚಂದ್ರನು ಸೀತಾದೇವಿಯನ್ನು ವಾಲ್ಮೀಕಿಮಹಾಮುನಿಯ ಆಶ್ರಮದಲ್ಲಿ ಬಿಡುವಂತೆ ಲಕ್ಷ್ಮಣನಿಗೆ ಹೇಳಿ ಕಳುಹಿಸಿದನು.

**ತತ್ವ||** ಸೀತಾದೇವಿಯು ನಾನು ಎಂಬ ಅಂಖಡಜ್ಞಾನಸ್ವರೂಪವಾದ ಶುದ್ಧಸತ್ವಪ್ರಧಾನಮಾಯೆಯು ತತ್ವದವಷ್ಟೆ! ಶುದ್ಧಸತ್ವಪ್ರಧಾನಮಾಯೆಯು ಬುದ್ಧಿಪ್ರತಿಫಲಿತ ಚೈತನ್ಯದೊಡನೆ ಬುದ್ಧಿಸ್ಥಾನದಲ್ಲಿಯೇ ಇದ್ದರೆ ದೇಹವ್ಯಾಪಾರವಿಲ್ಲದ ಮನೋನ್ಮನೀಸೋಪಾನವಾಗಿರುವುದು. ಪುಷ್ಪಕವಿಮಾನವನ್ನು ಸ್ವೇಚ್ಛೆಯಿಂದಿರಲು ಕಳುಹಿಸಿದ ಸುಗ್ರೀವಾದಿಗಳನ್ನು ತಮ್ಮ ತಮ್ಮ ಸ್ಥಾನಕ್ಕೆ ಕಳುಹಿಸಿದ ಸೀತಾದೇವಿಯನ್ನು ವಾಲ್ಮೀಕರಾಶ್ರಮಕ್ಕೆ ಕಳುಹಿಸಿದ ತತ್ವಗಳು ಏಕಕಾಲದಲ್ಲಾದುದರಿಂದ ಸೀತಾದೇವಿಯು ತತ್ವವಾದ ಶುದ್ಧಸತ್ವಪ್ರಧಾನಮಾಯೆಯು ಕೂಡ ವಾಲ್ಮೀಕಾಶ್ರಮದ ತತ್ವವಾದ ವಿಜ್ಞಾನಮಯಕೋಶಕ್ಕಿಳಿದು ದೇಹವ್ಯಾಪಾರಕ್ಕೆ ಪ್ರಕಾಶಕವಾಗಿರಲೇಬೇಕೆಂಬ ತತ್ವವಾಗಿರುವುದು.

ಈ ಮೇಲಿನ ತತ್ವಾರ್ಥಗಳಿಂದ ತತ್ವಜ್ಞಾನಪಡೆದನಂತರದಲ್ಲೂ ಜ್ಞಾನಿಗಳು ತಮ್ಮ ತಮ್ಮ ಪ್ರಾರಬ್ಧಕರ್ಮಾನುಸಾರವಾಗಿ ಸಂಸಾರದಲ್ಲಿ ಪ್ರವರ್ತಿಸುವರು. ಕಾರಣವೇನೆಂದರೆ ಪ್ರಾರಬ್ಧಕರ್ಮವನ್ನು ಅನುಭವಿಸುವುದಕ್ಕೋಸ್ಕರಲೇ ಈ ದೇಹ ಬಂದಿರುವುದು. ಈ ದೇಹದಿಂದ ಅನುಭವಿಸಬೇಕಾದ ಕೆಲವು ಕರ್ಮಗಳು ಈ ಜನ್ಮವನ್ನು ಪಡೆದಾಗಲೇ ಜೊತೆಯಲ್ಲಿ ಬಂದಿರುವುದರಿಂದ ಅವುಗಳು ಮಾತ್ರ ಭೋಗದಿಂದಲೇ ಕೆಡಬೇಕು. ಈ ತತ್ವಕ್ಕನುಸಾರವಾಗಿಯೇ ಶ್ರೀರಾಮಚಂದ್ರನಲ್ಲಿಗೆ ಪುಷ್ಪಕವಿಮಾನ ಬಂದುದು ಮತ್ತು ಶ್ರೀರಾಮಚಂದ್ರನು ಸುಗ್ರೀವಾದಿಗಳನ್ನು ತಮ್ಮ ತಮ್ಮ ಸ್ಥಾನಕ್ಕೆ ಕಳುಹಿಸಿ ಸೀತಾದೇವಿಯನ್ನು

ವಾಲ್ಮೀಕಾಶ್ರಮಕ್ಕೆ ಕಳುಹಿಸಿದುದು. ಈ ತಾತ್ಪರ್ಯಕ್ಕೆ ಅನುಸಾರವಾಗಿ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೪೫೨ ೪೫೪, ೫೫೧ನೆಯ ಶ್ಲೋಕಗಳಲ್ಲಿ,

ಜ್ಞಾನೋದಯಾತ್ಪುರಾರಬ್ಧಂ ಕರ್ಮಜ್ಞಾನಾನ್ನನಶ್ಯತಿ|
ಅದತ್ವಾಸ್ವಫಲಂ ಲಕ್ಷ್ಯಮುದ್ದಿಶ್ಯೋತ್ಸೃಷ್ಟಬಾಣವತ್ ||

ತಾ|| ಲಕ್ಷ್ಯವನ್ನು ಉದ್ದೇಶಮಾಡಿ ಬಿಟ್ಟ ಬಾಣವು ಆ ಲಕ್ಷ್ಯವನ್ನು ಭೇದಿಸದೇ ಹಿಂದಿರುಗದಿರುವಂತೆ, ಜ್ಞಾನೋದಯವಾಗುವದಕ್ಕೆ ಪೂರ್ವದಲ್ಲಿಯೇ ಫಲವನ್ನು ಕೊಡುವುದಕ್ಕೆ ಪ್ರಾರಂಭವಾಗಿದ್ದ ಕರ್ಮವು ಜ್ಞಾನೋದಯವಾದ ಬಳಿಕ ಕೂಡ ಅದರ ಫಲವನ್ನು ಕೊಡದೆ ನಾಶವಾಗುವುದಿಲ್ಲ.

ಪ್ರಾರಬ್ಧಂ ಬಲವತ್ತರಂ ಖಲುವಿದಾಂಭೋಗೇನತಸ್ಯಕ್ಷಯಃ |
ಸಮ್ಯಕ್‌ಜ್ಞಾನಹುತಾಶನೇನವಿಲಯಃ ಪ್ರಾಕ್ಸಂಚಿತಾಗಾಮಿನಾಂ ||
ಬ್ರಹ್ಮಾತ್ಮೈಕ್ಯಮವೇಕ್ಷ್ಯತನ್ಮಯತಯಾಯೇಸರ್ವದಾಸಂಸ್ಥಿತಾ |
ಸ್ತೇಷಾಂತತ್ರಿತಯಂನಹಿಕ್ವಚಿದಪಿ ಬ್ರಹ್ಮೈವತೇನಿರ್ಗುಣಂ ||

ತಾ|| ಅತ್ಯಂತ ಬಲಿಷ್ಠವಾದ ಪ್ರಾರಬ್ಧವು ಜ್ಞಾನಿಗಳಿಗೂ ಅನುಭವದಿಂದಲೇ ಕ್ಷಯಿಸಬೇಕಾಗಿರುತ್ತದೆಯಲ್ಲದೆ ಸಂಚಿತಾಗಾಮಿಗಳಂತೆ ಜ್ಞಾನಾಗ್ನಿಯಿಂದ ನಾಶವಾಗಲಾರದು. ಯಾರಾದರೆ ಬ್ರಹ್ಮಾತ್ಮೈಕ್ಯವನ್ನು ತಿಳಿದು ಸರ್ವದಾ ಬಾಹ್ಯಪ್ರಪಂಚವನ್ನು ಮರೆತು, ತನ್ಮನಸ್ಕರಾಗಿಯೇ ಇರುವರೋ, ಅವರು ನಿರ್ಗುಣವಾದ ಕೇವಲ ಬ್ರಹ್ಮಸ್ವರೂಪರಾಗಿಯೇ ಇರುವರಾದಕಾರಣ ಅವರನ್ನು ಮಾತ್ರ ಪ್ರಾರಬ್ಧವು ಪೀಡಿಸಲಾರದು.

ಸ್ರೋತಸಾನೀಯತೆವಾರುಯಥಾನಿಮ್ನೋನ್ನತಸ್ಥಲಂ |
ದೈವೇನನೀಯತೆದೇಹೋಯಥಾಕಾಲೋಪಭುಕ್ತಿಷು ||

ತಾ|| ಮರವು ಪ್ರವಾಹದಿಂದ ಹಳ್ಳ ದಿಣ್ಣೆಗಳಿಗೆ ಎಳೆಯಲ್ಪಡುವಂತೆ ಜ್ಞಾನಿಯ ಶರೀರವು ಕಾಲಾನುಗುಣವಾದ ಭೋಗಗಳಲ್ಲಿ ದೈವದಿಂದ ಸೇರಿಸಲ್ಪಡುತ್ತದೆ, ಎಂದು ಹೇಳಿರುವರು.

ಜ್ಞಾನಿ ಅಜ್ಞಾನಿಗಳಿಬ್ಬರಿಗೂ ಅವಶ್ಯ ಭೋಕ್ತವ್ಯತ್ವದಿಂದ ಪ್ರಾರಬ್ಧಕರ್ಮವು ಸಮಾನತ್ವವನ್ನು ಪಡೆದಿರುವಾಗ ಜ್ಞಾನಿ ಅಜ್ಞಾನಿಗಳಿಗೆ ಭೇದವೇನೆಂದರೆ, ಜ್ಞಾನಿಯಾದವನು ಪ್ರಾರಬ್ಧಾನುಭವಮಾಡಿದರೂ ಅದಕ್ಕೆ ಅಧೀನವಾಗಿರುವುದಿಲ್ಲ. ಅಜ್ಞಾನಿಯು ಅಧೀನನಾಗಿರುವನು. ಆದುದರಿಂದ ಶ್ರೀಶಂಕರಭಗವತ್ಪಾದರವರು ಮೇಲಿನ ಶ್ಲೋಕವಲ್ಲಿ ಹೇಳಿರು

ವಂತೆ ಜ್ಞಾನಿಯು ಪ್ರಾರಬ್ಧವನ್ನು ಅನುಭವಿಸಿದರೂ ಅದರಿಂದ ಪೀಡಿತನಾಗದೆ ಪ್ರಾರಬ್ಧ ಕರ್ಮವಿದ್ದಂತೆ ಕಾರ್ಯ ನಡೆದುಕೊಳ್ಳಲೆಂದು ಇರುವನು. ಈ ತತ್ವಪ್ರತಿಪಾದನೆಯೇ ಶ್ರೀರಾಮ ಚಂದ್ರನು ಪುಷ್ಪಕವಿಮಾನವನ್ನು ಪೂಜೆಮಾಡಿ ಸ್ವೇಚ್ಛೆಯಾಗಿರೆಂದು ಬಿಟ್ಟುದರ ತತ್ವ ವಾಗಿರುವುದು. ಈ ಮೇಲಿನ ತತ್ವಾರ್ಥಗಳಿಗನುಸಾರವಾಗಿ ಶ್ರೀವಿದ್ಯಾರಣ್ಯರವರು ಪಂಚ ದಶಿ ತೃಪ್ತಿದೀಪಿಕೆ ೧೩೩ನೆಯ ಶ್ಲೋಕದಲ್ಲಿ,

ಜ್ಞಾನಿನೋಽಜ್ಞಾನಿನಶ್ಚಾತ್ರಸಮೇಪ್ರಾರಬ್ಧಕರ್ಮಣಿ ।
ನಕ್ಲೇಶೋಜ್ಞಾನಿನೋಧೈರ್ಯಾನ್ಮೂಢಃಕ್ಲಿಶ್ಯತ್ಯಧೈರ್ಯತಃ ॥

ತಾ॥ ಪ್ರಾರಬ್ಧಕರ್ಮವು ಜ್ಞಾನಿಗೂ ಅಜ್ಞಾನಿಗೂ ಸಮವಾಗಿದ್ದಾಗ್ಯೂ ಜ್ಞಾನಿಗೆ ಜ್ಞಾನಧೈರ್ಯದಿಂದ ದುಃಖವಿಲ್ಲ ಅಜ್ಞಾನಿಯು ದುಃಖವನ್ನು ಹೊಂದುವನು.

ಇದೇ ತಾತ್ಪರ್ಯಕ್ಕೆ ಶ್ರೀಕೃಷ್ಣಪರಮಾತ್ಮನು ಕೂಡ ಭಗವದ್ಗೀತೆ ೫ನೆಯ ಅಧ್ಯಾಯ ೮-೯ನೆಯ ಶ್ಲೋಕಗಳಲ್ಲಿ,

ನೈವಕಿಂಚಿತ್ಕರೋಮೀತಿಯುಕ್ತೋಮನ್ಯೇತತತ್ತ್ವವಿತ್ ।
ಪಶ್ಯಞ್ಶೃಣ್ವನ್ಸ್ಪೃಶಞ್ಜಿಘ್ರನ್ನಶ್ನನ್ಗಚ್ಛನ್ಸ್ವಪಞ್ಶ್ವಸನ್ ॥೮॥
ಪ್ರಲಪನ್ವಿಸೃಜನ್ಗೃಹ್ಣನ್ನುನ್ಮಿಷನ್ನಿಮಿಷನ್ನಪಿ ।
ಇನ್ದ್ರಿಯಾಣೀನ್ದ್ರಿಯಾರ್ಥೇಷುವರ್ತನ್ತಇತಿಧಾರಯನ್ ॥೯॥

ತಾ॥ ಮನಸ್ಸಿನ ಸಮಾಧಾನವನ್ನು ಪಡೆದುಕೊಂಡಿರುವ ಜ್ಞಾನಿಯು ನೋಡು ತ್ತಲೂ, ಕೇಳುತ್ತಲೂ, ಮೂಸಿನೋಡುತ್ತಲೂ, ಸವಿದು ನೋಡುತ್ತಲೂ, ಹೋಗುತ್ತಲೂ, ಮಲಗುತ್ತಲೂ, ಉಸಿರುಬಿಡುತ್ತಲೂ, ಮಾತಾಡುತ್ತಲೂ, ಬಿಡುತ್ತಲೂ, ತೆಗೆದುಕೊಳ್ಳು ತ್ತಲೂ, ರೆಪ್ಪೆಯನ್ನು ಮುಚ್ಚುತ್ತಲೂ, ತೆರೆಯುತ್ತಲೂ ಇದ್ದರೂ ಇಂದ್ರಿಯಗಳು ವಿಷಯ ಗಳಿಂದ ವ್ಯವಹರಿಸುತ್ತವೆಂದು ಭಾವಿಸುತ್ತಾ ತಾನು ಏನೂ ಮಾಡುವುದಿಲ್ಲವೆಂದು ತಿಳಿಯುತ್ತಾನೆ.

ಮೇಲಿನ ಕಥಾಸಂದರ್ಭಗಳಿಂದ ಜ್ಞಾನಿಯು ಪ್ರಾರಬ್ಧರೂಪವಾದ ಕರ್ಮವನ್ನನು ಭವಿಸಿದರೂ ನಿರ್ಲಿಪ್ತನಾಗಿ ಸುಗ್ರೀವಾದಿಗಳನ್ನು ತಮ್ಮ ತಮ್ಮ ಸ್ಥಳಕ್ಕೂ ಸೀತೆಯನ್ನು ವಾಲ್ಮೀಕಾಶ್ರಮಕ್ಕೂ ಕಳುಹಿಸಿದರೂ ಶ್ರೀರಾಮನು ಅಯೋಧ್ಯೆಯಲ್ಲಿಯೇ ಇದ್ದ ತತ್ವದಂತೆ ಸದಾತ್ಮಭಾವದಿಂದಿರುವನು. ಅಂದರೆ ತತ್ವಜ್ಞಾನವನ್ನು ಪಡೆಯದೆ ಇರುವವರು ಸದಾತ್ಮಭಾವ ವಿಲ್ಲದೆ ರಾವಣನ ತೊಂದರೆಗೆ ಸೀತಾರಾಮಲಕ್ಷ್ಮಣರು ಒಳಪಟ್ಟಿದ್ದ ತತ್ವದಂತೆ ಅಜ್ಞಾನದ ಬಂಧನದಲ್ಲಿರುತ್ತಾರೆ. ಅಂದರೆ ಅಜ್ಞಾನವನ್ನು ಹೋಗಲಾಡಿಸಿಕೊಳ್ಳದೆ ಇರುವ ಸಾಧಕರು

ಕಾರ್ಯಗಳಲ್ಲಿ ಎಷ್ಟೇ ನಿಸ್ಸಂಗರಾಗಿದ್ದರೂ ಸದಾತ್ಮಭಾವದಿಂದಲೂ ಆನಂದದಿಂದಲೂ ಇರುವ ಶುದ್ಧಸತ್ವಗುಣದ ಸೋಪಾನದಲ್ಲಿರುವುದಿಲ್ಲವಾದುದರಿಂದ ಬುದ್ಧ್ಯವಚ್ಛಿನ್ನ ಪ್ರತಿಬಿಂಬಚೈತನ್ಯವು ವೃತ್ತಿಪ್ರಕಾಶಕವಾಗಿ ಇಂದ್ರಿಯಗಳ ಮೂಲಕ ಸಂಚರಿಸಬೇಕಾಗುವುದು. ಜ್ಞಾನಿಗಳಲ್ಲಿ ಬುದ್ಧ್ಯವಚ್ಛಿನ್ನಪ್ರತಿಬಿಂಬಚೈತನ್ಯವು ತಾನಿದ್ದೆಡೆಯಿಂದಲೇ ಸರ್ವವನ್ನೂ ಪ್ರಕಾಶಮಾಡುತ್ತಾ ಎಳೇಮಕ್ಕಳೋಪಾದಿಯಲ್ಲಿ ಆನಂದಮಯರಾಗಿ ಸ್ವಾತ್ಮಾರಾಮರಾಗಿರುವುದರಿಂದ ಜೀವನ್ಮುಕ್ತರೆಂದು ಕರೆಯಲ್ಪಡುವರು. ಈ ತತ್ವನೇ ಶ್ರೀರಾಮನು ಅಯೋಧ್ಯೆಯಲ್ಲಿಯೇ ಇದ್ದುದಾಗಿದೆ. ಈ ತತ್ವಾರ್ಥಗಳಿಗನುಸಾರವಾಗಿ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೪೨೯, ೫೫೩, ೫೫೭ನೆಯ ಶ್ಲೋಕಗಳಲ್ಲಿ,

> ಯಸ್ಯಸ್ಥಿತಾಭವೇತ್ಪ್ರಜ್ಞಾ ಯಸ್ಯಾನನ್ದೋನಿರನ್ತರಃ |
> ಪ್ರಪಂಚೋವಿಸ್ಮೃತಪ್ರಾಯಃಸಜೀವನ್ಮುಕ್ತಇಷ್ಯತೇ ||
> ಪ್ರಾರಬ್ಧಕರ್ಮಪರಿಕಲ್ಪಿತವಾಸನಾಭಿಃ |
> ಸಂಸಾರಿವಚ್ಚರತಿಭುಕ್ತಿಷುಮುಕ್ತದೇಹಃ ||
> ಸಿದ್ಧಃಸ್ವಯಂವಸತಿಸಾಕ್ಷಿವದತ್ರತೂಷ್ಣೀಂ |
> ಚಕ್ರಸ್ಯಮೂಲಮಿವಕಲ್ಪವಿಕಲ್ಪಶೂನ್ಯಃ ||
> ನೈವೇನ್ದ್ರಿಯಾಣಿವಿಷಯೇಷುನಿಯುಙ್ತ್ಯಏಷಃ |
> ನೈವಾಪಯುಙ್ತ್ಯುಪದರ್ಶನಲಕ್ಷಣಸ್ಥಃ ||
> ನೈವಕ್ರಿಯಾಫಲಮಪೀಷದಪೇಕ್ಷತೇಸಃ |
> ಸಾನನ್ದಸಾನ್ದ್ರರಸಪಾನಸುಮತ್ತಚಿತ್ತಃ ||

ತಾ|| ಯಾವನ ಪ್ರಜ್ಞೆಯು ಸ್ಥಿರವಾಗಿ ನೆಲಗೊಂಡಿದೆಯೋ, ಯಾವನ ಆನಂದವು ವಿಚ್ಛಿತ್ತಿಯಿಲ್ಲದ್ದೋ, ಯಾವನಿಗೆ ಪ್ರಪಂಚವು ಮರೆತಹಾಗಿರುವುದೋ, ಆ ಮಹಾನುಭಾವನು ಜೀವನ್ಮುಕ್ತನೆಂದು ಅಂಗೀಕರಿಸಲ್ಪಡುವನು. ದೇಹಾಭಿಮಾನವಿಲ್ಲದ ಮಹಾನುಭಾವನು ಪ್ರಾರಬ್ಧಕರ್ಮಗಳಿಂದುಂಟಾಗುವ ವಾಸನೆಗಳಿಂದ ಭೋಗಗಳಲ್ಲಿ ಸಂಸಾರಿಯಂತೆ ಚರಿಸುವನಲ್ಲದೆ ತಾನು ಸರ್ವದಾ ಸಾಕ್ಷೀಭೂತನಾಗಿ ಚಕ್ರದ ಮೂಲದಂತೆ ಸಂಕಲ್ಪ ವಿಕಲ್ಪಶೂನ್ಯನಾಗಿ ಸ್ವಯಂಸಿದ್ಧನಾಗಿ ಸುಮ್ಮನಿರುವನು. ಅಂಥಾ ಆತ್ಮಜ್ಞಾನಿಯು ಆನನ್ದರಸಪೂರ್ಣವಾದ ಬ್ರಹ್ಮರಸಪಾನದಿಂದ ಮತ್ತಚಿತ್ತನಾಗಿ ಇಂದ್ರಿಯಗಳನ್ನು ವಿಷಯಗಳಲ್ಲಿ ಪ್ರೇರಿಸದೆ ಮತ್ತು ತಡೆಯದೆ ಯಾವ ಕಾರ್ಯದ ಫಲವನ್ನೂಸ್ವಲ್ಪವೂ ಅಪೇಕ್ಷಿಸದೆ ಇರುವನು.

ಇದೇ ತಾತ್ಪರ್ಯಕ್ಕೆ ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆ ೫ನೆಯ ಅಧ್ಯಾಯ ೨೪ನೆಯ ಶ್ಲೋಕದಲ್ಲಿ,

ಯೋನ್ತಸ್ಸುಖೋನ್ತಸ್ಸುಖೋನ್ತರಾರಾಮಸ್ತಥಾನ್ತ ರ್ಜ್ಯೋತಿರೇವಯಃ|
ಸಯೋಗೀಬ್ರಹ್ಮ ನಿರ್ವಾಣಂ ಬ್ರಹ್ಮಭೂತೋಧಿಗಚ್ಛತಿ ||

ತಾ|| ಯಾವನು ಒಳಗೇ ಸುಖವನ್ನು ಪಡೆಯುತ್ತ, ಒಳಗೇ ವಿನೋದದಿಂದಿರುತ್ತ ಮತ್ತು ಒಳಗಡೆಗೇ ದೃಷ್ಟಿಯನ್ನಿಟ್ಟುಕೊಂಡಿರುವನೋ ಆ ಯೋಗಿಯು ಪರಮಾತ್ಮ ಸ್ವರೂಪನೇ ಆಗಿದ್ದು ನಿರ್ವಾಣಬ್ರಹ್ಮವನ್ನು ಪಡೆಯುತ್ತಾನೆ ಎಂದು ಹೇಳಿರುವನು. ಮುಂಡಕೋಪನಿಷತ್ ಮತ್ತು ಕುಂಡಿನ್ಯೋಪನಿಷತ್ತುಗಳಲ್ಲಿಯೂ,

ಪ್ರಾಣೋಹ್ಯೇಷಯಸ್ಸರ್ವಭೂತೈರ್ವಿಭಾತಿವಿಜಾನನ್ ಭವತೇನಾತಿವಾದೀ |
ಆತ್ಮಕ್ರೀಡ ಆತ್ಮರತಿಃಕ್ರಿಯಾ ವಾನೇಷ ಬ್ರಹ್ಮವಿದಾಂವರಿಷ್ಠಃ ||

ತಾ|| ಪರಮಾತ್ಮವಿದನು ತನಗಿಂತಲೂ ಬೇರಾದುದನ್ನು ಕಾಣದೆಯೂ ಕೇಳದೆಯೂ ಇರುವುದರಿಂದ ತರ್ಕಕ್ಕೇ ಅವಕಾಶವಿಲ್ಲ. ಆದುದರಿಂದಲೇ ಆತ್ಮನಲ್ಲಿಯೇ ಕ್ರೀಡೆಯುಳ್ಳವನಾಗಿಯೂ, ಆತ್ಮಾನಂದದಲ್ಲಿಯೇ ಮಗ್ನನಾಗಿಯೂ ಜ್ಞಾನವೈರಾಗ್ಯಾದಿ ಕ್ರಿಯೆಯುಳ್ಳವನಾಗಿಯೂ ಇರುತ್ತಾನಾದ್ದರಿಂದ ಈತನೇ ಬ್ರಹ್ಮವಿದರೊಳಗೆ ಶ್ರೇಷ್ಠನೆನಿಸಿರುವನು.

ಗಚ್ಛಂಸ್ತಿಷ್ಠನ್ನುಪವಿಶಸ್ಸಯಾನೋರಾನ್ಯಥಾಪಿವಾ |
ಯಥೇಚ್ಛಯಾವಸೇದ್ವಿದ್ವಾನಾತ್ಮಾರಾಮಸ್ಸದಾಮುನಿಃ ||

ತಾ|| ಜ್ಞಾನಿಯು ಇಚ್ಛಾನುಸಾರವಾಗಿ ಸಂಚರಿಸುತ್ತಲೋ ನಿಂತುಕೊಂಡೋ, ಕೂತುಕೊಂಡೋ, ಮಲಗಿಕೊಂಡೋ, ಅಥವಾ ಯಾವ ರೀತಿಯಲ್ಲಾದರೂ ಇರಲಿ, ಆತ್ಮಾರಾಮನಾಗಿಯೇ ಇರುವನು.

ಶ್ರೀರಾಮಚಂದ್ರನು ಅಯೋಧ್ಯೆಯಲ್ಲಿಯೇ ಇರುವ ತತ್ವವಾದ ಜೀವನ್ಮುಕ್ತನ ಸ್ಥಿತಿಯನ್ನು ಮೇಲೆ ತಿಳಿಸಿತು. ಆದರೆ ಬಹಿರ್ವ್ಯಾಪಾರಕ್ಕೆ ಪ್ರಧಾನಶಕ್ತಿಗಳಾದ ರಾವಣಾದಿಗಳ ನಿಗ್ರಹವಾಗಿರುವುದರಿಂದ ಜೀವನ್ಮುಕ್ತನು ಹೇಗೆ ಬಹಿರ್ವ್ಯಾಪಾರ ಮಾಡುವನೆಂಬ ಶಂಕೆ ಬರಬಹುದು. ಇದಕ್ಕೆ ಸಮಾಧಾನವೇನೆಂದರೆ —ಪ್ರಾರಬ್ಧಕರ್ಮಾನುಭವಕ್ಕೋಸ್ಕರಲೇ ಈಗ ಪ್ರತಿಯೊಬ್ಬರೂ ಹೊಂದಿರುವ ದೇಹ ಬಂದಿರುವುದಾಗಿದೆ. ಪ್ರಾರಬ್ಧಕರ್ಮವು ವಾಸನೆಯ ರೂಪದಲ್ಲಿದ್ದು ವಿಕಸಿತವಾಗಿ ಕಾರ್ಯವಾಗುತ್ತದೆ. ಪ್ರಾರಬ್ಧಕರ್ಮದ ವಾಸನೆಯ ತತ್ವವೇ ಪುಷ್ಪಕವಿಮಾನ. ಶ್ರೀರಾಮನು ಪುಷ್ಪಕವಿಮಾನವನ್ನು ಸ್ವೇಚ್ಛೆಯಿಂದ ಸಂಚರಿಸಲು ಬಿಟ್ಟಂತೆ ಈ ವಾಸನೆಗೆ ವ್ಯಾಪಾರದ ಕ್ರಿಯೆಯನ್ನು ಮಾಡಿಸಲು ಶಕ್ತಿಯಿರುವುದು. ಜೀವನ್ಮುಕ್ತನಲ್ಲಿ ವ್ಯಾಪಾರ ನಡೆದರೂ ಪುಷ್ಪಕವಿಮಾನವು ರಾವಣನ ಅಧೀನದಲ್ಲಿದ್ದ ತತ್ವದಂತೆ ವ್ಯಾಪಾರ ನಡೆಯುವುದಿಲ್ಲ. ರಾವಣನ ತತ್ವವಾದ ರಜೋಗುಣ

ಚೈತನ್ಯವೆಂದರೆ ವಿಕ್ಷೇಪಶಕ್ತಿಯು ವಾಸನೆಯನ್ನು ತನ್ನ ಅಧೀನವಮಾಡಿಕೊಂಡು ತನ್ನ ದರ್ಪದಿಂದ ಪ್ರಾಣಿಗಳನ್ನು ಬಂಧಿಸಿರುವುದು. ಜೀವನ್ಮುಕ್ತನಲ್ಲಿ ರಜೋಗುಣ ತಮೋಗುಣ ಗಳು ಮಂಡೋದರಿಯರು ವಿಧವೆಯರಾಗಿರುವಂತೆ ಹುರಿದ ಬೀಜದಂತಾಗುವುದರಿಂದಲೂ ರಜೋಗುಣಚೈತನ್ಯವು ಬುದ್ಧಿಪ್ರತಿಫಲಿತಚೈತನ್ಯದಲ್ಲಿ ಏಕೀಭವಿಸಿರುವುದರಿಂದಲೂ ಜೀವನ್ಮುಕ್ತನು ಆನಂದಮಯನಾಗಿಯೂ, ನಿಸ್ಸಂಗನಾಗಿಯೂ ಸ್ವಾತ್ಮಾರಾಮನಾಗಿಯೂ ಇರುವನು. ಆದುದರಿಂದ ಜೀವನ್ಮುಕ್ತನಲ್ಲಿ ಇಂದ್ರಿಯವ್ಯಾಪಾರಗಳು ನಡೆದರೂ ಅವಿದ್ಯಾ ಕಾರ್ಯವೆಂದು ಎಂದಿಗೂ ತಿಳಿದುಕೊಳ್ಳಬಾರದು. ಈ ತತ್ವಾರ್ಥಸಮರ್ಥನೆಗೆ ಶ್ರೀವಿದ್ಯಾ ರಣ್ಯರವರು ಪಂಚವಶಿ ತೃಪ್ತಿದೀಪಿಕೆ ೨೬೯, ೨೮೦ನೆಯ ಶ್ಲೋಕಗಳಲ್ಲಿ,

> ಬಾಧಿತಂದೃಶ್ಯತಾಮಕ್ಷೈಸ್ತೇನಬಾಧೋನದೃಶ್ಯತೆ ।
> ಜೀವನ್ನಾಖುರ್ನಮಾರ್ಜಾಲಂಹಂತಿಹನ್ಯಾತ್ಕಥಂಮೃತಃ ॥
> ತಿಷ್ಠಂತ್ವಜ್ಞಾನತತ್ಕಾರ್ಯಶವಾಬೋಧೇನಮಾರಿತಾಃ ।
> ನಭೀತಿರ್ಬೋಧಸಂವ್ರಾಟಃಕೀರ್ತಿಃಪ್ರತ್ಯುತತಸ್ಯತೈಃ ॥

ತಾ॥ ಜ್ಞಾನಿಗಳಲ್ಲಿ ಇಂದ್ರಿಯಗಳಿಂದಾಗುವ ಕಾರ್ಯವು ಕಾಣಲಿ, ಆ ಕಾರ್ಯದಿಂದ ಜ್ಞಾನಕ್ಕೆ ಬಾಧೆಯು ಕಾಣುವುದಿಲ್ಲ. ಬದುಕಿರುವ ಇಲಿಯೇ ಬೆಕ್ಕನ್ನು ಕೊಲ್ಲದಿರುವಾಗ ಸತ್ತ ಇಲಿಯು ಬೆಕ್ಕನ್ನು ಹೇಗೆ ಕೊಂದೀತು? ಜ್ಞಾನದಿಂದ ಕೊಲ್ಲಲ್ಪಟ್ಟ ಅಜ್ಞಾನ ಮತ್ತು ತತ್ಕಾರ್ಯಗಳೆಂಬ ಹೆಣಗಳು ತೋರುತ್ತಿರಲಿ. ಜ್ಞಾನಸಾರ್ವಭೌಮನಿಗೆ ಭಯ ವಿಲ್ಲ. ಮತ್ತೇನೆಂದರೆ ಅಜ್ಞಾನದ ಹೆಣಗಳಿಂದ ಜ್ಞಾನಸಾರ್ವಭೌಮನಿಗೆ ಯಶಸ್ಸೇ ಆಗಿರುವುದು. ಎಂಬದಾಗಿ ಹೇಳಿರುವರು.

ಈ ಮೇಲಿನ ತತ್ವಾರ್ಥಗಳೇ ಶ್ರೀರಾಮಚಂದ್ರನು ಅಯೋಧ್ಯೆಯಲ್ಲಿರುವ ತತ್ವವಾದ ಜೀವನ್ಮುಕ್ತನ ಸೋಪಾನ.

**ರಾ॥** ಸೀತಾದೇವಿಯು ವಾಲ್ಮೀಕಾಶ್ರಮದಲ್ಲಿರುವಾಗ ಅವಳಿಜವಳಿ ಗಂಡು ಮಕ್ಕಳನ್ನು ಹೆತ್ತಳು. ವಾಲ್ಮೀಕರು ದರ್ಭೆಯನ್ನು ಎರಡು ಭಾಗ ಮಾಡಿ ಪ್ರಥಮದಲ್ಲಿ ಜನಿಸಿದ ಮಗುವು ಜ್ಯೇಷ್ಠನಾದುದರಿಂದ ದರ್ಭೆಯ ಮೇಲ್ಭಾಗವಾದ ಕುಶದಿಂದ ಅಭಿ ಮಂತ್ರಿಸಿ ಕುಶನೆಂಬ ನಾಮಧೇಯವನ್ನಿಟ್ಟರು. ಅನಂತರ ಜನಿಸಿದ ಮಗುವಿಗೆ ದರ್ಭೆಯ ಕೆಳಭಾಗವಾದ ಲವದಿಂದ ಅಭಿಮಂತ್ರಿಸಿ ಲವನೆಂಬ ನಾಮಧೇಯವನ್ನಿಟ್ಟರು. ಶಿಶುಗಳು ಅಭಿವೃದ್ಧಿಗೆ ಬರಲು ವಾಲ್ಮೀಕಿಮಹರ್ಷಿಗಳು ಬಾಲಕರಾದ ಕುಶಲವರಿಗೆ ಶ್ರೀಮದ್ರಾಮಾ ಯಣವನ್ನು ಉಪದೇಶಮಾಡಿದರು. ಕುಶಲವರು ಜನನವಾದ ದಿನ ಲವಣಾಸುರನನ್ನು ನಿಗ್ರಹಿಸಲು ಹೋಗುತ್ತಿದ್ದ ಶತ್ರುಘ್ನನು ವಾಲ್ಮೀಕಾಶ್ರಮಕ್ಕೆ ಬಂದಿದ್ದನು. ಶತ್ರುಘ್ನನು

ಲವಣಾಸುರನನ್ನು ನಿಗ್ರಹಿಸಿ ಅಯೋಧ್ಯೆಗೆ ಹಿಂದಿರುಗಿ ಬರುವಾಗ ವಾಲ್ಮೀಕಾಶ್ರಮದಲ್ಲಿ ಕುಶಲವರು ಶ್ರೀರಾಮಚರಿತ್ರೆಯನ್ನು ಇಂಪಾಗಿ ಗಾನಮಾಡುತ್ತಿರುವುದನ್ನು ಕೇಳಿ ಆನಂದಪಟ್ಟನು.

**ತತ್ವ॥** ವಾಲ್ಮೀಕಾಶ್ರಮವೆಂದರೆ ವಿಜ್ಞಾನಮಯಕೋಶವೆಂದು ಅಯೋಧ್ಯಾಕಾಂಡ ದಲ್ಲಿ ಶ್ರೀರಾಮಾದಿಗಳು ಚಿತ್ರಕೂಟಪ್ರವೇಶಮಾಡಿದ ಸಂದರ್ಭದಲ್ಲಿ ತಿಳಿಸಿರುತ್ತಷ್ಟೆ! ಸೀತಾ ದೇವಿಯು ವಾಲ್ಮೀಕಾಶ್ರಮದಲ್ಲಿರುವುದೆಂದರೆ-ಅಖಂಡವಾದ ನಾನು ಎಂಬ ಜ್ಞಾನಸ್ವರೂಪ ವಾದ ಶುದ್ಧಸತ್ವಪ್ರಧಾನವಾಯೆಯು ಜೀವನ್ಮುಕ್ತನಲ್ಲಿ ವಿಜ್ಞಾನಮಯಕೋಶದಿಂದ ಕೆಳಕ್ಕೆ ಇಳಿಯದೆ ದೇಹವ್ಯಾಪಾರಕ್ಕೆ ಶಿಖರದೋಪಾದಿಯಲ್ಲಿರುವ ವಿಜ್ಞಾನಮಯಕೋಶ ದಲ್ಲಿಯೇ ನಿಂತು ದೇಹವ್ಯಾಪಾರಪ್ರಕಾಶಕವಾಗಿರುವುದಾಗಿದೆ.

ಕುಶಲವರ ಜನನದ ತತ್ವವೇನೆಂದರೆ—ದರ್ಭೆಗೆ ಕುಶವೆಂದು ಹೇಳುತ್ತಾರೆ. ಕುಶ ವೆಂದರೆ—"ಕುಕರ್ಮಬಂಧಂ, ಶ್ಯತಿ ನಾಶಯತೀತಿ ಕುಶಃ" ಕರ್ಮಬಂಧವನ್ನು ನಾಶಮಾಡ ತಕ್ಕವನಿಗೆ ಕುಶನೆಂದು ಹೆಸರು. ಅಂದರೆ ಜ್ಞಾನವೇ ಕರ್ಮಬಂಧವನ್ನು ನಾಶ ಮಾಡುವುದು. ವಾಲ್ಮೀಕರು ದರ್ಭೆಯನ್ನು ಎರಡುಭಾಗಮಾಡಿದ ತತ್ವದಂತೆ- ಜ್ಞಾನ ದಲ್ಲಿ ಪರೋಕ್ಷಜ್ಞಾನ ಅಪರೋಕ್ಷಜ್ಞಾನಗಳೆಂಬ ಎರಡುಭಾಗವಿದೆ. ಕುಶನು ಜ್ಯೇಷ್ಠ ನಾಗಿರುವಂತೆ ಅಪರೋಕ್ಷಜ್ಞಾನವನ್ನು ಪಡೆಯುವ ಸೋಪಾನದಲ್ಲಿರುವ ಅಧಿಕಾರಿಯು ದರ್ಭೆಯ ಅಗ್ರಭಾಗದಂತೆ ಹೆಚ್ಚಿನವನು. ಲವನು ಎರಡನೆಯವನಾಗಿರುವಂತೆ ಪರೋಕ್ಷ ಜ್ಞಾನದಲ್ಲಿನ ಅಧಿಕಾರಿಯು ದರ್ಭೆಯ ಬುಡದ ಭಾಗದಂತೆ ಎರಡನೆಯ ತರಗತಿಯವಾಗಿ ಇರುವನು. ಅಂದರೆ ದರ್ಭೆಯು ಬುಡದಲ್ಲಿ ದಪ್ಪನಾಗಿದ್ದುಕೊಂಡು ಹೋಗುತ್ತ ಹೋಗುತ್ತ ಕೊನೆಗೆ ಸೂಕ್ಷ್ಮವಾದ ಕೊನೆಯಾಗುವಂತೆ ಜ್ಞಾನಮಾರ್ಗಕ್ಕೆ ಪ್ರವೇಶಮಾಡಿದ ಅಧಿ ಕಾರಿಯು ಪ್ರಥಮದಲ್ಲಿ ಮಂದಾಧಿಕಾರಿಯಾಗಿದ್ದು ಕೊನೆಗೆ ದರ್ಭೆಯ ಕೊನೆಯಂತೆ ಸೂಕ್ಷ್ಮ ಜ್ಞಾನ (ಅಹಂಬ್ರಹ್ಮಾಸ್ಮಿ) ದಿಂದ ಆತ್ಮಸಾಕ್ಷಾತ್ಕಾರಪಡೆಯುವನು. ದರ್ಭೆಯ ಬುಡ ಭಾಗಕ್ಕೆ ಲವವೆಂದು ಹೆಸರು. ಆದುದರಿಂದ ಕುಶಲವರ ತತ್ವವೆಂದರೆ ಅಪರೋಕ್ಷಜ್ಞಾನದ ಸೋಪಾನಗಳ ಅಧಿಕಾರಿಗಳೆಂಬ ತತ್ವವಾಗಿರುವುದು. ಈ ಜ್ಞಾನಮಾರ್ಗದ ತತ್ವಾರ್ಥ ಗಳನ್ನು ಒಳಗೊಂಡಿರುವುದರಿಂದಲೇ ದರ್ಭೆಯನ್ನು ಪ್ರತಿಯೊಂದು ಕರ್ಮದಲ್ಲಿಯೂ ಉಪಯೋಗಿಸುವರು.

ಸೀತಾರಾಮರು ಕುಶಲವರೆಂಬ ಮಕ್ಕಳನ್ನು ಪಡೆದರೆಂದರೆ—ಪರೋಕ್ಷ ಅಪರೋಕ್ಷ ಜ್ಞಾನಮಾರ್ಗದಲ್ಲಿರತಕ್ಕ ಶಿಷ್ಯರುಗಳೇ ತತ್ವಜ್ಞಾನಿಗೆ ಮಕ್ಕಳೆಂಬ ತಾತ್ಪರ್ಯವು. ವಾಲ್ಮೀ ಕರು ಕುಶಲವರಿಗೆ ಶ್ರೀರಾಮಚರಿತ್ರೆಯನ್ನು ಉಪದೇಶಮಾಡಿದರೆಂದರೆ—ತತ್ವಜ್ಞಾನಿಯು ವಿಜ್ಞಾನಮಯಕೋಶದ ಕಾರ್ಯವನ್ನೇ ಪ್ರಧಾನವಾಗಿಟ್ಟುಕೊಂಡು ಶಿಷ್ಯರುಗಳಿಗೆ ಬೋಧ

ಮಾಡುತ್ತಿದ್ದನೆಂಬ ತತ್ವವಾಗಿರುವುದು. ಮುಖ್ಯತಾತ್ಪರ್ಯವೇನೆಂದರೆ ತತ್ವಜ್ಞಾನಿಯು ಶಿಷ್ಯರುಗಳನ್ನು ತನ್ನ ಮಕ್ಕಳೋಪಾದಿಯಲ್ಲಿ ಭಾವಿಸಿ ಜ್ಞಾನಮಾರ್ಗವನ್ನು ಉಪದೇಶ ಮಾಡಿ ಲೋಕೋದ್ಧಾರಮಾಡುವುದು ಪರಮಪುರುಷನಾದ ಶ್ರೀರಾಮಚಂದ್ರಸ್ವಾಮಿಯು ಮತ್ತು ಜಗನ್ಮಾತೆಯು ಆಜ್ಞೆಯೆಂದೇ ತಿಳಿದುಕೊಳ್ಳಬೇಕೆಂಬ ತತ್ವಪ್ರತಿಪಾದನೆಯೇ ಸೀತಾ ರಾಮರು ಕುಶಲವರೆಂಬ ಮಕ್ಕಳನ್ನು ಪಡೆದುದಾಗಿದೆ.

ಶತ್ರುಘ್ನನು ಲವಣಾಸುರನನ್ನು ಕೊಂದ ಮತ್ತು ಕುಶಲವರ ಜನನಕಾಲದಲ್ಲಿ ವಾಲ್ಮೀಕಾಶ್ರಮದಲ್ಲಿದ್ದ ತತ್ವವೇನೆಂದರೆ ಶತ್ರುಘ್ನನು ಅಂತಃಕರಣದಲ್ಲಿನ ಚಿತ್ತಪ್ರಕಾಶಕ ನಾಗಿ ಮೋಕ್ಷಮಾರ್ಗದ ತತ್ವವಾದ ಈ ರಾಮಾಯಣದಲ್ಲಿ ಅಸ್ವಾರ್ಥತೆಯು ತತ್ವದಲ್ಲಿರುವ ನಷ್ಟೆ! ಅಲ್ಲದೆ ಚಿತ್ತದ ಕಾರ್ಯವು ಅವಧಾರಣೆ ಎಂದರೆ ಧರಿಸಿಕೊಳ್ಳುವುದೂ ಆಗಿರುವುದು ಜ್ಞಾನಿಗಳು ಪರೋಕ್ಷ ಅಪರೋಕ್ಷ ಜ್ಞಾನಮಾರ್ಗವನ್ನು ಹೊಂದುವ ಶಿಷ್ಯರನ್ನು ಪರಿಗ್ರಹ ಮಾಡಿ ಅವರುಗಳಿಗೆ ಜ್ಞಾನೋಪದೇಶಮಾಡುವುದು ಲೋಕಾನುಗ್ರಹಕ್ಕೋಸ್ಕರಲೇ ಹೊರತು ಸ್ವಾರ್ಥತೆಯಿಂದಲ್ಲವೆಂಬ ತತ್ವಪ್ರತಿಪಾದನೆಯು ಸೂಚನೆಯೇ ಶತ್ರುಘ್ನನು ವಾಲ್ಮೀಕಾಶ್ರಮಕ್ಕೆ ಹೋಗಿದ್ದುದು ಮತ್ತು ಲವಣಾಸುರನ ವಧೆಯು ತತ್ವವಾಗಿರುವುದು. ಮೇಲಿನ ತಾತ್ಪರ್ಯಗಳಿಗನುಸಾರವಾಗಿ ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆ ೩ನೆಯ ಅಧ್ಯಾಯ ೨೫ನೆಯ ಶ್ಲೋಕದಲ್ಲಿ,

ಸಕ್ತಾಃ ಕರ್ಮಣ್ಯವಿದ್ವಾಂಸೋಯಥಾಕುರ್ವನ್ತಿ ಭಾರತ |
ಕುರ್ಯಾದ್ವಿದ್ವಾಂಸ್ತಥಾಸಕ್ತಶ್ಚಿಕೀರ್ಷುರ್ಲೋಕಸಂಗ್ರಹಮ್ ||

ತಾ|| ಅರ್ಜುನಾ, ಅಜ್ಞಾನಿಗಳಾದವರು ಯಾವುದಾದರೊಂದು ಪ್ರಯೋಜನದ ಮೇಲಣ ಆಶೆಯನ್ನು ಹಚ್ಚಿಕೊಂಡವರಾಗಿ ಕರ್ಮಗಳನ್ನು ಮಾಡುವಂತೆ ಜ್ಞಾನಿಯಾದವನು ಫಲದ ಕಡೆ ದೃಷ್ಟಿಯನ್ನಿಡದೆ ಜನಗಳನ್ನು ತಿದ್ದುಪಾಟುಮಾಡುವುದಕ್ಕಾಗಿಯೇ ಮಾಡ ಬೇಕಾಗಿದೆ ಎಂದು ಹೇಳಿರುವನು. ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೫೪೮ನೆಯ ಶ್ಲೋಕದಲ್ಲಿ,

ತಮಸಾಗ್ರಸ್ತವದ್ಭಾನಾದಗ್ರಸ್ತೋಽಪಿರವಿರ್ಜನೈಃ |
ಗ್ರಸ್ತ ಇತ್ಯುಚ್ಯತೆಭ್ರಾನ್ತ್ಯಾಹ್ಯಜ್ಞಾತ್ವಾವಸ್ತುಲಕ್ಷಣಂ ||

ತಾ|| ಮೋಡಗಳು ಕವಿದುಕೊಂಡ ದಿನದಲ್ಲಿ ಸೂರ್ಯನು ಕತ್ತಲೆಯಿಂದ ಮುತ್ತಲ್ಪಡ ದಿದ್ದರೂ ಮುತ್ತಲ್ಪಟ್ಟವನಂತೆ ಕಾಣುವುದರಿಂದ ವಸ್ತು ತತ್ವವನ್ನು ತಿಳಿಯದೆ, ಭ್ರಾನ್ತಿ ಯಿಂದ ಅನ್ಧಕಾರದಿಂದ ಗ್ರಸ್ತನಾಗಿರುವನೆಂದು ಮೂಢರು ಹೇಳುವರು.

ಶ್ರೀವಿದ್ಯಾರಣ್ಯರವರು ಕೂಡ ಪಂಚದಶಿ ತೃಪ್ತಿದೀಪಿಕೆ ೨೮೭ ನೆಯ ಶ್ಲೋಕದಲ್ಲಿ,

ನಿಂದಿತಸ್ತೂಯ ಮಾನೋಽಪಾವಿದ್ವಾನ ಜ್ಞೈರ್ನನಿಂದತಿ
ನಸ್ತೌತಿಕಿಂತು ತೇಷಾಂಸ್ಯಾದ್ಯಥಾಬೋಧಸ್ತಥಾಚರೇತ್ ||

ತಾ|| ತತ್ವಜ್ಞಾನಿಯು ಮಂದಮತಿಗಳಾದ ಪಾಮರರಿಂದ ದೂಷಿಸಲ್ಪಟ್ಟವನಾದಾಗ್ಯೂ, ಹೊಗಳಲ್ಪಟ್ಟವನಾದಾಗ್ಯೂ, ಮರಳಿ ಅವನನ್ನು ದೂಷಿಸನು ಮತ್ತು ಹೊಗಳನು. ಮತ್ತೇನೆಂದರೆ, ಆ ಪಾಮರರಿಗೆ ಯಾವ ದಾರಿಯಲ್ಲಿ ಜ್ಞಾನೋದಯವಾದೀತೋ ಆ ದಾರಿಯಲ್ಲಿ ನಡೆಯುವನು. ಯಾವ ತನ್ನ ನಡತೆಯಿಂದಲೇ ಅವರು ತನ್ನ ದಾರಿಗೆ ಬರುವರೆಂದು ಹೀಗೆ ಪ್ರವರ್ತಿಸುವನೆಂದು ತಾತ್ಪರ್ಯ.

## ೨ನೆಯ ಪ್ರಕರಣ.

| ಶ್ರೀರಾಮನು ಅಶ್ವಮೇಧ ಯಾಗವನ್ನು ಮಾಡಿದುದು. |  | ಅವಧೂತ ತತ್ವದ ವಿಚಾರ. |
|---|---|---|

**ರಾ||** ಶ್ರೀರಾಮಚಂದ್ರನು ಅಶ್ವಮೇಧಯಾಗವಮಾಡಲು ಪ್ರಾರಂಭಿಸಿ ರಾಕ್ಷಸರೊಡಗೂಡಿ ವಿಭೀಷಣನನ್ನೂ ವಾನರರೊಡಗೂಡಿ ಸುಗ್ರೀವನನ್ನೂ ಕರೆಯಿಸಿಕೊಂಡು ಅನೇಕ ಮಹರ್ಷಿಗಳೊಡನೆ ಯಾಗವಮಾಡುತ್ತಿದ್ದನು. ವಾಲ್ಮೀಕರು ಕುಶಲವರೊಡನೆ ಯಾಗಕ್ಕೆ ಬಂದರು. ವಾಲ್ಮೀಕರ ಅನುಮತಿಯಂತೆ ಕುಶಲವರು ರಾಮಾಯಣವನ್ನು ಗಾನವಮಾಡಲು ಶ್ರೀರಾಮನು ಅದನ್ನು ಕೇಳಿ ಅತ್ಯಂತ ಆನಂದಪಟ್ಟು ಕೇಳುವುದರಲ್ಲ ಮಗ್ನನಾದನು. ಸೀತಾದೇವಿಯು ಯಾಗದ ಸಭೆಗೆ ಬಂದು, " ಶ್ರೀರಾಮಚಂದ್ರನನ್ನು ಹೊರತು ಮತ್ತಾರನ್ನೂ ಮನಸ್ಸಿನಿಂದಲೂ ಕೂಡ ನಾನು ಸ್ಮರಿಸದೆ ಇರುವುದು ಸತ್ಯವಾದದ್ದಾದರೆ ಮಾಧವನಿಗೆ ಪ್ರಿಯಳಾದ ಭೂದೇವಿಯು ನನಗೆ ಮಾರ್ಗವನ್ನು ಕೊಡುವುದಕ್ಕೆ ಯೋಗ್ಯಳಾಗಲಿ " ಎಂದು ಶಪಥಮಾಡಿದಳು. ಹೀಗೆ ಸೀತಾದೇವಿಯು ಶಪಥಮಾಡುತ್ತಿರುವಲ್ಲಿ ಆಶ್ಚರ್ಯವಾದ ದೇವತಾಸಂಬಂಧವಾದ ನಾಗದೇವತೆಗಳ ಶಿರಸ್ಸಿನಿಂದ ಧರಿಸಲ್ಪಟ್ಟ ಸಿಂಹಾಸನವು ಭೂತಲದಿಂದ ಹುಟ್ಟಿತು. ಆ ಸಿಂಹಾಸನದಲ್ಲಿದ್ದ ಭೂದೇವಿಯು ಸೀತಾದೇವಿಯನ್ನಪ್ಪಿಕೊಂಡು ಸಿಂಹಾಸನದಲ್ಲಿ ಕೂರಿಸಿಕೊಂಡು ಪಾತಾಳವನ್ನು ಪ್ರವೇಶಿಸಿದಳು.

**ತತ್ವ||** ಶ್ರೀರಾಮಚಂದ್ರನ ಅಶ್ವಮೇಧಯಾಗದ ತತ್ವವೇನೆಂದರೆ—ಅಶ್ವವೆಂದರೆ "ಅಶ್ನುತೇ ಗಮನೇನೇತ್ಯಶ್ವಃ (ಅಶೂವ್ಯಾಪ್ತೌ) " ಗಮನದಿಂದ ವ್ಯಾಪಿಸುವುದು. ಮೇಧವೆಂದರೆ " ಮೇಧತೆ ಅನುಭೂತಂ ಸರ್ವಮಸ್ಮಿಮಿತಿ ಮೇಧಾ (ಮೇಧೃ ಸಂಗಮೆ)" ಅನುಭೂತವಾದದ್ದೆಲ್ಲವೂ ಇದರಲ್ಲಿ ಸಂಗತವಾಗುವುದು. ಅಂದರೆ ಗಮನದಿಂದ

ವ್ಯಾಪಿಸುವುದನ್ನೆಲ್ಲಾ ಸಂಗಮಿಸಿಕೊಳ್ಳುವುದು. ಶ್ರೀರಾಮಚಂದ್ರನ ಅಶ್ವಮೇಧಯಾಗ ವೆಂದರೆ ಗಮನದಿಂದ ವ್ಯಾಪಿಸಿರುವ ಸೃಷ್ಟಿಸ್ಥಿತಿಗಳನ್ನು ಸಂಗಮಮಾಡಿಕೊಂಡು ಉಪ ಸಂಹಾರಮಾಡಿಕೊಳ್ಳುವ ತತ್ವವೇ ಅಶ್ವಮೇಧಯಾಗದ ತತ್ವವಾಗಿರುವುದು.

ತತ್ವಜ್ಞಾನಿಯು ಪ್ರಾರಬ್ಧಕರ್ಮಾನುಭವಕ್ಕೆ ಬಹಿರ್ಮುಖನಾಗಿ ದೇಹವ್ಯಾಪಾರ ಮಾಡುವ ಮತ್ತು ಶಿಷ್ಯರುಗಳಿಗೆ ಉಪದೇಶಮಾಡುವ ವಿಚಾರದ ತತ್ವಗಳನ್ನು ಈ ಕಾಂಡದ ಪ್ರಥಮದಿಂದ ತಿಳಿಸಿಕೊಂಡು ಬಂದಿದೆ. ಈ ಸೋಪಾನಕ್ಕಿಂತಲೂ ಉತ್ತಮಸೋಪಾನ ವಾಗಿರುವ, ಬಹಿರ್ಮುಖಜ್ಞಾನವೇ ಇಲ್ಲದ, ನಾನೆಂಬ ಜ್ಞಾನವೂ ಇಲ್ಲದ ಅವಧೂತತ್ವವಾದ ಉನ್ಮತ್ತಸೋಪಾನದ ಮತ್ತು ವಿದೇಹಕೈವಲ್ಯದ ಪ್ರಾರಂಭದ ತತ್ವವೇ ಅಶ್ವಮೇಧಯಾಗದ ತತ್ವವಾಗಿರುವುದು. ಬುದ್ಧಿಪ್ರತಿಫಲಿತಚೈತನ್ಯವು ದೇಹವ್ಯಾಪಾರದ ಸಕಲ ಶಕ್ತಿಗಳನ್ನೂ ತನ್ನಲ್ಲಿ ಸಂಗಮಿಸಿಕೊಳ್ಳುವುದೇ ಸುಗ್ರೀವ ವಿಭೀಷಣಾದಿಗಳು ಶ್ರೀರಾಮನಲ್ಲಿಗೆ ಯಾಗಕ್ಕೆ ಬಂದುದಾಗಿದೆ. ಶ್ರೀರಾಮಚಂದ್ರನು ತನ್ನ ಚರಿತ್ರೆಯನ್ನೇ ತನ್ನಮಕ್ಕಳಾದ ಕುಶಲವರಿಂದ ಕೇಳಿದ ತತ್ವವೇನೆಂದರೆ—ಶ್ರೀರಾಮಚಂದ್ರನು ಹೇಗೆ ಪರಬ್ರಹ್ಮಸ್ವರೂಪನೋ ಹಾಗೆಯೇ ತತ್ವಜ್ಞಾನಿಯು ಕೂಡ ಪರಬ್ರಹ್ಮಸ್ವರೂಪನು. ತತ್ವಜ್ಞಾನಿಯು ತನ್ನ ವಿಚಾರವನ್ನೇ ತಾನು ಕೇಳಿದನೆಂದರೆ—ಪರಬ್ರಹ್ಮವಿಚಾರವನ್ನೇ ಕೇಳಿದನೆಂಬ ತತ್ವವು. ತತ್ವಜ್ಞಾನಿಯು ಉತ್ತಮಾಧಿಕಾರಿಯಾದ ಶಿಷ್ಯರುಗಳಿಂದ ತನ್ನ ತತ್ವವೇ ಆದ ಪರಬ್ರಹ್ಮವಿಚಾರವನ್ನು ಕೇಳುತ್ತಾ ಕೇಳುತ್ತಾ ವಿಸ್ಮೃತಿಹೊಂದಿ ತನ್ನನ್ನು ತಾನು ಮರೆತು ಉನ್ಮತ್ತನಾಗಿ ಅವಧೂತ ತ್ವವನ್ನು ಹೊಂದುವ ತತ್ವವೇ ಕುಶಲವರ ಗಾನದಿಂದ ಶ್ರೀರಾಮನು ಆನಂದಪಟ್ಟುದಾಗಿದೆ. ಈ ಅವಧೂತತ್ವವನ್ನು ಹೊಂದಬೇಕಾದರೆ ಜನ್ಮ ಜನ್ಮಾಂತರಗಳಿಂದಲೂ ಪರಮಾತ್ಮನಲ್ಲಿ ತೀವ್ರತಮವಾದ ಪರಾಭಕ್ತಿಯನ್ನು ಅಭ್ಯಾಸಮಾಡಿರಬೇಕು. ಅವಧೂತತ್ವದ ಲಕ್ಷಣ ಸಮರ್ಥನೆಗೆ ಪೈಂಗಲೋಪನಿಷತ್ತಿನಲ್ಲಿ,

> ಮನಸೋಹ್ಯುನ್ಮನೀಭಾವೇದ್ವೈತಂನೈವೋಪಲಭ್ಯತೆ |
> ಯದಾಯಾತ್ಯುನ್ಮನೀ ಭಾವಸ್ತದಾತತ್ಪರಮಂಪದಮ್ ||
> ಯತ್ರಯತ್ರಮನೋಯಾತಿ ತತ್ರತತ್ರಪರಂಪದಮ್ |
> ತತ್ರತತ್ರಪರಂಬ್ರಹ್ಮ ಸರ್ವತ್ರಸಮವಸ್ಥಿತಮ್ ||

ತಾ|| ಮನಸ್ಸಿಗೆ ಉನ್ಮನೀಭಾವ ಉಂಟಾಗಲು ದ್ವೈತವಿರುವುದೇ ಇಲ್ಲ. ಯಾವ ಕಾಲದಲ್ಲಿ ಉನ್ಮನೀಭಾವವು ಉಂಟಾಗುತ್ತದೋ ಅದೇ ಪರಮಪದ. ಉನ್ಮನಿಭಾವದಲ್ಲಿ ಮನಸ್ಸು ಎಲ್ಲೆಲ್ಲಿ ಹೋದರೂ ಅದೆಲ್ಲಾ ಪರಮಪದವಾಗಿರುತ್ತದೆ. ಆ ಪರಮಪದದಲ್ಲೆಲ್ಲಾ

ಸರ್ವತ್ರವ್ಯಾಪಕನಾದ ಪರಬ್ರಹ್ಮನೇ ಇರುತ್ತಾನೆ. ಅಂದರೆ ಜ್ಞಾನಿಗೆ ಸರ್ವವೂ ಪರಬ್ರಹ್ಮ ಸ್ವರೂಪವಾಗಿರುವುದು, ಎಂದು ಹೇಳಿದೆ.

ತತ್ವಜ್ಞಾನಿಯು ಅವಧೂತತತ್ವದಿಂದಲೂ ತುರೀಯಾತೀತ ಅವಧೂತತತ್ವವೆಂದರೆ ಮರದಂತೆಯೂ, ಆಟ ಪಾಟ ಪ್ರಾರಂಭವೇ ಇಲ್ಲದ ಅಂಗಚಲನೆಯೇ ಇಲ್ಲದ ಹಸುಮಕ್ಕಳು ಸುಮ್ಮನೆ ಬಿದ್ದಿರುವ ರೀತಿಯಲ್ಲಿರುತ್ತಾನೆ. ಈ ತತ್ವವೇ ಸೀತಾದೇವಿಯು ಭೂಪ್ರವೇಶ ಮಾಡಿದ ತತ್ವವಾಗಿರುವುದು. ನಾಗದೇವತೆಯು ಶಿರಸ್ಸಿನಿಂದ ಧರಿಸಲ್ಪಟ್ಟ ಸಿಂಹಾಸನದಲ್ಲಿರುವ ಭೂದೇವಿಯು ಸೀತಾದೇವಿಯನ್ನು ವಹಿಸಿದಳೆಂದರೆ—ಭೂತತ್ವವಾದ ಮೂಲಾಧಾರದಲ್ಲಿರುವ ಪರಾಶಕ್ತಿಯಾದ ಕುಂಡಲಿನೀಶಕ್ತಿಯಲ್ಲಿ ಸೀತಾದೇವಿಯು ತತ್ವವಾದ ಶುದ್ಧಸತ್ವಪ್ರಧಾನಮಾಯೆಯು ಏಕೀಭವಿಸಿತೆಂಬ ತತ್ವವಾಗಿರುವುದು. ಸೀತಾದೇವಿಯೂ ಕುಂಡಲಿನೀಶಕ್ತಿಯೂ ಒಂದೇಯೆಂಬದಾಗಿಯೂ ಸೃಷ್ಟಿ ಸ್ಥಿತಿಗಳ ಕಾರ್ಯಭೇದಗಳಿಂದ ಪ್ರತ್ಯೇಕವಾಗಿ ತೋರುವುದೆಂತಲೂ ಹಿಂದೆ ಸುಂದರಕಾಂಡದಲ್ಲಿಯೆ ತಿಳಿಸಿರುತ್ತದೆ. ಈ ತತ್ವಾರ್ಥಗಳೇ ಅಶ್ವಮೇಧಯಾಗದ ತತ್ವವಾಗಿರುತ್ತದೆ. ಶ್ರೀರಾಮಚಂದ್ರನು ಅನೇಕಾವರ್ತಿ ಅಶ್ವಮೇಧಯಾಗವನ್ನು ಮಾಡಿದ ತತ್ವದಂತೆ ಅವಧೂತನು ಯಾವಾಗಲೋ ಒಂದೊಂದು ಸಲ ಕೊಂಚ ಬಹಿರ್ಮುಖನಾದಂತಾಗಿ ಪುನಃ ಪುನಃ ವಿಸ್ಮೃತಿಯನ್ನು ಹೊಂದುವನು. ಈ ತತ್ವಾರ್ಥಸಮರ್ಥನೆಗೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೪೩೭, ೫೪೧, ೪೩೬ನೆಯ ಶ್ಲೋಕಗಳಲ್ಲಿ,

> ಬ್ರಹ್ಮಾನನ್ದರಸಾಸ್ವಾದಾಸಕ್ತಚಿತ್ತತಯಾಯತೇಃ ।
> ಅನ್ತರ್ಬಹಿರವಿಜ್ಞಾನಂಜೀವನ್ಮುಕ್ತಸ್ಯಲಕ್ಷಣಂ ॥
> ದಿಗಂಬರೋವಾಪಿಚಸಾಂಬರೋವಾತ್ವಗಂಬರೋ ವಾಪಿಚಿದಂಬರಸ್ಥಃ ।
> ಉನ್ಮತ್ತವದ್ವಾಪಿಚಬಾಲ ವದ್ವಾಪಿಶಾಚವದ್ವಾಪಿ ಚರತ್ಯವನ್ಯಾಂ ॥
> ಬ್ರಹ್ಮಾಕಾರತಯಾಸದಾಸ್ಥಿತತಯಾನಿರ್ಮುಕ್ತಬಾಹ್ಯಾರ್ಥಧೀ ।
> ರನ್ಯಾವೇದಿತಭೋಗ್ಯಭೋಗಕಲನೋನಿದ್ರಾಳುವದ್ಬಾಲವತ್ ॥
> ಸ್ವಪ್ನಾಲೋಕಿತಲೋಕವಜ್ಜಗದಿದಂಪಶ್ಯನ್ ಕ್ವಚಿಲ್ಲಬ್ಧಧೀ ।
> ರಾಸ್ತೆಕಶ್ಚಿದನನ್ತಪುಣ್ಯಫಲಭುಗ್ಧನ್ಯಃ ಸ ಮಾನ್ಯೋಭುವಿ ॥

ತ್ಪಾ|| ಯಾವ ಯತಿಯ ಚಿತ್ತವು, ಬ್ರಹ್ಮಾನನ್ದರಸಾನುಭವದಲ್ಲಿಯೇ ಸಿಲುಕಿ, ಅನ್ತರಂಗ ಬಹಿರಂಗ ವ್ಯಾಪಾರಗಳನ್ನು ಅರಿತುಕೊಳ್ಳುವುದಿಲ್ಲವೋ, ಆತನು ಜೀವನ್ಮುಕ್ತನೆನಿಸುವನು. ಬ್ರಹ್ಮವೇತ್ತೃವಾದವನು ದಿಗಂಬರನಾಗಿಯೋ, ಸಾಂಬರನಾಗಿಯೋ, ಚರ್ಮಾಂಬರನಾಗಿಯೋ, ಚಿದಾಕಾಶವೆಂಬ ವಸ್ತ್ರದಲ್ಲಿ ಇರುವವನಾಗಿಯೋ, ಉನ್ಮತ್ತನಂತೆಯೋ

ಬಾಲಕನಂತೆಯೋ ಪಿಶಾಚದಂತೆಯೋ ಈ ಭೂಮಿಯಲ್ಲಿ ಅಲೆಯುತ್ತಿರುವನು. ಬ್ರಹ್ಮಾಕಾರವಾಗಿ ಯಾವಾಗಲೂ ಇರೋಣದರಿಂದ ಬಾಹ್ಯಪದಾರ್ಥಗಳಲ್ಲಿ ಬುದ್ಧಿವೃತ್ತಿಯೇ ಇಲ್ಲದೆ ಇರುವವನಾಗಿ, ಇದು ಭೋಗ್ಯ ಇದು ಭೋಗವೆಂಬ ಅಂಶವನ್ನು ಇತರರಿಂದ ತಿಳಿಸಲ್ಪಟ್ಟವನಾಗಿ, ನಿದ್ರೆಹೋಗುವವನೋಪಾದಿಯಲ್ಲಿಯೂ, ಬಾಲನ ಹಾಗೆಯೂ, ಸ್ವಪ್ನದಲ್ಲಿ ನೋಡಿದ ಲೋಕದ ಹಾಗೆಯೂ, ಈ ಜಗತ್ತನ್ನು ನೋಡುವಂಥಾವನಾಗಿ, ಅಪರೂಪವಾಗಿ ಜಾಗ್ರದವಸ್ಥೆಯನ್ನು ಹೊಂದಿದವನಾಗಿ, ಅನನ್ತಪುಣ್ಯಫಲಭೋಗಿಯಾದವನು ಯಾವನೋ ಒಬ್ಬ ಮಹಾನುಭಾವನಿರುವನು. ಆತನೇ ಈ ಭೂಮಿಯಲ್ಲಿ ಪುಣ್ಯವಂತನು ಮತ್ತು ಪೂಜ್ಯನು ಎಂದು ಹೇಳಿರುವುದು.

ಮೇಲಿನ ಶ್ರೀಶಂಕರಭಗವತ್ಪಾದರವರ ಶ್ಲೋಕದಲ್ಲಿ ಕೊನೆಯ ಶ್ಲೋಕವು ಅಪ್ರಮೋಧಯಾಗದ ತತ್ವಕ್ಕೆ ಮುದ್ದಾಗಿ ಅನ್ವಯವಾಗುವುದು. ಈ ತತ್ವಾರ್ಥಕ್ಕೆ ಸರಿಯಾಗಿ ತುರೀಯಾತೀತಾವಧೂತೋಪನಿಷತ್ತಿನಲ್ಲಿಯೂ,

> ಬಾಲೋನ್ಮತ್ತಪಿಶಾಚವದೇಕಾಕೀಸಂಚರ |
> ನ್ನಸಂಭಾಷಣಪರಸ್ಸ್ವರೂಪಧ್ಯಾನೇನ ||
> ನಿರಾಲಂಬಮವಲಂಬ್ಯಸ್ವಾತ್ಮನಿಷ್ಠಾನುಕೂಲೇನ |
> ಸರ್ವಂವಿಸ್ಮೃತ್ಯತುರೀಯಾತೀತೋವಧೂತ |
> ವೇಷೇಣಾದ್ವೈತನಿಷ್ಠಾಪರಃಪ್ರಣವಾತ್ಮಕತ್ವೇನ ||
> ದೇಹತ್ಯಾಗಂಕರೋತಿಯಸ್ಸೋವಧೂತ ಸಕೃತಕೃತ್ಯೋಭವತೀ |

ತಾ|| ಬಾಲನಂತೆಯೂ, ಉನ್ಮತ್ತನಂತೆಯೂ. ಪಿಶಾಚದಂತೆಯೂ, ಏಕಾಕಿಯಾಗಿ ಸಂಚರಿಸುವವನಾಗಿ, ಮಾತನಾಡದಿರುವವನಾಗಿ, ಉತ್ಕೃಷ್ಟವಾದ ಸ್ವರೂಪಧ್ಯಾನದಿಂದ ನಿರಾಲಂಬವನ್ನವಲಂಬಿಸಿ ತನ್ನ ನಿಷ್ಠೆಯ ಅನುಕೂಲದಿಂದ ಸಮಸ್ತವನ್ನೂ ಮರೆತು ತುರೀಯಾತೀತನಾಗಿ ಅವಧೂತವೇಷದಿಂದ ಅದ್ವೈತನಿಷ್ಠಾಪರನಾಗಿ ಪ್ರಣವಾತ್ಮಕತ್ವದಿಂದ ದೇಹತ್ಯಾಗವನ್ನು ಯಾವನು ಮಾಡುವನೋ ಅವನು ಅವಧೂತನು, ಅವನು ಕೃತಕೃತ್ಯನಾಗುವನು. ಎಂದು ಹೇಳಿರುವುದು.

**ರಾ||** ಸೀತಾದೇವಿಯು ರಸಾತಳವನ್ನು ಪ್ರವೇಶಮಾಡಲು ಶ್ರೀರಾಮನು ಸೀತಾದೇವಿಯ ಅದೃಶ್ಯದಿಂದ ಬಹುದುಃಖವುಳ್ಳವನಾಗಿ ರೋದನಮಾಡಿ ಕಂಬನಿಯನ್ನು ಬಿಡುತ್ತಾ ಹಾಗೆಯೆ ಎಲೈ ಭೂದೇವಿಯೆ ನಿನ್ನಲ್ಲಿ ಪ್ರವೇಶಿಸಿದ ಸೀತಾದೇವಿಯನ್ನು ತೋರಿಸೆಂದು ಕೋಪಾವಿಷ್ಟನಾದನು. ಆಗ ದೇವತೆಗಳೊಳಗೂಡಿದ ಚತುರ್ಮುಖಬ್ರಹ್ಮನು "ಎಲೆ ಶ್ರೀರಾಮನೆ! ನೀನು ಸಂತಾಪಪಡಲು ಯೋಗ್ಯನಲ್ಲ. . ನೀನು ನಿನ್ನ ಪೂರ್ವಸಂಬಂಧವಾದ

ಸರ್ವೋತ್ತಮವಾದ ಮಹಾವಿಷ್ಣುಸಂಬಂಧವಾದ ಜನ್ಮವನ್ನು ಸ್ಮರಿಸಿಕೊ. ನಿನ್ನ ಪೂರ್ವ ಭಾವದಲ್ಲಿ ಆಸಕ್ತಿಯೂ ಪಾಪರಹಿತಳೂ ಆದ ಸೀತಾದೇವಿಯು ನಿನ್ನ ತಪೋಬಲದಿಂದ ನಾಗ ಲೋಕವನ್ನು ಹೊಂದಿದಳು. ಸ್ವರ್ಗದಲ್ಲಿ ಸಂದೇಹವಿಲ್ಲದೆ ನಿನಗೆ ಸಂಗಮವಾಗುವಳು. ಇದು ಸತ್ಯವಾದ ಮಾತೆಂದು ತಿಳಿದುಕೊ" ಎಂಬದಾಗಿ ಹೇಳಿದನು.

**ತತ್ವ||** ಸೀತಾದೇವಿಯು ಅದೃಶ್ಯಳಾದಳೆಂದರೆ—ಸೀತಾದೇವಿಯ ತತ್ವವಾದ ಅಖಂಡಾ ಕಾರವಾದ ನಾನು ಎಂಬ ಜ್ಞಾನವಾದ ಶುದ್ಧಸತ್ವಪ್ರಧಾನವಾಯೆಯು ನಾಗಲೋಕದ ತತ್ವವಾದ ಕುಂಡಲಿನೀಶಕ್ತಿಯಾದ ಪರಾಶಕ್ತಿಯೊಡನೆ ಏಕೀಭವಿಸಿದಳೆಂದು ಮೇಲೆ ತಿಳಿಸಿತಷ್ಟೆ! "ನಾನು" ಎಂಬ ಅಖಂಡಜ್ಞಾನವು ಪುನಃ ತತ್ವಜ್ಞಾನಿಯಲ್ಲಿ ಉದಯ ವಾಗದೆ ಇರುವುದೇ ಸೀತಾದೇವಿಯು ಅದೃಶ್ಯಳಾದ ಮತ್ತು ಶ್ರೀರಾಮನ ಕೋಪದ ತತ್ವ ವಾಗಿರುತ್ತದೆ. ಅಂದರೆ ನಾನು ಎಂಬ ಅಖಂಡಜ್ಞಾನವೂ ಕೂಡ ಯಾವಾಗ ಪುನಃ ಉದಯವಾಗುವುದಿಲ್ಲವೋ ಆಗ ವಿದೇಹಕೈವಲ್ಯಕ್ಕೆ ಪ್ರಾರಂಭವೆಂಬ ತತ್ವವಾಗಿರುವುದು. ಅಂದರೆ ದೇಹದ ಇರುವಿಕೆಯು ಹೋಗುವ ಪ್ರಾರಂಭವೆಂಬ ತತ್ವ. ವಿದೇಹಕೈವಲ್ಯದಲ್ಲಿ ಜೀವಚೈತನ್ಯವಾದ ಪ್ರತಿಬಿಂಬಚೈತನ್ಯನು ಸರ್ವವ್ಯಾಪಕವಾದ ಪರಬ್ರಹ್ಮನೇ ಆಗುವಿಕೆಯೇ ಸರ್ವೋತ್ತಮವೂ ಮಹಾವಿಷ್ಣುಸಂಬಂಧವೂ ಆದ ಪೂರ್ವಜನ್ಮವನ್ನು ಸ್ಮರಿಸಿಕೊ ಎಂಬದಾಗಿ ಚತುರ್ಮುಖಬ್ರಹ್ಮನು ಶ್ರೀರಾಮನಿಗೆ ಹೇಳಿದುದರ ತತ್ವವಾಗಿರುವುದು. ಸೀತಾದೇವಿಯು ನಿನ್ನ ತಪೋಬಲದಿಂದ ನಾಗಲೋಕವನ್ನು ಹೊಂದಿದಳೆಂದು ಚತುರ್ಮುಖಬ್ರಹ್ಮನು ಶ್ರೀರಾಮನಿಗೆ ಹೇಳಿದುದರ ತತ್ವವೇನೆಂದರೆ—ಸೀತಾದೇವಿಯ ತತ್ವವಾದ ಶುದ್ಧಸತ್ವ ಪ್ರಧಾನಮಾಯೆಯು ಪರಾಶಕ್ತಿಯೊಡನೆ ಏಕೀಭವಿಸಲು ಶ್ರೀರಾಮಚಂದ್ರನು ಸೀತಾಪಹರಣ ದಾರಭ್ಯ ನಡೆಸಿದ ಕಥೆಯು ಅಂತರಾರ್ಥಪ್ರತಿಪಾದಕವಾದ ಜ್ಞಾನಮಾರ್ಗವನ್ನು ಆಚರಣೆಗೆ ತಂದುಕೊಂಡು ಅಧಿಕಾರಿಯು ಕೃತಕೃತ್ಯನಾಗಬೇಕೆಂಬ ತತ್ವ ಪ್ರತಿಪಾದಕ ವಾಗಿರುವುದು. ಸೀತಾದೇವಿಯು ಸಂದೇಹವಿಲ್ಲದೆ ಸ್ವರ್ಗದಲ್ಲಿ ನಿನಗೆ ಸಂಗಮವಾಗುವ ಳೆಂದು ಚತುರ್ಮುಖಬ್ರಹ್ಮನು ಶ್ರೀರಾಮನಿಗೆ ಹೇಳಿದುದರ ತತ್ವವೇನೆಂದರೆ-ಶುದ್ಧಸತ್ವಪ್ರಧಾನ ಮಾಯೆಯು ವಿದೇಹಕೈವಲ್ಯದ ಪ್ರಾರಂಭದಲ್ಲಿ ಪರಾಶಕ್ತಿಯಾದ ಕಳೆಯೊಡನೆ ಏಕೀಭವಿಸಿ ವಿದೇಹಕೈವಲ್ಯದ ಪೂರ್ಣಾವಸ್ಥೆಯಲ್ಲಿ ಪರಬ್ರಹ್ಮನೇ ಆಗುವುದೆಂಬ ತತ್ವಪ್ರತಿಪಾದನೆಯೇ ಸ್ವರ್ಗದಲ್ಲಿ ಸೀತಾದೇವಿಯು ರಾಮನೊಡನೆ ಸಂಗಮವಾಗುವುದಾಗಿದೆ. ಚತುರ್ಮುಖ ಬ್ರಹ್ಮನು ಹೇಗೆ ಸತ್ಯವಾಗಿ ಹೇಳುತ್ತೇನೆಂದು ಹೇಳಿದನೋ ಹಾಗೆ ವಿದೇಹಕೈವಲ್ಯದಲ್ಲಿ ಬ್ರಹ್ಮ ಒಂದೇ ಉಳಿಯುವ ಸ್ಥಿತಿಯುಂಟಾಗುವುದು ಸತ್ಯವಾಗಿಯೇ ಇರುತ್ತದೆಂಬು ದನ್ನು ಪ್ರತಿಪಾದಿಸುವುದು.

# ೩ನೆಯ ಪ್ರಕರಣ.

ಶ್ರೀರಾಮನು ಮಹಾಪ್ರಸ್ಥಾನ ಮಾಡಿದುದು  ವಿದೇಹಕೈವಲ್ಯದ ವಿಚಾರ.

ದಾ॥ ಶ್ರೀರಾಮನ ತಾಯಿಯಾದ ಕೌಸಲ್ಯಾದೇವಿಯು ಕಾಲಮೃತ್ಯುವನ್ನು ಹೊಂದಿದಳು. ಸುಮಿತ್ರಾ ಕೈಕೆಯೀದೇವಿಯರು ಕೌಸಲ್ಯಾದೇವಿಯನ್ನು ಅನುಸರಿಸಿಕೊಂಡೇ ಹೋದರು. ಈ ಮೂವರೂ ದಶರಥನೊಡನೆ ಕೂಡಿ ಸ್ವರ್ಗದಲ್ಲಿ ಪ್ರತಿಷ್ಠಿತರಾಗಿ ಒಟ್ಟಿಗೆ ಕೂಡಿಕೊಳ್ಳುವುದನ್ನು ಹೊಂದಿದರು.

**ತತ್ವ॥** ಕೌಸಲ್ಯಾ, ಸುಮಿತ್ರಾ, ಕೈಕೇಯೀದೇವಿಯರು ತ್ರಿಗುಣಾತ್ಮಿಕವಾದ ಜ್ಞಾನಶಕ್ತಿ, ಕ್ರಿಯಾಶಕ್ತಿ, ಇಚ್ಛಾಶಕ್ತಿ ತತ್ವದವರಾಗಿ ಅಂತಃಕರಣಸ್ವರೂಪರಾಗಿದ್ದರೆಂದೂ, ಈ ಅಂತಃಕರಣದಲ್ಲಿ ಪರಮಾತ್ಮನು ಪ್ರತಿಫಲಿಸಿ ಪ್ರತಿಬಿಂಬಚೈತನ್ಯನೆನಿಸುವುದೇ ಶ್ರೀಮಹಾವಿಷ್ಣುವು ಶ್ರೀರಾಮ ಲಕ್ಷ್ಮಣ ಭರತ ಶತ್ರುಘ್ನರೆನಿಸಿದುದೆಂದೂ ಬಾಲಕಾಂಡದ ಪ್ರಥಮ ಪ್ರಕರಣದಲ್ಲಿ ತಿಳಿಸಿತಷ್ಟೆ! ಕೌಸಲ್ಯಾದಿಗಳ ಮರಣವೆಂದರೆ—ಅಂತಃಕರಣಕ್ಕೆ ನಾಶವೆಂಬ ತತ್ವ. ಅಂದರೆ ಪ್ರಕೃತಿಸ್ವರೂಪವಾಗಿಯೂ ತ್ರಿಗುಣಾತ್ಮಕವಾಗಿಯೂ ಇರುವ ಅಂತಃಕರಣವು ಗುಣಸಾಮ್ಯಾವಸ್ಥೆಗೆ ಬರುವುದರ ಮೂಲಕ ಅರೂಪವಾಗಿ ಪರಬ್ರಹ್ಮವೇ ಆಗುವುದರ ತತ್ವವೇ ಕೌಸಲ್ಯಾದಿಗಳು ದಶರಥನೊಡನೆ ಕೂಡಿ ಸ್ವರ್ಗದಲ್ಲಿ ಪ್ರತಿಷ್ಠಿತರಾಗಿ ಒಟ್ಟಿಗೆ ಕೂಡಿಕೊಳ್ಳುವುದನ್ನು ಹೊಂದಿದುದಾಗಿದೆ. ಅಂದರೆ ದಶರಥನು ಪರಬ್ರಹ್ಮನ ಸೃಷ್ಟಿಸಂಕಲ್ಪದ ತತ್ವವೆಂದೂ, ದಶರಥನ ವಿಯೋಗವೇ ಸೃಷ್ಟಿಸಂಕಲ್ಪದ ತಿರೋಭೂತವೆಂದೂ ತಿಳಿಸಿತ್ತಷ್ಟೆ! ಸೃಷ್ಟಿಸಂಕಲ್ಪದ ಸಹಕಾರಿಯಾಗಿಯೇ ಪರಬ್ರಹ್ಮವಾದ ಚಿಚ್ಛಕ್ತಿಯು ತ್ರಿಗುಣಾತ್ಮಿಕವಾದ ಮೂಲಪ್ರಕೃತಿಯೆನಿಸಿ ಸಕಲಸೃಷ್ಟಿಯೊಡನೆ ಜ್ಞಾನ ಕ್ರಿಯಾ ಇಚ್ಛಾಶಕ್ತಿಗಳ ಸ್ವರೂಪವೆನಿಸಿದ ಪ್ರಧಾನವಾದ ಅಂತಃಕರಣವೆನಿಸಿತ್ತು. ಪ್ರಧಾನವಾದ ಅಂತಃಕರಣಕ್ಕೆ ನಾಶವೆಂದರೆ, ಕಾರ್ಯಕ್ಕೆ ನಾಶಬಂದು ಕಾರಣದಲ್ಲಿ ಸೇರುವಂತೆ, ಪ್ರಕೃತಿ ಎಂಬುದೇ ಇಲ್ಲದ ತತ್ವವಾದ ಸೃಷ್ಟಿಯೇ ಇಲ್ಲದಂತಾಗಿ ಸೃಷ್ಟಿಗೆ ಕಾರಣವಾಗಿದ್ದ ಪರಬ್ರಹ್ಮನ ಸೃಷ್ಟಿಸಂಕಲ್ಪದಲ್ಲಿ ಲಯವಾಗುವುದೇ ಕೌಸಲ್ಯಾದಿಗಳು ದಶರಥನೊಡಗೂಡಿದುದಾಗಿರುವುದು. ಪರಬ್ರಹ್ಮನ ಸೃಷ್ಟಿಸಂಕಲ್ಪವೆಂಬ ಹೆಸರೂ ಇಲ್ಲದಂತಾಗಿ ಸೃಷ್ಟಿಸಂಕಲ್ಪ, ಮೂಲಪ್ರಕೃತಿಗಳೆಲ್ಲವೂ ಪರಬ್ರಹ್ಮವಾಗಿ ಪರಬ್ರಹ್ಮ ಒಂದೇ ಉಳಿದುಕೊಳ್ಳುವ ಸ್ಥಿತಿಯೇ ಕೌಸಲ್ಯಾದಿಗಳು ದಶರಥನೊಡಗೂಡಿ ಸ್ವರ್ಗದಲ್ಲಿ ಪ್ರತಿಷ್ಠಿತರಾಗಿ ಒಟ್ಟಿಗೆ ಕೂಡಿಕೊಳ್ಳುವುದನ್ನೂ ಹೊಂದಿದರು. ಗುಣಸಾಮ್ಯಾವಸ್ಥೆಗೆ ಬರುವುದರಲ್ಲಿ ಇಚ್ಛಾಶಕ್ತಿ ಕ್ರಿಯಾಶಕ್ತಿಗಳೆರಡೂ ಜ್ಞಾನಶಕ್ತಿಯಲ್ಲಿ ಲಯವನ್ನು ಪಡೆದು ಎಂದರೆ ರಜಸ್ತಮೋಗುಣಗಳು ಸತ್ವಗುಣದಲ್ಲಿ ಲಯವಾಗಿ ಸತ್ವಗುಣವಾದ

ಜ್ಞಾನಶಕ್ತಿಯು ಗುಣಸಾಮ್ಯಾವಸ್ಥೆಯಿಂದ ಪರಬ್ರಹ್ಮನಲ್ಲಿ ಲಯವನ್ನು ಪಡೆದು ಪರಬ್ರಹ್ಮವೇ ಆಗುವುದೆಂಬ ತತ್ವಪ್ರದಿಪಾದನೆಯೇ ಸುಮಿತ್ರಾ ಕೈಕೇಯಿಯರು ಕೌಸಲ್ಯಾದೇವಿಯನ್ನು ಅನುಸರಿಸಿಕೊಂಡು ಹೋಗಿ ಅನಂತರ ಒಟ್ಟುಗೂಡುವುದನ್ನು ಸ್ವರ್ಗದಲ್ಲಿ ಹೊಂದಿದುದು.

ಹಿಂದೆ ಸೀತಾದೇವಿಯು ತತ್ವವಾದ ಶುದ್ಧಸತ್ವಪ್ರಧಾನಮಾಯೆಯೂ ಪರಬ್ರಹ್ಮನಲ್ಲಿ ಲಯವಾಗಿ ಪರಬ್ರಹ್ಮವಾಗುವುದೆಂದು ತಿಳಿಸಿತು. ಇಲ್ಲಿ ಕೌಸಲ್ಯಾತತ್ವವಾದ ಶುದ್ಧಸತ್ವವೂ ಪರಬ್ರಹ್ಮನಲ್ಲಿ ಲಯವಾಗಿ ಪರಬ್ರಹ್ಮವೇ ಆಗುವುದೆಂದು ತಿಳಿಸಿದೆ. ಶುದ್ಧಸತ್ವವಾದ ಪ್ರಕೃತಿಗಳು ಅನೇಕವಾಗಿವೆಯೆಂದು ತಾತ್ಪರ್ಯವಲ್ಲ. ಸೃಷ್ಟಿ ಸ್ಥಿತಿ ಲಯಕ್ರಮಗಳನ್ನು ಅನುಸರಿಸಿ ಸತ್ವರಜಸ್ತಮೋಗುಣಗಳ ಶಕ್ತಿಗಳೇ ಕಾರ್ಯಭೇದಗಳಿಂದ ಅನೇಕ ಪ್ರಕಾರವಾಗಿ ತೋರುವುವು. ತತ್ವತಃ ಪ್ರತ್ಯೇಕವಾದವುಗಳಲ್ಲ. ಸತ್ವರಜಸ್ತಮೋಗುಣಗಳನ್ನು ಬಿಟ್ಟರೆ ಜಗತ್ತಿನಲ್ಲಿ ಬೇರೆ ಯಾವುವಿವೆ? ಕೌಸಲ್ಯಾದಿಗಳು ಸೃಷ್ಟಿಯಕಾರ್ಯದ ತತ್ವವಾಗಿಯೂ ಸೀತಾದೇವಿಯು ಸ್ಥಿತಿಕಾರ್ಯದ ತತ್ವವಾಗಿಯೂ ಇರುತ್ತಾರೆ. ಸ್ಥಿತಿಯಲ್ಲೂ ಪ್ರವೃತ್ತಿ ನಿವೃತ್ತಿ ಮಾರ್ಗಗಳೆಂಬೆರಡು ಇರುವುವು. ಪ್ರವೃತ್ತಿಮಾರ್ಗದ ಪ್ರಕೃತಿಯೇ ಮಂಡೋದರಿಯಾಗಿಯೂ ನಿವೃತ್ತಿಮಾರ್ಗದ ಪ್ರಕೃತಿಯೇ ಸೀತಾದೇವಿಯಾಗಿಯೂ ಇರುವರು. ಆದುದರಿಂದ ಕಾರ್ಯಭೇದಗಳಿಂದ ಅನೇಕ ವಿಧವಾಗಿದ್ದರೂ ಮೂರು ಗುಣಗಳನ್ನು ಬಿಟ್ಟು ಜಗತ್ತಿನಲ್ಲಿ ಮತ್ತೆ ಬೇರೆ ಯಾವುದೂ ಇಲ್ಲ. ಕೌಸಲ್ಯಾತತ್ವದಲ್ಲಿರುವ ಜ್ಞಾನಶಕ್ತಿಯೆಂದರೆ ಶುದ್ಧಸತ್ವವು ಸೃಷ್ಟಿಯ ಕಾಲದಲ್ಲಿ ಸೃಷ್ಟಿಕಾರ್ಯಕ್ಕೆ ಯಾವ ವಿಧದಲ್ಲಿ ಸಹಾಯವಾಗಿರುತ್ತೆಂಬ ತತ್ವಪ್ರತಿಪಾದನೆಯೇ ದಶರಥನ ಪುತ್ರಕಾಮೇಷ್ಟಿಯಾಗದಲ್ಲಿ ಕೌಸಲ್ಯಾದೇವಿಯು ಪ್ರಧಾನ ಭಾಗವನ್ನು ವಹಿಸಿದ್ದಾಗಿದೆ. ವಿದೇಹಕೈವಲ್ಯದಲ್ಲಿ ಕೌಸಲ್ಯಾದಿಗಳ ಮರಣದ ತತ್ವವಾದ ಲಿಂಗದೇಹ (ಸೂಕ್ಷ್ಮಶರೀರ) ಭಂಗವಾಗುವಾಗ ಗುಣಸಾಮ್ಯಾವಸ್ಥೆಯುಂಟಾಗಿ ಸರ್ವವೂ ಪರಬ್ರಹ್ಮವೇ ಆಗುವುದು. ಸೀತಾದೇವಿಯ ಭೂಪ್ರವೇಶ ಮತ್ತು ಕೌಸಲ್ಯಾದಿಗಳ ಮರಣದ ತತ್ವಸಮರ್ಥನೆಗೆ ಅನ್ನಪೂರ್ಣೋಪನಿಷತ್ತಿನಲ್ಲಿ,

ಸಮಗ್ರಾಗ್ರ್ಯಗುಣಾಧಾರ ಮಪಿಸತ್ವಂ ಪ್ರಲೀಯತೇ
ವಿದೇಹಮುಕ್ತೌ ವಿಮಲೇಪದೇ ಪರಮಪಾವನೇ ॥
ವಿದೇಹಮುಕ್ತಿ ವಿಷಯೆ ತಸ್ಮಿನ್ ಸತ್ವಕ್ಷಯಾತ್ಮಿಕೆ ।
ಚಿತ್ತನಾಶೆ ವಿರೂಪಾಖ್ಯೆನಕಿಂಚಿದಿಹವಿದ್ಯತೆ ॥

ತಾ॥ ಶುದ್ಧಸತ್ವವು ಸಂಪೂರ್ಣವಾದ ಉತ್ತಮ ಗುಣಗಳಿಗಾಧಾರಭೂತವಾದವಾದಾಗ್ಯೂ ನಿರ್ಮಲವಾದ ಅತ್ಯಂತ ಪರಿಶುದ್ಧವಾದ ವಿದೇಹಮುಕ್ತಿಸ್ಥಾನದಲ್ಲಿ ಪರಬ್ರಹ್ಮನಲ್ಲಡಗುವುದು. ಅಂಥಾ ಸತ್ವನಾಶಸ್ವರೂಪವಾದ ವಿದೇಹಮುಕ್ತಿ ವಿರೂಪವೆಂಬ ಹೆಸರುಳ್ಳ

ಚಿತ್ತನಾಶವಾಗಲು ಇಲ್ಲಿ ಸ್ವಲ್ಪವಾದರೂ ಏನೂ ಇರುವುದಿಲ್ಲವೆಂದರೆ ಬ್ರಹ್ಮವೇ ಆಗುವುದು ಎಂದು ಹೇಳಿದೆ.

ಕೌಸಲ್ಯಾದಿಗಳ ಮರಣದಿಂದ ಉಂಟಾಗುವ ಫಲಿತಾಂಶವೇನೆಂದರೆ—ಲಿಂಗಶರೀರಕ್ಕೆ ಪ್ರಧಾನವಾದ ಅಂತಃಕರಣವು ಯಾವಾಗ ವಿರೂಪವಾಗಿ ನಾಶವಾಗುವುದೋ ಆಗ ಅಂತಃ ಕರಣದಲ್ಲಿ ಉಂಟಾಗಿದ್ದ ಪ್ರತಿಫಲನವು ಇಲ್ಲದಂತಾಗುವುದರಿಂದ ಪ್ರತಿಫಲನದ ಚೈತನ್ಯ (ಚಿದಾಭಾಸ ಅಥವಾ ಜೀವಚೈತನ್ಯ) ವೆಂಬುದೂ ಇಲ್ಲದೆ ಪರಬ್ರಹ್ಮಚೈತನ್ಯವೇ ಉಳಿಯುವುದು. ಹೇಗೆಂದರೆ ಪ್ರತಿಫಲನದ ಬೆಳಕಿಗೆ ಕಾರಣವಾಗಿದ್ದ ರಸಕನ್ನಡಿಯೇ ನಾಶವಾದರೆ ಪ್ರತಿಫಲನದ ಬೆಳಕೆಂಬುವುದೇ ಇಲ್ಲವಷ್ಟೆ! ಇದರಂತೆ ಘಟಾಕಾಶವೆಂಬ ಹೆಸರಿಗೆ ಕಾರಣವಾಗಿದ್ದ ಘಟವು ಒಡೆದುಹೋದರೆ ಘಟಾಕಾಶವೆಂಬ ಹೆಸರೂ ಇಲ್ಲದೆ ಮಹಾಕಾಶವೆನಿಸಿಕೊಳ್ಳುವಂತೆ ಕೌಸಲ್ಯಾದಿಗಳ ಮರಣದಿಂದ ರಾಮ ಲಕ್ಷ್ಮಣ ಭರತ ಶತ್ರುಘ್ನರೆಂಬುವುದಿಲ್ಲದೆ ಇವರೆಲ್ಲಾ ಸೇರಿ ಒಬ್ಬನಾದ ಮಹಾವಿಷ್ಣುವೆನಿಸುವರು. ಅಂದರೆ ಪ್ರತಿಫಲನ ಚೈತನ್ಯವಾಗಲು ಉಪಾಧಿರೂಪದಲ್ಲಿರುವ ಅಂತಃಕರಣವು ನಾಶವಾದರೆ ಪ್ರತಿಫಲನಚೈತನ್ಯ (ಜೀವಚೈತನ್ಯ) ವೆಂಬುವುದಿಲ್ಲದೆ ಪರಬ್ರಹ್ಮ ಒಂದೇ ಉಳಿದುಕೊಳ್ಳುವ ಸ್ಥಿತಿಯಾಗುವುದು. ಇದೇ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ೫೬೬ನೇ ಶ್ಲೋಕದಲ್ಲಿ,

> ಘಟೇನಷ್ಟೇಯಥಾವ್ಯೋಮವ್ಯೋಮೈವ ಭವತಿಸ್ಫುಟಂ ।
> ತಥೈವೋಪಾಧಿವಿಲಯೇ ಬ್ರಹ್ಮೈವಬ್ರಹ್ಮವಿತ್ಸ್ವಯಂ ॥

ತಾ॥ ಘಟವು ಒಡೆದುಹೋದಲ್ಲಿ ಘಟದಲ್ಲಿದ್ದ ಆಕಾಶವು ಸ್ಪಷ್ಟವಾಗಿ ಆಕಾಶವೇ ಆಗುವಂತೆ ಉಪಾಧಿನಾಶವಾಗಲಾಗಿ ಬ್ರಹ್ಮವೇತ್ತೃವು ಸ್ವಯಂಬ್ರಹ್ಮನೇ ಆಗುತ್ತಾನೆ. ಎಂದು ಹೇಳಿರುವರು.

ರಾ॥ ಕೌಸಲ್ಯಾದಿಗಳು ಮರಣವನ್ನೈದಿದಮೇಲೆ ಕಾಲಪುರುಷನಾದ ಯಮನು ಋಷಿರೂಪದಿಂದ ಶ್ರೀರಾಮನಲ್ಲಿಗೆ ಬಂದು "ಎಲೈ! ಶ್ರೀರಾಮನೇ, ಮನುಷ್ಯಲೋಕವಾಸಕ್ಕೆ ನಿಯಮವನ್ನು ಮಾಡಿಕೊಂಡು ಮನುಷ್ಯರಲ್ಲಿ ಅಂತಃಕರಣವನ್ನು ಧರಿಸಿದೆ. ಹೀಗೆ ಅಂತಃಕರಣವನ್ನು ಧರಿಸಿದ ನೀನು ಅಂತಃಕರಣಮಯನಾದ ಪುತ್ರಭಾವವನ್ನು ಹೊಂದಿ ಸಂಪೂರ್ಣಕಾಲವಿದ್ದವನಾದೆ. ಈಗ ಕಾಲಸವಿಾಪಿಸಿದೆ. ಮನುಷ್ಯರಂತೆಯೇ ಅನುಸರಿಸಲು ಇಚ್ಛೆಯಿದ್ದರೆ ಹಾಗೆಯೇ ಆಗಲಿ. ಹಾಗಿಲ್ಲದೆ ಹೋದರೆ ಸುರಲೋಕವೆಂದರೆ ದೇವಲೋಕಕ್ಕೆ ಗಮನೇಚ್ಛೆಯುಂಟಾದರೆ ಹಾಗೆಯೇ ಆಗಲಿ. ಈ ರೀತಿ ಹೇಳಲು ಚತುರ್ಮುಖಬ್ರಹ್ಮನು ನನ್ನನ್ನು ಕಳುಹಿಸಿರುವನು" ಎಂದು ಹೇಳಿದನು. ಶ್ರೀರಾಮನು ಯಮನ ಮಾತನ್ನು ಕೇಳಿ ನಗುತ್ತ "ನಾನು ಎಲ್ಲಿಂದ ಬಂದೆನೋ ಅಲ್ಲಿಗೇ ಹೋಗುವೆನು.

ಇದರಲ್ಲಿ ಸಂಶಯವಿಲ್ಲ. ನನ್ನ ಮನಸ್ಸಿನೊಳಗಿದ್ದುದಕ್ಕೆ ಸರಿಯಾಗಿ ನೀನೂ ಬಂದವನಾದೆ" ಎಂದು ಉತ್ತರ ಹೇಳಿದನು.

**ತತ್ವ||** ಕೌಸಲ್ಯಾದಿಗಳ ಮರಣದ ತತ್ವವಾದ ಲಿಂಗದೇಹಕ್ಕೆ ಪ್ರಧಾನವಾದ ಅಂತಃ ಕರಣನಾಶದಿಂದಲೂ, ಯಮನು ಶ್ರೀರಾಮನಲ್ಲಿಗೆ ಬಂದ ತತ್ವದಿಂದಲೂ, ಶ್ರೀರಾಮನು ಎಲ್ಲಿಂದ ಬಂದೆನೋ ಅಲ್ಲಿಗೇ ಹೋಗುವೆನು ಎಂದು ಹೇಳಿರುವುದರ ತತ್ವಗಳಿಂದಲೂ ತತ್ವ ಜ್ಞಾನಿಯು ಹೊಂದುವ ವಿದೇಹಕೈವಲ್ಯದ ತತ್ವವಾಗಿರುವುದು. ಯಮನು ಶ್ರೀರಾಮ ನೊಡನೆ ಮನುಷ್ಯಲೋಕವಾಸಕ್ಕೆ ನಿಯಮವನ್ನು ಮಾಡಿಕೊಂಡು ಮನುಷ್ಯನಲ್ಲಿ ಅಂತಃ ಕರಣವನ್ನು ಧರಿಸಿದೆಯೆಂದು ಹೇಳಿದುದರ ತತ್ವವೇನೆಂದರೆ—ಮಹಾವಿಷ್ಣುವಾದ ಪರ ಬ್ರಹ್ಮನೇ ಮನುಷ್ಯನ ಅಂತಃಕರಣದಲ್ಲಿ ನಿರ್ಲಿಪ್ತನಾಗಿ ಸಾಕ್ಷಿಚೈತನ್ಯನೆನಿಸಿಕೊಂಡು ಅಂತಃ ಕರಣವನ್ನು ಪ್ರಕಾಶಿಸಿಕೊಂಡು ಇರುವನೆಂಬ ತತ್ವವಾಗಿರುವುದು. ಯಮನು ಶ್ರೀರಾಮ ನೊಡನೆ ಹೀಗೆ ಅಂತಃಕರಣವನ್ನು ಧರಿಸಿದ ನೀನು ಅಂತಃಕರಣಮಯವಾದ ಪುತ್ರಭಾವ ವನ್ನು ಹೊಂದಿದವನಾಗಿ ಸಂಪೂರ್ಣಕಾಲವಿದ್ದವನಾದೆಯೆಂದು ಹೇಳಿದುದರ ತತ್ವ ವೇನೆಂದರೆ—ಸಾಕ್ಷಿಚೈತನ್ಯನೆನಿಸಿಕೊಂಡು ಅಂತಃಕರಣದಲ್ಲಿರುವ ಮಹಾವಿಷ್ಣುವಾದ ಪರ ಬ್ರಹ್ಮನು ಅಂತಃಕರಣದ ಸ್ವಭಾವದಿಂದ ಪ್ರತಿಫಲಿತ (ಚಿದಾಭಾಸ) ಚೈತನ್ಯನೆನಿಸಿ ಅಂತಃ ಕರಣದ ಪುತ್ರಭಾವವನ್ನು ಹೊಂದಿದನೆಂಬ ತತ್ವವಾಗಿದೆ. ಅಂದರೆ ರಸಕನ್ನಡಿಯಿಂದ ಉಂಟಾಗುವ ಪ್ರತಿಫಲನದ ಬೆಳಕು ರಸಕನ್ನಡಿಯಿಂದುಂಟಾದುದರಿಂದ ರಸಕನ್ನಡಿಗೆ ಪ್ರತಿ ಫಲನದ ಬೆಳಕು ಪುತ್ರಭಾವವಾಗುವುದು. ಇದರಂತೆ ಮಹಾವಿಷ್ಣುವು ಕೌಸಲ್ಯಾದಿಗಳ ಗರ್ಭ ದಲ್ಲಿ ಜನಿಸಿ ರಾಮ ಲಕ್ಷ್ಮಣ ಭರತ ಶತ್ರುಘ್ನರೆನಿಸಿ ಕೌಸಲ್ಯಾದಿಗಳಿಗೆ ಪುತ್ರರೆನಿಸಿಕೊಂಡರು. ಇದರಂತೆಯೇ ಅಂತಃಕರಣಸ್ವಭಾವದಿಂದುಂಟಾದ ಪ್ರತಿಫಲನವು ಅಂತಃಕರಣಕ್ಕೆ ಪುತ್ರಭಾವವೆಂಬ ತತ್ವ. ಈ ತತ್ವವಿಚಾರಗಳೆಲ್ಲಾ ಹಿಂದೆ ಬಾಲಕಾಂಡದಲ್ಲಿಯೇ ಬಂದಿವೆ.

ಯಮನು ಈಗ ಕಾಲಸಮಾಪಿಸಿದೆ. ಮನುಷ್ಯರಂತೆಯೇ ಅನುಸರಿಸಲು ಇಚ್ಛೆ ಯಿದ್ದರೆ ಹಾಗೆಯೇ ಆಗಲಿ. ಹಾಗಿಲ್ಲದೆ ಹೋದರೆ ದೇವಲೋಕಕ್ಕೆ ಗಮನೇಚ್ಛೆಯುಂಟಾ ದರ ಹಾಗೆಯೇ ಆಗಲಿ. ಎಂದು ಶ್ರೀರಾಮನೊಡನೆ ಹೇಳಿದುದರ ತತ್ವವೇನೆಂದರೆ— ಕಾಲಸಮಾಪಿಸಿದೆಯೆಂದರೆ ದೇಹ ಹೋಗುವ ಕಾಲ ಒದಗಿದೆ ಎಂಬ ತತ್ವವಾಗಿದೆ. ಪ್ರತಿ ಯೊಂದು ಪ್ರಾಣಿಗೂ ದೇಹ ಹೋಗುವ ಕಾಲದಲ್ಲಿ ಮುಂದೆ ತಾನು ಪಡೆಯಲಿಚ್ಛೆಯುಳ್ಳ ರೂಪವನ್ನು ಸ್ಮರಿಸಿಕೊಳ್ಳಲನುಕೂಲಿಸುವಂತೆ ಪರಮಾತ್ಮನ ನಿಯಮವೊಂದು ಇರುವು ದೆಂಬ ತತ್ವಪ್ರತಿಪಾದನೆಯೇ ಯಮನು ಶ್ರೀರಾಮನಲ್ಲಿಗೆ ಬಂದು ವಿಚಾರವನ್ನು ತಿಳಿಸಿದು ದಾಗಿದೆ. ಸಾಯುವಾಗ ಇಂದ್ರಿಯಗಳೆಲ್ಲಾ ಸೊರಗಿ ತಳಮಳಿಸುತ್ತಿದ್ದರೂ ಮೃತನಾಗು ವವನಿಗೆ ಒಳಗಡೆಯೇ ತಾನು ಪಡೆಯಲಿಚ್ಛೆಯುಳ್ಳ ರೂಪವನ್ನು ಸ್ಮರಿಸಿಕೊಳ್ಳಲು

ಅರ್ಹತೆ ಬಂದೇ ಬರುವುದು. ದೇಹ ಹೋಗುವ ಕಾಲದಲ್ಲಿ ಯಾರು ಯಾರು ಯಾವ ಯಾವ ರೂಪವನ್ನು ಸ್ಮರಿಸುತ್ತಾ ದೇಹತ್ಯಾಗಮಾಡುವರೋ ಅದರಂತೆ ಮುಂದೆ ದೇಹ ಗಳುಂಟಾಗುತ್ತವೆ. ಮನುಷ್ಯರಂತೆ ಅನುಸರಿಸಿ ಮನುಷ್ಯಶರೀರಸ್ಮರಣೆಯಲ್ಲಿಯೇ ದೇಹ ಬಿಟ್ಟರೆ ಮನುಷ್ಯಜನ್ಮ ಉಂಟಾಗುವುದು. ಇತರ ಯಾವ ಪ್ರಾಣಿಗಳ ಸ್ವರೂಪ ಸ್ಮರಣೆಗೆ ಬಂದರೆ ಅದರಂತೆಯೇ ಜನ್ಮವುಂಟಾಗುವುದು. ದೇವತಾಸ್ಮರಣೆಯಲ್ಲಿ ದೇಹತ್ಯಾಗಮಾಡಿ ದರೆ ದೇವತೆಗಳ ಜನ್ಮವುಂಟಾಗುವುದು. ಇದೇ ತಾತ್ಪರ್ಯಕ್ಕೆ ಶ್ರೀಕೃಷ್ಣಪರಮಾತ್ಮನು ಭಗವ ದ್ಗೀತೆ ೮ನೆಯ ಅಧ್ಯಾಯ ೬ನೆಯ ಶ್ಲೋಕದಲ್ಲಿ,

ಯಂಯಂವಾಪಿಸ್ಮರನ್ಭಾವಂ ತ್ಯಜತ್ಯನ್ತೇಕಲೇಬರಮ್ |
ತಂತಮೇವೈತಿಕೌಂತೇಯ ಸದಾ ತದ್ಭಾವಭಾವಿತಃ ||

ತಾ|| ದೇಹಪತನಕಾಲದಲ್ಲಿ ಯಾವ ರೂಪವನ್ನು ಸ್ಮರಿಸುತ್ತಾ ದೇಹವನ್ನು ಬಿಟ್ಟರೂ ಆ ರೂಪವನ್ನೇ ಹಂಬಲಿಸುತ್ತಿದ್ದುದರ ಬಲದಿಂದ ಆಯಾ ರೂಪವೇ ದೊರೆಯುವುದು. ಎಂದು ಹೇಳಿರುವನು.

ಶ್ರೀರಾಮನು ಯಮನ ಮಾತಿಗೆ ನಾನು ಎಲ್ಲಿಂದ ಬಂದೆನೋ ಅಲ್ಲಿಗೇ ಹೋಗುವೆನು. ಇದರಲ್ಲಿ ಸಂಶಯವಿಲ್ಲವೆಂದು ಹೇಳಿದುದರ ತತ್ವವೇನೆಂದರೆ—ಸರ್ವವ್ಯಾಪಕವಾದ ಪ್ರಕಾಶವು ರಸಕನ್ನಡಿಯಿಂದ ಪ್ರತಿಫಲಿತವಾಗಿತ್ತು. ರಸಕನ್ನಡಿಯೇ ನಾಶವಾದಾಗ ಪ್ರತಿ ಫಲನವು ಸರ್ವವ್ಯಾಪಕವಾದ ಪ್ರಕಾಶವೇ ಆಗುವಂತೆ ವಿದೇಹಕೈವಲ್ಯದಲ್ಲಿ ಅಂತಃಕರಣ ದಲ್ಲಿದ್ದ ಶ್ರೀರಾಮಾದಿಗಳ ತತ್ವವಾದ ಪ್ರತಿಬಿಂಬಚೈತನ್ಯವು ಅಂತಃಕರಣನಾಶವಾದಾಗ ಪ್ರತಿಬಿಂಬಚೈತನ್ಯವೆನ್ನುವುದೇ ಇಲ್ಲಿದೆ. ಮಹಾವಿಷ್ಣುವಿನ ತತ್ವವಾದ ಸರ್ವವ್ಯಾಪಕವಾದ ಪರಬ್ರಹ್ಮವೇ ಆಗುವುದೆಂಬುದು ಸಂಶಯವಿಲ್ಲದೆ ಖಂಡಿತವಾಗಿರುವುದೆಂಬ ತತ್ವಪ್ರತಿ ಪಾದನೆಯೇ ಶ್ರೀರಾಮನು ಯಮನಿಗೆ ಉತ್ತರ ಹೇಳಿದುದಾಗಿರುವುದು. ನನ್ನ ಮನಸ್ಸಿನೊಳಗಿದ್ದುದಕ್ಕೆ ಸರಿಯಾಗಿ ನೀನು ಬಂದೆಯೆಂದು ಶ್ರೀರಾಮನು ಯಮನಿಗೆ ಹೇಳಿದುದರ ತತ್ವವೇನೆಂದರೆ -ಜೀವನ್ಮುಕ್ತಾವಸ್ಥೆಯನ್ನು ಪಡೆದಿದ್ದ ತತ್ವಜ್ಞಾನಿಯು ಸರ್ವದಾ ಬ್ರಹ್ಮನಿಷ್ಠೆಯಲ್ಲಿದ್ದು ವಿದೇಹಕೈವಲ್ಯವನ್ನು ನಿರೀಕ್ಷಿಸಿಕೊಂಡಿರುತ್ತಾ ಸಂತೋಷ ದಿಂದ ಸರ್ವವ್ಯಾಪಕತ್ವವನ್ನು ಹೊಂದಲು ಸಿದ್ಧನಾಗಿರುವನೆಂಬ ತತ್ವವಾಗಿದೆ.

ಜೀವನ್ಮುಕ್ತಾವಸ್ಥೆಯನ್ನು ಪಡೆಯದ ಸಾಧಾರಣ ಮನುಷ್ಯರು ಸರ್ವವ್ಯಾಪಕವಾದ ಪರಬ್ರಹ್ಮಪದವಿಯನ್ನು ಅಂತ್ಯಕಾಲದಲ್ಲಿ ಪಡೆಯಲಾರರು. ಕಾರಣವೇನೆಂದರೆ--ಪ್ರಥಮ ದಲ್ಲಿ ಮಾಡಿಕೊಳ್ಳಬೇಕಾದ ಕರ್ತವ್ಯವಾದ ಬೀಜವನ್ನು ಹುರಿದಂತೆ ಅವಿದ್ಯೆಯನ್ನು

ಜ್ಞಾನಾಗ್ನಿಯಿಂದ ದಗ್ಧಮಾಡಿಕೊಂಡಿರುವುದಿಲ್ಲ. ಯಾವಾಗ ಅವಿದ್ಯೆಯು ನಾಶವಾಗುವುದಿಲ್ಲವೋ ಆಗ ಲಿಂಗದೇಹ ಭಂಗವುಂಟಾಗುವುದಿಲ್ಲವೆಂದರೆ ಸೀತಾದೇವಿಯ ಭೂಪ್ರವೇಶ ಮತ್ತು ಕೌಸಲ್ಯಾದಿಗಳ ಮರಣದ ತತ್ವ ಉಂಟಾಗುವುದಿಲ್ಲ. ಯಾವಾಗ ಲಿಂಗದೇಹಕ್ಕೆ ಪ್ರಧಾನವಾದ ಅಂತಃಕರಣ ನಾಶವಾಗುವುದಿಲ್ಲವೋ ಆಗ ಪ್ರತಿಬಿಂಬಚೈತನ್ಯನು ಪರಬ್ರಹ್ಮನಾಗಲಾರದೆ ಅವಿದ್ಯಾ ಮತ್ತು ಲಿಂಗದೇಹದೊಡನೆ ಅನೇಕ ಸ್ಥೂಲಶರೀರಗಳನ್ನು ಪಡೆಯುವನು. ಹೀಗೆ ಅನೇಕ ಸ್ಥೂಲದೇಹಗಳನ್ನು ಪಡೆಯುವುದರಲ್ಲೂ ಸರ್ವದಾ ಪರಮಾತ್ಮನ ಹಂಬಲಿಸಿಂದಿದ್ದು ಅವನ ಸ್ಮರಣೆಯಲ್ಲಿಯೇ ದೇಹತ್ಯಾಗಮಾಡಿದರೆ ಉತ್ತಮ ಜನ್ಮಗಳು ಬಂದು ಸಾರ್ಥಕಹೊಂದಲು ಮಾಡಬೇಕಾದುದನ್ನು ಮಾಡಿಕೊಳ್ಳಲು ಅನುಕೂಲವಾಗುವುದು.

ಆದರೆ ಬ್ರಹ್ಮವಿದ್ಯಾಧಿಕಾರಿಯಾಗಿದ್ದು ಜೀವಂತನಾಗಿರುವಾಗಲೇ ಸೀತಾಗ್ನಿಪ್ರವೇಶದ ತತ್ವವಾದ ಜೀವನ್ಮುಕ್ತಿಸೋಪಾನವನ್ನು ಪಡೆಯದೆ, ಅಗಸ್ತ್ಯರು ಆದಿತ್ಯಹೃದಯದ ತತ್ವವನ್ನು ಉಪದೇಶಮಾಡಿದ ತೇಜೋನಾದವಿದ್ಯೆಯ ಸೋಪಾನಕ್ಕೆ ಬಂದಿದ್ದರೆ ಪ್ರಣವೋಪಾಸನೆಯ ಅಭ್ಯಾಸಬಲದಿಂದ ಅಂತ್ಯಕಾಲದಲ್ಲಿ ಅವಿದ್ಯಾನಾಶ ಮತ್ತು ಲಿಂಗದೇಹಭಂಗವಾಗಿ ವಿದೇಹಕೈವಲ್ಯವು ದೊರಕುವುದು. ಈ ಅಭಿಪ್ರಾಯಸಮರ್ಥನೆಗೆ ಶ್ರೀಶಂಕರಭಗವತ್ಪಾದರವರ ಬಂಧತ್ರಯಾಭ್ಯಾಸದ ಪರಿಪಕ್ವಾವಸ್ಥೆಗೆ ಬಂದವನಿಗೆ ಯಮನ ಭಯವಿಲ್ಲವೆಂಬ ವಾಕ್ಯವನ್ನು ಮತ್ತು "ಕವಿಂಪುರಾಣಂ, ಪ್ರಯಾಣಕಾಲೇ" ಎಂಬ ಶ್ರೀಕೃಷ್ಣಪರಮಾತ್ಮನ ವಾಕ್ಯಗಳನ್ನು ಓಂದೆ ಯುದ್ಧಕಾಂಡದಲ್ಲಿ ಬರೆದಿರುವುದನ್ನು ಅನ್ವಯಿಸಿಕೊಳ್ಳಬೇಕು.

ಬ್ರಹ್ಮವಿದ್ಯಾಧಿಕಾರಿಯು ಹೀಗೆ ಓಂಕಾರಾನುಸಂಧಾನದಿಂದ ಸರ್ವವ್ಯಾಪಕವಾದ ಪರಬ್ರಹ್ಮನನ್ನು ಪ್ರಾಣೋತ್ಕ್ರಮಣಕಾಲದಲ್ಲಿ ಪಡೆಯಬಹುದೆಂಬುದಕ್ಕೆ ಈಶಾವಾಸ್ಯೋಪನಿಷತ್ತಿನಲ್ಲಿ,

ವಾಯುರನಿಲಮಮೃತಮಥೇದಂ ಭಸ್ಮಾಂತಂಶರೀರಂ ।
ಓಂಕ್ರತೋಸ್ಮರಕೃತಂ ಸ್ಮರಕ್ರತೋಸ್ಮರ ಕೃತಂಸ್ಮರ ॥

ತಾ॥ ಮರಣಾನಂತರದಲ್ಲಿ ಈ ಶರೀರವು ರೇಣುಗಳೇ ಕಡೆಯದಾಗಿರುವ ಸ್ಥಿತಿಯನ್ನು ಹೊಂದಿ ಭೂಮಿಯಲ್ಲಿ ಕಲೆತುಹೋಗುವುದು. ಲಿಂಗಶರೀರವು ಸರ್ವಮೂಲವಾದ ಪ್ರಕೃತಿಯಲ್ಲಿ ಲಯವನ್ನು ಪಡೆಯುವುದು. ಯಾವಾಗ ಸಾಮಗ್ರಿಯೆಲ್ಲಾ ನಿವೃತ್ತಿಯಾಯಿತೋ ಆಗ ಪರಮಾತ್ಮ ಒಂದೇ ಉಳಿಯುವುದು. ಇದನ್ನು ಹೊಂದಲು ಪ್ರಾಣೋತ್ಕ್ರಮಣಕಾಲದಲ್ಲಿ ಓಂಕಾರಾನುಸಂಧಾನದಿಂದ ಪರಬ್ರಹ್ಮತ್ವವನ್ನು ಅನುಸಂಧಾನಮಾಡು ಎಂದು ಹೇಳಿದೆ.

**ರಾ||** ಶ್ರೀರಾಮನು ಯಮನೊಡನೆ ಮಾತಾಡುತ್ತಿರುವಲ್ಲಿ ದೂರ್ವಾಸಮುನಿಯು ಶ್ರೀರಾಮನಲ್ಲಿಗೆ ಬಂದು ಸಂತೃಪ್ತಿಯಾಗಿ ಭೋಜನಮಾಡಿ ಹೊರಟುಹೋದನು. ದೂರ್ವಾಸ ಮುನಿಯ ಆಗಮನದಿಂದ ಲಕ್ಷ್ಮಣನು ಶ್ರೀರಾಮನಿಂದ ತ್ಯಜಿಸಲ್ಪಟ್ಟು ಸ್ವರ್ಗವನ್ನು ಹೊಂದಿದನು.

**ತತ್ವ||** ದೂರ್ವಾಸರೆಂದರೆ—ಜಗತ್‌ಸಂಹಾರಕಾಲದಲ್ಲಿ ಕಾಲಾಗ್ನಿಯೋಪಾದಿಯಲ್ಲಿ ಇರುವವನೆಂದರ್ಥವೆಂದು ಶಿವಸಹಸ್ರನಾಮ ಭಾಷ್ಯದಲ್ಲಿ ಹೇಳಿರುವುದು. ಜಗತ್‌ಸಂಹಾರ ಕಾಲದ ತತ್ವವಾದ ದೇಹಪತನಕಾಲದಲ್ಲಿ ಪಾದದಲ್ಲಿರುವ ಕಾಲಾಗ್ನಿಯು ತನ್ನ ಸ್ಥಳ ಬಿಟ್ಟು ಪಾದದಿಂದ ಮೇಲಕ್ಕೆ ಇರುವ ಶಾಖಗಳನ್ನು ನುಂಗಿಕೊಂಡುಬರುವುದರ ಮೂಲಕ ದೇಹ ದಲ್ಲಿನ ಸರ್ವಶಕ್ತಿಗಳನ್ನೂ ತಮ್ಮ ತಮ್ಮ ಗೋಳಕಸ್ಥಾನಗಳಿಂದ ಹೊರಡಿಸುವ ಕಾರ್‍ಯದ ತತ್ವವೇ ದೂರ್ವಾಸರು ಬಂದು ಭೋಜನಮಾಡಿದುದು. ಇಂದ್ರಿಯಕಾರ್ಯಗಳೆಲ್ಲಾ ಕುಗ್ಗಿ ಕ್ರಿಯಾತ್ಮಕವು ನಶಿಸುವ ಸೂಚನೆಯೇ ಕ್ರಿಯಾಪ್ರೇರಕವಾಗಿದ್ದ ಮನಸ್ಸಿನಲ್ಲಿರುವ ಪ್ರತಿ ಫಲನವು ಪ್ರಥಮದಲ್ಲಿ ಹೋಗುವ ತತ್ವವೇ ಲಕ್ಷ್ಮಣನು ಪ್ರಥಮದಲ್ಲಿ ವಿಷ್ಣುಪದವನ್ನು ಸೇರಿದುದಾಗಿದೆ.

**ರಾ||** ಶ್ರೀರಾಮನು ಕುಶಲವರ ಶಿರವನ್ನಾಘ್ರಾಣಿಸಿ ಕೋಸಲ, ಉತ್ತರದೇಶವೆಂಬ ಸ್ಥಳಗಳಲ್ಲಿ ರಾಜ್ಯಾಭಿಷೇಕಮಾಡಿದನು. ಇದರಂತೆ ಲಕ್ಷ್ಮಣ ಭರತ ಶತ್ರುಘ್ನರ ಇಬ್ಬಿಬ್ಬರು ಮಕ್ಕಳು ಪ್ರತ್ಯೇಕ ಪ್ರತ್ಯೇಕ ಸ್ಥಳಗಳಲ್ಲಿ ಪಟ್ಟಾಭಿಷಿಕ್ತರಾದರು.

**ತತ್ವ||** ಪರೋಕ್ಷಜ್ಞಾನ ಅಪರೋಕ್ಷಜ್ಞಾನಾಧಿಕಾರಗಳಲ್ಲಿರುವವರು ಅಭಿವೃದ್ಧಿಗೆ ಬಂದು ಪ್ರತಿಷ್ಠಿತರಾಗಲೆಂಬ ಕರುಣೆಯಿಂದ ಬ್ರಹ್ಮಜ್ಞಾನಿಯು ಆಶೀರ್ವಾದಮಾಡುವ ತತ್ವವೇ ಕುಶಲವರ ಪಟ್ಟಾಭಿಷೇಕದ ತತ್ವ. ಇದರಂತೆ ವಿರಕ್ತಿ, ನಿರಭಿಮಾನ, ಅಸ್ವಾರ್ಥತೆ ಗಳೆಲ್ಲೂ ಎರಡೆರಡು ಭಾಗವಾಗಿ ಅಭಿವೃದ್ಧಿಗೆ ಬಂದು ಪ್ರತಿಷ್ಠಿತವಾಗುವ ತತ್ವವೇ ಲಕ್ಷ್ಮಣ ಭರತ ಶತ್ರುಘ್ನರ ಪುತ್ರರ ಪಟ್ಟಾಭಿಷೇಕದ ತತ್ವವಾಗಿರುವುದು.

**ರಾ||** ಶ್ರೀರಾಮನು ರಾಕ್ಷಸಾಧಿಪತಿಯಾದ ವಿಭೀಷಣನನ್ನು ಕುರಿತು ಲಂಕಾಪಟ್ಟಣ ದಲ್ಲಿರುವವನಾಗಿ ಸೂರ್ಯ ಚಂದ್ರ ಭೂಮಿ ನನ್ನ ಕಥೆಯೂ ಎಲ್ಲಿಯವರೆಗೆ ಇರುವುದೋ ಅಲ್ಲಿಯವರೆಗೆ ರಾಜ್ಯವು ನಿನಗೆ ಆಗಲಿ. ಉತ್ತರವನ್ನು ಹೇಳದೆ ನನ್ನ ಆಜ್ಞೆಯನ್ನು ನಡೆಸ ತಕ್ಕದ್ದು. ಅಲ್ಲದೆ ಇಕ್ಷ್ವಾಕುವಂಶದ ಕುಲದೇವರಾದ ಜಗನ್ನಾಥನನ್ನು ಆರಾಧಿಸಿ ಕೊಂಡಿರತಕ್ಕದ್ದು" ಎಂದು ಹೇಳಿದನು.

**ತತ್ವ||** ಎಲ್ಲಿಯವರೆಗೆ ಭೂಲೋಕ ಸೂರ್ಯಚಂದ್ರಾದಿಗಳು ಇರುವರೋ ಎಲ್ಲಿಯ ವರೆಗೆ ಶ್ರೀರಾಮಕಥೆಯ ತತ್ವವಾದ ಜೀವಿತವಿರುವುದೋ ಅಲ್ಲಿಯವರೆಗೆ ವಿಭೀಷಣನಿಗೆ

ರಾಜ್ಯವಿರಲೆಂದರೆ—ಧರ್ಮಮಾರ್ಗಕ್ಕೆ ಯಾವಾಗಲೂ ಸ್ಥಿರತ್ವವಿರಲೆಂಬ ತತ್ವವಾಗಿರುವುದು. ಅಂದರೆ ಯಾವಾಗಲೂ ಧರ್ಮಮಾರ್ಗವೇ ಸ್ಥಿರತ್ವವನ್ನು ಹೊಂದಬೇಕೆನ್ನುವುದು ಈಶ್ವರಾಜ್ಞೆಯೆಂಬ ತತ್ವದ ಸೂಚನೆಯೇ ಶ್ರೀರಾಮನು ತನ್ನ ಆಜ್ಞೆಯೆಂದು ಹೇಳಿದುದರ ತತ್ವವಾಗಿರುವುದು. ಇಕ್ಷ್ವಾಕುಕುಲಕ್ಕೆ ದೇವರಾದ ಜಗನ್ನಾಥನನ್ನು ಆರಾಧಿಸಿಕೊಂಡಿರು ಎಂದರೆ—ಸಗುಣಬ್ರಹ್ಮನಾದ ಸೂರ್ಯನಾರಾಯಣನನ್ನು ಆರಾಧಿಸೆಂಬ ತತ್ವವಾಗಿರುವುದು.

ರಾ|| ಶ್ರೀರಾಮನು ಹನುಮಂತನನ್ನು ಕುರಿತು ಜೀವಿತಸ್ಥಾನದಲ್ಲಿ ನಿಶ್ಚಯಿಸಲ್ಪಟ್ಟ ಬುದ್ಧಿಯುಳ್ಳವನಾಗಿ ನೀನು ಮಾಡಿದ ಪ್ರತಿಜ್ಞೆಯನ್ನು ನೋಡಬೇಡ. ಎಲ್ಲಿಯವರೆಗೆ ನನ್ನ ಚರಿತ್ರೆಗಳು ಪ್ರಸಿದ್ಧಿಯಾಗಿರುವುವೋ ಅಲ್ಲಿಯವರೆಗೆ ಸಂತೋಷಚಿತ್ತನಾಗಿ ನನ್ನ ವಾಕ್ಯವನ್ನು ಪರಿಪಾಲಿಸುತ್ತಾ ಸುಖಿಸು. ಎಂದು ಹೇಳಿದನು. ಹನುಮಂತನು ನಿನ್ನ ಆಜ್ಞೆಯನ್ನು ಪರಿಪಾಲಿಸುವೆನೆಂದು ಶ್ರೀರಾಮನಿಗೆ ಹೇಳಿದನು.

ತತ್ವ|| ಹನುಮಂತನು ಶ್ವಾಸೋಚ್ಛ್ವಾಸದ ತತ್ವದವನಷ್ಟೆ! ಶ್ರೀರಾಮಚರಿತ್ರೆಯು ಪ್ರಸಿದ್ಧಿಯಾಗಿರುವವರೆಗೆಂದರೆ—ಜೀವಿತವು ಎಲ್ಲಿಯವರೆಗೆ ಇರುವುದೋ ಅಲ್ಲಿಯವರೆಗೆ ಹನುಮಂತನ ಪ್ರತಿಜ್ಞೆಯಾದ ಶ್ರೀರಾಮಸ್ಮರಣೆ ಮಾಡುತ್ತಿರುವ ತತ್ವವಾದ ಹಂಸ ಗಾಯತ್ರೀಮಂತ್ರವನ್ನು ಶ್ವಾಸೋಚ್ಛ್ವಾಸವು ಜಪಿಸುತ್ತಿರುವುದೆಂಬ ತತ್ವವಾಗಿರುವುದು. ಅಂದರೆ ಹನುಮಂತನ ತತ್ವವಾದ ಶ್ವಾಸೋಚ್ಛ್ವಾಸವು ರಾಮಧ್ಯಾನದ ತತ್ವವಾದ ಹಂಸ ಗಾಯತ್ರೀ ಜಪವನ್ನು ಅನವರತವೂ ಮಾಡುತ್ತಿರುವುದೆಂಬ ತತ್ವವಾಗಿರುವುದು. ಈ ತಾತ್ಪರ್ಯಕ್ಕೆ ಧ್ಯಾನಬಿಂದು ಮುಂತಾದ ಅನೇಕ ಉಪನಿಷತ್ತುಗಳಲ್ಲಿ

> ಹಕಾರೇಣಬಹಿರ್ಯಾತಿ ಸಕಾರೇಣವಿಶೇತ್ಪುನಃ |
> ಹಂಸಹಂಸೇತ್ಯಮುಂಮಂತ್ರಂಜೀವೋಜಪತಿಸರ್ವದಾ |

ತಾ|| ಹಕಾರದಿಂದ ಹೊರಗೆ ಬರುತ್ತದೆ. ಪುನಃ ಸಕಾರದಿಂದ ವಾಸ (ನಿಲುವಿಕೆ) ಮಾಡುತ್ತದೆ. ಹಂಸ ಹಂಸವೆಂಬ ಮಂತ್ರವನ್ನು ಜೀವನು (ಶ್ವಾಸೋಚ್ಛ್ವಾಸವು) ಸರ್ವದಾ ಜಪಿಸುತ್ತಾನೆ. ಎಂದು ಹೇಳಿದೆ.

ರಾ|| ಶ್ರೀರಾಮನು ಆತ್ಮಸ್ವರೂಪವನ್ನು ಧ್ಯಾನಮಾಡುತ್ತ ಮನೆಯಿಂದ ಹೊರಟನು. ಲಕ್ಷ್ಮೀದೇವಿಯೂ, ಮಹಾದೇವಿಯೂ, ಕೋಪವೂ, ಆಯುಧಗಳೂ, ಕೋದಂಡವೂ ಗಾಯ ಶ್ರೀದೇವಿಯು, ಓಂಕಾರವಷಟ್ಕಾರಗಳೆಲ್ಲಾ ಬ್ರಾಹ್ಮಣರೂಪದಿಂದ ಶ್ರೀರಾಮನನ್ನು ಅನುಸರಿಸಿದುವು. ಸ್ತ್ರೀಯರು ಪುರುಷರು, ನರರು, ಶತ್ರುಘ್ನ, ಭರತ, ಭೂತಗಳು, ಜಂತುಗಳು, ಸರ್ವವೂ ಶ್ರೀರಾಮನೊಡನೆ ಹೊರಟವು. ಅಯೋಧ್ಯೆಯಲ್ಲಿ ಒಂದು ಜಂತುವೂ ಇಲ್ಲದಂತಾದವು. ಹೀಗೆ ಹೊರಟ ಶ್ರೀರಾಮನು ಸರ್ವರೊಡನೆ ಸರಯೂನದಿಗೆ ಬಂದು ನದಿಯಲ್ಲಿ

ನಡೆದುಹೋಗುತ್ತಿರುವಲ್ಲಿ ಚತುರ್ಮುಖಬ್ರಹ್ಮನು ಅಂತರಿಕ್ಷದ ವಾಣಿಯಿಂದ ಎಲೈ ಶ್ರೀರಾಮನೆ "ಬಾರಯ್ಯಾ, ದೈವಾಧೀನದಿಂದ ಬಂದವನಾದೆ. ತಮ್ಮಂದಿರೊಡಗೂಡಿದ ಪ್ರಸಿದ್ಧವಾದ ಸ್ವಕೀಯವಾದ ವಿಷ್ಣುಸಂಬಂಧವಾದ ಶರೀರವನ್ನು ಪ್ರವೇಶಿಸು. ಎಲೈ ದೇವನೆ, ನೀನು ಲೋಕಕ್ಕೆಲ್ಲ ಗಮ್ಯಸ್ಥಾನವಷ್ಟೆ! ಯಾರೂ ವಿಶಾಲಾಕ್ಷಿಯಾದ ನಿನ್ನ ಹಿಂದಿನ ಹೆಂಡತಿ ಸ್ವರೂಪವಾದ ಮಾಯೆಯನ್ನು ಬಿಟ್ಟು ನಿನ್ನನ್ನು ಅರಿಯಲಾರರು" ಎಂದು ಹೇಳಿದನು. ಶ್ರೀರಾಮನು ಚತುರ್ಮುಖನ ಮಾತನ್ನು ಕೇಳುತ್ತಾ ಸಶರೀರಿಯಾಗಿ ತಮ್ಮಂದಿರೊಡಗೂಡಿ ವಿಷ್ಣುಸಂಬಂಧವಾದ ತೇಜಸ್ಸನ್ನು ಪ್ರವೇಶಮಾಡಿದನು. ಅನಂತರ ವಿಷ್ಣುಸ್ವರೂಪನಾದ ದೇವನನ್ನು ದೇವತೆಗಳು ಮೊದಲುಗೊಂಡು ಸರ್ವರೂ ಪೂಜಿಸಿದರು.

**ತತ್ವ||** ಶ್ರೀರಾಮನು ಒಂದು ಜಂತುವೂ ಇಲ್ಲದಂತೆ ಸರ್ವರೊಡನೆ ಸರಯೂನದಿಗೆ ಹೊರಟನೆಂದರೆ - ದೇಹದಲ್ಲಿರುವ ಸಕಲತತ್ವಗಳೂ ದೇಹವನ್ನು ಬಿಡಲು ಮೆಲ್ಲನೆ ಹೊರಡಲು ಪ್ರಾರಂಭವೆಂಬ ತತ್ವವಾಗಿರುವುದು. ಬುದ್ಧಿಪ್ರತಿಫಲಿತಚೈತನ್ಯವು ಕೌಸಲ್ಯೆಯ ತತ್ವದಲ್ಲಿರುವ ಬುದ್ಧಿಯು ನಾಶವಾದನಂತರ ಪ್ರತಿಫಲಿತತ್ವವನ್ನು ಬಿಟ್ಟು ಸರ್ವವ್ಯಾಪಕವಾದ ಪರಬ್ರಹ್ಮನಾಗಲು ಹೋಗುವ ವಿಧಾನವೇ ಶ್ರೀರಾಮನು ಸರಯೂನದಿಯಲ್ಲಿ ನಡೆದು ಹೋಗುತ್ತಿದ್ದುದರ ತತ್ವವಾಗಿರುವುದು. ಶ್ರೀರಾಮನು ಹೊರಟನಂತರ ಅಯೋಧ್ಯೆಯೇ ಪಾಳಾಯಿತೆಂದರೆ—ತತ್ವಜಿಜ್ಞಾಸಿಯಲ್ಲದ್ದ ಈಶ್ವರಸೋಪಾನವೂ ಕೂಡ ಹೋಯಿತೆಂಬ ತತ್ವವಾಗಿರುವುದು. ಅಂದರೆ ವಿದೇಹಕೈವಲ್ಯದ ತತ್ವವಾದ ಪರಬ್ರಹ್ಮಸ್ವರೂಪದಲ್ಲಿ ಈಶ್ವರ ಮೊದಲುಗೊಂಡು ಯಾವ ಸೋಪಾನವೂ ಇಲ್ಲವೆಂಬ ತತ್ವವಾಗಿದೆ. ಶ್ರೀರಾಮನು ಸರಯೂನದಿಯಲ್ಲಿ ಹೋಗುತ್ತಿರುವಾಗ ಚತುರ್ಮುಖಬ್ರಹ್ಮನು "ಎಲೈ ಶ್ರೀರಾಮನೆ ಬಾರಯ್ಯಾ ದೈವಾಧೀನದಿಂದ ಬಂದವನಾದೆ. ತಮ್ಮಂಧಿರೊಡಗೂಡಿದ ಪ್ರಸಿದ್ಧವಾದ ಸ್ವಕೀಯವಾದ ವಿಷ್ಣುಸಂಭಂದವಾದ ಶರೀರವನ್ನು ಪ್ರವೇಶಮಾಡು" ಎಂದು ಅಶರೀರವಾಕ್ಕಿನಿಂದ ಹೇಳಿದ ತತ್ವವೇನೆಂದರೆ—ಪ್ರತಿಫಲನಚೈತನ್ಯನು ಸರ್ವವ್ಯಾಪಕವಾದ ಪರಬ್ರಹ್ಮನಾಗುವ ಕಾಲ ಒದಗಿ ಬಂದುದೇ ದೈವಾಧೀನದಿಂದ ಬಂದವನಾದೆ ಎಂದು ಚತುರ್ಮುಖಬ್ರಹ್ಮನು ಹೇಳಿದ ವಾಕ್ಯದ ತತ್ವವಾಗಿರುವುದು.

ಮಹಾವಿಷ್ಣುವೇ ಶ್ರೀರಾಮ, ಲಕ್ಷ್ಮಣ, ಭರತ, ಶತ್ರುಘ್ನರಾಗಿದ್ದ ತತ್ವದಂತೆ ಪರಬ್ರಹ್ಮನೇ ಅಂತಃಕರಣವೆಂದರೆ ಬುದ್ಧಿ, ಮನಸ್ಸು ಅಹಂಕಾರ ಚಿತ್ತಗಳಲ್ಲಿ ಪ್ರತಿಫಲಿತಚೈತನ್ಯನೆನಿಸಿತ್ತು. ಬುದ್ಧಿ, ಮನಸ್ಸು ಅಹಂಕಾರಸ್ವರೂಪವಾದ ಅಂತಃಕರಣಕ್ಕೆ ನಾಶ ಬರಲು ಪ್ರತಿಫಲನಚೈತನ್ಯಗಳೆಲ್ಲಾ ಒಟ್ಟುಗೂಡಿದ ಪರಬ್ರಹ್ಮಸ್ಥಿತಿಯಾಗುವುದೆಂಬ ತತ್ವಪ್ರತಿಪಾದನೆಯೇ ತಮ್ಮಂದಿರೊಡಗೂಡಿದ ದೇಹಪ್ರವೇಶಮಾಡೆಂದು ಚತುರ್ಮುಖ ಬ್ರಹ್ಮನು ಹೇಳಿದುದಾಗಿದೆ. ಚತುರ್ಮುಖಬ್ರಹ್ಮನು ಪ್ರವೇಶಮಾಡೆಂದು ಹೇಳಿದ ಪರಬ್ರಹ್ಮ

ತತ್ವವನ್ನು ಪ್ರತಿಪಾದನೆಮಾಡುವ ದೇಹವು ಇನ್ನೂ ಹೇಗಿರುವುದೆಂದರೆ—ಸ್ವಕೀಯವಾದು ದೆಂದರೆ ತನ್ನನ್ನು ಬಿಟ್ಟು ಅನ್ಯವಾದುದಲ್ಲ. ವಿಷ್ಣುಸಂಬಂಧವಾದುದೆಂದರೆ ಆದ್ಯಂತರಹಿತ ವಾದ ಸರ್ವವ್ಯಾಪಕವಾದ ಶರೀರವೆಂದರೆ ಪರಬ್ರಹ್ಮಸ್ವರೂಪವನ್ನೇ ಪ್ರತಿಪಾದಿಸುವುದು. ಚತುರ್ಮುಖನು ಶ್ರೀರಾಮನೊಡನೆ "ಯಾರೂ ವಿಶಾಲಾಕ್ಷಿಯಾದ ನಿನ್ನ ಹಿಂದಿನ ಹೆಂಡತಿ ಸ್ವರೂಪವಾದ ಮಾಯೆಯನ್ನು ಬಿಟ್ಟು ನಿನ್ನನ್ನು ಅರಿಯಲಾರರು" ಎಂದು ಹೇಳಿದುದರ ತತ್ವವೇನೆಂದರೆ—ಹಿಂದಿನ ಹೆಂಡತಿಯೇ ಸೀತಾದೇವಿಯು ತತ್ವವಾದ ಶುದ್ಧಸತ್ವಪ್ರಧಾನ ಮಾಯೆಯು. ಈ ಶುದ್ಧಸತ್ವಪ್ರಧಾನಮಾಯೆಯೇ ಪ್ರವೃತ್ತಿನಿವೃತ್ತಿಮಾರ್ಗಗಳಲ್ಲಿ ನಿವೃತ್ತಿ ಮಾರ್ಗಕ್ಕೆ ಅಧಿಕಾರಿಣಿಯು. ಅವಳ ಅನುಗ್ರಹವಿಲ್ಲದೆ ಯಾರೂ ನಿನ್ನನ್ನು ಸಾಕ್ಷಾತ್ಕರಿಸಿ ಕೊಳ್ಳಲಾರರೆಂಬ ತತ್ವಪ್ರತಿಪಾದನೆಯಾಗಿದೆ.

ಶ್ರೀರಾಮನು ಚತುರ್ಮುಖಬ್ರಹ್ಮನ ಮಾತನ್ನು ಕೇಳುತ್ತಾ ಸಶರೀರಿಯಾಗಿ ತಮ್ಮಂದಿ ರೊಡಗೂಡಿ ವಿಷ್ಣುಸಂಬಂಧವಾದ ತೇಜಸ್ಸನ್ನು ಪ್ರವೇಶಮಾಡಿದುದರ ತತ್ವವೇನೆಂದರೆ - ಬುದ್ಧಿಯಲ್ಲಿದ್ದ ಪ್ರತಿಫಲನಚೈತನ್ಯವು ಮನಸ್ಸು, ಅಹಂಕಾರ, ಚಿತ್ತಗಳಲ್ಲಿದ್ದ ಪ್ರತಿಫಲನ ಚೈತನ್ಯದೊಡಗೂಡಿ ಸರ್ವವ್ಯಾಪಕವಾದ ಸ್ವಯಂಪ್ರಕಾಶವಾದ ಪರಬ್ರಹ್ಮಚೈತನ್ಯದಲ್ಲಿ ಸೇರಿತೆಂಬ ತತ್ವವಾಗಿದೆ. ಸಶರೀರಿಯಾಗಿ ಸೇರಿದನೆಂದರೆ—ಶ್ರೀರಾಮ ಎಂಬ ಹೆಸರಿನಲ್ಲಿ ದ್ದಾಗ ಯಾವ ಶರೀರವಿತ್ತೋ ಅಂತಹ ಶರೀರವೇ ವಿಷ್ಣುಸ್ವರೂಪವಾದ ತೇಜಸ್ಸಿನಲ್ಲಿ ಪ್ರವೇ ಸಿಸಿ ಭೇದವಿಲ್ಲದಂತೆಯೇ ಆದುದರಿಂದ ಶ್ರೀರಾಮನೆಂಬ ಹೆಸರಿನಲ್ಲಿದ್ದ ಶರೀರ ಮತ್ತು ಮಹಾ ವಿಷ್ಣುಶರೀರಗಳೆರಡೂ ಒಂದೇ. ಅಂದರೆ ಜೀವಬ್ರಹ್ಮಚೈತನ್ಯಗಳೆರಡೂ ಒಂದೇ ಎಂಬುದನ್ನೂ ಜೀವಚೈತನ್ಯವು ಪರಬ್ರಹ್ಮಚೈತನ್ಯದಲ್ಲಿ ಸಶರೀರಿಯಾಗೆಂದರೆ, ಇದ್ದಂತೆಯೇ ಸೇರಿ ಭೇದ ವಿಲ್ಲದಂತಾಗುವುದೆಂಬುದನ್ನೂ ಪ್ರತಿಪಾದಿಸುವುದು.

ಹೇಗೆಂದರೆ ಪ್ರತಿಫಲನದ ಬೆಳಕು ಸರ್ವವ್ಯಾಪಕವಾದ ಬೆಳಕಿನಿಂದುಂಟಾಗುವುದು. ಸರ್ವವ್ಯಾಪಕವಾದ ಬೆಳಕಿನ ಚೈತನ್ಯವೂ ಪ್ರತಿಫಲನದ ಬೆಳಕಿನ ಚೈತನ್ಯವೂ ಒಂದೇ. ಬಿಸಿ ಲಿನಲ್ಲಿ ಗಾಜನ್ನು ಹಿಡಿದರೆ ಗಾಜಿನಿಂದ ಹೊರಡುವ ಪ್ರತಿಫಲನಚೈತನ್ಯಕ್ಕೆ ಬಿಸಿಲಿನಂತೆ ಸುಡುವ ಶಕ್ತಿ ಇದ್ದೇ ಇರುವುದರಿಂದ ಬಿಸಿಲಿನ ಚೈತನ್ಯ ಪ್ರತಿಫಲನಚೈತನ್ಯಗಳೆರಡೂ ಒಂದೇ. ಗಾಜು ನಾಶವಾಗುವ ಕಾಲದಲ್ಲಿ ಪ್ರತಿಫಲನಚೈತನ್ಯ ಭೇದವಾಗದೆ ಬಿಸಿಲಿನ ಚೈತನ್ಯವಾಗುತ್ತದೆ. ಇದರಂತೆ ಜೀವ ಪರಬ್ರಹ್ಮರ ಚೈತನ್ಯವು ಭೇದವಿಲ್ಲದ್ದರಿಂದ ಒಂದಾಗಿ ಸೇರಿಕೊಳ್ಳುವುದು. ಈ ತತ್ವಾರ್ಥಸಮರ್ಥನೆಗೆ ಅನೇಕ ಉಪನಿಷತ್ತುಗಳಲ್ಲೂ ಶ್ರೀಕೃಷ್ಣಪರ ಮಾತ್ಮನ ಉತ್ತರಗೀತೆಯಲ್ಲೂ ಶ್ರೀಶಂಕರಭಗವತ್ಪಾದರವರ ವಿವೇಕಚೂಡಾಮಣಿ ೪೬೭ನೆಯ ಶ್ಲೋಕದಲ್ಲೂ,

ಕ್ಷೀರಂಕ್ಷೀರೇಯಥಾಕ್ಷಿಪ್ತಂ ತೈಲಂ ತೈಲೇಜಲಂ ಜಲೇ |
ಸಂಯುಕ್ತಮೇಕತಾಂಯಾತಿ ತಥಾತ್ಮನ್ಯಾತ್ಮವಿನ್ಮುನಿಃ ||

ತಾ|| ಹಾಲನ್ನು ಹಾಲಿನಲ್ಲಿಯೂ, ಎಣ್ಣೆಯನ್ನು ಎಣ್ಣೆಯಲ್ಲಿಯೂ ಜಲವನ್ನು ಜಲದಲ್ಲಿಯೂ ಹಾಕಿದರೆ ಭೇದಿಸದೆ ಏಕವಾಗುವಂತೆ, ತತ್ವಜ್ಞನಾದ ಮಹಾತ್ಮನು ಪರಬ್ರಹ್ಮನಲ್ಲಿ ಏಕೀಭಾವವನ್ನು ಹೊಂದುತ್ತಾನೆಂದರೆ ಪರಮಾತ್ಮನೇ ಆಗುತ್ತಾನೆ. ಎಂದು ಹೇಳಿದೆ.

ಶ್ರೀರಾಮನು ಮಹಾವಿಷ್ಣುಸಂಬಂಧವಾದ ತೇಜಸ್ಸನ್ನು ಸಶರೀರಿಯಾಗಿ ಪ್ರವೇಶಿಸಿದನೆಂದು ಇರುವುದರಿಂದ ರಾಮಾವತಾರಮಾಡಿದ್ದಾಗ ಸ್ವರ್ಗವು ಪಾಳಾಗಿರದೆ ಅಲ್ಲಿ ಮಹಾವಿಷ್ಣುವಿದ್ದನೆಂದೇ ಹೇಳಬೇಕಾಗುವುದು. ಇದರಂತೆ ಪ್ರತಿಫಲಿತಚೈತನ್ಯ ಉಂಟಾದರೂ ಪರಬ್ರಹ್ಮವು ತ್ರಿಕಾಲಾಬಾಧಿಕವಾಗಿ ತನ್ನಷ್ಟಕ್ಕೆ ತಾನು ಇದ್ದೇ ಇರುವುದು. ಅಲ್ಲದೆ ಬಿಂಬವು ಪ್ರತಿಬಿಂಬವೆನಿಸಿದರೂ ಮಹಾವಿಷ್ಣು ರಾಮರು ಹೇಗೆ ಒಂದೆಯೋ ಹಾಗೆಯೇ ಪರಬ್ರಹ್ಮನು ಮತ್ತು ಪ್ರತಿಫಲನ (ಜೀವ) ಚೈತನ್ಯಗಳೂ ಒಂದೇ. ಆದುದರಿಂದ ಶ್ರೀರಾಮನು ಸಶರೀರಿಯಾಗಿಯೇ ಮಹಾವಿಷ್ಣುವಾದಂತೆ ಪ್ರತಿಫಲಿತಚೈತನ್ಯವು (ಜೀವಚೈತನ್ಯವು) ಕೂಡ ರೂಪವ್ಯತ್ಯಾಸವಾಗದೇನೆ ಪರಬ್ರಹ್ಮವೇ ಆಗುವುದು. ಪ್ರತಿಫಲನತ್ವದಿಂದಲೇ ಸರ್ವ ಅವತಾರಗಳಾಗಿರುವುವು. ಹೀಗೆ ಅವತಾರಮಾಡಿದರೂ ನಿತ್ಯಮುಕ್ತಸ್ವಭಾವದಲ್ಲಿಯೇ ಅವತಾರಪುರುಷರಿರುವರು.

ಈ ತತ್ವಗಳೇ ಶ್ರೀರಾಮನು ಸಶರೀರಿಯಾಗಿ ವಿಷ್ಣುಪದವನ್ನು ಹೊಂದಿದ್ದಾಗಿದೆ. ಶ್ರೀರಾಮನು ವಿಷ್ಣುಪದವನ್ನು ಹೊಂದಿದನಂತರ ವಿಷ್ಣುಸ್ವರೂಪನಾದ ಸ್ವಾಮಿಯನು ದೇವತೆಗಳು ರಾಕ್ಷಸರು ಮೊದಲುಗೊಂಡು ಸರ್ವರೂ ಪೂಜಿಸಿದ ತತ್ವವೇನೆಂದರೆ—ಸರ್ವವ್ಯಾಪಕನಾದ ಅದ್ವಿತೀಯನಾದ ಸ್ವಯಂಪ್ರಕಾಶನಾದ ಪರಬ್ರಹ್ಮನೇ ದೇವತೆಗಳು ಮೊದಲುಗೊಂಡು ಸರ್ವರಿಂದಲೂ ಪೂಜಾರ್ಹನಾದವನೆಂತಲೂ, ಯಾವ ದೇವರುಗಳನ್ನು ಪೂಜೆ ಮಾಡಿದರೂ ಉಪಾಸನೆಮಾಡಿದರೂ ಸ್ಮರಣೆಮಾಡಿದರೂ ಪರಬ್ರಹ್ಮಭಾವನೆಯಿಂದಲೇ ಮಾಡಬೇಕೆಂತಲೂ ವ್ಯಕ್ತಪಡಿಸುವುದು.

**ರಾ||** ಚತುರ್ಮುಖಬ್ರಹ್ಮನು ಮಹಾವಿಷ್ಣುವಿನ ಆಜ್ಞೆಯಂತೆ ಶ್ರೀರಾಮನ ಪುರೋವರ್ತಿಗಳಾಗಿದ್ದ ಜನಗಳಿಗೆ ಬ್ರಹ್ಮಲೋಕಕ್ಕಿಂತಲೂ ಮೇಲಿರುವ ಸಾಂತಾನಿಕಲೋಕವಾಸದಲ್ಲಿರುವಂತೆ ಮಾಡಿದುದಲ್ಲದೆ ಯಾವ ತಿರ್ಯಗ್ಜಂತುವೇ ಆಗಲಿ ಶ್ರೀರಾಮನಲ್ಲಿಯೇ ನೆಟ್ಟ ಮನಸ್ಸುಳ್ಳದ್ದಾಗಿ ಪ್ರಾಣಬಿಟ್ಟರೆ ಆ ಜಂತುಗಳೂ ಕೂಡ ಸಾಂತಾನಿಕಲೋಕದಲ್ಲಿ ವಾಸಮಾಡಲೆಂದು ನುಡಿದನು.

ತತ್ವ|| ಶ್ರೀರಾಮನ ಪುರೋವರ್ತಿಗಳಾಗಿದ್ದ ಜನಗಳೆಂದರೆ—ತತ್ವಜ್ಞಾನಿಯನ್ನು ಸ್ನೇಹದಿಂದ ಅನುಸರಿಸಿಕೊಂಡಿದ್ದವರೂ, ತತ್ವಜ್ಞಾನಿಯ ಸೇವೆಮಾಡಿದವರೂ, ತತ್ವಜ್ಞಾನಿಯ ಹಿತ ಬಂಧುವರ್ಗದವರೂ, ಸಾಂತಾನಿಕಲೋಕದ ತತ್ವವಾದ ಸಾಧುಸತ್ಪುರುಷರೇ ಇದ್ದು ಜ್ಞಾನಾಭಿವೃದ್ಧಿಯಾಗುವ ಸ್ಥಳವನ್ನು ಹೊಂದಿ ಇದರಿಂದ ಉತ್ತರೋತ್ತರ ಕೃತಕೃತ್ಯರಾಗುವರೆಂಬ ತತ್ವಪ್ರತಿಪಾದಕವಾಗಿದೆ. ಇಂತಹ ಸಾಧುಸತ್ಪುರುಷರಿದ್ದು ಜ್ಞಾನಾಭಿವೃದ್ಧಿಯಾಗುವ ಸ್ಥಳವು ಚತುರ್ಮುಖಬ್ರಹ್ಮಲೋಕಕ್ಕಿಂತಲೂ ಮೇಲಾದ ಲೋಕವೆಂಬ ತತ್ವ ಪ್ರತಿಪಾದನೆಯೇ ಸಾಂತಾನಿಕಲೋಕವು ಬ್ರಹ್ಮಲೋಕಕ್ಕಿಂತಲೂ ಮೇಲಿದೆಯೆಂಬ ತತ್ವವಾಗಿರುವುದು. ಯಾವ ತಿರ್ಯಗ್ಜಂತುವೇ ಆಗಲಿ ಮಹಾತ್ಮನಾದ ತತ್ವಜ್ಞಾನಿಯಲ್ಲಿ ನೆಟ್ಟಮನಸ್ಸುಳ್ಳದ್ದಾಗಿ ಪ್ರಾಣಬಿಟ್ಟರೆ ಅಂತಹ ಪ್ರಾಣಿಗೂ ಮೇಲೆ ಹೇಳಿದ ಸಾಂತಾನಿಕ ಲೋಕದ ತತ್ವಪ್ರಾಪ್ತಿಯಾಗುವುದೆಂಬುದನ್ನೂ ಪ್ರತಿಪಾದಿಸುವುದು.

ರಾ|| ವಾನರರೂ, ಕರಡಿಗಳೂ ತಮ್ಮ ತಮ್ಮ ಉತ್ಪತ್ತಿಸ್ಥಾನಗಳಾದ ದೇವತೆಗಳು ಮತ್ತು ಋಷಿಗಳನ್ನು ಹೊಂದಿದರು. ಸುಗ್ರೀವನೂ ಬ್ರಹ್ಮವಿಷ್ಣುರುದ್ರತ್ರಯ ತನುವೆನಿಸಿದ ಸೂರ್ಯನನ್ನು ಹೊಂದಿದನು.

ತತ್ವ|| ವಾನರರೂ ಕರಡಿಗಳೂ ದೇವತೆಗಳವತಾರವಾಗಿ ನಾಡೀ ಮತ್ತು ಇಂದ್ರಿಯಗಳ ತತ್ವದವರಾಗಿ ಮನುಷ್ಯರಲ್ಲಿರುವರೆಂಬುದನ್ನು ಹಿಂದೆಯೇ ತಿಳಿಸಿತ್ತಷ್ಟೆ! ವಿದೇಹ ಕೈವಲ್ಯದಲ್ಲಿ ಪ್ರಾಣಾದಿಕಲೆಗಳೂ ಇಂದ್ರಿಯಗಳೂ ತಮ್ಮತಮ್ಮಮೂಲಕಾರಣವಾದ ದೇವತಾ ಶಕ್ತಿಗಳಲ್ಲಿ ಸೇರುವ ತತ್ವವೇ ವಾನರರೂ ಕರಡಿಗಳೂ ತಮ್ಮ ತಮ್ಮ ಉತ್ಪತ್ತಿಸ್ಥಾನಗಳಾದ ದೇವತೆಗಳು ಮತ್ತು ಋಷಿಗಳನ್ನು ಹೊಂದಿದುದಾಗಿರುವುದು. ಇದರಂತೆಯೇ ಸುಗ್ರೀವನು ಸೂರ್ಯನನ್ನು ಹೊಂದಿದುದಾಗಿರುವುದು. ಈ ತತ್ವಾರ್ಥ ಮತ್ತು ಶ್ರೀರಾಮನು ವಿಷ್ಣುಶರೀರನಾದ ತತ್ವಾರ್ಥ ಸಮರ್ಥನೆಗೆ ಮುಂಡಕೋಪನಿಷತ್ತಿನಲ್ಲಿ,

> ಗತಾಃ ಕಲಾಃ ಪಂಚದಶಪ್ರತಿಷ್ಠಾ ದೇವಾಶ್ಚ ಸರ್ವೇಪ್ರತಿದೇವತಾಸು |
> ಕರ್ಮಾಣಿವಿಜ್ಞಾನಮಯಶ್ಚ ಆತ್ಮಾಪರೇವ್ಯಯೇಸರ್ವಏಕೀಭವನ್ತಿ ||

ತಾ|| ವಿದೇಹಮುಕ್ತಿಯಲ್ಲಿ ದೇಹಾರಂಭಕ್ಕೆ ಕಾರಣವಾಗಿದ್ದ ಪ್ರಾಣಾದಿ ಕಲೆಗಳು ಪ್ರಕೃತಿಯಲ್ಲಿ ಲಯವನ್ನು ಹೊಂದುತ್ತವೆ. ಇಂದ್ರಿಯಗಳು ತಮ್ಮ ತಮ್ಮ ಮೂಲಕಾರಣವಾದ ದೇವತಾಶಕ್ತಿಗಳಲ್ಲಿ ಸೇರಿಹೋಗುತ್ತವೆ. ಜನ್ಮಜನ್ಮಾಂತರಗಳಿಂದ ಬಂದಿದ್ದ ಕರ್ಮಗಳೆಲ್ಲಾ ಪರಬ್ರಹ್ಮನಲ್ಲಿ ಭಸ್ಮವಾಗಿಹೋಗುತ್ತವೆ. ಜೀವಾತ್ಮನೋ ತನ್ನ ನಿಜವಾದ ಪರಮಾತ್ಮಸ್ವರೂಪನಾಗುತ್ತಾನೆ. ಎಂದು ಹೇಳಿದೆ.

ಇದುವರೆಗೂ ವಿದೇಹಮುಕ್ತಿಯ ವಿಚಾರವನ್ನು ತಿಳಿಸಿತು. ತತ್ವಜ್ಞಾನಿಗಳಲ್ಲದ ಇತರರು ಮರಣಕಾಲದಲ್ಲಿ ವಿದೇಹಕೈವಲ್ಯದ ತತ್ವವನ್ನು ಪಡೆಯಲಾರರು. ದೇಹವಿನಾಶವಾಗುವ ಕಾಲದಲ್ಲಿ ದೇಹಕ್ಕೆ ರೋಗಾದಿಗಳು ಬರುವುದು ಜ್ಞಾನಿ ಅಜ್ಞಾನಿಗಳಿಗೆ ಸಮವಾಗಬಹುದು. ಪಾಂಚಭೌತಿಕವಾದ ದೇಹವಾದ್ದರಿಂದ ದೇಹನಾಶವಾಗಲು ಕಾರಣರೂಪವಾಗಿ ರೋಗಾದಿಗಳು ಸಾಧಾರಣ ಮನುಷ್ಯರಂತೆ ತತ್ವಜ್ಞಾನಿಗೂ ಬರಬಹುದು. ಆದರೆ ಉತ್ಕ್ರಮಣಕಾಲದಲ್ಲಿ ಸಾಧಾರಣರು ಉತ್ಕ್ರಮಣಾವಸ್ಥೆಯಿಂದ ಜನ್ಮಾದಿಗಳನ್ನು ಪಡೆಯುವರು. ತತ್ವಜ್ಞಾನಿಗೆ ಉತ್ಕ್ರಮಣಾವಸ್ಥೆ ಇಲ್ಲವೆ ಇದುವರೆಗೂ ವಿವರಿಸಿಕೊಂಡು ಬಂದ ತತ್ವದಂತೆ ವಿದೇಹಕೈವಲ್ಯವನ್ನೇ ಪಡೆಯುವನು. ಸಾಧಾರಣರಲ್ಲಿ ವಾಸನಾರೂಪವಾದ ಅಜ್ಞಾನವು ನಾಶವಾಗಿ ದೇಹದ ಮಾಯಾಬಲೆಯು ಛಿದ್ರವಾಗಿಲ್ಲವುದರಿಂದ ಕೌಸಲ್ಯಾದಿಗಳ ಮರಣದಂತೆ ಅಂತಃಕರಣಕ್ಕೆ ನಾಶವಾಗಿರುವುದಿಲ್ಲ. ಹೀಗಾಗುವುದರಿಂದ ಇಂದ್ರಿಯಗಳೂ ಕೂಡ ಬಲೆಯಲ್ಲಿಯೇ ಬಂಧಿಸಿರುತ್ತವೆ. ಪ್ರಾಣೋತ್ಕ್ರಮಣಕಾಲದಲ್ಲಿ ವಾಸನಾರೂಪವಾದ ಅಜ್ಞಾನ, ಇಂದ್ರಿಯಗಳು, ಪಂಚಪ್ರಾಣಗಳು, ದೂರ್ವಾಸರು ಶ್ರೀರಾಮನಲ್ಲಿಗೆ ಬಂದು ಭೋಜನಮಾಡಿದ ತತ್ವದಂತೆ ತಮ್ಮ ತಮ್ಮ ಗೋಳಕಸ್ಥಾನಗಳಿಂದ ಹೊರಡಿಸಲ್ಪಡುವುದರಿಂದ ಅಂತಃಕರಣದ ಒಂದು ಭಾಗವಾದ ಚಿತ್ತದಲ್ಲಿ ಬೀಜರೂಪವಾಗಿ ನಿಲ್ಲುತ್ತವೆ. ಯಾವಾಗ ಅಂತಃಕರಣಕ್ಕೆ ನಾಶಬರುವುದಿಲ್ಲವೋ ಪ್ರತಿಬಿಂಬಚೈತನ್ಯನಾದ ಜೀವನು ಯಥಾಸ್ಥಿತಿಯಾಗಿರುವನು. ಪ್ರಾಣೋತ್ಕ್ರಮಣಕಾಲದಲ್ಲಿ ಇಂದ್ರಿಯಾದಿಗಳೊಡನೆ ಅಂತಃಕರಣವು ಒಂದು ವಸ್ತ್ರ ಹೋದರೆ ಮತ್ತೊಂದು ವಸ್ತ್ರವನ್ನು ಜನಗಳು ಧರಿಸುವಂತೆ, ಈ ಸ್ಥೂಲದೇಹವನ್ನು ಬಿಟ್ಟು ಮತ್ತೊಂದು ಸ್ಥೂಲದೇಹವನ್ನು ಪಡೆಯಲು ಹೊರಡುವುದು ತತ್ವಜ್ಞಾನಿಯಲ್ಲದ ಇತರರಿಗೆ ಹೀಗಾಗುವ ತತ್ವಕ್ಕೆ ಶ್ರೀಕೃಷ್ಣಪರಮಾತ್ಮನು ಉತ್ತರಗೀತೆಯಲ್ಲಿ,

ಧರ್ಮಾಧರ್ಮೌ ಮನಶ್ಚೈವ ಪಂಚಭೂತಾನಿ ಯಾನಿಚ ।
ಇಂದ್ರಿಯಾಣಿಚ ಪಂಚೈವ ಯಾಶ್ಚಾನ್ಯಾಃ ಪಂಚದೇವತಾಃ ॥
ಅತ್ರೈವಮನಸಾ ಸರ್ವಾನ್ ನಿತ್ಯಮೇವಾಭಿಮಾನತಃ ।
ಜೀವೇನಸಹಗಚ್ಛಂತಿ ಯಾವತ್ತತ್ವಂನವಿಂದತಿ ॥

ತಾ॥ ಪುಣ್ಯಪಾಪಗಳು ಅಂತಃಕರಣ, ಪಂಚಮಹಾಭೂತಗಳು, ಇಂದ್ರಿಯಗಳು, ಪ್ರಾಣಾದಿಗಳು ಈ ದೇಹದಲ್ಲಿದ್ದು ಜೀವನೊಡನೆ ಕೂಡಿಕೊಂಡು ಎಲ್ಲಿಯವರೆಗೆ ಆತ್ಮಸಾಕ್ಷಾತ್ಕಾರವಾಗುವುದಿಲ್ಲವೋ ಅಲ್ಲಿಯವರೆಗೂ ಸ್ಥೂಲದೇಹಗಳನ್ನು ಪಡೆಯುತ್ತಿರುವುವು. ಎಂದು ಹೇಳಿರುವನು. ಆದುದರಿಂದ ತತ್ವಜ್ಞಾನಿಗೆ, ಸಾಧಾರಣರಿಗೆ ಇರುವಂತೆ

ಉತ್ಕ್ರಮಣಾವಸ್ಥೆ ಇರುವುದಿಲ್ಲವೆಂದರೆ ಅಂತಃಕರಣಾದಿಗಳು ದೇಹದಿಂದ ಹೊರಕ್ಕೆ ಹೋಗುವುದಿಲ್ಲ. ದೇಹದಲ್ಲಿಯೇ ಅಂತಃಕರಣವು ನಿರೂಪವಾಗುವುದರಿಂದ ಅಲ್ಲಿಯೇ ಪ್ರತಿಫಲನಚೈತನ್ಯನು ( ಜೀವ ಚೈತನ್ಯನು ) ಪರಬ್ರಹ್ಮನಾಗುವನು. ಈ ತತ್ವಾರ್ಥಕ್ಕೆ ಛಾಂದೋಗ್ಯೋಪನಿಷತ್ತಿನಲ್ಲಿ,

ನತಸ್ಯಪ್ರಣಾ ಉತ್ಕ್ರಾಮಂತ್ಯತ್ರೈವಸ |
ಮವಲೀಯಂತೇ ಬ್ರಹ್ಮೈವಸ್ಸ ಬ್ರಹ್ಮಾಪ್ಯೇತಿ ||

ತಾ|| ಮರಣಕಾಲದಲ್ಲಿ ಅಜ್ಞಾನಿಗಳ ಜೀವವು ಈ ಶರೀರದಿಂದುತ್ಕ್ರಮಣಗೈಯು ವಂತೆ ತತ್ವಜ್ಞಾನಿಯ ಜೀವವು ಈ ಶರೀರದಿಂದ ಹೊರಗೆ ಹೋಗುವುದಿಲ್ಲವೆಂತಲೂ, ಜೀವವು ಶರೀರದ ಅಂತಃಕರಣದಲ್ಲಿಯೇ ಲಯವಾಗಿ ಬ್ರಹ್ಮರೂಪವಾಗುವುದು ಎಂದೂ ಹೇಳಿದೆ.

ಈ ಮೇಲಿನ ತತ್ವಾರ್ಥಗಳಿಂದ ಯಾವ ಲೋಕಗಳಿಗೆ ಹೋದರೂ ಮುಕ್ತಿಯೆನಿಸುವುದಿಲ್ಲ. ರಾವಣನವಧೆ, ಸೀತಾಭೂಪ್ರವೇಶ ಮತ್ತು ಕೌಸಲ್ಯಾದಿಗಳ ಮರಣದ ತತ್ವವನ್ನು ಹೊಂದದೇ ಇರತಕ್ಕವರು ಈ ದೇಹವನ್ನು ಬಿಟ್ಟು ಯಾವ ಲೋಕಗಳಿಗೆ ಹೋದರೂ ಹಿಂದಿರುಗಬೇಕಾಗುವುದು. ಕಾರಣವೇನೆಂದರೆ, ರಾವಣನ ತತ್ವವಾದ ವಾಸನಾಮಯವಾದ ಅಜ್ಞಾನನಾಶವಾಗಿಲ್ಲವಾಗಿ ಕೌಸಲ್ಯಾದಿಗಳ ತತ್ವವಾದ ಅಂತಃಕರಣವೂ ನಾಶವಾಗದೆ ಇರುವುದರಿಂದ ಸುಕೃತದಿಂದ ಲೋಕಗಳು ಪ್ರಾಪ್ತಿಯಾದರೂ ಮುಕ್ತಿಯೆನಿಸುವುದಿಲ್ಲ. ರಾವಣನ ವಧೆ, ಕೈಕೇಯಿ ಮರಣದ ತತ್ವವಾದ ವಿದೇಹಕೈವಲ್ಯವನ್ನು ಪಡೆದರೆ ಯಾವ ಲೋಕದ ಗಮನಕ್ಕೂ ಅವಕಾಶವಿರದೆ, ಇಲ್ಲಿಯೇ ಶ್ರೀರಾಮನು ವಿಷ್ಣುಶರೀರವನ್ನು ಪ್ರವೇಶಮಾಡಿದ ತತ್ವವಾದ ಪರಬ್ರಹ್ಮಪದವಿಯು ಬೇಡ ಬೇಡವೆಂದರೂ ದೊರಕುವುದು. ಇದೇ ವೇದದ ಸಾರ. ಇದೇ ವೇದಮತ. ಉಪನಿಷತ್ತುಗಳಲ್ಲಿ ಲೋಕಗಳ ವಿಚಾರ ಹೇಳಿದ್ದರೂ ಇವುಗಳ ಶಬ್ದಾರ್ಥದ ಮೇಲೆಯೇ ಭಾವಾರ್ಥವಾದ ಗೂಢಾರ್ಥಗಳು ದೊರೆಯುವುದಿಲ್ಲ. ನಮ್ಮ ಶಾಸ್ತ್ರದಲ್ಲಿ ಭಾವಾರ್ಥವೇ ಮುಖ್ಯವಾದುದರಿಂದ ಕೆಲವು ಮಹಾನುಭಾವರು ಇದರ ಗೂಢಾರ್ಥವನ್ನು ತಿಳಿದುಕೊಳ್ಳುತ್ತಾರೆ. ಆದುದರಿಂದ ಯಾವಲೋಕಕ್ಕೆ ಹೊದರೂ ಮುಕ್ತಿಯೆನಿಸಿಕೊಳ್ಳುವುದಿಲ್ಲವಾದುದರಿಂದ ಶ್ರೀರಾಮಚಂದ್ರನು ವಿಷ್ಣುಶರೀರವನ್ನು ಪ್ರವೇಶ ಮಾಡಿದ ತತ್ವವಾದ ಪರಬ್ರಹ್ಮನಾಗುವಿಕೆಯೇ ಪುನರಾವರ್ತಿ ಇಲ್ಲದ ಮೋಕ್ಷದ ನಿಶ್ಚಯವಾದ ತತ್ವ. ಈ ತತ್ವಸಮರ್ಥನೆಗೂ ಶ್ರೀಕೃಷ್ಣಪರಮಾತ್ಮನು ಭಗವದ್ಗೀತಾ ೮ನೇ ಅಧ್ಯಾಯ ೧೬ನೇ ಶ್ಲೋಕದಲ್ಲಿ,

ಆ ಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋರ್ಜುನ
ಮಾಮುಪೇತ್ಯತುಕೌನ್ತೇಯ ಪುನರ್ಜನ್ಮನವಿದ್ಯತೇ ||

ತಾ|| ಬ್ರಹ್ಮಲೋಕ ಮೊದಲುಗೊಂಡು ಯಾವ ಲೋಕಕ್ಕೆ ಹೋದರೂ ಹಿಂದಿರುಗ ಬೇಕಾಗುವುದು. ನನ್ನನ್ನು ( ವಿಷ್ಣುವನ್ನು ) ಪಡೆದನಂತರ ಹಿಂದಿರುಗುವುದೆಂಬುದೇ ಇಲ್ಲ. ಎಂದು ಹೇಳಿರುವನು.

ಈ ತಾತ್ಪರ್ಯಕ್ಕನುಸಾರವಾಗಿ ಶ್ರೀಶಂಕರಭಗವತ್ಪಾದರವರ ವಿವೇಕಚೂಡಾಮಣಿ ೫೬೮ ನೇ ಶ್ಲೋಕದಲ್ಲಿಯೂ ಮತ್ತು ಪೈಂಗಲೋಪನಿಷತ್ತಿನಲ್ಲಿಯೂ,

ಏವಂ ವಿದೇಹಕೈವಲ್ಯಂ ಸನ್ಮಾತ್ರತ್ವಮಖಂಡಿತಂ |
ಬ್ರಹ್ಮಭಾವಂ ಪ್ರಪದ್ಯೈಷಯತಿರ್ನಾವರ್ತತೇಪುನಃ ||

ತಾ|| ಈ ಮೇರೆಗೆ ವಿದೇಹಕೈವಲ್ಯವೆಂಬ ಅಖಂಡಸತ್ತಾಸ್ವರೂಪವಾದ ಬ್ರಹ್ಮ ಭಾವವನ್ನು ಹೊಂದಿದ ಇಂತಹ ಯತಿಯು ಪುನಃ ಹಿಂದಿರುಗುವುದಿಲ್ಲವು.

ಜೀವನ್ಮುಕ್ತಃ ಪದಂತ್ಯಕ್ತ್ವಾಸ್ವದೇಹೇ ಕಾಲಸಾತ್ಕೃತೇ |
ವಿಶತ್ಯದೇಹ ಮುಕ್ತತ್ವಂ ಪವನೋಸ್ಪಂದತಾಮಿವ ||
ಅಶಬ್ದಮಸ್ಪರ್ಶಮರೂಪಮವ್ಯಯಂ ತಥಾರಸಂನಿತ್ಯಮಗಂಧವಚ್ಚಯತ್ |
ಅನಾದ್ಯನಂತಂಮಹಿತಃಪರಂ ಧ್ರುವಂತದೇವಶಿಷ್ಯತ್ಯಮಲಂನಿರಾಮಯಮಿತಿ||

ತಾ|| ತತ್ವಜ್ಞಾನಿಯು ಕಾಲವಶದಿಂದ ಜೀವನ್ಮುಕ್ತಾವಸ್ಥೆಯನ್ನು ಬಿಟ್ಟು ವಿದೇಹ ಕೈವಲ್ಯವನ್ನು ಹೊಂದುತ್ತಾನೆ. ವಿದೇಹಮುಕ್ತಿಯಲ್ಲಿ ಶಬ್ದರಹಿತವಾಗಿಯೂ, ಸ್ಪರ್ಶರಹಿತ ವಾಗಿಯೂ, ನಾಶರಹಿತವಾಗಿಯೂ, ರಸರಹಿತವಾಗಿಯೂ, ನಿತ್ಯವಾಗಿಯೂ, ಗಂಧರಹಿತ ವಾಗಿಯೂ, ಆದಿರಹಿತವಾಗಿಯೂ ಅಂತರಹಿತವಾಗಿಯೂ, ದೊಡ್ಡದಕ್ಕಿಂತಲೂ ದೊಡ್ಡ ದಾಗಿಯೂ, ನಿಶ್ಚಯವಾದದ್ದಾಗಿಯೂ, ನಿರ್ಮಲವಾದದ್ದಾಗಿಯೂ, ನಿರಾಮಯ ವಾಗಿಯೂ, ಇರತಕ್ಕದ್ದಾವುದೋ ಅದೇ ಉಳಿಯುತ್ತದೆ. ಅಂದರೆ ಪರಬ್ರಹ್ಮವೇ ಉಳಿಯುವುದು. ಎಂದು ಹೇಳಿದೆ.

**ರಾ||** ಅಯೋಧ್ಯಾಪಟ್ಟಣವೂ ಕೂಡಾ ಅನೇಕ ಸಂವತ್ಸರಗಳು ಪಾಳಾಗಿದ್ದು ಋಷಭನೆಂಬ ರಾಜನನ್ನು ಪಡೆಯುವುದು.

**ತತ್ವ||** ಅಯೋಧ್ಯಾಪಟ್ಟಣದ ತತ್ವವಾದ ಈಶ್ವರಸೋಪಾನವೂ ಕೂಡಾ ಅನೇಕ ಕಾಲ ಪಾಳಾಗಿರುತ್ತದೆ. ಕಾರಣವೇನೆಂದರೆ ಈ ಸೋಪಾನವನ್ನು ಪಡೆಯುವವರು ಅತ್ಯಂತ ವಿರಳ. ಋಷಭರಾಜನ ತತ್ವವಾದ (ಪ್ರತಿಗಚ್ಛತಿ) ಪರಬ್ರಹ್ಮನನ್ನು ಅನುಸರಿಸಿಕೊಂಡು ಹೋಗುವವರು ಪಡೆಯುವರೆಂಬ ತತ್ವವಾಗಿರುವುದು.

**ರಾ||** ಸ್ವರ್ಗಲೋಕದಲ್ಲಿ ಪೂರ್ವದಂತೆಯೇ ಶ್ರೀಮಹಾವಿಷ್ಣುವು ಪ್ರತಿಷ್ಠಿತನಾದನು.

**ತತ್ವ॥** ಸ್ವರ್ಗಲೋಕವೆಂದರೆ—ತನಗೆ ಪ್ರಾಪ್ಯಸ್ಥಳವಾಗಿಯೂ ಸದ್ರೂಪವಾಗಿಯೂ ಇರುವ ಸ್ಥಳ. ಪೂರ್ವದಂತೇ ಅಂದರೆ—ಮೊದಲಿನಂತೆ, ಮಹಾವಿಷ್ಣುವೆಂದರೆ—ಆದ್ಯಂತ ರಹಿತನಾಗಿಯೂ ಸರ್ವವ್ಯಾಪಕನಾಗಿಯೂ ಇರುವ ಪರಬ್ರಹ್ಮನು, ಪ್ರತಿಷ್ಠಿತನಾದ ನೆಂದರೆ—ನಿಂತನು. ಅಂದರೆ ಪರಬ್ರಹ್ಮ ಒಂದೇ ಉಳಿಯುವ ಸ್ಥಿತಿಯೆಂದರ್ಥ.

ಮೇಲಿನ ವಾಕ್ಯದ ಮುಖ್ಯತಾತ್ಪರ್ಯವೇನೆಂದರೆ—ಸೃಷ್ಟಿಸ್ಥಿತಿಗಳಿಲ್ಲದೆ ಆದಿಯಲ್ಲಿ ಪರಬ್ರಹ್ಮ ಒಂದೇ ಇತ್ತು. ಸೃಷ್ಟಿಸ್ಥಿತಿಗಳು ಹೋಗಿ ಪುನಃ ಪರಬ್ರಹ್ಮ ಒಂದೇ ಉಳಿದು ಕೊಳ್ಳುವ ಸ್ಥಿತಿಯಾಗಿರುವುದು. ಈ ತತ್ವವು ಬ್ರಹ್ಮಾಂಡ ಪಿಂಡಾಂಡಗಳೆರಡಕ್ಕೂ ಅನ್ವಯಿ ಸುವುದು. ಪಿಂಡಾಂಡಸ್ವರೂಪರಾದ ಮನುಷ್ಯರಲ್ಲಿ ಎಲ್ಲೋ ಒಬ್ಬೊಬ್ಬರು ಮುಕ್ತರಾದರೆ ಉಳಿದ ಪ್ರಾಣಿಗಳೂ ಪ್ರಪಂಚವೂ ಹಾಗೆಯೇ ಇರುತ್ತೆಂದು ತಿಳಿಯಬಾರದು. ಪ್ರಪಂಚವೇ ಇಲ್ಲದಂತಾಗಿ ಪರಬ್ರಹ್ಮ ಒಂದೇ ಉಳಿಯುವ ಸ್ಥಿತಿಯೂ ಬರುವುದು. ಹೀಗಾಗಬೇಕಾದರೆ ಎಷ್ಟು ಕಲ್ಪಾಂತರಗಳೋ ಗೊತ್ತಿಲ್ಲ. ಅಲ್ಲಿಯವರೆಗೂ ಜನನಮರಣ ರೂಪವಾದ ಸಂಸಾರವನ್ನನುಭವಿಸದೆ ಉತ್ತೀರ್ಣರಾಗಲು ಕರುಣಾಳುವಾದ ಪರಮಾತ್ಮನು ಮೋಕ್ಷಮಾರ್ಗವೆಂಬುದನ್ನು ಮನುಷ್ಯನಿಗೆ ಮಾತ್ರ ಕೊಟ್ಟಿರುವನು.

ವಿದೇಹಕೈವಲ್ಯವನ್ನು ಪಡೆದ ಮನುಷ್ಯನ ಇಂದ್ರಿಯಾದಿ ಕಲೆಗಳು ಮೂಲಸ್ಥಾನ ವಾದ ದೇವತೆಗಳಲ್ಲಿ ಸೇರುವುವೆಂದು ಮೇಲೆ ತಿಳಿಸಿತಷ್ಟೆ! ದೇವತೆಗಳೂ, ಪಂಚಭೂತ ಗಳೂ, ಕೊನೆಗೆ ಈಶ್ವರನೂ ಇಲ್ಲದಂತಾಗಿ ಪರಬ್ರಹ್ಮ ಒಂದೇ ಉಳಿದುಕೊಳ್ಳುವ ಸ್ಥಿತಿ ಯಾಗುವುದು. ಅದೇ ಶಾಶ್ವತವಾದುದೆಂಬ ತತ್ವಪ್ರತಿಪಾದನೆಯ ಸೂಚನೆಯೇ ಶ್ರೀಮಹಾ ವಿಷ್ಣುವು ಸ್ವರ್ಗದಲ್ಲಿ ಪೂರ್ವದಂತೆಯೇ ಪ್ರತಿಷ್ಠಿತನಾದುದಾಗಿರುವುದು. ಈ ತತ್ವಾರ್ಥ ಸಮರ್ಥನೆಗೆ ಶ್ರೀಕೃಷ್ಣಪರಮಾತ್ಮನು ಭಗವದ್ಗೀತಾ ೮ನೆಯ ಅಧ್ಯಾಯ ೨೦ನೆಯ ಶ್ಲೋಕದಲ್ಲಿ,

> ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ಸನಾತನಃ ।
> ಯಃಸರ್ವೇಷು ಭೂತೇಷು ನಶ್ಯತ್ಸು ನವಿನಶ್ಯತಿ ॥

ತಾ॥ ಮಹಾಸೂಕ್ಷ್ಮರೂಪವಾದ ಶುದ್ಧಸತ್ವಪ್ರಕೃತಿಗಿಂತಲೂ ಅಸ್ಪಷ್ಟರೂಪವುಳ್ಳ, ಬಹುಪುರಾತನವಾಗಿಯೂ, ಶ್ರೇಷ್ಠವಾಗಿಯೂ, ಎಲ್ಲವೂ ನಾಶವಾದರೂ ನಾಶವಾಗದೆ ಇರುವ ಇನ್ನೊಂದು ವಸ್ತುವುಂಟು. ಎಂದು ಹೇಳಿದಾನೆ.

ಶ್ರೀಕೃಷ್ಣಪರಮಾತ್ಮನ ವಾಕ್ಯದಲ್ಲಿ ಸರ್ವವೂ ನಾಶವಾಗುವುದೆಂಬುದು ಸ್ಪಷ್ಟವಾಗಿರು ವುದು. ಇದೇ ತಾತ್ಪರ್ಯಕ್ಕೆ ಶ್ರೀವಿದ್ಯಾರಣ್ಯರವರು ಕೂಡ ಪಂಚದಶಿ ಚಿತ್ರದೀಪಿಕೆಯಲ್ಲಿ,

ಅದ್ವಿತೀಯಂ ಬ್ರಹ್ಮತತ್ವೇ ಸ್ವಪ್ನೋಯಮಖಿಲಂ ಜಗತ್ |
ಈಶಜೀವಾದಿ ರೂಪೇಣ ಚೇತನಾ ಚೇತನಾತ್ಮಕಂ ||

ತಾ|| ಈಶ್ವರರೂಪದಿಂದಲೂ, ಜೀವರೂಪದಿಂದಲೂ, ಜಗದ್ರೂಪದಿಂದಲೂ ವರ್ತಿಸುತ್ತಲಿರುವ ಚೇತನರೂಪವಾಗಿಯೂ ಅಚೇತನರೂಪವಾಗಿಯೂ ತೋರುವ ಸಮಸ್ತವಾದ ಪ್ರಪಂಚವೂ ಅದ್ವಿತೀಯನಾದ ಪರಬ್ರಹ್ಮರೂಪದಲ್ಲಿ ಸ್ವಪ್ನಸಮಾನವಾಗಿರುವುದು. ಎಂದು ಹೇಳಿರುವರು.

ಜಗತ್ತೆಲ್ಲಾ ಮಾಯಾಮಾತ್ರವಾದ್ದರಿಂದ ಸ್ವಪ್ನಸದೃಶವೆನ್ನುವುದಕ್ಕೆ "ತ್ರಯಮೇತತ್ಸುಷುಪ್ತಂ ಸ್ವಪ್ನಮಾಯಾಮಾತ್ರಂ" ಎಂಬ ಶ್ರುತ್ಯಾಧಾರವೂ ಇರುವುದು ಇಷ್ಟೊಂದು ಭೂಮಿ, ಜಲ, ಅದ್ಭುತವಾದ ಪರ್ವತಗಳಿವೆ. ಇವುಗಳೆಲ್ಲಾ ನಾಶವಾಗುವುದು ಹೇಗೆಂಬ ಯೋಚನೆ ಬರಬಹುದು. ಆತ್ಯಂತಿಕಪ್ರಳಯಕಾಲದಲ್ಲಿ ಪಾತಾಳದಲ್ಲಿರುವ ಅಗ್ನಿಯು ಎದ್ದು ವಾಯುವಿನ ಸಹಾಯದೊಡನೆ ಪರ್ವತ ಮುಂತಾದವುಗಳನ್ನೆಲ್ಲಾ ಕರಗಿಸಿ ಸೃಷ್ಟಿಕಮಕ್ಕೆ ವ್ಯತಿರಿಕ್ತವಾಗಿ ಭೂಮಿಯು ಜಲವಾಗಿ ಜಲವು ಅಗ್ನಿಯಾಗಿ ಅಗ್ನಿಯು ವಾಯುರೂಪಕ್ಕೆ ಬಂದು ವಾಯುವು ಆಕಾಶವಾಗಿ ಆಕಾಶವೂ ಹೋಗಿ ಪರಬ್ರಹ್ಮ ಒಂದೇ ಉಳಿದುಕೊಳ್ಳುತ್ತದೆ. ಈ ತತ್ವಾರ್ಥಸಮರ್ಥನೆಗೆ ಶ್ರೀಕೃಷ್ಣಪರಮಾತ್ಮನು ಉತ್ತರಗೀತೆಯಲ್ಲಿ,

ಬ್ರಹ್ಮಾಂಡರೂಪಿಣೀ ಪೃಥ್ವೀ ತೋಯಮಧ್ಯೇವಿಲೀಯತೆ |
ಅಗ್ನಿನಾಪೀಯತೆ ತೋಯಂ ವಾಯುನಾ ಗ್ರಸತೇನಲಃ ||
ಆಕಾಶಂತು ಪಿಬೇದ್ವಾಯುಂ ಮನಶ್ಚಾ ಕಾಶಮೇವಚ |
ಬುದ್ಧ್ಯಹಂಕಾರ ಚಿತ್ತಂತುಕ್ಷೇತ್ರಜ್ಞಂ ಪರಮಾತ್ಮನೀ ||

ತಾ|| ಬ್ರಹ್ಮಾಂಡರೂಪವಾದ ಭೂಮಿಯು ಉದಕದಲ್ಲಿ ಲಯವಾಗುವುದು. ಉದಕವು ಅಗ್ನಿಯಿಂದ ಹೀರಲ್ಪಡುವುದು. ಅಗ್ನಿಯು ವಾಯುವಿನಿಂದ ನುಂಗಲ್ಪಡುತ್ತದೆ. ವಾಯುವನ್ನು ಆಕಾಶವು ನುಂಗಿಬಿಡುವುದು. ಮನಸ್ಸು ಆಕಾಶವನ್ನು ಲಯಮಾಡಿಕೊಳ್ಳುತ್ತದೆ. ಬುದ್ಧಿ, ಅಹಂಕಾರ, ಚಿತ್ತ ಕ್ಷೇತ್ರಜ್ಞಗಳು ಒಂದರಲ್ಲೊಂದು ಲಯವಾಗಿ ಕೊನೆಗೆ ಕ್ಷೇತ್ರಜ್ಞನೂ ಪರಮಾತ್ಮನಲ್ಲಿ ಲಯವಾಗುತ್ತಾನೆ. ಎಂದು ಹೇಳಿದಾನೆ.

ಭೂಮ್ಯಾದಿಗಳೆಲ್ಲಾ ಒಂದರಲ್ಲೊಂದು ಲಯವಾಗಿ ಪರಮಾತ್ಮಭಾವವನ್ನೆ ಹೊಂದಿ ಪರಮಾತ್ಮ ಒಂದೇ ಉಳಿಯುವ ತತ್ವಕ್ಕೆ ಶ್ರೀಶಂಕರಭಗವತ್ಪಾದರವರು ವಿವೇಕಚೂಡಾಮಣಿ ಎಂಬ ಗ್ರಂಥದಲ್ಲಿ ಶ್ಲೋಕಗಲ್ಲಿ,

ಪಾಷಾಣವೃಕ್ಷ ತೃಣಧಾನ್ಯಕಡಂಕರಾದ್ಯಾ |
ದಗ್ಧಾಭವನ್ತಿಹಿ ಮೃದೇವ ಯಥಾತಥೈವ ||
ದೇಹೇನ್ದ್ರಿಯಾಸುಮನ ಆದಿಸಮಸ್ತದೃಷ್ಟಂ |
ಜ್ಞಾನಾಗ್ನಿದಗ್ಧಮುಪಯಾತಿಪರಾತ್ಮಭಾವಂ ||

ತಾ|| ಕಲ್ಲು, ಮರ, ತೃಣ, ಧಾನ್ಯ, ಹುಲ್ಲು, ಮೊದಲಾದುವುಗಳು ಸುಟ್ಟಬಳಿಕ ಮಣ್ಣೇ ಆಗುವಂತೆ ದೇಹ ಇಂದ್ರಿಯ ಪ್ರಾಣ ಮನಸ್ಸು ಮೊದಲಾದ ಸಮಸ್ತವಾದ ಕಣ್ಣಿಗೆ ಕಾಣುವ ಪದಾರ್ಥವೆಲ್ಲಾ ಜ್ಞಾನಾಗ್ನಿಯಿಂದ ಸುಡಲ್ಪಟ್ಟು ಪರಮಾತ್ಮಭಾವವನ್ನೇ ಹೊಂದುತ್ತವೆ. ಎಂದು ಹೇಳಿರುವರು. ಆದುದರಿಂದ ಪರಬ್ರಹ್ಮ ಒಂದೇ ಉಳಿಯುವ ತತ್ವ ಪ್ರತಿಪಾದನೆಯೇ ಸ್ವರ್ಗದಲ್ಲಿ ಪೂರ್ವದಂತೆಯೇ ಶ್ರೀಮಹಾವಿಷ್ಣುವು ಪ್ರತಿಷ್ಠಿತನಾದುದು.

ಉತ್ತರಕಾಂಡವು ಇಲ್ಲಿಗೆ ಪೂರ್ಣವಾದುದು. ಉತ್ತರಕಾಂಡದ ಕೊನೆಯ ಸರ್ಗದಲ್ಲಿ "ಗಾಯತ್ರ್ಯಾಶ್ಚಸ್ವರೂಪಂ ತದ್ರಾಮಾಯಣಮನುತ್ತಮಮ್" ಎಂಬ ವಾಕ್ಯವಿರುವುದರಿಂದ ಗಾಯತ್ರೀ ಮೂಲಮಂತ್ರಕ್ಕೂ ಈ ಶ್ರೀಮದ್ರಾಮಾಯಣದ ಅಂತರಾರ್ಥಕ್ಕೂ ಸಮನ್ವಯಮಾಡಿ ತೋರಿಸಿ ಈ ಗ್ರಂಥಕ್ಕೆ ವಿಶೇಷಕಾಂತಿಯನ್ನು ಕೊಡೋಣ. ಈ ವಿಚಾರ ಪ್ರಾರಂಭಮಾಡುವುದಕ್ಕೆ ಪ್ರಥಮದಲ್ಲಿ ಪರಬ್ರಹ್ಮ ಒಂದೇ ಉಳಿಯುವ ಈ ಸ್ಥಿತಿಗೆ ಮಂಗಳಾಚರಣೆಯನ್ನು ಮಾಡಿ ಸಾಷ್ಟಾಂಗ ನಮಸ್ಕಾರಮಾಡೋಣ.

ತದ್ವಿಷ್ಣೋಃ ಪರಮಂಪದಂ | ಸದಾಪಶ್ಯಂತಿಸೂರಯಃ |
ದಿವೀವಚಕ್ಷುರಾತತಂ | ತದ್ವಿಪ್ರಾಸೋ |
ವಿಪನ್ಯವೋಜಾಗ್ರವಾಂಸಸ್ಸಮಿಂಧತೇ |
ವಿಷ್ಣೋರ್ಯತ್ಪರಮಂಪದಮ್ ||



## ೧೦೧ನೆಯ ಪ್ರಕರಣ

### ಗಾಯತ್ರೀಮಂತ್ರಕ್ಕೂ ಈ ತತ್ವಾರ್ಥರಾಮಾಯಣಕ್ಕೂ ಸಮನ್ವಯ.

ಶ್ರೀಮದ್ರಾಮಾಯಣದ ಉತ್ತರಕಾಂಡದ ನೂರಹತ್ತನೆಯ ಸರ್ಗದಲ್ಲಿ "ಗಾಯತ್ರ್ಯಾಶ್ಚ ಸ್ವರೂಪಂತದ್ರಾಮಾಯಣಮನುತ್ತಮಮ್" ಅಂದರೆ ಶ್ರೇಷ್ಠವಾದ ರಾಮಾಯಣವು ಗಾಯತ್ರೀದೇವಿಯ ಸ್ವರೂಪವಾಗಿರುವುದು, ಎಂದು ವಾಲ್ಮೀಕರು ಹೇಳಿರುವರು. ಆದುದರಿಂದ ಗಾಯತ್ರೀಮೂಲಮಂತ್ರವಾದ "ತತ್ಸವಿತುರ್ವರೇಣ್ಯಂ ಭರ್ಗೋದೇವಸ್ಯ ಧೀಮಹಿ ಧಿಯೋಯೋನಃ ಪ್ರಚೋದಯಾತ್" ಎಂಬುವುದೇ ಶ್ರೀಮದ್ರಾಮಾಯಣ ವಾಗಿರುವುದೆಂಬುದನ್ನು ಪ್ರತಿಪಾದಿಸುತ್ತದೆ. ಗಾಯತ್ರೀಸ್ವರೂಪವು ೨೪ ಅಕ್ಷರವುಳ್ಳದ್ದು. ಈ ಗಾಯತ್ರೀ ೨೪ ಅಕ್ಷರಕ್ಕೆ ಸರಿಯಾಗಿ ಶ್ರೀಮದ್ರಾಮಾಯಣದಲ್ಲಿ ೨೪ ಸಾವಿರ ಶ್ಲೋಕ ಗಳಿವೆ. ಅಂದರೆ ಗಾಯತ್ರೀಮೂಲಮಂತ್ರದ ಒಂದೊಂದಕ್ಷರಕ್ಕೂ ಬಾಲಕಾಂಡದಿಂದ ಕ್ರಮವಾಗಿ ಒಂದೊಂದುಸಾವಿರ ಶ್ಲೋಕಗಳಿವೆ. ಆಯಾಯ ಸಾವಿರ ಶ್ಲೋಕಗಳ ಪ್ರಥಮಾ ಕ್ಷರವು ಗಾಯತ್ರೀಮೂಲಮಂತ್ರದ ಆಯಾಯ ಅಕ್ಷರಗಳಿಂದ ಪ್ರಾರಂಭವಾಗುವುದು. ಅಂದರೆ ಗಾಯತ್ರೀಮೂಲಮಂತ್ರದ ಒಂದೊಂದು ಅಕ್ಷರಕ್ಕೆ ರಾಮಾಯಣದ ಒಂದೊಂದು ಸಾವಿರ ಶ್ಲೋಕಗಳು ವ್ಯಾಖ್ಯಾನರೂಪದಲ್ಲಿರುವುದೆಂದರೆ ಪ್ರತಿಯೊಂದು ಅಕ್ಷರದ ಬಲ ಮತ್ತು ಸಾರವೆಲ್ಲಾ ಆಯಾಯ ಸಾವಿರ ಶ್ಲೋಕಗಳಲ್ಲಡಗಿರುವುದು. ಸ್ಥೂಲವಾಗಿ ರಾಮಾ ಯಣವನ್ನು ಓದಿದರೆ ಗಾಯತ್ರೀಮೂಲಮಂತ್ರದ ಅರ್ಥವನ್ನು ತಿಳಿಯಲಸಾಧ್ಯ. ರಾಮಾ ಯಣವು ಗಾಯತ್ರೀಸ್ವರೂಪವೇ ಎಂದು ವಾಲ್ಮೀಕರೇ ಹೇಳಿರುವುದರಿಂದ ಶ್ರೀಮದ್ರಾಮಾ ಯಣವು ಗಾಯತ್ರೀಮಂತ್ರಸ್ವರೂಪವಾದ ಆತ್ಮತತ್ವವನ್ನು ಒಳಗೊಂಡಿರುವುದೆಂಬುದು ವಿಶದವಾಗುವುದು. ಆದುದರಿಂದ ಆತ್ಮತತ್ವಪ್ರತಿಪಾದಕವಾದ ಗಾಯತ್ರೀ ಮೂಲ ಮಂತ್ರಕ್ಕೂ ರಾಮಾಯಣದ ಅಂತರಾರ್ಥವಾದ ಈ ಗ್ರಂಥದ ವಿಚಾರಕ್ಕೂ ಸಮನ್ವಯಮಾಡೋಣ.

ಗಾಯತ್ರೀಮೂಲಮಂತ್ರದ ಒಂದೊಂದಕ್ಷರದ ತತ್ವವನ್ನೂ ಈ ಗ್ರಂಥದಲ್ಲಿ ಬರುವ ತತ್ವಾರ್ಥಗಳಿಗೆ ಸಮನ್ವಯಮಾಡಬಹುದು. ಗ್ರಂಥಬಾಹುಳ್ಯವಾಗುವುದರಿಂದ ಗಾಯತ್ರೀ ಮೂಲಮಂತ್ರದ ಪದಗಳಿಗೆ ಅನ್ವಯಮಾಡಿ ಬರೆದಿದೆ. ಗಾಯತ್ರೀಮೂಲಮಂತ್ರದ ಅಕ್ಷರಗಳಿಗೆ ಅನ್ವಯವಾಗಿ ಬರುವ ಶ್ಲೋಕಗಳನ್ನೂ ಕೆಳಗೆ ಕೊಟ್ಟಿದೆ:—

| ಗಾಯತ್ರಿ. | ಶ್ಲೋಕಗಳು. |
|---|---|
| ೧. **ತತ್.** | ತಪಸ್ಸ್ವಾಧ್ಯಾಯನಿರತಂ ತಪಸ್ವೀವಾಗ್ವಿದಾಂವರಮ್<br>ನಾರದಂ ಪರಿಪಪ್ರಚ್ಛವಾಲ್ಮೀಕಿರ್ಮುನಿಪುಂಗವಮ್ \|\| |

೨. ಸವಿತುಃ.

ಸಹತ್ವಾ ರಾಕ್ಷಸಾನ್ಸರ್ವಾನ್ಯಜ್ಞಘ್ನಾನ್ರಘುನಂದನಃ ||
ಋಷಿಭಿಃ ಪೂಜಿತಸ್ಸಮ್ಯ ಗ್ಯಥೇನ್ದ್ರೋ ವಿಜಯೀಪುರಾ ||
ವಿಶ್ವಾಮಿತ್ರ ಸ್ಸಧರ್ಮಾತ್ಮಾ ಶೃತ್ವಾ ಜನಕಭಾಷಿತಂ |
ವತ್ಸ ರಾಮ ಧನುಃಪಶ್ಯ ಇತಿ ರಾಘವಮಬ್ರವೀತ್ ||
ತುಷ್ಟಾವಾಸ್ಯತದಾವಂಶಂ ಪ್ರವಿಶ್ಯ ಸವಿಶಾಂಪತೇಃ |
ಶಯನೀಯಂ ನರೇಂದ್ರಸ್ಯ ತದಾಸಾದ್ಯವ್ಯತಿಷ್ಠತ ||

೩. ವರೇಣಿಯಂ.

ವನವಾಸಂಹಿಸಂಖ್ಯಾಯ ವಾಸಾಂಸ್ಯಾಭರಣಾನಿಚ |
ಭರ್ತಾರಮನುಗಚ್ಛಂತ್ಯೈಸೀತಾಯೈಶ್ವಶುರೋದದಾ ||
ರಾಜಾಸತ್ಯಂಚಧರ್ಮಂಚರಾಜಾಕುಲವತಾಂಕುಲಂ|
ರಾಜಾಮಾತಾಪಿತಾಚೈವರಾಜಾಹಿತಕರೋನೃಣಾಂ ||
ನಿರೀಕ್ಷ್ಯಸಮುಹೂರ್ತಂತುದದರ್ಶಭರತೋಗುರುಂ !
ಉಟಜೇರಾಮಮಾಸೀನಂಜಟಾವಲ್ಕಲಧಾರಿಣಂ ||
ಯದಿಬುದ್ಧಿಃಕೃತಾದ್ರಷ್ಟುಮಗಸ್ತ್ಯಂತಂಮಹಾಮುನಿಂ |
ಅದ್ಯೈವಗಮನೇಬುದ್ಧಿಂರೋಚಯಸ್ವ ಮಹಾಯಶಃ ||

೪. ಭರ್ಗಃ.

ಭರತಸ್ಯಾರ್ಯಪುತ್ರಸ್ಯಶ್ವಶ್ರೂಣಾಂಮಮಚಪ್ರಭೋ |
ಮೃಗರೂಪಮಿದಂವ್ಯಕ್ತಂವಿಸ್ಮಯಂಜನಯಿಷ್ಯತಿ
ಗಚ್ಛಶೀಘ್ರಮಿತೋರಾಮ ಸುಗ್ರೀವಂತಂಮಹಾಬಲಂ|
ವಯಸ್ಯಂತಂಕುರುಕ್ಷಿಪ್ರಮಿತೋಗತ್ವಾದ್ಯರಾಘವ ||

೫. ದೇವಸ್ಯ.

ದೇಶಕಾಲೌಭಜಸ್ವಾದ್ಯಕ್ಷಮಮಾಣಃಪ್ರಿಯಾಪ್ರಿಯೆ |
ಸುಖದುಃಖಸಹಃಕಾಲೇಸುಗ್ರೀವವಶಗೋಭವ ||
ವಂದ್ಯಾಸ್ತೇತುತಪಸ್ಸಿದ್ಧಾಸ್ತಪಸಾವೀತಕಲ್ಮಷಾಃ |
ಪ್ರಷ್ಟವ್ಯಾಶ್ಚಾಪಿಸೀತಾಯಾಃಪ್ರವೃತ್ತಿರ್ವಿನಯಾನ್ವಿತೈಃ ||೧೨||
ಸನಿರ್ಜಿತ್ಯಪುರೀಂಶ್ರೇಷ್ಠಾಂಲಂಕಾಂತಾಂಕಾಮರೂಪಿಣೀಂ |
ವಿಕ್ರಮೇಣಮಹಾತೇಜಾಹನೂಮಾನ್ಕಪಿಸತ್ತಮಃ ||

೬. ಧೀಮಹಿ.

ಧನ್ಯಾದೇವಾಸ್ಸಗಂಧರ್ವಾಸ್ಸಿದ್ಧಾಶ್ಚಪರಮರ್ಷಯಃ |
ಮಮಪಶ್ಯಂತಿಯೇನಾಥಂರಾಮಂರಾಜೀವಲೋಚನಂ ||
ಮಂಗಳಾಭಿಮುಖೀತಸ್ಯಸಾತದಾಸೀನ್ಮಹಾಕಪೇಃ |
ಉಪತಸ್ಥೇವಿಶಾಲಾಕ್ಷೀಪ್ರಯತಾಹವ್ಯವಾಹನಂ ||
ಹಿತಂಮಹಾರ್ಥಂಮೃದುಹೇತುಸಂಹಿತಂ |
ವ್ಯತೀತಕಾಲಾಯತಿಸಂಪ್ರತಿಕ್ಷಮಂ ||
ನಿಶಮ್ಯತದ್ವಾಕ್ಯಮುಪಸ್ಥಿತ ಜ್ವರಃ |
ಪ್ರಸಂಗವಾನುತ್ತರಮೇತದಬ್ರವೀತ್ ||

೭. ಧಿಯೋಯೋನಃ

ಧರ್ಮಾತ್ಮಾರಕ್ಷಸಾಂಶ್ರೇಷ್ಠ ಸ್ಸಂಪ್ರಾಪ್ತೋಯಂವಿಭೀಷಣಃ ||
ಲಂಕೈಶ್ವರ್ಯಂಧ್ರುವಂಶ್ರೀಮಾನಯಂಪ್ರಾಪ್ನೋತ್ಯಕಂಟಕಂ |

ಯೋವಜ್ರಪಾತಾಶನಸನ್ನಿಪಾತಾ ನ್ನಚುಕ್ಷುಭೇನಾಪಿಚಚಾಲರಾಜಾ|
ಸರಾಮಬಾಣಾಭಿಹತೋಭೃಶಾರ್ತ ಶ್ಚಚಾಲಚಾಪಂಚಮುಮೋಚವೀರಃ||
ಯಸ್ಯವಿಕ್ರಮಮಾಸಾದ್ಯರಾಕ್ಷಸಾನಿಧನಂಗತಾಃ |
ತಂಮನ್ಯೇರಾಘವಂವೀರಂನಾರಾಯಣಮನಾಮಯಂ ||
ನತೇದದೃಶಿರೇರಾಮಂದಹಂತಮರಿವಾಹಿನೀಂ |
ಮೋಹಿತಾಃಪರಮಾಸ್ತ್ರೇಣ ಗಾಂಧರ್ವೇಣ ಮಹಾತ್ಮನಾ ||

**೯. ಪ್ರಚೋದಯಾತ್.** ಪ್ರಣಮ್ಯದೇವತಾಭ್ಯಶ್ಚಬ್ರಾಹ್ಮಣೇಭ್ಯಶ್ಚಮೈಥಿಲೀ |
ಬದ್ಧಾಂಜಲಿಪುಟಾಚೇದಮುವಾಚಾಗ್ನಿಸಮೀಪತಃ ||
ಚಲನಾತ್ಪರ್ವತೇಂದ್ರಸ್ಯಗಣಾದೇವಾಶ್ಚಕಂಪಿತಾಃ ||
ಚಚಾಲಪಾರ್ವತೀಚಾಪಿತದಾಶ್ಲಿಷ್ಟಾಮಹೇಶ್ವರಂ ||
ದಾರಾಃಪುತ್ರಾಃಪುರಂರಾಷ್ಟ್ರಂಭೋಗಾಚ್ಛಾದನ ಭಾಜನಂ |
ಸರ್ವಮೇವಾವಿಭಕ್ತಂನೋಭವಿಷ್ಯತಿಹರೀಶ್ವರ ||
ಯಾಮೇವರಾತ್ರಿಂಶತ್ರುಘ್ನಃಪರ್ಣಶಾಲಾಂಸಮಾವಿಶತ್ ||
ತಾಮೇವರಾತ್ರಿಂಸೀತಾಪಿಪ್ರಸೂತಾದಾರಕದ್ವಯಂ |

**ತತ್:**—ತಚ್ಛಬ್ದಾರ್ಥವೇ ವೇದದಲ್ಲಿ ಪರಬ್ರಹ್ಮಪ್ರತಿಪಾದಕವಾಗಿರುವುದು. ಓಂ ತತ್ಸತ್ ಎಂದರೆ ಅದು ಸದ್ರೂಪ ಎಂಬದಾಗಿ ಪ್ರತಿಪಾದಿತವಾಗಿ ವೇದಮಂತ್ರಪಾಠದ ಅಂತ್ಯದಲ್ಲಿ ಶಾಂತಿಪಾಠವೆನಿಸಿದೆ. ತತ್, ಎಂದರೆ ಅದು. ಪರಬ್ರಹ್ಮವು "ಅದು" ಎಂಬ ಪದದಿಂದ ಹೇಳಲ್ಪಡುವುದು. ಆದುದರಿಂದ ತಚ್ಛಬ್ದವು ಸೃಷ್ಟಿಗೆ ಪೂರ್ವದಲ್ಲಿ ಸದ್ವಸ್ತುವಾದ ಪರಬ್ರಹ್ಮ ಒಂದೇ ಇರುವುದೆಂಬುದನ್ನು ಪ್ರತಿವಾದಿಸುವುದು. ಶ್ರೀಮದ್ರಾಮಾಯಣದ ಪ್ರಥಮ ಶ್ಲೋಕವಾದ "ತಪಸ್ಸ್ವಾಧ್ಯಾಯನಿರತಂ" ಎಂಬ ಶ್ಲೋಕವೂ 'ತ' ಕಾರದಿಂದ ಪ್ರಾರಂಭವಾಗುವುದು. ಅಂದರೆ ಶ್ರೀಮದ್ರಾಮಾಯಣದ ಪ್ರಥಮ ಸಾವಿರ ಶ್ಲೋಕದ ಅಂತರಾರ್ಥದ ಮುಖ್ಯ ತಾತ್ಪರ್ಯವು ತಚ್ಛಬ್ದಾರ್ಥವಾದ ಮಹಾವಿಷ್ಣುವಾದ ಪರಬ್ರಹ್ಮ ಒಂದೇ ಇದ್ದ ಸ್ಥಿತಿಯನ್ನು ಪ್ರತಿಪಾದಿಸುವುದು.

**೨. ಸವಿತುಃ**—ಸವಿತುಃ ಎಂದರೆ ಜಗತ್ಸ್ರಷ್ಟೃವಾಗಿಯೂ, ಸರ್ವಾಂತರ್ಯಾಮಿಯಾಗಿಯೂ, ಸರ್ವಪ್ರೇರಕವಾಗಿಯೂ ಇರುವಿಕೆಯೆಂದು ಸಾಯಣಾಚಾರ್ಯರವರ ಮತ್ತು ಸೂತಸಂಹಿತೆಯ ಸಂಧ್ಯಾಭಾಷ್ಯದಲ್ಲಿ ಅರ್ಥವಿದೆ. ಜಗತ್ ಸ್ರಷ್ಟೃವಾಗಿಯೂ ಸರ್ವಪ್ರೇರಕವಾಗಿಯೂ ಸರ್ವಾಂತರ್ಯಾಮಿಯಾಗಿಯೂ ಇರುವವನೇ ಈಶ್ವರನು. ಆದುದರಿಂದ ಸವಿತುಃ ಎಂಬ ಪದವು ಈಶ್ವರಸೋಪಾನಪ್ರತಿಪಾದಕವಾಗಿದೆ. ಇದರಂತೆ ವಿಶ್ವಾಮಿತ್ರರೊಡಗೂಡಿ ಶ್ರೀರಾಮಚಂದ್ರನು ಯಜ್ಞಸಂರಕ್ಷಣ ಮಾಡಿದುದು

ಸೀತಾಪಾಣಿಗ್ರಹಣ ಮಾಡಿಕೊಂಡುದು ಮೊದಲುಗೊಂಡು ಸೀತಾದೇವಿಗೆ ವನವಾಸಕ್ಕೆ ಹೊರಡುವಾಗ ಆಭರಣಾದಿಗಳನ್ನು ಕೊಡುವವರೆಗಿನ ಈ ಗ್ರಂಥದಲ್ಲಿ ವಿವರಿಸಿರುವಂತೆ ರಾಮಾಯಣದ ಅಂತರಾರ್ಥವು ಈಶ್ವರಸೋಪಾನಪ್ರತಿಪಾದಕವಾಗಿಯೇ ಇದೆ. ತಚ್ಛಬ್ದವಾಚ್ಯನಾದ ಪರಬ್ರಹ್ಮನೇ ಪ್ರತಿಬಿಂಬಚೈತನ್ಯನೆನಿಸುವ ಮತ್ತು ಮಾಯೋಪಾಧಿಯೊಡಗೂಡುವ ವಿಚಾರವೇ ಶ್ರೀಮಹಾವಿಷ್ಣುವು ರಾಮನಾಗಿ ಅವತರಿಸಿದುದು ಮತ್ತು ಶ್ರೀರಾಮನು ವಿಶ್ವಾಮಿತ್ರರ ಯಜ್ಞಸಂರಕ್ಷಣಮಾಡಿ ಸೀತಾಪಾಣಿಗ್ರಹಣಮಾಡಿಕೊಂಡು ಅಯೋಧ್ಯೆಯಲ್ಲಿದ್ದ ಕಥೆಯ ಅಂಥರಾರ್ಥವಾಗಿದೆ

ಬ್ರಹ್ಮಾಂಡಪಿಂಡಾಂಡಗಳೆಂದರೆ ಜಗತ್ತೆಲ್ಲಾ ಸೃಷ್ಟಿಯಾಗುವ ವಿಚಾರಗಳೂ, ಅಂತರ್ಯಾಮಿಯಾಗಿ ಈಶ್ವರನು ಸರ್ವಕ್ಕೂ ಪ್ರೇರಕನಾಗಿರುವ ವಿಚಾರವೂ ಈ ಮೇಲಿನ ಕಥಾಭಾಗದ ಅಂತರಾರ್ಥದಲ್ಲಿ ಬಂದಿರುವುದು. ಶ್ರೀಮಹಾವಿಷ್ಣುವು ರಾಮಾವತಾರಮಾಡಿದ್ದರೂ ಸ್ವರ್ಗದಲ್ಲಿ ತಾನು ಇದ್ದೇ ಇರುವ ವಿಚಾರವು ಉತ್ತರಕಾಂಡದಲ್ಲಿ ಶ್ರೀರಾಮನು ವಿಷ್ಣು ಸಂಬಂಧವಾದ ಶರೀರ ಪ್ರವೇಶಮಾಡಿದ ಸಂದರ್ಭದಲ್ಲಿ ವಿವರಿಸಿದೆ. ಆದುದರಿಂದ ಮಹಾವಿಷ್ಣುವು ರಾಮಾವತಾರಮಾಡಿದ್ದರೂ ಸ್ವರ್ಗದಲ್ಲಿ ತಾನು ಇದ್ದೇ ಇರುವಂತೆ ತಚ್ಛಬ್ದವಾಚ್ಯವಾದ ಪರಬ್ರಹ್ಮಚೈತನ್ಯವು ಪ್ರತಿಫಲಿತಚೈತನ್ಯವಾಗಿ ಅವತರಿಸಿದ್ದರೂ ಪರಬ್ರಹ್ಮವು ತನ್ನ ಸ್ಥಾನದಲ್ಲಿದ್ದೇ ಇರುವುದು. ಸೃಷ್ಟಿಸ್ಥಿತಿಗಳ ಕಾರ್ಯವೆಲ್ಲಾ ಪ್ರತಿಬಿಂಬಚೈತನ್ಯದುದಾಗಿದೆ. ಈ ಕಥಾಭಾಗವು ಸೃಷ್ಟಿಯ ವಿಚಾರದ ತತ್ವವೇ ಆಗಿದೆ. ಮುಂದಿನ ಮಂತ್ರದಲ್ಲಿ ವ್ಯಾಪಾರದ ತತ್ವವೂ ಬರುವುದು.

೩. "**ವರೇಣಿಯಂ**" ವರೇಣಿಯಂ ಎಂದರೆ ಸರ್ವಪ್ರಾಣಿಗಳಿಂದಲೂ ಅಪೇಕ್ಷ್ಯನಾದ, ಸೇವಿಸಲು ಯೋಗ್ಯನಾದ ಮತ್ತು ಶ್ರೇಷ್ಠನಾದವನೆಂಬ ಅರ್ಥವೆಂದು ಸಂಧ್ಯಾಭಾಷ್ಯದಲ್ಲಿರುವುದು. ಪ್ರತಿಬಿಂಬಚೈತನ್ಯವಾಗುವಿಕೆ ಮತ್ತು ಸೃಷ್ಟಿಯ ವಿಚಾರವಾದ ಈಶ್ವರಸೋಪಾನದ ವಿಚಾರಗಳ ತತ್ವಗಳು ಸವಿತುಃ ಎಂಬ ಪದದ ಅರ್ಥಪ್ರತಿಪಾದ್ಯವಾಗಿರುವುದೆಂದು ಮೇಲೆ ತಿಳಿಸಿತಷ್ಟೆ ! ಸೃಷ್ಟಿಯಾದುದು ಸ್ಥಿತಿಗೆಂದರೆ ವ್ಯಾಪಾರಕ್ಕೆ ಬರಬೇಕಾದರೆ ಇಂದ್ರಿಯ ಮತ್ತು ಪ್ರಾಣಗಳು ಪ್ರತಿಬಿಂಬಚೈತನ್ಯವನ್ನು ಅಪೇಕ್ಷೆ ಮಾಡುತ್ತವೆ ಆದುದರಿಂದ ಪ್ರತಿಬಿಂಬಚೈತನ್ಯನು ಇಂದ್ರಿಯ ಮತ್ತು ಪ್ರಾಣಶಕ್ತಿಗಳಿಂದ ಅಪೇಕ್ಷಿಸಲ್ಪಡುವವನೂ ಸೇವಿಸಲು ಯೋಗ್ಯನೂ ಮತ್ತು ಶ್ರೇಷ್ಠನೂ ಆಗಿರುವನು. ಇದರಂತೆ ಅರಣ್ಯದಲ್ಲಿದ್ದ ಋಷಿಗಳೆಲ್ಲಾ ಶ್ರೀರಾಮನನ್ನು ಅಪೇಕ್ಷೆಮಾಡುತ್ತಿದ್ದುದು ಮತ್ತು ಶ್ರೀರಾಮನನ್ನು ಸೇವಿಸಿದುದು. ಆದುದರಿಂದ ವರೇಣಿಯಂ ಎಂಬ ಪದದ ತತ್ವವು ವನವಾಸಕ್ಕೆ ಹೊರಡುತ್ತಿದ್ದ ಸೀತಾದೇವಿಗೆ ಆಭರಣಗಳನ್ನು ಕೊಟ

ಕಥಾಭಾಗದಿಂದ ಸೀತಾದೇವಿಯು ಮಾಯಾಜಿಂಕೆಯನ್ನು ನೋಡಿ ಆಶ್ಚರ್ಯಪಟ್ಟು ಅದನ್ನು ಅಪೇಕ್ಷಿಸಿದವರೆಗಿನ ರಾಮಾಯಣದ ಅಂತರಾರ್ಥಪ್ರತಿಪಾದಕವಾಗಿದೆ.

೪. **ಭರ್ಗಃ**:—ಭರ್ಗಃ ಎಂದರೆ ಅವಿದ್ಯಾ ತತ್ಕಾರ್ಯನಾಶಕವಾಗುವ ಅಥವಾ ಪಾಪನಿವರ್ತಕವಾಗುವ ತೇಜೋರೂಪನಾದ ಎಂದು ಸಂಧ್ಯಾಭಾಷ್ಯದಲ್ಲಿ ಅರ್ಥವಿದೆ. ಇದರಲ್ಲಿ ಅವಿದ್ಯಾ ತತ್ಕಾರ್ಯನಾಶಗಳೆಂಬುದರಲ್ಲಿ ಅವಿದ್ಯೆಸಿದ್ಧರಲ್ಲವೇ ತತ್ಕಾರ್ಯನಾಶವಾಗುವ ಪ್ರಯತ್ನ. ಅಂದರೆ ಪಾಪವೆಂಬುದು ಇದ್ದರಲ್ಲವೇ ಅದು ನಾಶವಾಗುವಿಕೆ. ಆದುದರಿಂದ "ಭರ್ಗ" ಎಂಬ ಪದದಲ್ಲಿ ಭಕಾರದ ತತ್ವವೇ ಅವಿದ್ಯಾಸ್ವರೂಪವಾಗಿಯೂ, "ರ್ಗಃ" ಎಂಬುದೇ ಅವಿದ್ಯೆಯ ನಾಶವಾಗಿಯೂ ಇದೆ. ಅಂದರೆ ಒಂದೇ ತೇಜೋಶಕ್ತಿಯು ಅವಿದ್ಯಾ ಕಾರ್ಯಪ್ರಕಾಶವಾಗಿಯೂ ಮತ್ತು ತತ್ಕಾರ್ಯನಾಶಕದ ಪ್ರಕಾಶವಾಗಿಯೂ ಇದೆ. ಹೀಗಿರುವುದೇ ಪ್ರತಿಬಿಂಬಚೈತನ್ಯವು. ಮೇಲೆ ವರೇಣ್ಯಂ ಎಂಬ ಶಬ್ದದಿಂದ ಪ್ರತಿಬಿಂಬ ಚೈತನ್ಯವು ಇಂದ್ರಿಯಗಳ ಪ್ರಕಾಶಕವಾಗಿ ಯಾವಾಗ ಇಳಿದುಬಂತೋ ಆಗ ಅವಿದ್ಯಾಧೀನವಾಗಿ ಮಿಥ್ಯವಾದ ವಿಷಯಗಳ ಪ್ರಕಾಶವಾಗಿರುವುದೇ "ಭ" ಕಾರದ ತತ್ವವಾಗಿರುವುದು. ಇದಕ್ಕೆ ಸರಿಯಾಗಿ ರಾಮಾಯಣದಲ್ಲಿ ಮಾಯಾಜಿಂಕೆಯುಪೇಕ್ಷೆಯಾಗಿ ಶ್ರೀರಾಮನು ಹಿಂಬಾಲಿಸುವಿಕೆ, ಸೀತಾಪಹರಣಗಳ ಕಾರ್ಯವೇ ಭಕಾರದ ಒಂದುಸಾವಿರ ಶ್ಲೋಕದ ತತ್ವವಾಗಿರುವುದು.

"ರ್ಗಃ" ಎನ್ನುವುದು ಕಬಂಧನು ಶ್ರೀರಾಮನಿಗೆ ಜಾಗ್ರತೆಯಾಗಿ ಹೋಗಿ ಸುಗ್ರೀವನ ಸಖ್ಯಮಾಡೆಂದು ಹೇಳಿರುವುದರಿಂದ ಪ್ರಾರಂಭವಾಗುವುದು. ಸೀತಾಪಹರಣದಿಂದ ಕಬಂಧನು ಹೇಳುವವರೆಗಿನ ರಾಮಾಯಣದ ಅಂತರಾರ್ಥವು ಮೋಕ್ಷಾಧಿಕಾರಿಯ ಲಕ್ಷಣ, ವೇದಾಂತಶ್ರವಣ ಮತ್ತು ಮನನಗಳ ತತ್ವವಾಗಿದೆ. ಅಂದರೆ ಮೋಕ್ಷಾಧಿಕಾರಿಯು ತೀವ್ರತಮವಾದ ಮೋಕ್ಷೇಚ್ಛೆಯಿಂದಲೂ ವಿರಕ್ತಿಯಿಂದಲೂ ಸದ್ಗುರುವಿನಲ್ಲಿ ವೇದಾಂತಶ್ರವಣ ಮಾಡಿ ಮನನಮಾಡಿಕೊಂಡರೂ ಅವಿದ್ಯಾನಾಶವಾಗುವ ಕಾರ್ಯಕ್ಕೇ ಪ್ರಾರಂಭವಿಲ್ಲವೆಂಬ ತತ್ವವಾಗಿರುವುದು. ಹಾಗಾದರೆ, ಅವಿದ್ಯಾನಾಶವಾಗುವ ಕಾರ್ಯದ ಪ್ರಾರಂಭ ಯಾವಾಗೆಂದರೆ—ಕಬಂಧನು ಹೇಳಿದಂತೆ ಶ್ರೀರಾಮನು ಶಬರಿಯಾಶ್ರಮ ಪ್ರವೇಶಮಾಡಿದಾರಭ್ಯ ವೆಂದರೆ, ತೀವ್ರತಮವಾದ ಬ್ರಹ್ಮಚಿಂತನೆಯಲ್ಲಿ ಮುಳುಗಿ ಸುಗ್ರೀವನ ಸಖ್ಯದ ತತ್ವವಾದ ಯೋಗಕ್ಕೆ ಪ್ರಾರಂಭವೇ ಅವಿದ್ಯಾನಾಶದ ಕಾರ್ಯಕ್ಕೆ ಪ್ರಾರಂಭವಾಗಿರುವುದು. ಆದುದರಿಂದ ಪ್ರತಿಬಿಂಬಚೈತನ್ಯನು ಅವಿದ್ಯೆ ಮತ್ತು ತತ್ಕಾರ್ಯನಾಶವಾಗುವ ತೇಜೋರೂಪನಾದ್ದರಿಂದ ಇವನಿಗೆ ಭರ್ಗಃ ಎಂಬುದು ಅನ್ವಯವಾಗುವುದು.

ಇದರಲ್ಲಿ ಇನ್ನೊಂದು ವಿಚಾರವಿದೆ. ಯಾವ ಮೂಲಮಂತ್ರಕ್ಕೂ ಅವರೋಹಣ ಆರೋಹಣ (ಇಳಿಯುವುದು ಹತ್ತುವುದು.) ಗಳಿವೆ. ರ್ಗಃ ಎನ್ನುವವರಿಗೆ ಪ್ರತಿಬಿಂಬ

ಚೈತನ್ಯನು ಅವಿದ್ಯಾ ಉಪಾಧಿಯನ್ನು ಪಡೆಯಲು ಇಳಿದುದಾಗಿದೆ. "ರ್ಗಃ" ಎಂಬುದು ಮೊದಲುಗೊಂಡು ಪರಬ್ರಹ್ಮನಾಗಲು ಹತ್ತುವುದಾಗಿದೆ. ಈ ತತ್ವಾರ್ಥಕ್ಕೆ ಅನುಸಾರ ವಾಗಿಯೇ ರಾಮಾಯಣವೆಂಬ ಹೆಸರೂ ಬಂದಿದೆ. ರಾಮಾಯಣವೆಂದರೆ ಶ್ರೀರಾಮನ ಮಾರ್ಗವೆಂದರ್ಥ. ಅಂದರೆ ಶ್ರೀರಾಮನ ತತ್ವವಾದ ಪ್ರತಿಬಿಂಬಚೈತನ್ಯನ ಅವರೋಹಣ ಆರೋಹಣವೆಂಬ ತತ್ವವು.

೫. **ದೇವಸ್ಯ:**—ದೇವಸ್ಯ ಎಂದರೆ ಪ್ರಕಾಶಮಾನನಾದ ಎಂದು ಸಂಧ್ಯಾಭಾಷ್ಯದಲ್ಲಿ ಅರ್ಥವಿದೆ. ರಾಮಾಯಣದಲ್ಲಿ ವಾಲೀ ವಧೆಯಾರಭ್ಯ ಹನುಮಂತನ ಋಕ್ಷಬಿಲಪ್ರವೇಶ, ಸಂಪಾತಿಯಿಂದ ಸೀತಾವೃತ್ತಾಂತ ತಿಳಿದುಕೊಳ್ಳುವಿಕೆ, ಲಂಕಿಣಿಯುಜರ್ಝರತ್ವ, ಚಂದ್ರೋ ದಯವರ್ಣನೆ, ಅಶೋಕವನಪ್ರವೇಶದ ಕಥೆಯ ತತ್ವಗಳೆಲ್ಲಾ ದೇವಸ್ಯ ಎಂಬದರ ತತ್ವಾರ್ಥವಾಗಿದೆ. ಅಂದರೆ ರಾತ್ರಿಯ ಗಾಢಾಂಧಕಾರದ ತತ್ವವೇ ಅವಿದ್ಯಾಪ್ರಕಾಶ ವಾಗಿರುವ ಸೋಪಾನವೆಂದರೆ ಭರ್ಗಃ ಎಂಬುದರಲ್ಲಿ ಪ್ರತಿಬಿಂಬಚೈತನ್ಯನಿರುವ ಸೋಪಾನ. ನಕ್ಷತ್ರ ಮತ್ತು ಪೂರ್ಣಚಂದ್ರೋದಯದಿಂದ ಪ್ರಕಾಶ ಉಂಟಾಗಿ ಅಂಧಕಾರವು ತಕ್ಕ ಮಟ್ಟಿಗೆ ಪರಿಹಾರವಾಗುವುದಷ್ಟೆ! ಈ ತತ್ವದಂತೆ ಹನುಮಂತನ ಋಕ್ಷಬಿಲಪ್ರವೇಶ ಮತ್ತು ಲಂಕಾಪ್ರವೇಶದ ತತ್ವಗಳ ಅನುಷ್ಠಾನಕ್ಕೆ ಬಂದಿರುವವನ ಪ್ರತಿಬಿಂಬಚೈತನ್ಯನು ದೇವಸ್ಯ ಎಂದು ಕರೆಸಿಕೊಳ್ಳುವನು.

೬. **ಧೀಮಹೀ:**—ಎಂದರೆ ಧ್ಯಾನಮಾಡುತ್ತೇವೆಂದರ್ಥ. ಸೀತಾದೇವಿಯು ರಾಮನನ್ನು ಧ್ಯಾನಮಾಡುತ್ತಾ ಅವನಿಗಾಗಿ ದುಃಖ ಪಡುತ್ತಿದ್ದುದಾರಭ್ಯ ಯುದ್ಧ ಪ್ರಾರಂಭದವರೆಗಿನ ಕಥೆಯ ತತ್ವದವರೆಗೆ ಧೀಮಹೀ ಎಂಬುವುದರ ತತ್ವವಿದೆ. ಅಂದರೆ ಅಧಿಕಾರಿಯು ಪ್ರಾಣಾಯಾಮದ ಸೋಪಾನದಿಂದ ಮುಂದಿನ ಸೋಪಾನವಾದ ಧ್ಯಾನದ ಸೋಪಾನಕ್ಕೆ ಬಂದಿರುವ ಕಾಲದಲ್ಲಿ ತನ್ನಲ್ಲಿರುವ ಸಗುಣಬ್ರಹ್ಮರೂಪವಾದ ಬಿಂದುರೂಪ ವಾದ ಸೂರ್ಯನ ತೇಜಸ್ಸಿನಲ್ಲಿ ಧ್ಯಾನಮಾಡಲು ಪ್ರಾರಂಭಿಸುವುದರಿಂದ, ಪ್ರತಿಬಿಂಬ ಚೈತನ್ಯನು ಬಾಹ್ಯದ ವೃತ್ತಿಪ್ರಕಾಶಕನಾಗಿ ಪ್ರಸರಣೆಯಿಲ್ಲದೆ ಅಂತರ್ಮುಖದ ತೇಜಸ್ಸಿನಲ್ಲ ನಿಲುಗಡೆಗೆ ಬರುತ್ತಾನಾದ್ದರಿಂದ ಧೀಮಹೀ ಎಂಬುದು ಅನ್ವಯವಾಗುವುದು.

ಇದನ್ನು ಇನ್ನೊಂದು ವಿಧವಾಗಿಯೂ ಹೇಳಬಹುದು. ಸೀತಾದೇವಿಯು ಶುದ್ಧವಾದ "ನಾನು" ಎಂಬ ಜ್ಞಾನದ ತತ್ವದವಳು. ಸೀತಾದೇವಿಯು ಶ್ರೀರಾಮನನ್ನು ಧ್ಯಾನಮಾಡು ತ್ತಿದ್ದಳೆಂದರೆ—ಬುದ್ಧಿಪ್ರತಿಫಲಿತಚೈತನ್ಯನನ್ನು ಧ್ಯಾನಮಾಡುತ್ತಿದ್ದಳು. ಈ ಪ್ರತಿಫಲಿತ ಚೈತನ್ಯನೇ ಸೂರ್ಯಚೈತನ್ಯನೆಂದರೆ ಅಂತರ್ಯಾಮಿಯಾಗಿ ಬುದ್ಧಿಯನ್ನು ಪ್ರೇರಿಸುತ್ತಲಿರು ವನು. ಆದುದರಿಂದ ನಾನು ಎಂಬ ಶುದ್ಧಜ್ಞಾನವು ಅಂತರ್ಮುಖದಲ್ಲಿ ಬಿಂದುರೂಪವಾದ

ಸೂರ್ಯ ತೇಜಸ್ಸನ್ನು ಧ್ಯಾನಮಾಡುವುದರ ಮೂಲಕ ಅವಿದ್ಯಾಬಂಧನ ಪರಿಹಾರ ವಾಗಿ ಪ್ರತಿಬಿಂಬಚೈತನ್ಯನನ್ನು ಹೊಂದುವುದು. ಹೀಗೆ ನಾನು ಎಂಬ ಶುದ್ಧ ಜ್ಞಾನವು ಅಂತರ್ಮುಖದಲ್ಲಿ ಸೂರ್ಯರೂಪವಾದ ತೇಜಸ್ಸಿನಲ್ಲಿ ಧ್ಯಾನಾಸಕ್ತವಾಗಿರುವ ತತ್ವಕ್ಕೆ ಅನುಸಾರವಾಗಿ ಸರಮೆಯು ಸೀತಾದೇವಿಗೆ ಸೂರ್ಯೋಪಾಸನೆಯನ್ನು ಮಾಡೆಂದು ಹೇಳಿ ದುದಾಗಿರುವುದು. ಅಂದರೆ ನಿರ್ಗುಣಬ್ರಹ್ಮನು ಧ್ಯಾನಕ್ಕೆ ಲಭ್ಯನಲ್ಲವಾದುದರಿಂದ ಸಗುಣ ಬ್ರಹ್ಮವಾದ ಬಿಂದುವಿನ ಧ್ಯಾನಾಭ್ಯಾಸದಲ್ಲಿ ಪ್ರತಿಬಿಂಬಚೈತನ್ಯನು ಪ್ರಕಾಶಪಡಿಸಿಕೊಂಡು ಇರುವ ತತ್ವವೇ ಧೀಮಹೀ ಎಂಬುದರ ತತ್ವವಾಗಿರುವುದು.

೭. **ಧಿಯೋಯೋನಃ**—ಇದರಲ್ಲಿ ಧಿಯಃ, ಯಃ ನಃ ಎಂಬದಾಗಿರುವ ಮೂರು ಪ್ರತ್ಯೇಕಪದಗಳಿವೆ. ಅಂದರೆ ಈ ಮೂರುಪ್ರತ್ಯೇಕ ಪದಗಳಿಗೂ ಬುದ್ಧಿಯನ್ನು, ಯಾರು, ನಮ್ಮ, ಎಂಬುದಾಗಿ ಅರ್ಥ. ನಮ್ಮ ಬುದ್ಧಿಗೆ ಪ್ರೇರಕನಾಗಿರುವವನೇ ಸೂರ್ಯದೇವತಾಸ್ವರೂಪ ದಲ್ಲಿರುವ ಅಂತರ್ಯಾಮಿಯೆಂದರೆ ಈಶ್ವರನೇ ಹೊರತು ಪರಬ್ರಹ್ಮನಲ್ಲ. ಪರಬ್ರಹ್ಮನು ಸಾಕ್ಷಿ ಯಾಗಿಯೂ ನಿರ್ಲಿಪ್ತನಾಗಿಯೂ ಇರುವನೇ ಹೊರತು ಪ್ರೇರಕತ್ವವೂ ಅವನಿಗಿಲ್ಲ. ಪ್ರೇರಕ ನಾಗಿರುವ ಆದಿತ್ಯನ ಅಂತರ್ಗತನಾಗಿ ಪರಬ್ರಹ್ಮನಿರುವ ತತ್ವಪ್ರತಿಪಾದನೆಯ ಸೂಚನೆ ಗೋಸ್ಕರಲೇ ಅಗಸ್ತ್ಯರಿಂದ ಮಾಡಲ್ಪಟ್ಟ ಆದಿತ್ಯಹೃದಯೋಪದೇಶವಾಗಿರುವುದು. ಆದುದ ರಿಂದ ಧಿಯೋಯೋನಃ ಎಂಬುದರಲ್ಲಿ ಯಃ ಎಂಬುದರ ತತ್ವವೇ ಸಮಾಧಿಅಭ್ಯಾಸಮಾಡು ತ್ತಿರುವ ಅಧಿಕಾರಿಯ ಪ್ರತಿಬಿಂಬಚೈತನ್ಯವು ತನ್ನಲ್ಲಿರುವ ಸೂರ್ಯರೂಪಿನಲ್ಲಿ ಬಂದುನಿಂತು ಅವನೇ ಇವನಾಗುವ ತತ್ವವಾಗಿರುವುದು. "ನಃ" ಎಂದರೆ ನಮ್ಮ. ನನ್ನ ಅಥವಾ ನಮ್ಮ ಎನ್ನುವುದರ ನಿಶ್ಚಯವಾದ ಸ್ಥಿತಿಯಾವುದೆಂದರೆ ಎರಡನೆಯದರ ಜ್ಞಾನವಿಲ್ಲದ ಶುದ್ಧ ವಾದ "ನಾನು" ಎಂಬ ಜ್ಞಾನಮಾತ್ರ ಶೇಷವಾಗಿನಿಂತು ಪ್ರತಿಬಿಂಬಚೈತನ್ಯನು ಇದನ್ನು ಪ್ರಕಾಶಪಡಿಸಿಕೊಂಡಿರುವಿಕೆಯೇ ನಮ್ಮ ಎನ್ನುವುದರ ನಿಶ್ಚಯವಾದ ಸ್ಥಿತಿ. ನನ್ನ ಅಥವಾ ನಮ್ಮ ಎನ್ನುವ ಸ್ಥಿತಿಯಲ್ಲಿ ಶುದ್ಧವಾದ ನಾನೆಂಬ ಜ್ಞಾನ ಹೊರತು ಎರಡನೆಯದರ ಜ್ಞಾನವಿರುವುದಿಲ್ಲ. ಈ ಸ್ಥಿತಿಯೇ ಎರಡನೆಯ ವಸ್ತುವಿನ ಜ್ಞಾನಕ್ಕೆ ಕಾರಣವಾಗಿದ್ದ ರಾವಣನ ವಧೆಯಾಗಿ ಶುದ್ಧವಾದ ನಾನು ಎಂಬ ಜ್ಞಾನದ ತತ್ವದವಳಾದ ಸೀತಾದೇವಿಯು ಶ್ರೀರಾಮನ ಸಮೀಪಕ್ಕೆ ಬಂದ ತತ್ವವಾಗಿರುವುದು. ಆದುದರಿಂದ ಧಿಯೋಯೋನಃ ಎಂಬ ಪದದಲ್ಲಿ ಸಕಲ ರಾಕ್ಷಸರ ನಿಗ್ರಹವಾಗಿ ಸೀತಾದೇವಿಯು ಶ್ರೀರಾಮನ ಬಳಿಗೆ ಬರುವ ಶುದ್ಧವಾದ ನಾನು ಎಂಬ ಜ್ಞಾನದ ಸ್ಥಿತಿಗೆ ಬಂದು ಪ್ರತಿಬಿಂಬಚೈತನ್ಯನು ಪ್ರಕಾಶಪಡಿಸಿ ಕೊಂಡಿರುವಿಕೆಯ ತತ್ವಗಳಾಗಿವೆ.

೮. **ಪ್ರಚೋದಯಾತ್**—ಪ್ರಚೋದಯಾತ್ ಎಂದರ ಚೆನ್ನಾಗಿ ಪ್ರೇರಿಸಲಿ ಎಂದರ್ಥ. ಇದರಲ್ಲಿ "ಚುದ" ಧಾತುವಿನ ಮೇಲೆ ಚೋದ ಎಂಬುದುಬಂದಿದೆ. ಚುದವೆಂದರೆ

ಪ್ರೇರಣೆ. ಯಾವುದಕ್ಕೆ ಪ್ರೇರಣೆಯಾಗಿದೆಯೆಂದರೆ ಪ್ರತಿಬಿಂಬಚೈತನ್ಯನು (ಜೀವಚೈತನ್ಯನು) ಪರಬ್ರಹ್ಮನಾಗಲು ಪ್ರೇರಣೆಯಾಗಿದೆ. ಈ ರೀತಿಯಾಗಬೇಕಾದಲ್ಲಿ ಪ್ರತಿಬಿಂಬಚೈತನ್ಯನಿಗೆ ಉಪಾಧಿಯಾಗಿರುವ "ನಾನು" ಎಂಬ ಶುದ್ಧ ಜ್ಞಾನವೂ ಕೂಡ ಪರಬ್ರಹ್ಮನಲ್ಲಿ ಲೀನವಾಗ ಬೇಕು. ಸೀತಾದೇವಿಯ ತತ್ವವಾದ ನಾನು ಎಂಬ ಶುದ್ಧ ಜ್ಞಾನವು ಪರಬ್ರಹ್ಮನಲ್ಲಿ ಲಯ ವಾಗಿ ಶ್ರೀರಾಮನ ತತ್ವದಲ್ಲಿರುವ ಪ್ರತಿಬಿಂಬಚೈತನ್ಯನು ಪರಬ್ರಹ್ಮಚೈತನ್ಯನ ಸಮತ್ವವನ್ನು ಪಡೆಯುವ ತತ್ವವೇ "ಪ್ರಚೋದಯಾತ್" ಎನ್ನುವುದರಲ್ಲಿ "ಪ್ರ" ಎಂಬ ಅಕ್ಷರದ ಅರ್ಥವಾದ ಪ್ರಕೃಷ್ಟಯೆಂಬುದು ಇರುವುದಕ್ಕೆ ಸಾರ್ಥಕವಾಗಿದೆ. "ಪ್ರ" ಎನ್ನುವ ಅಕ್ಷರಕ್ಕೆ ಸರಿಯಾಗಿ ಮಾಯೆಯು ಪರಬ್ರಹ್ಮನಲ್ಲಿ ಲೀನವಾಗಿ ಜೀವಬ್ರಹ್ಮಸಾಕ್ಷಾತ್ಕಾರವಾಗುವ ತತ್ವಕ್ಕೆ ರಾಮಾ ಯಣದಲ್ಲಿ ಸೀತಾದೇವಿಯು ಅಗ್ನಿಪ್ರವೇಶಮಾಡುವುದಕ್ಕೆ ಸರಿಯಾಗಿ ಬಂದಿರುವುದು. ಅಂದರೆ "ಪ್ರ"ಯೆಂಬುದು "ಪ್ರಣಮ್ಯದೇವತಾಭ್ಯಶ್ಚ" ಎಂಬ ಶ್ಲೋಕದಿಂದ ಪ್ರಾರಂಭ ವಾಗುವುದು. ಅನಂತರ ಪ್ರಕೃಷ್ಟದಿಂದ ಪ್ರಾರಂಭವಾದ ಚೋದನವು ಕ್ರಮೇಣ "ತ್" ಎಂಬಕ್ಷರದಲ್ಲಿ ಕೊನೆಗೊಂಡಿರುವಂತೆ ಪ್ರತಿಬಿಂಬಚೈತನ್ಯನು "ತ್" ಎಂಬಕ್ಷರದ ತತ್ವವಾಗಿ "ತತ್" ಪ್ರತಿಪಾದ್ಯವಾದ ಪರಬ್ರಹ್ಮವೇ ಆಗುವನು. ಅಂದರೆ ತತ್ ಪ್ರತಿಪಾದ್ಯವಾದ ಜಗತ್ತಿಲ್ಲದ ಪರಬ್ರಹ್ಮ ಒಂದೇ ಪ್ರಥಮದಲ್ಲಿತ್ತೆಂತಲೂ ಜಗತ್ತೆಂಬುದು ಮಧ್ಯದಲ್ಲಿ ಬಂದಿರುವು ದೆಂತಲೂ, ಅಂತ್ಯದಲ್ಲಿ ಜಗತ್ತಿಲ್ಲದಂತಾಗಿ ತತ್ ಪ್ರತಿಪಾದ್ಯವಾದ ಪರಬ್ರಹ್ಮ ಒಂದೇ ಉಳಿದುಕೊಳ್ಳುವುದೆಂಬುದನ್ನು ಪ್ರತಿಪಾದಿಸಬೇಕೆಯೇ ಗಾಯತ್ರೀ ಮೂಲಮಂತ್ರದ ಪ್ರಥಮದಲ್ಲೂ ಕೊನೆಯಲ್ಲೂ "ತ್" ಕಾರವಿರುತ್ತದೆ. ಈ ತತ್ವವು ಮನುಷ್ಯನು ಮೋಕ್ಷಪಡೆ ಯುವ ಮತ್ತು ಜಗತ್ತು ಲಯವಾಗುವ ಕ್ರಮಗಳೆರಡನ್ನೂ ಒಳಗೊಂಡಿರುವುದು. ಈ ತತ್ವನೇ ರಾಮಾಯಣದ ತತ್ವವೂ ಆಗಿರುವುದರಿಂದ ಗಾಯತ್ರಿಯೇ ರಾಮಾಯಣ. ರಾಮಾ ಯಣವೇ ಗಾಯತ್ರೀ. ಅಂದರೆ ಶ್ರೀಮದ್ರಾಮಾಯಣವೇ ಗಾಯತ್ರೀಸ್ವರೂಪವಾಗಿರು ವುದರಿಂದ ೨೪ ಶ್ಲೋಕಗಳನ್ನು ಮಾತ್ರ ಬರೆದು ಗಾಯತ್ರೀರಾಮಾಯಣವೆಂದು ಹೆಸರು ಕೊಟ್ಟಿರುವುದು ಸಲ್ಲದು. ಗಾಯತ್ರೀರಾಮಾಯಣ ಶ್ರೀಮದ್ರಾಮಾಯಣಗಳೆಂದು ಎರಡು ರಾಮಾಯಣಗಳೆಂದಿಗೂ ಇಲ್ಲ.

ಗಾಯತ್ರೀಮೂಲಮಂತ್ರಕ್ಕೂ ಈ ಗ್ರಂಥದ ತತ್ವಕ್ಕೂ ಸಮನ್ವಯಮಾಡಿ ಮುಖ್ಯ ಸಾರಾಂಶವನ್ನು ಮಾತ್ರ ತಿಳಿಸಿದೆ. ಸಮನ್ವಯಮಾಡಿ ಬರೆದರೆ ಒಂದು ದೊಡ್ಡ ಗ್ರಂಥವೇ ಆಗುವುದು. ಮುಖ್ಯಸಾರಾಂಶವನ್ನು ಬರೆದಿದ್ದರೂ ತತ್ವವನ್ನು ಬಿಟ್ಟಿಲ್ಲ. ಎಷ್ಟೇ ಲಂಬಿಸಿ ಬರೆದರೂ ತತ್ವಗಳನ್ನು ಖಂಡಿತ ಬದಲಾಯಿಸಲಾಗುವುದಿಲ್ಲ. ಗಾಯತ್ರೀಮಂತ್ರದಲ್ಲಿ ಅಕಾರ ಉಕಾರ ಮಕಾರವೆಂದರೆ ಸೃಷ್ಟಿಸ್ಥಿತಿಲಯಗಳೆಂಬ ಮೂರು ಪಾದಗಳಿರುವಂತೆ ಶ್ರೀಮದ್ರಾಮಾಯಣದ ತತ್ವದಲ್ಲೂ ಇದೆ. ಶ್ರೀಮದ್ರಾಮಾಯಣದಲ್ಲಿರುವ ೫೦೦ ಸರ್ಗಗಳ

ತತ್ವಗಳೇ ಕ್ರಮವಾಗಿ ಗಾಯತ್ರಿಯ ಐದುಶಿರಸ್ಸಿಗೆ ಅನ್ವಯವಾಗುವುದು. ಇದರಂತೆ ಗಾಯತ್ರಿಯ ವಿವರವೆಲ್ಲಾ ಈ ತತ್ವಾರ್ಥಗ್ರಂಥಕ್ಕೆ ಅನ್ವಯವಾಗುವುದು. ಅಲ್ಲದೆ ಗಾಯತ್ರೀ ಉಪಾಸನಾಕ್ರಮದ ಸಂಧ್ಯಾಮಂತ್ರಗಳನ್ನು ಈ ಗ್ರಂಥದಲ್ಲಿ ಅಲ್ಲಲ್ಲಿ ಅನ್ವಯ ಮಾಡಿರುವುದು. ಗಾಯತ್ರೀಮಂತ್ರವೂ ವೇದಸ್ವರೂಪವಾಗಿ ಆತ್ಮತತ್ವವೇ ಆಗಿರುವಂತೆ ಶ್ರೀಮದ್ರಾಮಾಯಣವೂ ಕೂಡ ಈ ಗ್ರಂಥದಲ್ಲಿ ಪ್ರತಿಪಾದಿತವಾಗಿರುವಂತೆ ಶ್ರುತಿತಾತ್ಪರ್ಯವಾದ ಆತ್ಮತತ್ವವಾಗಿರುವುದು. ಹೀಗಿರುವ ಶ್ರುತಿತಾತ್ಪರ್ಯಕ್ಕೆ ವಾಲ್ಮೀಕರೇ ಬಾಲಕಾಂಡದ ೪ನೆಯ ಸರ್ಗದಲ್ಲಿ,

ವೇದೋಪಬೃಂಹಣಾರ್ಥಾಯತಾವಗ್ರಾಹಯತಪ್ರಭುಃ |

ಅಂದರೆ ಶ್ರುತಿತಾತ್ಪರ್ಯಪ್ರಚಾರರೂಪ ಪ್ರಯೋಜನಕ್ಕೋಸ್ಕರ ಶ್ರೀಮದ್ರಾಮಾಯಣವನ್ನು ಲವಕುಶರಿಗೆ ವಾಲ್ಮೀಕಿಮುನಿಗಳು ಉಪದೇಶಮಾಡಿದರು. ಆದ್ದರಿಂದ ಶ್ರೀಮದ್ರಾಮಾಯಣವು ಗಾಯತ್ರಿಯ ಅರ್ಥವನ್ನು ಒಳಗೊಂಡಿರುವುದು.

## ೧೦೨ನೆಯ ಪ್ರಕರಣ.

### ದಶಾವತಾರಗಳ ವಿಚಾರ ಮತ್ತು ಭರತಖಂಡದ ಪ್ರಾಶಸ್ತ್ಯ.

ಶ್ರೀರಾಮಾವತಾರವನ್ನು ಮಾನವದೇಹಕ್ಕೆ ಅನ್ವಯಮಾಡಿ ಈ ಗ್ರಂಥವನ್ನು ಬರೆದಿರುತ್ತೇವೆ! ಮತ್ಸ್ಯ ಕೂರ್ಮಾದ್ಯವತಾರಗಳನ್ನು ಅತ್ಯಂತ ಸೂಕ್ಷ್ಮವಾಗಿ ತಿಳಿಸಿರೋಣ. ಮಾತೃವಿನ ಗರ್ಭದಲ್ಲಿ ಏಳನೇ ತಿಂಗಳವರೆಗೆ ದೇಹದ ಸೃಷ್ಟಿಕ್ರಮವೇ ಸಂಪೂರ್ಣಕ್ಕೆಬಂದಿರುವುದಿಲ್ಲವಾದುದರಿಂದ ಹುಟ್ಟಿದ ಮಕ್ಕಳು ಬದುಕುವುದಿಲ್ಲ. ಏಳನೇ ತಿಂಗಳವರೆಗೆ ಸೃಷ್ಟಿಕ್ರಮವನ್ನನುಸರಿಸಿ ಜೀವಚೈತನ್ಯ (ಪ್ರತಿಬಿಂಬಚೈತನ್ಯ)ಕ್ಕೆ ದೇಹಭೇದಗಳುಂಟಾಗಿ ಕೊನೆಗೆ ಮನುಷ್ಯಸ್ವರೂಪವಾದ ದೇಹವುಂಟಾಗುವುದು. ಜೀವನು ಪುರುಷನ ವೀರ್ಯದೊಡನೆ ಸ್ತ್ರೀಯ ಗರ್ಭಕ್ಕೆ ಪ್ರವೇಶಮಾಡಿ ಶುಕ್ಲಶೋಣಿತದ್ವಂದ್ವದಲ್ಲಿ ಪ್ರಥಮ ಮಾಸದಲ್ಲಿರುತ್ತಾನಾಗಿ ಪ್ರಥಮಮಾಸದಲ್ಲಿ ದ್ರವರೂಪವಾದ ದೇಹವಾಗಿರುತ್ತದೆ. ಇಂತಹ ದ್ರವರೂಪವಾದ ಶುಕ್ಲಶೋಣಿತದಲ್ಲಿ ತಮಃಪ್ರಧಾನಶಕ್ತಿಯು ಶುಕ್ಲಶೋಣಿತವನ್ನು ಬುದ್ಬುದಾಕಾರಮಾಡುವುದರ ಮೂಲಕ ದೇಹಸೃಷ್ಟಿಗೆ ಪ್ರಾರಂಭಮಾಡುವುದು. ಈ ತಮಃಪ್ರಧಾನಶಕ್ತಿಯಿಂದ ಜೀವಚೈತನ್ಯವಿರುವ ಅಂತಃಕರಣಚತುಷ್ಟಯವೂ ಮುಚ್ಚಲ್ಪಡಲು ತಮಶ್ಶಕ್ತಿಯ ತೊಂದರೆಗೊಳಗಾಗದಂತೆ ಪ್ರತಿಬಿಂಬಚೈತನ್ಯವು ಅತಃಕರಣಚತುಷ್ಟಯವನ್ನು ಕಾಪಾಡುವುದೇ ಮತ್ಸ್ಯಾವತಾರದಲ್ಲಿ ಜಲದಲ್ಲಿ ಮುಳುಗಿದ್ದ ವೇದವನ್ನು ಹಿರಣ್ಯಾಕ್ಷನ ಬಾಧೆಯಿಂದ ತಪ್ಪಿಸಿದುದರ ತತ್ವವಾಗಿದೆ. ಪಿಂಡಾಂಡವಾದ ಗರ್ಭದಲ್ಲಿನ ಸೃಷ್ಟಿಯ ತತ್ವವನ್ನು ಮೇಲೆ ತಿಳಿಸಿತು. ಬ್ರಹ್ಮಾಂಡದ ಸೃಷ್ಟಿಕಾಲದಲ್ಲಿ ಅಪಂಚೀಕೃತವೆಂದರೆ ಸಮ್ಮೇಳನವಲ್ಲದ ಪಂಚ

ಭೂತಗಳ ಸತ್ವರಜೋ ಅಂಶಗಳಿಂದ ಪ್ರತ್ಯೇಕ ಸೃಷ್ಟಿಗಳಾಗಿ ಅನಂತರ ಪಂಚೀಕರಣದಿಂದ ಮಾಡಲ್ಪಟ್ಟ ಸ್ಥೂಲಸೃಷ್ಟಿಯಲ್ಲಿ ಜಲಸ್ವರೂಪಕ್ಕೆ ಬಂದು ಜಲಚರಪ್ರಾಣಿಗಳನ್ನು ಈಶ್ವರನು ಸೃಷ್ಟಿಮಾಡುವ ಮುಂತಾದ ತತ್ವಗಳನ್ನು ಮತ್ಸ್ಯಾವತಾರವು ಒಳಗೊಂಡಿರುವುದು.

ಹಾಲು ಮೊಸರಾಗಿ ಅನಂತರ ಕಡೆದರೆ ಬೆಣ್ಣೆಯಾಗುವಂತೆ ದ್ರವಸ್ವರೂಪದಲ್ಲಿರುವ ಶುಕ್ಲಶೋಣಿತವು ಸೃಷ್ಟಿಯ ನಿಯತಿಯನ್ನನುಸರಿಸಿ ತಮಶ್ಶಕ್ತಿಯಿಂದ ಬುದ್ಬುದಾಕಾರವಾಗಿ ಘಟ್ಟಿಯಾದ ಮೊಸರಿನಂತಾಗುವುದು. ಮೊಸರನ್ನು ಕಡೆದು ಘನಿಸ್ವರೂಪವಾದ ಬೆಣ್ಣೆಯನ್ನು ತೆಗೆಯುವಂತೆ ಮೊಸರಿನಂತಿದ್ದ ಶುಕ್ಲಶೋಣಿತವು ಬೆಣ್ಣೆಯ ಉಂಡೆಯಂತೆ ಪಿಂಡಾಕಾರವಾಗುತ್ತದೆ. ಗರ್ಭದಲ್ಲಿ ಶಿಶುವಿನ ದೇಹವು ಪಿಂಡಾಕಾರಕ್ಕೆ ಬಂದು ಜೀವಚೈತನ್ಯನು ಇಂತಹ ಪಿಂಡಾಕಾರವಾದ ದೇಹವನ್ನು ಪಡೆಯುವುದರ ತತ್ವಗಳೇ ಕೂರ್ಮಾವತಾರ ಮತ್ತು ಸಮುದ್ರಮಥನದ ತತ್ವವಾಗಿದೆ. ಗರ್ಭದಲ್ಲಿ ಈ ಮಥನದಿಂದ ಗರ್ಭಿಣಿಯರಿಗೆ ಬಳಲಿಕೆ ಮತ್ತು ಬಯಕೆ ಸಂಕಟಗಳುಂಟಾಗುವುವು. ಕೂರ್ಮಾವತಾರದ ಸಮುದ್ರಮಥನದಲ್ಲಿ ಹಗ್ಗವಾಗಿದ್ದ ವಾಸುಕಿಯೇ ಮನುಷ್ಯನಲ್ಲಿ ಸರ್ಪರೂಪವಾದ ಕುಂಡಲಿನೀ. ದೇವತೆಗಳೇ ಇಂದ್ರಿಯ ನಾಡಿ ಮತ್ತು ಪಂಚಪ್ರಾಣಗಳು. ರಾಕ್ಷಸರೇ ತಮಃಪ್ರಧಾನಶಕ್ತಿಗಳು. ಅಂದರೆ ಶುಕ್ಲಶೋಣಿತದ್ವಂದ್ವದಲ್ಲಿ ಜೀವಚೈತನ್ಯವಿರುವುದಷ್ಟೆ! ಜೀವಚೈತನ್ಯವಿರುವ ಅಂತಃಕರಣದಲ್ಲಿ ಸೂಕ್ಷ್ಮರೂಪದಲ್ಲಿ ಅಡಗಿದ್ದ ದೇಹದ ಸಕಲ ತತ್ವಗಳೂ ಜಲಮಯವಾದ ಶುಕ್ಲಶೋಣಿತದಲ್ಲಿ ಪ್ರಸರಿಸಿ ಮಥನಮಾಡಿ ಸೃಷ್ಟಿಗೆ ಪ್ರಾರಂಭವಾಗುವುದು. ಪಿಂಡಾಂಡದ ವಿಚಾರ ತಿಳಿಸಿತು. ಬ್ರಹ್ಮಾಂಡದಲ್ಲಿ ಜಲಮಯವಾಗಿದ್ದುದರಲ್ಲಿ ಜಲದ ಸ್ವರೂಪವೇ ಘನೀಭೂತವಾಗಿ ಭೂಮಿಯೆನಿಸಿ ಸಕಲ ವನೌಷಧಿಗಳ ಸೃಷ್ಟಿ, ಪಕ್ಷಿ ಮುಂತಾದ ಕ್ರಿಮಿಕೀಟಾದಿಗಳ ಸೃಷ್ಟಿಗಳ ಪ್ರಾರಂಭದ ತತ್ವಗಳೆಲ್ಲಾ ಕೂರ್ಮಾವತಾರದಲ್ಲಡಗಿರುವುವು.

ಗರ್ಭದಲ್ಲಿ ಎರಡನೆಯ ತಿಂಗಳಲ್ಲಿ ಪಿಂಡಾಕಾರವಾದ ದೇಹವಾಗಿರುತ್ತಷ್ಟೆ! ಮೂರನೇ ತಿಂಗಳಲ್ಲಿ ಪಿಂಡಾಕಾರದಿಂದ ಶಿರಸ್ಸುಂಟಾಗಿ ಕೈಕಾಲುಗಳುಂಟಾಗುತ್ತಾ ಬರುತ್ತದೆ. ಇಂತಹ ದೇಹದಲ್ಲಿ ಜೀವಚೈತನ್ಯನು ಶಿರಸ್ಸಿನಲ್ಲಿ ನಿಂತುಕೊಳ್ಳುತ್ತಾನೆ. ಅಂದರೆ ಶಿರಸ್ಸೇ ಪ್ರಧಾನವೆಂದು ಸೂಚಿಸುವ ತತ್ವವೇ ಕೂರ್ಮಾವತಾರದ ತತ್ವ. ಅಲ್ಲದೆ ಮತ್ಸ್ಯಕೂರ್ಮವರಾಹಾವತಾರಗಳ ತತ್ವದ ಸೃಷ್ಟಿಕ್ರಮದಲ್ಲಿ ಅತ್ಯಂತಬಲಿಷ್ಟವಾಗಿ ಕಾರ್ಯಮಾಡುತ್ತಿದ್ದ ತಮೋಗುಣದ ವೇಗವನ್ನು ಪ್ರತಿಬಿಂಬಚೈತನ್ಯವು ತಗ್ಗಿಸುತ್ತಾ ದೇಹದ ಸೃಷ್ಟಿಯನ್ನು ಅಭಿವೃದ್ಧಿಗೆ ತರುವುದರ ತತ್ವವೇ ಹಿರಣ್ಯಾಕ್ಷನ ನಿಗ್ರಹವಾಗಿರುವುದು. ಬ್ರಹ್ಮಾಂಡದ ಸೃಷ್ಟಿಯಲ್ಲಿ ಕೂರ್ಮಾವತಾರದಲ್ಲಿ ಭೂಮಿಯನ್ನು ಬಲದಿಂದ ಚೆನ್ನಾಗಿ ಎತ್ತುವ ಮತ್ತು ನಾಲ್ಕುಕಾಲಿನ ಮೃಗಾದಿಗಳ ಸೃಷ್ಟಿಯ ಪ್ರಾರಂಭದ ತತ್ವಗಳು ಬರುವುವು.

ನಾಲ್ಕನೆಯ ಅವತಾರವಾದ ನೃಸಿಂಹಾವತಾರವು ಮಾತೃವಿನ ಗರ್ಭದಲ್ಲಿ ಬೆಳೆಯುವ ಶಿಶುವಿನ ದೇಹದಲ್ಲಿ ಸೃಷ್ಟಿಕ್ರಮದಲ್ಲಿ ಬಲಿಷ್ಠವಾಗಿದ್ದ ರಜೋಗುಣದ ವೇಗವನ್ನು ಕುಗ್ಗಿಸುವಿಕೆಯೇ ಹಿರಣ್ಯಕಶ್ಯಪುವಿನ ನಿಗ್ರಹದ ತತ್ವವಾಗಿರುವುದು. ಸೃಷ್ಟಿಕ್ರಮದಲ್ಲಿ ರಜಸ್ತಮೋಗುಣಗಳೊಡನೆ ಬೆರೆತ ಸತ್ವಗುಣವೆಂದರೆ ಮಲಿನಸತ್ವಗುಣಕ್ಕೆ ರಜೋಗುಣದಿಂದುಂಟಾಗುವ ತೊಂದರೆಯ ವಿಚಾರವೇ ಪ್ರಹ್ಲಾದನಿಗೆ ಹಿರಣ್ಯಕಶ್ಯಪುವಿನಿಂದುಂಟಾದ ತೊಂದರೆಯಾಗುವುದು. ಪ್ರತಿಬಿಂಬಚೈತನ್ಯನು ರಜೋಗುಣದ ವೇಗವನ್ನು ತಗ್ಗಿಸಿ ಬೆಳೆವಣಿಗೆಯನ್ನುಂಟುಮಾಡುವ ಮಲಿನಸತ್ವಗುಣಕ್ಕೆ ಪ್ರಾಶಸ್ತ್ಯಕೊಡುವುದೇ ಪ್ರಹ್ಲಾದನ ಉದ್ಧಾರದ ತತ್ವವಾಗಿರುವುದು. ಬ್ರಹ್ಮರಂಧ್ರದ ಮಾರ್ಗವಾದ ಸುಷುಮ್ನಾನಾಡಿಯ ರಚನೆಯೇ ನರಸಿಂಹಸ್ವಾಮಿಯು ಸೀಳಿಕೊಂಡು ಬಂದ ಕಂಭದ ತತ್ವವಾಗಿರುವುದು. ನರಸಿಂಹಸ್ವಾಮಿಯು ಹಿರಣ್ಯಕಶ್ಯಪನ ಕರಳನ್ನು ಬಗೆಯಲು ಬಾಗಿಲ ಹೊಸಲಿನಲ್ಲಿ ಕೂತುಕೊಂಡುದುದೇ ಬ್ರಹ್ಮರಂಧ್ರನಾಡಿಗೆ ಬಾಗಿಲಾದ ಅವಿದ್ಯೆಯ ಸ್ಥಳವನ್ನು ಸೂಚಿಸುವ ಮೂಲಾಧಾರ ಚಕ್ರದ ಸ್ಥಳದ ತತ್ವವಾಗಿರುವುದು. ಹಿರಿಣ್ಯಕಶ್ಯಪನ ಕರಳನ್ನು ಬಗೆದು ಮಾಲೆ ಹಾಕಿಕೊಂಡ ತತ್ವವೇ ಇಡಾ ಪಿಂಗಳಾ (ಸೂರ್ಯ ಚಂದ್ರ) ನಾಡಿಗಳ ರಚನೆಯಾಗಿರುವುದು. ನರಸಿಂಹಸ್ವಾಮಿಯು ಲಕ್ಷ್ಮಿಯೊಡಗೂಡಿ ಶಾಂತನಾಗಿ ಶಿಶುವಿನ ಹೃದಯಕೋಶದ ಕಮಲದಲ್ಲಿ ಆದಿತ್ಯಸ್ವರೂಪನಾಗಿ ಪ್ರಾಣಬ್ರಹ್ಮಚೈತನ್ಯನೆನಿಸಿಕೊಂಡು ನಿಲ್ಲುವುದರಿಂದ ಹೃದಯಕೋಶದ ಕಾರ್ಯವೆಂದರೆ ಪ್ರಾಣಕಲೆಯು ಕಾರ್ಯಮಾಡಲು ಗರ್ಭದಲ್ಲಿ ಶಿಶುಗಳಿಗೆ ನಾಲ್ಕನೆಯ ತಿಂಗಳಲ್ಲಿ ಪ್ರಾರಂಭವಾಗುವುದು. ನರಸಿಂಹಾವತಾರದಲ್ಲಿ ಬ್ರಹ್ಮಾಂಡದಲ್ಲಿನ ಸೃಷ್ಟಿಕ್ರಮದಲ್ಲಿ ಸೂರ್ಯಚಂದ್ರಾದಿಗಳ ಪ್ರಕಾಶವು ಭೂಮಿಗೆ ಬೀಳುವ ಕ್ರಮ, ಮೇರುಗಳ ವಿಚಾರ, ಅಹೋರಾತ್ರಿಗಳ ವಿಂಗಡ, ಸಿಂಹವೇ ಕೊನೆಯಾದ ಮೃಗಗಳ ಸೃಷ್ಟಿಸಂಪೂರ್ಣ ಮುಂತಾದ ತತ್ವಗಳು ಬರುವುವು.

ನರಸಿಂಹಾವತಾರದ ತತ್ವದಲ್ಲಿ ಇಡಾ, ಪಿಂಗಳಾ, ಸುಷುಮ್ನಾನಾಡಿಗಳ ರಚನೆಯ ತತ್ವಗಳಿಂದ ಶಿರಸ್ಸಿನಿಂದ ಸೊಂಟದವರೆಗೂ ಸತ್ವಗುಣದೊಡಗೂಡಿದ ಪ್ರತಿಬಿಂಬಚೈತನ್ಯನ ಪ್ರಭೆಯಿಂದ ಪ್ರಫುಲ್ಲವಾಗುವುದು. ಸೊಂಟದಿಂದ ಕೆಳಕ್ಕೆ ಪಾತಾಳಲೋಕಸ್ವರೂಪವಾದ ಪಾದಗಳಿಗೆ ಪ್ರತಿಬಿಂಬಚೈತನ್ಯನ ಪ್ರಕಾಶವಿಲ್ಲದೆ ಜಡವಾಗಿತ್ತು. ಈ ಜಡತ್ವವನ್ನು ನಿವಾರಣೆಮಾಡುವ ತತ್ವವೇ ವಾಮನಾವತಾರಮಾಡಿ ಬಲಿಚಕ್ರವರ್ತಿಯನ್ನು ಪಾತಾಳಲೋಕಕ್ಕೆ ತುಳಿದ ತತ್ವವಾಗಿರುವುದು. ಮತ್ಸ್ಯಾವತಾರದಿಂದ ಕೂರ್ಮಾವತಾರಕ್ಕೆ ದೇಹಭೇದ. ಕೂರ್ಮಾವತಾರದಿಂದ ವರಾಹಾವತಾರಕ್ಕೆ ದೇಹಭೇದ. ಹೀಗೆ ದೇಹವು ಭೇದಸ್ವರೂಪವನ್ನು ಹೊಂದುತ್ತಾ ಕೊನೆಗೆ ವಾಮನಾವತಾರದ ತತ್ವಕ್ಕೆ ಮನುಷ್ಯದೇಹವೆನಿಸಿಕೊಳ್ಳು

ವುದು. ವಾಮನಾವತಾರದಲ್ಲಿ ಬ್ರಹ್ಮಾಂಡದಲ್ಲಿನ ಪಾತಾಳಲೋಕಗಳಿಗೂ ಸೂರ್ಯನ ಪ್ರಕಾಶದ ಬಲವಿರುವಂತೆ ಉಂಟಾಗುವ ತತ್ವಗಳಿವೆ.

ಆರನೆಯ ಅವತಾರವಾದ ಪರಶುರಾಮಾವತಾರದ ತತ್ವವನ್ನು ಹಿಂದೆ ಪರಶುರಾಮ ಗರ್ವಭಂಗದ ಪ್ರಕರಣದಲ್ಲಿ ತಿಳಿಸಿದೆ. ಅಂದರೆ ಗರ್ಭದಲ್ಲಿ ಬೆಳೆಯುವ ಶಿಶುವಿನ ದೇಹಕ್ಕೆ ಕ್ಷತ್ರಿಯಸ್ವರೂಪವಾದ ರಜೋಗುಣದಿಂದ ಬೆಳೆವಳಿಕೆಯು ಕುಗ್ಗದಂತೆ ಶುದ್ಧಸತ್ವಗುಣ ದಿಂದ ಬೆಳವಳಿಕೆಗೆ ತರುವ ಮತ್ತು ಅಸ್ಥಿಗಳೆಲ್ಲಾ ಒಂದಕ್ಕೊಂದು ಬಂಧಿಸುವ ತತ್ವಗಳು ಬರುತ್ತವೆ.

ಪರಶುರಾಮಾವತಾರಕ್ಕೆ ಪ್ರಶಸ್ತವಾದ ಮನುಷ್ಯನ ಸೃಷ್ಟಿಕ್ರಮವೂ ಪೂರ್ಣ ವಾದುದು. ಸೃಷ್ಟಿಯಾದನಂತರ ವ್ಯಾಪಾರಕ್ಕೆ ಸರ್ವಪ್ರಾಣಿಗಳೂ ಬರುತ್ತವೆ. ಹೀಗೆ ಸರ್ವಪ್ರಾಣಿಗಳೂ ವ್ಯಾಪಾರದಲ್ಲಿದ್ದರೂ ಮನುಷ್ಯನು ಮಾತ್ರ ಮೋಕ್ಷಪಡೆಯಲರ್ಹನೆಂಬ ತತ್ವವನ್ನು ಪ್ರತಿಪಾದಿಸುವುದಕ್ಕೆ ರಾವಣಾದಿಗಳ ನಿಗ್ರಹದ ವ್ಯಾಜವಿಟ್ಟುಕೊಂಡು ರಾಮಾವತಾರವಾಗಿರುವುದು. ಕೃಷ್ಣಾವತಾರದಲ್ಲಿ ಮನುಷ್ಯನ ನಡೆವಳಿಕೆಗಳಲ್ಲಿ ಮೋಕ್ಷದ ಗುರಿಯನ್ನೇ ಇಟ್ಟುಕೊಂಡು ಧರ್ಮಾರ್ಥಕಾಮಗಳಲ್ಲಿ ಪ್ರವರ್ತಿಸಿಕೊಂಡಿರಬೇಕೆಂಬ, ಧರ್ಮಾಧರ್ಮಗಳಲ್ಲಿ ಧರ್ಮಕ್ಕೆ ಒದಗುವ ಕಷ್ಟ ಮತ್ತು ಇಂತಹ ಕಷ್ಟಗಳನ್ನು ಪರಿಹರಿಸಿ ಕೊಂಡು ಧರ್ಮಮಾರ್ಗವು ಸ್ಥಾಯಿಯಾಗಿರಬೇಕೆಂಬ, ಮನುಷ್ಯದೇಹದಲ್ಲೂ ಅಧರ್ಮ ಸ್ವರೂಪವಾದ ರಜಸ್ತಮೋಗುಣಗಳೂ ಸತ್ವಗುಣವಾದ ಇಂದ್ರಿಯಕ್ಕೂ ಮತ್ತು ಪಂಚ ಪ್ರಾಣಗಳಿಗೂ ಕೊಡುವ ಬಾಧೆಯನ್ನು ಪರಿಹರಿಸಿಕೊಳ್ಳುವ ತತ್ವಗಳನ್ನು ಪ್ರತಿಪಾದಿಸು ವುದಕ್ಕೆ ಜರಾಸಂಧ ಶಿಶುಪಾಲರ ವಧೆಯ ವ್ಯಾಜದಿಂದ ಕೃಷ್ಣಾವತಾರವಾಗಿರುವುದು.

ಬೌದ್ಧಾವತಾರವು ರಜಸ್ತಮೋಗುಣಗಳಿಂದ ಬಾಧೆಪಡುತ್ತಿದ್ದ ಪಾತಾಳಲೋಕ ವಾಸದ ಪ್ರಾಣಿಗಳಿಗೆ ಅನುಕೂಲಿಸುವಂತೆ ಪಾತಾಳಲೋಕದಲ್ಲಿದ್ದ ರಾಕ್ಷಸನಿಗ್ರಹದ ವ್ಯಾಜದಿಂದ ಬೌದ್ಧಾವತಾರವಾಗಿರುವುದು. ಗೌತಮಬುದ್ಧನೆಂಬ ರಾಜನು ಮಹಾ ವಿಷ್ಣುವಿನ ಬೌದ್ಧಾವತಾರವಲ್ಲ. ಮಹಾವಿಷ್ಣುವಾದ ಪರಬ್ರಹ್ಮನೇ ಈಶ್ವರನೆನಿಸಿಕೊಂಡು ಮತ್ಸ್ಯಕೂರ್ಮಾದ್ಯವತಾರಗಳನ್ನು ಸೃಷ್ಟಿ ಮತ್ತು ಸ್ಥಿತಿಗೋಸ್ಕರ ಮಾಡಿದನು. ಬ್ರಹ್ಮಾಂಡದ ಇರುವಿಕೆಯೇ ಬೇಡವೆಂದು ತೋರಿದಾ[illegible] ಗಮನದಿಂದ ನಡೆದುಕೊಂಡು ಹೋಗುತ್ತಿರುವ ಬ್ರಹ್ಮಾಂಡವನ್ನು ಕತ್ತರಿಸುವ ತತ್ವದಂತೆ ಸರ್ವವನ್ನೂ ಉಪಸಂಹಾರಮಾಡಿಕೊಂಡು ಮಹಾವಿಷ್ಣುವಾದ ಪರಬ್ರಹ್ಮ ಒಂದೇ ಉಳಿಯುವ ಸ್ಥಿತಿಯನ್ನು ಮಾಡಿಕೊಳ್ಳುವ ಕ್ರಮದ ತತ್ವವೇ ಕಲ್ಕ್ಯವತಾರದ ತತ್ವವಾಗಿದೆ. ಮತ್ತಾವ ಕಾಲದಲ್ಲೋ ಪುನಃ ಸೃಷ್ಟಿಮಾಡ ಬೇಕಾಗಿ ಬಂದರೆ ಪುನಃ ಮತ್ಸ್ಯಾವತಾರದಿಂದ ಪ್ರಾರಂಭವಾಗುವುದು.

ಮುಖ್ಯವಾಗಿ ಸರ್ವ ಅವತಾರಗಳ ಚರಿತ್ರೆಯೆಂದರೆ ಸರ್ವಪುರಾಣಗಳೂ ವೇದ ದಲ್ಲಿಯೇ ಸೂಕ್ಷ್ಮರೂಪದಲ್ಲಿವೆ. ಋಷಿಗಳು ಮನುಷ್ಯರ ಪ್ರಯೋಜನಕ್ಕೋಸ್ಕರ ಪುರಾಣ ರೂಪದಲ್ಲಿ ಹೊರಪಡಿಸಿರುವರು. ಆದುದರಿಂದ ಸರ್ವಪುರಾಣಗಳೂ ಮತ್ತು ಅವತಾರಗಳೂ ಮಾನವರ ಉದ್ಧಾರಕ್ಕಾಗಿಯೇ ಇರುವುದರಿಂದ ಮಾನವದೇಹಕ್ಕೆ ಅನ್ವಯಮಾಡಿ ಕೊಂಡರೆ ಅಮೃತಸ್ವರೂಪವಾದ ವಿಚಾರಗಳು ಗೊತ್ತಾಗುವುವು. ಹೀಗೆ ಅನ್ವಯ ಮಾಡುವುದೂ ವೇದಕ್ಕೆ ಸಮ್ಮತವಾಗಿ ವೇದಾಧಾರದೊಡಗೂಡಿರಬೇಕು. ಈ ವಿಧವಾದ ಅನ್ವಯವಾದರೇನೆ ಅದರಲ್ಲಿರುವ ಅಮೃತವು ದೊರಕುವುದು. ಸೃಷ್ಟಿ, ಸ್ಥಿತಿ, ಲಯಗಳನ್ನು ಬಿಟ್ಟರೆ ಮತ್ತೆ ಬೇರೆ ಏನಿರುವುದು? ಆದುದರಿಂದ ವೇದವು ಈ ಮೂರನ್ನೂ ಈ ಮೂರಕ್ಕೂ ಕಾರಣನಾದ ಪರಮಾತ್ಮನುಹಿಮೆ[illegible]ನ್ನೂ ಪ್ರತಿಪಾದಿಸುತ್ತದೆ. ಸೃಷ್ಟಿಸ್ಥಿತಿ ಲಯಗಳಿಲ್ಲದೆ ಪರಬ್ರಹ್ಮ ಒಂದೇ ಇರುವ ಕಾಲದಲ್ಲಿ ವೇದವೆಂಬುದೆಲ್ಲಿರುವುದು? ಆದುದ ರಿಂದ ಸರ್ವ ಅವತಾರವೂ ವೇದದಲ್ಲಿದೆ. ವೇದವು ಮನುಷ್ಯರು ರಚಿಸಿದುದಲ್ಲ. ಮತ್ಸ್ಯಾವತಾರದಲ್ಲಿಯೇ ವೇದವು ಹೊರಪಟ್ಟದ್ದುದರಿಂದ ಈಶ್ವರನಿಂದ ಬಂದುದಾಗಿದೆ. ವಿಷ್ಣುವಿನ ಅವತಾರದಂತೆ ಏಕಾರ್ಥವಾದವುಗಳಾದರೂ ದೇವೀ ಅವತಾರ ಶಿವಾವತಾರ ಗಳನ್ನೆಲ್ಲಾ ಅನ್ವಯಮಾಡಿ ತತ್ವಗಳನ್ನು ತಿಳಿದುಕೊಂಡು ಉದ್ಧಾರವಾಗಬಹುದು. ಸರ್ವ ಅವತಾರಗಳೂ ಈಶ್ವರನ ಮಹಿಮೆ ಮತ್ತು ಆತ್ಮತತ್ವಪ್ರತಿಪಾದಕವಾಗಿಯೇ ಇವೆ. ಆದುದ ರಿಂದ ಜಗತ್ತು ಇರುವವರೆಗೆ ಜಗತ್ತಿಗೆಲ್ಲಾ ಒಡೆಯನಾದ ಈಶ್ವರನೊಬ್ಬನಿರುವನೆಂದು ಮಾನವರು ತಿಳಿದುಕೊಂಡು ಅವನ ಅನುಗ್ರಹಕ್ಕೆ ಪಾತ್ರರಾಗಿ ಆತ್ಮಜ್ಞಾನವನ್ನು ಹೊಂದಬೇಕಲ್ಲದೆ ನಾಸ್ತಿಕತೆಯನ್ನು ಮಾತ್ರ ಹೊಂದಬಾರದು



ಭೂಮಂಡಲದೊಳಗೆ ಭರತಖಂಡದಂತೆ ಎಷ್ಟೋ ದೇಶಗಳಿವೆ. ಭರತಖಂಡ ಕ್ಕಿಂತಲೂ ವಿಸ್ತಾರವಾದ ಫಲಭರಿತವಾದ ಜನಭರಿತವಾದ ಮತ್ತು ಐಹಿಕ ಸಾಧನೆಗಳಲ್ಲಿ ಅತ್ಯುನ್ನತಿಯನ್ನು ಪಡೆದಿರುವ ದೇಶಗಳೆಷ್ಟೋ ಇವೆ. ಇಷ್ಟು ದೇಶಗಳಿದ್ದರೂ ಏನು ಪ್ರಯೋಜನ? ಧರ್ಮಮಾರ್ಗದಲ್ಲಿಯೂ ಮೋಕ್ಷಮಾರ್ಗದಲ್ಲಿಯೂ ಭರತಖಂಡವನ್ನು ಹೋಲುವುದು ಈಗಲೂ ಯಾವುದೂ ಇಲ್ಲ. ಮೋಕ್ಷದ ಗುರಿಗನುಸಾರವಾಗಿ ಧರ್ಮಾರ್ಥ ಕಾಮಗಳಿರಬೇಕೆಂಬ ಸಾರವು ಭರತಖಂಡದಲ್ಲಿದೆಯೇ ಹೊರತು ಮತ್ತೆಲ್ಲಿಯೂ ಇಲ್ಲ. ಭರತಖಂಡವು ಈಶ್ವರನ ಅವತಾರಗಳಿಗೂ ಮಹಾ ಮಹಾ ಋಷಿಗಳಿಗೂ ಜನ್ಮಸ್ಥಾನ ವಾಗಿದೆ. ಇದನ್ನೆಲ್ಲಾ ನೋಡಿದರೆ ಭೂಮಂಡಲದೊಳಗೆ ನಮ್ಮ ಭರತಖಂಡವು ಜಗ ದೊಡೆಯನಾದ ಈಶ್ವರನಿಗೆ ಪ್ರಿಯವಾದ ದೇಹದಂತಿದೆ. ಇಂತಹ ಭರತಖಂಡಸ್ವರೂಪ ವಾದ ದೇಹದಲ್ಲಿ ಬದರಿ ನಾರಾಯಣನೇ ಮನುಷ್ಯನ ಸಹಸ್ರಾರಕಮಲದ ತತ್ವವಾಗಿ ಇರುವುದು. ಕಾಶೀಕ್ಷೇತ್ರವೇ ಭ್ರೂಮಧ್ಯದಲ್ಲಿನ ಆಜ್ಞಾಚಕ್ರದ ರುದ್ರಗ್ರಂಥಿಯ

ತತ್ವವಾಗಿರುವುದು. ಪ್ರಯಾಗವೇ ಹೃದಯಕೋಶದ ವಿಷ್ಣುಗ್ರಂಥಿಯಾಗಿರುವುದು. ಸಿಂಹಳ ದ್ವೀಪ ಮತ್ತು ಸಮುದ್ರವೇ ಮೂಲಾಧಾರಚಕ್ರಪ್ರದೇಶವಾಗಿರುವುದು. ಆತ್ಮಸಾಕ್ಷಾತ್ಕಾರವನ್ನು ಪಡೆದುಕೊಳ್ಳಲು ಮೂಲಾಧಾರಚಕ್ರಕ್ಕೆ ಹೋಗಿ ಬ್ರಹ್ಮರಂಧ್ರನಾಡಿಯಲ್ಲಿ ಗ್ರಂಥಿಗಳ ಮೂಲಕ ಸಹಸ್ರಾರಕಮಲವನ್ನು ಸೇರಬೇಕು. ಅಲ್ಲಿಂದ ಇಳಿದು ಪುನಃ ಮೂಲಾಧಾರಚಕ್ರಕ್ಕೆ ಬಂದು ಅನಂತರ ಬಹಿರ್ಮುಖವಾಗಬೇಕು. ಇದರಂತೆ ಭರತಖಂಡ ದಲ್ಲೂ ರಾಮೇಶ್ವರಯಾತ್ರೆಮಾಡಿ ಸೇತುಸ್ನಾನ ಪ್ರಥಮದಲ್ಲಿ ಮಾಡಬೇಕು. ಅಲ್ಲಿಂದ ಪ್ರಯಾಗ ನಂತರ ಕಾಶೀಕ್ಷೇತ್ರ ತದನಂತರ ಬದರಿಗೆ ಹೋಗಬೇಕು. ಬದರಿಯಿಂದ ಪುನಃ ಕಾಶೀಮಾರ್ಗವಾಗಿಯೇ ರಾಮೇಶ್ವರಕ್ಕೆ ಬರುವುದು ಮಹಾಯಾತ್ರೆಯೆನಿಸಿಕೊಳ್ಳುವುದು. ಈ ಮಹಾಯಾತ್ರೆಯ ತತ್ವಾರ್ಥವೇ ಮನುಷ್ಯನಲ್ಲಿ ಆತ್ಮಸಾಕ್ಷಾತ್ಕಾರವನ್ನುಂಟುಮಾಡುವ ಪಥವಾಗಿರುವುದು. ಇದರಂತೆ ಭರತಖಂಡದಲ್ಲಿರುವ ಮುಖ್ಯವಾದ ಪುಣ್ಯಸ್ಥಳಗಳನ್ನೂ ನಮ್ಮ ದೇಹದ ತತ್ವಕ್ಕೆ ಅನ್ವಯಮಾಡಿಕೊಳ್ಳಬಹುದು.

ಭರತಖಂಡದಲ್ಲಿ ಸ್ಥಳಚರಿತ್ರೆ ಮತ್ತು ಪುರಾಣರೂಪವಾಗಿರುವ ನಿದರ್ಶನಗಳಿಂದಲೂ ಶ್ರೀರಾಮಕೃಷ್ಣಾದಿಗಳು ಅವತಾರಮಾಡಿದ್ದು ಸುಳ್ಳೆಂದು ಹೇಳುವುದಕ್ಕಾಗುವುದೇ ಇಲ್ಲ. ಆ ಈಶ್ವರನ ಲೀಲಾವಿಭೂತಿಯ ಮಹತ್ತು ಎಷ್ಟು ಹೇಳಿದರೂ ಸಾಲದು. ಇಂತಹ ಭರತಭೂಮಿಯಲ್ಲಿ ನಿಶ್ಚಯವಾದ ಜ್ಞಾನಮಾರ್ಗವೇ ಶಿಲವಾಗಿದೆ. ಜ್ಞಾನಮಾರ್ಗವನ್ನು ಪುನರ್ಜೀವಿತಮಾಡಲೆಂದು ಈಶ್ವರನನ್ನು ಪ್ರಾರ್ಥನೆಮಾಡಬೇಕಾಗಿದೆ.

## ಗ್ರಂಥೋಪಸಂಹಾರ.

ಗುರುಕಟಾಕ್ಷದಿಂದಲೂ ಶ್ರೀಸೀತಾರಾಮರ ಅನುಗ್ರಹದಿಂದಲೂ ಬರೆದ ಈಗ್ರಂಥವನ್ನು ಇಲ್ಲಿಗೆ ಪೂರ್ಣಮಾಡುವೆನು. ಶ್ರೀಮದ್ರಾಮಾಯಣವು ವೇದಸ್ವರೂಪವೇ ಆಗಿರುವುದರಿಂದ ಶ್ರೀಮದ್ರಾಮಾಯಣದ ಪ್ರತಿಯೊಂದು ಶ್ಲೋಕದ ವಿಚಾರವನ್ನೂ ಅನ್ವಯಿಸಿ ವೇದಪ್ರಮಾಣ ದೊಡನೆ ಬರೆಯುತ್ತಾಬಂದರೆ ಇಂತಹ ನೂರಾರು ಗ್ರಂಥಗಳನ್ನು ಬರೆಯಬೇಕಾಗುವುದು. ಜಗನ್ಮಾತೆಯ ಅನುಗ್ರಹವು ತತ್ವಗಳನ್ನು ಚೆನ್ನಾಗಿ ಸ್ಫುರಣೆಗೆ ಕೊಟ್ಟರೂ ತತ್ವಗಳ ಸಾರ ವನ್ನು ಹಿಡಿದು ಕ್ರೋಢೀಕರಿಸಿ ಒರೆವಿರುವೆನು. ತತ್ವವನ್ನೆಂದಿಗೂ ಬದಲಾಯಿಸಲಾಗುವು ದಿಲ್ಲ. ಆಯಾಯ ತತ್ವಗಳನ್ನು ಹಿಡಿದುಕೊಂಡು ಶ್ರೀಮದ್ರಾಮಾಯಣವನ್ನು ಪಾರಾಯಣ ಮಾಡುತ್ತಲೂ ಒಬ್ಬರಿಗೊಬ್ಬರು ಶಾಸ್ತ್ರಸಮ್ಮತವಾಗಿ ಚರ್ಚಿಸುತ್ತಲೂ ಹೋದರೆ ಇನ್ನೂ ಅಮೋಘವಾದ ವಿಚಾರಗಳನ್ನು ತಿಳಿದುಕೊಂಡು ಆನಂದಪಡಬಹುದು.

ಈ ಗ್ರಂಥರಚನೆಗೆ ಕಾರಣವಾಗಿ ನಡೆದ ಸಂಗತಿಗಳನ್ನು ಉಪೋದ್ಘಾತದಲ್ಲಿಯೇ ತಿಳಿಸಿದೆ. ಕಾರಣವಿಲ್ಲದೆ ಕಾರ್ಯವೆಂದಿಗೂ ನಡೆಯುವುದಿಲ್ಲ. ಈಗಿನ ಸುಖದುಃಖಗಳ

ಅನುಭವಕ್ಕೆ ನಾವು ಜನ್ಮಾಂತರದಲ್ಲಿ ಸಂಪಾದಿಸಿದ್ದ ಪಾಪಪುಣ್ಯಗಳೇ ಕಾರಣ. ಶ್ರೀರಾಮೇಶ್ವರ ನೆಂಬ ನಾಮದಿಂದ ಕರುಣಾಳುವಾದ ಶ್ರೀವಿದ್ಯಾರಣ್ಯಗುರುಗಳವರು ಲಿಂಗಪ್ರತಿಷ್ಠೆಯನ್ನು ಮಾಡಿ ಪತಿತನಾಗಿದ್ದ ನನಗೆ ಅನುಗ್ರಹಮಾಡಿದ್ದರಿಂದಲೆ ಸಾಕ್ಷಾತ್ಪರಾಪರವಸ್ತುವಾದ ಪರಬ್ರಹ್ಮತತ್ವವನ್ನುಪಡೆಯುವ ಕ್ರಮವನ್ನು ಅನುಗ್ರಹಮಾಡಿಕೊಟ್ಟರೆಂಬ ತತ್ವವಾಗಿರುವು ದೆಂದು ಈ ರಾಮಾಯಣದ ತತ್ವಬರೆದ ಅನಂತರ ನನಗೆ ಹೊಳೆಯುತ್ತಿದೆ. ಲಿಂಗಪ್ರತಿಷ್ಠೆ ಮಾಡಿ ಅನುಗ್ರಹಮಾಡಿದಾಕ್ಷಣವೇ ಇಷ್ಟು ಫಲ ಹೇಗುಂಟಾಗುವುದೆಂದು ವಾಚಕರು ಯೋಚಿಸಬಹುದು. ಪ್ರತಿಷ್ಠೆಮಾಡುವ ಮತ್ತು ಪೂಜೆಮಾಡುವವರ ಮನಶ್ಶಕ್ತಿಯಮೇಲೆ ದೇವತಾಶಕ್ತಿಯುಂಟಾಗುವುದೇ ಹೊರತು ಅನ್ಯಥಾ ಇಲ್ಲ. ಮನಶ್ಶಕ್ತಿಯವಿಚಾರ ಪಾಮರ ರಿಗೇನುಗೊತ್ತು. ಮಹನೀಯರಾದ ಗುರುಗಳ ಅನುಗ್ರಹಕ್ಕೆ ಪಾತ್ರರಾಗಬೇಕೆಂದು ಶ್ರುತಿಯು ಮೊರೆಯಿಡಲು ಕಾರಣವೇನೆಂದರೆ, ಅಂತಹ ಮಹನಿಯರ ಮನಶ್ಶಕ್ತಿಯು ನಮ್ಮಗಳ ಮನಸ್ಸನ್ನಾಕರ್ಷಿಸಿ ಕಾರ್ಯಪರಿಣಾಮಕ್ಕೆ ತಂದು ಬಿಡುವುದು.

ರಾಮೇಶ್ವರನೆಂಬ ನಾಮದಿಂದ ಲಿಂಗಪ್ರತಿಷ್ಠೆಮಾಡಿರುವುದರಿಂದ ಶ್ರೀರಾಮಶಂಕರ ತತ್ವ ಒಂದೇಯಾಗಿರುತ್ತದೆ. ರಾಮಶಂಕರರು ಬೇರೆ ಬೇರೆ ಎಂಬದಾಗಿ ತಿಳಿದುಕೊಂಡಿರು ವವರು ತಿಳಿದುಕೊಳ್ಳಲಿ. "ಏಕೋದೇವಃಕೇಶವೋವಾಶಿವೋವಾ" ಎಂಬ ಶ್ರುತಿಪ್ರಮಾಣ ವನ್ನನುಸರಿಸಿ ನಿರ್ಗುಣನಾಗಿಯೂ ಸಗುಣನಾಗಿಯೂ ಇರುವವನೊಬ್ಬನೇ ಎಂಬುದು ನನಗೆ ದೃಢವಾಗಿರಲಿ. ಶ್ರೀವಿದ್ಯಾರಣ್ಯಗುರುಗಳವರು ರಾಮೇಶ್ವರನೆಂಬ ಹೆಸರಿನಿಂದ ಸ್ವಾಮಿಯನ್ನು ಪ್ರತಿಷ್ಠಿಸಿ ಅನುಗ್ರಹಿಸಿದುದರಿಂದ ಶ್ರೀರಾಮಶಂಕರ ನಾಮದ್ವಯಗಳ ತತ್ವವೂ ಆಗಿರುವ ಪರಬ್ರಹ್ಮತತ್ವವೇ ಆಗಿರುವುದು. ರಾಮೇಶ್ವರನೆಂಬ ಪದಕ್ಕೆ ಮೂರು ವ್ಯುತ್ಪತ್ತಿಗಳಿವೆ.

೧. ಷಷ್ಠಿ ತತ್ಪುರುಷಸಮಾಸ "ರಾಮಸ್ಯ ಈಶ್ವರಃ ರಾಮೇಶ್ವರಃ" ರಾಮನಾದ ನನಗೆ ಈಶ್ವರನು ಶಿವನು.

೨. ಬಹುವ್ರೀಹಿಸಮಾಸ " ರಾಮಃ ಈಶ್ವರೊ ಯಸ್ಯಸಃ ರಾಮೇಶ್ವರಃ " ಶಿವ ನಾದ ನನಗೆ ರಾಮನೇ ಈಶ್ವರನು.

೩. ಕರ್ಮಧಾರಯಸಮಾಸ "ರಾಮಶ್ಚಸೌ ಈಶ್ವರಶ್ಚ" ಪರಬ್ರಹ್ಮವೇ ರಾಮನೂ ಹೌದು ಶಿವನೂ ಹೌದು.

ಶಂಕರನೆಂದರೆ ಸುಖವನ್ನುಂಟುಮಾಡತಕ್ಕವನು. ಸುಖವೆಂದರಾಗಲಿ ಮಂಗಳ ವೆಂದರಾಗಲಿ ಆತ್ಮಸಾಕ್ಷಾತ್ಕಾರವೇ ಸುಖವಲ್ಲದೆ ವಿಷಯಸುಖವನ್ನು ಎಂದಿಗೂ

ಸುಖವೆಂದು ಹೇಳುವುದಕ್ಕಾಗುವದಿಲ್ಲ. ಇದರಂತೆ ಶ್ರೀರಾಮಚಂದ್ರನೂ ಮೋಕ್ಷಸುಖವನ್ನೂ ಕೊಡತಕ್ಕವನಾದುದರಿಂದ ಶ್ರೀರಾಮಚರಿತ್ರೆಯಲ್ಲಿ ಶುದ್ಧ ಮೋಕ್ಷಮಾರ್ಗದ ತತ್ವವೇ ಒಳಗೊಂಡಿರುವುದು. ಶ್ರೀರಾಮಚಂದ್ರನು ಇಂತಹ ಮೋಕ್ಷಸುಖವನ್ನು ಕೊಡುವವನಾದುದರಿಂದ ಶ್ರೀರಾಮನಲ್ಲಿ ಜನಗಳಿಗೆ ಶುದ್ಧ ಸಾತ್ವಿಕವಾದ ಬರೆಯಲಾಗದ ಒಂದು ವಿಧವಾದ ನೈಜವಾದ ಪ್ರೀತಿಯುಂಕುರಿಸಿದೆ. ಸೀತಾದೇವಿಯೇ ಪಾರ್ವತೀದೇವಿ. ಪಾರ್ವತೀದೇವಿಯೇ ಸೀತಾದೇವಿಯು. ಸೀತಾ ಮತ್ತು ಪಾರ್ವತೀದೇವಿಯರ ನಾಮದ್ವಯಗಳ ತತ್ವಗಳೂ ಸಾಕ್ಷಾತ್ ಪರಮಾತ್ಮತತ್ವವೇ ಆಗಿರುವುದರಿಂದ ಶ್ರೀಬಾಲರಾಜರಾಜೇಶ್ವರಿ ಎಂಬ ನಾಮಾಂಕಿತದಿಂದ ಜಗನ್ಮಾತೆಯನ್ನು ಶ್ರೀವಿದ್ಯಾರಣ್ಯಗುರುಗಳವರು ಪ್ರತಿಷ್ಠಿಸಿದುದಾಗಿದೆ. ಸಗುಣಸ್ವರೂಪದಲ್ಲಿ ಶಂಕರನು ಪಾರ್ವತೀದೇವಿಯನ್ನು ಎಡಭಾಗದಲ್ಲಿ ಕೂರಿಸಿಕೊಂಡಿರುವನು. ಶ್ರೀರಾಮನೂ ಏಕಪತ್ನೀ ವ್ರತಸ್ಥನಾಗಿ ಸೀತಾದೇವಿಯನ್ನು ಎಡಭಾಗದಲ್ಲಿ ಕೂರಿಸಿಕೊಂಡಿರುವನು. ಆದುದರಿಂದ ಏಕವಾಚಕವಾಗಿರುವ ಪಾರ್ವತೀಸಮೇತನಾದ ಶಂಕರ, ಸೀತಾಸಮೇತನಾದ ಶ್ರೀರಾಮಚಂದ್ರರ ತತ್ವವಾದ ಶ್ರೀಬಾಲರಾಜರಾಜೇಶ್ವರೀಸಮೇತನಾದ ಶ್ರೀರಾಮೇಶ್ವರನ ಶ್ರೀಶಾರದಾಚಂದ್ರಮೌಳೀಶ್ವರರ ಚರಣಾರವಿಂದದಲ್ಲಿ ಈ ಗ್ರಂಥವನ್ನು ಅರ್ಪಿಸಿ ಸಾಷ್ಟಾಂಗ ನಮಸ್ಕಾರಮಾಡುವೆನು. ಪರಮಗುರುಗಳಾದ ಶ್ರೀಶಂಕರಭಗವತ್ಪಾದಾಚಾರ್ಯರವರ, ವಿದ್ಯಾರಣ್ಯಗುರುಗಳವರ ಚರಣಾರವಿಂದದಲ್ಲಿ ಸಾಷ್ಟಾಂಗ ನಮಸ್ಕಾರಮಾಡಿ, ಗುರುಪರಂಪರಾಪೀಠವನ್ನು ಈಗ ಅಲಂಕರಿಸಿರುವ ಜಗದ್ಗುರುಗಳಾದ ಶ್ರೀಚಂದ್ರಶೇಖರಭಾರತೀಸ್ವಾಮಿಗಳವರ ಚರಣಾರವಿಂದಗಳಿಗೆ ಈ ಗ್ರಂಥದೊಡನೆ ಸಾಷ್ಟಾಂಗದಂಡಪ್ರಣಾಮ ಮಾಡುತ್ತೇನೆ.

ಈ ಗ್ರಂಥದ ಮಹತ್ವನ್ನೂ ಇದರಲ್ಲಿರುವ ಅಮೃತಸೇವನೆಯ ರುಚಿಯನ್ನೂ ಯಾರು ಬಲ್ಲರೊ ಅವರೇ ಬಲ್ಲರು. ಈ ಗ್ರಂಥದ ಅಮೃತವನ್ನು ಸಂಪೂರ್ಣವಾಗಿ ಪಾನ ಮಾಡುವ ಮಹಾನುಭಾವರನೇಕರನ್ನು ನಮ್ಮ ಭಾರತಮಾತೆಯು ಜನಿಸುತ್ತಿರಲೆಂದು ಭಾರತಮಾತೆಯನ್ನು ಪ್ರಾರ್ಥಿಸುತ್ತೇನೆ. ನನ್ನ ಜನ್ಮಭೂಮಿಯು ಮೈಸೂರುಬಳಿ ಕಾವೇರೀ ನದೀತೀರದಲ್ಲಿ ಶ್ರೀಮೀನಾಕ್ಷೀಸಮೇತನಾದ ಅರ್ಕನಾಥಸ್ವಾಮಿಯು ನೆಲೆಗೊಂಡಿರುವ ಪ್ರಸಿದ್ಧವಾದ ಯಡತೊರೆಯು. ಈ ಕ್ಷೇತ್ರದಲ್ಲಿ ಶ್ರೋತ್ರಿಯರಾದ ನೂರಾರು ಬ್ರಾಹ್ಮಣ ಮನೆಗಳಿದ್ದವು. ಏಳು ಎಂಟು ಅಗ್ನಿಹೋತ್ರಗಳಿದ್ದವು. ಅದ್ಭುತವಾದ ಪಾಂಡಿತ್ಯವುಳ್ಳವರಿದ್ದರು. ಇಂತಹ ಪುಣ್ಯಸ್ಥಳವು ನನ್ನ ಜನ್ಮಭೂಮಿಯಾದ್ದರಿಂದ ಆ ಜನ್ಮಭೂಮಿಯಲ್ಲಿ ನೆಲೆಗೊಂಡಿರುವ ಶ್ರೀಮೀನಾಕ್ಷೀಸಮೇತನಾದ ಅರ್ಕನಾಥನಿಗೂ, ಈ ಅರ್ಕೇಶ್ವರ ದೇವಸ್ಥಾನದ ಗೋಪುರ ಮುಂತಾದವುಗಳನ್ನು ಕಟ್ಟಿಸಿ ತಪೋನಿಷ್ಠರಾಗಿದ್ದ ನನ್ನ ಮಾತಾಪಿತೃವರ್ಗದವರಿಗೂ ಸಾಷ್ಟಾಂಗಪ್ರಣಾಮ ಮಾಡುವೆನು.

ಶ್ರೇಷ್ಠವಾದ ಸರ್ವೋತ್ತಮವಾದ ವೇದಸಾರವಾಗಿರುವ ಈ ಗ್ರಂಥವನ್ನು ನನ್ನ ವಂಶ ಪಾರಂಪರ್ಯದವರೆಲ್ಲಾ ಕುಲಧನದಂತೆ ಭಾವಿಸಿ ಶ್ರೀರಾಮಚಂದ್ರಸ್ವಾಮಿಯ ಲೀಲಾವತಾರ ರಹಸ್ಯಾಮೃತದಲ್ಲಿ ಮಗ್ನರಾಗಬೇಕು. ಶ್ರೀರಾಮಚಂದ್ರನೂ ಜಗನ್ಮಾತೆಯೂ ಈ ವಂಶ ದಲ್ಲಿ ನೆಲೆಗೊಂಡು ಅನುಗ್ರಹಮಾಡುವರು. ಶ್ರೀವಿದ್ಯಾರಣ್ಯಗುರುಗಳ ಅನುಗ್ರಹದ ಬೀಜವೇ ಫಲಕ್ಕೆ ಬಂದು ಈ ಗ್ರಂಥರೂಪವಾಗಿರುವುದರಿಂದ ಈ ಗ್ರಂಥದ ರಕ್ಷಣೆಯು ಮುಂದೆಯೂ ಪೀಠವನ್ನಲಂಕರಿಸುವ ಗುರುಪರಂಪರೆಗಳ ಚರಣಾರವಿಂದಗಳನ್ನು ವಹಿಸಿದೆ. ಎಲೈ ಶ್ರೀರಾಮಚಂದ್ರನೆ ! ಎಲೈ ಶಂಕರನೆ! ಎಲೈ ಜಗನ್ಮಾತೆಯೆ! ನಾಲ್ಕೈದು ಸಂವತ್ಸರ ಗಳಿಂದ ಹಗಲಿರುಳೂ ತದೇಕಚಿತ್ತನಾಗಿ ನಿನ್ನ ಲೀಲಾವತಾರದ ರಹಸ್ಯಾಮೃತದಲ್ಲಿ ನನ್ನನ್ನು ಮುಳುಗಿಸಿದ್ದೆ. ಇಂತಹ ಪುಣ್ಯವೂ ನಿನ್ನ ಅನುಗ್ರಹದಿಂದಲೇ ಒದಗಿತ್ತು. ನನ್ನ ಯೋಗ ಕ್ಷೇಮವೆಲ್ಲಾ ನಿನ್ನದೇ ಆಗಿರುವುದರಿಂದ ಪುನಃ ಪುನಃ, ಪುನಃ ಪುನಃ, ಪುನಃ ಪುನಃ, ನಮಸ್ಕರಿಸುತ್ತಾ ಈ ಗ್ರಂಥವನ್ನು ಸದ್ಯಕ್ಕೆ ಇಲ್ಲಿಗೆ ಪೂರ್ಣಮಾಡುವೆನು.

ಹೃದಯಕಮಲಮಧ್ಯೇ ನಿರ್ವಿಶೇಷಂ ನಿರೀಹಂ |
ಹರಿಹರವಿಧಿವೇದ್ಯಂ ಯೋಗಿಭಿರ್ಧ್ಯಾನಗಮ್ಯಮ್ ||
ಜನನಮರಣಭೀತಿಭ್ರಂಶಿ ಸಚ್ಚಿತ್ಸ್ವರೂಪಂ |
ಸಕಲಭುವನಬೀಜಂ ಬ್ರಹ್ಮಚೈತನ್ಯಮೀಡೇ ||

ಓಂ ಶಾಂತಿ ಶ್ಶಾಂತಿ ಶ್ಶಾಂತಿಃ.

ಓಂ ತತ್ಸತ್.



